# ಬಿರದ ಬಾಗಿನ

## ಡಾ. ಹಂಪನಾ ಷಷ್ಟ್ಯಬ್ದಿ ಗೌರವ ಗ್ರಂಥ





ಪ್ರಧಾನ ಸಂಪಾದಕರು

**ಪ್ರೊ|| ಎಚ್. ವಿ. ನಾಗೇಶ**









# ಬರಹ ಬಾಗಿನ

ಡಾ. ಹಂಪ. ನಾಗರಾಜಯ್ಯ ಅವರಿಗೆ ೬೦ ತುಂಬಿದ
ಸಂದರ್ಭದಲ್ಲಿ ಅರ್ಪಿಸಿದ ಲೇಖನಗಳ ಸಂಪುಟ

*ಪ್ರಧಾನ ಸಂಪಾದಕರು*

ಪ್ರೊ. ಎಚ್.ವಿ. ನಾಗೇಶ

*ಸಂಪಾದಕರು*

ಡಾ. ಎಸ್.ಪಿ. ಪದ್ಮಪ್ರಸಾದ್
ಡಾ. ಜಿ.ಎಂ. ಹೆಗಡೆ
ಡಾ. ಶಿವಾನಂದ ಗಾಳಿ



೧೯೯೬

*ಪ್ರಕಾಶಕರು:*
ಡಾ. ಹಂಪನಾ ಅಭಿನಂದನ ಸಮಿತಿ ಪರವಾಗಿ

ಸಹನಾ ಪ್ರಕಾಶನ
ಪದ್ಮಾಂಬಾ ನಿಲಯ, ಸಂಗೊಳ್ಳಿ ರಾಯಣ್ಣ ರಸ್ತೆ
ಶಿವಮೊಗ್ಗ - ೫೭೭ ೨೦೧

**'Baraha Bagina'** - a felicitation volume presented to Dr. Hampa Nagarajaiah on the eve of his completion of 60 years.

PUBLISHED BY: Sahana Prakashana, Padmamba Building, S.R. Road, Shimoga - 577 201



Pages: 630 + XII

First Edition: October 1996, 1000 Copies

Price: Rs. 180.00



ಮುಖಪುಟ ಕಲಾವಿದರು: ಚಂದ್ರಕಾಂತ ಪಟ್ಟಣ



**ಮುದ್ರಕರು:**
ಸತ್ಯಶ್ರೀ ಪ್ರಿಂಟರ್ಸ್ (ಪ್ರೈ) ಲಿ
ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮
ದೂರವಾಣಿ: ೬೨೫೭೬೬

## ಡಾ. ಹಂಪ. ನಾಗರಾಜಯ್ಯ ಅಭಿನಂದನ ಸಮಿತಿ

| | | |
|---|---|---|
| ಅಧ್ಯಕ್ಷರು | : | ಶ್ರೀ ಎಚ್. ಕೆ. ಪಾಟೀಲ್ |
| ಕಾರ್ಯಾಧ್ಯಕ್ಷರು | : | ಪ್ರಿನ್ಸಿಪಾಲ್ ನ. ವಜ್ರಕುಮಾರ್ |
| ಉಪಾಧ್ಯಕ್ಷರು | : | ಡಾ. ಆರ್. ಸಿ. ಹಿರೇಮಠ<br>ಡಾ. ಪಾಟೀಲ ಪುಟ್ಟಪ್ಪ<br>ಶ್ರೀ ಎನ್ಕೆ. ಕುಲಕರ್ಣಿ<br>ಶ್ರೀ ಜಿ. ಎಂ. ಪಾಟೀಲ<br>ಶ್ರೀಮತಿ ಗಂಗೂಬಾಯಿ ಹಾನಗಲ್<br>ಶ್ರೀಮತಿ ಶಾಂತಾದೇವಿ ಮಾಳವಾಡ<br>ಪ್ರೊ. ಬಿ. ಟಿ. ಸಾಸನೂರ |
| ಕಾರ್ಯದರ್ಶಿಗಳು | : | ಪ್ರಿನ್ಸಿಪಾಲ್ ಎಂ. ಬಿ. ದಿಲ್‌ಶಾದ್ |
| ಕೋಶಾಧ್ಯಕ್ಷರು | : | ಶ್ರೀ ಬಸವರಾಜ ಚಿಕ್ಕಣ್ಣವರ್ |
| ಸದಸ್ಯರಗಳು | : | ಶ್ರೀ ಎಚ್.ಎಸ್. ಕುಲಕರ್ಣಿ, ಡಾ. ದೇವೇಂದ್ರ ಕುಮಾರ್ ಹಕಾರಿ, ಶ್ರೀ ವಸಂತಲದವಾ, ಡಾ. ಸರೋಜಿನಿ ಶಿಂತ್ರಿ, ಶ್ರೀಮತಿ ಶಾಂತಕ್ಕ ಮಠದ್, ಡಾ. ವೀಣಾ ಶಾಂತೇಶ್ವರ, ಶ್ರೀ ಕೆ.ಎಸ್. ದೇಶಪಾಂಡೆ, ಪ್ರೊ. ಎಸ್.ಸಿ. ಹಿರೇಮಠ, ಡಾ. ಬಿ.ಪಿ. ವಾಗ್ಮೋರೆ, ಡಾ. ಜಾನ್ ಬಳ್ಳಾರಿ, ಪ್ರೊ. ಬಿ.ವಿ. ಗುಂಜೆಟ್ಟಿ, ಶ್ರೀ ಮೋಹನ್ ನಾಗಮ್ಮನವರ್, ಡಾ. ಪಾಂಡುರಂಗ ಕೊಣ್ಣೂರ್, ಶ್ರೀ ಅಬ್ದುಲ್ ಮಜೀದ್ ಖಾನ್, ಶ್ರೀ ಆರ್.ಎಸ್. ದೇಶಪಾಂಡೆ |



# ಪ್ರಕಾಶಕರ ಮಾತು

ಡಾ. ಹಂಪ. ನಾಗರಾಜಯ್ಯ ಅವರಿಗೆ ಅರವತ್ತು ವರ್ಷ ತುಂಬಿರುವ ಈ ಹೊತ್ತಿನಲ್ಲಿ ಅವರ ವ್ಯಕ್ತಿತ್ವದ ಘನತೆಗೆ ತಕ್ಕುದಾದ ಗೌರವ ಗ್ರಂಥವೊಂದನ್ನು ಪ್ರಕಟಿಸಬೇಕೆಂಬ ನಮ್ಮ ಆಕಾಂಕ್ಷೆಯ ಫಲವಾಗಿ ಈ ಗ್ರಂಥವೀಗ ಹೊರಬರುತ್ತಿದೆ.

ಡಾ. ಹಂಪನಾ ಅವರ ಆಸಕ್ತಿಯ ಕ್ಷೇತ್ರಗಳಾದ - ಶಾಸನಗಳು, ಪ್ರಾಚೀನ ಹಾಗೂ ಆಧುನಿಕ ಕನ್ನಡ ಸಾಹಿತ್ಯ, ಜಾನಪದ, ಜೈನಶಾಸ್ತ್ರ, ಗ್ರಂಥಸಂಪಾದನೆ ಹಾಗೂ ಭಾಷಾವಿಜ್ಞಾನಗಳಿಗೆ ಸಂಬಂಧಿಸಿದ ಇತ್ತೀಚಿನ ಅಧ್ಯಯನ, ಸಂಶೋಧನೆ, ವಿಶ್ಲೇಷಣೆಗಳನ್ನು ಪ್ರಕಟಪಡಿಸುವ ಲೇಖನಗಳನ್ನು ಒಳಗೊಂಡಿರುವ ಇಂಥ ಒಂದು ಗ್ರಂಥವನ್ನು ಸಂಪಾದಿಸಿಕೊಡಬೇಕೆಂದು ನಾವು ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ನಿರ್ದೇಶಕರೂ, ಖ್ಯಾತ ಸಮಾಜಶಾಸ್ತ್ರಜ್ಞರೂ ಸಾಹಿತ್ಯ ವಿಮರ್ಶಕರೂ ಆದ ಪ್ರೊ. ಎಚ್.ವಿ. ನಾಗೇಶ್ ಅವರನ್ನು ಪ್ರಾರ್ಥಿಸಿದೆವು. ಅವರೂ, ಅವರ ಮಿತ್ರರೂ ಸೇರಿ, ಒಂದೂವರೆ ತಿಂಗಳಿನಷ್ಟು ಅಲ್ಪ ಅವಧಿಯಲ್ಲಿ ಈ ಬೃಹತ್ ಗ್ರಂಥವನ್ನು ಸಂಪಾದಿಸಿಕೊಟ್ಟಿದ್ದಾರೆ. ಇದಕ್ಕಾಗಿ ಸಂಪಾದಕ ಮಂಡಳಿಯ ಎಲ್ಲರನ್ನೂ, ಲೇಖನಗಳನ್ನು ಕಳುಹಿಸಿ ಸಹಕರಿಸಿರುವ ವಿದ್ವಾಂಸರನ್ನೂ ನಾವು ಕೃತಜ್ಞತೆಯಿಂದ ನೆನೆಯುತ್ತೇವೆ.

ಇಲ್ಲಿನ ಕೆಲವು ಲೇಖನಗಳಿಗೆ ಸಂಬಂಧಿಸಿದ ಚಿತ್ರಗಳನ್ನು ಆಯಾ ಲೇಖಕರುಗಳೇ ಒದಗಿಸಿದ್ದಾರೆ. ಅವರಿಗೂ ನಮ್ಮ ಧನ್ಯವಾದಗಳು.

ಹಂಪನಾ ಅವರ ಬಳಗದ ಚಿತ್ರವನ್ನು ಪ್ರಕಟಿಸಿರುವಲ್ಲಿ ಒಂದು ಸಣ್ಣ ತಪ್ಪಾಗಿದೆ. ಶ್ರೀ ಹರ್ಷವರ್ಧನ ಅವರ ಮದುವೆಯ ಸರಿಯಾದ ದಿನಾಂಕ ೨೫.೧೦.೧೯೬೧ ಪ್ರಮಾದವಶಾತ್ ಅಲ್ಲಿ ತಪ್ಪು ದಿನಾಂಕ ಅಚ್ಚಾಗಿದೆ. ಓದುಗರು ದಯವಿಟ್ಟು ತಿದ್ದಿಕೊಳ್ಳಬೇಕೆಂದು ಪ್ರಾರ್ಥನೆ.

ಬೆಂಗಳೂರಿನ 'ಸತ್ಯಶ್ರೀ ಪ್ರಿಂಟರ್ಸ್ ಪ್ರೈ ಲಿ' ಇವರು ಕೇವಲ ಹತ್ತು ದಿನಗಳಲ್ಲಿ ಈ ಹೆಬ್ಬೊತ್ತಗೆಯನ್ನು ಮುದ್ರಿಸಿಕೊಟ್ಟಿದ್ದಾರೆ. ಇದಕ್ಕಾಗಿ ಅಲ್ಲಿನ ಎಲ್ಲ ಸಿಬ್ಬಂದಿಯವರಿಗೂ ಕರಡು ತಿದ್ದುವಲ್ಲಿ ತುಂಬ ಸಹಕರಿಸಿದ ಡಾ. ಕೆ.ಆರ್. ಗಣೇಶ ಅವರಿಗೂ ಮುಖಪುಟದ ಕಲಾವಿದರಿಗೂ ನಮ್ಮ ಕೃತಜ್ಞತೆಗಳು.

ಕನ್ನಡದಲ್ಲಿನ ಅಭಿನಂದನ ಗ್ರಂಥಗಳ ಪಂಕ್ತಿಗೆ ಹೊಚ್ಚ ಹೊಸ ಸೇರ್ಪಡೆಯಾಗುತ್ತಿರುವ **'ಬರಹ-ಬಾಗಿನ'** ತನ್ನ ಓರಣ-ಹೂರಣದಿಂದಾಗಿ ಡಾ. ಹಂಪನಾ ಅವರಿಗೂ ಗಂಭೀರ ಓದುಗರಿಗೂ ಮೆಚ್ಚುಗೆಯಾಗುವುದೆಂಬ ಆಶಯ ನಮ್ಮದು. ಈ ಬೃಹತ್ ಕಾರ್ಯ ಸಾಧ್ಯವಾಗುವಂತೆ ಅನೇಕರು ಪ್ರಕಟಣಪೂರ್ವ ಮುಂಗಡ ನೀಡಿ ಸಹಕರಿಸಿದ್ದಾರೆ. ಎಲ್ಲರಿಗೂ ನಾವು ಕೃತಜ್ಞರು ಎಂದಷ್ಟೆ ಹೇಳಿ ವಿರಮಿಸುತ್ತೇವೆ.

ಶಿವಮೊಗ್ಗ<br>೨೫.೧೦.೯೬

ಸಂಚಾಲಕರು<br>ಸಹನಾ ಪ್ರಕಾಶನ



# ಪ್ರಸ್ತಾವನೆ

ಕನ್ನಡ ಸಾಹಿತ್ಯಲೋಕದಲ್ಲಿ ಡಾ॥ ಹಂಪನಾ ಸರ್ವಶ್ರುತವಾದ ಹೆಸರು. ಭಾಷಾವಿಜ್ಞಾನಿ, ಪ್ರಾಧ್ಯಾಪಕ, ಗ್ರಂಥ ಸಂಪಾದಕ, ಪ್ರಬಂಧಕಾರ, ಜೈನಶಾಸ್ತ್ರ ವಿದ್ವಾಂಸ, ಸಂಶೋಧಕರಾಗಿ ಡಾ. ಹಂಪ. ನಾಗರಾಜಯ್ಯ ಅವರು ಕನ್ನಡ ವಿದ್ವತ್ ಪ್ರಪಂಚಕ್ಕೆ ಅಮೂಲ್ಯ ಕೊಡುಗೆ ನೀಡಿದ್ದಾರೆ. ಬಹುಮುಖಿ ಪ್ರತಿಭೆಯ ಅವರು ಕನ್ನಡ ನಾಡು ನುಡಿ ಸಂಸ್ಕೃತಿಗೆ ತಮ್ಮ ಚೇತನವನ್ನು ಅರ್ಪಿಸಿಕೊಂಡ ಮಹನೀಯರು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಪ್ರಾಧ್ಯಾಪಕರಾಗಿ ಸಾವಿರಾರು ವಿದ್ಯಾರ್ಥಿಗಳಿಗೆ ಕನ್ನಡ ದೀಕ್ಷೆ ನೀಡಿದವರು; ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಕನ್ನಡದ ಬೆಳವಣಿಗೆಗೆ ಅಹರ್ನಿಶಿ ದುಡಿದವರು. ಸಾಹಿತ್ಯ ಪ್ರಕಟನೆ, ಅಖಿಲಭಾರತ ಸಾಹಿತ್ಯ ಸಮ್ಮೇಳನಗಳ ಸಂಘಟನೆ, ಕನ್ನಡ ಅಭಿವೃದ್ಧಿ ಹೋರಾಟದ ನಿರಂತರ ಕಾಯಕದಲ್ಲಿ ಅದ್ವಿತೀಯ ಕಾರ್ಯಮಾಡಿ ನಾಡಿನ ಜನರ ಕಣ್ಮಣಿಯಾಗಿ ಹಂಪನಾ ಜನಪ್ರಿಯರಾಗಿದ್ದಾರೆ.

ಡಾ. ಹಂಪನಾ ಅವರಿಗೆ ಇದೇ ಆಕ್ಟೋಬರ್ ಏಳರಂದು ಅರವತ್ತು ವರ್ಷಗಳಾಗುತ್ತಲಿರುವ ಸಂದರ್ಭದಲ್ಲಿ ಅವರ ಅಭಿಮಾನಿಗಳು, ಮಿತ್ರರು, ಶಿಷ್ಯವರ್ಗದವರು ಅವರಿಗೆ ಗೌರವ ಗ್ರಂಥದ ಮೂಲಕ ಅಭಿನಂದಿಸಲು ನಿರ್ಧರಿಸಿದರು. ಡಾ. ಹಂಪನಾ ಅವರ ಕನ್ನಡ ಸೇವೆಯ ಸಾರ್ಥಕ ಬದುಕಿನ ಅಮೃತಗಳಿಗೆಯ ಸವಿನೆನಪನ್ನು ಗ್ರಂಥ ರೂಪದಲ್ಲಿ ಗೌರವಿಸುವ ವಿಶಿಷ್ಟವಾದ ಪ್ರಯತ್ನವಿದು. ಸಂಶೋಧಕ ಸಾಹಿತಿಗಳ ಸಾಧನೆಯನ್ನು ಅಭಿನಂದನ ಗ್ರಂಥಗಳ ಮೂಲಕ ಗೌರವಿಸುವುದು ಕನ್ನಡದಲ್ಲಿ ಒಂದು ಸತ್ಪರಂಪರೆಯಾಗಿ ಬೆಳೆದು ಬಂದಿದೆ. ಇಂತಹ ಗೌರವ ಗ್ರಂಥಗಳು ವ್ಯಕ್ತಿಯೊಬ್ಬರ ಬಗೆಗೆ ಕೇವಲ ಪ್ರಶಂಸೆಯ ಬರಹಗಳಾಗಿರದೆ ಅವರ ಸಾಧನೆಯ ಕ್ಷೇತ್ರಗಳನ್ನು ಸಮೀಕ್ಷಿಸುವ ಸಂಪುಟಗಳೂ ಹೌದು. ಇವು ನೂತನವಾದ ಮೌಲಿಕ ಬರಹ, ಸಂಶೋಧನಾತ್ಮಕ ಲೇಖನಗಳ ಮೂಲಕ ನಾಡಿನ ಹಲವು ವಿದ್ವಾಂಸರು ಇನ್ನೊಬ್ಬ ವಿದ್ವಾಂಸರಿಗೆ ಅರ್ಪಿಸುವ ಬರಹಗಳ ಸಂಪುಟಗಳೆನ್ನಲೂಬಹುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಗೌರವ ಗ್ರಂಥ ಡಾ ಹಂಪನಾ ಅವರು ಕನ್ನಡ ವಿದ್ವತ್ ಕ್ಷೇತ್ರಕ್ಕೆ ಸಲ್ಲಿಸಿದ ಬಹುಮುಖ ಸೇವೆಯನ್ನು ಸ್ಮರಿಸಿ ಗೌರವಿಸುತ್ತದೆ ಎಂದರೆ ತಪ್ಪಾಗಲಾರದು.

ವಿದ್ವಾಂಸರಾದ ಡಾ. ಹಂಪನಾ ಅವರಿಗೆ ಈಗಾಗಲೇ ಮೂರು ಅಭಿನಂದನ ಗ್ರಂಥಗಳು ಬೇರೆ ಬೇರೆ ಸಂದರ್ಭದಲ್ಲಿ ಅರ್ಪಿತವಾಗಿವೆ. 'ಪಚ್ಚೆತೆನೆ' (ಸಂ.ಟಿ. ಕೆ. ಮೆಹಮೂದ್, ಶಾ.ಮಂ. ಕೃಷ್ಣರಾಯ, ೧೯೮೭) 'ಸಂಕೃತಿ' (ಸಂ. ಪ್ರೊ. ಎಚ್.ಜಿ. ಲಕ್ಕಪ್ಪಗೌಡ, ಪ್ರೊ. ಸುಕನ್ಯಾ ಮಾರುತಿ, ೧೯೮೮), 'ಸಂಕರ್ಷಣ' (ಸಂ. ಜಿ. ಜ್ಞಾನಾನಂದ, ಪ್ರೊ. ಸಂಜೀವಶೆಟ್ಟಿ, ೧೯೮೯). ಈಗ ಡಾ. ಹಂಪನಾ ಅವರಿಗೆ ಅರ್ಪಿಸಲ್ಪಡುವ ಅಭಿನಂದನ ಗ್ರಂಥ 'ಬರಹ ಬಾಗಿನ' ಅವರ ಬಾಳಿನ ಅರವತ್ತು ವಸಂತಗಳ ಸವಿಸ್ಮೃತಿಯ ದ್ಯೋತಕವಾಗಿ ಪ್ರಕಟವಾಗುತ್ತಲಿದೆ.

'ಬರಹ ಬಾಗಿನ' ಡಾ. ಹಂಪನಾ ಅವರಿಗೆ ಗೌರವಪೂರ್ವಕವಾಗಿ ಅರ್ಪಿಸಲ್ಪಡುತ್ತಿರುವ ಅಭಿನಂದನ ಗ್ರಂಥ. ಇದರಲ್ಲಿ ಮೂರು ಭಾಗಗಳಿವೆ. ಮೊದಲ ಭಾಗದಲ್ಲಿ ಡಾ. ಹಂಪನಾ ಅವರ ಬಾಳಿನ ಸುಂದರ ಅಧ್ಯಾಯಗಳನ್ನು ನಿರೂಪಿಸುವ ಅವರ ಆತ್ಮ ವೃತ್ತಾಂತವಿದೆ. ತಮ್ಮ

ಬದುಕಿನ ಸಂಕ್ಷಿಪ್ತ ಸಮೀಕ್ಷೆಯನ್ನು ಡಾ॥ ಕಮಲಾ ಹಂಪನಾ ಬರೆದಿದ್ದಾರೆ. ಡಾ. ಹಂಪನಾ ಅವರು ಕನ್ನಡ ಸಂಶೋಧನ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಿ ಸಂಶೋಧನ ಕ್ಷೇತ್ರದಲ್ಲಿ ಅನೇಕ ಜನರನ್ನು ತೊಡಗಿಸಿದವರು. ಅವರ ಸಂಶೋಧನ ಮಾರ್ಗದರ್ಶನ ಪಡೆದ ಕೆಲವರು ತಮ್ಮ ಅನುಭವಗಳ ಮೂಲಕ ಡಾ. ಹಂಪನಾ ಅವರ ಮಾರ್ಗದರ್ಶನ ವಿಧಾನವನ್ನು ತಿಳಿಸಿದ್ದು ಅವು ಇಲ್ಲಿ ಸೇರ್ಪಡೆಯಾಗಿವೆ. ಎರಡನೆಯ ಭಾಗದಲ್ಲಿ ಡಾ. ಹಂಪನಾ ಅವರ ಇತ್ತೀಚಿನ -ಅಂದರೆ, 'ಸಂಕೃತಿ'ಯಿಂದ ಈಚೆಗೆ ಪ್ರಕಟವಾದ ಕೃತಿಗಳ ಸಮೀಕ್ಷೆಯ ಅವಲೋಕನದ ಲೇಖನಗಳು ಇವೆ.

ಕನ್ನಡ ನಾಡಿನ ಸಂಶೋಧಕರು, ಭಾಷಾ ವಿಜ್ಞಾನಿಗಳು, ವಿದ್ವಾಂಸರು ಬರೆದ ಮೌಲಿಕ ಬರಹಗಳ ಸಂಶೋಧನ ಲೇಖನಗಳು ಈ ಗ್ರಂಥದ ಮೂರನೆಯ 'ಬಾಗಿನ' ಭಾಗದಲ್ಲಿವೆ. ಜೈನ ಸಾಹಿತ್ಯ, ಧರ್ಮ, ಸಂಸ್ಕೃತಿ, ಭಾಷಾವಿಜ್ಞಾನ, ಸಂಶೋಧನ, ಶಾಸನ, ಜಾನಪದ, ಸಂಕೀರ್ಣ ವಿಭಾಗಗಳಲ್ಲಿ ನಾಡಿನ ಬೇರೆ ಬೇರೆ ಭಾಗದ ವಿದ್ವಾಂಸರು ಬರೆದ ಲೇಖನಗಳಿವೆ. ಅವು ನಿಶ್ಚಯವಾಗಿಯೂ ನಮ್ಮ ಜ್ಞಾನಕ್ಷೇತ್ರದ ದಿಗಂತಗಳನ್ನು ವಿಸ್ತರಿಸಬಲ್ಲವು ಎಂದರೆ ಅತಿಶಯೋಕ್ತಿಯಾಗಲಾರದು. ಈ ಅಭಿನಂದನ ಗ್ರಂಥವು ಅತ್ಯಲ್ಪ ಅವಧಿಯಲ್ಲಿ ಸಿದ್ಧಗೊಂಡಿದೆ. ಸಹಜವಾಗಿಯೆ ಹಲವು ವಿದ್ವಾಂಸರಿಂದ ನಾವು ಲೇಖನಗಳನ್ನು ಪಡೆಯುವದು ಸಾಧ್ಯವಾಗಲಿಲ್ಲವೆಂಬ ಕೊರಗು ನಮಗಿದೆ. ಡಾ. ಹಂಪನಾ ಅವರ ಮಿತ್ರರು, ಶಿಷ್ಯರು, ಅಭಿಮಾನಿಗಳು ನಮ್ಮ ಪ್ರೀತಿಯ ಮಾತುಗಳಿಗೆ ಸ್ಪಂದಿಸಿ ಕೆಲವೇ ದಿನಗಳಲ್ಲಿ ಲೇಖನಗಳನ್ನು ಬರೆದುಕೊಟ್ಟು ಉಪಕರಿಸಿದ್ದಾರೆ. ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

**'ಬರಹ ಬಾಗಿನ'** ಪ್ರಕಟವಾಗುತ್ತಿರುವ ಸುಸಂದರ್ಭದಲ್ಲಿ ಡಾ. ಹಂಪನಾ ಅವರಿಗೆ 'ಚಾಮುಂಡರಾಯ ಪ್ರಶಸ್ತಿ' ಬಂದಿರುವದು ನಮ್ಮ ಸಂತಸವನ್ನು ಹೆಚ್ಚಿಸಿದೆ. ಡಾ. ಹಂಪನಾ ಅವರು ಕನ್ನಡ ವಿದ್ವತ್‌ಪ್ರಪಂಚಕ್ಕೆ ಸಲ್ಲಿಸಿದ ಬಹುಮುಖ ಸೇವೆಯನ್ನು ಅಭಿನಂದಿಸುವ ಈ **'ಬರಹ ಬಾಗಿನ'** ಅವರಿಗೆ ನಾವು ಸಲ್ಲಿಸುವ ನುಡಿನಮನವಾಗಿದೆ. ಕನ್ನಡದ ವಿದ್ವತ್ ಕ್ಷಿತಿಜ ಸದಾ ವಿಸ್ತಾರಗೊಳ್ಳಬೇಕೆಂದು ಹಂಬಲಿಸಿ ದುಡಿದ ಕ್ರಿಯಾಚೇತನರಾದ ಡಾ. ಹಂಪನಾ ನೂರ್ಕಾಲ ಬಾಳಲೆಂದು ಆಶಿಸುತ್ತ ಈ **'ಬರಹ ಬಾಗಿನ'**ವನ್ನು ಅವರ ಅರವತ್ತರ ಮುಕ್ತಾಯದ ಶುಭಗಳಿಗೆಯಲ್ಲಿ ಅರ್ಪಿಸುತ್ತಿದ್ದೇವೆ. ಡಾ. ಹಂಪನಾ ಅವರು ಸೇವೆಯಿಂದ ನಿವೃತ್ತರಾದರೂ ಕನ್ನಡ ಸೇವೆಯಿಂದ ನಿವೃತ್ತರಾಗುವವರಲ್ಲ, ಇಲ್ಲಿ ಕವಿ ಕಣವಿ ಅವರ ಒಂದು ಸುನೀತದ ಒಂದೆರಡು ಸಾಲು ನೆನಪಾಗುತ್ತವೆ:

ಬಿಡುವಿಲ್ಲದೋಡಾಡಿ ದಣಿಯದ ರೆಕ್ಕೆ
ಮನೆ ಹಿಡಿದು ಕೂಡುವದೇ?
ಮೌನದಲಿ ಏನಾದರೂ
ಒಂದು ಸೃಷ್ಟಿಸಬೇಕು ನೆಲ ಅಗೆದು ಬೀಜ ಹಾಕಿ"

ಇನ್ನು ಸರಕಾರಿ ನೌಕರಿಯ ಜಂಜಡವಿಲ್ಲದೆ ಹಂಪನಾ ನಿರಂತರವಾಗಿ ಸಾಹಿತ್ಯ ಸೇವೆ ಮಾಡುತ್ತ ಹೋಗಲಿ ಎಂದು ಅಭಿಮಾನಿಗಳು ಆಶಿಸುತ್ತಾರೆ.

**ಎಚ್. ವಿ. ನಾಗೇಶ್**
ಸಂಪಾದಕ ಮಂಡಳಿಯ ಪರವಾಗಿ

# ಪರಿವಿಡಿ

## ಭಾಗ ಒಂದು
### ಬದುಕು



## ಭಾಗ ಎರಡು
### ಬರಹ



## ಭಾಗ ಮೂರು
### ಬಾಗಿನ

**ಭಾಷಾವಿಜ್ಞಾನ**

### *ಜೈನಧರ್ಮ, ಸಾಹಿತ್ಯ, ಸಂಸ್ಕೃತಿ*



### *ಸಂಶೋಧನೆ-ಶಾಸನ ಸಾಹಿತ್ಯ, ಗ್ರಂಥ ಸಂಪಾದನೆ*

**ಜಾನಪದ**



**ಸಂಕೀರ್ಣ**



## ಅನುಬಂಧಗಳು



ಮೊದಲ ವಿಶ್ವಕನ್ನಡ ಸಮ್ಮೇಳನದ ಉದ್ಘಾಟನೆಯ ಸಂದರ್ಭ - ೧೫.೧೨.೧೯೮೫
ಡಾ. ಶಿವರಾಮ ಕಾರಂತ, ಶ್ರೀ ಬಿ.ಡಿ. ಜತ್ತಿ, ಶ್ರೀ ರಾಮಕೃಷ್ಣ ಹೆಗಡೆ (ಅಂದಿನ ಮುಖ್ಯಮಂತ್ರಿಗಳು), ಶ್ರೀ ಎಸ್. ರಾಚಯ್ಯ (ಸಚಿವರು), ಡಾ. ಹಂಪನಾ (ಕ.ಸಾ.ಪ. ಅಧ್ಯಕ್ಷರು) (ಕಾರಂತರ ಬಲ ಪಕ್ಕದಲ್ಲಿ ಕುಳಿತಿರುವವರು ಡಾ. ಕುವೆಂಪು)



ಶ್ರೀಮತಿ ಪದ್ಮಾವತಮ್ಮನವರು ಶ್ಯಾನುಭೋಗ ಪದ್ಮನಾಭಯ್ಯನವರು
ಡಾ.ಹಂಪನಾ ಅವರ ತಾಯಿ-ತಂದೆಯರು

ಜನುಮ ಜನುಮದ ಜೋಡಿ

ಡಾ. ಕಮಲಾ ಹಂಪನಾ ಡಾ. ಹಂಪನಾ



**ಹರ್ಷವರ್ಧನ ಅವರ ಮದುವೆ ಸಂದರ್ಭ ೨೨-೧೦-೧೯೯೧**

ಎ.ರಾಘವೇಂದ್ರ (ಅಳಿಯ), ಎಚ್.ಎನ್. ಆರತಿ (ಕಿರಿಮಗಳು), ಹಂಪನಾ, ಹರ್ಷವರ್ಧನ (ಮಗ), ನಾಗರತ್ನ (ಸೊಸೆ) ಕಮಲಾಹಂಪನಾ (ಹಿರಿಮೊಮ್ಮಗ ರಾಜೀವನೊಡನೆ), ರಾಜಶ್ರೀ (ಹಿರಿಮಗಳು), ನಟರಾಜ್ (ಹಿರಿ ಅಳಿಯ)

# ಭಾಗ್ಯವಂತ : ಆತ್ಮಕಥೆಯ ಎಸಳುಗಳು

---

**ಹಂಪ. ನಾಗರಾಜಯ್ಯ**

ನನ್ನ ಆತ್ಮಚರಿತ್ರೆಗೆ ಇಟ್ಟಿರುವ ಹೆಸರು 'ಭಾಗ್ಯವಂತ'. ನನ್ನ ಅರವತ್ತು ವರ್ಷಗಳ ಬಾಳನ್ನು ಒಮ್ಮೆ ಸಿಂಹಾವಲೋಕನ ಮಾಡಿದರೆ ಸಾಕು, ನಾನೆಷ್ಟು ಅದೃಷ್ಟಶಾಲಿ ಎಂಬುದು ಚೆನ್ನಾಗಿ ಮನವರಿಕೆ ಆಗುತ್ತದೆ. ಅರುವತ್ತು ವರ್ಷಗಳ ದಡದಲ್ಲಿ ನಿಂತು ಈ ಬಾಳು ನಡೆದು ಬಂದ ದಾರಿಯನ್ನು ಹಿಂತಿರುಗಿ ನೋಡಿದರೆ, ನನ್ನನ್ನೇ ನಾನು ಕನ್ನಡಿಯಲ್ಲಿ ನೋಡಿಕೊಂಡಂತೆ, ನನ್ನ ಇತಿಮಿತಿಗಳು ನನಗೆ ಅರಿವಾಗುತ್ತವೆ. ಆತ್ಮಕಥೆಯ ದೊಡ್ಡ ಸಂಪುಟದೊಳಗೆ ಸೇರಬೇಕಾದ ಕೆಲವು ಬಿಡಿಬಿಡಿ ಪ್ರಸಂಗಗಳನ್ನು ಮಾತ್ರ ಇಲ್ಲಿ ನೆನೆದು ಮೆಲುಕು ಹಾಕಿದ್ದೇನೆ. ಆದರಿಂದ-ಕ್ರಮಬದ್ಧ ಅನುಸ್ಯೂತವಾದ ಆತ್ಮಕಥನ ಇದಲ್ಲ; ಒಂದು ಪ್ರಸಂಗದಿಂದ ಇನ್ನೊಂದು ಪ್ರಸಂಗಕ್ಕೆ ನೇರ ಸಂಬಂಧವಿಟ್ಟು ಇಲ್ಲಿ ಬರೆದಿಲ್ಲ. ತಕ್ಷಣಕ್ಕೆ ಜ್ಞಾಪಕಕ್ಕೆ ಬಂದ ಸಂದರ್ಭಗಳನ್ನು ತನಿ ತನಿಯಾಗಿ ದಾಖಲಿಸಿದ್ದೇನೆ.

☆ ☆ ☆

ನನ್ನ ತಂದೆಯವರು ನಾನು ಹುಟ್ಟಿದ ಜಾತಕವನ್ನು, ಜನ್ಮಕುಂಡಲಿಯನ್ನು ಬರೆಸಿದ್ದಾರೆ. ಆ ಜಾತಕ ತಿಲಕದಿಂದ ನನ್ನ ಜೀವನ ದಾಖಲೆಯನ್ನು ಪ್ರಾರಂಭಿಸುತ್ತೇನೆ :

ಶ್ರೀ ಮದುಭಯಲಕ್ಷ್ಮೀರಮಣಾಯ ನಮಃ॥ ಜನನೀ ಜನ್ಮ ಸೌಖ್ಯಾನಾಂ॥ ವರ್ಧಿನೀ ಕುಲಸಂಪದಾಂ । ಪದವೀ ಪೂರ್ವ ಪುಣ್ಯಾನಾಂ। ಲಿಖ್ಯತೇ ಜನ್ಮ ಪತ್ರಿಕಾ ॥೧॥ ಸಮುಯಾಸ್ವಾಪ್ಯತೇ ಲಗ್ನಂ। ನಕ್ಷತ್ರಂ ನಾಮೋಲ್ಲೇಕಿತಂಪರೋಪದಿಷ್ಟವ್ಯಾಳಾಯಾಂ।ಲಿಖ್ಯತೇ ಜನ್ಮ ಪತ್ರಿಕಾ ॥೨॥ ನಮಃ ಸೂರ್ಯಾಯ ಚಂದ್ರಾಯ ಮಂಗಳಾಯ ಬುಧಾಯ ಚ ಗುರು ಶುಕ್ರ ಶನಿಭ್ಯಶ್ಚ ರಾಹುವೇ ಕೇತುವೇ ನಮಃ॥ ೩॥

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀ ವಾಹನ ಶಕವರ್ಷಂಗಳು ೧೮೫೮ ನೇ ಶ್ರೀಮತ್ ಧಾತುನಾಮಸಂವತ್ಸರೆ ದಕ್ಷಿಣಾಯನೆ ವರ್ಷಋುತ್ ನಿಜ ಭಾದ್ರಪದ ಮಾಸೆ ಕೃಷ್ಣಪಕ್ಷೆ ಸಪ್ತಮಿ ಬುದವಾರ ತಿಥಿ ಘಟಿಕಾ ೧೪-೧೪ ಆರಿದ್ರ ನಕ್ಷತ್ರ ಘಟಿಕಾ ೩೮-೨೩ ಪರಿಘ ನಾಮ ಯೋಗ ಘಟಿಕ ೪೮-೩೨ ಭವಕರಣ ಗಟಿಕಾ ೧೪-೧೪ತ್ಯಾಜ್ಯ ೦-೪೦ ಅಮೃತ ೨೩-೫೪ ಪ್ರ ೩-೫೪ ವಿಮಂ ೨೯-೩೬ ಭುಕ್ತಿ ೩-೨೬ ಚಂದು ೨೦ ಕನ್ಯಾಮಾಸ ತೇದಿ ೨೨ (ತಾರಿಖು ೭-೧೦-೧೯೩೬) ಏತಸ್ಮಿನ್ ಶುಭದಿನ ಸೂರ್ಯ ಅಸ್ತಮಯಾನಂತರೆ ೫೬ ಘಳಿಗೆ ೩೪ ವಿಘಳಿಗೆ

ಅಂದರೆ ರಾತ್ರಿ ೨೭ ಘಳಿಗೆಯೊಳಗಾಗಿ ಸಲ್ಲುವ ಶುಭಸಿಂಹಲಗ್ನದಲ್ಲಿ ಗೋರಿಬಿದನೂರು ತಾಲ್ಲೋಕ್ ಹಂಮಸಂದ್ರ ಗ್ರಾಮದಲ್ಲಿರುವ ಶ್ರೀಮತ್ ಅರ್ಹತ್ಪರ ಮೇಷ್ಠಿ ಪೂಜ್ಯರಾದಂತ ಮ।ರಾ।ಶ್ರೀ।। ಶ್ರೀ ಶ್ಯಾ। ಪದ್ಮನಾಭಯ್ಯನವರ ಧರ್ಮಪತ್ನಿಃ ಚಿ।ಸೌ।ಹ।ಕುಂ। ಶೋಭಿತಳಾದಂತ ಪದ್ಮಾವತಮ್ಮನವರ ಗರ್ಭಾಂಬುಧಿಯಲ್ಲಿ ಚತುರ್ಥ ಪುತ್ರರತ್ನಜನನಾ. ವ್ಯವಹಾರ ನಾಮ ನಾಗರಾಜಯ್ಯ.

| ನಕ್ಷತ್ರ | ಹಸ್ತ | ಪುನರ್ವಸು | ಪುಬ್ಬ | ಹಸ್ತ | ಜ್ಯೇಷ್ಠ | ಸ್ವಾತಿ | ಪೂರ್ವ ಬಾದ್ರ | ಮೂಲ | ಮೃಗಶಿರ |
|---|---|---|---|---|---|---|---|---|---|
| ಪಾದ | ೪ | ೩ | ೧ | ೨ | ೪ | ೪ | ೨ | ೨ | ೪ |
| ಗ್ರಹ | ರವಿಃ | ಚಂದ್ರ | ಕುಜ | ಬುಧ | ಗುರು | ಶುಕ್ರ | ವಕ್ರೀ ಶನಿ | ರಾಹು | ಕೇತು |

| | | | | | | | |
|---|---|---|---|---|---|---|---|
| ೮ | ೪ | ೧೦ | ೧೧ ಚಂದ್ರ ಕೇತು | ಕೇತು | | | |
| ಶನಿ ೭ | ಜನ್ಮ ಕುಂಡಲಿ | | ೧೨ | | ಅಂಶ ಕುಂಡಲಿ | | ಗುರು ಶುಕ್ರ |
| ೬ | | | ಕುಜ ಲಗ್ನ ೧ | | | | |
| ರಾಹು ೫ | ಗುರು ೪ | ಶುಕ್ರ ೩ | ರವಿಃ ಬುಧ | ಕುಜ | | | ಬುಧ, ಶನಿ ರಾಹು |

| | |
|---|---|
| ಜನನ ಕಾಲಕ್ಕೆ ಪುನರ್ವಸು ನಕ್ಷತ್ರ ಆದ್ಯಂತ ಘಳಿಗೆಗಳು | ೫೮ - ೫೪ |
| ಗರ್ಭಗತ ಘಳಿಗೆಗಳು | ೧೮ - ೧೧ |
| ಏಷ್ಯ ಘಳಿಗೆಗಳು | ೪೦-೪೩ |
| | ವ ತಿಂ ದಿನ |
| ಜನನ ಕಾಲಕ್ಕೆ ಗುರು ಮಹಾರ್ದಶಾ ಸಂವತ್ಸರಗಳು | ೧೬- ೧೦ - ೦ |
| ಗರ್ಭಗತ ಸಂವತ್ಸರಗಳು | ೫ - ೨ -೨೦ |
| ಏಷ್ಯ ಸಂವತ್ಸರಗಳು | ೧೦ - ೯ -೧೦ |

ಇದು ಹಂಪಸಂದ್ರ ಹಳ್ಳಿಯ ಏಕಮೇವಾದ್ವಿತೀಯ ವೈದಿಕ ಬ್ರಾಹ್ಮಣರಾದ ಲಕ್ಷ್ಮೀಪತಿ ಶಾಸ್ತ್ರಿಯವರು 1936ರ ಅಕ್ಟೋಬರ್ ತಿಂಗಳಲ್ಲಿ ಬರೆದ ಬ್ರಹ್ಮ ಜಾತಕ. ಅಲ್ಲದೆ ಅವರು ಶ್ರದ್ಧೆಯಿಂದಲೂ ಬುದ್ಧಿಯಿಂದಲೂ ನನ್ನ ಜೀವನಜಾತಕವನ್ನು ಏಳೆಂಟು ಪುಟಗಳವರೆಗೂ ಬರೆದಿದ್ದಾರೆ; ನಾನು ಒಟ್ಟು 82 ವರ್ಷ ಬದುಕಿರುವುದಾಗಿಯೂ ನನ್ನ ಆಯುರ್ಮಾನವನ್ನು

ಭವಿಷ್ಯದರ್ಶಿಯಾಗಿ ದಾಖಲಿಸಿದ್ದಾರೆ; ಈ 82 ವರ್ಷಗಳ ಅವಧಿಯಲ್ಲಿ ನಾನು ಪಡೆಯಬಹುದಾದವನ್ನೂ ಸಾಧಿಸುವಂತಹುದನ್ನೂ ಸಂಭವಿಸುವಂತಹುದನ್ನೂ ತಮ್ಮ ಅರಿವಿಗೆ ಮುನ್ನೋಟಕ್ಕೆ ಅನುಭವಕ್ಕೆ ಅನುಗುಣವಾಗಿ ಸೂಚಿಸಿದ್ದಾರೆ. ಅವರ ಭವಿಷ್ಯವಾಣಿಯಲ್ಲಿ ಬಹುಮಟ್ಟಿಗೆ ಏರುಪೇರುಗಳಾಗಿವೆ; ತಕ್ಕಮಟ್ಟಿಗೆ ನಿಜವೂ ಆಗಿವೆ.

☆ ☆ ☆

ರಾಮಾಯಣದಲ್ಲಿ ಬರುವ ಒಂದು ಪ್ರಸಂಗ ನೆನಪಾಗುತ್ತದೆ. ಲಕ್ಷ್ಮಣನು ಲಂಕೆಯ ಸ್ವರ್ಣ ವೈಭವ ಕಂಡು ಮಾರುಹೋದನು. ಲಂಕೆಯಲ್ಲೇ ಇದ್ದು, ಅಲ್ಲಿಂದಲೇ ಅಯೋಧ್ಯೆಯನ್ನು ಆಳಬಹುದೆಂದು ಅಣ್ಣನಿಗೆ ಸೂಚಿಸಿದನು. ಆಗ ರಾಮ ಹೇಳಿದ ಮಾತಿದು-ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ (ಹೆತ್ತ ತಾಯಿ ಮತ್ತು ತಾಯಿನಾಡು-ಇವೆರಡೂ ಸ್ವರ್ಗಕ್ಕಿಂತಲೂ ಮಿಗಿಲಾದವು). ಇದು ವಾಲ್ಮೀಕಿ ಮಹರ್ಷಿಯ ಭಾವನೆಯೂ ಹೌದು. ಇದರ ತದ್ವಿರುದ್ಧ ನೆಲೆಯಲ್ಲಿ ನಿಂತು ಆಡಿದ ಮಾತು ಅಲ್ಲಮ ಪ್ರಭುವಿನದು. ಹುಟ್ಟಿದ ನೆಲೆಯ ತೃಷ್ಣೆ ಬಿಡದವರಿಗೆ ಅನುಭಾವವೆಲ್ಲಿಯದೋ ಎಂಬುದಾಗಿ ಪ್ರಭುದೇವ ಪ್ರಶ್ನಿಸಿರುವುದು ಉನ್ನತನೆಲೆಯಲ್ಲಿ ನಿಂತು, ಭಾವುಕತೆಯಿಂದ ಬಿಡಿಸಿಕೊಂಡ ಜೀವದ ಮಾತು.

ನಾನು ಅತ್ತ ರಾಮನೂ ಅಲ್ಲ, ಇತ್ತ ಅಲ್ಲಮಪ್ರಭುವೂ ಅಲ್ಲ. ನಾನೊಬ್ಬ ಸಾಮಾನ್ಯ ಪ್ರಜೆ. ಈಗ ಬೆಂಗಳೂರಿನ ಒಬ್ಬ ಪೌರ. ನನಗೆ ಅನ್ನಿಸಿದ್ದನ್ನು ಹೇಳುತ್ತಿದ್ದೇನೆ. ಹಂಪಸಂದ್ರದಲ್ಲಿ ನಾನು ಹುಟ್ಟಿದೆ ; ಇದು ಕೋಲಾರ ಜಿಲ್ಲೆ, ಗೌರೀಬಿದನೂರು ತಾಲೂಕಿನಲ್ಲಿದೆ. ಹಂಪಸಂದ್ರಗ್ರಾಮವು ಕರ್ನಾಟಕ-ಆಂಧ್ರ ಗಡಿಯಲ್ಲಿದೆ. ಸುಮಾರು ಮುನ್ನೂರು ಮನೆಗಳಿರುವ ಎರಡು ಸಾವಿರ ಜನಸಂಖ್ಯೆಯ ಈ ಹಳ್ಳಿಯಲ್ಲಿ ಶೇಕಡ ಎಂಬತ್ತು ಜನ ತೆಲುಗು ಭಾಷಿಕರು. ಆದರೆ ಎಲ್ಲರಿಗೂ ಕನ್ನಡ-ತೆಲುಗು ಎರಡೂ ಭಾಷೆ ಚೆನ್ನಾಗಿ ಬರುತ್ತದೆ.

ತವರೂರ ದಾರಿಯಲಿ ಕಲ್ಲಿಲ್ಲ ಮುಳ್ಳಿಲ್ಲ ಎಂದು ಜನಪದರು ಹಾಡಿದ್ದಾರೆ. ನನ್ನೂರಿನ ಹಾದಿಯಲ್ಲಿ ಕಲ್ಲೂ ಇದೆ, ಮುಳ್ಳೂ ಇದೆ; ಎರಡು ವರ್ಷಗಳ ಹಿಂದೆ ಡಾಂಬರು ರಸ್ತೆ ಬಂದಿದೆ. ಹಾಲುಂಡ ತೌರೀಗೆ ಏನೆಂದು ಹೇಳಲಿ। ಹೊಳೆದಂಡೇಲಿರುವ ಗರಕೀಯ ಕುಡಿಯಂಗೆ। ಹಬ್ಬಲಿ ಅವರ ರಸಬಳ್ಳಿ ॥ ಎಂದು ಅಜ್ಞಾತ ಕವಿ ತನ್ನೂರಿಗೆ ಲೇಸು ಕೋರಿದ್ದಾನೆ. ಈ ಕೋರಿಕೆ ಎಲ್ಲರ ಅನಿಸಿಕೆಯೂ ಹೌದು. ನಾನು ಹಂಪಸಂದ್ರ ಬಿಟ್ಟು ಬೇರೆ ಊರು ಸೇರಿ ಆಗಲೇ ಅರ್ಧ ಶತಮಾನ ಆಗಿದೆ. ಆದರೂ ಆರಂಕುಶಮಿಟ್ಟೊಡಂ ನೆನೆವುದೆನ್ನಮನಂ ಹಂಪಸಂದ್ರಗ್ರಾಮಮಂ. ಹಂಪಸಂದ್ರದಿಂದ ಈ ಜೀವ ಪಡೆದದ್ದು ಬಹಳವಿದೆ. ಎಷ್ಟೇ ನೆನೆದರೂ ಹುಟ್ಟಿದೂರಿನ ಋಣವನ್ನು ತೀರಿಸಲು ಆಗದಷ್ಟು ದೊಡ್ಡದಿದೆ.

ಬಾಲ್ಯವೆಂಬುದು ಪ್ರತಿಯೊಬ್ಬರ ಪಾಲಿಗೂ ಬಾಳಿಗೂ ನಿಸರ್ಗ ಕರುಣಿಸಿದ ವರ. ಯಾರಿಗೇ ಆಗಲಿ, ಅವರವರ ಎಳೆಯಂದಿನ ದಿನಗಳ ನೆನಪು ಬಾಡುವುದು ಕಡಮೆ, ನನಗೂ ಅಷ್ಟೆ. ಚಿಕ್ಕವನಾಗಿದ್ದ ದಿನಗಳ ನೆನಪು ಹಸಿರಾಗಿದೆ, ಎದೆಯಾಳದಿಂದ ಜಿನುಗಿ ಚಿಮ್ಮುತ್ತದೆ.

ಹಂಪಸಂದ್ರ ನನ್ನ ಪಾಲಿಗೆ ಎಂದೂ, ಯಾವುದೊ ಒಂದು ಯಃಕಶ್ಚಿತ್ ಕುಗ್ರಾಮವೆಂದು ಎನಿಸಲಿಲ್ಲ. ಅಲ್ಲಿನ ಬಡಬಗ್ಗರೆದೆಗಳಲ್ಲಿ ಸಿರಿ ಸಂಸ್ಕೃತಿ ತುಂಬಿ ತುಳುಕುವುದನ್ನು ಕಂಡಿದ್ದೇನೆ, ಅನುಭವಿಸಿದ್ದೇನೆ. ಆ ಊರು, ನೆರೆಹೊರೆ, ಪರಿಸರ ನನ್ನ ಭಾವಕೋಶವನ್ನು ಆವರಿಸಿ ಪುಷ್ಟಿಗೊಳಿಸಿದೆ. ನನ್ನ ಸ್ಮೃತಿಪಟಲದಲ್ಲಿ ಅಚ್ಚಳಿಯದೆ ಉಳಿದ ದೃಶ್ಯಾವಳಿಯನ್ನೊಮ್ಮೆ ನೆನೆದು ಹಂಬಲಿಸಿ ಮೆಲುಕು ಹಾಕಿದ್ದರ ಫಲ ಈ ಬರವಣಿಗೆ.

ಹಂಪಸಂದ್ರ ಸಾಧಾರಣ ಪ್ರಮಾಣದ ಗ್ರಾಮ. ಸಣ್ಣಪುಟ್ಟ ವಿವರಗಳಲ್ಲಿ, ಮನೆ ಹೊಲಗದ್ದೆ ಬೆಳೆ ಜನ ಉಡುಗೆ ತೊಡುಗೆ ಆಚಾರಣೆ ಆಹಾರ-ಇದರ ಸ್ವರೂಪದಲ್ಲಿ, ಹೆಚ್ಚು ಕಡಮೆ ಇರಬಹುದು; ಆದರೆ ಒಟ್ಟಾರೆ ಭಾರತದ ಹಳ್ಳಿಗಳಲ್ಲಿ ಏಕ ರೂಪತೆ ಇರುತ್ತದೆ. ಆದರಿಂದ ಈ ನಾಡಿನ ನೂರಾರು ಊರುಗಳಂತೆ ನನ್ನೂರೂ ಇದೆ. ಈ ಊರಿನ ನಡುವೆ ಮಾರಮ್ಮನ ಗುಡಿ. ಅದರೆದುರು ನೆಲಕ್ಕೆ ನೆಟ್ಟ ಕಲ್ಲುಬಲಿ ಕಂಬ; ಮಾರಿಜಾತ್ರೆಯ ಕಾಲದಲ್ಲಿ ಕೋಣ ಕಡಿಯುತ್ತಿದ್ದುದು ಅಲ್ಲೇ. ಮಾರಿಗುಡಿಯ ವಿಗ್ರಹವೆಂದರೆ ಒಂದು ಕಲ್ಲು; ಅದರ ಅರ್ಧಭಾಗ ನೆಲದೊಳಗಿದೆ. ಭಕ್ತರ ಪಾಲಿಗೆ ಅದು ಕಲ್ಲಲ್ಲ, ದೈವ; ಮಾರಮ್ಮ ಭಯ ಭಕ್ತಿಯ ತರಂಗಗಳನ್ನು ಉಕ್ಕಿಸುವುದುಂಟು. ಈ ಅಮ್ಮ ಕೊಟ್ಟರೆ ವರ, ಇಟ್ಟರೆ ಶಾಪ, ಮುನಿದರೆ ಮಾರಿ. ಬಲಿಕಂಬದ ಪಕ್ಕದಲ್ಲಿ ಚಚ್ಚೌಕಾಕಾರದ ಮೂರಡಿ ಜಗತಿ ಕಟ್ಟೆ; ಈ ಕಟ್ಟೆ ಇಪ್ಪತ್ತಡಿ ಉದ್ದ, ಅಷ್ಟೇ ಅಗಲ. ಅದರ ನಟ್ಟನಡುವೆ ದೊಡ್ಡದಾಗಿ ಬೆಳೆದು ನಿಂತ ಬೇವಿನ ಮರ, ಇಬ್ಬರು ತಬ್ಬಬಲ್ಲ ದೊಡ್ಡಬುಡ.

ಮಾರಿಗುಡಿಯ ಒಂದು ಬದಿಗೆ ಪ್ರಾಥಮಿಕ ಶಾಲೆ. ನನ್ನ ತಾತ ಜ್ವಾಲಸಪ್ಪನವರು ೧೯೩೦ರ ಸುಮಾರಿಗೆ ಈ ಶಾಲೆ ಊರಿಗೆ ಬರುವಂತೆ ಪ್ರಯತ್ನಿಸಿ ಸಫಲರಾದರು; ಈ ತಾತ ೧೯೩೮ರಲ್ಲಿ ತೀರಿಹೋದರು. ಅದೇ ವರ್ಷ ಹುಟ್ಟಿದ ನನ್ನ ಒಬ್ಬ ತಮ್ಮನಿಗೆ ಜ್ವಾಲಸಪ್ಪ ಎಂಬ ಹೆಸರಿಟ್ಟರು.

ಈ ಶಾಲೆಗೆ ಹಳ್ಳಿಯ ಮಕ್ಕಳನ್ನು ಸೇರಿಸುವಾಗ ಆ ಹುಡುಗರು ಹುಟ್ಟಿದ ತೇದಿಗಳು ತಾಯಿತಂದೆಗೂ ತಿಳಿದಿರುವುದು ಅಪರೂಪ; ಅದರ ಅಗತ್ಯವೂ ಅವರಿಗೆ ಇರಲಿಲ್ಲ. ಶಾಲೆಯ ಉಪಾಧ್ಯಾಯರು ಬರೆದದ್ದೇ ಬ್ರಹ್ಮ ಬರೆಹ. ನನ್ನ ಅಪ್ಪ ಎಷ್ಟೋ ಸಲ ಶಾಲೆಗೆ ಹೋಗಿ ಓಜಯ್ಯಗಳಿಗೆ ಹೇಳಿ ಹುಡುಗರ ಜನ್ಮ ದಿನಾಂಕ ಬರೆಯಲು ಸಹಾಯ ಮಾಡುತ್ತಿದ್ದರು. ಮೇಲು ಜಾತಿ ಮಕ್ಕಳಿಗೆ ಜನನ ತಾರೀಖು ಸರಿಯಾಗಿರುತ್ತಿತ್ತು. ಕೆಳಜಾತಿ ಮಕ್ಕಳಿಗೆ ಅಂದಾಜಿನ ಮೇಲೆ ಬರೆಯುತ್ತಿದ್ದರು. ಕೆಳಜಾತಿಯ ಚಳ್ಳೆಪಿಳ್ಳೆ ಐಕಳಿಗೆ ಹೆಸರು, ಕಾಗುಣಿತ, ಜನನ ದಿನಾಂಕ ಎಲ್ಲವೂ ಐಗಳ-ಐನೋರ ಕೃಪಾಕಟಾಕ್ಷದಿಂದ ಸಾಧ್ಯವಾಗುತ್ತಿತ್ತು. ಶೂದ್ರ ಮಕ್ಕಳ ಜಾತಕಾದಿಗಳು ಇರದಿದ್ದರೂ ಬೆಳವಣಿಗೆ ಮೈಕಟ್ಟು ಇರುತ್ತಿತ್ತು. ತತ್ಪರಿಣಾಮವಾಗಿ ಐದಾರು ವರ್ಷದ ಹುಡುಗನಿಗೆ ಏಳೆಂಟು ವರ್ಷ ವಯಸ್ಸೆಂದು ಬರೆಯಲಾಗುತ್ತಿತ್ತು!

ಶಾಲೆ ಹಳೆಯದು. ಕಟ್ಟಿದ ದಿನಗಳಲ್ಲಿ ಊರಿನ ಸಂಖ್ಯೆಗೆ ಸಾಕಾಗಿತ್ತು. ಹೆಚ್ಚಿನ ಮಕ್ಕಳಿಗೆ ಸ್ಥಳಾವಕಾಶಕ್ಕಾಗಿ ಈಗ ಊರ ಹೊರಗೆ ಬೇರೊಂದು ದೊಡ್ಡ ಶಾಲೆಯಾಗಿದೆ. ಆದರೆ ನಾನು ಅ ಆ ಇ ಈ ಕನ್ನಡ ಅಕ್ಷರ ಮಾಲೆ ಕಲಿತದ್ದು ಹಳೆಯ ಮಠದಲ್ಲಿ. ನನ್ನ ಒಳಗಣ್ಣಿನ

ಕ್ಯಾಮರಾ ದಾಖಲಿಸಿರುವುದು ಅರ್ಧ ಶತಮಾನಕ್ಕೂ ಹಿಂದಿನ ಹಳ್ಳಿಯ ಮಠವನ್ನು. ಆ ಹಳೆಯ ಶಾಲೆ ಇಟ್ಟಿಗೆ ಗಾರೆ ಕಟ್ಟಡ. ಮೇಲೆ ತಾರಸಿಯಿರಲಿಲ್ಲ, ಮಂಗಳೂರು ಹೆಂಚಿನ ಹೊದಿಕೆಯಿತ್ತು. ಇಡೀ ಮಠಕ್ಕೆ ಒಂದೇ ಪ್ರವೇಶದ್ವಾರ-ಎರಡುರೆಕ್ಕೆಗಳ ಬಾಗಿಲು-ಅಕ್ಷರ ಲೋಕಕ್ಕೆ ತೆರೆದ ದಾರಿ. ಶಾಲೆಯೊಳಗೆ ಪ್ರತ್ಯೇಕ ಕೊಠಡಿಗಳಿರಲಿಲ್ಲ. ಒಂದರಿಂದ ನಾಲ್ಕನೆಯ ತರಗತಿ (ಇರುತ್ತ)ವರೆಗೆ ಎಲ್ಲ ನಾಲ್ಕು ಕ್ಲಾಸುಗಳೂ ಅಲ್ಲೇ ನಡೆಯುತ್ತಿದ್ದುವು. ಚಿಲಿಪಿಲಿಯೆಂದೋದುವ ಗಿಳಿಗಳು ಒಂದು ಬದಿಯಿಂದ ಇನ್ನೊಂದು ಬದಿಯವರೆಗೆ ಸಾಲಾಗಿ ಕುಳಿತಿರುತ್ತಿದ್ದ ನಕ್ಷತ್ರ ಲೋಕದ ನೋಟ ಕಣ್ಣಿಗೆ ಕಟ್ಟಿದಂತಿದೆ.

ಶಾಲೆಯೊಳಗೆ ನಾಲ್ಕು ಗೋಡೆಯ ನಡುವೆ ಚಿಕ್ಕಮಕ್ಕಳ ಭವಿಷ್ಯರೂಪಗೊಳ್ಳುತ್ತಿದ್ದ ಬಗೆಯನ್ನು ಹರಳುಗೊಳಿಸಿ ಹೇಳುವುದು ತೊಡಕಿನ ಪ್ರಯತ್ನ. ಶಾಲೆಯೊಳಗೆ ಉದ್ದ ೨೫ ಅಡಿ. ಅಗಲ ೧೫ ಅಡಿ. ಅದ್ವಿತೀಯವಾಗಿ ಸಿಂತ ಮರದ ಬಾಗಿಲು ತೆರೆದು ಹೊಸಲುದಾಟಿ ಒಳಗೆ ಕಾಲಿಟ್ಟರೆ ಎದುರಿಗೇ ಉಪಾಧ್ಯಾಯರ ಕುರ್ಚಿ, ಅದರ ಮುಂದುಗಡೆ ಮೇಜು. ಮೇಜಿನ ಮೇಲೆ ನುಣುಪಾದ, ಮಿರಿಮಿರಿ ಮಿಂಚುವ ಬಹೂಪಯೋಗಿ ಕೋಲು. ಒಂದೂವರೆ ಅಡಿ ಉದ್ದದ ದುಂಡುದುಂಡಾದ ಈ ರೂಲರ್ ದೊಣ್ಣೆ ಶಿಸ್ತಾಗಿ ಮೇಜಿನ ಮೇಲೆ ಕುಳಿತಿರುತ್ತಿತ್ತು. ಅದರ ಅಪ್ಪಟ ಕರಿಯ ಬಣ್ಣ ತನ್ನ ಅಂತರಂಗದ ಕಾಠಿಣ್ಯ ಸ್ವಭಾವವನ್ನು ಬಹಿರಂಗ ಪಡಿಸುವಂತಿತ್ತು. ಬಾಲಕರ ಪಾಲಿಗೆ ಅದು ಯಮದಂಡ, ಅಧ್ಯಾಪಕರಿಗೆ ಅದು ವರದಂಡ. ವೀಣಾವರದಂಡ ಮಂಡಿತ ಕರ ಎಂದು ಹೇಳಿದ್ದು ಸರಸ್ವತಿಗೋ ಈ ಮೇಸ್ಟರಿಗೋ ತಿಳಿಯದಂತಾಗಿತ್ತು. ಸಣ್ಣ ಪುಟ್ಟ ತಪ್ಪಿಗೆಲ್ಲಾ ಹುಡುಗರ ಅಂಗೈಚಾಚಿಸಿ ಈ ವರದಂಡದಿಂದ ಹೊಡೆಯುತ್ತಿದ್ದರು. ಮಾಸ್ತರರಿಗೆ ಕೋಪ ಬಂದರೆ ಆ ದೊಣ್ಣೆಗೆ ಜೀವಬರುತ್ತಿತ್ತು, ಬಾಲಕರಿಗೆ ಜೀವ ಹೋಗುತ್ತಿತ್ತು.

ಮೇಜಿನ ಮೇಲೆ ಇನ್ನೊಂದು ಪಕ್ಕದಲ್ಲಿ ಹಾಜರಿ ಪುಸ್ತಕ. ಅದರಲ್ಲಿ ಎಲ್ಲ ಚಿಣ್ಣರ ಸಹಸ್ರನಾಮಾವಳಿ. ತಮ್ಮ ಹೆಸರೇ ಏನು, ಭೂಲೋಕದ ಎಲ್ಲರ ಹೆಸರೂ ಅದರಿಂದಲೇ ಹೊರ ಹೊಮ್ಮುತ್ತದೆಂಬುದು ಮಕ್ಕಳ ನಂಬಿಕೆಯಾಗಿತ್ತು. ಹೀಗಾಗಿ ಆ ಹಾಜರಿ ಪುಸ್ತಕವೆಂಬುದು ಭಯ ಭಕ್ತಿ ಖುಷಿಹೆಮ್ಮೆ ಮೊದಲಾದ ಸಂಕೀರ್ಣ ಭಾವನೆಗಳನ್ನು ಮೂಡಿಸಿದ ಒಂದು ಮಂತ್ರದ ಕಂತೆ. ಗುರುಗಳ ಎಡಬದಿಗೆ ಒಂದು ಸಾಧಾರಣಗಾತ್ರದ ಮರದ ಪೆಟ್ಟಿಗೆ. ಅದರೊಳಗಿಂದ ಮಸಿಕುಡಿಕೆ, ಲೇಖಣಿ, ನಮೂನೆ ಪುಸ್ತಕಗಳು, ಸೀಮೆಸುಣ್ಣ, ಬಳಪ, ಒಂದೆರಡು ಗಟ್ಟಿ ಮರಾಳೆಯ ಪುಸ್ತಕಗಳು, ಇನ್ನೂ ಏನೇನೋ-ಆಗಾಗ ಈಚೆಗೆ ಬರುತ್ತಿದ್ದುವು, ಹಾಗೇ ಒಳಗೆ ಸೇರುತ್ತಿದ್ದುವು. ಅಂತೂ, ಅದೊಂದು ಜಾದೂ ಪೆಟ್ಟಿಗೆ. ಯಕ್ಷಿಣಿ ವಿದ್ಯೆಯಿಂದ ಆ ಪೆಟ್ಟಿಗೆ ವಶವಾಗುತ್ತದೆಂಬ ತಿಳಿವಳಿಕೆ ಬಾಲಕರಿಗಿತ್ತು. ಆ ಪೆಟಾರಿಯೊಳಗೆ ಏನೇನು ಇದೆಯೆಂದು ಬುಡಮುಟ್ಟ ಕೊಡವಿ ನೋಡುವ ಆಸೆಯೂ ತವಕವೂ ಇತ್ತು. ಅದರ ಬಾಗಿಲು ತೆರೆದು ನೋಡುವ, ಆಚಾರ್ಯರನ್ನೇ ಕೇಳಿ ತಿಳಿಯುವ ಧೈರ್ಯ ಯಾರಿಗೂ ಇರಲಿಲ್ಲ. ಮೇಷ್ಟರಿಗಿಂತ ದೊಡ್ಡ ಅಧಿಕಾರಿಯೊಬ್ಬರು ವರ್ಷಕ್ಕೊಮ್ಮೆ ಬರುತ್ತಿದ್ದರು. ಆ ದಿನ ಗುರುಗಳು ಹೊಸ ಬಟ್ಟೆ ತೊಟ್ಟು, ಪೇಟಕಟ್ಟಿಕೊಂಡು ಗಂಭೀರವಾಗಿ ಕುಳಿತಿರುತ್ತಿದ್ದರು. ಆ ಅಧಿಕಾರಿಗಷ್ಟೇ ಈ ಮರದ ಪೆಟ್ಟಿಗೆ-ಸಂದೂಕಿನ ಪೂರ್ಣ ಅಂತರ್ದರ್ಶನ ಸುಲಭವಾಗಿ ಆಗುತ್ತಿತ್ತು. ನಾವೂ ಅಂಥದೊಡ್ಡ

ಆಫೀಸರಾಗಿ ಒಮ್ಮೆ ಬಂದು ಈ ಮರದಪೆಟ್ಟಿಗೆಯಲ್ಲಿನ ಒಳರಹಸ್ಯವನ್ನು ಭೇದಿಸಲೇಬೇಕೆಂದು ಕೆಲವು ಮಕ್ಕಳು ಕನಸುಕಾಣುತ್ತಿದ್ದರು. ಮರದ ಪೆಟ್ಟಿಗೆಗೆ ಬೀಗ ಹಾಕುತ್ತಿದ್ದರು. ವಾಗ್ದೇವಿಯ ಭಂಡಾರದ ಈ ಮುದ್ರೆಯನ್ನು ಒಡೆಯುತ್ತಿದ್ದುದು ಆ ಟೀಚರ್ ಮಾತ್ರ.

ಶಾಲೆಯ ಇನ್ನೊಂದು ಪಕ್ಕಕ್ಕೆ ವೈಶ್ಯರ ಅಂಗಡಿಯಿತ್ತು. ಮಕ್ಕಳ ಬಾಯಲ್ಲಿ ಲಾವಾರಸದಂತೆ ಜೊಲ್ಲು ಸುರಿಯುವಂತೆ ಮಾಡುವ ಶಕ್ತಿ ಆ ಅಂಗಡಿಗಿತ್ತು. ಕನಸು ನನಸುಗಳಲ್ಲಿ ಕೈ ಬೀಸಿ ಕರೆಯುತ್ತಿದ್ದ ಪ್ರೀತಿಯ ತಾಣ ಅಂಗಡಿಯಲ್ಲಿ ಸಾಲಾಗಿ ಒಪ್ಪವಾಗಿ ಇರಿಸಿದ್ದ ಗಾಜಿನ ಶೀಷೆಗಳೊಳಗಿನ ಪದಾರ್ಥಗಳು. ಬುರುಗಲು (ಮಂಡಕ್ಕಿ, ಪುರಿ, ಚುರುಮುರಿ), ಪಪ್ಪುಲು, (ಹುರಿಗಡಲೆ), ಚಕ್ಕಲಿ, ನಿಪ್ಪಟ್ಟು, ಕಜ್ಜಾಯ, ಪಕೋಡ, ಕಡಲೆಕಾಯಿ (ಶೇಂಗಾ), ಪೆಪ್ಪರಮೆಂಟು-ಇವು ತರಗತಿಯೊಳಗಿನ ಪಾಠಕ್ಕಿಂತ ರುಚಿಕರವಾಗಿದ್ದುವು. ಇವುಗಳ ಗಾತ್ರ, ಆಕಾರ, ಬಣ್ಣ-ಚಿಣ್ಣರಿಗೆ ಕಣ್ಣು ಹೊಡೆಯುತ್ತಿದ್ದುವು. ಜೇಬಿನಲ್ಲಿ ಒಂದು ಕಾಸೋ, ಮೂರುಕಾಸೋ, ಅರ್ಧಾಣೆಯೋ ಇದ್ದರೆ ಅವನು ಕುಬೇರನ ಮೊಮ್ಮಗ. 'ಅಂಗಡಿ ಹತ್ತಿರ ಹೋಗಬೇಡಿ, ಶಾಲೆಗೆ ನೇರವಾಗಿ ಹೋಗಿ' ಎಂದು ಮನೆಯಲ್ಲಿ ಕಟ್ಟಪ್ಪಣೆಯಾಗಿದ್ದರೂ ಎಲ್ಲರೂ ಶಾಲೆಗೆ ಬರುವ ಮೊದಲು ಅಂಗಡಿಯೆಂಬ ಗುಡಿಗೆ ಹೋಗಿ, ಆ ಬಣ್ಣದ ಶೀಷೆದೇವರ ದರ್ಶನ ಮಾಡಿ, ಮೈ ಮನಗಳ ಸುಳಿಯಲ್ಲಿ ಆ ದರ್ಶನಭಾಗ್ಯವನ್ನು ತುಂಬಿಕೊಳ್ಳುತ್ತಿದ್ದರು. ಕೆಲವರು ಜೇಬುಗಳಲ್ಲಿ ತುಂಬಿಕೊಂಡು ಮನೆಯಿಂದ ತಂದ ಆಹಾರವಿದ್ದರೂ ಅಂಗಡಿಯ ಗಾಜಿನೊಳಗೆ ಹೊಳೆಯುವ ಪದಾರ್ಥಗಳಿಗಾಗಿ ಅಯಸ್ಕಾಂತಕ್ಕೆ ಸಿಕ್ಕಂತೆ ಚಡಪಡಿಸುತ್ತಿದ್ದರು; ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿಯುವ ವಿಕಾಸ ಪ್ರಕ್ರಿಯೆ ಆ ವಯಸ್ಸಿಗೆ ಪ್ರಾರಂಭವಾಗಿತ್ತು !

ಶಾಲೆಗೆ ದೊಡ್ಡ ಕಿಟಕಿಗಳಿದ್ದುವು. ಕಿಟಕಿಗಳ ಮೂಲಕ ಹೊರಕ್ಕೆ ಹಾರಿ ಹೋಗಲಿಚ್ಛಿಸಿದವರಿದ್ದರು. ಆದರೆ ಅದು ಅವರಿಂದ ಅಸಾಧ್ಯವಾಗಲು ಕಾರಣವೂ ಇತ್ತು, ಕಿಟಕಿಗಳಿಗೆ ಕಬ್ಬಿಣದ ಕಂಬಿಗಳಿದ್ದವು. ಕಿಟಕಿಗಳಲ್ಲಿನನಗೊಂದು ಸ್ವಾರಸ್ಯವಿತ್ತು. ಒಂದು ಕಿಟಕಿಯ ಮೂಲಕ ಚಾವಡಿ ಮುಂದಣ ದೊಡ್ಡ ಅರಳಿಮರ ಕಾಣುತ್ತಿತ್ತು. ತರಗತಿಯೊಳಗಿನ ಗುರುಗಳಂತೆ ಆ ಅರಳಿಮರವೂ ನನಗೆ ಇನ್ನೊಬ್ಬ ಗುರುವಾಗಿತ್ತು. ಎಷ್ಟೋ ಸಲ ಗಾಳಿ ಮಳೆ ಹೊಡೆತಕ್ಕೆ ಈ ಮರನಾದ ತೋರವಾದ ಕೊಂಬೆ ರೆಂಬೆಗಳು ಮುರಿದು ಬೀಳುತ್ತಿದ್ದುವು. ಆದರೂ ಆ ಮರ ಇದ್ದೇ ಇರುತ್ತಿತ್ತು; ತಾಯಿ ಬುಡ ಹಾಗೆ ಭದ್ರವಾಗಿತ್ತು. ಚೈತ್ರಾಗಮನದೊಂದಿಗೆ ನಿಸರ್ಗ ಚಿಗುರೊಡೆದು ಗಿಡಗಂಟಿಗಳೊಳಗಿಂದ ನವಪಲ್ಲವ ಪಡೆಯುವುದಕ್ಕೆ ಈ ಅರಳಿ ಮರ ಕೇಕೆ ಹಾಕುತ್ತ ಸಾಕ್ಷಿ ಹೇಳುತ್ತಿತ್ತು. ಫೆಬ್ರವರಿಯಲ್ಲಿ ಹಣ್ಣಾದ ಎಲೆಗಳುದುರಿ ಮಾರ್ಚಿ ತಿಂಗಳ ವೇಳೆಗೆ ಬೋಳು ಬೋಳಾಗಿದ್ದ ಕೊಂಬೆ ರೆಂಬೆಗಳ ಕಡ್ಡಿಗಳ ತುದಿಗಳಲ್ಲಿ ತೆಳ್ಳಗಿನ ಹೊಂಬಣ್ಣದೆಲೆಗಳು ಚಿಕ್ಕದಾಗಿ ಕಾಣಿಸಿಕೊಂಡು ಎರಡೇ ವಾರಗಳಲ್ಲಿ ದೊಡ್ಡದಾಗಿ ಅರಳಿ ತೆಳುಹಸಿರುರೇಕುಗಳಂತೆ ಬೆಳಕಿಗೊಡ್ಡಿ ಫಳ ಫಳ ಹೊಳೆಯುತ್ತಿದ್ದುವು. ಇಂಥ ಅರಳಿಯೆಲೆಗಳ ಕುಚ್ಚು ಸಿಕ್ಕಿಸಿಕೊಂಡ ಅರಳಿ ಮರ ವಸಂತ ಋತುವಿನ ಆಗಮನವನ್ನು ಯುಗಾದಿ ಮತ್ತೆ ಬಂತೆಂಬುದನ್ನು ಸಾರುವ ಸಂಕೇತವೃಕ್ಷವಾಗಿತ್ತು. ವಸಂತ ರಾಜನ ಆಗಮನವೆಂದರೆ ಊರು ಹೊಸ ವರ್ಷಕ್ಕೆ ಹೆಜ್ಜೆ ಹಾಕಿದಂತೆ. ಅರಳಿಮರ ಪ್ರಕೃತಿಯಲ್ಲಿ ಅಡಗಿರುವ ಜೀವಧಾರಣೆಯ ಸೋಜಿಗದತ್ತ ಒಳನೋಟಕೊಡುವ ಕಣ್ಣಾಗಿತ್ತು.

ಇಂಥ ಅತಿಶಯಗಳನ್ನು, ಪುನರುಜ್ಜೀವನ ವಿಸ್ಮಯಗಳನ್ನೂ ಜನರಲ್ಲಿ, ಪ್ರಾಣಿ ಪಕ್ಷಿಗಳಲ್ಲಿ, ನದಿ ತೊರೆ ಆಕಾಶದಲ್ಲಿ, ಗಿಡಮರ ಬಳ್ಳಿಯಲ್ಲಿ ಕಾಣುತ್ತ, ಬೈಗು ಬೆಳಗುಗಳಲ್ಲಿ ಬೆರಗುಗೊಳ್ಳುತ್ತ, ನಾನು ಯಾವುದೋ ರಹಸ್ಯಮಯ ಪ್ರಪಂಚದಲ್ಲಿ ಬಾಳುತ್ತಿರುವಂತೆ ಅನುಭವವಾಗುತ್ತಿತ್ತು. ಬಾಲ್ಯದಂತೆಯೇ ಇಂದಿಗೂ ನನಗೆ ಎಷ್ಟೋ ಸಂಗತಿಗಳು ವಿಸ್ಮಯ ಮೂಡಿಸುತ್ತವೆ.



ನನ್ನ ಮನೆಯ ವಿಚಾರವೂ ಮನೆತನದ ವಿಚಾರವೂ ಜಂಟಿಯಾನವಾಗಿ ಒಟ್ಟೊಟ್ಟಿಗೆ ಸಾಗುತ್ತವೆ. ಕೆಲವು ಕಾಲ ನನ್ನ ತಂದೆ Passing show ಸಿಗರೇಟು ಸೇದುತ್ತಿದ್ದರು; ಆ ಮೇಲೆ ಅವರೇ ಸ್ವಯಿಚ್ಛೆಯಿಂದ ಧೂಮಪಾನ ನಿಲ್ಲಿಸಿದರು. ಅವರ ಪ್ರಭಾವವೆಂದೇ ತೋರುತ್ತದೆ, ನಾನು ಚಿಕ್ಕ ಹುಡುಗನಾಗಿದ್ದಾಗಲೇ ಕದ್ದು ಮುಚ್ಚುಮರೆಯಲ್ಲಿ ಬಿಡಿ ಸಿಗರೇಟು ಸೇದುತ್ತಿದ್ದೆ. ಕೈಯಲ್ಲಿ ಹಣ ಇರುವ ದಿನಗಳು ಬಂದಾಗ, ಕಾಲೇಜು ವಿದ್ಯಾರ್ಥಿಯಾಗಿರುವಾಗಲೇ ಸಿಗರೇಟು ಸೇದುತ್ತಿದ್ದೆ. ಮನೆಯೊಳಗೆ ಧೂಮಪಾನ ಮಾಡುವಷ್ಟು ಧೈರ್ಯ ಇರದಿದ್ದರೂ ಮನೆಯ ಹೊರಗೆ ಜಗತಿಯಲ್ಲೊ ಊರಿನ ಚಾವಡಿಯಲ್ಲಿ ಕುಳಿತೋ ಸಿಗರೇಟು ಸೇದುತ್ತಿದ್ದೆ. ಒಮ್ಮೆ ನನ್ನ ತಂದೆ ಬರುತ್ತಿರುವುದು ಗೊತ್ತಾಗದೆ ಸಿಗರೇಟು ಸೇದುತ್ತಲೇ ಇದ್ದೆ. ನನ್ನ ತಂದೆ ಇದನ್ನು ನೋಡಿಯೂ ನೋಡದಂತೆ ತಲೆ ತಗ್ಗಿಸಿಕೊಂಡು ತಮ್ಮ ಪಾಡಿಗೆ ತಾವು ಮನೆಯೊಳಗೆ ಹೋದರೆಂದು ಜತೆಯವರು ಹೇಳಿದ ಮೇಲೆ ತುಂಬ ಹಿಂಸೆಪಟ್ಟೆ. ಮುಂದೆ ಕೂಡ ಒಂದು ದಿನವೂ ಅಪ್ಪ ಈ ವಿಷಯ ಪ್ರಸ್ತಾಪಿಸಲೇ ಇಲ್ಲ.

ಅಪ್ಪ-ಅಮ್ಮ ನಿಷ್ಠಾವಂತ ಜಿನ ಭಕ್ತರು, ಆದರ್ಶ ಜೈನ ದಂಪತಿಗಳು. ನಾನು ಅವರ ಅಪರೂಪದ ಮಗ. ನನಗಿಂತ ಮೊದಲು ಹುಟ್ಟಿದ್ದ ಇಬ್ಬರು ಹೆಣ್ಣುಮಕ್ಕಳು ಐದಾರು ವರ್ಷ ಇದ್ದು ಸತ್ತು ಹೋದರು. ಒಮ್ಮೆ ಅಮ್ಮನಿಗೆ ಗರ್ಭಪಾತವೂ ಆಗಿತ್ತು. ಹೀಗಾಗಿ ನಾಗರಿಗೆ ಹರಸಿಕೊಂಡರು. ನಾಗರ ಕಟ್ಟೆ ಕಟ್ಟಿಸಿದರು. ನಾಗರ ಕಲ್ಲುಗಳನ್ನು ಮಾಡಿಸಿದರು. ಬೇವು-ಅರಳಿಮರ ನೆಟ್ಟರು. ನಾಗರ ಪೂಜೆ ಮಾಡಿದರು. ಅನ್ನದಾನ ವಸ್ತ್ರದಾನ ಸುವರ್ಣದಾನ ಗೋದಾನಗಳನ್ನು ಮಾಡಿದರು. ಆನಂತರ ಹುಟ್ಟಿದ ನನಗೆ ನಾಗರಾಜ ಎಂದು ನಾಮಕರಣವಾಯಿತು. ಹೀಗೆ ಬೇಡಿ ಪಡೆದ ಮಗನಾದ ನಾನು ಅವರ ಕೆಲವು ಕನಸುಗಳನ್ನು ಹುಸಿಗೊಳಿಸಿದೆ. ಮುಖ್ಯವಾಗಿ ಮದುವೆಯ ವಿಚಾರದಲ್ಲಿ ಅವರಿಗೆ ನನ್ನಿಂದ ದೊಡ್ಡ ನಿರಾಶೆ-ನೋವು ಆಯಿತು. ಅವರ ಧಾರ್ಮಿಕ ನಂಬಿಕೆಗಳಿಗೆ ಪೆಟ್ಟು ಬಿದ್ದಿತು. ಸಾಮಾಜಿಕ ಪ್ರತಿಷ್ಠೆಗೆ ಕುಂದು ಉಂಟಾಯಿತು. ನಾನು ಜೈನ ಸಮಾಜದಲ್ಲಿನ ಹೆಣ್ಣನ್ನು ಮದುವೆಯಾಗುವ ಯೋಗ ಕೂಡಿ ಬರಲಿಲ್ಲ. ದೀರ್ಘ ಕಾಲ, ಆರು ವರ್ಷ ನನ್ನ ಸಹಪಾಠಿಯಾಗಿದ್ದ ಸಿ. ಆರ್. ಕಮಲಮ್ಮ ನನ್ನ ಜೀವನ ಸಾಥಿಯೂ ಆದಳು. ನಾವಿಬ್ಬರೂ ಹೇಗೆ ಜೀವನ ಸಂಗಾತಿಗಳಾದೆವು ಎಂಬುದನ್ನು ಅನ್ಯತ್ರ ಈಗಾಗಲೇ ಅನೇಕ ಕಡೆ ನಿರೂಪಿಸಿದ್ದಾಗಿದೆ.

ಆದರೆ ಈ ಅಂತರ್ಜಾತೀಯ ವಿವಾಹ ಪ್ರಚಾರಕ್ಕಾಗಲಿ, ಇತರರ ಮೆಚ್ಚುಗೆಯನ್ನು ಪಡೆಯುವುದಕ್ಕಾಗಲಿ ನಡೆದದ್ದಲ್ಲ. ಪರಸ್ಪರ ಗಾಢವಾಗಿ ಪ್ರೀತಿಸಿದೆವು, ಮದುವೆಯಾದೆವು.

ಎಷ್ಟೋ ಕಷ್ಟನಷ್ಟಗಳನ್ನೂ ತಾಳಿಕೊಂಡು ಒಟ್ಟಿಗೆ ಬಾಳಿದೆವು. ಕಮಲಾ ಹಂಪನಾ ಕೂಡ ನನಗಾಗಿ ಸಾಕಷ್ಟು ತ್ಯಾಗ ಮಾಡಿದಳು. ತನ್ನ ಆಹಾರ ಪದ್ಧತಿಯನ್ನು ಬದಲಾಯಿಸಿದಳು. ತನ್ನ ಜೀವನ ಶೈಲಿಯನ್ನೇ ಮಾರ್ಪಡಿಸಿದಳು. ಆಕೆಯ ಧೃತಿಯಿಂದ ನಮ್ಮ ಸಂಸಾರ ನೌಕೆ ಮುಳುಗಲಿಲ್ಲ. ಅದರ ವಿಸ್ತಾರವಾದ ಕಥೆಯನ್ನು ಸಂದರ್ಭಬಂದಾಗ ಇನ್ನೊಮ್ಮೆ ಹೇಳಬಹುದು.

ನಮಗೆ ಮೂವರು ಮಕ್ಕಳು; ಒಬ್ಬ ಮಗ, ಇಬ್ಬರು ಮಗಳುದಿರು. ಮಕ್ಕಳನ್ನು ಯಾವ ಶಾಲೆಗೆ ಸೇರಿಸುವುದು, ಯಾವ ಮಾಧ್ಯಮದಲ್ಲಿ ಓದಿಸುವುದು ಎಂಬುದು ನಮಗೆ ಸಮಸ್ಯೆಯಾಗಲಿಲ್ಲ. ನಾವಿಬ್ಬರೂ ಕನ್ನಡ ಕಲಿತು, ಕನ್ನಡ ಪಾಠ ಹೇಳುವ ಕನ್ನಡ ಅಧ್ಯಾಪಕರು. ನಾವೇ ನಮ್ಮ ಮಕ್ಕಳನ್ನು ಕನ್ನಡ ಮಾಧ್ಯಮಕ್ಕೆ ಸೇರಿಸದಿದ್ದರೆ ಬೇರೆಯವರಿಗೆ ಹೇಳಲು ಹೇಗೆ ಬಾಯಿ ಬರುತ್ತದೆ ? ನಾವು ಕನ್ನಡವನ್ನು ಬಲವಾಗಿ ನಂಬಿದವರು. ಪಂಪ-ಕುವೆಂಪು ಅವರಿಂದ ದೀಕ್ಷೆ ಪಡೆದವರು. ಮೂವರು ಮಕ್ಕಳನ್ನು ಕನ್ನಡ ಶಾಲೆಗೇ ಸೇರಿಸಿದೆವು, ಕನ್ನಡ ಮಾಧ್ಯಮದಲ್ಲೇ ಓದಿಸಿದೆವು. ಅದರಿಂದ ನಮ್ಮ ಮಕ್ಕಳೇನೂ ದಡ್ಡರಾಗಲಿಲ್ಲ. ಒಬ್ಬ ಮಗಳು, ಆರತಿ, ಪದವಿ ತರಗತಿಯಲ್ಲಿ ಇಂಗ್ಲಿಷಿನಲ್ಲಿ ಪಾಠಕೇಳಿ, ಪರೀಕ್ಷೆಯಲ್ಲಿ ಕನ್ನಡದಲ್ಲಿ ಉತ್ತರ ಬರೆದು ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣಳಾದಳು. ಕನ್ನಡ ಮಾಧ್ಯಮದಲ್ಲಿ ಕಲಿಯಿರಿ-ಕಲಿಸಿರಿ ಎಂದು ಇತರರಿಗೆ ಹೇಳುತ್ತ, ಪತ್ರಿಕಾ ಪ್ರಚಾರ ಪಡೆಯುತ್ತ, ತಮ್ಮ ಮಕ್ಕಳನ್ನು ಮಾತ್ರ ಇಂಗ್ಲಿಷ್ ಮಾಧ್ಯಮದಲ್ಲಿ ಓದಿಸುವವರೂ ಇರಬಹುದು. ಆದರೆ ಎಲ್ಲರೂ ಆ ರೀತಿ ಆತ್ಮವಂಚನೆ ಮಾಡುವವರೇ ಆಗಿದ್ದಾರೆಂದು ಸಾರಾಸಗಟು ತೀರ್ಮಾನಿಸಬಾರದು. ಲಕ್ಷಾಂತರ ಜನ ಕನ್ನಡ ಪ್ರೇಮಿಗಳು ಅಬ್ಬರಗಳಿಲ್ಲದೆ ತಮ್ಮ ಕನ್ನಡತನವನ್ನು ನಿತ್ಯ ಜೀವನದಲ್ಲಿ ಅಳವಡಿಸಿಕೊಂಡವರಿದ್ದಾರೆ; ಆ ಲಕ್ಷಾಂತರ ಜನರಲ್ಲಿ ನಾವೂ ಸೇರಿದ್ದೇವೆಂಬುದು ನೆಮ್ಮದಿಯನ್ನುಂಟು ಮಾಡಿದೆ.

ನಮ್ಮ ಮೂವರು ಮಕ್ಕಳು ಕನ್ನಡ ಮಾಧ್ಯಮದಲ್ಲಿ ಕಲಿತು ದೊಡ್ಡವರಾದರೆಂಬುದೊಂದೇ ಸಮಾಧಾನದ ವಿಚಾರವಲ್ಲ. ನಮ್ಮಂತೆಯೇ ಮೂವರೂ ಮಕ್ಕಳು ಅಂತರ್ಜಾತೀಯ ವಿವಾಹವಾಗಿ ಸುಖವಾಗಿದ್ದಾರೆ. ಮೌನವಾಗಿಯೇ ಬೀಸುತ್ತಿರುವ ಈ ಸಾಮಾಜಿಕ ಪರಿವರ್ತನೆಯ ಗಾಳಿ ನಮ್ಮ ಮನೆಯಲ್ಲಿ ತೀರ ಸರಳವಾಗಿ, ಸಹಜವಾಗಿ ಉಸಿರಾಡುತ್ತಿದೆ. ಅನೇಕ ಬಂಧುಗಳೂ, ಗೆಳೆಯರ ಬಳಗವೂ, ಸಾಹಿತಿ ವೃಂದವೂ, ರಾಜಕಾರಣಿಗಳೂ ನಮ್ಮ ಈ ವೈಚಾರಿಕ ಜೀವನದ, ಪ್ರಗತಿಪರಧೋರಣೆಯ ಅನುಷ್ಠಾನವನ್ನು ಕುರಿತು ಆಶ್ಚರ್ಯ ಚಕಿತರಾಗಿ ಶ್ಲಾಘಿಸಿದ್ದಾರೆ; ನಮ್ಮ ಕುಟುಂಬವನ್ನು ಹರಸಿ ಲೇಸು ಕೋರಿದ್ದಾರೆ. ಸಾರ್ವಜನಿಕ ಪ್ರತಿಕ್ರಿಯೆಗಳಲ್ಲಿ ಒಂದನ್ನು ಇಲ್ಲಿ ಉದಾಹರಿಸುತ್ತೇನೆ :

ಡಾ. ಕಮಲಾ ಹಂಪನಾ ಅವರಿಗೆ 60 ತುಂಬಿದಾಗ ಕ.ಸಾ.ಪ. ಮೈಸೂರಲ್ಲಿ ಏರ್ಪಡಿಸಿದ್ದ ರಾಷ್ಟ್ರ ಮಟ್ಟದ ವಿಚಾರ ಸಂಕಿರಣದಲ್ಲಿ, ಕರ್ನಾಟಕ ಸರ್ಕಾರದ ತೋಟಗಾರಿಕೆ ಇಲಾಖೆ ಸಚಿವರಾದ ಡಿ.ಟಿ. ಜಯಕುಮಾರ್ ಮಾಡಿದ ಭಾಷಣದಲ್ಲಿ ಒಂದು ಪ್ಯಾರಾ ಹೀಗಿದೆ : 'ಸಾಂಸಾರಿಕ ಜೀವನದಲ್ಲಿ ಕಮಲಾಹಂಪನಾ ಅವರ ಸಾಧನೆ ಇಡೀ ರಾಷ್ಟ್ರಕ್ಕೆ ಹೆಮ್ಮೆ

ತರುವಂತಹುದು. ೩೭ ವರ್ಷಗಳ ಹಿಂದೆಯೇ ಅವರು ಅಂತರ್ಜಾತೀಯ ವಿವಾಹವಾದರೆಂಬುದನ್ನು ನೆನಪಿಡಬೇಕು. ದಿಲ್ಲಿಯ ಪ್ರಧಾನಿಯವರಿಂದ ಹಳ್ಳಿಯ ಪ್ರಧಾನರವರೆಗೆ ಅಂತರ್ಜಾತೀಯ ವಿವಾಹ ಕುರಿತು ವೇದಿಕೆಯಿಂದ ಮಾತಾಡುತ್ತಾರೆ. ಆದರೆ ಅದನ್ನು ಸ್ವತಃ ಆಚರಣೆಗೆ ತರುವವರು ಕಡಿಮೆ. ಅದಕ್ಕೆ ತಾಕತ್ತು, ಆತ್ಮವಿಶ್ವಾಸ, ಬದ್ಧತೆ ಇರಬೇಕಾಗುತ್ತದೆ. ಕಮಲಾಹಂಪನಾ ದಾಂಪತ್ಯ ಇಡೀ ದೇಶಕ್ಕೆ ದೊಡ್ಡ ಆದರ್ಶವಾಗಿರುವುದಕ್ಕೆ ಪ್ರಬಲವಾದ ಕಾರಣಗಳಿವೆ. ಅವರು ತಮ್ಮ ಅಂತರ್ಜಾತೀಯ ವಿವಾಹವನ್ನು ಅಬ್ಬರ ಆಡಂಬರಗಳಿಲ್ಲದೆ ರಿಜಿಸ್ಟರ್ ಮದುವೆಯ ಮೂಲಕ ಮಾಡಿಕೊಂಡರು. ಅಲ್ಲದೆ ಅದನ್ನು ಪ್ರಚಾರದ ಸಾಧನವಾಗಿಯೋ, ಮೇಲೇರಲು ಏಣಿಯಾಗಿಯೋ, ಮಾಡಿಕೊಳ್ಳಲಿಲ್ಲ. ಜೊತೆಗೆ ತಮ್ಮ ತಲೆಮಾರಿಗೆ ಈ ಕ್ರಾಂತಿ ನಿಲ್ಲದೆ ತಮ್ಮ ಮೂರೂ ಜನ ಮಕ್ಕಳಿಗೂ ಅಂತರ್ಜಾತೀಯ ವಿವಾಹ ಮಾಡಿಸಿರುವುಂತೂ ಗಿನ್ನಿಸ್ ದಾಖಲೆಯಾಗಿದೆ. ಇಂಥ ಯಶಸ್ವಿ ಮೌನ ಕ್ರಾಂತಿಯಿಂದ ಸಮಾಜ ದಲ್ಲಿ ಬದಲಾವಣೆ ಸಾಧ್ಯ' (೨೯-೧೦-೧೯೯೫ರಂದು ಮಾಡಿದ ಲಿಖಿತ ಭಾಷಣ).



ಗೌರೀಬಿದನೂರು ಆಚಾರ್ಯ ಪಾಠಶಾಲೆಯಲ್ಲಿ ಎಸ್‌ಎಸ್‌ಎಲ್‌ಸಿ ತರಗತಿಯಲ್ಲಿ ಓದುತ್ತಿದ್ದೆ (೧೯೫೩). ಆಗ ಅಲ್ಲಿ ನಡೆದ ಒಂದು ಘಟನೆ ಮರೆಯಲಾಗದ್ದು. ವಿದ್ಯಾರ್ಥಿಗಳಿಗೆ ಪ್ರತಿ ಶನಿವಾರ ಸಂಜೆ ಶೈಕ್ಷಣಿಕ ಮಹತ್ವದ ಸಾಕ್ಷ್ಯಚಿತ್ರಗಳನ್ನು ತೋರಿಸುವ ಪರಿಪಾಟಿಯಿತ್ತು. ಹುಡುಗರೆಲ್ಲ ನೆಲದ ಮೇಲೆ ಹರಡಿದ ಮರಳಿನಲ್ಲಿ ಕುಳಿತುಕೊಳ್ಳುವುದೂ ಮೇಷ್ಟರುಗಳು ವೇದಿಕೆಯ ಮೇಲೆ ಹಾಕಿದ ಕುರ್ಚಿಗಳ ಮೇಲೆ ಕುಳಿತುಕೊಳ್ಳುವುದು ಕ್ರಮ. ಒಂದುಸಲ ಇಂಥ ಚಿತ್ರ ಪ್ರದರ್ಶನ ನಡೆದಿತ್ತು. ಕೆಲವು ಗುರುಗಳು ಬಂದಿರಲಿಲ್ಲ. ವೇದಿಕೆಯ ಕುರ್ಚಿಗಳು ಖಾಲಿ ಇದ್ದುವು. ಕೆಳಗೆ ಮರಳಿನ ಮೇಲೆ ಕುಳಿತಿದ್ದ ನಾನು ಎದ್ದು ಹೋಗಿ ಹಿಂದಿದ್ದ ಒಂದು ಕುರ್ಚಿಯಲ್ಲಿ ಕುಳಿತೆ. ಉಳಿದ ವಿದ್ಯಾರ್ಥಿಗಳಿಗೆ ಗಾಬರಿ, ಕೆಲವರಿಗೆ ಭಯ : ಲೋ ನಾಗಾ, ಬೇಗ ಕೆಳಗೆ ಬಾರೊ, ಮೇಷ್ಟ್ರು ನೋಡಿದರೆ ಏಟು ಬೀಳುತ್ತೆ... ಎಂದು ಗೆಳೆಯರು ಎಚ್ಚರಿಸುತ್ತಿದ್ದರು. ಈ ಗಲಿಬಿಲಿಯಲ್ಲಿ ಒಬ್ಬ ಟೀಚರ್ (ನಾರಾಯಣಶಾಸ್ತ್ರಿ) ಗಮನಿಸಿದರು. 'ಏ ಯಾರೊ ಅದು? ಇಳಿಯೊ ಕೆಳಗೆ, ಬೇಕೂಫಾ' ಎಂದು ವಾಚಾಮಗೋಚರ ಜೋರುಮಾಡಿದರು. ನಾನು ಕ್ಷೀಣಸ್ವರದಲ್ಲಿ 'ಇಲ್ಲ ಸಾರ್, ಖುರ್ಚಿ ಖಾಲಿ ಇತ್ತು ಅದಕ್ಕೆ...' ಎಂದು ಉತ್ತರಿಸುತ್ತಿದ್ದೆ. ಅವರು ನನ್ನ ಪೂರ್ತಿ ಉತ್ತರಕ್ಕೆ ಕಾಯಲಿಲ್ಲ–'ಈಡಿಯೆಟ್? ಎಷ್ಟೊ ಸೊಕ್ಕು ನಿನಗೆ, ? ನನಗೇ ಎದುರುತ್ತರ ಕೊಡ್ತಿಯೇನೊ?' ಎಂದು ಧಡ ಬಡ ನನ್ನ ಹತ್ತಿರ ಬಂದರು. ಏದ್ದೇಳೊ ಮೇಲೆ... ಎಂದರು. ನಾನು ಕುಳಿತುಕೊಂಡೇ ಮಾತಾಡಿದ್ದೆ ಎಂಬುದು ಆಗ ಅರಿವಾಯಿತು. ನಾನು ಎದ್ದು ನಿಲ್ಲುವಷ್ಟರಲ್ಲಿ ಅವರು ಕೈ ಹಿಡಿದೆಳೆದು ವೇದಿಕೆಯಿಂದ ಕೆಳಗೆ ತಳ್ಳಿದರು. ವೇದಿಕೆಯಿಂದ ಕೆಳಗೆ ಬಿದ್ದೆ. ಅದರಿಂದೇನೂ ನನಗೆ ನೋವೆನಿಸಲಿಲ್ಲ. ಆದರೆ ಅವರು ನನಗೆ ಅಂದ ಮಾತುಗಳಿಂದ ತುಂಬ ನೊಂದಿದ್ದೆ. ಅವರು ನಡೆದುಕೊಂಡ ರೀತಿಯೂ ಘಾಸಿಯನ್ನುಂಟುಮಾಡಿತು. ನಾನು ಕೆಳಗೆ ಬಿದ್ದಾಗ ಜತೆಹುಡುಗರು ಜೋರಾಗಿ ನಕ್ಕರು; 'ಆಯ್ತೇನೊ ಮುಖಕ್ಕೆ ಮಂಗಳಾರತಿ, ಬೇಡಾಂತ ನಾವು ಆಗಲೇ ಹೇಳ್‌ಲಿಲ್ವಾ, ಕೈ

ತೋರಿಸಿ ಅವಲಕ್ಷಣ ಅಂತ ಅನ್ನಿಸಿಕೊಂಡ...' ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲು. ಅನುಕಂಪದ ಒಂದು ದನಿಯೂ ಇರಲಿಲ್ಲ. ತೇಜೋವಧೆ ಆಯಿತು. ಕಣ್ಣಲ್ಲಿ ನೀರು ಧಾರಾಕಾರವಾಗಿ ಹರಿಯಿತು. ಮತ್ತೆ ಕೆಳಗೆ ಮರಳಿನ ಮೇಲೆ ಕುಳಿತೆ. ಮರಳು ಕಾದ ಕೆಂಡವೆನಿಸಿತು. ಪುಸ್ತಕ ಚೀಲ ಹಿಡಿದು ಮೇಲೆದ್ದು ಹೊರಟೆ. ನನ್ನ ಹಿಂದೆ ನಗು ಕೇಳುತ್ತಿತ್ತು. ರಾತ್ರಿ ನಿದ್ರೆ ಬರಲಿಲ್ಲ. ಹಾಸಿಗೆಯೂ ಬಿಸಿಯೆನಿಸಿತು. ದಿಂಬು ನೀರಿನಲ್ಲಿ ಅದ್ದಿ ತೆಗೆದಂತಾಗಿತ್ತು. ಮರುದಿನ ಶಾಲೆಗೆ ಹೋಗುವುದೇ ಬೇಡ ಎನಿಸಿತು. ಶಾಲೆಯೇ ಶತ್ರು ಪಾಳೆಯವೆನಿಸಿತು. ಆದರೆ ನಾನು ಹೆದರಿ ಶಾಲೆಗೆ ಚಕ್ಕರ್ ಕೊಟ್ಟೆ ಅಂತ ಜತೆಗಾರರು ಭಾವಿಸಿದರೆ ಏನುಗತಿ ಅಂತ ಇನ್ನೊಂದು ಯೋಚನೆ. ನಾನು ಕ್ಷಮಿಸಲಾಗದಂತಹ ತಪ್ಪು ಮಾಡಿಲ್ಲ ಎಂದು ಅಂತರಂಗ ಹೇಳಿತು. ಎಂದಿನಂತೆ ಶಾಲೆಗೆ ಹೋದೆ. ತರಗತಿಯಲ್ಲಿ ಕುಳಿತಿರುವಾಗ ಜವಾನ ಬಂದು 'ನಾಗರಾಜಯ್ಯ ಯಾರು?' ಅಂತ ಕೇಳಿದ. ನಾನು ಎದ್ದುನಿಂತೆ. 'ಹೆಚ್.ಎಂ. ಕರೀತಾರೆ ಬಾ ಅಂತ' ಕರೆದ. ಸಹಪಾಠಿಗಳು ಗುಸಗುಸ ಪಿಸ ಪಸ ಅಂತ ಉಲಿಯತೊಡಗಿದರು. 'ಲೋ ನಾಗಾ, ಪುಸ್ತಕಾನೂ ಒಂದೇಸಲ ತಗೊಂಡು ಹೋಗೊ, ತಿರುಗಿ ಬರ್ತೀಯೊ ಇಲ್ವೊ....' ಮುಸಿ ಮುಸಿ ನಗು.

ಶಾಲೆಯ ಮುಖ್ಯೋಪಾಧ್ಯಾಯರು ಶ್ರೀನಿವಾಸ ಐಯ್ಯಂಗಾರ್ಯರು. ಸ್ವಾತಂತ್ರ್ಯ ಹೋರಾಟಗಾರರು. ಖಾದಿ ಮತ್ತು ಶಿಸ್ತಿನ ಭಕ್ತರು. ಒಳ್ಳೆಯ ಗುರುಗಳು. ನನ್ನ ತಂದೆ ನಾನು ಅವರಿಗೆ ಚೆನ್ನಾಗಿ ಪರಿಚಯ. ನನ್ನ ಹಳ್ಳಿ ಹಂಪಸಂದ್ರದಲ್ಲಿ ಆರುವಾರ ಬೇಸಿಗೆ ಶಿಬಿರ ನಡಸಿದ್ದರು. ಶಾಲೆಯ ಮಹಡಿಯಲ್ಲಿ ಅವರ ಕೊಠಡಿ. ಅಲ್ಲಿಗೆ ಹೋಗಲು ವಿದ್ಯಾರ್ಥಿಗಳಿಗೆ ಎಂಟೆದೆಯೇ ಬೇಕಿತ್ತು. ಅವರ ಕೊಠಡಿ ಸಿಂಹದ ಗುಹೆ ಎಂದೇ ಅನೇಕ ಹುಡುಗರ ಭಾವನೆ. ನಾನು ಜವಾನನ ಹಿಂದೆ ಹೋದೆ. ನಮಸ್ಕಾರ ಮಾಡಿದೆ. 'ಏನಯ್ಯಾ ನಿಂದು ಗಲಾಟೆ, ಬರ್ತಾಬರ್ತಾ ರಾಯರ ಕುದುರೆ ಕತ್ತೆ ಆಯಿತು ಅಂತಾರೆ ಗೊತ್ತಾ, ನೀನೂ ತರ್ಲೆ ಆಗ್ತಾ ಇದೀಯಲ್ಲಾ....' ಅಂತ ನನ್ನ ಮೇಲೆ ಆರೋಪಾಭಿಷೇಕವಾಗತೊಡಗಿತು. ನಾನು ಇಲ್ಲ ಸಾರ್... ಅಂತ ಬಾಯಿ ಬಿಟ್ಟೆ. ಅವರು 'ಮುಚ್ಚೊ ಬಾಯಿ, ಇದು ಸ್ಕೂಲು' ನಿಮ್ಮ ಹಳ್ಳೀ ಚಾವಡಿ ಅಲ್ಲ. ನಾರಾಯಣ್ ಮೇಷ್ಟ್ರಿಗೆ ಹುಡುಗರ ಎದುರುವಾದ ಮಾಡಿ ಅವಮಾನ ಮಾಡಿದ್ದೀಯಾ? ಇದೇನಾ ನೀನು ಗುರುಗಳಿಗೆ ಮರ್ಯಾದಿ ಕೊಡೋದು..' ಎಂದು ಹೇಳಿದಾಗ ನಾನು ಕಕ್ಕಾಬಿಕ್ಕಿ ಆದೆ. ನಾನು ವಾದ ಮಾಡಿರಲಿಲ್ಲ, ಅವಮಾನ ಆಗಿದ್ದು ನನಗೆ. ಹೀಗಿದ್ದೂ ನಾನೇ ಅಪರಾಧಿ ಆಗಿದ್ದೆ. ಈ ತೀರ್ಪು ಸರಿಯಲ್ಲ ಅಂತ ಮನಸ್ಸು ಹೇಳಿತು. ಹೆಡ್ ಮಾಸ್ತರು ಅಪ್ಪಣೆ ಮಾಡಿದರು- 'ಮೊದಲು ಹೋಗಿ ನಾರಾಯಣ್ ಹತ್ತಿರ ಕ್ಷಮಾಪಣೆ ಕೇಳು, ಆ ಮೇಲೆ ಕ್ಲಾಸಿಗೆ ಹೋಗಿ ಹತ್ತು ನಿಮಿಷ ಬೆಂಚ್ ಮೇಲೆ ನಿಂತ್ಕೋ ಹೋಗು.'

ನಾನು ಹೊರಟೆ, ತರಗತಿಗೆ ಅಲ್ಲ, ನಾರಾಯಣ್ ಗುರುಗಳ ಬಳಿಗೂ ಅಲ್ಲ, ಸೀದಾ ನಮ್ಮೂರಿಗೆ. ಶಾಲೆ ಹತ್ತಿರ ಸೈಕಲ್ ಹತ್ತಿದ್ದೂ, ನಮ್ಮ ಹಳ್ಳಿಸೇರಿದ್ದೂ ಮನೆಗೆ ಬಂದಿದ್ದೂ ಒಂದು ಜ್ಞಾಪಕವಿರಲಿಲ್ಲ. ಯಾಂತ್ರಿಕವಾಗಿ ದೇಹ ಈ ಕೆಲಸ ಮಾಡಿತ್ತು. ಒಂದೆರಡು ದಿನ ಶಾಲೆಗೆ ಹೋಗಲಿಲ್ಲ. ಅಷ್ಟು ಹೊತ್ತಿಗೆ ಈ ಸುದ್ದಿ ಅಪ್ಪನಿಗೆ ಮುಟ್ಟಿತ್ತು. 'ಈ ಸುದ್ದಿ ನಿಜವೇನೊ' ಎಂದು ತಂದೆ ಕೇಳಿದರು. ನಾನು ಹೌದೆಂದೆ. ನನ್ನಪ್ಪ ೧೯೨೪ರಲ್ಲಿ ಆ ಕಾಲದ

ಮೈಸೂರಲ್ಲಿ ಓದಿದವರು. ನನ್ನ ತಾಯಿ ನಿರಕ್ಷರೆ. ಆದರೆ ಮಗನೂ ಚೆನ್ನಾಗಿ ಓದು ಬರೆಹ ಕಲಿಯಬೇಕೆಂಬ ಕನಸುಗಳಿದ್ದವರು. ತಾಯಿತಂದೆ ನನಗೆ ಬುದ್ಧಿವಾದ ಹೇಳಿದರು; 'ಆಚಾರ್ಯದೇವೋಭವ- ಗುರುಗಳು ದೇವರ ಸಮಾನ. ಅವರ ಸೇವೆ ಮಾಡಬೇಕು, ಅವರ ಹತ್ತಿರ ತಗ್ಗಿಬಗ್ಗಿ ನಡೆಯಬೇಕು. ಗುರುಹಿರಿಯರ ಮಾತು ಮೀರಬಾರದು' ಇತ್ಯಾದಿಯಾಗಿ ಉಪದೇಶ ಮಾಡಿದರು. ನಾನು ಶಾಲೆಯಲ್ಲಿ ಏನು ನಡೆಯಿತು ಎಂಬುದನ್ನು ಅಕ್ಷರಶಃ ವಿವರಿಸಿದೆ. ನಮ್ಮೂರಿನ ದೊಡ್ಡಗೌಡರ ಹಿರಿಯ ಮಗ (ಚಿಕ್ಕ)ವೆಂಕಟೇಗೌಡರು ಸುತ್ತಲಿನ ಹತ್ತಾರು ಗ್ರಾಮಗಳಿಗೇನೆ ಪ್ರಪ್ರಥಮ ಪದವೀಧರರು. ಅವರು ಗೌರೀಬಿದನೂರು ಆಚಾರ್ಯ ಪಾಠಶಾಲೆಯಲ್ಲಿ ಸ್ವಲ್ಪ ಕಾಲ ಅಧ್ಯಾಪಕರಾಗಿ ಇದ್ದವರು. ನನ್ನ ತಂದೆ ಆ ವೆಂಕಟೇಗೌಡರೊಂದಿಗೆ ಗೌರೀಬಿದನೂರಿಗೆ ಹೋದರು. ಹೆಡ್ ಮಾಸ್ಟರನ್ನು ಕಂಡು ಮಾತಾಡಿಕೊಂಡು ಬಂದರು. ಅವರವರಲ್ಲಿ ಅದೇನು ಮಾತುಕತೆ ಆಯಿತೋ ತಿಳಿಯದು. ಅಪ್ಪ ನನ್ನನ್ನು ಕರೆದು 'ನಾಳೆಯಿಂದ ನೀನು ಯಥಾ ಪ್ರಕಾರ ಮಾಮೂಲಿನ ಹಾಗೆ ಶಾಲೆಗೆ ಹೋಗು' ಎಂದು ಹೇಳಿದರು. ನಾನು ತಂದೆಯ ಮಾತಿನಂತೆ ಶಾಲೆಗೆ ಹೋದೆ. ಶಾಲೆಯ ಕಾಂಪೌಂಡೊಳಗೆ ನಾನು ಬರುವುದೆ ತಡ, ಎಲ್ಲಾ ತರಗತಿಯ ಎಲ್ಲಾ ವಿದ್ಯಾರ್ಥಿಗಳೂ ನನ್ನನ್ನೇ ನೋಡತೊಡಗಿದರು. ಮಾಸ್ತರರೂ, ಆಳುಕಾಳು ಸಿಬ್ಬಂದಿ ಎಲ್ಲರೂ ನನ್ನ ಕಡೆ ಕಣ್ಣರಳಿಸಿದ್ದರು. ಇಡೀ ಶಾಲಾ ಕಟ್ಟಡವೇ ಕಣ್ಣಾಗಿ ನೋಡುತ್ತಿತ್ತು. ನನಗೆ ಅದರ ಹಿನ್ನೆಲೆ ತಡವಾಗಿ ಗೊತ್ತಾಯಿತು. ಹೆಚ್.ಎಂ. ಅವರಿಗೂ ನಾರಾಯಣ್ ಮೇಷ್ಟ್ರಿಗೂ ಆಗದ ಕೆಲವರು ಗುರುಗಳೂ ಸಿಬ್ಬಂದಿಯೂ ಸೇರಿ ದೊಡ್ಡಪುಕಾರು ಹಬ್ಬಿಸಿದ್ದರು. ನಾನು ಹೆಚ್.ಎಂ.ಗೂ, ನಾರಾಯಣರಿಗೂ ದಬಾಯಿಸಿ ಬಾಯಿ ಮುಚ್ಚಿಸಿ ಹೆದರಿಸಿ ಹೋಗಿದ್ದೇನೆ ಎಂದು ಗಾಳಿಸುದ್ದಿಗೆ ಕೈಕಾಲು ಗರಿ ಮೂಡಿತ್ತು. ಅದನ್ನು ನಿಜವೆಂದು ಭ್ರಾಮಿಸಿದವರ ಕಣ್ಣಿಗೆ ನಾನು ಹೀರೋ ಥರಾ ಕಂಡಿದ್ದೆ.

ಮುಜುಗರದಿಂದ ಮುದುಡಿ ತರಗತಿಯಲ್ಲಿ ಕುಳಿತಿದ್ದೆ. ಮೂರು ದಿನಗಳ ಹಿಂದಿನಂತೆ ಮತ್ತೆ ಜವಾನ ಬಂದ. 'ನಾಗರಾಜಯ್ಯನನ್ನು ಕರೀತಿದ್ದಾರೆ' ಅಂದ. ಇದೇನೊ ತಿರುಗಿ ಪೀಕಲಾಟಕ್ಕೆ ಇಟ್ಟುಕೊಂಡಿತೆಂದು ಎದ್ದು ಹೊರಟೆ. ಒಂದೊಂದಾಗಿ ಮಹಡಿ ಮೆಟ್ಟಿಲು ಹತ್ತಿದೆ. ನಾಲ್ಕೈದು ಜನ ಗುರುಗಳೂ ಹೆಚ್.ಎಂ. ಜತೆ ಇದ್ದರು. ನಮಸ್ಕಾರ ಹೇಳಿದೆ. ಅವರು- 'ಏನಯ್ಯಾ, ನೀನು ನಿಮ್ಮ ಊರಿನ ಗೌಡ್ರು ಕುಲಕರ್ಣಿ ಶಿಫಾರಸು ಮಾಡಿಸಿದ್ದೀಯ ! ಅವತ್ತು ಏನು ನಡೀತು ಹೇಳು' ಅಂತ ಅಪ್ಪಣೆ ಕೊಡಿಸಿದರು. ಇನ್ನೊಮ್ಮೆ ನಡೆದದ್ದನ್ನು ತದ್ರೂಪು ನಿವೇದಿಸಿದೆ. ಹೆಚ್. ಎಂ.ಗೆ ನಾನು ಹೇಳಿದ್ದು ನಿಜವೆಂದು ಮನವರಿಕೆಯಾದಂತೆ ತೋರಿತು. ಅವರು 'ಇದನ್ನೆಲ್ಲಾ ಅವತ್ತೇ ಯಾಕೊ ಹೇಳಲಿಲ್ಲಾ ?' ಅಂತ ಕೋಪ ತೋರಿದರು. ಆ ಕೋಪದಲ್ಲಿ ಸಾತ್ವಿಕತೆಯಿತ್ತೇ ಹೊರತು ರಾಜಸತಾಮಸ ತಾಪ ಇರಲಿಲ್ಲ. ಅವರು ಹೇಳಿದರು 'ನೋಡಯ್ಯಾ ನಾಗರಾಜಾಯ್ಯ' ಆದರೆ ನನ್ ಮಾತು ಕೂಡ ನಡೀ ಬೇಕು, ಶಾಲೆ ನಿಯಮ ಮೀರಿದ್ದಕ್ಕೆ ಶಿಕ್ಷೆ ಅನ್ನೋದು ನಿನಗೆ ಆಗ್ಲೇಬೇಕು. ಈಗ ನೀನು ತರಗತಿಗೆ ಹೋಗಿ ಬೆಂಚ್ ಮೇಲೆ ನಿಲ್ಲೋದು ಏನೂ ಬೇಡ. ಇಲ್ಲೇ ಸ್ಟೂಲು ತರಿಸಿ ಹಾಕಿಸ್ತೀನಿ. ಅದರ ಮೇಲೆ ಐದು ನಿಮಿಷ ನಿಂತ್ಕೊ. ಆಮೇಲೆ ಎಲ್ಲಾ ಮಾಫಿ ಮಾಡ್ತೀನಿ' ನನಗೆ ಈ ಕನಿಕರವೂ ಕ್ರೂರವೆನಿಸಿತು.

ಸ್ಕೂಲ್ ಹತ್ತಿ ನಿಲ್ಲುವುದು ಕಷ್ಟವೇನಲ್ಲ, ಅದೂ ಅಯ್ದು ನಿಮಿಷ ನಿಲ್ಲುವುದು ಸುಲಭದ ದಾರಿ. ಆದರೆ ಅದು ಒಂದು ಶಿಕ್ಷೆ, ಒಂದು ದಂಡ ಅನ್ನುವುದು ನುಂಗಲಾರದ ತುತ್ತಾಗಿತ್ತು. ಎಷ್ಟು ಹೊತ್ತು ನಿಲ್ಲುವುದು ಎಂಬುದು ನನಗೆ ಗೌಣವಾಗಿತ್ತು, ಯಾತಕ್ಕಾಗಿ ನಿಲ್ಲುವುದು ಎಂಬುದು ಗಾಢವಾಗಿ ಕಾಡುವ ಕೊರೆಯುವ ಪ್ರಶ್ನೆಯಾಗಿತ್ತು; ಯೋಚಿಸಿದಂತೆ ತಲೆ ಬಿಸಿಯಾಯಿತು. ಹೆಚ್.ಎಂ. ರೂಮಿನೊಳಿದ್ದುದಂ ಬೆಮರ್ತನೀ ನಾಗರಾಜಂ! ತಪ್ಪಿಗೆ ಶಿಕ್ಷೆ ಸರಿ; ನಿಷ್ಕಾರಣವಾಗಿ ನಾನು ಈ ದೋಷಾರೋಪಣೆಗೆ ಗುರಿಯಾಗುತ್ತಿರುವುದು ಸರಿಯಲ್ಲವೆಂದು ಅಭಿಮಾನ ಜಾಗೃತವಾಯಿತು. ಸ್ವಾಭಿಮಾನ ಕಾರ್ಯ ಪ್ರವೃತ್ತವಾಯಿತು. ಹೆಚ್.ಎಂ. ಕಚೇರಿಯಿಂದ ಹೊರಗೆ ಬಂದೆ. ದಡದಡ ಮೆಟ್ಟಿಲಿಳಿದೆ. ಬಿಟ್ಟ ಬಾಣದಂತೆ ನೆಟ್ಟಗೆ ತರಗತಿಗೆ ಹೋದೆ. ನನ್ನ ಪುಸ್ತಕ ಎತ್ತಿಕೊಂಡೆ. ಇಬ್ಬರಾ ಋಣತೀರಿತೆಂದು ಶಾಲೆಗೆ ಕೈಮುಗಿದೆ. ಸೈಕಲ್ ಹತ್ತಿದೆ. ಬಂದ ದಾರಿಗೆ ಸುಂಕವಿಲ್ಲವೆಂಬಂತೆ ನಮ್ಮೂರು ಸೇರಿದೆ.

ಆಮೇಲಿನ ಘಟನಾವಳಿಯ ವಿವರ ದೊಡ್ಡದು, ಇಲ್ಲಿಗೆ ಈಗ ಇಷ್ಟು ಸಾಕು. ನನ್ನ ತಂದೆ ಎಷ್ಟೆಷ್ಟೋ ಹೇಳಿದರೂ ನಾನು ಕೇಳಲಿಲ್ಲ. ಹಠಮಾರಿಯಾಗಿದ್ದೆ. ನಾನು ಓದು ಮುಂದುವರಿಸಬೇಕಾದರೆ ಟಿ.ಸಿ. ತಂದು ಬೇರೆ ಶಾಲೆಗೆ ಸೇರಿಸಿ ಎಂದು ಪಟ್ಟು ಹಿಡಿದೆ. ಮಕ್ಕಳ ಮಮತೆಗೆ ಮಣಿಯದ ತಾಯಿತಂದೆಗಳುಂಟೆ ! ನನ್ನ ತಂದೆಗೂ ನಾನು ಹೇಳುವುದು ಸರಿ ಕಂಡಿತು. ಬೇಡವೆನಿಸಿದ ಜಾಗವನ್ನು ಬೇಗ ತೆರವು ಮಾಡುವುದು ಜಾಣತನ. ನನ್ನನ್ನು ಮಧುಗಿರಿ ಸರಕಾರಿ ಪ್ರೌಢಶಾಲೆಗೆ ಸೇರಿಸಿದರು. ಅಲ್ಲಿ ನಾನು ಆರಿಸಿಕೊಂಡಿದ್ದ ಒಂದು ಐಚ್ಛಿಕ ವಿಷಯಕ್ಕೆ ಟೀಚರ್ ಇರಲಿಲ್ಲ. ಖಾಸಗಿಯಾಗಿ ಅಭ್ಯಾಸ ಮಾಡಿದೆ. ಊರು ಕೇರಿ ಶಾಲೆ ಪಾಠ ಓಡಾಟ ಎಲ್ಲಾ ಬೇರೆಯಾದುವು. ಈ ಗಡಿಬಿಡಿಯಲ್ಲಿ ಎಷ್ಟೋ ದಿನಗಳು ನಷ್ಟ ಆದುವು. ಅಂತೂ ಪರೀಕ್ಷೆಯಲ್ಲಿ ಫೇಲಾಗಲಿಲ್ಲ ಎಂಬುದು ನನಗೂ ತಾಯಿ ತಂದೆ ಬಂಧು ಬಳಗಕ್ಕೂ ಖುಷಿ ಕೊಟ್ಟಿತು.

ಈ ಶಾಲಾಯಣ ಇಲ್ಲಿಗೆ ಮುಗಿಯಲಿಲ್ಲ. ಇದರ ಉತ್ತರಾರ್ಧವನ್ನು ಹೇಳದಿದ್ದರೆ ಏಕಪಕ್ಷೀಯ ನಿರ್ಣಯ ಕೊಟ್ಟಂತೆ ಆಗುತ್ತದೆ. ನಾನು ಮಂಡ್ಯ ಸರ್ಕಾರಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕನಾಗಿದ್ದಾಗ ಒಂದು ದಿನ ಗೌರಿಬಿದನೂರಿನಿಂದ ಮಾಧವರಾವ್ ಎಂಬ ಗುರುಗಳು ಬಂದರು. ಗೌರಿಬಿದನೂರಿನ ಆಚಾರ್ಯಪಾಠಶಾಲೆಯಲ್ಲಿ ಪ್ರತಿವರ್ಷ ಅಂತರ ಪ್ರೌಢ ಶಾಲಾ ಚರ್ಚಾಸ್ಪರ್ಧೆ ನಡೆಯುತ್ತದೆ. ಅದರ ಆ ವರ್ಷದ ಕಾರ್ಯಕ್ರಮಕ್ಕೆ ನನ್ನನ್ನು ಮುಖ್ಯ ಅತಿಥಿಯಾಗಿ ಖುದ್ದಾಗಿ ಕರೆಯಲು ಗುರುಗಳೇ ಬಂದಿದ್ದರು; ಅವರನ್ನು ಕಳಿಸಿದ್ದವರು ಹೆಚ್.ಎಂ. ಶ್ರೀನಿವಾಸ ಅಯ್ಯಂಗಾರ್‌ರವರು. ಇದು ಹಳೆಯ ಶಿಷ್ಯನ ವಿಚಾರದಲ್ಲಿ ಅವರು ತೋರಿದ ಅಕ್ಕರೆ; ನಾನು ಕರಗಿ ಹೋದೆ. ಈ ಶಾಲಾಯಣದ ಸರಮಾಲೆ ಅಲ್ಲಿಗೂ ನಿಲ್ಲಲಿಲ್ಲ. ಮುಂದೊಮ್ಮೆ ನಾನು ಮಂಡ್ಯ ದಾವಣಗೆರೆ ಶಿವಮೊಗ್ಗ ಕಾಲೇಜುಗಳಲ್ಲಿ ಲೆಕ್ಚರರ್ ಆಗಿದ್ದು ಅಲ್ಲಿಂದ ಬೆಂಗಳೂರು ಗೌರ್ನಮೆಂಟ್ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜಿಗೆ ವರ್ಗವಾಗಿ ಬಂದೆ. ಇಲ್ಲಿಗೆ ಒಂದು ದಿನ ಇದ್ದಕ್ಕಿದ್ದ ಹಾಗೆ ಏಕಾಏಕಿ ಹೆಚ್.ಎಂ. ಶ್ರೀನಿವಾಸ ಅಯ್ಯಂಗಾರರೇ ಪ್ರತ್ಯಕ್ಷರಾದರು. ನಾನು ಎದ್ದು ನಿಂತು ಎರಡೂ ಕೈ ಜೋಡಿಸಿ ನಮಸ್ಕರಿಸಿದೆ; ಅವರು 'ಕುಳಿತುಕೊ' ಎಂದು ಹೇಳಿದ ಮೇಲೇ ಕುಳಿತದ್ದು. ನಾನು ಓದಿದ ಆಚಾರ್ಯ ಪಾಠಶಾಲೆಗೆ

೨೫ ವರ್ಷ ತುಂಬಿತು. ಬೆಳ್ಳಿ ಹಬ್ಬದ ಸಪ್ತಾಹ ಕಾರ್ಯಕ್ರಮ. ದೊಡ್ಡ ಶ್ರೇಷ್ಠ ಸಮಾರಂಭದ ಮುಖ್ಯ ಅತಿಥಿ ಅನಕೃ. ಅದರ ಅಧ್ಯಕ್ಷತೆಗೆ ನನ್ನ ಒಪ್ಪಿಸಲು ಹೆಚ್.ಎಂ. ಬಂದಿದ್ದರು 'ನೀನು ಬಂದು ಅಧ್ಯಕ್ಷತೆ ವಹಿಸಿ ಇಡೀ ಕಾರ್ಯಕ್ರಮ ನಡಸಿಕೊಡಬೇಕಪ್ಪಾ' ಎಂದರು. ಆ ಮಾತು ಕೇಳಿ ನನ್ನ ಕಣ್ಣು ಪುಟ್ಟ ಸರೋವರವಾಯಿತು. ನನಗೆ ರೋಮಾಂಚನವಾಯಿತು. ನನಗೆ ಅಕ್ಷರದ ಬಾಗಿಲು ತೆರೆದ ಶಾಲೆಯ ಇತಿಹಾಸದಲ್ಲಿ ೨೫ ವರ್ಷದ ಒಂದು ಪ್ರಗತಿಯ ಘಟ್ಟಮುಟ್ಟಿದ ಶುಭದಿನ. ಅನಕೃ ಮುಖ್ಯಅತಿಥಿ, ಇಷ್ಟು ದೊಡ್ಡ ಸಮಾರಂಭಕ್ಕೆ ಚಿಕ್ಕಪ್ರಾಯದ ನಾನು ಅಧ್ಯಕ್ಷತೆ ವಹಿಸುವುದು ಧಾರ್ಷ್ಟ್ಯವೆನಿಸಿತು. ಆದ್ದರಿಂದ ಪ್ರಾಮಾಣಿಕ ಭಾವನೆಯಿಂದಲೇ 'ಕ್ಷಮಿಸಿ ಸಾರ್, ಈ ಸಮಾರಂಭಕ್ಕೆ ನಾನು ಬೇಡ, ಇನ್ನೂ.... 'ಎಂದು ನಿವೇದಿಸುತ್ತಿದ್ದೆ. ಕೂಡಲೇ ಶ್ರೀ ಅವರು ಗದ್ಗದಿತರಾಗಿ 'ಏನಯ್ಯಾ ನೀನು ಇನ್ನೂ ಹಳೇ ಜಿದ್ದು ಬಿಟ್ಟಿಲ್ಲ. ಅವತ್ತು stand up on the bench or stool ಅಂದರೂ ನನ್ ಮಾತು ಕೇಳಲಿಲ್ಲ, ಈವತ್ತು sit down on the chair ಅಂತ ಹೇಳಿದರೂ ನನ್ ಮಾತು ಕೇಳ್ತಾ ಇಲ್ಲ. ದಯವಿಟ್ಟು ಬಾಪ್ಪಾ' ಎಂದು ವಾತ್ಸಲ್ಯ ತೋರಿದರು. ವಾತ್ಸಲ್ಯ ತೋರಿದರು ಎಂಬುದಕ್ಕಿಂತ ವಾತ್ಸಲ್ಯವೇ ಮೂರ್ತಿವೆತ್ತಂತೆ ನಡೆದುಕೊಂಡರು. ನಾನು ಒಪ್ಪಿದ್ದೇನೆ ಎಂದು ಹೇಳುವುದೇ ತಡ, ಅವರು ಎರಡೂ ತೋಳನ್ನ ನನ್ನ ಸುತ್ತ ಹಾಕಿ ಬಾಚಿ ತಬ್ಬಿಕೊಂಡು ಬೆನ್ನು ಸವರಿದರು. ಅಧ್ಯಾಪಕರ ಕೊರಡಿಯು ಗುರುವಿನ ಘನತೆಯನ್ನು ನೋಡಿರಬಹುದು! ಗೌರೀಬಿದನೂರಿನ ಸಮಾರಂಭಕ್ಕೆ ಅನಕೃ ನಾನು ಒಟ್ಟಿಗೆ ಹೋದೆವು; ವೀರೋಚಿತ ಸ್ವಾಗತ, ಸಾಲಂಕೃತ ಭವ್ಯ ಸಭಾ ಮಂಟಪ. ಸಿಂಹಾಸನಕ್ಕೂ ಮಾದರಿಯಾಗಬಲ್ಲ ಪೀಠ ಕೂಡಿಸಿದರು. ನಾನು ಸಂಕೋಚಗೊಳ್ಳುವಷ್ಟು ನನ್ನನ್ನು ಬಾಯ್ತುಂಬ ಹರಸಿ ಶ್ರೀ ಸಭೆಗೆ ಪರಿಚಯಿಸಿದರು. ಹಳೆಯ ಗುರುಗಳೆಲ್ಲ, ಕೆಲವರಂತೂ ನಿವೃತ್ತರಾಗಿದ್ದರೂ, ಬಂದು ಮುಟ್ಟಿ ಮುಟ್ಟಿ ಲೇಸು ಕೋರಿದರು. ಅದೊಂದು ಅವಿಸ್ಮರಣೀಯ ಅನುಭವ. ಮರೆಯಲಾಗದ, ಮರೆಯಬಾರದ ಮಧುರ ಸ್ಮೃತಿ. ಗುರುವಿನ ಅವ್ಯಾಜ ಅಕುಟಿಲ ಆರ್ದ್ರ ಅಂತಃಕರಣವನ್ನು ಪಾರದರ್ಶಕವಾಗಿ ಕಂಡು ಕೈಮುಗಿದ ದಿನ; ಆಚಾರ್ಯ ದೇವೋಭವ-ಎಂಬ ಆರ್ಯೋಕ್ತಿಯ ಅರ್ಥಕ್ಕೆ ಕೀಲಿಕೈ ಸಿಕ್ಕ ಸುದಿನ.



ಕನ್ನಡ ನಾಡು-ನುಡಿ ನೆಲ-ಜನಗಳ ಸಂಬಂಧವಾಗಿ (ಅತಿ) ಭಾವುಕವೆಂದು ತೋರಬಹುದಾದ ಒಲವನ್ನು ಮೈ ಮನಗಳ ಸುಳಿಯಲ್ಲಿ ನೆಟ್ಟವರು ಕುವೆಂಪು. ಅವರು ಕನ್ನಡ ನಾಡಿನ ಸಾಹಿತ್ಯ ಹಾಗೂ ಸಾಂಸ್ಕೃತಿಕ ವಲಯದಲ್ಲಿ ಒಬ್ಬ ಕಿಂದರ ಜೋಗಿ. ಆ ಅಯಸ್ಕಾಂತಕ್ಕೆ ಸಿಕ್ಕಿದ ಲಕ್ಷಾಂತರ ಚೇತನಗಳಲ್ಲಿ ಕಮ. ಲಾಹಂಪನಾ ಜೋಡಿಯೂ ಸೇರಿಕೊಂಡಿದೆ. ಮೈಸೂರು ಮಹಾರಾಜಾಕಾಲೇಜಿನಲ್ಲಿ ಅವರು ನಮ್ಮಿಬ್ಬರಿಗೂ ಪ್ರಾಧ್ಯಾಪಕರು, ಪ್ರಿನ್ಸಿಪಾಲರು, ಉಪಕುಲಪತಿ. ಅವರ ಗಾಢವಾದ ಪ್ರಭಾವ, ಪರಿಚಯ, ವಿಚಾರ ವಿನಿಮಯ ಇವು ಮೂರು ದಶಕಗಳ ಕಾಲ ನಮ್ಮನ್ನು ಆಳಿತು. ಉದ್ಯೋಗ ನಿಮಿತ್ತವಾಗಿ ಬೇರೆ ಸ್ಥಳಗಳಲ್ಲಿ ಇದ್ದರೂ ಮೈಸೂರಿಗೆ ಹೋದಾಗ ಉದಯರವಿಯ ಸ್ಪರ್ಶಪುಳಕಾನುಭವ ಪಡೆಯದೆ ಹಿಂತಿರುಗುತ್ತಿರಲಿಲ್ಲ.

ನಾನು ಕಸಾಪ ಅಧ್ಯಕ್ಷನಾದ ಅವಧಿಯಲ್ಲಂತೂ ಕೆಲವು ವಿಚಾರಗಳಲ್ಲಿ ಕುವೆಂಪು ನನಗೆ ದಾರಿ ತೋರಿದ ಗುರುವಾದರು. ಅಂತರರಾಷ್ಟ್ರೀಯ ಮಕ್ಕಳ ವರ್ಷದಲ್ಲಿ (೧,೭೫,೦೦೦)ಲಕ್ಷ ಎಪ್ಪತ್ತೈದು ಸಾವಿರ ಮಕ್ಕಳನ್ನು ಸೇರಿಸಿ ತಾಲ್ಲೂಕು, ಜಿಲ್ಲೆ ಹಾಗೂ ರಾಜ್ಯ ಮಟ್ಟದಲ್ಲಿ ಮಕ್ಕಳ ಮೇಳವನ್ನು ಯಶಸ್ವಿಯಾಗಿ ನಡಸಿದ್ದೆ. ಹಾಗೆಯೇ ಮಕ್ಕಳ ಮಾಲೆ, ಕಿರಿಯರ ಪುಸ್ತಕ ಎಂದು ಇನ್ನೂರಕ್ಕೂ ಹೆಚ್ಚು ಪುಸ್ತಕಗಳನ್ನು, ಹತ್ತು ಲಕ್ಷ ಪ್ರತಿಗಳನ್ನು ಪ್ರಕಟಿಸಿದ್ದೆ. ಅದರ ಒಂದು ಕಂತನ್ನು, ನೂರು ಶೀರ್ಷಿಕೆಗಳನ್ನು ಕುವೆಂಪು ಮೈಸೂರಲ್ಲಿ ಬಿಡುಗಡೆ ಮಾಡಿದರು. ಗೋಕಾಕ್ ವರದಿಯ ಅನುಷ್ಠಾನ ಸಂಬಂಧವಾಗಿ ಮೈಸೂರಲ್ಲಿ ಒಂದು ದಿವಸ ಧರಣಿ ಕುಳಿತಾಗ ಕುವೆಂಪುವೇ ನೇತೃತ್ವ ವಹಿಸಿದ್ದರು.

ಇಷ್ಟು ಹಿತೈಷಿಗಳಾಗಿ ಇಡೀ ನಾಡಿಗೆ ಆದರ್ಶಪ್ರಾಯರಾಗಿದ್ದ ಕುವೆಂಪುರವರಿಗೆ ಜೀವನ ಸಂಧ್ಯಾಕಾಲದಲ್ಲಿ ಅನಾರೋಗ್ಯಕಾಡಿತು. ಕಡೆಕಡೆಗೆ ಮಾತೂ ನಿಂತು ಹೋಯಿತು. ಅದೇ ದಿನಗಳಲ್ಲಿ ದೇಜಗೌ ಮಂದಾಳುತನದಲ್ಲಿ ಡಿ.ಬಿ. ಚಂದ್ರೇಗೌಡ, ನಾನು, ಡಾ. ಕಮಲಾ ಹಂಪನಾ ಮೊದಲಾದ ಕೆಲವರು ಸೇರಿ ರಾಷ್ಟ್ರಕವಿ ಪ್ರತಿಷ್ಠಾನಕ್ಕೆ ಆಗಿನ ಮುಖ್ಯಮಂತ್ರಿ ಬಂಗಾರಪ್ಪನವರ ಮನ ಒಲಿಸಿದೆವು. ಅವರ ಹೃದಯ ವೈಶಾಲ್ಯ ದೊಡ್ಡದು. ೧೯೫೫-೫೬ರಲ್ಲಿ ಮಹಾರಾಜಾ ಕಾಲೇಜಿನಲ್ಲಿ ಓದುತ್ತಿದ್ದ ದಿನಗಳಿಂದ ಬಂಗಾರಪ್ಪನವರ ಗೆಳೆತನವಿದ್ದುದರಿಂದ ಅವರಲ್ಲಿ ನನಗೆ ಸಲುಗೆಯಿತ್ತು. ಆದರೂ ಸ್ವಂತಕ್ಕೆ ಆ ಸ್ನೇಹವನ್ನು ಬಳಸಿರಲಿಲ್ಲ. ಅವರು ಕುವೆಂಪು ಪ್ರತಿಷ್ಠಾನವನ್ನು ನೊಂದಾಯಿಸಬೇಕಾದ ಪೂರ್ತಿ ಹೊಣೆಯನ್ನು ದೇಜಗೌ ಮತ್ತು ನನಗೆ ವಹಿಸಿದರು. (ಅದರ ಹಲವು ವಿವರಗಳು ಇಲ್ಲಿಗೆ ಬೇಡವೆಂದು ಕೈ ಬಿಡುತ್ತೇನೆ).

ನಿಯಮಾವಳಿಯನ್ನು ರೂಪಿಸುವುದರಿಂದ ತೊಡಗಿ ಪ್ರತಿಷ್ಠಾನವನ್ನು ರಿಜಿಸ್ಟರ್ ಮಾಡಿಸುವ ವರೆಗೆ ದೇಜಗೌ ಮತ್ತು ನಾನು ಹೆಚ್ಚು ಓಡಾಟ ಮಾಡಬೇಕಾಯಿತು, ಹೊಣೆ ಹೊರಬೇಕಾಯಿತು. ಇಬ್ಬರಿಗೂ ಇದರಲ್ಲಿನ ಶ್ರಮವೂ ಒಂದು ಹರ್ಷವಾಗಿತ್ತು. ರಿಜಿಸ್ಟ್ರೇಷನ್ ಮಾಡಿಸುವಾಗ ಪ್ರತಿಷ್ಠಾನದ ಕಚೇರಿಗೆ ತಕ್ಷಣ ಒಂದು ಜಾಗ ಮತ್ತು ವಿಳಾಸ ಬೇಕಾಯಿತು. ದೇಜಗೌ ಅವರು 'ಕಮಲಾ ಹಂಪನಾ ಮನೆಯೇ ಸಧ್ಯದ ಕಾರ್ಯಾಲಯ ಎಂದು ಬರೆಸೋಣ. ಇದಕ್ಕೆ ನಿಮ್ಮ ಸಮ್ಮತಿ ಇದೆಯೇ?' ಎಂದು ಸ್ಮಿತವದನರಾಗಿ ಕೇಳಿದರು. ಕಮಲಾ-ಹಂಪನಾಗೆ ಕುವೆಂಪು ಹೇಗೆ ಗುರುವೋ ದೇಜಗೌ ಕೂಡ ನೇರ ಗುರು; ಸಂತೋಷದಿಂದ ಒಪ್ಪಿಗೆಕೊಟ್ಟೆವು. ಅಲ್ಲಿಂದ ಪ್ರತಿಷ್ಠಾನದ ನೊಂದಾವಣೆ ಕಾರ್ಯ. ಅದಕ್ಕೆ ಟ್ರಸ್ಟಿಗಳೆಲ್ಲರನ್ನೂ, ಸಬ್-ರಿಜಿಸ್ಟ್ರಾರನ್ನೂ ಅವರ ಸಿಬ್ಬಂದಿಯನ್ನೂ ನಮ್ಮ ಮನೆಗೇ ಕರೆಸಲಾಯಿತು. ಕಮಲಾ-ಹಂಪನಾ ಔತಣ-ಆತಿಥ್ಯದೊಂದಿಗೆ ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ ರಿಜಿಸ್ಟರ್ ಆಯಿತು. ನಮ್ಮ ಮನೆಯೇ ಅದರ ವಿಳಾಸವಾಯಿತು. ಸುಮಾರು ಎರಡೂವರೆ ವರ್ಷ ಈ ವಿಳಾಸದ ಹೆಸರಲ್ಲಿಯೇ ಪ್ರತಿಷ್ಠಾನದ ಚಟುವಟಿಕೆಗಳು ನಡೆದುವು ಎಂಬುದು ನಮ್ಮ ಬಾಳಿಗೆ ಬಂದ ಒಂದು ಒಳ್ಳೆಯ ಅವಕಾಶ.

ಇದಾದ ಮೇಲೆ ಇನ್ನೊಂದು ವಿಶೇಷವೂ ನಡೆಯಿತು. ಕನ್ನಡ ಸಂಸ್ಕೃತಿ ಇಲಾಖೆಗೆ

ಐಎಎಸ್, ಐಪಿಎಸ್, ಕೆಎಎಸ್ ಅಧಿಕಾರಿಗಳು ನಿರ್ದೇಶಕರಾಗುತ್ತಿದ್ದರು. ನನ್ನನ್ನು ನಿರ್ದೇಶಕನನ್ನಾಗಿ ಮಾಡುವ ಇರಾದೆ ಸರ್ಕಾರಕ್ಕೆ ಉಂಟಾಯಿತು. ಮಾತುಕತೆ ನಡೆಯಿತು. ಸಚಿವ ಸಂಪುಟದಲ್ಲಿ ಈ ವಿಷಯ ಇಟ್ಟು, ಇದುವರೆಗೆ ಇದ್ದ ಹಳೆಯ ನಿಯಮಾವಳಿಯನ್ನು ಬದಲಿಸಿದರು. ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರನ್ನು ಕೂಡ ನಿರ್ದೇಶಕರನ್ನಾಗಿ ಎರವಲು ಸೇವೆ ಪಡೆಯಬಹುದೆಂಬ ಹೊಸ ತಿದ್ದುಪಡಿ ತಂದರು. ನನ್ನನ್ನು ಎರವಲು ಸೇವೆಯಿಂದ ಕನ್ನಡ ಸಂಸ್ಕೃತಿ ನಿರ್ದೇಶಕರನ್ನಾಗಿ ನೇಮಿಸಿದರು. ಈ ಇಡೀ ಇಲಾಖೆಯನ್ನು ೨೦ ಜಿಲ್ಲೆಗಳಲ್ಲೂ ಹೊಸ ರೂಪಕೊಟ್ಟು ವಿಸ್ತರಿಸುವುದು, ಪ್ರತಿ ಜಿಲ್ಲೆಯ ಉಪ ನಿರ್ದೇಶಕರಿಗೆ ಹೆಚ್ಚು ಅನುಕೂಲ-ಅಧಿಕಾರ ಕಲ್ಪಿಸುವುದು-ಇದು ನಮ್ಮ ಪೂರ್ವಭಾವಿ ಮಾತುಕತೆಯಾಗಿತ್ತು. ನಾನು ಅಧಿಕಾರ ವಹಿಸುಕೊಳ್ಳುವ ಎರಡುವಾರ ಹಿಂದಿನಿಂದಲೂ ಈ ಯೋಜನೆ ಗುಪ್ತವಾಗಿತ್ತು. ಮತ್ತು ಅದಕ್ಕೆ ಸರಿಹೊಂದುವಂತೆ 'ಕರ್ನಾಟಕ ರತ್ನ' ಎಂಬ ಪ್ರಶಸ್ತಿಯನ್ನು ಕುವೆಂಪು ಅವರಿಗೂ, ರಾಜಕುಮಾರರಿಗೂ ಕೊಡುವ ಏರ್ಪಾಟೂ ನಡೆಯಿತು ಬೆಳಗ್ಗೆ ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕನಾಗಿ ಡಾ ಪಿ.ಎಸ್. ರಾಮಾನುಜಂ ಅವರಿಂದ ಅಧಿಕಾರ ವಹಿಸಿಕೊಂಡೆ; ಮಧ್ಯಾಹ್ನ ಮೈಸೂರಿನಲ್ಲಿ, ಉದಯ ರವಿ ಮನೆಯಲ್ಲಿ ಕುವೆಂಪು ಅವರಿಗೆ ಕರ್ನಾಟಕ ರತ್ನ ಪ್ರಶಸ್ತಿ ಕೊಡುವ ಸಮಾರಂಭದಲ್ಲಿ ಸೇರಿ ಹೋಗಿದ್ದೆ.

ಅದರ ಮರುದಿನ ಬೆಂಗಳೂರಲ್ಲಿ ವಿಧಾನಸೌಧದ ಮುಂದೆ ವರನಟ ರಾಜಕುಮಾರರಿಗೆ ಕರ್ನಾಟಕ ರತ್ನ ಪ್ರಶಸ್ತಿ ವಿತರಣಾ ಸಮಾರಂಭದಲ್ಲಿ ನಿರ್ದೇಶಕನಾಗಿ ರಾಜ್ಯಪಾಲರನ್ನೂ ರಾಜಕುಮಾರರನ್ನೂ ಮುಖ್ಯಮಂತ್ರಿ ಆದಿಯಾಗಿ ಸಚಿವಸಂಪುಟ ಹಾಗೂ ನೆರೆದಿದ್ದ ಲಕ್ಷಾಂತರ ಕನ್ನಡಿಗರನ್ನೂ ಸ್ವಾಗತಿಸುವ ಕರ್ತವ್ಯ-ಸಂತೋಷ ನನ್ನದಾಗಿತ್ತು. ಅದಾದ ನಾಲ್ಕು ದಿನಗಳಲ್ಲಿ ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನಕ್ಕೆ ಸರ್ಕಾರದ ವತಿಯಿಂದ ಇಪ್ಪತ್ತೈದು ಲಕ್ಷ ರೂಪಾಯಿಯ ಚೆಕ್ಕನ್ನು ದೇಜಗೌ ಅವರಿಗೆ ಕೊಡುವ ಪುಣ್ಯವೂ ನನ್ನ ಪಾಲಿಗೆ ಲಭಿಸಿತ್ತು. ನಾನು ಕನ್ನಡ ಸಂಸ್ಕೃತಿ ಇಲಾಖೆಯ ನಿರ್ದೇಶಕನಾಗಿದ್ದುದು ಎರಡೇವಾರ. ಅಲ್ಲಿನ ಇಡೀ ಸಿಬ್ಬಂದಿವರ್ಗ ನನ್ನ ವೇಗಕ್ಕೆ ಮನೋಧರ್ಮಕ್ಕೆ ಸ್ಪಂದಿಸಿ ಪೂರ್ಣ ಸಹಕಾರ ನೀಡಿತು. ನಾನು ಆ ಇಲಾಖೆಗೆ ಹೊಸ ಆಯಾಮ ಕೊಡುತ್ತೇನೆಂಬ ಭರವಸೆಯಿಂದ ಅವರು ಹುರುಪುಗೊಂಡಿದ್ದರು. ಅಷ್ಟರಲ್ಲಿ ಆ ಹೊಸ ಅಂಕಕ್ಕೆ ಧಿಡೀರ್ ಪರದೆ ಬೀಳುವ ಘಟನೆ ನಡೆಯಿತು.

ಬಂಗಾರಪ್ಪನವರು ಮುಖ್ಯಮಂತ್ರಿ ಸ್ಥಾನದಿಂದ ಕೆಳಗಿಳಿದು ವೀರಪ್ಪ ಮೊಯಿಲಿ ಆ ಜಾಗದಲ್ಲಿ ಕುಳಿತರು. ಅದರ ಮರುದಿನ ಪತ್ರಿಕಾ ಗೋಷ್ಠಿಯಲ್ಲಿ ಅವರನ್ನು ಒಬ್ಬ ಪತ್ರಕರ್ತರು 'ವಿವಿಧ ಪ್ರಾಧಿಕಾರಗಳಿಗೆ ಮರುನೇಮಕ ಮಾಡುತ್ತೀರಿ. ಕನ್ನಡ ಸಂಸ್ಕೃತಿ ಇಲಾಖೆಗೆ ಏನು ಮಾಡುತ್ತೀರಿ?' ಎಂದು ಪ್ರಶ್ನಿಸಿದ್ದರು. ಮೊಯಿಲಿಯವರು-'ಅದನ್ನೂ ಪರಿಶೀಲಿಸಿ ನೋಡುತ್ತೇವೆ' ಎಂದು ಉತ್ತರಿಸಿದರು. ನಾನು ಆ ಪತ್ರಿಕಾಗೋಷ್ಠಿಯಲ್ಲಿ ಹಾಜರಿರಲಿಲ್ಲ. ಆದರೆ ಪತ್ರಕರ್ತರು ದೂರವಾಣಿಯ ಮೂಲಕ ನಡೆದದ್ದನ್ನು ತಕ್ಷಣವೇ ವಿವರಿಸಿದರು. ನನಗೆ ಆ ಜಾಗದಲ್ಲಿ ಒಂದು ನಿಮಿಷ ಮುಂದುವರಿಯಲೂ ಇಷ್ಟವಾಗಲಿಲ್ಲ. ಕೂಡಲೆ ಆ ಜಾಗಕ್ಕೆ ರಾಜಿನಾಮೆ ಪತ್ರವನ್ನು ಸರ್ಕಾರಕ್ಕೆ ಪತ್ರಿಕೆಗಳಿಗೆ ಕಳಿಸಿ, ನನ್ನನ್ನು ನನ್ನ ಮೂಲ ಸೇವೆಯಾದ ಬೆಂಗಳೂರು ವಿಶ್ವವಿದ್ಯಾನಿಲಯ ನಿರ್ದೇಶಕ ಜಾಗಕ್ಕೆ ವಾಪಸ್ಸು ಕಳಿಸಲು ಆಜ್ಞೆ ಹೊರಡಿಸಬೇಕೆಂದು ಪ್ರಾರ್ಥಿಸಿ

ಪತ್ರ ಬರೆದೆ. DPAR ನ ಕಾರ್ಯದರ್ಶಿಗಳಾದ, ನನ್ನ ಹಳೆಯ ಗೆಳೆಯರಾದ, ಪಾರ್ಥಸಾರಥಿಯವರ ಬಳಿ ಹೋಗಿ ಒಂದೇ ದಿನದಲ್ಲಿ ರೀ-ಪ್ಯಾಟ್ರಿಯೇಟ್ ಮಾಡಿಸಿಕೊಂಡೆ. ಏಕ್ ದಿನ್ ಕಾ ಸುಲ್ತಾನ್ ಎಂಬಂತೆ, ಕನ್ನಡ-ಸಂಸ್ಕೃತಿ ಇಲಾಖೆಯ ನಿರ್ದೇಶಕನಾಗಿದ್ದುದು ಕೇವಲ ಎರಡೇ ವಾರ. ಅಷ್ಟರಲ್ಲಿ ಆ ನಿರ್ದೇಶನಾಲಯದ ಸಿಬ್ಬಂದಿಯವರು ತೋರಿದ ಆತ್ಮೀಯತೆ, ಗೌರವ, ನಿರೀಕ್ಷೆ ತುಂಬಿದ ವಿಶ್ವಾಸ ಇವು ಈಗಲೂ ನೆನಪಿನಲ್ಲಿವೆ. ಕನ್ನಡ-ಸಂಸ್ಕೃತಿ ನಿರ್ದೇಶನಾಲಯದ ವತಿಯಿಂದ ಈ ನಾಡಿನ ಸಾಂಸ್ಕೃತಿಕ ವಲಯದಲ್ಲಿ ಎಂಥ ಅದ್ಭುತ ಕೆಲಸ ಮಾಡಬಹುದೆಂಬ ಸಾಧ್ಯತೆಗಳ ಅರಿವು ಸರಕಾರಕ್ಕಾಗಲಿ, ಇಲ್ಲಿಗೆ ಬರುವ ವರಿಷ್ಠ ಅಧಿಕಾರಿಗಳಿಗಾಗಲಿ ಇರದಿದ್ದರೆ ಅದಕ್ಕೆ ಈ ಸಿಬ್ಬಂದಿ ಕಾರಣವಲ್ಲ-ಕ.ಸಾ.ಪ.ನ ಸಿಬ್ಬಂದಿಯಲ್ಲಿ ಕಂಡ ದಕ್ಷತೆ, ಪ್ರಾಮಾಣಿಕ ಕಳಕಳಿಯನ್ನು ಇಲ್ಲಿಯೂ ಗುರುತಿಸಿದ್ದಷ್ಟೇ ನನಗಾದ ಸಮಾಧಾನ. ದುಡಿಯಬಲ್ಲ ಜನ ಎಲ್ಲೆಡೆ ಇರುತ್ತಾರೆ, ದುಡಿಸಿಕೊಳ್ಳಬಲ್ಲ ಯಜಮಾನಧಣಿ ಎಲ್ಲಾ ಕಡೆ ಇರುವುದಿಲ್ಲ; ಅನೇಕ ಇಲಾಖೆಗಳ ಕುಸಿತಕ್ಕೆ ಇದೇ ಕಾರಣ.

☆ ☆ ☆

ಕಸಾಪ ಕಾರ್ಯಕ್ರಮಗಳನ್ನು ನಗರೀಕರಣದಿಂದ ವಿಕೇಂದ್ರೀಕರಣಗೊಳಿಸಿದ್ದು ನನಗೆ ನೆಮ್ಮದಿ ತಂದಿತ್ತು. ಯುವ ಸಾಹಿತಿಗಳಂತೂ ಇದನ್ನು ತಾರೀಫು ಮಾಡಿದರು. ಗ್ರಾಮಾಂತರ ಪ್ರದೇಶಗಳಿಗೆ ಕೊಂಡೊಯ್ದ ಸಾಹಿತ್ಯ ಚಟುವಟಿಕೆಗಳಲ್ಲಿ ಕವಿ ಕಾವ್ಯದರ್ಶನವೆಂಬ ವಿಚಾರ ಸಂಕಿರಣಗಳ ಮಾಲೆಯೂ ಒಂದು. ಮಹತ್ವದ ಕವಿಗಳು ಹುಟ್ಟಿ-ಬೆಳೆದ-ಬಾಳಿದ ಪರಿಸರದಲ್ಲಿ ಮೂರು ದಿನಗಳ ಸಂಕಿರಣಗಳು ಸಾಹಿತ್ಯಾಸಕ್ತರ ಮೆಚ್ಚುಗೆ ಗಳಿಸಿದುವು. ಪಂಪ ರನ್ನ ಹರಿಹರ ರಾಘವಾಂಕ ನಯಸೇನ ಕುಮಾರವ್ಯಾಸ ರತ್ನಾಕರವರ್ಣಿ ಅಲ್ಲಮ ಪ್ರಭು-ಮೊದಲಾದವರ ಕಾರ್ಯಕ್ರಮಗಳು ಅಣ್ಣಿಗೆರೆ ಮುಧೋಳ ಹೊಸಪೇಟೆ ಬೇಲೂರು ಮುಳುಗುಂದ ಕೋಳಿವಾಡ ಮೂಡಬಿದ್ರೆ ಸ್ಥಳಗಳಲ್ಲಿ ಪರಿಣಾಮಕಾರಿಯಾಗಿ ನಡೆದುವು. ವಿದ್ವಾಂಸರೂ ಸ್ಥಳೀಯರೂ ಪತ್ರಿಕೆಗಳವರೂ ಬಹುವಾಗಿ ಸಹಕರಿಸಿದರು.

ಪರಿಚಯ ಮಾಲೆಯಲ್ಲಿ ಉಂಟಾದ ಒಂದು ವಿಶಿಷ್ಟ ಅನುಭವವನ್ನಿಲ್ಲಿ ತೋಡಿಕೊಳ್ಳಬೇಕು. ರನ್ನ ಕವಿಯ ವಿಚಾರ ಸಂಕಿರಣವನ್ನು ಮುಧೋಳದಲ್ಲಿ ಹಮ್ಮಿಕೊಂಡಿದ್ದೆ. ಅಲ್ಲಿನ ಮಾಜಿ ಶಾಸಕರಾದ ನಾಡಗೌಡರು ಜ್ಞಾನವೃದ್ಧ ಶೀಲಸಂಪನ್ನರು. ಮಿಗಿಲಾಗಿ ರನ್ನನ ಪರಮಭಕ್ತರು; ದಿವಗಂತ ಕಾ.ಸ.ಧರಣೇಂದ್ರಯ್ಯನವರು ಈ ನಾಡಗೌಡರಿಗೆ ರನ್ನನ ದೀಕ್ಷೆ ಕೊಟ್ಟಿದ್ದರು. ರನ್ನನ ಎರಡೂ ಕಾವ್ಯಗಳ ನೂರಾರು ಪದ್ಯಗಳು ನಾಡಗೌಡರ ನಾಲಗೆಯಲ್ಲಿ ನರ್ತಿಸುತ್ತವೆ. ವಿಚಾರ ಸಂಕಿರಣ ಮೂರು ದಿನಕ್ಕೆ ಮುಗಿಯಿತು. ಕಡೆಯ ಸಮಾರೋಪ ಸಮಾರಂಭದಲ್ಲಿ ಅವರಿಂದ ವಂದನಾರ್ಪಣೆಯಿತ್ತು. ಅವರು ಅಂದು ಆಡಿದ ಮಾತುಗಳಿಂದ ಸಂಕಿರಣಕ್ಕೆ ಬಂದಿದ್ದ ಬಲ್ಲಿದರೆಲ್ಲ ಪಾಠಕಲಿತರು. ಕವಿರಾಜಮಾರ್ಗದಲ್ಲಿ ಬರುವ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳೆಂಬ ಮಾತಿನ ಅರ್ಥ ವ್ಯಾಪ್ತಿ ಸಾಕ್ಷಾತ್ಕಾರವಾಯಿತು. ನಾಡಗೌಡರ ನುಡಿಗಳು ಇಂದಿಗೂ ಈಗಲೂ ನನ್ನ ಕಿವಿಯಲ್ಲಿ ಅನುರಣಿತವಾಗುತ್ತಿವೆ. 'ನಮ್ಮೂರಿನ ವಿಚಾರ ಸಂಕಿರಣಕ್ಕೆ ನಾನಾ ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕರು ಬಂದು

ಅಮೋಘ ಉಪನ್ಯಾಸ ಮಾಡಿ ರನ್ನ ಕವಿಯನ್ನು ಪರಿಚಯಿಸಿದ್ದಾರೆ. ಅವರ ಮಾತುಗಳನ್ನು ಕೇಳಿ ನಮ್ಮೂರಿನ ಸಾಹಿತ್ಯಾಸಕ್ತರಿಗೆ ಸಂತೋಷವಾಗಿದೆ. ಈ ವಿದ್ವಾಂಸರಲ್ಲಿ ಕೆಲವರು ಇಲ್ಲಿಗೆ ಬರುವುದಕ್ಕೆ ಮೊದಲು ಇನ್ನೊಮ್ಮೆ ರನ್ನ ಕವಿಯ ಕಾವ್ಯಗಳನ್ನು ಓದಿಕೊಂಡು, ಹಳೆಗನ್ನಡ ಪದ್ಯಗಳನ್ನು ಇನ್ನಷ್ಟು ಸರಿಯಾಗಿ ಪದವಿಭಾಗ ಮಾಡಿ ಸ್ಫುಟವಾಗಿ ಉಚ್ಚರಿಸಿ ವಿಮರ್ಶೆ ಮಾಡಿದ್ದರೆ ನಮಗೆ ಇನ್ನೂ ಹೆಚ್ಚಿನ ಆನಂದ, ಕಾವ್ಯಾಸ್ವಾದ ಆಗುತ್ತಿತ್ತು. ಇನ್ನು ಮುಂದೆ ಅವರು ಹಾಗೆ ಮಾಡುತ್ತಾರೆಂಬ ನಂಬಿಕೆ ನಮಗಿದೆ. ಅವರಿಗೆಲ್ಲಾ ನಾನೂ ಮ್ಮೂರಿನ ಕಾವ್ಯ ಪ್ರೇಮಿಗಳೂ ಕೈಮುಗಿಯುತ್ತೇವೆ.' ನಾಡಗೌಡರು ಈ ಕನ್ನಡ ನಾಡಿನ ಉದ್ದಗಲಗಳಲ್ಲಿ ಅಜ್ಞಾತರಾಗಿ ಇರುವ ಕಾವ್ಯ ರಸಿಕ-ಸಹೃದಯರ ಒಬ್ಬ ಪ್ರತಿನಿಧಿ ಮಾತ್ರ, ಅಂತಹ ಜನರು ಇರುವವರೆಗೆ ಸಾಹಿತ್ಯ ಜೀವಂತವಾಗಿರುತ್ತದೆ ಎಂಬುದು ನನ್ನ ಗ್ರಹಿಕೆ.

ಇದೇ ಉಪನ್ಯಾಸ ಮಾಲೆಯಲ್ಲಿ ಇನ್ನೊಮ್ಮೆ ಶೇಡಬಾಳ ಮತ್ತು ಅಥಣಿಯಲ್ಲಿ ಮಿರ್ಜಿ ಅಣ್ಣಾರಾಯರ ಬದುಕುಬರೆಹ ಕುರಿತು ವಿಚಾರ ಸಂಕಿರಣ ನಡೆಯಿತು. ಆ ಸಂದರ್ಭದಲ್ಲಿ ನನ್ನ ಸಾಹಿತ್ಯೇತರ ಕಾಳಜಿಯೊಂದರ ಫಲವಾಗಿ ನಡೆದ ನಡುರಾತ್ರಿಯ ಸ್ವಾರಸ್ಯವೊಂದನ್ನು ದಾಖಲಿಸುತ್ತೇನೆ. ಸಂಕಿರಣ ಏರ್ಪಾಟಾದ ದಿನ ಕಪಿಲ್‌ದೇವ್ ನೇತೃತ್ವದಲ್ಲಿ ಮೊಹಿಂದರ್ ಅಮರನಾಥ್, ಎಸ್.ಎಂ.ಎಚ್. ಕಿರ್ಮಾನಿ, ರೋಜರ್ ಬಿನ್ನಿ, ಮದನ್‌ಲಾಲ್ ಮೊಲಾದವರು ಇದ್ದ ಭಾರತ ಕ್ರಿಕೆಟ್ ತಂಡದವರ ಪ್ರುಡೆನ್ಷಿಯಲ್ ವರ್ಲ್ಡ್ ಕಪ್ ಫೈನಲ್ ಆಟವಿತ್ತು. ಆಗ ದೂರದರ್ಶನ ಇನ್ನೂ ಭಾರತವನ್ನು ಆವರಿಸಿರಲಿಲ್ಲ. ಆಕಾಶವಾಣಿ ರನಿಂಗ್ ಕಾಮೆಂಟರಿಯೊಂದೇ ಆಲಿಸಲು ಇದ್ದ ಮಾರ್ಗ. ಆಟ ಮತ್ತು ವೀಕ್ಷಕ ವಿವರಣೆ ಪ್ರಸಾರ ಇದ್ದದ್ದು ಭಾರತೀಯ ಕಾಲ ಮಾನದಲ್ಲಿ ಸಂಜೆಯ ಮೇಲೆ.

ಅಥಣಿಯ ಪ್ರವಾಸಿ ಮಂದಿರದ ಒಂದು ಕೊಠಡಿಯಲ್ಲಿ ನಾನು, ಡಾ.ರಂ.ಶ್ರೀ. ಮುಗಳಿ ಮತ್ತು ಡಾ.ಹಾ.ಮಾ.ನಾಯಕ ಇದ್ದೆವು. ಸಂಜೆ ಕಾರ್ಯಕ್ರಮ ಮುಗಿಯಿತು. ರಾತ್ರಿ ಊಟ ಆಯಿತು. ಸುಖಪುರುಷರು ಅವರು ಮಲಗಿದರು. ನಾನು ಟ್ರಾನ್ಸಿಸ್ಟರನ್ನು ದಿಂಬಿನ ಮೇಲೆ ಕಿವಿಗೆ ಆನಿಸಿಕೊಂಡು ಕಾಮೆಂಟರಿ ಕೇಳುತ್ತ ಮಲಗಿದ್ದೆ. ಮಧ್ಯರಾತ್ರಿ 12-30ರ ಸುಮಾರಿಗೆ ವಿಶ್ವಕಪ್ಪನ್ನು ಭಾರತ ತಂಡ ಗೆದ್ದಿತು. ಗೆಲುವಿನ ಮಾತು ಬಾನುಲಿಯಲ್ಲಿ ಕಾಮೆಂಟೇಟರ್ ಹೇಳಿದ್ದೇ ತಡ, ನಾನು ಎಲ್ಲಿದ್ದೇನೆ, ಆಗ ಎಷ್ಟು ಹೊತ್ತಾಗಿದೆ-ಎಂಬುದನ್ನೆಲ್ಲಾ ಮೈ ಮರೆತು, 'ಹೋ, ಗೆದ್ದೆವು, ಗೆದ್ದೆವು, ಭಾರತ ಗೆದ್ದಿತು' ಎಂದು ಜೋರಾಗಿ ಕೂಗ ತೊಡಗಿದೆ. ಮುಗಳಿಯವರೂ, ನಾಯಕರೂ ಬೆಚ್ಚಿ ಬಿದ್ದರು. ಹಾಸಿಗೆಯಿಂದ ಎದ್ದು 'ಏನಾಯಿತು ಏನಾಯಿತು ?' ಎಂದು ಗಾಬರಿ ತೋರಿದರು. ನನಗೂ ನನ್ನ ಅಚಾತುರ್ಯದ ಅರಿವಾಯಿತು. ನಡೆದುದನ್ನು ಹೇಳಿ, ಅವರಿಬ್ಬರ ನಿದ್ರಾಭಂಗಕ್ಕೆ ಕ್ಷಮೆ ಕೋರಿದೆ. ಕೋಪಗೊಳ್ಳದೆ ಅವರು ನಗುತ್ತಾ 'ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು, ಕ್ರೀಡಾ ಪ್ರೇಮಿಗಳಾದರೆ ನಮಗೆ ನಿದ್ರೆಗೂ ಕಷ್ಟ ಸ್ವಾಮಿ' ಎಂದು ಹಾಮಾನಾ ಹಾಸ್ಯ ಮಾಡಿದರು.

ಅವರು ಹೇಳಿದ್ದರಲ್ಲಿ ನಿಜವೂ ಇತ್ತು. ನಾನು ಬಾಲ್ಯದಿಂದಲೂ ಆಟ ಪಾಠವಿನೋದಗಳಿಗೆ ಮನಸೋತು ಬೆಳೆದವನು. ಗೋಲಿ ಆಟ, ಬುಗುರಿ ಆಡಿಸುವುದು,

ಚಿನ್ನಿದಾಂಡು, ಚೌಕಾಬಾರ, ಅಟ್ಟುಗುಣಿ ಆಟ, ಮರಕೋತಿ, ಕಬಡಿ ಇಂತಹ ನಮ್ಮ ಹಳ್ಳಿಯ ಆಟಗಳಲ್ಲಿ ನಲಿದಾಡಿದ್ದಿದೆ. ಶಾಲಾ ದಿನಗಳಲ್ಲಿ ಕ್ರಿಕೆಟ್ ಮತ್ತು ಬ್ಯಾಡ್‌ಮಿಂಟನ್ ಆಡುತ್ತಿದ್ದೆ. ಮಹಾರಾಜಾ ಕಾಲೇಜಿನಲ್ಲಿ ಟೆನಿಸ್ ಆಡುತ್ತಿದ್ದೆ. ಟೆನಿಸ್ ಸಿಂಗಲ್ಸ್‌ನಲ್ಲಿ ಸೋತರೂ, ಡಬಲ್ಸ್‌ನಲ್ಲಿ ಪಟ್ಟಾಭಿಯವರೊಂದಿಗೆ (ಕಾದಂಬರಿಕಾರ್ತಿ ಆರ್ಯಾಂಬಾ ಪಟ್ಟಾಭಿಯವರ ಪತಿ) ಫೈನಲ್ಸ್‌ನಲ್ಲಿ ಗೆದ್ದು ಬಹು ಬೆಲೆ ಬಾಳುವ ದೊಡ್ಡ ಬೆಳ್ಳಿ ಲೋಟ ಬಹುಮಾನ ಪಡೆದಿದ್ದೆ. ಈ ಬೆಳ್ಳಿಲೋಟವನ್ನೂ, ಚರ್ಚಾಸ್ಪರ್ಧೆಗಳಲ್ಲಿ ನಾನು ಗಳಿಸಿದ್ದ ಕಪ್‌ಗಳನ್ನೂ ನನ್ನ ತಂದೆ ಬದುಕಿರುವವರೆಗೂ ತನ್ನ ಮಗನ ಸಾಧನೆಯೆಂದು ಮನೆಗೆ ಬಂದ ಗಣ್ಯ ಅತಿಥಿಗಳಿಗೆ ತೋರಿಸಿ ಹೆಮ್ಮೆ ಪಡುತ್ತಿದ್ದರು. ಈಗಲೂ ನನಗೆ ಸ್ಪೋರ್ಟ್ಸ್ ಎಂದರೆ ಎರಡನೆಯ ಜೀವವೆಂದು ಒಪ್ಪಿಕೊಳ್ಳುವುದಕ್ಕೆ ಯಾವ ಸಂಕೋಚವೂ ಇಲ್ಲ. ನನ್ನೆಲ್ಲ ಸಮಯದಲ್ಲಿ ಅರ್ಧ ಸಮಯವನ್ನು ಈ ಆಟಗಳನ್ನು ನೋಡುವದರಲ್ಲಿ ಕಳೆದಿದ್ದೇನೆ. ದಿನ ಪತ್ರಿಕೆಯಲ್ಲಿ ನಾನು ಮೊದಲು ಓದುವುದು ಕ್ರೀಡಾ ಪುಟವನ್ನು. ಕ್ರಿಕೆಟ್ ಮತ್ತು ಟೆನಿಸ್‌ಗಳು ಪ್ರಸಾರ ರಿಲೇ ಆಗುವುದನ್ನು ಇಡೀ ರಾತ್ರಿ ನೋಡುತ್ತೇನೆ; ಹಗಲು ಪ್ರಸಾರ ಇದ್ದಾಗ ಕಾಲೇಜಿಗೆ ರಜ ಹಾಕಿ ನೋಡುವುದುಂಟು; ಅಷ್ಟು ಹುಚ್ಚು. ಇಂಗ್ಲೆಂಡಿನ ಪ್ರವಾಸದಲ್ಲಿ ನಾವು (ಕಮಲಾ ಹಂಪನಾಗೂ ಅಷ್ಟೆ) ಮರೆಯದೆ ನೋಡಿ ಪುಳಕಿತರಾದದ್ದು ಲಾರ್ಡ್ಸ್, ಲೀಡ್ಸ್, ಓವಲ್, ಮ್ಯಾಂಚೆಸ್ಟರ್ ಮತ್ತು ವಿಂಬಲ್ಡನ್ ಆಟದ ಸಲ್ತಾಣಗಳನ್ನು. ಷೇಕ್ಸ್‌ಪಿಯರನ ಸ್ಟ್ರಾಟ್ ಫೋರ್ಡ್ ಎವಾನ್ ಮತ್ತು ವರ್ಡ್ಸ್ ವರ್ಥ್‌ನ ಲೇಕ್ ಡಿಸ್ಟ್ರಿಕ್ಟ್ ನೋಡಿ ಪಟ್ಟಷ್ಟೇ ಆನಂದವನ್ನು ಈ ಕ್ರೀಡಾ ಮೈದಾನಗಳ ಬಳಿ ಸುತ್ತಾಡಿ ಅನುಭವಿಸಿದೆವು. ನನಗೆ ಓದಲು-ಬರೆಯಲು ಸಮಯ ಸಿಗದೆ ಜೀವನದ ಬಹು ಭಾಗವನ್ನು ಸ್ಪೋರ್ಟ್ಸ್ ಆಕ್ರಮಿಸಿರುವುದಕ್ಕೆ ನನಗೆ ಎಂದೂ ಬೇಸರವೆನಿಸಲಿಲ್ಲ. ಒಂದು ಕಾವ್ಯ ಇಲ್ಲವೇ ಶ್ರೇಷ್ಠ ಸಾಹಿತ್ಯ ಕೃತಿಯನ್ನು ಓದಿ ಪಡುವ ಖುಷಿಯನ್ನು ಒಂದು ಶ್ರೇಷ್ಠ ಪಂದ್ಯ ನೋಡುವಾಗ ಕೂಡ ಅನುಭವಿಸಿದ್ದೇನೆ. ಕೆಲವು ಕೃತಿಗಳನ್ನು ಮತ್ತೆ ಮತ್ತೆ ಓದುವಂತೆ ಕೆಲವು ಆಟ ಪಂದ್ಯಗಳನ್ನು ಎಷ್ಟು ಸಲ ಮರು ಪ್ರಸಾರವಿದ್ದರೂ ನೋಡಿದ್ದನ್ನೇ ನೋಡಿ ಸುಖಿಸಿದ್ದೇನೆ. ನನ್ನ ಬಿಡುವಿನ ಸಮಯ ಸಾರ್ಥಕ ರೀತಿಯಲ್ಲಿ ನನ್ನ ಇಂದ್ರಿಯಗಳ ಮುದಕ್ಕೆ ದಕ್ಕಿತಲ್ಲಾ ಎಂದು ತೃಪ್ತಿ ಪಟ್ಟಿದ್ದೇನೆ.



ಲೋಕದರ್ಶನ ಎಂಬ ಪತ್ರಿಕೆ ತನ್ನ ದೀಪಾವಳಿ ವಿಶೇಷಾಂಕಕ್ಕೆ ಒಂದು ಪ್ರಶ್ನಾವಳಿ ಕಳಿಸಿ, ನನ್ನಿಂದ ಉತ್ತರಗಳನ್ನು ಪಡೆದು ಪ್ರಕಟಿಸಿತು. ಪ್ರಶ್ನಾವಳಿಯಲ್ಲಿ ಆಯ್ದು ಪ್ರಶ್ನೆಗಳಿದ್ದುವು:

1. ಧರ್ಮವನ್ನು ರಾಜಕೀಯದಿಂದ ಬೇರ್ಪಡಿಸುವ ಕೇಂದ್ರ ಸರ್ಕಾರದ ಯೋಚನೆ ಸರಿಯೇ? ಸರಿಯಾದರೆ ಏಕೆ ಸರಿ ? ತಪ್ಪಾದರೆ ಏಕೆ ತಪ್ಪು ?

2. ಧರ್ಮ ಎನ್ನುವ ಶಬ್ದವನ್ನು ಸರ್ಕಾರ ಸರಿಯಾದ ರೀತಿಯಲ್ಲಿ ಅರ್ಥೈಸಿಲ್ಲ ಅಥವಾ ಸಂಕುಚಿತವಾದ ಅರ್ಥದಲ್ಲಿ ಅದನ್ನು ಬಳಸುತ್ತಿದೆ ಎಂದೂ ಅಭಿಪ್ರಾಯಪಡಲಾಗುತ್ತಿದೆ: ತಮ್ಮ ಅನಿಸಿಕೆ ಏನು ?

3. ಧರ್ಮವನ್ನು ರಾಜಕೀಯದಿಂದ ಬೇರ್ಪಡಿಸುವ ಸರ್ಕಾರ, ಜಾತಿಗಳನ್ನು, ಜಾತೀಯತೆಯನ್ನು ದೂರವಿಡುತ್ತಿಲ್ಲ ಎಂಬ ದೂರು ಇದೆ. ಪ್ರತಿಯೊಂದು ಹಂತದಲ್ಲೂ ರಾಜಕಾರಣಗಳು ಜಾತ್ಯಾಧಾರಿತವಾಗಿಯೇ ನಡೆದುಕೊಳ್ಳುತ್ತಿದ್ದಾರೆನಿಸುತ್ತದೆ. ಇದು ಎಷ್ಟರ ಮಟ್ಟಿಗೆ ಸರಿ ?

4. ನಮ್ಮ ರಾಷ್ಟ್ರಪತಿ, ಪ್ರಧಾನಿ, ಸಚಿವರು ಕಂಡಕಂಡ ಮಂದಿರ, ಮಸೀದಿ, ಚರ್ಚ್, ಗುರುದ್ವಾರಗಳಿಗೆ ಭೇಟಿಕೊಟ್ಟು ಪೂಜೆ, ಪ್ರಾರ್ಥನೆ ಸಲ್ಲಿಸುವುದು ಧರ್ಮಾತೀತ ವ್ಯವಹಾರವೆನಿಸುತ್ತದೆಯೇ ?

5. ಯಾವುದೇ ಒಂದು ರಾಜಕೀಯ ಪಕ್ಷ ಹಿಂದುತ್ವ ಅಥವಾ ಅಯೋಧ್ಯೆಯಂತಹ ವಿಷಯಗಳನ್ನು ಆಧರಿಸಿ ಚುನಾವಣೆಗಳನ್ನು ಎದುರಿಸುವುದು ತಪ್ಪೇ, ಸರಿಯೇ ? ಹೇಗೆ? ಅಥವಾ ಹಿಂದೂ ಸಂಘಟನೆಯವರು ಮಾತ್ರ ಈ ರೀತಿ ಮಾಡಬಾರದು; ಉಳಿದ ಜಾತಿ ಮತದವರು ಧರ್ಮದ ತಳಹದಿ ಆಧರಿಸಿ ನಡೆದುಕೊಳ್ಳಬಹುದು ಎಂಬ ಒಂದು ಪ್ರಥೆ ಭಾರತದಲ್ಲಿರುವುದು ಸಮರ್ಪಕವೇ ?

ಮೇಲ್ಕಂಡ ಅಯ್ದು ಪ್ರಶ್ನೆಗಳಿಗೆ ಕ್ರಮವಾಗಿ ನಾನುಕೊಟ್ಟ ಉತ್ತರಗಳು ಹೀಗಿದ್ದುವು :

1. ತಪ್ಪು. ಇಷ್ಟು ವರ್ಷ ಧರ್ಮವನ್ನು ತನ್ನ ಪ್ರಯೋಜನಕ್ಕಾಗಿ ಬಳಸಿಕೊಂಡು ಕೇಂದ್ರದಲ್ಲಿ ಕುಳಿತು ಸರಕಾರವಾಗಿ ಆಳಿದ ಕಾಂಗ್ರೆಸ್ ಪಕ್ಷಕ್ಕೆ, ತಾನೇ ಹತ್ತಿ ಬಂದ ಏಣಿಯನ್ನು ಈಗ ಒಮ್ಮೆಲೇ ಒದ್ದು ಬೀಳಿಸುವ ವಿವೇಕ ಹುಟ್ಟಿದ್ದು ಹೇಗೆ? ಯಾವ ಭಯ-ಭೀತಿ ಅವರನ್ನು ಕಾಡುತ್ತಿದೆ? ಅವರ ಕುರ್ಚಿಗಳು ಅಲುಗಾಡುತ್ತಿವೆಯೆ? ಅವರ ಈಗಿನ ಮಾತುಗಳು, ವೃದ್ಧ ನಾರಿಯು ಪಾತಿವ್ರತ್ಯವನ್ನು ಬೋಧಿಸುವಂತಿದೆ. ಮುದುಕಿಯು ಗರತಿಯ ಬಗ್ಗೆ ಮಾತನಾಡಬಾರದೆಂದಲ್ಲ. ಆದರೆ ಯುವತಿಯಾಗಿದ್ದ ದಿನಗಳನ್ನು ಮರೆಯಬಾರದು.

ಧರ್ಮ-ರಾಜಕೀಯ ಪರಸ್ಪರ ಪೂರಕ ನಲೆಯಲ್ಲಿ ಕ್ರಿಯಾಶೀಲವಾಗಿ ಹೆಜ್ಜೆ ಹಾಕಬೇಕು. ಇವೆರಡರ ಸಹಯೋಗ ಮತ್ತು ಸಹಬಾಳ್ವೆಯನ್ನು ಭಾರತದ ಚರಿತ್ರೆಯ ಉದ್ದಕ್ಕೂ ಕಾಣುತ್ತೇವೆ. ಅಶೋಕ, ಖಾರವೇಲ, ಚಂದ್ರಗುಪ್ತ, ನೃಪತುಂಗ, ವಿಕ್ರಮಾದಿತ್ಯ, ಚಾವುಂಡರಾಯ, ಮುಮ್ಮಡಿ ಕೃಷ್ಣರಾಜ ಒಡೆಯರ್‌ಮೊದಲಾದವರು ಆದರ್ಶವಾಗಿದ್ದಾರೆ. ನಮ್ಮ ಕಾಲದಲ್ಲಿ ಗಾಂದೀಜಿ, ತಕ್ಕಮಟ್ಟಿಗೆ ಬಾಬುರಾಜೇಂದ್ರ ಪ್ರಸಾದ್, ಸರ್ದಾರ್ ವಲ್ಲಭಬಾಯಿ ಪಟೇಲ, ಲಾಲಬಹದ್ದೂರ ಶಾಸ್ತ್ರಿ, ಕಾಮರಾಜ ನಾಡಾರ್ - ಇಂಥ ಕೆಲಸ ಮಾಡಿದರು.

2. ಧರ್ಮ ಎನ್ನುವ ಶಬ್ದವನ್ನು ಸರ್ಕಾರ ಸಂಕುಚಿತವಾದ ಅರ್ಥದಲ್ಲಿ ಬಳಸುತ್ತಿದೆ. ಧರ್ಮದ ವ್ಯಾಖ್ಯಾನ ಅಷ್ಟು ಸರಳವಾದದ್ದಲ್ಲ. ಮನುಷ್ಯರನ್ನು ದೂರವಾಗಿಡುವುದು ಧರ್ಮವಲ್ಲ. ಧರ್ಮದ ಮುಖವಾಡದವರನ್ನೂ, ವೇಷಧಾರಿಗಳನ್ನೂ ನಂಬಿ ಮೋಸ ಹೋಗಬಾರದು. ಧರ್ಮ-ದೇವರು ಗುಡಿಯಲ್ಲಿ ಇರುವುದು ಅಷ್ಟೇ ಅಲ್ಲ. ಪ್ರತಿಯೊಬ್ಬ ಮನುಷ್ಯನೂ ದೇವರೇ. ಪ್ರತಿಯೊಂದು ಮನೆಯೂ ಗುಡಿಯೇ. ಇಡೀ ಬದುಕು ಒಂದು

ಉಪಾಸನೆ. ಜೀವನ ಪರವಾದ, ಜನಪರವಾದ ಕೆಲಸಗಳೇ ನಿಜವಾದ ಪೂಜೆ, ಧರ್ಮವೆಂಬುದು ಒಂದು ಮನೋಧರ್ಮ, ಅದು ಆಲೋಚನೆ ಮತ್ತು ಆಚರಣೆಗಳಲ್ಲಿ ಪ್ರಕಟವಾಗುತ್ತದೆ.

3. ರಾಜಕಾರಣಿಗಳೇ ಏನು, ಬಹುಪಾಲು ಜನ ಜಾತ್ಯಾಧಾರದ ರೀತ್ಯಾ ನಡೆದುಕೊಳ್ಳುತ್ತಿರುವುದು ನಿಜ. ಅಧಿಕಾರದ ಗದ್ದುಗೆ ಹತ್ತುವುದಕ್ಕೆ ಜಾತಿಮತ ಪಂಥ ಕೋಮು ಧರ್ಮಗಳೆಲ್ಲ ಮೆಟ್ಟಿಲುಗಳೆಂಬ ಭ್ರಮೆ ರಾಜಕೀಯ ಪಕ್ಷಗಳನ್ನು ಕವಿದಿದೆ. ಪರಿಣಾಮವಾಗಿ ಜಾತಿ ವಿನಾಶವೆಂಬ ಭಾಷಣ ವೇದಿಕೆಗಷ್ಟೇ ಮುಗಿದು, ಅವರು ಕೆಳಗಿಳಿದ ತಕ್ಷಣ ಮತ್ತೆ ಜಾತಿ ಪಿಶಾಚಿ ಹಿಡಿದುಕೊಳ್ಳುತ್ತದೆ. ವಸ್ತು ಸ್ಥಿತಿ ಹೀಗಿರುವುದರಿಂದ ಇನ್ನೂ ನೂರು ವರ್ಷವಾದರೂ ಜಾತಿಗಳು ಹೋಗುವುದಿಲ್ಲ, ಅದರ ಬದಲು ಜಾತಿಗಳು ಗಟ್ಟಿಯಾಗುತ್ತವೆ. ಇಷ್ಟಾಗಿಯೂ, ರಾಜಕೀಯದವರು ಜಾತಿಯನ್ನಾಗಲಿ ಧರ್ಮವನ್ನಾಗಲಿ ಪ್ರೀತಿಸುತ್ತಾರೆಂದೇನೂ ಅಲ್ಲ. ಒಳಗೊಳಗೇ ಅವರೂ ಜಾತಿ ವ್ಯವಸ್ಥೆಯನ್ನು ವಿರೋದಿಸುವವರೇ. ಆದರೆ ಆ ಜಾತಿಯ ದಾರಿಯನ್ನು ಬಿಟ್ಟರೆ ಬೇರೆದಾರಿ ಕಾಣುತ್ತಿಲ್ಲ. ಸ್ವಂತಕ್ಕಾಗಿ ಜಾತಿ-ಧರ್ಮ ಎಂದು ನಂಬುವುದನ್ನು ಅರ್ಥಮಾಡಿಕೊಳ್ಳಬಹುದು. ಸ್ವಾರ್ಥಕ್ಕಾಗಿ ಜಾತಿ ವ್ಯವಸ್ಥೆಗೆ ನೀರೆರೆಯುವುದು ತುಂಬ ಅಪಾಯಕಾರಿ. ಅದನ್ನಷ್ಟೇ ಖಂಡಿಸಬೇಕು.

ಬಹಳ ಜನ ದೇವಸ್ಥಾನಕ್ಕೆ ಹೋಗುವುದು, ಪೂಜಾದಿನಗಳಲ್ಲಿ ಪಾಲುಗೊಳ್ಳುವುದು-ಸ್ವಯಿಚ್ಛೆಯಿಂದಲ್ಲ; ಶಿಷ್ಟಾಚಾರವಾಗಿಯೊ, ಜನಮೆಚ್ಚುಗೆಗೊ, ಸಾಮಾಜಿಕ ಪ್ರತಿಷ್ಠೆಗೊ, ಧರ್ಮವನ್ನು ಗೌರವಿಸುವ ನಾಟಕಾಭಿನಯ ಆಗುತ್ತಿದೆ. ರಾಜಕಾರಣಿಗಳಂತೆ ಇತರರೂ ಇದರಲ್ಲಿ ಪಾತ್ರಧಾರಿಗಳು. ಇವೆಲ್ಲದರ ಲಾಭ ನಿಜವಾದ ಧರ್ಮಕ್ಕೂ ಅಲ್ಲ, ದೇವರಿಗೂ ಅಲ್ಲ; ಪೂಜಾರಿಗಳಿಗಷ್ಟೇ ಇದರ ಪ್ರಯೋಜನ, ಪ್ರಚಾರ.

4. ರಾಷ್ಟ್ರಪತಿ, ಪ್ರಧಾನಿ, ಸಚಿವ ಸಂಪುಟದವರು-ಇವರೆಲ್ಲಾ ಎಲ್ಲಾ ಮಂದಿರ ಮಸೀದಿ ಗುರುದ್ವಾರಗಳಿಗೆ ಭೇಟಿ ಕೊಡುವುದಿಲ್ಲ. ಅದರಲ್ಲೂ ಆಯ್ಕೆ ಇದೆ, ಆದ್ಯತೆ ಇದೆ. ಅವರು ಕೆಲವೇ ಸ್ಥಳಗಳಿಗೆ ಹೋಗುತ್ತಾರೆ. ಅದೊಂದು ಸ್ಟಂಟ್, ಗಿಮಿಕ್ಸ್. ಈ ಕಪಟ ನಾಟಕದ ಸೂತ್ರಧಾರಿಗಳು ಆಡಳಿತಾಂಗದ ಮುಖ್ಯ ಸೂತ್ರಗಳನ್ನು ಹಿಡಿದಿರುವ ವರಿಷ್ಠರೆಂದರೆ ಮೇಲುವರ್ಗದ ಐ.ಎ.ಎಸ್. ಅಧಿಕಾರಗಳು ಮತ್ತು ಕೆಲವು ಮಠಗಳ ಶಿಷ್ಯ ಖದೀಮರು. ಪುಡಾರಿ ರಾಜಕಾರಣಿಗಳು ಇರುವಂತೆಯೇ ಪುಡಾರಿ ದೇವಾಲಯಗಳೂ ಇವೆ. ಅವೆಲ್ಲ ಶೋಷಣೆಯ ಕೇಂದ್ರಗಳು. ಮಸೀದಿ-ಗುರುದ್ವಾರಗಳಲ್ಲಿ ಆಯುಧಗಳಿರುವಂತೆಯೇ ಮಂದಿರಗಳಲ್ಲೂ ಇವೆ. ಮಂದಿರದ ಮರೆಯಲ್ಲಿ ಹೊಂಚು ಹಾಕುತ್ತ ಜೀವಂತವಾಗಿ ನಿತ್ಯ ಹೆಡೆಯಾಡುವ ಪಿತೂರಿಗಳು ಭಯಂಕರವಾಗಿವೆ. ಈ ದೇಶದ ಎಲ್ಲ ಹೊಲಸು ಹುಟ್ಟುವ ಗಂಗೋತ್ರಿಯೆಂದರೆ ಮಂದಿರಗಳೇ ಆಗಿವೆ.

ರಾಷ್ಟ್ರಪತಿ-ಪ್ರಧಾನಿಗಳಿಗೆ ಈಗ ಕವಡೆ ಕಿಮ್ಮತ್ತೂ ಇಲ್ಲ. ಬಾತುಕೋಳಿ ರಾಷ್ಟ್ರಪತಿ,

ಕಳಾಹೀನ ಪ್ರಧಾನಿಯಿಂದ ಭಾರತದ ಘನತೆ ತಾನಾಗಿ ನೆಲ ಕಚ್ಚಿದೆ. ಮಾತನಾಡುವ ಜೀವಂತ ಜನತೆಯ ಹತ್ತಿರ ಹೋಗದೆ ಮಾತ ಮಂದಿರಗಳಿಗೆ ಧಾವಿಸುವ ಅಪ್ಪಾಜಿಗಳವರು. ಇಂಥ ಮುಂಕುಬೂದಿ ಎರಚುವ ಜನವಂಚಕ ಆಷಾಢಭೂತಿಗಳಿಗೆ ಸೊಪ್ಪು ಹಾಕುವ ಕಾಲ ಹೋಯಿತು. ರಾಷ್ಟ್ರಪತಿಯಾಗಿ ಪ್ರಧಾನಿಯಾಗಿ, ರಾಜ್ಯಪಾಲರಾಗಿ, ಸಚಿವರಾಗಿ ಅಧಿಕಾರ ಸ್ವೀಕರಿಸುವ ಪ್ರಮಾಣ ವಚನದಲ್ಲಿ- 'ನಾನು ಈ ಅಧಿಕಾರದಲ್ಲಿ ಇರುವವರೆಗೂ ಯಾವುದೇ ಒಂದು ಕೋಮಿನ ಗುಡಿಗೂ ಹೋಗುವುದಿಲ್ಲ'-ಎಂಬ ಅಂಶವನ್ನು ಕಡ್ಡಾಯವಾಗಿ ಸೇರಿಸಬೇಕು..

5. ಯಾವುದೇ ರಾಜಕೀಯ ಪಕ್ಷವಾಗಲಿ, ಧರ್ಮ ದೇವರುಗಳನ್ನು ಚುನಾವಣೆಗೆ ಬಳಸಿಕೊಳ್ಳುವುದು ಅಪರಾಧ. ಹಿಂದುತ್ವ, ಅಯೋಧ್ಯೆ-ಅಂತಹ ಸೂಕ್ಷ್ಮತಮ ವಿಷಯಗಳನ್ನು ಪೆಡಂಭೂತವಾಗಿ ಬೆಳೆಸುವುದರ ಹಿಂದಿರುವ ಉದ್ದೇಶ ಒಳ್ಳೆಯದಲ್ಲ. ಸಾಮಾನ್ಯ ಜನ ಸಮುದಾಯವನ್ನು ಅತಿಭಾವುಕತೆಯ ಸನ್ನಿಗೆಪ್ರಚೋದಿಸಿ, ಅದರಿಂದ ಅಧಿಕಾರವನ್ನು ಕಿತ್ತುಕೊಳ್ಳುವ ಹುನ್ನಾರವು ಕೇವಲ ಪ್ರಜಾಪ್ರಭುತ್ವದ ಹಗಲು ದರೋಡೆ. ಮತಸಿಷ್ಟರಾದ ಮುಗ್ಧರನ್ನು ಕೆರಳಿಸುವುದು ಸುಲಭ. ಅಮಾಯಕರನ್ನು ಬಲಿಕೊಟ್ಟು, ದೇಶಕ್ಕೆ ಬೆಂಕಿ ಹಚ್ಚಿ ಅದರ ಧಗೆಯಲ್ಲಿ ತಾವು ಬೆಚ್ಚಗಿದ್ದೇವೆಂದು ತಿಳಿಯುವುದು ವಿವೇಕವಲ್ಲ.

ಹಿಂದುತ್ವ ಎಂಬುದೂ ಸಹ ಒಂದು ಭ್ರಾಂತಿ ಜನ್ಯ ಪರಿಕಲ್ಪನೆ. ಅಂಥ ಹಿಂದುತ್ವ ಸಹ ಯಾರೊಬ್ಬರ ಇಲ್ಲವೇ ಯಾವುದೇ ಒಂದು ಪಕ್ಷದ ಗುತ್ತಿಗೆಯಲ್ಲ. ರಾಜಕೀಯ ಮತ್ತು ದರ್ಮ ಹೊಯ್ ಕಯ್ಯಾಗಿ ಸಪ್ತಪದಿ ಹಾಕಬೇಕೇ ಹೊರತು ಧರ್ಮದ ಕುತ್ತಿಗೆಯನ್ನು ಹಿಚುಕಬಾರದು. ಈ ಮಾತು ಹಿಂದೂಗಳಿಗಷ್ಟೇ ಅಲ್ಲ, ಮುಸಲ್ಮಾನರಿಗೂ ಕ್ರಿಶ್ಚಿಯನರಿಗೂ ಜೈನರಿಗೂ-ಎಲ್ಲರಿಗೂ ಎಲ್ಲ ಪಕ್ಷಗಳಿಗೂ ಸಮನಾಗಿ ಅನ್ವಯಿಸುತ್ತದೆ. ದೆಹಲಿಯ ಸಿಂಹಾಸನ ಹತ್ತುವುದಕ್ಕೆ ಅಯೋಧ್ಯೆ ಹೆಬ್ಬಾಗಿಲು ಆಗಬಾರದು.



ಅನಕೃ ನಮ್ಮ ಕಾಲದ ಶ್ರೀಮಂತ ಹೃದಯದ ಹಿರಿಯ ಸಾಹಿತಿ; ಜನಪ್ರಿಯ ಭಾಷಣಕಾರರು. ವಿಚಾರಗಳ ಅಭಿವ್ಯಕ್ತಿಯ ಲಯಕ್ಕೆ ಒತ್ತು ಕೊಟ್ಟು ಒಂದು ಬಗೆಯ ಗುತ್ತಿನಿಂದ ಮಾತನಾಡುವ ಕಲೆ ಅವರಿಗಿತ್ತು. ಕಮಲಾ ಹಂಪನಾ ದಂಪತಿಗಳ ವಿಚಾರದಲ್ಲಿ ಅವರು ಪಿತೃ ವಾತ್ಸಲ್ಯ ವರ್ಷಿಸಿದರು. ಒಂದೇ ವೇದಿಕೆಯಿಂದ ಸುಮಾರು ೪೦-೫೦ ಕಡೆ ಭಾಷಣ ಮಾಡಿದ್ದೇವೆಂಬುದು ನನಗೆ ಈಗಲೂ ಮಧುರಸ್ಮೃತಿ. ಕನ್ನಡಕ್ಕೆ ಕರ್ನಾಟಕದಲ್ಲಿ ಮೊದಲ ಪೀಳಿಯ ಸಿಗುವಂತಾಗಬೇಕೆಂಬ ಕನ್ನಡ ಪರ ಚಳವಳಿಯನ್ನು ೧೯೬೪-೬೫ರಿಂದ ಬೆಂಗಳೂರಿನ ಎಲ್ಲ ಬಡಾವಣೆ, ಓಣಿಕೇರಿ, ಮೂಲೆ ಮೊಡಕು, ಶಾಲೆಗಳಲ್ಲಿ ಅಖಂಡವಾಗಿ ನಡೆಸಿದೆವು. ಅನಕೃ; ಕೋಣಂದೂರು ಲಿಂಗಪ್ಪ, ನಾಡಿಗೇರ ಕೃಷ್ಣರಾಯ, ಮ. ರಾಮಮೂರ್ತಿ,

ಕಮಲಾಹಂಪನಾ-ಮೊದಲಾದವರು ಒಂದು ದಶಕದವರೆಗೆ ಈ ನೋಂಪಿಯನ್ನು ನಡಸಿದರು. ಇದು ಪತ್ರಿಕಾ ಪ್ರಚಾರಕ್ಕಾಗಿ ಮಾಡಿದ ಡೋಂಗಿ ಚಳವಳಿಯಾಗಿರಲಿಲ್ಲ.

ಅನಕೃ ಜತೆ ಹಲವು ಸಂಚಾರಗಳಾದುವು. ೧೯೭೦ರ ಏಪ್ರಿಲ್ ತಿಂಗಳು ಬಂಗಾರ ಪೇಟೆಯಲ್ಲಿ ಏರ್ಪಾಟಾದ ಕೋಲಾರ ಜಿಲ್ಲಾ ಸಾಹಿತ್ಯ ಸಮ್ಮೇಳನಕ್ಕೆ ಅವರನ್ನು ಅಧ್ಯಕ್ಷತೆಗೆ ಒಪ್ಪಿಸಿಕರೆತರುವ ಗುರುತರವಾದ ಹೊಣೆಯನ್ನು ಜಚನಿ ಸ್ವಾಮಿಯವರು ನನಗೆ ವಹಿಸಿದರು. ಏಕೆಂದರೆ ಕಾರ್ಯಕ್ರಮಗಳಿಗೆ ಒಪ್ಪಿಕೊಂಡು ಕಡೆಗಳಿಗೆಯಲ್ಲಿ 'ಅನಿವಾರ್ಯ ಕಾರಣಗಳಿಂದಾಗಿ ಬರಲಾಗುತ್ತಿಲ್ಲ-ಮನ್ನಿಸಿ' ಎಂದು ಒಂದು ಟೆಲಿಗ್ರಾಂ ಕಳಿಸುವ ಒಂದು ಕಷ್ಟಾಚಾರವನ್ನು (ಇದು ಶಿಷ್ಟಾಚಾರಕ್ಕೆ ವಿರುದ್ಧವಾದ ಶಬ್ದ!) ರೂಢಿಗೆ ತಂದವರು ಅನಕೃ-ತರಾಸು ಜೋಡಿ. ಆದರೆ ಅವರಲ್ಲಿ ನನಗೆ ಇದ್ದ ಸಲುಗೆಯಿಂದಾಗಿ, ನನ್ನ ಬಗ್ಗೆ ಅವರಲ್ಲಿದ್ದ ಅಸೀಮ ಪ್ರೀತಿಯಿಂದಾಗಿ, ಅವರು ಬಂಗಾರಪೇಟೆಗೆ ಬಂದರು, ಅಲ್ಲಿನ ಜನರನ್ನು ಸಂತೋಷಪಡಿಸಿದರು. ಈ ಸಮ್ಮೇಳನದಲ್ಲಿ ನನಗೆ ಭಾಷಾಭೂಷಣ ಎಂಬೊಂದು ಪ್ರಶಸ್ತಿಯನ್ನೂ ಬಂಗಾರದ ಪದಕವನ್ನೂ ನೀಡಿ ಬಹು ದೊಡ್ಡ ಸನ್ಮಾನ ಮಾಡಿ ಗೌರವಿಸಿದರು.

ಬಂಗಾರಪೇಟೆಯೇನೋ ತಾಲೂಕು ಕೇಂದ್ರ, ದೊಡ್ಡ ಊರು; ಸಾಹಿತ್ಯ ಸಮ್ಮೇಳನಕ್ಕೆಂದು ಅಲ್ಲಿಗೆ ಅನಕೃ ಬಂದದ್ದು ಹೆಚ್ಚಲ್ಲ. ಏನೇ ಹೇಳಿ, ಪ್ರೀತಿ ಸ್ನೇಹಗಳಿಗೆ ಒಲಿದ ಜನ ಗೆಳೆತನಕ್ಕೆ ಹೇಗೆ ಮಣಿಯುತ್ತಾರೆ ಎಂಬುದಕ್ಕೆ ಒಂದು ನಿದರ್ಶನಕೊಡುತ್ತೇನೆ. ನನ್ನೂರು ಸಣ್ಣ ಹಳ್ಳಿಯಾದ ಹಂಪಸಂದ್ರ. ನನ್ನ ಹಳ್ಳಿಯ ಹತ್ತಿರದ ಊರುಗಳಲ್ಲಿ ಕುರೂಡಿಯೂ ಒಂದು. ಅಲ್ಲೊಂದು ಜಿನಾಲಯ (ಬಸದಿ) ಮತ್ತು ಶಿವಾಲಯ ಇವೆ. ಈಶ್ವರನ ಗುಡಿಯ ಸಂಬಂಧವಾಗಿ ಕುರೂಡಿಯಲ್ಲಿ ಸಾಹಿತ್ಯ ಸಂಜೆ ಕಾರ್ಯಕ್ರಮ ಏರ್ಪಡಿಸಲಾಯಿತು. ನಾನು ಅಧ್ಯಕ್ಷ, ಅನಕೃ ಮುಖ್ಯ ಅತಿಥಿ, ಕಮಲಾ ಹಂಪನಾ ಉಪನ್ಯಾಸ.

ಆಹ್ವಾನ ಪತ್ರಿಕೆಯಲ್ಲಿ ಅನಕೃ ಹೆಸರು ನೋಡಿ ಹತ್ತಾರು ಹಳ್ಳಿಯಿಂದ ಸಾಹಿತ್ಯ ಪ್ರೇಮಿಗಳು ಕಾರ್ಯಕ್ರಮಕ್ಕೆ ಜಮಾಯಿಸಿದ್ದರು. ಅವರನ್ನು ಕುರೂಡಿಯಿಂದ ಎರಡೂವರೆ ಕಿಲೋಮೀಟರ್ ದೂರದಲ್ಲಿದ್ದ ಹಂಪಸಂದ್ರಕ್ಕೆ, ನಮ್ಮ ಮನೆಗೆ ರಾತ್ರಿ ಫಲಾಹಾರಕ್ಕೆ ಕರೆಯಲೂ, ಅವರ ಭಾಷಣ ಕೇಳಲೂ ನನ್ನ ತಂದೆ ಶ್ಯಾನುಭೋಗ್ ಪದ್ಮನಾಭಯ್ಯ ಸಹ ಬಂದಿದ್ದರು. ಅನಕೃ ಭಾಷಣದುದ್ದಕ್ಕೂ ಕಮಲಾ ಹಂಪನಾ ಕುರಿತು ಬೆನ್ನು ತಟ್ಟುವ ಮಾತುಗಳನ್ನಾಡಿದರು. ಗೌರೀಬಿದನೂರು ತಾಲೂಕಿನ ಸಾಹಿತ್ಯಾಸಕ್ತರು ಖುಷಿಪಟ್ಟರು. ಭಾಷಣಾನಂತರ ನನ್ನ ತಂದೆ ಬಂದು ಅನಕೃ ಅವರನ್ನು ಹಳ್ಳಿಯ ಮನೆಗೆ ಆಹ್ವಾನಿಸಿದರು. ಅನಕೃ ಅಲ್ಲಿಗೆ ಬರಲು ಮನಸ್ಸಿದ್ದರೂ ಆತುರದಲ್ಲಿದ್ದರು - 'ಕ್ಷಮಿಸಿ ಶಾನುಭೋಗರೇ' ಎಂದರು. ನನ್ನ ಅಪ್ಪ ಕೈಜೋಡಿಸಿ, 'ತಮ್ಮಂಥ ದೊಡ್ಡ ಸಾಹಿತಿಗಳು ನಮ್ಮ ಮನೆಗೆ ಬಂದು ಒಂದು ಲೋಟ ಹಾಲು ಕುಡಿದರೆ ತುಂಬ ಸಂತೋಷವಾಗುತ್ತೇ; ನನ್ನ ಮಗನ್ನೂ ಸೊಸೇನೂ ತಾವು ಆಶೀರ್ವದಿಸಬೇಕು, ಎಂದು ವಿಜ್ಞಾಪಿಸಿದರು. ಅದಕ್ಕೆ ಅನಕೃ ನಗುತ್ತಾ 'ಪದ್ಮನಾಭಯ್ಯನೋರೆ, ನಿಮ್ಮ ಮಗ ಸೊಸೆ ನಿಮ್ಮ ವಂಶಕ್ಕೆ, ನಿಮ್ಮ ಹಳ್ಳಿಗೇ ಏನು, 'ಕನ್ನಡ ನಾಡಿಗೇ ಕೀರ್ತಿ ತರ್ತಾರೆ' ಎಂದು ಜನರ ಎದುರಲ್ಲಿ ಹೇಳಿದರು; ಇದು ಅವರು ತರುಣರನ್ನು ಹುರಿದುಂಬಿಸುವ ಪರಿ.

ಈ ಬಾಂಧವ್ಯ ಅನಕೃ ಬದುಕಿರುವ ವರೆಗೂ ಇತ್ತು, ಅವರು ಸತ್ತಮೇಲೂ ಇದೆ. ಕಮಲಾ ಹಂಪನಾ ಅವರ ಮೊದಲ ಕಥಾ ಸಂಕಲನದ ಹೆಸರು 'ನಕ್ಕಿತು ಹಾಲಿನ ಬಟ್ಟಲು' (೧೯೬೦). ಅದಕ್ಕೆ ಮಾಸ್ತಿ ಮುನ್ನುಡಿ ಬರೆದಿದ್ದಾರೆ. ಅದರ ಬಿಡುಗಡೆ ಮಾಡಿದವರು ಅನಕೃ, ಶಿವಮೊಗ್ಗದಲ್ಲಿ. ಅಂದು ಅವರು ಪ್ರತಿಯೊಂದು ಕತೆಯನ್ನೂ ಬಿಡಿಸಿ ವಿಮರ್ಶಿಸಿದ ರೀತಿ, ಒಂದು ಪ್ರಾಯೋಗಿಕ ವಿಮರ್ಶೆಯೇ ಆಗಿತ್ತು. ಬೆಂಗಳೂರಿನ ಐ.ಬಿ.ಎಚ್. ಪ್ರಕಾಶನದವರು ಕವಿ-ಕಾವ್ಯ ಪರಿಚಯ ಮಾಲೆಯಲ್ಲಿ ನೂರಾರು ಪುಸ್ತಕಗಳನ್ನು ಹೊರತಂದರು. ಅದರ ಪ್ರಥಮ ಸಂಪಾದಕರಾಗಿ ಆ ಮಾಲೆಗೆ ಖಚಿತ ರೂಪ ಕೊಟ್ಟವರು ಅನಕೃ. ಆ ಮಾಲೆಯಲ್ಲಿ ನನ್ನಿಂದ ಪಂಪ, ರನ್ನ, ದೇವರಾಯನ ದುರ್ಗ, ಕೃಷ್ಣ ಪಾಂಡವರು ಮೊದಲಾದ ಪುಸ್ತಕಗಳನ್ನೂ, ಕಮಲಾ ಹಂಪನಾರಿಂದ ಅಕ್ಕಮಹಾದೇವಿ, ಹೆಳವನಕಟ್ಟೆ ಗಿರಿಯಮ್ಮ, ವೀರವನಿತೆ ಓಬವ್ವೆ, ಮುಳಬಾಗಿಲು-ಎಂಬ ಕೃತಿಗಳನ್ನೂ ಬರೆಸಿದವರು ಅನಕೃ. ಅವರ ಸಾವಿನಿಂದ ನಮ್ಮ ಕುಟುಂಬ ಒಬ್ಬ ಪ್ರೋತ್ಸಾಹಕರಾದ ಹಿತೈಷಿ ಬಂಧುವನ್ನು ಕಳೆದುಕೊಂಡಂತಾಯಿತು.

ಬೆಂಗಳೂರಲ್ಲಿ ನವೆಂಬರ್ ಮತ್ತು ಡಿಸೆಂಬರ್ ತಿಂಗಳ ಚಳಿ ಎಂದರೆ, ಮೂಲೆ ಸೇರಿದ್ದ ಶಾಲು ಕಂಬಳಿ ರಗ್ಗು ಸ್ವೆಟರುಗಳನ್ನು ಈಚೆಗೆ ಹೊರಡಿಸುತ್ತದೆ. ಅಂತಹ ನಡುಗಿಸುವ ಚಳಿಯಲ್ಲೂ ಮೈ ಬೆಚ್ಚಗಾಗಿಸಿದ ಘಟನೆ ನಡೆಯಿತು. ೧೯೬೮ರ ನವೆಂಬರ್ ಮೊದಲವಾರ ಬೆಳಗ್ಗೆಯೇ ಏಕಾಏಕಿ ನನ್ನ ಬಾಡಿಗೆ ಮನೆಗೆ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಜಿ.ಪಿ. ರಾಜರತ್ನಂ, ಟಿ.ಎಲ್. ಶ್ರೀನಿವಾಸ ಆಚಾರ್ಯ ಬಂದರು. ನಾನು ಮಲ್ಲೇಶ್ವರಂ ಎಂಟನೆಯ ಕ್ರಾಸಿನಲ್ಲಿ ಬಾಡಿಗೆ ಮನೆಯಲ್ಲಿ ವಾಸವಾಗಿದ್ದೆ. ನಾನಿದ್ದ ಮನೆ ಒಂದು ಓಣಿಯಲ್ಲಿತ್ತು. ಮನೆಯ ಮುಂಭಾಗದ ರಸ್ತೆಯಲ್ಲಿ ಒಂದು ಮಲ್ಲೇಶ್ವರಂ ಬಾರ್ ಇತ್ತು. ಮನೆಯ ಗುರುತು ಮತ್ತು ವಿಳಾಸ ಸುಲಭವಾಗಿ ಪತ್ತೆ ಆಗಲಿ ಎಂಬ ಸದುದ್ದೇಶದಿಂದ, ನಾನಿದ್ದ ಮನೆಯ ವಿಳಾಸವನ್ನು 'ಮಲ್ಲೇಶ್ವರಂ ಬಾರ್ ಹಿಂಭಾಗ' ಎಂದು ಬರೆಯುತ್ತಿದ್ದೆ. ಈ ಮನೆಗೆ ಸ.ಸ. ಮಾಳವಾಡ ದಂಪತಿಗಳು, ಆ.ನೇ. ಉಪಾಧ್ಯೆ, ಪುತಿನ, ದೇಜಗೌ, ರಂ.ಶ್ರೀ. ಮುಗಳಿ, ಟಿ.ಕೆ. ತುಂಕೋಳರು, ಬಿ. ಶಿವಮೂರ್ತಿ ಶಾಸ್ತ್ರಿ- ಮೊದಲಾದವರೆಲ್ಲ ಸಲೀಸಾಗಿ ಬರುತ್ತಿದ್ದರು.

ಆದರೆ ಮೂವರು ಹಿರಿಯರು, ಮಾಸ್ತಿ, ರಾಜರತ್ನಂ, ತಿರುಮಲೆ ಶ್ರೀನಿವಾಸಾಚಾರ್ಯ ಒಟ್ಟಿಗೆ ಬಂದದ್ದು ನನಗೆ, ಕಮಲಾ ಹಂಪನಾಗೆ ಹಿಡಸಲಾಗದಷ್ಟು ಹಿಗ್ಗು, ಮತ್ತು ಸಂಕೋಚ; ಪ್ರೀತಿ ಗೌರವಗಳಿಂದ ಬರಮಾಡಿಕೊಂಡೆವು. ಮಾಸ್ತಿಯವರು 'ನಾಗರಾಜಯ್ಯಾ, ನಿಮ್ ಮನೇ ವಿಳಾಸದಲ್ಲಿ ಮಲ್ಲೇಶ್ವರಂ ಬಾರ್ ಹಿಂಭಾಗದಲ್ಲಿ ಅನ್ನೊಭಾಗ ಇರುವುದು ಬೇಡ' ಅಂತ ಸೂಚಿಸಿದರು. ನನಗೆ ತುಂಬಾ ನಾಚಿಗೆ ಆಯಿತು, ಲಜ್ಜಾನ್ವಿತನಾದೆ, 'ಆಗಲಿ ಸಾರ್' ಎಂದು ಮೆಲ್ಲಗೆ ಉಸುರಿದೆ. ಆಮೇಲೆ ಅವರು ಮಾತು ಮುಂದುವರಿಸಿದರು 'ನಾಗರಾಜಯ್ಯ, ನಾವೆಲ್ಲಾ ಮುಖ್ಯವಾಗಿ ಇಲ್ಲಿಗೆ ಬಂದಿರೋದು ಹೇಳ್ತೀನಿ. ನೀವು ನಾವು ಹೇಳುವ ಕೆಲಸಕ್ಕೆ ಇಲ್ಲಾ ಅಂತ ಅನ್ನಬಾರದು. ಜೀವನ ಪತ್ರಿಕೆ ಕಷ್ಟದಲ್ಲಿದೆ. ನೀವು ಅದರ ಸಂಪಾದಕರಾಗಿ ಪತ್ರಿಕೆ ನಿಲ್ಲದ ಹಾಗೆ ನೋಡಿಕೊಳ್ಳಬೇಕು. ಶರ್ಮಾಜಿಯವರಿಗೆ (ಸಿದ್ದವನಹಳ್ಳಿ ಕೃಷ್ಣ ಶರ್ಮ) ಆರೋಗ್ಯ ತಪ್ಪಿ ಹಾಸಿಗೆ ಹಿಡಿದಿದ್ದಾರೆ..' ನಾನು ಸಂತೋಷಾಘಾತ ಚಕಿತನಾದೆ. ಮಾಸ್ತಿಯವರ

ರಾಜರತ್ನಂ ಅವರ ಮಾತಿಗೆ ಪ್ರತಿ ಹೇಳುವುದು ನನಗೆ ಕಷ್ಟ, ಒಪ್ಪಿದೆ. 1969ರ ಜನವರಿಯಿಂದ ಆರೇಳು ವರ್ಷ ಪತ್ರಿಕೆ ನಡಸಿದೆ. ಮಾಸ್ತಿಯವರು ಜನವರಿ (1969) ಸಂಚಿಕೆಯಲ್ಲಿ 'ಅರಿಕೆ' ಎಂದು ಹೀಗೆ ಬರೆದಿದ್ದಾರೆ : ಈ ತಿಂಗಳಿಂದ ಪತ್ರಿಕೆಯ ಹೊಸ ಸಂಪುಟ ಆರಂಭ ಆಗುತ್ತಿದೆ. ಈಗ ನಮ್ಮೆಲ್ಲರ ಪ್ರಾರ್ಥನೆಯ ಮೇರೆ ಸದ್ಯಕ್ಕೆ ಶ್ರೀ ಹಂಪ. ನಾಗರಾಜಯ್ಯನವರು ಸಂಪಾದಕತ್ವವನ್ನು ವಹಿಸಿಕೊಂಡಿದ್ದಾರೆ (ಸಹಿ) ಮಾಸ್ತಿ ವೆಂಕಟೇಶ ಅಯ್ಯಂಗಾರ್, (೧೮-೧೨-೧೯೬೮). ಮಾಸ್ತಿಯವರನ್ನು ಕುರಿತು ನಾನು ಬರೆದಿರುವ 'ನೆನಪಿನಂಗಳದಲ್ಲಿ ಮಾಸ್ತಿ' (೧೯೯೩) ಎಂಬ ಪುಸ್ತಕದಲ್ಲಿ ಈ ಸಂಗತಿ ದಾಖಲಾಗಿದೆ.

ದ.ರಾ. ಬೇಂದ್ರೆ ನನಗೆ ಅಚ್ಚು ಮೆಚ್ಚಿನ ಕವಿಗಳಲ್ಲೊಬ್ಬರು; ೧೯೫೮ರಿಂದಲೂ ಅವರ ನಿಕಟವಾದ ಪರಿಚಯ ಭಾಗ್ಯ. ಲಕ್ಕುಂಡಿ, ಗದಗ ಸ್ಥಳಗಳನ್ನು ೧೯೫೮ರಲ್ಲಿ ನನಗೆ ತೋರಿಸಿದ ಕವಿಕುಲಲಲಾಮ ಬೇಂದ್ರೆಯವರೊಂದಿಗೆ ವರ್ಷದಿಂದ ವರ್ಷಕ್ಕೆ ಪರಿಚಯ ಕೆನೆಕಟ್ಟಿತು. ಅವರೊಂದಿಗೆ ನಾನು ಕಳೆದ ದಿನಗಳನ್ನೂ, ಪಡೆದ ಅನುಭವ ಪಾಠಗಳನ್ನೂ ನಿವೇದಿಸ ತೊಡಗಿದರೆ ಅದೊಂದು ಪುಸ್ತಕವಾದೀತು. ಪುಸ್ತಕ ಬರೆಯಲು ಈಗ ಪುರುಸೊತ್ತು ಇಲ್ಲ; ಕೇವಲ ಎರಡು ಪ್ರಸಂಗಗಳ ಸ್ವಾರಸ್ಯವನ್ನು ಬಿಚ್ಚಳಿಸುತ್ತೇನೆ.

ಒಮ್ಮೆ ಬೇಂದ್ರೆಯವರು ಧಾರವಾಡದಿಂದ ಬೆಂಗಳೂರಿಗೆ ಬೆಳಗಾವಿ-ಬೆಂಗಳೂರು ಲಕ್ಸುರಿ ಬಸ್‌ನಲ್ಲಿ ಪ್ರಯಾಣ ಹೊರಟ್ಟಿದ್ದರು. ನಾನು ಮತ್ತು ಕಮಲಾ ರಿಜಿಸ್ಟರ್ಡ್ ಮದುವೆಯಾದ ಹಚ್ಚಹೊಸತು; ನಾವಿನ್ನೂ ಹಸಿಮೈ ದಂಪತಿಗಳು. ನಾನಾಗ ದಾವಣಗೆರೆ ಧ.ರಾ.ಮ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕ. ನಾನು-ಕಮಲಾ ಇಬ್ಬರೂ ದಾವಣಗೆರೆಯಲ್ಲಿ, ಬೇಂದ್ರೆಯವರು ಇದ್ದ ಬಸ್ಸಿಗೆ ಹತ್ತಿದೆವು. ನಾವಿಬ್ಬರೂ (ನಾವಿಬ್ಬರೇ) ಇಬ್ಬರು ಕುಳಿತು ಕೊಳ್ಳುವ ಸೀಟಿನಲ್ಲಿ ಅಕ್ಕಪಕ್ಕಕುಳಿತು, ದಾವಣಗೆರೆಯಿಂದ ಬೆಂಗಳೂರಿನವರೆಗೆ ಪ್ರಿಯವಾಗಿ ಹರಟುತ್ತ ಪಯಣಿಸುವ ಇರಾದೆ ನಮ್ಮದು. ಆದರೆ ನಮ್ಮನ್ನು ನೋಡಿದ ಬೇಂದ್ರೆಯವರು ನಮ್ಮ ಜಾಗಕ್ಕೆ ಎದ್ದು ಬಂದರು. ನಮ್ಮಿಬ್ಬರ ನಡುವೆ ಕುಳಿತರು. ಮಾತನಾಡಲು ತೊಡಗಿದರು. ಅವರು ಮಾತನಾಡುವುದನ್ನು ನಿಲ್ಲಿಸಿದ್ದು ಬೆಂಗಳೂರು ಬಸ್ ನಿಲ್ದಾಣ ಬಂದಾಗ! ಬೇಂದ್ರೆಯವರು ಇರುವಾಗ ಒನ್ ವೇ ಟ್ರಾಫಿಕ್, ಅವರದೇ ಮಾತು. ನಮಗೆ ಪ್ರೇಮಸಲ್ಲಾಪ ತಪ್ಪಿತು, ನಿಜ; ಆದರೆ ಸಾಹಿತ್ಯ ಸಲ್ಲಾಪದಲ್ಲಿ, ಕವಿವಾಣಿಯಲ್ಲಿ ಆನಂದಿಸುವುದು ಸಾಧ್ಯವಾಯಿತು.

ಬೇಂದ್ರೆಯವರಿಗೆ ಜ್ಞಾನಪೀಠ ಪ್ರಶಸ್ತಿ ಬಂದ ಪ್ರಯುಕ್ತ ಸಾರ್ವಜನಿಕ ಸನ್ಮಾನ ಸಮಾರಂಭವನ್ನು ಬಾಪೂಜಿ ಶಿಕ್ಷಣ ಸಂಸ್ಥೆಯ ಎಲ್ಲ ಕಾಲೇಜುಗಳ ಸಂಯುಕ್ತ ಆಶ್ರಯದಲ್ಲಿ ದಾವಣಗೆರೆಯಲ್ಲಿ ಏರ್ಪಾಟು ಮಾಡಿದರು. ೧೫-೨೦ ಸಾವಿರ ಪ್ರೇಕ್ಷಕರು ಕಿಕ್ಕಿರಿದ ಬೃಹತ್ ಸಭೆ. ನಾನು ಸಭಾಧ್ಯಕ್ಷ. ಸೂಜಿ ಎತ್ತಿ ಹಾಕಿದರೂ ಸದ್ದು ಕೇಳುವಂಥ ನಿಶ್ಶಬ್ದ. ಬೇಂದ್ರೆಯವರೊಂದಿಗೆ ನನ್ನ ಮೆರೆವಣಿಗೆ, ಹೂವಿನೊಡನೆ ನಾರೂ ಕಬ್ಬಿಗರ ಸಗ್ಗಕ್ಕೆ ಲಗ್ಗೆ ಹಾಕಿತ್ತು. ಅಷ್ಟುದೊಡ್ಡ ಸಮೂಹ ಸೇರಿದ ಮೇಲೆ ಎಲ್ಲ ತರಹೆಯ ಜನರೂ ಇರುತ್ತಾರೆ. ಯಾರೊ ಒಬ್ಬರು ಮೂಲೆಯೊಂದರಿಂದ ಶಿಳ್ಳು ಹಾಕಿದರು. ಅಷ್ಟಕ್ಕೆ ಬೇಂದ್ರೆ ತಾಳ್ಮೆ

ಕಳೆದುಕೊಂಡರು. ಯದ್ವಾತದ್ವಾ ಮಾತನಾಡಿದರು. ಅದರಲ್ಲಿ ಅವರ ಎಂದಿನ ಪ್ರತಿಭಾವಿಲಾಸದ ಮಿಂಚಿನ ಸಂಚಾರ ಇರಲಿಲ್ಲ. ತೀರ ಸಪ್ಪೆಯಾದ ಒಣ ಮಾತು ಹತ್ತು ನಿಮಿಷ ಒದರಿ ಕುಳಿತರು. ಸಾಹಿತ್ಯ ಸಂಜೆಯಲ್ಲಿ ವಿರಸದ ಹೊಗೆ ಕವಿಯಿತು.

ಕಾರ್ಯಕರ್ತರು ನನ್ನ ದುಂಬಾಲು ಬಿದ್ದರು. ಕಿವಿಯಲ್ಲಿ ತಮ್ಮ ಆತಂಕವನ್ನು ಉಸುರಿದರು. ಸಹಸ್ರಾರು ರೂಪಾಯಿ ಖರ್ಚುಮಾಡಿ ಏರ್ಪಾಟು ಮಾಡಿದ ಸಭೆ ಹತ್ತು ನಿಮಿಷದಲ್ಲಿ ಕೋಪಕಲುಷಿತವಾಗಿ ಬರಖಾಸ್ತಾಗುವುದು ಕಸಿವಿಸಿಯೆನಿಸಿತ್ತು. ಈ ಪರಿಸ್ಥಿತಿ ನನಗೆ ಅರ್ಥವಾಯಿತು. ಒಂದು ಗಂಟೆ ಕಾಲವಾದರೂ ಮಾತನಾಡಲು ಸೂಚಿಸಿದರು. ದಾವಣಗೆರೆ ನನಗೆ ಚಿರಪರಿಚಿತ ನಗರ. ಊರಿನ ತುಂಬ ಪರಿಚಯದ ಮಂದಿ. ಸಾವಿರಾರು ಜನ ನನ್ನ ಹಳೆಯ ವಿದ್ಯಾರ್ಥಿಗಳಿದ್ದರು. ಸಾಹಿತ್ಯದಲ್ಲಿ ಆಸಕ್ತಿಯೊಂದಿಗೆ ಪರಿಶ್ರಮವೂ ಇದ್ದ ರಸಿಕರು ತುಂಬಿತುಳುಕುವ ಇಂತಹ ಸಭೆಗಳು ಸೇರುವುದೂ ಸಿಗುವುದೂ ಅಪರೂಪ. ಎಂಥ ಗಹನ ಗಂಭೀರ ವಿಚಾರಗಳನ್ನೂ ಸುಲಭವಾಗಿ ಅರ್ಥೈಸಿ ಪ್ರತಿಕ್ರಿಯಿಸಬಲ್ಲ ದಾವಣಗೆರೆಯ ರಸಿಕ ಸಹೃದಯರು ಅಲ್ಲಿ ಜಮಾಯಿಸಿದ್ದರು.

ಇಂಥ ಸುವರ್ಣ ಅವಕಾಶವನ್ನು ಸೂರೆ ಮಾಡಲು ನಿರ್ಧರಿಸಿದೆ. ಕಾವ್ಯ ಮೀಮಾಂಸೆಯನ್ನು ಓದಿದ್ದು ಅಂದು ಸಾರ್ಥಕವಾಯಿತು. ಬೇಂದ್ರೆಯವರ ಹತ್ತಾರು ಕವಿತೆಗಳು ಹೃದಯಸ್ಥವಾಗಿದ್ದುವು. ಅಕ್ಷರಶಃ ನೂರಾರು ಕಾವ್ಯ ನಿರ್ಭರ ಸುಂದರ ಸಾಲುಗಳು ನಾಲಗೆಯ ಆಭರಣವಾಗಿದ್ದುವು; ನೆನಪಿನ ಅನುಕೂಲವಿತ್ತು. ಬೇಂದ್ರೆ ಹೇಗೆ ಸಮಕಾಲೀನ ಸಾಹಿತ್ಯದ ಸಂದರ್ಭದಲ್ಲಿ ಇಡೀ ಇಂಡಿಯಾದ ಒಬ್ಬ ಮಹತ್ವದ ಕವಿ ಎಂಬುದನ್ನು ಅವರ ಕವಿತೆಗಳಿಂದ ಪುಂಖಾನುಪುಂಖವಾಗಿ ಉದಾಹರಿಸುತ್ತ ಮಾಡಿದ ಉಪನ್ಯಾಸ ಪರಿಣಾಮಕಾರಿಯಾಗಿ ಮೂಡಿಬಂದಿತು. ಆ ಯಶಸ್ವಿಭಾಷಣದ ಶ್ರೇಯಸ್ಸು ಪೂರ್ತಿ ಭಾವಗೀತೆಯ ಸಾಮ್ರಾಟ ಬೇಂದ್ರೆಗೇ ಸಲ್ಲಬೇಕು. ಯಾಕೆಂದರೆ ಓಜಸ್ವಿಯಾದ ಅವರ ಕವಿತೆಗಳ ದೃಷ್ಟಾಂತದಿಂದಲೇ ಅವರ ಸೃಷ್ಟಿಶಕ್ತಿಯ ವಿಲಾಸ ವೈಭವಗಳನ್ನು ಸಭೆಗೆ ಪರಿಚಯಿಸಿದೆ. ಕನ್ನಡ ಸಾಹಿತ್ಯಕ್ಕೆ ಎಂತಹ ದೊಡ್ಡ ಕವಿಯು ಕೊಡುಗೆ ಸಿಕ್ಕಿದೆ, ಅಂದು ಸನ್ಮಾನಿತರಾಗುತ್ತಿರುವ ಬೇಂದ್ರೆ ಹೇಗೆ ಶತಮಾನದ ಶಿಖರಪ್ರಾಯ ಕವಿ- ಎಂದು ವಿವರಣೆ ನೀಡಿದೆ. ಸೇರಿದ್ದ ಜನ ತಮ್ಮ ಮೈಮನಗಳಲ್ಲಿ ಬೇಂದ್ರೆಯ ಕಾವ್ಯದ ಹಿರಿಮೆಯನ್ನು ತುಂಬಿಕೊಂಡು ಹೋದರು. ಹಾಗೆ ಮಾಡಬೇಕಾದದ್ದು ಸಭಾಧ್ಯಕ್ಷನೂ ಸಾಹಿತ್ಯದ ಗಂಭೀರ ವಿದ್ಯಾರ್ಥಿಯೂ ಆದ ನನ್ನ ಕರ್ತವ್ಯವಾಗಿತ್ತು. ಆ ಕಾರ್ಯಕ್ರಮಕ್ಕೆ ನನ್ನನ್ನು ಒಪ್ಪಿಸಿ ಬೆಂಗಳೂರಿಂದ ಕರೆದುಕೊಂಡು ಹೋಗಿದ್ದ. ಪ್ರೊ. ಬಿ.ವಿ. ವೀರಭದ್ರಪ್ಪನವರು ಬಲು ಸಂತೋಷಪಟ್ಟರು.



ನಮ್ಮ ಕನ್ನಡ ನಾಡಿನ ಉದ್ದಗಲಗಳಲ್ಲಿ ಸುಮಾರು ನಾನ್ನೂರಕ್ಕೂ ಹೆಚ್ಚು ಶಾಲಾ ಕಾಲೇಜುಗಳಲ್ಲಿ ಕಮಲಾ-ಹಂಪನಾ ದಂಪತಿಗಲು ಮಾತನಾಡಿದ್ದೇವೆ. ಕರೆಯುವವರು ತೋರುತ್ತಿದ್ದ ಅವ್ಯಾಜ ಆರ್ದ್ರ ಅಂತಃಕರಣಕ್ಕೆ ಬಹುಬೇಗ, ಸುಲಭವಾಗಿ ಕರಗಿ ಹೋಗುತ್ತಿದ್ದೆವು. ಇದು ನಮ್ಮಿಬ್ಬರ ದೊಡ್ಡ ದೌರ್ಬಲ್ಯ; ಇಂದಿಗೂ ಆ ದುರ್ಬಲತೆಯನ್ನು ಪೂರ್ತಿ

ದಾಟುವುದಾಗಿಲ್ಲ. ನಮ್ಮನ್ನು ನಾವು ಗೆದ್ದು ಕೊಳ್ಳುವುದಕ್ಕೆ ಆಗಲಿಲ್ಲವೆಂದು ತೀರ ಪಶ್ಚಾತ್ತಾಪ ಪಡಬೇಕಾದ ಪ್ರಮೇಯವೂ ಇಲ್ಲ. ಆಯುಷ್ಯದುದ್ದಕ್ಕೂ ಇದುವರೆಗೆ ಹೀಗೆ ಭಾಷಣಗಳಲ್ಲಿ ಸಮಯ ಕಳೆದುದರಿಂದ ಬಂದ ಭಾಗ್ಯವೂ ಇಲ್ಲ, ನಷ್ಟವೂ ಇಲ್ಲ. ಈ ಓಡಾಟ ಕಡಮೆ ಮಾಡಿದ್ದರೆ ಇನ್ನಷ್ಟು ಓದಬಹುದಿತ್ತು, ಇನ್ನೂ ಗಟ್ಟಿ ಮುಟ್ಟಾಗಿ ಇರಬಹುದಿತ್ತು. ಹೊತ್ತಿಗೆ ಸರಿಯಾಗಿ ಅನ್ನಾಹಾರ ನಿದ್ರೆಗಳಿಲ್ಲದೆ ಪ್ರಯಾಣದ ಆಯಾಸ ಸೇರಿ ಬಳಲಿ ಬೆಂಡಾದದ್ದು ದಿಟ.

ಭಾಷಣಗಳಲ್ಲೂ ಮಜ ಇತ್ತು, ಮೋಜು ಇತ್ತು, ಮೋದವಿತ್ತು. ನಮಗೆ ತಿಳಿದದ್ದನ್ನು, ಅದು ಕಡಮೆಯೇ ಆದರೂ, ತಿಳಿಸುವುದರಲ್ಲಿ ಮುದವಿತ್ತು ಭಾಷಣ ಕಲೆಯಲ್ಲಿ ನಾವಿಬ್ಬರೂ ತಕ್ಕಮಟ್ಟಿಗೆ ಹೆಸರು ಗಳಿಸಿದೆವು. ದಯಾ ದಾಕ್ಷಿಣ್ಯ, ಪರಿಚಯದ ಮುಲಾಜು ಗಳಿಗೆ ಸಿಕ್ಕು ವಿಧಿಯಿಲ್ಲದೆ ದೂರದ ಊರಿಗೆ ಹೋದಾಗ ಅಲ್ಲಿನ ವ್ಯವಸ್ಥಾಪಕರು ತೋರುತ್ತಿದ್ದ ಅಕೃತಕ ವರ್ತನೆ, ಗೌರವ ಮರ್ಯಾದೆ, ಊಟೋಪಚಾರ-ಇವು ಮರೆಯಲಾಗದ ಅನುಭವ. ಸಭೆ ಸಮಾರಂಭ ಏರ್ಪಾಟು ಎಕ್ಕಾಸದ ಕೆಲಸ. ಹಲವರ ಸಹಾಯ ಬಯಸುವ thankless job. ಸಂಘ ಸಂಸ್ಥೆಗಳವರು ಶಾಲಾ ಕಾಲೇಜುಗಳವರು ವರ್ಷದಲ್ಲಿ ಕೆಲವನ್ನಾದರೂ ನಿರ್ದಿಷ್ಟ ಕಾರ್ಯಕ್ರಮ ಮಾಡಬೇಕು. ಆ ವ್ಯವಸ್ಥೆಯ ಇಕ್ಕಟ್ಟು ಬಿಕ್ಕಟ್ಟುಗಳಲ್ಲಿ ಸಿಕ್ಕಿ-ವಿಲಿವಿಲಿ ಒದ್ದಾಡುತ್ತಿರುತ್ತಾರೆ. ಸಮಾರಂಭವನ್ನು ಯಶಸ್ವಿಯಾಗಿ ಮುಗಿಸಿದರೆ ಅಲ್ಲಿಗೆ ದೊಡ್ಡ ಯಾಗ ಮಾಡಿದಂತೆ, ನಿರಾಳವಾಗಿ ಉಸಿರಾಡಬಹುದು. ಸಾರ್ವಜನಿಕ ಜವಾಬುದಾರಿಗಳೇ ಹಾಗೆ, ಇಂತಹ ಹೊಣೆಗಳನ್ನು ವಿದ್ಯಾರ್ಥಿಯಂದಿನಿಂದಲೂ ಎರಡೂ ಹೆಗಲಲ್ಲಿ ಹೊತ್ತು ಬೆಳೆದ ನನಗೆ (ಅದರಿಂದಲೇ ಎತ್ತರ ಬೆಳೆಯಲಾಗದೆ ಕುಳ್ಳನಾಗಿರುವುದು) ಕಾರ್ಯಕರ್ತರ ಕಷ್ಟಗಳು ತಿಳಿಯುತ್ತಿದ್ದುವು..

ಹೀಗೊಮ್ಮೆ 1962ರಲ್ಲಿ ಕೂಲಂಬಿ-ಕುಂದೂರು ಶಾಲಾ ವಾರ್ಷಿಕೋತ್ಸವಕ್ಕೆ ಹೋಗಿದ್ದೆವು; ಮೈಸೂರು ವಿಶ್ವವಿದ್ಯಾಲಯ ಪ್ರಸಾರಾಂಗದ ವತಿಯಿಂದ ಕಮಲಾ-ಹಂಪನಾ ದಂಪತಿಗಳು ಮುಖ್ಯ ಅತಿಥಿಗಳು, ಎರಡೂರಿನ ನಡುವೆ ಶಾಲಾ ಕಟ್ಟಡ. ಸುತ್ತ ಜೋಳದ ಹೊಲ. ಎರಡು ಊರುಗಳೂ ಶಾಲೆಯಿಂದ ಒಂದೊಂದು ಕಿಲೋಮೀಟರು ದೂರ. ಬಸ್ಸು ಪ್ರಯಾಣ ರಷ್ಷಿನಲ್ಲಿ ಮೈಕೈ ಜಖಂ ಮಾಡಿಕೊಂಡು ಹುಶ್ಶಪ್ಪಾ ಎಂದು ಏದುಸಿರು ಬಿಡುತ್ತ ಸುಸ್ತಾಗಿ ಸಮಾರಂಭದ ಹೊತ್ತಿಗೆ ಸಾಯಂಕಾಲ ಶಾಲೆ ತಲುಪಿದೆವು. ತುಂಬ ಹಸಿವು, ಶಾಲೆಯ ಆ ಕಡೆ, ಈ ಕಡೆ, ಯಾವ ಕಡೆಯೂ ಮನೆಗಳಿಲ್ಲ, ಅಂಗಡಿಯಿಲ್ಲ. ಇರುವುದೊಂದೇ ದೊಡ್ಡ ಶಾಲೆ. ಶಾಲಾ ವಾರ್ಷಿಕೋತ್ಸವಕ್ಕೆ ವಿದ್ಯಾರ್ಥಿಗಳೂ, ಅಧ್ಯಾಪಕರೂ ಅಲ್ಲದೆ ಎರಡೂ ಗ್ರಾಮಗಳ ಕೆಲವು ಗಣ್ಯರೂ ಪೋಷಕರೂ ಬಂದಿದ್ದರು. ಮುಖ ಕೈಕಾಲು ತೊಳೆದು ಕೊಳ್ಳಲು ಬಿಂದಿಗೆ ತಂಬಿಗೆ ನೀರು ಕೊಟ್ಟರು.

ಕೈಕಾಲು ಮುಖ ತೊಳೆದು ಸಿದ್ಧರಾದೆವು. ಬೊಗಸೆಯಗಲ ಕಾಗದದಲ್ಲಿ ಮಂಡಕ್ಕಿ ಖಾರ, ಮೆಣಸಿನ ಕಾಯಿ ಬಜ್ಜಿ, ಚಾ ಕೊಟ್ಟರು. ಅಷ್ಟೇ ಉಪಾಹಾರ ; ನಾವು ಸತಿಪತಿಗಳೊಂದಾಗಿ ಮುಖನೋಡಿಕೊಂಡೆವು. ಸಮಾರಂಭ ನಡೆಯಿತು. ಜನ ಹೋದ ಮೇಲೆ ರಾತ್ರಿ ಹತ್ತು ಗಂಟೆಗೆ ಊಟ ಆಯಿತು. ಶಾಲೆಯಲ್ಲೇ ಒಂದು ಕೊಠಡಿಯಲ್ಲಿ ನಾಲ್ಕು ಮೇಜುಗಳನ್ನು ಕೂಡಿಸಿದರು.

ಅದರ ಮೇಲೆ ಚಾಪೆ  ಜಮಖಾನ ಹಾಸಿದರು : "ದೂರದಿಂದ ಬಂದಿದ್ದೀರಿ, ದಣಿವೂ ಆಗಿರಬೇಕು. ನೀವು ಹಾಯಾಗಿ ಮಲಗಿ ಸಾರ್, ನಾಳೆ ಬಂದು ನೋಡ್ತೀವಿ" ಎಂದು ವ್ಯವಸ್ಥಾಪಕರು ಹೇಳಿ ಹೊರಟು ನಿಂತರು.

ಇಡೀ ಶಾಲೆಯಲ್ಲಿ ನಾವಿಬ್ಬರೇ ಮಲಗುವುದೆಂದಾಯಿತು. 'ಏನೂ ಹೆದರಿಕೆಯಿಲ್ಲ ತಾನೆ' -ಎಂದು ಕೇಳಿದೆವು. ಛೆ ಛೆ ! ನಿರ್ಭಯವಾಗಿ ಮಲಗಿರಿ. ಯಾವ ತೊಂದರೆಯೂ ಇಲ್ಲ. ಕಳ್ಳಕಾಕರ ಭಯವಿಲ್ಲ. ಹಾವುಗಳ ಕಾಟ ಸ್ವಲ್ಪ ಇದೆ. ಹೊರಗೆ ರಾತ್ರಿ ಕಾವಲುಗಾರ ಇದಾನೆ. ಗಟ್ಟಿಯಾಗಿ ಕೂಗಿದರೆ ಬರುತ್ತಾನೆ. ನಮಸ್ಕಾರ ಸಾರ್, ನಮಸ್ಕಾರ ಮೇಡಂ. ನಾಳೆ ಬಂದು ನೋಡುತೀವಿ' ಅಂತ ಕೈ ಮುಗಿದು ಹೊರಟೇ ಬಿಟ್ಟರು. ಆ ಮಹಾರಾಯ ಕೈ ಮುಗಿಯದೆ ಹಾಗೆಯೇ ಸುಮ್ಮನೇ ಹೋಗಿದ್ದರೂ ಸಾಕಿತ್ತು, ಆದರೆ ಹಾವುಗಳ ಕಾಟ ಮಾತ್ರ ಇದೆ ಅಂತ ಭೀತಿಯ ಕಾಳುಗಳನ್ನು ಎದೆಯ ಹೊಲದಲ್ಲಿ ಬಿತ್ತಿದ್ದ; ಇನ್ನೆಲ್ಲಿಯ ನಿದ್ದೆ ! ಎಂಬಂತೆ ಫಜೀತಿಗೆ ಕಾರಣವಾಯಿತು.

ಹೊರಗಡೆ ಹುಣ್ಣಿಮೆಯ ಬೆಳುದಿಂಗಳ ರಾತ್ರಿ; ಹಾಲುಗಡಲಿನಾ ಸೀವಿ, ಚಂದ್ರಮನೆ ಸಾಮಿ. ನಾವೂ ನವವಿವಾಹಿತರು, ಮದುವೆಯಾದ ವರ್ಷ. ಹನಿಮೂನ್ ಅನುಭವಿಸಲು ಹೇಳಿ ಮಾಡಿಸಿದ ಜಾಗ; ಪಕ್ಕದಲ್ಲಿ ನನ್ನ ಹನಿ, ಹೊರಗಡೆ ಮೂನು-ಹನಿಮೂನು ಸರಿಯೇ ಸರಿ. ದೊಡ್ಡ ಶಾಲೆಯಲ್ಲಿ  ನಾವಿಬ್ಬರೇ ರಾಜ-ರಾಣಿಯರಂತೆ ಇರೋಣವೆಂದರೆ ಆ ಮಾಸ್ತರರು ಹಾವುಗಳನ್ನು ಬಿಟ್ಟು ಹೋದರು. ಮಧು ಮಂಚಕೆ ಬಾ ಮದು ಮಗಳೇ-ಎಂದು ಕುವೆಂಪು ಅವರ 'ಚಂದ್ರಮಂಚಕೆ ಬಾ ಚಕೋರಿ' ಕವಿತಾ ಸಂಕಲನ ನೆನಪಾದರೂ ಗಂಟಲಿಂದ ಸಾಲುಗಳು ಹೊರಬರಲೊಲ್ಲವು. ಮಡದಿ ಕಮಲೆಯನ್ನು ಮೆಲ್ಲಗೆ ಮೇಜುಗಳ ಮೇಲೆ ಚಾಪೆ ಹಾಸಗೆಯಲ್ಲಿ ಕೂಡಿಸಿದೆ. ಕೊಠಡಿಯೇ ನಮ್ಮ ಅಂತಃಪುರ. ನಡುವಿರುಳು ಸಮಯ. ನೀರವತೆ ಆವರಿಸಿತ್ತು. ಕೊಠಡಿಗೆ ದೊಡ್ಡ ಕಿಟಕಿಗಳು. ಆದರಾಚೆ ಜೋಳದ ಹೊಲಗಳು. ಬೆಳುದಿಂಗಳಲ್ಲಿ ಜೋಳದ ತೆನೆಗಳು ಗಾಳಿಗೆ ಬಳುಕಿ ಬಾಗಿದರೆ ಸಾಕು. ಹಾವಿನ ಹೆಡೆಗಳು ಆಡಿಸಿದಂತೆ ಭಾಸವಾಗುತ್ತಿತ್ತು. ನೀನೆನಗೆ, ನಾನಿನಗೆ ಹಾಲಾಗುವಾ ಜೇನಾಗುವಾ, ಇನ್ನೂ ಏನೇನೊ ಆಗುವಾ-ಎಂದು ಹೇಳುತ್ತ ನಾವು ಕಮಲಾ ಪ್ರಣಯಗೀತೆಗಳ ಗಾನಲಹರಿಯಲ್ಲಿ ತೇಲುವುದು ಆ ದಿನ ರಾತ್ರಿ ಸಾಧ್ಯವೇ ಆಗಲಿಲ್ಲ. ನಮ್ಮಿಬ್ಬರಿಗೂ ಕಣ್ಣಲ್ಲೇ ಬೆಳಗಾಯಿತು. ಬೆಳಗ್ಗೆ 6 1/2 ಗಂಟೆಗೆ ಫ್ಲಾಸ್ಕಿನಲ್ಲಿ ಬಿಸಿ ಟೀ ತಂದು ಕೊಟ್ಟರು. ಆಮೇಲೆ 8 ಗಂಟೆಗೆ ಶಿರಾ ಉಪ್ಮಾ ಚೌ ಚೌ ಭಾತ್ - ಚಹಾ ಬಂತು. ಮೂರು ನಾಲ್ಕು ಜನ ಅಧ್ಯಾಪಕರು ಬಂದರು, ಹತ್ತು ಹದಿನೈದು ಜನ ವಿದ್ಯಾರ್ಥಿಗಳೂ ಬಂದರು. ಬಸ್ಸಿಗೆ ಕೂಡಿಸಿದರು. ದಾವಣಗೆರೆಗೆ ಕಳಿಸಿದರು. ಪ್ರೀತಿಗೌರವದಲ್ಲಿ ಅರೆಕೊರೆಗಳಿರಲಿಲ್ಲ.

☆ ☆ ☆

ಮಹಾರಾಜ ಕಾಲೇಜು ಹಾಸ್ಟೆಲಲ್ಲಿದ್ದ ದಿನಗಳು ಪದೇ ಪದೇ ನೆನಪಾಗುತ್ತವೆ. ೧೯೫೮-೫೯ರಲ್ಲಿ ಎಂ.ಎ. ಪರೀಕ್ಷೆ ಸಮೀಪವಾಗುತ್ತಿತ್ತು. ನನ್ನ ರೂಂಮೇಟ್ ಎಸ್.ಬಿ.ಮುದ್ದಪ್ಪ ಮಹಾ ಪ್ರಾಮಾಣಿಕ; ಜಾಣ ಶ್ರದ್ಧಾಳು, ರ್‍ಯಾಂಕ್ ವಿದ್ಯಾರ್ಥಿ (ಕರ್ನಾಟಕ ಸರ್ಕಾರದ ಮುಖ್ಯ

ಕಾರ್ಯದರ್ಶಿಯಾಗಿ ೧೯೬೫ರಲ್ಲಿ ನಿವೃತ್ತರಾದರು), ನಾನು ಚರ್ಮವ್ಯಾಧಿಗೆ ಒಳಗಾದ ವರ್ಷವದು -೧೯೫೪. ಸಣ್ಣಗೆ ಕುತ್ತಿಗೆ ಹತ್ತಿರ ರಾಗಿ ಕಾಳಿನಷ್ಟು ಕಾಣಿಸಿಕೊಂಡ ಹುಳು ಕಡ್ಡಿ (ಇಸಬು) ಇಡಿಯ ದೇಹಕ್ಕೆ ಹರಡಿಕೊಂಡಿತು. ದತ್ತೂರಗಿಡದ ಹಳದಿರಸ ಹಚ್ಚಿದರೆ ಈ ಗಜಕರ್ಣ (ಹುಳಕಡ್ಡಿ) ಹೋಗುತ್ತದೆಂದು, ಅದು ಒಳ್ಳೆಯ ನಾಟಿ ವೈದ್ಯವೆಂದೂ, ಯಾರೋ ಜತೆಯ ಹುಡುಗರು ಹೇಳಿದರು.

ಸರಿ, ಅದನ್ನು ನಂಬಿದೆ. ಸೈಕಾಲಜಿ ಎಂ.ಎ. ವಿದ್ಯಾರ್ಥಿ ಪಿ. ಅಬ್ದುಲ್ ಮಜೀದ್ ಖಾನ್ ಮತ್ತು ನಾನು ಬೆಳಗ್ಗೆ ಬೇಗ ಏಳುವುದು, ಬ್ಲೇಡು ಹಿಡಿಯುವುದು, ದತ್ತೂರಗಿಡಗಳಿಗೆ ಬೇಟೆ ಆಡುವುದು. ಹಸಿರು ಗಿಡಕ್ಕೆ ಬ್ಲೇಡು ತಾಗುವುದೆ ತಡ ಹಳದಿ ರಸ ಒಸರುವುದು. ಅದನ್ನು ಬೆರಳಿಂದ ಬಳಿದು ನನ್ನ ಕುತ್ತಿಗೆಗೆ ಸವರುವುದು ಗೆಳೆಯ ಮಜೀದ್ ಖಾನನ ಕೆಲಸ. ಮಿಡಿದೊಡೆ ತನಿಗಬ್ಬುರಸಂ ಬಿಡುವುವು ಎಂದು ಆದಿಕವಿ ಪಂಪನು ತನ್ನ ವಿಕ್ರಮಾರ್ಜುನ ವಿಜಯ ಕಾವ್ಯದಲ್ಲಿ ಕುರುಜಾಂಗಣದ ಪ್ರಕೃತಿ ವರ್ಣನೆ ಮಾಡಿದ್ದಾರೆ. ನಮ್ಮ ಹಂಪಸಂದ್ರ ಹಳ್ಳಿಯ ಕಬ್ಬಿನ ತೋಟದಲ್ಲಿ ರಸದಾಳಿ ಪಟಾವಳಿ ಕಬ್ಬು ಹಾಗೆ ಮಿಡಿದರೆ ಕಬ್ಬಿನ ಹಾಲು ಸುರಿಯುತ್ತಿತ್ತು. ಆದರೆ ಈಗ ಇಲ್ಲಿ ಕಾಲೇಜಿನ ಸುತ್ತ ಬಯಲಾಂಗಣದಲ್ಲಿ ಮಿತ್ರ. ಪಿ. ಅಬ್ದುಲ್ ಮಜೀದ್ ಖಾನನು ದತ್ತೂರ ಗಿಡಗಳಿಗೆ ಬ್ಲೇಡಿಂದ ಮಿಡಿದೊಡನೆ ಹಳದಿರಸ, ಹರಿದ್ವರ್ಣಂ ಬಿಡುತ್ತಿತ್ತು. ಅದನ್ನು ಹಚ್ಚಿ ನನ್ನ ತುರಿ ಕಜ್ಜಿವಾಸಿ ಆಗಲೇ ಇಲ್ಲ. ಗುಣ ಕಾಣುವ ಬದಲು ಕಜ್ಜಿ ಕೆರಳಿ ಅರಳಿದಂತೆ'ನನ್ನ ಮೈಯೆಲ್ಲಾ ಕಜ್ಜಿಮಯವಾಯಿತು.

ದತ್ತೂರ ಗಿಡದ ರಸ ತಾಕಿ ನನ್ನ ಬಟ್ಟೆ ಬರೆಗಳಲ್ಲಿ ಕಲೆಯಾಗಿ ನವ್ಯ ಕಲೆಬಿಡಿಸಿದ ವಸ್ತ್ರಗಳಾದುವು. ಬರಬರುತ್ತಾ, ಕಾದ ಎಣ್ಣೆಯಲ್ಲಿ ಬಿಟ್ಟ ಗೋಧಿ ಹಿಟ್ಟಿನ ಉಂಡೆಗಳು ಪೂರಿಗಳಾಗಿ ಊದುವಂತೆ, ನಾನು ಊದಿ ಹೋದೆ. ಮೈಯೆಲ್ಲಾ ಬಾತು ಬಾಸುಂಡೆ ಆಯಿತು. ದಿನ ಬೆಳಗಾದರೆ, ಗಾಳಿ ತುಂಬಿದ ಬೆಲೂನು ಆಗಿ ಕಾಣುತ್ತಿದ್ದೆ. ಮೈಸೂರು ಅರಮನೆ ಜಯಚಾಮರಾಜ ಒಡೆಯರೂ, ಅವರ ಮಗ ಶ್ರೀಕಂಠದತ್ತ ಒಡೆಯರೂ ಸ್ಥೂಲ ಕಾಯರಾಗಿ ಜಗತ್ ಪ್ರಸಿದ್ಧರು. ಅವರು ವಿಚಾರವಾಗಿ ಗೌರವದಿಂದ His Highness the ruler of Mysore ಎಂಬಂತೆ, ಹಾಸ್ಯದಿಂದ, His Heaviness the road roller of Mysore ಎಂದೂ ಕರೆಯುತ್ತಿದ್ದರು. ನಾನೂ ಡುಮ್ಮ ಆಗಿ ಬೊಜ್ಜು ಬೆಳೆದ ಹಾಗೆ ಕಾಣುತ್ತಿದ್ದೆ. ಮೈಸೂರಲ್ಲೇ ಇದ್ದೆ. ಮಹಾರಾಜ ಕಾಲೇಜಿನ ಹುಡುಗ. ಮಹಾರಾಜಾ ಕಾಲೇಜು ಹಾಸ್ಟೆಲ್ ವಾಸಿಯೂ ಆಗಿದ್ದೆ. ಅದರಿಂದ ನಾನು ದೈಹಿಕವಾಗಿ ಅರಮನೆಯ ರಾಜಪರಿವಾದೊಂದಿಗೆ ಸ್ಪರ್ಧಿಸುತ್ತಿದ್ದೇನೆಂದು ಜತೆಗಾರರು ಚುಡಾಯಿಸತೊಡಗಿದರು. ನಾನು ದೊಡ್ಡಮನಸ್ಸು ಮಾಡಿ ಇನ್ನೂ ಸ್ವಲ್ಪ ಬೊಜ್ಜು ಹೆಚ್ಚಿಸಿಕೊಂಡು, ಶ್ರೀಮದ್ ಯುವರಾಜ ನಾಗರಾಜ ಒಡೆಯರ್ ಆಗಬೇಕೆಂದು ಹಾರೈಸಿದರು. ಅಲ್ಲದೆ ಹಾಸ್ಟೆಲಿನ ಮತ್ತು ಕಾಲೇಜಿನ ಯುವವೃಂದದಲ್ಲಿ ಈ ಕೀರ್ತಿಗೆ ಪಾತ್ರನಾಗಲು ಬೇಕಾದ ರಾಜರೋಗ ಇರುವ ಏಕಮೇವಾದ್ವಿತೀಯ ಪುಣ್ಯ ಪುರುಷನೂ ಬಾಗ್ಯಶಾಲಿಯೂ ನಾನೊಬ್ಬನೇ ಎಂದೂ ನನ್ನನ್ನು ಕಟಕಿ ವ್ಯಂಗ್ಯ ವಿನೋದಗಳಿಂದ ಹಾಡಿ ಹೊಗಳಿ ಹೊನ್ನಶೂಲಕ್ಕೆ ಏರಿಸುತ್ತಿದ್ದರು. ಯುವ ವೃಂದದ ಆ ಬೆಕ್ಕುಗಳಿಗೆ ಚೆಲ್ಲಾಟ.

ಅವರ ನಮೂನೆ ಇಲಿ (ಹೆಗ್ಗಣ!) ಆಗಿದ್ದ, ನನಗೆ ಪ್ರಾಣಸಂಕಟ. ಇಂಥ ಚರ್ಮರೋಗದಿಂದ ಬಿಡುಗಡೆಗಾಗಿ ಚಡಪಡಿಸುತ್ತಿದ್ದೆ.

ಅನೇಕ ಆತ್ಮೀಯ ಗೆಳೆಯರು ನನಗೆ ಚರ್ಮದ ಅಂಟು ಜಾಡ್ಯ ಬಂದಿದೆಯೆಂದು ಹತ್ತಿರ ಬರುತ್ತಿರಲಿಲ್ಲ. ತುಂಬಾ ಗಳಸ್ಯಕಂಠಸ್ಯ ಸ್ನೇಹಿತರೆಂದು ತಿಳಿದಿದ್ದವರಲ್ಲಿ ಯಾರೂ ಬಳಿಗೂ ಬರಲಿಲ್ಲ. ನೆಚ್ಚಿನ ನೇಹಿಗರು ಹತ್ತಿರ ಬರದಿದ್ದರೂ ಪರೀಕ್ಷೆಯ ದಿನಗಳು ಹತ್ತಿರ ಬಂದುವು. ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಡಾ. ಜಯರಾಮನ್ ದೊಡ್ಡ ಸ್ಕಿನ್ ಸ್ಪೆಷಲಿಸ್ಟ್‌ರು, ಅವರನ್ನು ಕಾಣುವುದೊಂದೇ ಬಿಡುಗಡೆಯ ದಾರಿ ಎಂದು ಯಾರೋ ಹೇಳಿದರು. ಆ ವೈದ್ಯರನ್ನು ಕಂಡೆ. ಅವರು ನನ್ನ ಪಾಲಿಗೆ ಪ್ರತ್ಯಕ್ಷ ಅಶ್ವಿನಿ ದೇವತೆಯೇ ಆದರು. ಲೆಕ್ಟ ಕ್ಯಾಲಮೈನ್ ಲೋಷನ್ ದಿನಕ್ಕೆ ಎರಡು ಸಲ ತೆಳ್ಳಗೆ ಹಚ್ಚಿಕೊಳ್ಳಲು ಹೇಳಿದರು. ಒಂದು ಆಯಿಂಟ್ ಮೆಂಟ್ ಹಚ್ಚಲು ತಿಳಿಸಿದರು. ಎರಡನ್ನೂ ಬಳಸಿದೆ. ಬಟ್ಟೆಯೂ ಗಲೀಜು ಆಗಲಿಲ್ಲ. ಒಂದೇ ವಾರದಲ್ಲಿ ಗುಣಮುಖನಾದೆ. ಗಾಳಿ ತುಂಬಿದ ಬೆಲೂನಿನಂತೆ ಊದಿದ್ದ ನಾನು, ಪಂಕ್ಚರ್ ಆದ ಬೆಲೂನಿನಂತಾದೆ. ಒಂದು ಪದರ ಚರ್ಮ ಹೋಯಿತು. ಹಾವು ಪೊರೆ ಕಳಚಿದಂತೆ ಆಯಿತು. ಹೇಗೂ ನನ್ನ ಹೆಸರು ನಾಗರಾಜ. ಸರ್ಪವು ಋತುಮಾನಕ್ಕೊಮ್ಮೆ ಒಂದು ವರಿಸೆ ಪೊರೆಯನ್ನು ಕಳಚಿ ಬಿಡುವುದನ್ನು ಹಳ್ಳಿಯ ಹೊಲಗಳಲ್ಲಿ, ಹುತ್ತಗಳ ಹತ್ತಿರ, ಬಾವಿಯ ಪೊಟರೆಗಳಲ್ಲಿ ನೋಡಿದ್ದೆ. ಈಗ ನಾನೇ ಪೊರೆ ಬಿಟ್ಟ ಹಾವಾಗಿದ್ದೆ. ದೇಹಕ್ಕೆ ಹೊಸ ಹೊಳಪೂಬಂದಿತ್ತು, ಮನಸ್ಸಿಗೆ ಹೊಸ ಹುರುಪು ಮೂಡಿತು. ನಿರಾಶೆಯ ಮೋಡ ಚದುರಿತು. ಈ ಹಂಪನಿಗೆ ಇಷ್ಟೆಲ್ಲಾ ರಣರಂಪ ಆಗುವಷ್ಟರಲ್ಲಿ ಎಂ.ಎ. ಪರೀಕ್ಷೆ ಬಂದೇ ಬಿಟ್ಟಿತು. ಹಾಲ್ಟಿಕೇಟನ್ನೂ ಕೊಟ್ಟರು. ಆದರೆ ನಾನು ಕಜ್ಜಿಯ ಗಜಿಬಿಜಿಯಲ್ಲೇ ಬಿಸಿ ಆಗಿದ್ದೆ. ಎರಡು ತಿಂಗಳಲ್ಲಿ ಒಂದು ಪುಸ್ತಕವನ್ನೂ ಓದಿರಲಿಲ್ಲ. ಪ್ರಥಮ ರ‍್ಯಾಂಕು ಪಡೆಯುವ ಕನಸು ಹಗಲುಗನಸಾಗಿತ್ತು. ಅದರಿಂದ ಈ ಸಲ ಎಂ.ಎ. ಪರೀಕ್ಷೆಗೆ ಕುಳಿತುಕೊಳ್ಳಕೂಡದೆಂದು ಗಟ್ಟಿ ಮನಸ್ಸು ಮಾಡಿದೆ. ಮುಂದಿನ ವರ್ಷ ಎಂ.ಎ. ಗೆ ಕಟ್ಟಿ, ತುಂಬಾ ಚೆನ್ನಾಗಿ ಓದಿ, ಪ್ರಥಮ ರ‍್ಯಾಂಕು, ಸುವರ್ಣ ಪದಕ ಪಡೆಯಬೇಕೆಂದು ನಿರ್ಧರಿಸಿದೆ. ನನ್ನ ತೀರ್ಮಾನವನ್ನು ಕೊಠಡಿ ಪಾಟಿ (ರೂಂಮೇಟ್) ಎಸ್.ಬಿ. ಮುದ್ದಪ್ಪನಿಗೆ ತಿಳಿಸಿದೆ. ಆತ ಮಹಾ ಪ್ರತಿಭಾಶಾಲಿ ಮತ್ತು ಮುನ್ನೋಟ ಇದ್ದಾತ. ನನ್ನ ತೀರ್ಮಾನದಲ್ಲಿರುವುದು ಕೇವಲ ಭಾವುಕತೆಯ ಅವಿವೇಕವೆಂದು ಬುದ್ಧಿ ಹೇಳಿದ.

ಅಷ್ಟರಲ್ಲಿ ಹಾಸ್ಟೆಲಿನ ವಾರ್ಡನರಾಗಿದ್ದ ಉ.ಕಾ. ಸುಬ್ಬರಾಯಾಚಾರ್ಯರಿಗೂ ಸುದ್ದಿ ಹೋಯಿತು. ಆ (ಮಾಜಿ) ವಾರ್ಡನರು ನನ್ನ ಕೋಣೆಗೆ ಎರಡು ಮೂರು ದಿನ ಒಂದೇ ಸಮನೆ ಬಂದರು. ಹಡೆದ ತಾಯಿ ತಂದೆ ತಮ್ಮ ಮಕ್ಕಳಿಗೆ ಹೇಳುವಂತೆ, ಕರುಳಿನ ಕಕ್ಕುಲಾತಿಯಿಂದ ತಿಳಿವಳಿಕೆ ಕೊಟ್ಟರು. ಅವರ ಕಳಕಳಿಯ ಲೋಕಜ್ಞಾನಕ್ಕೆ ಈಗಲೂ ಎದೆ ತುಂಬಿ ಬರುತ್ತದೆ. ಮುದ್ದಪ್ಪನಂತೂ ಒಡ ಹುಟ್ಟಿದವನಂತೆ ನನಗೆ ಬೆನ್ನಾಗಿ ನಿಂತರು. ಪರೀಕ್ಷೆಯ ದಿನಗಳಲ್ಲಿ ನಾನು ಎಲ್ಲಿ ಚಕ್ಕರ್ ಹೊಡೆಯುತ್ತೇನೊ ಎಂದು, ನನ್ನ ಕಾವಲಿಗೆ ಇರುವಂತೆ ಹಾಸ್ಟೆಲು ಮೇಟುಗಳಿಗೆ ಉ.ಕಾ.ಸುಬ್ಬರಾಯಾಚಾರ್ಯರು ತಿಳಿಸಿದರು. ಹಾಗೆ ನನಗೆ ಶ್ರೀರಕ್ಷೆಯಾಗಿ ನಿಂತವರು ಅಬ್ದುಲ್ ಮಜೀದ್ ಖಾನ್, ದಾವಣಗೆರೆಯ ನಾಗರಾಜ್ ಮತ್ತು

ಪ್ರಭಾಕರ್ ಇಜಂತ್‌ಕರ್. ಇವರೆಲ್ಲರ ಉಪಕಾರವನ್ನು ಉಸಿರು ಇರುವ ತನಕ, ತಂಪು ಹೊತ್ತಿನಲ್ಲಿ ನೆನೆಯುತ್ತೇನೆ. ಇವರು ಕಷ್ಟಕಾಲದಲ್ಲಿ ಊರೆಗೋಲಾಗಿ ಒದಗಿ ಬಂದವರು.

ಇಂತಹ ಅನಿಮಿತ್ತ ಬಂಧುಗಳ ನೆರವಿನಿಂದ, ಉತ್ತೇಜನದಿಂದ ಎಂ.ಎ. ಪರೀಕ್ಷೆಗೆ ಹಾಜರಾದೆ. ಒಲ್ಲದ ಮನಸ್ಸಿನಿಂದ ಪರೀಕ್ಷೆಯ ಗುಹೆ ಹೊಕ್ಕಿದ್ದೆ. ಯುದ್ಧ ಕಾಲದಲ್ಲಿ ಶಸ್ತ್ರಾಭ್ಯಾಸವೂ ಸಮರ್ಪಕವಾಗಿ ಆಗಿರಲಿಲ್ಲ ಎಂಬ ಅಳುಕು. ಬಿ.ಎ. (ಆನರ್ಸ್) ತರಗತಿಯಲ್ಲಿ ಪ್ರಥಮ ಶ್ರೇಣಿ ಬಂದಿರಲಿಲ್ಲ. ಎಂ.ಎ. ನಲ್ಲಾದರೂ ಮೊತ್ತ ಮೊದಲಿಗನೆನಿಸಿಕೊಳ್ಳಬೇಕೆಂದು ವರ್ಷದ ಆರಂಭದಿಂದಲೂ ಚೆನ್ನಾಗಿಯೇ ಓದಿದ್ದೆ. ಬೆನ್ನಹಿಂದೆ ಒಳ್ಳೆಯ ಗುರುಗಳಿದ್ದರು. ಕಣ್ಣಮುಂದೆ ದೊಡ್ಡಗುರಿಯಿತ್ತು; ಸೊಗಸಾದ ಪಾಠ ಪ್ರವಚನ ಕೇಳಿದ್ದೆ. ಅದೆಲ್ಲದರ ಫಲವಾಗಿ ಪ್ರಶ್ನಪತ್ರಿಕೆ ಏನೇನೂ ಕಷ್ಟವೆನಿಸಲಿಲ್ಲ. ತೃಪ್ತಿಯಾಗುವಂತೆ ಉತ್ತರಿಸಿದೆ. ಫಸ್ಟ್‌ಕ್ಲಾಸ್ ಬಂತು!



೧೯೯೦ರಲ್ಲಿ ಕಮಲಾ-ಹಂಪನಾ ದಂಪತಿಗಳು ಕೆನಡ, ಅಮೆರಿಕ, ಇಂಗ್ಲೆಂಡ್ ದೇಶಗಳಲ್ಲಿ ಪ್ರವಾಸ ಮಾಡಿದೆವು. ಟೊರೆಂಟೊ ಮಹಾನಗರದ ಅದೇ ಹೆಸರಿನ ವಿಶ್ವವಿದ್ಯಾಲಯದ ವತಿಯಿಂದ ಏರ್ಪಾಟಾಗಿದ್ದ ಅಂತಾರಾಷ್ಟ್ರೀಯ ಸಮಾವೇಶದಲ್ಲಿ ಭಾಗವಹಿಸಿದೆವು, ಪ್ರಬಂಧವನ್ನು ಮಂಡಿಸಿದೆವು. ಅಲ್ಲಿಂದ ಅಮೆರಿಕ ಸೇರುವ ಮೊದಲು ನಯಾಗರ ಜಲಪಾತ ನೋಡಿ ಬಲುಸಂತೋಷವಾಯಿತು: ಇದು ಸಾಧ್ಯವಾದದ್ದು ಭುವನೇಂದ್ರ ಕುಮಾರ್ ದಂಪತಿಗಳ ಉದಾರತೆಯಿಂದ. ನಯಾಗರ ಜಲಪಾತ ನೋಡುತ್ತ ಇಡೀ ದಿನ ಕಳೆದೆವು. ನೂರಾರು ಜನ ಕನ್ನಡಿಗರು ನಮ್ಮ ಹಾಗೆ ಅಂದು ಅಲ್ಲಿಗೆ ಬಂದಿದ್ದರು; ಇದೇನು ಕೆನಡವೊ, ಕನ್ನಡವೊ ಎಂದು ಅನುಮಾನವಾಯಿತು.

ಇಂತಹುದೇ ಇನ್ನೊಂದು ಪ್ರಸಂಗ, ಕನ್ನಡಿಗರು ಹೆಮ್ಮೆ ಪಡುವಂತಹುದು ಟೊರೆಂಟೊದಲ್ಲಿ ನಡೆಯಿತು. ಸಾಂಗಲಿಯಿಂದ ಕೆನಡಕ್ಕೆ ಹೋಗಿ ಬಹಳ ಹಿಂದೆಯೇ ನೆಲಸಿದ ಒಂದು ಕುಟುಂಬಕ್ಕೆ ಸೇರಿದ ವಾಸು ಎಂಬುವರು ಅವರ ಮನೆಗೆ ಊಟಕ್ಕೆ ಕರೆದಿದ್ದರು. ಅವರು 'ನಮ್ಮ ಮನೆಯಲ್ಲಿ ಬಹಳ ವರ್ಷಗಳಿಂದ ಒಂದು ಓಲೆಗರಿ ಗ್ರಂಥವಿದೆ. ನಮಗೆ ಯಾರಿಗೂ ಅದನ್ನು ಓದಲು ಬರಲಿಲ್ಲ. ಎಷ್ಟೋ ಜನಕ್ಕೆ ತೋರಿಸಿದೆವು. ಯಾರೂ ಓದಲಾಗಿಲ್ಲ. ನೀವು ಓದಲು ಸಾಧ್ಯವೆ?' ಎಂದು ಸಹಜವಾಗಿ ಕೇಳಿದರು. ಹಸ್ತಪ್ರತಿ ತಂದಿಟ್ಟರು. ನಾನು ಕಳೆದ ೪೦ ವರ್ಷಗಳಿಂದ ನೂರಾರು ಊರು ಕೇರಿ ಹಳ್ಳಿ ಮನೆಗಳಲ್ಲಿ ಸಾವಿರಾರು ಹಸ್ತಪ್ರತಿಗಳನ್ನು ನೋಡಿದ್ದೇನೆ. ಆದರೆ ಸಾಂಗಲಿಯಿಂದ ಬಂದು, ಕೆನಡದ ಟೊರೆಂಟೊ ನಗರದಲ್ಲಿ ನೆಲಸಿದ ಈ ಮನೆಯವರು ತಾಳೆಗರಿ ಹಸ್ತಪ್ರತಿಯನ್ನು ಸಂರಕ್ಷಿಸಿದಷ್ಟು ಸೊಗಸಾಗಿ ಬೇರೆಲ್ಲೂ ಕಾಪಾಡಿರಲಿಲ್ಲ. ಪ್ರತಿಯೊಂದು ತಾಳೆಗರಿಯನ್ನೂ ಎರಡು ತುಂಬ ತೆಳುಗಾಜಿನ ಪಟ್ಟಿಗಳ ನಡುವೆ ಅಚ್ಚುಕಟ್ಟಾಗಿ ಇಟ್ಟಿದ್ದರು, ತಾಳೆಗರಿಗಳು ಗರ್ಭಸುಖಿಯಾಗಿದ್ದುವು. ಸುಮಾರು ೧೪ನೆಯ ಶತಮಾನದ ಕನ್ನಡಲಿಪಿ. ಮುದ್ದಾದ ಅಕ್ಷರಗಳು. ಲೀಲಾಜಾಲವಾಗಿ ಓದಿದೆ. ಮನೆಯವರಿಗೆಲ್ಲಾ ಆನಂದವೋ ಆನಂದ. ಇಡೀ ಕುಟುಂಬ ಹತ್ತಿರ ಬಂದು ಕುಳಿತರು. ಆ

ಓಲೆಗರಿ ಗ್ರಂಥದ ಬಗ್ಗೆ ವಿವರಿಸಬೇಕೆಂದರು. ಅದು ಜನ್ನ ಕವಿಯ ಅನಂತನಾಥಪುರಾಣ. ಕವಿಯನ್ನೂ, ಕಾವ್ಯವನ್ನೂ ಕುರಿತು ಮಾತನಾಡಿದೆ. ಡಾ. ಕಮಲಾ ಹಂಪನಾ ಕೆಲವು ಪದ್ಯಗಳನ್ನು ಓದಿ ಅರ್ಥ ಹೇಳಿದರು, ಸ್ವಾರಸ್ಯ ತಿಳಿಸಿದರು. ಹೀಗೆ ಕೆನಡಾ ನಾಡು ನಿಜಕ್ಕೂ ಅಂದು ಕನ್ನಡ ನಾಡಾಗಿತ್ತು. ಆ ಮನೆಯವರು, ನೆರೆಹೊರೆಯವರ ದೃಷ್ಟಿಯಲ್ಲಿ ಕಮಲಾ-ಹಂಪನಾ great scholars from India ಆಗಿದ್ದೆವು ! ಜನ್ನ ಕವಿಯ ಹಸ್ತಪ್ರತಿಯ ಓದಿನಿಂದಾಗಿ ನಮಗೆ ವಿಶೇಷ ಮರ್ಯಾದೆ ದೊರೆಯಿತು.

ವಿದೇಶ ಪ್ರವಾಸವನ್ನು ಪ್ರತ್ಯೇಕ ಪುಸ್ತಕವಾಗಿಯೇ ಡಾ. ಕಮಲಾ ಹಂಪನಾ ಬರೆಯಲಿದ್ದಾರೆ. ಆದರೆ ಇನ್ನೆರಡು ಪ್ರಸಂಗಗಳನ್ನು ಮಾತ್ರ ದಾಖಲಿಸುವ ಬಯಕೆಯಾಗುತ್ತಿದೆ. ಇಂಗ್ಲೆಂಡಿನಲ್ಲಿದ್ದಾಗ ಮತ್ತು ಅಮೆರಿಕದಲ್ಲಿದ್ದಾಗ ಅನೇಕ ವಿಶ್ವವಿದ್ಯಾನಿಲಯಗಳನ್ನು, ಅವರಲ್ಲಿಯೂ ಆಕ್ಸ್‌ಫರ್ಡ್, ಕೇಂಬ್ರಿಜ್, ಲಂಡನ್ ಮತ್ತು ಕ್ಯಾಲಿಫೋರ್ನಿಯಾ· ವಿಶ್ವವಿದ್ಯಾನಿಲಯಗಳನ್ನೂ ವರ್ಡ್ಸ್‌ವರ್ಥ್, ಷೇಕ್ಸ್‌ಪಿಯರ್ ಇವರುಗಳ ಜನ್ಮಸ್ಥಳ; ಲಾರ್ಡ್ಸ್, ಲೀಡ್ಸ್ ಮತ್ತು ವಿಂಬಲ್ಡನ್ ಕ್ರೀಡಾಂಗಣಗಳನ್ನೂ ನೋಡಿದ್ದು- ಹಿತಾನುಭವವಾದುವು. ಗೆಳೆಯ ಕೃಷ್ಣಮೂರ್ತಿಯವರ ಕಾರಿನಲ್ಲಿ ಪಯಣಿಸುತ್ತಿರುವಾಗಲೇ ಫೋನಿನ ಮೂಲಕ ದೂರದ ಊರುಗಳಿಗೆ ಮಾತನಾಡಿದ್ದು ಆ ಬಗೆಯ ಪ್ರಥಮಾನುಭವ. ದೂರವಾಣಿಯ ವಿಚಾರ ಬಂದಾಗ ಮರೆಯದೆ ಹೇಳಬೇಕಾದ ಮಾತೆಂದರೆ ನನ್ನ ತಾಯಿಯನ್ನು ಕುರಿತದ್ದು. ನ್ಯೂಯಾರ್ಕ್ ನಗರದಲ್ಲಿ ಡಾ. ರಂಗಯ್ಯ ಅವರ ಮನೆಯಿಂ ಒಂದು ದಿನ ನಾನು-ಕಮಲಾ ಬೆಂಗಳೂರಿನ ನಮ್ಮ ಮನೆಗೆ ಫೋನು ಮಾಡಿದೆವು. ನನ್ನ ತಾಯಿ ಫೋನು ಹಿಡಿದು ಮಾತಾಡತೊಡಗಿದರು. ನ್ಯೂಯಾರ್ಕಿನಿಂದ ಬೆಂಗಳೂರಿಗೆ ಎಷ್ಟುದೂರ ಏನು ಎತ್ತ ಎಂಬುದೆಲ್ಲಾ ಮರೆತು ಹೋಯಿತು. ನನ್ನ ತಾಯಿ ನನ್ನನ್ನು ರಾಜಾ ಎಂದೇ ಕರೆಯುವುದು. 'ರಾಜ ಹೇಗಿದ್ದೀಯಪ್ಪಾ....' ಎಂದು ಅತಿಭಾವ ಪರವಶರಾಗಿ ಮಾತನಾಡಿ ನಮ್ಮನ್ನೂ ಭಾವುಕರಾಗಿಸಿದರು. ಫೋನಿನ ಮೂಲಕ ಮಾತಾಡಿ ಸುಖಿಪಟ್ಟ ಅಮೃತ ಕ್ಷಣಗಳಲ್ಲಿ ಇದೊಂದು ಎಂದು ಒಪ್ಪಿಕೊಳ್ಳುತ್ತೇನೆ.

ಅಮೆರಿಕದಲ್ಲಿ ಎರಡು ತಿಂಗಳು ಸಂಚರಿಸಿದರೂ ಒಂದು ಡಾಲರ್ ಕೂಡ ಖರ್ಚಾಗಿರಲಿಲ್ಲ. ಬಂಧುಗಳು, ಗೆಳೆಯರು, ಅಭಿಮಾನಿ ಶಿಷ್ಯರು ನಮ್ಮನ್ನು ಸಂರಕ್ಷಿಸಿದ್ದರು. ಹೋಟೆಲಿನಲ್ಲಿ ಕೆನಡಲ್ಲಾಗಲಿ. ಇಂಗ್ಲೆಂಡಿನಲ್ಲಾಗಲಿ ಎಲ್ಲೂ ಒಂದು ದಿನವೂ ತಂಗಿರಲಿಲ್ಲ. ಹೋಟೆಲಿನಲ್ಲಿ ಒಂದೆರಡು ದಿನ ಇರಬೇಕೆಂದು ಮಾತಾಡಿಕೊಂಡೆವು. ಸೇಂಟ್ ಲೂಯಿಸ್‌ನಲ್ಲಿ ಕನ್ನಡ ಸಮಾವೇಶವಾಯಿತು, ಹರಿಹರೇಶ್ವರ-ನಾಗಲಕ್ಷ್ಮಿ ದಂಪತಿಗಳ ನೇತೃತ್ವದಲ್ಲಿ. ಸುಮಾರು ಐನೂರು ಜನ, ಸಾವಿರಾರು ಮೈಲಿಗಳಿಂದ, ಕನ್ನಡಿಗರು ಸೇರಿದ್ದರು. ನಾನು 1963-64ರಲ್ಲಿ ಶಿವಮೊಗ್ಗ ಸಹ್ಯಾದ್ರಿ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದಾಗಿನ ಶಿಷ್ಯರಲ್ಲಿ ಒಬ್ಬರಾದ, ಈಗ ಅಮೆರಿಕದಲ್ಲಿ ಪ್ರಸಿದ್ಧ ವೈದ್ಯರಾಗಿರುವ ಡಾ.ಹಾ.ಮು. ಪಟೇಲ (ಶೂದ್ರ ಎಂಬ ಕವನ ಸಂಕಲನ ಬರೆದಿದ್ದಾರೆ) ಕೂಡ ಬಂದಿದ್ದರು; ಸೈಂಟ್ ಲೂಯಿಸಿಂದ ಸಾವಿರ ಮೈಲಿಗೂ ದೂರದ ಮಹಾನಗರದಲ್ಲಿ ಅವರಿದ್ದುದ್ದು. ನಮ್ಮನ್ನೂ ಅವರ ಊರಿಗೆ ಬರುವಂತೆ ಒತ್ತಾಯಿಸಿದರು.

ಆದರೆ ನಾವು ಆರ್ಲೆಂಡೊಗೆ ವಿಮಾನದ ಟಿಕೆಟ್ ಪಡೆದದ್ದು ಆಗಿತ್ತು. ಡಾ.ಎಚ್.ಎಮ್. ಪಟೇಲರು "ನೀವು ಎಲ್ಲಿ ಇಳಿದುಕೊಳ್ಳುತ್ತೀರಿ?" ಎಂದು ಕೇಳಿದರು. ನಾವು ಇಂಥ ಹೆಸರಿನ ಹೋಟೆಲಿಗೆ ಫೋನ್ ಮಾಡಿ ಒಂದು ರೂಂ ರಿಸರ್ವ್ ಮಾಡಿದ್ದೇವೆಂದು ಹೆಸರು ವಿಳಾಸ ತಿಳಿಸಿದೆವು..

ವಿಳಾಸ ಪಡೆದು ಅವರೇನೋ ಹೊರಟರು. ನಾವೂ ಕೂಡ ನಿಶ್ಚಿತವಾಗಿದ್ದ ವಿಮಾನದಲ್ಲಿ ಗಗನವಿಹಾರಿಗಳಾಗಿ ಪಯಣಿಸಿ ಆರ್ಲೊಂಡೋನಲ್ಲಿ ಇಳಿದೆವು. ಗೊತ್ತುಪಡಿಸಿಕೊಂಡಿದ್ದ Comfort-Inn ಹೋಟೆಲಿಗೆ ಹೋದೆವು. ಕೌಂಟರಿಗೆ ಹೋಗಿ ನಮ್ಮ ಹೆಸರು ಹೇಳಿ ರೂಂ ಯಾವುದೆಂದು ಕೇಳುತ್ತಿದ್ದಂತೆ ಅಲ್ಲಿದ್ದ ಸ್ವಾಗತಕಾರ್ತಿ 'Just wait, you have a fax message from Dr. H.M. Patel' ಎಂದು ಹೇಳಿ ತನ್ನ ಫ್ಯಾಕ್ಸ್‌ಯಂತ್ರದಿಂದ ಆ ಸಂದೇಶ ಪಟ್ಟಿಯನ್ನು ಅಚ್ಚು ಮಾಡಿ ತೆಗೆದುಕೊಟ್ಟ. ನಮಗೆ ಅಚ್ಚರಿಯೋ ಅಚ್ಚರಿ ! ಅದು ಡಾ.ಹಾ.ಮು ಪಟೇಲರು ಆ ಹೋಟೆಲಿನವರಿಗೆ ಕಳುಹಿಸಿದ ಸಂದೇಶದ ಪ್ರತಿ ಆಗಿತ್ತು. ಅದರಲ್ಲಿದ್ದುದೇನು? ಡಾ. ಪಟೇಲರು ಆ ಹೋಟೆಲಿನವರಿಗೆ ತಮ್ಮ ವಿಳಾಸ, ಬ್ಯಾಂಕ್ ಅಕೌಂಟ್ ಸಂಖ್ಯೆ, ಕ್ರೆಡಿಟ್ ಕಾರ್ಡ್ ಸಂಖ್ಯೆ-ಎಲ್ಲ ತಿಳಿಸಿ ತಮ್ಮ ಅತಿಥಿಗಳಾಗಿ ನಾವಿಬ್ಬರು ಆ ಹೋಟೆಲಿನಲ್ಲಿ ಉಳಿದುಕೊಳ್ಳಲಿರುವುದಾಗಿಯೂ ನಾವುಗಳ ಇರುವಷ್ಟು ದಿನ ನಮ್ಮ ಎಲ್ಲ ಜವಾಬ್ದಾರಿಯನ್ನೂ ನೋಡಿಕೊಂಡು, ಆ ಬಿಲ್ಲನ್ನು ಅವರ ಲೆಕ್ಕಕ್ಕೆ ಹಾಕಬೇಕೆಂದೂ, ನಮ್ಮಿಂದ ಏನೂ ಹಣ ತೆಗೆದುಕೊಳ್ಳಬಾರದೆಂದೂ ಹೋಟೆಲಿನವರಿಗೆ ತಿಳಿಸಿದ್ದರು !.

ನಾವು ಸಂತೋಷಾಶ್ಚರ್ಯಗಳಿಂದ ಮೂಕರಾದೆವು ! ಇದೆಲ್ಲಿಯ ಬಾಂಧವ್ಯ ! ಮೂರು ದಿನ ಆ ಹೋಟೇಲಿನಲ್ಲಿ ನಾವು ರಾಜ-ರಾಣಿಯರಂತೆ ಇದ್ದೆವು. ಬಹುಶಃ ಮುನ್ನೂರು ಡಾಲರ್ ಬಿಲ್ ಆಗಿರಬಹುದೇನೋ ! ನಮ್ಮಿಂದ ಒಂದು ಪೈಸಕೂಡ ಖರ್ಚಾಗಲಿಲ್ಲ. ಎಲ್ಲ ಪಟೇಲರ ಪ್ರೀತಿಯ ಕೊಡುಗೆ.

ನೆನೆಸಿಕೊಂಡಾಗಲೆಲ್ಲ ನಮಗೆ ಪುಳಕವಾಗುತ್ತದೆ. ಇಂಥ ಅದೆಷ್ಟೋ ಅಕ್ಕರೆಯ, ವೈಭವದ ಆದರ ಸತ್ಕಾರಗಳನ್ನು ನಮ್ಮ ಶಿಷ್ಯರುಗಳಿಂದ, ಗೆಳೆಯರಿಂದ, ಅಷ್ಟೇಕೆ, ಎಷ್ಟೋ ವೇಳೆ ನಮಗೆ ಪರಿಚಯವೇ ಇಲ್ಲದವರಿಂದಲೂ ಪಡೆದಿದ್ದೇವೆ. ಇಂಥ ಅವ್ಯಾಜ ಅಂತಃಕರಣದಲ್ಲಿ ಮಿಂದು, ಆ ಅಮೃತವನ್ನುಂಡು ನಾವು ಸುಖಿಗಳಾಗಿ ಬಾಳುತ್ತಿದ್ದೇವೆ. ನಮ್ಮ ಹಿರಿಯ ಕವಿಯೊಬ್ಬರ ವಾಣಿ ಸತ್ಯಸ್ಯ ಸತ್ಯವೆಂದು ಪ್ರತಿಕ್ಷಣವೂ ನಮಗೆ ಅನ್ನಿಸುತ್ತಿದೆ-ಕೊಡುವುದೇನು ಕೊಂಬುದೇನು, ಸ್ನೇಹ-ಪ್ರೀತಿ-ಪ್ರೇಮ. ಹಾಗೆಯೇ-ಸ್ವರ್ಗದಲಿ ಈ ಸ್ನೇಹ ದೊರೆವುದೇನು ?

ಅಮೇರಿಕೆಯಲ್ಲಿ ನಾವಿಬ್ಬರೂ ಎರಡು ವರ್ಷ ಓಡಾಡಿಕೊಂಡಿದ್ದರೂ ಕಾಸು ಖರ್ಚಾಗುತ್ತಿರಲಿಲ್ಲ. ಕುಡಿದ ನೀರು ಅಲುಗುತ್ತಿರಲಿಲ್ಲ. ಅಲ್ಲಿರುವ ನಮ್ಮ ವಿದ್ಯಾರ್ಥಿ, ಆತ್ಮೀಯರ ಬಳಗ ಅಷ್ಟು ದೊಡ್ಡದು. ಅವರಿಗೆ ನಮ್ಮ ನಮನ.



ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ಉದ್ಘಾಟಿಸುವ ಗೌರವವನ್ನು ಕೆಲವು ವರ್ಷಗಳಿಂದ ಕರ್ನಾಟಕದ ಮುಖ್ಯ ಮಂತ್ರಿಗಳಿಗೆ ಕೊಡಲಾಗುತ್ತಿದೆ. ಇದರಿಂದ ಲಾಭವೂ ಇಲ್ಲ, ನಷ್ಟವೂ ಇಲ್ಲ. ಒಂದು ಶಿಷ್ಟಾಚಾರವಾಗಷ್ಟೇ ಉಳಿದುಕೊಂಡು ಬಂದಿದೆ. ನಾನು ಕಸಾಪ ಅಧ್ಯಕ್ಷನಾಗಿದ್ದ ಅವಧಿಯಲ್ಲಿ ನಡೆದ ಸಮ್ಮೇಳನಗಳಲ್ಲಿ, ಶಿರಸಿ ಸಾಹಿತ್ಯ ಸಮ್ಮೇಳನಕ್ಕೆ ಮುಖ್ಯ ಮಂತ್ರಿಗಳು ತಪ್ಪಿ ಧರ್ಮಸ್ಥಳದ ಧರ್ಮಾಧಿಕಾರಿ ಡಾ.ಡಿ. ವೀರೇಂದ್ರ ಹೆಗ್ಗಡೆಯವರು ಉದ್ಘಾಟಿಸಿದರು.

ಮೂರು ಸಾಹಿತ್ಯ ಸಮ್ಮೇಳನಗಳನ್ನು ಒಂದರ ತರುವಾಯ ಒಂದು ಎಂದು ಉದ್ಘಾಟಿಸಿ ಹ್ಯಾಟ್ರಿಕ್‌ಗೆ ಪಾತ್ರರಾದವರು ಆರ್ ಗುಂಡೂರಾವ್. ಬೆಳಗಾವಿ ಸಾಹಿತ್ಯ ಸಮ್ಮೇಳನವನ್ನು ಡಿ. ದೇವರಾಜ ಅರಸು ಉದ್ಘಾಟಿಸುವ ಹಂತದಲ್ಲಿ ಅವರ ಮುಖ್ಯಮಂತ್ರಿತ್ವ ಹೊರಟು ಹೋಯಿತು, ಗುಂಡೂರಾವ್ ಮುಖ್ಯಮಂತ್ರಿ ಆದರು. ದೇವರಾಜ ಅರಸು ಸಮಾರೋಪಕ್ಕೆ ಆಗಮಿಸಿದರು, ಆ ಸ್ಥಿತ್ಯಂತರ ಪ್ರಸಂಗದ ಸ್ವಾರಸ್ಯವನ್ನು ಅನ್ಯತ್ರ ದಾಖಲಿಸಿದ್ದೇನೆ. ಅಂತೂ ಬೆಳಗಾವಿಯ ಭವ್ಯ ಸಾಹಿತ್ಯ ಸಮ್ಮೇಳನವನ್ನು ಆರ್. ಗುಂಡೂರಾವ್ ಉದ್ಘಾಟಿಸಿದರು. ವಾಗ್ ವೈಖರಿಯಿಂದ ವಿಶೇಷ ಗತ್ತಿನಿಂದ ನಿರರ್ಗಳವಾಗಿ ಗುಡುಗಿದರು. ಬೆಂಗಳೂರಲ್ಲಿ ಇನ್ನೊಂದು ಶ್ರೇಷ್ಠ ನಿವೇಶನವನ್ನು ಕ.ಸಾ.ಪ ಗೆ ೨೪ ಗಂಟೆಗಳಲ್ಲಿ ಮಂಜೂರು ಮಾಡುವುದಾಗಿ ಹೇಳಿ ಕರತಾಡನ ಗಿಟ್ಟಿಸಿದರು; ವರ್ಷಗಳಾದರೂ ಆ ಮಾತು ಈಡೇರಿಲಿಲ್ಲ. ಅದು ಬೇರೆಯೇ ಕಥೆ.

ಬೆಳಗಾವಿ ಸಮ್ಮೇಳನವನ್ನು ಉದ್ಘಾಟಿಸಿದವರೇ ಗುಂಡೂರಾಯರು ತುರ್ತಾದ ಬೇರೆ ಕೆಲಸವಿದೆ ಎಂದು ಹೇಳಿ ವೇದಿಕೆಯಿಂದ ನಿರ್ಗಮಿಸಿದರು. ಅವರ ಜತೆಗೆ ಬಂದಿದ್ದ ಪರಿವಾರದೇವತೆಗಳ ದೊಡ್ಡ ಹಿಂಡು ಕೂಡ, ಹಿಂಬಾಲಕರಾದುದರಿಂದ, ಮುಖ್ಯಮಂತ್ರಿಯನ್ನು ಹಿಂಬಾಲಿಸಿಕೊಂಡು ಹೊರಟೇ ಹೋದರು-ಲಾರಿಯ ಹಿಂದೆ ಧೂಳೂ ಹೋಯಿತು. ಅನಂತರ ಇದು ಪತ್ರಿಕೆಗಳಲ್ಲಿ ದೊಡ್ಡ ಟೀಕೆಗೂ ಗುರಿಯಾಯಿತು. ನನ್ನ ಮನಸ್ಸಿಗೂ ಕಸಿವಿಸಿ ಆಯಿತು. ಒಂದು ದಿನ ಬೆಂಗಳೂರಲ್ಲಿ ಅವರ ನಿವಾಸದಲ್ಲಿ ಊಟ ಮಾಡುತ್ತ ಪ್ರಸ್ತಾಪಿಸಿದೆ : ಸಾಹಿತ್ಯ ಸಮ್ಮೇಳನ ಪ್ರಮುಖ ಘಟನೆ, ಅದರ ಸಡಗರವನ್ನು ನಾಡಿನ ಮುಖ್ಯಮಂತ್ರಿ ಹಂಚಿಕೊಳ್ಳಲು ಸದವಕಾಶವಿದೆ, ಯಾವರಾಜ್ಯದ ಮುಖ್ಯ ಮಂತ್ರಿಯೇ ಆಗಲಿ, ಅವರು ಆ ರಾಜ್ಯದ ಸಾಹಿತ್ಯ ಸಂಸ್ಕೃತಿ ಕಲೆ ಪರಂಪರೆಗೆ ಗೌರವ ತೋರುವ, ಸ್ಪಂದಿಸುವ, ಪ್ರತಿಕ್ರಿಯಿಸುವ ಮಹತ್ವದ ಸಂದರ್ಭ ಸಾಹಿತ್ಯ ಸಮ್ಮೇಳನ, ಸಾಹಿತ್ಯ ವಲಯದ ಪ್ರವೃತ್ತಿಗಳನ್ನು ಅರಿಯಲೂ ಅದು ತಕ್ಕವೇದಿಕೆ- ಇತ್ಯಾದಿ ಅಂಶಗಳನ್ನು ಮನದಟ್ಟು ಮಾಡಿದೆ. ಸೂಕ್ಷ್ಮಗ್ರಾಹಿಯಾದ, ಚುರುಕು ಬುದ್ಧಿಯ ಗುಂಡೂರಾಯರಿಗೆ ವಿಚಾರ ಸರಣಿ ತುಂಬ ಹಿಡಿಸಿತು.

ಮುಂದೆ ಗುಂಡೂರಾವ್ ನಿಷ್ಕಲ್ಮಷ ಹೃದಯಿ, ಸ್ನೇಹಮಯಿ; ಬೆಳಗಾವಿಯ ಅನಂತರದ ಸಮ್ಮೇಳನ ಚಿಕ್ಕಮಗಳೂರಲ್ಲಿ. ಅಲ್ಲಿನ ಸಮಾರಂಭಕ್ಕೆ ನಿಗದಿತ ವೇಳೆಗಿಂತ ಮುಂಚೆಯೇ ಬಂದರು. ಸಮ್ಮೇಳನಾಧ್ಯಕ್ಷರು ಮೆರವಣಿಗೆ ಮುಗಿಸಿ ಬರುವವರೆಗೆ ಮುಕ್ಕಾಲು ಗಂಟೆ ಕಾದರು.

ಇದೀ ಉದ್ಘಾಟನಾ ಸಮಾರಂಭ ಪೂರ್ತಿ ಇದ್ದರು. ಆಮೇಲೆ ಕೂಡ ಊಟಕ್ಕೂ ಇರಬೇಕೆಂದೆ, ಒಪ್ಪಿ ಇದ್ದರು. ಊಟದ ವ್ಯವಸ್ಥೆಯನ್ನು ಅಗವ್ಯ (V.I.P) ರಿಗೆಂದು ಸಹೃದಯಿ ಸಾಹಿತ್ಯಪ್ರೇಮಿ ಎಂ. ಜೆ. ಕೋದಂಡರಾಮ ಶ್ರೇಷ್ಠಿ ಮನೆಯಲ್ಲಿ ಮಾಡಿದ್ದರು. ಭರ್ಜರಿ ಏರ್ಪಾಟು. ಭೋಜನಾನಂತರ ಎಲೆ ಅಡಕೆ ಹಾಕಿಕೊಳ್ಳಲು ಕುಳಿತೆವು. ಆಗ ಎಲ್ಲರ ಎದುರಲ್ಲೇ "ನಾಗರಾಜಯ್ಯ, ನಿಮಗೆ ಈಗ ಸಮಾಧಾನ ಆಯಿತೆ, ಬೆಳಗಾವಿ ನೋವು ಪರಿಹಾರ ಆಗಿದೆ ತಾನೆ?" ಎಂದು ನನ್ನ ಜೆನ್ನ ಮೇಲೆ ಕೈ ಹಾಕಿದರು. ಅವರ ಪಕ್ಕದಲ್ಲಿ ನಾನು ನಿಂತರೆ ಅಜಗಜಾಂತರ ಶಬ್ದಕ್ಕೆ ಅರ್ಥವಾಗುತ್ತದೆ. ಅವರು ಆರಡಿಗೂ ಎತ್ತರದ ಅಜಾನು ಬಾಹು, ನಾನು ಐದಡಿ ಎರಡಂಗುಲದ ಕುಳ್ಳ. ಅವರು ನಾನು ನಿಂತಾಗ the long and the short ಎಂದು ಬೆರಳು ಮಾಡಬಹುದಿತ್ತು. ಅವರ ಸ್ನೇಹ, ಸಖ್ಯ ನನಗೆ ನಾಲ್ಕೈದು ವರ್ಷ ಅವರು ಮಾಜಿ ಮುಮಂ ಆದ ಮೇಲೂ ಸಮೃದ್ಧವಾಗಿತ್ತು.

ಚಿಕ್ಕಮಗಳೂರಲ್ಲಿ ನಾನು ನಡೆದುಕೊಂಡ ರೀತಿ, ಈ ಊಟವನ್ನು ಪ್ರತಿನಿಧಿಗಳ ಜತೆಯಲ್ಲಿ ಮಾಡದೆ ಖಾಸಗಿ ಮನೆಗೆ ಹೋಗಿ ಉಂಡದ್ದು ಸಮ್ಮೇಳನದ ಸಂದರ್ಭದಲ್ಲಿ ಸರಿಯೆನಿಸಲಿಲ್ಲ. ಸಾಹಿತ್ಯ ಸಮ್ಮೇಳನಕ್ಕೆ ಬಂದಿರುವ ಸಾವಿರಾರು ಪ್ರತಿನಿಧಿಗಳೊಂದಿಗೆ ಸಾಮೂಹಿಕವಾಗಿ ಕುಳಿತು ಊಟ ಮಾಡುವುದು ಪರಿಷತ್ತಿನ ಅಧ್ಯಕ್ಷನ ಕರ್ತವ್ಯವೆಂದು ಒಳದನಿ ಚುಚ್ಚಿ ಹೇಳಿತು. ಸಾಮೂಹಿಕ ಊಟದ ಸೊಗಸು ಒಂದು ಅಪೂರ್ವ ಅನುಭವ. ಮದುವೆ ಮುಂಜಿ ಹಬ್ಬ ಜಾತ್ರೆಗಳಲ್ಲೂ ಅಷ್ಟೆ, ಬಹುಜನರು ಒಟ್ಟಿಗೆ ಉಣ್ಣುವ ಕಷ್ಟ ಸುಖ ಎರಡೂ ಚಂದ. ಸಾಹಿತ್ಯ ಸಮ್ಮೇಳನದ ಒಟ್ಟೂಟದಲ್ಲಿ ವಿಶಿಷ್ಟತೆಯಿದೆ; ಸಮಾನ ಸಂಸ್ಕಾರ ಅಭಿರುಚಿ ಆಸಕ್ತಿ ಇರುಪವರ ಒಕ್ಕೂಟದ ಒಟ್ಟೂಟವಿದು. ಸಮ್ಮೇಳನದ ಚಾವಣಿಯಡಿ ಓಡಾಡುವರೆಲ್ಲರ ಮಾತಿನ ಕೇಂದ್ರ ಬಿಂದು ಸಾಹಿತ್ಯ ಚರ್ಚೆ. ಈ ಸಂವಾದ ಕಾವೇರಿ (ಕಾವು-ಏರಿ) ವಾಗ್ವಾದ ಆದಾಗಲೂ ಆ ಬಿಸಿಯ ವಿಷಯ ಸಾಹಿತ್ಯವೇ ಆಗಿರುತ್ತದೆ. ಊಟದಲ್ಲಿ ಬಿಸಿ ಇರದಿದ್ದರೂ ಸಂಭಾಷಣೆಯಲ್ಲಿ ಕಾವು ಇರುತ್ತದೆ. ನಾನಾ ಸ್ಥಳಗಳಿಂದ ಬಂದ ಇಂತಹ ಸಮೂಹದೊಂದಿಗೆ ಕುಳಿತು ನಾಲ್ಕು ತುತ್ತು ತಿನ್ನುವುದರಲ್ಲಿ ಆನಂದವಿದೆ.

ನನ್ನ ಈ ವಿಚಾರವನ್ನು ಮುಮಂ ಗೂಡೂರಾವ್‌ಗೂ ಹೇಳಿದೆ. ಮುಂದಿನ ಸಮ್ಮೇಳನದಲ್ಲಿ ಈ ಸಹ ಪಂಕ್ತಿ ಭೋಜನದ ಸುಖ ಅನುಭವಿಸೋಣ ಎಂದರು. ಅವರು ಧಿಡೀರ್ ನಿರ್ಧಾರದ, ತಕ್ಷಣ ಉತ್ತರ ಕೊಡುವ ಸ್ವಭಾವದ ಸೀದಾ ಸಾದಾ ಮನುಷ್ಯ. ಒರಟೆಂದು ತೋರುವ ಮೃದುತ್ವವಿತ್ತು. ಅವರಿಗೆ ಅವಕಾಶಗಳು ಒಟ್ಟೊಟ್ಟಿಗೆ ಬಂದವು; ಬಂದ ರೀತಿಯಲ್ಲೇ ಒಟ್ಟೊಟ್ಟಿಗೆ ಹೋದುವು. ಚಿಕ್ಕಮಗಳೂರಿಂದ ಮುಂದಿನ ಸಮ್ಮೇಳನವಾದ ಮಡಿಕೇರಿ ಸಮ್ಮೇಳನವನ್ನೂ ಉದ್ಘಾಟಿಸಿ, ಮೂರು ಸಮ್ಮೇಳನಕ್ಕೆ ಪ್ರಾರಂಭ ಹೇಳಿ ಹಸಿರು ಬಾವುಟ ಬೀಸಿದ ಏಕೈಕ ಮುಮಂ ಎನಿಸಿದರು. ಮಡಿಕೇರಿ ಸಮ್ಮೇಳನದ ಉದ್ಘಾಟನೆ ಆದ ಮೇಲೆ ಊಟಕ್ಕೆ ಮುಮಂ, ನಾನು ಇತರ ಅತಿಥಿಗಳು-ಎಲ್ಲ ಒಟ್ಟಿಗೆ ಸಮ್ಮೇಳನದ ಪ್ರತಿನಿಧಿಗಳೊಂದಿಗೆ ಕುಳಿತೆವು. "ಗಂಡೂರಾವ್ ನಾಗರಾಜಯ್ಯ, ಮುಂದಿನ ಸಾಹಿತ್ಯ

ಸಮ್ಮೇಳನಕ್ಕೆ ಮುಖ್ಯಮಂತ್ರಿ ಇನ್ನೂ ಏನೇನು ಮಾಡಬೇಕಪ್ಪಾ?" ಎಂದು ಚುಡಾಯಿಸುವುದನ್ನು ಮರೆಯಲಿಲ್ಲ. ನಾನು ಹೇಳಿದೆ "ಮುಂದಿನ ಸಮ್ಮೇಳನಕ್ಕೆ ಮುಮುಂ ಗಳಿಗೆ ಹೇಳುವ, ಹೇಳಬೇಕಾದ ಇನ್ನಷ್ಟು ಹೊಸ ವಿಷಯಗಳಿವೆ. ಅವಶ್ಯ ಹೇಳುತ್ತೇನೆ." ಮುಂದಿನ ಸಮ್ಮೇಳನವೂ ಬಂತು. ಶಿರಸಿಯಲ್ಲಿ ಸೊಗಸಾದ ಏರ್ಪಾಟು ಆಯಿತು. ಗುಂಡೂರಾಯರು ಉದ್ಘಾಟಿಸಲು ಖುಷಿಯಿಂದ ಒಪ್ಪಿದರು. ಆಹ್ವಾನ ಪತ್ರಿಕೆಯನ್ನು ಹಂಚಿದ್ದೂ ಆಯಿತು. ಮರುದಿನ ಬೆಳಗ್ಗೆ ಸಮ್ಮೇಳನದ ಉದ್ಘಾಟನೆ ಆಗಬೇಕು. ಹಿಂದಿನ ದಿನ ಶಿರಸಿಯಲ್ಲಿ ಸ್ವಾಗತ ಸಮಿತಿಯ ಕಚೇರಿಯಲ್ಲಿ ಇದ್ದಾಗಲೇ ಗುಂಡೂರಾಯರಿಂದ ದೂರವಾಣಿ ಕರೆಬಂತು. ಮಾತನಾಡಿದೆ. ಅವರು ತಮ್ಮ ಅಳಲನ್ನು ತೋಡಿಕೊಂಡು, ಬರಲಾಗದುದಕ್ಕೆ ಕ್ಷಮೆಕೋರಿದರು, ಮುಂದಿನ ಸಮ್ಮೇಳನವನ್ನು ಉದ್ಘಾಟಿಸುವುದಾಗಿ ಹೇಳಿದರು. ಮುಮುಂ ಗುಂಡೂರಾಯರು ಮಡಿಕೇರಿಯಲ್ಲಿ ಹ್ಯಾಟ್ರಿಕ್ ಪಡೆದು, ಅದರ ಮೇಲೆ ಈಗ ಇನ್ನೊಂದು ಕೊಸರು-ಹೆಚ್ಚಳ ಪಡೆಯುವ ಭಾಗ್ಯವಂಚಿತರಾದರು. ನನಗೂ ಮಡಿಕೇರಿಯಲ್ಲಿ ಅವರಿಗೆ ತಿಳಿಸಿದ್ದಂತೆ, ಇನ್ನಷ್ಟು ಹೊಸ ವಿಷಯ ಹೇಳುವ ಅವಕಾಶ ತಪ್ಪಿತು. ಮುಂದಿನ ಸಮ್ಮೇಳನವೇನೋ ಕೈವಾರದಲ್ಲಿ ಅದ್ದೂರಿಯಾಗೇ ನಡೆಯಿತು, ಆದರೆ ಆ ವೇಳೆಗೆ ಗುಂಡೂರಾಯರು ಮಾಜಿ ಮುಖ್ಯಮಂತ್ರಿಯಾಗಿದ್ದರು ! ಶಿರಸಿಯಲ್ಲಿ ತಪ್ಪಿದ ಸಾಹಿತ್ಯ ಸಮ್ಮೇಳನದ ರೈಲನ್ನು ಅವರು ಮತ್ತೆ ಹತ್ತಲು ಆಗಲಿಲ್ಲ !!

☆ ☆ ☆

ಡಾ. ಕಮಲಾ ಹಂಪನಾ ಬಗ್ಗೆ ಬರೆಯುವುದು ಮಿಶ್ರ ಭಾವನೆಗಳ ಅನುಭವ. ಒಂದು ಕಡೆ ಹುರುಪಿನ ಹೊನಲು, ಇನ್ನೊಂದು ಕಡೆ ಮುಜುಗರದ ಅಡ್ಡಗೋಡೆ, ಮತ್ತೊಂದು ಕಡೆ ಆಯ್ಕೆಯ ಇಕ್ಕಟ್ಟು. ಯಾವುದನ್ನು ಹೇಳುವುದು, ಬಿಡುವುದು, ತಡೆ ಹಿಡಿಯುವುದು ಎಂಬ ಸಮಸ್ಯೆ. ಒಂದು ಬಗೆಯಲ್ಲಿ ಆಕೆಯನ್ನು ಕುರಿತು ಹೇಳುವಾಗ ನನ್ನನ್ನೇ ನಾನು ವರ್ಣಿಸಿಕೊಂಡಂತೆಯೂ ಆಗಬಹುದು. ಇಂಥ ಸವಾಲುಗಳ ಇದಿರೋಟ ಒತ್ತಡಗಳ ನಡುವೆ ನಿಂತು, ಈ ಲೇಖಣಿಯನ್ನು ಹಿಡಿದಿರುವ ಕ್ಷಣದಲ್ಲಿ ಸ್ಫುರಿಸಿದ ನೆನಪುಗಳನ್ನು ಒಂದು ಮಿತಿಯಲ್ಲಿ ಹಿಡಿದಿಟ್ಟಿದ್ದೇನೆ. ಇದು ಜರಡಿ ಹಿಡಿದು ಜಾಲಾಡಿದ ಪೂರ್ವ ನಿಯೋಜಿತ ಲೇಖನವಲ್ಲ. ಒಂದು ಕೂರಿಗೆಯಲ್ಲಿ ಹೊಮ್ಮಿದ ಕೆಲವು ತೂರಿದ ಚಿಂತನಗಳ ದಾಖಲೆ ಮಾತ್ರ.

ಪ್ರೊ. ಕಮಲಳಿಗೂ ನನಗೂ ಅಂಟಿದ ನಂಟಿನ ತುದಿ ಮೊದಲುಗಳು ನಿಗೂಢವಲ್ಲದಿದ್ದರೂ ಗಾಢವಾಗಿದೆ. ನಾವು ತಂಬ ಹಳೆಯ ಗೆಳೆಯ ಗೆಳತಿಯರು. ಕಾಳಿನೊಳಗಣ ಸಸಿಯಂತೆ ಹುಟ್ಟಿ, ನನೆಯೊಳಗಣ ಪರಿಮಳದಂತೆ ಹಬ್ಬಿ, ಜಲದೊಳಗಣ ಪಾವಕದ ಹಾಗೆ ಸುಖೋಷ್ಣವಾಗಿ, ನಮ್ಮ ಮೈ ಮನಗಳ ಸುಳಿಯಲ್ಲಿ ಒಲವು, O Love, ಬೇರೂರಿತು. ಆರು ವರ್ಷ ಸಹಪಾಠಿಗಳಾಗಿದ್ದೆವು. ಪರಿಚಯ ಪ್ರೀತಿಗೆ ದಾರಿ ತೆರೆದಿತ್ತು. ಪ್ರೇಮ ಮದುವೆಗೆ ನಾಂದಿ ಹಾಡಿತ್ತು. ಸಮ್ಮಿಲನಕ್ಕೆ ಅಡ್ಡಗಾಲು ಹಾಕಿದ ಜಾತಿ ಮತಗಳ ಕಟ್ಟುಪಾಡುಗಳನ್ನು ಪ್ರಾಯದ ಮದದಿಂದ ಕಿತ್ತು ಹಾಕಿದೆವು. ಸಬರ್‌ರಿಜಿಸ್ಟ್ರಾರ ಕಚೇರಿಯೇ

ಮದುವೆ ಮಂಟಪವಾಯಿತು. ಸಬ್‌ರಿಜಿಸ್ಟ್ರಾರೇ ಪುರೋಹಿತರಾದರು. ಸುತ್ತ ಸಿಂತ ಹತ್ತು ಗೆಳೆಯರ ಮುತ್ತಿನ ಮಾತುಗಳೇ ಮಂತ್ರಗಳಾದುವು. ಅವರ ಶುದ್ಧ ಹೃದಯ ತುಂಬಿ ಬಂದ ಚಪ್ಪಾಳೆಯೇ ಮಂಗಳ ವಾದ್ಯಗಳಾದುವು. ಹೂಹಾರವನ್ನು ವಿನಿಮಯ ಮಾಡಿಕೊಂಡೆವು. ವಿವಾಹ ಮುಗಿಯಿತು. ಕಮಲಮ್ಮ-ನಾಗರಾಜಯ್ಯ ಸತಿಪತಿಗಳಾದರು-ಕಮಲಾ ಹಂಪನಾ ಜೋಡಿಯೊಂದು ಲೋಕ ರೂಢಿಯಾಯಿತು.

ಹೀಗೆ ಹೊಸ ಒಸಗೆಯಿಂದ, ಹೊಸ ಬದುಕಿಗೆ ಗಂಡ ಹೆಂಡತಿಯರಾಗಿ ನಾವು ಜೀವನ ಯಾತ್ರೆ ಆರಂಭಿಸಿದೆವು. ಕಮಲಾ ಹಂಪನಾ ಮಡದಿಯಾಗಿ ದೊರಕದೇ ಹೋಗಿದ್ದರೆ ನಾನು ಏನಾಗುತ್ತಿದ್ದೆನೊ ಹೇಳಲಾರೆ. ಆದರೆ ಆಕೆ ಹೆಂಡತಿಯಾಗಿ ಸಿಕ್ಕಿದ್ದು ದೊಡ್ಡ ಸೌಭಾಗ್ಯ. ಬದುಕಿನ ನನ್ನೆಲ್ಲ ಸುಖ ಸಮಸ್ತಕ್ಕೂ ಆಕೆಯೇ ಕಾರಣ. ಸಂಸ್ಕಾರ, ರುಚಿ, ಅಭಿರುಚಿ, ಶಿಕ್ಷಣ, ಅಧಿಕಾರ, ಹುದ್ದೆ, ವಿದ್ವತ್ತು-ಇವೆಲ್ಲದರಲ್ಲೂ, ಅಷ್ಟೇಕೆ ಅನುರಾಗದಲ್ಲೂ, ಸರಿದೊರೆಯಾಗಿ, ಸರಿಮಿಗಿಲಾಗಿ ಮಿಂಚಿದ್ದಾಳೆ. ಮನೆಗೆದ್ದು ಮಾರುಗೆಲ್ಲು ಎಂಬುದು ಹಿರಿಯರ ಮಾತು. ಕಮಲಾ ನನ್ನ ಮನೆಯನ್ನು ಅಕ್ಷರಶಃ ಕಾಂತಿಮಯವಾಗಿಸಿದ್ದಾಳೆ. ಆನಂದ ಮಯವಾಗಿ ಮುನ್ನಡಸಿದ್ದಾಳೆ. ಶುಚಿರುಚಿಯಾದ ಅಡುಗೆಯಿಂದ ನನಗೂ ನನ್ನ ಮೂವರು ಮಕ್ಕಳಿಗೂ ಆರೋಗ್ಯಭಾಗ್ಯ ಕರುಣಿಸಿದ್ದಾಳೆ. ಎಲ್ಲ ಅತಿಥಿ ಅಭ್ಯಾಗತರಿಗೂ ಬಂಧು ಬಾಂಧವರಿಗೂ ತನ್ನ ಸಮುಚಿತ ಆಚಾರ ವಿಚಾರ ಸಹಾಯಗಳಿಂದ ಆದರ್ಶ ಪ್ರಾಯಳಾಗಿದ್ದಾಳೆ.

ಆಹಾರ ವಿಹಾರಗಳಲ್ಲೇ ಅಲ್ಲದೆ ಒಟ್ಟು ಬಾಳಿನಲ್ಲಿ ಕಮಲಾ ಬಯಸುವುದು ಅಚ್ಚುಕಟ್ಟು. ಶ್ರದ್ಧೆ- ಶ್ರಮ ಆಕೆಯ ಶ್ವಾಸಕೋಶಗಳು. ವಾಗಾಡಂಬರವಿರದ ವಾಕ್ ಶಕ್ತಿಯಿಂದ ಒಳ್ಳೆಯ ವಾಗ್ಮಿಯೆನಿಸಿದ್ದಾರೆ. ಖಚಿತವೂ ಸ್ಪಷ್ಟವೂ ಆದ ವಿಚಾರ ಸರಣಿಯಿಂದ ಮಾತುಗಾರಿಕೆ ಕಳೆಯೇರುತ್ತದೆ. ಮಾಸ್ತಿ, ಅನಕೃ, ಉಪಾಧ್ಯೆ, ರಾಜರತ್ನಂ, ದೇಜಗೌ, ಮುಗಳಿ, ಗೊರೂರು, ಚದುರಂಗ, ಹಾಮಾನಾ ಮೊದಲಾದ ಸಾಹಿತಿಗಳು ಡಾ. ಕಮಲಾ ಹಂಪನಾ ಉಪನ್ಯಾಸಗಳನ್ನು ಶ್ಲಾಘಿಸಿದ್ದಾರೆ. ತುಂಬಿದ ಸಾರ್ವಜನಿಕ ವೇದಿಕೆಗಳಿಂದ ಕೆಂಗಲ್ ಹನುಮಂತಯ್ಯ, ಡಿ. ದೇವರಾಜ ಅರಸು 'ಇಂಥ ವರ್ಚಸ್ವಿ ಸಮರ್ಥ ಸಾಹಿತಿಗಳು, ವಾಗ್ಮಿಗಳು ಲೋಕಸಭೆ ಶಾಸನ ಸಭೆಗಳಿಗೆ ಆರಿಸಿ ಬರಬೇಕು, ಜನತೆಯ ಅಭಿಪ್ರಾಯಗಳನ್ನು ಮಂಡಿಸಬೇಕು' ಎಂದು ಪ್ರಸಂಶಿಸಿದ್ದಾರೆ. ಹನುಮಂತಯ್ಯನವರೂ ಅರಸು ಅವರೂ ಕಮಲಾ ಹಂಪನಾರನ್ನು ತಮ್ಮ ಪಕ್ಷಸೇರಲು ಎಷ್ಟೇ ಒತ್ತಾಯಿಸಿದರೂ ಒಪ್ಪದಿರುವುದಕ್ಕೆ ಕಾರಣ ರಾಜಕೀಯದಲ್ಲಿ ಇರುವ ಅನಾಸಕ್ತಿ, ಸಾಹಿತ್ಯ-ಅಧ್ಯಾಪನದಲ್ಲಿ ಇರುವ ಆಸಕ್ತಿ.

ಪ್ರೊ. ಕಮಲಾ ಹಂಪನಾಗೆ ಇರುವ ಮುನ್ನೋಟ, ಆತ್ಮ ವಿಶ್ವಾಸ, ಪ್ರತಿಭೆ, ಛಲ, ಋಜುತ್ವ, ಪಾರದರ್ಶಕ ವ್ಯಕ್ತಿತ್ವ-ಇವನ್ನು ಕುರಿತ ಒಂದು ಹೆಬ್ಬೊತ್ತಗೆಯನ್ನು ಬರೆಯಬೇಕಾದೀತು. ಅಲ್ಲದೆ ಆಕೆಯ ಬದುಕು-ಬರೆಹ ಕುರಿತು ಈಗಾಗಲೇ ಐದು ಪುಸ್ತಕಗಳೂ, ಒಂದು ಪಿಎಚ್‌ಡಿ ಮಹಾಪ್ರಬಂಧವೂ ಸಿದ್ಧವಾಗಿದೆ. ಆದರಿಂದ ನಾನು ಕೇವಲ ಇತ್ತೀಚೆಗಿನ ಮೂರು ವರ್ಷಗಳಲ್ಲಿ ಸಂಭವಿಸಿರುವ ಮತ್ತು ಆಕೆ ಸಾಧಿಸಿರುವ ಮೂರು ಮುಖ್ಯ

ಘಟನೆಗಳನ್ನು ಪ್ರಸ್ತಾಪಿಸುತ್ತೇನೆ. ಅವರಲ್ಲಿ ತುಂಬಿ ತುಳುಕುವ ಕಮಲಾ ಹಂಪನಾರ ದೃಷ್ಟಿಕೋನವನ್ನು ಬಿಂಬಿಸಲು ಪ್ರಯತ್ನಿಸುತ್ತೇನೆ.

ಪ್ರಾಯಶಃ ಕಮಲಾ ಹಂಪನಾ ಸಾಧನೆಗಳಲ್ಲಿ ಶಿಖರಪ್ರಾಯವಾದದ್ದು ದಾನ ಚಿಂತಾಮಣಿ ಅತ್ತಿಮಬ್ಬೆಯ ಹೆಸರಿಗೆ ಪ್ರಾಣ ತುಂಬಿ ಕಾಯಕಲ್ಪವಿತ್ತದ್ದು. ಸಾವಿರ ವರ್ಷದ ಹಿಂದೆ ಆಗಿ ಹೋದ ಅತ್ತಿಮಬ್ಬೆಯ ಸ್ಮರಣೆ ಕನ್ನಡಿಗರ ಕರ್ತವ್ಯವೆಂಬುದನ್ನು ಮನವರಿಕೆ ಮಾಡಲು ತುಂಬ ಸಂಶೋಧನೆ ಕೈಗೊಂಡರು. ಅತ್ತಿಮಬ್ಬೆ, ಸಹಸ್ರಮಾನೋತ್ಸವದ ಅಗತ್ಯ, ಔಚಿತ್ಯ, ಮಹತ್ವಗಳನ್ನು ಕನ್ನಡ ನಾಡಿಗೆ ಆಧಾರಗಳೊಂದಿಗೆ ತೋರಿಸಿಕೊಟ್ಟರು. ಕರ್ನಾಟಕದ ಒಬ್ಬ ಶ್ರೇಷ್ಠ ಪ್ರತಿಭಾವಂತ ಮಹಿಳೆಗೆ, ಪ್ರತಿ ವರ್ಷ ಒಂದು ಲಕ್ಷ ರೂಪಾಯಿ ಮೊತ್ತದ ಪ್ರಶಸ್ತಿಯನ್ನು ಕೊಡಲು, ಆಗಿನ ಮುಖ್ಯ ಮಂತ್ರಿ ವೀರಪ್ಪ ಮೊಯ್ಲಿಯವರ ಸರ್ಕಾರ ಹಿಂದೆ ಮುಂದೆ ನೋಡಿತು. ಮೀನ ಮೇಷ ಎಣಿಸುವುದರಲ್ಲಿ ಆ ಸರ್ಕಾರದ ಪತನವಾಯಿತು.

ಪ್ರಾಧ್ಯಾಪಕಿ ಕಮಲಾ ಹಂಪನಾ ತಮ್ಮ ಉಡದ ಪಟ್ಟನ್ನು ಬಿಡಲಿಲ್ಲ. ಆಕೆ ಆಶಾವಾದಿ. ದೇವೇಗೌಡ, ಸಿದ್ಧರಾಮಯ್ಯ, ಬಿ.ಟಿ. ಲಲಿತಾ ನಾಯಕ-ಇವರನ್ನು ಸಂಪರ್ಕಿಸಿದರು. ಇವರಿಗೆಲ್ಲ ಅತ್ತಿಮಬ್ಬೆಯ ಘನತೆಯನ್ನು ಮನವರಿಕೆ ಮಾಡಿದರು. ಜನತಾದಳ ಸರ್ಕಾರ ಪ್ರತಿವರ್ಷ ಒಬ್ಬ ಶ್ರೇಷ್ಠ ಸಾಹಿತಿ-ಮಹಿಳೆಗೆ ಒಂದು ಲಕ್ಷ ರೂಪಾಯಿ ಪ್ರಶಸ್ತಿಕೊಡಲು ಸರ್ಕಾರಿ ಆಜ್ಞೆ ಹೊರಡಿಸಿತು. ಪ್ರಥಮ ಪ್ರಶಸ್ತಿಯನ್ನೂ ನೀಡಿತು. ಇದು ಕಮಲಾ ಹಂಪನಾ ಅವರ ಮೊದಲನೆಯ ಸಾಧನೆ.

ಪ್ರತಿಯೊಂದು ಜಿಲ್ಲೆ ತಾಲ್ಲೂಕುಗಳಲ್ಲೂ ಅತ್ತಿಮಬ್ಬೆಯ ಜೀವನ ಕುರಿತ ಸಂಕಿರಣ ಹಮ್ಮಿಕೊಳ್ಳಲು ಕ.ಸಾ.ಪ.ಗೆ ಸೂಚನೆ ಕೊಟ್ಟರು. ಆದರೆ ಆಗಿನ ಅಧ್ಯಕ್ಷರು ಸ್ವಜಾತಿ ಮೋಹದಿಂದ ಅತ್ತಿಮಬ್ಬೆ ತಮ್ಮ ಜಾತಿಯವಳಲ್ಲವೆಂದು ಉದಾಸೀನ ಮಾಡಿದರು. ಅಷ್ಟಕ್ಕೆ ಕಮಲಾ ಹಂಪನಾ ಜಗ್ಗಲಿಲ್ಲ, ತೆಪ್ಪಗಾಗಲಿಲ್ಲ. ಒಂದೆರಡು ಜಿಲ್ಲೆಗಳಲ್ಲಾದರೂ ಕಾರ್ಯಕ್ರಮ ಜರುಗಿಸಲು ಸ್ವಂತ ಆಸಕ್ತಿ ವಹಿಸಿದರು, ಓಡಾಡಿದರು, ಶ್ರಮ ಪಟ್ಟರು. ಕೆ.ಜಿ.ಎಫ್. ನಗರದ ಹಿರಿಯ ಸಾಹಿತಿದಂಪತಿಗಳಾದ ಜಿ.ಜ್ಞಾನಾನಂದ ಮತ್ತು ಸರಿತಾಜ್ಞಾನಾನಂದರು ವಿಚಾರ ಪರಿಪ್ಲುತವಾದ ವಿಚಾರ ಸಂಕಿರಣ ಏರ್ಪಡಿಸಿದರು. ಗದಗಿನಲ್ಲಿ, ನಾಡಿನ ಸುಪುತ್ರ ಎಚ್.ಕೆ. ಪಾಟೀಲರೂ ಅವರ ಸೋದರ ಶಾಸಕ ಎಸ್.ಕೆ. ಪಾಟೀಲರೂ, ಸಾಹಿತಿ ಹಾಗೂ ಧಾರವಾಡ ಘಟಕದ ಕ.ಸಾ.ಪ. ಅಧ್ಯಕ್ಷ ಡಾ. ಶಿವಾನಂದ ಗಾಳಿಯವರೂ ಸೇರಿ ರಾಜ್ಯ ಮಟ್ಟದ ಶ್ರೇಷ್ಠ ಕಾರ್ಯಕ್ರಮವನ್ನು ಆಚರಿಸಿದರು. ಆ ಕಾರ್ಯಕ್ರಮದಲ್ಲಿ ಡಾ. ಕಮಲಾ ಹಂಪನಾ ಭಾಗ ವಹಿಸಲೇಬೇಕೆಂದು ಸ್ವಂತ ವಾಹನ ಕಳಿಸಿ ಗದಗಿಗೆ ಕರೆಸಿಕೊಂಡು ಸ್ವಾಗತ ಸಮಿತಿ ತನ್ನ ಔದಾರ್ಯ, ಸೌಜನ್ಯಪೂರಿತ ಸುಸಂಸ್ಕೃತ ನಡವಳಿಕೆಯನ್ನು ಪ್ರಕಟಿಸಿತು. ಇದು ಎರಡನೆಯ ಘಟ್ಟ.

ಅತ್ತಿಮಬ್ಬೆಯ ವಿಸ್ತಾರವೂ ಅಮೋಘವೂ ಆದ ಜೀವನವನ್ನು, ಚಾರಿತ್ರಿಕ ಆಯಾಮಗಳನ್ನು ಕುರಿತು ಕಮಲಾ ಹಂಪನಾ ನೀಡಿದ ಪ್ರೇರಣೆಯಿಂದ ಹಲವು ವಿಶ್ವವಿದ್ಯಾಲಯಗಳು ವಿಚಾರ ಸಂಕಿರಣ ವ್ಯವಸ್ಥೆ ಮಾಡಿದುವು. ತುಮಕೂರಿನಲ್ಲಿ ಶಾಂತಾ

ಸನ್ಮತಿಕುಮಾರರು ಮುಂದಾಳಾಗಿ ನಿಂತು ಅಖಿಲ ಭಾರತ ಮಟ್ಟದಲ್ಲಿ ಅತ್ತಿಮಬ್ಬೆ ವಿಚಾರ ಸಂಕಿರಣ, ಸಮ್ಮೇಳನ ನಡೆಸಿದರು. ಬೆಂಗಳೂರಲ್ಲಿ ನಗರ ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ರಾಮಣ್ಣ ಕೋಡಿಹೋಸಳ್ಳಿ ಮತ್ತು ಗಾಯತ್ರಿ ರಾಮಣ್ಣ ನೇತೃತ್ವದಲ್ಲಿ ವಿಚಾರ ಸಂಕಿರಣ ಜರುಗಿತು. ಕರ್ನಾಟಕದ ಕಲೆ ಸಾಹಿತ್ಯ ಸಂಸ್ಕೃತಿಗಳ ಉಳಿವಿಗಾಗಿ ತನು ಮನ ಧನ ತ್ಯಾಗ ಬಲಿದಾನಗಳಿಂದ ಅದ್ಭುತ ಕೊಡುಗೆಯಿತ್ತ ಅತ್ತಿಮಬ್ಬೆ ಬಗ್ಗೆ ಇಡೀ ನಾಡಿನಲ್ಲಿ ಕಾರ್ಯಕ್ರಮಗಳಾಗಿವೆ. ಆದರೆ ಹಂಪಿ ಕನ್ನಡ ವಿಶ್ವವಿದ್ಯಾಲಯ ಮಾತ್ರ ಅತ್ತಿಮಬ್ಬೆ ಕುರಿತು ಒಂದು ವಿಚಾರ ಸಂಕಿರಣ ಇನ್ನೂ ತನಕ ನಡಸಿಲ್ಲವೆಂಬ ಕೋಪ ಆಕೆಗೆ ಇದೆ ! ಒಟ್ಟಿನಲ್ಲಿ ಕಮಲಾ ಹಂಪನಾ ಅಪರೂಪದ ವ್ಯಕ್ತಿ ಶಕ್ತಿ ಎಂದು ಜನ ಕರೆಯುತ್ತಿರುವುದರಲ್ಲಿ ಉತ್ಪ್ರೇಕ್ಷೆಯಿಲ್ಲ ಎಂದು ನನಗೂ ಮನವರಿಕೆಯಾಗಿದೆ. ಇಂಗ್ಲಿಷಿನಲ್ಲೂ Attimabbe and Chalukayas (1995)ಎಂಬ ಪುಸ್ತಕವನ್ನು ಸಹ ಆಕೆ ಬರೆದಿದ್ದಾರೆ.

ಹೀಗೆಲ್ಲಾ ನಡೆದು ಬಂದ ಬಾಳಿಗೀಗ ಅರವತ್ತು ತುಂಬಿದೆ. ಅರವತ್ತು ಎಂಬುದು ಮಹಾ ಆಯುಷ್ಯವೇನಲ್ಲ. ಆದರೆ ಬದುಕು ನಡೆದಿರುವ ರೀತಿಯ ಬಗ್ಗೆ ನನಗೆ ತುಂಬ ಸಮಾಧಾನವಿದೆ. ದೈವ ಮತ್ತು ಜನತೆ ಎರಡೂ ನನಗೆ ಬಹಳಷ್ಟನ್ನು ಕೊಟ್ಟಿವೆ. ನಾನು ಋಣ ತೀರಿಸಲು ಉದ್ದಕ್ಕೂ ಹೆಣಗಿದ್ದೇನೆ. ವೃತ್ತಿಯಿಂದ ನಿವೃತ್ತನಾಗುತ್ತಿರುವ ಮುಂದಿನ ದಿನಗಳಲ್ಲಿ ಭಾಷಣಗಳಿಗೂ ಸಾಧ್ಯವಾದಷ್ಟು ವಿರಾಮ ಹೇಳಿ, ವರ್ಷಗಟ್ಟಲೆಯಿಂದ ಮಾಡಿಟ್ಟಿರುವ ಟಿಪ್ಪಣಿಗಳಿಗೆ ಬರಹದ ರೂಪ ಕೊಡುವ ಮನಸ್ಸಿದೆ. ನನ್ನ ಬುದ್ಧಿಗೆ ನಿಲುಕಿದಷ್ಟು ಬರವಣಿಗೆ ಮಾಡುತ್ತಲೇ ದಿನಗಳೆವ ಹಂಬಲ ನನ್ನದು. ನಾಡವರ ಹರಕೆ ಹಾರೈಕೆಗಳು. ನನಗೆ ಇಂಬಾಗಲಿ.

# ನನ್ನ ಚೆಲುವಿನರಸ ಡಾ : ಹಂಪನಾ

---

ಡಾ. ಕಮಲಾ ಹಂಪನಾ

ಡಾ : ಹಂಪನಾ ಅವರಿಗೆ ಈಗ ಅರವತ್ತು ಸಂವತ್ಸರಗಳು ತುಂಬುವ ಸಮಯ. ಅವರನ್ನು ನೋಡಿದಂದಿನಿಂದಲೂ ನನ್ನ ಕಣ್ಣಿಗೆ ಚೆಲುವನಾಗಿ ಕಾಣುತ್ತಿದ್ದ ಹಂಪನಾ ಇತ್ತೀಚಿಗೆ ಇನ್ನೂ ಸುಂದರವಾಗಿ ಕಾಣಲಾರಂಭಿಸಿದ್ದಾರೆ. ಇದೇನು ನನ್ನ ದೃಷ್ಟಿದೋಷವೊ ಅಥವಾ ನಿಜ ಸಂಗತಿಯೋ ಮೂರನೆಯವರೊಬ್ಬರು ನನಗೆ ತಿಳಿಸಬೇಕು. ಅಥವಾ ಹಳೆಯ ಗಾದೆಯೂ ಒಂದಿದೆಯಲ್ಲ; ಕೂಡಿದವರಿಗೆ.... ಮುದ್ದು ಎಂದು !

ಗಂಡನ ಬಗೆಗೆ ಆತನ ಹೆಂಡತಿ, ಹೆಂಡತಿಯ ಬಗೆಗೆ ಆಕೆಯ ಗಂಡ, ಮಾತನಾಡುವುದು, ಬರೆಯುವುದು ಸಂತಸದ ಸಂಗತಿಯ ಹಾಗೆಯೇ ಸಂಕೋಚದ ವಿಷಯವೂ ಹೌದು. ನನ್ನನ್ನೂ ಸಹ ಈ ಸಂದಿಗ್ಧ, ಸಂಕೋಚಗಳು ಕಾಡಿವೆ. ಆದರೂ ಇವೆರಡರ ಮಧ್ಯಮ ಮಾರ್ಗ ಒಂದನ್ನು ಹಿಡಿದು ನಾನು ಡಾ : ಹಂಪನಾ ಅವರನ್ನು ಕುರಿತು ಕೆಲವು ಸಂಗತಿಗಳನ್ನು ನಿರೂಪಿಸ ಬಯಸುವೆ.

ಹಂಪನಾ ಅವರ ಬಗೆಗೆ ಬರೆಯಲು ವಿಷಯಗಳಿಗೆ ಏನೇನೂ ಕೊರತೆ ಇಲ್ಲ ನಿಜ. ಅವುಗಳಲ್ಲಿ ಅನೇಕ ವಿಷಯಗಳು ಅವರ ಆತ್ಮೀಯರಿಂದ ನಿರೂಪಿತವಾಗುವ ಸಾಧ್ಯತೆ ಇದೆ. ಅವುಗಳನ್ನು ಹೊರತುಪಡಿಸಿ ನನಗೆ ಹಾಗೂ ಹಂಪನಾ ಅವರಿಗೆ ಆದ ಪರಿಚಯ, ಅಂಕುರಿಸಿದ ಪ್ರೇಮ, ಬೆಳೆದ ಪ್ರಣಯ-ಇವನ್ನು ಎತ್ತಿಕೊಂಡರೆ ಅದೊಂದು ಪ್ರಣಯ ಕಾದಂಬರಿ ಆದೀತೆ ಹೊರತು ಒಂದು ಲೇಖನವಾಗಲಾರದು. ಲೇಖನಿ ಹಿಡಿಯುವುದೇ ತಡ, ಹಂಪನಾ ಅವರನ್ನು ಕುರಿತಂತೆ ನನ್ನ ಮನಸ್ಸಿನಲ್ಲಿ ಗೂಡು ಕಟ್ಟಿ ತೇಲುವ ಅನೇಕ ಭಾವನೆಗಳು ನನ್ನನ್ನು ಎತ್ತಿಕೊ ಎಂದು ಮುತ್ತಿಗೆ ಹಾಕುತ್ತವೆ ನಿಜ. ಆದರೆ ಅವನ್ನೆಲ್ಲಾ ಚಿತ್ರಿಸುವುದು ಈ ಲೇಖನದಲ್ಲಿ ಸಾಧ್ಯವೂ ಅಲ್ಲ, ಸಾಧುವೂ ಅಲ್ಲ. ನನ್ನ ಬದುಕಿನ ತುಂಬೆಲ್ಲಾ ಆಳವಾಗಿ, ಸಂಪೂರ್ಣವಾಗಿ ಬೇರೂರಿರುವ ಹಂಪನಾ ಅವರನ್ನು ಯಾವುದೇ ಮಗ್ಗುಲಿನಿಂದ ಬಿಡಿಸಿದರೂ ಅದೊಂದು ಪಾರ್ಶ್ವಭಂಗಿಯಾದೀತೇ ಹೊರತು ಸಂಪೂರ್ಣ ಚಿತ್ರವಾಗಲಾರದು.

ಡಾ. ಹಂಪನಾರ ಹೊರಗಿನ ಬದುಕು ಯಾವತ್ತೂ ಪತ್ರಿಕೆಗಳಲ್ಲಿ ಇದ್ದುದೇ. ಹಂಪನಾ ಅವರ ವಿಷಯಗಳನ್ನು ಪ್ರಕಟಿಸುವುದರಿಂದ ಪತ್ರಿಕೆಗಳ ಮಾರಾಟದ ಸಂಖ್ಯೆ ಹೆಚ್ಚುವುದೆಂದು ಕೆಲವರು ಆಡುತ್ತಿದ್ದ ಮಾತು ಸತ್ಯಕ್ಕೆ ಹತ್ತಿರವಾದುದೇ ಇರಬಹುದು. ಸತ್ಯ ಸಂಗತಿಗಳಿಗಿಂತ

ಅಸತ್ಯ ಸಂಗತಿಗಳಿಂದಲೇ ಅವರನ್ನು ಪರಿಚಯಿಸುವ ಒಂದೆರಡು ಪತ್ರಿಕೆಗಳಿಗೆ ನನ್ನ ಮರುಕ ತುಂಬಿದ ಧನ್ಯವಾದಗಳು. ಕರ್ನಾಟಕದಲ್ಲಿ ಒಬ್ಬ ಅಲ್ಪಸಂಖ್ಯಾತನಾಗಿ ಹುಟ್ಟುವುದು ಒಂದು ದೊಡ್ಡ ಶಾಪ. ಹುಟ್ಟಿದರೂ ಚಿಂತೆಯಿಲ್ಲ. ಆದರೆ ಆತ ಸಮಾಜದಲ್ಲಿ ಬೆಳೆಯಬಾರದು. ಜೀಯ, ಬುದ್ಧಿ ಎಂದು ಎಲ್ಲಿಯವರೆಗೂ ಇತರ ಬಹುಸಂಖ್ಯಾತರನ್ನು ಪೂಜಿಸುತ್ತಾ ಅವರ ಕಾಲ ಕೆಳಗೆ ಅತ್ಯಂತ ಕೆಳಸ್ತರದಲ್ಲಿ ಕುಳಿತಿರುತ್ತಾನೋ, ಅವರೆಲ್ಲರ ಶೋಷಣೆಗೆ ಸಂಪೂರ್ಣ ಒಳಗಾಗಿರುತ್ತಾನೋ ಅಲ್ಲಿಯವರೆಗೂ ಅವನೂ ನಿಶ್ಚಿಂತ, ಇತರರೂ ಅವನ ಬಗ್ಗೆ ಚಿಂತಿಸುವುದಿಲ್ಲ. ಆದರೆ ಒಮ್ಮೆ ಅವನು ಏನಾದರೂ ತನ್ನ ವಿದ್ವತ್ತು, ಪ್ರತಿಭೆ, ಪಾಂಡಿತ್ಯಗಳಿಂದ ಸ್ವಲ್ಪ ಬೆಳೆದು ತಲೆ ಎತ್ತಿದರೆ ಸಾಕು, ಅಲ್ಲೇ ಅವನ ಮಾನಹಾನಿ ಮಾಡುವ, ಕತ್ತು ಹಿಸುಕುವ ಕೆಲಸ ವ್ಯವಸ್ಥಿತವಾಗಿ ನಡೆಯುತ್ತದೆ. ಧಾರ್ಮಿಕ ಅಲ್ಪಸಂಖ್ಯಾತ ಜನಾಂಗದಲ್ಲಿ ಹುಟ್ಟಿದ ಡಾ. ಹಂಪನಾ ಅವರ ಬದುಕೂ ಈ ಶೋಷಣೆಯಿಂದ ಹೊರತಾಗಲಿಲ್ಲ.

ಹಂಪನಾ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಮಾಡಿದ ಕೆಲಸಗಳು ಅತ್ಯಂತ ಮಹತ್ವಪೂರ್ಣವಾದವು. ಚಿಕ್ಕಂದಿನಿಂದಲೂ ಕನ್ನಡ ನಾಡುನುಡಿ ಪರಂಪರೆಯ ಬಗೆಗೆ ಕನಸು ಕಟ್ಟಿ ಬರವಣಿಗೆ, ಭಾಷಣ ಕಾರ್ಯಕ್ರಮಗಳ ಮೂಲಕ ಸಾಕಷ್ಟು ಅನುಭವ ಪಡೆದಿದ್ದರು. ಕಾಲೇಜಿನ ಅಧ್ಯಾಪಕರಾಗಿ, ಅನೇಕ ಪುಸ್ತಕಗಳ ಕರ್ತೃಗಳಾಗಿ ಭಾಷಾ ವಿಜ್ಞಾನಿ, ಸಂಶೋಧಕರಾಗಿ ವಿದ್ವತ್ ಸಾಹಿತ್ಯ ಕ್ಷೇತ್ರದಲ್ಲಿ ಹೆಸರು ಗಳಿಸಿದ್ದರು. ಕ.ಸಾ.ಪ. ಕಾರ್ಯದರ್ಶಿಯಾಗಿ ಆ ಸಂಸ್ಥೆಯ ಸರ್ವತೋಮುಖ ಬೆಳವಣಿಗೆಯ ಕನಸು ಕಂಡಿದ್ದರು. ಸಂಸ್ಥೆಯ ಅಧ್ಯಕ್ಷರಾಗಿ ಹಂಪನಾ ಅವರು ಅತೀವ ಉತ್ಸಾಹದಿಂದ ದುಡಿದರು. ಅಧ್ಯಕ್ಷ ಪದವಿಯನ್ನು ಅಸಿಧಾರವ್ರತದಂತೆ ಸ್ವೀಕರಿಸಿದರು. ಅಧ್ಯಕ್ಷರಾಗಿದ್ದ ಅವಧಿಯುದ್ದಕ್ಕೂ ಮನೆಯಲ್ಲಿ ಮಂಚಬಿಟ್ಟು ನೆಲದ ಮೇಲೆ ಮಲಗಿದರು. ಒಂದು ದಿವಸವೂ ವಿಶ್ರಾಂತಿ ಇಲ್ಲದಂತೆ ಕರ್ತವ್ಯ ಮಗ್ನರಾದರು. ಕಿರಿಯ ವಯಸ್ಸಿನಲ್ಲಿಯೇ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿ ಮಹತ್ತರ ಹೊಣೆಗಾರಿಕೆ ಹೊತ್ತ ಅವರಲ್ಲಿ ಸವಾಲಿನ ಪ್ರಶ್ನೆ ಇತ್ತು. ಹಿಂದಿನ ಅಧ್ಯಕ್ಷರಾಗಿದ್ದ ಜಿ. ನಾರಾಯಣರ ನಂತರ ಬರುವವರು ಅವರ ಹಾಗೆ ಕೆಲಸ ಮಾಡುವರೇ ಎನ್ನುವ ಪ್ರಶ್ನೆ ಅನೇಕರಲ್ಲಿದ್ದಿತ್ತು. ಆದರೆ ಹಂಪನಾ ಅವರು ಜಿ. ನಾರಾಯಣರು ಒಂಬತ್ತು ವರುಷಗಳಲ್ಲಿ ಮಾಡಿದ ಕೆಲಸಕ್ಕೆ ಹತ್ತು ಪಟ್ಟು ಕೆಲಸವನ್ನು ಏಳೂವರೆ ವರುಷಗಳಲ್ಲಿ ಮಾಡಿ ಸಾಧಿಸಿದರು, ಬೆಳೆದರು. ಇದು ಅನೇಕರಿಗೆ ನುಂಗಲಾರದ ತುತ್ತಾಯಿತು.

ಪರಿಷತ್ತಿನ ಕಾರ್ಯ ಚಟುವಟಿಕೆಗಳನ್ನು ಕರ್ನಾಟಕದಾದ್ಯಂತ ಹಂಪನಾ ವಿಸ್ತರಿಸಿದರು. ವರುಷದ ಮೂನ್ನೂರ ಅರವತ್ತೈದು ದಿವಸಗಳಲ್ಲಿ ಮುನ್ನೂರು ದಿವಸಗಳಿಗೂ ಮಿಾರಿ ಕರ್ನಾಟಕದ ಮೂಲೆ ಮೂಲೆಗಳಲ್ಲಿ ಕನ್ನಡ ಸಾಹಿತ್ಯಪರಿಷತ್ತಿನ ಕಾರ್ಯಕ್ರಮಗಳು ನಡೆಯುತ್ತಲೇ ಇರುವಂತೆ ಯೋಜಿಸಿ ಕಾರ್ಯ ಮಗ್ನರಾದರು. ಹಿಂದಿನಿಂದಲೂ ನಡೆದು ಬಂದಿದ್ದ ಕಾರ್ಯಕ್ರಮಗಳಿಗೆ ಹೊಸ ಚೈತನ್ಯ ತುಂಬಿದರು. ಹೊಸ ಹೊಸ ಯೋಜನೆಗಳನ್ನು ರೂಪಿಸಿ ಅನುಷ್ಠಾನ ಗೊಳಿಸುವಲ್ಲಿ ಹಂಪನಾ ಕನ್ನಡ ಸಾಹಿತ್ಯ ಪರಿಷತ್ತಿನ ಇತಿಹಾಸದಲ್ಲಿ ಹೊಸ ದಾಖಲೆ ನಿರ್ಮಿಸಿದರು.

ಹಂಪನಾ ಅನೇಕ ಸಾಹಿತ್ಯ ಮಿತ್ರರ ಪ್ರೀತಿ, ವಿಶ್ವಾಸ, ಅಭಿಮಾನಗಳಿಗೆ ಒಳಗಾದಂತೆ

ಕೇವಲ ಕೆಲವರ ಕುದೃಷ್ಟಿಗೂ ಒಳಗಾದರು. ೧೯೮೧ರ ಚುನಾವಣೆಯಲ್ಲಿಯೇ ಹಂಪನಾ ಅವರನ್ನು ಮುಗಿಸಬೇಕೆಂದಿದ್ದ ಕಟಿಗೇಡಿಗಳ ಗುಂಪು ೧೯೮೪ರ ಚುನಾವಣೆಯ ನಂತರ ಇಲ್ಲಸಲ್ಲದ ದೋಷಗಳನ್ನು ಹುಡುಕಿ ಬೆದಕಿ ಹಂಪನಾ ಮಾಡಿದ ಎಲ್ಲ ಉತ್ತಮ ಕೆಲಸಗಳಿಗೂ ಮಸಿ ಬಳಿಯುವ ಸತತ ಪ್ರಯತ್ನ ನಡೆಸಿತು. ಕೋರ್ಟು ಕಛೇರಿ ಹತ್ತಿಸಿದರು. ಹಂಪನಾ ಅವರಿಂದ ಅವರ ಅಧಿಕಾರಾವಧಿಯಲ್ಲಿ ಅನೇಕ ಸಾಹಿತ್ಯಕ ಸವಲತ್ತನ್ನು ಪಡೆದ ಹಿರಿಯ ಸಾಹಿತಿಗಳು ಮೌನ ವಹಿಸಿದರು; ಮತ್ತೆ ಕೆಲವರು ಬೆನ್ನಲ್ಲಿ ಚೂರಿ ಹಾಕಿದರು.

ಗೋಕಾಕ್ ಚಳವಳಿಯ ಸಂದರ್ಭದಲ್ಲಿ, ದಲಿತ-ಬಂಡಾಯ ಸಾಹಿತಿಗಳ ಒಕ್ಕೂಟಗಳಲ್ಲಿ ೧೯೮೪ರ ಚುನಾವಣೆಯಲ್ಲಿ ಹಂಪನಾ ಅವರನ್ನು ಬಲಿಪಶು ಮಾಡುವ ವ್ಯವಸ್ಥಿತ ಯತ್ನ ನಡೆಯಿತು. ಮಡಿಯುಟ್ಟು ಜನಿವಾರ ತೊಟ್ಟಿದ್ದ ಪರಿಷತ್ತಿನ ಬಾಗಿಲನ್ನು ಸಾಹಿತ್ಯಾಸಕ್ತರೆಲ್ಲರಿಗೂ ತೆರೆದದ್ದು, ಎಲ್ಲರೂ ಅದರಲ್ಲಿ ಭಾಗಿಯಾಗಲು ಅವಕಾಶ ಮಾಡಿಕೊಟ್ಟದ್ದು ಕೆಲವು ಮೇಲ್ಜಾತಿಯ ಪ್ರತಿಷ್ಠಿತರಿಗೆ ಕೊಡಲಿ ಪೆಟ್ಟಾಯಿತು. ಸಾಹಿತ್ಯ ಸರ್ವರಿಗೆ, ಸರ್ವತೋಮುಖ ಬೆಳವಣಿಗೆಗೆ ಎಂಬ ಸತ್ಯಕ್ಕೆ ಮಾರಕವಾಗಿರುವ ಈ ಮೇಲ್ಜಾತಿಯ ಕೆಲವರಿಗೆ ಹಂಪನಾ ಅವರ ಈ ಜಾತ್ಯತೀತ ಧೋರಣೆ ಸಹಿಸಲಾರದ ಕುತ್ತಾಯಿತು.

ಭಾರತದಲ್ಲಿನ ಹಿಂದಿನ, ಇಂದಿನ ಅನೇಕ ರೀತಿಯ ಅಸಮಾನತೆ, ಅಜ್ಞಾತೆ, ಕಂದಾಚಾರಗಳಿಗೆ, ಪ್ರಮುಖತಃ ಅನೇಕ ರೀತಿಯ ಹಿಂದುಳಿದಿರುವಿಕೆಗೆ ಮೂಲಭೂತ ಕಾರಣ, ಶತಶತಮಾನಗಳಿಂದ ವಿದ್ಯೆಯನ್ನು ಶಿಕ್ಷಣವನ್ನು ಸಾರ್ವಜನಿಕರ ಸ್ವತ್ತಾಗಿ ಉಪಯೋಗಿಸಲು ಅವಕಾಶ ಕಲ್ಪಿಸಿಕೊಡದೆ ಇದ್ದುದು. ಒಂದು ವರ್ಗ ಈ ವಿದ್ಯೆಯನ್ನು ತನ್ನ ಕೈಯಲ್ಲಿ ಇಟ್ಟುಕೊಂಡು ಕೋಟಿ ಕೋಟಿ ಜನರನ್ನು ಶೋಷಿಸುತ್ತಾ ಬಂದಿತು. ಹೆಚ್ಚಿನ ಸಂಖ್ಯೆಯ ಜನರನ್ನು ಅಜ್ಞರನ್ನಾಗಿಯೇ ಇಡುತ್ತಾ ತಾನು ಬೆಳೆದು ತನ್ನ ಜನಾಂಗವನ್ನು ಮಾತ್ರ ಬೆಳೆಸುತ್ತಾ ಬಂದಿತು. ವಿದ್ಯಾವಂತ ಅಂದು ಬೋಧಿಸಿದ್ದು, ಕೆಳವರ್ಗದವನು ವಿದ್ಯೆ ಕಲಿಯಬಾರದು, ಹಣ ಗಳಿಸಬಾರದು, ಆಸ್ತಿ ಮಾಡಬಾರದು, ಆಭರಣ ತೊಡಬಾರದು ಇತ್ಯಾದಿ ಇತ್ಯಾದಿ. ಇಂಥವನ್ನು ಬೋಧಿಸಿ ಭಾರತದ ಅಪಾರ ಸಂಖ್ಯೆಯ ಜನರನ್ನು ಅಸಮಾನತೆಯ ತುಟ್ಟ ತುದಿಯನ್ನು ಮುಟ್ಟಿಸಿದರು. ವಿದ್ಯೆಯನ್ನು ಸಾರ್ವಜನಿಕ ಸ್ವತ್ತನ್ನಾಗಿ ಮಾಡದೆ ಭಾರತದ ಇಂದಿನ ಹಿಂದುಳಿದಿರುವಿಕೆಗೆ ಪ್ರಮುಖ ಕಾರಣರಾದವರು ಈ ಜನಾಂಗದ ಜನರೇ. ಇಂಥ ಜನರ ಒಂದು ಗುಂಪೇ ಇಂದು ಹಂಪನಾ ಅವರ ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು - ತತ್ವಕ್ಕೆ ಕನ್ನಡ ಸಾಹಿತ್ಯ ಪರಿಷತ್ತನ್ನು ತೆರೆದದ್ದು ಸಹಿಸದಾಯಿತು.

ಸತ್ಯದ ಹೋರಾಟಕ್ಕೆ ಹಂಪನಾ ಯಾವತ್ತೂ ಸಿದ್ಧವೇ ! ಈ ಎಲ್ಲ ಹೊರಗಿನ ಅನೇಕ ಕಿರುಕುಳಗಳ ಮಧ್ಯೆಯೂ ಹಂಪನಾ ಮನೆಯಲ್ಲಿ ಎಂದೂ ಶಾಂತ, ಸ್ನಿಗ್ಧ, ನಗುವಿನ ಮೂರ್ತಿ. ಹೊರಗಿನ ಬಿಸಿ ಮನೆಯ ತಂಪನ್ನು ಕೆಡಿಸದಂತೆ ನೋಡಿಕೊಂಡರು. ನಾನೂ ಮಕ್ಕಳೂ, ಆತ್ಮೀಯರೂ, ಚಿಂತಿತರಾದರೂ ನಮ್ಮನ್ನು ಸಮಾಧಾನಗೊಳಿಸಿ ಸಂತಸದಿಂದಿರುತ್ತಿದ್ದರು. ಪ್ರತಿಷ್ಠಿತನಾಗಿ ಬೆಳೆದ ವ್ಯಕ್ತಿಗೆ ಇಂಥ ಸವಾಲುಗಳು, ಕಿರುಕುಳಗಳು ಸಹಜ. ಅವುಗಳನ್ನು ಧೈರ್ಯದಿಂದ ಪ್ರತಿಭಟಿಸಿ ಗೆದ್ದು ನಿಂತಾಗಲೇ ಅವನು ಪರಿಪೂರ್ಣ ವ್ಯಕ್ತಿಯಾಗಿ ಬೆಳೆಯಬಲ್ಲ. ಈ ಅಗ್ನಿಪರೀಕ್ಷೆಗಳು ನಮ್ಮನ್ನು ಇನ್ನೂ ಗಟ್ಟಿಯಾಗಿ ಬೆಳೆಯಲು ಸಹಾಯ ಮಾಡುತ್ತವೆ.

ಇದಕ್ಕೆ ಚಿಂತೆ ಏಕೆ ? ಹೆಚ್ಚಿಗೆ ಕೆಲಸ ಮಾಡುವವನೇ ಹೆಚ್ಚಿನ ನಿಂದನೆಗೆ ಒಳಗಾಗುವವನು- ಎಂದು ಅನೇಕ ರೀತಿಯಲ್ಲಿ ಸಮಾಧಾನ ಹೇಳಿ ಮನೆ ಎಂದೂ ನಗುತ್ತಿರುವಂತೆ ಮಾಡಿದ ಅಸಾಧ್ಯ ಹಿರಿಮೆ ಹಂಪನಾ ಅವರದು.

ನಿರಂತರ ಹೋರಾಟದಲ್ಲಿಯೇ ಬೆಳೆದು ಬಂದ ಹಂಪನಾ ಹೋರಾಟದ ಬದುಕನ್ನೇ ಸವಾಲಾಗಿ ಸ್ವೀಕರಿಸಿದವರು. ಎಳೆವೆಯಿಂದಲೇ ತನಗೆ ಸರಿ ಕಂಡ ಸತ್ಯದ ನಿರ್ಧಾರವನ್ನು ಸ್ಥಾಪಿಸಲು ಹೊರಟವರು. ಯಾವುದೇ ಕಾರಣದಿಂದಲೂ ಸತ್ಯದ ಹೋರಾಟಕ್ಕೆ ರಾಜಿ ಮಾಡಿಕೊಳ್ಳದ ಹಂಪನಾ ಅವರಿಗೆ ಹೆಚ್ಚಿನ ಸಂಖ್ಯೆಯ ಮಿತ್ರರಿರುವಂತೆ ಸ್ವಲ್ಪ ಸಂಖ್ಯೆಯ ಶತ್ರುಗಳೂ ಇದ್ದಾರೆ. ತಪ್ಪು ಮಾಡದೆ ಇದ್ದ ಹಂಪನಾ ಅವರನ್ನು ಅವರ ಉಪಾಧ್ಯಾಯರು ಬೇಂಚಿನ ಮೇಲೆ ನಿಲ್ಲುವ ಶಿಕ್ಷೆ ವಿಧಿಸಿದಾಗ ಪ್ರತಿಭಟಿಸಿದವರು. ಕ್ಷಮಾಪಣೆ ಕೇಳೆಂದಾಗ ತಪ್ಪು ಮಾಡದ ನಾನು ಯಾವುದೇ ಕಾರಣಕ್ಕೂ ಕ್ಷಮಾಪಣೆ ಬೇಡಲಾರೆ ಎಂದು ಹಠ ಹಿಡಿದು ಶಾಲೆಯಿಂದ ಹೊರಬಂದ ಸ್ವಾಭಿಮಾನಿ ವಿದ್ಯಾರ್ಥಿ.

ಮುಂದೆ ಹಂಪನಾ ಅಧ್ಯಾಪಕರಾಗಿ, ಸಾಹಿತಿಯಾಗಿ ಬೆಳೆದಾಗ ಅದೇ ಶಾಲೆಯ ಅದೇ ಮುಖ್ಯೋಪಾಧ್ಯಾಯರು ಶಾಲೆಯ ರಜತ ಮಹೋತ್ಸವ ಸಮಾರಂಭದ ಅಧ್ಯಕ್ಷ ಪೀಠ ಕೊಟ್ಟು ಸನ್ಮಾನಿಸಿದ ಸಂದರ್ಭ ಒಬ್ಬನ ಬದುಕಿನಲ್ಲಿ ಅಪರೂಪದ ಘಟನೆ ಎಂದೇ ಹೇಳಬೇಕು. ತನ್ನ ಕಡೆಯಿಂದ ತಪ್ಪು ನಡೆದಿಲ್ಲವೆಂದಾಗ ಯಾವುದೇ ಕಾರಣಕ್ಕೂ ರಾಜಿಯಾಗದ ಮನೋಭಾವ ಹಂಪನಾ ಅವರದು.

ಬೆಳಗಿನ ಜಾವಕ್ಕೆ ಎದ್ದು ಚಂಕ್ರಮಣವನ್ನೋ ಅಥವಾ ಪ್ರಾಣಾಯಾಮ ಯೋಗಾಭ್ಯಾಸವನ್ನೋ ಮಾಡಿ ಸ್ವಲ್ಪ ವಿಶ್ರಾಂತಿಯ ನಂತರ ದಿನ ಪತ್ರಿಕೆಗಳ ಮೇಲೆ ಕಣ್ಣಾಡಿಸುವುದರಿಂದ ಹಂಪನಾ ದೈನಂದಿನ ಕಾರ್ಯಕ್ರಮ ಪ್ರಾರಂಭ. ಮಧ್ಯೆ ಮಧ್ಯೆ ದೂರವಾಣಿ ಕರೆಗೆ ಉತ್ತರ, ಬಂದು ಹೋಗುವವರ ಜೊತೆಯಲ್ಲಿ ಕನ್ನಡ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿಗೆ ಸಂಬಂಧಿಸಿದ ಮಾತುಕತೆ. ಅನಂತರ ತಮ್ಮ ಅಧ್ಯಯನ ಕೊಠಡಿ ಸೇರಿದರೆ ಅದೊಂದು ವಾಲ್ಮೀಕಿ ವಾಸ. ಆ ವಾಸ ಅವರಿಗೆ ತುಂಬಾ ಪ್ರಿಯವಾದುದೂ ಹೌದು.

ಪ್ರವಾಸ ಎಷ್ಟೇ ದೂರದ್ದಾಗಿರಲಿ, ಮನೆಗೆ ಬಂದು ತಣ್ಣೀರಿನಲ್ಲಿ ಕೈ ಕಾಲು ಮುಖ ತೊಳೆದು ಅಭ್ಯಾಸ ಕೊಠಡಿ ಸೇರಿದರೆಂದರೆ ಅವರನ್ನು ಎಚ್ಚರಿಸುವ ಕೆಲಸ ಸ್ವಲ್ಪ ಕಷ್ಟವೇ. ಕ.ಸಾ.ಪ.ದ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಅವರ ಪ್ರವಾಸ ಹೆಚ್ಚಿನದಾಗಿತ್ತು. ಗುಲ್ಬರ್ಗಾ, ಬೀದರ್, ಬೆಳಗಾವಿ, ಮಂಗಳೂರು, ಮಡಕೇರಿ ಹೀಗೆ ಹತ್ತೊಂಬತ್ತು ಜಿಲ್ಲೆಗಳ ನೂರಾಎಪ್ಪತ್ತೈದು ತಾಲ್ಲೂಕುಗಳ ಪ್ರವಾಸ ಆಗಾಗ, ಮೇಲಿಂದ ಮೇಲೆ ಬರುತ್ತಲೇ ಇದ್ದಿತು. ಪ್ರವಾಸದ ಆಯಾಸವನ್ನು ಎಂದೂ ಅವರಲ್ಲಿ ನಾನು ಕಾಣಲಿಲ್ಲ. ರಾತ್ರಿ ನಿದ್ದೆಗೆಟ್ಟು ಪ್ರಯಾಣ ಮಾಡಿ ಬೆಳಗಿನ ಹೊತ್ತಿಗೆ ಬೆಂಗಳೂರು ತಲುಪಿದರೂ ಅಂದಿನ ಕೆಲಸಕ್ಕೆ ಯಾವ ಕೊರತೆಯೂ ಇರುತ್ತಿರಲಿಲ್ಲ. ಬಂದ ಒಡನೆಯೇ ಐದು ನಿಮಿಷ ಕುಳಿತೋ ಅಥವಾ ಹಾಸಿಗೆಯ ಮೇಲೆ ಮಲಗಿಯೋ ಸ್ವಲ್ಪವೂ ವಿಶ್ರಾಂತಿ ತೆಗೆದುಕೊಳ್ಳದೆ ನೇರವಾಗಿ ಓದಲು ಅಥವಾ ಬರೆಯಲು ಅವರು ಕುಳಿತುಕೊಳ್ಳುವುದನ್ನು ನೋಡಿದರೆ ಆಶ್ಚರ್ಯವಾಗದೆ ಇರದು. ಇವರಿಗೆ ಆಯಾಸ ಆಗುವುದೇ ಇಲ್ಲವೇ? ಎಂದು ಮನೆಯವರೆಲ್ಲ ಪ್ರಶ್ನೆ ಹಾಕಿಕೊಂಡು ಚಕಿತರಾಗಿದ್ದೇವೆ.

ಸಾಂಸಾರಿಕ ಜವಾಬುದಾರಿಯ ಯಾವುದೇ ಹೊಣೆಯನ್ನು ಹಂಪನಾ ಹೊತ್ತವರಲ್ಲ. ಅನೇಕ ಮನೆಯ ಗಂಡಸರು ಬಹುಶಃ ಹಂಪನಾ ಅವರಂತೆ ಇರಲು ಸಾಧ್ಯ. ಆದರೆ ದುಡಿಯುವ ದಂಪತಿಗಳಾದಾಗ ಮಾತ್ರ ಪತ್ನಿಗೆ ಸ್ವಲ್ಪವಾದರೂ ನೆರವಾಗುವ ಪತಿಯನ್ನು ಅನೇಕ ಮನೆಗಳಲ್ಲಿ ಕಾಣಬಹುದು. ಅವಳೂ ನನ್ನ ಹಾಗೆ ದುಡಿಯುತ್ತಾಳೆ ಎನ್ನುವ ಮರುಕದಿಂದಲೋ ಅಥವಾ ಅವಳೂ ನನ್ನ ಹಾಗೆ ಸಂಪಾದಿಸುತ್ತಾಳೆ ಎನ್ನುವ ಅಕ್ಕರೆಯಿಂದಲೊ ಅಥವಾ ಅವಳು ನನಗೆ ಸರಿಸಮಾನಳು ಎನ್ನುವ ಗೌರವದಿಂದಲೋ ಏನೊ, ದುಡಿಯುವ ಮಹಿಳೆಗೆ ಸ್ವಲ್ಪವಾದರೂ ಸಹಾಯ ಮಾಡುವ ಗಂಡಂದಿರನ್ನು ಕಾಣಬಹುದು. ಆದರೆ ನಮ್ಮ ಮನೆಯಲ್ಲಿ ಮಾತ್ರ ಈ ವಿಷಯದಲ್ಲಿ ಹಂಪನಾ ದೂರವೇ ಉಳಿಯುತ್ತಾರೆ. ನನ್ನ ಹೊರ-ಒಳಗಿನ ಕೆಲಸದ ಬಗೆಗೆ ಅವರಿಗೆ ತಿಳಿವಿಲ್ಲವೆಂದಲ್ಲ ಸಹಾಯ ಮಾಡುವ ಮನಸ್ಸೂ ಇಲ್ಲವೆಂದಲ್ಲ. ನನ್ನ ಕೆಲಸದ ಭಾರವನ್ನು ಸ್ವಲ್ಪವಾದರೂ ಕಡಿಮೆಮಾಡಿ ಹಗುರಗೊಳಿಸುವ ಕಳಕಳಿ ಇದೆ. ಆದರೆ ಮಾಡುವ ಬಗೆ ತಿಳಿದಿಲ್ಲ. ಜೊತೆಗೆ ಅವರಿಗೆ ಸಮಯವೂ ಇಲ್ಲ. ಬಾಲ್ಯದಿಂದ ಅವರು ಬೆಳೆದಿರುವ ರೀತಿಯೇ ಬೇರೆ.

ನನಗೂ ಹಂಪನಾ ಅವರ ನಾಡು, ನುಡಿ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ, ಅಧ್ಯಾಪನದ ವಿಷಯದಲ್ಲಿ ಸಮಾನ ಅಭಿರುಚಿ ಇರುವುದರಿಂದ ಹಂಪನಾ ನನಗೆ ಸಹಾಯ ಮಾಡುವುದಿಲ್ಲ ಎನ್ನುವ ಕೊರಗು ನನಗೆ ಇಲ್ಲ. ಬದಲಾಗಿ ಅವರ ಕೆಲಸದಲ್ಲಿ ನಾನೂ ಏನಾದರೂ ಸಹಾಯ ಮಾಡಲು ಸಾಧ್ಯವೇ ಎಂದು ಯೋಚಿಸುವೆ. ಅಂಥ ಸಂದರ್ಭಗಳು ನನಗೆ ತುಂಬಾ ಸಂತೃಪ್ತಿ ತರುತ್ತವೆ.

ಸ್ವಭಾವತಃ ಸ್ವಲ್ಪ ಗಂಭೀರ ಸ್ವಭಾವದವಳಾದ ನನಗೆ ಹರ್ಷದ ಕ್ಷಣಗಳನ್ನು ನಗುತ್ತಾ ಸ್ವೀಕರಿಸುವಂತೆ ಬದುಕಿನ ಬವಣೆಗಳನ್ನು ನಗುನಗುತ್ತಾ ಅನುಭವಿಸುವ ಮೊದಲ ಪಾಠ ಕಲಿಸಿದ ಗುರು ಹಂಪನಾ. ಎಂಥದೇ ಸಂದರ್ಭದಲ್ಲಿಯೂ ಹಾಲಾಗಲೀ ಹಾಲಾಹಲವಾಗಲೀ ನುಂಗಿ ನಗುವನ್ನು ಚೆಲ್ಲುವ ಮನೋಭಾವವನ್ನು ಅವರಲ್ಲಿ ಕಂಡು ನನ್ನ ಬದುಕಿನಲ್ಲಿಯೂ ಅಳವಡಿಸಿಕೊಳ್ಳುವ ಪ್ರಯತ್ನ ಮಾಡುತ್ತಲೇ ಬಂದಿದ್ದೇನೆ.

ಹಂಪನಾ ಇರುವ ಕಡೆ ನಗೆ ಕೇಕೆ ಆನಂದ ಚಟುವಟಿಕೆಯ ಕ್ರಿಯೆಗಳು ಹೆಚ್ಚೆಂದೇ ಹೇಳಬೇಕು. ಹಂಪನಾ ಹೊರಗೆ ಹೇಗೋ ಮನೆಯಲ್ಲಿಯೂ ಹಾಗೆಯೇ -ನಗುವಿನ ಅಲೆಗಳು, ತಮಾಷೆಯ ತುಂತುರು ಹನಿಗಳು. ನನ್ನ ಕೆಲಸದ ಒತ್ತಡ ನೋಡಿ ಅವರ ಅಂತಃಕರಣ ಮಿಡಿಯುತ್ತಿರುವುದು ನನಗೆ ತಿಳಿದಿದೆ. ಕೆಲವೊಮ್ಮೆ ಅವರು ಪೇಚಾಡುತ್ತಲೇ ನಗುವಿನ ಲಹರಿ ಹರಿಸುತ್ತಾರೆ. "ಕಮಲಾ ನನ್ನ ಹೆಸರನ್ನು ಕೇಳಿ ನೀನು ತುಂಬಾ ಮೋಸಹೋದೆ. 'ನಾಗರಾಜ' ಎಂದರೆ ಇವನು ಯಾವುದೋ ಒಂದು ದೇಶದ ರಾಜ, ಕೈಗೊಬ್ಬ ಆಳು, ಕಾಲಿಗೊಬ್ಬ ಆಳು ಇರುತ್ತಾರೆ. ಸುಖವಾಗಿ ಇರಬಹುದು ಎಂದು ನನ್ನನ್ನು ಪ್ರೇಮಿಸಿ ಮದುವೆ ಆದೆ. ಆದರೆ ಈಗ ನಿನ್ನ ಅವಸ್ಥೆ ನೋಡು ಏನಾಗಿದೆ, ನೀನು ಪೂರ್ತಿ ಮೋಸಹೋದೆ."

ಹಂಪನಾ ಮಾತುಗಳು ಹಾಸ್ಯವನ್ನು ಹರಿಸುವಂತೆ ಕೆಲವೊಮ್ಮೆ ತುಂಬಾ ಗಂಭೀರ ಆಗುವುದೂ ಉಂಟು. ಅ ಂಥ ಸಂದರ್ಭದಲ್ಲಿ ಹೀಗೆ ಹೇಳುತ್ತಾರೆ. "ಕಮಲಾ ನೀನು ಬರೆಯುತ್ತಲೋ ಅಥವಾ ಓದುತ್ತಲೋ ಕುಳಿತಿರುವುದನ್ನು ನೋಡಲು ನನಗೆ ತುಂಬಾ ಇಷ್ಟ.

ವೇದಿಕೆಗಳ ಮೇಲೆ ಉಪನ್ಯಾಸ ಮಾಡುತ್ತಿರುವ ನಿನ್ನ ಭಂಗಿ ನನಗೆ ತುಂಬಾ ಮೆಚ್ಚು, ಪ್ರಿಯ, ಪ್ರೇಕ್ಷಕವರ್ಗದಲ್ಲಿ ಕುಳಿತು ಭಾಷಣಗಳನ್ನು ತದೇಕ ಚಿತ್ತದಿಂದ ಕೇಳುತ್ತಿರುವ ನಿನ್ನನ್ನು ನೋಡುವುದು ನನಗೆ ಆನಂದದ ವಿಷಯ, ಆದರೆ ಲೇಖನಿಯನ್ನು ಹೆಚ್ಚು ಹಿಡಿಯಬೇಕಾದ ನಿನ್ನ ಕೈ ಅಡಿಗೆ ಮನೆಯಲ್ಲಿ ಸೌಟನ್ನು ಹಿಡಿದಿರುವುದನ್ನು ನೋಡಿದಾಗ ನನಗೆ ತುಂಬಾ ವ್ಯಸನ ಆಗುತ್ತೆ.'' ನೋವಿನ ಹಿಂದಿನ ಮಾತಿನಲ್ಲಿ ನಗು ಚಿಮ್ಮುತ್ತದೆ. ''ಕಮಲಾ ನೀನು ತುಂಬಾ ಸ್ವಾರ್ಥಿ, ಅಡಿಗೆ ವಿದ್ಯೆಯನ್ನು ನನಗೆ ನೀನು ಸ್ವಲ್ಪವೂ ಹೇಳಿಕೊಡಲಿಲ್ಲ.''

''ಕಮಲಾ ನಿನ್ನಕೈ ಅದೆಷ್ಟು ಒಳ್ಳೆಯದು. ಏನೇ ಮಾಡಿದರೂ. ಎಷ್ಟು ಶುಚಿಯಾಗಿ, ಅದೆಷ್ಟು ರುಚಿಯಾಗಿ ಮಾಡುತ್ತೀಯೆ. ಇಂಥ ಕೈಗಳಿಗೆ ಹಿಂದಿನವರು ಬಂಗಾರದ ಕಡಗ ತೊಡಗಿಸುತ್ತಿದ್ದರು. ನಾನು ನಿನ್ನ ಕೈಗೆ ಎರಡೆರಡು ಪ್ಲಾಸ್ಟಿಕ್ ಬಳೆಗಳನ್ನು ಮಾಡಿಸಿ ಹಾಕುತ್ತೇನೆ.'' ಮೆಚ್ಚಿಗೆ ಹಾಸ್ಯ ಎರಡೂ ಬೆರೆತ ಅವರ ಮಾತಿಗೆ ಮಕ್ಕಳು, ನನ್ನ ಪ್ರತಿಕ್ರಿಯೆ ನಗುವಷ್ಟೆ !

ಹಂಪನಾ ಅವರಿಗೆ ಅಡಿಗೆ ಮಾಡಿ ಬಡಿಸುವುದಕ್ಕೆ ತುಂಬಾ ಸಂತೋಷ ಆಗುತ್ತೆ. ಯಾವುದೇ ಸಂದರ್ಭದಲ್ಲಿಯೂ ಅಡಿಗೆಯಾಗಲಿ, ತಿಂಡಿಯಾಗಲಿ-ಅದನ್ನು ತೆಗಳಿದ್ದನ್ನು ನಾನು ಕೇಳಿಲ್ಲ. ಅಥವಾ ತಿನ್ನಬೇಕಲ್ಲಪ್ಪಾ ಎನ್ನುವ ಬೇಸರವನ್ನು ತೋರಿದ್ದಾಗಲೀ ನಾನು ಕಂಡಿಲ್ಲ. ಬಡಿಸಿದ ಬಿಸಿ ಬಿಸಿ ಆಹಾರವನ್ನು ಸಂತೋಷದಿಂದ ಊಟ ಮಾಡುವ ಸ್ವಭಾವ ಅವರದು. ನಿಜ, ನಾನೂ ಸಹ ಬೇಕಾಬಿಟ್ಟಿ ಮಾಡಿ ಬಡಿಸಿದ್ದಿಲ್ಲ. ನನಗೇ ಅಡಿಗೆ-ತಿಂಡಿಗಳ ರುಚಿ-ಶುಚಿಗಳ ಬಗ್ಗೆ ತುಂಬಾ ಆಸಕ್ತಿಯಿರುವುದರಿಂದ ಅವುಗಳು ಕೆಡುವ ಸಂಭವ ಅಪರೂಪವೆಂದೇ ಹೇಳಬೇಕು. ಆದ್ದರಿಂದಲೇ ಏನೋ ಮನೆಯಲ್ಲಿರುವ ನನ್ನ ಹೆಚ್ಚು ಸಮಯ ಅಡಿಗೆ ಮನೆಯಲ್ಲಿಯೇ ಕರಗಿ ಹೋಗತ್ತದೆ.

ನಾವು ವಾಸ ಮಾಡುತ್ತಿರುವುದು ಮಹಡಿ ಮನೆಯಲ್ಲಿ ಹಂಪನಾ ಅವರು ಕೆಳಗಡೆ ಬಾಗಿಲನ್ನು ಪ್ರವೇಶಿಸುತ್ತಿದ್ದಂತೆಯೇ 'ಕಮಲಾ, ಕಮಲಾ' ಎಂದು ಎರಡು ಮೂರು ಬಾರಿಯಾದರೂ ಕರೆಯುತ್ತಾ ಮೆಟ್ಟಿಲು ಹತ್ತಿ ಮೇಲೇರಿ ಬರುತ್ತಾರೆ. ಇದು ಅವರ ಅಭ್ಯಾಸವೇ ಆಗಿಹೋಗಿದೆ. ಅವರ ಜೊತೆಯಲ್ಲಿ ಯಾರಾದರೂ ಇದ್ದರೆ ಮಾತ್ರ ಅಂದು ಈ ಅಭ್ಯಾಸಕ್ಕೆ ವಿರಾಮ. ಎತ್ತರದ ಧ್ವನಿಯಲ್ಲಿ ಅವರು ನನ್ನ ಹೆಸರಿಡಿದು ಕೂಗುವುದನ್ನು ನಾನು ಆಕ್ಷೇಪಿಸುತ್ತೇನೆ. 'ಏನ್ರಿ, ಇಷ್ಟು ಜೋರಾಗಿ ಕರೀತೀರಿ. ಕೆಳಗಿನ ಮನೆಯವರು ಅಕ್ಕಪಕ್ಕದ ಮನೆಯವರು ಕೇಳಿಸಿಕೊಂಡರೆ ಏನು ತಿಳಿದುಕೊಳ್ಳುತ್ತಾರೆ, ಸ್ವಲ್ಪ ಮೆಲ್ಲನೆ ಕರೀಬಾರದೇ?' ಎನ್ನುವ ನನ್ನ ಆಕ್ಷೇಪಕ್ಕೆ 'ಹೌದು ಕಮಲಾ, ನಾನು ಹಾಗೇ ಕರೆಯುವುದು. ಅವರಿಗೆಲ್ಲಾ ಗೊತ್ತಾಗಬೇಕೋ ಬೇಡವೊ, ನಾನು ನಿನ್ನನ್ನು ಎಷ್ಟು ಪ್ರೀತಿಸುತ್ತೇನೆ ಅನ್ನೋದು. ಅವರು ತಮ್ಮ ತಮ್ಮ ಗಂಡಂದಿರಿಗೆ ಹೇಳಿ ಅವರೂ ತಮ್ಮ ಹೆಂಡತಿಯರನ್ನು ಹಾಗೆ ಕರೆಯಲು ಹೇಳಬೇಡವೇ? ನೀನು ಸುಮ್ಮನಿರು, ಇಲ್ಲದಿದ್ದರೆ ಇನ್ನೂ ಗಟ್ಟಿಯಾಗಿ ಕೂಗುತ್ತೇನೆ ಅಷ್ಟೇ' ಇಂಥ ಜಗಮೊಂಡರಿಗೆ ನಾನು ಬುದ್ಧಿ ಕಲಿಸುವುದಾದರೂ ಹೇಗೆ?

ನನಗೆ ತುಂಬಾ ಪ್ರಿಯವಾದ ಹಣ್ಣುಗಳೆಂದರೆ ಮಾವಿನ ಹಣ್ಣು, ಹಲಸಿನ ಹಣ್ಣು. ಈ ಹಣ್ಣುಗಳ ಕಾಲದಲ್ಲಿ ಹಂಪನಾ ಅವರು ನೆನಪಿಟ್ಟುಕೊಂಡು ಆಗಾಗ ಹಣ್ಣುಗಳನ್ನು ತರುತ್ತಾರೆ.

ಅವರು ತರುವ ಮಾವಿನ ಹಣ್ಣುಗಳು ತುಂಬಾ ರುಚಿಯಾಗಿರುತ್ತವೆ. ಆದರೆ ಹಲಸಿನ ಹಣ್ಣು? 'ಕಮಲಾ ನೋಡು, ನಿನ್ನ ಸೈಜಿನ ಹಣ್ಣನ್ನು ತಂದಿದ್ದೇನೆ. ನೀನು ನಾಲ್ಕು ದಿವಸ ತಿಂದರೂ ಮುಗಿಯುವುದಿಲ್ಲ. ಈ ಕಾಯಿ ಹಣ್ಣಾಗಿ ನಾಳೆ ನಾಡಿದ್ದರಲ್ಲಿ ವಾಸನೆ ಬರುತ್ತದಂತೆ, ಆಮೇಲೆ ಅದನ್ನು ಸುಲಿಯಬಹುದು'-ಎನ್ನುತ್ತಾರೆ. ನೋಡಲು ಅಂದವಾಗಿರುವ ಆ ದೊಡ್ಡ ಗಾತ್ರದ ಹಲಸಿನ ಹಣ್ಣು ಹದಿನೈದು ದಿವಸವಾದರೂ ಸುವಾಸನೆ ಬರದೆ ಕೊಳೆಯಲು ಪ್ರಾರಂಭಿಸಿದಾಗ ಹಂಪನಾ ಅವರ ಪೇಚಾಟ ನೋಡಬೇಕು. 'ಕಮಲಾ ಯಃಕಶ್ಚಿತ್ ಹಲಸಿನ ತೊಳೆ ನಿನಗೆ ತಿನ್ನಿಸಲಾಗಲಿಲ್ಲ' ಎಂದು ಪರಿತಪಿಸುತ್ತಾರೆ, ಆದರೆ ಅವರ ಆಸೆ ಮಾತ್ರ ಸ್ವಲ್ಪವೂ ಕುಂದಿಲ್ಲ. ಇದು ಮೂವತ್ತೇಳು ವರುಷಗಳಿಂದಲೂ ಪ್ರತಿ ವರುಷವೂ ನಡೆಯುವ ಒಂದು ಮುಖ್ಯ ಕಾರ್ಯಕ್ರಮವೇ ಆಗಿಹೋಗಿದೆ.

ಅಂತರಜಾತಿ-ಹಾಗೂ ಅಂತರ ಧರ್ಮೀಯ ವಿವಾಹವಾದ ನನಗೆ ಸಂಸಾರ ಹೂಡಿದ ಪ್ರಾರಂಭದ ದಿವಸಗಳಲ್ಲಿ ಹಂಪನಾ ಅವರಿಂದ ನನ್ನ ಸ್ವಾತಂತ್ರ್ಯಕ್ಕೆ ನನ್ನ ಅನಿಸಿಕೆಗಳಿಗೆ ಏನಾದರೂ ಧಕ್ಕೆ ಬರಬಹುದೇನೋ ಎನ್ನುವ ಭೀತಿ ಇದ್ದಿತು. ಆದರೆ ನಾನು ಅವರನ್ನು ಅತ್ಯಂತ ಗೌರವದಿಂದ ಕಂಡಂತೆ ಅವರೂ ನನ್ನನ್ನು ಗೌರವಾದರಗಳಿಂದ ಕಂಡರು, ಒಬ್ಬರು ಮತ್ತೊಬ್ಬರನ್ನು ನಂಬುವುದು, ಇಬ್ಬರೂ ಪರಸ್ಪರ ಅರ್ಥಮಾಡಿಕೊಳ್ಳುವುದು, ಪರಸ್ಪರ ಅಲ್ಪಸ್ವಲ್ಪ ತ್ಯಾಗ. ಇವು ಯಾವುದೇ ದಾಂಪತ್ಯದಲ್ಲಿ ಮುಖ್ಯ ಎನ್ನುವುದನ್ನು ಆಚರಣೆಯ ಮೂಲಕ ತೋರಿಸಿ ನನ್ನಲ್ಲಿ ಹೆಚ್ಚಿನ ಆತ್ಮವಿಶ್ವಾಸ ಮೂಡುವಂತೆ ಮಾಡಿದರು.

ನಾವು ಸಂಸಾರ ಹೂಡಿದ ಪ್ರಾರಂಭದ ದಿವಸಗಳಲ್ಲಿ ಅಂದಂದಿನ ಮನೆಯ ವೆಚ್ಚವನ್ನು ದಿನಚರಿಯಲ್ಲಿ ಅಂದಂದು ಬರೆದಿಡುವ ಪರಿಪಾಠ ಅಭ್ಯಾಸವಿತ್ತು. ಇನ್ನೇನು ಮಲಗಬೇಕು ಎನ್ನುವಾಗ ಅಂದಿನ ದಿನಚರಿಯ ಲೆಖ್ಖ ಮುಗಿಸಲು ಕುಳಿತುಕೊಳ್ಳುತ್ತಿದ್ದೆ. ಒಮ್ಮೊಮ್ಮೆ ಲೆಖ್ಖ ಸ್ವಲ್ಪ ಏರುಪೇರಾಗಿ ಹದಿನೈದು ಇಪ್ಪತ್ತು ನಿಮಿಷಗಳು ಕಳೆದರೂ ಮುಗಿಯುತ್ತಿರಲಿಲ್ಲ. ಅಂಥ ಸಮಯದಲ್ಲೆಲ್ಲಾ ಹಂಪನಾ 'ನೋಡು ಕಮಲಾ, ನಾವಿಬ್ಬರೂ ಅನ್ಯಥಾ ಯಾವುದಕ್ಕೂ ದುಂದು ವೆಚ್ಚ ಮಾಡುವುದಿಲ್ಲ. ಮಾಡುವ ಖರ್ಚು ಸಂಸಾರಕ್ಕೆ ಅಥವಾ ಸಾರ್ಥಕವಾದುದಕ್ಕೆ. ಅದಕ್ಕೆ ಏಕೆ ಲೆಕ್ಕ ಬೇಕು, ದೊಡ್ಡ ಪದಾರ್ಥಗಳು, ಹೆಚ್ಚಿನ ಪದಾರ್ಥಗಳನ್ನು ಕೊಂಡಿದ್ದಕ್ಕೆ ರಸೀತಿಗಳೇ ಇರುತ್ತವೆ. ದೈನಂದಿನ ಖರ್ಚಿನದು ಕಡಮೆ ಹಣ. ಅದರಲ್ಲಿ ಒಂದೆರಡು ರೂಪಾಯಿಗಳು ಜಾಸ್ತಿಯಾಗಬಹುದು ಅಥವಾ ಕಡಿಮೆಯಾಗಬಹುದು. ಅದಕ್ಕಾಗಿ ದಿವಸದಲ್ಲಿ ಹದಿನೈದು ಇಪ್ಪತ್ತು ಸಾರ್ಥಕ ನಿಮಿಷಗಳನ್ನು ಕಳೆದುಕೊಳ್ಳುವುದು ಸರಿಯೇ ? ಅದೇ ಸಮಯವನ್ನು ಓದಲೋ ಬರೆಯಲೋ ಉಪಯೋಗಿಸಿಕೋ, ಅದಕ್ಕೆ ನಮಗೆ ಎಷ್ಟು ಸಮಯ ಸಿಕ್ಕಿದರೂ ಸಾಲದು' ಎಂದು ಹೇಳಿ ದಿವಸದ ಕೆಲವು ಕ್ಷಣಗಳು ನನಗೆ ಉಳಿಯುವಂತೆ ಮಾಡಿದರು.

ನಮ್ಮ ಮದುವೆ ಆದಾಗ ಹಂಪನಾ ದಾವಣಗೆರೆ ಡಿ.ಆರ್.ಎಂ. ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ಅನಂತರ ಶಿವಮೊಗ್ಗದ ಸಹ್ಯಾದ್ರಿ ಕಾಲೇಜಿಗೆ ವರ್ಗವಾಗಿ ಅಲ್ಲಿ ಒಂದೂವರೆ ವರುಷ ಇದ್ದರು. ಆಗ ನಾನು ಬೆಂಗಳೂರಿನ ಮಹಾರಾಣಿ ಕಾಲೇಜಿನಲ್ಲಿ ಅಧ್ಯಾಪಕಿಯಾಗಿದ್ದೆ. ನಮ್ಮ ಮನೆ ಮಲ್ಲೇಶ್ವರಂ ಎಂಟನೇ ಕ್ರಾಸಿನಲ್ಲಿ ಇದ್ದಿತು.

ಕಾಲೇಜಿಗೂ ಮನೆಗೂ ಓಡಾಡಲು ಹನ್ನೊಂದನೇ ನಂಬರ್ ಬಸ್ಸಿನ ಅನುಕೂಲವಿದ್ದಿತು. ನಾನು ಹಾಗೆಯೇ ಓಡಾಡುತ್ತಿದ್ದೆ. ಶಿವಮೊಗ್ಗದಿಂದ ಹಂಪನಾ ಬೆಂಗಳೂರಿನ ಸರ್ಕಾರಿ ಕಾಲೇಜಿಗೆ ವರ್ಗವಾಗಿ ಬಂದರು. ಇಲ್ಲಿ ಬಸ್ಸಿನ ಓಡಾಟ ಅವರಿಗೆ ಒಂದು ತಿಂಗಳ ಅವಧಿಯಲ್ಲಿಯೇ ಸಾಕಷ್ಟು ಬೇಸರ ತಂದಿತು. ಬಸ್ಸಿಗೆ ಕಾಯುವುದರಲ್ಲಿ ಹೆಚ್ಚು ಸಮಯ ದಂಡವಾಗುವುದನ್ನು ಅವರು ಸ್ವಲ್ಪವೂ ಸಹಿಸಿಕೊಳ್ಳಲಾಗಲಿಲ್ಲ. ಸಾಲ ಮಾಡಿ ಸ್ಕೂಟರ್ ಕೊಂಡರು. ಸಾಲವನ್ನೇನೋ ಬೇಗನೆ ತೀರಿಸಿದರು. ನನ್ನನ್ನು ಪ್ರತಿ ದಿವಸ ನನ್ನ ಕಾಲೇಜಿಗೆ ಬಿಟ್ಟು ಅನಂತರ ಅವರು ತಮ್ಮ ಕಾಲೇಜಿಗೆ ಹೋಗುತ್ತಿದ್ದರು. ಹಿಂತಿರುಗಿ ಬರುವಾಗ ನನ್ನ ಅವರ ಭೇಟಿ ಸಾಧ್ಯವಾಗುತ್ತಿರಲಿಲ್ಲ. ನಮ್ಮ ಕಾಲೇಜಿನಲ್ಲಿ ಅಧ್ಯಾಪಕರು ಸಂಜೆ ನಾಲ್ಕು ಗಂಟೆಯವರೆಗೂ ಇರಲೇಬೇಕೆಂಬ ಕಟ್ಟುಪಾಡು ಇದ್ದುದರಿಂದ ಮತ್ತು ಕೆಲವು ದಿವಸಗಳು ನಾಲ್ಕರಿಂದ ಐದು ಗಂಟೆಯ ತರಗತಿಗಳು ಇರುತ್ತಿದ್ದುದರಿಂದ ನಾನು ಕಾಲೇಜಿನಿಂದ ಮನೆಗೆ ಹೊರಡುವುದು ತಡವಾಗುತ್ತಿತ್ತು. ಆಗ ಹಂಪನಾ ಅವರದು ಒಂದೇ ಗಲಾಟೆ. 'ಸಂಜೆ ನೀನು ಬಸ್ಸಿಗೆ ಕಾದು ಸಮಯ ದಂಡ ಮಾಡಬಾರದು. ಆಯುಷ್ಯದಲ್ಲಿ ಹೆಚ್ಚಿನ ಸಮಯ ಬಸ್ ಸ್ಟಾಪಿನಲ್ಲಿಯೇ ಕಳೆದರೆ ನಾವು ಸಾಧಿಸುವುದಾದರೂ ಏನು ? ನೀನು ರಿಕ್ಷಾದಲ್ಲಿ ಬಂದು ಬಿಡು. ಹಣ ಸಂಪಾದಿಸಬಹುದು. ಸಮಯ ಸಂಪಾದಿಸಲು ಸಾಧ್ಯವೆ ? ದಿವಸಕ್ಕೆ ಇರುವುದೇ ಇಪ್ಪತ್ನಾಲ್ಕು ಗಂಟೆ' ಎಂದು ಹೇಳಿ ಆ ಸಮಯವೂ ನನಗೆ ಉಳಿಯುವಂತೆ ಮಾಡಿದರು. ಅಂದಿನ ಕಡಿಮೆ ಸಂಬಳದಲ್ಲಿ ರಿಕ್ಷಾದಲ್ಲಿ ಓಡಾಡಲು ಮನಸ್ಸು ಸ್ವಲ್ಪ ಹಿಂತೆಗೆದರೂ ಹಂಪನಾ ಅವರ ಮಾತನ್ನು ನಾನು ಕೇಳಿದೆ.

ಮೇಲಿನ ಉದಾಹರಣೆಗಳು ಸಾಮಾನ್ಯವೆನಿಸಿದರೂ ಇದರ ಹಿಂದೆ ಹಂಪನಾ ಅವರು ಸಮಯಕ್ಕೆ ಕೊಡುತ್ತಿದ್ದ ಮಹತ್ವವನ್ನು ಅರಿಯಬಹುದು. ನಾನೂ ಅವರೂ ಅದೇ ರೀತಿ ಬದುಕಿನಲ್ಲಿ ಅಂದಿನಿಂದ ಇಂದಿನವರೆಗೂ ನಡೆದುಕೊಂಡು ಬಂದಿದ್ದರಿಂದಲೇ ನಾವಿಬ್ಬರೂ ಅಲ್ಪಸ್ವಲ್ಪ ಸಾಹಿತ್ಯದ ಕೆಲಸ ಮಾಡಲು ಸಾಧ್ಯವಾಯಿತು. ನಮ್ಮಿಬ್ಬರಿಗೆ ಕಾಲೇಜಿನ ಪಾಠ ನಮ್ಮ ಮೊದಲ ಕರ್ತವ್ಯ, ಅನಂತರ ಸಾಹಿತ್ಯದ ಕೆಲಸ, ಅದು ಎಂದೂ ಮುಗಿಯದ ಕೆಲಸ. ನಾನು ಮೂವತ್ತೇಳು ವರುಷಗಳಿಂದ, ಹಂಪನಾ ಮೂವತ್ತೊಂಬತ್ತು ವರುಷಗಳಿಂದ ನಮ್ಮ ಕೈಲಾದ ಮಟ್ಟಿಗೂ ಕನ್ನಡದ ಕೆಲಸವನ್ನು ಅಲ್ಪಸ್ವಲ್ಪ ಮಾಡಿಕೊಂಡು ಬಂದಿದ್ದೇವೆ.

ನಾನು ಬೆಳಿಗ್ಗೆ ಅಡಿಗೆ ಮನೆಯನ್ನು ಹೊಕ್ಕರೆ ನನ್ನ ಅಡಿಗೆ ಕೆಲಸಗಳೆಲ್ಲಾ ಬೇಗ ಬೇಗನೆ ಮುಗಿಯಬೇಕು, ಹೆಚ್ಚು ಹೊತ್ತು ನನಗೆ ಅಲ್ಲಿಯೇ ಇರಲು ಸಮಯವೂ ಇಲ್ಲ. ಮೊದಲಾಗಿ ಮನಸ್ಸೂ ಇಲ್ಲ. ಮಾಡುವುದನ್ನೆಲ್ಲಾ ಆದಷ್ಟು ಬೇಗ ಮಾಡಿ ಮುಗಿಸಬೇಕು. ಆದ್ದರಿಂದ ಒಂದು ಒಲೆಯ ಮೇಲೆ ಹಾಲಿನ ಕುಕ್ಕರ್, ಇನ್ನೊಂದರಲ್ಲಿ ಅನ್ನದ ಕುಕ್ಕರ್ ಮಗದೊಂದರಲ್ಲಿ ಹುಳಿಯ ಕುಕ್ಕರ್, ಮಿಕ್ಸಿಯಲ್ಲಿ ಕಾರ ತಿರುವಿಕೊಳ್ಳುವುದು, ಹುರಿಯುವ, ಒಗ್ಗರಣೆ ಹಾಕುವ ಕೆಲಸಗಳು ಏಕಕಾಲದಲ್ಲಿ ಪ್ರಾರಂಭವಾಗಿ ಅಡಿಗೆ ಮನೆಯಿಂದ ವಿಚಿತ್ರವಾದ ಸಮ್ಮಿಶ್ರ ಶಬ್ದ ಬರುತ್ತಿರುತ್ತದೆ. ಆಗ ಹಂಪನಾ 'ಓಹೋ ಕಮಲಮ್ಮನ ಕಾರ್ಖಾನೆ ಪ್ರಾರಂಭವಾಯಿತು. ಇನ್ನೇನು ತಟ್ಟೆ ಹಾಕಿಕೊಳ್ಳುವುದೇ, ತಿಂಡಿ-ಊಟ-ಎಲ್ಲ ಸಿದ್ಧ' ಎಂದು ಹಾಸ್ಯ ಮಾಡುತ್ತಾರೆ. ಒಗ್ಗರಣೆಯ ಘಾಟಿಗೆ 'ಕಮ್ಮಲಮ್ಮನ ಘಾಟು ತುಂಬಾ ಜೋರು' ಎಂದು ನಗುತ್ತಾ ನುಡಿಯುತ್ತಾರೆ. "ಎರಡು ಕೈ ಇಟ್ಟು ಕೊಂಡೇ ಇಷ್ಟು ಕೆಲಸ ಮಾಡುತ್ತೀಯಲ್ಲಾ, ಇನ್ನು ದೇವತೆಗಳಿಗಿರು

ಮಾತ್ರ ನಾಲ್ಕು ಕೈಗಳಿದ್ದರೆ ಇನ್ನೂ ಏನೆಲ್ಲ ಮಾಡಿಬಿಡುತ್ತಿದ್ದೆಯೋ? ದೇವರು ನನಗೆ ಒಳ್ಳೆ ಒಬ್ಬ ದೇವತೆ ಹೆಂಡತಿಯನ್ನು ಕರುಣಿಸಿದ, ಆದರೆ ಆ ದೇವತೆಗೆ ಕೈಗಳನ್ನು ಮಾತ್ರ ಎರಡೇ ಕೊಟ್ಟನಲ್ಲಾ"ಎಂದು ಹೊಗಳಿ ತಮ್ಮ ಕೆಲಸ ಗಿಟ್ಟಿಸಿಕೊಳ್ಳುವ ವಿದ್ಯೆ ಹಂಪನಾ ಅವರಿಗೆ ಕರಗತ.

ಹಂಪನಾ ಅವರ ತಾಯಿಯವರು, ಅಂದರೆ ನನ್ನ ಅತ್ತೆಯವರು ಅವರಿಗೆ ಬೇಕಾದ ಅಡಿಗೆ ತಿಂಡಿಯನ್ನು ಮಡಿಯಲ್ಲಿ ಅವರೇ ಮಾಡಿಕೊಳ್ಳುತ್ತಾರೆ. ಹಾಗೆ ಮಾಡಿದಾಗ 'ರಾಜಾ (ಮಗನನ್ನು ಅವರು ಅದೇ ರೀತಿ ಕರೆಯುವುದು) ರೊಟ್ಟಿ ಮಾಡಿದ್ದೇನೆ, ಬಿಸೀದು, ಒಂದು ತಿನ್ನಪ್ಪ' ಎಂದು ಹೇಳುವುದೇ ತಡ, ಹಸಿವಿರಲಿ ಇಲ್ಲದಿರಲಿ, ಬೇಕಿರಲಿ, ಬೇಡದಿರಲಿ ಒಡನೆಯೇ ನಮ್ಮ ಮಗನಾಗಿ ತಟ್ಟೆಯನ್ನು ತಾಯಿಯ ಮುಂದೆ ಹಿಡಿದು ತಿಂಡಿ ಹಾಕಿಸಿಕೊಳ್ಳುದನ್ನು ನೋಡಿದರೆ ತುಂಬಾ ಸಂತೋಷವಾಗುತ್ತದೆ. ಹತ್ತಿರ ಹೋಗಿ ತಟ್ಟೆ ಹಿಡಿದು ಚಿಕ್ಕ ಬಾಲಕನಂತೆ ನಿಂತ ಮಗನಿಗೆ 'ನಾನೇ ಬರುತ್ತಿದ್ದೇ'ಎಂದು ಹೇಳುವ ತಾಯಿ', 'ನಿನಗೆ ವಯಸ್ಸಾಗಿದೆ. ನಿನ್ನ ಹತ್ತಿರಕ್ಕೆ ನಾನೇ ಬರಬೇಕಮ್ಮ' ಎನ್ನುವ ಮಗ-ಇವರ ಸಂಭಾಷಣೆ, ಆತ್ಮೀಯತೆ, ಗೌರವದ ಸಂಕೇತ.

ಊರಿಗೆ ಹೊರಟು ನಿಲ್ಲುವ ತಾಯಿಯ ಕೈಗೆ ಹಣ ಕೊಟ್ಟು 'ಇಟ್ಟುಕೋ ಅಮ್ಮ, ಇದು ನಿನ್ನ ಹತ್ತಿರ ಇರಲಿ' ಎನ್ನುವ ಮಗ, 'ನನಗ್ಯಾಕಪ್ಪ ದುಡ್ಡು, ಏನು ಕೇಳಿದರೂ ತಂದು ಕೊಡುವ ಮಗ, ಸೊಸೆ ಇರುವಾಗ, ಎಂದು ಹೇಳುವ ತಾಯಿ, ದುಡ್ಡು ಕಾಸಿನ ವಿಷಯದಲ್ಲಿ ಇಂಥ ಬಾಂಧವ್ಯ ಇರುವುದು ತುಂಬಾ ಅಪರೂಪವೆಂದೇ ನನ್ನ ಅನಿಸಿಕೆ.

ನಮ್ಮ ಮಗ ಹರ್ಷನಿಗೆ ಹದಿನಾರು ವರ್ಷ ತುಂಬಿದ ಹುಟ್ಟಿದ ಹಬ್ಬದಂದು, 'ಹರ್ಷ ನೀನು ಇನ್ನು ಮುಂದೆ ನನ್ನ ಗೆಳೆಯ ಕಣಯ್ಯ' ಎಂದು ಹೇಳಿ ಅಪ್ಪಿ ಮುದ್ದಿಟ್ಟು ಇಂದಿಗೂ ಅದೇ ಮಮತೆ ವಿಶ್ವಾಸದಿಂದ ಮಗನನ್ನು ನೋಡಿಕೊಳ್ಳುತ್ತಿರುವ ಹಂಪನಾ, ತಂದೆಗೊಂದು ಆದರ್ಶ. ತಮ್ಮಿಬ್ಬರು ಹೆಣ್ಣು ಮಕ್ಕಳು, ರಾಜ್ಯಶ್ರೀ, ಆರತಿಯನ್ನು ನಮ್ಮೆರಡು ಕಣ್ಣುಗಳಂತೆ ಭಾವಿಸಿ ಪೋಷಿಸಿದ್ದಾರೆ.

ಮನೆಯಿಂದ ಹೊರಕ್ಕೆ ಹೊರಡುವ ಮುನ್ನ ಹಂಪನಾ ಅವರು ಅವರ ತಂದೆಯವರ ಫೋಟೋಕ್ಕೆ ನಮಿಸಿ ಹೊರಡುತ್ತಾರೆ. ತಾಯಿಗೆ ಹೇಳಿ, ಅವರು ಊರಿನಲ್ಲಿ ಇಲ್ಲದಿದ್ದರೆ ಅವರ ಭಾವಚಿತ್ರಕ್ಕೆ ನಮಿಸಿ ಮುನ್ನಡೆಯುತ್ತಾರೆ.

ಮೂವತ್ತೈದು ವರುಷಗಳ ದಾಂಪತ್ಯ ಜೀವನ ತುಂಬಲಿದೆ. ಮಕ್ಕಳೆಲ್ಲ ಬೆಳೆದು ದೊಡ್ಡವರಾಗಿದ್ದಾರೆ. ಅವರ ವಿದ್ಯಾಭ್ಯಾಸ ಮುಗಿದು ಮೂವರು ಮಕ್ಕಳು ಸ್ವತಂತ್ರರಾಗಿ ಉದ್ಯೋಗಿಗಳಾಗಿದ್ದಾರೆ. ಮೂವರಿಗೂ ಮದುವೆಯಾಗಿದೆ. ನನಗೆ ಡಾ. ಹಂಪನಾ ಅವರಿಗೆ ಇಬ್ಬರು ಮೊಮ್ಮಕ್ಕಳಾಗಿ ಆನಂದದಿಂದ ಅಜ್ಜ-ಅಜ್ಜಿಯ ಪಟ್ಟವನ್ನೂ ಕಟ್ಟಿಕೊಂಡಿದ್ದಾಗಿದೆ.

ಮಕ್ಕಳಿಗೆ ವಿದ್ಯಾಭ್ಯಾಸದ ಜೊತೆ ಜೊತೆಯಲ್ಲೆ ಸಂಗೀತ (ಶಾಸ್ತ್ರೀಯ-ಸುಗಮ-ಜಾನಪದ) ಭರತನಾಟ್ಯ, ಕರಾಟೆ, ಅಭ್ಯಾಸವೂ ನಡೆದಿದೆ. ಮಕ್ಕಳ ಪ್ರತಿಭೆ, ವಿದ್ವತ್ತನ್ನು ಗುರುತಿಸಿ ಅವರವರ ಕ್ಷೇತ್ರದಲ್ಲಿ ಅವರು ಬೆಳೆಯಲು ಪ್ರೋತ್ಸಾಹಿಸಿದೆವು. ಮಕ್ಕಳನ್ನು ಮುಕ್ತ ವಾತಾವರಣದಲ್ಲಿ ಬೆಳೆಸಿದೆವು. ತಂದೆ-ತಾಯಿ ಮಕ್ಕಳು-ಎಲ್ಲರೂ, ಸೊಸೆ-ಅಳಿಯಂದಿರೂ

ಸೇರಿದಂತೆ ನಮ್ಮ ಮನೆಯಲ್ಲಿ ಎಲ್ಲರೂ ಸ್ನೇಹಿತರಂತೆ ಬಾಳುತ್ತಾ ಬಂದಿದ್ದೇವೆ; ಬದುಕಿನಲ್ಲಿ ಸ್ನೇಹದ ಪಾತ್ರ ಬಹಳ ಹಿರಿದಾದುದು. ಎಲ್ಲರನ್ನೂ ಬೆಸೆಯುವ ಸ್ನೇಹಕ್ಕೆ ನಮ್ಮ ಮನೆಯಲ್ಲಿ ಮೊದಲ ಮಣೆ ಹಾಕಿದ್ದೇವೆ.

1990 ಆಗಸ್ಟ್ ತಿಂಗಳಲ್ಲಿ ನಾನೂ ಹಾಗೂ ಡಾ: ಹಂಪನಾ ಅವರು ಕೆನಡಾ, ಅಮೆರಿಕ ಹಾಗೂ ಇಂಗ್ಲೆಂಡ್ ರಾಷ್ಟ್ರಗಳಿಗೆ ಭೇಟಿಕೊಟ್ಟೆವು. ಕೆನಡಾ ದೇಶದ ಟೊರೆಂಟೊ ವಿಶ್ವವಿದ್ಯಾಲಯದಲ್ಲಿ ನಡೆದ ಮುವ್ವತ್ತೂರನೆಯ ಅಂತರರಾಷ್ಟ್ರಿಯ ಸಮಾವೇಶವೊಂದರಲ್ಲಿ ಭಾಗವಹಿಸಿದೆವು. ಡಾ : ಹಂಪನಾ ಅವರು The charudatha, with special reference to Indian literature ಎನ್ನುವ ಸಂಪ್ರಬಂಧವನ್ನು ಮಂಡಿಸಿದರೆ ನಾನು The Status of women in Jainism with special reference to Karnataka inscriptions ಎನ್ನುವ ಸಂಶೋಧನ ಪ್ರಬಂಧವನ್ನು ಮಂಡಿಸಿದೆನು. ನಮ್ಮ ಬದುಕಿನ ಸಾಧನೆಗಳಲ್ಲಿ ಇದೊಂದು ಮಹತ್ವಪೂರ್ಣವಾದುದು ಎಂದು ಭಾವಿಸುವೆ.

ಅಮೆರಿಕೆಯ ಉದ್ದಗಲಕ್ಕೂ ಓಡಾಡಿದೆವು. ಅನೇಕ ಕನ್ನಡ ಸಂಘಗಳು ನಮಗಾಗಿಯೇ ಸಾಹಿತ್ಯ ಸಂತೋಷಕೂಟಗಳನ್ನು ಏರ್ಪಡಿಸಿದ್ದವು. ಅದರಲ್ಲಿ ಬಹಳ ಮುಖ್ಯವಾದ ಮಿಡ್ ಈಸ್ಟ್ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸುಮಾರು ಐನೂರು ಜನ ಕನ್ನಡಿಗರು ಭಾಗಿಯಾಗಿದ್ದರು. ಅದು ಸೇಂಟ್ ಲೂಯಿಸ್‌ನಲ್ಲಿ ನಾಗಲಕ್ಷ್ಮಿ ಹರಿಹರೇಶ್ವರ ದಂಪತಿಗಳ ಮುಂದಾಳತ್ವದಲ್ಲಿ ನಡೆಯಿತು. ಕನ್ನಡದ ವಾತಾವರಣದಿಂದ ದೂರವಿದ್ದಾಗಲೇ, ನಮ್ಮ ಕನ್ನಡಿಗರ ಕನ್ನಡ ಪ್ರೇಮದ ನಿಜವಾದ ಅರಿವು ನಮಗೆ ತಿಳಿಯುತ್ತದೆ. ಈ ಭಾವನೆ ಅಲ್ಲಿಯ ಕನ್ನಡ ಜನತೆಯ ಉತ್ಸಾಹವನ್ನು ಕಂಡಾಗ ನನಗೆ ಮೂಡಿತು. ಶೈಕ್ಷಣಿಕ ದೃಷ್ಟಿಯಿಂದ ಅಮೆರಿಕೆಯ ಅನೇಕ ವಿಶ್ವವಿದ್ಯಾಲಯಗಳನ್ನು ಸಂದರ್ಶಿಸಿದೆವು. ಅಲ್ಲಿಯ ವಿದ್ಯಾಭ್ಯಾಸ ಕ್ರಮದ ಕೆಲವು ವಿವರಗಳನ್ನು ತಿಳಿಯಲು ನಮ್ಮ ಈ ಸಂದರ್ಶನ ನಮ್ಮಿರ್ವರಿಗೂ ಸಹಾಯ ಮಾಡಿತು.

ಅಲ್ಲಿಂದ ಮುಂದೆ ಲಂಡನ್‌ಗೆ ಪ್ರವಾಸ. ಅಲ್ಲಿ ಆಕ್ಸ್‌ಫರ್ಡ್, ಕೇಂಬ್ರಿಜ್ ವಿಶ್ವವಿದ್ಯಾಲಯಗಳು, ವಿಶ್ವ ಸಾಹಿತ್ಯದ ಮೇಲೆ ಪ್ರಭಾವ ಬೀರಿರುವ ಶೇಕ್ಸ್‌ಪಿಯರ್ ಹುಟ್ಟಿದ ಊರು, ಮನೆ, ವಸ್ತುಸಂಗ್ರಹಾಲಯ ಹಾಗೂ ನಿಸರ್ಗ ಕವಿಯಾದ ವಿಲಿಯಂ ವರ್ಡ್ಸ್‌ವರ್ತ್ ಹುಟ್ಟಿದ, ಬೆಳೆದ, ಬಾಳಿದ ಮನೆ, ವಸ್ತುಸಂಗ್ರಹಾಲಯ, ಆತನ ಕವಿತಾಶಕ್ತಿಗೆ ಪ್ರೇರಣೆ ಒದಗಿಸಿದ ಲೇಕ್ ಡಿಸ್ಟ್ರಿಕ್ಟ್ ಪ್ರಸಿದ್ಧ ಜೈನ ದೇವಾಲಯವಿರುವ ಲೆಸಬರ್ ಇವೆಲ್ಲವನ್ನು, ಇನ್ನೂ ಅನೇಕ ಪ್ರೇಕ್ಷಣೀಯ-ಪ್ರವಾಸಿ ತಾಣಗಳನ್ನು ನೋಡಿಕೊಂಡು ಮೂರು ತಿಂಗಳನಂತರ ಭಾರತಕ್ಕೆ ಹಿಂತಿರುಗಿದೆವು, ಸ್ವಲ್ಪ ಅನುಭವವನ್ನು ಹೆಚ್ಚಿಸಿಕೊಂಡು.

ನಾನು ಹಾಗೂ ಡಾ : ಹಂಪನಾ ತುಂಬ ಅದೃಷ್ಟವಂತರು. ನಾವು ಸ್ವದೇಶಕ್ಕೆ ಮರಳಿದಾಗ ನಮ್ಮ ಆತ್ಮೀಯ ಸ್ನೇಹವಲಯ ನಮಗೆ ಅಭಿನಂದನ ಸಮಾರಂಭಗಳನ್ನು ಅನೇಕ ಕಡೆಗಳಲ್ಲಿ ಏರ್ಪಡಿಸಿತ್ತು. ಅನೇಕ ಸಮಾರಂಭಗಳಲ್ಲಿ ನಮ್ಮಿಬ್ಬರಿಗಿಂತಲೂ ಆನಂದ ಹೊಂದಿದವರೆಂದರೆ ಆ ಸಮಾರಂಭಗಳನ್ನು ಏರ್ಪಡಿಸಿದ್ದ ನಮ್ಮ ಆತ್ಮೀಯ ವಲಯದ ಸ್ನೇಹಿತರು. ಡಾ: ಹಂಪನಾ ಅವರೇ ನನಗೆ ಒಂದು ವಿಸ್ಮಯ. ಅಂಥದರಲ್ಲಿ ಅವರೊಡಗೂಡಿ ಜಗತ್ತಿನ ಕೆಲವು ಭಾಗದ ವಿಸ್ಮಯಗಳನ್ನು ನೋಡಿದ್ದು ನನ್ನ ಸಂತೋಷವನ್ನು ಹೆಚ್ಚಿಸಿತು.

ನನ್ನ ಮೂವತ್ತೈದು ವರುಷಗಳ ಸರ್ಕಾರಿ ಸೇವೆಯಿಂದ ನಿವೃತ್ತಳಾದಾಗ ತುಂಬ ಸಂತೋಷಗೊಂಡವರು ಡಾ : ಹಂಪನಾ. ಆದರೆ ಆ ಸಂತಸ ಅವರಿಗೆ ತುಂಬ ದಿವಸಗಳು ಉಳಿಯಲಿಲ್ಲ. ಕಾರಣ ಮತ್ತೆ ಎರಡು ವರುಷಗಳ ಅವಧಿಗೆ ಮೈಸೂರು ವಿಶ್ವವಿದ್ಯಾನಿಲಯದ ಜೈನಶಾಸ್ತ್ರ ಮತ್ತು ಪ್ರಾಕೃತ ಅಧ್ಯಯನ ವಿಭಾಗದ ಅಧ್ಯಕ್ಷಳೂ, ಮುಖ್ಯಸ್ಥಳೂ ಆಗಿ ನೇಮಕಗೊಂಡ ನಾನು ಮೈಸೂರಿಗೆ ಗಂಟುಮೂಟೆ ಕಟ್ಟಿದೆ.

ಮಕ್ಕಳಿಗೆ ಸ್ವಲ್ಪ ವ್ಯಥೆಯಾದರೂ ನನ್ನ ಸಂಶೋಧನೆ, ವಿದ್ವತ್ತಿಗೆ ದೊರೆತ ಒಂದು ಪುರಸ್ಕಾರ ಇದು ಎಂದು ಭಾವಿಸಿ ಎಲ್ಲರೂ ಬೀಳ್ಕೊಟ್ಟರು. ಡಾ: ಹಂಪನಾ ಅವರು ಮಾತ್ರ ಎಂದಿನಂತೆ 'ನಿನ್ನಿಷ್ಟ, ನೀನು ಏನು ಮಾಡಿದರೂ ಹೇಗೆ ಮಾಡಿದರೂ ಸರಿಯಾದ ನಿರ್ಧಾರವನ್ನೇ ತೆಗೆದುಕೊಳ್ಳುವೆ. ನಿನ್ನ ನಿರ್ಧಾರವೇ ನನ್ನ ನಿರ್ಧಾರ' ಎಂದು ಹೇಳಿ ತಮ್ಮ ಹೊಣೆಗಾರಿಕೆಯಿಂದ ಸುಲಭವಾಗಿ ಜಾರಿಕೊಂಡರೆಂದೇ ಹೇಳಬೇಕು. ಡಾ : ಹಂಪನಾ ಎಂದೂ ತಮ್ಮ ಅಭಿಪ್ರಾಯವನ್ನು ನನ್ನ ಮೇಲೆ ಹೇರಿದವರಲ್ಲ. ಈಗಲೂ ಹೊಣೆಗಾರಿಕೆಯನ್ನು ನನ್ನ ಮೇಲೆ ಹೊರಿಸಿದರು. ನನ್ನ ಸ್ವಂತ ತೀರ್ಮಾನಕ್ಕೆ ಬೆಲೆಕೊಟ್ಟರು.

ಪ್ರತಿ ಶನಿವಾರ ನಾನು ಬೆಂಗಳೂರಿಗೆ ಬರುತ್ತಿದ್ದೆ. ಸೋಮವಾರ ಮುಂಜಾನೆ ಮೈಸೂರಿಗೆ ಪ್ರಯಾಣಿಸುತ್ತಿದ್ದೆ. ಸೋಮವಾರದಿಂದ ಶುಕ್ರವಾರದವರೆಗೂ ಡಾ : ಹಂಪನಾ ಅವರಿಂದ ಎಸ್‌ಟಿಡಿ (S.T.D) ಮೂಲಕ ಮಾತುಕತೆ ಇದ್ದದ್ದೇ. ವಿಷಯವಿರಲಿ ಇಲ್ಲದಿರಲಿ ಒಂದು ದಿವಸಕ್ಕೆ ಒಮ್ಮೆಯಾದರೂ ಮಾತನಾಡಿದಾಗಲೇ ಅವರಿಗೆ ಸಮಾಧಾನ. ಒಮ್ಮೊಮ್ಮೆ ಒಂದೇ ದಿನದಲ್ಲಿ ಎರಡು-ಮೂರು ಬಾರಿ ಫೋನಿಸಿದ್ದೂ ಉಂಟು. ಬೆಂಗಳೂರು ಮನೆಯ ಫೋನಿನ ಬಿಲ್ಲು ಮೂರು ಸಾವಿರ ರೂಗಳಿಂದ ಐದರಿಂದ ಆರು ಸಾವಿರರೂಗಳವರೆಗೂ ಏರಿದ್ದುಂಟು. ನಾನು ಏನಾದರೂ ಈ ವಿಷಯಕ್ಕೆ ಆಕ್ಷೇಪಿಸಿದರೆ 'ಗಂಡ-ಮಕ್ಕಳು-ಎಲ್ಲರೂ ನನ್ನನ್ನು ಮರೆತು ಬಿಟ್ಟರು. ಒಬ್ಬಳನ್ನೇ ಎಲ್ಲೊ ದೂರಕ್ಕೆ ಕಳುಹಿಸಿ ಅವರೆಲ್ಲ ಅಲ್ಲಿ ಸಂತೋಷದಿಂದಿದ್ದಾರೆ-ಎಂದು ನೀನು ಕೊರಗಬಾರದು' ಎಂದು ಹೇಳಿ ನನ್ನ ಆಕ್ಷೇಪಣೆಯನ್ನು ತಳ್ಳಿಹಾಕುತ್ತಿದ್ದರು.

ಇತ್ತೀಚಿನ ಕೆಲವು ವರ್ಷಗಳಿಂದ ಡಾ : ಹಂಪನಾ ಅವರು ವಿಶ್ವವಿದ್ಯಾನಿಲಯಗಳ ಪ್ರಶ್ನೆ ಪತ್ರಿಕೆಗಳ ಸಿದ್ಧತೆ, ಉತ್ತರ ಪತ್ರಿಕೆಗಳ ಮೌಲ್ಯಮಾಪನ ಮೊದಲಾದ ಪರೀಕ್ಷೆಯ ಕೆಲಸಗಳನ್ನು ಒಪ್ಪಿಕೊಳ್ಳುತ್ತಿರಲಿಲ್ಲ. Board of appointment, Merit promotion ಗೆ ಸಂಬಂಧಿಸಿದಂತೆ Subject Expert, Ph.D Viva ಮೊದಲಾದುವನ್ನು ಮಾತ್ರ ಒಪ್ಪಿಕೊಳ್ಳುತ್ತಿದ್ದರು. ಆದರೆ ಮೈಸೂರಿಗೆ ನಾನು ಹೋಗಿ ನೆಲಸಿದ್ದೇ ತಡ, ಮೈಸೂರಿನ ಸಾಹಿತ್ಯಕ-ಸಾಂಸ್ಕೃತಿಕ ಅಥವಾ ವಿಶ್ವವಿದ್ಯಾಲಯದ ಯಾವುದೇ ಕೆಲಸಗಳಾಗಲಿ ಒಪ್ಪಿಕೊಂಡು ಮೈಸೂರಿಗೆ ಬಂದು ಬಿಡುತ್ತಿದ್ದರು. ಆ ನೆವದಲ್ಲಿ ನನ್ನನ್ನು ನೋಡುವ-ಮಾತಾಡುವ ಅವಕಾಶಗಳನ್ನು ಅವರೆಂದೂ ಕಳೆದುಕೊಳ್ಳಲ್ಲ. ಈ ವಯಸ್ಸಿನಲ್ಲಿಯೂ ಅವರಿಗೆ ನನ್ನ ಮೇಲಿರುವ ಪ್ರೀತಿ-ಪ್ರೇಮ-ಉತ್ಸಾಹಗಳು ನನ್ನನ್ನು ಅನೇಕ ಬಾರಿ ವಿಸ್ಮಿತಳನ್ನಾಗಿ ಮಾಡಿವೆ.

ನಾನು ಮೈಸೂರಿನಲ್ಲಿ ಇದ್ದ ಅವಧಿಯಲ್ಲಿ ನನ್ನ ಮಗ, ಸೊಸೆ ಡಾ. ಹಂಪನಾ ಅವರನ್ನು ತುಂಬ ಎಚ್ಚರಿಕೆ ಹಾಗೂ ಗೌರವ ಪ್ರೀತಿ-ವಿಶ್ವಾಸದಿಂದ ನೋಡಿಕೊಂಡರು. ಅವರ

ಜೊತೆಯಲ್ಲಿ ಇಬ್ಬರು ಹೆಣ್ಣುಮಕ್ಕಳೂ ಅಳಿಯಂದಿರೂ ಸೇರಿಕೊಂಡರು. ಆದ್ದರಿಂದ ಮೈಸೂರಿನ ನನ್ನ ಕರ್ತವ್ಯವನ್ನು ನಾನು ಚೆನ್ನಾಗಿ ನೆರವೇರಿಸಲು ಸಾಧ್ಯವಾಯಿತು.

ಮೈಸೂರಿನ ಕರ್ತವ್ಯ ಮುಗಿದು ಈಗ ಬೆಂಗಳೂರಿನ ನಮ್ಮ ಮನೆಯಲ್ಲಿ ನಾನು ನೆಲಸಿದ್ದೇನೆ. ಡಾ. ಹಂಪನಾ ಅವರ ಜೊತೆಯಲ್ಲಿಯೇ ತುಂಬ ಸಮಯ ಕಳೆಯಬೇಕೆಂಬ ನನ್ನ ಆಸೆ ಕೈಗೂಡಿದೆ. ಡಾ ಹಂಪನಾ ಅವರು ೧೯೯೬ರ ಅಕ್ಟೋಬರ್‌ನಲ್ಲಿ ನಿವೃತ್ತರಾಗಲಿದ್ದಾರೆ. ಇನ್ನು ಹೊಸ ಯೋಜನೆಗಳನ್ನು ಕಡಿತಗೊಳಿಸಿ, ಹಳೆಯ ಸರಕು ಇರುವುದನ್ನು ಕೈಗೆತ್ತಿಕೊಂಡು ಪರಿಷ್ಕಾರಗೊಳಿಸಬೇಕಾದಿದೆ.

ಈ ಮಧ್ಯೆ ಸರ್ಕಾರ ಕೆಲವು ಉನ್ನತ ಸಮಿತಿಗೆ ನನ್ನನ್ನು ಸದಸ್ಯಳನ್ನಾಗಿ ನೇಮಕ ಮಾಡಿದೆ; ಮೈಸೂರಿನ ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯಳಾಗಿ (೧೯೯೬-೯೯) ನೇಮಕ ಮಾಡಿದೆ. ಮೂವರು ವಿದ್ಯಾರ್ಥಿಗಳು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ ಸಂಶೋಧನೆ ಕೈಗೊಂಡು ನನ್ನ ಮಾರ್ಗದರ್ಶನದಲ್ಲಿ ಕಾರ್ಯ ಸಾಗಿಸಿದ್ದಾರೆ. ಈ ನನ್ನ ಎಲ್ಲ ಕೆಲಸಗಳಿಗೂ ಅಂದಿನಿಂದ ಇಂದಿನವರೆಗೂ ನಿರಂತರ ನೀರೆರೆದು ಪೋಷಿಸುವವರು ಹಂಪನಾ ಅವರೇ.

ಈ ಮಧ್ಯೆ ನನಗೆ ಹೆಚ್ಚಿನ ಸಂತಸ ತಂದ ಸಂಗತಿಗಳೆಂದರೆ ಅವರಿಗೆ ೧೯೯೪ರ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೧೯೯೫ರ ಜಾನಪದ ವಿಶೇಷ ಪ್ರಶಸ್ತಿ ೧೯೯೬-೯೬ನೇ ಸಾಲಿನ ಚಾವುಂಡರಾಯ ಪ್ರಶಸ್ತಿ-ಇವೆಲ್ಲ ದೊರೆತದ್ದು !

ಎಷ್ಟೋ ಸಂದರ್ಭಗಳಲ್ಲಿ, ಗುಂಪುಗಾರಿಕೆ, ಜಾತಿ ರಾಜಕೀಯದಿಂದ ಈ ಪ್ರಶಸ್ತಿಗಳು ನಮ್ಮಂಥ ಅಲ್ಪಸಂಖ್ಯಾತ, ದಲಿತ-ಶೂದ್ರರಿಗೆ ತಪ್ಪಿಹೋಗುವ ಸಂಭವಗಳೇ ಜಾಸ್ತಿ. ಆದರೂ ಅಲ್ಲೊಮ್ಮೆ ಇಲ್ಲೊಮ್ಮೆ ದೊರೆಯುವ ಈ ಪ್ರಶಸ್ತಿಗಳು ನಮ್ಮ ಕೈ ಬಲ ಪಡಿಸುತ್ತವೆ. ಪ್ರಶಸ್ತಿಗಾಗಿ ನಾವೀರ್ವರೂ ಕಳೆದು ಮೂವತ್ತೇಳು ವರುಷಗಳಿಂದ ಕನ್ನಡದ ಕೆಲಸ ಮಾಡಲಿಲ್ಲ. ಆತ್ಮತೃಪ್ತಿಗಾಗಿ, ನಾಡು-ನುಡಿ ಸಾಹಿತ್ಯಕ್ಕೆ ಏನಾದರೂ ಮಾಡಬೇಕೆಂಬ ಹೃದಯದ ತುಡಿತಕ್ಕೆ ಕೆಲಸ ಮಾಡಿದ್ದೇವೆ. ಆಯಸ್ಸು ಇರುವವರೆಗೂ ಅದೇ ರೀತಿ ದುಡಿಯುವ ಸಂಕಲ್ಪ ನಮ್ಮದು.

ಡಾ : ಹಂಪನಾ ಅವರಂತೂ ಇತ್ತೀಚಿಗೆ ಶಾಸನ ಸಂಪತ್ತಿಗೆ ಕೈ ಹಾಕಿ ವಲ್ಮೀಕ ವಾಸಿಯಾಗಿದ್ದಾರೆ. ತಮ್ಮ ಅಧ್ಯಯನ ಕೊಠಡಿ ಸೇರಿದರೆ ಹೊರ ಜಗತ್ತನ್ನು ಸಂಸಾರವನ್ನು ಸಂಪೂರ್ಣವಾಗಿ ಮರೆಯುವ ಮರೆಗುಳಿಯಾಗುತ್ತಿದ್ದಾರೆ. ಮೊದಲಿಂದಲೂ ಅಧ್ಯಯನದಲ್ಲಿ ಇದ್ದ ಈ ಗುಣ ಈಗ ದ್ವಿಗುಣಗೊಂಡಿದೆ. ಡಾ: ಹಂಪನಾ ನೆನ್ನೆ ತಾನೆ ಹೇಳುತ್ತಿದ್ದರು; 'ದಿವಸಕ್ಕೆ, ಇದೇ ರೀತಿ, ಹದಿನೆಂಟು ಗಂಟೆಗಳು ನಾನು ಕುಳಿತು ಬರೆದರೆ ಇನ್ನೂ ಅರವತ್ತು ವರುಷಗಳು ನನಗೆ ಬೇಕಾಗುತ್ತದೆ. ನನ್ನ ಬಳಿ ನಾನು ಅಧ್ಯಯನದಿಂದ ಸಂಗ್ರಹಿಸಿರುವ ವಿಷಯಗಳಿಗೆ, ಬರವಣಿಗೆಯ ರೂಪ ಕೊಡಲು ಅಷ್ಟು ಸಮಯಬೇಕು.' ಈಗ ಡಾ ಹಂಪನಾಗೆ ಅರವತ್ತು ವರುಷಗಳು ತುಂಬಲಿವೆ. ಇನ್ನೂ ಅರವತ್ತು ವರುಷಗಳು ಇದ್ದು ಬರವಣಿಗೆ ಸಾಗಿಸಲಿ. ಅದನ್ನು ನೋಡಿ ಓದಿ ಆನಂದಿಸಲು ನಾನು ಇನ್ನೂ ಅರವತ್ತು ಸಂವತ್ಸರಗಳನ್ನು ಎದುರು ನೋಡಲೆ !

# ಮೊಟ್ಟ ಮೊದಲ ಸಂಶೋಧನಾ ವಿದ್ಯಾರ್ಥಿಯಾಗಿ

ಡಾ॥ ಎಸ್.ಪಿ. ಪದ್ಮಪ್ರಸಾದ್

ತಾನು ಎಷ್ಟು ಜನಕ್ಕೆ ಸಂಶೋಧನೆಯಲ್ಲಿ ಮಾರ್ಗದರ್ಶನ ಮಾಡಿದ್ದೇನೆ ಹಾಗೂ ಅವರುಗಳು ಯಾರ್‍ಯಾರು ಎಂಬುದರ ಪೂರ್ಣ ವಿವರ ಹಂಪನಾ ಅವರಿಗೆ ಈಗ ಖಂಡಿತ ನೆನಪಿರಲಿಕ್ಕಿಲ್ಲ. ಅವರ ಮಾರ್ಗದರ್ಶನದಲ್ಲಿ ಪಿಎಚ್‌ಡಿ, ಎಂ. ಫಿಲ್ ಮಾಡಿದವರ ಸಂಖ್ಯೆ ಅಷ್ಟೊಂದು ಹೆಚ್ಚಿದೆ ಆದರೆ ಮೊಟ್ಟ ಮೊದಲು ಯಾರನ್ನು ಪಿಎಚ್.ಡಿ ವಿದ್ಯಾರ್ಥಿಯಾಗಿ ತಾನು ನೋಂದಾಯಿಸಿಕೊಂಡೆ, ತನ್ನ ಮಾರ್ಗದರ್ಶನದಲ್ಲಿ ಶೋಧ ಪ್ರಬಂಧ ಸಿದ್ಧಪಡಿಸಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮೊದಲಿಗರ್‍ಯಾರು ಎಂಬುದನ್ನು ಬಹುಶಃ ಯಾವ ಮಾರ್ಗದರ್ಶಕನೂ ಮರೆಯುವುದಿಲ್ಲ. ಆ ವಿದ್ಯಾರ್ಥಿಕೂಡ ಮುಂದೆ ತಾನೇ ಸ್ವತಃ ಮಾರ್ಗದರ್ಶಕನಾದರೂ ಕೂಡ ತಾನು ನಿಬಂಧಲೇಖಕನಾಗಿ ಪಡೆದ ಅನುಭವಗಳನ್ನು ಮರೆಯುವಂತಿಲ್ಲ.

ಮರೆಯಲಾಗದ ಈ ತೆರನ ಸಂಬಂಧ ನನ್ನ ಹಾಗೂ ಡಾ॥ ಹಂಪನಾ ಅವರ ನಡುವೆ ಇದೆ.

ಹಂಪನಾ ಅವರಿಗೆ ಪಿ.ಎಚ್.ಡಿ. ಮಾರ್ಗದರ್ಶಕರಾಗಬಹುದೆಂಬ ಮಾನ್ಯತೆ ದೊರೆತದ್ದು 1976ರಲ್ಲಿ (ಆಗ ಅವರು ರೀಡರ್ ಆದರೆಂದು ನೆನಪು). ಆಗಷ್ಟೆ ನನ್ನ ಎಂ.ಎ.ಕೂಡ ಮುಗಿದಿತ್ತು. ಎಂ.ಎ. ಪರೀಕ್ಷೆ ನಾನು ತೆಗೆದುಕೊಂಡದ್ದೇ ಜೈನ ಜನಪದ ಸಾಹಿತ್ಯದ ಕುರಿತು ಪಿ.ಎಚ್.ಡಿ ಮಾಡಬೇಕೆಂಬ ಮಹತ್ವಾಕಾಂಕ್ಷೆಯಿಂದ. ನೌಕರಿಗೆ ಅದರಿಂದ ನೆರವಾಗಬೇಕೆಂಬ ಆಕಾಂಕ್ಷೆ ಆಗ ತುಸುವೂ ಇರಲಿಲ್ಲ. ಹಾಗೂ ಈವರೆಗೆ ಆ ಡಿಗ್ರಿಗಳಿಂದಾಗಿ ನನಗೆ ನೌಕರಿಯ ದೃಷ್ಟಿಯಿಂದ ಪ್ರಯೋಜನವೂ ಆಗಿಲ್ಲ.

ಹಂಪನಾ ಅವರ ಕೈಕೆಳಗೆ ಪಿಎಚ್.ಡಿ ಮಾಡಬೇಕೆಂದು ಯೋಚಿಸುತ್ತಿದ್ದ ಎಂ.ಎ. ಜಯಚಂದ್ರ (ಅನಂತರ ಅವರೂ ಡಾಕ್ಟರಾದರು) ರಿಂದ ನನಗೆ ಸುಳಿವು ಸಿಕ್ಕಿದ್ದೇ ತಡ, ನಾನೂ ಸೀದಾ ಹಂಪನಾಮನೆಗೆ ಹಾರಿದೆ. ಕೇಳಿದೆ. ಆ ವರೆಗೆ ಯಾರೂ ಸಂಗ್ರಹಿಸದಿದ್ದ ವಿಷಯ ಕುರಿತು ನಾನು ಪಿಎಚ್‌ಡಿ ಮಾಡುತ್ತೇನೆಂದಾಗ ಹಂಪನಾ ಸಂತೋಷಪಟ್ಟರೂ ಕೂಡ ಆತಂಕಗೊಂಡದ್ದು ನಿಜ. ಥೀಸಿಸ್ ಬರೆಯುವಷ್ಟು ವಿಷಯಸಿಗುತ್ತಾ? ಎಂದರು (ಇದೇ ಪ್ರಶ್ನೆಯನ್ನು ಅನಂತರದಲ್ಲಿ ಡಾ॥ ಜಿ.ಎಸ್. ಶಿವರುದ್ರಪ್ಪನವರು, ಚಿದಾನಂದಮೂರ್ತಿಯವರು

ಕೇಳಿದ್ದುಂಟು. ಅನಂತರ ನನ್ನ ನಿಬಂಧವನ್ನು ನೋಡಿ ಅವರು ಸಂತೋಷಪಟ್ಟಿದ್ದೂ ನಿಜ) ನಾನು ಆಗಲೇ ಸಂಗ್ರಹಿಸಿದ್ದ ಕೆಲವು ಉದಾಹರಣೆಗಳನ್ನು ಹೇಳಿದ ಬಳಿಕ ಅವರಿಗೆ ಸ್ವಲ್ಪ ಸಮಾಧಾನವಾಯಿತು. ಕಾರ್ಯದ ಗಹನತೆಯನ್ನು ಕ್ಷೇತ್ರಕಾರ್ಯದ ಕಷ್ಟಗಳನ್ನು ವಿವರಿಸಿದರು. ಆದರೆ ಹುಚ್ಚುಕುದುರೆಯಂತೆ ಕುಣಿಯುತ್ತಿದ್ದ, ಏನನ್ನೋ ಸಾಧಿಸಿಬಿಡಬೇಕೆಂಬ ಉತ್ಸಾಹದಲ್ಲಿದ್ದ ನನ್ನ ಆ ಯೌವನದ ವಯಸ್ಸಿಗೆ ಅವು ಆಗ ಕಷ್ಟಗಳಾಗಿ ಕಾಣಲಿಲ್ಲ. ಎಲ್ಲ ಎದುರಿಸಿ ಈ ಕೆಲಸ ಮಾಡೇ ಮಾಡುತ್ತೇನೆ ಎಂದೆ. ನನ್ನ ಉತ್ಸಾಹವನ್ನು ಕುಗ್ಗಿಸುವ ಇಚ್ಛೆ ಅವರಿಗೂ ಇರಲಿಲ್ಲ. ಹೊಸಕ್ಷೇತ್ರವೊಂದರಲ್ಲಿ ಕೆಲಸ ನಡೆಯುವುದಾದರೆ ಅದು ಒಳ್ಳೆಯದೇ ತಾನೇ? ಎಂಬ ಅವರ ದೃಷ್ಟಿ ಇದಕ್ಕೆ ಕಾರಣ. ಸರಿ ಎಂದ ಅವರು ತಮ್ಮ ಬಳಿ ಇಟ್ಟಿಕೊಂಡಿದ್ದ ಅರ್ಜಿಫಾರಂ ಅನ್ನು ಹೊರತೆಗೆದುಕೊಟ್ಟರು. ಪ್ರಬಂಧದ ರೂಪುರೇಷೆ ಹೇಳಿ ಗುರುತು ಹಾಕಿಸಿದರು. ಆ ಪ್ರಕಾರ ಪ್ರಬಂಧದ ಸಾರಲೇಖ ಬರೆದು-ಅರ್ಜಿಯೊಂದಿಗೆ ತಮಗೆ ಕಳಿಸುವಂತೆ ಹೇಳಿ ಕಾಫಿ ಕುಡಿಸಿ ಕಳಿಸಿಕೊಟ್ಟರು.

ಅನಂತರ ಸಾರಲೇಖ ಬರೆದು ಅರ್ಜಿಭರ್ತಿಮಾಡಿ ಅವರಿಗೆ ಕಳಿಸಿಕೊಟ್ಟಾಗ, ಎಂ.ಎ. ಜಯಚಂದ್ರರ ಅರ್ಜಿ ಜೊತೆಗೆ ನನ್ನದನ್ನೂ ಅವರ ಕೈಲಿ ಕಳಿಸಿ ಅದರ ರಿಜಿಸ್ಟ್ರೇಷನ್ ಆಗುವಂತೆ ನೋಡಿಕೊಂಡರು. (ರಿಜಿಸ್ಟ್ರೇಷನ್ ಶುಲ್ಕ ಆಗ ಇಪ್ಪತ್ತೈದು ರೂಪಾಯಿ. ಅದನ್ನು ಅವರಿಗೆ ಕೊಟ್ಟೆನೋ ಬಿಟ್ಟೆನೋ ಈಗಲೂ ನೆನಪಾಗುತ್ತಿಲ್ಲ).

ಇಲ್ಲಿಂದ ಮುಂದೆ ಹಂಪನಾ ಅವರಿಂದ ನನ್ನ ಶಿಕ್ಷೆ ಆರಂಭವಾಯಿತು. ಯಾವಾಗ ಸಿಕ್ಕಿದರೂ-ಎಲ್ಲಿಗೆ ಹೋಗಿದ್ದೆ? ಎಷ್ಟು ಹಾಡು ಸಿಕ್ಕಿತು ? ಯಾವ ವಿಷಯದ್ದು? ಕತೆಗಳು ಸಿಗಲಿಲ್ಲವಾ ? ಬೇರೆ ಜಾನಪದ ಸಂಗ್ರಹಗಳನ್ನು ಓದ್ತಾಇದ್ದೀಯಾ ಎಂಬ ತನಿಖೆ. ಅದೂ ಕಾಫಿ ಕೊಡಿಸಿ ತಿಂಡಿ ಕೊಡಿಸಿ ನಗುನಗುತ್ತಾ ಕೇಳುವುದು. ಕಟುವಾಗಿ ಉತ್ತರ ಹೇಳಲಿಕ್ಕೂ ಇಲ್ಲ. ಅವರು ಹೇಳುವ ವೇಗದಲ್ಲಿ ನನಗೆ ವಸ್ತು ಸಿಗುತ್ತಿರಲಿಲ್ಲ. ಕೊನೆಗೆ ನನ್ನ ಕಷ್ಟ ಅವರಿಗೂ ಅರ್ಥವಾಗಿ ತನಿಖೆಯನ್ನು ಒಂದಷ್ಟು ಕಡಿಮೆ ಮಾಡಿದರು. ಹಾಗೂ ಹೀಗೂ ಒಂದು ವರ್ಷವಾಗುವ ಹೊತ್ತಿಗೆ ಆ ಹಿಂದೆಯೂ ನಾನು ಸಂಗ್ರಹಿಸಿದ್ದ ವಸ್ತುವೂ ಸೇರಿ ನನ್ನ ಸಂಗ್ರಹ ತಕ್ಕ ಮಟ್ಟಗೆ ಬೆಳೆದಿತ್ತು. ಪ್ರೀ ಪಿಎಚ್.ಡಿ. ಪರೀಕ್ಷೆಯಲ್ಲಿ ನಾನು ಕೊಟ್ಟ ಉತ್ತರಗಳು ಎಲ್ಲರಿಗೂ ತೃಪ್ತಿತಂದವು. ಹಂಪನಾಗೆ ಆಗ ನನ್ನ ಬಗ್ಗೆ ಒಂದಷ್ಟು ಸಮಾಧಾನವಾಗಿರಬೇಕು. ಕೇಳುವ ಫ್ರೀಕ್ವೆನ್ಸಿಯನ್ನು ಕಡಿಮೆ ಮಾಡಿದರು. ಆದರೆ ಕೇಳಿದಾಗಲೆಲ್ಲಾ ಮೊದಲಿಗಿಂತ ಹೆಚ್ಚು ಆಳವಾದ ಚರ್ಚೆಗೆ ಸೆಳೆಯಹತ್ತಿದರು.

'ದೇವರೇ ಕಾಪಾಡಿದ' ಎಂದು ನಾನು ತಪ್ಪು ತಿಳಿದುಕೊಳ್ಳುವಂತಹ ಘಟನೆಯೊಂದು ಈ ಘಟ್ಟದಲ್ಲೇ ನಡೆಯಿತು. ಅದು-ಕನ್ನಡ ಸಾಹಿತ್ಯ ಪರಿಷತ್ತಿನ ಪ್ರತಿಷ್ಠಿತ ಅಧ್ಯಕ್ಷ ಪಟ್ಟಕ್ಕೆ ಅವಿರೋಧವಾಗಿ ಅವರ ಆಯ್ಕೆ ಆದದ್ದು. ಇನ್ನು ಹೇಗೂ ಬಿಜಿ ಆಗುತ್ತಾರೆ, ಮೊದಲಿನಷ್ಟು ನನ್ನನ್ನು ವಿಚಾರಿಸಿಕೊಳ್ಳಲು ಅವರಿಗೆ ಬಿಡುವಿರುವುದಿಲ್ಲ ಎಂದುಕೊಂಡು ನಿಟ್ಟಿಸಿರುಬಿಟ್ಟೆ. ಆದರೆ ನನ್ನ ಗ್ರಹಚಾರ ಸರಿಯಾಗಿರಲಿಲ್ಲ. ಅವರು ಬಿಜಿ ಆದದ್ದೇನೋ ನಿಜ. ಆದರೆ ನನ್ನ ಥೀಸಿಸ್ ವಿಚಾರ ಮರೆಯುವಷ್ಟು ಬಿಜಿ ಆಗಲಿಲ್ಲ. ಅಥವಾ ನನ್ನ ದುರಾದೃಷ್ಟಕ್ಕೆ (ಆಗ

ಹಾಗನಿಸಿತ್ತು) ನನ್ನಿಂದ ಆ ಬಗೆಗೆ ಪತ್ರಬಂದದ್ದು ಅಥವಾ ಬಾರದಿದ್ದದ್ದು, ನಾನು ತಿದ್ದಲೆಂದು ಕರಡು ಅಧ್ಯಾಯಗಳನ್ನು ಕೊಟ್ಟು ಎಷ್ಟು ದಿನಗಳಾದವೆಂದು ನನ್ನ ಮುಖ ನೋಡಿದೊಡನೆ ಅವರಿಗೆ ನೆನಪಗುತ್ತಿತ್ತು. (ಭೋಜರಾಜನ ಮುಖನೋಡಿದವರಿಗೆ ಕವಿತೆ ನೆನಪಾಗುವಂತೆ?)

ಈ ನಡುವಿನಲ್ಲೇ ನನ್ನ ಬರವಣಿಗೆಗೆ ಬೇಕಾದ ಪುಸ್ತಕಗಳು ಎಲ್ಲಿಸಿಗುತ್ತವೆ ಎಂಬ ಮಾಹಿತಿ. ವಿಶ್ಲೇಷಣೆಗೆ ಸಹಾಯುವಾಗುವಂತೆ ಜೈನ ಸಿದ್ಧಾಂತಗಳ ಚರ್ಚೆ, ಜೈನ ಶಿಷ್ಟಕಾವ್ಯಗಳಲ್ಲಿನ ಜಾನಪದ ಅಂಶಗಳ ಕುರಿತಾಗಿ ನನಗೆ ನಿಂತ ನಿಂತಲ್ಲೇ ಧಾರಾಳವಾಗಿ ಮಾಹಿತಿಗಳನ್ನು ನೀಡುವುದು ಇವೆಲ್ಲಾ ನಡೆಯುತ್ತಿದ್ದವು. ಕ್ಷೇತ್ರ ಕಾರ್ಯ ಮುಗಿಸಿ ನನ್ನ ನಿಬಂಧಕ್ಕೆ ಅಗತ್ಯವಾಗಿ ಮಿಗುವಷ್ಟು ಜನಪದ ಸಾಹಿತ್ಯವನ್ನು ವಕ್ತೃಗಳಿಂದ ಆಗಲೇ ಸಂಗ್ರಹಿಸಿದ್ದರಿಂದ ನನಗೆ ಈ ಅಧ್ಯಾಯಗಳ ಬರವಣಿಗೆಯಲ್ಲಿ ತೊಡಗಿಕೊಳ್ಳಲು ಕಷ್ಟವಾಗಲಿಲ್ಲ. ಇವರ ಒತ್ತಾಯ, ಉತ್ತೇಜನಗಳೂ ಇದ್ದದ್ದರಿಂದ, ಪರಾಮರ್ಶನ ಗ್ರಂಥಗಳನ್ನು ಇವರೇ ಸುಲಭವಾಗಿ ಒದಗಿಸುತ್ತಿದ್ದದ್ದರಿಂದ ಪರಾಮರ್ಶನ ಗ್ರಂಥಗಳನ್ನು ಇವರೇ ಸುಲಭವಾಗಿ ಒದಗಿಸುತ್ತಿದ್ದರಿಂದ ಬರವಣಿಗೆ ವೇಗವಾಗಿಯೂ ನಡೆಯಿತು.

ನಿಗದಿತವಾದ ಮೂರು ವರ್ಷಗಳ ಅವಧಿಗಿಂತ ಆರು ತಿಂಗಳ ಮೊದಲು ಎಲ್ಲಾ ಅಧ್ಯಾಯಗಳ ಕರಡು ಪ್ರತಿ ಸಿದ್ಧವಾಯಿತು. ಇನ್ನೊಮ್ಮೆ ಎಲ್ಲವನ್ನು ಒಟ್ಟಾಗಿ ನೋಡಲೆಂದು ಫೈಲನ್ನು ಅವರ ಕಡೆ ಕೊಟ್ಟೆ. ಆದರೆ ಅವರು ಅದನ್ನು ನೋಡಲಿಲ್ಲ. ಅಧ್ಯಾಯಗಳನ್ನು ಬಿಡಿಬಿಡಿಯಾಗಿ ಮೊದಲೇ ನೋಡಿದ್ದರಿಂದ, ಅದರಲ್ಲಿನ ದೋಷಗಳು ತಮ್ಮ ಕಣ್ತಪ್ಪಿ ಹೋಗಬಹುದೆಂದು ಭಾವಿಸಿಯೋ ಏನೋ ಪರಿಷತ್ತಿನ ಕಾರ್ಯದರ್ಶಿಯಾಗಿದ್ದ ಡಿ. ಲಿಂಗಯ್ಯನವರಿಗೆ 'ಒಮ್ಮೆ ಆಮೂಲಾಗ್ರ ಪರಿಶೀಲಿಸಿ' ಎಂದು ಹೇಳಿ, ಕೊಟ್ಟರು. ಲಿಂಗಯ್ಯನವರೂ ಸಹ ಒಂದು ತಿಂಗಳ ಅವಧಿಯೊಳಗೇ ಐನೂರು ಪುಟಗಳ ಆ ಹಸ್ತ ಪ್ರತಿಯನ್ನು ವಿವರವಾಗಿ ಓದಿ ಸಲಹೆ ಬರೆದು ಕೊಟ್ಟರು. 'ಅವರನ್ನೇ ಭೇಟಿಯಾಗಿ ಚರ್ಚೆ ಮಾಡಿ. ಅವರು ಕೊಡುವ ಸಲಹೆಗಳ ಪ್ರಕಾರ ಬದಲಾವಣೆ ಮಾಡಿ ಬರೆದುಕೊಂಡು ನನಗೆ ಇನ್ನೊಮ್ಮೆ ಕೊಡಿ' ಎಂದರು. "ಎಂಥಾ ಬಿಗಿ ಮನುಷ್ಯರಾಗಿಬಿಟ್ಟರಪ್ಪ ಇವರು" ಎಂದುಕೊಳ್ಳುತ್ತಾ ಅವರು ಹೇಳಿದಂತೆಯೇ ಮಾಡಿದೆ. ಅದರಿಂದ ಲಾಭ ಆದದ್ದು ನನಗೇನೇ. ಉದಾಹರಣೆಗೆ-ಜೈನ ಜನಪದ ಸಾಹಿತ್ಯದಲ್ಲಿನ ಕಾವ್ಯ ಸೌಂದರ್ಯ ಕುರಿತ ಭಾಗವನ್ನು ನಾನು ಬರೆದಿದ್ದು ಲಿಂಗಯ್ಯನವರೊಂದಿಗೆ ಚರ್ಚಿಸಿದ ಮೇಲೆಯೇ.

ಹೀಗೆ ಅಲ್ಲಲ್ಲಿ ಏರ್ಪಾಡು ಮಾಡಿದ ಹಸ್ತಪ್ರತಿಯನ್ನು ಹಂಪನಾ ಅವರಿಗೆ ನೀಡಿ, ಮತ್ತೊಂದು ತಿಂಗಳಲ್ಲಿ ಅವರು ಅದನ್ನು ಸ್ವತಃ ಇನ್ನೊಮ್ಮೆ ನೋಡಿ 'ಪರ್ವಾಗಿಲ್ಲಯ್ಯ ಚೆನ್ನಾಗಿ ಬರೆದಿದ್ದೀ' ಎಂದು ಬೆನ್ನು ತಟ್ಟಿದ ಮೇಲೆ ನಿರಾಳವಾಯಿತು. ಜೀವನದ ಧ್ಯೇಯವಾಗಿ ಇಟ್ಟುಕೊಂಡಿದ್ದ ಒಂದು ಕೆಲಸವನ್ನು ತೃಪ್ತಿಕರವಾಗಿ ಗುರಿ ಮುಟ್ಟಿಸಿದ ಅನುಭವವಾಯಿತು.

ಅನಂತರ ಅದರ ಟೈಪಿಂಗ್ ಮಾಡಿಸಿ ಸಕಾಲದಲ್ಲಿ ವಿಶ್ವವಿದ್ಯಾಲಯಕ್ಕೆ ಮುಟ್ಟಿಸುವುದು ಮೂರು ತಿಂಗಳ ಕಾಲ ಮೂಳೆ ಮುರಿ ಮುರಿಯುವಂತಹ ಕೆಲಸವಾಯಿತು.

ಮೂರು ವರುಷತುಂಬಿದ ದಿನದಂದು ಸರಿಯಾಗಿ, ಆ ಬೆಳಿಗ್ಗೆ ಹಂಪನಾ ಅವರಿಗೆ ಫೋನು ಮಾಡಿ, ‘ಥೀಸಿಸ್ ಬೈಂಡ್ ಮಾಡಿಸಿ ತಂದಿದ್ದೇನೆ’ ಈ ದಿನ ಯೂನಿವರ್ಸಿಟಿಗೆ ತಲುಪಿಸುತ್ತೇನೆ. ಸರ್ಟಿಫಿಕೇಟ್‌ಗೆ ನಿಮ್ಮ ಸಹಿ ಆಗಬೇಕು, ಮನೆಯಲ್ಲೇ ಇರ್ತೀರಿ?’ಎಂದು ಕೇಳಿದಾಗ ಅವರಿಗೆ ತುಂಬಾ ಖುಷಿಯಾಗಿತ್ತು ‘ಶುಭ ಸುದ್ದಿ ಹೇಳಿದೆಯಪ್ಪಾ ಮನೆಯಲ್ಲೇ ಇರ್ತೀನಿ. ಬಂದ್ಬಿಡು ಇಲ್ಲಿಂದಲೇ ಹೋಗೋಣಾ’ಎಂದರು, ಹಾಗೇ ಮಾಡಿದೆವು.

ಹಾಗೆ ಕಷ್ಟಪಟ್ಟು ಸಿದ್ಧಗೊಳಿಸಿ ಸಕಾಲದಲ್ಲೇ ವಿ.ವಿ.ಗೆ ತಲುಪಿಸಿದರೂ ನನ್ನ ಥೀಸಿಸ್ ಒಂದು ವರ್ಷ ಕಾಲ ಪರೀಕ್ಷಾ ನಿಯಂತ್ರಣಾಧಿಕಾರಿಗಳ ಕಚೇರಿಯ ಬೀರುವಿನಲ್ಲಿ ಇತ್ತು ಎನ್ನುವುದು, ಅನಂತರ ರೆಫರಿಗಳಿಗೆ ಕಳಿಸಿ ಪದವಿ ಘೋಷಿತವಾಗಲು ಇನ್ನೂ ಒಂದು ವರ್ಷಹಿಡಿಯಿತು ಎನ್ನುವುದು ಬೇರೊಂದು ಕತೆ, ವಿಶ್ವವಿದ್ಯಾಲಯಗಳ ಒಳಸುಳಿಗಳಿಗೊಂದು ಉದಾಹರಣೆ.

ಮಾರ್ಗದರ್ಶಿಯಾಗಿ ಹಂಪನಾ ಅವರಿಂದ ನಾನು ಪಡೆದ ನೆರವು ತುಂಬಾ ಅಮೂಲ್ಯವಾದದ್ದು. ಅದೇ ಮಾದರಿಯ ನೆರವು ಅವರಿಂದ ಅನಂತರದ ದಿನಗಳಲ್ಲೂ ದೊರೆಯುತ್ತ ಬಂದಿದೆ.

# ನನ್ನ ಮಾರ್ಗದರ್ಶಕರಾಗಿ ಹಂಪನಾ

ಎಂ. ಜಿ. ಮಂಜುನಾಥ

ಡಾ. ಹಂಪನಾ ನನ್ನ ಪಾಲಿನ ಪ್ರಾಥಃಸ್ಮರಣೀಯರು. ನನ್ನ ಜೀವನದಲ್ಲಿ ನಾನು ಆದರ್ಶ ಪುರುಷರೆಂದು ಪರಿಗಣಿಸಿರುವ ಕೆಲವೇ ಕೆಲವು ಜನರಲ್ಲಿ ಹಂಪನಾ ಅವರೂ ಸಹ ಒಬ್ಬರು. ನಾನು ಅವರನ್ನು ಮೊದಲ ಬಾರಿಗೆ ಮುಖತಃ ಕಂಡದ್ದು ನಾನು ಪ್ರಥಮ ಎಂ.ಎ. ತರಗತಿಗೆ ಸೇರಿಕೊಂಡಾಗ. ಆಗ ನಾವು ಪಂಪನನ್ನು ವಿಶೇಷ ಕವಿಯಾಗಿ ಅಧ್ಯಯನ ಮಾಡಬೇಕಾಗಿತ್ತು. ಹಂಪನಾ ಅವರು ಪಂಪಭಾರತವನ್ನು ಬೋಧಿಸುತ್ತಿದ್ದರು. ಪಂಪನ ಬಗ್ಗೆ ಪಾಠ ಕೇಳುವಂತಿದ್ದರೆ ಹಂಪನಾ ಅವರಿಂದಲೇ ಕೇಳಬೇಕೆನ್ನುವಷ್ಟು ಅದ್ಭುತವಾಗಿ, ನಿರರ್ಗಳವಾಗಿ ಬೋಧಿಸುತ್ತಿದ್ದರು. ಪಂಪ ಭಾರತದ ಒಂದೊಂದು ರಸಘಟ್ಟಿಯೂ ಹಂಪನಾ ಅವರ ಕಂಠಸಿರಿಯ ಮೂಲಕ ನಮ್ಮೆದಿರು ಪುನರ್ ಸೃಷ್ಟಿಯೋ ಎನ್ನುವಂತೆ ಆ ಮಹಾಕಾವ್ಯವನ್ನು ನಮ್ಮ ಮನದಾಳಕ್ಕೆ ಮುಟ್ಟಿಸುವಲ್ಲಿ ಅಂದು ಹಂಪನಾ ಯಶಸ್ವಿಯಾಗಿದ್ದರು. ಅವರ ಮಾತಿನ ಮೋಡಿಗೆ ಅಂದೇ ನಾನು ಮರುಳಾಗಿದ್ದೆ. ಪಂಪನ ಬಗ್ಗೆ ಹಾಗೂ ಹಂಪನಾ ಬಗ್ಗೆ ನನಗೆ ಅಂದೇ ಅಭಿಮಾನ ಮೊಳೆಯಿತೆನ್ನಬಹುದು. ಇಷ್ಟು ಬೇಗ ಒಂದು ವರ್ಷ ಕಳೆಯಿತೇ? ಎಂದು ನಾವು ಅಚ್ಚರಿಪಡುವಂತೆ ಒಂದು ವರ್ಷ ಕಳೆದಿತ್ತು. ಅಂದಿನ ದಿನಗಳಲ್ಲಿ ಹಂಪನಾ ಪಾಠ ಮಾಡುವವರೆಗೂ ಪಂಪನ ಬಗ್ಗೆ ಹೆದರುವಂತಿಲ್ಲ ಎಂಬ ಮಾತು ನಮ್ಮ ಗೆಳೆಯರ ಬಳಗದಲ್ಲಿ ಬಳಕೆಯಲ್ಲಿತ್ತು. ಆ ವರ್ಷ ಪಂಪ ಪತ್ರಿಕೆಯಲ್ಲಿ ನನಗೆ ಬೇರೆಲ್ಲರಿಗಿಂತಲೂ ಹೆಚ್ಚಿಗೆ ಅಂಕಗಳು ಬಂದವು.

ದ್ವಿತೀಯ ಎಂ.ಎ.ಯಲ್ಲಿ ನಾನು ಶಾಸನ ಶಾಸ್ತ್ರವನ್ನು ಐಚ್ಛಿಕ ವಿಷಯವನ್ನಾಗಿ ಆಯ್ಕೆ ಮಾಡಿಕೊಂಡದ್ದರಿಂದ ಹಂಪನಾ ಅವರ ಪಾಠ ಕೇಳುವ ಅವಕಾಶವಿರಲಿಲ್ಲ. ಪರೀಕ್ಷೆಯ ಕಡೆಯಲ್ಲಿ ವೈವಾ ನಡೆಯುವ ಸಮಯಕ್ಕೆ ಹಂಪನಾ ಅವರು ವಿಭಾಗದ ಮುಖ್ಯಸ್ಥರಾದರು. ನಮ್ಮ ವೈವಾದಲ್ಲಿ ಅವರೂ ಒಬ್ಬರು ಪರೀಕ್ಷಕರಾಗಿದ್ದರು. ನನ್ನ ಸರದಿ ಬಂದಾಗ ಇತರ ಪರೀಕ್ಷಕರ ಜೊತೆಗೆ ಹಂಪನಾರವರು ಬೇರೆಯವರಿಗಿಂತಲೂ ಹೆಚ್ಚಿಗೆಯೇ ಪ್ರಶ್ನೆಗಳನ್ನು ಕೇಳಿದರು. ಹೆಚ್ಚಾಗಿ ಶಾಸನ ಶಾಸ್ತ್ರವನ್ನು ಕುರಿತಂತೆಯೇ ಕೇಳಿದರು. ನಮ್ಮ ಬ್ಯಾಚ್‌ನಲ್ಲಿ ವೈವಾದಲ್ಲಿ (ಮೌಖಿಕ ಪರೀಕ್ಷೆ) ಅತಿ ಹೆಚ್ಚು ಅಂಕಗಳು (ಶೇ 82) ನನಗೇ ಬಂದಿದ್ದವು. ಕೆಲವು ದಿನಗಳ ನಂತರ ಹಂಪನಾ ಅವರನ್ನು ನಾನು ಭೇಟಿಮಾಡಿದಾಗ ಅತಿ ಹೆಚ್ಚು ಅಂಕಗಳನ್ನು ಗಳಿಸಿದ್ದಕ್ಕಾಗಿ

ನನ್ನನ್ನು ಅಭಿನಂದಿಸಿ, ನನ್ನ ಭವಿಷ್ಯದ ಬಗೆಗಿನ ಯೋಜನೆಗಳ ಬಗ್ಗೆ ವಿಚಾರಿಸಿದರು. ಮುಂದೆ ಏನು ಮಾಡಬೇಕೆಂದು ನಿರ್ಧಾರಮಾಡಿರುವೆ? ಎಂಬ ಅವರ ಪ್ರಶ್ನೆಗುತ್ತರವಾಗಿ "ಪಿಎಚ್.ಡಿ ಮಾಡಬೇಕೆಂದಿದ್ದೇನೆ ಸಾರ್. ನೀವೇ ಗೈಡ್ ಆಗುವಿರಾ?" ಎಂದು ನಾನು ಪ್ರಶ್ನಿಸಿದೆ. ಅವರು ನನಗೆ ಮಾರ್ಗದರ್ಶಕರಾಗಬಹುದು, ಎಂಬ ಕಲ್ಪನೆಯೂ ನನಗೆ ಆವರೆಗೂ ಇರಲಿಲ್ಲ. ಏಕೆಂದರೆ ಪಿ.ಎಚ್.ಡಿಗೆ ಗೈಡ್‌ಗಳನ್ನು ದೊರಕಿಸಿಕೊಳ್ಳಲು ನನ್ನ ಸೀನಿಯರ್‌ಗಳು ಪಡುತ್ತಿದ್ದ ಪಡಿಪಾಟಲು, ನಡೆಸುತ್ತಿದ್ದ ಲಾಬಿ ಇವೆಲ್ಲ ನನಗೆ ತಿಳಿದಿದ್ದುದರಿಂದ ಹಂಪನಾರಂತಹ ದೊಡ್ಡವರು ನನ್ನಂತಹವರಿಗೆ ಗಗನ ಕುಸುಮ ಎಂದು ನಾನು ತಿಳಿದಿದ್ದೆ. ಆದರೆ ಹಂಪನಾ ಅವರು ನನಗೆ ಮಾರ್ಗದರ್ಶಕರಾಗಲು ಒಪ್ಪಿದುದನ್ನು ತಿಳಿದು ನನಗೆ ಅದು ಕನಸೋ ಅಥವಾ ನನಸೋ ತಿಳಿಯಲಿಲ್ಲ. ಅಂದು ನಾನು ಸಂತೋಷದಿಂದ ಉಬ್ಬಿ ಹೋಗಿದ್ದೆ. ನನಗೆ ಮಾರ್ಗದರ್ಶಕರಾಗಲು ಒಪ್ಪಿದ ಗಳಿಗೆಯೇ 'ಶಾಸನಗಳ ಬಗ್ಗೆ ಪಿಎಚ್.ಡಿ ಮಾಡುವಂತಿದ್ದರೆ ಮಾತ್ರ' ಎಂಬ ನಿಬಂಧನೆಯನ್ನೂ ಹಾಕಿದರು. ಅದರಿಂದಲೇ ತಿಳಿಯುತ್ತದೆ- ಶಾಸನಗಳ ಬಗ್ಗೆ ಅವರಿಗಿದ್ದ ಪ್ರೀತಿ. ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲೂ ಅನ್ನ ಎಂಬಂತಾಯಿತು ನನ್ನ ಸ್ಥಿತಿ. ಬಾಯಾರಿದವನಿಗೆ ಅಮೃತ ದೊರೆತಂತಾಯಿತು. ಅಂದಿನಿಂದಲೇ ಹಂಪನಾ ಅವರು ಮತ್ತು ನನ್ನ ನಡುವಿನ ಬಾಂಧವ್ಯ ಮತ್ತಷ್ಟು ವೃದ್ಧಿಸಿತು.

ಶಾಸನಗಳೆಂದರೆ ಹಂಪನಾ ಅವರಿಗೆ ಅತ್ಯಂತ ಪ್ರಿಯವಾದ ಕ್ಷೇತ್ರ. ನಾವಿಬ್ಬರೂ ಸುಮಾರು ಎರಡು ವರ್ಷಗಳ ಕಾಲ ಕಾಲೇಜಿನ ಒಂದೇ ಕೊಠಡಿಯಲ್ಲಿ (ಕನ್ನಡ ಅಧ್ಯಯನ ಕೇಂದ್ರದಲ್ಲಿ) ಕುಳಿತುಕೊಳ್ಳುತ್ತಿದ್ದೆವು. ಸಾಹಿತ್ಯದ ಬಗ್ಗೆ, ಇತಿಹಾಸದ ಬಗ್ಗೆ, ಶಾಸನಗಳ ಬಗ್ಗೆ ಸದಾ ಚರ್ಚಿಸುತ್ತಿದ್ದೆವು. ಈ ಮೂರೂ ವಿಷಯಗಳಿಗೆ ಸಂಬಂಧಿಸಿದಂತೆ ನಾನು ಯಾವುದೇ ಪ್ರಶ್ನೆಯನ್ನು ಕೇಳಿದರೂ ಮೇಷ್ಟರ ನಾಲಿಗೆಯ ತುದಿಯ ಮೇಲೆಯೇ ಉತ್ತರ ನಲಿದಾಡುತ್ತಿತ್ತು. ತರಗತಿಗಳಿಲ್ಲದ ವೇಳೆಯಲ್ಲಿ ಅವರು ಮಾಡುತ್ತಿದ್ದ ಏಕಮಾತ್ರ ಕೆಲಸವೆಂದರೆ ಯಾವುದಾದರೂ ಒಂದು ಶಾಸನ ಸಂಪುಟವನ್ನು ತೆರೆದು ಓದುವುದು. ಈ ರೀತಿಯ ನಿರಂತರ ಸ್ವಾಧ್ಯಾಯದಿಂದಲೇ ಅವರು ಅಪಾರವಾದ ತಿಳಿವಳಿಕೆಯನ್ನು ಹೊಂದಲು ಸಹಕಾರಿಯಾದದ್ದು.

ಒಮ್ಮೆ ಅವರೊಡನೆ ನಾನು ಚರ್ಚೆ ಮಾಡುತ್ತಾ ಇದ್ದೆ. ಆ ಸಂದರ್ಭದಲ್ಲಿ ನನ್ನ ಗೆಳೆಯರೊಬ್ಬರೂ ಸಹ ನಮ್ಮೊಡನೆ ಅಲ್ಲಿಯೇ ಕುಳಿತಿದ್ದರು. ಆ ಗೆಳೆಯರು ವೃತ್ತಿಯಿಂದ ಒಬ್ಬ ವ್ಯಾಪಾರಿ. ನಮ್ಮಿಬ್ಬರ ಚರ್ಚೆಯಲ್ಲಿ ಅವರು ಮೂಕ ಪ್ರೇಕ್ಷಕರಾಗಿದ್ದವರು. ನಮ್ಮ ಚರ್ಚೆ ಮುಗಿದ ನಂತರ ನನ್ನ ಬಳಿ ಗುಟ್ಟಾಗಿ 'ಹಂಪನಾ ಅವರು ಹಿಸ್ಟರಿ ಪ್ರೊಫೆಸರೇ? ಎಂದು ಕೇಳಿದರು. ಅಷ್ಟೊಂದು ಚೆನ್ನಾಗಿ ಹಂಪನಾ ಅವರು ಇತಿಹಾಸವನ್ನು ಜೀರ್ಣಿಸಿಕೊಂಡಿದ್ದಾರೆ.

ಹಂಪನಾ ಅವರ 'ವಿಷ್ಣುವರ್ಧನ-ವಿಜಯಾದಿತ್ಯ-ಕೀರ್ತಿವರ್ಮ' ಕೃತಿಯನ್ನು ಓದಿದ ಇತಿಹಾಸದ ಉಪನ್ಯಾಸಕರೊಬ್ಬರು 'ಹಂಪನಾ ಇತಿಹಾಸ ವಿಭಾಗದಲ್ಲಿರಬೇಕಾಗಿತ್ತು. ಅವರು ಕನ್ನಡ ವಿಭಾಗಕ್ಕೆ ಹೋದದ್ದರಿಂದ ನಮಗೆ ಅಪಾರ ನಷ್ಟವಾಯಿತು' ಎಂದು ಹೇಳಿದುದನ್ನು ಕೇಳಿದ್ದೇನೆ. ಒಟ್ಟಾರೆ ಹಂಪನಾರವರ ಬಹುಶ್ರುತತ್ವ, ವ್ಯುತ್ಪತ್ತಿ, ಪ್ರತಿಭೆಗಳು ಮತ್ತೊಬ್ಬರಲ್ಲಿ ಏಕೀಭವಿಸಿರುವುದನ್ನು ನಾನಂತೂ ಕಾಣೆ.

ನನ್ನ ಸಂಶೋಧನಾ ಕಾರ್ಯದಲ್ಲಿ ಮೇಷ್ಟ್ರು ಮಾರ್ಗದರ್ಶನ ಮಾಡುವ ರೀತಿಗೆ ಕೆಲವು ಉದಾಹರಣೆಗಳನ್ನು ನೀಡಬಹುದು.

ನನ್ನ ಪಿಎಚ್.ಡಿ ಸಂಶೋಧನಾ ಕಾರ್ಯಕ್ಕಾಗಿ ನಾನು ಹಲವಾರು ಊರುಗಳಿಗೆ ಆಗಾಗ್ಗ ಪ್ರವಾಸ ಕೈಗೊಳ್ಳುತ್ತಿರುತ್ತೇನೆ. ಹೋಗುವ ಮೊದಲು ಮೇಷ್ಟರಿಗೆ (ಹಂಪನಾರಿಗೆ) ಆ ಬಗ್ಗ ತಿಳಿಸಿ ಅವರ ಸಲಹೆ ಕೇಳಿದರೆ ಆ ಸ್ಥಳಗಳಲ್ಲಿ ನಾನು ನೋಡಬೇಕಾದವುಗಳ ಬಗ್ಗ, ಅಲ್ಲಿ ಮಾಡಬೇಕಾದ ಕೆಲಸಗಳ ಬಗ್ಗ ಅತ್ಯಂತ ಸೂಕ್ಷ್ಮವಾಗಿ ಹಾಗೂ ಕರಾರುವಕ್ಕಾಗಿ ಮಾಹಿತಿ ನೀಡುತ್ತಾರೆ. ಎಷ್ಟೋಸಾರಿ ನನಗೆ ಆ ಸ್ಥಳಗಳ ಬಗ್ಗ ಗ್ಯಾಸೆಟಿಯರ್‌ಗಳಲ್ಲಿ ಸಹ ಸಿಗದ ಮಾಹಿತಿ ಮೇಷ್ಟರ ಬಳಿ ಸಿಗುತ್ತದೆ. ಒಂದು ರೀತಿಯಲ್ಲಿ ಸ್ವತಃ ಅವರೇ ಚಲಿಸುವ ಗ್ಯಾಸೆಟಿಯರ್ ಹಾಗೂ ಚಲಿಸುವ ಇ.ಸಿ (ಎಪಿಗ್ರಾಫಿಯ ಕರ್ನಾಟಕಾ) ಎಂದರೆ ಅದರಲ್ಲಿ ಅತಿಶಯೋಕ್ತಿ ಏನೂ ಇಲ್ಲ.

ಕೆಲವೊಮ್ಮೆ ನಾನು ಮೇಷ್ಟರ ಬಳಿ ನನಗೆ ದೊರಕಿದ ಅಪ್ರಕಟಿತ ಶಾಸನಗಳ ಪಾಠವನ್ನು ದೊರೆತಕೂಡಲೇ ಹೋಗಿ ಕೊಟ್ಟಾಗ, (ಎಷ್ಟೋ ಸಾರಿ ಫಸ್ಟ್ ರೀಡಿಂಗ್‌ನಲ್ಲಿ ಶಾಸನದ ಪೂರ್ಣವಾದ ಪಾಠ ಬಂದಿರುವುದಿಲ್ಲ. ನಂತರದ ರೀಡಿಂಗ್‌ಗಳಲ್ಲಿ ಎಸ್ಟಾಂಪೇಜ್, ಹಾಗೂ ಫೋಟೋದ ಸಹಾಯದಿಂದ ಪೂರ್ಣಪಾಠ ಪಡೆಯುತ್ತೇವೆ.) ಆ ಶಾಸನ ಪಾಠದಲ್ಲಿ ನಾನು ಕೊಟ್ಟಿರುವ ಪಾಠದಲ್ಲಿನ ಉಳಿದ ಪಾಠವು ಪ್ರಾಯ: ಹೀಗೆಯೇ ಇರಲೇ ಬೇಕು, ಎಂದು ಅವರು ಕರಾರುವಕ್ಕಾಗಿ ಊಹಿಸಿ ಹೇಳಿರುವುದೂ ಉಂಟು. ತದನಂತರ ನಾನು ಆ ಶಾಸನದ ಪಡಿಯಚ್ಚು ಹಾಗೂ ಫೋಟೋ ಪರಿಶೀಲಿಸಿ ಮೇಷ್ಟರ ಊಹಾಪಾಠ ಸರಿಯಾದುದನ್ನು ಕಂಡು ಅವರ ಬುದ್ಧಿಮತ್ತೆಗೆ ಬೆರಗಾಗಿದ್ದೇನೆ.

ಒಮ್ಮೆ ಒಂದು ಅಪ್ರಕಟಿತ ಶಾಸನವನ್ನು ಪತ್ತೆಮಾಡಿದ್ದೆ. ಅದರ ಬಹುಪಾಲು ಪಾಠ ಸರಿಯಾಗಿ ಬಂದರೂ ಸಹ ಮೊದಲ ಎರಡು ಸಾಲುಗಳು ಸ್ವಲ್ಪ ಸವೆದಿದ್ದುದರಿಂದ ಆ ಭಾಗದಲ್ಲಿ ಕೇವಲ ಅಲ್ಲೊಂದು ಇಲ್ಲೊಂದು ಪದಗಳು ಮಾತ್ರ ಓದಲು ಸಾಧ್ಯವಾಗಿತ್ತು. ಅದನ್ನು ಮೇಷ್ಟರಿಗೆ ತೋರಿಸಿದೆ. ಅದನ್ನು ಗಮನವಿಟ್ಟು ನೋಡಿ ಅದನ್ನೇ ಮನಸ್ಸಿನಲ್ಲಿಯೇ ಮೆಲುಕು ಹಾಕಲಾರಂಭಿಸಿದರು. ಅದು ಒಂದು ಕಂದ ಪದ್ಯದಂತೆ ತೋರುತ್ತದೆ. ಅದೇ ಪದ್ಯವನ್ನು ಯಾವುದೋ ಶಾಸನದಲ್ಲಿ ಓದಿದಂತಿದೆ ಎಂದು ಹೇಳಿ ಅದನ್ನು ಕುರಿತು ತೀವ್ರವಾಗಿ ಚಿಂತಿಸ ತೊಡಗಿದರು. ಕೆಲವೇ ನಿಮಿಷಗಳಲ್ಲಿ ಆ ಪದ್ಯ ಇಡಿಯಾಗಿ ಅವರ ನೆನಪಿನ ಸಂಪುಟದಿಂದ ಹೊರಬಿತ್ತು. ಅದನ್ನು ಗುರುತು ಹಾಕಿಕೊಂಡು ನಾನು ನಂತರ ಆ ಶಾಸನದ ಪಡಿಯಚ್ಚನ್ನು ಪರಿಶೀಲಿಸಿದರೆ ಮೇಷ್ಟರು ಹೇಳಿದುದು ಶೇಕಡಾ ನೂರು ಸರಿಯಾಗಿತ್ತು. ನಾನು ಮತ್ತೂ ನಾಲ್ಕು ದಿನ ಶ್ರಮಿಸಿದ ಮೇಲೆ ಆ ಪದ್ಯವು ಎಪಿಗ್ರಾಫಿಯಾ ಕರ್ನಾಟಕದ ಹಳೆಯ ಸಂಪುಟಗಳಲ್ಲಿನ ಒಂದು ಶಾಸನದಲ್ಲಿ ಉಲ್ಲೇಖಿತವಾಗಿತ್ತು.

ಎಷ್ಟೋ ಸಾರಿ ನಾನು ಹಾಗೂ ಮೇಷ್ಟರು ಜತೆಯಲ್ಲಿ ಪ್ರವಾಸ ಮಾಡಿದ್ದೇವೆ. ಕ್ಷೇತ್ರ ಕಾರ್ಯ ಮಾಡಿದ್ದೇವೆ. ಆ ಸಂಧರ್ಭಗಳಲ್ಲಿ ನಾನು ಅವರನ್ನು ಮತ್ತಷ್ಟು ನಿಕಟವಾಗಿ ಅರ್ಥಮಾಡಿಕೊಳ್ಳಲು, ಅವರ ಅಧ್ಯಯನದ ಶೈಲಿಯನ್ನು ಗ್ರಹಿಸಲು ಸಾಧ್ಯವಾಯಿತು.

ಒಮ್ಮೆ ಮಂಡ್ಯದ ಬಳಿಯಲ್ಲಿರುವ ಗುತ್ತಲು ಎಂಬ ಗ್ರಾಮದಲ್ಲಿನ ಒಂದು ಅಪ್ರಕಟಿತ ಶಾಸನವನ್ನು ಸಂಪೂರ್ಣವಾಗಿ ಓದಲು ಒಂದು ಇಡೀ ದಿನ ಹಿಡಿಯಿತು. ಅಂದು ಇಡೀ ದಿನ ನನ್ನೊಡನೆಯೇ ಮೇಷ್ಟರೂ ಸಹ ಆ ಶಾಸನದ ಮಗ್ಗುಲಲ್ಲಿಯೇ ಕುಕ್ಕುರುಗಾಲಿನಲ್ಲಿಯೇ ಕುಳಿತು ಸಹಾಯ ಮಾಡಿದುದನ್ನು ನನ್ನ ಜನ್ಮವಿಡೀ ಮರೆಯಲಾರೆ. ಅದೇ ರೀತಿ ಮತ್ತೊಮ್ಮೆ ಆಂಧ್ರಪ್ರದೇಶದ ಪೆನುಗೊಂಡೆಗೆ ಹೋಗಿದ್ದೆವು. ಅಲ್ಲಿನ ಒಂದು ಬೆಟ್ಟದ (ಪಾದಬೆಟ್ಟ) ಮೇಲೆ ಇದ್ದ ಗುಹೆಯೊಂದರ ಬಾಗಿಲ ಬಳಿಯಿದ್ದ ಶಾಸನವನ್ನು ನೋಡಲು ನನ್ನೊಡನೆಯೇ ಆ ಕಡಿದಾದ ಬೆಟ್ಟವನ್ನೂ ಹತ್ತಿದರು. "ತೀರ ಕಡಿದಾದ ಆ ಬೆಟ್ಟ ಜಾರುತ್ತದೆ ನೀವು ಬರಬೇಡಿ" ಎಂದು ಎಷ್ಟು ಹೇಳಿದರೂ ಕೇಳದೆ ಕಷ್ಟಪಟ್ಟು ಬೆಟ್ಟವನ್ನು ಹತ್ತಿಯೇಬಿಟ್ಟರು. ಶಾಸನಗಳ ಬಗ್ಗೆ ಅವರಿಗೆ ಅಂಥಹ ಆಸಕ್ತಿ.

ನಾನು ಹಾಗೂ ಮೇಷ್ಟರು ಜತೆ ಜತೆಯಾಗಿ ಹಲವಾರು ಕೆಲಸವನ್ನು ಮಾಡಿದ್ದೇವೆ. ಹೊಂಬುಜದ ಬಗ್ಗೆ ನಾವು ಜಂಟಿಯಾಗಿ ಒಂದು ಸಂಶೋಧನ ಗ್ರಂಥ ಬರೆಯಲು ಯೋಜನೆ ಹಾಕಿಕೊಂಡಾಗ ಅಲ್ಲಿ ಮೂರು ದಿನಗಳ ಕಾಲ ಇದ್ದು ಅಲ್ಲಿಯ ಮೂಲೆ ಮೂಲೆಗಳನ್ನೆಲ್ಲಾ ಸುತ್ತಿದ್ದೇವೆ. ಅಲ್ಲಿಯ ದೇವಾಲಯಗಳು, ಕಾಡು, ಹಳ್ಳ, ಕೊಳ್ಳ, ಗುಡ್ಡ, ಎಲ್ಲವನ್ನೂ ನಾವು ಸುತ್ತಿದ್ದೇವೆ. ಆ ಸಂದರ್ಭದಲ್ಲಿ ಮೇಷ್ಟರೂ ಸಹ ಒಂದು ಸ್ವಲ್ಪವೂ ಬೇಸರ ಮಾಡಿಕೊಳ್ಳದೆ ನನ್ನೊಡನೆಯೇ ಅಲೆದಿದ್ದಾರೆ. ತಮ್ಮ ವಯಸ್ಸನ್ನೂ, ದೇಹ ಶ್ರಮವನ್ನೂ ಲೆಕ್ಕಿಸದೆ ಕೇವಲ ಗುರಿಯೊಂದನ್ನೇ ಧ್ಯೇಯವಾಗಿಟ್ಟುಕೊಂಡು ಈ ರೀತಿ ಶ್ರಮಿಸುವ ಮತ್ತೊಬ್ಬರು ದೊರೆಯಲಾರರು. ಅದರಲ್ಲಿಯೂ ಶಿಷ್ಯನೊಡನೆ ಕೆಲಸಮಾಡುವ, ತನ್ನ ಕೀರ್ತಿಯನ್ನೂ ವಿದ್ಯೆಯೊಡನೆ ಧಾರೆಯೆರೆಯುವ ಇಂತಹ ಉತ್ತಮ ಮಾರ್ಗದರ್ಶಕರು ದೊರೆತರೆ ಎಂತಹವರೂ ಉತ್ತಮ ಸಂಶೋಧಕರಾಗುತ್ತಾರೆ. ನನಗಂತೂ ಪೂರ್ವಜನ್ಮದ ಪುಣ್ಯ ಫಲದಿಂದಲೇ ಇವರು ಮಾರ್ಗದರ್ಶಕರಾಗಿ ದೊರೆತರೆಂದು ತೋರುತ್ತದೆ. ಇಂತಹವರೊಡನೆ ನಾನು ಮತ್ತಷ್ಟು ಕೆಲಸವನ್ನು ಮಾಡುವಂತಾಗಲೆಂದು ನಾನು ಆ ದೇವರನ್ನು ಪ್ರಾರ್ಥಿಸುತ್ತೇನೆ.

ಹಂಪನಾರವರು ಕೇವಲ ನನ್ನ ಪಿಎಚ್.ಡಿ ಪದವಿಗೆ ಮಾತ್ರ ಮಾರ್ಗದರ್ಶಕರಲ್ಲ. ನಾನಿಡುವ ಪ್ರತಿಯೊಂದು ಹೆಜ್ಜೆಗೂ ಅವರ ಮಾರ್ಗದರ್ಶನವನ್ನು ನಾನು ನಿರೀಕ್ಷಿಸುತ್ತೇನೆ. ಅದೇ ರೀತಿ ಅವರೂ ಸಹ ನನಗೆ ದಾರಿದೀಪವಾಗಿದ್ದಾರೆ. ಅವರ ಪಾಲಿಗೆ ನಾನು ನೂರಾ ಒಂದನೆಯವನಿರಬಹುದು. ಆದರೆ ನನ್ನ ಪಾಲಿಗೆ ಮಾತ್ರ ಅವರೊಬ್ಬರೇ.

# ಮಾರ್ಗದರ್ಶಿಯಾಗಿ ಡಾ. ಹಂಪನಾ

---

ಡಾ. ಜಿ. ವಿ. ಡಿ.

ಕನ್ನಡದ ಶ್ರೇಷ್ಠ ಸಂಶೋಧಕ, ಶ್ರೇಷ್ಠ ಸೂರಿ, ಜಾನಪದ ತಜ್ಞ, ಜೈನ ಶಾಸ್ತ್ರ ತಜ್ಞ ಮಿಗಿಲಾಗಿ ಹೃದಯ ಶ್ರೀಮಂತಿಕೆಯುಳ್ಳ ಡಾ. ಹಂಪನಾ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸುವ ಅವಕಾಶ ನನಗೆ ದೊರೆತುದು ನನ್ನ ಸುಕೃತವೆಂದು ಭಾವಿಸಿದ್ದೇನೆ.

ನನ್ನ ಸಾಹಿತ್ಯ ಸೇವೆಯನ್ನು ಗಮನಿಸಿದ ಕೆಲವು ಸಾಹಿತಿಗಳು "ನೀವು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೆಲಸ ಮಾಡಿದ್ದೀರಿ. ನಿಮ್ಮ ಭಾಷೆ, ಶೈಲಿ ಉತ್ತವಾಗಿದೆ. ನೀವು ಡಾಕ್ಟರೇಟನ್ನು ಸುಲಭವಾಗಿ ಪಡೆಯಬಹುದು. ಪ್ರಯತ್ನಿಸಿ" ಎಂದು ಹೇಳುತ್ತಿದ್ದರು. ಇಂಥ ಮಾತುಗಳನ್ನು ಕೇಳಿದಾಗ ಡಾಕ್ಟರೇಟ್ ಮಾಡಬೇಕೆಂಬ ನನ್ನ ಹಂಬಲ ಪ್ರಬಲವಾಗತೊಡಗಿತು. ನೀವು ಡಾಕ್ಟರೇಟ್ ಮಾಡಿಕೊಳ್ಳಿ ಎಂದು ನನ್ನ ಗುರುಗಳೂ ಹೇಳುತ್ತಿದ್ದರು. ನನಗೆ ನೀವು ಮಾರ್ಗದರ್ಶಿಯಾಗಿ ಎಂದು ಡಾಕ್ಟರೇಟ್ ಹಂಬಲವನ್ನು ನನ್ನಲ್ಲಿ ಹುಟ್ಟು ಹಾಕಿದ ನನ್ನ ಗುರುಗಳ, ವಿದ್ವಾಂಸರ ಬಳಿ ಹೋದಾಗ ನನ್ನ ಕೋರಿಕೆಗೆ ಅವರು ಕಿವಿಗೊಡಲಿಲ್ಲ. ಹಲವು ವರ್ಷಗಳು ಅವರು ಹೇಳಿದ ಸಬೂಬಿನಲ್ಲೇ ಕಳೆದು ಹೋದವು.

ಉದ್ಯೋಗ, ಸಂಸಾರದ ಜಂಜಾಟದಲ್ಲೂ ನನ್ನ ಸಾಹಿತ್ಯಸೇವೆ ನಿಂತಿರಲಿಲ್ಲ, ಕೃತಿಗಳು ಪ್ರಕಟವಾಗುತ್ತಲೇ ಇದ್ದವು. ಗ್ರಂಥ ಪ್ರಕಟಣೆಯ ಸಂಬಂಧವಾಗಿ ಕ.ಸಾ. ಪರಿಷತ್ತಿನ ಅಧ್ಯಕ್ಷರಾಗಿದ್ದ ಪ್ರೊ. ಹಂಪನಾ ಅವರನ್ನು ಪ್ರಥಮವಾಗಿ ಕಂಡು ಮಾತನ್ನಾಡಿದೆ. ಅಪರಿಚಿತನಾದ ನನ್ನೊಡನೆ ಅವರು ನಡೆದುಕೊಂಡ ಬಗೆ ಅನುಕರಣೀಯವಾಗಿತ್ತು. ಅವರು ತಮ್ಮ ಸನ್ನಡತೆಯಿಂದ ನನ್ನ ಮನಸ್ಸನ್ನು ಗೆದ್ದು ಬಿಟ್ಟರು. ನಾನು ಅವರನ್ನು ಗುರುಸ್ಥಾನದಲ್ಲಿರಿಸಿಕೊಂಡೆ. ಹಂಪನಾ ನನಗೆ ಗಾಯತ್ರಿಯಾಯಿತು. ನನಗೆ ಬೇಸರವಾದಾಗ ನೂರಾರು ಮೈಲಿಗಳಿಂದ ಬಂದು ಅವರನ್ನು ಕಂಡು ಮಾತನ್ನಾಡಿ ಮತ್ತೆ ಚೇತರಿಸಿಕೊಳ್ಳುತ್ತಿದ್ದೆ. ಇದರಲ್ಲಿ ಉತ್ಪ್ರೇಕ್ಷೆಯಿಲ್ಲ.

ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟಗೊಂಡ ನನ್ನ 'ನಾನು ಯಾರು?' ಕೃತಿಯು ಆ ವರ್ಷದ ಉತ್ತಮ ಗದ್ಯ ಕೃತಿಯೆಂದು ಪರಿಗಣಿಸಿ ಜಾನಪದ ಅಕಾಡೆಮಿಯು ಬಹುಮಾನ ಘೋಷಿಸಿದ ಸಂತಸದ ಸಂಗತಿಯನ್ನು ನನ್ನ ಆತ್ಮೀಯರೂ, ಹಿತೈಷಿಗಳೂ ಆದ ಡಾ. ಹಂಪನಾ

ಅವರಿಗೆ ತಿಳಿಸಿದಾಗ ಸಂತೋಷ ವ್ಯಕ್ತಪಡಿಸುತ್ತಾ 'ಏನಾದರೂ ಒಂದು ಗಟ್ಟಿ ಕೆಲಸ ಮಾಡಿ' ಎಂದರು. 'ಏನ್ಮಾಡ್ಲಿ ಸಾರ್' ಎಂದಾಗ ಡಾಕ್ಟರೇಟ್ ಮಾಡಿ ಎಂದರು. ''ಮಾರ್ಗದರ್ಶಕರು ಸಿಗಬೇಕಲ್ಲ ಸಾರ್'' ಎಂದೆ. ಅಭಿಮಾನದಿಂದ ''ನಾನು ನಿಮಗೆ ಮಾರ್ಗದರ್ಶಿ ಆಗ್ತೀನಿ'' ಎಂದರು. ಇದು ಅವರ ದೊಡ್ಡತನವನ್ನು ತಿಳಿಸುತ್ತದೆ. ಅವರ ಉತ್ತೇಜನಕಾರಿಯಾಗಿ ಆಡಿದ ಮಾತುಗಳು ಇನ್ನೂ ನನ್ನ ಮನದಲ್ಲಿ ಮರುಧ್ವನಿಸಿಗೊಳ್ಳುತ್ತಿವೆ :

'ನೀವು ಜಾನಪದದಲ್ಲಿ ದುಡಿದಿದ್ದೀರಿ. ಆ ಕ್ಷೇತ್ರದಲ್ಲೇ ಪಿಎಚ್.ಡಿ ಮಾಡಿ. ಯಾವುದಾದರೂ ವಿಷಯ ತನ್ನಿ ಯೋಚಿಸೋಣ.'

''ಜಾನಪದದಲ್ಲೇ ಮಾಡಬೇಕೆಂದೇನೂ ಇಲ್ಲ ಸಾರ್. ಸಾಹಿತ್ಯದ ಯಾವ ಕ್ಷೇತ್ರವಾದರೂ ಸರಿಯೆ, ಶ್ರದ್ಧೆಯಿಂದ ಕಾರ್ಯ ನಿರ್ವಹಿಸುತ್ತೇನೆ. ಆರೋಗ್ಯದ ತೊಂದರೆ ಇದೆ, ಕ್ಷೇತ್ರ ಕಾರ್ಯ ಈಗ ನನ್ನಿಂದಾಗದು. ವಿಷಯದ ಆಯ್ಕೆ ನಿಮ್ಮದೇ ಆಗಲಿ ಸಾರ್'' ಎಂದೆ.

'ಆಗಲಿ, ಕೆಲವು ದಿನ ಬಿಟ್ಟು ಬನ್ನಿ' ಎಂದು ಹಸನ್ಮುಖಿಯಾಗಿ ಕೈಕುಲುಕಿ ಶುಭವಾಗಲಿ ಎಂದು ಬೀಳ್ಕೊಟ್ಟರು. ನನ್ನ ಪಾಲಿನ ದೈವ ಇವರೇ ಎನ್ನಿಸಿತು.

ಮಾರ್ಗದರ್ಶಿಯ ಅನ್ವೇಷಣೆಯಲ್ಲಿದ್ದಾಗ, ಕೆಲವು ಸೂರಿಗಳನ್ನು ಭೇಟಿಯಾದಾಗ, ಈಗ ಬನ್ನಿ, ಆಗ ಬನ್ನಿ ಹೋಗಿ ಬನ್ನಿ -ಎಂದವರ ಮುಖಗಳೆಲ್ಲ ನೆನಪಾಗಿ, ಅವರ ವರ್ತನೆಗೂ ಹಂಪನಾ ಅವರ ಸೌಜನ್ಯಕ್ಕೂ ಎಷ್ಟೊಂದು ಅಂತರವಿದೆ; ತಮ್ಮವರಿಗೆ ಮಾತ್ರ ಮಾರ್ಗದರ್ಶಿಗಳಾಗುವವರು ಹಂಪನಾ ಅವರ ಮುಂದೆ ಏನೇನೂ ಅಲ್ಲ ಎನ್ನಿಸಿತು. ನೇರ ನುಡಿ ನೇರ ನಡೆ ಹಂಪನಾ ಅವರ ವ್ಯಕ್ತಿತ್ವದ ವೈಶಿಷ್ಟ್ಯವೆನ್ನಿಸಿತು.

ಡಾ. ಹಂಪನಾ ಅವರನ್ನು ಮತ್ತೊಂದು ದಿನ ಭೇಟಿಯಾಗಿ 'ಸಾರ್ ವಿಷಯ' ಎಂದು ಕೇಳಿದೆ. ''ನೀವು ಮಾರ್ಗಾಯಾಸದಿಂದ ಬಳಲಿದ್ದೀರಿ, ಮೊದಲು ಕಾಫಿ ತಗೊಳ್ಳಿ'' ಎಂದು ಕಾಫಿಯಿತ್ತರು, ಸ್ವೀಕರಿಸಿದೆ. ''ನಿಬಂಧದ ವಿಷಯ ಬಂಧುವರ್ಮ, ಒಂದು ಅಧ್ಯಯನ ಈತನ ಪ್ರಮುಖವಾದ ಕೃತಿಗಳು ಎರಡು, ಹರಿವಂಶಾಭ್ಯುದಯ ಮತ್ತು ಜೀವಸಂಬೋಧನಂ ಇವುಗಳನ್ನು ದೊರಕಿಸಿಕೊಂಡು ಸಿನಾಪ್ಸಿಸ್ ಮಾಡಿ. ಇದರಲ್ಲಿ ಅಷ್ಟಾಗಿ ಕ್ಷೇತ್ರ ಕಾರ್ಯವಿಲ್ಲ ಒಂದೆರಡು ಜೈನ ಮಠಗಳಿಗೆ ಭೇಟಿಕೊಡಬೇಕಾಗಬಹುದು'' ಎಂದರು. ''ಸರ್ ಸಿನಾಪ್‌ಸಿಸ್ ಹೇಗೆ ಮಾಡುವುದೆಂದು ಸೂಚಿಸಿದ್ದರೆ ಚೆನ್ನಾಗಿತ್ತು'' ಎಂದಾಗ ಕ್ಷಣಕಾಲ ಮೌನಿಯಾಗಿ ಅನಂತರ ''ಆ ತೊಂದರೆ ನಿಮಗೆ ಬೇಡ, ನಾನೇ ಮಾಡ್ತೀನಿ'' ಎಂದು ನನ್ನ ಕೆಲಸವನ್ನು ಹಗುರಗೊಳಿಸಿದರು. ''ಸಾರ್, ಕೃತಿಗಳು ಎಲ್ಲಿ ದೊರೆಯಬಹುದು'' ಎಂದೆ. 'ಹರಿವಂಶಾಭ್ಯುದಯ ಮೈ.ವಿ.ವಿ.ದ ಪ್ರಸಾರಾಂಗದಲ್ಲಿ ದೊರೆಯುತ್ತದೆ. ಜೀವ ಸಂಬೋಧನಂ ಪುಸ್ತಕದ ಅಂಗಡಿಗಳಲ್ಲಿ ಸಿಗಲಾರದು ನಿಮಗೆ ಪರಿಚಯವಿರುವ ವಿದ್ವಾಂಸರನ್ನು ಕೇಳಿ, ಗೆಳೆಯರ ಬಳಗದಲ್ಲಿ ವಿಚಾರಿಸಿ' ಎಂದರು.

ಮೈಸೂರಿನ ಗೀತಾ ಬುಕ್ ಹೌಸ್‌ನಲ್ಲಿ ಹರಿವಂಶಾಭ್ಯುದಯ ಕೊಂಡೆ. ಕನ್ನಡ ಸಾಹಿತ್ಯ ಪರಿಷತ್ತಿನ ಗ್ರಂಥಾಲಯದ ಪರಾಮರ್ಶನ ವಿಭಾಗದಲ್ಲಿ ಜೀವಸಂಬೋಧನಂ ಕಂಡೆ.

ಹೋರಗೆ ಅದನ್ನು ಕೊಡುವುದಿಲ್ಲವೆಂದು ತಿಳಿದೆ. ಆ ಗ್ರಂಥವನ್ನು ದೊರೆಕಿಸಿಕೊಳ್ಳುವಲ್ಲಿ ಸೋತೆನೆನ್ನಿಸಿತು.

ದೈವಬಲವಿಲ್ಲದೆ ಜೀವನದಲ್ಲಿ ಏನನ್ನೂ ಸಾಧಿಸಲಾಗದು. ಹಬ್ಬಕ್ಕೆ ನಮ್ಮೂರಿನ ದೇವಾಲಯಕ್ಕೆ ಹೋದೆ. ಅಲ್ಲಿನ ಅರ್ಚಕರಲ್ಲಿ ನನ್ನ ಗುರುಪುತ್ರರೂ ಹಿರಿಯ ಸ್ನೇಹಿತರೂ ಕನ್ನಡ ಅಧ್ಯಾಪಕರೂ (ಈಗ ನಿವೃತ್ತರು) ಆದ ಶ್ರೀ ಜಿ.ಎ. ಶಿವಲಿಂಗಯ್ಯನವರು ಪೂಜೆಯ ನಂತರ, ಇತ್ತೀಚೆಗೆ ಯಾವ ಪುಸ್ತಕ ಬಂತು, ಈಗ ಏನು ಬರೀತಿದ್ದೀರಿ, ಎಂದರು. ಅವರ ಪ್ರಶ್ನೆಗೆ ಉತ್ತರಿಸಿ ಪಿಎಚ್.ಡಿ ಮಾಡುವ ಉದ್ದೇಶವಿದೆ. ಗ್ರಂಥವೊಂದು ದೊರೆತಿಲ್ಲ-ಎಂದು ಗ್ರಂಥದ ಹೆಸರನ್ನು ತಿಳಿಸಿದೆ. 'ಆ ಗ್ರಂಥಕ್ಕಾಗಿ ಯೋಚನೆ ಮಾಡಬೇಡಿ, ನನ್ನ ಹತ್ತಿರ ಇದೆ. ಬನ್ನಿ, ಕೊಡ್ತೀನಿ' ಎಂದರು. ದೈವ ಸನ್ನಿಧಿಯಲ್ಲಿ ಪುಸ್ತಕದ ಚಿಂತೆ ದೂರವಾಯಿತು.

ಪುಸ್ತಕಗಳನ್ನು ದೊರಕಿಸಿಕೊಂಡುದಾಗಿ ಹಂಪನಾ ಅವರಿಗೆ ತಿಳಿಸಿದೆ. 'ಆ ಪುಸ್ತಕ ನನಗೆ ಸಿಕ್ಕಿರಲಿಲ್ಲ. ನೀವು ದೊರಕಿಸಿಕೊಂಡುದು ನಿಮ್ಮ ಮುಂದಿನ ಕೆಲಸಕ್ಕೆ ಶುಭ ಸೂಚಕವಾಗಿದೆ. ಅರ್ಧ ಕೆಲಸ ಮುಗಿಯಿತೆಂದು ತಿಳಿಯಿರಿ' ಎಂದು ಹರ್ಷಿಸಿ, ತಮ್ಮ ಅರ್ಧಾಂಗಿ ಕಮಲಮ್ಮನವರಿಗೆ- ಜಿವಿಡಿ ಪಟ್ಟು ಹಿಡಿದು ಕೆಲಸ ಮಾಡಬಲ್ಲರೆಂಬುದಕ್ಕೆ ಅವರು ಪುಸ್ತಕವನ್ನು ದೊರಕಿಸಿಕೊಂಡುದೇ ಸಾಕ್ಷಿ' ಎಂದು ಹೇಳಿ ನನ್ನನ್ನು ಉತ್ತೇಜಿಸಿದರು. ತಮ್ಮ ಪ್ರೊಫೆಸರ್ ಬ್ಯಾಗ್‌ನಿಂದ ನೋಂದಣಿ ಫಾರಂ ತೆಗೆದು ಅಗತ್ಯ ಮಾಹಿತಿಗಳನ್ನು ಕೇಳಿ ಫಾರಂ ತುಂಬಿ ನನ್ನಿಂದ ಸಹಿ ಪಡೆದರು. ಸಂಶೋಧನಾ ವಿದ್ಯಾರ್ಥಿ ಮಾಡಬೇಕಾದ ಪ್ರಾಥಮಿಕ ಕೆಲಸವನ್ನೂ ಮಾರ್ಗದರ್ಶಿಯೇ ಮಾಡುವುದು ವಿರಳ. ಇಂಥ ವಿರಳರ ಸಾಲಿಗೆ ಹಂಪನಾ ಸೇರಿದವರು. ಅರ್ಜಿ ಫಾರಂ ಅನ್ನು ನಗುನಗುತ್ತಲೇ ತುಂಬಿದ ಡಾ ಹಂಪನಾ - "ಬಂಧುವರ್ಮನ ಕೃತಿಗಳನ್ನೆಲ್ಲಾ ಚೆನ್ನಾಗಿ ಓದಿ, ಸತಿಧರ್ಮಸಾರ ಕೃತಿಯೂ ಈ ಕವಿಯದ್ದೇ ಎಂಬ ಮಾತಿದೆ; ಅದನ್ನೂ ಪರಿಶೀಲಿಸಿ. ಅದು ಲಭ್ಯವಿದೆ" ಎಂದರು.

"ಆಗಲಿ ಸಾರ್."

"ಜೀವಿಡಿ, ನಿಮ್ಮ ಕೃತಿಗಳ, ಲೇಖನಗಳ, ವಿಮರ್ಶೆಗಳ ಪಟ್ಟಿಯನ್ನೂ ಆಕಾಶವಾಣಿಯಿಂದ ಪ್ರಸಾರಗೊಂಡ ರೂಪಕಗಳ, ಭಾಷಣಗಳ ಪಟ್ಟಿಯನ್ನೂ ಸಿದ್ಧಪಡಿಸಿ ತನ್ನಿ ಎಂ.ಎ. ಪ್ರಮಾಣ ಪತ್ರ, ಅಂಕಪಟ್ಟಿಯ ಜೆರಾಕ್ಸ್ ಪ್ರತಿಯನ್ನು ಲಗತ್ತಿಸಿ," ಎಂದರು. ಅವರ ಸೂಚನೆಯಂತೆ ಅರ್ಜಿಯನ್ನು ಸಿದ್ಧಗೊಳಿಸಿ ಅವರ ಪರಿಶೀಲನೆಗೆ ಕೊಟ್ಟೆ. ಅವರು ಪರಿಶೀಲಿಸಿ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರ ಮೂಲಕ ಪರೀಕ್ಷಾಂಗದ ಕುಲಸಚಿವರಿಗೆ ಕಳಿಸಿಕೊಡುವೆ ಎಂದು ಅರ್ಜಿ ಸಲ್ಲಿಸುವ ಹೊಣೆಯನ್ನೂ ಹೊತ್ತ ವಿಶಾಲಹೃದಯಿ ಡಾ ಹಂಪನಾ ಅವರು.

ಹರಿವಂಶಾಭ್ಯುದಯವು ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿನಾಥಚರಿತೆ, ಶ್ರಾವಕಾಚಾರದ ಕೃತಿ- ಜೀವ ಸಂಬೋಧನಂ, ಶ್ರಾವಕಿಯರ ಆಚಾರಕೃತಿ ಸತಿಧರ್ಮಸಾರ- ಎಲ್ಲವೂ ಧಾರ್ಮಿಕ ಕೃತಿಗಳೇ. ಮೊದಲೆರಡು ಕೃತಿಗಳು ಹಳಗನ್ನಡದ ಗಟ್ಟಿ ಕಾವ್ಯಗಳು.

ಮೊದಲ ಓದಿಗೆ ಕಾವ್ಯಾಂತರಂಗದ ಅರಿವಾಗದೆ ಮತ್ತೆ ಮತ್ತೆ ಓದಿ ಪ್ರಮುಖಾಂಶಗಳನ್ನು ಹಾಗೂ ವಿರಳ ಪದಪ್ರಯೋಗಗಳನ್ನು ಗುರುತಿಸತೊಡಗಿದೆ.

ದ್ವಾದಶಾನುಪ್ರೇಕ್ಷೆಗಳಿಗೆ ಸಂಬಂಧಿಸಿದ ಪರಾಮರ್ಶನ ಕೃತಿಗಳಲ್ಲಿ ಮುಖ್ಯವಾಗಿ ಸ್ವಾಮಿ ಕಾರ್ತಿಕೇಯನ ಕಾರ್ತಿಕೇಯಾನುಪ್ರೇಕ್ಷೆಯನ್ನೂ, ಆತ್ಮಧರ್ಮ ಪತ್ರಿಕೆಯ ಕೆಲವು ಸಂಪುಟಗಳನ್ನೂ ವಿವೇಕಾಭ್ಯುದಯ ಪತ್ರಿಕೆಯ ಕೆಲವು ಸಂಪುಟಗಳನ್ನೂ 'ಸನ್ಮತಿದೇಶನಾ' ಪತ್ರಿಕೆಯನ್ನೂ ಡಾ ಹಂಪನಾ ನೀಡಿ 'ಇಲ್ಲಿ ಕೆಲವು ಅನುಪ್ರೇಕ್ಷೆಗಳ ವಿವರಣೆ ಸಿಗುತ್ತದೆ ನೋಡಿ' ಎಂದರು. ಇವುಗಳನ್ನು ಅಭ್ಯಸಿಸಿದಾಗ ಈ ವಿಷಯದಲ್ಲಿ ನಿಬಂಧ ರಚನೆ ನನ್ನಿಂದ ಸಾಧ್ಯವೇ ಎನ್ನಿಸಿತು. ವಿಷಯ ಬಾಹುಳ್ಯ ನನ್ನನ್ನು ಅಧೀರನನ್ನಾಗಿಸಿತು. ಡಾ. ಹಂಪನಾ ಅವರೊಡನೆ ನನ್ನ ಅಧೈರ್ಯವನ್ನು ವ್ಯಕ್ತಪಡಿಸಿದಾಗ 'ನಿಮಗೆ ಈ ವಿಷಯದಲ್ಲಿ ನಿಬಂಧ ರಚಿಸುವ ಶಕ್ತಿ ಇದೆ ಎಂಬ ದೃಢ ನಂಬಿಕೆ ನನಗಿದೆ. ಆರಂಭದಲ್ಲಿ ಈ ಅಳುಕು ಸಹಜವೇ. ಚಿಂತಿಸದೆ ಅಧ್ಯಯನಶೀಲರಾಗಿ' ಎಂದು ನನ್ನ ಅಳುಕನ್ನು ನಿವಾರಿಸಿದರು. ಅಷ್ಟೇ ಅಲ್ಲ, ಸಂಶೋಧನಾ ಕ್ಷೇತ್ರದಲ್ಲಿ ಹೇಗೆ ಕಾರ್ಯ ನಿರ್ವಹಿಸಬೇಕೆಂದೂ ತಿಳಿಸಿ ಬಂಧುವರ್ಮನ ಬಗೆಗೆ ಬಂದಿರುವ ಲೇಖನಗಳನ್ನೆಲ್ಲಾ ಗಮನಿಸುವಂತೆ ತಿಳಿಸಿದರು. ವಿಷಯಕ್ಕೆ ಪೂರಕವಾಗಿ ದೊರೆತ ಸಾಹಿತ್ಯವನ್ನೆಲ್ಲಾ ಅಧ್ಯಯನಿಸತೊಡಗಿದೆ.

ನನ್ನ 'ಮೌಲ್ಯಮಾಪನ' ಕಥಾ ಸಂಕಲನದ 'ಜಾತಿಹೀನನ ಮನೆಯ ಜ್ಯೋತಿ' ಕಥೆಯು ಚಲನಚಿತ್ರವಾಗತೊಡಗಿತು. ಈ ಕಥೆಯನ್ನೇ ಆಧರಿಸಿ 'ಹೊಸ ಹೆಜ್ಜೆ' ಕಾದಂಬರಿ ರಚಿಸಿ ಡಾ. ಹಂಪನಾ ಅವರಿಂದ ಮುನ್ನುಡಿ ಬಯಸಿದೆ.

ಕಾದಂಬರಿಯ ಅನಾವರಣದಲ್ಲಿ ಮೆಚ್ಚುಗೆಯ ಮಾತುಗಳನ್ನು ಬರೆದು, ಕಾದಂಬರಿ ತುಂಬಾ ಚೆನ್ನಾಗಿದೆ, ಭೇಷ್-ಎಂದು ಭುಜ ತಟ್ಟಿ ಮೆಚ್ಚುಗೆ ವ್ಯಕ್ತಪಡಿಸಿದರು. ಈ ಕಾದಂಬರಿಯ ಬಿಡುಗಡೆ ಸಮಾರಂಭವನ್ನು ಮಂಡ್ಯದಲ್ಲಿರಿಸಿಕೊಂಡು ಕೃತಿ ಬಿಡುಗಡೆ ಮಾಡಲು ಹಂಪನಾ ಅವರನ್ನು ಕೋರಿದೆ. ಕನ್ನಡ ನಾಡಿನ ಶ್ರೇಷ್ಠ ಸಂಶೋಧಕ, ಸೃಜನಶೀಲರಾದ ಹಂಪನಾ ಕಾರ್ಯಕ್ರಮಕ್ಕೆ ಬರಲು ಒಪ್ಪಿ ಆ ಕಾರ್ಯಕ್ರಮ ನಡೆಸಿಕೊಟ್ಟದು ಅವರು ನಿಗರ್ವಿ ಎಂಬುದಕ್ಕೆ ನಿದರ್ಶನವಾಯಿತು. ಕಾರ್ಯಕ್ರಮದ ಗಡಿಬಿಡಿಯಲ್ಲಿ ನಾನು ಅವರಿಗೆ ಪ್ರಯಾಣ ಭತ್ಯೆ ಕೊಡುವುದನ್ನು ಮರೆತು ಅನಂತರ ಡಿಡಿ ಮೂಲಕ ಅಲ್ಪ ಕಾಣಿಕೆಯನ್ನು ಕಳಿಸಿದೆ. ಅದನ್ನು ಹಿಂದಿರುಗಿಸಿ ಹೀಗೆ ಪತ್ರಿಸಿದ್ದರು : ನನ್ನ ಆತ್ಮೀಯ ಜೀವಿಡಿಯಿಂದ ಪ್ರಯಾಣ ಭತ್ಯೆಯನ್ನು ಸ್ವೀಕರಿಸುವುದು ಧರ್ಮವಲ್ಲ. ಇದನ್ನು ಓದಿ ಅವರ ಹಿರಿತನ ಸುಂಸ್ಕೃತಿಗೆ ಶಿರಬಾಗಿದೆ. ಅವರ ಮೇಲೆ ನನಗಿದ್ದ ಅಭಿಮಾನ ಮತ್ತಷ್ಟು ಹೆಚ್ಚಾಯಿತು.

ರೋಗಗಳ ಕಾಟದಿಂದ ನನ್ನ ಚೈತನ್ಯ ಕುಗ್ಗಿತು. ಒಂದು ವರ್ಷಕಾಲ ನನ್ನ ಬರವಣಿಗೆ ಸ್ಥಗಿತವಾಯಿತು. ಖಾಯಿಲೆಗಳನ್ನು ಗಣನೆಗೆ ತೆಗೆದುಕೊಳ್ಳಬೇಡಿ ನೋವನ್ನು ಮರೆಯಲಾದರೂ ಓದಿ, ಬರೆಯಿರಿ ಎಂದು ಸಂತೈಸಿ ಕ್ರಿಯಾಶೀಲನಾಗಲು ಉತ್ತೇಜಿಸಿದರು. "ನಾನು ರೋಗಪೀಡಿತನಾದಾಗಲೇ ಹೆಚ್ಚು ಬರೆಯುವುದು" ಎಂದು ಎಂ.ವಿ. ಸೀತಾರಾಮಯ್ಯನವರು

ತಮ್ಮ ರೋಗಗಳು ಪ್ರಬಂಧದಲ್ಲಿ ಹೇಳಿರುವುದು ನೆನಪಾಗಿ ಬರೆಯತೊಡಗಿದೆ. ದಿನಕ್ಕೆ ಇಂತಿಷ್ಟು ಪುಟಗಳೆಂದು ಬರೆದು 'ಸಂಬಂಧ' ಕಾದಂಬರಿಯನ್ನು ಪೂರ್ಣಗೊಳಿಸಿದೆ. ಮೊದಲು ಓದಿ ಹರ್ಷಿಸಿ ಕಾದಂಬರಿಗೆ ಶೀರ್ಷಿಕೆ ಸೂಚಿಸಿದವರು ನನ್ನ ಮಾರ್ಗದರ್ಶಿ, ಹಿತೈಷಿ ಡಾ ಹಂಪನಾ ಅವರೇ. ಡಾ. ಹಂಪನಾ ಅವರಿಂದ ಮುನ್ನುಡಿ ಬಯಸಿದೆ.

ನಿಗರ್ವಿ, ಸಹನಶೀಲೆ, ಗಮನಾರ್ಹ ಲೇಖಕಿ ಡಾ ಕಮಲಾ ಹಂಪನಾ ಅವರು ಹಂಪನಾ ಅವರೊಡನೆ ಟೊರೆಂಟೋ ವಿಶ್ವವಿದ್ಯಾಲಯಕ್ಕೆ ಹೊರಡುವ ಸಡಗರದಲ್ಲಿದ್ದಾಗ ಸಂಬಂಧ ಕಾದಂಬರಿಗೆ ಮುನ್ನುಡಿ ಬರೆಯಲು ಕೋರಿದೆ. ಅವರು ಒಪ್ಪಿ ವಿದೇಶ ಪ್ರವಾಸ ಹೊರಡುವುದಕ್ಕೆ ಮುನ್ನವೇ ಮುನ್ನುಡಿ ನೀಡಿ, ಮೆಚ್ಚುಗೆಯ ಮಾತನ್ನಾಡಿದರು. ಈ ದಂಪತಿಗಳು ನನ್ನನ್ನು ವಾತ್ಸಲ್ಯದಿಂದ ಕಂಡು, ನನ್ನ ಶ್ರೇಯಸ್ಸನ್ನು ಬಯಸಿದ ವಿದ್ವನ್ಮಣಿಗಳು.

ನನಗೆ ಪ್ರೀ ಪಿ.ಎಚ್.ಡಿ ಪರೀಕ್ಷೆಯನ್ನು ಗೊತ್ತುಪಡಿಸಿರುವುದಾಗಿ ತಿಳಿಸಿ ಹಂಪನಾ ಅವರು ಪತ್ರಿಸಿದಾಗ-ಮೌಲ್ಯಮಾಪನ ಕಾರ್ಯವೂ ಅದೇ ವೇಳೆಗೆ ಇರುವುದರಿಂದ ನಾನು ಮತ್ತೊಮ್ಮೆ ಪರೀಕ್ಷೆ ತೆಗೆದುಕೊಂಡರೆ ಒಳಿತೆನಿಸುತ್ತದೆ ಎಂದು ನನ್ನ ಅನಾನುಕೂಲತೆಯನ್ನು ವಿವರಿಸಿದಾಗ ಡಾ ಹಂಪನಾ-ಪರೀಕ್ಷೆಯನ್ನು ಮುಂದೂಡಲು ಯೋಚಿಸುವೆ ಎಂದು ಹೇಳಿ, ನನಗಾಗಿ ಆರು ತಿಂಗಳು ಮುಂದೂಡಿರುವುದಾಗಿ ಪತ್ರಿಸಿದಾಗ ಹರ್ಷಿಸಿದೆ. ಡಾ. ಹಂಪನಾ ಅವರ ಉಪಕಾರದ ಹಸ್ತವನ್ನು ಎಂದೂ ಮರೆಯಲಾಗದು.

'ಪರೀಕ್ಷೆ ಎಂದರೆ ನನಗೆ ಭಯ ಸಾರ್' ಎಂದೆ. ನಿಮಗೆ ಒಳ್ಳೆಯ ಬರವಣಿಗೆ ಇದೆ. ಸಾಹಿತ್ಯ ಕ್ಷೇತ್ರದಲ್ಲಿ ಈಗಾಗಲೇ ಒಳ್ಳೆಯ ಹೆಸರು ಪಡೆದಿದ್ದೀರಿ. ಪರೀಕ್ಷೆಯನ್ನು ಧೈರ್ಯವಾಗಿ ಎದುರಿಸಿ, ಈ ಪರೀಕ್ಷೆ ನಿಮಗೆ ಏನೇನೂ ಅಲ್ಲ, ಎಂದು ಅಳ್ಳೆದೆಗೆ ಧೈರ್ಯ ತುಂಬಿದರು. ಹಿಂದಿನ ವರ್ಷದ ಪ್ರೀ ಪಿಎಚ್.ಡಿಯ ಪ್ರಶ್ನೆಪತ್ರಿಕೆಗಳನ್ನು ನೀಡಿ ಪ್ರಶ್ನೆಗಳು ಈ ಮಾದರಿಯಲ್ಲಿರುತ್ತವೆ. ನಿಮ್ಮ ವಿಷಯಕ್ಕೆ ಸಂಬಂಧಿಸಿದಂತೆ ಬರಬಹುದಾದ ಪ್ರಶ್ನೆಗಳನ್ನು ಊಹಿಸಿ ಉತ್ತರ ಸಿದ್ಧ ಪಡಿಸಿಕೊಂಡು ಓದಿರಿ- ಎಂದು ಮಾರ್ಗದರ್ಶನ ನೀಡಿದರು. ಸಿದ್ಧ ಪಡಿಸಿಕೊಂಡ ಪ್ರಶ್ನೆ-ಉತ್ತರವನ್ನು ತೋರಿಸಿದಾಗ ಇದಿಷ್ಟು ಸಿದ್ಧತೆ ಸಾಕು, ಧೈರ್ಯವಾಗಿ ಪರೀಕ್ಷೆ ಎದುರಿಸಿ ಎಂದರು. ಅವರ ಆಶೀರ್ವಾದದಿಂದ ಮೊದಲ ಪ್ರಯತ್ನದಲ್ಲೇ ಪರೀಕ್ಷೆಯಲ್ಲಿ ಉತ್ತೀರ್ಣನಾದೆ. ಬೆಂಗಳೂರು ವಿಶ್ವವಿದ್ಯಾಲಯದಿಂದ ಬಂದ ಪರೀಕ್ಷಾ ಫಲಿತಾಂಶದ ಪತ್ರದ ತಳದಲ್ಲಿಯೇ ಡಾ ಹಂಪನಾ ಹೀಗೆ ಬರೆದಿದ್ದಾರೆ :

' ಆತ್ಮೀಯ ಜಿವಿಡಿ

ಈಗ ಸಂತೋಷ ಸಮಾಧಾನ ಆಯಿತೆ ? ಮನೆಯವರಿಗೆಲ್ಲ ಸಿಹಿ ಹಂಚಿ ಖುಷಿ ಪಡಿ. 1990ರ ಹೊಸ ವರ್ಷದ ಹಾರ್ದಿಕ ಶುಭಾಶಯಗಳು

ಹಂಪನಾ '

'ಪ್ರಬಂಧದ ರಚನೆಯನ್ನು ಹೇಗೆ ಆರಂಭಿಸಬೇಕೆಂಬುದೇ ತಿಳಿಯುತ್ತಿಲ್ಲ ಸಾರ್' ಎಂದು ಭೇಟಿಯಾಗಿ ಕೇಳಿದಾಗ

'ನಿಮಗೆ 25 ವರ್ಷಗಳ ಬೋಧನಾ ಅನುಭವ ಇದೆ. ಸಿನಾಪ್‌ಸಿಸ್‌ಗೆ ಅನುಗುಣವಾಗಿ ನಿಮಗೆ ಏನು ಅನಿಸುತ್ತದೋ ಅದನ್ನು ಬರೀತಾ ಹೋಗಿ' ಎಂದರು. ಬರವಣಿಗೆಯಲ್ಲಿ ತಮ್ಮ ಅಭಿಪ್ರಾಯಗಳನ್ನು ನನ್ನ ಮೇಲೆ ಹೇರಲಿಲ್ಲ. ನನಗೆ ಪೂರ್ಣ ಸ್ವಾತಂತ್ರ್ಯ ನೀಡಿದರು.

ನನ್ನ ನಿಬಂಧದ ಮೊದಲ ಅಧ್ಯಾಯವನ್ನು ಬರೆದು ಕೊಟ್ಟೆ. ನನಗಿದ್ದ ಒಂದು ಖಾಯಿಲೆಯೊಡನೆ ಮತ್ತೆರಡು ಸೇರಿ ತೀರ ಬಳಲಿದೆ. ನಿಬಂಧ ರಚನೆ ಸ್ಥಗಿತವಾಯಿತು- ಸುಮಾರು ಒಂದೂವರೆ ವರುಷ. ಈ ನಡುವೆ ನನ್ನ 'ಭಾರತೀಯ ಕಾವ್ಯಮೀಮಾಂಸೆ ಒಂದು ಸಮೀಕ್ಷೆ' ಕೃತಿ ಪ್ರಕಟವಾಯಿತು. ಡಾ. ಹಂಪನಾ ಅವರಿಗೆ ಗೌರವ ಪ್ರತಿ ನೀಡಲು ಹೋದೆ. ಕೃಶ ಶರೀರಿಯಾದ ನನ್ನನ್ನು ಕಂಡು- "ಆರೋಗ್ಯದ ಕಡೆ ಗಮನ ಕೊಡಿ, ವಿಶ್ರಾಂತಿ ಪಡೆಯಿರಿ. ಇಂಥ ಶಾಸ್ತ್ರ ಗ್ರಂಥವನ್ನೇ ಬರೆದ ನಿಮಗೆ ನಿಬಂಧ ರಚನೆ ಕಷ್ಟವಾಗಲಾರದು. ನಿಮ್ಮ ಇತರ ಬರವಣಿಗೆ ನಿಲ್ಲಿಸಿ. ಮನಸ್ಸು ಮಾಡಿ ದಿನಕ್ಕೆ ಹತ್ತು ಪುಟದಂತೆ ಬರೆಯುತ್ತಾ ಹೋಗಿ ತನಗೆ ತಾನೇ ಮುಕ್ತಾಯವಾಗುತ್ತದೆ ನಿಬಂಧ." ಮುದುಡಿದ ನನ್ನ ಮನಸ್ಸನ್ನು ಮಾತುಗಳಿಂದಲೇ ಮುದಗೊಳಿಸಿ ಬರವಣಿಗೆಯಲ್ಲಿ ತೊಡಗುವಂತೆ ಗದರಿದರು.

ನನ್ನ ನಿಬಂಧದ ಎರಡನೆಯ ಅಧ್ಯಾಯವನ್ನು ಬರೆದು ಕಳಿಸಿದೆ. ನನ್ನ ಕಿರಿಯ ಮಗ ಜಿ.ಡಿ ದಿನೇಶಕುಮಾರನಿಗೆ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದಿಂದ ಸೀಟಿಗಾಗಿ ಸಂದರ್ಶನಕ್ಕೆ ಕರೆ ಬಂದಾಗ ಮಗನೊಡನೆ ಹಂಪನಾ ಅವರ ಮನೆಗೆ ಹೋದೆ. ಮಳೆಯಲ್ಲಿ ನೆನೆದವರಿಗೆ ಕಾಫಿ ಕೊಟ್ಟು ಉಪಚರಿಸಿದರು. ನನ್ನ ಮಗನ ಕ್ರೀಡಾ ಸಾಧನೆಯನ್ನು ಮೆಚ್ಚಿ ಈ ಕ್ರೀಡಾ ಪಟುಗೆ ಸೀಟು ಸಿಗ್ತದೆ ಎಂದರು. ಅವರ ವಾಣಿ ಜನವಾಣಿ ಎನ್ನಿಸಿತು. ದಿನುಗೆ ಕೃಷಿವಿಶ್ವವಿದ್ಯಾನಿಲಯದಲ್ಲಿ ತೋಟಗಾರಿಕೆ ವಿಭಾಗದಲ್ಲಿ ಸೀಟು ದೊರೆತು. ಮೂಡಿಗೆರೆಯ ತೋಟಗಾರಿಕಾ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾನೆ.

ಹಗಲಿರುಳು ಬರೆದು ಮೂರನೆಯ ಅಧ್ಯಾಯವನ್ನು ಡಾ. ಹಂಪನಾ ಅವರಿಗೆ ನೀಡಿದೆ. ಇದುವರೆಗಿನ ಬರಹದ ಬಗೆಗೆ ಅಭಿಪ್ರಾಯ ತಿಳಿಯ ಬಯಸಿದೆ. ಪೂರ್ಣ ನೋಡಿಲ್ಲ, ಅಲ್ಲಲ್ಲಿ ಕಣ್ಣಾಡಿಸಿದ್ದೇನೆ; ಪರವಾಗಿಲ್ಲ. ಬರವಣಿಗೆ ಮುಗಿಸಿಕೊಡಿ. ಒಟ್ಟಿಗೆ ನೋಡುವೆ, ಅಭಿಪ್ರಾಯ ತಿಳಿಸುವೆ-ಎಂದರು.

ರೋಗಗಳು ನನ್ನನ್ನು ಕಾಡತೊಡಗಿದವು, ಸಾಂಸಾರಿಕ ಜವಾಬ್ದಾರಿ ಹೆಚ್ಚುತ್ತಾ ಹೋಯಿತು. ಚಿಂತೆಯಿಂದ ಮೈಮನಸ್ಸು ಜರ್ಜರಿತವಾಯಿತು. ಬರೆಯುವ ಮನಸ್ಸು ದೂರವಾಯಿತು. ಇಂಥ ಸಂದರ್ಭದಲ್ಲಿ ಡಾ.ಹಂಪನಾ ಅವರು ನನ್ನ ಕರ್ತವ್ಯವನ್ನು ಎಚ್ಚರಿಸಿ ಪತ್ರಿಸುತ್ತಿದ್ದರು. ದಿನಾಂಕ 30.08.1993ರ ಅವರ ಪತ್ರವಿದು :

ಆತ್ಮೀಯ ಪ್ರೊ.ಜಿ.ವಿ. ದಾಸೇಗೌಡ

ಮತ್ತೆ ನಿಮ್ಮಿಂದ ಏನೂ ಸುದ್ದಿಯಿಲ್ಲ. ಪಿ.ಎಚ್.ಡಿ ಮಹಾಪ್ರಬಂಧದ ಕಡೆಯ ಅಧ್ಯಾಯವನ್ನು ಬರೆದು ತರುವುದಾಗಿ ತಿಳಿಸಿ ಏಳೆಂಟು ತಿಂಗಳುಗಳು ಉರುಳಿವೆ.

ನಿರುತ್ಸಾಹಿಗೊಳ್ಳುವವರಲ್ಲವೆಂದು ನಿಮ್ಮ ವಿಚಾರದಲ್ಲಿ ನನಗೆ ನಂಬಿಕೆ ಇದೆ. ಆದಷ್ಟು ಬೇಗ ಬರೆದು ತನ್ನಿ. ನಿಮ್ಮ ಎಲ್ಲ ಹಸ್ತಪ್ರತಿಯನ್ನೂ ಸಂತೋಷದಿಂದ ತಿದ್ದಿ ಸರಿಗೊಳಿಸಿ ಕೊಡುತ್ತೇನೆ. ಈ ವರ್ಷ ಡಿಸೆಂಬರ್ ತಿಂಗಳೊಳಗೆ ಅದನ್ನು ವಿಶ್ವವಿದ್ಯಾನಿಲಯಕ್ಕೆ ನೀವು ಒಪ್ಪಿಸಲೇ ಬೇಕು. ಇಲ್ಲವಾದರೆ ನಿಮ್ಮ ನೋಂದಣಿಯನ್ನು ರದ್ದು ಪಡಿಸುತ್ತಾರೆಂಬುದು ನಿಮ್ಮ ಗಮನದಲ್ಲಿರಲಿ.

ಈಗ ನೀವು ತಕ್ಷಣವೇ ಬೆಂ.ವಿ.ವಿಕ್ಕೆ ಒಂದು ಪತ್ರವನ್ನು ಬರೆದು ಬೆರಳಚ್ಚಿಸಿ ಮೂರು ಪ್ರತಿಗಳನ್ನು ನನಗೆ ಕಳಿಸಿ. ಅದರ ಒಕ್ಕಣೆ ಮಾದರಿಗೆ ಪುತಿ.ನೋ.

ಮನೆಯಲ್ಲಿ ನಿಮ್ಮ ಸೌಭಾಗ್ಯವತಿಯರೂ ಮಕ್ಕಳೂ ಚೆನ್ನುತಾನೆ? ನಿಮ್ಮ ಆರೋಗ್ಯ ಹೇಗಿದೆ? ನಾವಿಲ್ಲಿ ಹದುಳಿಗರು, ಪತ್ರಿಸಿ

ಲೇಸು ಹಂಪನಾ.

ಈ ಪತ್ರ ನನ್ನನ್ನು ಬಡಿದೆಬ್ಬಿಸಿತು. ನೋಂದಣಿ ರದ್ದಾಗುವುದು ನನಗಿಷ್ಟವಿಲ್ಲ. ಆದ್ದರಿಂದ ದೇಹಾಲಸ್ಯವನ್ನು ಲೆಕ್ಕಿಸದೆ ನಡುರಾತ್ರಿವರೆಗೂ ಕೆಲವು ದಿನಗಳು ಬರೆದೆ, ನಾಲ್ಕನೆಯ ಹಾಗೂ ಕೊನೆಯ ಅಧ್ಯಾಯವನ್ನು ಬರೆದು ತಲುಪಿಸಿದೆ.

೪.೬.೯೪ರ ಡಾ ಹಂಪನಾ ಅವರ ಪತ್ರದ ಕೆಲವು ವಾಕ್ಯಗಳಿವು : 'ನಿಮಗೆ ವಯಸ್ಸಾಗುತ್ತಿದೆ. ಆರೋಗ್ಯವೂ ಅಷ್ಟಕಷ್ಟೆ. ಇದನ್ನೆಲ್ಲಾ ನೆನಪಿಟ್ಟು ಕಡೆಯ ಅಧ್ಯಾಯ ತಕ್ಷಣ ಪಟ್ಟು ಹಿಡಿದು ಬರೆಯಬೇಕು.

ಹಂಪನಾ'

ನನ್ನ ನಿಬಂಧದ ಸಿನಾಪ್‌ಸಿಸ್‌ನಲ್ಲಿ ನಾಲ್ಕೇ ಅಧ್ಯಾಯಗಳಿವೆ. ಬರವಣಿಗೆ ಮುಗಿಯಿತೆಂದು ನಮ್ರನಾಗಿ ಪತ್ರಿಸಿದೆ.

ಡಾ. ಹಂಪನಾ ಅವರು ನನ್ನ ಅನುಕೂಲಕ್ಕಾಗಿಯೇ ಕೆಲವು ಸಂಪ್ರಬಂಧಗಳನ್ನು ಬರೆದರು. ಆ ಸಂಪ್ರಬಂಧಗಳನ್ನು ಅಧ್ಯಯನಿಸಿ ಅಲ್ಲಿಯ ಮುಖ್ಯಾಂಶಗಳನ್ನು ನಾನು ಅವರ ಅನುಮತಿಯಿಂದ ಬಳಸಿಕೊಂಡೆ. ಅವರ ಸಂಪ್ರಬಂಧದ ಅಂಶಗಳು ನನ್ನ ನಿಬಂಧಕ್ಕೆ ಕಾಂತಿ ನೀಡಿದವೆನ್ನಬಹುದು.

ನನ್ನ ನಿಬಂಧವನ್ನು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲು ಪರೀಕ್ಷಾಂಗದ ಕುಲಸಚಿವರಿಂದ ಪೂರ್ವಭಾವಿಯಾಗಿ ಅನುಮತಿ ಪಡೆಯಬೇಕಿತ್ತು. ಅದಕ್ಕಾಗಿ ಅನುಮತಿ ಕೋರಿಕೆ ಪತ್ರವನ್ನು ಅಗತ್ಯ ಮಾಹಿತಿಗಳೊಡನೆ ಸಲ್ಲಿಸಬೇಕೆಂಬುದನ್ನು ತಿಳಿಸಿ ದಿನಾಂಕ. ೧೬.೬.೯೪ರಂದು ಡಾ. ಹಂಪನಾ ನನಗೆ ಪತ್ರಿಸಿದರು :

'ಈ ತಿಂಗಳು 25 ರಂದು (25.6.94) ಈ ಬೆಗ್ಗ ಪಿಎಚ್‌ಡಿ ಸಮಿತಿಯ ಸಭೆ ಕರೆದಿದ್ದೇನೆ.

ತುರ್ತು ಗಮನ ಹರಿಸಿ

ನಿಮ್ಮ thesis ತಕ್ಷಣ ನೋಡಿಕೊಡುತ್ತೇನೆ.

ನೀವು ನಿಮ್ಮ ಇಡೀ ಕುಟುಂಬ ಆರೋಗ್ಯ ತಾನೆ?

ಶುಭಾಶಯಗಳು

ಹಂಪನಾ'

ಡಾ. ಹಂಪನಾ ಅವರ ಮಾರ್ಗ ಸೂಚಿಯಂತೆ ಅಗತ್ಯ ಮಾಹಿತಿಗಳೊಡನೆ ನಿಬಂಧವನ್ನು ಒಪ್ಪಿಸಲು ಅನುಮತಿ ನೀಡಬೇಕೆಂದು ಬೆಂ.ವಿ.ವಿ.ಯದ ಪರೀಕ್ಷಾಂಗದ ಕುಲಸಚಿವರಿಗೆ ಪತ್ರಿಸಿದೆ. ದಿನಾಂಕ 19.9.94ರಂದು ಅನುಮತಿ ದೊರಕಿತು.

ಡಾ. ಹಂಪನಾ ಅವರು ಪತ್ರಗಳ ಮೂಲಕವೂ ನನ್ನ ನಿಬಂಧಕ್ಕೆ ಸಂಬಂಧಿಸಿದಂತೆ ಮಾಡಬೇಕಾದ ಕಾರ್ಯದ ಬಗೆಗೆ ಮಾರ್ಗದರ್ಶನ ಮಾಡುತ್ತಿದ್ದರು. ಅವರು ತಮ್ಮ ಕಾಗದದಲ್ಲಿ ನನ್ನ ಆರೋಗ್ಯವನ್ನು, ಕುಟುಂಬದವರ ಆರೋಗ್ಯವನ್ನು ಅಕ್ಕರೆಯಿಂದ ಒಬ್ಬ ಬಂಧುವಿನಂತೆ ವಿಚಾರಿಸುತ್ತಿದ್ದುದು ಅವರ ಹಿರಿತನದ ಪ್ರತೀಕವಾಗಿದೆ.

ನನ್ನ ನಿಬಂಧವನ್ನು ಪೂರ್ಣ ಪರಿಶೀಲಿಸಿ, ಸೂಕ್ತ ಮಾರ್ಗದರ್ಶನ ನೀಡಿ ಎಂದು ಡಾ. ಹಂಪನಾ ಅವರಿಗೆ ಫೋನಿಸುತ್ತಲೂ ಪತ್ರಿಸುತ್ತಲೂ ಇದ್ದೆ. ದಿನಾಂಕ 20.6.94ರಲ್ಲಿ ಅವರಿಂದ ಬಂದ ಪತ್ರವಿದು :

ಆತ್ಮೀಯ ಮಿತ್ರರಾದ ಪ್ರೊ.ಜಿವಿಡಿ

ನಿಮ್ಮ thesis ಚೆನ್ನಾಗಿ ಬರೆದಿದ್ದೀರಿ, ಬಹಳ ಶ್ರಮಪಟ್ಟಿದ್ದೀರಿ

ಪೂರ್ಣ ನೋಡಿಟ್ಟಿದ್ದೀನಿ.

ನೀವು ತಕ್ಷಣ ಬಂದು ಅದನ್ನು (ಮೊದಲ ಅಧ್ಯಾಯ ಮಾತ್ರ) Rewrite ಮಾಡಿ ಬೆರಳಚ್ಚಿಸಿ ನಮ್ಮ ವಿಶ್ವವಿದ್ಯಾಲಯಕ್ಕೆ ಕೂಡಲೇ ಒಪ್ಪಿಸಿ. ಆಗಸ್ಟ್ ತಿಂಗಳಲ್ಲಿ ನೀವು submitt ಮಾಡಲೇಬೇಕು. ಈ ವರ್ಷ ಡಿಸೆಂಬರ್ ಒಳಗೇನೆ ನೀವು ಡಾ.ಜಿ.ವಿ. ದಾಸೇಗೌಡ ಎಂ.ಎ ಪಿಎಚ್.ಡಿ. ಆಗಬೇಕೆಂಬುದು ನನ್ನ ಅಪೇಕ್ಷೆ, ಶುಭಾಶಯಗಳು

ಪ್ರೀತಿಯಿಂದ

ಹಂಪನಾ

ಪರಿಶೀಲಿಸಿದ ನಿಬಂಧದ ನನ್ನ ಹಸ್ತಪ್ರತಿಯನ್ನು ತರಲು ಡಾ ಹಂಪನಾ ಅವರಲ್ಲಿಗೆ ಹೋದಾಗ ಅವರು ಹಲ್ಲು ನೋವಿನಿಂದ ಬಳಲುತ್ತಿದ್ದರು. ಹೆಚ್ಚು ಮಾತನ್ನಾಡಲೂ ಆಗುತ್ತಿರಲಿಲ್ಲ. 'ಏನಾದರೂ ಮಾರ್ಪಾಟಾಗಬೇಕಾ ಸಾರ್' ಎಂದೆ. "ಬಂದುವರ್ಮನ ಕಾಲದ

ಬಗೆಗೆ ಬಂಧುವರ್ಮ- ಇತಿವೃತ್ತ ಎಂಬ ನನ್ನ ಸಂಪ್ರಬಂಧ ನೋಡಿ ಮೊದಲ ಅಧ್ಯಾಯವನ್ನು ಮತ್ತೊಮ್ಮೆ ಯೋಚಿಸಿ ಬರೆಯಿರಿ. ಉಳಿದದ್ದೆಲ್ಲಾ ಸರಿ ಇದೆ'' ಎಂದರು. ಅವರ ಸಲಹೆಯಂತೆ ನಿಬಂಧದ ಮೊದಲ ಅಧ್ಯಾಯವನ್ನು ಪುನರ್ ರಚಿಸಿದೆ.

ನಿಬಂಧದ ಬೆರಳಚ್ಚಿನ ಕೆಲಸ, ಅದರ ಕರಡು ನೋಡುವ ಕೆಲಸ, ಶುದ್ಧಪ್ರತಿಯನ್ನು ಜೆರಾಕ್ಸ್ ತೆಗೆಸುವ ಕೆಲಸ ಮತ್ತು ಬೈಂಡ್ ಮಾಡಿಸುವ ಕೆಲಸದಿಂದ ಕೆಲವು ತಿಂಗಳುಗಳೇ ಕಳೆದು ಹೋದವು. ಈ ಎಲ್ಲ ಕೆಲಸಗಳಲ್ಲಿ ನನ್ನ ಮಡದಿ ಮಕ್ಕಳು ಪೂರ್ಣ ಸಹಕರಿಸಿರುವುದನ್ನು ಮರೆಯಲಾರೆ.

ನಿಬಂಧದ ಆರು ಪ್ರತಿಗಳೇ ನನಗೆ ಹೊರಲಾರದ ಹೊರೆಯಾಯಿತು. ನನ್ನ ಕಿರಿಯ ಮಗ ಮೂಡಿಗೆರೆಯಿಂದ ಬಂದ. ಅವನೊಡನೆ ಮರುದಿನ 26.10.94ನೇ ಸಪ್ತಮೀ ಬುಧವಾರ 12 ಘಂಟೆಯ ಒಳಗೆ ಡಾ. ಹಂಪನಾ ಅವರಿಂದ ಮಾರ್ಗದರ್ಶಕರ ಪ್ರಮಾಣ ಪತ್ರಕ್ಕೆ ಸಹಿ ಹಾಕಿಸಿ, ಸಂಶೋಧನಾ ವಿದ್ಯಾರ್ಥಿಯ ಪ್ರಮಾಣ ಪತ್ರಕ್ಕೆ ನಾನು ಸಹಿ ಹಾಕಿದೆ. ಅಂದೇ ಸುರಿಯುವ ಮಳೆಯಲ್ಲಿ 5 ಘಂಟೆ ಒಳಗೆ ಶುಭ ಸಮಯದಲ್ಲಿ ಬೆಂ.ವಿ.ವಿ.ಕ್ಕೆ 'ಬಂಧುವರ್ಮ ಒಂದು ಅಧ್ಯಯನ' ನಿಬಂಧವನ್ನು ಸಲ್ಲಿಸಿದೆ.

ವಿಶ್ವವಿದ್ಯಾಲಯಕ್ಕೆ ನಿಬಂಧವನ್ನು ಸಲ್ಲಿಸಿ ಆರು ತಿಂಗಳುಗಳು ಕಳೆದರೂ ವಿ.ವಿ.ಯಿಂದಾಗಲೀ, ಮಾರ್ಗದರ್ಶಿಯಿಂದಾಗಲೀ ಏನೂ ಉತ್ತರಬಾರದೆ ಆತಂಕಗೊಂಡೆ. ಫಲಿತಾಂಶದ ಬಗೆಗೆ ಹಂಪನಾ ಅವರನ್ನು ಕೇಳಿದಾಗ ಬರುತ್ತೆ. ಚಿಂತೆ ಮಾಡಬೇಡಿ ಇನ್ನೂ ಸ್ವಲ್ಪ ದಿನ ಸುಮ್ಮನಿರಿ ಎಂದು ಸಮಾಧಾನದ ಉತ್ತರ ಹೇಳಿದರು. ಕೆಲವು ವಾರಗಳನಂತರ ನನ್ನ ನಿಬಂಧದ ಸಂಗತಿ ಏನಾಯ್ತು ಸಾರ್ ಎಂದು ಫೋನಿನ ಮತ್ತು ಪತ್ರದ ಮೂಲಕ ವಿಚಾರಿಸುತ್ತಲೇ ಇದ್ದೆ. ದಿನಾಂಕ ೪.೫.95ರಂದು ಡಾ. ಹಂಪನಾ ಅವರಿಂದ ಪತ್ರ ಬಂತು :

'೧೭.೫.೯೫ ರಂದು ಬೆಳಿಗ್ಗೆ ೧೧ ಗಂಟೆಗೆ ಬೆಂಗಳೂರಿನ ಜ್ಞಾನಭಾರತಿ ಆವರಣದಲ್ಲಿರುವ ನನ್ನ ಕೊಠಡಿಯಲ್ಲಿ ವೈವಾ ಪರೀಕ್ಷೆಯನ್ನು ಏರ್ಪಡಿಸಿದೆ.

೧೭.೫.೯೫ ರಂದು ಬೆಳಿಗ್ಗೆ ೧೧ ಗಂಟೆಗೆ ಸರಿಯಾಗಿ ನೀವು ವೈವಾ ಪರೀಕ್ಷೆಗೆ ಹಾಜರಿರಬೇಕೆಂದು ಈ ಮೂಲಕ ತಿಳಿಸಿದೆ-ಹಂಪನಾ'

ವೈವಾ ಪರೀಕ್ಷೆಗಾಗಿ ನನ್ನ ನಿಬಂಧವನ್ನು ಅಧ್ಯಯನ ಮಾಡಿದೆ. ಪರೀಕ್ಷಕರಾಗಿ ನನ್ನ ಗುರುಗಳಾದ ಡಾ. ಎಚ್.ಜೆ. ಲಕ್ಕಪ್ಪಗೌಡರು ಮತ್ತು ಡಾ. ಎಡ್ವರ್ಡ್‌ನರೋನಾ (ನನಗಿವರು ಅಪರಿಚಿತರು) ಬಂದಿದ್ದರು. ಪರೀಕ್ಷೆ ಮುಗಿದ ಮೇಲೆ ಡಾ. ಹಂಪನಾ ಸಂತೋಷವಾಗಿ ಮನೆಗೆ ಹೋಗಿ ಎಂದು ಶುಭ ನುಡಿದರು.

ಮಾರ್ಗದರ್ಶಿ ಡಾ. ಹಂಪನಾ ಅವರು ನಿಬಂಧದ ಬಗೆಗೆ ಪರೀಕ್ಷಕರ ಅಭಿಪ್ರಾಯ, ತಮ್ಮ ಅಭಿಪ್ರಾಯವನ್ನು ವಿ.ವಿ.ಕ್ಕೆ ಕನ್ನಡ ಅಧ್ಯಯನ ಕೇಂದ್ರ ಮೂಲಕ ಬೇಗ ಕಳುಹಿಸಿ ಬೇಗ ಫಲಿತಾಂಶ ಪ್ರಕಟವಾಗಲು ವ್ಯವಸ್ಥೆ ಮಾಡಿದರು.

ದಿನಾಂಕ ೨೯.೫.೯೫ರಂದು ನನಗೆ ಡಾಕ್ಟರೇಟ್ ಪದವಿಯನ್ನು ನೀಡಿರುವುದಾಗಿ ವಿಶ್ವವಿದ್ಯಾಲಯದಿಂದ ಫಲಿತಾಂಶ ಪ್ರಕಟಣಾ ಪತ್ರ ಬಂತು.

ನನ್ನ ಹಿರಿಯ ಮಗ ಜಿ.ಡಿ. ಯತೀಶ್ ಕುಮಾರ್ ಮಂಡ್ಯದ ಅಕಳೇಶ್ವರ ದೇವಾಲಯದಲ್ಲಿ ಪತ್ತೆ ಮಾಡಿದ ಪ್ರಾಚೀನ ಶಿಲಾಶಾಸನವನ್ನು ಅಧ್ಯಯನಿಸಲು ಡಾ. ಹಂಪನಾ ಅವರ ನೆರವು ಕೋರಿದಾಗ, ಆತನ ಕೋರಿಕೆಯ ಮೇರೆಗೆ ಬಂದು ಆತನಿಗೆ ನೆರವಾದುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು.

ಹಿರಿಯರಾಗಲಿ, ಕಿರಿಯರಾಗಲಿ ನೆರವು ಬಯಸಿದವರೆಲ್ಲರಿಗೂ ಸಾಹಿತ್ಯ ಕ್ಷೇತ್ರದಲ್ಲಿ ನೆರವಾಗುವ, ಮಾರ್ಗದರ್ಶಿಯಾಗುವ ಹೃದಯ ಶ್ರೀಮಂತಿಕೆಯುಳ್ಳವರು ಡಾ. ಹಂಪನಾ.

ಪ್ರಾಜ್ಞರಾದ ಡಾ. ಹಂಪನಾ ಅವರ ಮಾರ್ಗದರ್ಶನದಲ್ಲಿ ನಾನು ಸಂಶೋಧನೆ ನಡೆಸಿ ಡಾಕ್ಟರೇಟ್ ಪದವಿ ಪಡೆದುದು ಹೆಮ್ಮೆಯ ಹಾಗೂ ಹರ್ಷದಾಯಕ ಸಂಗತಿ ಎನ್ನಬಹುದು.

# ಹಸನ್ಮುಖದ ಹಂಪನಾ

**ಡಾ. ಸತ್ಯವತಿ**

೧೯೯೯ನೇ ಇಸವಿ, ಫೆಬ್ರವರಿ ತಿಂಗಳಲ್ಲಿ ನನ್ನ ಮೊಟ್ಟ ಮೊದಲ ಕೃತಿ 'ಸಿಟಿಬಸ್ಸು' ನಗೆಬರಹಗಳ ಸಂಕಲನ ಬಿಡುಗಡೆಯಾಯಿತು. ಆ ಸಂದರ್ಭದಲ್ಲಿ ಡಾ| ಹಂಪನಾರವರು ಮಾತನಾಡುತ್ತಿದ್ದರು. ಪುಸ್ತಕದ-ಬಗೆಗೆ ಮೆಚ್ಚುಗೆಯ ಮಾತುಗಳನ್ನು ಆಡುತ್ತಾ ಕೊನೆಯಲ್ಲಿ ನಮ್ಮ ಮನೆಯಲ್ಲಿ ರಾಜ್ಯಶ್ರೀ, ಆರತಿ ಹೇಗೋ ಹಾಗೆ ಸತ್ಯವತಿಯೂ ಮನೆಮಗಳು ಎಂದರು. ಪ್ರಾಯಶಃ ಇವಿಷ್ಟೇ ಸಾಕು ಡಾ| ಹಂಪನಾರವರ ವಿಶಾಲ ಹೃದಯದ ಸಾಕ್ಷಿಗೆ. ಈ ಮಾತು ಅವರ ತುದಿನಾಲಗೆಯಿಂದ ಬಂದಿರದೇ ಅಂತಃಕರಣಪೂರ್ವಕವಾದುದು ಎಂಬುದನ್ನು ಅವರ ಮನೆಗೆ ಹಲವಾರು ಬಾರಿ ಹೋಗಿ ಬಂದಿರುವ ನಾನು ಮತ್ತೆ ತಿಳಿಸಬೇಕಾಗಿಲ್ಲ. ಅಷ್ಟು ಸಲಿಗೆ ನನಗೆ ಅವರ ಮನೆಯಲ್ಲಿ. ಅವರ ಮನೆಗೆ ಹೋದರೆ ಶ್ರೀಮತಿ ಕಮಲಾ ಹಂಪನಾರವರನ್ನು ಹುಡುಕಿಕೊಂಡು ಅಡಿಗೆಮನೆತನಕವೂ ಹೋದದ್ದುಂಟು. ಹಂಪನಾದಂಪತಿಗಳೊಂದಿಗೆ ಎಷ್ಟೋಬಾರಿ ಕುಳಿತು ಊಟ ಮಾಡಿದ್ದೇನೆ. ಅವರೊಡನೆ ಪರಸ್ಥಳಗಳಿಗೆ ಪ್ರಯಾಣ ಮಾಡಿದ್ದೇನೆ. ಇಲ್ಲೆಲ್ಲ ಅವರ ಆತ್ಮೀಯತೆಯನ್ನು ಅಕ್ಕರೆಯನ್ನು ಗುರುತಿಸಿದ್ದೇನೆ.

ಹಾಗೆ ನೋಡಿದರೆ ಡಾ. ಹಂಪನಾರವರ ಪರಿಚಯ ನನಗಾದದ್ದು ನನ್ನ ಪಿಎಚ್‌ಡಿ ಪ್ರಬಂಧದಿಂದಲೇ. ಅದಕ್ಕೆ ಮೊದಲು ಪುಸ್ತಕಗಳ ಮೂಲಕ ಅವರ ಪರಿಚಯವಿತ್ತೇ ಹೊರತು ವೈಯಕ್ತಿಕವಾಗಿ ಕಂಡಿರಲಿಲ್ಲ.

೧೯೮೮ರಲ್ಲಿ ನನ್ನ ಅದೃಷ್ಟ ನನ್ನ ಮನೆಗೆ ಹುಡುಕಿಕೊಂಡು ಬಂದಂತೆ ಬೆಂಗಳೂರು ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದ ಶ್ರೀ ನರಸಿಂಗರಾವ್ ಅವರು ತಮ್ಮ ಮಗಳಿಗೆ ಟ್ಯೂಷನ್ ಹೇಳಿಕೊಡಬೇಕೆಂದು ಕರೆದುಕೊಂಡು ಬಂದರು, ಅವರೊಡನೆ ಒಂದು ದಿನ ನನ್ನ ಪಿಎಚ್‌ಡಿ ಮಾಡುವ ಹಂಬಲವನ್ನು ತೋಡಿಕೊಂಡೆ. ಅದಕ್ಕವರು ಬಹಳ ಸಂತೋಷದಿಂದ ಬಹುದೊಡ್ಡ ವಿದ್ವಾಂಸರನ್ನೇ ಮಾರ್ಗದರ್ಶಕರಾಗಿಸುವ ಭರವಸೆಯಿತ್ತರು. ತಮ್ಮ ಮಾತಿನಂತೆ ಮುಂದೆ ಒಂದೆರಡು ದಿನಗಳಲ್ಲೇ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ಬರುವಂತೆ ಆದೇಶವಿತ್ತರು. ಹಾಗೆ ಹೋದ ನನ್ನನ್ನು ಡಾ ಹಂಪನಾರವರ ಬಳಿಗೆ ಕರೆದೊಯ್ದರು. ಮೊದಲ ಬಾರಿಗೆ ಅವರನ್ನು ಭೇಟಿಯಾಗುವಾಗ ನನಗೆ ಸಹಜವಾಗಿಯೇ

ಭಯ, ದೊಡ್ಡ ವಿದ್ವಾಂಸರು, ಭಾಷಾಶಾಸ್ತ್ರಜ್ಞರು, ನನ್ನಂತಹ ಸಾವಿರಾರು ಮಂದಿ ವಿದ್ಯಾರ್ಥಿಗಳನ್ನು ತಯಾರು ಮಾಡಿರುವವರು. ಅಂತಹವರನ್ನು ಕಂಡಾಗ ಹೇಗೆ ನಡೆದುಕೊಂಡರೆ ಹೇಗೋ ಎಂಬ ಆತಂಕವಿದ್ದದ್ದೇ ಇದಕ್ಕೆ ಕಾರಣ. ಆದರೆ ಹಂಪನಾರವನ್ನು ನೋಡಿದ ಕೂಡಲೆ ಆ ಭಯ ಹೇಳ ಹೆಸರಿಲ್ಲದಂತೆ ಓಡಿಹೋಯಿತು. ಅವರ ಹಸನ್ಮುಖ ನನ್ನ ಭಯವನ್ನು ಹೋಗಲಾಡಿಸಿ ಅಭಯವನ್ನಿತ್ತಂತೆನಿಸಿತು. ಪರಿಚಯದ ಮೊದಲ ದಿನದ ಅಪರಿಚತತೆಯೂ ಬಾಧಿಸಲಿಲ್ಲ. ಇದಕ್ಕೆ ಕಾರಣ ಹಂಪನಾರವರ ಪಾಂಡಿತ್ಯದಷ್ಟೇ ಹಿರಿದಾದ ವ್ಯಕ್ತಿತ್ವ ಸರಳತೆ, ಸೌಮ್ಯ ಸ್ವಭಾವ, ಸದಾ ಹಸನ್ಮುಖ, ಎಂತಹವರಲ್ಲೂ ಧೈರ್ಯ ತುಂಬಿ ಆತ್ಮವಿಶ್ವಾಸ ಮೂಡಿಸುವ ನಡವಳಿಕೆ. ತಮಗಿಂತ ಕಿರಿಯರಲ್ಲೂ ಹಿರಿಯರಿಗೆ ತೋರುವಷ್ಟೇ ಗೌರವ. ಅಸಡ್ಡೆ, ಉದಾಸೀನ ಭಾವನೆಗಳು ಅವರ ಹತ್ತಿರವೂ ಸುಳಿದಿರಲಾರವು. ಏಕೆಂದರೆ ನಾನು ಒಮ್ಮೆಯೂ ಅವರನ್ನು ಆ ರೀತಿ ನೋಡಿಯೇ ಇಲ್ಲ.

ನನ್ನ ಕಲಿಯುವ ಉತ್ಸಾಹವನ್ನು ನೋಡಿದ ಡಾ. ಹಂಪನಾರವರು ನನಗೆ ಮಾರ್ಗದರ್ಶನ ಮಾಡಲು ಒಪ್ಪಿಗೆಯಿತ್ತು ನಾಲ್ಕು ದಿನಗಳ ನಂತರ ಬಂದು ಭೇಟಿಯಾಗಲು ತಿಳಿಸಿದರು. ಅದರಂತೆ ಮತ್ತೆ ಭೇಟಿಯಾದಾಗ ವಿಷಯವನ್ನು ಆರಿಸಿಕೊಳ್ಳುವ ವಿಚಾರದಲ್ಲಿ ಚರ್ಚೆಯಾಗಿ ನನಗೆ ಪಂಪ, ರನ್ನ, ಕುಮಾರವ್ಯಾಸ ಈ ಕವಿಗಳ ಬಗೆಗೆ, ಒಟ್ಟಾರೆ ಹಳಗನ್ನಡ ಸಾಹಿತ್ಯವನ್ನು ಕುರಿತಂತೆ ಅಭ್ಯಾಸ ಮಾಡುವ ಆಸೆಯಿರುವುದನ್ನು ತಿಳಿಸಿದೆ.

ಈಚಿನ ದಿನಗಳಲ್ಲಿ ಹಳಗನ್ನಡದಲ್ಲಿ ಆಸಕ್ತಿ ತೋರಿಸುವವರು ಕಡಿಮೆಯಾದದ್ದರಿಂದಲೋ ಏನೋ ನನ್ನ ಮಾತುಗಳನ್ನು ಕೇಳಿ ಸಂತೋಷಾಶ್ಚರ್ಯಗಳನ್ನು ವ್ಯಕ್ತಪಡಿಸಿದರು. ನಾನು ವೇದವಿದ್ವಾನ್ ಚನ್ನಕೇಶವಾವಧಾನಿಗಳ ಮಗಳು ಎಂದೂ ತಿಳಿದ ಮೇಲೆ ನನಗೆ ಸೂಕ್ತ ವಿಷಯ ಎಂದು ಹೇಳಿ ಸ್ವರ್ಗೀಯ ಪಂಡಿತರತ್ನ ಶ್ರೀ ಶಾಂತಿರಾಜಶಾಸ್ತ್ರಿಗಳ ಕೃತಿಗಳನ್ನು ಕುರಿತಂತೆ ಅಭ್ಯಾಸ ಮಾಡಲು ಸಲಹೆ ಕೊಟ್ಟರು. ಇದು ಸಲಹೆಯೇ ಹೊರತು ಒತ್ತಾಯವೇನಲ್ಲ. ಇಗೋ ಅವರ ಕೆಲವು ಕೃತಿಗಳು, ಇವನ್ನು ನೋಡಿ ನಂತರ ನಿನಗೆ ಇಷ್ಟವಾದರೆ ಆರಿಸಿಕೋ, ಇಲ್ಲದಿದ್ದಲ್ಲಿ ಬೇರೆ ವಿಷಯ ಹುಡುಕಿದರಾಗುತ್ತದೆ ಎಂದರು.

ನಾನು ಅರೆಮನಸ್ಸಿನಿಂದಲೇ ಆ ಪುಸ್ತಕಗಳನ್ನು ತಂದೆ. ಹಂಪನಾರವರು ಕೊಟ್ಟ ಪುಸ್ತಕಗಳಲ್ಲಿ ಶಾಸ್ತ್ರಿಗಳ ಮಹಾಪುರಾಣವೂ ಇದ್ದಿತು. ಅದನ್ನು ಓದುತ್ತ ಓದುತ್ತ ನನಗೆ ಅದರಲ್ಲಿ ಅಸಕ್ತಿ ಹುಟ್ಟಿತು. ಇದೇ ನನ್ನ ಪ್ರಬಂಧದ ವಿಷಯವಾಗಬೇಕು ಎಂದು ತೀರ್ಮಾನಿಸಿದೆ. ಪಂಪ, ರನ್ನರು ಸಿಗಲಿಲ್ಲವೆಂಬ ನಿರಾಸೆ ಮಾಯವಾಯಿತು.

ಮುಂದೆ ನನಗೆ ಆ ಪ್ರಬಂಧ ರಚನೆಗಾಗಿ ಶ್ರೀ ಶಾಂತಿರಾಜಶಾಸ್ತ್ರಿ ಟ್ರಸ್ಟ್ ವತಿಯಿಂದ ಪ್ರೋತ್ಸಾಹ ಧನ ದೊರೆತುದೇ ಅಲ್ಲದೆ ನನ್ನ ಪ್ರಬಂಧ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಪ್ರಕಟವೂ ಆಯಿತು. ಇದೆಲ್ಲ ಸಾಧ್ಯವಾದುದು ನನ್ನ ಗುರುಗಳಾದ ಹಂಪನಾರವರ ಆಶೀರ್ವಾದದಿಂದಲೇ.

ನನ್ನ ಪ್ರಬಂಧ ರಚಿಸಲು ಪ್ರಾರಂಭಿಸಿದಂದಿನಿಂದ ಇಂದಿನವರೆಗೆ ಹಲವಾರು ಬಾರಿ ಹಂಪನಾರವರ ಮನೆಗೆ ಹೋಗಿದ್ದೇನೆ. ಒಮ್ಮೊಮ್ಮೆ ಒಂದೇ ದಿನದಲ್ಲಿ ಎರಡು ಬಾರಿ ಹೋಗಿರುವುದೂ ಉಂಟು. ಹೀಗಿದ್ದರೂ ಒಂದು ದಿನವಾದರೂ ಉದಾಸೀನ ಮಾಡುವುದಾಗಲೀ, ಮುಖ ಗಂಟಿಕ್ಕಿರುವುದನ್ನಾಗಲೀ ನೋಡಿಯೇ ಇಲ್ಲ. ಜವಾಬ್ದಾರಿಯುತ ಹುದ್ದೆಯಲ್ಲಿದ್ದು ಬಿಡುವಿರದ ಕಾರ್ಯಗಳಲ್ಲಿ ತೊಡಗಿದ್ದರೂ ನನ್ನಂತೆ ಬರುವ ಎಲ್ಲ ವಿದ್ಯಾರ್ಥಿಗಳಿಗೂ ಒಂದೇ ರೀತಿಯ ಹಸನ್ಮುಖದ ಸ್ವಾಗತ. ಎಂತಹ ಹೊಸಬರಲ್ಲೂ ಕೆಲವೇ ಕ್ಷಣಗಳಲ್ಲಿ ಆತ್ಮೀಯತೆಯನ್ನು ತಂದುಕೊಡುವ ಸ್ವಭಾವ, ನಾನೇ ಒಮ್ಮೊಮ್ಮೆ ಅವರಿಗೆ 'ಸಾರ್ ಪದೇ ಪದೇ ನಿಮಗೆ ಇಷ್ಟೊಂದು ತೊಂದರೆ ಕೊಡುತ್ತಿದ್ದೇನೆ. ಒಮ್ಮೆಯಾದರೂ ನೀವು ಬೇಸರಿಸುವುದಿಲ್ಲವಲ್ಲ' ಎಂದು ಕೇಳಿದ್ದೇನೆ. ಆಗೆಲ್ಲ ಮುಗುಳುನಗು ನಕ್ಕು ಸುಮ್ಮನಾಗಿ ಬಿಡುತ್ತಾರೆ.

ಪ್ರಬಂಧದ ವಿಷಯಕ್ಕೆ ಸಲಹೆ ಸೂಚನೆಗಳನ್ನು ಕೊಡುವುದರ ಜೊತೆಗೆ ನನ್ನಲ್ಲಿ ಸೃಜನಶೀಲ ಶಕ್ತಿಯಿದೆ ಎಂದು ಹೇಳುತ್ತ ಹುರಿದುಂಬಿಸಿ ನಾನು ಬರೆದಿದ್ದ ಪ್ರಬಂಧಗಳು ಪುಸ್ತಕರೂಪ ಕಾಣಲು ಪ್ರೇರಣೆ ಕೊಟ್ಟರು ಹಂಪನಾ.

ಪುರುಷ ಪ್ರಧಾನವಾದ ಈ ಸಮಾಜದಲ್ಲಿ ಇನ್ನೂ ಈಗಲೂ ಹೆಣ್ಣು ಅಸಡ್ಡೆಗೆ, ದಬ್ಬಾಳಿಕೆಗೆ, ಅವಹೇಳನಕ್ಕೆ ಪಾತ್ರಳಾಗುತ್ತಿದ್ದಾಳೆ. ಅಂತಹುದರಲ್ಲಿ ಹೆಣ್ಣುಮಕ್ಕಳು ಹೆಚ್ಚು ಹೆಚ್ಚು ಮುಂದುವರಿಯಬೇಕು, ಅವರಲ್ಲಿರುವ ಕರ್ತೃತ್ವಶಕ್ತಿ ಜಾಗೃತವಾಗಬೇಕು ಎಂಬ ಉದಾರ ಮನಸ್ಸಿನಿಂದ ಪ್ರೋತ್ಸಾಹಿಸುವವರು ಬಹಳ ಅಪರೂಪ. ಅಂತಹ ಅಪರೂಪದ ವ್ಯಕ್ತಿಗಳಲ್ಲಿ ಒಬ್ಬರು ಡಾ. ಹಂಪನಾ. ಅವರ ಪ್ರೋತ್ಸಾಹ ನೆರವು ದೊರಕದೇ ಇದ್ದಿದ್ದರೆ ಇಂದು ನಾನು ಒಂದೆರಡು ಪುಸ್ತಕಗಳನ್ನು ಬರೆಯುವ ಶಕ್ತಿ ನನ್ನಲ್ಲಿದೆ ಎಂಬುದನ್ನೂ ಗುರುತಿಸಲಾರದೆ ಹೋಗುತ್ತಿದ್ದೆನೇನೋ.

ಡಾ. ಹಂಪನಾರವರ ಮತ್ತೊಂದು ಒಳ್ಳೆಯ ಗುಣ ಎಂದರೆ ಯಾರೇ ಯಾವುದೇ ಕೆಲಸವನ್ನು ಮಾಡಲಿ, ಅದರ ಬಗೆಗೆ ಮೊದಲು ಮೆಚ್ಚುಗೆ ವ್ಯಕ್ತಪಡಿಸುವುದು. ನಂತರ ನಿಧಾನವಾಗಿ ನೋವಾಗದಂತೆ ಅದರಲ್ಲಿರುವ ಲೋಪ ದೋಷಗಳನ್ನು ತಿಳಿಸಿ ಕೊಡುವುದು, ತಿದ್ದುವುದು, ವಿಚಿಕಿತ್ಸಕ ರೀತಿ ಇವರದು.

ಕೆಲವರಿಗೆ ಗುಣವನ್ನು ಕಂಡಾಗಲೂ ಮೆಚ್ಚಿಕೊಳ್ಳುವ ಮನಸ್ಸಿರುವುದಿಲ್ಲ. ಅಥವಾ ಬೇಕಿರುವುದಿಲ್ಲ. ಆದರೆ ಡಾ. ಹಂಪನಾರವರು ಇದಕ್ಕೆ ತದ್ವಿರುದ್ಧ. ನಮ್ಮ ಸಾಧನೆ ಎಷ್ಟೇ ಚಿಕ್ಕದಾಗಿರಲಿ, ಅದನ್ನು ಅವರ ಗಮನಕ್ಕೆ ತಂದಾಗ ಬರೀ ತೋರಿಕೆಯ ಒಂದೆರಡು ಮೆಚ್ಚುಗೆಯ ಮಾತನ್ನಾಡಿ ಸುಮ್ಮನಾಗದೆ ನಮ್ಮ ಸಾಧನೆಗೆ ನಾವೇ ಹೆಮ್ಮೆಪಟ್ಟುಕೊಳ್ಳುವಂತೆ ಆತ್ಮವಿಶ್ವಾಸವನ್ನು, ತೃಪ್ತಿಯನ್ನು ತಂದುಕೊಡುತ್ತಾರೆ.

ಇವರಿಗೆ ತಕ್ಕ ಪತ್ನಿ ಡಾ। ಕಮಲಾ ಹಂಪನಾರವರು. ಒಳ್ಳೆಯ ಗುಣಗಳಲ್ಲಿ ಪರಸ್ಪರ

ಪೈಪೋಟಿ ಮಾಡುವಷ್ಟು ಒಬ್ಬರಿಗಿಂತ ಇನ್ನೊಬ್ಬರು ವಿಶಾಲ ಹೃದಯಿಗಳು, ಸರಳ ಸ್ವಭಾವದವರು.

ಇಂದಿಗೆ ಡಾ. ಹಂಪನಾರವರು ಅರವತ್ತು ಸಂವತ್ಸರಗಳನ್ನು ಕಳೆದಿದ್ದಾರೆ. ಈ ಸುಸಂದರ್ಭದಲ್ಲಿ ಅವರ ಶಿಷ್ಯಳಾಗಿ ನಾನು ಭಗವಂತನಲ್ಲಿ 'ಡಾ ಹಂಪನಾ ಹಾಗೂ ಅವರ ಕುಟುಂಬಕ್ಕೆ ಆಯುರಾರೋಗ್ಯಗಳನ್ನು ಕೊಟ್ಟು, ಹಂಪನಾರವರ ಸೇವೆ ಕನ್ನಡಮ್ಮನಿಗೆ ಇನ್ನೂ ಬಹಳಷ್ಟು ಕಾಲ ದೊರಕಲಿ, ನನ್ನಂತಹ ನೂರಾರು, ಸಾವಿರಾರು ಶಿಷ್ಯರಿಗೆ ಡಾ। ಹಂಪನಾರವರ ಮಾರ್ಗದರ್ಶನದ ಸದವಕಾಶ ದೊರಕುವಂತಾಗಲಿ' ಎಂದು ಬೇಡುತ್ತೇನೆ.

# ಮಾರ್ಗದರ್ಶಿ ಹಂಪನಾ

ಡಾ.ವಿ. ಗೋಪಾಲಕೃಷ್ಣ

ಡಾ. ಹಂಪನಾ ಅವರು ನನ್ನ ಪಿಎಚ್‌ಡಿ ಅಧ್ಯಯನಕ್ಕೆ ಮಾರ್ಗದರ್ಶಿಗಳು : ಅದಕ್ಕಿಂತ ಹೆಚ್ಚಾಗಿ ಸಂಶೋಧನಾತ್ಮಕ ಅಧ್ಯಯನ ನಡೆಸಲು ನನಗೆ ಪ್ರೇರಣೆ ನೀಡಿದವರು. ಅವರು ನನ್ನ ನೆರೆಯ ಊರಿನವರೇ ಆದರೂ ಮೊದಲು ಅವರು ನೇರವಾಗಿ ನನಗೆ ಪರಿಚಯವಿರಲಿಲ್ಲ. ವಯಸ್ಸಿನಲ್ಲಿ ಎರಡು-ಮೂರು ವರ್ಷ ಹಿರಿಯರಾಗಿದ್ದ ಅವರು ನಾನು ಗೌರೀಬಿದನೂರಿನ ಆಚಾರ್ಯ ಪ್ರೌಢಶಾಲೆಗೆ ಸೇರುವಾಗ್ಗೆ ಅಲ್ಲಿಂದ ಮುಂದಿನ ತರಗತಿಗಳಿಗೆ ಹೊರಟು ಹೋಗಿದ್ದರು. ನನಗೆ ಅವರ ಮುಖಾಮುಖಿ ಪರಿಚಯವಾದದ್ದು ೧೯೬೨-೬೩ರಲ್ಲಿ. ನನ್ನ ಮಿತ್ರರೂ ಎಂ.ಎ. ತರಗತಿಯಲ್ಲಿ ಹಂಪನಾ ಅವರ ವಿದ್ಯಾರ್ಥಿಯೂ ಆಗಿದ್ದ ಡಾ। ಅನಂತಪದ್ಮನಾಭರಾವ್ ಅವರು ನನ್ನನ್ನು ಅವರಿಗೆ ಮೊದಲ ಬಾರಿ ಪರಿಚಯ ಮಾಡಿಸಿದರು. ನನ್ನ ಸ್ವಗ್ರಾಮ ಡಿ. ಪಾಳ್ಯದ ಹೈಸ್ಕೂಲಿನಲ್ಲಿ ಅಧ್ಯಾಪಕನಾಗಿದ್ದ ನಾನು ಆಗ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಎಂ.ಎ. ಪರೀಕ್ಷೆಗೆ ಬಾಹ್ಯ ಅಭ್ಯರ್ಥಿಯಾಗಿ ಪ್ರವೇಶ ಪಡೆಯಲು ಹೋಗಿದ್ದೆ. ಅನಂತರ ವಿಶ್ವವಿದ್ಯಾಲಯಕ್ಕೆ ಕಾರ್ಯನಿಮಿತ್ತ ಹೋದಾಗಲೆಲ್ಲಾ ನಾನು ಅವರನ್ನು ಕಾಣದೆ ಬರುತ್ತಿರಲಿಲ್ಲ.

ಎಂ.ಎ.ಮುಗಿದು ಮಲಯಾಳಂ ಭಾಷೆ ಕಲಿಯಲು ಮೈಸೂರಿಗೆ ಹೋದಾಗ ಒಂದು ವರ್ಷ ಮಟ್ಟಿಗೆ ಅವರ ಸಂಪರ್ಕ ತಾತ್ಕಾಲಿಕವಾಗಿ ನನಗೆ ಕಡಿದುಹೋಗಿತ್ತು. ಮಲಯಾಳಂ ಭಾಷೆಯಿಂದ ಕನ್ನಡಕ್ಕೆ ಅನುವಾದ ಮಾಡಿದ ಕತೆಗಳ ಸಂಗ್ರಹವನ್ನು ಪುಸ್ತಕ ರೂಪದಲ್ಲಿ ಅವರಿಗೆ ಕೊಟ್ಟಾಗ ತುಂಬಾ ಸಂತೋಷಪಟ್ಟರು. ಒಂದೆರಡು ಪ್ರತಿಗಳನ್ನು ಸ್ವತಃ ಅವರೇ ತಮ್ಮ ಸ್ನೇಹಿತರಿಗೆ ಕಳುಹಿಸಿಕೊಟ್ಟರು. ಸ್ವಲ್ಪ ದಿನಗಳಲ್ಲಿಯೇ ಆ ಮಿತ್ರರಿಂದ ನನಗೆ ಮೆಚ್ಚುಗೆಯ ಪತ್ರಗಳೂ ಬಂದುವು. ಅನಂತರ ಕನ್ನಡದಿಂದ ಮಲಯಾಳಂ ಭಾಷೆಗೆ ಅನುವಾದ ಮಾಡಿದ ವಿಷಯವನ್ನು ತಿಳಿಸಿದಾಗ ಅದೇ ರೀತಿಯಲ್ಲಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಇಂತಹ ಸಾಹಿತ್ಯಕ ಕೆಲಸಗಳನ್ನು ಹಾಗೆಯೇ ಮುಂದುವರಿಸಿಕೊಂಡು ಹೋಗಬೇಕೆಂದು ಹೇಳುತ್ತಾ ಸದಾ ಅವರು ನನ್ನ ಬೆನ್ನು ತಟ್ಟುತ್ತಾ ಬಂದಿದ್ದಾರೆ.

ಖಾಸಗಿ ಕಾಲೇಜೊಂದರಲ್ಲಿ ನನಗೆ ಉಪನ್ಯಾಸಕನ ಹುದ್ದೆ ಕೊಡಿಸಲು ಅವರು ಒಮ್ಮೆ ಶಿಫಾರಸು ಮಾಡಿದ್ದರು. ಅದು ಫಲಕಾರಿಯಾಗದಿದ್ದಾಗ ನನ್ನನ್ನು ನಿರಾಶನಾಗಲು ಅವರು

ಬಿಡಲಿಲ್ಲ. ಮುಂದಿನ ಅಧ್ಯಯನದತ್ತ ಗಮನಹರಿಸುವಂತೆ ಪ್ರೋತ್ಸಾಹಿಸುತ್ತಾ ಬಂದರು. ಅವರು ಆ ಸಂದರ್ಭದಲ್ಲಿ ಹೇಳಿದ ಮಾತು ನನಗೆ ಇನ್ನೂ ಚೆನ್ನಾಗಿ ನೆನಪಿನಲ್ಲಿದೆ : ಪಿಎಚ್‌ಡಿ ಮಾಡಬೇಕಾದರೆ ಕಾಲೇಜಿನಲ್ಲಿಯೇ ಇರಬೇಕಾಗಿಲ್ಲಪ್ಪಾ! ಹೈಸ್ಕೂಲಿನಲ್ಲಿ ಪಾಠ ಹೇಳೋವರೂ ಮಾಡಬಹುದು. ಒಳ್ಳೆಯ ವಿಷಯ ಆರಿಸಿಕೊಳ್ಳಿ. ನಾಲ್ಕಾರು ಭಾಷೆಗಳಲ್ಲಿ ಪರಿಶ್ರಮವಿರುವ ನಿಮಗೆ ಪಿಎಚ್‌ಡಿ ಡಿಗ್ರಿ ಬಹಳ ಸುಲಭ, ನಿಮಗೆ ಮುಂದೆ ಭವಿಷ್ಯ ಚೆನ್ನಾಗಿದೆ.'' ಹೀಗೆ ನನ್ನ ಉತ್ಸಾಹ ಸ್ವಲ್ಪವೂ ಕುಂದದಂತೆ ಉತ್ತೇಜನ ನೀಡಿದರು. ಅಂತೆಯೇ ಅವರ ಮಾರ್ಗದರ್ಶನ ಪಡೆದು ಸಂಶೋಧನೆಯಲ್ಲಿ ತೊಡಗಿದೆ. ಆಯ್ಕೆ ಮಾಡಿಕೊಂಡಿರುವ ವಿಷಯಕ್ಕೆ ಸಂಬಂಧಿಸಿ ಆದಷ್ಟು ಸಂಶೋಧನಾತ್ಮಕ ಲೇಖನಗಳನ್ನು ಬರೆಯುವಂತೆ ತಿಳಿಸಿದರು. ಸಾಹಿತ್ಯ ಮತ್ತು ಭಾಷೆಗೆ ಸಂಬಂಧಪಟ್ಟ ಸಂಕಿರಣಗಳಲ್ಲಿ, ಕಮ್ಮಟಗಳಲ್ಲಿ, ಸಮ್ಮೇಳನಗಳಲ್ಲಿ ಭಾಗವಹಿಸಲು ಹೇಳುತ್ತಿದ್ದರು. ಪ್ರಬಂಧಗಳನ್ನು ಮಂಡಿಸುವಂತೆ ಒತ್ತಾಯಿಸುತ್ತಿದ್ದರು. ಆಗಿಂದಾಗ್ಗೆ ಪ್ರಗತಿಯನ್ನು ತೋರಿಸಿದಾಗ ಬಹಳ ಸಂತೋಷ ಪಡುತ್ತಿದ್ದರು. ಪ್ರಕಟಿತ ಮತ್ತು ಅಪ್ರಕಟಿತ ಲೇಖನಗಳನ್ನೆಲ್ಲಾ ಒಂದೆಡೆ ಸೇರಿಸಿ ಪುಸ್ತಕ ರೂಪದಲ್ಲಿ ಹೊರತರುವಂತೆ ಸಲಹೆ ನೀಡಿ ಆಶೀರ್ವದಿಸಿದರು. 'ಸ್ಥಳನಾಮ ಅಧ್ಯಯನಗಳು' ಎಂಬ ಶೀರ್ಷಿಕೆಯ ಆ ಪುಸ್ತಿಕೆಗೆ ಅವರು ಸಂತೋಷದಿಂದ ಮುನ್ನುಡಿ ಬರೆದುಕೊಟ್ಟು ಹಾರೈಸಿದ್ದಾರೆ.

ಸಂಶೋಧನಾತ್ಮಕ ಅಧ್ಯಯನದಲ್ಲಿ ಆಸಕ್ತನಾಗಿದ್ದ ನಾನು ಆ ಗುರಿಯನ್ನು ತಲುಪಲು ಪಿಎಚ್‌ಡಿ ಪದವಿಯನ್ನು ಒಂದು ಸುಗಮ ಮಾರ್ಗವನ್ನಾಗಿ ಮಾಡಿಕೊಳ್ಳಲು ಆಶೆಪಟ್ಟಿದ್ದೆನೇ ವಿನಾ ಖಾಸಗಿ ಶಾಲೆಯಲ್ಲಿ ಉಪಾಧ್ಯಾಯನಾಗಿದ್ದ ನನಗೆ ಅದರ ಸಹಾಯದಿಂದ ಯಾವುದೇ ಬಡ್ತಿಯನ್ನಾಗಲೀ, ಉನ್ನತ ಪದವಿಯನ್ನಾಗಲೀ ಪಡೆಯುವ ಹಂಬಲವಿರಲಿಲ್ಲ. ಸ್ವಂತ ಊರಿನಲ್ಲಿ, ನಮ್ಮದೇ ಆಡಳಿತ ಮಂಡಳಿಯ ಶಾಲೆಯಲ್ಲಿ ಕಿಂಚಿತ್ತೂ ಚಂಚಲವಿಲ್ಲದೆ ನೆಮ್ಮದಿಯಾಗಿಯೇ ನನ್ನ ಕರ್ತವ್ಯಗಳನ್ನು ನಿರ್ವಹಿಸುತ್ತಾ ಇದ್ದೆ. ಆದರೆ ಹಂಪನಾ ಅವರು ಆಗಾಗ್ಗೆ ಹೇಳುತ್ತಲೇ ಬಂದಿದ್ದರು : "ನಿಮಗೆ ಇನ್ನೂ ಹೆಚ್ಚಿನ ಅವಕಾಶಗಳು ದೊರೆಯಬೇಕು. ಕಲಿತಿರುವುದು ವ್ಯರ್ಥವಾಗಬಾರದು" ಮುಂತಾಗಿ. ಅಂತಹ ಸಂದರ್ಭ ತಾನೇ ತಾನಾಗಿ ಒದಗಿ ಬಂತು. ಕೆಲವು ಹಿರಿಯ ವಿದ್ವಾಂಸರ ಸಲಹೆಯಂತೆ ಮದರಾಸಿನ ಏಶಿಯನ್ ಅಧ್ಯಯನ ಸಂಸ್ಥೆಯಲ್ಲಿ ಸಂಶೋಧನಾತ್ಮಕ ಗ್ರಂಥಗಳ ಸಿದ್ಧತೆಯಲ್ಲಿ ತೊಡಗಿಸಿಕೊಳ್ಳಲು ಮಾತ್ರವಲ್ಲದೆ ತೌಲನಿಕ ಅಧ್ಯಯನ ಮಾಡುವ ಬೇರೆ ಬೇರೆ ಭಾಷೆಗಳ ಸಂಶೋಧಕರಿಗೆ ಮಾರ್ಗದರ್ಶನ ನೀಡಲು ಅನುಕೂಲವಾಗುತ್ತದೆಂದು ನನ್ನನ್ನು ಹುರಿದುಂಬಿಸಿ ನನ್ನ ಮುಂದಿನ ಯೋಜನೆಗಳಿಗೆ ಹೃತ್ಪೂರ್ವಕವಾಗಿ ಶುಭ ಹಾರೈಸಿದರು.

ಹಂಪನಾ ಅವರು ತಮ್ಮ ಸ್ನೇಹಪರ, ಮೃದು, ವಿನಯ ಹಾಗೂ ನಿರಾಡಂಬರ ಮಾತುಗಳಿಂದ ಬಹುಬೇಗ ಎಲ್ಲರನ್ನೂ ಆಕರ್ಷಿಸುತ್ತಾರೆ. ಯಾವುದೇ ಗಂಪಿನಲ್ಲಿ ಎಷ್ಟು ಜನರಿದ್ದರೂ, ಅವರು ಚಿಕ್ಕವರಿರಲಿ, ದೊಡ್ಡವರಿರಲಿ ಪರಿಚಿತರಾಗಲಿ ಅಪರಿಚಿತರಾಗಲಿ ಎಲ್ಲರನ್ನೂ ಮಾತನಾಡಿಸಿದರೆ ಮಾತ್ರ ಅವರಿಗೆ ಸಮಾಧಾನ. ಗುಂಪಿನಲ್ಲಿ ಯಾವುದಾದರೊಂದು ಹೊಸಮುಖ ಕಂಡರೆ ಕೂಡಲೇ ಇವರು ಯಾರು? ಹೇಳಲೇ ಇಲ್ಲವಲ್ಲಾ? ಎಂಬ ಪ್ರಶ್ನೆ. ತಾವಾಗಿಯೇ ಮುಂದೆ ಬಂದು ಪರಿಚಯ ಮಾಡಿಕೊಳ್ಳುವ ಸೌಜನ್ಯ. ಸ್ನೇಹಿತರ ಮನೆಗಳಿಗೆ

ಹೋದಾಗಲೂ ಅಷ್ಟೆ, ಸ್ನೇಹಿತರು ಅವರ ಮನೆಗೆ ಬಂದಾಗಲೂ ಅಷ್ಟೆ. ಸಂಬಂಧಪಟ್ಟ ಎಲ್ಲಾ ಜನರ ಕ್ಷೇಮ ಸಮಾಚಾರ ಅವರ ಅಧ್ಯಯನ ಪ್ರಗತಿ ಕೇಳಿ ತಿಳಿದುಕೊಳ್ಳುವಷ್ಟು ತಾಳ್ಮೆ, ಸ್ನೇಹಪರತೆ, ಸಜ್ಜನಿಕೆ. ಇಂತಹ ಹಲವಾರು ಉತ್ತಮ ಹಾಗೂ ಅಪರೂಪ ಗುಣಗಳನ್ನು ನಾನು ಅವರಲ್ಲಿ ಕಂಡು ಮೆಚ್ಚಿಕೊಂಡಿದ್ದೇನೆ.

ನೇರವಾಗಿ ಪರಿಚಯವಿಲ್ಲದ ಅದೆಷ್ಟೋ ಹಿರಿಯ, ಕಿರಿಯ ವಿದ್ವಾಂಸರೊಂದಿಗೆ ಹಂಪನಾ ಅವರ ಮೂಲಕ ನನಗೆ ಸಂಪರ್ಕವುಂಟಾಗಿದೆ. ನನ್ನನ್ನು ಬಹಳ ಆತ್ಮೀಯವಾಗಿ ನಿರ್ವ್ಯಾಜವಾಗಿ ಹಾಗೂ ಅಕ್ಕರೆಯಿಂದ ಅವರಿಗೆಲ್ಲಾ ಪರಿಚಯಮಾಡಿಕೊಟ್ಟಿದ್ದಾರೆ. ಅವರು ನನ್ನ ಹಿತೈಷಿಗಳು. ಉನ್ನತ ಅಧ್ಯಯನದಲ್ಲಿ ನನ್ನ ಏಳ್ಗೆಯನ್ನು ನಿರಂತರವಾಗಿ ಗಮನಿಸುತ್ತಾ ಸಂದರ್ಭೋಚಿತ ಸಲಹೆ ಮತ್ತು ಸಹಾಯ ನೀಡುತ್ತಾ ಬಂದಿದ್ದಾರೆ. ಯಾವುದೋ ಹಳ್ಳಿಯ ಒಂದು ಮೂಲೆಯಲ್ಲಿ ಮುದುಡಿಕೊಂಡಿದ್ದ ನನಗೆ ವಿದ್ವತ್ ಪ್ರಪಂಚದ ವಿಶಾಲ ಹರಹನ್ನು ಅವರು ತೋರಿಸಿ ಆ ಮೂಲಕ ನನಗೆ ಒಂದು ಅಳಿಲು ಸೇವೆಯನ್ನು ಮಾಡಲು ಮಾರ್ಗದರ್ಶಕರಾಗಿದ್ದಾರೆ. ಅವರ ಸ್ಫೂರ್ತಿದಾಯಕ ಹಿತನುಡಿ, ನಿರಾಡಂಬರ ಒಲವು, ಬೆಂಬಲ ನಾನು ಎಂದಿಗೂ ಮರೆಯುವಂತಿಲ್ಲ.



# ಗುಣಗ್ರಾಹಿ ಡಾ. ಹಂಪನಾ

ಡಾ.ಸಿ.ವಿ. ವತ್ಸಲಾದೇವಿ

ಜನೋಪಕಾರಿ ದೊಡ್ಡಣ್ಣ ಶೆಟ್ಟರ ಆರಾಧನಾ ಮಹೋತ್ಸವ ಸಮಾರಂಭಕ್ಕೆ ಮುಖ್ಯ ಅತಿಥಿಗಳನ್ನು ಕರೆತರುವ ಜವಾಬ್ದಾರಿಯನ್ನು ನಮ್ಮ ಕಾಲೇಜಿನ ಆಡಳಿತ ಮಂಡಳಿ ನನಗೆ ಆ ವರ್ಷ ಒಪ್ಪಿಸಿತು. ಈ ಸಮಾರಂಭ ಕೇವಲ ಕಾಲೇಜಿನ ಸಮಾರಂಭ ಅಲ್ಲ. ಒಂದು ಸಾರ್ವಜನಿಕ ಸಮಾರಂಭವೆಂದೇ ಹೇಳಬಹುದು. ಏಕೆಂದರೆ ಜನೋಪಕಾರಿ ದೊಡ್ಡಣ್ಣ ಶೆಟ್ಟರು ಕೇವಲ ಶಿಕ್ಷಣ ಸಂಸ್ಥೆಯ ಸಂಸ್ಥಾಪಕರಷ್ಟೇ ಅಲ್ಲದೆ, ಬೆಂಗಳೂರು ನಗರ ನಾಗರಿಕರಿಗೆ ಅಪಾರವಾದ ಜನಸೇವೆಯನ್ನು ಮಾಡಿ, ಸಮಾಜ ಸೇವಾ ಧುರೀಣರಾಗಿ ನಾಲ್ವಡಿ ಕೃಷ್ಣರಾಜ ಒಡೆಯರಿಂದ ಜನೋಪಕಾರಿ ಬಿರುದನ್ನು ಪಡೆದು ಪ್ರಖ್ಯಾತರಾದವರು. ಹೀಗಾಗಿ ಈ ಸಮಾರಂಭಕ್ಕೆ ಸಾಮಾನ್ಯವಾಗಿ ಜನಪ್ರಿಯ ರಾಜಕಾರಣಿಗಳನ್ನು ಕರೆತರುವುದು ನಮ್ಮ ಆಡಳಿತ ಮಂಡಳಿಯ ವಾಡಿಕೆ. ಇಂತಹ ಒಂದು ವಾರ್ಷಿಕ ಸಮಾರಂಭಕ್ಕೆ ಹಲವಾರು ಕಾರಣಗಳಿಂದ ಆ ವರ್ಷ ರಾಜಕಾರಣಿಗಳನ್ನು ಕರೆಯಲು ಸಾಧ್ಯವಾಗದೆ "ಒಬ್ಬ ಉತ್ತಮ ವಾಗ್ಮಿಗಳನ್ನು ಕರೆತನ್ನಿ. ಸಮಾರಂಭ ನಡೆಸೋಣ" ಎಂದು ಜವಾಬ್ದಾರಿಯನ್ನು ನನ್ನ ತಲೆಗೇ ಹೊರೆಸಿದರು. ವಿದ್ಯಾರ್ಥಿಗಳು ಸಾರ್ವಜನಿಕರು ಇವರಿಬ್ಬರನ್ನೂ ಸರಿದೂಗಿಸಿ ಸ್ವಾರಸ್ಯಕರವಾಗಿ ಮಾತನಾಡುವ ವ್ಯಕ್ತಿ ಯಾರೆಂದು ನಾನು ಸ್ವಲ್ಪ ಗೊಂದಲದಲ್ಲೇ ಇದ್ದೆ. ಇಂತಹ ಸಂದರ್ಭದಲ್ಲಿ ನನ್ನ ಪತಿ ಶ್ರೀ ವೀರಣ್ಣನವರು "ಹಂಪ ನಾಗಾರಾಜಯ್ಯ ಅವರನ್ನು ಕರೆ, ತುಂಬಾ ಚೆನ್ನಾಗಿ ಮಾತನಾಡುತ್ತಾರೆ" ಎಂದರು. ಆಗ ಹಂಪನಾ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ನಾನು ಅವರ ಶ್ರೀಮತಿ ಕಮಲಾ ಹಂಪನಾ ಅವರಲ್ಲಿ ಐದು ವರ್ಷಕಾಲ ವಿದ್ಯಾರ್ಥಿಯಗಿ ಅವರ ಪಾಠವನ್ನು ಕೇಳಿದ್ದವಳು. ಅವರ ವ್ಯಕ್ತಿತ್ವವನ್ನು ಸುಮಾರಾಗಿ ಬಲ್ಲವಳು. ಆದರೆ ಅಷ್ಟು ವರ್ಷಗಳಲ್ಲಿ ಒಮ್ಮೆಯೂ ಹಂಪನಾ ಅವರನ್ನು ಕಂಡವಳೊ ಅಲ್ಲ; ಬಲ್ಲವಳೂ ಅಲ್ಲ; ಅವರ ಭಾಷಣವನ್ನೂ ಕೇಳಿರಲಿಲ್ಲ.

ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಹಂಪನಾ ಅವರು ದಿನನಿತ್ಯ ಒಂದಲ್ಲ ಒಂದು ಕಾರ್ಯಕ್ರಮದಲ್ಲಿ, ಸಾಹಿತ್ಯ ಚಟುವಟಿಕೆಯಲ್ಲಿ ತೊಡಗಿದ್ದವರು. ಅವರ ಬಿಡುವಿಲ್ಲದ ಕೆಲಸ ಕಾರ್ಯಗಳ ನಡುವೆಯೂ, ನಾನು ನಮ್ಮ ಕಾರ್ಯಕ್ರಮಕ್ಕೆ ಬರಬೇಕೆಂದು ಕೇಳಲು ಹೋದಾಗ-ನನ್ನನ್ನು ಆತ್ಮೀಯವಾಗಿ ಬರಮಾಡಿಕೊಂಡು, ಉದಾರ ಮನಸ್ಸಿನಿಂದ ಒಪ್ಪಿಕೊಂಡು

ಕಾರ್ಯಕ್ರಮಕ್ಕೆ ಸಕಾಲಕ್ಕೆ ಆಗಮಿಸಿದರು. ದೊಡ್ಡಣ್ಣಶೆಟ್ಟರ ಜೀವನ ಚರಿತ್ರೆಯ ಪ್ರಮುಖ ವಿಚಾರಗಳನ್ನು ಟಿಪ್ಪಣಿ ಮಾಡಿಕೊಂಡು ಅತ್ಯಂತ ಸ್ವಾರಸ್ಯಕರವಾಗಿ ಸುಮಾರು ಒಂದು ಗಂಟೆ ಕಾಲ ಮಾತನಾಡಿದರು. ಅವರ ಜೀವನ ಚಿತ್ರಣವನ್ನು, ಅವರು ಮಾಡಿದ ಸಮಾಜ ಕಾರ್ಯಗಳನ್ನು ಬಣ್ಣಿಸುವಾಗ ಇಂದಿನ ರಾಜಕಾರಣಿಗಳ ಸ್ವಾರ್ಥವನ್ನು ತುಲನಾತ್ಮಕವಾಗಿ ಹೋಲಿಸಿ, ದೊಡ್ಡಣ್ಣನವರ ಮಹತ್ವವನ್ನು ಪರಿಚಯಿಸಿದ ರೀತಿ, ಜೊತೆಜೊತೆಗೆ ಹಾಸ್ಯ ಭರಿತವಾಗಿ ಅವರು ಮಾತನಾಡಿದ ರೀತಿ ಇಂದಿಗೂ ನನ್ನ ಮನಸ್ಸಿನಲ್ಲಿ ಹಚ್ಚ ಹಸಿರಾಗಿದೆ. ಅವರ ಒಂದೊಂದು ಮಾತಿನಲ್ಲೂ ವಿದ್ಯಾರ್ಥಿಗಳಿಗೆ ಒಂದು ನೀತಿ ಸಂದೇಶವೂ ಇರುತ್ತಿತ್ತು. ಸಂದರ್ಭಕ್ಕೆ ಅನುಗುಣವಾಗಿ ಸ್ವಾರಸ್ಯಕರವಾಗಿ, ಸಮಯೋಚಿತವಾಗಿ ಮಾತನಾಡುವ ಶಕ್ತಿ ಅವರಿಗಿದೆ. ಇನ್ನೂ ಹಲವು ಸಂದರ್ಭಗಳಲ್ಲಿ ಅವರ ಮಾತನ್ನು ಕೇಳಿದ್ದೇನೆ. ಅವರು ಒಬ್ಬ ಉತ್ತಮ ವಾಗ್ಮಿ ಎನ್ನುವುದರಲ್ಲಿ ಎರಡು ಮಾತಿಲ್ಲ. ನಮ್ಮ ಕಾಲೇಜಿನ ಸಮಾರಂಭಕ್ಕೆ ಅತಿಥಿಗಳಾಗಿ ಬಂದ ಸಂದರ್ಭದಿಂದ ಅವರು ನನಗೆ ಪರಿಚಯವಾದರು.

ಅನಂತರ ನಾನು ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ಮಾಡಬೇಕೆಂದು ತೀರ್ಮಾನಿಸಿ ಅವರನ್ನು ಸಂಪರ್ಕಿಸಿದಾಗ ಅವರು ಸಂತೋಷದಿಂದ ಒಪ್ಪಿಗೆ ಕೊಟ್ಟರು. ಆದರೆ ಅವರ ನಿರೀಕ್ಷೆಯ ಮಟ್ಟಕ್ಕೆ ಮೊದಲ ಒಂದೆರಡು ವರ್ಷ ನನಗೆ ಸಮರ್ಪಕವಾಗಿ ಅಧ್ಯಯನ ನಡೆಸಲು ಸಾಧ್ಯವಾಗಲಿಲ್ಲ. ಪ್ರಾಂಶುಪಾಲಳಾಗಿ ಕಾಲೇಜಿನ ಕಾರ್ಯಗಳ ಒತ್ತಡ ತುಂಬಾ ಇದ್ದುದರಿಂದ ನನ್ನ ಅಧ್ಯಯನಕ್ಕೆ ಸ್ವಲ್ಪ ಅಡಚಣೆಯಾಯಿತೆಂದೇ ಹೇಳಬಹುದು. ಆದರೆ ಹಠ ಬಿಡದ ತ್ರಿವಿಕ್ರಮನಂತೆ ಹಂಪನಾ ಅವರು ನನಗೆ ಎಡೆಬಿಡದೆ ಒತ್ತಾಯಿಸಿ "ನೀವು ಪಿಎಚ್‌ಡಿ ಮುಗಿಸಲೇ ಬೇಕು" ಎಂದು ಸ್ವಲ್ಪ ಕಟುವಾಗಿಯೇ ಹೇಳಿದರು. ಮನೆಯಲ್ಲಿ ಫೋನ್ ಟ್ರಿನ್‌ಗುಟ್ಟಿದರೆ ಎಲ್ಲಿ ಹಂಪನಾ ಅವರು ಬೈಯುತ್ತಾರೋ ಎಂಬ ಭಯ ನನಗೆ. ಆದರೆ ಅವರ ಒತ್ತಾಯದ ಹಿಂದೆ ನಾನು ಬರೆದು ಮುಗಿಸಲೇ ಬೇಕೆಂಬ ಹಠ, ಆತ್ಮೀಯತೆ, ವಿಶ್ವಾಸ ಇತ್ತು. ಅವರು ಅಷ್ಟು ಒತ್ತಾಯಿಸದಿದ್ದಲ್ಲಿ ನಾನು ಸಂಶೋಧನೆ ಮುಗಿಸುತ್ತಿದ್ದೆನೋ ಇಲ್ಲವೋ. ಒಂದು ಕೆಲಸ ಹಚ್ಚಿದರೆ ಅದು ಪೂರ್ತಿಯಾಗುವವರೆಗೂ ಅದರ ಕಡೆ ಗಮನ ಹರಿಸಿ ಅದು ಪೂರ್ಣಗೊಳ್ಳುವಂತೆ ನೋಡಿಕೊಳ್ಳುವ ಜಾಯಮಾನ ಅವರದ್ದು. ಅದರ ಹಿಂದೆ ಇರುವ ಕಾಳಜಿ; ತಮ್ಮ ಶಿಷ್ಯರು ಬೆಳೆಯಬೇಕೆಂಬ ಅವರ ಅದಮ್ಯ ಉತ್ಸಾಹ; ಒತ್ತಾಯ ಪೂರ್ವಕವಾಗಿ ಅವರು ಬರೆಸುವ ರೀತಿ ನಿಜಕ್ಕೂ ಬೆರಗುಗೊಳಿಸುವಂತಹುದು.

ನನ್ನ ಪಿಎಚ್.ಡಿ.ಯ ವಿಷಯ "ಎಸ್.ಎಲ್.ಭೈರಪ್ಪ ಅವರ ಕಾದಂಬರಿಗಳ ಒಂದು ಅಧ್ಯಯನ." ಈ ವಿಷಯಕ್ಕೆ ಸಂಬಂಧಿಸಿದಂತೆ ಯಾವುದೇ ಪತ್ರಿಕೆಯಲ್ಲಿ, ಯಾವುದೇ ಸಂದರ್ಶನದಲ್ಲಿ ಭೈರಪ್ಪನವರ ಬಗ್ಗೆ ಉಲ್ಲೇಖವಿದ್ದರೆ-ನನ್ನ ಗಮನಕ್ಕೆ ಬರುವುದಕ್ಕೆ ಮೊದಲೇ ಅವರು ಕೂಡಲೇ ತಿಳಿಸುತ್ತಿದ್ದರು. ಪ್ರತಿಯೊಂದು ಅಧ್ಯಾಯ ಮುಗಿದ ಮೇಲೂ ಹಸ್ತಪ್ರತಿ ನೋಡಿ ಸೂಕ್ತ ಸಲಹೆಗಳನ್ನು ಕೊಡುತ್ತಿದ್ದರು. ನಾನು ಯಾವ ಹೊತ್ತಿನಲ್ಲಿ ಅವರ ಮನೆಯ ಬಾಗಿಲಿಗೆ ಹೋದರೂ ಆದರದಿಂದ ಬರಮಾಡಿಕೊಂಡು ಎಷ್ಟೇ ಕಾರ್ಯಗಳಿದ್ದರೂ ನನ್ನ ಬರಹವನ್ನು ನೋಡಿ ನಾನು ಹೇಗೆ ಬರೆಯಬೇಕೆಂದು ಸಲಹೆ ನೀಡುತ್ತಿದ್ದರು. ಅಷ್ಟೇ ಅಲ್ಲ ನನ್ನ ಸಂಶೋಧನೆಗೆ ಅನುಕೂಲವಾಗುವಂತೆ ಕಾದಂಬರಿ ಸಾಹಿತ್ಯದ ಬಗ್ಗೆಯೇ ಮಾತನಾಡುವುದಕ್ಕೆ

ಹಲವಾರು ವಿಚಾರ ವೇದಿಕೆಗಳಲ್ಲಿ ನನಗೆ ಅವಕಾಶ ಕಲ್ಪಿಸಿಕೊಟ್ಟರು. ಇದರಿಂದಾಗಿ ನನಗೂ ಹೆಚ್ಚಿನ ಅಧ್ಯಯನ ಮಾಡಲು ಸಾಧ್ಯವಾಯಿತು. ಅವರ ನಿರಂತರ ಪ್ರೋತ್ಸಾಹದಿಂದಲೇ ನನಗೆ ಎಷ್ಟೇ ಕಾರ್ಯಭಾರವಿದ್ದರೂ ಥೀಸಿಸ್ ಮುಗಿಸಲು ಸಾಧ್ಯವಾಯಿತು.

ಡಾ ಹಂಪನಾ ಅವರ ಬಹುದೊಡ್ಡ ಗುಣ ಎಂದರೆ ಅವರು ತಾವೂ ಬೆಳೆಯುತ್ತಾರೆ. ತಮ್ಮ ಸಂಪರ್ಕಕ್ಕೆ ಬಂದ ವ್ಯಕ್ತಿಗಳಿಗೂ ಬೆಳೆಯುವುದಕ್ಕೆ ಅವಕಾಶ ಮಾಡಿಕೊಡುತ್ತಾರೆ. ಒಬ್ಬರ ಬೆಳವಣಿಗೆಯನ್ನು ಕಂಡು ಅವರು ಈರ್ಷ್ಯೆಪಟ್ಟಿದ್ದೇ ಇಲ್ಲ. ಅಷ್ಟೇ ಅಲ್ಲ. ಪರರ ಬಗ್ಗೆ ದೋಷಾರೋಪಣೆ ಮಾಡಿರುವ, ಪರರ ಏಳಿಗೆಗೆ ಕಲ್ಲು ಹಾಕುವ ಪ್ರಯತ್ನ ಅವರು ಎಂದಿಗೂ ಮಾಡಿಲ್ಲ. ಅಷ್ಟೇ ಏಕೆ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪದವಿಯ ಕಾಲಾವಧಿ ಮುಗಿದ ಮೇಲೆ ಜನಪರ ಸಾಹಿತ್ಯ ಪರಿಷತ್ತು ಎಂದೇ ಒಂದು ವೇದಿಕೆ ನಿರ್ಮಿಸಿ ಹಲವಾರು ಹಿರಿಯ ಕಿರಿಯ ಸಾಹಿತಿಗಳಿಗೆ ಸಾಹಿತ್ಯ ವೇದಿಕೆಗಳಲ್ಲಿ ಅವಕಾಶ ಒದಗಿಸಿಕೊಟ್ಟವರು ಅವರು. ಅಧಿಕೃತವಾಗಿ ಯಾವುದೇ ಅಧಿಕಾರವಿರಲಿ, ಇಲ್ಲದಿರಲಿ ನಿರಂತರವಾಗಿ ಸಾಹಿತ್ಯ ಸೇವೆ ನಡೆಸಿಕೊಂಡು ಬರುತ್ತಿರುವವರು ಹಂಪನಾ ಅವರು. ಎಷ್ಟೇ ಕಾರ್ಯಗಳಿರಲಿ, ಎಂತಹ ಸಂದರ್ಭಗಳೇ ಇರಲಿ ಸದಾ ಹಸನ್ಮುಖಿಯಾಗಿ ಮಾತನಾಡುವವರು. ಯಾವುದೇ ವಿಚಾರವಾಗಲೀ, ಯಾವ ವ್ಯಕ್ತಿಯೇ ಆಗಲಿ ಪೂರ್ವಾಗ್ರಹ ಪೀಡಿತರಾಗಿ ಮಾತನಾಡಿದ್ದಿಲ್ಲ. ಇದ್ದದ್ದನ್ನು ಖಂಡಿತವಾಗಿ ನುಡಿಯುವ ಖಂಡಿತವಾದಿ. ತಮ್ಮ ಬಳಿಗೆ ಸಹಾಯ ಯಾಚಿಸಿ ಬಂದವರಿಗೆ ತಮ್ಮ ಕೈಲಾದ ಸೇವೆ ಮಾಡುವವರು. ಅವರಲ್ಲಿ ನಾನು ಮೆಚ್ಚುವ ಬಹು ಮುಖ್ಯ ಗುಣವೆಂದರೆ "ಗುಣಕ್ಕೆ ಮತ್ಸರವುಂಟೇ?'' ಎಂಬ ಮಾತಿನಂತೆ ತಮ್ಮ ಶತ್ರುವಾದರೂ ಚಿಂತೆಯಿಲ್ಲ, ಅವರಲ್ಲಿರುವ ಉತ್ತಮ ಗುಣಗಳನ್ನು ಗ್ರಹಿಸಿ ಅವರನ್ನು ಪ್ರೋತ್ಸಾಹಿಸುವ ಒಂದು ಔದಾರ್ಯ. ಡಾ ಹಂಪನಾ ಅವರು ತಾವು ನಿಂತ ನೆಲೆಯಿಂದಲೇ ಕನ್ನಡ ಸಾಹಿತ್ಯ ಸೇವೆಯ ರಥವನ್ನು ನಡೆಸುತ್ತಿರುವವರು. ಅವರಿಗೆ ಈ ಶುಭ ಸಂದರ್ಭದಲ್ಲಿ ಹೆಚ್ಚಿನ ಆರೋಗ್ಯ, ಸಾಹಿತ್ಯ ಸೇವೆ ಮಾಡುವ ಕ್ರಿಯಾಶಕ್ತಿ ಒದಗಲಿ ಎಂಬುದೇ ಕಿರಿಯರಾದ ನಮ್ಮೆಲ್ಲರ ಹಾರೈಕೆ.

# ಜನಪರ ದೃಷ್ಟಿ ಮತ್ತು ಹಂಪನಾ

**ಟಿ.ಕೆ. ಮಹಮೂದ್**

ಜನಪರ ಸಾಹಿತ್ಯಕ್ಕೆ ಕಹಳೆ ಊದಿದವರು-ಹಂಪನಾ. ಅಂಥ ಕರೆಕೊಡುವ ಸಂದರ್ಭವೇನಿತ್ತು? ಸಾಹಿತ್ಯಪರಿಷತ್ತಿಗಿಂತ ಅದು ಹೇಗೆ ಭಿನ್ನ ? ಅದು ಜನಪರವಾಗುವ ಸಾಧ್ಯತೆ ಎಂತು? ಇವೇ ಕೆಲವು ಪ್ರಶ್ನೆಗಳನ್ನೆತ್ತಿ ಲೇಖನಕ್ಕೆ ವಿಷಯ ಸೂಚಿಸಿದ್ದಾರೆ. ನಾನು ಹಂಪನಾ ಅವರೊಡನೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲೂ ಅನಂತರ ಜನಪರ ಸಾಹಿತ್ಯ ಪರಿಷತ್ತಿನಲ್ಲೂ ಜತೆಗೂಡಿ ಕೆಲಸ ಮಾಡಿದ್ದರಿಂದ ಈ ವಿಷಯವನ್ನು ಅವರು ನನಗೆ ಸೂಚಿಸಿರಬಹುದು. ಆದ ಕಾರಣ ಇಲ್ಲಿ ಪ್ರಸ್ತಾವನೆಯಾಗಿ ಜನಪರ ಸಾಹಿತ್ಯ ಪರಿಷತ್ತಿನ ರಚನೆಯ ಹಿನ್ನೆಲೆ ಮತ್ತು ನನ್ನ ಹಾಗೂ ಹಂಪನಾ ಅವರ ಸಂಬಂಧ. ಮತ್ತು ಹಂಪನಾ ಅವರ ಕಾರ್ಯ ವೈಖರಿಗೆ ಸಂಬಂಧಿಸಿದ ಕೆಲ ವಿಚಾರಗಳನ್ನು ಸಂಕ್ಷಿಪ್ತವಾಗಿ ನಮೂದಿಸಬೇಕಾಗಿದೆ.

ಹಂಪನಾ ಅವರೊಡನೆ ನನಗೆ ನೇರ ಸಂಪರ್ಕ ಬಂದದ್ದು ೧೯೭೯ರಲ್ಲಿ. ಆ ವರ್ಷದ ಮೇ ದಿನಾಂಕ ೬ ರಂದು ಕನ್ನಡ ಸಾಹಿತ್ಯ ಪರಿಷತ್ತಿನ ಸಭಾ ಭವನದಲ್ಲಿ ಜರುಗಿದ 'ದಲಿತ ಸಾಹಿತ್ಯ ವಿಚಾರ ಸಂಕಿರಣ'ದಲ್ಲಿ 'ದಲಿತ ಸಾಹಿತ್ಯ ಒಲವು ನಿಲುವು' ಎಂಬ ವಿಷಯವಾಗಿ ನಾನು ಮಾತನಾಡಿದ್ದೆ. ಅದೇ ಮೊದಲ ಸಲ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅದರ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಅವಕಾಶ ನನಗೆ ಲಭಿಸಿತ್ತು. ಅದನ್ನು ಒದಗಿಸಿಕೊಟ್ಟಿದ್ದವರು-ಹಂಪನಾ. ಹಂಪನಾ ಅಧ್ಯಕ್ಷರಾದ ನಂತರ ಉಪೇಕ್ಷಿತ ವರ್ಗಗಳ ಅನೇಕರನ್ನು ಕನ್ನಡ ಸಾಹಿತ್ಯಪರಿಷತ್ತಿಗೆ ಬರಮಾಡಿಕೊಂಡು ಅವರಿಗೆಲ್ಲ ಅವಕಾಶಗಳನ್ನು ಕಲ್ಪಿಸಿಕೊಟ್ಟು ಬೆನ್ನು ತಟ್ಟಿದ್ದರು. ಅಂದು ಅವರನ್ನು ಮೊದಲ ಸಲ ಭೇಟಿ ಮಾಡಿ ಪರಿಷತ್ತಿನಲ್ಲಿ ಅವರು ಮಾಡುತ್ತಿರುವ ಇಂಥ ಕಾರ್ಯಗಳ ಬಗ್ಗೆ ಮೆಚ್ಚುಗೆ ಸೂಚಿಸಿದೆ-ಅಭಿನಂದಿಸಿದೆ. ಅನಂತರ ಹಂಪನಾ ಮತ್ತು ನಾನು ತೀರಾ ಹತ್ತಿರವಾಗುತ್ತ ಬಂದೆವು. ೧೯೮೦ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಕನ್ನಡ ಸಾಹಿತ್ಯ ಪರಿಷತ್ತಿಗೆ ನಾನು ಅಧ್ಯಕ್ಷನಾದ ನಂತರ ಆ ಸಂಬಂಧ ಗಟ್ಟಿಗೊಳ್ಳುತ್ತ ಬೆಳೆಯಿತು.

ಹಂಪನಾ ಉದ್ದಾಮ ಸಾಹಿತಿ 'ಪ್ರಚಂಡ ವಾಗ್ಮಿ' ಉತ್ತಮ ಸಂಶೋಧಕರು. ಉನ್ನತ ಮಟ್ಟದ ಭಾಷಾ ತಜ್ಞರು. ಅವರ ನಿರೂಪಣಾ ತಂತ್ರ ಮತ್ತು ಶೈಲಿ ಅತ್ಯಂತ ಆಕರ್ಷಕ. ಮಾತು ಸಹ ಕಾವ್ಯಮಯ. ಇವೆಲ್ಲವನ್ನು ಮೀರಿ ಅವರೊಬ್ಬ ಚತುರ ಸಂಘಟಕರು, ದಿಟ್ಟ

ಹೋರಾಟಗಾರರು. ವಸ್ತುನಿಷ್ಠವಾಗಿ ಚಿಂತಿಸಬಲ್ಲ ಮೇಧಾವಿ. ತಮ್ಮ ವೈಚಾರಿಕ ನಿಖರತೆಯಿಂದಾಗಿ ಪರಿಷತ್ತಿಗೆ ಪುರೋಗಾಮಿ ತಿರುವು ಕೊಡಲು ಕೈಗೊಂಡ ಅವರ ಕ್ರಮಗಳು ಪ್ರಶಂಸನೀಯ ಸಾಧನೆ. ಅವರ ಆಡಳಿತ ದಕ್ಷತೆ, ಶ್ರಮವರಿಯದ ದುಡಿಮೆಗಳು ಅವರ ಅವಧಿಯಲ್ಲಿ ಸಾಹಿತ್ಯ ಪರಿಷತ್ತನ್ನು ಅತ್ಯಂತ ಚಟುವಟಿಕೆಯ ಕೇಂದ್ರವಾಗಿ ಬದಲಾಯಿಸಿತು. ಮುಚ್ಚಿಡಲ್ಪಟ್ಟಿದ್ದ ಪರಿಷತ್ತಿನ ಎಲ್ಲಾ ಕದಗಳೂ ಎಲ್ಲರಿಗೂ ತೆರೆದುಕೊಂಡವು. ಪರಿಷತ್ತು ಮಡಿವಂತರ ಗುಡಿಯಾಗುವ ಬದಲು ಜನಸಾಮಾನ್ಯ ಕನ್ನಡಿಗರ ಸಹಭಾಗಿತ್ವವುಳ್ಳ ಕನ್ನಡದ ದೇಗುಲವಾಗಿ ಬೆಳೆಯಿತು.

ಹಂಪನಾ ಅವರ ಇಂಥ ಕ್ರಮಗಳಿಂದ ಸಂಪ್ರದಾಯವಾದಿಸಾಹಿತಿಗಳಿಗೆ ಸಹಜವಾಗಿಯೆ ಕಸಿವಿಸಿಯಾಗತೊಡಗಿತು. ಸಾಹಿತ್ಯ ಪರಿಷತ್ತಿನ ಮೇಲಿದ್ದ ತಮ್ಮ ಪರಂಪರಾಗತ ಹಿಡಿತ ತಪ್ಪಿ ಹೋಗುತ್ತಿದೆ ಎಂಬ ಭಾವನೆ ಅವರಲ್ಲಿ ಬೆಳೆಯುವಂತಾಯಿತು. 'ಮಂಥರೆಗಳು ಶಕುನಿ'ಗಳು ಜಾಗೃತರಾದರು. ಹಂಪನಾ ವಿರುದ್ಧ ಅಪಪ್ರಚಾರದ ಸಮರ ಪ್ರಾರಂಭವಾಯಿತು ಸಾಹಿತ್ಯದ ವಾರಸುದಾರಿಕೆ ಎಲ್ಲಾ ತಮ್ಮದೆಂಬ ಹಮ್ಮು ಇದ್ದಿದ್ದ ಕೆಲ ಸಾಹಿತಿಗಳು ತಮ್ಮ ಕುಲ ಬಾಂಧವರಾದ ಪತ್ರಕರ್ತರು ಕೆಲವರನ್ನು ಬಳಸಿಕೊಂಡು ಪರಿಷತ್ತಿನ ವಿರುದ್ಧ ಹಂಪನಾ ವಿರುದ್ಧ ನಿರಂತರ ಅಪಪ್ರಚಾರ ನಡೆಸಿದರು. ಎಲ್ಲ ವಿಧದ ಆರೋಪಗಳನ್ನು ಹೊರಿಸತೊಡಗಿದರು. ಕನ್ನಡ ಸಾಹಿತ್ಯ ಪರಿಷತ್ತನ್ನು ಜನಪರಗೊಳಿಸುವ ತಮ್ಮ ಉದ್ದೇಶಕ್ಕೆ ಈ ರೀತಿಯ ಉಗ್ರವಿರೋಧಗಳನ್ನೂ ಹಂಪನಾ ನಿರೀಕ್ಷಿಸಿಯೆ ಇದ್ದರು. ಅದನ್ನು ಎದುರಿಸುವ ಎದೆಗಾರಿಕೆಯೂ ಅವರಿಗಿತ್ತು. ಆದರೆ ಅವರ ವಿರೋಧಿಗಳಾದ ಸಾಹಿತಿಗಳಿಗೆ ಜಾತಿಕೂಟ ಇದ್ದಿತ್ತು. ಹಂಪನಾ ಆ ಮಟ್ಟಿಗೆ ಏಕಾಂಗಿಯಾಗಿಯೆ ಅವರೆಲ್ಲರನ್ನು ಇದಿರಿಸಿ ನಿಲ್ಲಬೇಕಾಯಿತು. ಈ ಎಲ್ಲ ವಿದ್ಯಮಾನಗಳು ಕನ್ನಡ ಸಾಹಿತ್ಯ ಪರಿಷತ್ತನ್ನು ಜನಪರಗೊಳಿಸುವ ನಿಟ್ಟಿನಲ್ಲಿ ಎದುರಿಸಬೇಕಾಗಿರುವ ಹಲವು ಹತ್ತು ತೊಡಕುಗಳನ್ನು ಅವರಿಗೆ ಮನಗಾಣಿಸಿ ಕೊಡುತ್ತಬಂದವು. ಅದರ ವಿರೋಧಿಗಳೆಲ್ಲ ಹಂಪನಾ ಮುಂದೆ ಸೋಲುವ ಪ್ರಮೇಯ ಬಂದಾಗ ತಮ್ಮ ಜಾತಿ ಸಂಬಂಧ ಸಂಪರ್ಕಗಳನ್ನು ಬಳಸಿ ಸರಕಾರದಿಂದ ಕಿರುಕುಳ ಕೊಡಿಸಲು ಪ್ರಾರಂಭಿಸಿದರು.

ಈ ಎಲ್ಲ ಕ್ರೂರ ಅನುಭವಗಳು ಸಾಹಿತ್ಯರಂಗದಲ್ಲಿ ಸರಕಾರದ ಲಾಜಿಗೆ ಒಳಪಡದ, ಜಾತಿಕೂಟಗಳಿಂದ ದೂರವಾದ, ಜನಪರ ಚಿಂತಕರಿಂದ ಕೂಡಿದ ಒಂದು ಸಂಘಟನೆಯ ಆವಶ್ಯಕತೆಯನ್ನು ಅವರಿಗೆ ಮನಗಾಣಿಸಿಕೊಟ್ಟವು. ಅವರು ಆ ಬಗ್ಗೆ ಬಹು ದಿನಗಳಿಂದ ತಮ್ಮಲ್ಲೆ ವಿಚಾರ ಮಾಡುತ್ತಿದ್ದರು. ಇವೆಲ್ಲ ಹಿಂಸೆಗಳನ್ನು ಸಹಿಸಿಕೊಂಡು ಅವರು ನಿತ್ಯ ಬೆಳಗ್ಗಿನ ಎಂಟು ಘಂಟೆಗೆ ಸಾಹಿತ್ಯ ಪರಿಷತ್ತಿಗೆ ಬಂದು, ಕಾರ್ಯಾಲಯದ ಕೆಲಸಗಳನ್ನು ಮಾಡುತ್ತ ನಿತ್ಯದ ಸಂದರ್ಶಕರೊಡನೆ ವಿನಯ ಸೌಜನ್ಯಗಳಿಂದ ವ್ಯವಹರಿಸುತ್ತ ಬರುತ್ತಿದ್ದುದನ್ನು ಕಂಡವರು ಹಂಪನಾರಲ್ಲಿದ್ದ ಅದ್ಭುತ ಸಹನ ಶೀಲತೆಗೆ ಬೆರಗಾಗುತ್ತಿದ್ದರು.

ಹಂಪನಾ ಜನವಾದಿ-ಮಾನವತಾವಾದಿ 'ಜನ ಬದುಕಬೇಕೆಂದು ಕಾವ್ಯ ಮುಖದಿಂದ ನುಡಿದ' ರಾಘವಾಂಕನ ದೃಷ್ಟಿ ಅವರ ಸಾಹಿತ್ಯ ಸೃಷ್ಟಿಯ ನಿಲುವು. 'ಮನುಷ್ಯಜಾತಿ ತಾನೊಂದೆವಲಂ' ಎಂಬ ಪಂಪನ ಘೋಷಣೆಗೆ ಅವರ ಒಲವು. ಮಾತಿಗೆ ಮತ್ತು ಬರಹಕ್ಕೆ

ಮಾತ್ರ ಅವರ ಮಾನವೀಯ ದೃಷ್ಟಿ ಸೀಮಿತ ಅಲ್ಲ. ಬದುಕಿನಲ್ಲೂ ಅದು ಅನ್ವಯ. ಕಮಲಮ್ಮ -ಹಂಪನಾ ದಂಪತಿಗಳು ಸಾಹಿತ್ಯದಲ್ಲೂ ಬದುಕಿನಲ್ಲೂ ನಿಜವಾಗಿಯೂ ಮಾದರಿ ಎನಿಸಿದ್ದಾರೆ.

ಹಂಪನಾ ವಜ್ರದಂತೆ ಗಟ್ಟಿ, ಕುಸುಮದಂತೆ ಮೃದು. ಅವರ ಮಾನವೀಯ ಅನುಕಂಪ, ಸ್ನೇಹಪರತೆಗಳಿಗೆ ಮಾರುಹೋಗದವರಿಲ್ಲ. ಅದು ಅವರ ವ್ಯಕ್ತಿತ್ವದ ಒಂದು ವೈಶಿಷ್ಟ್ಯ. ಸಾಹಿತ್ಯ ಪರಿಷತ್ತಿನಲ್ಲಿ ಅವರು ದಲಿತ, ಬಂಡಾಯ ಪ್ರಗತಿಶೀಲ ಪರಂಪರೆಯನ್ನು ಅಳವಡಿಸಿಕೊಳ್ಳಲು, ಬೆಳೆಸಲು ಶ್ರಮಿಸಿದರು. ಶೋಷಣೆ ಮತ್ತು ಮಾನವ ಸಮಾಜದ ವರ್ಗೀಕರಣ ವಾದಗಳಿಗೆ ವಿರುದ್ಧವಾದ ಸಾಹಿತ್ಯಗಳು ಮಾರ್ಕ್ಸ್‌ವಾದದ ಹತ್ತಿರ ಹತ್ತಿರದಿಂದಲೇ ಸಾಗಬೇಕಾಗುತ್ತದೆ. ಸಂಪ್ರದಾಯ ಶರಣರ ಪ್ರತಿಭಟನೆಗೆ ಕಾರಣವಾದ ಮತ್ತೊಂದು ಅಂಶ ಇದು. ದಲಿತ ಮತ್ತು ಬಂಡಾಯ ಸಾಹಿತ್ಯಗಳಲ್ಲಿ ವ್ಯವಸ್ಥೆಯನ್ನು ಹರಾಜು ಹಾಕುವುದನ್ನು ಧರ್ಮ ಸಂಪ್ರದಾಯಗಳ ಬಗ್ಗೆ ಅಣಕವಾಡುವುದನ್ನು ಈ ಸಾಹಿತಿ ವರೇಣ್ಯರು ಹೇಗೆ ಸಹಿಸಿಯಾರು? ಸಾಹಿತ್ಯ ಪರಿಷತ್ತು ಎಂಬ ಅವರು ಕಟ್ಟಿಟ್ಟಿದ್ದ ಮಠದೊಳಗೆ ಲೋಹಿಯಾರರನ್ನು, ಪೆರಿಯಾರನ್ನು ಅಂಬೇಡ್ಕರರನ್ನು ಸ್ವಾಗತಿಸುವ ಹಂಪನಾರನ್ನು ಆದಷ್ಟು ಬೇಗ ಪದಚ್ಯುತಗೊಳಿಸಲು ಅವರು ಸಂಚು ಹೊಂಚು ಪ್ರಾರಂಭಿಸಿದರು. ಆಗ ರಾಜ್ಯದಲ್ಲಿದ್ದ ಮುಖ್ಯಮಂತ್ರಿ ಶ್ರೀ ಗುಂಡೂರಾಯರನ್ನು ಹಿಡಿದು ಹಂಪನಾ ಅವರನ್ನು ಪರಿಷತ್ತಿನಿಂದ ದೂರವಿರಿಸಲು ಪ್ರಯತ್ನಿಸಿ ಸೋತರು. ಆದರೆ ಅನಂತರ ಬಂದ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರಿಗೆ ಹತ್ತಿರದವರು ಕೆಲವರು ಈ ಗುಂಪಿನಲ್ಲಿದ್ದರು, ಅವರೆಲ್ಲ ಹಂಪನಾರನ್ನು ಕದಲಿಸಬೇಕೆಂದು ಪ್ರಯತ್ನಿಸುತ್ತಿರುವಾಗಲೆ ಪರಿಷತ್ತಿನ ಅಂಗರಚನೆಗೆ ತಿದ್ದುಪಡಿ ತಂದು 'ಒಬ್ಬ ಅಧ್ಯಕ್ಷರು ಒಂದೇ ಅವಧಿ' ಎಂಬ ನಿಯಮವನ್ನು ತಮಗೇ ಜಾರಿಗೊಳಿಸಿಕೊಂಡು ಹಂಪನಾ ಪರಿಷತ್ತಿನಿಂದ ನಿವೃತ್ತರಾದರು. ಆದರೂ ಹಂಪನಾವಿರೋಧಿಗಳು ಗುಲಬರ್ಗದಲ್ಲಿ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ಜರುಗುತ್ತಿದ್ದ ಸಂದರ್ಭವನ್ನು ಸಾಧಿಸಿಕೊಂಡು ಪರಿಷತ್ತಿಗೆ ಸರಕಾರದಿಂದ ಬೀಗ ಮುದ್ರೆ ಹಾಕಿಸಿ ಕನ್ನಡ ಪರಿಷತ್ತನ್ನು ಅವಮಾನಗೊಳಿಸಿದರು.-ಈ ವಿವರಗಳೆಲ್ಲ ಇಲ್ಲಿ ಹೇಗೆ ಪ್ರಸ್ತುತ? ಏಕೆ ಅವಶ್ಯವೆಂಬ ಪ್ರಶ್ನೆ ಏಳಬಹುದು. ಜನಪರಸಾಹಿತ್ಯ ಪರಿಷತ್ತಿನ ಹುಟ್ಟಿಗೆ ಇದು ಪ್ರಸ್ತಾವನೆಯಾದುದರಿಂದ ಇಲ್ಲಿ ದಾಖಲಿಸುವುದು ಅನಿವಾರ್ಯವಾಗಿದೆ.

ಜನಪರ ಕಾಳಜಿಯುಳ್ಳ ಸಾಹಿತ್ಯ ಸಂಶೋದನೆಯೊಂದು ಅನಿವಾರ್ಯ-ಅಗತ್ಯಎಂಬ ಅಂಶವನ್ನು ಈ ಎಲ್ಲ ಅನುಭವಗಳಿಂದ ಹಂಪನಾ ಮನಗಂಡಿದ್ದರು. ಅಂಥ ಒಂದು ಸಾಹಿತ್ಯವೇದಿಕೆಯನ್ನು ರಾಜ್ಯ ಮಟ್ಟದಲ್ಲಿ ಸ್ಥಾಪಿಸುವ ಅಗತ್ಯವನ್ನು ಅವರು ಕೆಲವು ಸಾಹಿತಿ ಮಿತ್ರರೊಡನೆ ಪ್ರಸ್ತಾಪಿಸುತ್ತ ಬಂದಿದ್ದರು. ಒಂದು ಶುಭದಿನ ಕೆಲ ಸಾಹಿತಿ ಮಿತ್ರರು ಹಂಪನಾ ನೇತೃತ್ವದಲ್ಲಿ ಒಂದು ಪುಟ್ಟ ಸಭೆ ನಡೆಸಿ ಸಾಹಿತ್ಯ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಜನಪರ ನಿಲುವಿಗೆ ಪ್ರಗತಿಪರ ನಿಲುವಿಗೆ ಬದ್ಧವಾದ ಸಂಘಟನೆಯೊಂದನ್ನು ಪ್ರಾರಂಭಿಸಲು ತೀರ್ಮಾನಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿಗೆ ಅದೇನೂ ಪರ್ಯಾಯ ಅಥವಾ ವಿರೋಧಿ ಸಂಘಟನೆ ಅಲ್ಲ. ಸಾಹಿತ್ಯ ಪರಿಷತ್ತು ಸರಕಾರದಿಂದ ಅನುದಾನ ಪಡೆಯುವ ಸಂಸ್ಥೆ. ಸೀಮಿತ ಗೆರೆ ದಾಟಿ ಅದು ಕನ್ನಡದ ಹೋರಾಟದ ಮಜಲಿಗೆ ಪ್ರವೇಶಿಸುವಂತಿಲ್ಲ. ಕನ್ನಡ ಸಾಹಿತ್ಯ ಸಂಸ್ಕೃತಿಗಳ ಪ್ರಸಾರ ಕಾರ್ಯ ಪ್ರಸ್ತುತಕ್ಕೆ ಸೀಮಿತವಾಗಿ ಉಳಿಯದೆ ಅದು ಜನಸಂದಣಿಯ ಮಧ್ಯದಲ್ಲಿಯೂ

ಪ್ರವಹಿಸಬೇಕಾಗುತ್ತದೆ. ಬರವಣಿಗೆಯಲ್ಲದೆ ಪ್ರಚಾರ ಸಭೆಗಳು, ಬೀದಿ ನಾಟಕಗಳು, ಜನಪರ ಕತೆಗಳ ಮೂಲಕವೂ ಅದನ್ನು ಜನರ ಬಳಿಗೆ ತೆಗೆದುಕೊಂಡು ಹೋಗುವುದು ಅವಶ್ಯವಿದೆ. ನಮ್ಮ ಗಡಿ ಗುಡಿಗಳ ರಕ್ಷಣೆ ಮತ್ತು ಬೆಳವಣಿಗೆಗೆ ಜನಶಕ್ತಿಯನ್ನು ಕಟ್ಟಿ ಅಣಿಗೊಳಿಸುವ ಕೆಲಸವನ್ನೂ ಮಾಡಬೇಕಾಗಿದೆ. ಸಾಹಿತ್ಯ ಪರಿಷತ್ತಿಗೆ ಗುರುತಿಸಲು ಸಾಧ್ಯವಾಗದಂಥ ಕನ್ನಡದ ಕಟ್ಟಾಳುಗಳನ್ನು, ಕಲಾವಿದರು ಮತ್ತು ಸಾಹಿತಿಗಳನ್ನು ಗುರುತಿಸಬೇಕಾಗಿದೆ. ಈ ಮತ್ತು ಇಂಥ ಅನೇಕ ಕಾರ್ಯಗಳಿಂದ ಜನಪರ ಸಾಹಿತ್ಯ ಪರಿಷತ್ತನ್ನು ಅಸ್ತಿತ್ವಕ್ಕೆ ತರಲು ಹಂಪನಾ ಮುಂದಾಳ್ತನ ವಹಿಸಿದರು. ನಿರಂಜನರು ಸಂಸ್ಥೆಯ ಗೌರವಾಧ್ಯಕ್ಷರಾಗಿಯೂ ಡಾ. ಆರ್.ಸಿ ಹಿರೇಮಠರು ಅಧ್ಯಕ್ಷರಾಗಿಯೂ ಡಾ. ಹಂಪನಾ ಸಂಚಾಲಕರಾಗಿಯೂ ಡಾ.ಶಿವಾನಂದಗಾಳಿ, ಡಾ ಬಿ.ಪಿ. ಸಿದ್ಧಾಶ್ರಮ, ಟಿ.ಕೆ. ಮಹಮೂದ್ ಮತ್ತು ಜಿ.ವಿ.ಶಿವಸ್ವಾಮಿ ಪ್ರಧಾನ ಕಾರ್ಯದರ್ಶಿಗಳಾಗಿ ೨೦ ಸದಸ್ಯರು ಕಾರ್ಯ ಸಮಿತಿಯನ್ನು ಆಯ್ಕೆಮಾಡಲಾಯಿತು. ಅಂಗ ರಚನೆಯನ್ನು ಸಿದ್ಧಪಡಿಸಿ ೧೯೮೭ರಲ್ಲಿ ಬೆಂಗಳೂರಿನಲ್ಲಿ ಜರುಗಿದ ಕಾರ್ಯ ಸಮಿತಿಯಲ್ಲಿ ಅಂಗೀಕಾರ ಪಡೆದು ಅದನ್ನು ನೋಂದಾಯಿಸಲಾಯಿತು. ಮರು ವರುಷವೇ ೧೯೮೮ರಲ್ಲಿ ಉತ್ತರ ಕನ್ನಡದ ಶಿರಸಿಯಲ್ಲಿ (೧೯೮೮ ಮೇ ೨೮, ೨೯, ೩೦) ಮೂರು ದಿವಸಗಳು ಜನಪರ ಸಾಹಿತ್ಯ ಪರಿಷತ್ತಿನ ಅಖಿಲ ಭಾರತ ಸಮ್ಮೇಳನವನ್ನು ಖ್ಯಾತ ಸಾಹಿತಿ ಕಯ್ಯಾರ ಕಿಞ್ಞಣ್ಣರೈ ಅವರ ಅಧ್ಯಕ್ಷತೆಯಲ್ಲಿ ಜರುಗಿಸಲಾಯಿತು. ಕರ್ನಾಟಕದಿಂದಲೂ ಹೊರನಾಡಿನಿಂದಲೂ ಅಪಾರ ಸಂಖ್ಯೆಯ ಪ್ರತಿನಿಧಿಗಳು ಭಾಗವಹಿಸಿದ್ದ ಆ ಸಮ್ಮೇಳನ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕಿಂತಲೂ ಬೃಹತ್ತಾಗಿ ಅರ್ಥಪೂರ್ಣವಾಗಿ ಜರುಗಿತು. ಅನಂತರ ಅನೇಕ ಕಾರ್ಯಕ್ರಮಗಳನ್ನು ರಾಜ್ಯದ ನಾನಾ ಕಡೆಗಳಲ್ಲಿ ನಡೆಸಲಾಗಿದೆ. ಇವೆಲ್ಲವೂ ಹಂಪನಾ ಅವರ ಮಾರ್ಗದರ್ಶನದಲ್ಲಿ ನಡೆದ ಸಾಹಿತ್ಯಿಕ ದಾಖಲೆಗಳು. ಅವರೇ ಈ ಸಂಘಟನೆಯ ರೂವಾರಿ (ಲೇಖನ ದೀರ್ಘ ವಾಗಬಹುದೆಂದು ಈ ಸಂಘಟನೆಯ ಇತರ ಕಾರ್ಯ ಚಟುವಟಿಕೆಗಳನ್ನು ಇಲ್ಲಿ ವಿವರಿಸಿಲ್ಲ.)

ಹಂಪನಾ ಅವರ ದೂರದೃಷ್ಟಿ ಸಂಘಟನಾ ಸಾಮರ್ಥ್ಯಗಳಿಗೆ ಇವೆಲ್ಲ ಒಂದೊಂದು ನಿದರ್ಶನಗಳು.

# ಡಾ. ಹಂಪನಾ ಮತ್ತು ಜನಪರ ಸಾಹಿತ್ಯ

ಬಿ. ವಿ. ಗುಂಜೆಟ್ಟಿ

ಡಾ. ಹಂಪನಾ ಪ್ರಾಧ್ಯಾಪಕರಾಗಿ, ಭಾಷಾವಿಜ್ಞಾನಿಗಳಾಗಿ, ಸಾಹಿತ್ಯ ಸಂಶೋಧಕರಾಗಿ, ಸಂಪಾದಕರಾಗಿ, ಜಾನಪದ ವಿದ್ವಾಂಸರಾಗಿ, ಚತುರ ಸಂಘಟಕರಾಗಿ, ಶ್ರೇಷ್ಠ ವಾಗ್ಮಿಗಳಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ-ಹೀಗೆ ಹಲವು ಹತ್ತು ರಂಗಗಳಲ್ಲಿ ಮುಟ್ಟಿದ್ದೆಲ್ಲವನ್ನು ಚಿನ್ನವಾಗಿಸಿ ಸಾಧನೆಗಳ ಸಾಲುದೀಪಗಳನ್ನೇ ಹಚ್ಚಿದ್ದಾರೆ. ಅದರಲ್ಲಿ ಜನಪರ ಸಾಹಿತ್ಯ ಪೋಷಣೆಯೂ ಒಂದು.

ಪ್ರಾಚೀನ ಮತ್ತು ಅರ್ವಾಚೀನ ಸಾಹಿತ್ಯಗಳೆರಡರಲ್ಲಿ ನಿಶಿತಮತಿಗಳಾಗಿರುವ ಡಾ.ಹಂಪನಾ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದ ಕಾಲದಲ್ಲಿ ಜನಪರ ಸಾಹಿತ್ಯಕ್ಕೆ ಸೂಕ್ತವಾದ ವೇದಿಕೆಯನ್ನು ಒದಗಿಸಿಕೊಡುವುದರ ಮೂಲಕ ಅದಕ್ಕೆ ಪೋಷಣೆ ನೀಡಿದ್ದಾರೆ. ಪ್ರೇರಣೆ ಒದಗಿಸಿದ್ದಾರೆ. ತದನಂತರ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಸ್ಥಾನದಿಂದ ನಿರ್ಗಮಿಸಿದ ಮೇಲೆ ಜನಪರ ಸಾಹಿತ್ಯ ಪರಿಷತ್ತು ಎಂಬ ಸಂಘಟನೆಯನ್ನು ಹುಟ್ಟುಹಾಕಿದರು. ರಾಜ್ಯಾದ್ಯಂತ ಜಿಲ್ಲಾ ಘಟಕಗಳನ್ನು ರಚಿಸಿಕೊಂಡು ವಿಚಾರಸಂಕಿರಣಗಳನ್ನು, ಸಮ್ಮೇಳನಗಳನ್ನು ಏರ್ಪಡಿಸಿ ಸಂಸ್ಮರಣೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ.

ಡಾ. ಹಂಪನಾ ೧೯೬೬ ರಿಂದ ೧೯೭೪ರ ವರೆಗೆ ಎಂಟು ವರ್ಷಗಳ ಕಾಲ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾಗಿ ದುಡಿದ್ದಾರೆ. ಮುಂದೆ ಅದೇ ಪರಿಷತ್ತಿನ ಅಧ್ಯಕ್ಷರಾಗಿ ಏಳು ವರ್ಷಗಳ ಕಾಲ ಪರಿಷತ್ತಿನ ಇತಿಹಾಸದಲ್ಲಿಯೇ 'ನಭೂತೋ ನಭವಿಷ್ಯತಿ' ಎನ್ನುವಂತೆ ಅಪ್ರತಿಮವಾದ ಕಾರ್ಯ ನಿರ್ವಹಿಸಿ ಸಮಸ್ತ ಕನ್ನಡಿಗರ ಗೌರವಾದರಗಳಿಗೆ ಪಾತ್ರರಾಗಿದ್ದಾರೆ. ಪರಿಷತ್ತಿನ ಅಧ್ಯಕ್ಷರಾಗಿ ಕನ್ನಡ ನಾಡಿನ ಮೂಲೆ ಮೂಲೆಗಳನ್ನು ಸುತ್ತಿ ಶ್ರೀ ಸಾಮಾನ್ಯರ ನಾಡಿಮಿಡಿತವನ್ನು ಗುರುತಿಸಿಕೊಂಡು ಪ್ರಾದೇಶಿಕ ಅಸಮಾನತೆಯನ್ನು ನೀಗುವಲ್ಲಿ ಯಶಸ್ವಿಯಾದರು. ಕೇವಲ ನಗರ ಪ್ರದೇಶಗಳಿಗೆ ಮಾತ್ರ ಮೀಸಲಾಗಿದ್ದ, ಸೀಮಿತಗೊಂಡಿದ್ದ ಪರಿಷತ್ತಿನ ಕಾರ್ಯ ಚಟುವಟಿಕೆಗಳನ್ನು ಗ್ರಾಮೀಣ ಪ್ರದೇಶಗಳಿಗೂ ಕೊಂಡೊಯ್ಯುವಲ್ಲಿ ಯಶಸ್ವಿಯಾದರು. ನಗರದವರಂತೆ, ಗ್ರಾಮೀಣರ ಅಭಿಮಾನಕ್ಕೂ ಪಾತ್ರರಾಗಿದ್ದಾರೆ. ಇಷ್ಟೇ ಅಲ್ಲದೆ, ಪರಿಷತ್ತು ಆಗ ಕಾರ್ಯ ಚಟುವಟಿಕೆಗಳ ಚಿಲುಮೆಯಾಗಿತ್ತೆಂದು ಈಗಲೂ ನಾಡಿನ ಅಬಾಲವೃದ್ಧರೆಲ್ಲ ಮೆಲುಕು ಹಾಕುತ್ತಿರುವದನ್ನು ಕಾಣಬಹುದಾಗಿದೆ.

ಶಿಷ್ಯ ಸಂಪ್ರದಾಯದಲ್ಲಿ ಬೆಳೆದು ಬಂದ ಹಂಪನಾ ಅವರು ವಿದ್ಯಾರ್ಥಿದೆಸೆಯಲ್ಲಿಯೆ ಜನಪರದತ್ತ ವಾಲಿದ್ದರೆಂಬುದು ಅವರ ಬಾಳಪುಟವನ್ನು ತಿರುವಿಹಾಕಿದಾಗ ವೇದ್ಯವಾಗುತ್ತದೆ. ಅಂತಃಸ್ತರದಲ್ಲಿ ಸುಪ್ತವಾಗಿದ್ದ ಅವರ ಜನಪರ ಭಾವ ಜನಪರ ಧ್ವನಿಯಾಗಿ ಬಹಿರಂಗಗೊಂಡುದು ೧೯೭೯ರಲ್ಲಿ. ಧರ್ಮಸ್ಥಳದಲ್ಲಿ ಜರುಗಿದ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಕಾಲಕ್ಕೆ. ನವೋದಯದ ಭಾವಪರ, ನವ್ಯದ ಚಿಂತನಪರ ಕಾವ್ಯದ ಜೊತೆಯಲ್ಲಿಯೇ ಕಾಲದ ಆವಶ್ಯಕತೆಗನುಸರಿಸಿ ದಲಿತ-ಬಂಡಾಯ ಕಾವ್ಯ ತಲೆಯೆತ್ತುತ್ತಿದ್ದ ಕಾಲ. ಪರಿಷತ್ತು ನಡೆಸುವ ಸಾಹಿತ್ಯ ಸಮ್ಮೇಳನದ ಗೋಷ್ಠಿಗಳಲ್ಲಿ ಇದನ್ನೂ ಸೇರ್ಪಡೆಗೊಳಿಸಬೇಕೆನ್ನುವ ಅಹವಾಲು ಕೆಲವು ಸಾಹಿತಿಗಳದಾಗಿತ್ತು.

ಹೀಗಿರುವಾಗ, ಪರಿಷತ್ತು ಪ್ರತಿವರ್ಷದ ಹಾಗೆ ೧೯೭೯ರ ಮಾರ್ಚಿ ತಿಂಗಳಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಧರ್ಮಸ್ಥಳದಲ್ಲಿ ಯೋಜಿಸಿತು. ಆ ಸಂದರ್ಭದಲ್ಲಿ ಪ್ರೊ॥ ಚೆನ್ನಣ್ಣ ವಾಲೀಕಾರ ಅವರು ಡಾ. ಹಂಪನಾ ಅವರಿಗೆ ಒಂದು ಪತ್ರ ಬರೆದು ಧರ್ಮಸ್ಥಳದಲ್ಲಿ ಜರುಗಲಿರುವ ಸಾಹಿತ್ಯ ಸಮ್ಮೇಳನದಲ್ಲಿ ದಲಿತ ಸಾಹಿತ್ಯ ಗೋಷ್ಠಿಯನ್ನು ಸೇರ್ಪಡೆ ಮಾಡಬೇಕೆಂದು ವಿಜ್ಞಾಪಿಸಿದರು. ಅದಕ್ಕೆ ಡಾ. ಹಂಪನಾ ಅವರು ಬರೆದ ಉತ್ತರ ದಲಿತ-ಬಂಡಾಯ ಸಾಹಿತಿಗಳಿಗೆ ಗ್ರಾಸವಾಗಿ ಪರಿಣಮಿಸಿತು. ಅದೇ ಸಮಯಕ್ಕೆ ಬೆಂಗಳೂರಲ್ಲಿ ಜರುಗಿದ ಜನಪರವಾದ ಸಾಂಸ್ಕೃತಿಕ ಹೋರಾಟವನ್ನೇ ತಮ್ಮ ಮುಖ್ಯ ನೆಲೆಯಾಗಿಸಿಕೊಂಡು ರಚನೆಗೊಂಡ ರಾಜ್ಯ ಮಟ್ಟದ ಬಂಡಾಯ ಸಾಹಿತ್ಯ ಸಮ್ಮೇಳನದಲ್ಲೂ ಡಾ. ಹಂಪನಾ ಪತ್ರ ಚರ್ಚೆಗೆ ಒಳಗಾಯಿತು.

ಆದರೆ ಅಂತಃಸ್ತರದಲ್ಲಿ ಜನಪರ ಕಾಳಜಿಯನ್ನು ಹೊಂದಿದ್ದ ಡಾ. ಹಂಪನಾ ಧರ್ಮಸ್ಥಳದ ಸಾಹಿತ್ಯ ಸಮ್ಮೇಳನದಲ್ಲಿ (೧೯೭೯) ದಲಿತ ಸಾಹಿತ್ಯ ಮತ್ತು ಇತರ ಒಲವುಗಳು ಎಂಬ ಗೋಷ್ಠಿಗೆ ಇಂಬು ನೀಡಿ ಹಿರಿ-ಕಿರಿಯ ಸಾಹಿತಿಗಳನ್ನೆಲ್ಲ ಬೆರಗುಗೊಳಿಸಿದರು. ಡಾ. ಹಂಪನಾ ಪ್ರಗತಿ ವಿರೋಧಿ ಎಂದಾಡಿಕೊಳ್ಳುತ್ತಿದ್ದವರೇ ಮುಂದೆ ಅವರ ಪ್ರಗತಿಪರ ಧೋರಣೆಯನ್ನು ಬಹಿರಂಗವಾಗಿಯೆ ಹೊಗಳಿದರು.

೧೯೭೯ರ ಧರ್ಮಸ್ಥಳದ ಸಾಹಿತ್ಯ ಸಮ್ಮೇಳನದಲ್ಲಿ ಹೊಮ್ಮಿದ ಡಾ. ಹಂಪನಾ ಅವರ ಜನಪರ ಧೋರಣೆ ಮುಂಬರುವ ವರ್ಷಗಳಲ್ಲಿ ಹುರಿಗೊಂಡುಗಟ್ಟಿಗೊಳ್ಳುತ್ತಲೇ ಬಂದಿತೆಂಬುದನ್ನು ನಂತರದ ಸಮ್ಮೇಳನಗಳು ಖಚಿತಪಡಿಸಿದವು. ಧರ್ಮಸ್ಥಳದ ಸಮ್ಮೇಳನದಲ್ಲಿ ದಲಿತ ಸಾಹಿತ್ಯ ಮತ್ತು ಇತರ ಒಲವುಗಳು ಎಂಬ ಗೋಷ್ಠಿಯಲ್ಲಿ ಶೋಷಣೆ ಮತ್ತು ದಬ್ಬಾಳಿಕೆಯನ್ನು ಖಂಡಿಸುವ ಸಾಹಿತ್ಯ ದಲಿತಸಾಹಿತ್ಯ, ಮಾರ್ಕ್ಸವಾದ ಮತ್ತು ಕನ್ನಡ ಸಾಹಿತ್ಯ, ಇಂದಿನ ಕನ್ನಡ ಸಾಹಿತ್ಯದ ಒಲವುಗಳು, ದಲಿತ ಅರಿವಿನ ಸ್ಫೋಟ-ಇವೇ ಮೊದಲಾದ ವಿಷಯಗಳನ್ನು ಕುರಿತು ವಿದ್ವತ್ ಪೂರ್ಣ ಪ್ರಬಂಧಗಳು ಮಂಡನೆಗೊಂಡವು.

ಮರುವರುಷ ೧೯೮೦ರಲ್ಲಿ (ಫೆಬ್ರವರಿ) ಬೆಳಗಾವಿಯಲ್ಲಿ ಜರುಗಿದ ಅಖಿಲ ಭಾರತ

೫೭ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲೂ ದಲಿತಗೋಷ್ಠಿಗೆ ಮಣೆಹಾಕಿದರು. ಅದರಲ್ಲಿ ಕರ್ನಾಟಕದಲ್ಲಿ ದಲಿತರ ಸಮಸ್ಯೆಗಳು, ದಲಿತ ಸಾಹಿತ್ಯ, ಹಿಂದೂ ಸಂಪ್ರದಾಯದಲ್ಲಿ ದಲಿತರು, ದಲಿತ ಸಾಹಿತ್ಯ-ವಿಷಯಗಳ ಮೇಲೆ ಪ್ರಬಂಧಗಳು ಮಂಡನೆಗೊಂಡವು.

೧೯೮೮ರಲ್ಲಿ ಪರಿಷತ್ತು ಚಿಕ್ಕಮಗಳೂರಲ್ಲಿ ೫೮ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಹಮ್ಮಿಕೊಂಡಿತು. ಅದರಲ್ಲೂ ದಲಿತ ಗೋಷ್ಠಿಗೆ ಆಸ್ಪದ ಮಾಡಿಕೊಟ್ಟರು. ಡಾ. ಕಮಲಾ ಹಂಪನಾ ಅವರೇ ಅದನ್ನು ಉದ್ಘಾಟಿಸಿದರು. ಅವರು ಧರ್ಮಸ್ಥಳದ ಸಮ್ಮೇಳನದಲ್ಲಾದ ಜನಪರವಾದ ದಲಿತಗೋಷ್ಠಿಯ ಹಿನ್ನೆಲೆಯನ್ನು ವಿವರಿಸಿ, "ಆಯಾ ಕಾಲದ ಜನಮನದ ಲೇಖಕರ ಪ್ರಗತಿಪರ ಧೋರಣೆಗಳು ಸಾಹಿತ್ಯಕ್ಕೆ ಸ್ಥಿತ್ಯಂತರ ತಂದು ಕೊಡುತ್ತವೆ. ಇದರಿಂದ ಸಾಹಿತ್ಯಕ್ಕೆ ಹೊಸ ಆಯಾಮ ಬರುತ್ತದೆ' ಎಂದು ಹೇಳಿ, ಕನ್ನಡ ಸಾಹಿತ್ಯಕ್ಕೆ ಹೊಸ ಚಲನೆ ಸಿಕ್ಕದ್ದು ದಲಿತ ಸಾಹಿತ್ಯದಿಂದ ಎಂದು ಪ್ರತಿಪಾದಿಸಿದರು. ಪ್ರಸ್ತುತ ಗೋಷ್ಠಿಯಲ್ಲಿ ಕನ್ನಡದಲ್ಲಿ ದಲಿತ ಸಾಹಿತ್ಯ, ಮರಾಠಿಯಲ್ಲಿ ದಲಿತ ಸಾಹಿತ್ಯ, ಮಲೆಯಾಳದಲ್ಲಿ ದಲಿತ ಸಾಹಿತ್ಯ ಹಾಗೂ ತೆಲುಗು ಭಾಷೆಯಲ್ಲಿ ದಲಿತ ಸಾಹಿತ್ಯ ಎಂಬ ವಿಷಯಗಳು ಮಂಡನೆಗೊಂಡು ತೌಲನಿಕ ಚಿಂತನೆಗೆ ಅವಕಾಶ ಮಾಡಿಕೊಟ್ಟಿತು. ವಿವಿಧ ಭಾಷೆಗಳಲ್ಲಿಯ ದಲಿತ ಸಾಹಿತ್ಯದ ಅವಲೋಕನಕ್ಕೆ ಆಸ್ಪದ ಲಭ್ಯವಾಗುವಂತಾಯ್ತು.

ಹೀಗೆ ಡಾ. ಹಂಪನಾ ತಮ್ಮ ಜನಪರ ಕಾಳಜಿಯ ರೀಲನ್ನು ವರ್ಷದಿಂದ ವರ್ಷಕ್ಕೆ ಬಿಚ್ಚುತ್ತಲೇ ಬಂದರೆಂಬುದು ವಿದಿತವಾಗುತ್ತದೆ. ಸಮ್ಮೇಳನದ ಗೋಷ್ಠಿಯಲ್ಲಿ ಪ್ರಸ್ತಾಪಿತ ಪ್ರಬಂಧಗಳು ಹಲವು ಹತ್ತು ಸಂಘಟನೆಗಳಲ್ಲಿ ವಿಚಾರ ಸಂಕಿರಣಗಳಲ್ಲಿ ಮತ್ತೆ ಮತ್ತೆ ಮೆಲುಕು ಹಾಕುವಂತಾದವು. ಆದರಿಂದ ಜನಪರ ಸಾಹಿತ್ಯ ವ್ಯಾಪಕ ರೂಪದಲ್ಲಿ ಕಾಣಿಸಿಕೊಳ್ಳುವಂತಾಯ್ತು.

ಡಾ. ಹಂಪನಾ ಕೇವಲ ಸಮ್ಮೇಳನಗಳಲ್ಲಿ ಮಾತ್ರ ದಲಿತಗೋಷ್ಠಿಗೆ ಎಡೆಮಾಡಿಕೊಟ್ಟು ತಮ್ಮ ಜನಪರ ಧೋರಣೆಯನ್ನು ಪ್ರಕಟಿಸಲಿಲ್ಲ. ಅವರು ಸಮಯೋಚಿತವಾಗಿ ತಮಗೆ ಬರುವ ಅವಕಾಶಗಳನ್ನು ಸೂಕ್ತವಾಗಿ ಬಳಸಿಕೊಂಡೂ ತಮ್ಮ ಜನಪರ ಕಾಳಜಿಯನ್ನು ಮೆರೆದಿರುವರೆಂಬುದು ತಿಳಿದು ಬರುತ್ತದೆ. ೧೯೭೯ರ ಡಿಶಂಬರ್ ೧೬ರಂದು ಅಂತಾರಾಷ್ಟ್ರೀಯ ಮಕ್ಕಳ ವರ್ಷದ ಅಂಗವಾಗಿ 'ದಲಿತ ಮಕ್ಕಳು' ಎಂಬ ವಿಚಾರ ಸಂಕಿರಣವನ್ನು ಏರ್ಪಡಿಸಿದರು. ಅದೇ ಸಂದರ್ಭದಲ್ಲಿ ದಲಿತರ ವಿಷಯವನ್ನೊಳಗೊಂಡ 'ದಲಿತ ಮಕ್ಕಳು' ಎಂಬ ಸಂಚಿಕೆಯನ್ನು ಪ್ರಕಟಿಸಿದರು. ಜನಪರ ಧೋರಣೆಯನ್ನು ಒಳಗೊಂಡ ಕನ್ನಡ ಪ್ರತಿಭಟನೆ ಕಾವ್ಯ, ಪವಾಡ ಪರೀಕ್ಷೆ, ಲೆನಿನ್, ಮೂಢನಂಬಿಕೆಗಳು, ಡಾ.ಬಿ.ಆರ್. ಅಂಬೇಡಕರ, ಕಾರ್ಲ್‌ಮಾರ್ಕ್ಸ್, ಮೊದಲಾದ ಗ್ರಂಥಗಳನ್ನು ಪ್ರಕಟಿಸಿ ಎಡಪಂಥೀಯರನ್ನು ಮೊದಲು ಮಾಡಿಕೊಂಡು ಸಾಹಿತಿಗಳ ಅಭಿನಂದನೆಗೆ ಪಾತ್ರರಾದರು. ಈ ಶತಮಾನದ ಕನ್ನಡ ಕಾವ್ಯ ನಡೆದು ಬಂದ ದಾರಿಯ ವಿಹಂಗಮ ನೋಟ ಬೀರುವಂಥ ಹಿರಿಕಿರಿಯ ಕವಿಗಳ 'ಹೊಸಗನ್ನಡ ಕವಿತೆ' ಎಂಬ ಸಂಕಲನವನ್ನು ಶ್ರೀ ಜಿ.ಎಚ್.ನಾಯಕ ಅವರ ಸಂಪಾದಕತ್ವದಲ್ಲಿ ಹೊರತರುವಲ್ಲಿಯೂ ಡಾ. ಹಂಪನಾ ಯಶಸ್ವಿಯಾಗಿದ್ದಾರೆ. 'ನಮ್ಮ ಲೇಖಕಿಯರು' ಎನ್ನುವ ಗ್ರಂಥ ಸಂಪಾದನೆಗೆ

ಎಡೆಮಾಡಿ ೨೨೪ ಹಿರಿ-ಕಿರಿಯ ಲೇಖಕಿಯರನ್ನು ಪರಿಚಯಿಸಿಕೊಟ್ಟಿದ್ದಾರೆ. ಬೆಂಗಳೂರು, ಗುಲಬರ್ಗಾಗಳಲ್ಲಿ ಲೇಖಕಿಯರ ಸಮ್ಮೇಳನ ಏರ್ಪಡಿಸಿದುದಲ್ಲದೆ ಅವರಿಗೆ ಕರ್ನಾಟಕದ ಪ್ರವಾಸ ಮಾಡಿಸಿದ ಕೀರ್ತಿಗೂ ಅವರು ಭಾಜನರಾಗಿದ್ದಾರೆ. ಡಾ. ಹಂಪನಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಸ್ಥಾನದಿಂದ ಬಿಡುಗಡೆ ಹೊಂದಿದ ಮೇಲೆ ತಮ್ಮ ಜನಪರವಾದ ಕನಸನ್ನು ನನಸಾಗಿಸಲೆಂಬಂತೆ ಜನಪರ ಸಾಹಿತ್ಯ ಪರಿಷತ್ತನ್ನು ಹುಟ್ಟುಹಾಕಿದರು. ಆಗ ಅನೇಕರು ಡಾ. ಹಂಪನಾ ಕನ್ನಡ ಸಾಹಿತ್ಯ ಪರಿಷತ್ತಿಗೆ ಪರ್ಯಾಯವಾದ ಸಂಘಟನೆಯನ್ನು ಸ್ಥಾಪಿಸಿದ್ದಾರೆಂದು ಮೂಗುಮುರಿದದ್ದುಂಟು. ಆದರೆ ಆನೆ ನಡೆದುದೇ ದಾರಿ ಎನ್ನುವಂತೆ ಡಾ. ಹಂಪನಾ ಜನಪರ ಸಾಹಿತ್ಯ ಪರಿಷತ್ತಿನ ಮೂಲಕ ವಿಚಾರ ಸಂಕಿರಣ ಸಮ್ಮೇಳನಗಳನ್ನು ಏರ್ಪಡಿಸುತ್ತ ಮುನ್ನಡೆದರು. ವೈಚಾರಿಕ ಗಾಳಿಯನ್ನೇ ಹೊಮ್ಮಿಸಿದರು.

೧೪-೧೧-೧೯೭೪ರಂದು ಆಗ ಕರ್ನಾಟಕರಾಜ್ಯದ ಸಚಿವರಾಗಿದ್ದ ಶ್ರೀ ಬಸವಲಿಂಗಪ್ಪನವರು ಮೈಸೂರಿನಲ್ಲಿ ಹೊಸ ಅಲೆ (New Wave) ಯನ್ನು ಕುರಿತು ಮಾತನಾಡುತ್ತ ನಮ್ಮ ವಿದ್ಯಾರ್ಥಿಗಳು ಬೇರೆ ಬೇರೆ ದೇಶದ ಕ್ರಾಂತಿಕಾರರ ಪುಸ್ತಕಗಳನ್ನು ಓದಿ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಬೇಕು. ಇದಿಲ್ಲದ ಸಾಹಿತ್ಯ ಬೂಸಾ ಎಂದು ಸಾಂದರ್ಭಿಕವಾಗಿ ನುಡಿದುದು, ಅದಾದ ಹತ್ತು ದಿನಗಳನಂತರ ಪತ್ರಿಕೆಯಲ್ಲಿ ಕನ್ನಡ ಸಾಹಿತ್ಯ ಬೂಸಾ ಎಂಬ ಹೇಳಿಕೆ ಪ್ರಕಟವಾಗಿ, ರಾಜ್ಯದಾದ್ಯಂತ ಗದ್ದಲವಾಗಿ ಅವರು ತಮ್ಮ ಮಂತ್ರಿಪದವಿಯನ್ನು ಕಳೆದುಕೊಂಡರೆಂಬುದು ಎಲ್ಲರೂ ತಿಳಿದ ವಿಷಯ. ಡಾ. ಹಂಪನಾ ಅವರಿಗೆ ಈ ವಿಷಯ ಮನದಲ್ಲಿಯೇ ಕೊರೆಯುತ್ತಲಿದ್ದಿತೆಂದು ಕಾಣುತ್ತದೆ. ಅಂತೆಯೆ ಅವರು ಜನಪರ ಸಾಹಿತ್ಯ ಸಮ್ಮೇಳನವನ್ನು ಸಿರಿಸಿ, ಬೆಂಗಳೂರು, ಧಾರವಾಡ, ಗುಲಬರ್ಗಾ ಮೊದಲಾದ ಕಡೆಗಳಲ್ಲಿ ನಡೆಸಿಸಿ ಬೂಸಾ ಸಾಹಿತ್ಯ ಕುರಿತಾಗಿ ವಿಚಾರ ಸಂಕಿರಣಗಳನ್ನೇರ್ಪಡಿಸಿದರು. ನಾಡಿನ ಖ್ಯಾತನಾಮರಾದ ಸಾಹಿತಿಗಳು ಅದರಲ್ಲಿ ಪಾಲುಗೊಳ್ಳುವಂತೆ ಮಾಡಿದರು. ಚರ್ಚೆಗೆ ಮುಕ್ತ ಅವಕಾಶ ಮಾಡಿಕೊಟ್ಟರು. ಸ್ವತಃ ಶ್ರೀ ಬಸವಲಿಂಗಪ್ಪನವರೂ ಸಹ ಅವುಗಳಲ್ಲಿ ಪಾಲುಗೊಳ್ಳುತ್ತಿದ್ದರೆಂಬುದನ್ನು ಅರಿತಾಗ ಅವುಗಳ ಮಹತ್ವದ ಮನನವಾಗುವದು.

ಡಾ. ಹಂಪನಾ ಇಂದಿಗೂ ಜನಪರವಾದ ದೃಷ್ಟಿಯನ್ನಿರಿಸಿಕೊಂಡೇ ಸಾಹಿತ್ಯ ಸೃಷ್ಟಿಯನ್ನು ಕೈಕೊಳ್ಳುತ್ತ ನಡೆದಿದ್ದಾರೆ. ಅವರ ಲೇಖನ ಭಾಷಣಗಳಲ್ಲಿ ಮಾನವೀಯತೆಯ ಮಿಡಿತ ಎದ್ದುಕಾಣುತ್ತದೆ; ಜನಪರ ಚಿಂತನೆ ಹರಳುಗಟ್ಟಿದೆ.

# ಹಂಪನಾ ಸಾಹಿತ್ಯ ಸಮೀಕ್ಷೆ

ಡಾ.ಎಸ್. ಪಿ. ಪದ್ಮಪ್ರಸಾದ್

ನಲವತ್ತು ವರ್ಷಗಳಷ್ಟು ದೀರ್ಘಕಾಲದಿಂದ ಬರವಣಿಗೆಯ ಕಾಯಕದಲ್ಲಿ ತೊಡಗಿಕೊಂಡಿರುವ ಹಂಪನಾ ಅವರ ಒಟ್ಟು ಕೃತಿಗಳ ಪಟ್ಟಿ ತಯಾರಿಸಲಿಕ್ಕೆ ಕೂತರೆ ಅವರಿಗೇ ಸ್ವತಃ ಈ ಲೆಕ್ಕ ತಪ್ಪುತ್ತದೇನೋ! ಕೂದಲುದುರಿದ ತಮ್ಮ ತಲೆಯಮೇಲೆ ಕೈಯಾಡಿಸಿಕೊಳ್ಳುತ್ತಾ ಎಲ್ಲ ನೆನಪುಮಾಡಿಕೊಂಡು ಹೇಳಲಿಕ್ಕೇ ಒಂದೆರಡು ದಿನ ಹಿಡಿಯುತ್ತದೆ. (ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯ ವಿಜ್ಞಾನದ ವಿದ್ಯಾರ್ಥಿನಿಯೊಬ್ಬಳು ತನ್ನ ಡೆಸರ್ಟೇಷನ್‌ಗಾಗಿ ಇವರ ಕೃತಿಗಳ ಬಿಬ್ಲಿಯೋಗ್ರಫಿ ತಯಾರಿಸಲೆಂದು ಇವರ ಮನೆಗೆ ಬಂದು ಮಾಹಿತಿಗಾಗಿ ಕೂತಾಗ ಅಗತ್ಯವಾದ ಎಲ್ಲ ತಾಂತ್ರಿಕ ಮಾಹಿತಿ ಒದಗಿಸಲು ಇವರು ಒಂದು ವಾರ ಹೆಣಗಾಡಿದ್ದಿದೆ.) ಪುಸ್ತಕಗಳ ಹೆಸರೇನೋ ನೆನಪಾಗುತ್ತದೆ. ಆದರೆ ಆ ಎಲ್ಲ ಪುಸ್ತಕಗಳೂ ಸಹ ಲೇಖಕರ ಬಳಿ ಕೂಡಾ ಒತ್ತಟ್ಟಿಗೆ ನೋಡಲು ಸಿಗುವುದಿಲ್ಲ. ಇನ್ನು ಲೇಖನಗಳು, ಮುನ್ನುಡಿಗಳು, ಇತ್ಯಾದಿಗಳನ್ನು ಒಂದುಗೂಡಿಸಿ, ವರ್ಗೀಕರಿಸಿ, ವಿಮರ್ಶಿಸುವುದಂತೂ ಅಸಾಧ್ಯದ ಮಾತು. ಚಿಕ್ಕಪುಟ್ಟವುಗಳನ್ನೂ ಸೇರಿಸಿ ಇವರು ಈ ವರೆಗೆ ಬರೆದಿರುವ ಲೇಖನಗಳ ಸಂಖ್ಯೆ ಮುನ್ನೂರನ್ನು ದಾಟಿರಬಹುದು. 'ಹಂಪನಾ ಕೃತಿಗಳು-ಒಂದು ಅಧ್ಯಯನ' ಎಂಬ ತಮ್ಮ ಶೋಧ ಪ್ರಬಂಧಕ್ಕಾಗಿ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಪಿಎಚ್.ಡಿ ಪಡೆದಿರುವ ಡಾ. ನಾಗಪ್ಪ ಚಲವಾದಿಯುವರು ತಮ್ಮ ನಿಬಂಧದಲ್ಲಿ ಇವರ 258 ಲೇಖನಗಳನ್ನು ಪಟ್ಟಿ ಮಾಡಿದ್ದಾರೆ. ಆದರೆ ಅದು 1987ರವರೆಗಿನದು ಮಾತ್ರ. ಆದರೀಚೆಗೆ 60-70 ಲೇಖನಗಳಾಗಿರಬಹುದು.

ಹೀಗೆ ಪರಿಶೀಲನ ಸಾಮಗ್ರಿ ಏಕತ್ರ ಲಭ್ಯವಿರದ ಸಂದರ್ಭದಲ್ಲಿ ಒಬ್ಬ ಲೇಖಕನ ಸಾಹಿತ್ಯದ ಸಮೀಕ್ಷೆ ಎಂದರೆ ಅವರ ಮುಖ್ಯ ಕೃತಿಗಳ ಆಧಾರದ ಮೇಲೆ ನಡೆಸುವ ಸಮೀಕ್ಷೆಯೇ ಆಗುತ್ತದೆ. ಹಾಗೂ ಒಬ್ಬ ಲೇಖಕನ ಮೌಲ್ಯಮಾಪನದ ಮೊದಲ ಘಟ್ಟಕ್ಕೆ ಇಷ್ಟು ಸಾಕು.

ಈವರೆಗೆ ಪ್ರಕಟವಾದ ಹಂಪನಾ ಕೃತಿಗಳ ಸಂಖ್ಯೆ ಅರವತ್ತಕ್ಕಿಂತ ತುಸು ಹೆಚ್ಚು. ಇವರಲ್ಲಿ ಅವರು ಏಕೈಕ ಅಥವಾ ಜಂಟಿ ಲೇಖಕರಾಗಿ ಪ್ರಕಟಿಸಿದ ಕೃತಿಗಳಷ್ಟೇ ಸೇರುತ್ತವೆ. ಪ್ರಧಾನ ಸಂಪಾದಕರಾಗಿ ಅವರು ಪರಿಶೀಲಿಸಿ, ತಿದ್ದಿ, ಪ್ರಕಟಿಸಿದ ಕೃತಿಗಳಾವುವೂ ಇಲ್ಲಿ ಸೇರುವುದಿಲ್ಲ. (ಹೀಗೆ ಪ್ರಧಾನ ಸಂಪಾದಕರಾಗಿ ಅವರು ಪ್ರಕಟಿಸಿದ ಕೃತಿಗಳ ಸಂಖ್ಯೆ ಸುಮಾರು ಮುನ್ನೂರು. ಇವುಗಳಲ್ಲಿ ಹೆಚ್ಚಿನವು-ಅವರು ಪರಿಷತ್ ಅಧ್ಯಕ್ಷರಾಗಿದ್ದಾಗ ಪ್ರಕಟಿಸಿದ ಮಕ್ಕಳ

ಪುಸ್ತಕಗಳು, ಜೆಳ್ಳಿ ಬಿಟ್ಟ ಬಳ್ಳಿ ಮಾಲೆಯ ಕೃತಿಗಳು ಹಾಗೂ ವಿಚಾರ ಸಂಕಿರಣ ಪ್ರಬಂಧಗಳು.) ಆ ಕೃತಿಗಳು ಹಂಪನಾ ಅವರ ಬರವಣಿಗೆಯ ಶಕ್ತಿಯ ಸಾಕ್ಷಿಗಳೇನಾಗುವುದಿಲ್ಲವಾದ್ದರಿಂದ ಅವನ್ನು ಇಲ್ಲಿ ಪರಿಶೀಲಿಸದೆ ಸಾರಾಸಗಟಾಗಿ ಕೈ ಬಿಡಲಾಗಿದೆ.

ಹಂಪನಾ ಅವರ ಈ ಅರವತ್ತರಷ್ಟು ಕೃತಿಗಳು ಹಾಗೂ ಬಿಡಿ ಲೇಖನಗಳು ಇವುಗಳ ಒಟ್ಟು ಪುಟಸಂಖ್ಯೆ ಎಷ್ಟಾದೀತೆಂದು ಹೇಳುವುದು ಕಷ್ಟವೇ. ಸ್ಥೂಲವಾದ ಲೆಕ್ಕದಲ್ಲಿ ಡೆಮಿ ಅಷ್ಟದಳಾಕಾರದ ಹದಿನೈದು ಸಾವಿರ ಪುಟಗಳಷ್ಟಾಗಬಹುದೇನೋ ! ತಾವು ಸಂಪಾದಿಸಿರುವ ಪ್ರಾಚೀನ ಕಾವ್ಯಗಳಿಗೆ ಅವರು ಬರೆದಿರುವ ವಿಸ್ತಾರವಾದ ಪ್ರಸ್ತಾವನೆ, ಅನುಬಂಧಗಳೇ ಒಟ್ಟು ಒಂದು ಸಾವಿರ ಅಚ್ಚಿನ ಪುಟಗಳಿಗೂ ಮೀರುತ್ತವೆ. ಓಲೆಗಳಿಂದ ಪ್ರತಿ ಮಾಡಿ ಪಾಠಾಂತರಗಳ ಸಹಿತ ಅವರು ಸಂಪಾದಿಸಿರುವ ಕಾವ್ಯದ ಪಠ್ಯಭಾಗಗಳೇ ಅಚ್ಚಿನಲ್ಲಿ ನಾಲ್ಕು ಸಾವಿರ ಪುಟಗಳಷ್ಟಾಗುತ್ತವೆ.

ಇರಲಿ, ಇವೆಲ್ಲ ಏನಿದ್ದರೂ ತಾಂತ್ರಿಕ ಕುತೂಹಲದ ಮಾಹಿತಿಗಳಾದವು. ಪುಟ ಅಥವಾ ಕೃತಿ ಸಂಖ್ಯೆಯಿಂದಲೇ ಯಾರೂ ದೊಡ್ಡ ಲೇಖಕರಾಗುವುದಿಲ್ಲ.

ಹಂಪನಾ ಕೃತಿರಾಶಿಯನ್ನು ನಾವು ಸ್ಥೂಲವಾಗಿ ಹೀಗೆ ವಿಭಾಗಿಸಿಕೊಳ್ಳಬಹುದು.




ಪ್ರತಿ ವಿಭಾಗದ ಕೃತಿಗಳನ್ನು ಅವಲೋಕಿಸಿ, ಆಯಾ ವರ್ಗದ ಬರವಣಿಗೆಯಲ್ಲಿ ಹಂಪನಾ ಅವರ ಸಾಮರ್ಥ್ಯ, ದೌರ್ಬಲ್ಯ ವೈಶಿಷ್ಟ್ಯಗಳು ಹೇಗೆ ಕಾಣುತ್ತವೆ ಎಂಬುದನ್ನು ಪರಿಶೀಲಿಸುವ ಕ್ಲಿಷ್ಟ ಕಾರ್ಯಕ್ಕೆ ಈಗ ಮುಂದಡಿಯಿಡಬೇಕಾಗುತ್ತದೆ. ತುಂಬ ತಜ್ಞರಾಗಿರುವವರೇ ಮಾಡಬೇಕಾಗಿರುವ ಕೆಲಸವಿದು. ಮೇಲೆ ನೀಡಿರುವ ವರ್ಗೀಕರಣ ಚಿತ್ರವೇ ಹಂಪನಾ ಅವರ ಬರವಣಿಗೆ ಕ್ಲಿಷ್ಟ ಕ್ಷೇತ್ರಗಳಲ್ಲೇ ನಡೆದಿದೆ ಎಂಬುದನ್ನು ಸೂಚಿಸುತ್ತದೆ. ಇಂಥ ಬರವಣಿಗೆಯ

ಮೌಲ್ಯ ಮಾಪನ ಸುಲಭವಲ್ಲ. (ಆದ್ದರಿಂದಲೇ ಇದನ್ನು ಸಮೀಕ್ಷೆ ಎಂದಿಲ್ಲಿ ಕರೆಯಲಾಗಿದೆ.) ಆದರೆ ಎಲ್ಲಾದರೂ ಒಂದು ಕಡೆ ಯಾರಿಂದಲಾದರೂ ಆರಂಭವಾಗಲೇಬೇಕಲ್ಲ!

**ಸಂಪಾದಿತ ಕೃತಿಗಳು**

ಹಂಪನಾ ಅವರ ಪ್ರಕಟಿತ ಕೃತಿಗಳಲ್ಲಿ ಇವುಗಳದ್ದು ತುಂಬ ಮುಖ್ಯವಾಗಿ ಗಣನೆಯಲ್ಲಿ ತೆಗೆದುಕೊಳ್ಳಬೇಕಾದ ಗುಂಪು. ಈ ಸಂಪಾದಿತ ಕೃತಿಗಳಲ್ಲಿಯೂ ಎರಡು ಗುಂಪು ಮಾಡಬಹುದು :

**1. ಹಳೆಯ ಕಾವ್ಯಗಳ ಗ್ರಂಥ ಸಂಪಾದನೆ**

ನಾಗಕುಮಾರ ಷಟ್ಪದಿ, ಸಾಳ್ವಭಾರತ, ಭರತೇಶ ವೈಭವ, ಚಂದ್ರಸಾಗರವರ್ಣಿಯ ಕೃತಿಗಳು, ಧನ್ಯಕುಮಾರ ಚರಿತೆ, ವಡ್ಡಾರಾಧನೆ, ನೋಂಪಿಯ ಕತೆಗಳು-ಈ ಏಳು ಕೃತಿಗಳು ಈ ವಿಭಾಗದಲ್ಲಿ ಬರುತ್ತವೆ. ಇವುಗಳನ್ನೆಲ್ಲ ಓಲೆಗರಿಗಳ ಆಧಾರದಿಂದ ಸಂಪಾದಿಸಿ ವಿಸ್ತೃತ ಪೀಠಿಕೆ, ಅನುಬಂಧಗಳೊಡನೆ ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸಿದ್ದಾರೆ.

**2. ಹೊಸಗನ್ನಡ ಕೃತಿಗಳು**

ಈ ಗುಂಪಿನಲ್ಲಿ ಸ್ಮರಣ ಸಂಚಿಕೆಗಳು, ಆ ಮಾದರಿಯ ಇತರ ಕೃತಿಗಳು ಬರುತ್ತವೆ. ದಿವ್ಯ ಧ್ವನಿ, ಇಂಥವೆಲ್ಲ ಇದರಲ್ಲಿ ಬರುತ್ತವೆ. ಇದರಲ್ಲಿ ಹಂಪನಾ ಅವರ ಶ್ರಮವಿದೆ. ಬರವಣಿಗೆಯೂ ಹೆಚ್ಚು ಕಡಿಮೆ ಪ್ರಮಾಣದಲ್ಲಿರುತ್ತದೆ. ಆದರೆ ಅವರ ಪ್ರತಿಭೆಯ ಸೂಚಕಗಳು ಇವು ಆಗಲಾರವು. ಅವರ ಓದು, ವಿದ್ವತ್ತು, ವಿಮರ್ಶಾಸಾಮರ್ಥ್ಯಗಳಿಗೆ ಇಲ್ಲಿ ಎಡೆಯಿಲ್ಲ.

ಈ ಎರಡನೇ ಗುಂಪಿನ ಕೃತಿಗಳನ್ನು ಪೂರ್ಣವಾಗಿ ನಿರ್ಲಕ್ಷಿಸಿ ಮೊದಲ ವರ್ಗದ ಕೃತಿಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಕೆಲವು ಮಾತುಗಳನ್ನಿಲ್ಲಿ ಹೇಳಬಹುದು.

1. ಗ್ರಂಥ ಸಂಪಾದಕರಾಗಿ ಹಂಪನಾ ಸಂಪಾದಿಸಿರುವ ಎಲ್ಲ ಕಾವ್ಯಗಳೂ ಜೈನ ಧಾರ್ಮಿಕ ಕಾವ್ಯಗಳು. ಹಾಗೂ (ಜಂಟಿಯಾಗಿ ದುಡಿದ) ಭರತೇಶ ವೈಭವವೊಂದನ್ನು ಬಿಟ್ಟರೆ ಉಳಿದೆಲ್ಲವೂ ಅಪ್ರಸಿದ್ಧ ಕವಿಗಳ ಕೃತಿಗಳು ಹಾಗೂ ಆ ಮುನ್ನ ಅಪ್ರಕಟಿತವಾಗಿದ್ದವುಗಳು. ಈಚೆಗೆ (1993) ಪ್ರಕಟವಾದ ವಡ್ಡಾರಾಧನೆ ಒಂದು ಇದಕ್ಕೆ ಅಪವಾದ. ಅದು ಪ್ರಕಟಿತವೂ ಹೌದು, ಪ್ರಸಿದ್ಧವೂ ಹೌದು.

2. ಸ್ವತಃ ತನ್ನ ಧರ್ಮಕ್ಕೆ ಸಂಬಂಧಿಸಿದ ಕೃತಿಗಳ ಬಗ್ಗೆ ಮೌಲ್ಯಮಾಪನ ಮಾಡುವಾಗಲೂ ವಸ್ತುನಿಷ್ಠತೆಯನ್ನು ಬಿಟ್ಟುಕೊಟ್ಟಿಲ್ಲ. ತೀರಾ ಸ್ಪಷ್ಟ ಮಾತುಗಳಲ್ಲಿ ಆ ಕೃತಿ ಕವಿ ಯಾವ ಮಟ್ಟದ್ದೆಂಬುದನ್ನು ಹೇಳಿರುತ್ತಾರೆ.

ಉದಾ :

1. "ಈತ ಇಷ್ಟು ಸಂಖ್ಯೆಯ ಕೃತಿಗಳನ್ನು ರಚಿಸಿದ್ದರೂ ಕನ್ನಡದ ಒಬ್ಬ ಮಹತ್ವದ ಕವಿ ಎನ್ನಿಸಿಕೊಳ್ಳುವುದಿಲ್ಲ." (ಚಂದ್ರಸಾಗರವರ್ಣಿಯ ಕೃತಿಗಳು. ಪು. ೧೮)

2. "ಆದಿಯಪ್ಪ ಕವಿ ಈ ಕಾವ್ಯವನ್ನು ನೂತನ ರೀತಿಯಲ್ಲಿ ನೆಯ್ದಿಲ್ಲ. ಅಂಥ ಅಪೇಕ್ಷೆಯೂ ಅವನಿಗಿಲ್ಲ. ಆತ ಅಷ್ಟೇನೂ ಉನ್ನತ ವ್ಯಾಸಂಗ ಮಾಡಿದವನೂ ಅಲ್ಲ. ಚೈತ್ಯಾಲಯದ ಆರ್ಚಕನಿಗೆ ಎಷ್ಟು ಬೇಕೋ ಅಷ್ಟನ್ನು ಅರಿತಿದ್ದ." (ಧನ್ಯ ಕುಮಾರ ಚರಿತೆ. ಪುಟ ೭)

3. "ಈ ತಪ್ಪನ್ನು ತಿದ್ದುವುದಕ್ಕೆಂದೇ ಹೊರಟ ಜೈನಕವಿಗಳೂ ಕೂಡ ಎಡವಿದ್ದಾರೆ. ಅವರು ಬಿಜ್ಜಳನನ್ನೇನೋ ಮೇಲೆ ಎತ್ತಿದರು ನಿಜ. ಆದರೆ ವಿಭೂತಿ ಪುರುಷ ಬಸವಣ್ಣನನ್ನು ನಿರ್ಲಕ್ಷಿಸಿದರು."(ಚಂದ್ರಸಾಗರ ವರ್ಣಿಯ ಕೃತಿಗಳು. ಪುಟ. ೧೯)

– ಇಂತಹ ಅನೇಕ ಮಾತುಗಳು ಈ ಗುಂಪಿನ ಕೃತಿಗಳಲ್ಲಿ ಹೇರಳವಾಗಿವೆ. ನಿಷ್ಪಕ್ಷಪಾತ ದೃಷ್ಟಿ, ಸಾಹಿತ್ಯದ ಉನ್ನತಿಕೆಯ ಮಾನದಂಡಗಳ ಅರಿವಿಲ್ಲದೆ ಇಂಥ ಮಾತುಗಳನ್ನಾಡುವದು ಸಾಧ್ಯವಿಲ್ಲ. ಇಂಥ ಮಾತುಗಳು ಹಂಪನಾ ಅವರ ವಸ್ತು ನಿಷ್ಠತೆಗಷ್ಟೇ ಅಲ್ಲದೆ ವಿಮರ್ಶಾ ಸಾಮರ್ಥ್ಯಕ್ಕೂ ಉದಾಹರಣೆಯಾಗುತ್ತವೆ.

3. ಕಾವ್ಯವೊಂದನ್ನು ಸಂಪಾದಿಸಿ ಅಚ್ಚಿಗೆ ಸಿದ್ಧಪಡಿಸುವುದೆಂದರೆ ಹಂಪನಾ ದೃಷ್ಟಿಯಲ್ಲಿ ಆ ಕೃತಿಯ ತೌಲನಿಕ ಮೌಲ್ಯಮಾಪನ ಮಾಡುವುದೂ ಸೇರಿದೆ. ಆದ್ದರಿಂದಲೇ ಪ್ರಸ್ತಾವನೆಯಲ್ಲಿ ತೌಲನಿಕ ವಿಮರ್ಶೆಯ ಎಷ್ಟೋ ಮಾತುಗಳು ಪ್ರತಿಯೊಂದು ಕೃತಿಯಲ್ಲೂ ಕಾಣುತ್ತವೆ. ಚಂದ್ರಸಾಗರವರ್ಣಿಯ ಕೃತಿಗಳನ್ನು ಸಂಪಾದಿಸಿ ವಿಮರ್ಶಿಸುವಾಗ ಅವನ ಭಾಷಾ ಬಳಕೆಯ ಬಗ್ಗೆ ಹೇಳುತ್ತಾ ಮುದ್ದಣನ ಅದೇ ಅಂಶದೊಡನೆ ಹೋಲಿಸುತ್ತಾರೆ. 'ಮುದ್ದಣ ಹೊಸಗನ್ನಡ ಕಾಲದಲ್ಲಿದ್ದೂ ಹಳಗನ್ನಡವನ್ನು ಬಳಸಿದವನು. ಚಂದ್ರಸಾಗರವರ್ಣಿ ತನ್ನ ಕಾಲದ ಪರಿಸರದ ಭಾಷೆಯನ್ನು ಎಗ್ಗಿಲ್ಲದೆ ಬಳಸಿದವನು' ಎಂಬರ್ಥದ ಮಾತುಗಳನ್ನು ಹೇಳುತ್ತಾರೆ. 'ಈತ ಪಂಪ ರನ್ನಾದಿಗಳ ಮಾತಂತಿರಲಿ, ತಾನು ಗುರುವೆಂದು ಆದರ್ಶವಾಗಿಟ್ಟುಕೊಂಡಿರುವ ಮಂಗರಸನ ಮಟ್ಟಕ್ಕೂ ಬರುವುದಿಲ್ಲ' ಎನ್ನುತ್ತಾರೆ. (ಚಂದ್ರಸಾಗರ ವರ್ಣಿಯ ಕೃತಿಗಳು. ಪುಟ ೧೩). ಆದರೂ ಆತ ಗಮನಾರ್ಹವಾಗುವುದು – 'ಆತ ಹೊಸಗನ್ನಡದ ಮುಂಗೋಳಿಯಾಗಿರುವುದರಿಂದ' ಎನ್ನುತ್ತಾ ಅದಕ್ಕೆ ಬೇಕಾದಷ್ಟು ಉದಾಹರಣೆಗಳನ್ನೂ ನೀಡುತ್ತಾರೆ. ಆದಿಯಪ್ಪ ಕವಿಯ 'ಧನ್ಯಕುಮಾರ ಚರಿತೆ'ಯನ್ನು ಸಂಪಾದಿಸುತ್ತಾ ಅದರ ಪೀಠಿಕೆಯಲ್ಲೂ ಇಂಥ ತುಲನೆ ಮಾಡುತ್ತಾರೆ. 'ಇಲ್ಲಿ ಧನ್ಯಕುಮಾರನ ತಾಯಿ ಪ್ರಲಾಪಿಸುವ ಸಂದರ್ಭ ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿನ ಚಂದ್ರಮತಿ ಪ್ರಲಾಪದ ಪಡಿನೆರಳಿನಂತಿದೆ. (ಪು.೯). ರತ್ನಾಕರನ ಹಾಡುಗಳನ್ನು ಸಂಪಾದಿಸುತ್ತಾ 'ಭರತೇಶ ವೈಭವದಲ್ಲಿ ಶ್ರೇಷ್ಠನಾದ ಕವಿಯನ್ನು ಕಾಣುತ್ತೇವೆ. ಶತಕಗಳಲ್ಲಿ ಸೂಕ್ಷ್ಮಮನಸ್ಸಿನ ತಳಮಳ ಕಳವಳಗಳನ್ನು ನೋಡುತ್ತೇವೆ. ಹಾಡುಗಳಲ್ಲಿ ಭಕ್ತನಾದ ರತ್ನಾಕರನನ್ನು ಕಾಣುತ್ತೇವೆ' ಎನ್ನುತ್ತಾರೆ. ಈ ಹಾಡುಗಳ ಮೇಲೆ ದಾಸರ ಕೃತಿಗಳ, ಶರಣರ ವಚನಗಳ ಪ್ರಭಾವ, ಅದಕ್ಕೆ ಕಾರಣಗಳನ್ನೂ ಕುರಿತು ವಿವೇಚಿಸುತ್ತಾರೆ.

ಕಾವ್ಯದ ಮೌಲ್ಯಮಾಪನ ಗ್ರಂಥ ಸಂಪಾದಕನ ಕರ್ತವ್ಯಗಳಲ್ಲಿ ಒಂದೆಂಬುದು ಪ್ರಥಮ ದರ್ಜೆಯ ಗ್ರಂಥ ಸಂಪಾದನಕಾರರೆಲ್ಲರೂ ಒಪ್ಪಿ ಅನುಸರಿಸಿರುವ ಸೂತ್ರ. ಹಂಪನಾ ಕೂಡ ಈ ಕೆಲಸವನ್ನು ಸರಿಯಾಗಿಯೇ ಮಾಡಿದ್ದಾರೆ.

೪. ತಾವು ಸಂಪಾದಿಸುತ್ತಿರುವ ಕಾವ್ಯ ಕಥಾ ಪರಂಪರೆಯನ್ನು ವಿಶದವಾಗಿ ತಿಳಿಸುವುದು ಹಂಪನಾ ಅವರ ಪದ್ಧತಿ. ಈ ದೃಷ್ಟಿಯಲ್ಲಿ ಇವರು ಬಹುಶಃ ಅನನ್ಯರು. ಅನ್ಯ ಗ್ರಂಥ ಸಂಪಾದಕರು ತಮ್ಮ ತಮ್ಮ ಪ್ರಸ್ತಾವನೆಗಳಲ್ಲಿ ಈ ವಿಷಯವನ್ನು ತಿಳಿಸಿರುವುದುಂಟು. ಆದರೆ ಅದು ಇಲ್ಲಿರುವಷ್ಟು ವಿಶದವಾಗಿ ಅಲ್ಲ. ತಾವು ಪ್ರಕಟಿಸುತ್ತಿರುವ ಪ್ರಸ್ತುತ ಕಾವ್ಯದ ಕಥಾವಸ್ತುವಿನ ಪರಂಪರೆ, ಈ ಕಾವ್ಯ ರಚನೆಗೂ ಪೂರ್ವದಲ್ಲಿ ಈ ವಸ್ತುವನ್ನು ಹೊಂದಿದ್ದು ಕನ್ನಡ, ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿ ರಚನೆಯಾಗಿರುವ ಕಾವ್ಯಗಳು, ಕಥಾವಸ್ತುವಿನಲ್ಲಿ ಏನು ವ್ಯತ್ಯಾಸ ಎಂಬ ಎಲ್ಲ ವಿವರಗಳೂ ಆದಿನದವರೆಗೆ ಲಭ್ಯವಿರುವಷ್ಟು ಪೂರ್ಣ ಪ್ರಮಾಣದಲ್ಲಿ ಇವರ ಪ್ರಸ್ತಾವನೆಯಲ್ಲಿ ಕ್ರಮಬದ್ಧವಾಗಿ ಕಾಣಿಸಿಕೊಳ್ಳುತ್ತವೆ. ಧನ್ಯಕುಮಾರ ಚರಿತೆ, ನಾಗಕುಮಾರ ಷಟ್ಪದಿ, ಸಾಳ್ವಭಾರತಗಳಲ್ಲಿ ಈ ಲಕ್ಷಣವನ್ನು ಕಾಣಬಹುದು. ಶಾಸ್ತ್ರಗ್ರಂಥಗಳ ಸಂಪಾದನೆಯಲ್ಲೂ ಇದೇ ಪ್ರವೃತ್ತಿ. 'ತತ್ತ್ವಾರ್ಥಸೂತ್ರ ಲಘುವೃತ್ತಿ' (೧೯೭೫)ಯನ್ನು ಸಂಪಾದಿಸುತ್ತಾ ಅದಕ್ಕೆ ಬರೆದ ಪ್ರಸ್ತಾವನೆಯಲ್ಲೂ ಕೂಡಾ ತತ್ತ್ವಾರ್ಥಸೂತ್ರ ಗ್ರಂಥಕ್ಕೆ ಯಾವ ಯಾವ ಭಾಷೆಗಳಲ್ಲಿ ಯಾವ ಯಾವ ಕಾಲದಲ್ಲಿ ರಚಿತವಾದ ವ್ಯಾಖ್ಯಾನ ಗ್ರಂಥಗಳಾವುವು ಎಂಬುದರ ವಿವರ ಕೊಟ್ಟಿದ್ದಾರೆ. ಕನ್ನಡದ ಅನ್ಯ ಗ್ರಂಥ ಸಂಪಾದನಕಾರರಲ್ಲಿ ಈ ಬಗೆಗೆ ಇಷ್ಟೊಂದು ತಲಸ್ಪರ್ಶಿತೆ ಕಾಣುವುದಿಲ್ಲ.

೫. ಜೈನ ಆಚಾರ್ಯರುಗಳ ಪರಂಪರೆ, ಅವರುಗಳು ಯಾವ ಗಣ, ಗಚ್ಛ, ಬಳಿಗಳಿಗೆ ಸೇರಿದವರೆಂಬುದನ್ನು ಗೊತ್ತು ಹಚ್ಚುವುದು ತೀರಾ ಕ್ಲಿಷ್ಟಕರ ಕಾರ್ಯ. ಒಂದೇ ಹೆಸರಿನ ಹಲವು ಆಚಾರ್ಯರುಗಳು ಏಕಕಾಲದಲ್ಲಿ ಸಿಗುವುದುಂಟು. ಇಂಥಾದ್ದರಲ್ಲಿ ನಮ್ಮ ಕೈಯಲ್ಲಿರುವ ಕವಿ ಸ್ತುತಿಸಿರುವ ಆಚಾರ್ಯನಾರು ಎಂದು ಖಚಿತವಾಗಿ ಗುರುತಿಸುವುದು ಚಕ್ರಭೀಮನ ಕೋಟೆಯಲ್ಲಿ ಸುತ್ತಿದಂತೆ. ಆದರೆ ಹಂಪನಾ ಅಗತ್ಯವಿರುವಲ್ಲೆಲ್ಲಾ ಇದಕ್ಕೆ ಕೈಹಾಕುತ್ತಾರೆ. ಸಾಧ್ಯವಾದಷ್ಟು ಕೂಡ ನಿಧಾನವಾಗಿ ಸಾಗುತ್ತಾರೆ.

೬. ಸಮಗ್ರತೆ ಹಾಗೂ ತಲಸ್ಪರ್ಶಿತೆ-ಇವರ ಹುಚ್ಚು. ಹಾಗಾಗಿಯೇ ಇವರ ಪೀಠಿಕೆಗಳು, ಅನುಬಂಧಗಳು ಹೆಚ್ಚು ವ್ಯಾಪಕವೂ ಹೆಚ್ಚು ಹೆಚ್ಚು ಸಮಸ್ಯೆಗಳನ್ನು ಬಿಡಿಸುವ ಪ್ರಯತ್ನದವೂ ಆಗುತ್ತವೆ. ನಾಗಕುಮಾರ ಷಟ್ಪದಿ,ಹಾಗೂ ಸಾಳ್ವಭಾರತಕ್ಕೆ ಇವರು ಬರೆದಿರುವ ಪೀಠಿಕೆಗಳು ಇದಕ್ಕೆ ಉತ್ತಮ ಉದಾಹರಣೆಗಳು.

೭. ಗ್ರಂಥ ಸಂಪಾದನೆಗೆ ಸಂಬಂಧಿಸಿದಂತೆ ಹಂಪನಾ ಅವರು ಸರ್ವಕಾಲೀನ ಶ್ರೇಷ್ಠ ಗ್ರಂಥ ಸಂಪಾದಕರಾದ ದಿವಂಗತ ಡಾ.ಎ.ಎನ್. ಉಪಾಧ್ಯೆ ಅವರಿಂದ ತುಂಬ ಪ್ರಭಾವಿತರಾಗಿರುವಂತೆ ಕಾಣುತ್ತದೆ. ಇದರ ಜೊತೆಗೆ ತಮ್ಮ ಗುರುಗಳಾದ ದಿ.ಡಿ.ಎಲ್.ಎನ್. ಅವರ ಪಾಠಾಂತರ ವಿಷ್ಕರ್ಷಣಾ ಕ್ರಮವನ್ನೂ ಇವರು ಹೀರಿಕೊಂಡಿರಲು ಸಾಕು. ಆದರೆ ಉಪಾಧ್ಯೆ ಅವರ ಪ್ರಭಾವವೇ ಹೆಚ್ಚು. ತಮ್ಮ ಈ ಕೃತಿಗಳಿಗೆ ಪ್ರಸ್ತಾವನೆ ಅನುಬಂಧಗಳನ್ನು ಸಿದ್ಧಪಡಿಸುವಾಗ ಹಂಪನಾ ಅವರು ಅದರಲ್ಲಿ ಅಳವಡಿಸುವ ವಿಚಾರಗಳು, ಮುಳುಗುವ ಆಳ - ಇವೆಲ್ಲ ಉಪಾಧ್ಯೆ ಅವರು ತಾವು ಸಂಪಾದಿಸಿರುವ ಪ್ರಾಕೃತ ಕಾವ್ಯ ಕೃತಿಗಳ ಪ್ರಸ್ತಾವನೆಗಳಲ್ಲಿ ಅನುಸರಿಸಿರುವ ಮಾರ್ಗವನ್ನೇ ಹೋಲುತ್ತವೆ. ಕಾವ್ಯದಲ್ಲಿ ಉಲ್ಲೇಖಿತ ಶ್ಲೋಕಗಳ ಮೂಲ

ಆಕರವನ್ನು ಪತ್ತೆ ಹಚ್ಚಲು ಹೋಗುವುದು, ಆ ಮೂಲಕ ಕಾವ್ಯದ ಕಾಲವನ್ನು ನಿರ್ಣಯಿಸಲು ಯತ್ನಿಸುವುದು, ಉಪಾಧ್ಯೆ ಅವರ ಕ್ರಮಗಳಲ್ಲೊಂದು. ವೈಜ್ಞಾನಿಕವಾದ ಇದೇ ಮಾರ್ಗವನ್ನು ಹಂಪನಾ ಅವರೂ ಅನುಸರಿಸುತ್ತಾರೆ. ಆದರೆ ಇಲ್ಲಿ ಇನ್ನೂ ಒಂದು ಹೆಚ್ಚುಗಾರಿಕೆ ಇದೆ. ಕರ್ನಾಟಕದ ಜೈನ ಶಾಸನಗಳ ಬಗೆಗೆ ಹಂಪನಾ ಅವರಿಗೆ ಕರತಲಾಮಲಕವಾಗಿ ತಿಳಿದಿರುವಷ್ಟು ಬಹುಶಃ ಉಪಾಧ್ಯೆ ಅವರಿಗೆ ತಿಳಿದಿರಲಿಕ್ಕಿಲ್ಲ. ಈ ಸಿಟ್ಟಿನ ತಮ್ಮ ಅಧ್ಯಯನದ ಫಲವಾಗಿ ಕವಿಯ ಗುರು ಪರಂಪರೆ, ಆಶ್ರಯದಾತರು, ಅವರ ಸ್ಥಲ, ಕಾಲ ಇತ್ಯಾದಿಗಳ ಬಗೆಗೆ ಹಂಪನಾ ಸ್ವತಃ ಕರಾರುವಾಕ್ಕಾಗಿ ನಿರ್ಧರಿಸಬಲ್ಲವರಾಗುತ್ತಾರೆ. ಇಂಥ ಕೆಲವು ವಿಚಾರಗಳಲ್ಲಿ ದಿ. ಉಪಾಧ್ಯೆ ಅವರು ಕೆಜಿ ಕುಂದಣಗಾರರ ನೆರವು ಪಡೆಯುತ್ತಿದ್ದರೆಂಬುದು ಇಲ್ಲಿ ಗಮನಾರ್ಹ.

ತಮ್ಮ ಮೇಲೆ ದಿ. ಉಪಾಧ್ಯೆ ಅವರ ಕಾರ್ಯಶೈಲಿಯ ಪ್ರಭಾವ ಇರುವುದನ್ನೂ, ಉಪಾಧ್ಯೆ ಮಾರ್ಗದ ಶ್ರೇಷ್ಠತೆಯ ಬಗೆಗಿನ ತಮ್ಮ ಮೆಚ್ಚುಗೆಯನ್ನೂ ಹಂಪನಾ ಮುಚ್ಚಿಟ್ಟಿಲ್ಲ. ಒಂದಕ್ಕಿಂತ ಹೆಚ್ಚು ಸಂದರ್ಭದಲ್ಲಿ ಸಂಶೋಧನಾ ಕ್ರಮ ಕುರಿತ ತಿಳಿವಳಿಕೆಗಾಗಿ ತಾವು ಉಪಾಧ್ಯೆಯವರಿಗೆ ಋಣಿ ಎಂದು ಹೇಳಿಕೊಂಡಿದ್ದಾರೆ. ಇದಕ್ಕೆ ತೀರ ಈಚಿನ ಉದಾಹರಣೆ ಎಂದರೆ ಉಪಾಧ್ಯೆ ಅವರನ್ನು ಕುರಿತು ಇವರೇ ಬರೆದಿರುವ ಪುಟ್ಟ ಪುಸ್ತಕ. (ಪ್ರ : ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ. ೧೯೯೬)

'ಉಪಾಧ್ಯೆ ಪಂಥ'ವನ್ನು ಕುರಿತ ಹಂಪನಾ ಅವರ ಈ ಪ್ರೀತಿ, ಅದರಲ್ಲಿನ ವೈಜ್ಞಾನಿಕತೆಯ ಕಾರಣದಿಂದಾಗಿ ಬಂದದ್ದು. ಪ್ರಾಚೀನ ಸಾಹಿತ್ಯದ ಶ್ರೇಷ್ಠ ಸಂಪಾದನಕಾರರೆಲ್ಲ ಈಗ ಅನುಸರಿಸುತ್ತಿರುವುದು ಈ ಪಂಥವನ್ನೇ.

8. ಕೃತಿಯ ಬಗೆಗಿನ ಆರಾಧನಾಭಾವ ಸಹ ಎಲ್ಲಿಯೂ ಕಾಣಿಸುವುದಿಲ್ಲ. ಇದು ಹಂಪನಾ ಅವರ ಗ್ರಂಥಸಂಪಾದನೆಯಲ್ಲಿ ಕಾಣುವ ಇನ್ನೊಂದು ಲಕ್ಷಣ. ಆ ಕೃತಿಯ ಧೋರಣೆಯನ್ನೂ ಟೀಕಿಸುವ ಸಂಪಾದಕ ವಿಮರ್ಶಕ ಹಂಪನಾ ನಮಗೆ ಅಲ್ಲಲ್ಲಿ ಕಾಣಸಿಗುತ್ತಾರೆ ಉದಾ 'ಗ' ನೋಂಪಿಯ ಕತೆಗಳು ಕೃತಿಯ ಪ್ರಸ್ತಾವನೆಯನ್ನು ನೋಡಬಹುದು. ಆ ಕತೆಗಳಲ್ಲಿ ಕಾಣುವ ವಾತಾವರಣವನ್ನು ಕುರಿತು 'ಇಲ್ಲಿ ಕಾಣುವುದು ಕೇವಲ ಶ್ರೀಮಂತವಾದ ರಾಜಪರವಾದ ವಾತಾವರಣ' ಎಂದು ಬಿಚ್ಚುಮನಸ್ಸಿನಿಂದ ನುಡಿಯುತ್ತಾರೆ.

9. 'ಭ್ರಾಜಿಷ್ಣು ಕೃತ ವಡ್ಡಾರಾಧನೆ' ಇವರ ಸಂಪಾದಿತ ಕೃತಿಗಳ ಪೈಕಿ ಪ್ರತ್ಯೇಕವಾಗಿಯೇ ಹೆಸರಿಸಬೇಕಾದದ್ದು. ಕನ್ನಡದ ಈ ಅಪೂರ್ವ ಕೃತಿಯನ್ನು ಕುರಿತು, ಅದರ ಕರ್ತೃತ್ವ ಕಾಲ, ಮೂಲಗಳನ್ನು ಕುರಿತು ಇಲ್ಲಿವರೆಗೆ ಹಲವು ಚರ್ಚೆಗಳು ನಡೆದಿವೆ. ಉಳಿದವರು ಚರ್ಚೆಯನ್ನು ಅಲ್ಲಲ್ಲಿಗೇ ಕೈಬಿಟ್ಟರೂ ಸಹ ಹಂಪನಾ ಭೇತಾಳನಂತೆ ಬೆನ್ನು ಹತ್ತಿದ್ದರ ಫಲವಾಗಿ ದೊರೆತ ಹೊಸದೊಂದು ಓಲೆಗರಿ ಪ್ರತಿಯಲ್ಲಿ ಹಲವಾರು ಭಿನ್ನ ಪಾಠಾಂತರಗಳೂ, ಕೃತಿಕಾರ ಭ್ರಾಜಿಷ್ಣು ಎಂಬ ವಿವರವೂ ದೊರೆತವು. ಇದನ್ನು ಸಂಪಾದಿಸಿ ಬೆಂಗಳೂರು ವಿಶ್ವವಿದ್ಯಾಲಯದ ಮೂಲಕ 1993ರಲ್ಲಿ ಪ್ರಕಟಿಸಿದರು.

ಈ ಕೃತಿಗೆ ಅವರು ಐವತ್ನಾಲ್ಕು ಪುಟಗಳ ಪ್ರಸ್ತಾವನೆ ಬರೆದಿದ್ದಾರೆ. ರೂಢಿಯ, ಸರ್ವತ್ರ ಒಪ್ಪಿತವಾಗಿದ್ದ ಪಾಠಗಳಿಗಿಂತ ಭಿನ್ನವಾದ ಪಾಠಗಳನ್ನು ಇದು ಹೊಂದಿರುವ ಬಗೆಗೆ ಪ್ರಸ್ತಾವನೆಯಲ್ಲಿ ದೀರ್ಘ ವಿವರವಿದೆ. ಜೊತೆಗೆ ಜೈನ ಸಿದ್ಧಾಂತದ ಪ್ರಕಾರ ಮರಣದ ವೈವಿಧ್ಯಗಳು. ಈ ಬಗ್ಗೆ ಹೇಳುವ ಆರಾಧನಾ ಗ್ರಂಥದ ಭಾಗಗಳು, ಅಲ್ಲಿ ಬರುವ ಕಥೆಗಳು, ಪ್ರಾಕೃತದಲ್ಲಿರುವ ಈ ಗ್ರಂಥಗಳ ಟೀಕೆಗಳ ವಿವರ, ಕವಿ ಭ್ರಾಜಿಷ್ಣುವಿನ ಬಗ್ಗೆ ಪೂರ್ಣ ವಿವರ, ಅದಕ್ಕೆ ಆಧಾರಗಳು, ಅವನ 'ಆರಾಧನಾ ಕರ್ಣಾಟ ಟೀಕಾ'ದ ಸಾಹಿತ್ಯಕ ಮೌಲ್ಯ, ಇವುಗಳ ಬಗ್ಗೆ, ವಿಮರ್ಶಾತ್ಮಕವಾಗಿ ಆಧಾರಸಹಿತವಾಗಿ ಹೇಳುತ್ತಾರೆ. ಈ ಕೃತಿಯ ಮೂಲಕ ಕನ್ನಡ ಸಾಹಿತ್ಯ ಚರಿತ್ರೆಯ ಬಹುದೊಡ್ಡ ಲೋಪವೊಂದನ್ನು ಸರಿಪಡಿಸಿದ ಶ್ರೇಯಸ್ಸು ಹಂಪನಾ ಅವರದ್ದು.

10. ಹಂಪನಾ ಅವರ ಗ್ರಂಥ ಸಂಪಾದನೆಯಲ್ಲಿ ಕಂಡುಬರುವ ಇನ್ನೊಂದು ಮುಖ್ಯಾಂಶವೆಂದರೆ-ಅವರು ಒಪ್ಪಿರುವ ಪಾಠಗಳು ನಿಷ್ಕೃಷ್ಟವಾಗಿರುವುದು. ಅಡಿಟಿಪ್ಪಣಿಯಲ್ಲಿ ಕೊಟ್ಟಿರುವ ಪಾಠಗಳನ್ನೂ, ಸ್ವೀಕೃತ ಪಾಠವನ್ನೂ ಹೋಲಿಸಿ ನೋಡಿದಾಗ ಅವರು ಸ್ವೀಕರಿಸಿರುವ ಪಾಠವೇ ಸಾಧು ಎಂಬುದು ನಮಗೆ ಮನವರಿಕೆಯಾಗುತ್ತದೆ. ಇದು ಕೇವಲ ಈ ಕೃತಿಗಳ ಬಗೆಗಷ್ಟೇ ಅಲ್ಲ, ಪ್ರಕಟಿತ ಅನ್ಯಕಾವ್ಯಗಳಲ್ಲಿನ ಕೆಲವು ಸ್ವೀಕೃತ ಪಾಠಗಳ ಬಗ್ಗೆ ತಮ್ಮ ಭಿನ್ನಾಭಿಪ್ರಾಯ ವ್ಯಕ್ತಪಡಿಸಿ, ಅಲ್ಲಿ ಅಡಿಟಿಪ್ಪಣಿಯಲ್ಲಿ ಆ ಸಂಪಾದಕರು ನೀಡಿರುವ ಪಾಠಾಂತರವೇ ಹೆಚ್ಚು ಒಪ್ಪತಕ್ಕದ್ದೆಂಬ ನಿಲುವನ್ನು ಪ್ರಕಟಿಸಿರುವುದುಂಟು. ಈ ವಿಷಯದಲ್ಲಿನ ಇವರ ವಾದವು ಒಪ್ಪಬೇಕಾದಂಥ ರೀತಿಯಲ್ಲಿರುವುದೇ ಹೆಚ್ಚು. ಒಬ್ಬ ಗ್ರಂಥ ಸಂಪಾದಕನಿಗೆ ಇದಕ್ಕಿಂತ ದೊಡ್ಡ ಯಶಸ್ಸು ಬೇರೆ ಬೇಕಿಲ್ಲ. ಆದರೆ ಈ ಯಶಸ್ಸಿನ ಹಿಂದೆ-ಭಾಷೆ, ಛಂದಸ್ಸು, ವ್ಯುತ್ಪತ್ತಿ ಶಾಸ್ತ್ರಗಳ ಮೇಲಿನ ಪ್ರಭುತ್ವ ಇವು ಕೆಲಸ ಮಾಡಿರುತ್ತವೆ. ಇವು ಸುಲಭದಲ್ಲಿ ಕೈವಶವಾಗುವಂಥದಲ್ಲ.

**2. ಸಂಶೋಧನ ಕೃತಿಗಳು**

ಹಂಪನಾ ಗಮನಾರ್ಹ ಲೇಖಕರಾಗಿ ಉಳಿಯುವಂತೆ ಮಾಡಿರುವ ಅವರ ಕೃತಿಗಳ ಇನ್ನೊಂದು ವಿಭಾಗವಿದು. ವಾಸ್ತವವಾಗಿ ಹಿಂದಿನ ವಿಭಾಗದಲ್ಲಿ ಚರ್ಚಿಸಿರುವ ಅವರ ಸಂಪಾದಿತ ಕಾವ್ಯಗಳೆಲ್ಲವೂ ಸಂಶೋಧನ ಕೃತಿಗಳೆಂಬ ಪರಿಗಣನೆಗೆ ಅರ್ಹವಾದವುಗಳೇ. ಆದರೆ ಅಲ್ಲಿ ಕಾವ್ಯಸಂಪಾದನೆಯೂ ಪ್ರಮುಖವಾಗಿ ಸೇರಿಕೊಂಡಿರುವುದರಿಂದ ಅದಿಲ್ಲದ ಸಂಶೋಧನ ಕೃತಿಗಳನ್ನು ಗುರುತಿಸಲು ಹೀಗೊಂದು ವಿಭಾಗವನ್ನು ಪ್ರತ್ಯೇಕವಾಗಿ ಹೆಸರಿಸಬೇಕಾಗಿದೆ.

ಹಿಂದೆಯೇ ಹೇಳಿರುವಂತೆ ಈ ವಿಭಾಗದಲ್ಲಿ ಮೂರು ಗುಂಪುಗಳಿವೆ :

1. ಸಾಹಿತ್ಯ, ಧರ್ಮ, ಇತಿಹಾಸಗಳಿಗೆ ಸಂಬಂಧಿಸಿದ ಸಂಶೋಧನ ಕೃತಿಗಳು. 2. ಭಾಷಾ ವಿಜ್ಞಾನ ಕೃತಿಗಳು, 3. ಜಾನಪದ ಕೃತಿಗಳು.

ಈ ಪೈಕಿ ಎರಡು ಮತ್ತು ಮೂರನೇ ಗುಂಪಿನ ಕೃತಿಗಳನ್ನು ಸಂಶೋಧನ ಕೃತಿಗಳೆಂದು ಲೇಖಕರು ಎಲ್ಲಿಯೂ ಹೇಳಿಕೊಂಡಿಲ್ಲ. ಆದರೂ ಅಲ್ಲಿನ ವಿಷಯ ಸಂಗ್ರಹಣೆ, ವಿಶ್ಲೇಷಣೆ

ಮತ್ತು ವಿಚಾರಮಂಡನೆಯಲ್ಲಿ ಸಂಶೋಧನ ಪ್ರತಿಭೆಯೇ ಪ್ರಧಾನ ಪಾತ್ರ ವಹಿಸಿದೆ. ಆದ್ದರಿಂದ ಅವನ್ನೂ ಈ ವಿಭಾಗದಲ್ಲಿ ಸೇರಿಸುವುದು ತಪ್ಪೇನೂ ಆಗುವುದಿಲ್ಲ.

**ಅ. ಭಾಷಾವಿಜ್ಞಾನ ಕೃತಿಗಳು**

ಈ ಪೈಕಿ ಭಾಷಾ ವಿಜ್ಞಾನ ಸಂಬಂಧಿ ಕೃತಿಗಳು ಸಾಕಷ್ಟು ಪ್ರಚಾರ ಪಡೆದಿವೆ. ಹಂಪನಾ ಅವರ ಹೆಸರು ಮೊದಲ ಬಾರಿಗೆ ಪ್ರಸಿದ್ಧಿಯಾದದ್ದು ಈ ವರ್ಗದ ಅವರ-ಭಾಷಾವಿಜ್ಞಾನ ಹಾಗೂ ದ್ರಾವಿಡ ಭಾಷಾ ವಿಜ್ಞಾನ ಕೃತಿಗಳ ಮೂಲಕವೇ. ಈ ವಿಷಯ ಕುರಿತಂತೆ ಕನ್ನಡದಲ್ಲಿ ಬಂದ ಮೊದಲ ವಿಸ್ತೃತ ಕೃತಿಗಳು ಇವು ಎನ್ನುವುದು ಇವುಗಳ ಆಗಿನ ಹೆಗ್ಗಳಿಕೆಯಾಗಿತ್ತು. ಇವನ್ನು ಬರೆದಾಗ ಲೇಖಕರಿಗೆ ಕೇವಲ ಮೂವತ್ತು ವರ್ಷ ವಯಸ್ಸು. ಅಲ್ಲಿಂದೀಚಿನ ಮೂವತ್ತು ವರ್ಷಗಳಲ್ಲಿ ಇವು ನಾಲ್ಕುಬಾರಿ ಮುದ್ರಣಗೊಂಡಿವೆ. ಪರಿಷ್ಕರಣೆಗೂ ಒಳಗಾಗಿವೆ. ಈ ಅವಧಿಯಲ್ಲಿ ಭಾಷಾವಿಜ್ಞಾನ ಕುರಿತಂತೆ ಕನ್ನಡದಲ್ಲಿ ಅನೇಕ ಪುಸ್ತಕಗಳು ಬಂದಿವೆ. ಅವೆಲ್ಲವುಗಳ ನಡುವೆ ಹಂಪನಾ ಅವರ ಈ ಕೃತಿಗಳನ್ನಿಟ್ಟು . ನೋಡಿದಾಗಲೂ ಇವು ಮಂಕಾಗುವುದಿಲ್ಲ. ಯಾಕೆ? ಅನಂತರದ ಕೃತಿಗಳು ಭಾಷಾವಿಜ್ಞಾನದ ಒಂದೊಂದು ಶಾಖೆಯನ್ನೆತ್ತಿಕೊಂಡು (ಉದಾ ವರ್ಣನಾತ್ಮಕ ಭಾಷಾವಿಜ್ಞಾನ, ಇತ್ಯಾದಿ), ಅನಂತರದಲ್ಲಿ ವಿದೇಶಗಳಲ್ಲಿ ನಡೆದಿರುವ ಸಂಶೋಧನೆಗಳ ವಿಚಾರಗಳನ್ನೂ ಅಳವಡಿಸಿ ಬರೆಯಲ್ಪಟ್ಟವು. ಇನ್ನೆಷ್ಟೋ ಕೃತಿಗಳು ಡಿಗ್ರಿ ತರಗತಿಯ ಪಠ್ಯ ಪುಸ್ತಕಗಳಿಗಿಂತ ಆಚೇಯವಾಗಬೇಕೆಂಬ ಅಭೀಪ್ಸೆಯನ್ನೇ ಇಟ್ಟುಕೊಂಡವಲ್ಲ (ಪಠ್ಯ ಪುಸ್ತಕದಂತೆ ಬರೆಯಬಾರದೆಂದು ಇದರರ್ಥವಲ್ಲ. ಅಷ್ಟೇ ಸಾಲದು ಎಂದಷ್ಟೇ ಇದರ ಭಾವ.) ದ್ರಾವಿಡ ಭಾಷಾ ವಿಜ್ಞಾನ ಹಾಗೂ ಭಾಷಾ ವಿಜ್ಞಾನ ಗಳಂತೆ ವಸ್ತುವಿನ ಸಮಗ್ರ ವಿವೇಚನೆಯ ಗುರಿ ಇಟ್ಟುಕೊಂಡವಲ್ಲ.

ಈ ಗ್ರಂಥಗಳ ರಚನೆಗಾಗಿ ಆವರೆಗೆ ಪ್ರಕಟವಾಗಿದ್ದ ಬಹುತೇಕ ಸಂಬಂಧಿ ಗ್ರಂಥಗಳ ಅವಲೋಕನ, ಡಿ.ಎಲ್.ಎನ್; ತೀ.ನಂ.ಶ್ರೀ.ಅವರ ಪಾಠ ಕೇಳಿದ್ದು, ಚರ್ಚಿಸಿದ್ದು, ತಾವು ಓದುವಾಗ, ಓದಿಸುವಾಗ ಮಾಡಿಟ್ಟುಕೊಂಡಿದ್ದ ಟಿಪ್ಪಣಿಗಳು ಎಲ್ಲದರ ಆಧಾರ ಪಡೆದಿದ್ದಾರೆಂಬುದು ಆಯಾ ಕೃತಿಗಳಲ್ಲಿಯೇ ಸ್ಪಷ್ಟವಾಗುತ್ತದೆ. ಆದರೆ ಎಲ್ಲ ವಿಚಾರಗಳನ್ನೂ ತೂಗಿ ನೋಡಿ, ಪರ ವಿರೋಧಾಂಶಗಳನ್ನು ಗಮನಿಸಿ ನಿರ್ಣಯ ಕೊಡುವ ಅನಿವಾರ್ಯ ಜವಾಬ್ದಾರಿ ಆಗ ಲೇಖಕರ ಹೆಗಲ ಮೇಲಿತ್ತು. ಚಿಕ್ಕ ವಯಸ್ಸಿಗೆ ಅದು ದೊಡ್ಡ ಹೊರೆ. ದ್ರಾವಿಡರ ಮೂಲ ನೆಲೆಯ ಬಗ್ಗೆ ಹೇಳುವಾಗ, ಆ ಶಬ್ದದ ವಿಶ್ಲೇಷಣೆ ಮಾಡುವಾಗ, ಮೂಲದ್ರಾವಿಡದಿಂದ ಭಾಷೆಗಳು ಕವಲೊಡೆದದ್ದನ್ನು ಹೇಳುವಾಗ, ಗ್ರಂಥದುದ್ದಕ್ಕೂ ಇರುವ ಶಬ್ದನಿಷ್ಪತ್ತಿ, ವ್ಯಾಕರಣ ವಿಚಾರಗಳನ್ನು ಹೇಳುವಾಗ ಈ ಜವಾಬ್ದಾರಿಯನ್ನು ನಿರ್ವಹಿಸುವಲ್ಲಿನ ನಿಶಿತಮತಿ ಎದ್ದು ಕಾಣುತ್ತದೆ. ಅನೇಕ ಭಾಷೆಗಳ ಬಗ್ಗೆ ದ್ರಾವಿಡ ಭಾಷಾ ವಿಜ್ಞಾನದಲ್ಲಿ ಸಿಗುವ ಮಾಹಿತಿ ತುಂಬ ಕಡಮೆ. (ಉದಾ : ಕೊಯ, ಕೂಬಿ, ಬಡಗ, ಗದಬ ಭಾಷೆಗಳು). ಆದರೆ ಗ್ರಂಥದ ಓದುಗರ ದೃಷ್ಟಿಯಿಂದ ಅಷ್ಟೇ ಸಾಕು - ಅಗಲೂ, ಈಗಲೂ ಸಹ ಎನಿಸುತ್ತದೆ.

ಈ ಎರಡೂ ಕೃತಿಗಳ ಬಗ್ಗೆ ವ್ಯಾಪಕ ಪ್ರಶಂಸೆ ಸಿಕ್ಕಿರುವಂತೆಯೇ ಕೆಲವು ಟೀಕೆಗಳೂ

ಕೇಳಿಬಂದಿವೆ. ನನಗೇ ನೆನಪಿರುವಂತೆ ಡಾ. ಚಿದಾನಂದಮೂರ್ತಿಗಳು ಪತ್ರಿಕೆಯೊಂದರಲ್ಲಿ ಬೇರಾವುದೋ ವಿವಾದದ ಬಗ್ಗೆ ಬರೆಯುತ್ತಾ ಈ ಪುಸ್ತಕದ ಬಗ್ಗೆ ಪ್ರಸ್ತಾಪಿಸಿ- 'ಈ ಪುಸ್ತಕ ತೀನಂಶ್ರೀ ಅವರಿಗೆ ತಲುಪಿದಾಗ ನಾನೂ ಅಲ್ಲಿದ್ದೆ. ಅವರು ಈ ಪುಸ್ತಕದ ಬಗ್ಗೆ ಏನೆಲ್ಲ ಹೇಳಿದರು ಎಂಬ ಮಾತು ಇಲ್ಲಿ ಬೇಡ' ಎಂದು ಬರೆದಿದ್ದರು. ಇರಬಹುದು. ಆದರೆ ಇದರಲ್ಲಿ ದೋಷಗಳಿವೆ ಎಂದು ಗುರುತಿಸಿದ ತಜ್ಞರು ಆ ಬಗ್ಗೆ ಒಂದು ವಿವರವಾದ ಲೇಖನ ಬರೆಯಬಹುದಿತ್ತಲ್ಲ? ಆ ಮೂಲಕ ಆ ವಿಷಯ ಕುರಿತ ಚರ್ಚೆಯನ್ನು ಬೆಳೆಸಿ ಅಭ್ಯಾಸಿಗಳಿಗೆ ಅನುಕೂಲವಾಗುವಂತೆ ಮಾಡಬಹುದಿತ್ತಲ್ಲ? ಚರ್ಚೆ ನಡೆಯದೆ ತಿಳಿವು ಮೂಡುವುದಾದರೂ ಹೇಗೆ?

ಈ ಟೀಕೆಗಳ ವಿಚಾರ ಹೇಗಾದರೂ ಇರಲಿ, ಡಾ. ಆ.ನೇ. ಉಪಾಧ್ಯೆ ಅವರು 'ದ್ರಾವಿಡ ಭಾಷಾ ವಿಜ್ಞಾನ'ದ ಬಗೆಗೆ ಅಲಿಗಢದಲ್ಲಿ ಆ ತರುಣದಲ್ಲಿ ನಡೆದ ಅಲ್ ಇಂಡಿಯಾ ಓರಿಯೆಂಟಲ್ ಕಾನ್ಫರೆನ್ಸ್‌ನ ಸರ್ವಾಧ್ಯಕ್ಷ ಸ್ಥಾನದಿಂದ ಆಡಿದ ಮಾತುಗಳು ಉಲ್ಲೇಖಾರ್ಹವಾಗಿವೆ.

"Professor H.P. Nagarajaiah has made a creditable attmept in his 'Dravida Bhashavijnana' to present Dravidian Linguistics in Kannada; indeed, a fist attempt of its kind in kannada. He has chosen a vast canvas for his coverage. He has rightly availed himself of the researches of scholor like Caldwell, Burrow, Emeneau, and others. He has a first hand knowledge of kannada. His discussion about proto-Dravidian phonemes and the phonetic system in Dravidian is a brillant disquisition. Many linguistic details about kannada in particular are covered in this work. This book not only enriches kannada language but also contributes a susbstantial discussion in Indian, especially Dravidian linguistics in one of our regional languages. Shri Nagarajaiah deserves our special greetings for this useful-a bit daring too-study which is sure to serve as a guide for all further workers in the field."

ಈ ಎರಡು ಕೃತಿಗಳು ಪಡೆದ ಮೆಚ್ಚುಗೆ, ಪ್ರಚಾರ ಪ್ರಸಾರಗಳ ಭರಾಟೆಯಲ್ಲಿ ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದ ಹಂಪನಾ ಅವರ ಉಳಿದ ನಾಲ್ಕು ಕೃತಿಗಳು ಮಸುಕಾಗಿಯೇ ಉಳಿದು ಬಿಟ್ಟವು. ಅವು ಯಾವುವೆಂದರೆ-ದ್ರಾವಿಡ ಸಂಖ್ಯಾವಾಚಕಗಳು (1972), ಭಾಷೆ (1977), ಭಾರತದ ಭಾಷಾ ಸಮಸ್ಯೆ (1968), ಮತ್ತು ಭಾಷಾವಿಜ್ಞಾನಿಗಳು. ಇವೂ ಕೂಡ ಮುಖ್ಯವಾದ ಕೃತಿಗಳೇ ಭಾಷೆ ಎಂಬ ಪುಟ್ಟ ಪುಸ್ತಕ ಭಾಷೆಯ ವ್ಯಾಖ್ಯೆ, ಲಕ್ಷಣಗಳನ್ನು ಒಂದು ನೂರು ಕಂಡಿಕೆಗಳಲ್ಲಿ ವಿವರಿಸುವ ಐವತ್ತು ಪುಟಗಳ ಕೃತಿ. ಇದೇನು ಇಷ್ಟು ಸಣ್ಣದನ್ನು ಪ್ರಕಟಿಸಿದ್ದಾರೆ ಎನಿಸುತ್ತದೆ. ಆದರೆ ಇದರ ತುಂಬ ಸಣ್ಣ, ಸ್ಪಷ್ಟ ವಾಕ್ಯಗಳು, ನಿರೂಪಣೆಯಲ್ಲಿ

ನಿರ್ದುಷ್ಟತೆ. ಉದಾಹರಣೆಗೆ ಧ್ವನಿ ಮತ್ತು ಅರ್ಥಗಳ ನಡುವಿನ ವ್ಯತ್ಯಾಸ ಹೇಳುವ ಈ ಮಾತುಗಳನ್ನು ನೋಡಿ.

'ಧ್ವನಿಗಳು ಒಂದಾದ ಮೇಲೊಂದರಂತೆ ಬರಬೇಕು. ಕಾಲದ ಕಟ್ಟಿನಲ್ಲಿ ಹರಿದು ಬರಬೇಕು. ಇವು ಉಚ್ಚಾರಣಾ - ಶ್ರವಣಾಂಶಗಳ ಉಪಾಧಿ ಪಡೆದಿರುತ್ತವೆ. ಅರ್ಥಗಳಿಗೆ ಈ ಬಗೆಯ ನಿರ್ಬಂದಗಳಿಲ್ಲ. ಅಂದರೆ - ಅರ್ಥಗಳು ಒಂದಾದ ಮೇಲೊಂದು ಬರಬೇಕಾದ್ದಿಲ್ಲ. ಕಾಲದ ಕಟ್ಟಿಗೆ ಒಳಪಡಬೇಕಾದ್ದಿಲ್ಲ' (ಭಾಷೆ ಪು. ೪೯)

ಇಡೀ ಪುಸ್ತಕದಲ್ಲಿ ಅನಗತ್ಯವಾದ ಎರಡು ವಾಕ್ಯಗಳೂ ಇಲ್ಲ; ಪುನರುಕ್ತಿಯೂ ಇಲ್ಲ. ಭಾಷಾವಿಜ್ಞಾನದ ಮುಖ್ಯ ವಿಚಾರಗಳು ಕನ್ನಡದಲ್ಲಿ ಕೆನೆಗಟ್ಟಿದಂತಿದೆ ಇಲ್ಲಿ. ಇಲ್ಲಿ ವಿವರಗಳು ಸಿಗದಿರಬಹುದು. ಮುಖ್ಯಾಂಶಗಳ ನಿರೂಪಣೆಗೆಂದೇ ಬರೆದ ಪುಸ್ತಕವಿದು. ವಿದ್ಯಾರ್ಥಿಗಳಿಗೆ, ಭಾಷಾ ವಿಜ್ಞಾನದಲ್ಲಿ ಮೊದಲ ಹೆಜ್ಜೆ ಇಡುವವರಿಗೆ ತುಂಬ ನೆರವಾಗಬಲ್ಲ ಕೃತಿ. ಒಂದೆರಡು ಕಡೆ ಭಿನ್ನಾಭಿಪ್ರಾಯಕ್ಕೆ ಅಸ್ಪದವಿದ್ದರೂ, ಒಟ್ಟಾರೆ ಗ್ರಾಹ್ಯವಾಗಿರುವ ಕೃತಿ.

'ದ್ರಾವಿಡ ಸಂಖ್ಯಾವಾಚಕಗಳು' ಒಂದು ಕಿರು ಹೊತ್ತಗೆ. ಬೆಂಗಳೂರು ವಿಶ್ವವಿದ್ಯಾಲಯದಿಂದ ಪ್ರಕಟವಾಗಿರುವುದು. ದ್ರಾವಿಡ ಭಾಷೆಯ ಸಂಖ್ಯಾವಾಚಕಗಳು ಹೇಗೆ ಸಂಸ್ಕೃತದಿಂದ ಭಿನ್ನ ಎಂಬುದನ್ನಿಲ್ಲಿ ತೌಲನಿಕವಾಗಿ ವಿವರಿಸಿದ್ದಾರೆ. ಈ ಸಿದ್ಧಾಂತ ಹಂಪನಾ ಅವರ ಅನ್ವೇಷಣೆ ಏನಲ್ಲ, ಆದರೆ ಇರುವ ವಿಚಾರವನ್ನು ಪಾರಿಭಾಷಿಕಗಳ ಗೋಜಿಲ್ಲದೆ, ಸಂದಿಗ್ಧತೆಗೆಡೆಯಿಲ್ಲದಂತೆ ಸಾಮಾನ್ಯರಿಗರ್ಥವಾಗುವಂತೆ ನಿರೂಪಿಸುವುದರಲ್ಲಿ ಲೇಖಕರು ಭಾಷೆ ಹಾಗೂ ವಿಷಯದ ಮೇಲೆ ಹೊಂದಿರುವ ಪ್ರಭುತ್ವ ಸಾಬೀತಾಗುತ್ತದೆ.

'ಭಾರತದ ಭಾಷಾ ಸಮಸ್ಯೆ' ಕುರಿತು ಎಷ್ಟು ಮಾತನಾಡಿದರೂ ಏನೂ ಬಗೆಹರಿಯುವುದಿಲ್ಲ. ಯಾಕೆಂದರೆ ರಾಜಕಾರಣದೊಡನಿರುವ ಗಂಟಿನಿಂದಾಗಿ ಇದು ಸಿಕ್ಕುಸಿಕ್ಕಾಗಿದೆ. ಈ ಸಮಸ್ಯೆ ಕುರಿತು ಹಂಪನಾ ತಮ್ಮ ಕಿರು ಕೃತಿಯಲ್ಲಿ ವಿವೇಚಿಸಿದ್ದಾರೆ. ಪ್ರಾಂತಗಳಲ್ಲಿ ಪ್ರಾಂತೀಯ ಭಾಷೆ ಆಡಳಿತದಲ್ಲಿರಬೇಕು, ಇಂಗ್ಲೀಷ್ ಸಂಪರ್ಕಭಾಷೆಯಾಗಿರಬೇಕು, ಹಿಂದಿಯನ್ನು ರಾಷ್ಟ್ರಭಾಷೆಯಾಗಿ ಬೆಳೆಸಬೇಕು ಎಂಬ ಅಭಿಪ್ರಾಯವನ್ನು ಇಲ್ಲಿ ಮಂಡಿಸಿದ್ದಾರೆ. ಈಗಲೂ ಅವರಿಗೆ ಇದೇ ಅಭಿಪ್ರಾಯ ಇದೆಯೋ ಇಲ್ಲವೋ ತಿಳಿಯದು. ಈ ಪುಸ್ತಕ ಪ್ರಕಟವಾದ ನಂತರ ೨೫ ವರ್ಷಗಳಲ್ಲಿ ಹಿಂದಿಯನ್ನು ಹಿತ್ತಲ ಬಾಗಿಲಿಂದ ಹೇರುತ್ತಿರುವುದರಿಂದ ಆಗುತ್ತಿರುವ ಅನಾಹುತವನ್ನು ಕಾಣುತ್ತಿರುವ ಅವರು ಉತ್ತರಭಾರತೀಯರು ಹೇಳುತ್ತಿರುವ ರೀತಿಯಲ್ಲಿ ಹಿಂದಿ ರಾಷ್ಟ್ರಭಾಷೆಯಾಗಬೇಕೆಂದು ಅಭಿಪ್ರಾಯ ಪಟ್ಟಿರಲಾರರು.

'ಭಾಷಾ ವಿಜ್ಞಾನಿಗಳು' ಸುಮಾರು ನಾಲ್ಕುನೂರು ಪುಟಗಳ ವ್ಯಾಪ್ತಿಯ ಗ್ರಂಥ. ಇಲ್ಲಿ ಅರವತ್ತೇಳು ಮಂದಿ ಭಾಷಾವಿಜ್ಞಾನಿಗಳ ಬದುಕಿನಲ್ಲಿ ಅವರು ಉಂಡ ನೋವುಗಳು ಇವನ್ನೂ ಹೃದಯಸ್ಪರ್ಶಿಯಾದ ಶೈಲಿಯಲ್ಲಿ ಲೇಖಕರು ಪರಿಚಯಿಸಿದ್ದಾರೆ. ಇಲ್ಲಿ ವ್ಯಾಕರಣ ಶಾಸ್ತ್ರಜ್ಞರು, ಧ್ವನಿಮಾ ಶಾಸ್ತ್ರಜ್ಞರು, ನಿಘಂಟುಕಾರರು ಇವರೆಲ್ಲ ಕೂಡ ಸೇರಿದ್ದಾರೆ. ಇವೆಲ್ಲ ಭಾಷಾ ವಿಜ್ಞಾನದ ಶಾಖೆಗಳೆಂದು ಪರಿಗಣಿತವಾಗಿವೆ. ಇಲ್ಲಿನ ಒಂದು ಜೀವನ ಚಿತ್ರಣಕ್ಕೆ ಬೇಕಾದ ಸಾಮಗ್ರಿ ಸಂಗ್ರಹಿಸುವಲ್ಲಿ ಲೇಖಕರು ಪಟ್ಟಿರುವ ಶ್ರಮ ಕೂಡ ಪ್ರಶಂಸನೀಯವಾದದ್ದು.

ಒಟ್ಟಾರೆಯಾಗಿ ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದಂತೆ ಹಂಪನಾ ಅವರ ಕೃತಿಗಳಲ್ಲಿ ಕಂಡು ಬರುವ ಮುಖ್ಯ ಲಕ್ಷಣಗಳಿವು -

1. ಅಪಾರವಾದ ಮಾಹಿತಿ ಸಂಗ್ರಹ, ಕ್ರಮಬದ್ಧ ಜೋಡಣೆ ಹಾಗೂ ನಿರೂಪಣೆ.
2. ನಿರೂಪಣೆಯಲ್ಲಿ ನಿಷ್ಕೃಷ್ಟತೆ. ನೇರವಾದ ವಿಚಾರ ಮಂಡನಾ ಕ್ರಮ ಇದಕ್ಕೆ ಬೇಕಾದ ಭಾಷೆಯನ್ನು ಸ್ವಂತ ಪರಿಶ್ರಮದಿಂದ ರೂಪಿಸಿಕೊಂಡಿರುವುದು.
3. ಭಿನ್ನಾಭಿಪ್ರಾಯಕ್ಕೆ ಎಡೆ ಇರಬಹುದಾದಂಥ ತೀರ್ಮಾನಗಳನ್ನು ಅಲ್ಲಲ್ಲಿ ಕೊಟ್ಟಿರುವುದುಂಟು. ತೇಲಿಸಿ ಮಾತನಾಡುವ ಬದಲು, ತಪ್ಪೇ ಆದರೂ ಪರವಾಗಿಲ್ಲ, ನನಗನ್ನಿಸಿದ್ದನ್ನು ನಿರೂಪಿಸೋಣ ಎಂಬ ನಿಲುವು ಹೆಚ್ಚು ಜವಾಬ್ದಾರಿಯಿಂದ ಕೂಡಿದ್ದು.
4. ತಮ್ಮವರೆಗಿನ ಭಾಷಾ ಶಾಸ್ತ್ರಜ್ಞದ ಸಂಶೋಧನೆಗಳನ್ನು ಹಿಂಜರಿಕೆಯಿಲ್ಲದೆ ಬಳಸಿ ಕೊಂಡಿದ್ದಾರೆ. ಅದನ್ನು ಹೇಳಿಯೂ ಇದ್ದಾರೆ. ಅನೇಕ ಕಡೆಗಳಲ್ಲಿ ಅವರ ಸಂಶೋಧನೆಗಳನ್ನು ತಾವು ಮುಂದುವರಿಸಿ ತೀರ್ಮಾನಗಳನ್ನು ನೀಡಿರುವುದುಂಟು. ಕೆಲವೇಳೆ ಹಿಂದಿನವರ ಅಭಿಪ್ರಾಯಕ್ಕೆ ಭಿನ್ನವಾದ ಅಬಿಪ್ರಾಯವನ್ನು ಮಂಡಿಸಿರುವುದೂ ಉಂಟು.

ಇಲ್ಲಿಯೇ ಪ್ರಸ್ತಾಪಿಸಬೇಕಾದ ಇನ್ನೊಂದು ಕೃತಿಯೂ ಇದೆ. ಅದು 'ಕಮ್ಮಟದ ಕಿಡಿಗಳು' ಎಂಬ ಸಂಶೋಧನಾತ್ಮಕ ಟಿಪ್ಪಣಿಗಳ ಸಂಗ್ರಹ. ಇದರಲ್ಲಿ ನಿಘಂಟಿನಲ್ಲಿ ಸೇರದೆ ಹೋದ, ಪ್ರಾಚೀನ ಕಾವ್ಯ, ಶಾಸನಗಳಲ್ಲಿಪ್ರಯೋಗವಾಗಿರುವ ಹಲವು ಶಬ್ದಗಳ ಅರ್ಥದ ಬಗ್ಗೆ ವಿವೇಚನೆ ಮಾಡಿದ್ದಾರೆ. (ಈ ಸಮೀಕ್ಷೆಯ ವೇಳೆ ಈ ಕೃತಿ ನನಗೆ ನೋಡಲು ದೊರೆಯಲಿಲ್ಲ.) ಇಲ್ಲಿ ಕೆಲವು ನಿಷ್ಪತ್ತಿಗಳು ಸರಿಯಲ್ಲವೆಂದೂ, ಇನ್ನು ಕೆಲವು ವಿವೇಚನೆಗಳಲ್ಲಿ ಹೊಸದೇನೂ ಇಲ್ಲವೆಂದೂ ಡಾ. ಚಿದಾನಂದ ಮೂರ್ತಿಗಳು (ಬಹುಶಃ 'ಸಾಹಿತ್ಯ ವಾರ್ಷಿಕ'ದ ಆ ವರ್ಷದ ಸಂಪುಟದಲ್ಲಿ) ಟೀಕಿಸಿದ್ದನ್ನು ಓದಿದ ನೆನಪಿದೆ. ಆ ರೀತಿಯ ತಪ್ಪುಗಳಿದ್ದರೂ ಇರಬಹುದು. ಆದರೆ ಪೊನ್ನನ ಶಾಂತಿಪುರಾಣದ ಹಾಗೂ ಇನ್ನೂ ಒಂದೆರಡು ಸಂಪಾದಿತ ಕೃತಿಗಳ ಪ್ರಸ್ತಾವನೆಗಳಲ್ಲಿ ಈ ರೀತಿ ಅಪರೂಪದ ಶಬ್ದಗಳ ಬೆಗ್ಗ ಹಂಪನಾ ವಿವೇಚನೆ ನಡೆಸಿರುವುದನ್ನೂ ಕಾಣಬಹುದು. ಸಾರಾಂಶವಿಷ್ಟು-ನಿಘಂಟಿಗೆ ಸೇರ್ಪನೆಗೊಳ್ಳದಿರುವ ಶಬ್ದಗಳನ್ನುಸೇರಿಸುವ ಬಗ್ಗೆ ಈ ಲೇಖಕರು ಮೊದಲಿಂದಲೂ ಆಸಕ್ತರಾಗಿದ್ದಾರೆ ಎನ್ನುವುದು. 'ಕವಿ ಬಂಧುವರ್ಮ-ಒಂದು ಜಿಜ್ಞಾಸೆ ಕೃತಿಯಲ್ಲೂ (ಪು. ೨೧-೨೪) ಈ ಕೆಲಸವನ್ನು ಮಾಡಿರುವುದನ್ನು ಕಾಣಬಹುದು.

**ಆ. ಜಾನಪದ ಕೃತಿಗಳು**

ಹಂಪನಾ ಅವರ ಕೃತಿಗಳ ಪಟ್ಟಿಯಲ್ಲಿ ನಾಲ್ಕು ಜಾನಪದ ಕೃತಿಗಳ ಹೆಸರು ಇದ್ದರೂ 'ಕರ್ನಾಟಕದ ಜಾತ್ರೆಗಳು', ಹಾಗೂ 'ಆಕಾಶ ಜಾನಪದ' ಈ ಎರಡೇ ಲೆಕ್ಕಕ್ಕೆ ತೆಗೆದುಕೊಳ್ಳಬೇಕಾದ ಕೃತಿಗಳು. ಉಳಿದೆರಡರಲ್ಲಿ (ಜಾನಪದ ಕಲಾವಿದರ ಸೂಚಿ ಹಾಗೂ ಜಾನಪದ ವಿಚಾರ ಸಂಕಿರಣವೊಂದರ ಪ್ರಬಂಧಗಳ ಸಂಕಲನ) ಅವರ ಪ್ರಧಾನ ಸಂಪಾದಕತ್ವ ಮಾತ್ರವಿದ್ದು ಬೌದ್ಧಿಕ ಪ್ರತಿಭೆ ಕಾಣುವುದಿಲ್ಲ.

ಗಮನಿಸಬೇಕಾದ ಎರಡೂ ಜಾನಪದ ಕೃತಿಗಳೂ ಆ ವಿಷಯಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ಮೊದಲ ಕೃತಿಗಳು. 'ಜಾತ್ರೆಗಳು' ಕೃತಿ ಆ ಸಂಬಂಧದ ವಿಚಾರ ಸಂಕಿರಣವೊಂದರ ಉದ್ಘಾಟನಾ ಭಾಷಣವಾಗಿದ್ದು ಉದ್ದೇಶಪೂರ್ವಕವಾಗಿ ಅದೇ ಧಾಟಿಯನ್ನಿಟ್ಟು ಕೊಳ್ಳಲಾಗಿದೆ.

ಈ ಎರಡೂ ಕೃತಿಗಳ ಒಟ್ಟು ಪುಟಸಂಖ್ಯೆ ಸುಮಾರು ೧೫೦ ಮಾತ್ರ.

ಈ ಜಾನಪದ ಕೃತಿಗಳ ಮುಖ್ಯ ಲಕ್ಷಣಗಳಿವು -

1. ಲೇಖಕರ ಬಳಿ ಜಾನಪದ ಮಾಹಿತಿಗಳ ದೊಡ್ಡ ಸಂಗ್ರಹವೇ ಇದೆ. ದೀರ್ಘಕಾಲದ ಕ್ಷೇತ್ರ ಕಾರ್ಯವಿಲ್ಲದೆ ಇಷ್ಟು ಮಾಹಿತಿಗಳು ಸಂಗ್ರಹವಾಗುವುದು ಸಾಧ್ಯವಿಲ್ಲ.

2. ಮಾಹಿತಿಗಳನ್ನು ಪುಸ್ತಕ ರೂಪದಲ್ಲಿ ನೀಡುವಾಗ ಮಾತ್ರ ಲೇಖಕರು ಅಸ್ತವ್ಯಸ್ತ ನಿರೂಪಕರಾಗಿರುವುದು ಕಾಣುತ್ತದೆ. 'ಆಕಾಶ ಜಾನಪದ'ದಲ್ಲಿ ಈ ಅಶಿಸ್ತು ದೊಡ್ಡ ಪ್ರಮಾಣದಲ್ಲಿ ಕಾಣುತ್ತದೆ. 'ಜಾತ್ರೆಗಳು' ಕೃತಿಯಲ್ಲಿ ಇದು ಅಷ್ಟಾಗಿಲ್ಲ. ಈ ಕೊರತೆಗೆ ಕಾರಣ-ಈ ಮಾಹಿತಿಗಳನ್ನು, ತಮ್ಮ ವಿಚಾರಗಳನ್ನು ಬರಹದಲ್ಲಿ ನಿರೂಪಿಸಿ ಅಚ್ಚಿಗೆ ಕಳಿಸುವ ಕೆಲಸವನ್ನು ತುಂಬ ಕಡಿಮೆ ಕಾಲಾವಕಾಶವಿದ್ದ ಸನ್ನಿವೇಶದಲ್ಲಿ ಮಾಡಿರುವುದೇ ಆಗಿರಬಹುದೆನ್ನಿಸುತ್ತದೆ.

3. ಪ್ರತಿಯೊಂದು ಕೃತಿಯಲ್ಲೂ ಅನೇಕ ಹೊಸ ವಿಷಯಗಳು-ಉದಾಹರಣೆಗೆ, 'ಅಕಾಶ ಜಾನಪದ' ಕೃತಿಯಲ್ಲಿ ಸೂರ್ಯ, ಚಂದ್ರ, ಮಳೆ ನಕ್ಷತ್ರಗಳು-ಇವನ್ನು ಕುರಿತಂಥ ಭಾರತೀಯರ ಹಾಗೂ ವಿದೇಶೀಯರ ನಂಬಿಕೆಗಳು, ಗಾದೆಗಳಿವೆ. 'ಕರ್ನಾಟಕದ ಜಾತ್ರೆಗಳು' ಕೃತಿಯಂತೂ ಕೇವಲ ಜಾತ್ರೆಯ ಆಚರಣೆ, ಸ್ವರೂಪ ಇವುಗಳ ಬಗೆಗಷ್ಟೇ ಅಲ್ಲದೆ-ತೇರಿನ ರಚನೆ, ಅದರ ವಿನ್ಯಾಸ ಬದಲಾದ ರೀತಿ, ಹಲವಾರು ಊರುಗಳ ಜಾತ್ರೆಗಳ ವಿವರಗಳು ಇವೆಲ್ಲ ಇವೆ. ಜಾತ್ರೆಯ ವಿವಿಧ ಮುಖಗಳ ಕಡೆಗೆ ಮೊದಲ ಬಾರಿಗೆ ಗಮನ ಹರಿಸಿದ ಕೃತಿ ಇದು.

4. ಒಟ್ಟಾರೆ-ಇವರ ಜಾನಪದ ಸಂಬಂಧಿ ಕೃತಿಗಳಲ್ಲಿ ಇನ್ನಷ್ಟು ವಿವರ ಕೊಡಬಹುದಿತ್ತು, ಇಂಥಿಂಥ ಅಂಶಗಳನ್ನು ಚರ್ಚಿಸಬಹುದಿತ್ತು ಎಂದು ಈಗ (ಆ ಬಗೆಗಿನ ಅಧ್ಯಯನಗಳು ಸಾಕಷ್ಟು ಮುಂದುವರೆದಿರುವ ದಿನಗಳಲ್ಲಿ) ಅನ್ನಿಸಬಹುದು. ಆದರೆ ಈಗ ಹದಿನೈದು ವರ್ಷಗಳ ಹಿಂದೆ-ಇಷ್ಟು ಮಾಹಿತಿ, ವಿಚಾರ, ವಿಶ್ಲೇಷಣೆಗಳು ಈ ಬಗ್ಗೆ ಒಟ್ಟಿಗೆ ಸಿಕ್ಕಿದ್ದೇ ಇಲ್ಲ, ಹಾಗೂ, ಇವರು ಆಗ ಮಂಡಿಸಿದ ವಿಚಾರಗಳು ಬಹುಪಾಲು ಸಮರ್ಪಕವೆಂದು, ಅನಂತರದ ಅಧ್ಯಯನಗಳು ಶ್ರುತಪಡಿಸಿವೆ.

### ೩. ಸಾಹಿತ್ಯ, ಧರ್ಮ, ಇತಿಹಾಸ ಸಂಬಂಧಿ ಸಂಶೋಧನೆಗಳು

ಹಂಪನಾರ ಸಂಶೋಧನ ಕೃತಿಗಳ ಪೈಕಿ ಇವುಗಳದ್ದೇ ಬಹುದೊಡ್ಡ ಗುಂಪು. ಭಾಷಾ ವಿಜ್ಞಾನದ ಕೃತಿಗಳಷ್ಟೇ ಮುಖ್ಯವಾದ, ಆದರೆ ಅಷ್ಟು ಪ್ರಚಾರ ಪಡೆಯದ, ಆದರೆ ಖಚಿತವಾಗಿ

ಸಾಹಿತ್ಯ ಚರಿತ್ರೆಯ ಮೇಲೆ ಶಾಶ್ವತ ಪರಿಣಾಮ ಉಂಟುಮಾಡಿರುವ ಬರಹಗಳು ಇಲ್ಲಿವೆ. ಈ ಗುಂಪಿಗೆ ಸೇರುವ ಮುಖ್ಯ ಕೃತಿಗಳು ಎಂಟು.

೧. ಶಾಸನಗಳಲ್ಲಿ ಎರಡು ವಂಶಗಳು (೧೯೯೫)

೨. ಕವಿವರ ಕಾಮಧೇನು ಅತ್ತಿಮಬ್ಬೆ (೧೯೯೬)

೩. ನಾಗಚಂದ್ರನ ಇತಿವೃತ್ತ : ಮರುನೋಟ (೧೯೯೩)

೪. ಬಂಧುವರ್ಮ - ಒಂದು ಜಿಜ್ಞಾಸೆ (೧೯೯೩)

೫. ಹೊಂಬುಚದ ಶಾಸನಗಳು (೧೯೯೬)

೬. ಸಾಂತರರು - ಒಂದು ಅಧ್ಯಯನ (೧೯೯೬)

೭. ಯಕ್ಷ ಯಕ್ಷಿಯರು (೧೯೭೬)

೮. ವಿಷ್ಣುವರ್ಧನ-ವಿಜಯಾದಿತ್ಯ-ಕೀರ್ತಿವರ್ಮ (೧೯೯೬)

ಈ ಎಂಟು ಕೃತಿಗಳ ರಚನೆಗೆ ಆಧಾರವಾಗಿಟ್ಟುಕೊಂಡಿರುವ ಅಂಶಗಳ ಬಗ್ಗೆ ಮೊದಲು ತಿಳಿಯಬೇಕಾದ ಕೆಲವು ಮಾತುಗಳಿವೆ.

ಅ. ಮೊದಲ ಎರಡೂ ಕೃತಿಗಳು ಅತ್ತಿಮಬ್ಬೆ ಹಾಗೂ ಆಕೆಯ ವಂಶಕ್ಕೆ ಸಂಬಂಧಿಸಿದವು. ಶಾಸನಗಳು ಹಾಗೂ ಕಾವ್ಯೋಲ್ಲೇಖಗಳು ಇವಕ್ಕೆ ಆಧಾರ.

ಆ. ಅನಂತರದ ಎರಡು ಕೃತಿಗಳು (೩,೪) ಕವಿಕಾವ್ಯ ವಿಚಾರಕ್ಕೆ ಸಂಬಂಧಿಸಿದ್ದು ಮೊದಲನೆಯದಕ್ಕೆ ಹೆಚ್ಚಾಗಿ ಶಾಸನಗಳನ್ನು ಅವಲಂಬಿಸಿದೆ. ಎರಡನೆಯದಕ್ಕೆ ಕಾವ್ಯ ಹಾಗೂ ಶಾಸನಗಳನ್ನು ಒಟ್ಟಾಗಿ ಗಮನಿಸಲಾಗಿದೆ.

ಇ. ಐದನೆಯ ಕೃತಿ ಸಂಪೂರ್ಣವಾಗಿ ಶಾಸನಗಳ ಸಂಪುಟವಾಗಿದ್ದು ತಮ್ಮ ವಿದ್ಯಾರ್ಥಿ ಎಂ.ಜಿ. ಮಂಜುನಾಥ್ ಜೊತೆಗೂಡಿ ಇದನ್ನವರು ಪ್ರಕಟಣೆಗೆ ಸಿದ್ಧಗೊಳಿಸಿದ್ದಾರೆ.

ಈ. ಆರನೆಯ ಕೃತಿಗೆ ಶಾಸನಗಳೇ ಮುಖ್ಯ ಆಧಾರ. ಅವುಗಳ ವಿಶ್ಲೇಷಣೆಯಿಂದ ಹೊರಡುವ ಅಂಶಗಳನ್ನು ಎಳೆವಳೆಯಾಗಿ ಜೋಡಿಸಿ ಸಾಂತರ ದೊರೆಗಳ ವಂಶಾವಳಿ, ಮೂಲನೆಲೆ, ಶಾಖೆಗಳು, ಕಾಲ, ರಾಜ್ಯದ ಸೀಮೆ, ಮಾಂಡಳಿಕತ್ವ, ಧರ್ಮ, ಆಶ್ರಿತ ಕವಿಗಳು, ರಚಿತವಾದ ಕಾವ್ಯ-ಇವುಗಳನ್ನು ಕುರಿತು, ಸುದೀರ್ಘ ವಿಶ್ಲೇಷಣೆ ನಡೆಸಲಾಗಿದೆ. ಎಂಟನೆಯ ಕೃತಿಯೂ ಇಂತಹುದೇ ಆಗಿದ್ದು ಶಾಸನಾಧಾರಗಳಿಂದ ಇವು ಒಬ್ಬನೇ ವ್ಯಕ್ತಿಯ ಮೂರು ಹೆಸರುಗಳೆಂದೂ, ಇವನು ಜೈನನೆಂದೂ ತ್ರೈಲೋಕ್ಯಮಲ್ಲ ಸೋಮೇಶ್ವರನ ಮಗನೆಂದೂ ಸಾಬೀತು ಪಡಿಸಿದ್ದಾರೆ.

ಉ. ಯಕ್ಷ-ಯಕ್ಷಿಯರು ಕೃತಿ ಧರ್ಮಕ್ಕೆ ಸಂಬಂಧಿಸಿದ ಒಂದು ಸಂಶೋಧನ ಕೃತಿ. ಜೈನ ಧರ್ಮಶಾಸ್ತ್ರ ಕೃತಿಗಳೇ ಇದಕ್ಕೆ ಮುಖ್ಯ ಆಧಾರ.

ಈ ಮೇಲಿನ ಮಾತುಗಳು ಈ ಕೃತಿಗಳ ಕಿರುಪರಿಚಯವನ್ನೂ ಮಾಡಿಕೊಡುತ್ತವೆ.

ಇವುಗಳಲ್ಲಿ 'ಯಕ್ಷ ಯಕ್ಷಿಯರು' ಒಂದು ಮಾತ್ರ ಹಳೆಯ ಪ್ರಕಟಣೆ. ಉಳಿದವೆಲ್ಲ ಮೂರು ವರ್ಷಗಳ ಅವಧಿಯಲ್ಲಿ ಪ್ರಕಟವಾದವು ಎನಿಸಿದರೂ ವಾಸ್ತವವಾಗಿ ಇವುಗಳಲ್ಲಿನ ಭಾಗಗಳು ಬಿಡಿಬಿಡಿಯಾಗಿ ಒಂದಷ್ಟು ಮೊದಲೇ ಪ್ರಕಟವಾಗಿದ್ದವು. ಕೆಲವು ಕೃತಿಗಳ ಹಸ್ತಪ್ರತಿಗಳು ಪ್ರಕಾಶಕರಿಂದ ಎಷ್ಟೋ ವರ್ಷ ಮೊದಲೇ ಸ್ವೀಕರಿಸಲ್ಪಟ್ಟು ಇದೀಗ ಪ್ರಕಟವಾಗಿರುವಂಥವು.

ತಮ್ಮ ಈ ಸಂಶೋಧನ ಕೃತಿಗಳ ಮೂಲಕ ಲೇಖಕರು ಖಚಿತವಾಗಿ ಕನ್ನಡ ಸಾಹಿತ್ಯ ಚರಿತ್ರೆಯ ಹಾಗೂ ಇತಿಹಾಸದ ಕಳಚಿದ ಕೊಂಡಿಗಳನ್ನು (ಮಿಸ್ಸಿಂಗ್ ಲಿಂಕ್) ಹುಡುಕಿ ಕಂಡುಹಿಡಿದು ಒತ್ತಟ್ಟಿಗೆ ಜೋಡಿಸಿ ಅವುಗಳ ಅರ್ಥ ವಿಶ್ಲೇಷಿಸಿ, ಅವುಗಳಿಗೆ ಅನ್ಯತ್ರ ದೊರೆಯುವ ಆಧಾರವನ್ನೂ ಊರೆಗೋಲಾಗಿ ನಿಲ್ಲಿಸಿ, ಅಲ್ಲಿಂದ ಹೊರಡುವ ತಥ್ಯಗಳನ್ನು ಓದುಗರೆದುರು ಬಿಚ್ಚಿ ಹರಡುತ್ತಾರೆ. ಇಲ್ಲಿ ಅವಸರವಿಲ್ಲ, ಬದಲಾಗಿ ಎಚ್ಚರವಿದೆ. ಏಕಾಂತ ದೃಷ್ಟಿಯಿಲ್ಲ, ಬದಲಾಗಿ ಅನೇಕಾಂತತ್ವವಿದೆ. ಶಾಸನದಲ್ಲಿ ಪ್ರಯುಕ್ತವಾದ ಯಾವುದೇ ಒಂದು ಮುಖ್ಯ ಶಬ್ದ ಇತರೆಡೆ ಭಿನ್ನರೂಪಗಳಲ್ಲಿ ಪ್ರಯೋಗವಾಗಿರುವುದನ್ನು ಗಣನೆಗೆ ತೆಗೆದುಕೊಂಡು ಒಂದು ಅಂಶಕ್ಕೆ ಎಷ್ಟೆಲ್ಲ ಆಧಾರಗಳನ್ನು ಜೋಡಿಸಬಹುದೆಂದು ಪರಿಕಿಸುತ್ತಾರೆ. ಇಂಥ ಸಂದರ್ಭಗಳಲ್ಲಿ ಸಾಹಿತ್ಯ ಎರಡನೆಯ ಸ್ಥಾನಕ್ಕೆ ಸರಿದು ಶಾಸನಾಧಾರಗಳೇ ಹಂಪನಾ ಅವರಿಗೆ ಮುಖ್ಯವಾಗಿ ಬಿಡುತ್ತವೆ. ಸಾಧ್ಯವಾದಷ್ಟೂ ಮೂಲಕ್ಕೆ ಹೋಗಿ ಆ ಅಂಶದ ಬಗ್ಗೆ ಆಮೂಲಾಗ್ರ ಮಾಹಿತಿ ಸಂಗ್ರಹಿಸುತ್ತಾರೆ. ತಮ್ಮ ಆಲೋಚನೆಗೆ ವಿರುದ್ಧವಾದ, ಅಥವಾ ಭಿನ್ನದೃಷ್ಟಿಯ ಅನುಮಾನವೇನಾದರೂ ಹೊರಡುವ ಸಾಧ್ಯತೆ ಇದೆಯೋ ಎಂದೂ ಪ್ರಶ್ನೆ ಹಾಕಿಕೊಂಡು ನೋಡಿ ಅದನ್ನೂ ತಾವೇ ಉತ್ತರಿಸುತ್ತಾರೆ. ಅಂಥ ಅನುಮಾನಗಳನ್ನು ಪರಿಹರಿಸಿಕೊಂಡು ಮುನ್ನಡೆಯುತ್ತಾರೆ. ಮುಳ್ಳು ಪೊದೆಗಳಿಂದ ಆವೃತವಾದ ಪಥದಲ್ಲಿ ಎಚ್ಚರಿಕೆಯಿಂದ ಹಾದಿ ಬಿಡಿಸಿಕೊಂಡು ನಡೆಯುವ ಪಥಿಕನಂತೆ ಇಲ್ಲಿ ಚಲಿಸುತ್ತಾರೆ. ನಾಗಚಂದ್ರನ ಕಾಲ ಗುರುಪರಂಪರೆ, ಇವುಗಳ ಸಿಕ್ಕುಗಳನ್ನು ಬಿಡಿಸುವಾಗ, ವಿಷ್ಣುವರ್ಧನ-ವಿಜಯಾದಿತ್ಯ-ಕೀರ್ತಿವರ್ಮ ಎನ್ನುವುದು ಒಬ್ಬನದೇ ಹೆಸರು, ಆತ ಹುಟ್ಟಾ ಜೈನ, ಆತ ತನ್ನ ತಂದೆಗೆ ನಾಲ್ಕನೇ ಮಗ, ಎಂಬುದನ್ನೆಲ್ಲಾ ಪ್ರತಿಷ್ಠಾಪಿಸುವಾಗ, -ಇಂಥ ಹತ್ತು ಹಲವು ಸಂದರ್ಭಗಳಲ್ಲಿ ಈ ಎಚ್ಚರ ಕಾಣುತ್ತದೆ. ಸೂಕ್ಷ್ಮಾವಲೋಕನ ಪ್ರಜ್ಞೆ ಇಲ್ಲೆಲ್ಲ ಕೆಲಸಮಾಡಿರುವುದು ಗೋಚರವಾಗುತ್ತದೆ. ಹೀಗಾಗಿ, ಇಲ್ಲಿನ ಒಂದೊಂದು ಕೃತಿಯ ಹಿಂದೆಯೂ ಹಲವು ವರ್ಷಗಳ ಅಧ್ಯಯನ, ಚಿಂತನಗಳು ಕೆಲಸಮಾಡಿರುವುದು ಸ್ವಯಂ ವೇದ್ಯವಾಗುತ್ತದೆ.

ಕೇವಲ ಶಾಸನಗಳ ವಿಷಯ ವಿಶ್ಲೇಷಣೆ, ತ್ರುಟಿತ ಭಾಗಗಳ ಪಾಠ ನಿರ್ಣಯ, ಪರಸ್ಪರ ಸಂಬಂಧಿತ ಶಾಸನಗಳನ್ನು ಒತ್ತಟ್ಟಿಗೆ ಕೂಡಿಸುವುದು-ಇಷ್ಟೇ ಅಲ್ಲ, ಕೆಲವು ಹೊಸ ಶಾಸನಗಳನ್ನೇ ಹಂಪನಾ ಪರಿಶೋಧಿಸಿರುವುದೂ ಉಂಟು. ಇದೂ ಸಹ ಈ ನಾಡಿನ ಚರಿತ್ರೆಯ ಶೋಧನೆಗೆ ಇವರ ಕಾಣಿಕೆಗಳಲ್ಲೊಂದಾಗಿದೆ.

೩. ಸೃಜನಶೀಲ ಕೃತಿಗಳು

ಹಂಪನಾ ಅವರ ಸೃಜನಶೀಲ ಕೃತಿಗಳ ಸಂಖ್ಯೆ ಸುಮಾರು ಹದಿನಾರು. ತನ್ನಷ್ಟಕ್ಕೆ ಇದು

ಸಣ್ಣ ಸಂಖ್ಯೆಯೇನಲ್ಲ. ಬೇರೇನೂ ಬರೆಯದಿದ್ದರೂ ಒಬ್ಬ ಲೇಖಕ ಇಷ್ಟರ ಆಧಾರದಿಂದಲೇ 'ತಾನೂ ಒಬ್ಬ ಲೇಖಕ' ಎಂದು ಹೇಳಿಕೊಂಡು ತಿರುಗಾಡಬಹುದು. ಈ ಹವಿನಾರರಲ್ಲಿ ಎರಡು ಕಾದಂಬರಿಗಳು (ಸವ್ಯಸಾಚಿ ಪಂಪ, ನಾಗಶ್ರೀ), ನಾಲ್ಕು ಶಿಶುಸಾಹಿತ್ಯ ಕೃತಿಗಳು, ಎಂಟು ಜೀವನ ಚರಿತ್ರೆಗಳು, ಲಲಿತ ಪ್ರಬಂಧ ಸಂಕಲನಗಳು ಎರಡು - ಇವೆಲ್ಲ ಸೇರಿವೆ. ಸಂಖ್ಯೆಗಳ ಮೋಹ ಅಥವಾ ದಾಕ್ಷಿಣ್ಯದ ಹಂತವನ್ನು ಎಂದೋ ದಾಟಿ ಬಂದಿರುವ ಈ ಲೇಖಕರ ಕೃತಿಗಳ ಸಂಖ್ಯಾಪಟ್ಟಿಯಲ್ಲಿ ಒಂದೆರಡು ಹೆಚ್ಚೂ ಕಡಿಮೆಯಾದರೂ (ವಿಮರ್ಶೆಯ ದೃಷ್ಟಿಯಿಂದ) ಏನೂ ನಷ್ಟವಿಲ್ಲ.

ನಾಟಕ, ಮತ್ತು ಕವಿತೆ-ಈ ಎರಡನ್ನು ಬಿಟ್ಟು ಉಳಿದೆಲ್ಲ ಸೃಜನಶೀಲ ಪ್ರಕಾರಗಳಲ್ಲೂ ಹಂಪನಾ ಬರವಣಿಗೆ ಮಾಡಿರುವಂತೆ ಕಾಣುತ್ತದೆ. (ಹಾಗೆ ನೋಡಿದರೆ, ಕವಿತೆಯಲ್ಲಿ ಒಂದು ಸಣ್ಣ ಪ್ರಯತ್ನ ಹಂಪನಾ ಈಚೆಗೆ ಮಾಡಿದ್ದಾರೆ. ಆ.ನೇ. ಉಪಾಧ್ಯೆ ಕುರಿತು ತಾವು ಬರೆದಿರುವ ಪುಸ್ತಿಕೆಯಲ್ಲಿ ನಡುವೆ ಒಂದು ಕಡೆ (ಪು.೧೦) ಉಪಾಧ್ಯೆ ಅವರನ್ನು ಕುರಿತು ಧಾರವಾಡ ಕನ್ನಡದ ಶೈಲಿಯಲ್ಲಿ ಎಂಟು ಸಾಲುಗಳ ಕಿರುಪದ್ಯವೊಂದನ್ನು ಬರೆದಿದ್ದಾರೆ. ಅದು ಚೆನ್ನಾಗಿಯೂ ಇದೆ. ಎರಡು ರೂಪಕಗಳು ಆಕಾಶವಾಣಿಯಿಂದ ಪ್ರಸಾರವಾಗಿರುವಂತೆ ದಾಖಲೆ ಇದೆ. ಆದರೆ ಅವು ಅಚ್ಚಾಗಿಲ್ಲ.)

ಇಷ್ಟೆಲ್ಲ ಇದ್ದರೂ, ಇವರ ಕಾದಂಬರಿಗಳು ನಾಲ್ಕು ನಾಲ್ಕು ಬಾರಿ ಪುನರ್ಮುದ್ರಣಗಳನ್ನು ಕಂಡಿದ್ದರೂ, ಹಂಪನಾ ಅವರ ಸೃಜನಶೀಲ ಸಾಹಿತ್ಯ ಈ ವರೆಗೆ ಚರ್ಚಿಸಿದ ಉಳಿದ ಸಾಹಿತ್ಯ ಕೃತಿಗಳ ಗುಂಪಿನಲ್ಲಿ ನಗಣ್ಯವಾಗಿ ಉಳಿದುಬಿಡುತ್ತದೆ. ಇದಕ್ಕೆ ಕಾರಣ, ಈ ಸಾಹಿತ್ಯ ಕೃತಿಗಳು ಅಲ್ಪ ಮೌಲ್ಯದವೆಂಬುದಲ್ಲ, ಬದಲಾಗಿ-ಭಾಷಾವಿಜ್ಞಾನಿ ಹಾಗೂ ಗ್ರಂಥ ಸಂಪಾದಕ ಹಂಪನಾ ಅವರೇ ಚರ್ಚೆಗೆ ಹೆಚ್ಚು ಮುಖ್ಯರಾಗಿ ಇವು ಬದಿಗೆ ಸರಿದು ಬಿಡುತ್ತವೆ.

ಆದರೆ ಇವು ಹೀಗೆ ಉಪೇಕ್ಷೆಗೆ ಅರ್ಹವಲ್ಲ. ಸಂಶೋಧನೆ ಹಾಗೂ ಸೃಜನಶೀಲ ಸಾಹಿತ್ಯ ರಚನೆಯಲ್ಲಿ ಒಂದು ಪ್ರತಿಭೆ ಹೇಗೆ ಕೆಲಸ ಮಾಡಬಹುದೆಂಬುದನ್ನು ತಿಳಿಯಲು ಇವು ಸಹಾಯಕವಾಗಿವೆ. ಅಲ್ಲದೆ-ಈ ಕೃತಿಗಳು ಸಾಮಾನ್ಯ ಓದುಗರ ಎಳೆಯರ ಮನಸ್ಸನ್ನರಳಿಸಿರುವುದೇನೂ ಸುಳ್ಳಲ್ಲ. ಇವರ ಪ್ರಬಂಧ ಸಂಕಲನವು ಎರಡು ಬಾರಿ ಪಠ್ಯಪುಸ್ತಕವಾಗಿದ್ದು ವಿದ್ಯಾರ್ಥಿಗಳು ಸಂತೋಷದಿಂದ ಓದಿದ್ದಾರೆ. ಇಪ್ಪತ್ತೆರಡು ವರ್ಷಗಳು ಕಳೆದರೂ ಇಂದೂ-ಪಂಪ, ನಾಗಶ್ರೀ ಕಾದಂಬರಿಗಳನ್ನು ಕೇಳಿ ಕೊಂಡು ಓದುವ ಓದುಗರಿದ್ದಾರೆ. ಇವರು ಬರೆದ ಜೀವನಚರಿತ್ರೆಯ ಪ್ರತಿಗಳು ಎಂದೋ ತೀರಿ ಹೋಗಿವೆ. ನೀರಸ ಬರವಣಿಗೆಗಳಿಗೆ ಈ ಬೇಡಿಕೆ ಇರುವುದಿಲ್ಲ.

ಈ ಹಿನ್ನೆಲೆಯನ್ನೆಲ್ಲಾ ಒತ್ತಟ್ಟಿಗಿಟ್ಟು ಈಗ ಈ ಗುಂಪಿನ ಕೃತಿಗಳ ಬಗ್ಗೆ ಹೇಳಬಹುದಾದ ಕೆಲವು ಮಾತುಗಳೆಂದರೆ -

೧. ಹಂಪನಾ ಎಂಥ ಗಂಭೀರ ಬರಹಗಾರರೋ ಅಷ್ಟೇ ಕಲ್ಪನಾಶೀಲ ಲಲಿತ ಲೇಖಕರೂ

ಹೌದು. ಇವರು ಬರೆದಿರುವ ಜೀವನ ಚರಿತ್ರೆಗಳು, ಶಿಶುಸಾಹಿತ್ಯ ಕೃತಿಗಳು, ಕಾದಂಬರಿಗಳು, ಹಾಗೂ ಲಲಿತ ಪ್ರಬಂಧಗಳು ಈ ಮಾತಿಗೆ ಸಾಕ್ಷಿ ನುಡಿಯುತ್ತವೆ.

೨. ಜೀವನ ಚರಿತ್ರೆಗಳನ್ನು ಬರೆಯುವಾಗ ಕೆಲವು ವೇಳೆ ನೇರವಾಗಿ ವ್ಯಕ್ತಿ ವ್ಯಕ್ತಿತ್ವದ ಪರಿಚಯದೊಂದಿಗೆ ದಢಕ್ಕನೆ ಆರಂಭಿಸಿ ನಂತರ ಹಿನ್ನೆಲೆಯನ್ನು ನಿಧಾನವಾಗಿ ಎತ್ತಿಕೊಳ್ಳುವುದುಂಟು (ಉದಾ : ಆ.ನೇ. ಉಪಾಧ್ಯೆ, ಬಸವಪ್ಪ ಶಾಸ್ತ್ರಿ) ಅಥವಾ-ಆ ಕಾಲದ ಪರಿಸರ, ಸ್ಥಿತಿಗಳನ್ನು ಹೇಳುತ್ತಾ, 'ಅಂಥಾ ಕಾಲದಲ್ಲಿದ್ದ ವ್ಯಕ್ತಿ' ಎನ್ನುವ ಮೂಲಕ ಈ ಪಾತ್ರವನ್ನು ಪ್ರವೇಶಗೊಳಿಸುವುದು (ಉದಾ: ಅತ್ತಿಮಬ್ಬೆ, ಗೋವಿಂದ ಪೈ) ಈ ಕ್ರಮಗಳನ್ನು ಅನುಸರಿಸುತ್ತಾರೆ. ಇವೆರಡೂ ಜೀವನ ಚರಿತ್ರೆಯ ಆರಂಭದ ಅಂಗೀಕೃತ ಶೈಲಿಗಳ ಪೈಕಿ ಮುಖ್ಯವಾದವುಗಳು.

೩. ಆಕರ್ಷಕ ರೀತಿಯಲ್ಲಿ ಘಟನೆಗಳ ಜೋಡಣೆ, ಬೇಸರವೆನಿಸದ ಶೈಲಿ, ವ್ಯಕ್ತಿ ಜೀವನದ ಮೌಲ್ಯಗಳು ಮನಂಬುಗುವಂತೆ ನಿರೂಪಿಸುವುದು, ಹೃದ್ಯತೆ-ಇವರ ಜೀವನ ಚರಿತ್ರಾತ್ಮಕ ಬರಹಗಳ ಮುಖ್ಯ ಲಕ್ಷಣಗಳು. ಕಾದಂಬರಿಗಳ ಬಗೆಗೂ ಈ ಮಾತು ಹೇಳಬಹುದು. ದೀರ್ಘ ಲಲಿತ ಪ್ರಬಂಧವೋ, ಜೀವನ ಚರಿತ್ರೆಯೋ ಎಂದು ಹೇಳುವುದು ಕಷ್ಟವಾಗುವ, ಆದರೆ ಖಚಿತವಾಗಿ ಇವರ ಒಂದು ಒಳ್ಳೆಯ ಸೃಜನಶೀಲ ಬರವಣಿಗೆಯಾದ - 'ನೆನಪಿನಂಗಳದಲ್ಲಿ' ಮಾಸ್ತಿ ಕೂಡ ಇದಕ್ಕೆ ಒಳ್ಳೆ ಉದಾಹರಣೆ.

೪. ಈ ಗುಂಪಿನ ಕೃತಿಗಳ ಭಾಷಾ ಶೈಲಿಯಲ್ಲಿ ಸಹಜವಾಗಿಯೇ ರಮ್ಯತೆ, ಹೃದಯವಂತಿಕೆ, ಸರಳತೆ, ಕಟಕಿ, ಹಾಸ್ಯ-ಎಲ್ಲ ಬಗೆಯ ವಾಕ್ಯರಚನೆಗೂ ಉದಾಹರಣೆಗಳು ಸಿಗುತ್ತವೆ. ತಮ್ಮ ಸಂಶೋಧನ ಬರಹಗಳಲ್ಲಿ ಗಂಭೀರ ನಿಷ್ಕೃಷ್ಟ ಗಣಿತಾತ್ಮಕ ಶೈಲಿಯನ್ನು ತೋರುವ ಹಂಪನಾ ಅಷ್ಟೇ ಒಡೆತನದಿಂದ ಈ ಕೃತಿಗಳಲ್ಲಿ ವಿವಿಧ ವಾಕ್ಯರಚನಾ ಮಾದರಿಗಳನ್ನೂ ಶಿಥಿಲ ಬಂಧವನ್ನೂ ತೋರುತ್ತಾರೆ.

ಉದಾ :

೧. ಆಕೆ ಬಿ.ಜೆ.ಪಿ.ಯವರಿಗೂ ಮಾದರಿಯಾಗುವಂಥ ಅಚ್ಚ ಹಿಂದೂ ಸ್ತ್ರೀ. (ಹಾಸ್ಯ-ನೆನಪಿನಂಗಳದಲ್ಲಿ ಮಾಸ್ತಿ-ಪುಟ .೭)

೨. ಉಪಾಧ್ಯೆ ಅವರಿಗೆ ಅಬ್ಬೆ ಅಂದರೆ ಆಯಿತು. ಆಕೆ ಅವರಿಗೆ ಪಂಚಪ್ರಾಣ. ಅಮ್ಮನ ಮಾತು ಮಗನಿಗೆ ಆಗಮೋಕ್ತಿ. (ಸರಳತೆ, ಹೃದ್ಯತೆ, ಆ.ನೇ.ಉಪಾಧ್ಯೆ. ಪುಟ ೬-೭)

೩. ಈ ಸಡಗರ ಸಂಭ್ರಮಗಳು ಫಲಿಸಿದ ಹಾಗೆ ಅತ್ತಿಮಬ್ಬೆ ಒಬ್ಬ ಮಗನನ್ನು ಹೆತ್ತಳು. ಎರಡೂ ಕುಟುಂಬಗಳು ಮತ್ತೊಂದು ತಲೆಮಾರಿನ ಚಿಗುರು ಕಂಡವು. ಕರ್ನಾಟಕದ ಹಲವು ವೀರರತ್ನಗಳ ಮನೆತನದಲ್ಲಿ ಇನ್ನೊಂದು ಪುತ್ರರತ್ನದ ಆಗಮನಕ್ಕೆ ಒಸಗೆ ಹಾಡಿದರು.(ರಮ್ಯತೆ, -ಅತ್ತಿಮಬ್ಬೆ-ಪುಟ ೧೬)

೪. '...ನೀವು ನನಗೆ ದೇವರಿತ್ತ ಜೋಡಿ ಕಿನ್ನರಿ. ಈ ವಾದ್ಯಗಳನ್ನು ದಿನದಿನವೂ ಮಿಡಿ ಮಿಡಿದು ಬತ್ತೀಸ ರಾಗ ಹಾಡುವೆ' (ಪಂಪ ತನ್ನ ಮಡದಿಯರನ್ನು ಕುರಿತು ಹೇಳುವ ಮಾತು. ಸವ್ಯಸಾಚಿ ಪಂಪ-ಪುಟ ೯೩)

ಇದೇ ರೀತಿ ಎಲ್ಲ ಬಗೆಯ ಭಾವಾಭಿವ್ಯಕ್ತಿಗೂ ಭಾಷೆಯನ್ನು ಮಣಿಸಿಕೊಂಡು ವಾಕ್ಯಗಳನ್ನು ಲೀಲಾಜಾಲವಾಗಿ ರಚಿಸಿಕೊಂಡು ನಿರೂಪಿಸಿರುವುದಕ್ಕೆ ಉದಾಹರಣೆಗಳನ್ನು ಕೊಡಬಹುದು. ಸಾರಾಂಶವಿಷ್ಟು-ರಚಿಸುತ್ತಿರುವ ಕೃತಿಯ ಉದ್ದೇಶಕ್ಕೆ ತಕ್ಕಂಥ ಭಾಷಾ ಶೈಲಿಯನ್ನು ಸೃಷ್ಟಿಸಿಕೊಳ್ಳುವುದು ಈ ಲೇಖಕರಿಗೆ ತುಂಬ ಸುಲಭದ ಕೆಲಸ. ಅದು-ಪುಸ್ತಕ ಜೀವಿ, ಕ(ಕಿ)ವಿಯ ಹೆಂಡತಿ, ಅನಾರೋಗ್ಯ ಭಾಗ್ಯದಂತಹ ಲೇಖನಗಳಲ್ಲಿನ ಹಾಸ್ಯ ಶೈಲಿಯಾಗಬಹುದು, 'ಸವ್ಯಸಾಚಿ ಪಂಪ'ಕ್ಕೆ ಅಗತ್ಯವಾದಂತಹ ಐತಿಹಾಸಿಕ ಪರಿಸರ ನಿರ್ಮಿಸುವ ಭಾಷಾ ಶೈಲಿಯಾಗಬಹುದು, ಗೋಕಾಕರ ಕೃತಿಗಳನ್ನು ವಿಮರ್ಶಿಸುವ ಆಧುನಿಕ ವಿಮರ್ಶಾ ಪರಿಭಾಷೆಯಾಗಬಹುದು-ಸುರಿದ ಪಾತ್ರೆಯ ಆಕಾರವನ್ನು ಪಡೆವ ನೀರಿನಂತೆ ಇವರ ಭಾಷಾಶೈಲಿ ಅಗತ್ಯದ ಹದವನ್ನು ತನ್ನಷ್ಟಕ್ಕೆ ಪಡೆದುಕೊಳ್ಳುತ್ತದೆ. ಈ ಸಿದ್ಧಿ ಸುಲಭ ಸಾಧ್ಯವಲ್ಲ.

೫. ಇವರ ಪುಸ್ತಕಗಳ ಪಟ್ಟಿಯಲ್ಲಿ ಲಲಿತ ಪ್ರಬಂಧ ಸಂಕಲನಗಳ ಸಂಖ್ಯೆ ಎರಡು ಎಂದು ನಮೂದಿತವಾಗುತ್ತಿದ್ದರೂ ಅದು ಒಂದೇ ಎಂದು ಭಾವಿಸಿದರೆ ಏನೂ ನಷ್ಟವಿಲ್ಲ. ಹೆಸರಿನ ಸೊಗಸು ಸಂಕಲನದ ಪ್ರಬಂಧಗಳ ಜೊತೆಗೇ ಇನ್ನೊಂದೆರಡು ಸೇರಿ ಮತ್ತೊಂದು ಸಂಕಲನವಾಗಿ ಪ್ರಕಾಶಕರು ಅದಕ್ಕೆ ಬೇರೊಂದು ಹೆಸರಿತ್ತಿದ್ದಾರೆ. ಅದರಲ್ಲಿ 'ಶಾಸ್ತ್ರೀಯ ಇಂಗ್ಲೀಷು ಪ್ರೇಮ' ಎಂಬೊಂದು ಬರಹದಲ್ಲಿ ಮಾತ್ರ ಯಾವುವೋ ಹಳೆಯ ನಗೆಹನಿಗಳನ್ನು ಕೇಳಿದಂತಾಗುತ್ತದೆ. ಉಳಿದವೆಲ್ಲ ಸ್ವೋಪಜ್ಞ ಬರಹಗಳು. ಚಿಂತನಶೀಲತೆ ಗುಪ್ತಗಾಮಿನಿಯಾಗುಳ್ಳ ಹಾಸ್ಯ ಕಾರಂಜಿಗಳು.

೬. ಈ ಲೇಖಕರ ಶಿಶುಸಾಹಿತ್ಯಕೃತಿ ಬಗ್ಗೆ ಹೆಚ್ಚು ಹೇಳಬೇಕಾದದ್ದು ಏನಿಲ್ಲ. ಹೇಗಿರಬೇಕೋ ಹಾಗಿವೆ ಅವು - ಎಂದರೆ ಸಾಕು, ಒಟ್ಟು ಎಂಟು ಈ ವರ್ಗದ ಕೃತಿಗಳು ಪ್ರಕಟವಾಗಿದ್ದರೂ ಅವುಗಳಲ್ಲಿ ಎರಡು ಅನುವಾದ ಕೃತಿಗಳು; ಸ್ವಂತ ರಚನೆಯ ಕೃತಿಗಳು ಆರು. ದೇವರಾಯನ ದುರ್ಗ, ಕರ್ನಾಟಕದಲ್ಲಿ ಜೈನ ಧರ್ಮ-ಇಂತಹ ಕೃತಿಗಳು. ಈ ನಿಟ್ಟಿನಲ್ಲೂ ಇವರು ತುಸು ಕಷ್ಟದ ವಿಷಯಗಳನ್ನೇ ಆಯ್ದುಕೊಂಡು ನಿರೂಪಿಸುವ ಕೆಲಸಕ್ಕೆ ಹೊರಟಿರುವುದು ಕಾಣುತ್ತದೆ. ಐತಿಹ್ಯಗಳನ್ನು ನಿರೂಪಿಸುವಾಗ ಯಾವುದು ಕೇವಲ ಕಲ್ಪನೆ, ಯಾವುದು ಸತ್ಯವಿದ್ದಿರಬಹುದು ಎಂಬುದನ್ನು ಸಾಧ್ಯವಿದ್ದಲ್ಲೆಲ್ಲಾ ಸ್ಪಷ್ಟಪಡಿಸುತ್ತಾರೆ. ಉದಾಗೆ-ದೇವರಾಯನ ದುರ್ಗದ ಆರತಿಯ ಬಂಡೆಯನ್ನು ಕುರಿತ ಐತಿಹ್ಯಗಳ ಬಗ್ಗೆ ಇವರು ಹೇಳುವುದನ್ನು ಗಮನಿಸಬಹುದು. ಇದೊಂದು ಅಪೇಕ್ಷಣೀಯ ಎಚ್ಚರ. ಅಲ್ಲಲ್ಲಿ ಮಕ್ಕಳ ಮಟ್ಟಕ್ಕೆ ಮೀರಿದ ಶಬ್ದಗಳು ಇಣುಕಿಬಿಡುವುದುಂಟು. ಅದು ಇವರ ಅಪಾರವಾದ ಹಳಗನ್ನಡ ಹಾಗೂ ಶಾಸನಾಭ್ಯಾಸದ ಪರಿಣಾಮ. ಆದರೂ ಒಟ್ಟಾರೆ ಅರ್ಥಗ್ರಹಣೆಗೇನೂ ಬಾಧಕವಿಲ್ಲ.

೭. ಹಂಪನಾರವರ ಸೃಜನಶೀಲ ಬರವಣಿಗೆಗಳನ್ನು ಓದಿದ ಬಳಿಕ ಸಮಗನ್ನಿಸುವುದು ಹೀಗೆ- 'ಪಂಡಿತ ಬರಹಗಳಲ್ಲಿ ತಮ್ಮನ್ನು ವಿಪರೀತವಾಗಿ ತೊಡಗಿಸಿಕೊಂಡು ಬಿಟ್ಟದ್ದರಿಂದ ಸೃಜನಶೀಲ ಸಾಹಿತ್ಯದ ಲೇಖಕ ಹಂಪನಾ ಮರೆಯಾಗಿ ಬಿಟ್ಟರು' ಎಂದು.

**೫. ವಿಮರ್ಶೆ ಮತ್ತು ಅನುವಾದ**

ಉಳಿದ ಕ್ಷೇತ್ರಗಳಿಗೆ ಹೋಲಿಸಿದರೆ ಹಂಪನಾ ಈ ಕ್ಷೇತ್ರದ್ದೆಂದೇ ಹೆಸರಿಸಿ ಮಾಡಿರುವ ಕೆಲಸ ಕಡಮೆಯೇ. ಒಟ್ಟು ನಾಲ್ಕು ಅನುವಾದ ಕೃತಿಗಳನ್ನು ಮಾಡಿದ್ದಾರೆ. ಇವುಗಳಲ್ಲಿ ಎರಡು ಮಕ್ಕಳ ಕೃತಿಗಳು (ಕೃಷ್ಣ ಪಾಂಡವರು ಹಾಗೂ ಭೀಮ ಶಕ್ತಿ ಪರೀಕ್ಷೆ) ಇನ್ನೆರಡು ಆತ್ಮತತ್ವವಿಚಾರ ಹಾಗೂ ಜೀನೇಂದ್ರ ಚರಿತೆ ಎಂಬ ಜೈನ ಧರ್ಮ ಸಂಬಂಧಿ ಕೃತಿಗಳು. ಇವುಗಳ ಬಗ್ಗೆ ಹೆಚ್ಚು ಹೇಳುವುದೇನೂ ಇಲ್ಲ. ಅನುವಾದ ಸುಭಗವಾಗಿ ಬಂದಿದೆ. ಓದುಗನಿಗೆ ತನ್ನದೇ ಭಾಷೆಯ ಕೃತಿಯನ್ನು ಓದುತ್ತಿರುವಂತೆನಿಸುತ್ತದೆ. ಅದರಲ್ಲೂ ಆತ್ಮ ತತ್ವ ವಿಚಾರ ವಿಸ್ತೃತ ಇಂಗ್ಲಿಷ್ ಕೃತಿಯ ಸಂಗ್ರಹಾನುವಾದ. ಈ ಸಂಗ್ರಹಕಾರ್ಯ ಕೂಡ ತುಂಬ ಉಚಿತವಾದ ರೀತಿಯಲ್ಲಿ ನಡೆದಿದೆ.

ಬಹುಶಃ ಅನುವಾದ ಹಂಪನಾ ಅವರ ಆಸಕ್ತಿಯ ಕ್ಷೇತ್ರ ಅಲ್ಲ. ಈ ನಾಲ್ಕೂ ಕೂಡಾ ಅನ್ಯ ಪ್ರಕಾಶಕರ ಇಚ್ಛೆಯ ಮೇರೆಗೆ ಮಾಡಿಕೊಟ್ಟ ಕೆಲಸಗಳು. ಆದರೆ ಮೂಲಕೃತಿಗೆ ಎಲ್ಲೂ ಅನ್ಯಾಯವಾಗದಂತೆ ನೋಡಿಕೊಂಡಿದ್ದಾರೆ.

ವಿಮರ್ಶೆ ಎಂದು ಹೆಸರಿಸಿ ಹಂಪನಾ ಪ್ರಕಟಿಸಿರುವ ಕೃತಿಗಳು ನಾಲ್ಕು ಮಾತ್ರ. ೧.ಪೈ ಅವರ ಮೂರು ನಾಟಕಗಳು ೨. ವಿ.ಕೃ. ಗೋಕಾಕ್ ೩. ಮೂರನೆಯ ಮಂಗರಸ ೪. ಸಾಂಗತ್ಯ ಕವಿಗಳು.

ವಾಸ್ತವವಾಗಿ ಈ ಕೃತಿಗಳ ಪೈಕಿ ಮೊದಲನೆ ಎರಡನ್ನು ಹಂಪನಾ ಅವರ ವಿಮರ್ಶಾ ಸಾಮರ್ಥ್ಯದ ಉತ್ತಮ ಪ್ರತಿಬಿಂಬಗಳೆಂದು ಕರೆಯಲಾಗುವುದಿಲ್ಲ. ಯಾಕೆಂದರೆ ಇವು-ಆಯಾ ಲೇಖಕರ ಬಗ್ಗೆ ಪ್ರೀತಿ ಮೂಡಿಸಲೆಂದು ಏರ್ಪಡಿಸಿದ್ದ ಭಾಷಣಗಳ ಲಿಖಿತ ರೂಪಗಲು. ವಿಸ್ತೃತವಾದ ಪರಿಶೀಲನೆಯಾಗಲೀ ವಸ್ತುನಿಷ್ಠ ಟೀಕೆಗಾಗಲೀ ಇಂಥ'ಲ್ಲಿ ಹೆಚ್ಚು ಅವಕಾಶವಿರುವುದಿಲ್ಲ. ಆದರಲ್ಲೂ ಪೈಯವರ ಮೂರು ನಾಟಕಗಳ ಬಗ್ಗೆ ಮೆಚ್ಚುಗೆಯಲ್ಲದೆ ಇನ್ನೇನೂ ಹೇಳಲು ಸಾಧ್ಯವಿಲ್ಲ. ಕಾರಣ, ಆ ನಾಟಕಗಳ ಭಿತ್ತಿ, ಆಶಯ, ರಚನಾಕಾಲಗಳೇ ಆ ಮಿತಿಗಳನ್ನು ಒದಗಿಸಿಕೊಟ್ಟಿವೆ. ಇದನ್ನು ಅರಿತಿರುವ ಹಂಪನಾ ಆ ಮಿತಿಯಲ್ಲಿಯೇ ತಮ್ಮ ವಿಮರ್ಶಾ ಕಾರ್ಯವನ್ನು ಇಲ್ಲಿ ನಿರ್ವಹಿಸಿದ್ದಾರೆ. ಈ ಲೇಖನದ ಒಂದು ಉತ್ತಮಾಂಶವೆಂದರೆ ಪೈಯವರ ಅಸ್ಪೃಶ್ಯತಾ ವಿರೋಧಿ ಮನೋಧರ್ಮ ಈ ನಾಟಕಗಳಲ್ಲಿ ಹೇಗೆ ಸೂಕ್ಷ್ಮವಾಗಿ ಅಭಿವ್ಯಕ್ತವಾಗಿದೆ ಎಂಬುದನ್ನು ಗುರುತಿಸಿರುವುದು.

ವಿ.ಕೃ. ಗೋಕಾಕರನ್ನು ಕುರಿತು ಬೆಂಗಳೂರು ವಿ.ವಿ.ಯ ಪ್ರಚಾರೋಪನ್ಯಾಸ ಕಾರ್ಯಕ್ರಮದಲ್ಲಿ ನೀಡಿದ ಉಪನ್ಯಾಸ ಅರವತ್ತು ಪುಟಗಳ ಕಿರುಹೊತ್ತಗೆಯಾಗಿ ರೂಪ ಪಡೆದಿದೆ. ಮುಖ್ಯವಾಗಿ ಗೋಕಾಕರ ಕಾವ್ಯವನ್ನು ಕುರಿತೇ ಇಲ್ಲಿ ಪ್ರಧಾನ ವಿವೇಚನೆ ಇದೆ.

ಗದ್ಯಬರಹಗಳ ಬಗ್ಗೆ ಕಿರಿದರಲ್ಲಿ ವಿವೇಚಿಸಲಾಗಿದೆ. ಸಮಯ ಹಾಗೂ ಪುಟಗಳ ಪರಿಮಿತಿ ಇರುವಲ್ಲಿ ಇದು ಸಹಜ.

ಈ ಕೃತಿಯಲ್ಲಿ ಗೋಕಾಕರನ್ನು ಕುರಿತ ಮೆಚ್ಚಿಗೆಯೇ ಬಹುಭಾಗದಲ್ಲಿದ್ದರೂ ಮೆಚ್ಚಿಸಲೆಂದೇ ಬರೆದಂತಿಲ್ಲ. 'ಸಮುದ್ರ ಗೀತೆ'ಗಳನ್ನು ತುಂಬ ಮೆಚ್ಚಿಕೊಂಡು ಬರೆಯುವ ಹಂಪನಾ ಅದು 'ದ್ಯಾವಾ ಪೃಥಿವಿ'ಗಿಂತ ಉತ್ತಮವಾದದ್ದು ಎನ್ನುತ್ತಾರೆ. ಅದೇ ರೀತಿ, ಅವರ ಬೃಹತ್ ಕಾದಂಬರಿ 'ಸಮರಸವೇ ಜೀವನ'ಕನ್ನಡದ ಮಹತ್ವದ ಕಾದಂಬರಿಯೇನಲ್ಲ ಎನ್ನುತ್ತಾರೆ. ಇಲ್ಲಿಲ್ಲ ಭಿನ್ನಾಭಿಪ್ರಾಯಕ್ಕೆ ಅವಕಾಶವಿದೆ. ನನ್ನ ದೃಷ್ಟಿಯಲ್ಲಿ 'ಸಮುದ್ರಗೀತೆಗಳು' ಕೂಡ ಇವರು ಹೇಳುವಷ್ಟು ಉತ್ಕೃಷ್ಟ ಕಾವ್ಯವೇನಲ್ಲ. ಗೋಕಾಕರ ಕಾವ್ಯ ಎಲ್ಲಿಯೂ ನಗುವುದೇ ಇಲ್ಲವೆಂದೂ ಚಿಂತನೆಗಳ ಭಾರದಿಂದ ಕುಸಿಯುತ್ತದೆಂದೂ ನನಗನ್ನಿಸುತ್ತದೆ. ಸಮರಸವೇ ಜೀವನ-ಇಂದಿಗೂ ಕನ್ನಡದ ಉತ್ತಮ ಕಾದಂಬರಿಗಳಲ್ಲೊಂದು ಎಂದು ನನ್ನ ನಿಲುವು. ವಿಮರ್ಶೆಯಲ್ಲಿ ಇಂಥ ವಿರುದ್ಧ ದೃಷ್ಟಿಗಳು ಸಾಧ್ಯ 'ಭಾರತ ಸಿಂಧು ರಶ್ಮಿ' ಯನ್ನು ಕುರಿತು ನಿರ್ದಾಕ್ಷಿಣ್ಯವಾಗಿ ಬರೆಯುತ್ತಾ ಅದು ರಸದ ದೃಷ್ಟಿಯಿಂದ ಎಷ್ಟು ನೀರಸ ಎಂದು ಹೇಳಿರುವ ಮಾತು ಬಹುಜನ ವಿಮರ್ಶಕರ ಅಭಿಪ್ರಾಯಕ್ಕೆ ತಾಳೆಯಾಗುತ್ತದೆ.

'ಮೂರನೆಯ ಮಂಗರಸ' ಮೈಸೂರು ವಿ.ವಿ.ಯ ಪ್ರಚಾರೋಪನ್ಯಾಸ ಮಾಲೆಯಲ್ಲಿ ಪ್ರಕಟವಾಗಿರುವ ಕೃತಿ. ಪುಟ್ಟ ಕೃತಿಯಾದರೂ ಸಾಕಷ್ಟು ಸಾಮಗ್ರಿ ಇದರಲ್ಲಿ ಅಡಕವಾಗಿದೆ. ಈ ಕವಿಯ ಕೃತಿಗಳ ಪರಿಚಯ, ಅವುಗಳನ್ನು ಕುರಿತು ಲಭ್ಯವಿರುವ ಪುಟಗಳ ಪರಿಮಿತಿಯಲ್ಲಿ ವಸ್ತುನಿಷ್ಠ ವಿಮರ್ಶೆ-ಇಲ್ಲಿ ದೊರೆಯುತ್ತದೆ.

'ಸಾಂಗತ್ಯ ಕವಿಗಳು' ಸುಮಾರು ಒಂದು ನೂರಾ ಅರವತ್ತು ಪುಟಗಳ ಕೃತಿ.ಮೊದಲಬಾರಿಗೆ ಇಲ್ಲಿ ಕನ್ನಡ ಸಾಂಗತ್ಯ ಸಾಹಿತ್ಯದ ದೀರ್ಘ ವಿವೇಚನೆ ಇದೆ. ವಾಸ್ತವವಾಗಿ ಇದು ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಬರೆದ ಕೃತಿ. ಇಲ್ಲಿನ ಹತ್ತು ಅಧ್ಯಾಯಗಳಲ್ಲಿ ಐನೂರು ವರ್ಷಗಳ ಅವಧಿಯಲ್ಲಿ ಸಾಂಗತ್ಯ ಪ್ರಕಾರ ಬೆಳೆದುಬಂದ ಬಗೆ, ಸಾಂಗತ್ಯ ಕವಿಗಳು, ಅವರ ಕೃತಿಗಳು, ಅವುಗಳ ವಿಮರ್ಶೆ ಇವೆಲ್ಲ ವಿಸ್ತಾರವಾಗಿ ನಡೆದಿದೆ. ಪ್ರತಿ ಶತಮಾನದ ಕವಿಗಳ ಕೃತಿಗಳ ವೈಶಿಷ್ಟ್ಯವನ್ನೂ ಲೇಖಕರು ಇಲ್ಲಿ ಗುರುತಿಸಿದ್ದಾರೆ. ವಿಮರ್ಶಕರ ಹರಿತವಾದ ಮೌಲ್ಯಮಾಪನ ಸಾಮರ್ಥ್ಯ ಇಲ್ಲಿ ಎದ್ದು ಕಾಣುತ್ತದೆ. ಈ ಕೃತಿ ಪ್ರಕಟವಾದ ಎಷ್ಟೋ ವರ್ಷಗಳ ನಂತರ ಡಾ. ವೀರಣ್ಣ ರಾಜೂರ ಅವರ 'ಕನ್ನಡದಲ್ಲಿ ಸಾಂಗತ್ಯ ಸಾಹಿತ್ಯ' ನಿಬಂಧ ಸಿದ್ಧವಾಯಿತು. ಪರಿಷತ್ ಅಧ್ಯಕ್ಷರಾಗಿ ಹಂಪನಾ ಅವರೇ ಅದರ ಪ್ರಕಟಣೆಯ ವ್ಯವಸ್ಥೆ ಮಾಡಿದರು.

ಈ ನಾಲ್ಕು ಪುಸ್ತಕಗಳ ಪರಿಶೀಲನೆಯಿಂದ ನಮಗೆ ತಿಳಿಯುವುದಿಷ್ಟು. ಈ ಕೃತಿಗಳ ಪೈಕಿ ಕೊನೆಯದೊಂದನ್ನು ಬಿಟ್ಟು ಉಳಿದ ಮೂರರಲ್ಲೂ ವಿಮರ್ಶಕ ಹಂಪನಾ ಅವರಿಗೆ ಪೂರ್ಣ ಅವಕಾಶ ಸಿಕ್ಕಿಲ್ಲ. ಸಿಕ್ಕಷ್ಟರಲ್ಲಿ ಅವರು ನಿಷ್ಪಕ್ಷಪಾತಿಯಾಗಿ ಕೆಲಸಮಾಡಲು ಯತ್ನಿಸಿರುವುದು ನಿಜ. ಆದರೆ ಇವರ ವಿಮರ್ಶನ ಶಕ್ತಿಗೆ ಸಾಕ್ಷಿಯಾಗಿ ಕೇವಲ ಈ ಕೃತಿಗಳನ್ನು ನೋಡಿದರೆ ಸಾಲದು. ಅವರ ಗ್ರಂಥಸಂಪಾದನೆಯ ಕೃತಿಗಳಲ್ಲಿನ ಕಾವ್ಯವಿಮರ್ಶೆಗೆ ಸಂಬಂಧಿಸಿದ

ಭಾಗಗಳನ್ನೂ, 'ಕವಿ ಬಂಧುವರ್ಮ-ಒಂದು ಜಿಜ್ಞಾಸೆ' ಗ್ರಂಥವನ್ನೂ ನೋಡಬೇಕು. ವಿಮರ್ಶಕ ಹಂಪನಾ ಕೂಡಾ ಅಲ್ಲಿ ಪೂರ್ಣಪ್ರಮಾಣದಲ್ಲಿ ಗೋಚರಿಸುತ್ತಾರೆ.

ತುಲನೆ, ಸ್ಪಷ್ಟತೆ, ವಸ್ತುನಿಷ್ಠತೆ-ಇವು ಹಂಪನಾ ಅವರ ವಿಮರ್ಶೆಯ ಪ್ರಧಾನ ಲಕ್ಷಣಗಳು-ಇತರ ಯಾವುದೇ ಉತ್ತಮ ವಿಮರ್ಶೆಯಲ್ಲಿ ಕಂಡುಬರುವಂತೆ. ಯಾವುದೇ ಒಂದು ಟೀಕೆಯ ಮಾತನ್ನಾಡುವಾಗಲೂ ಅವರು ಸಮಾನ ವಸ್ತುವಿನ ಮತ್ತೊಂದೆರಡು ಉದಾಹರಣೆಗಳನ್ನು ಮನಸ್ಸಿನಲ್ಲಿಟ್ಟುಕೊಂಡೇ ಇರುತ್ತಾರೆ. (ಈ ಪೂರ್ವದಲ್ಲಿ ಇದನ್ನು ಉಲ್ಲೇಖಿಸಲಾಗಿದೆ.) ತಪ್ಪಿದಲ್ಲಿ ಟೀಕಿಸಲು ಮುಂದಾಗುವಂತೆ ಉತ್ತಮವಾದದ್ದಕ್ಕೆ ಅನ್ಯಾಯವಾದಾಗ ಅದರ ವಕಾಲತ್ತು ವಹಿಸಲೂ ಇವರು ಮುಂದಾಗುತ್ತಾರೆ. ಉದಾಹರಣೆಗೆ, ಅವರು ಪೊನ್ನನ ಬಗೆಗೆ ಆಡುವ ಮಾತುಗಳನ್ನು ನೋಡಿ ;

'ಪೊನ್ನ ಹಳಗನ್ನಡ ಕವಿಗಳಲ್ಲಿ ನತದೃಷ್ಟ..... ಈ ಶತಮಾನದಲ್ಲಿ ಮಾತ್ರ ಅಧುನಿಕ ವಿಮರ್ಶಕರು ಪೊನ್ನನಿಗೆ ನ್ಯಾಯವಾಗಿ ಸಲ್ಲಬೇಕಾದ ಕವಿಕೃತಿಗೌರವಗಳನ್ನು ತೋರಲಿಲ್ಲ. ಈ ಅನಾದರಕ್ಕೆ ಮುಖ್ಯಕಾರಣ ಪೊನ್ನನನ್ನು ವಸ್ತು ನಿಷ್ಠವಾದ ಸಂಪೂರ್ಣ ಅಧ್ಯಯನಕ್ಕೆ ವಿಶ್ಲೇಷಣೆಗೆ ಒಳಪಡಿಸದಿದ್ದುದು.' (ಶಾಂತಿಪುರಾಣ ಪೀಠಿಕೆ.)

ಇದೇ ರೀತಿ ಬಂಧುವರ್ಮನ ಬಗ್ಗೆ ಆಡುವ ಮಾತುಗಳನ್ನು ನೋಡಿ :

'ತನ್ನ ಹಲವು ವಿಶಿಷ್ಟ ಗುಣ ಗೌರವಗಳಿಂದ, ಉಳಿದ ಕನ್ನಡ ಕವಿಗಳಿಗಿಂತ ಭಿನ್ನನಾಗಿ ಕಾಣುವ ಬಂಧುವರ್ಮ ಕವಿ ಹಿಂಡನಗಲಿದ ಒಂಟಿ ಸಲಗನನ್ನು ನೆನಪಿಸುತ್ತಾನೆ. ತನ್ನ ಎರಡೂ ಚಂಪೂಕಾವ್ಯಗಳ ರಚನೆಯಲ್ಲಿ ವ್ಯಕ್ತವಾಗಿರುವ ಒಟ್ಟು ಸತ್ವ, ಸಾಧನೆ, ಮತ್ತು ವ್ಯಕ್ತಿತ್ವದ ದೃಷ್ಟಿಯಿಂದ ಬಂಧುವರ್ಮ ಕವಿ ನಿಶ್ಚಯವಾಗಿಯೂ ಪಂಪನಿಗೆ ದ್ವಿತೀಯನಾಗುತ್ತಾನೆ. ಆದಿಪುರಾಣ ಮತ್ತು ಜೀವಸಂಬೋಧನೆ ಕಾವ್ಯಗಳನ್ನು ತುಲನೆ ಮಾಡಿದಾಗ ಎರಡೂ ಕಾವ್ಯಗಳು ಸಮಶ್ರುತಿಯಲ್ಲಿ ಸಾಗುವುದು ಕಾಣುತ್ತದೆ. ಒಮ್ಮೊಮ್ಮೆ ಪಂಪನ ಸಾಧನೆಗಿಂತ ಬಂಧುವರ್ಮನ ಸಾಧನೆ ದೊಡ್ಡದೆನಿಸಲೂ ಬಹುದು-ಪಂಪನ ಸಾಧನೆಯನ್ನು ಕಡೆಗಣಿಸುತ್ತಿಲ್ಲ. ಆದರೆ ಬಂಧುವರ್ಮನ ಸಾಧನೆಯೂ ಕಡೆಗಣಿಸುವಂಥಾದ್ದಲ್ಲ ಎಂಬುದು ಮುಖ್ಯವಾದ ವಿಷಯ. ಈತನೂ ತನ್ನ ಬಗೆಗಣ್ಣಿನೆದುರು ಪಂಪನಕಾವ್ಯದ ಮಹೋನ್ನತಿಯನ್ನು ಸಾಕ್ಷಾತ್ಕಾರಿಸಿಕೊಂಡಿದ್ದಾನೆ. ಅದಕ್ಕಿಂತ ಭಿನ್ನವೂ ಮಿಗಿಲೂ ಆದ ತನ್ನದೊಂದು ಪ್ರಯೋಗವನ್ನು ಇರುವ ಪರಿಮಿತಿಯಲ್ಲಿ ನಡೆಸಿದ್ದಾನೆ... ಪಂಪನಿಗಿಂತ ಈತನ ಶ್ರಮ ಸಾಧನೆ ಹೆಚ್ಚು. ಆದರೂ ಪಂಪನ ಮಹಾಕಾವ್ಯ ನಿರ್ವಹಣೆ, ಅಖಂಡ ಬೀಸು, ವೈಭವೋನ್ನತಿ, ಆ ಎತ್ತರದಲ್ಲಿ ಈತನಲ್ಲಿಲ್ಲ.' (ಕವಿ ಬಂಧುವರ್ಮ, ಜಿಜ್ಞಾಸೆ ಪುಟ ೧೭-೧೮)

ಹೀಗೆ ವಕಾಲತ್ತು ವಹಿಸುತ್ತಲೇ ವ್ಯತ್ಯಾಸವನ್ನು ಮರೆಯದ, ಒಂದು ಇನ್ನೊಂದಕ್ಕಿಂತ ಹೇಗೆ ಮತ್ತು ಏಕೆ ಭಿನ್ನ ಎಂಬುದನ್ನು ಸ್ಪಷ್ಟಮಾನದಂಡಗಳಿಂದ ಅಳೆಯುವ, ಕೇವಲ ಗುಣಪಕ್ಷಪಾತತ್ವವೇ ಏಕೈಕ ಧೋರಣೆಯಾಗುಳ್ಳ ವಿಮರ್ಶಾದೃಷ್ಟಿ ಹಂಪನಾ ಅವರದ್ದು. ಖಚಿತವಾಗಿ ಇದು ಮೇಲ್ಮಟ್ಟದ ವಿಮರ್ಶನ ಪ್ರತಿಭೆಯ ದ್ಯೋತಕ. ಇದನ್ನು ಸಮರ್ಥಿಸಲು

ಹಂಪನಾ ಅವರ ಬರವಣಿಗೆಯ ರಾಶಿಯಿಂದ ಬೇಕಾದಷ್ಟು ಉದಾಹರಣೆಗಳನ್ನು ಎತ್ತಿ ಕೊಡಬಹುದು. ಹಂಪನಾ ಲಲಿತ ಪ್ರಬಂಧಕಾರರಾಗಿ ಎಷ್ಟು ಸಲಿಲ ಸ್ವರೂಪಿಯೋ, ವಿಮರ್ಶಕರಾಗಿ ಅವರು ಅಷ್ಟೇ ದೂರ ನಿಲ್ಲುವವರು, ಅಚಲರು.

## ೬. ಬಿಡಿ ಲೇಖನಗಳು

ಕೇವಲ ಕುತೂಹಲಕ್ಕಾಗಿ ಹಂಪನಾ ಅವರ ಬಿಡಿಬರಹಗಳ ಹರಹಿನ ಬಗ್ಗೆ ಕೆಲವು ಮಾತುಗಳನ್ನಿಲ್ಲಿ ಹೇಳಬಹುದು. ಈಗಾಗಲೇ ಪಟ್ಟಿಮಾಡಲ್ಪಟ್ಟಿರುವ (ಈ ಪ್ರಬಂಧದ ಆರಂಭದ ಪುಟ ನೋಡಿ) ಇವರ ೨೫೮ ಲೇಖನಗಳ ಪಟ್ಟಿಯಲ್ಲಿ ಮೊದಲ ೧೫೦ ಲೇಖನಗಳ ಶೀರ್ಷಿಕೆಯತ್ತ ಕಣ್ಣಾಡಿಸಿದಾಗ, ಹಿಂದೆ ಅವುಗಳಲ್ಲಿ ಕೆಲವನ್ನು ಓದಿದ್ದು ನೆನಪಾಯಿತು. ಕೆಲವು ಟಿಪ್ಪಣಿಗಳು ವಿಶೇಷವಾಗಿ ಶಬ್ದನಿಷ್ಪತ್ತಿಯನ್ನು, ಅರ್ಥವಿವೇಚನೆಯನ್ನು ಕುರಿತಾದುವು, ಈಗ ಪುಸ್ತಕರೂಪದಲ್ಲಿ ಬಂದಿವೆ. ಬಂಧುವರ್ಮನ ಬಗ್ಗೆ, ಭಾಷಾವಿಜ್ಞಾನಿಗಳ ಬಗ್ಗೆ, ಇವರು ಬರೆದಿರುವ ಲೇಖನಗಳೂ ಪುಸ್ತಕ ರೂಪದಲ್ಲಿ ಬಂದಿವೆ. ಲಲಿತ ಪ್ರಬಂಧಗಳೂ ಅಷ್ಟೆ. ಈ ಪಟ್ಟಿಯಲ್ಲಿರುವ ಎರಡು ರೇಡಿಯೋ ರೂಪಕ ಇನ್ನೂ ಪ್ರಕಟವಾಗಿಲ್ಲ. ಪುಸ್ತಕದಲ್ಲಿ ಸೇರಿರುವ ಲೇಖನಗಳನ್ನು ಬಿಟ್ಟರೆ ಹಾಗೆಯೇ ಬಿಡಿಯಾಗಿ ಉಳಿದವು (೧೫೦ರ ಪೈಕಿ) ೧೪೬ ಆಗುತ್ತವೆ. ಪಟ್ಟಿಮಾಡಲ್ಪಟ್ಟಿರುವ ಒಟ್ಟು ೨೫೮ ಸಂಖ್ಯೆಗೆ ಈ ಲೆಖ್ಖಾಚಾರವನ್ನು ವಿಸ್ತರಿಸಿದರೆ ಸುಮಾರು ಎರಡುನೂರು ಲೇಖನಗಳು ಹಾಗೆಯೇ ಬಿಡಿಬಿಡಿಯಾಗಿ ಉಳಿದಿವೆ ಎಂದು ಊಹಿಸಬಹುದು. ಒಂದೇ ವಿಷಯದ ಬಗ್ಗೆ, ವ್ಯಕ್ತಿಯ ಬಗೆಗೆ ಬೇರೆಬೇರೆ ಪತ್ರಿಕೆಗಳಲ್ಲಿ ಬೇರೆಬೇರೆ ಲೇಖನಗಳನ್ನು ಬರೆದಿರುವುದೂ ಇದರಲ್ಲಿ ಸೇರಿದೆ. ವಿಷಯದ ಪುನರಾವರ್ತನೆಯನ್ನು ತಪ್ಪಿಸುವ ದೃಷ್ಟಿಯಿಂದ ಅವುಗಳಲ್ಲಿ ಕೆಲವನ್ನು ಪುಸ್ತಕದಲ್ಲಿ ಸೇರಿಸದೆ ಕೈಬಿಡಬಹುದು. ಅಲ್ಲಿಗೆ ಒಂದು ಸಂಪುಟವಾಗಿ ಪ್ರಕಟವಾಗಲು ಯೋಗ್ಯವಾದ ಲೇಖನಗಳ ಸಂಖ್ಯೆ ೧೫೦ ರಷ್ಟಾಗುತ್ತದೆ. ಹೆಚ್ಚೂ ಕಡಿಮೆ ೭೦೦ ಪುಟಗಳ ಒಂದು ಸಂಪುಟವಾಗುವಷ್ಟು ಇವರ ಮುದ್ರಿತ ಬರಹಗಳು ಚೆದುರಿ ಬಿದ್ದಿವೆ ಎಂದು ಇದರಿಂದ ಅರ್ಥವಾಗುತ್ತದೆ.

ಇವುಗಳ ವಿಷಯ ವೈವಿಧ್ಯವೂ ಗಮನಿಸುವಂಥದು. ಹಿಂದೆ ಉಲ್ಲೇಖಿಸಿರುವ ೧೪೬ ಲೇಖನಗಳನ್ನು ವಿಂಗಡಿಸಿದಾಗ ಸ್ಥೂಲವಾದ ಒಂದು ಪಟ್ಟಿ ಹೀಗೆ ಮೂಡಿತು :

| | | |
|---|---|---|
| ೧. | ವ್ಯಕ್ತಿ ಜೀವನ, ಸಾಧನೆ, ಕುರಿತ ಲೇಖನಗಳು | ೩೬ |
| ೨. | ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದವು | ೪೧ |
| ೩. | ಸಾಮಾಜಿಕ ವಿಷಯಗಳು, ಕನ್ನಡನಾಡು, ನುಡಿ ಬಗೆಗೆ | ೧೪ |
| ೪. | ಪುಸ್ತಕ ವಿಮರ್ಶೆಗಳು | ೧೧ |
| ೫. | ಲಲಿತ ಕಲೆಗಳ ಬಗೆಗೆ | ೪ |
| ೬. | ಧರ್ಮ, 'ಸಿದ್ಧಾಂತಗಳ ಬಗೆಗೆ | ೮ |
| ೭. | ಶಿಕ್ಷಣದ ಬಗೆಗೆ | ೨ |

೮. ಕವಿ, ಕಾಲದ ಬಗೆಗೆ ೨

೯. ಭಾಷಾಶಾಸ್ತ್ರದ ಬಗೆಗೆ ೨೩

೧೦. ಮುನ್ನುಡಿಗಳು ೨

೧೧. ಇತಿಹಾಸ, ಸಂಶೋಧನೆ ೪

ಮೊದಲೇ ಹೇಳಿರುವಂತೆ ಇದೊಂದು ಸ್ಥೂಲ ಲೆಖ್ಖಾಚಾರ ಮಾತ್ರ. ಲೇಖನಗಳನ್ನು ಎದುರಿಗೆ ಹರಡಿಕೊಂಡು ಕೂತು ನೋಡಿದರೆ ಈ ವರ್ಗೀಕರಣದಲ್ಲಿಯೂ ಅಂಕಿ-ಸಂಖ್ಯೆಗಳಲ್ಲಿಯೂ ಕೆಲವು ವ್ಯತ್ಯಾಸಗಳಾಗಬಹುದು.

ಓದಲು ದೊರೆತಿರುವ ಬಿಡಿ ಬರಹಗಳ ಆಧಾರದ ಮೇಲಿಂದ ಹಂಪನಾರ ಈ ಬರಹಗಳ ಬಗ್ಗೆ ಈ ಮಾತುಗಳನ್ನು ಹೇಳಬಹುದು.

1. ವಿಷಯಕ್ಕೆ ತಕ್ಕ ಗಾಂಭೀರ್ಯದ ಶೈಲಿ.

2. ವ್ಯಕ್ತಿ ಪರಿಚಯದ ಲೇಖನಗಳಲ್ಲಿ ಆತ್ಮೀಯತೆಯ ಧಾಟಿ. ದೋಷಗಳನ್ನು ಸೌಜನ್ಯದ ದೃಷ್ಟಿಯಿಂದ ಅಷ್ಟಾಗಿ ಉಲ್ಲೇಖಿಸದೆ ಗುಣಾತ್ಮಕ ಅಂಶಗಳನ್ನು ಮಾತ್ರ ಹೇಳಿರುವುದೇ ಹೆಚ್ಚು.

3. ಸಾಹಿತ್ಯ ವಿಮರ್ಶೆ, ಇತಿಹಾಸ-ಇಂಥ ವಿಷಯಗಳಿಗೆ ಸಂಬಂಧಿಸಿದಂತೆ ವಸ್ತುನಿಷ್ಠತೆ.

4. ಪುಸ್ತಕ ವಿಮರ್ಶೆಗಳು ಸಂಕ್ಷಿಪ್ತವಾಗಿರುವುದೇ ಹೆಚ್ಚು (ಇದು ಪತ್ರಿಕೆಯಲ್ಲಿನ ಸ್ಥಳಾವಕಾಶದ ಕೊರತೆಯ ಪರಿಣಾಮವಿರಬಹುದು.)

5. ಸಾಹಿತ್ಯ ವಿಮರ್ಶೆಯ ಲೇಖನಗಳು ಅಗತ್ಯ ವಿಸ್ತಾರ ಪಡೆದುಕೊಂಡಿರುತ್ತವೆ. ಇದೇ ರೀತಿ-ಕವಿ, ಕಾಲ ವಿಚಾರದಂತಹ ಗಂಭೀರ ವಿಚಾರಗಳನ್ನು ಚರ್ಚಿಸುವ ಲೇಖನಗಳು ಸಹ.

6. ಹೀಗೆ ಪ್ರಕಟವಾಗಿ ಇನ್ನೂ ಪುಸ್ತಕ ರೂಪ ಪಡೆಯದಿರುವ ಲೇಖನಗಳಲ್ಲಿ ಹಲವು ನಿಜಕ್ಕೂ ಇಂದಿಗೂ ಉತ್ತಮ ಲೇಖನಗಳೇ ಆಗಿವೆ. ಉದಾಹರಣೆಗೆ ಜೀವನ ಪತ್ರಿಕೆಯಲ್ಲಿ ಅವರು ಪ್ರಕಟಿಸಿದ 'ವಿಮರ್ಶಾ ಮೀಮಾಂಸೆ' ಎಂಬ ಲೇಖನ, ಕನ್ನಡ ನುಡಿಯಲ್ಲಿ ಬರೆದ ಡಿ.ಎಲ್.ಎನ್ ಕುರಿತ ಲೇಖನಗಳನ್ನೂ ಉದಾಹರಿಸಬಹುದು.

**೭. ಹಂಪನಾ ಬರಹಗಳು-ಚರ್ಚೆ ಏಕಿಲ್ಲ ?**

ಕನ್ನಡ ನಾಡಿನಲ್ಲಿ ಹಂಪನಾ ಅವರ ಬಗ್ಗೆ ಚರ್ಚೆ ಧಂಡಿಯಾಗಿ ನಡೆದಿದೆ. ಆದರೆ ಅವರ ಬರಹಗಳನ್ನು ಕುರಿತು ಅದರ ಅರ್ಧಭಾಗದಷ್ಟೂ ಚರ್ಚೆ ನಡೆದಿಲ್ಲ; ಅವರ ಬರವಣಿಗೆ ಖಂಡಿತವಾಗಿ ಗಣ್ಯವೆಂಬುದನ್ನು ಈವರೆಗಿನ ವಿಶ್ಲೇಷಣೆ ಸಾಬೀತು ಪಡಿಸಿದೆ

ವಿದ್ವಲ್ಲೋಕದಲ್ಲಿನ ಒಳ ರಾಜಕೀಯ ಎಂಬ ಒಂದು ಕಾರಣವನ್ನು ಹೇಳಬಹುದಾದರೂ, ಅದು ನಿಜವೂ ಆದರೂ, ಅದೊಂದೇ ಕಾರಣ ಅಲ್ಲ. ಇನ್ನೂ ಕೆಲವು ಕಾರಣಗಳನ್ನು ಹೀಗೆ ಪಟ್ಟಿ ಮಾಡಬಹುದು :

1. ಹಂಪನಾ ಉತ್ತಮ ವಾಗ್ಮಿ ಹಾಗೂ ಕನ್ನಡ ಕಾರ್ಯಕರ್ತರೂ ಆಗಿದ್ದು ಅದು ಸಾರ್ವಜನಿಕರ ಕಣ್ಣಿಗೆ ಹೆಚ್ಚು ಬೀಳುವುದರಿಂದ ಆ ಬಗ್ಗೆ ಪತ್ರಿಕೆಗಳಲ್ಲಿ ವರದಿಯಾಗುವಷ್ಟು, ಮನೆಯಲ್ಲಿ ಕೂತು ಮಾಡುವ ಬರವಣಿಗೆಯ ಬಗ್ಗೆ ಆಗುವುದಿಲ್ಲ. ಈ ಕಾರಣದಿಂದ ಪಂಡಿತ ಲೇಖಕರಾಗಿ ಹಂಪನಾ ಚರ್ಚಿತರಾಗಲಿಲ್ಲ.

2. ಹಂಪನಾ ತಮ್ಮ ಬಹುಪಾಲು ಶ್ರಮ, ಆಯಸ್ಸು, ಬುದ್ಧಿಯನ್ನು ವ್ಯಯಿಸಿ ದುಡಿದಿರುವುದೆಲ್ಲ ಉಪೇಕ್ಷಿತ ಕ್ಷೇತ್ರದಲ್ಲಿ ಅಂದರೆ-ಅವರೆಗೂ ಬಹು ಮಟ್ಟಿಗೆ ಅಪ್ರಕಾಶಿತರಾಗಿ ಉಳಿದಿದ್ದ ಸಾಳ್ವ ಕವಿ, ಬೊಮ್ಮಣ ಕವಿ, ಚಂದ್ರಸಾಗರವರ್ಣಿ ಇಂತಹ ಎರಡನೇ ದರ್ಜೆಯ ಕವಿಗಳ ಕೃತಿಗಳು ಹೊರಗೆ ಬರಲೆಂದು ಶ್ರಮಿಸಿದರು. ಇವರ ಕೃತಿಗಳು ಛಂದಸ್ಸು, ಭಾಷೆಯ ದೃಷ್ಟಿಯಿಂದ ಮುಖ್ಯವಾದದ್ದರಿಂದ ಅವು ಸಂಶೋಧಕರಿಗೆ ಲಭ್ಯವಾಗಲೆಂದು ದುಡಿದರು. ಇಂಥ ಕೆಲಸಗಳು ಅನ್ಯ ವಿದ್ವಾಂಸರ ಗಮನವನ್ನು ಅಷ್ಟು ಬೇಗ ಸೆಳೆಯುವುದಿಲ್ಲ. ಇದೇ ಪ್ರಮಾಣದ ಕೆಲಸವನ್ನು ಇವರು ಪಂಪ, ರನ್ನ, ಕುಮಾರವ್ಯಾಸ, ಲಕ್ಷ್ಮೀಶರಂಥವರ ಬಗ್ಗೆ ಮಾಡಿದ್ದರೆ ಆ ಬರಹಗಳೆಲ್ಲ ಬಹು ಬೇಗ ಮಾನ್ಯತೆ ಪಡೆದುಬಿಡುತ್ತಿದ್ದವು.

3. ಇವರ ಗ್ರಂಥ ಸಂಪಾದನೆ ಹಾಗೂ ಸಾಹಿತ್ಯ ಇತಿಹಾಸ ಸಂಬಂಧಿ ಸಂಶೋಧನೆಗಳೆಲ್ಲ (ಅಂದರೆ-ಇವರ ಒಟ್ಟು ಬರವಣಿಗೆಯ ಅರ್ಧಕ್ಕಿಂತ ಹೆಚ್ಚು ಭಾಗ) ಅಲ್ಪ ಸಂಖ್ಯಾತವೂ ಅಲಕ್ಷ್ಯಕ್ಕೀಡಾದುದೂ ಆಗಿರುವ ಜೈನ ಧರ್ಮದ ಬಗ್ಗೆ ನಡೆದದ್ದರಿಂದ, ಜೈನ ಕವಿಗಳೆಂದರೆ-ಪಂಪ, ರನ್ನ, ಜನ್ನ, ರತ್ನಾಕರ, ನಾಗಚಂದ್ರ-ಇವರಿಷ್ಟೇ ಮಂದಿ ಎಂದು ನಮ್ಮ ವಿದ್ವಾಂಸರು ತಿಳಿದಿರುವುದರಿಂದ, ಈ ಕೃತಿಗಳು ಕನ್ನಡ ವಿದ್ವಾಂಸರ ಗಮನವನ್ನೂ ಸಹ ಇನ್ನೂ ಸೆಳೆದಿಲ್ಲ.

4. ವ್ಯಾವಹಾರಿಕವಾಗಿ ಹಂಪನಾರನ್ನು ಸುತ್ತಿಕೊಂಡ ವಿವಾದಗಳಿಂದಾಗಿ ಅವರನ್ನು ದೂರ ಮಾಡತೊಡಗಿದ ವಿದ್ವಾಂಸರುಗಳು ಅವರ ಸಂಶೋಧನೆಗಳನ್ನೂ ಅಲಕ್ಷಿಸಿದರು.

5. ಹಂಪನಾ ತಮ್ಮ ಪುಸ್ತಕಗಳನ್ನು ಪತ್ರಿಕೆಗಳಿಗೆ ವಿಮರ್ಶೆಗೆಂದು ಕಳಿಸದೆಯೇ ಸುಮಾರು ಇಪ್ಪತ್ತು ವರ್ಷಗಳಾದವು.

6. ಇವರ ಶೋಧನೆಗಳಲ್ಲಿಯ ಅಂಶಗಳನ್ನು ತಾಳೆ ನೋಡಿ ಒಪ್ಪಲು ಅಥವಾ ನಿರಾಕರಿಸಲು ಸಹಾ ಇನ್ನೊಬ್ಬರು ದೀರ್ಘಕಾಲದ ಅಧ್ಯಯನವನ್ನೇ ಮಾಡಬೇಕಾಗುತ್ತದೆ. ತಾವೂ ಅಧ್ಯಯನ ಮಾಡುತ್ತಿರುವ ಕ್ಷೇತ್ರವಾದರೆ ಮಾತ್ರ ಯಾರಾದರೂ ಇಂಥ ಶ್ರಮ ತೆಗೆದುಕೊಳ್ಳುತ್ತಾರೆ. ಆ ಕಾರಣದಿಂದಲೇ ಭಾಷಾವಿಜ್ಞಾನ ಕೃತಿಗಳ ಮೇಲೆ ಮಾತ್ರ ಒಂದಷ್ಟು ಚರ್ಚೆ ನಡೆದಿದೆ. ಉಳಿದ ಸಂಶೋಧನೆ ಎಲ್ಲಾ ಉಪೇಕ್ಷಿತ ಜೈನ ಸಾಹಿತ್ಯ

ಮತ್ತು ಇತಿಹಾಸ ಆದ್ದರಿಂದ ಇಲ್ಲಿ ಕೆಲಸ ಮಾಡುತ್ತಿರುವ ಅನ್ಯ ವಿದ್ವಾಂಸರು ಇಲ್ಲವಾದ್ದರಿಂದ ಆ ಕೃತಿಗಳ ಬಗ್ಗೆ ಹೆಚ್ಚು ಚರ್ಚೆ ನಡೆದಿಲ್ಲ. ಆದರೆ ಸಾಹಿತ್ಯ ಚರಿತ್ರೆಯಲ್ಲಿ ಆಸಕ್ತರಾದವರೂ ಸಹ ಈ ಬಗ್ಗೆ ನಿರ್ಲಕ್ಷ್ಯದಿಂದಿರುವುದು ಶೋಚನೀಯ.

ಇಂಥ ಹಲವು ಸಾಹಿತ್ಯಿಕ ಹಾಗೂ ಸಾಹಿತ್ಯೇತರ ಕಾರಣಗಳಿಂದಾಗಿ ಹಂಪನಾ ಅವರ ಬರವಣಿಗೆ ಕುರಿತು ನಡೆಯಬೇಕಾದಷ್ಟು ಚರ್ಚೆ ನಡೆದಿಲ್ಲ ಎನಿಸುತ್ತದೆ. ಅಪ್ರಸಿದ್ಧರ ಬಗ್ಗೆ ಬರೆದು ಜನರ ಗಮನ ಸೆಳೆಯುವುದು ಕಷ್ಟ. ಒಮ್ಮೆ ಇತ್ತ ತಿರುಗಿ ನೋಡಿದರೂ ಜನ ಪುನಃ ಮುಖ ತಿರುಗಿಸಿ ನಡೆದುಬಿಡುತ್ತಾರೆ. ಹಂಪನಾ ಬಹುಶಃ ಈ ರಿಸ್ಕ್ ತೆಗೆದುಕೊಂಡೇ ತಮ್ಮ ಬರವಣಿಗೆಯ ಕಾಯಕವನ್ನು ನಡೆಸಿಕೊಂಡು ಬಂದಿದ್ದಾರೆ.

ಯಾವ ವ್ಯಕ್ತಿಯೂ ವಿಮರ್ಶಾತೀತನೇನಲ್ಲ. ಹಂಪನಾಗೂ ಕೂಡ ಈ ಮಾತು ಅನ್ವಯಿಸುತ್ತದೆ. ಆದರೆ ನಿಷ್ಪಕ್ಷಪಾತ ವಿಮರ್ಶೆಯ ನಿಕಷದಿಂದಲೂ ಹೊಳೆಯುತ್ತಾ ಎದ್ದು ಹೊರಬಂದು ನಿಲ್ಲಬಲ್ಲ ಅನೇಕ ಬರಹಗಳನ್ನು ಈ ಲೇಖಕರು ನೀಡಿದ್ದಾರೆಂಬುದೇ ನಮ್ಮ ಮೆಚ್ಚುಗೆಗೆ ಅರ್ಹವಾಗುವ ಅಂಶ. ಅದೂ ಸಾರ್ವಜನಿಕ ಕೆಲಸಗಳಲ್ಲಿ ಬಿಡುವಿಲ್ಲದಷ್ಟು ತೊಡಗಿಕೊಂಡಿದ್ದೂ ಕೂಡಾ ಈ ಮಟ್ಟದ ಬರವಣಿಗೆಯನ್ನು ಇಷ್ಟು ದೊಡ್ಡ ಪ್ರಮಾಣದಲ್ಲಿ ಮಾಡುವುದಾದರೂ ಹೇಗೆ ಸಾಧ್ಯ ಎಂದು ಅಚ್ಚರಿಯಾಗುತ್ತದೆ. ಇದಕ್ಕೆ ಕೊಡಬಹುದಾದ ಒಂದೇ ಕಾರಣವೆಂದರೆ-ಒಳಗಿನ ಒತ್ತಡ ಅಷ್ಟು ಬಲವಾಗಿತ್ತು ಎನ್ನುವುದು. ಇದು ಅವರನ್ನು-ತಮಗೆ ದೊರೆತ ಪ್ರತಿ ಕ್ಷಣವನ್ನೂ ಸದುಪಯೋಗಪಡಿಸಿಕೊಳ್ಳುವಂತೆ ಪ್ರಚೋದಿಸಿದೆ.

ಅರವತ್ತು ದಾಟಿ ಅರವತ್ತೊಂದರತ್ತ ನಡೆದಿರುವ ಈ ಜೀವ ಇನ್ನೂ ಬರೆಯಬಹುದಾದದ್ದು ಸಾಕಷ್ಟಿದೆ. ಅದಕ್ಕೆ ಬೇಕಾದ ಸಿದ್ಧತೆ, ಉತ್ಸಾಹ, ಟಿಪ್ಪಣಿಗಳು-ಇವೆಲ್ಲ ಅವರಲ್ಲಿದೆ. ಈ ವರೆಗೆ ಅವರಿಗೆ ದೊರೆತಿರುವ ಸಾಹಿತ್ಯ ಅಕಾಡೆಮಿ ಹಾಗೂ ಜಾನಪದ ಅಕಾಡೆಮಿಗಳ ಗೌರವ ಪ್ರಶಸ್ತಿಗಳು, ಇತ್ತೀಚೆಗೆ ತುಂಬ ತುಂಬ ಅರ್ಹವಾಗಿ ಅವರಿಗೆ ದೊರೆತಿರುವ ಚಾಮುಂಡರಾಯ ಪ್ರಶಸ್ತಿ, ಸಾರ್ವಜನಿಕ ಸನ್ಮಾನಗಳು, ಎಲ್ಲಕ್ಕೂ ಅರ್ಹವೆನಿಸುವಷ್ಟು ಕೆಲಸವನ್ನು ಅವರು ಈಗಾಗಲೇ ಮಾಡಿದ್ದಾರೆ. ಆದರೂ ಇನ್ನೂ ಬರವಣಿಗೆಯ ಕೆಲಸದಲ್ಲೇ ಪೂರ್ಣವಾಗಿ ತೊಡಗಿಕೊಳ್ಳಬೇಕೆನ್ನುವ ಅವರ ಉತ್ಸಾಹ ಕೈಗೂಡಲಿ, ಕನ್ನಡ ಲೋಕಕ್ಕೆ ಲಾಭವಾಗಲಿ.

# ದ್ರಾವಿಡ ಭಾಷಾವಿಜ್ಞಾನ

ಡಾ.ಎ. ಮುರಿಗೆಪ್ಪ

'ದ್ರಾವಿಡ ಭಾಷಾ ವಿಜ್ಞಾನ' ಹಂಪನಾ ಅವರ ದ್ರಾವಿಡ ಭಾಷೆಗಳನ್ನು ಕುರಿತ ವಿದ್ವತ್ಪೂರ್ಣ ಅಧ್ಯಯನದ ಫಲ. ಪ್ರಸ್ತುತ ಆವೃತ್ತಿ, ಮೂಲ ದ್ರಾವಿಡ ಭಾಷಾ ವಿಜ್ಞಾನದ ಜನಪ್ರಿಯ ಆವೃತ್ತಿ. ಯಾವುದೇ ಸಾಮಾನ್ಯ ಆಸಕ್ತಿಯ ಓದುಗರನ್ನು ಹಾಗೂ ವಿದ್ಯಾರ್ಥಿಗಳನ್ನು ಗಮನದಲ್ಲಿರಿಸಿಕೊಂಡು ಈ ಆವೃತ್ತಿಯನ್ನು ಹೊರತರಲಾಗಿದೆ.

ಭಾಷೆಗಳ ತೌಲನಿಕ ಅಧ್ಯಯನ ಭಾಷಾವಿಜ್ಞಾನದ ಮೊದಲ ಹಂತ. ಪಾಶ್ಚಿಮಾತ್ಯ ವಿದ್ವಾಂಸರು ವಿವಿಧ ಭಾಷಗಳನ್ನು ತೌಲನಿಕವಾಗಿ ಅಭ್ಯಸಿಸುವ ಕ್ರಮ, ವಿಸ್ತೃತವಾಗಿ ಬೆಳೆದು ನಿಂತ ಭಾಷಾವಿಜ್ಞಾನಕ್ಕೆ ನಾಂದಿಯಾಯ್ತು. ಈ ರೀತಿಯ ಭಾಷೆಗಳ ತೌಲನಿಕ ಅಧ್ಯಯನ ಭಾಷೆಗಳ ನಡುವಿನ ರಚನಾತ್ಮಕ ಸಮಾನ ಅಂಶಗಳನ್ನು ಗುರುತಿಸುವಲ್ಲಿ ಹೊಸ ವಿಧಾನಕ್ಕೆ ಎಡೆಮಾಡಿಕೊಟ್ಟಿರುವುದು ಐತಿಹಾಸಿಕ ಸತ್ಯ. ತೌಲನಿಕ ಅಧ್ಯಯನ ಭಾಷೆಗಳ ಏಕಮೂಲವನ್ನು ಗುರುತಿಸಲು, ಅವುಗಳ ನಡುವೆ ಆನುವಂಶಿಕ ಸಂಬಂಧವನ್ನು ನಿರ್ಣಯಿಸಲು ಸಹಾಯಕವಾಗಿ ಬೆಳೆಯಿತು. ಈ ಅಧ್ಯಯನ ವಿಧಾನ ಜಾಗತಿಕ ಭಾಷೆಗಳನ್ನು ಪರಿವಾರಗಳಾಗಿ ವಿಭಜಿಸುವಲ್ಲಿ ಸಹಕಾರಿಯಾಯಿತು. ಕನ್ನಡ, ತಮಿಳು, ಮಲಯಾಳಂ, ತೆಲುಗಿನಂತಹ ಗ್ರಂಥಸ್ಥ, ಅಂತೆಯೇ ತುಳು, ಕೊಡಗುವಿನಂತಹ ಗ್ರಂಥಸ್ಥೇತರ ಭಾಷೆಗಳನ್ನು, ಪರ್ಜಿ, ನಾಯಕಿ, ಕುಈ, ಕುವಿ ಯಂತಹ ಗುಡ್ಡಗಾಡಿನ ಭಾಷೆಗಳನ್ನು, ಅಲ್ಲದೆ ಬ್ರಾಹುಈಯಂತಹ ಭಾರತೇತರ ಭಾಷೆಗಳನ್ನು ಒಟ್ಟಾಗಿ ಸೇರಿಸಿ ದ್ರಾವಿಡ ಭಾಷಾ ಪರಿವಾರ ಎಂಬ ಒಂದೇ ಮೂಲದಡಿಯಲ್ಲಿ ನೆಲೆ ನಿಲ್ಲಿಸಲು ಅನುವಾಯಿತು. ದ್ರಾವಿಡ ಭಾಷೆಗಳನ್ನು ಕುರಿತ ಅಧ್ಯಯನ ತೀರ ಇತ್ತೀಚಿನದಲ್ಲ. ಇದರ ಪ್ರಾಚೀನತೆಯನ್ನು ಕುರಿತ ವಿವರಗಳು ಹಂಪನಾ ಅವರ ಪ್ರಸ್ತುತ ಗ್ರಂಥ'ದಲ್ಲಿ ವಿವರಣೆಗೊಳಪಟ್ಟಿವೆ. ಕೂಪನ್ ಹೇಗನ್ನಿನ ರಾಸ್‌ಮಸ್ ರಾಸ್ಕ್, ಮಲಬಾರಿಕ್ ಭಾಷೆಯನ್ನು ಇಂಡೊ-ಯುರೋಪಿಯನ್ ಭಾಷೆಗಳೊಂದಿಗೆ ಸೇರಿಸಲಾಗದು ಎಂದರು. ಕಾಲ್ಡ್‌ವೆಲ್, ದ್ರಾವಿಡ ಪರಿವಾರಕ್ಕೆ ಭದ್ರ ಬುನಾದಿಯನ್ನು ಹಾಕಿಕೊಟ್ಟರು. ಹೆರಡೋಟಸ್ ಎಂಬ ಇತಿಹಾಸಕಾರ, ಕ್ರಿಸ್ತಪೂರ್ವ ಪೆಲಸಿಕ್ ಪೂರ್ವದ ಜನ ತಮ್ಮನ್ನು ತೆರ್ಮಿಲೈ ಎಂದು ಕರೆದುಕೊಳ್ಳುತ್ತಿದ್ದರು ಎಂಬುದನ್ನು ಗುರುತಿಸಿದ. ಇಂಥ ವಿವರಗಳನ್ನು ನೀಡುವುದರ ಮೂಲಕ ದ್ರಾವಿಡ ಭಾಷಾ ಪರಿವಾರದ ಅಧ್ಯಯನಕ್ಕೆ ಪಾಶ್ಚಿಮಾತ್ಯರ ಕೊಡುಗೆಯನ್ನು ಹಂಪನಾ ಅವರು ಪ್ರಸ್ತುತ ಗ್ರಂಥದ

ಆರಂಭದಲ್ಲಿಯೇ ವಿವರಿಸಿದ್ದಾರೆ. ದ್ರಾವಿಡ ಭಾಷೆಗಳು ಹಾಗೂ ಇನ್ನಿತರ ಭಾಷಾ ಪರಿವಾರಗಳ ನಡುವಿನ ಹೊಂದಾಣಿಕೆಯನ್ನು ಕುರಿತಂತೆ ಬ್ಲಾಕ್, ಫ್ರೆಡರಿಕ್ ಮುಲ್ಲರ್, ಕಾಲ್ಡ್‌ವೆಲ್, ರಾಸ್ಕ್, ಆಂದ್ರನೋವ್, ವಿಟ್ನಿ, ಕಸ್ಟ್, ಬರೊ ಅವರು ನಡೆಸಿದ ಅಧ್ಯಯನವನ್ನು ಪ್ರಸ್ತುತ ಗ್ರಂಥದಲ್ಲಿ ಪ್ರಸ್ತಾಪಿಸಿ ವಿವರಿಸಿದ್ದಾರೆ. ಮಲಯಾಳಂ ಭಾಷೆಗೆ ಕ್ರೈಸ್ತರ ಕೊಡುಗೆ ಅಪಾರ. ಕನ್ನಡಕ್ಕೆ ಕಿಟಲ್ ಇದ್ದಂತೆ, ಮಲಯಾಳಂ ನಿಘಂಟು ನಿರ್ಮಾಣದಲ್ಲಿ ಗುಂಡರ್ಟ್‌ರ ಸೇವೆ ಅಭೂತವಾದುದು.

ಕನ್ನಡ ಸಾಹಿತ್ಯಕ್ಕೆ ಹಂಪನಾ ಅವರ ಕೊಡುಗೆ ವಿಪುಲವಾಗಿದೆ. ಕನ್ನಡ ಸಾಹಿತ್ಯಕ್ಕೆ ಮಾತ್ರ ತಮ್ಮನ್ನ ಸೀಮಿತವಾಗಿರಿಸದೆ 'ಭಾಷಾವಿಜ್ಞಾನ, ಭಾಷಾ ವಿಜ್ಞಾನಿಗಳು', ದ್ರಾವಿಡ ಭಾಷಾ ವಿಜ್ಞಾನಗಳ ಮೂಲಕ ಹಂಪನಾ ಭಾಷಾವಿಜ್ಞಾನಕ್ಕೆ ಹೆಚ್ಚಿನ ಕಾಣಿಕೆ ಸಲ್ಲಿಸಿದ್ದಾರೆ. ಇದರಿಂದಾಗಿ ಹಂಪನಾ ಅವರಿಗೆ ಭಾಷಾವಿಜ್ಞಾನದಲ್ಲಿ ಸ್ಥಾನವುಂಟು.

ದ್ರಾವಿಡ ಭಾಷೆಗಳ ಭೌಗೋಳಿಕ ವಿಸ್ತಾರ, ದ್ರಾವಿಡ ಭಾಷೆಗಳ ಪರಿಸರ. ಪ್ರತ್ಯೇಕ ದ್ರಾವಿಡ ಭಾಷೆಗಳ ಪರಿಚಯ, ದ್ರಾವಿಡ ಭಾಷೆಗಳ ನಡುವಿನ ಸಾಮ್ಯ ವೈಷಮ್ಯತೆಯ ಪರಿಚಯ ಪ್ರಸ್ತುತ ಗ್ರಂಥದ ಮೂಲ ಆಶಯ. ದ್ರಾವಿಡ ಭಾಷೆಗಳನ್ನು ಕುರಿತಂತೆ ೧೯೬೧ರ ಜನಗಣತಿಯನ್ನು ಈ ಗ್ರಂಥದಲ್ಲಿ ಹಂಪನಾ ಅವರು ಬಳಸಿಕೊಂಡಿದ್ದಾರೆ. ಇದರಿಂದಾಗಿ ಈ ಭಾಷೆಗಳ ಪ್ರಸ್ತುತ ಪರಿಸ್ಥಿತಿಯ ವಿವರಣೆಯ ಕೊರತೆ ಇದರಲ್ಲಿ ಕಂಡು ಬರುತ್ತದೆ. ಇದು ಈ ಗ್ರಂಥದ ಸೀಮಿತತೆ ಕೂಡಾ. ದ್ರಾವಿಡ ಭಾಷೆಗಳ ಪ್ರಸ್ತುತ ಅಂಖ್ಯೆ ಸಂಖ್ಯೆ ಹಾಗೂ ಇನ್ನಿತರ ವಿವರಣೆಗಳು ಅಲಭ್ಯ.

ದ್ರಾವಿಡ ಪರಿವಾರಕ್ಕೆ ಸೇರಿದ ೩೦ ಭಾಷೆಗಳನ್ನು ಗುರುತಿಸಿ ಅವುಗಳನ್ನು ಚಾಕ್ಷುಷ ಮತ್ತು ಶ್ರಾವಣ ಭಾಷೆಗಳೆಂದು ವಿಭಜಿಸಿ ಪ್ರತಿಭಾಷೆಯನ್ನು ಪರಿಚಯಿಸುವ ಪ್ರಯತ್ನವನ್ನು ಹಂಪನಾ ಅದರು ಈ ಗ್ರಂಥದಲ್ಲಿ ಮಾಡಿದ್ದಾರೆ. ಸ್ವಂತ ಲಿಪಿಯನ್ನು ಹೊಂದಿರುವ ಕನ್ನಡ, ತಮಿಳು, ಮಲಯಾಳಂ, ತೆಲುಗು ಭಾಷೆಗಳ ಜೊತೆಗೆ ಪ್ರಾದೇಶಿಕ ಲಿಪಿ(ಕನ್ನಡ)ಯನ್ನು ಅಳವಡಿಸಿಕೊಂಡಿರುವ ಕೊಡಗು, ತುಳು ಭಾಷೆಗಳನ್ನು ಚಾಕ್ಷುಷ ಭಾಷೆಗಳೆಂದು ಗುರುತಿಸಲಾಗಿದೆ.

ಕನ್ನಡ ಭಾಷೆಯ ಪ್ರಾಚೀನತೆಯನ್ನು ಶಾಸನ ಸಾಹಿತ್ಯ, ಕಾವ್ಯ, ಕಾವ್ಯೇತರ ಸಾಹಿತ್ಯದ ಮೂಲಕವಲ್ಲದೆ ಇತರ ಭಾಷಾ ಸಾಹಿತ್ಯದ ಮುಖಾಂತರವೂ ಲೇಖಕರು ಮಾಡಿದ್ದಾರೆ. ಕನ್ನಡ ಭಾಷೆಯನ್ನು ಕುರಿತಂತೆ ಹೆಚ್ಚಿನ ಕಾಳಜಿ ಲೇಖಕರಿಗೆ. ಕನ್ನಡ, ಕನ್ನಡ ನಾಡಿನ ಪ್ರಾಚೀನತೆಯನ್ನು ವಿವಿಧ ಭಾಷಾ ಸಾಹಿತ್ಯದ ಮೂಲಕ ಪರಿಚಯಿಸಿದ್ದಾರೆ. ಕನ್ನಡ ಕರ್ನಾಟಕ ಪದನಿಷ್ಪತ್ತಿಯನ್ನು ಕುರಿತಂತೆ ವಿಸ್ತೃತವಾದ ವಿವರಣೆಯನ್ನು ಲೇಖಕರು ನೀಡಿದ್ದಾರೆ. ಕನ್ನಡ ವರ್ಣಮಾಲೆಯ ಬಗ್ಗೆ ಬರೆಯುತ್ತಾ ಕನ್ನಡ ಅಕ್ಷರ ಮಾಲೆಯನ್ನಷ್ಟೇ ಅಲ್ಲದೆ ಕೇಶಿರಾಜನು ವಿವರಿಸಿದ ಅಕ್ಷರ ವ್ಯವಸ್ಥೆಯನ್ನು ವಿವರವಾಗಿ ವರ್ಣಿಸಿದ್ದಾರೆ. ಜಿಹ್ವಾಮೂಲೀಯ, ಉಪಧ್ಮಾನೀಯ, ವಿಸರ್ಗಗಳ ಪ್ರಸ್ತುತತೆಯನ್ನು ಕನ್ನಡಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಇವು ಕನ್ನಡಕ್ಕೆ ಬೇಕಿಲ್ಲ ಎಂಬ ತೀರ್ಮಾನಕ್ಕೆ ಬರುತ್ತಾರೆ. ಮಹಾಪ್ರಾಣಗಳನ್ನು ಕನ್ನಡದಲ್ಲಿ ಪ್ರತಿಷ್ಠಾಪಿಸುವ ಕೇಶಿರಾಜನ ಪ್ರಯತ್ನವನ್ನು ಹಂಪನಾ ಅವರು ನಿರಾಕರಿಸುತ್ತಾರೆ. ಕನ್ನಡದಲ್ಲಿ ಅನುನಾಸಿಕ ಧ್ವನಿಮಾಗಳನ್ನು ವಿವರಿಸಿ ಮ್, ನ್, ಣ್‌ಗಳು ಮಾತ್ರ ಕನ್ನಡದ ಧ್ವನಿಮಾಗಳು, ನ್ ಧ್ವನಿಮಾ, ತಾಲವ್ಯ,

ಕಂಠ್ಯ, ವರ್ತ್ಸ್ಯ, ದಂತ, ನಾಸಿಕಗಳನ್ನು ಪ್ರತಿನಿಧಿಸುತ್ತದೆ ಎಂಬಲ್ಲಿ ಹಂಪನಾ ಭಾಷಾವೈಜ್ಞಾನಿಕ ಧೋರಣೆಯನ್ನು ಮೆರೆದಿದ್ದಾರೆ. ತಮಿಳು ಭಾಷೆಯನ್ನು ಕುರಿತು ವಿವರಿಸುತ್ತ ತಮಿಳಿನ ಐತಿಹಾಸಿಕ ಪ್ರಭೇದಗಳು, ತಮಿಳು ವ್ಯಾಕರಣ ಸಾಹಿತ್ಯ ಪರಿಚಯವನ್ನು ಮಾಡುತ್ತಾರೆ. ತಮಿಳಿನಲ್ಲಿ ಕಂಡುಬರುವ ತಾಲವ್ಯೀಕರಣ, ಕನ್ನಡದಲ್ಲಿ ಇ/ಎ, ಉ/ಒ ಪರಿವರ್ತನೆ ಮುಂತಾದ ಧ್ವನಿ ಬದಲಾವಣೆ ಕುರಿತ ವಿವರಣೆ ಈ ಗ್ರಂಥದಲ್ಲಿ ಕಂಡುಬರುತ್ತದೆ. ಕನ್ನಡ ಮತ್ತು ತಮಿಳು ಪದರೂಪಗಳ ತೌಲನಿಕ ಅಧ್ಯಯನವನ್ನು ಈ ಪುಸ್ತಕದಲ್ಲಿ ಮಾಡಿದ್ದು, ದ್ರಾವಿಡ ಭಾಷಾ ಅಭ್ಯಾಸಿಗಳ ಆಸಕ್ತಿಯನ್ನು ಕೆರಳಿಸುತ್ತದೆ.

ಮಲಯಾಳಂ ಭಾಷೆಯಲ್ಲಿ ಸಂಸ್ಕೃತ ಭಾಷೆಯ ಆಧಿಕ್ಯತೆ ಕಂಡುಬರುತ್ತದೆ. ಮಲಯಾಳಂ ಸಾಹಿತ್ಯದಲ್ಲಿ ಸಂಸ್ಕೃತ ಸ್ವೀಕರಣದಿಂದಾಗಿ 'ಮಣಿಪ್ರವಾಳಂ' ಎಂಬ ಮಲಯಾಳಂ-ಸಂಸ್ಕೃತ ಮಿಶ್ರಿತ ಭಾಷಾ ಶೈಲಿ ಅಸ್ತಿತ್ವಕ್ಕೆ ಬಂತು. ಹಂಪನಾ ಅವರು ಈ ವಿಚಾರವನ್ನು ದಾಖಲಿಸಿದ್ದಾರೆ. ತೆಲುಗು ಪದ ನಿಷ್ಪತ್ತಿ, ತೆಲುಗು ಭಾಷೆಯ ಇತಿಹಾಸ ವಿವರಣೆ ಈ ಪುಸ್ತಕದಲ್ಲಿದೆ. ಕನ್ನಡದ ಪದಾದಿ 'ಕ' ಕಾರ, 'ಚ' ಕಾರವಾಗುತ್ತದೆ. ಹಳನ್ನಡದಲ್ಲಿ ಅರ್ಧಾನುಸ್ವಾರಕ್ಕೆ ಧ್ವನಿಮಾ ಸ್ಥಾನ ಸಲ್ಲುತ್ತದೆ. ಸ್ವರಸ್ಥಾನ ಪಲ್ಲಟ ಮತ್ತು ದ್ವಿತೀಯ ಸ್ವರ ದೀರ್ಘತ್ವ (ಇಲ್ಲದು > ಎಲದು> ಲೇದು) ಮುಂತಾದ ತೆಲುಗು ಭಾಷೆಯ ವಿಶಿಷ್ಟ ಅಂಶಗಳನ್ನು ಹಂಪನಾ ವಿವರಿಸಿದ್ದಾರೆ.

ಕೊಡಗಿನಲ್ಲಿ ಮೂಲ ದ್ರಾವಿಡ 'ಪ' ಕಾರ 'ಹ' ಕಾರವಾಗಿ ಬದಲಾಗದೆ ಹಾಗೆಯೇ ಮುಂದುವರಿಯುವುದು, ತುಳುವಿನಂತಹ ಪ್ರಾದೇಶಿಕ ಭಾಷೆ, ಜಾತಿ ಮತವನ್ನು ಮೀರಿ ಬಳಕೆಯಾಗಿರುವುದು, ಭಿನ್ನ ಪ್ರಾದೇಶಿಕ ಉಪ ಭಾಷೆಗಳನ್ನು ಹೊಂದಿರುವುದಷ್ಟೇ ಅಲ್ಲದೆ ಸಾಮಾಜಿಕ ಭಿನ್ನತೆಯನ್ನು ಸಹ ಹೊಂದಿದೆ.

ಈ ಎಲ್ಲ ಭಾಷೆಗಳು ದೃಶ್ಯ ಮಾಧ್ಯಮವಾದ ಲಿಪಿಯನ್ನು ಹೊಂದಿವೆ. ಇನ್ನುಳಿದ ದ್ರಾವಿಡ ಭಾಷೆಗಳಿಗೆ ಲಿಪಿ ಇಲ್ಲ. ಅವು ಕೇವಲ ಶ್ರಾವಕ ಭಾಷೆಗಳು. ಗೊಂಡಿ ಮಧ್ಯ ಪ್ರದೇಶದ ಬಸ್ತಾರ್, ರಾಯಗಢ ಮೊದಲಾದ ಜಿಲ್ಲೆಗಳಲ್ಲಿ ಬಳಕೆಯಲ್ಲಿದೆ. ತೊದ, ನೀಲಗಿರಿ ಬೆಟ್ಟವಾಚಿನ ಜನಸಮುದಾಯದ ಭಾಷೆ. ಈ ಭಾಷೆಯಲ್ಲಿ ಮೂಲ ದ್ರಾವಿಡ 'ಅ' ಕಾರ 'ಒ' ಕಾರವಾಗಿ ಬದಲಾಗುತ್ತದೆ ಬ್ರಾಹುಈ ಬಲೂಚಿಸ್ಥಾನದ ಪರ್ವತದ ಆದಿವಾಸಿಗಳ ಭಾಷೆ. ಬ್ರಾಹುಈ ಭಾಷೆಯಲ್ಲಿ ಮೂಲ ದ್ರಾವಿಡದ 'ಕ' ಕಾರ 'ಖ್' ಕಾರವಾಗಿ ಬದಲಾಗುತ್ತದೆ.

ಟಿ.ಬರೊ, ಎಂ.ಬಿ. ಎಮಿನೊ, ಭಟ್ಟಾಚಾರ್ಯ, ಡ್ರಿಬರ್ನ್ ಮುಂತಾದವರು ದ್ರಾವಿಡಕ್ಕೆ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಇವರಂತೆ ಇನ್ನಿತರ ಪಾಶ್ಚಿಮಾತ್ಯ ವಿದ್ವಾಂಸರು ದ್ರಾವಿಡ ಭಾಷಾ ಅಧ್ಯಯನಕ್ಕೆ ಶ್ರಮಿಸಿದ್ದಾರೆ. ಗೊಂಡಿ ಭಾಷೆಯ ವ್ಯಾಕರಣವನ್ನು ಡ್ರಿಬರ್ನ್ ಅವರು ರಚಿಸಿದ್ದಾರೆ. ಬರೊ-ಭಟ್ಟಾಚಾರ್ಯರು ಪೆಂಗೊ ಭಾಷೆಯನ್ನು ಬೆಳಕಿಗೆ ತಂದರು. ಎಂ.ಬಿ. ಎಮಿನೊ ಅವರು ಕೊಲಾಮಿ ಭಾಷಾ ವ್ಯಾಕರಣ ವಿವರಿಸಿದ್ದಾರೆ. ಪರ್ಜಿ ಭಾಷೆಯಲ್ಲಿ ಮಹಾಪ್ರಾಣಗಳಿಲ್ಲ ಕನ್ನಡ, ತಮಿಳು-ಮಲಯಾಳಂನಂತೆ ಇದರಲ್ಲಿಯೂ ಶಕಟರೇಫ ಇದೆ. ಸ್ತ್ರೀ ಸಂಖ್ಯಾವಾಚಿಗಳು ಐದರವರೆಗೆ ಪ್ರತ್ಯೇಕ. ಒರಲ್ ಎಂದರೆ ಒಂದು ಹೆಂಗಸು, ಇರಲ್ ಎಂದರೆ ಇಬ್ಬರು ಹೆಂಗಸರು. ಕೊರಗ ದಕ್ಷಿಣ ಕನ್ನಡದಲ್ಲಿ ಬಳಸಲ್ಪಡುವ ಭಾಷೆ. ಈ ಭಾಷೆಯನ್ನು

ದಕ್ಷಿಣ ದ್ರಾವಿಡಕ್ಕೆ ಸೇರಿಸಬೇಕೆ? ಮಧ್ಯ ದ್ರಾವಿಡಕ್ಕೆ ಸೇರಿಸಬೇಕೆ? ಎಂಬುದು ಇಂದಿಗೂ ಸಮಸ್ಯೆಯಾಗಿದೆ. ನೀಲಗಿರಿ ಬೆಟ್ಟದ ಇನ್ನೊಂದು ಭಾಷೆ ತೊದ. ರಳ, ಶಕಟರೇಫ, ಧ್ವನಿಗಳನ್ನು ಈ ಭಾಷೆ ಉಳಿಸಿಕೊಂಡಿದೆ. ಇದೇ ಪ್ರದೇಶದ ಮತ್ತೊಂದು ಭಾಷೆಯಾದ ಬಡಗ, ಕನ್ನಡದ ಉಪಭಾಷೆ ಎಂಬ ಕಲ್ಪನೆ ಇತ್ತು. ಕೋತ ಭಾಷೆಯನ್ನು ಕುರಿತು ಎಂ.ಬಿ.ಎಮಿನೊ ಸಂಶೋಧನೆ ಕೈಕೊಂಡು ವಿವರಣೆ ನೀಡಿದ್ದರು. ತಮಿಳಿನಂತೆ ಕೋತದಲ್ಲಿಯೂ ಸಮಾವೇಷಕ, ಅಸಮಾವೇಷಕ ಸರ್ವನಾಮಗಳು ಇವೆ. ಬಿಹಾರ್ ಪ್ರಾಂತದ ದ್ರಾವಿಡ ಭಾಷೆಯಾದ ಕುಡುಕ್ ಬಿಹಾರಿ ಭಾಷೆಯಿದ ಸಾಕಷ್ಟು ಪ್ರಭಾವಿತವಾಗಿದೆ. ಇರುಳ ಕರ್ನಾಟಕದ ಗಡಿಭಾಗದ ನೀಲಗಿರಿ ಬೆಟ್ಟಗಾಡಿನ ಜನರಾಡುವ ಭಾಷೆ. ತ್ವಮಿರ್ ಜ್ವಲಬಿಲೆ ೧೯೭೭ರಲ್ಲಿ ಈ ಭಾಷೆಯನ್ನು ಕುರಿತು ಪುಸ್ತಕ ಹೊರತಂದಿದ್ದಾರೆ. ತಮಿಳು ನಾಡಿನಿಂದ ಕರ್ನಾಟಕಕ್ಕೆ ವಲಸೆ ಬಂದ ಕೌಶಿಕ ಬ್ರಾಹ್ಮಣರಾಡುವಭಾಷೆ, ಕನ್ನಡದಿಂದ ಪ್ರಭಾವಿತವಾದ ಸಂಕೇತಿ ತಮಿಳು.

ಈ ಎಲ್ಲ ವಿವರಣೆಗಳನ್ನು ಒಳಗೊಂಡಂತೆ ದ್ರಾವಿಡ ಭಾಷೆಗಳ ಪರಿಚಯವನ್ನು ಹಂಪನಾ ಮಾಡಿದ್ದಾರೆ. ಸಾಮಾನ್ಯ ಜನರಿಗೂ ತಿಳಿಯುವಂತೆ ಸರಳವಾದ ಸಂಕ್ಷೇಪವಾದ ವಿವರಣೆ ಇಲ್ಲಿದೆ.

ಗ್ರಂಥದ ಮೊದಲ ಭಾಗ ದ್ರಾವಿಡ ಭಾಷೆಗಳ ಸಂಕ್ಷಿಪ್ತ ಪರಿಚಯ. ಎರಡನೆಯ ಭಾಗ ಈ ಭಾಷೆಗಳ ತೌಲನಿಕ ಪರಿಚಯ. ಹಂಪನಾ ಕನ್ನಡಿಗರು. ಕನ್ನಡ ಸಾಹಿತ್ಯ ಅಧ್ಯಾಪಕರು. ಕನ್ನಡದ ಸಾಮಾನ್ಯ ಓದುಗರಿಗಾಗಿ ಈ ಗ್ರಂಥ. ಈ ಎಲ್ಲಾ ಕಾರಣದಿಂದಾಗಿ ತೌಲನಿಕ ಅಧ್ಯಯನದಲ್ಲಿಯೂ ಕನ್ನಡಕ್ಕೆ ಪ್ರಥಮ ಸ್ಥಾನ. ಅಷ್ಟೇ ಅಲ್ಲ, ವಿಶೇಷ ಸ್ಥಾನ. ಕೇಶಿರಾಜ, ನಾಗವರ್ಮ, ಭಟ್ಟಾಕಳಂಕರಂತಹ ಪರಂಪರಾಗತ ವ್ಯಾಕರಣಕಾರರನ್ನು ಉಲ್ಲೇಖಿಸಿ ವಿವರಣೆ ನೀಡುವುದರ ಜೊತೆ ಜೊತೆಗೆ ಪ್ರಸ್ತುತ ವ್ಯಾಕರಣ, ಭಾಷಾ ವಿಜ್ಞಾನದ ಅನುವನ್ನು ಸಹ ವಿಶ್ಲೇಷಣೆಗಾಗಿ ಹಂಪನಾ ಬಳಸಿದ್ದಾರೆ:

ಕವಿರಾಜಮಾರ್ಗದಲ್ಲಿ ವಿಭಕ್ತಿಗಳೇೞೆನಿಕ್ಕುಂ ಎಂದು ಹೇಳಿ ಪ್ರಥಮಾ ವಿಭಕ್ತಿಯನ್ನು ಒಪ್ಪಿಕೊಳ್ಳಲಾಗಿದೆ. ನಾಗವರ್ಮ, ಕೇಶಿರಾಜ, ಭಟ್ಟಾಕಳಂಕರೂ ಅಷ್ಟೇ.

-ಎಂದು ಪರಂಪರಾಗತ ವ್ಯಾಕರಣಕಾರರ ಅಭಿಪ್ರಾಯವನ್ನು ಸೂಚಿಸಿ, ಕನ್ನಡದಲ್ಲಿ ಪ್ರಥಮಾ ವಿಭಕ್ತಿಯ ಪ್ರತ್ಯಯ ಎಂಬುದೊಂದು ಬೇರೆ ಇಲ್ಲ ಎಂಬ ಭಾಷಾವೈಜ್ಞಾನಿಕ, ವಿವರಣೆಯನ್ನು ಎತ್ತಿಹಿಡಿದಿದ್ದಾರೆ. ಹಂಪನಾ ಇದರೊಂದಿಗೆ ಕಲ್ನಾಗ, ಪುಸ್ತಕದಾಗ, ಊರಾಗ, ಮನೆಯಾಗ, ಎಂಬ ಇತ್ತೀಚಿನ ಪ್ರಾದೇಶಿಕ ಆಡುರೂಪ ಪ್ರಯೋಗವನ್ನು ಸಹ ಉದಾಹರಿಸಿದ್ದಾರೆ.

ದ್ರಾವಿಡಕ್ಕೆ ಸಂಬಂಧಿಸಿದಂತೆ, ದೇಶೀಯ, ವಿದೇಶೀಯ ವಿದ್ವಾಂಸ ಸಂಶೋಧನೆಯ ವಿಸ್ತಾರವಾದ ಓದಿನ ಫಲ ಪ್ರಸ್ತುತ ಗ್ರಂಥ. ಸಂಕೇತಿ, ಇರುಳ ಭಾಷೆಗಳ ಬಗ್ಗೆ ಮಾತನಾಡುವಾಗ, ಧ್ವನಿ ಪರಿವರ್ತನೆಯನ್ನು ಕುರಿತು ವಿವರಿಸುವಾಗ ಓದಷ್ಟೇ ಅಲ್ಲದೆ ತಮ್ಮ ಕ್ಷೇತ್ರ ಅಧ್ಯಯನದ ಪರಿಚಯವನ್ನು ಸಹ ಮಾಡಿಸಿದ್ದಾರೆ ಲೇಖಕರು. ವಿಭಕ್ತಿಯ ವಿಷಯವೇ ಇರಲಿ, ಲಿಂಗವಿವೇಚನೆ ಬರಲಿ, ಕ್ರಿಯಾ ರಚನಾವಿಧಾನ ನಿರೂಪಣೆಯೇ ಆಗಲಿ ಕನ್ನಡಕ್ಕೆ

ಪ್ರಾತಿನಿಧ್ಯ. ಕನ್ನಡದ ನಂತರ ಇತರ ದ್ರಾವಿಡ ಭಾಷೆಗಳ ತೌಲನಿಕ ನೋಟ, ಈ ಗ್ರಂಥ ಅಧ್ಯಯನದ ಕ್ರಮ. ಪ್ರಥಮಾ ವಿಭಕ್ತಿ ವಿವರಣೆಗೆ ಬಳಸಿದ ವಿಧಾನ ಇಂತಹದೆ.

ವ್ಯಾಕರಣಗಳಲ್ಲಿ ಪ್ರಥಮಾ ವಿಭಕ್ತಿ ಪ್ರತ್ಯಯವಾಗಿ-ಮ್ ಪ್ರತ್ಯಯವನ್ನು ಹೆಸರಿಸಿದೆ. ಕೈಪಿಡಿಕಾರರು ನಪುಂಸಕದಲ್ಲಿ ಮ್ ಸೇರುತ್ತದೆ... ಎಂದು ಹೇಳಿದ್ದಾರೆ. ಆದರೆ ಇದು ಸರಿಯಿಲ್ಲ. ನಪುಂಸಕಲಿಂಗದ ಪದಗಳಿಗೆ-ಮ್ ದ ಜೊತೆಗೆ ನ್ ಎಂಬ ಪ್ರತ್ಯಯವೂ ಸೇರುತ್ತದೆ. ಈ-ನ್ ಬಹುವಚನಕ್ಕೆ ಹತ್ತುವುದಿಲ್ಲ.

-ವಿವರಣೆ ಚರ್ಚೆಯಾಗಿ ಮುಂದುವರಿದು ಹಂಪನಾ ಅಂತಿಮವಾಗಿ ತಮ್ಮ ತೀರ್ಮಾನವನ್ನು ನೀಡುತ್ತಾರೆ. ಕನ್ನಡ ರಚನಾ ವಿಧಾನದ ಐತಿಹಾಸಿಕ ವಿವರಣೆಯ ನಂತರ ಇತರ ದ್ರಾವಿಡ ಭಾಷೆಗಳ ವಿವರಣೆ ಅಲ್ಲಲ್ಲಿ ಬರುತ್ತದೆ.

ಮೇರೆ ಅಥವ ಸೀಮೆಯನ್ನು ಗುರುತಿಸುವ ಪ್ರತ್ಯಯ ಕನ್ನಡದಲ್ಲಿ, -ತನಕ-ವರೆಗೆ. ಇದರ ಆಡು ರೂಪ, -ಗಂಟ-ಗಂಟಾ. ಹಂಪನಾ ಇದನ್ನು ಗಂತವ್ಯ ಎಂದೂ ಕಾರಣಾರ್ಥಕವೆಂದೂ ಕರೆದಿದ್ದಾರೆ. ಕಾರಣಾರ್ಥಕ ಎಂಬ ಹೆಸರು ಇದಕ್ಕೆ ಎಷ್ಟು ಸಮಂಜಸ ಎಂಬುದು ಸಂದೇಹ ಅವನಿಗಾಗಿ ಅವನಿಗೋಸ್ಕರ ಎಂಬ ರಚನೆಯಲ್ಲಿ -ಆಗಿ, -ಓಸ್ಕರ ಎಂಬುದು ಉದ್ದಿಷ್ಟ ವಿಭಕ್ತಿ ಎಂದು ಕರೆಯಲಾಗಿದೆ. ಇದನ್ನೇ ಕಾರಣಾರ್ಥಕ ಎಂದು ಹೆಸರಿಸಬಹುದೇನೊ. ರಾಮನಿಗಿಂತ, ಲಕ್ಷ್ಮೀಗಿನ್ನ ಎಂಬ ಪದರಚನೆಯಲ್ಲಿ-ಗಿಂತ,-ಗಿನ್ನ ತರಭಾವ ಹಾಗೂ ಕ್ರಮವಾಗಿ ಗ್ರಂಥಸ್ಥ ಮತ್ತು ಆಡು ಮಾತಿನ ಪ್ರಯೋಗಗಳು. ಈ ಎಲ್ಲಾ ಪ್ರತ್ಯಯಗಳು ತಮಿಳು ಮತ್ತು ಇತರ ದ್ರಾವಿಡ ಭಾಷೆಗಳಲ್ಲಿ ಲಭ್ಯ. ಆದರೆ ಹಂಪನಾ ಅವರು ತಮ್ಮ ಗ್ರಂಥದಲ್ಲಿ ಇವುಗಳನ್ನು ಪ್ರಸ್ತಾಪಿಸಬಹುದಿತ್ತು. ದ್ರಾವಿಡ ಸರ್ವನಾಮಗಳನ್ನು ವ್ಯಕ್ತಿವಾಚಕಗಳು ಮತ್ತು ದರ್ಶಕಸರ್ವನಾಮಗಳೆಂದು ವರ್ಗೀಕರಿಸಲಾಗಿದೆ. ಇದರ ಪ್ರಕಾರ ಅವನು, ಅವಳು, ಇವನು, ಇವಳು, ಇವರು ದರ್ಶಕವಲ್ಲವೆ? ಪುಟ ೧೪೩ರಲ್ಲಿ ದೂರದರ್ಶನಕ್ಕೆ ಉದಾಹರಣೆಯಾಗಿ ಅವನ್, ಆತನ್, ಸಮೀಪದರ್ಶಕವಾಗಿ ಇವನ್, ಇವಳ್ ಮಧ್ಯದರ್ಶನಕ್ಕೆ ಉದಾಹರಣೆ ಉವನ್ ನೀಡಲಾಗಿದೆ. ಸರ್ವನಾಮಗಳನ್ನು ದರ್ಶಕ ಸರ್ವನಾಮ, ವ್ಯಕ್ತಿವಾಚಿ ಎಂದು ಬೇರ್ಪಡಿಸುವುದು ಸಾಮಾನ್ಯ ಓದುಗರಿಗೆ ಗೊಂದಲಕ್ಕೆ ಎಡೆಮಾಡಿಕೊಡುತ್ತದೆ. ದ್ರಾವಿಡ ಭಾಷೆಗಳಲ್ಲಿ ವಚನ ಮತ್ತು ಲಿಂಗ ಹೊಂದಿಕೊಂಡಿರುತ್ತವೆ. ದ್ರಾವಿಡ ವಚನ ವ್ಯವಸ್ಥೆ ತಿಳಿಸುವಲ್ಲಿ ಇದರ ವಿವರಣೆ ಅವಶ್ಯಕವಾಗುತ್ತದೆ. ಹಂಪನಾ ಅವರು ವಚನ ವ್ಯವಸ್ಥೆಯನ್ನು ವಿಸ್ತಾರವಾಗಿ ವಿವರಿಸಿದ್ದಾರೆ. ಕರ್ಮಣಿ ಪ್ರಯೋಗ ಕನ್ನಡಕ್ಕೆ ಹೊರತು. ತಮಿಳಿನಲ್ಲಿಯೂ ಕಾಣಸಿಗುವ ಈ ರಚನಾ ವಿಧಾನ ದ್ರಾವಿಡಕ್ಕೆ ಸಂಸ್ಕೃತದ ಬಳುವಳಿ. ದ್ರಾವಿಡದಲ್ಲಿ, ಕ್ರಿಯಾರಚನೆ, ಗುಣವಾಚಕ, ಸಂಖ್ಯಾವಾಚಕ, ಲಿಂಗ, ನಿಷೇಧರಚನೆ ಇತ್ಯಾದಿ ವಿವರಗಳನ್ನು ಪ್ರಸ್ತುತ ಗ್ರಂಥ ಒಳಗೊಂಡಿದೆ. ಪ್ರತ್ಯೇಕ ದ್ರಾವಿಡ ಭಾಷೆಗಳ ಧ್ವನಿ ಸ್ವರೂಪ ಮತ್ತು ಧ್ವನಿ ಬೆಳವಣಿಗೆಯನ್ನು ವಿವರಿಸುವುದರ ಮೂಲಕ ದ್ರಾವಿಡಧ್ವನಿ ವ್ಯವಸ್ಥೆಯನ್ನು ಪರಿಚಯಿಸಲಾಗಿದೆ ಈ ಗ್ರಂಥದಲ್ಲಿ.

ಘೋಷ ಮತ್ತು ಅಘೋಷ ವ್ಯಂಜನಗಳು ಎಲ್ಲಾ ದ್ರಾವಿಡ ಭಾಷೆಗಳಲ್ಲಿ ಒಂದೇ

ರೀತಿಯಾಗಿಲ್ಲ, ತಮಿಳು, ಮಲಯಾಳಂನಲ್ಲಿ ಇವು ಪರಸ್ಪರ ಪೂರಕ ಘಟಕಗಳು. ಕನ್ನಡ, ತೆಲುಗಿನಲ್ಲಿ ಇವು ವೈದೃಶ್ಯ ಘಟಕಗಳು. ರೇಫ, ಶಕಟರೇಫ, ಱಟಿ, ಕುಳಗಳೂ ಇಂದಿಗೂ ತಮಿಳನಲ್ಲಿ ಲಭ್ಯ. ಕನ್ನಡದಲ್ಲಿ ಇವು ಐಕ್ಯ ಕ್ರಿಯೆಗೆ ಒಳಗಾಗಿವೆ. ಕನ್ನಡದಲ್ಲಿ 'ಪ' ಧ್ವನಿ 'ಹ' ಧ್ವನಿಯಾಗಿ ಬದಲಾಗಿದೆ. ಮೂಲ ದ್ರಾವಿಡದ 'ಶ್' ಕಾರ ತಮಿಳಿನಲ್ಲಿ ನಿರ್ದಿಷ್ಟ ಪರಿಸರದಲ್ಲಿ 'ಚ್' ಕಾರವಾಗಿ ಬದಲಾಗುತ್ತದೆ. 'ಸ' ಕಾರವು ಸಹ ಕನ್ನಡದ ಕೆಲ ಉಪಭಾಷೆಗಳಲ್ಲಿ, 'ಚ' 'ಒ' ಕಾರವಾಗಿ ಬದಲಾದಂತೆ ತಮಿಳು, ಮಲಯಾಳಂನಲ್ಲಿ 'ಚ' ಕಾರವಾಗುತ್ತದೆ ಇದಲ್ಲದೆ ಕನ್ನಡದ ಕೊಡೆ ತೊಡೆ ಕೊಡು ತಮಿಳಿನಲ್ಲಿ ಕುಡೈ ತುಡೈ ಕುಡು, ಎಂದಿರುವುದು ಮೂಲ ದ್ರಾವಿಡ 'ಉ' ಕಾರ ಕನ್ನಡದಲ್ಲಿ 'ಒ' ಕಾರವಾಗಿ ಬದಲಾಗಿರುವುದನ್ನು ತಿಳಿಸುತ್ತದೆ. ಅದರಂತೆಯೇ ತಮಿಳಿನ ಆದಿ ಇ-ಕಾರ ಕನ್ನಡದಲ್ಲಿ ಎ-ಕಾರ ಕೆಳಗಿನ ಉದಾಹರಣೆಯನ್ನು ಗಮನಿಸಿ ಇಡೈ-ಎಡೆ. ಇಲೈ-ಎಲೆ ಇರಂಡು-ಎರಡು. ತಮಿಳಿನ ಅಂತ ಐಕಾರ ಕನ್ನಡದಲ್ಲಿ ಎಕಾರವಾಗಿರುವುದನ್ನು ಕೆಳಗಿನ ಉದಾಹರಣೆಯಲ್ಲಿ ಕಾಣಬಹುದು. ತಲೈ-ತಲೆ, ಕುಡೈ-ಕೊಡೆ, ಸಿರೈ-ಸೆರೆ ಇತ್ಯಾದಿ.

ಈ ಎಲ್ಲಾ ಶಾಸ್ತ್ರ ವಿಚಾರವನ್ನು ಹಂಪನಾ ಅವರು ಸಾಮಾನ್ಯ ಓದುಗರಿಗಾಗಿ ಸರಳ ಉದಾಹರಣೆಗಳ ಮುಖಾಂತರ ವಿವರಿಸಿ ದ್ರಾವಿಡ ಭಾಷಾ ವಿಜ್ಞಾನವನ್ನು ಬಿಚ್ಚಿಡುತ್ತಾರೆ. ನೇರ ನಿರೂಪಣೆ, ಸರಳ ವಿವರಣೆ, ಸೂಕ್ತ ಪರಿಚಿತ ಉದಾಹರಣೆಗಳ ಮೂಲಕ ದ್ರಾವಿಡ ಭಾಷಾ ವಿಜ್ಞಾನ, ಓದುಗರಿಗಾಗಿ ತಲುಪುವಂತೆ ಹಂಪನಾ ಮಾಡಿದ್ದಾರೆ. ದ್ರಾವಿಡ ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದಂತೆ ವಿಸ್ತಾರವಾದ ಓದಿನ ಅಭಿವ್ಯಕ್ತಿ, ಕ್ಷೇತ್ರ ಕಾರ್ಯ, ಭಾಷೆಗೆ ಸಂಬಂಧಿಸಿದಂತೆ ಸಂವೇದನೆ ಗ್ರಂಥದ ಉದ್ದಕ್ಕೂ ಕಂಡುಬರುತ್ತದೆ. ಕನ್ನಡ ಮತ್ತು ಇಂಗ್ಲೀಷಿನ ವಿಸ್ತೃತವಾದ ಗ್ರಂಥ ಸೂಚಿ ದ್ರಾವಿಡ ಭಾಷಾ ಅಭ್ಯಾಸಿಗಳಿಗೆ ತುಂಬಾ ಉಪಯುಕ್ತವಾಗಿದೆ. ಕನ್ನಡದಲ್ಲಿ ದ್ರಾವಿಡ ಭಾಷಾ ಗ್ರಂಥಗಳ ಕೊರತೆಯನ್ನು ಹಂಪನಾ ತುಂಬಿಕೊಟ್ಟಿದ್ದಾರೆ.

# ಶಾಸನಗಳಲ್ಲಿ ಎರಡು ವಂಶಗಳು

---

ಡಾ॥ ಎಚ್.ಆರ್. ರಘುನಾಥ ಭಟ್

ಹಂಪನಾಗರಾಜಯ್ಯನವರು ವಿದ್ವತ್ತು ಮತ್ತು ವಿನಯಗಳ ಸಂಗಮ ಹೇಗೊ ಹಾಗೆಯೇ ತಮಗೆ ಅನಿಸಿದ್ದನ್ನು ಸ್ಪಷ್ಟವಾಗಿ ಹಾಗೂ ನೇರವಾಗಿ ಆದರೆ ತುಂಬ ಸ್ವಾರಸ್ಯವಾಗಿ ಸಂವಹನಿಸುವ ಸಾಮರ್ಥ್ಯವುಳ್ಳ ಸಾಹಸಿ, ಚಿಕಿತ್ಸಕ ಒಳನೋಟವುಳ್ಳ ಸಂಶೋಧಕ; ಸಂಶೋಧನೆಯಲ್ಲಿ ಸೌಂದರ್ಯ ಪ್ರಜ್ಞೆಯನ್ನು ಆದರ ಪ್ರಕಟಣೆಯಲ್ಲಿ ಅಚ್ಚುಕಟ್ಟುತನವನ್ನು ಮೆರೆಯುತ್ತ ಬಂದ ಸ್ನೇಹಜೀವಿ. ಪಂಡಿತ-ಪಾಮರರಿಗೂ ತಿಳಿಯಬಲ್ಲ ರೀತಿಯಲ್ಲಿ ಮಾತಾಡಬಲ್ಲ ಈ ಮೋಡಿಗಾರರ ಉಪನ್ಯಾಸಗಳನ್ನು ಕೇಳುವುದೇ ಒಂದು ಅನುಭವ. ಅವು ಪ್ರಕಟವಾದಲ್ಲಿ ಅವನ್ನು ಓದುವುದು ಇನ್ನೊಂದು ಅನುಭವ. ೧೯೯೫ರ ಜನವರಿ ೨೭ ಮತ್ತು ೨೮ರಂದು ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ದಶಮಾನೋತ್ಸವ ದತ್ತಿ ಉಪನ್ಯಾಸವಾಗಿ 'ಶಾಸನಗಳಲ್ಲಿ ಎರಡು ವಂಶಗಳನ್ನು' ನೀಡಿದ ಸಂದರ್ಭದಲ್ಲೇ ಕಿರಿದಾದರೂ ವಿಶಿಷ್ಟ ಪ್ರಕಟಣೆಯಾಗಿ ಹೊರಬಂದದ್ದು ಅಭಿನಂದನಾರ್ಹ ಹಾಗೂ ಅಪೇಕ್ಷಿತ ಘಟನೆ. ಇದನ್ನು ಕನ್ನಡ ವಿಭಾಗದ ಹದಿನೇಳನೆಯ ಪುಸ್ತಕವಾಗಿ ಕಾಳಜಿಯಿಂದ ಹೊರತಂದ ತಾಳ್ತಜೆ ವಸಂತಕುಮಾರರೂ ಪ್ರಶಂಸನಾರ್ಹರು.

ವಾಜಿ ಮತ್ತು ಸಗರ (ಮಣಲೆ) ಎಂಬ ಎರಡು ವಂಶಗಳ ಕುರಿತು ಎರಡು ದಿನ ಮಾತಾಡಿದ್ದು ಮತ್ತು ಇದೀಗ ಎಪ್ಪತ್ತಾರು ಪುಟಮಿತಿಯ ಪುಸ್ತಿಕೆಯಾಗಿ ಕೈಸೇರಿದ್ದರಿಂದ ಅವುಗಳ ಬಗೆಗಿನ ಅರಿವಿನೊಂದಿಗೆ ಹೆಚ್ಚಿನ ಚಿಂತನೆಗೊಂದು ಅವಕಾಶ ಒದಗಿಬಂದಿದೆ. ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಅಷ್ಟೊಂದು ದೊಡ್ಡ ಹೆಸರು ಮಾಡದ ಆದರೆ ತಮ್ಮದೆ ಆದ ಮಹತ್ವದ ಕಾಣಿಕೆ ನೀಡಿದ ವಾಜಿಕುಲ ಮತ್ತು ಮಣಲೆಯರ ಮನೆತನಗಳ ವಿವರಗಳನ್ನು ಉಪಲಬ್ಧ ಶಾಸನ, ಸಾಹಿತ್ಯಗಳನ್ನಾಧರಿಸಿ ಹೊರತೆಗೆದಿದ್ದಾರೆ. ಈ ತೆರನ ಅಂತರಶಾಸ್ತ್ರೀಯ ಸಂಶೋಧನೆಯಲ್ಲಿ ಶಾಸನ ವ್ಯಾಸಂಗ, ಭಾಷಿಕಶಿಸ್ತು ಐತಿಹಾಸಿಕ ಪ್ರಜ್ಞೆ ಪರಿಶ್ರಮಗಳು ಕೆನೆಕಟ್ಟಿವೆ.

ಇತ್ತೀಚಿನ ದಿನಮಾನಗಳಲ್ಲಿ ವಿವಿಧ ಜ್ಞಾನ ಶಾಖೆಗಳು, ಶಾಸ್ತ್ರಶಿಸ್ತುಗಳು ತಮ್ಮ ಅಧ್ಯಯನ, ತಂತ್ರವಿಧಾನ ಮತ್ತು ಸೈದ್ಧಾಂತಿಕ ಚೌಕಟ್ಟುಗಳನ್ನು ಪುನಾರೂಪಿಸಿಕೊಳ್ಳುವುದರ ಜೊತೆಗೆ ಹೆಚ್ಚು ಹೆಚ್ಚು ಒಗ್ಗಿಸಿಕೊಳ್ಳುತ್ತಿವೆ. ಈ ಹಿನ್ನೆಲೆಯಲ್ಲಿ ಶಾಸನವಿಜ್ಞಾನ ಬಹು ಉಪಯುಕ್ತ ಕ್ಷೇತ್ರವಾಗಿದೆ. ಸಾಂಸ್ಕೃತಿಕ ಚರಿತ್ರೆಯ ಸರಿಯಾದ ಮತ್ತು ಸಮಗ್ರ ಅರಿವಿಗೆ

ಶಾಸನಾಭ್ಯಾಸ ಮತ್ತು ವಿಶ್ಲೇಷಣೆ ಅಪೇಕ್ಷಣೀಯ ಮಾತ್ರವಲ್ಲ ಅದನ್ನು ಮುನ್ನೆಲೆಗೆ ತಂದುಕೊಳ್ಳಬೇಕಾದದ್ದು ಅನಿವಾರ್ಯ ಮತ್ತು ಅತ್ಯಗತ್ಯ. ಶಾಸನಗಳು ವಾಸ್ತವವಾಗಿ ಮನುಷ್ಯಕೇಂದ್ರಿತ ಸಂಸ್ಕೃತಿಯ ಅವಿಭಾಜ್ಯ ಅಂಗಗಳು. ಅವು ಹೊರಗೆಡಹುವ ಸಂಗತಿಗಳು ಮತ್ತು ವಿವರಗಳು ಬೆರಗುಹುಟ್ಟಿಸುವಂತಹವು. ಇದೊಂದು ಅಕ್ಷಯನಿಧಿ. ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಭಾಷಿಕ, ಸಾಹಿತ್ಯಕ ಅಧ್ಯಯನಗಳಿಗೆ ಬೇಕಾದ ಮಾಹಿತಿಗಳಲ್ಲದೆ, ವ್ಯಕ್ತಿನಾಮ, ಸ್ಥಳನಾಮ, ಸಣ್ಣಪುಟ್ಟಮನೆತನ, ಸಾಮಂತ, ಮಹಾಸಾಮಂತ, ಮಂಡಳೇಶ್ವರ, ಮಹಾಮಂಡಳೇಶ್ವರ, ನಾಳ್ಪ್ರಭು, ಊರಗಾವುಂಡ, ಸ್ಥಳೀಯ ವೀರ, ಮಹಾಸತಿ ಮುಂತಾದವರ ಅರಿವಿಗೆ ಬೇಕಾದ ಮಾಹಿತಿಗಳು ಅಪಾರ. ಇವುಗಳ ಅಧ್ಯಯನದಿಂದ ಚರಿತ್ರೆಗೆ ಹೊಸ ಹೊಸ ಆಯಾಮ ಪ್ರಾಪ್ತವಾಗುತ್ತದೆ.

ಬಹುಮಾನ್ಯ ಮತ್ತು ಹೆಚ್ಚು ಪ್ರತಿಷ್ಠಾಪಿತ ರಾಜವಂಶಗಳನ್ನು ಕುರಿತು ಶಾಸನಗಳನ್ನಾಧರಿಸಿ ಸಾಕಷ್ಟು ಬರಹಗಳು ಬಂದಿವೆ, ಬರುತ್ತಿವೆ. ಆದರೆ ಈ ಬಗೆಯ ದೊಡ್ಡಮನೆತನಗಳ ಬುಡಕ್ಕೆ ಬುನಾದಿಯಾಗಿ ದುಡಿದ ಸಣ್ಣಪುಟ್ಟ ಕುಟುಂಬ, ಕುಲಗಳೆಷ್ಟೋ. ಅವೆಲ್ಲವನ್ನು ಸಮಗ್ರವಾಗಿ ಸಂಶೋಧಿಸಿ, ಅವರವರಿಗೆ ಸಿಗಬೇಕಾದ ಸ್ಥಾನಮಾನ ನಿಷ್ಕರ್ಷೆ, ಅವರು ನೀಡಿದ ಕೊಡುಗೆಗಳ ಮೌಲ್ಯಮಾಪನ ಜೊತೆ ಜೊತೆಗೇ ಆಗಬೇಕಾಗಿದೆ. ದಿನಕರ ದೇಸಾಯಿಯವರು ಕಲ್ಯಾಣ ಚಾಳುಕ್ಯರ ಕಾಲದ ಮಹಾಮಂಡಳೇಶ್ವರರನ್ನು ಕುರಿತು ೧೯೫೧ರಲ್ಲಿ ವಿಶೇಷವ್ಯಾಸಂಗ ಮಾಡಿದ್ದುಂಟು. ಅಲ್ಲಿಂದಾಚೆಗೆ ಇಂಥ ಸೂಕ್ಷ್ಮ ಅಧ್ಯಯನಗಳು ನಡೆದಿವೆ. ಹಂಪನಾರವರ 'ಶಾಸನಗಳಲ್ಲಿ ಎರುಡು ವಂಶಗಳು' ಎಂಬುದು ಈ ಮಾಲಿಕೆಯ ಒಂದು ಮೌಲಿಕ ಅಧ್ಯಯನವಾಗಿದೆ. ಸ್ಥಳಮೂಲ, ವ್ಯಕ್ತಿಮೂಲ, ವೃತ್ತಿಮೂಲ, ವೃಕ್ಷಮೂಲ ಘಟನಾಮೂಲವೇ ಮುಂತಾಗಿ ನಾನಾ ಮೂಲಗಳಿಂದ ನಿಷ್ಪನ್ನವಾದ ಅಭಿದಾನ ಹೊತ್ತ ಕುಲ, ವಂಶಗಳ ಸಾಂಸ್ಕೃತಿಕ ಅಧ್ಯಯನವು ಪ್ರಾದೇಶಿಕ ಇತಿಹಾಸದ ದೃಷ್ಟಿಯಿಂದ ಸ್ವಾರಸ್ಯಕರವಾಗಿರುವಂತೆ, ದೇಶೀಯ ಚರಿತ್ರೆಯ ಪುನಾರಚನೆಗೆ ಸ್ಥಿತ್ಯಂತರಗಳ ವಿಮರ್ಶೆಗೆ ಪೂರಕವಾಗಿರುತ್ತದೆ.

ಮೊದಲನೆಯ ಉಪನ್ಯಾಸವು ಪುಸ್ತಿಕೆಯ ಮೊದಲ ಇಪ್ಪತ್ತೈದು ಪುಟಗಳಲ್ಲಿ ಲಿಖಿತಗೊಂಡಿರುವಂತೆ (ಪು. ೯-೩೪), ವಾಜಿವಂಶ ಮತ್ತು ತೈಲಪಭುಜಾದಂಡ ದಲ್ಲಪ (ಅಧ್ಯಾಯ ೧), ಪಂಪಯ್ಯನ ಪ್ರವೇಶ (ಅಧ್ಯಾಯ೨), ಕಾಳಿಮಯ್ಯ ದಂಡನಾಯಕ (ಅಧ್ಯಾಯ ೩), ಹುಳ್ಳ ರೇಚಣ (ಅಧ್ಯಾಯ ೪) ಮತ್ತು ಅಜ್ಜೈನ ವಾಜಿವಂಶಗಳ (ಅಧ್ಯಾಯ ೫), ವಿವರಣೆಯನ್ನು ವಿಶ್ಲೇಷಿಸಿ, ಕೊನೆಗೆ ೧೮ ತೀರ್ಮಾನಗಳನ್ನು ಕೈಕೊಂಡು (ಅಧ್ಯಾಯ ೬) ಅಂತಿಮದಲ್ಲಿ ಸಮಾರೋಪಮಾಡಲಾಗಿದೆ (ಅಧ್ಯಾಯ ೭) ಅಲ್ಲದೆ ಲಕ್ಕುಂಡಿ ಶಾಸನ (೫೨:೧೦೦೭), ಪಡಗಲ್ಲು ಶಾಸನ (೩:೧೦೪೭), ಬಿಮರಾ ಶಾಸನ (೨೩ : ೧೧೨೨-೨೩) ಗಳನ್ನಾಧರಿಸಿ ವಾಜಿವಂಶದ ಮೂರು ವಂಶವೃಕ್ಷಗಳನ್ನು ಹಾಗೂ ಪೊನ್ನನ ಶಾಂತಿಪುರಾಣಂ ಮತ್ತು ರನ್ನನ ಅಜಿತಪುರಾಣಂ, ಕಾವ್ಯಗಳನ್ನಾಧರಿಸಿ ಇನ್ನೊಂದು ವಂಶಾವಳಿಯನ್ನು ನಾಲ್ಕು ಅನುಬಂಧಗಳಾಗಿ ಜೋಡಿಸಿದ್ದಾರೆ.

ವಾಜಿವಂಶದ ನಾಮ ನಿಷ್ಪತ್ತಿಯನ್ನು ಕೊನೆಯಲ್ಲಿ ನೀಡಿದ್ದರೂ ಅದನ್ನು ಮೊದಲಿಗೆ ಪರಿಗಣಿಸಬೇಕು. ಸಂಸ್ಕೃತ ಉಪಾಧ್ಯಾಯ ತದ್ಭವ ರೂಪತಾಳಿ ಪ್ರಾಕೃತದ ಉವಜ್ಝಾಯ

ಉಪಜ. ಓಜ. ವಾಜ ಆಗಿರಬೇಕು. ಜೈನ ಸಮಾಜದ ಪುರೋಹಿತರು-ಎಂಬುದನ್ನು ಇದು ಸೂಚಿಸಬಹುದು. ಆದರೆ ಇದೇ ಕೊನೇ ಮಾತಾಗದು. ವಾಜಿ ಅಶ್ವಸಂಬಂಧಿ ಸೇನಾನಿ ಸೂಚಕವೂ ಆಗಿರಬಹುದು. ಆದರೆ ವಾಜಪೇಯ (ವಾಜಸನೇಯ) ಎಂಬ ಯಜ್ಞಯಾಗಾದಿ ಮಾಡುವ ಮನೆತನವಾಗಿರುವ ಸಂಭವವೇ ಹೆಚ್ಚಾಗಿದೆ; ಅಂದರೆ ವೈದಿಕತ್ವವನ್ನು ಇದು ಸೂಚಿಸುತ್ತದೆ. ರೋಣದ ಶಾಸನ ಪಾಠದಂತೆ ಶಿಲ್ಪವಿವರಗಳೂ ವೈದಿಕ ಸಂಪ್ರದಾಯವನ್ನು ಪ್ರತಿಬಿಂಬಿಸುತ್ತದೆ. ಈ ಕ್ರಿಯೆಯು ಶಬ್ದ ಹಾಗೂ ಅರ್ಥದೊಟ್ಟಿಗೆ ಅಂತಸ್ಸಂಬಂಧವುಳ್ಳ ವಾಜಿವಂಶವು ಒಂದು ನಿರ್ದಿಷ್ಟ ಆಡಳಿತವ್ಯಾಪ್ತಿಯಲ್ಲಿ ಹುಟ್ಟಿಬೆಳೆದು ಕರಗಿ ಹೋದದ್ದು ಶಾಸನೀಯವಾಗಿ ಕಂಡುಬರುವ ಸಂಗತಿ. ಅದು ಮಾಡಿದ ತ್ಯಾಗ ನೀಡಿದ ಕೊಡುಗೆಗಳನ್ನು ಕನ್ನಡ ನಾಡಿನ ಸಾಂಸ್ಕೃತಿಕ ಚರಿತ್ರೆಯ ಸಂದರ್ಭದಲ್ಲಿ ವಿವೇಚಿಸುವುದು ಸೂಕ್ತವಾಗಿದೆ.

ವಾಜಿವಂಶದ ನಾಲ್ಕು ಪ್ರತಿಷ್ಠಿತ ಕುಟುಂಬಗಳಲ್ಲಿ ಸುಮಾರು ಮೂವತ್ತೆಂಟು ಜನರು ಆಗಿಹೋಗಿದ್ದಾರೆ. ಸುಮಾರು ಮೂರು ಶತಮಾನದ ಅವಧಿಯಲ್ಲಿ ಪಂಪಯ್ಯನಿಂದ ಆರಂಭಿಸಿ (೯೪೩) ಮಧುರಕವಿಯವರೆಗೆ (೧೨೮೫) ಬೇರೆ ಬೇರೆ ಕಾಲಘಟ್ಟದಲ್ಲಿ ಜೀವಿಸಿದ್ದರು. ಕೌಂಡಿನ್ಯ, ಕಾಶ್ಯಪ, ಭಾರದ್ವಾಜ, ಹಾರೀತ, ಸಾಂಖ್ಯಾಯನ, ಮಾಂಧಾತ ಎಂಬ ಆರುಗೋತ್ರಗಳು ಇಲ್ಲಿ ಕಂಡುಬರುತ್ತದೆಯಲ್ಲ? ಮೂಲತಃ ಶೈವ ಸ್ಮಾರ್ತಮತೀಯರಾಗಿ ಹತ್ತನೆಯ ಶತಮಾನದಲ್ಲಿ ರೋಣದಲ್ಲಿ ಈ ವಂಶದ ಅರುಣೋದಯವಾಗಿರಬಹುದು. ಮುಂದೆ ಮಾನ್ಯಖೇಟ, ಮಾಸವಾಡಿ, ಸಾಂತಳಿಗೆ, ಗಂಗವಾಡಿ, ವೆಂಗಿಮಂಡಲ, ನಾಂದೇಡಗಳ ಪರಿಧಿಯಲ್ಲಿ ಈ ವಂಶದ ಕುಡಿ ಪಲ್ಲವಿಸಿರಬಹುದು, ರಾಷ್ಟ್ರಕೂಟ, ಕಲ್ಯಾಣ ಚಾಳುಕ್ಯ, ಕಳಚುರಿ, ಹೊಯ್ಸಳ, ವಿಜಯನಗರ ಸಾಮ್ರಾಜ್ಯಗಳವರೆಗೆ ಇವರ ರಾಜಕೀಯ ಪಾತ್ರ ಪಸರಿಸಿರಬೇಕು. ಜೊತೆಗೆ ಸಾಮಾಜಿಕ -ಧಾರ್ಮಿಕ-ಸಾಂಸ್ಕೃತಿಕ ಸ್ಥಾನಮಾನವನ್ನು ತಕ್ಕಮಟ್ಟಿಗೆ ಉನ್ನತ ಬಾಹತ್ತರ ನಿಯೋಗಪತಿಗಳಾಗಿ ರಣರಂಗದಲ್ಲಿ ಸಾಹಸತೋರಿದ ವೀರಕಲಿಗಳಿರುವಂತೆ, ಘನವಿದ್ವಾಂಸರು, ಸಾಹಿತ್ಯ ಕಲಾ ಪ್ರೇಮಿಗಳು, ದೇಗುಲ ನಿರ್ಮಾರ್ತೃಗಳು ಆಗಿ ಹೋಗಿದ್ದಾರೆ.

ಧಾರ್ಮಿಕವಾಗಿ ಈ ವಂಶವನ್ನು ಜೈನ ವಾಜಿ ಮತ್ತು ವೈದಿಕವಾಜಿ ಎಂದು ಎರಡು ಭಾಗವಾಗಿ ಹಂಪನಾ ನೋಡಿದ್ದಾರೆ. ಪೊನ್ನನು 'ಶಾಂತಿ ಪುರಾಣ' ರನ್ನನು 'ಅಜಿತಪುರಾಣ' ಲಕ್ಕುಂಡಿ ಶಾಸನ (ನಂ ೫೨) ಗಳನ್ನು ರಚಿಸಿದಲ್ಲದೆ ದಾನಚಿಂತಾಮಣಿ ಅತ್ತಿಮಬ್ಬೆಯು ಈ ಶಾಂತಿಪುರಾಣದ ಒಂದು ಸಾವಿರ ಓಲೆಗರಿ ಪ್ರತಿಗಳನ್ನು ಮಾಡಿಸಿ ಶಾಸ್ತ್ರದಾನಮಾಡಿದ್ದು, ೧೫೦೧ ಜಿನಗೃಹಗಳನ್ನು (!), ೧೫೦೦ ಜಿನಬಿಂಬಗಳನ್ನು, ಮಂದಾಸನ, ಜಯಘಂಟೆ ಮಣಿತೋರಣಗಳನ್ನು ಮಾಡಿಸಿದ್ದು ಅಚ್ಚರಿಯನ್ನುಂಟುಮಾಡುತ್ತದೆ. ಅದೇ ರೀತಿ ಈ ವಂಶದ ರೇಚಣ ಕಾಳಮಯ್ಯ, ಹುಳ್ಳ ಜಿನಾಲಯಗಳನ್ನು ನಿರ್ಮಿಸಿದರು.

ಇನ್ನು ವೈದಿಕ ವಾಜಿವಂಶದಲ್ಲಿ ನಾಗವರ್ಮ ತನ್ನ ಹಾಗೂ ತನ್ನ ತಂದೆ-ತಾಯಿ-ಚಿಕ್ಕಪ್ಪ ಹೆಂಡತಿ. ತಂಗಿಯ ಹೆಸರಲ್ಲಿ ಹಲವು ದೇಗುಲಗಳನ್ನು ನಿರ್ಮಿಸಿದನು, ಅಲ್ಲದೆ ಘಳಿಗೆ, ಬಾಗಿಲುವಾಡ, ಸಂಧ್ಯಾಮಠ, ಗಣಪತಿ, ಭಗವತಿ, ಸಪ್ತ ಮಾತೃಕೆ, ನಂದಿನಾಗರ, ಸಮಸ್ತ ದೇವತಾಪ್ರತಿಮೆಗಳನ್ನು ಮಾಡಿಸಿದನು. ರೇವಣಯ್ಯ ರೇವಣೇಶ್ವರ ದೇವಾಲಯವನ್ನು ಕಟ್ಟಿಸಿದನು.

ರೋಣ ಪರಿಸರದ ವಾಸ್ತು ಶಿಲ್ಪ ಕೃತಿಗಳನ್ನು ಸಮೀಕ್ಷಿಸಿದರೆ ಗುಣಮಟ್ಟದಲ್ಲಿ ಸ್ಥಳೀಯ ಕಲೆ ಎಷ್ಟು ಉನ್ನತವಾಗಿತ್ತೆಂಬುದು ಗೊತ್ತಾಗದೆ ಇರದು. ಈ ವಂಶದ ಪಂಪಯ್ಯ ಭತ್ತಾಯವನ್ನು ಕೊಡಲೊಪ್ಪದೆ 'ತಾನೊಂದು ಅಕ್ಷತೆಯನಪ್ಪಂದ ಮಾಯೆನೆನ್ದು ತಜೆಸನ್ದ' (ನಾನೊಂದು ಅಕ್ಷತೆಯನ್ನೂ ಹೆಚ್ಚಾಗಿ ಕೊಡುವುದಿಲ್ಲ) ಎಂದು ಘೋಷಿಸಿದ್ದ. ಈ ಸಾಹಸಿ ಪ್ರತಿಭಟನಕಾರನಾಗಿದ್ದ ಪಂಪಯ್ಯನ ಸುತ್ತಲಿನ ವಿವರಗಳನ್ನು ಎತ್ತಿಹೇಳುವ ಧ್ವನಿಯಲ್ಲಿಯೇ ರೋಣದ ಆ ವಿರಗಲ್ಲು ಶಾಸನ ಶಿಲ್ಪವೈಭವವನ್ನೂ ವರ್ಣಿಸ ಬೇಕಿತ್ತು. ನಾನು ರೋಣದಲ್ಲಿ ಕ್ಷೇತ್ರಕಾರ್ಯ ಮಾಡುವಾಗ ತಾಲೂಕು ಕಚೇರಿ ಬಳಿ ನಿಲ್ಲಿಸಿರುವ ತುಂಡನ್ನು ಸೂಕ್ಷ್ಮವಾಗಿ ಅಭ್ಯಸಿಸಿ ಆಮೇಲೆ ಧಾರವಾಡದಲ್ಲಿರುವ ಪುರಾತತ್ವ ಇಲಾಖೆಯ ವಿಭಾಗ ಕಚೇರಿ ಆವರಣದಲ್ಲಿ (ಈಗ ಈ ಕಚೇರಿಯನ್ನು ಹುಬ್ಬಳ್ಳಿಯ ಗೋಕುಲ ಬಡಾವಣೆಗೆ ಸ್ಥಳಾಂತರಿಸಲಾಗಿದೆ) ಮತ್ತೊಂದು ತುಂಡಿನೊಡನೆ ತೌಲನಿಕವಾಗಿ ಅಭ್ಯಸಿಸಲಾಗಿ ಅವೆರಡೂ ಮೂಲತಃ ಒಂದೇ ವೀರಗಲ್ಲು ಶಾಸನವೆಂಬ ತೀರ್ಮಾನಕ್ಕೆ ಬಂದೆ. ಮಾತ್ರವಲ್ಲ ಅದರ ಶಿಲ್ಪ ಸೌಂದರ್ಯ ಹಾಗೂ ವಿನ್ಯಾಸ ಅದ್ವಿತೀಯವಾಗಿದೆ. ರಾಷ್ಟ್ರಕೂಟ ಶೈಲಿಯ ಮೋಹಕಶಿಲ್ಪಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ,-ನಟರಾಜ, ಮಹಿಷಾಸುರ ಮರ್ದಿನಿ, ಸೂರ್ಯ ಶಿಲ್ಪಗಳನ್ನು ಎರಡು ಹಂತದಲ್ಲಿ ಕೆತ್ತಲಾಗಿರುವುದಲ್ಲದೆ ಮಧ್ಯದಲ್ಲಿ ಪಂಪಯ್ಯನ ಪ್ರತಿಮೆಯನ್ನು ದೇವತಾಶಿಲ್ಪದಂತೆ ಕಂಡರಿಸಲಾಗಿದೆ. ಕೆಳಗಿನ ಪಟ್ಟಿಕೆಯಲ್ಲಿ ಬೂತುಗನ ಆನೆಸೈನ್ಯದ ವಿರುದ್ಧ ಪ್ರತಿಭಟಿಸುತ್ತಿರುವ ಪಂಪಯ್ಯನ ಸಂಯೋಜನಾ ಚಿತ್ರ ತುಂಬ ನೈಜವಾಗಿದೆ, ಇದನ್ನೆಲ್ಲ ಸೂಕ್ಷ್ಮವಾಗಿ ನೋಡಿದಾಗ ಇದರಲ್ಲಿ ಜೈನೀಯ-ಅಂಶಗಳು ಯಾವುವೂ ಕಾಣುವುದಿಲ್ಲ. ಅದೇ ರೀತಿ ನಿಟಪಳ್ಳಿ (ರಾಣೆಬೆನ್ನೂರು ತಾ ಧಾರವಾಡ) ಶಾಸನದ ಏಳನೆಯ ಸಾಲಲ್ಲಿರುವ ಬಷರಿಗೆ ಎಂಬುದು ಭಟರಿ (ಬಟಾರಿ) ಎಂಬ ದೇವತೆಯ ಹೆಸರಿರಬಹುದೆಂದು ಸಂಪಾದಕರು ಊಹಿಸಿದರೆ ಹಂಪನಾರವರು ಅದು ಬಸದಿಗೆ ಎಂದಿರಬೇಕೆಂದು ಆಲೋಚಿಸಿ ಊಹಿಸಿದ್ದಾರೆ. ಇದು ಕೂಡ ಪರಿಶೀಲನಾರ್ಹವಾಗಿದೆ. ನಾನು ೧೯೭೪ರಲ್ಲಿ ಪತ್ತೆಮಾಡಿ ಪ್ರಕಟಿಸಿದ ಇನ್ನೊಂದು ಸುಂದರ ವೀರಗಲ್ಲು ಶಾಸನದಲ್ಲಿ ಪಂಪಯ್ಯನ ಉಲ್ಲೇಖ ಬಂದಿದ್ದು, ಇದನ್ನು ಪರೋಕ್ಷವಾಗಿ ಮಾತ್ರ ಉಲ್ಲೇಖಿಸಿ ಹಂಪನಾರವರು ಉದ್ಧರಿಸಿದ್ದಾರೆ. ಆದರೆ ಅದು ಕಾಶ್ಯಪ ಗೋತ್ರದ ಬಳಗವಟ್ಟಿ ವಂಶದ ಪಂಪಯ್ಯ ಸೋಮಯಾಜಿಯ ಪುತ್ರನಾದ ಮಾಚಗಿ ವರ್ಮಯ್ಯನ ಒಂದು ಪ್ರಮುಖ ಪ್ರತಿಭಟನೆಯನ್ನು ಮೆರೆಯುವ ವೀರಗಲ್ಲು ಶಾಸನ (೧೭೬). ಮಾದರಿಯಲ್ಲಿ ಬೂತುಗನನ್ನೆದುರಿಸಿದ ಆ ಪಂಪಯ್ಯನ ವೀರಗಲ್ಲು ಶಾಸನದಂತಿದೆ. ಇದರಲ್ಲೂ ಹಿಂದೂ ದೇವಾನುದೇವತೆಗಳ ಶಿಲ್ಪಗಳನ್ನು ಕಂಡರಿಸಲಾಗಿದೆ. ಇಲ್ಲಿ ಬರುವ ಪಂಪಯ್ಯನನ್ನು ವಾಜಿಕುಲಕ್ಕೆ ಸೇರಿಸಿ, ಜೈನಮತೀಯನೆಂದು ತೀರ್ಮಾನಿಸುವುದು ಎಷ್ಟು ಸಮಂಜಸವೆಂಬುದು ಮತ್ತೆ ಪರಿಶೀಲನಾರ್ಹವಾಗಿದೆ.

ವಾಜಿವಂಶದ ಸಮಗ್ರ ಸಮೀಕ್ಷೆ ನೀಡುವಾಗ ಇನ್ನೂ ಹತ್ತಾರು ಶಾಸನಗಳು ಉಪಲಬ್ಧವಿರುವುದನ್ನು ತಿಳಿದು 'ಅವೆಲ್ಲವುಗಳ ಪ್ರಸ್ತಾಪ ಮತ್ತು ಚರ್ಚೆ ಈ ಸಂಪ್ರಬಂಧದ ಚೌಕಟ್ಟಿನ ಕಕ್ಷೆಗೆ ಮೀರಿದ್ದು ಹಾಗೂ ಹೊರತಾಗಿದೆ. ವಾಜಿಕುಲ ಕುಲಜರೆಲ್ಲರ ಪಟ್ಟಿಕೊಡುವುದು ನನ್ನ ಉದ್ದೇಶವಾಗಿಲ್ಲ' ಎಂದಿದ್ದಾರೆ. ವಾಸ್ತವವಾಗಿ ಇವೆಲ್ಲವನ್ನು ಒಟ್ಟಿಗೆ

ಸಮೀಕ್ಷಿಸಿ. ಆ ವಂಶದ ಸುಸಂಬದ್ಧ ಚರಿತ್ರೆಯನ್ನು ಪುನಾರಚಿಸುವ ಸದಾಶಯ ಹಂಪನಾರವರದ್ದಾಗಿದ್ದು ಪೂರ್ಣ ಪ್ರಮಾಣದಲ್ಲಿ ಕಾರ್ಯಗತವಾಗಿದ್ದರೆ ಹೆಚ್ಚು ಉಪಯುಕ್ತ ವಾಗುತ್ತಿತ್ತು. ಮುಂಬರುವ ದಿನಗಳಲ್ಲಿ ಅಂಥ ಒಂದು ಸಮಗ್ರ ಕೃತಿಯನ್ನು ಅವರಿಂದ ಅಪೇಕ್ಷಿಸೋಣ. ಅಂತೂ ವಾಜಿವಂಶದಂತಹ ಪುಟ್ಟ ವಂಶ ಕೂಡ ಇತಿಹಾಸದಲ್ಲಿ ಹೇಗೆ ಗಣನೀಯ ಪಾತ್ರ ನಿರ್ವಹಿಸಿದೆಯೆಂಬುದನ್ನು ಈ ಪ್ರಬಂಧವು ಇನ್ನಷ್ಟು ವಿಸ್ತಾರವಾದ ಅಧ್ಯಯನಕ್ಕೆ ದಾರಿತೋರಿಸುವ ಒಂದು ತೋರು ಬೆರಳಾಗಿ ಸಾರ್ಥಕವಾಗಿದೆ.

ಹಂಪನಾರವರ ಎರಡನೆಯ ಉಪನ್ಯಾಸ, ಇಲ್ಲಿ ದ್ವಿತೀಯ ಸಂಪ್ರಬಂಧವಾಗಿ ಮತ್ತೆ ಏಳು ಅಧ್ಯಾಯಗಳಲ್ಲಿ ಮೂವತ್ತಾರು ಪುಟಮಿತಿಯಲ್ಲಿ ಹರಡಿಕೊಂಡಿದೆ (ಪು ೩೯-೭೬) ಶಾಸನಗಳಲ್ಲಿ ಸಗರವಂಶ (ಮಣಲೆಯರು) ಹೇಗೆ ಮೂಡಿಬಂದಿದೆಯೆಂಬುದನ್ನು ಪರಿಚಯಿಸುತ್ತ (ಅಧ್ಯಾಯ ೧) ಅದರ ಶಾಸನ ಸಂಪತ್ತನ್ನು ಸವಿಸ್ತಾರವಾಗಿ ಸಮೀಕ್ಷಿಸಿದ್ದಾರೆ. ಆ ವಂಶಕ್ಕೆ ಸಂಬಂಧಿಸಿದ ೩೩ ಶಾಸನಗಳ ಪಟ್ಟಿಯನ್ನು ಕೂಡ ಈ ಪುಸ್ತಿಕೆಯ ಕೊನೆಯ ಪುಟದಲ್ಲಿ ಮುದ್ರಿಸಿದ್ದಾರೆ (ಪು ೭೬)

ಎರಡು ಮತ್ತು ಮೂರನೆಯ ಅಧ್ಯಾಯಗಳಲ್ಲೂ ಪ್ರಾಚೀನ ಶಾಸನಗಳನ್ನು, ಆತಕೂರ ಶಾಸನಸಾರವನ್ನು ಪ್ರಸ್ತುತವಾಗುವಂತೆ ಸಮೀಕ್ಷಿಸಿದ್ದಾರೆ. ನಾಲ್ಕನೆಯ ಅಧ್ಯಾಯದಲ್ಲಿ ಪುಲಿಗೆರೆಗೆ ಪ್ರಯಾಣ ಮಾಡಿಸಿದ್ದಾರೆ. ಮಣಲೆರ. ಜಯಕೇಸಿ (ಅಧ್ಯಾಯ ೫), ಹೈಹಯರನ್ನು-ಸಗರರನ್ನು (ಅಧ್ಯಾಯ ೬) ಕುರಿತ ವಿವರಣೆ ನೀಡಿ ಸಮಾರೋಪದಲ್ಲಿ (ಅಧ್ಯಾಯ - ೭) ಆ ಮನೆತನದ ಇತಿಹಾಸಕ್ಕೆ ಸಂಬಂಧಿಸಿದಂತೆ ಕೈಕೊಳ್ಳಬಹುದಾದ ಕೆಲವು ಮುಖ್ಯ ನಿರ್ಣಯಗಳನ್ನು ಪಟ್ಟಿಮಾಡಿದ್ದಾರೆ. ಕೊನೆಗೆ ಸಗರ-ಮಣಲೆರಾನ್ವಯ ಪೀಳಿಗೆಯ ಸ್ಥೂಲವಂಶ ನಕ್ಷೆಯನ್ನು ನೀಡಿದ್ದಾರೆ; ಆ ವಂಶ ಸಂಬಂಧಿ ಶಾಸನಗಳ ಯಾದಿಯನ್ನು ಕೊಟ್ಟಿದ್ದಾರೆ.

ಸಗರ, ಸಗರಮಾರ್ತ್ತಾಂಡ, ಮಣಲೆರ, ಮಣಲೆರಾದಿತ್ಯ ಎಂದು ಮುಂತಾಗಿ ನಿರ್ದೇಶಿಕೊಂಡು ಸುಮಾರು ೮-೯ನೆಯ ಶತಕದಿಂದ ಮನ್ನಣೆ ಪಡೆದ ಈ ಮನೆತನ ಮಂಡ್ಯ ಜಿಲ್ಲೆ ನಾಗಮಂಗಲ, ಮಳವಳ್ಳಿ, ಮದ್ದೂರು ತಾಲೂಕುಗಳು, ಮೈಸೂರು ಜಿಲ್ಲೆ ಗುಂಡ್ಲುಪೇಟೆ, ತಿರುಮಕೂಡಲು ನರಸೀಪುರ ತಾಲೂಕುಗಳ ಪರಿಸರದಲ್ಲಿತ್ತು. ೧೦ನೆಯ ಶತಮಾನದ ಉತ್ತರಾರ್ಧದಲ್ಲಿ ಉತ್ತರ ಕರ್ನಾಟಕದ ಪುಲಿಗೆರೆ-೩೦೦ರ ಪ್ರದೇಶದ ಮಹಾಸಾಮಂತರಾಗಿ-ಮಹಾ ಮಂಡಳೇಶ್ವರರಾಗಿ ಆಳಿದರು. ಇವರ ಯದ್ಧೋತ್ಸಾಹ, ಧೈರ್ಯ, ದಾನಗುಣ, ಜಿನ ಭಕ್ತಿ ಎದ್ದು ಕಾಣುವಂತಹುದು. ರಾಜಕೀಯ ವರ್ಚಸ್ಸಿನ ಜೊತೆಗೆ ರಾಜನಿಷ್ಠೆಯ ಪಲ್ಲಟವನ್ನು ಕಾಲಾನುಕ್ರಮದಲ್ಲಿ ಗುರುತಿಸಬೇಕು. ಸುಮಾರು ಹತ್ತೊಂಬತ್ತು ಜನರ ವಂಶಾವಳಿಯಲ್ಲಿ ವಿನೋದಿ ಮಣಲರನಿಂದ ಹಿಡಿದು (೭೫೦) ಮುಮ್ಮಡಿ ಜಯಕೇಸಿನ್‌ಯವರೆಗೆ (೧೧೫೩)ನೊಳಂಬ, ತಲಕಾಡುಗಂಗ, ರಾಷ್ಟ್ರಕೂಟ, ಚಾಳುಕ್ಯರ ಆಶ್ರಯದಲ್ಲಿದ್ದರು, 'ಪಂಚನೇತ್ರಧ್ವಜ' ವಿರಾಜಮಾನ (ಕೇಸರಿ ಕೇತು, ಸಿಂಹ ಧ್ವಜ) ರಾದ ಈ ಮಣಲೆಯರು ಸಗರಕುಲ(ವಂಶ)ದವರೆಂದು ಆತಕೂರ ಶಾಸನ (ಸಗರವಂಶ ವಳಭೀಪುರವರೇಶ್ವರ)

ಸ್ಪಷ್ಟಪಡಿಸುತ್ತದೆ. ಈ ಶಾಸನವು ಮಣಲೆರನ ಸಾಹಸಗಾಥೆಯನ್ನು ಸಾರಿ ಹೇಳುತ್ತಿದೆ. ಇಲ್ಲಿ ಇತರ ಶಾಸನಗಳನ್ನಾಧರಿಸಿ ಆತನ ಯಶೋಗಾಥೆಯನ್ನು ಸಂಕಲಿಸಲಾಗಿದೆ. ಈತನಿಂದಾಗಿ ಇಡೀ ವಂಶಕ್ಕೆ ಮಣಲೆಯರು ಮಣಲವಂಶ, ಮಣಲೆಯರ ಮನೆತನ, ಸಗರಕುಲ/ವಂಶ ಎಂದು ಪರ್ಯಾಯ ನಾಮ ರೂಢಿಗೆ ಬಂತು. ಇದು ಮೂಲತಃ ಕನ್ನಡ (ದ್ರಾವಿಡ) ಮನೆತನವಾಗಿದ್ದು ಮಳಲು ಕಡಲಿಗೆ ಸಂಬಂಧಿಸಿರಬಹುದು.

ಸಗರ-ಮಣಲೆಯರ ಸಮಕಾಲೀನರಾಗಿ, ಸಮಾನ ಮೂಲದವರಾಗಿ ರಾಜಕೀಯ ಪ್ರಾಬಲ್ಯದಿಂದ ಮೇಲೆದ್ದ-ಹೈಹಯರು (ಹೇಹಕುಳ, ಹೇಹಯ, ಅಹಿಹಯ), ಕಳಚೂರ್ಯರು, ಚೈದ್ಯರು (ಚೇದಿ) ಸಮಾನ ಮಹತ್ವ ಪಡೆಯುತ್ತಾರೆಂಬುದನ್ನು ನಾವು ಪರಿಭಾವಿಸಬೇಕು. ಈ ಮನೆತನಗಳ ಮೂಲ ನೆಲೆಗಳನ್ನು, ಅನಂತರದ ಪ್ರಸ್ಥಾನಗಳನ್ನು ಶಾಸನಾಧಾರದಿಂದ ರೇಖಿಸಿದರೆ ಆಯಾ ನೆತನದ ಸಾಂಸ್ಕೃತಿಕ ಇತಿಹಾಸಗಾಥೆ ಗೋಚರಿಸುತ್ತದೆ. ಅಲ್ಲದೆ ಅವರು ಎಲ್ಲಿ ಕೂಡುತ್ತಾರೆ, ಎಲ್ಲಿ ಬಿಡುತ್ತಾರೆ, ಅವರ ಧರ್ಮ ಸಹಿಷ್ಣುತೆ, ಸಾಂಸ್ಕೃತಿಕ ಕೊಡುಗೆ-ನಿಚ್ಚಳವಾಗಿ ಗೊತ್ತಾಗುತ್ತದೆ. ಇವರು ಕೂಡ ಕರ್ನಾಟಕದ ದೊಡ್ಡ ಅರಸುಮನೆತನಗಳೊಟ್ಟಿಗೆ ವೈವಾಹಿಕಾದಿ ಸಂಬಂಧವನ್ನು ಇಟ್ಟುಕೊಂಡವರು.

ಸುಮಾರು ಇನ್ನೂರು ವರ್ಷಗಳ ಸುದೀರ್ಘ ಇತಿಹಾಸವುಳ್ಳ ಮೂಲ ಕನ್ನಡ ಮನೆತನದ ವರಾದ ಮಣಲೆಯರು ಯುದ್ಧವೀರರೂ, ಶೂರರೂ ಆಗಿದ್ದು ಮೊದಲು ಕಾವೇರಿ ತೀರದಲ್ಲೂ ಅನಂತರ ತುಂಗಭದ್ರಾ ಉತ್ತರಕ್ಕೂ ಪಸರಿಸಿ ಮೊದಲು ಗಂಗಸಾಮಂತರಾಗಿ, ನಂತರ ಚಾಳುಕ್ಯರಾಧೀನರಾಗಿದ್ದರಷ್ಟೇ. ಜೈನಧರ್ಮಿಯರಾಗಿ ಹಲವು ಬಸದಿಗಳನ್ನು ಕಟ್ಟಿಸಿದರು, ಗಂಗಬಸದಿಗಳ ಜೀರ್ಣೋದ್ಧಾರ ಮಾಡಿಸಿದ್ದರು. ಶ್ರೀಪುರದ ಲೋಕತಿಲಕ ಜಿನಾಲಯ, ಕನಕಗಿರಿ ತೀರ್ಥದ ಬಸದಿ ಕಟ್ಟಿಸಿದ್ದನ್ನು ಇಲ್ಲಿ ಸ್ಮರಿಸಬಹುದು. ಅವರ ಧಾರ್ಮಿಕ ಉದಾರತೆಯು ಅನುಕರಣೀಯ ಯೋಗ್ಯವಾಗಿದೆ. ಅವರು ಚತುಸ್ಸಮಯ ಸಮುದ್ಧರಣರಾಗಿದ್ದರು. ಹೀಗೆ ನಾಳ್ಗಾಮುಂಡತನದಿಂದ ಮಹಾಸಾಮಂತರಾಗಿ ಮಹಾಮಂಡಳೇಶ್ವರರಾಗಿ ಹಿರಿಮೆಗಳಿಸಿ ಬೆಳಗಿದ ಮಣಲೆರ-ಸಗರ ವಂಶವಲ್ಲರಿಯನ್ನು ಸ್ಥೂಲವಾಗಿ ಹಂಪನಾ ಚಿತ್ರಿಸಿದ್ದಾರೆ. ಹೀಗೆ ಮಾಡುವಾಗ ಪ್ರಧಾನವಾಗಿ ಶಾಸನಗಳನ್ನು ಅವಲಂಬಿಸಿದ್ದಾರೆ.

'ಶಾಸನಗಳಲ್ಲಿ ಎರಡು ವಂಶಗಳು' ಎಂಬ ಶಿರೋನಾಮೆ ನೋಡಿದ ಕೂಡಲೆ ಯಾವುವು ಈ ಎರಡು ವಂಶಗಳೆಂಬ ಕುತೂಹಲ ಕೆರಳುತ್ತದೆ. ಈ ಎರಡು ಸಂಪ್ರಬಂಧೋಪನ್ಯಾಸಗಳನ್ನು ಓದಿದ ಬಳಿಕ ವಾಜಿ ಮಣಲೆರ ಮನೆತನಗಳ ಬಗೆಗೆ ಸಾಕಷ್ಟು ವಿವರಗಳು ದೊರೆತು ಖುಶಿ ಆಗುತ್ತದೆ. ಈ ರೀತಿ ಖುಶಿಕೊಡುವಂತೆ ಶಾಸನೀಯವಾಗಿ ತಿಳಿದುಬರುವ ಪ್ರಾಚೀನ ಐತಿಹಾಸಿಕ ಸಂಗತಿಗಳನ್ನು ಸಂಕಲಿಸುವ, ಸಂಯೋಜಿಸುವ ಕಲೆ ಹಂಪನಾರವರಿಗೆ ಅದೆಷ್ಟು ಚೆನ್ನಾಗಿ ಕರಗತವಾಗಿದೆ ಎಂಬುದೂ ಗೊತ್ತಾಗಿ ಅವರ ಬಗೆಗಿನ ಗೌರವ ಹೆಚ್ಚುತ್ತದೆ. ಸಮಕಾಲೀನ ಸಾಂಸ್ಕೃತಿಕ ಸಂದರ್ಭದಲ್ಲಿ ಒಬ್ಬ ವಿದ್ವಾಂಸ ಸಾಹಿತ್ಯ, ಭಾಷೆ, ಶಾಸನ ಚರಿತ್ರೆ, ಸಂಸ್ಕೃತಿ, ಧರ್ಮ, ಕಲೆ, ಇತ್ಯಾದಿ ಹಲವು ಕ್ಷೇತ್ರಗಳ ಪರಿಚಯ. ಶಾಸ್ತ್ರಗಳ ಅರಿವಿನಿಂದ, ಅನಂತರ ಶಾಸ್ತ್ರೀಯವಾಗಿ ಸಂಶೋಧನೆಯನ್ನು ಎಷ್ಟು ಫಲಪ್ರದವಾಗಿ ಹಾಗೂ ಸಮಂಜಸವಾಗಿ,

ವಿಸ್ತೃತವಾಗಿ ಮಾಡಬಲ್ಲರೆಂಬುದನ್ನು ಹಂಪನಾಗರಾಜಯ್ಯನವರು ಈ ಪುಸ್ತಿಕೆಯಲ್ಲಿ ತೋರಿಸಿಕೊಟ್ಟಿದ್ದಾರೆ. ಅವರಿಗೆ ನಮ್ಮೆಲ್ಲರ ಅಭಿನಂದನೆಗಳು. ಈಚೆಗೆ ತುಸು ವಿರಳವಾಗುತ್ತಿರುವ ಗಂಭೀರ ಶಾಸನಾಧ್ಯಯನಾಸಕ್ತಿಯನ್ನು ಕೆರಳಿಸುವಲ್ಲಿ ಈ ಕೃತಿ ಯಶಸ್ವಿಯಾಗಿದೆಯೆಂದು ನನಗನಿಸುತ್ತದೆ; ಹಳೆಯ ಶಾಸನಗಳನ್ನು ಪುನಃ ಪುನಃ ವ್ಯಾಸಂಗ-ವಿಶ್ಲೇಷಣೆ ಮಾಡುತ್ತ, ಹೊಸ ಮಾಹಿತಿಗಳನ್ನು ಅವಕ್ಕೆ ಜೋಡಿಸುತ್ತ ಹೋದರೆ ಹಲವಾರು ಹೊಚ್ಚ ಹೊಸ ಸಂಗತಿಗಳನ್ನು ಹೇಗೆ ಬೆಳಕಿಗೆ ತರಬಹುದು, ಮಾತ್ರವಲ್ಲ ನವೀನರೀತಿಯಲ್ಲಿ ಅವನ್ನು ಅರ್ಥೈಸಬಹುದು - ಎಂಬುದನ್ನು ಹಂಪನಾರವರ 'ಶಾಸನಗಳಲ್ಲಿ ಎರಡು ವಂಶಗಳು'* ಕೃತಿ ತೋರಿಸಿಕೊಡುವಲ್ಲಿ ಸಾಫಲ್ಯ ಪಡೆದಿದೆ.

---

* ಮುಂಬಯಿ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗದ ೧೯೯೫ರ ಜನವರಿಯಲ್ಲಿ ಉಪನ್ಯಾಸ ನೀಡುತ್ತಿದ್ದ ಸಂದರ್ಭದಲ್ಲೇ ಇದನ್ನು ಪ್ರಕಟಿಸಿದೆಯೆಂಬುದೂ ಒಂದು ವೈಶಿಷ್ಟ್ಯ.

ಧಾರವಾಡ ಜಿಲ್ಲೆಯ ರೋಣದಲ್ಲಿ ನಾನು ಪತ್ತೆ ಮಾಡಿದ, ವೀರಗಲ್ಲು ಶಾಸನಕುರಿತು ಹಾಗೂ ಅಲ್ಲಿದ್ದ ಒಂದು ವೀರಗಲ್ಲು ಶಾಸನದ ತುಂಡು ಧಾರವಾಡದಲ್ಲಿ ತಂದಿಟ್ಟ ಇನ್ನೊಂದಕ್ಕೆ ಎಷ್ಟು ಸಮಂಜಸವಾಗಿ ಹೊಂದಿಕೊಳ್ಳುತ್ತದೆ ಎಂಬುದನ್ನು ಧಾರವಾಡ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ (೧೯೯೩) ಓದಿದ ಪ್ರಬಂಧದಲ್ಲಿ ಮಂಡಿಸಿರುತ್ತೇನೆ. ಇದರ ಸಾರಾಂಶವನ್ನು ರೋಣಪ್ರಭೆ ಎಂಬ ಸ್ಮರಣಸಂಚಿಕೆಯಲ್ಲಿ ನೋಡಬಹುದಾಗಿದೆ.

# ವಿಷ್ಣುವರ್ಧನ-ವಿಜಯಾದಿತ್ಯ-ಕೀರ್ತಿವರ್ಮ

ಡಾ. ಚೆನ್ನಕ್ಕ ಪಾವಟೆ

ಹಂಪ ನಾಗರಾಜಯ್ಯನವರು ಉತ್ತಮ ಸಾಹಿತಿಗಳು ಮೌಲಿಕವಾದ ಕೃತಿಗಳನ್ನು ರಚಿಸಿದ ಸಂಶೋಧಕರು. ಜೀವನದುದ್ದಕ್ಕೂ ಅಧ್ಯಯನ ಅಧ್ಯಾಪನ ಜೊತೆ ಹೊಸ ಹೊಸ ಸಂಶೋಧನೆಯ ಆಯಾಮಗಳನ್ನು ಕೈಕೊಂಡವರು. ಭಾಷಾವಿಜ್ಞಾನ, ಗ್ರಂಥ ಸಂಪಾದನೆ ಜೀವನಚರಿತ್ರೆ, ಪ್ರಬಂಧ, ವಿಮರ್ಶೆ, ಜಾನಪದ, ಪ್ರಚಾರೋಪನ್ಯಾಸ, ಅನುವಾದ, ಶಿಶುಸಾಹಿತ್ಯ ಸಾರ್ವಜನಿಕ ಸೇವಾಸಕ್ತಿ ಇವರ ಆಸಕ್ತಿಯ ಕ್ಷೇತ್ರಗಳು. ಇತ್ತೀಚೆಗೆ ೧೯೯೬ರಲ್ಲಿ ಪ್ರಕಟಿತವಾದ ವಿಷ್ಣುವರ್ಧನ- ವಿಜಯಾದಿತ್ಯ-ಕೀರ್ತಿವರ್ಮ ಒಂದು ಮಹತ್ತರ ಸಂಶೋಧನಾತ್ಮಕ ಕೃತಿ. ಶಾಸನಕ್ಷೇತ್ರದಲ್ಲಿ ಪ್ರಸ್ತುತ ಕೃತಿಯ ವ್ಯಕ್ತಿ ಮಿಂಚಿ ಮರೆಯಾದ ಚಾಲುಕ್ಯ ಮಿಣುಕುದೀಪ. ಆತನ ಅಸ್ತಿತ್ವವೇ ಶಾಸನಲೋಕದಲ್ಲಿ ಸಂದಿಗ್ಧವಾಗುತ್ತ ಹೊರಟಾಗ ಅವನನ್ನು ತಮ್ಮ ಸಂಶೋಧನೆಯ ರಜ್ಜುವಿನಿಂದ ಬಂಧಿಸಿ ಬಂಗಾರದ ಸಂಕೋಲೆಯಲ್ಲಿ ಬಂಧಿಸಿದವರು ಹಂಪನಾ. ಎತ್ತಿಕೊಂಡಿರುವ ವಿದ್ವತ್ಪೂರ್ಣ ವಿಷಯದ ಬಗೆಗೆ ಸಮಗ್ರ ಮಾಹಿತಿಯನ್ನು ಒದಗಿಸಿಕೊಡುವ ಮುಖ್ಯ ಕೃತಿ ಇದು. ಯಾರೂ ಅಷ್ಟಾಗಿ ಗಮನಿಸದೇ ಇರುವ ವಿಷಯವನ್ನು ಆಯ್ದುಕೊಂಡು ಅದನ್ನು ಕುರಿತಂತೆ ಆಳವಾದ ಆಕರಗಳನ್ನು ಗಮನಿಸಿ ವಸ್ತುನಿಷ್ಠವಾಗಿ ಚರ್ಚಿಸಿದವರು ಇವರು. ಬೆಂಗಳೂರು ವಿಶ್ವವಿದ್ಯಾಲಯ ಇದನ್ನು ಪ್ರಕಟಿಸಿ ಸಂಶೋಧಕರಿಗೆ ದೊಡ್ಡ ಅನುಕೂಲ ಕಲ್ಪಿಸಿದೆ. ಇಂಥ ಮಹತ್ವದ ಕೃತಿ ರಚಿಸಿದ ಹಂಪನಾ ಅವರಿಗೆ ನಮ್ಮೆಲ್ಲರ ಹೃತ್ಪೂರ್ವಕ ಅಭಿನಂದನೆಗಳು.

**ಪ್ರಥಮ ಪ್ರಸ್ತಾಪ :**

ಕರ್ನಾಟಕ ಕವಿಚರಿತೆಯ ಪ್ರಥಮ ಸಂಪುಟದಲ್ಲಿ ಮೊಟ್ಟ ಮೊದಲನೆಯದಾಗಿ ಆರ್. ನರಸಿಂಹಾಚಾರ್ ಅವರು ಕೀರ್ತಿವರ್ಮನನ್ನು ಕುರಿತು ಅಧ್ಯಯನ ಮಾಡಿದವರಲ್ಲಿ ಮೊದಲಿಗರು. ಅವರ ತರುವಾಯ ಪ್ರಸ್ತುತ ವ್ಯಕ್ತಿಯ ಬಗೆಗೆ ಚಿಂತನ ಕೈಕೊಂಡವರಲ್ಲಿ ಡಾ. ಅ. ವೆಂಕಟಸುಬ್ಬಯ್ಯ, ಎನ್. ಲಕ್ಷ್ಮೀನಾರಾಯಣರಾವ್, ಎಂ.ಗೋವಿಂದ ಪೈಗಳು, ಇತಿಹಾಸ ತಜ್ಞ ಡಾ.ಜಿ.ಎಸ್. ಗಾಯಿ, ಡಾ.ಬಾ.ರಾ. ಗೋಪಾಲ, ಡಿ.ಸಿ. ಸರ್ಕಾರ ಅವರು ಪ್ರಮುಖರು.

ಇತ್ತೀಚೆಗೆ ವಿಷ್ಣುವರ್ಧನ-ವಿಜಯಾದಿತ್ಯ-ಕೀರ್ತಿವರ್ಮನನ್ನು ಕುರಿತು ಸಂಶೋಧನಾತ್ಮಕ

ಅಧ್ಯಯನ ನಡೆಸಿ ಮಹತ್ವದ ಕೃತಿ ರಚಿಸುವವರ ಮೂಲಕ ಪ್ರಸ್ತುತ ಸಮಸ್ಯೆಯನ್ನು ತಿಳಿಗೊಳಿಸುವ ಪ್ರಯತ್ನ ಲೇಖಕರದಾಗಿದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲ ಕ್ರಿ.ಶ. ೧೦೪೨ರಿಂದ ಕ್ರಿ.ಶ. ೧೦೬೮ರ ವರೆಗೆ ಆಳಿದ ದೊರೆ. ಅವನ ಶೌರ್ಯ ಪರಾಕ್ರಮ ಸಾಹಸಗಳು ಚಾಲುಕ್ಯ ಸಾಮ್ರಾಜ್ಯಕ್ಕೆ ಭದ್ರ ಬುನಾದಿ ಹಾಕಿದರೆ ರಾಜ್ಯದ ಘನತೆ ಗೌರವ ಕಾಯುವಲ್ಲಿ ನಾಲ್ವರು ಪುತ್ರರು ಸಮಭಾಗಿಗಳು. ಕ್ರಿ.ಶ. ೧೦೭೬ ರಿಂದ ಕ್ರಿ.ಶ. ೧೧೨೬ರ ವರೆಗೆ ಆಳಿದ ಆರನೆಯ ವಿಕ್ರಮಾದಿತ್ಯ, ಜಯಸಿಂಹ-IV, ವಿಷ್ಣುವರ್ಧನ ವಿಜಯಾದಿತ್ಯ ಹಾಗೂ ಚಕ್ರವರ್ತಿ ಸೋಮೇಶ್ವರರು ಸಮರ್ಥರು. ಅವರಲ್ಲಿ ಕಿರಿಯನಾದ ವಿಷ್ಣುವರ್ಧನ ವಿಜಯಾದಿತ್ಯ ಕೀರ್ತಿವರ್ಮನನ್ನು ಕುರಿತುದು ಪ್ರಸ್ತುತ ಕೃತಿ. ಆತನು ಕ್ರಿ.ಶ. ೧೧೦೦ರಲ್ಲಿ ಗೋವೈದ್ಯವೆಂಬ ಕೃತಿರಚಿಸಿದ್ದನ್ನು ಕರ್ನಾಟಕ ಕವಿಚರಿತೆ ವಿದಿತಪಡಿಸಿದೆ.

**ಸಂಶೋಧಕರ ವಿಭಿನ್ನ ಪ್ರಸ್ತಾಪ :**

ಕವಿಚರಿತೆಕಾರರ ಹೇಳಿಕೆಯನ್ನು ಒಪ್ಪದ ಡಾ. ಅ. ವೆಂಕಟಸುಬ್ಬಯ್ಯನವರು ಜಯಸಿಂಹ ವಿಷ್ಣುವರ್ಧನ ವಿಜಯಾದಿತ್ಯರಲ್ಲಿ ಒಬ್ಬನಾಗಿರದ ಪಕ್ಷದಲ್ಲಿ ಕೀರ್ತಿವರ್ಮನು ಇನ್ನೊಬ್ಬ ವಿಕ್ರಮಾದಿತ್ಯನ ಮೂರನೆಯ ತಮ್ಮನಾಗಿರಬಹುದೆಂದಿರುವರು.

ಚರಿತ್ರಕಾರ ಎನ್.ಲಕ್ಷ್ಮೀನಾರಾಯಣರಾವ್ ಅವರು ಕವಿ ಕೀರ್ತಿವರ್ಮನನ್ನು ಕುರಿತು ಆಂಧ್ರಕ್ಕೆ ಸಂಬಂಧಿಸಿದ ಗುಂಟೂರು ಜಿಲ್ಲೆಯ ತೆನಾಲಿ ತಾಲೂಕಿನ ಕೊಲ್ಲೂರಿನ ಅನಂತಭೋಗೇಶ್ವರ ಸ್ವಾಮಿಯ ದೇವಸ್ಥಾನದ ಕಂಬದ ಮೇಲಿರುವ ಶಾಸನವನ್ನಾಧರಿಸಿ ವಿಷ್ಣುವರ್ಧನ ವಿಜಯಾದಿತ್ಯನ ಬಗೆಗೆ ಸ್ಪಷ್ಟವಾದ ಉಲ್ಲೇಖ ವ್ಯಕ್ತಪಡಿಸಿರುವರು. ಇವರ ಹೇಳಿಕೆಯಿಂದ ಕೀರ್ತಿವರ್ಮನು ಚಾಲುಕ್ಯ ಚಕ್ರವರ್ತಿ ಸೋಮೇಶ್ವರನ ಮಗನೆಂದೂ, ಜಯಸಿಂಹ, ವಿಷ್ಣುವರ್ಧನ ವಿಜಯಾದಿತ್ಯ ಎಂಬ ಹೆಸರಿನ ವಿಕ್ರಮಾದಿತ್ಯನ ತಮ್ಮಂದಿರಲ್ಲಿ ಒಬ್ಬನಾಗಿರಬೇಕೆಂದೂ, ಆರ್. ನರಸಿಂಹಾಚಾರ್ಯರು ಹೇಳಿದ ಆಧಾರದ ಮೇಲೆ ತಮ್ಮ ನಿಲುವನ್ನು ಸೂಚಿಸಿರುವರು.

ಎಂ. ಗೋವಿಂದಪೈಗಳವರು ಈ ವಿಷಯ ಕುರಿತು ಬೇರೆಯೇ ಅಭಿಪ್ರಾಯ ಸೂಚಿಸಿದ್ದಾರೆ. ಕನ್ನಡ ಕವಿ ಬ್ರಹ್ಮಶಿವನ ಕಾಲಕ್ಕೆ ಸಮನಾದ ಕಾಲದಲ್ಲಿ ಕೀರ್ತಿವರ್ಮ ಇರಬೇಕೆಂಬ ಪೂರ್ವಗ್ರಹಿಕೆಯಿಂದ ಗೋವಿಂದ ಪೈಯವರು ಹೊರಟಿದ್ದರಿಂದ ಇವರ ತೀರ್ಮಾನಗಳು ತಪ್ಪು ಗ್ರಹಿಕೆಯಿಂದ ಕೂಡಿವೆ ಎಂಬುದು ಹಂಪನಾ ಅವರ ವಿಚಾರ.

ಈ ವಾದ ವಿವಾದಗಳನ್ನು ಪರಿಶೋಧಿಸಿದ ಇತಿಹಾಸಕಾರ ಡಾ.ಬಾ.ರಾ. ಗೋಪಾಲ ಅವರು ನೀಡಿದ ಕೆಲ ವಿವರಗಳು ಹೀಗಿವೆ.

೧ ವಿಷ್ಣುವರ್ಧನ ವಿಜಯಾದಿತ್ಯನು ಕಲ್ಯಾಣ ಚಾಲುಕ್ಯ ಸೋಮೇಶ್ವರನ ಮಗನಾಗಿರದೆ, ವೆಂಗಿಯನ್ನು ಆಳಿದ ಪೂರ್ವ ಚಾಲುಕ್ಯರ ವಂಶಕ್ಕೆ ಸೇರಿದವನಾಗಿರಬೇಕು. ಸರ್ವಜ್ಞ ಬಿರುದಾಂಕಿತ ಕದಂಬಕುಲ ಮಾಂಡಲಿಕ ಸೋಮೇಶ್ವರರಾಜನ ಆಧೀನನಾಗಿ

ಆಳುತ್ತಿದ್ದನು. ಇವನು ಜಿನನಾಪ್ತನಾಗಿದ್ದರಿಂದ ಪ್ರಾಯಶಃ ಇವನೇ ಕೀರ್ತಿವರ್ಮನಾಗಿರಬಹುದು.

೨ ವಿಷ್ಣುವರ್ಧನ ವಿಜಯಾದಿತ್ಯನಿಗೆ ಕೀರ್ತಿವರ್ಮ ಎಂಬ ಬೇರೊಂದು ಹೆಸರು ಇದ್ದಿರಬಹುದಾದರೂ ಅವನು ಸೋಮೇಶ್ವರನ ಮಗನಂತೂ ಅಲ್ಲ.

೩. ಸೋಮೇಶ್ವರನ ಕೈಕೆಳಗೆ ಅಧಿಕಾರಿಯಾಗಿದ್ದ ಕೀರ್ತಿವರ್ಮನೆಂಬ ಕದಂಬ ಮಾಂಡಲಿಕ ಜಿನನಾಪ್ತನನ್ನು ಆಧರಿಸಿ ಸೊರಬ ತಾಲೂಕಿನ ಕುಪ್ಪಟೂರು ಪಾರ್ಶ್ವನಾಥನಿಗೆ ಈ ಕೀರ್ತಿವರ್ಮನ ಪತ್ನಿಯಾದ ಮಾಳಲದೇವಿ ಕುಪ್ಪಟೂರಿನಲ್ಲಿ ಚೈತ್ಯಾಲಯವೊಂದನ್ನು, ಮಕರ ತೋರಣ ಮಾನಗಂಬಗಳನ್ನು ಪ್ರತಿಷ್ಠಿಸಿಕೊಟ್ಟಳೆಂತಲೂ ಅದಕ್ಕೆ ಬ್ರಹ್ಮಜಿನಾಲಯ ವೆಂದು ನಾಮಕರಣ ಮಾಡಿದರೆಂದೂ ಆ ಗ್ರಾಮದ ಬಳಿಯ ಜೈನ ಬಸದಿ ಆವರಣದ ಶಾಸನ ತಿಳಿಸಿದೆ.

ಚರಿತ್ರಕಾರ ಡಾ.ಜಿ.ಎಸ್. ಗಾಯಿಯವರು ತಮ್ಮ ಎರಡು ಲೇಖನಗಳಲ್ಲಿ ಈ ವಿಚಾರದ ಮರುಪರಿಶೀಲನೆ ಕೈಕೊಂಡಿರುವರು. ಡಾ.ಎನ್. ವೆಂಕಟರಮಣಯ್ಯ ಎತ್ತಿದ ಆರು ಅನುಮಾನಗಳಿಗೆ ಸಮಂಜಸವಾದ ಸಮಾಧಾನಗಳನ್ನಿತ್ತಿರುವರು. ಇವರ ವಾದವನ್ನು ಡಾ.ಡಿ.ಸಿ. ಸರ್ಕಾರ ಅನುಮೋದಿಸಿರುವರು. ಸೋಮೇಶ್ವರರಾಜನ ಮಗನಾದ ಈತನೇ ಗೋವೈದ್ಯ ಕೃತಿಯ ಕರ್ತೃ ಎಂದೂ ಪ್ರತಿಪಾದಿಸಿರುವರು.

**ಹಂಪನಾ ಮರು ಪ್ರಸ್ತಾಪ :**

ಇವರೆಲ್ಲ ನೀಡಿದ ಅಂಶಗಳಲ್ಲಿ ಬರುವ ಕೆಲ ವಿಚಾರಗಳನ್ನು ಮರು ಪರಿಶೀಲನೆ ಕೈಕೊಂಡು ಈ ಸೂಪ್ರಬಂಧದ ಪ್ರಧಾನ ಆಶಯ, ಲಭ್ಯ ಚಾರಿತ್ರಿಕ ಸಾಮಗ್ರಿಯನ್ನು, ನೂತನ ಆಧಾರ, ತೌಲನಿಕ ಚರ್ಚೆಯ ಮೂಲಕ ಖಚಿತ ತೀರ್ಮಾನ ಕೈಕೊಳ್ಳಲೂ ನೆರವಾಗುವ ನೆಲೆಯನ್ನು ಹಂಪನಾ ಕಂಡುಹಿಡಿದಿರುವರು.

ಕೀರ್ತಿವರ್ಮನು ಕಲ್ಯಾಣ ಚಾಲುಕ್ಯ ಸೋಮೇಶ್ವರ-Iನ ಮಗನೆಂಬುದು ಗೋವೈದ್ಯ ಕೃತಿಯಲ್ಲಿ ಸ್ಪಷ್ಟವಾಗಿದೆ. ತ್ರೈಲೋಕ್ಯಮಲ್ಲ ಸೋಮೇಶ್ವರನ ಶಾಸನಗಳಲ್ಲಿ ಕೀರ್ತಿವರ್ಮನ ಹೆಸರು ಒಂದೇ ಶಾಸನದಲ್ಲಿ ಬಂದಿದೆಯಾದರೂ ವಿಷ್ಣುವರ್ಧನ ವಿಜಯಾದಿತ್ಯ-ಕೀರ್ತಿವರ್ಮರ ಅಭಿನ್ನತೆಗಾಗಿ ಹಂಪನಾ ಸುಮಾರು ೧೩ ಶಾಸನಗಳನ್ನು ಸಂಗ್ರಹಿಸಿ ಅಧ್ಯಯನಸಿದುದು ಶುದ್ಧ ಸಂಶೋಧಕನ ಮನೋಭಾವನೆಗೆ ಪೂರಕವೆನಿಸಿದೆ.

ಇವುಗಳಲ್ಲಿ ಮೊದಲನೆಯದು ಕ್ರಿಶ.೧೦೫೭ರ ಮಲ್ಲೇಶ್ವರಂ ಶಾಸನ. ಪ್ರಸ್ತುತ ಶಾಸನದಲ್ಲಿ ಕುಮಾರ ವಿಜಯಾದಿತ್ಯದೇವನೂ ಅವನ ತಾಯಿ ಮೈಳಲ ದೇವಿಯರು ಒಟ್ಟಾಗಿ ಆಂಧ್ರಪ್ರದೇಶದ ಮೆಹಬೂಬನಗರ ಕೊಲ್ಲಾಪುರ ತಾಲೂಕಿನ ಕೃಷ್ಣಾನದಿ ತೀರದ ಅಗಸ್ತ್ಯೇಶ್ವರ ದೇವಾಲಯಕ್ಕೆ ಆಗಮಿಸಿರುವದು ಮಹತ್ವಪೂರ್ಣ ದಾಖಲೆ. ಈ ಶಾಸನದಲ್ಲಿ ವಿಷ್ಣುವರ್ಧನ ವಿಜಯಾದಿತ್ಯನನ್ನು ವೆಂಗೀಮಂಡಳೇಶ್ವರನೆಂದು ಕರೆಯದುದು, 'ನೊಳಂಬವಾಡಿ ಮೂವತ್ತಿಛಾಸಿರಮುಮನಾಳ್ದು ರಾಜ್ಯಂಗೆಯ್ಯುವ' ಪ್ರಸ್ತಾಪ ಬಿಟ್ಟಿರುವದನ್ನು ಗಮನಿಸಿರುವರು.

ಈ ಸಂದರ್ಭ ವಿಷ್ಣುವರ್ಧನ ವಿಜಯಾದಿತ್ಯನ ಹಿರಿಯ ಸೋದರ ಭುವನೈಕಮಲ್ಲ ಇಮ್ಮಡಿ ಸೋಮೇಶ್ವರ ವೆಂಗೀಪುರವರೇಶ್ವರನಾಗಿದ್ದನೆಂಬುದನ್ನು ಶಾಸನ ಆಧರಿಸಿ ತಿಳಿಸಿರುವರು. ನೊಳಂಬವಾಡಿ ೩೨ ಸಾವಿರವನ್ನು ಕ್ರಿ.ಶ. ೧೦೫೧ರ ಅವಧಿಯಲ್ಲಿ ನೊಳಂಬರಾಜನೇ ಆಳುತ್ತಿದ್ದುದು ಕ್ರಿ.ಶ. ೧೦೪೪ರಲ್ಲಿ ನನ್ನಿ ನೊಳಂಬಾಧಿರಾಜರ್ಗೆ ಪಟ್ಟಬನ್ಧವಾಗೆ ತ್ರೈಲೋಕ್ಯಮಲ್ಲ ನನ್ನಿನೊಳಂಬಪಲ್ಲವ ಪೆರ್ಮಾನಡಿ ಕ್ರಿ.ಶ. ೧೦೪೪ ರಿಂದ ಕ್ರಿ.ಶ.೧೦೫೪ರ ವರೆಗೆ ಚಾಳುಕ್ಯರ ಸಾಮಂತನಾಗಿ ನೊಳಂಬವಾಡಿ ಆಳುತ್ತಿದ್ದುದ್ದನ್ನು ಸೂಚಿಸಿರುವರು.

ವಿಷ್ಣುವರ್ಧನ ವಿಜಯಾದಿತ್ಯವನ್ನು ಸ್ಪಷ್ಟವಾಗಿ ಪರಿಚಯಿಸುವಲ್ಲಿ ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ತಾಲೂಕಿನ ಮದಕೆರೆ ಗ್ರಾಮದ ಶಾಸನವನ್ನು ಮೊದಲ ಬಾರಿಗೆ ಪ್ರಸ್ತಾಪಿಸಿ ಹಿಡಿದ ವಿಷಯಕ್ಕೆ ಹೆಚ್ಚಿನ ಮಹತ್ವ ಒದಗಿಸಿರುವರು. ಪ್ರಸ್ತುತ ಶಾಸನ ಕಾಲ ಕ್ರಿ.ಶ. ೧೦೬೩.

ವಿಷ್ಣುವರ್ಧನ ವಿಜಯಾದಿತ್ಯ ರಾಜ್ಯಂಗೆಯ್ಯುತ್ತ ದಕ್ಷಿಣ ದಿಶಾವರಕ್ಕೆ ದಿಗ್ವಿಜಯಗೆಯ್ಯಂಮು ಮೆದಕೆರೆಯೊಳಗೆ ಬಿಟ್ಟ ಬೀಡಿನೊಳ್ 'ಮಾವನ ಗಂಧವಾರಣ' ನೆನಿಸಿದ ಮಾಚ ಗಾವುಂಡ ತನ್ನೂರ ಮಲ್ಲಿಕಾರ್ಜುನದೇವರಿಗೆ ದತ್ತಿ ಕೇಳಿ ಪಡೆದಿರುವದು ಶಾಸನದ ವಿಷಯ.

ಮಲ್ಲೇಶ್ವರ ಶಾಸನ (ಕ್ರಿ.ಶ. ೧೦೫೧)ದಲ್ಲಿ ಕುಮಾರ ವಿಜಾಯದಿತ್ಯ ಎಂದಷ್ಟೇ ಬಳಕೆಯಾದರೆ, ಮೆದಕೆರೆ ಶಾಸನದಲ್ಲಿ ವಿಷ್ಣುವರ್ಧನ ವಿಜಯಾದಿತ್ಯನೆಂಬ ಪೂರ್ಣ ಹೆಸರು ಉಲ್ಲೇಖಿತವಾಗಿದೆ. ಅವನು ದಿಗ್ವಿಜಯಾರ್ಥ ಪ್ರಯಾಣ ಕಾಲದಲ್ಲಿ ದಕ್ಷಿಣದತ್ತ ವಿಜಯಯಾತ್ರೆ ಕೈಕೊಂಡಿರಲು ಮೆದಕೆರೆ ಎಂಬ ಸ್ಥಳದಲ್ಲಿ ಮಾಚಗಾವುಂಡನ ಮಲ್ಲಿಕಾರ್ಜುನಸ್ವಾಮಿಯ ಅಂಗಭೋಗಕ್ಕೆ ದಾನ ಪಡೆದುದು. ಪ್ರಸ್ತುತ ಶಾಸನದ ಆರಂಭಭಾಗ ಸವೆದುಹೋಗಿದ್ದರೂ ಬೇರೆ ಶಾಸನದ ತೌಲನಿಕ ಅಧ್ಯಯನ, ಪೂರಕ ಸಾಮಗ್ರಿಗಳ ಸಹಾಯದಿಂದ ವಿಷ್ಣುವರ್ಧನ-ವಿಜಯಾದಿತ್ಯನು ನೊಳಂಬವಾಡಿ ೩೨ ಸಾವಿರ ಆಳುತ್ತಿದ್ದುದು ವೆಂಗಿ ಮಂಡಳೇಶ್ವರನಾಗಿದ್ದುದನ್ನು ಸ್ಪಷ್ಟಪಡಿಸಿರುವರು.

ದ್ವಿತೀಯ ಘಟ್ಟದ ಪರಿಶೀಲನಾರ್ಹ ಶಾಸನಗಳಲ್ಲಿ ಎರಡನೆಯದು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗದ ತವಕೇಶ್ವರ ಸ್ವಾಮಿ ಗುಡಿಯ ಬಳಿ ನಿಲ್ಲಿಸಿದ ಶಾಸನ. ಪ್ರಸ್ತುತ ಸಪ್ರಬಂಧದ ವಿಷಯಕ್ಕೆ ಸಂಬಂಧಪಡುವ ಭಾಗದ ಸಾರಾಂಶ ಕ್ರಿ.ಶ. ೧೦೬೪ರ ಶಾಸನ ಸೋಮೇಶ್ವರ ರಾಜನ 'ತತ್ಸೂನು ವೆಂಗಿ ಮಂಡಳೇಶ್ವರನಯ್ಯನದೇವಂ ಶ್ರೀ ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯದೇವನ್ನೊಳಂಬವಾಡಿ ಮೂವತ್ತೆರ್ಚ್ಛಾಸಿರಮಂ' ಆಳುತ್ತಿರುವಾಗ ದಂಡನಾಯಕ ಮೂಕರಾಜನ ಬಿನ್ನಪದಂತೆ ದಾನನಿಧಿ ಬಿಜ್ಜಲದೇವನು ಗಳಗೇಶ್ವರದೇವರಿಗೆ ದಾನವಿತ್ತಿರುವನು.

ಪರಿಶೀಲನೆಗೆ ಅರ್ಹವಾದ ಮುಂದಿನ ಶಾಸನ ಜಟಂಗರಾಮೇಶ್ವರದ್ದು. ಇದರಲ್ಲಿ ವಿಷ್ಣುವರ್ಧನ ವಿಜಯಾದಿತ್ಯನು ನೊಳಂಬವಾಡಿ ಆಳುತ್ತಿದ್ದ ಕಾಲದಲ್ಲಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕು ತುಂಗಭದ್ರಾ ತೊರೆಯ ತೀರದ ಕಂಪಲಿಯಲ್ಲಿ ಬೀಡುಬಿಟ್ಟಲ್ಲಿ ನಡೆದ

ದಾಖಲೆಯ ಪ್ರಕಾರ ಕಣಿಯಕಲ್ ೩೦೦ಕ್ಕೆ ಸೇರಿದ ಡಾಕಿವಡುಳುಂಕೆ ೭೦ಕ್ಕೆ ಒಳಪಟ್ಟ 'ಕಿರಿಯಡಾಕಿವಡುವೆಂಗಿ' ಎಂಬ ಗ್ರಾಮವನ್ನು ೩.೫.೧೦೬೪ರಂದು ಬಳ್ಳೊಟಿ ತೀರ್ಥದ ರಾಮೇಶ್ವರ ಗುಡಿಗೆ ದಾನವಿತ್ತುದು.

ಚನ್ನಗಿರಿ ತಾಲೂಕು ಮೆದಕೆರೆ ಶಾಸನದ ಕಾಲ ಕ್ರಿ.ಶ. ೧೦೬೩. ಜಟಿಂಗ ರಾಮೇಶ್ವರ ಶಾಸನದ ಕಾಲ ಕ್ರಿ. ಶ. ೧೦೬೪. ನಾಡಿನ ತೆಂಕಣದತ್ತ ದಿಗ್ವಿಜಯಕ್ಕಾಗಿ ಸೇನೆಯೊಂದಿಗೆ ಬಂದಿದ್ದ ವಿಷ್ಣುವರ್ಧನ ವಿಜಯಾದಿತ್ಯನು ಈ ತೆಂಕಣ ಭಾಗಗಳನ್ನು ಪರಿಶೀಲಿಸಿ ಮತ್ತೆ ಸಿದ್ಧಾಪುರ ಮಾರ್ಗವಾಗಿ ತನ್ನ ನೊಳಂಬವಾಡಿ ಅಧಿಷ್ಠಾನ ಕಂಪಲಿ ತಲುಪಿ ಎರಡು ಮೂರು ವರ್ಷ ತಂಗಿದ್ದು ಅಲ್ಲಿಂದ ಕಲ್ಯಾಣ ಪಟ್ಟಣದತ್ತ ಮುನ್ನಡೆದಿರುವನು. ನಡೆವ ದಾರಿಯ ಬೀಡುಬಿಟ್ಟಲ್ಲಿ ಜನಪರ ಕಾರ್ಯಗಳನ್ನು ಕೈಗೊಳ್ಳುತ್ತ ಚಕ್ರವರ್ತಿಯ ಮಗನೆಂಬ ಕೀರ್ತಿಗೆ ಭಾಜನನಾಗಿರುವನು.

ಬಳ್ಳಾರಿ ಜಿಲ್ಲೆಯ ಮೋರಿಗೆರೆ ಶಾಸನ ದಕ್ಷಿಣ ದಿಶಾವರಕ್ಕೆ ಬಿಜಯಂಗೆಯ್ಯುತ್ತ ಮೋರಿಂಗೆರೆಯ ದೇವಾಲಯಕ್ಕೆ ವಿಷ್ಣುವರ್ಧನ ವಿಜಯಾದಿತ್ಯನು ಪಾರಮೇಶ್ವರ ದತ್ತಿ ಬಿಟ್ಟುದು. ಅರಸರ್ಗ್ಗೆ ಬಿನ್ನಪಂಗೆಯ್ದ ತಂತ್ರಿಪಾಳ ಮೈಲಯ್ಯನೂ ದತ್ತಿ ಬಿಟ್ಟಿರುವನು. ಪ್ರಸ್ತುತ ಶಾಸನ ನೇರವಾಗಿ ವಿಷ್ಣುವರ್ಧನ ವಿಜಯಾದಿತ್ಯನ ಸ್ತುತಿ ಪಾಠದಿಂದ ಆರಂಭವಾಗಿದ್ದು, ಅದರಲ್ಲಿ, 'ವೇಂಗಿ ಮಣ್ಡಳೇಶ್ವರನಯ್ಯನದಣ್ಡಂ ಶ್ರೀ ವಿಷ್ಣುವರ್ಧನ ಮಹಾರಾಜಾಧಿರಾಜ ವಿಜಯಾದಿತ್ಯದೇವರ್ ಆಳುತ್ತಿರೆ' ಎಂದು ನಮೂದಿಸಿದೆ. ಜಟಿಂಗ ರಾಮೇಶ್ವರ ಮತ್ತು ಗುಡಿಹಳ್ಳಿ ಶಾಸನಗಳಲ್ಲಿ 'ಮಹಾರಾಜಂ' ಎಂಬ ಬಿರುದು ಇದೆ. ಇಲ್ಲಿಯ ಒಂದು ವಿಶೇಷತೆ ಎಂದರೆ ನೊಳಂಬವಾಡಿ ಮೂವತ್ತಿರ್ಚ್ಛಾಸಿರವನ್ನು ವಿಷ್ಣುವರ್ಧನ ವಿಜಯಾದಿತ್ಯ ಆಚಳವೃತ್ತಿಯಿಂದ ಆಳುತ್ತಿದ್ದುದು ಮಹತ್ವದ್ದು.

**ನಾಲ್ವರು ಮಕ್ಕಳ ಪ್ರಸ್ತಾಪ :**

ತ್ರೈಲೋಕ್ಯ ಸೋಮೇಶ್ವರನ ನಾಲ್ವರು ಮಕ್ಕಳು ಇದೇ ಅವಧಿಯಲ್ಲಿ ವಿಭಿನ್ನ ವೃತ್ತಿಗಳಿಂದ ಚಾಲುಕ್ಯ ಸಾಮ್ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಆಳುತ್ತಿದ್ದರು.

ಹಿರಿಯ ಮಗ ಇಮ್ಮಡಿ ಸೋಮೇಶ್ವರ ಬೆಳ್ವೊಲ ಪುಲಿಗೆರೆಗಳನ್ನು ಬೀಳಾನುವೃತ್ತಿಯಿಂದ ಆಳುತ್ತಿದ್ದ. ಎರಡನೆಯ ಮಗ ವಿಕ್ರಮಾದಿತ್ಯ ಕುಮಾರವೃತ್ತಿಯಿಂದ ಗಂಗವಾಡಿ ತೊಂಬತ್ತಾರು ಸಾವಿರ, ಬನವಾಸಿಯ ಆಳ್ವಿಕೆ ಕೈಕೊಂಡಿದ್ದ. ಮೂರನೆಯ ಮಗ ವೀರನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಹ (ಸಿಂಗಣ) ಆಚಳವೃತ್ತಿಯಿಂದ ನಾನಾ ನಾಡುಗಳನ್ನು ಆಳುತ್ತಿದ್ದರೆ, ನಾಲ್ಕನೆಯ ಮಗ ವಿಷ್ಣುವರ್ಧನ ವಿಜಯಾದಿತ್ಯ ನೊಳಂಬವಾಡಿಯಲ್ಲಿ ಆಚಳ ವೃತ್ತಿಯನ್ನು ಪಲ್ಲವ ಪೆರ್ಮಾನಡಿ ಕ್ರಿಶ ೧೦೪೪-೫೪ ತೀರಿದ ಬಳಿಕೆ ಕ್ರಿ.ಶ. ೧೦೫೬-೫೭ರ ವೇಳೆಗೆ ಆಳಿರಬಹುದಾಗಿದೆ.

ಅರಸಿಕೆರೆ, ದಾವಣಗೆರೆ, ಉಚ್ಚಂಗಿದುರ್ಗ, ಗುಡಿಹಳ್ಳಿ ಶಾಸನಗಳು ವಿಷ್ಣುವರ್ಧನ

ವಿಜಯಾದಿತ್ಯ ಕೈಕೊಂಡ ದಾನದತ್ತಿಗಳನ್ನು ಉಲ್ಲೇಖಿಸಿವೆ. ಅರಸೀಕೆರೆಯಲ್ಲಿ ಬೀಡುಬಿಟ್ಟ ಈ ದೊರೆ ಸಾಮಂತ ಬಿಜ್ಜಲ ದೇವ ಕೋಗಳಿ ೫೦೦ಗೆ ಸೇರಿದ ಮುತ್ತಗೆ ೩೦ರ ಕಂಪಣ ಕಡಕೋಳ ಗ್ರಾಮದ ನೊಳಂಬೇಶ್ವರದೇವರ ಅಂಗಭೋಗ ಪೂಜೆ ಪುನಸ್ಕಾರಕ್ಕೆ ದತ್ತಿ ಬಿಟ್ಟಿರುವರು.

ಈ ಶಾಸನಗಳ ಸಂದರ್ಭ ಗಮನಿಸಿದರೆ ವಿಷ್ಣುವರ್ಧನ ವಿಜಯಾದಿತ್ಯ ಒಬ್ಬ ರಾಜಕುಮಾರನು, ಬಿಜ್ಜಳ ದೇವನ ಆಳ್ವಿಕೆಯ ಉಲ್ಲೇಖ, ಕದಂಬಳಿಗೆ ಸಾಸಿರ ಕೋಗಳಿ ಐನೂರು, ಬಲ್ಲಕುಂದೆ ಮೂರುನೂರರ ಆಳ್ವಿಕೆ ಕೈಕೊಂಡಿದ್ದ ವಿಷಯ ತಿಳಿಯುತ್ತದೆ. ಅದೇ ರೀತಿ ಆಂಧ್ರ ಪ್ರದೇಶದ ಗುಂಟೂರು ಜಿಲ್ಲೆ ತೆನಾಲಿ ತಾಲೂಕಿನ ಕೊಲ್ಲೂರು ಗ್ರಾಮದ ಅನಂತ ಭೋಗೇಶ್ವರ ದೇವಾಲಯದ ಅಪರೂಪದ ಉಲ್ಲೇಖ ಹೀಗಿದೆ. ಇದು ಆರನೆಯ ವಿಕ್ರಮಾದಿತ್ಯನ ಆಳ್ವಿಕೆಯ ದಾಖಲೆಯಾಗಿದ್ದು ಇದರಲ್ಲಿ,

ಮನಮೋಲ್ಸಾಹವ ಮಲ್ಲದೇವನ ಧರಿತ್ರೀವಲ್ಲಭಂ ಸೋಮಿದೇ
ವನ ಪೆರ್ಮಾನಡಿ ವಿಕ್ರಮಾಂಕನ ನೊಳಂಬಾಧೀಶ್ವರ ಸಿಂಗಿದೇ
ವನ ಬೆಂಗೀಪತಿ ವಿಷ್ಣುವರ್ಧನ ಧರಾಧೀಶಂ ವರ ಕೀರ್ತಿವ
ರ್ಮ್ಮನ ರಾಜ್ಯಕ್ಕಭಿವೃದ್ಧಿಯಕ್ಕೆ ಶುಭಮಕ್ಕಾಚಂದ್ರ ತಾರಂಬರಂ॥

ಎಂಬ ಪದ್ಯ ಸೋಮೇಶ್ವರನ ನಾಲ್ವರು ಮಕ್ಕಳ ವಿಶೇಷಣಗಳನ್ನು ಉಲ್ಲೇಖಿಸಿದೆ.

ಸೋಮೇಶ್ವರ : ಧರಿತ್ರೀವಲ್ಲಭ
ವಿಕ್ರಮಾಂಕ : ಪೆರ್ಮಾನಡಿ
ಸಿಂಗಿದೇವ : ನೊಳಂಬಾಧೀಶ್ವರ
ಕೀರ್ತಿವರ್ಮ : ಬೆಂಗಿಪತಿ ವಿಷ್ಣುವರ್ಧನ ಧರಾಧೀಶಂ॥

ಸುಕುಮಾರ ಚರಿತೆಯೆಂಬ ಚಂಪೂ ಕಾವ್ಯವನ್ನು ರಚಿಸಿದ ಕನ್ನಡ ಕವಿ ಶಾಂತಿನಾಥ ಶಿಕಾರಿಪುರದ ಶಾಸನ ರಚಿಸಿರುವನು. ಈ ಶಾಸನದಲ್ಲಿ ಚಾಳುಕ್ಯ ಚಕ್ರವರ್ತಿಯ ಮನೆತನದ ಕುಟುಂಬದ ಸದಸ್ಯರನ್ನು ಪರಿಚಯಿಸಿದ ಕವಿ ಶಾಂತಿನಾಥ ವಿಷ್ಣುವರ್ಧನ ವಿಜಯಾದಿತ್ಯನನ್ನು ಅದರಲ್ಲಿ ಸೇರಿಸಿಲ್ಲ. ಇದಕ್ಕೆ ಕಾರಣ ಉಂಟು. ವಿಷ್ಣುವರ್ಧನ ವಿಜಯಾದಿತ್ಯ ಮೈಳಲ ದೇವಿಯ ಮಗ. ಉಳಿದ ಮೂವರು ಬಾಚಲ ದೇವಿಯ ಮಕ್ಕಳು. ಇದೇ ಮುಖ್ಯ ಕಾರಣವಾಗಿರುವ ಸಾಧ್ಯತೆ ಇದೆ.

ವಿಷ್ಣುವರ್ಧನ ವಿಜಯಾದಿತ್ಯನ ಕೊನೆಯ ಶಾಸನ ಕ್ರಿ.ಶ. ೧೧೨೫ರದ್ದು. ಇದರ ಆಧಾರದ ಮೇಲೆ ಆತ ಕ್ರಿ.ಶ. ೧೦೮೩ರಲ್ಲಿ ಬದುಕಿದ್ದನೆಂಬುದು ಸ್ಪಷ್ಟವೆನಿಸಿದೆ. ಆದರೆ ಕಲ್ಯಾಣದ ಚಾಲುಕ್ಯರ ಕಾಲದ ಕೃತಿ ಬಿಲ್ಹಣನ 'ವಿಕ್ರಮಾಂಕದೇವಚರಿತ' ವಿಷ್ಣುವರ್ಧನ ವಿಜಯಾದಿತ್ಯನನ್ನು ಉಲ್ಲೇಖಿಸದೇ ಹೋಗಿದೆ.

**ವಿಜಯಾದಿತ್ಯನ ಪ್ರವಾಸ ಪ್ರಸ್ತಾಪ :**

ಧಾರವಾಡ ಜಿಲ್ಲೆಯ ಹಾನಗಲ್ಲ ತಾಲೂಕಿನ ನೀರಲಗಿಯ ಶಾಸನ ವಿಷ್ಣುವರ್ಧನ

ವಿಜಯಾದಿತ್ಯನನ್ನು ಕಾಂಚಿಪುರವರೇಶ್ವರ ಎಂದು ಉಲ್ಲೇಖಿಸಿದೆ. ಇದು ಆತನದೇ ಹೆಸರು ಎಂಬುದು ವಿದ್ವಾಂಸರಾದ ಫ್ಲೀಟ ಹಾಗೂ ಗಾಯಿ ಅವರ ಹೇಳಿಕೆ. ಆರನೆಯ ವಿಕ್ರಮಾದಿತ್ಯ ಮತ್ತು ಭುವನೈಕಮಲ್ಲ ಪಲ್ಲವ ಪೆರ್ಮಾನಡಿ ವಿಷ್ಣುವರ್ಧನ ವಿಜಯಾದಿತ್ಯ ಇವರಿಬ್ಬರೂ ಒಟ್ಟಿಗೆ ಪ್ರವಾಸ ಕೈಕೊಂಡ ಸಂದರ್ಭದಲ್ಲಿ ಬಂಕಾಪುರದಲ್ಲಿ ಬೀಡು ಬಿಟ್ಟಿದ್ದರು. ಹೀಗಾಗಿ ನೀರಲಗಿ ಶಾಸನ ವಿಷ್ಣುವರ್ಧನ ವಿಜಯಾದಿತ್ಯನ ಇತಿಹಾಸವನ್ನು ಸ್ಪಷ್ಟವಾಗಿ ತಿಳಿಸಿದ ಗಟ್ಟಿ ಎಳೆ ಎನಿಸಿದೆ.

ಉಚ್ಚಂಗಿಯ ಶಾಸನ ತ್ರಿಭುವನಮಲ್ಲ ವಿಕ್ರಮಾದಿತ್ಯ ಹಾಗೂ ತದನುಜ ಪಲ್ಲವಾನ್ವಯ ಅಂದರೆ ನೊಳಂಬ ಪಲ್ಲವ ಪೆರ್ಮಾನಡಿ ಜಯಸಿಂಹದೇವನಿಗೆ ಸಂಬಂಧಿಸಿದೆ. ಜಯಸಿಂಹನು ತ್ರೈಲೋಕ್ಯ ಸೋಮೇಶ್ವರನಿಗೆ ನೊಳಂಬವಂಶದ ರಾಣಿಯಲ್ಲಿ ಹುಟ್ಟಿದ ಮಗ. ಹೀಗಾಗಿ ವಿಷ್ಣುವರ್ಧನ ವಿಜಯಾದಿತ್ಯನನ್ನು ಪಲ್ಲವಾನ್ವಯದ ಮಾತ್ರ ಮೂಲದಿಂದ ನೀರಲಗಿ ಶಾಸನ ಗುರುತಿಸಿದೆ.

ವಿಜಾಪುರಜಿಲ್ಲೆಯ ಬಾಗೇವಾಡಿ ತಾಲೂಕಿನ ಮುಳ್ವಾಡ ಗ್ರಾಮದ ಶಾಸನ ತ್ರಿಭುವನಮಲ್ಲ ವಿಕ್ರಮಾದಿತ್ಯನಿಗೆ ಸಂಬಂಧಿಸಿದ್ದು. ಅದರಲ್ಲಿ ವಿಕ್ರಮಾಂಕನ ಮಹಾಸಾಮಂತ ವೆಂಗಿಮಂಡಲೇಶ್ವರನ ಪ್ರಶಸ್ತಿ ಇದ್ದು ಅದು ವಿಷ್ಣುವರ್ಧನ ವಿಜಯಾದಿತ್ಯನದೇ ಎಂಬುದು ಹಿರಿಯ ಶಾಸನ ತಜ್ಞರ ಅಭಿಪ್ರಾಯವಾಗಿದೆ.

ಕೊಲ್ಲೂರು ಶಾಸನದಲ್ಲಿ ಉಕ್ತವಾದ ವಿಷ್ಣುವರ್ಧನ ವಿಜಯಾದಿತ್ಯ ಕ್ರಿ.ಶ. ೧೦೮೦ರ ಅವಧಿಯಲ್ಲಿ ಜೀವಿಸಿದ್ದನೋ ಇಲ್ಲವೋ ಎಂಬ ಅನುಮಾನ ಇಲ್ಲಿ ಪರಿಹಾರವಾಗಿದೆ.

ವಿಷ್ಣುವರ್ಧನ ವಿಜಯಾದಿತ್ಯ ಮತಧರ್ಮದ ಬಗ್ಗೆ ಅವನು ಶೈವನೋ ಜೈನನೋ ಎಂಬುದು ಸಂದಿಗ್ಧವಾದರೂ, ಬಹುಶಃ ಆತನಲ್ಲಿ ಜೈನತ್ವ ತಾಯಿಯ ಕಡೆಯಿಂದ ಬಂದ ಬಳುವಳಿ ಎನಿಸಿದೆ. ವಿಷ್ಣುವರ್ಧನ ವಿಜಯಾದಿತ್ಯ ತನ್ನ ಗೋವೈದ್ಯ ಕೃತಿಯಲ್ಲಿ ತನ್ನ ತಂದೆ ತ್ರೈಲೋಕ್ಯ ಸೋಮೇಶ್ವರ, ತನ್ನ ಹಿರಿಯಣ್ಣ ಭುವನೈಕಮಲ್ಲ ಇಮ್ಮಡಿ ಸೋಮೇಶ್ವರ ಚಕ್ರವರ್ತಿಗಳಾಗಿದ್ದಾಗಲೂ ಮಹಾಮಂಡಲೇಶ್ವರನಾಗಿದ್ದು, ಭುವನೈಕ ಮಲ್ಲನ ಅನಂತರ ಚಕ್ರವರ್ತಿಯಾದ ವಿಕ್ರಮಾಂಕನನ್ನು ಹೆಸರಿಸಿ ಕುಟುಂಬದ ಹಿರಿಯ ಅಣ್ಣನಾದ ಭುವನೈಕಮಲ್ಲನನ್ನು ಹೆಸರಿಸಿಲ್ಲ. ಈ ಸಮಸ್ಯೆಗೆ ಮುಖ್ಯವಾದ ಸಮಾಧಾನ ಈ ಅವಧಿಯಲ್ಲಿ ತಂದೆಯಾಗಲಿ, ಹಿರಿಯಣ್ಣನಾದ ಜಯಸಿಂಹನಾಗಲಿ ಪ್ರಾಯಶಃ ಬದುಕದೇ ಇದ್ದುದು.

**ಗೋವೈದ್ಯ ಕೃತಿ ಪ್ರಸ್ತಾಪ :**

ಗೋವೈದ್ಯ ಕೃತಿ ಇಂದಿಗೂ ಅನುಪಲಬ್ಧ. ಕವಿಚರಿತೆಕಾರರು ನೋಡಿದ ಪ್ರತಿಯೂ ಅಸಮಗ್ರ. ಉಳಿದ ಪದ್ಯಗಳಲ್ಲಿ ಕೀರ್ತಿವರ್ಮನು ಪೂರ್ತಿಯಾಗಿ ತನ್ನ ವಂಶಾವಳಿಯನ್ನು ತಾಯಿ ತಂದೆ ಅಣ್ಣಂದಿರು ಕವಿ ಸ್ಮರಣೆ, ಹೆಂಡತಿಯ ಹೆಸರು ಇವುಗಳ ವಿಚಾರ ಹೇಳಿರುವ

ಸಾಧ್ಯತೆ ಇದೆ. ಗೋವೈದ್ಯ ಕೃತಿಯ ಒಂದು ವೃತ್ತಪದ್ಯದಲ್ಲಿ ತಾನು ಕಾವ್ಯ ಬರೆಯುತ್ತಿದ್ದ ಕಾಲದಲ್ಲಿ ಚಕ್ರವರ್ತಿಯಾಗಿದ್ದ ವಿಕ್ರಮಾಂಕನನ್ನು ಸ್ಮರಿಸಿದ್ದಾನೆ.

ಕನ್ನಡ ಕವಿ ಬ್ರಹ್ಮಶಿವನು ತ್ರೈಲೋಕ್ಯ ಸೋಮೇಶ್ವರನನ್ನು, ವಿಕ್ರಮಾಂಕನನ್ನು ಕೀರ್ತಿವರ್ಮನನ್ನು ಸ್ಮರಿಸುವಲ್ಲಿ ಮಹತ್ವವಿದೆ. ಬ್ರಹ್ಮಶಿವನೂ ಅವನ ತಾತ ನಾಗಚಂದ್ರ ಈ ಚಾಲುಕ್ಯರ ಆಶ್ರಯದಲ್ಲಿ ಬದುಕಿದ್ದವರು. ಬ್ರಹ್ಮಶಿವನಿಗೂ ಕವಿ ಚಕ್ರವರ್ತಿ ಎಂಬ ಬಿರುದು ನೀಡಿದ್ದು ಚಾಲುಕ್ಯ ಜಗದೇಕಮಲ್ಲ IV ರಾಜನಿಂದ (ಕ್ರಿ.ಶ. ೧೧೬೩-೧೧೮೩) ಅಲ್ಲದೆ ಕೀರ್ತಿವರ್ಮನು ಬ್ರಹ್ಮಶಿವ ಕವಿಯ ತಾತನಾದ ನಾಗಚಂದ್ರ ಕವಿಯ ಗೆಳೆಯನಾಗಿರುವ ಸಾಧ್ಯತೆ ಇದೆ.

ಕವಿ ಕೀರ್ತಿವರ್ಮನು ಗುರು ದೇವೇಂದ್ರಮುನೀಂದ್ರ. ಕ್ರಿ. ಶ. ೧೦೮೫ರ ವೇಳೆಗೆ ಚಾಲುಕ್ಯ ರಾಜ್ಯವಲ್ಲಿ ಪ್ರಸಿದ್ಧನಾಗಿದ್ದವ, ರಾಜಗುರುವೆನಿಸಿದ್ದವ. ಮೇಘಚಂದ್ರಸಿದ್ಧಾಂತಿದೇವ ಈತನ ಇನ್ನೊಬ್ಬ ಗುರು. ಗೋವೈದ್ಯ ಕೃತಿಯ ಆಭ್ಯಾಸದ ಅಂತ್ಯಭಾಗದ ಗದ್ಯದಲ್ಲಿ ಈ ಇಬ್ಬರು ಗುರುಗಳ ಪ್ರಸ್ತಾಪವಿದೆ. ಮೇಘಚಂದ್ರ ಸಿದ್ಧಾಂತಿಯನ್ನು ನಾಗಚಂದ್ರ, ನಯಸೇನ, ಬ್ರಹ್ಮಶಿವ ಕವಿಗಳು ಸ್ಮರಿಸಿರುವರು. ಚಾಳುಕ್ಯಕಾಲದ ಪ್ರಸಿದ್ಧ ಕವಿ ನಾಗಚಂದ್ರನ ಗುರು ಮೇಘಚಂದ್ರಸಿದ್ಧಾಂತ. ಈತ ನಾಗಚಂದ್ರನ ಮಗ. 'ಶಾಂತಿ'ಗೆ (ಪೂಜ್ಯಪಾದರ ಸಂಸ್ಕೃತ ಕೃತಿ) 'ಸಮಾಧಿ ಶತಕ'ದ ಕನ್ನಡ ವ್ಯಾಖ್ಯಾನ ಗ್ರಂಥವನ್ನು ರಚಿಸಿಕೊಟ್ಟುದು. ಮೂಲಸಂಘ ದೇಸಿಗಗಣ ಪುಸ್ತಕಗಚ್ಚದ ಮೇಘಚಂದ್ರ ಕ್ರಿ.ಶ. ೧೧೧೫ರಂದು ಗುರುವಾರ ಧಾರವಾಡ ಜಿಲ್ಲೆಯ ಮೊರಬದಲ್ಲಿ ಜಿನೈಕ್ಯನಾದುದು.

ಮೇಘಚಂದ್ರನ ಶಿಷ್ಯನೇ ಹೊಯ್ಸಳ ಶಾಂತಲದೇವಿಯ ಗುರುವಾದ ಪ್ರಸಿದ್ಧ ಪ್ರಭಾಚಂದ್ರಮುನಿಪ. ಇದು ಮೇಘಚಂದ್ರನ ಉನ್ನತ ಪರಂಪರೆಗೆ ಸೂಚನೆಯೆನಿಸಿದೆ.

ಚಾಲುಕ್ಯರದು ಮೂಲತಃ ಜೈನಧರ್ಮ. ಸುಗ್ಗಲದೇವಿಯ ಶೈವ ಪ್ರಭಾವದಿಂದ ತ್ರೈಲೋಕ್ಯಮಲ್ಲ ಸೋಮೇಶ್ವರನೆಂದು ಹೆಸರು ಇಡಲಾಗಿದೆ. ಆದರೆ ವಿಷ್ಣುವರ್ಧನ ವಿಜಯಾದಿತ್ಯ ತಾಯಿ ಮತ್ತು ಗುರುಗಳ ಪ್ರಭಾವದಿಂದ ಜೈನನಾಗಿಯೇ ಮುಂದುವರೆದಿರುವನು.

ಈತನ ಗೋವೈದ್ಯ ಕೃತಿ ದೊರಕಿದ್ದು ಅಸಮಗ್ರ ಅಶುದ್ಧ ರೂಪದಲ್ಲಿ. ಗದ್ಯ ಪದ್ಯ ಸಮ್ಮಿಶ್ರಣದ ಈ ಕೃತಿ ಗೋವುಗಳ ವ್ಯಾಧಿಗಳಿಗೆ ಔಷದಗಳೂ, ಯಂತ್ರಗಳೂ, ಬರೆಹಾಕುವ ಕ್ರಮಗಳೂ ವಿಸ್ತಾರವಾಗಿ ಚರ್ಚೆಗೊಂಡಿವೆ.

ಗಂಗರಾಜ ಸೈಗೊಟ್ಟ ಶಿವಮಾರ ಗಜಶಾಸ್ತ್ರದ ಬರೆಹಗಾರರ ಗುಂಪಿಗೆ ಸೇರಿದರೆ, ಪಶುಪಾಲನೆಗೆ ಸಂಬಂಧಿಸಿದ ಕೀರ್ತಿವರ್ಮನ ಕೃತಿ ಪಶುಸಂಗೋಪನೆಗೆ ಸೇರಿದ್ದು. ಈ ಎಲ್ಲ ಬಿನ್ನೆಲೆಗಳನ್ನು ಗಮನಿಸಿದರೆ ವಿಷ್ಣುವರ್ಧನ ವಿಜಯಾದಿತ್ಯನ ಬಗೆಗೆ ಹೇಳುವದಿಷ್ಟು.

ಈತ ತಂದೆಯ ಆಣತಿ ಮೇರೆಗೆ ಕ್ರಿ.ಶ. ೧೦೬೩ರಿಂದ ೬೭ರವರೆಗೆ ನಿರಂತರವಾಗಿ ನಾಲ್ಕು

ವರ್ಷ ದಕ್ಷಿಣ ಕರ್ನಾಟಕದ ದಿಗ್ವಿಜಯದಲ್ಲಿ ನಿರತನಾಗಿದ್ದು ತನ್ನ ಹೆಚ್ಚಿನ ಅವಧಿಯನ್ನು ನೊಳಂಬರಾಜ್ಯದ ನೆಲೆವೀಡಾದ ಕಂಪಲಿಯನ್ನು ಕಳೆದಿರುವನು. ಅಚಳ ವೃತ್ತಿಯಿಂದ ನೊಳಂಬವಾಡಿ ೩೨ ಸಾವಿರ ಪ್ರತಿಪಾಳಿಸಿರುವನು. ವೆಂಗಿಯ ಮಂಡಲೇಶ್ವರನಾಗಿದ್ದವನು ಕದಂಬಳಿಗೆ ಸಾವಿರ, ಕೋಗಳಿ ಐನೂರು, ಬಲ್ಲಕುಂದೆ ಮುನ್ನೂರರ ಆಳ್ವಿಕೆ ಕೈಕೊಂಡಿದ್ದವನು. ತನ್ನ ಆಳ್ವಿಕೆಯ ಕಾಲದಲ್ಲಿ ಕಾಲದಲ್ಲಿ ಜೈನಕ್ಕೆ ಸಲ್ಲಿಸಿದ ಯಾವುದೇ ದಾನದತ್ತಿಯ ದಾಖಲೆಗಳಿಲ್ಲದಿದ್ದರೂ ಶೈವ ದೇವಾಲಯಕ್ಕೆ ದಾನ ದತ್ತಿ ನೀಡಿದ ಉಲ್ಲೇಖಗಳು ದೊರೆತಿವೆ.

ಒಟ್ಟಿನಲ್ಲಿ ಚಾಳುಕ್ಯ ಸಾಮ್ರಾಜ್ಯದ ಅವಧಿಯಲ್ಲಿ 'ಚಾಳುಕ್ಯ ಮಾಣಿಕ್ಯ'ನಾಗಿ ಗೌರವಾದರದಿಂದ ಬಾಳಿದ ವಿಷ್ಣುವರ್ಧನ ವಿಜಯಾದಿತ್ಯ ಗೋವೈದ್ಯದಂತಹ ಕೃತಿ ರಚಿಸುವದರ ಮೂಲಕ ತನ್ನ ಉಜ್ವಲ ಸ್ಥಾನವನ್ನು ವ್ಯಕ್ತ ಪಡಿಸಿರುವನು. ಇಂಥ ಮಹತ್ವದ ಕೃತಿ ರಚಿಸಿ ಸಾರಸ್ವತ ಲೋಕಕ್ಕಿತ್ತ ಹಂಪನಾ ಗೌರವಕ್ಕೆ ಪಾತ್ರರಾಗಿರುವರು.

# ಕವಿವರ ಕಾಮಧೇನು ಅತ್ತಿಮಬ್ಬೆ

---

ಡಾ. ಮಧು ವೆಂಕಾರೆಡ್ಡಿ

ಕರ್ನಾಟಕ ಸಂದರ್ಭದಲ್ಲಿ ಅತ್ತಿಮಬ್ಬೆಯದು ಅಗ್ರಮಾನ್ಯ ವ್ಯಕ್ತಿತ್ವ. ತಾನು ಜೀವಿಸಿದ್ದ ಕಾಲದಲ್ಲಿಯೇ ಚರಿತ್ರೆಗೆ ವಸ್ತುವಾದ ಇವಳನ್ನು ಕುರಿತು ಒಂದು ಸಹಸ್ರಮಾನದುದ್ದಕ್ಕೂ ಉಲ್ಲೇಖಗಳು, ಗ್ರಂಥಗಳು ಹುಟ್ಟಿಕೊಂಡಿವೆ. ಇಪ್ಪತ್ತನೆಯ ಶತಮಾನದಲ್ಲಿ ಈ ಕಾರ್ಯ ಇನ್ನೂ ವಿಪುಲವಾಗಿ ನಡೆದಿದ್ದು, ಇದರಲ್ಲಿ ಡಾ. ಹಂಪನಾ ಅವರ ಕೃಷಿ ಗುಣ ಮತ್ತು ಗಾತ್ರವೆರಡರಲ್ಲೂ ಮೌಲಿಕವಾದುದಾಗಿದೆ. ಈ ಕೊಡುಗೆಯ ಒಂದು ಮುಖ್ಯ ಭಾಗವಾಗಿದೆ, 'ಕವಿವರ ಕಾಮಧೇನು ಅತ್ತಿಮಬ್ಬೆ' ಹೆಸರಿನ ಕೃತಿ.

ಈ ಗ್ರಂಥ ರಚನೆಯಲ್ಲಿ ಡಾ. ಹಂಪನಾ ಅವರಿಗೆ ನೆರವಾದ ಆಕರಗಳೆಂದರೆ, ಪೊನ್ನನ ಶಾಂತಿಪುರಾಣ, ರನ್ನನ ಅಜಿತಪುರಾಣ, ಬ್ರಹ್ಮಶಿವನ ಸಮಯ ಪರೀಕ್ಷೆ ಮತ್ತು ಕೆಲವು ಶಾಸನಗಳು.

ಕಳೆದ ಮೂರು-ನಾಲ್ಕು ದಶಕಗಳಿಂದ ಶಾಸನವ್ಯಾಸಂಗವನ್ನು ಹವ್ಯಾಸವಾಗಿ ಬೆಳೆಸಿಕೊಂಡ ಡಾ. ಹಂಪನಾ, ಅತ್ತಿಮಬ್ಬೆಯ ಶಾಸನವನ್ನು ಮತ್ತೆ ಮತ್ತೆ ಮನನ ಮಾಡಿದಾಗಲೂ ಹೊಸ ಅರ್ಥಗಳು ಸ್ಫುರಿಸುವುದರ ಬಗ್ಗೆ ತಿಳಿಸುತ್ತ, ಮತ್ತಷ್ಟು ಪೂರಕ ಮಾಹಿತಿಗಳನ್ನು ಒದಗಿಸಿ ಈ ಕೃತಿಯನ್ನು ಸಿದ್ಧಪಡಿಸಿದ್ದಾರೆ. ಅತ್ತಿಮಬ್ಬೆಯ ಉದ್ಬೋಧಕ ಜೀವನದ ನಾನಾ ಆಯಾಮಗಳನ್ನು ಬಿಡಿಸಿ ತೋರಿಸುವ ವಿಶ್ಲೇಷಣಾತ್ಮಕ ಪ್ರಯತ್ನವೆನಿಸಿದ ಈ ಗ್ರಂಥದಲ್ಲಿ ಒಟ್ಟು ಹನ್ನೊಂದು ಅಧ್ಯಾಯಗಳು ಹೀಗಿವೆ. ೧. ಹಿನ್ನೆಲೆ ೨. ಪ್ರವೇಶ ೩. ಗಾವರವಾಡ ಶಾಸನ ೪. ಅಣ್ಣಿಗೇರಿಯ ಶಾಸನ ೫. ಘಟಾಂತಿಕೆ ಯಾರು ೬. ಪವಾಡಗಳ ಪರಿಶೀಲನೆ ೭. ಮನೆ-ಮನೆತನ ಆಚಾರ್ಯರು ೮. ಇತಿಹಾಸ ಪುರುಷರ ನಡುವೆ ೯. ಶಾಸನಗಳಲ್ಲಿ ಸ್ತುತಿ ಪಾಠ ೧೦. ಚರಿತ್ರೆಯಲ್ಲಿ ವಿಲೀನ ೧೧. ಸಮಾರೋಪ. ಓದುಗರ ಅನುಕೂಲಕ್ಕಾಗಿ ಅನುಬಂಧ ಭಾಗದಲ್ಲಿ ೧. ಅಡಿ ಟಿಪ್ಪಣಿಗಳು ೨. ಪ್ರಶಸ್ತಿಗಳು ೩. ಲಕ್ಕುಂಡಿಯ ಶಾಸನ ೪. ಪೊನ್ನ ಕವಿಯ ಪದ್ಯಗಳು ೫. ರನ್ನಕವಿಯ ಪದ್ಯಗಳು ೬. ಬ್ರಹ್ಮಕವಿಯ ಪದ್ಯಗಳು-ಇವನ್ನೆಲ್ಲ ಸೇರಿಸಿದ್ದಾರೆ.

ಒಬ್ಬ ಚಾರಿತ್ರಿಕ ಮಹಿಳೆಯನ್ನು ಕುರಿತು ದೀರ್ಘವಾಗಿ ಕಾವ್ಯಮಯವಾಗಿ ವರ್ಣಿಸಿರುವ, ಬರಹವೆನಿಸಿದೆ ಲಕ್ಕುಂಡಿಯ ಶಾಸನ. 'ಸಾಹಸಭೀಮ ವಿಜಯ' ರಚಿತವಾದ ಕಾಲಘಟ್ಟದಲ್ಲಿಯೇ ಕ್ರಿ.ಶ. ೧೦೦೫-೦೬ ಚಕ್ರವರ್ತಿ ಆಹವಮಲ್ಲದೇವ ಇರಿವ ಬೆಡಂಗ ಸತ್ಯಾಶ್ರಯನು

ಇನ್ನೂ ಆಳುತ್ತಿದ್ದಾಗ (ಕ್ರಿ.ಶ. ೯೯೭- ೧೦೦೮) ಕ್ರಿ.ಶ. ೧೦೦೭ರಲ್ಲಿ ಇದನ್ನು ಬರೆಯಲಾಗಿದೆ.

ಪಶ್ಚಿಮ ಚಾಳುಕ್ಯರ ಕಾಲದ ಪ್ರಸಿದ್ಧ ಪಟ್ಟಣವೆನಿಸಿದ ಲೊಕ್ಕಿಗುಂಡಿ ಎಂಬುದು ಸ್ಥಳವಾಚಿ ಶಬ್ದ. ಲೊಕ್ಕಿಗಿಡದಿಂದ ಈ ಹೆಸರು ಬಂದಿರುವದಾಗಿ ಸ್ಥಳೀಯ ಐತಿಹ್ಯವು ತಿಳಿಯಪಡಿಸುತ್ತದೆ. ಇದಕ್ಕೆ ಪುಷ್ಟಿಕೊಡುವಂತೆ ಅಲ್ಲಿ ಕೆರೆಯ ಬಳಿ ಪದ್ಮಾವತಿ ವಿಗ್ರಹವಿರುವದಲ್ಲದೆ, ಪದ್ಮಾವತಿ-ದೇವಿಯ (ಘಟಾಂತಿಕೆ) ಬಸದಿ ಕೂಡ ಇದ್ದುದನ್ನೂ ಪದ್ಮಾವತಿಗೆ ಲೊಕ್ಕಿಯವ್ವೆ ಎಂಬ ಹೆಸರು ಇದ್ದುದನ್ನೂ ಗಮನಿಸುತ್ತ ಡಾ. ಹಂಪನಾ ಹೆಚ್ಚಿನ ವಿವರಣೆ ನೀಡುತ್ತಾರೆ. ಆ ಊರಿನ ಅಜೈನ ಸಮಾಜದ ಒಪ್ಪಿಗೆ ಮತ್ತು ಮನ್ನಣೆ ಪಡೆದು ಅತ್ತಿಮಬ್ಬೆ ಕಟ್ಟಿಸಿದ ಆದಿ ಬ್ರಹ್ಮ ಜಿನಾಲಯ 'ಆಕೆಯ ಸಮನ್ವಯ ದೃಷ್ಟಿಗೆ ಸಾಕ್ಷಿಯಾಗಿದೆ. ಈ ಜೈನ ಗೃಹದಲ್ಲಿ ಬ್ರಹ್ಮನ ಮೂರ್ತಿ ಇರುವುದು ಧರ್ಮ ಸಮನ್ವಯದ ಪ್ರತೀಕವಾಗಿದ್ದು, ಇದು ಜೈನ ದಕ್ಷಬ್ರಹ್ಮನ ಮೂರ್ತಿಯಾಗಿರುವ ಸಾಧ್ಯತೆ ಇದೆ ಎಂಬುದಾಗಿ ಅವರು ಅಭಿಪ್ರಾಯಪಡುತ್ತಾರೆ.

ಸಧ್ಯ ಲಕ್ಕುಂಡಿಯಲ್ಲಿ ಸುಸ್ಥಿತಿಯಲ್ಲಿರುವುದು ಅತ್ತಿಮಬ್ಬೆ ಕಟ್ಟಿಸಿದ ಬ್ರಹ್ಮಜಿನಾಲಯವೊಂದೇ. ಹಲವು ಬಾರಿಯ ಕ್ಷೇತ್ರಸಮೀಕ್ಷೆಯಿಂದ ಡಾ. ಹಂಪನಾ ಅವರಿಗೆ ತೋಚಿದ ವಿಷಯಗಳೆಂದರೆ, ಬ್ರಹ್ಮಜಿನಾಲಯದ ಸುತ್ತ ಹಲವು ಚಿಕ್ಕ-ದೊಡ್ಡ ಬಸದಿಗಳಿದ್ದು, ಅದರ ಎಡಗಡೆಗೆ ಪಾರ್ಶ್ವನಾಥ ಗುಡಿಯ ಆಚೆಯವರೆಗೂ, ಬಲಗಡೆಗೆ ಈಗ ಪಾಳುಬಿದ್ದಿರುವ ಜಿನಾಲಯದ ಆಚೆಯವರೆಗೂ ಸೇರಿಕೊಂಡಂತೆ ಒಟ್ಟು ಸುಮಾರು ೨೫೦ × ೨೫೦ ಚದುರ ಅಡಿಗಳಷ್ಟು ಒಳಗೊಂಡು ಒಂದು ದೇವಾಲಯ ಸಮುಚ್ಚಯ ಇದ್ದಂತೆ ಕಾಣುತ್ತದೆ-ಎಂಬುದಾಗಿ, ಹೇಳುತ್ತ ಅವರು ತಮ್ಮ ತೀರ್ಮಾನವೇ ಕೊನೆಯದಲ್ಲವೆಂಬ ಪ್ರಾಮಾಣಿಕತೆಯನ್ನು ಪ್ರಕಟಿಸುತ್ತ, ಸಮಗ್ರವಾದ ಭೂಶೋಧನೆ ಆಗಬೇಕೆಂದಿದ್ದಾರೆ.

ಲಕ್ಕುಂಡಿ ಶಾಸನದ ಶಿಲೆಯು ಸೀಳಿ ಹೋಳಾದ ಕಾರಣ ಎರಡನೆಯ ಬಾರಿಗೆ ಯಥಾರೀತಿಯಾಗಿ ಪ್ರತಿಮಾಡಿ ಇನ್ನೊಂದು ಶಾಸನ ಬರೆದವನು ಸಿರಿಪಾಳ ಸೆಟ್ಟಿಯ ಮಗ ಬಾಹುಬಲಿ. ಹೀಗೆ ಎರಡನೆಯ ಸಲ ಬರೆಯುವಾಗ ಕೆಲವು ಏರುಪೇರುಗಳು ಆಗಿವೆ. ೭೫ % ರಷ್ಟು ಸಾಮ್ಯತೆ-ಇದ್ದರೂ, ಸೂಕ್ಷ್ಮವಾಗಿ ಹೋಲಿಸಿ ನೋಡಿದಾಗ ೨೫% ರಷ್ಟು ವ್ಯತ್ಯಾಸಗಳು ಕೂಡ ಇವೆ. ಹೊಸ ಶಾಸನದಲ್ಲಿ ಸಾಲು ೭೨ರಿಂದ ೮೮ರವರೆಗೆ ನೂತನ ರಚನೆಯಿದ್ದು, ಇದಿಷ್ಟೂ ಅತ್ತಿಮಬ್ಬೆಯ ನಿಧನಾನಂತರ ನಡೆದಿರುವ ಘಟನೆಗಳ ದಾಖಲೆಯೆನ್ನುತ್ತಾರೆ. (ಹಂಪನಾ) ಅತ್ತಿಮಬ್ಬೆ ಲಕ್ಕುಂಡಿಯಲ್ಲಿ ಕಟ್ಟಿಸಿದ ೧೫೦೧ ನೆಯ ಬಸದಿ ಕಳಶಪ್ರಾಯವಾಗಿತ್ತು. ಮಾನ್ಯಖೇಟ, ಪೊಟ್ಟಲಕೆರೆ, ತರ್ದವಾಡಿ ಎರಡರುನೂರು ಪ್ರದೇಶಗಳಲ್ಲಿ ಇನ್ನುಳಿದ ೧೫೦೦ಬಸದಿಗಳು ನಿರ್ಮಾಣಗೊಂಡಿದ್ದವು. ೧೨ನೆಯ ಶತಮಾನದ ಸುತ್ತಲಿನ ಕಾಲಾವಧಿಯಲ್ಲಿ ಜೈನ ಸಮಾಜ ಮತ್ತು ಮಠಮಂದಿರಗಳ ಮೇಲೆ ವ್ಯವಸ್ಥಿತವಾಗಿ ನಡೆದ ಆಕ್ರಮಣದಲ್ಲಿ ೧೫೦೦ ಬಸದಿಗಳು ನಾಶವಾಗಿರಬಹುದೆಂಬ ವಿಚಾರಕ್ಕೆ ಗಟ್ಟಿಯಾದ ಚಾರಿತ್ರಿಕ ಆಧಾರಗಳು ದೊರೆಯಬೇಕಾಗಿದೆ ಎನ್ನುತ್ತಾರೆ. ಜೈನರ ಗುಡಿ-ಗುಂಡಾರಗಳು ನುಚ್ಚು ನೂರಾದದ್ದು ಕರ್ನಾಟಕದ ಹೊರಗಿನವರ ಹಾಗೂ ಒಳಗಿನವರೇ ಆದ ಅನ್ಯ ಧರ್ಮೀಯರು ಕೈಕೊಂಡ

ವಾಸಗಳಿಂದ. ಧಾರವಾಡ ಜಿಲ್ಲೆಯ ಗದಗ ತಾಲೂಕು ಗಾವಿರವಾಡ ಶಾಸನವನ್ನು ಅವಲಂಬಿಸಿ ಡಾ. ಹಂಪನಾ ಅವರು, ಚೋಳರಿಗೂ ಚಾಳುಕ್ಯರಿಗೂ ನಡೆದ ಯುದ್ಧದ ಸಂಬಂಧದಲ್ಲಿ ಚೋಳರ ವಿಜಯರಾಜೇಂದ್ರ ದೇವ ರಾಜಾಧಿರಾಜನು ಚಾಲುಕ್ಯ ರಾಜ್ಯಕ್ಕೆ ನುಗ್ಗಿ, ಜೈನ ಮಂದಿರಗಳನ್ನು, ಅತ್ತಿಮಬ್ಬೆ ಮಾಡಿಸಿದ ಬಸದಿ ಇತ್ಯಾದಿಗಳನ್ನು ಸುಟ್ಟನೆಂದು ಹೇಳಿದುದು ತರ್ಕಬದ್ಧವಾಗಿದೆ.

ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಅಣ್ಣಿಗೇರಿಯಲ್ಲಿ ಕ್ರಿ.ಶ. ೧೧೮೫ ರಲ್ಲಿ ರಚಿತವಾದ ಶಾಸನದ ಎರಡು ಕಂದಪದ್ಯಗಳು ಮೇಲಿನ ಚರ್ಚೆಗೆ ಸಹಾಯಕವಾಗಿವೆ. ಉಗ್ರಶಿವಭಕ್ತ ಗೊಗ್ಗರಸನು ಶೈವಧರ್ಮದ ಪ್ರಸಾರಕ್ಕಾಗಿ, ಜೈನರನ್ನು ಜೈನ ಬಸದಿಗಳನ್ನು ನಾಶಮಾಡತೊಡಗಿದನು. ಅಗ್ಗದ ಘಟಾಂತಿಕೆಯನ್ನು ಕೆಡವಿ ಪುಡಿಗುಟ್ಟಿದ. ಈಗ ಲಕ್ಕುಂಡಿಯ ಕೆರೆಯ ಬಳಿ ಬಿದ್ದಿರುವ ಯಕ್ಷಿಯ ಮೂರ್ತಿ ಇದೇ ಇರಬೇಕು. ಕ್ರಿ.ಶ.೬-೭ನೆಯ ಶತಮಾನದ ವೇಳೆಗೆ ಶೈವರ ಉಪಟಳದಿಂದ ತಮಿಳುನಾಡಿನಲ್ಲಿ ಜೈನರು ತತ್ತರಿಸಿ ಹೋದರು. ಈ ಗಾಳಿ ತಡವಾಗಿ ಕರ್ನಾಟಕಕ್ಕೂ ಬೀಸಿದ ವಿಚಾರ ವೀರಶೈವ ಪುರಾಣಗಳಲ್ಲಿ ವರ್ಣಿತವಾಗಿದೆ-ಎನ್ನುತ್ತ ಡಾ. ಹಂಪನಾ ಘಟಾಂತಿಕೆ ಯಾರು ? ಎಂಬ ಪ್ರಶ್ನೆಗೆ ಉತ್ತರಿಸಲು ಹೀಗೆ ಪ್ರಯತ್ನಿಸಿದ್ದಾರೆ.

ಸೀತಾರಾಮ ಜಾಗೀರದಾರರು, ಘಟಾಂತಿಕೆಯ ಬಸದಿಗಳು ಹಾಗೂ ಘಟಾಂತಿಕೆ ಎಂಬ ಲೇಖನದಲ್ಲಿ ಈ ಶಬ್ದಕ್ಕೆ 'ದಾನ ಚಿಂತಾಮಣಿ ಅತ್ತಿಮಬ್ಬೆ' ಎಂದು ವಿವರಿಸುವುದು ಸಮಂಜಸ ಎಂಬ ಮಾತನ್ನು ಹಂಪನಾ ಒಪ್ಪುತ್ತಾರೆ. ಆದರೆ ಘಟಾಂತಿಕೆ ಎಂಬ ಶಬ್ದಕ್ಕೆ ಮೂಲ ಅರ್ಥ ಜೈನಯಕ್ಷಿ 'ಜಿನಶಾಸನ ದೇವತೆ' ಎಂದು ಹೇಳುತ್ತ ಅತ್ತಿಮಬ್ಬೆ ಕಟ್ಟಿಸಿದ ಕೆಲವು ಬಸದಿಗಳಿಗೆ ಘಟಾಂತಿಕೆಯ ಜಿನಾಲಯ ಎಂಬ ಹೆಸರು ರೂಢಿಯಲ್ಲಿ ಬಂತೆಂದು ಹೇಳಿದುದು ಯೋಗ್ಯವೆನಿಸಿದೆ.

ಲಕ್ಕುಂಡಿ ಶಾಸನದಲ್ಲಿ ಅತ್ತಿಮಬ್ಬೆಯ ಒಟ್ಟು ಏಳು ಪವಾಡಗಳು ಉಲ್ಲೇಖಗೊಂಡಿವೆ. ಈ ಪವಾಡಗಳು ಕರ್ನಾಟಕ ಚರಿತ್ರೆ ಮತ್ತು ಸಂಸ್ಕೃತಿಯ ಅಧ್ಯಯನಕಾರರಿಗೆ ಮುಖ್ಯವಾಗಿವೆ. ಉನ್ನತ ಕುಕ್ಕುಟೇಶ್ವರ ದರ್ಶನಕ್ಕಾಗಿ ನಿರಾಹಾರಿಯಾಗಿ ಬೆಟ್ಟವನ್ನು ಹತ್ತಿದ್ದು, ಅವಳ ಬಳಲಿಕೆಯನ್ನು ಹೋಗಲಾಡಿಸಲು ಅಕಾಲವೃಷ್ಟಿಯಾದದ್ದು, ಜಿನಬಿಂಬವನ್ನು ತಲೆಯಲ್ಲಿ ಹೊತ್ತು ನಡೆಯುತ್ತಲೇ ತುಂಬಿ ಹರಿಯುತ್ತಿರುವ ಗೋದಾವರಿ ದಾರಿ ಕೊಟ್ಟುದು, ಕಟ್ಟಿಹಾಕಿದ ಮದಿಸಿದ ಆನೆಯ ಸೊಕ್ಕು ಇಳಿದುದು, ಕೈಜಾರಿ ನದಿಯಲ್ಲಿ ಬಿದ್ದು ಹೋದ ಜಿನಬಿಂಬ ಮತ್ತೆ ಕೈಗೆ ಬಂದುದು, ಹೊತ್ತಿಕೊಂಡು ವ್ಯಾಪಿಸಿದ ಅಗ್ನಿ ಜಿನಗಂಧೋದಕದಿಂದ ಉಪಶಮನವಾದುದು, ಸವತಿಯೊಬ್ಬಳು ಅತ್ತಿಮಬ್ಬೆಯನ್ನು ನದಿಯಲ್ಲಿ ನೂಕಲು ಪ್ರಯತ್ನಿಸಿದಾಗ ದೋಣಿ ಸುತ್ತಿದುದು, ಜಿನನನ್ನು ಕಾಣುವವರೆಗೆ ಆಹಾರ ತೊರೆದದ್ದು-ಈ ಪವಾಡಗಳ ಪರಿಶೀಲನೆ ಇಲ್ಲಿ ನಡೆದಿದೆ. ರನ್ನನು ಅಜಿತಪುರಾಣದಲ್ಲಿ ಹೇಳಲಾಗದೆ ಬಿಟ್ಟ ಸೂಕ್ಷ್ಮ ಸಂಗತಿಗಳು ಇಲ್ಲಿರುವುದನ್ನು ಹಂಪನಾ ಎತ್ತಿ ಹೇಳಿದ್ದಾರೆ. ಮಕ್ಕಳಿಲ್ಲದ ಕೊರಗು, ತಕ್ಕ ಮನ್ನಣೆಯಿಲ್ಲದ ಹಿಂಸೆ, ಬಂಜೆ ಎಂಬ ಹಂಗಿಗೆ ಒಳಗಾದ ವಿಷಾದಗಳಿಂದ ಕೂಡಿದ ಗುಂಡುಮಬ್ಬೆ ಅಕ್ಕ ಅತ್ತಿಮಬ್ಬೆಯನ್ನು ನದಿಯಲ್ಲಿ ದೂಡಿದುದರಲ್ಲಿ ಆಶ್ಚರ್ಯವೇನಿಲ್ಲ-ಎನ್ನುತ್ತ ಮನಸ್‌ಶಾಸ್ತ್ರದ ನಿಟ್ಟಿನಿಂದ ಅವಳ ಪರಿಸ್ಥಿತಿಯನ್ನು ವಿಶ್ಲೇಷಿಸಿದ್ದಾರೆ.

ಅತ್ತಿಮಬ್ಬೆಯ ಹುಟ್ಟು, ಮದುವೆ, ಮಗನ ಜನನ, ಗಂಡ ನಾಗದೇವ ಹತನಾದದ್ದೂ, ಗುಂಡುಮಬ್ಬೆ ಚಿತೆಯೇರಿದ್ದು, ಚಿಕ್ಕಪ್ಪ ಪೊನ್ನಮಯ್ಯ, ಅಣ್ಣ ಗುಂಡಮಯ್ಯ ಚಾಲುಕ್ಯ ಸಾಮ್ರಾಜ್ಯಕ್ಕಾಗಿ ಹೋರಾಡಿ ಪ್ರಾಣಬಿಟ್ಟದ್ದು ಇವೆಲ್ಲ ಯಾವಾಗ ? ಹೇಗೆ? ಎಂಬ ಪ್ರಶ್ನೆಗಳು ಹಾಗೇ ಉಳಿದುಕೊಂಡಿವೆ. ಲಭ್ಯ ಆಕರಗಳಿಂದ ಸ್ಥೂಲವಾಗಿಯಾದರೂ ಕಲ್ಪಿಸಿಕೊಳ್ಳಲು ಅವಕಾಶವಿದೆಯೆಂಬ ಸಮಾಧಾನ ಇಲ್ಲಿಯ ಲೇಖಕರಿಗಿದೆ. ಲಕ್ಕುಂಡಿಗೆ ಬರುವ ವೇಳೆಗೆ ಆಕೆಯ ಸಾಂಸಾರಿಕ ಸುಖದ ದಿನಗಳು ಕಳೆದು ಧಾರ್ಮಿಕ-ಜೀವನದ ಉತ್ತರಾರ್ಧ ಪ್ರಾರಂಭವಾಗಿತ್ತು ಎಂದು ಹೇಳುತ್ತ ಅಂತರ-ಬಾಹ್ಯ ಪ್ರಮಾಣಗಳಿಂದ ಆಕೆ ಹುಟ್ಟಿದ್ದು ಪುಂಗನೂರಿನಲ್ಲಿ ಕ್ರಿ.ಶ. ೯೫೦, ವಿವಾಹ ಕ್ರಿ.ಶ. ೯೬೫ ಅಣ್ಣಿಗದೇವನ ಜನನ ೯೬೭, ಪತಿ-ವಿಯೋಗ ೯೭೪ ಎಂದು ನಿರ್ಧರಿಸಿದುದು ಸತ್ಯಕ್ಕೆ ಸಮೀಪವೆನಿಸಿದೆ.

ಅತ್ತಿಮಬ್ಬೆಯನ್ನು ಜೈನ ಪುರಾಣಾಂತರ್ಗತ ಪ್ರಸಿದ್ಧ ಸ್ತ್ರೀಯರಾದ ಮರುದೇವಿ, ಸುಷೇಣೆ, ಶಿವದೇವಿ, ಲಕ್ಷ್ಮಣೆ, ವಿಜಯಸೇನೆ-ಈ ತೀರ್ಥಂಕರರ ತಾಯಂದಿರೊಂದಿಗೆ ಹೋಲಿಸಲಾಗಿದೆ ಎನ್ನುತ್ತ ರುಕ್ಮಿಣಿ ಸತ್ಯಭಾಮೆಯರ ಹೋಲಿಕೆಯಲ್ಲಿ ಅಕ್ಕತಂಗಿಯರಾದ ಅತ್ತಿಮಬ್ಬೆ ಗುಂಡುಮಬ್ಬೆಯರ ಸೂಚನೆಯಿದೆ ಎನ್ನುತ್ತಾರೆ. ಅತ್ತಿಮಬ್ಬೆ ಅಂದು ಕೈಕೊಂಡ ಪ್ರಯಾಣಗಳನ್ನು ನೆನೆದರೆ ಅಚ್ಚರಿಯಾಗುತ್ತದೆ. ಅವು ಪುಂಗನೂರು, ಶ್ರವಣಬೆಳಗೊಳ, ನರ್ಮದಾನದಿ, ಗೋದಾವರಿ ನದಿ, ಕೊಪ್ಪಳ, ಮಳಖೇಡ, ಪೊಟ್ಟಲಕೆರೆ, ಲಕ್ಕುಂಡಿ ಮೊದಲಾದವುಗಳು. ಸ್ವಯಂ ಯೋಧಳಾಗಿದ್ದ ಆಕೆ ಯುದ್ಧದಲ್ಲಿ ಖುದ್ದಾಗಿ ಭಾಗವಹಿಸಿದ ಪ್ರಥಮ ಕನ್ನಡತಿ. ಆಕೆಗೆ ಸೈನಿಕ ಮತ್ತು ರಾಜಕೀಯ ಪ್ರಭಾವವಿತ್ತು. ಕಾವ್ಯವಾಚನ, ಗಮಕ ಸಾಹಿತ್ಯ ಮತ್ತು ಶಾಸ್ತ್ರ ವಿಚಾರಗಳ ಚರ್ಚೆ, ವಿಮರ್ಶೆಗಳಿಗೆ ಆಕೆಯ ಮನೆ ಮಹಾಮಂಟಪವಾಗಿತ್ತು ತಂದೆ ಚಿಕ್ಕಪ್ಪಂದಿರು ಪೊನ್ನಕವಿಯಿಂದ ಶಾಂತಿಪುರಾಣವನ್ನು ಬರೆಸಿದ್ದರು. ಅತ್ತಿಮಬ್ಬೆ ಅದರ ಒಂದು ಸಾವಿರ ಓಲೆಯಗರಿ ಪ್ರತಿಗಳನ್ನು ಬರೆಸಿ ಹಂಚಿದಳು ಎಂದು ಹೇಳುತ್ತ, ಆಕೆಯ ಗುರು ಸೂರಸ್ತಗಣದ ಕೌರೂರುಗಚ್ಛದ ಅರ್ಹನಂದಿಪಂಡಿತದೇವರ ಪರಂಪರೆಯನ್ನು ಸಾಧಾರ ಚಿತ್ರಿಸಿದ್ದಾರೆ. ಬಾಲ್ಯದಲ್ಲಿ ಜಿನಚಂದ್ರಾಚಾರ್ಯರು, ಯೌವ್ವನದಲ್ಲಿ ಅಜಿತಸೇನಾಚಾರ್ಯರು, ಮುಪ್ಪಿನಲ್ಲಿ ಅರ್ಹನಂದಿ ಆಚಾರ್ಯರು ಅನುಗ್ರಹಿಸಿದ್ದರು ಎಂಬ ವಿವರಗಳನ್ನು ಸಂಗ್ರಹಿಸಿ ಹೇಳಿದ್ದಾರೆ.

ಶಾಸನಗಳಲ್ಲಿ, ಕನ್ನಡ ವಾಙ್ಮಯದಲ್ಲಿ ಅತ್ತಿಮಬ್ಬೆಯ ಯಶೋಗಾಥೆ ದಾಂಗುಡಿಯಿಟ್ಟಿದೆ. ಪುರಾಣಪಾತ್ರಗಳನ್ನೂ ಐತಿಹಾಸಿಕ ವ್ಯಕ್ತಿಗಳನ್ನೂ ಅತ್ತಿಮಬ್ಬೆಯೊಂದಿಗೆ ಹೋಲಿಸುವ ಹೊಸ ಪರಿಪಾಟವೊಂದು ಕರ್ನಾಟಕದಲ್ಲಿ ಪ್ರಾರಂಭವಾಯಿತು. ಇಂಥ ನೂತನ ಶಕೆಯೊಂದನ್ನು ಆರಂಭಿಸಿದ ಶಕಸ್ತ್ರೀ ಅತ್ತಿಮಬ್ಬೆ. ಆಕೆಗೆ ಇದ್ದ ಪ್ರಶಸ್ತಿಗಳಲ್ಲಿ ದಾನಚಿಂತಾಮಣಿ ಎಂಬ ಬಿರುದಿನಷ್ಟೇ ಮಹತ್ವದ್ದು ಗುಣದಂಕಕಾರ್ತಿ ಎಂಬುದು. ಡಾ. ಹಂಪನಾ ಈ ಬಿರುದುಗಳನ್ನೊಳಗೊಂಡ ಕೆಲವು ಶಾಸನಗಳನ್ನು ಕಾಲಾನುಕ್ರಮಣಿಕೆಯಲ್ಲಿ ಆಕರಸಹಿತವಾಗಿ ಶಾಸನಗಳಲ್ಲಿ ಸ್ತುತಿಪಾಠ ಎಂಬ ಅಧ್ಯಾಯದಲ್ಲಿ ಉದಾಹರಿಸಿದ್ದಾರೆ.

ಅತ್ತಿಮಬ್ಬೆಯ ಕೊನೆಯ ದಿನಗಳಿಗೆ ಸಂಬಂಧಿಸಿದ ಹೊಸ ಮಾಹಿತಿಯನ್ನು, ಇಲ್ಲಿ

ಸಂಶೋಧಕರು ಚರ್ಚಿಸಿದ್ದಾರೆ. ಬಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾಲೂಕು ಕುಂಟೋಜಿಯ ಈಶ್ವರಗುಡಿಯ ಹತ್ತಿರ ಹಾಳು ಬಾವಿಯ ಬಳಿ ಬಿದ್ದಿರುವ ತುಂಡಾದ ಕಲ್ಲಿನ ಮೇಲಿರುವ ಶಾಸನವು ಕಲ್ಯಾಣ ಚಾಲುಕ್ಯ ಜಗದೇಕಮಲ್ಲ ಜಯಸಿಂಹದೇವನ (ಕ್ರಿ.ಶ. ೧೦೧೬-೪೨) ಕಾಲದಲ್ಲಿ ರಚಿತವಾಗಿದೆ. ಆ ಹೊತ್ತಿಗೆ ಅತ್ತಿಮಬ್ಬೆ ಜೀವಿಸಿರಲಿಲ್ಲ. ಆಕೆಯ ಮರಣ ಕುರಿತ ಪ್ರಸ್ತಾಪ ಇದರ ನಷ್ಟ ಭಾಗದಲ್ಲಿ ಬಂದಿರಬಹುದು. ಅತ್ತಿಮಬ್ಬೆಯ ಜೀವಿತಾವಧಿಗೆ ಸಂಬಂಧಿಸಿದಂತೆ ಉಪಲಬ್ಧವಾಗಿರುವ ಕಟ್ಟಕಡೆಯ ಶಾಸನವಿದು. ಇದರ ತರುವಾಯ ಸಿಗುವ ಅತ್ತಿಮಬ್ಬೆಯನ್ನು ಪ್ರಸ್ತಾಪಿಸಿರುವ ಶಾಸನಗಳೆಲ್ಲ ಆಕೆಯ ಮರಣೋತ್ತರ ಶಾಸನಗಳು. ಮೇಲಿನ ಶಾಸನ ಕ್ರಿ.ಶ. ೧೦೦೮ರವರೆಗೆ ಸುಮಾರು ೬೮ ವರ್ಷಗಳು ಬದುಕಿದ್ದಿರಬಹುದೆಂದು ಕಾಣುತ್ತದೆ. ಆದ್ದರಿಂದ ಅತ್ತಿಮಬ್ಬೆಯು ತೈಲಪ ಇರಿವಬೆಡಂಗ ಸತ್ಯಾಶ್ರಯ ದಶವರ್ಮದೇವ, ಐದನೆಯ ವಿಕ್ರಮಾದಿತ್ಯ, ವಸುಧೈಕಮಲ್ಲ ಅಯ್ಯಣದೇವ ಮತ್ತು ಜಗದೇಕಮಲ್ಲ ಜಯಸಿಂಹ ಇಷ್ಟೂ ಜನ ಚಕ್ರವರ್ತಿಗಳ ಗೌರವಕ್ಕೆ ಪಾತ್ರಳಾಗಿದ್ದಳು-ಎಂದು ನಿಶ್ಚಯಿಸುವಲ್ಲಿ ಡಾ. ಹಂಪನಾ ವಹಿಸಿದ ಶ್ರಮ ಸ್ಪಷ್ಟವಾಗುತ್ತದೆ.

ರನ್ನಕವಿ ಮೊತ್ತ ಮೊದಲು ಶ್ರವಣಬೆಳಗೊಳದಲ್ಲಿ ಸಾವಿಯಬ್ಬೆ ಶಾಸನ ರಚಿಸಿ, ಸುಮಾರು ೫೦೦ ಕಿಲೋಮೀಟರ್ ಅಂತರದ ಲಕ್ಕುಂಡಿಯಲ್ಲಿ ಕೊನೆಯದನ್ನು ರಚಿಸಿದ. ಈ ಶಾಸನಗಳು ಇಂದಿಗೂ ಉಳಿದುಕೊಂಡಿವೆ. ಈ ಅವಧಿಯ ನಡುವೆ ಆತ ರಚಿಸಿದ ಉಪಲಬ್ಧ-ಅನುಪಲಬ್ಧ ಕಾವ್ಯಗಳಲ್ಲಿಯೂ ಅತ್ತಿಮಬ್ಬೆಯ ಸಂಬಂಧವಾಗಿ ಗುರುತಿಸಬೇಕಾದ ಚಾರಿತ್ರಿಕ ಧ್ವನಿಗಳಿವೆ ಎನ್ನುತ್ತಾರೆ, ಹಂಪನಾ

ಚಾಳುಕ್ಯ ಆಶ್ರಯದಲ್ಲಿ ಮಿಂಚಿದ ಕವಿಗಳಲ್ಲಿ ರನ್ನನ ತರುವಾಯ ಬಂದ ಶಾಂತಿನಾಥ (೧೦೬೩) ತನ್ನ 'ಸುಕುಮಾರ ಚರಿತಂ' ಕಾವ್ಯದಲ್ಲಿ ಕಥಾನಾಯಕ ಸುಕುಮಾರನೊಂದಿಗೆ ಅಣ್ಣಿಗದೇವನನ್ನೂ, ಅವನ ತಾಯಿ ಯಶೋಧರೆಯೊಂದಿಗೆ ಅತ್ತಿಮಬ್ಬೆಯನ್ನೂ ಸಮೀಕರಿಸಿ ತನ್ನ ಕಾವ್ಯಕ್ಕೆ ಚಾರಿತ್ರಿಕ ಧ್ವನಿ ತುಂಬಿದ ವಿಚಾರ ಡಾ. ಕಮಲಾ ಹಂಪನಾ ಅವರ 'ಸುಕುಮಾರ ಚರಿತೆಯ ಸಂಗ್ರಹ' (೧೯೯೪) ದಲ್ಲಿ ಪ್ರಸ್ತಾಪಗೊಂಡಿದ್ದು, ಹಂಪನಾ ಇದನ್ನು ಬೆಂಬಲಿಸುತ್ತಾರೆ.

ಹೀಗೆ ಅನೇಕ ಹೊಸ ವಿಷಯಗಳನ್ನು ನೇರವಾಗಿ, ಧ್ವನಿಪೂರ್ಣವಾಗಿ ಪ್ರತಿಪಾದಿಸುವ 'ಕವಿವರ ಕಾಮಧೇನು ಅತ್ತಿಮಬ್ಬೆ' ಈ ಕೃತಿ ಕರ್ನಾಟಕದ ಇತಿಹಾಸ ಮತ್ತು ಸಾಹಿತ್ಯ ಕ್ಷೇತ್ರಗಳಿಗೆ ಒಂದು ವಿನೂತನ ಸೇರ್ಪಡೆಯೆನಿಸಿದೆ.

# ಆಯ್ದ ಪ್ರಬಂಧಗಳು

---

**ಪಿ. ರಾಮಕೃಷ್ಣ**

ಇಲ್ಲಿನ ಭಾಷೆ ಹೆಚ್ಚು ಸರಳತೆಯಿಂದಿದ್ದು ಸುಲಭವಾಗಿ ಗ್ರಾಹ್ಯವಾಗುತ್ತದೆ ಈ ಮುಖೇನ ಪ್ರಬಂಧಕಾರರು ಹೆಚ್ಚು ಪರಿಣಾಮಕಾರಿಯಾದ ವಾಸ್ತವಿಕ ಚಿತ್ರಗಳನ್ನು ಹೆಚ್ಚು ಸಹ್ಯ-ಸ್ಪಂದಿತ ರೀತಿಯಲ್ಲಿ ಅರುಹಿದ್ದಾರೆ. ಪ್ರಬಂಧಕಾರರ ಪಾತ್ರಗಳು ಸನ್ನಿವೇಶಗಳು ನೇರವಾಗಿರದೆ ಧ್ವನಿ ಪೂರ್ಣವಾಗಿವೆ. ಪ್ರಬಂಧಕಾರರ ಉದ್ಧೇಶಕ್ಕನುಗುಣವಾಗಿ ಇಲ್ಲಿಯ ಪಾತ್ರಗಳು ಜೀವ ಪಡೆದುಕೊಂಡು ಉದ್ದೇಶಪೂರಿತವಾಗಿ ಚಲಿಸುವಂತೆ ಗೋಚರಿಸಿದರೂ ಅವು ನಿತ್ಯ ಜೀವನದ ಹಲವಾರು ಸ್ತರಗಳನ್ನು ಚಿತ್ರಣಗಳನ್ನು ಅವು ವರ್ತಿಸುವ ರೀತಿ ನಡಿಸುವ ಕಲೆ ವಾಸ್ತವತೆಯ ನಸುಲೇಪದಿಂದ ಒಂದು ಉದ್ದೇಶಿತ ಗುರಿಯನ್ನು ತಲುಪುವಲ್ಲಿ ಯಶಸ್ವಿಯಾಗಿವೆ.

ಸಾಲಾವತಾರ, ಘಾಟಿ ಹುಡುಗರು, ಕವಿಯ ಹೆಂಡತಿ, ಧಿಮಾಕಿನ ಚೀಲ ಪ್ರಬಂಧಗಳು ಮನಸ್ಸಿಗೆ ಮುದಕೊಟ್ಟು ಹಿತವಾದ ತಂಗಾಳಿಯಲ್ಲಿ ವಿಹರಿಸುವಂತೆ ಮಾಡಿದರೆ ದಂತಕಥೆ, ಹೆಸರಿನ ಸೊಗಸು ಇವು ಒಂದು ರೀತಿಯಲ್ಲಿ ತೆಳುತನದಿಂದ ಮನಸ್ಸನ್ನು ಸಾದ್ರಗೊಳಿಸುವಲ್ಲಿ ವಿಫಲವಾಗುತ್ತವೆ. ಹಂಪನಾ.ರವರ ಪ್ರಬಂಧಗಳು ಹೆಚ್ಚು ಲಲಿತಾತ್ಮಕವಾಗಿದ್ದು ಸಣ್ಣ ಕಥೆಗಳಂತೆ ವಸ್ತುನಿಷ್ಠವಾಗಿರದೆ ಭಾವನಿಷ್ಠವಾಗುತ್ತವೆ. ಇದರಿಂದ ಇದು ಹೆಚ್ಚು ಚಿಂತನಾತ್ಮಕವಾಗುತ್ತದೆ. ಇಲ್ಲಿ ಪ್ರಸ್ತಾಪಿಸಿರುವ ಯಾವುದೇ ವಸ್ತುವಿನಲ್ಲೂ ಪ್ರಬಂಧಕಾರರ ವ್ಯಕ್ತಿತ್ವವನ್ನು ಮತ್ತು ಅವರ ಆಶಯಗಳನ್ನು ಗುರ್ತಿಸಬಹುದು. ಪ್ರಬಂಧಕಾರರು ಕೆಲವು ಆಶಯಗಳ ನಿವೇದನೆಯಿಂದ ಅಂತರಂಗಕ್ಕೆ ಕನ್ನಡಿ ಹಿಡಿಯುತ್ತಾರೆ. ಹೀಗೆ ಪ್ರಬಂಧಕಾರರು ತನ್ನನ್ನೇ ತಾನು ಬರೆದುಕೊಳ್ಳುತ್ತಾ ಸ್ವಾನುಭವದ ಚಿತ್ರಗಳನ್ನು ಪ್ರದರ್ಶಿಸುತ್ತಾ ಪ್ರಬಂಧವನ್ನು ಆತ್ಮವೃತ್ತದ ಸಂಕ್ಷಿಪ್ತ ರೂಪವಾಗಿಸಿದ್ದಾರೆ. ಹೀಗೆ ಪ್ರಬಂಧಕಾರ ವಸ್ತುವೊಂದನ್ನು ಆಧಾರವಾಗಿಟ್ಟುಕೊಂಡು ತನ್ನನ್ನು ತಾನು ಅಭಿವ್ಯಕ್ತಿಗೊಳಿಸಿಕೊಳ್ಳುವಾಗ ಆತ್ಮೀಯತೆಯ ಗುಣ ಮುಖ್ಯವಾಗುತ್ತದೆ. ಇಲ್ಲವಾದರೆ ಆತನ ಅಭಿಪ್ರಾಯ ವಾಚಕನಿಗೆ ಅಷ್ಟಾಗಿ ಹಿಡಿಸದೆ ಅವನು ಪ್ರಬಂಧಕಾರನ ಮಾತಿಗೆ ಕಿವಿಗೊಡದೆ ಹೋಗಬಹುದು. ಆದರೆ ಮೇಲಿನ ಆಯ್ದ ಪ್ರಬಂಧಗಳು ವಾಚಕನನ್ನು ಸಂಪೂರ್ಣವಾಗಿಯಲ್ಲದಿದ್ದರೂ ಬಹುಮಟ್ಟಿಗೆ ತನ್ನ ವಶಕ್ಕೆ ತೆಗೆದುಕೊಂಡು ಸ್ನೇಹಿತನಂತೆ ಕಾಂತಾಸಂಪುಟದಂತೆ ಬೋಧಿಸುತ್ತವೆ. ಆ ಬೋಧನೆ ನೇರವಾಗಿರದೆ

ಧ್ವನಿತಗೊಂಡು ಉತ್ತಮವಾಗುತ್ತಾ ಹೋಗುತ್ತದೆ. ಇದಕ್ಕನುಗುಣವಾದ ನಿರೂಪಣಾ ಶಕ್ತಿಯನ್ನು ಇವು ಹೊಂದಿವೆ. ಇದನ್ನೇ ನಾವು ಶೈಲಿ ಎನ್ನಬಹುದಾಗಿದೆ. ಈ ನಿಟ್ಟಿನಲ್ಲಿ ನೋಡಿದಾಗ ಪ್ರಬಂಧ ಕಾರರು ಉತ್ತಮ ಶೈಲಿಯ ಮುಖಾಂತರ ಕೆಲವು ನೀರಸ ವಿಷಯಗಳನ್ನೂ ಆಕರ್ಷಕ, ಆಪ್ಯಾಯಮಾನ, ಸರಳ ಸುಂದರ ಸ್ಪಷ್ಟವಾಗಿ ರೂಪಿಸಿದ್ದಾರೆ. ಕೆಲವು ಕಡೆ ಇಣಕಿ ನೋಡುವ ವಾದ ವೈಖರಿ ಒಮ್ಮೊಮ್ಮೆ ವಿಷಯದ ಹೊರೆಯನ್ನು ಹಗುರ ಮಾಡಿಮನಸ್ಸಿಗೆ ಉಲ್ಲಾಸ ನೀಡುತ್ತದೆ. ಇಂತಹ ಉಲ್ಲಾಸ ಪ್ರಬಂಧಕಾರನ ಅಭಿಪ್ರಾಯಗಳನ್ನು ಸುಲಭವಾಗಿ ಗ್ರಹಿಸುವುದಕ್ಕೆ ಪೋಷಕವಾಗುತ್ತವೆ. ಅಲ್ಲದೆ ತೃಪ್ತಿಯನ್ನು ನೀಡುತ್ತದೆ. ಅಲೆಗ್ಸಾಂಡರ್ ಸ್ಮಿತ್ ಹೇಳುವಂತೆ ಪ್ರಬಂಧಕಾರ್ರ್ಯ ಕೆಲಸ ವಸ್ತುನಿರ್ಮಿತಿಯಲ್ಲ, ಆದರೆ ನಿರ್ಮಿತ ವಸ್ತುವಿನ ಮೇಲೆ ಹೂಡುವ ವಾದ ವೈಖರಿ. (He does not create material so much as he comments upon material already existing) ಎನ್ನುವ ಅಭಿಪ್ರಾಯಕ್ಕನುಗುಣವಾಗಿ ಇಲ್ಲಿ ಕೆಲವು ಪ್ರಬಂಧಗಳು ರೂಪಿತವಾಗಿವೆ (ಉದಾ : ಧಿಮಾಕಿನ ಚೀಲ, ಹೆಸರಿನ ಸೊಗಸು, ದಂತ ಕಥೆ) ಆದರೆ ಕೆಲವು ಪ್ರಬಂಧಗಳ ಆರಂಭ ಮತ್ತು ಮುಕ್ತಾಯ ಹೆಚ್ಚು ಆಕರ್ಷಕವಾಗಿದ್ದಿದ್ದರೆ ಇನ್ನೂ ಪರಿಣಾಮಕಾರಿಯಾಗಿರುತ್ತಿತ್ತು.

ಸಂತುಲಿಕವಾದ ರೀತಿಯಲ್ಲಿ ಹೇಳುವುದಾದರೆ ಇಲ್ಲಿನ ಪ್ರಬಂಧಗಳು ಕೆಲವು ಸಣ್ಣ ಪುಟ್ಟ ದೋಷಗಳನ್ನು ಹೊಂದಿದ್ದರೂ ಪ್ರಬಂಧಕಾರರ ಕಲ್ಪನಾ ಸಾಮರ್ಥ್ಯ, ಸ್ವಾಭಾವಿಕವಾದ ಚಮತ್ಕಾರ ಮತ್ತು ಸಮೃದ್ಧವಾದ ಅನುಭವಗಳು ಪ್ರಬಂಧಕ್ಕೆ ಹೆಚ್ಚು ಶಕ್ತಿಯನ್ನು ತುಂಬಿ ವಿಮರ್ಶಕ ಪ್ರಜ್ಞೆಯೂ ಸಹ ಗೋಚರಿಸುತ್ತದೆ. ಜಿ.ಪಿ. ರಾಜರತ್ನಂ ಅವರ ಪ್ರಬಂಧವು ನಾಟಕದಂತೆ ನೇರವಾಗಿ ಮನಸ್ಸು ಬಿಚ್ಚಿ ಮಾತನಾಡಬೇಕು. ಕಾದಂಬರಿಯಂತೆ ಮನರಂಜನೆಯನ್ನು ನೀಡಬೇಕು. ಎಂಬ ಅಭಿಪ್ರಾಯಕ್ಕೆ ಇಲ್ಲಿ ತಕ್ಕ ಉದಾಹರಣೆಗಳನ್ನು ನಾವು ಗುರ್ತಿಸಬಹುದಾಗಿದೆ. ಪ್ರಬಂಧಕಾರರು ಅತಿಯಾದ ಯಾವುದೇ ನಿಯಮ ತಂತ್ರಗಳ ಕಟ್ಟಿಗೆ ಒಳಗಾಗದೆ ಒಳ್ಳೆಯ ಪ್ರಬಂಧ ಜನಮನವನ್ನು ತಿದ್ದಬಲ್ಲದು-ಬುದ್ಧಿಯನ್ನು ಪ್ರಚೋದಿಸಬಲ್ಲದು ಆನಂದ, ಜ್ಞಾನವನ್ನು ಒಟ್ಟಿಗೇ ಒದಗಿಸಬಲ್ಲದು ಎಂಬುದನ್ನು ಬಹುಮಟ್ಟಿಗೆ ನಿರೂಪಿಸಿದ್ದಾರೆಂದೇ ಹೇಳಬಹುದು.

ಇವರ ರಿಪೇರಿ, ಪುಸ್ತಕ ಜೀವಿ, ಶಾಸ್ತ್ರಿಯ ಇಂಗ್ಲೀಷ್ ಪ್ರೇಮ ಎಂಬ ಪ್ರಬಂಧಗಳಲ್ಲಿ ಪ್ರಬಂಧಕಾರರಲ್ಲಿ ಕಂಡುಬರುವ ವಿಶಿಷ್ಟ ಗುಣವನ್ನು ಕಾಣಬಹುದು. ಲೋಕ ಮೆಚ್ಚದ ಗುಣವನ್ನು ಕೆಲವು ಜನ ಗೊಣಗಾಡುತ್ತಾರೆ. ಆದರೆ ಗೊಣಗುವವರನ್ನು ಕಂಡರೆ ಜನರಿಗೆ ಜಿಗುಪ್ಸೆ. ಆದರೆ ಪ್ರಬಂಧಕಾರರು ಈ ಮುಖವನ್ನು ಮರೆ ಮಾಡುತ್ತಾರೆ. ಆ ಗೊಣಗುವಿಕೆಗೆ ಒಂದು ಸ್ಪಷ್ಟ ಅಭಿವ್ಯಕ್ತಿ ಕೊಡುತ್ತಾರೆ ಉದಾ : 'ಬಿಟ್ಟಿ ಓದೋ ಕನ್ನಡಿಗರ ಕಾಟ ಕಡು ಕಠಿಣ ಸಾರ್ ಅದಕ್ಕೆ ಈ ಪರದೆ ಹಾಕಿಕೊಂಡೆ.' ವೈದ್ಯರಿಗಿಂತ ರಿಪೇರಿಗಾರರು ಬೇಕೆ? ದೂರದಲ್ಲಿರುವುದನ್ನು ಕಾಣುವುದು ಈ ಕಣ್ಣಿಗೆ ಅಸಾಧ್ಯವಾದಾಗ ಚರ್ಮಚಕ್ಷುವಿಗೊಂದು ಗಾಜಿನ ಕಣ್ಣು ಕನ್ನಡಕ ಹಾಕಿ ರಿಪೇರಿ ಮಾಡುತ್ತಾರೆ ನೇತ್ರವೈದ್ಯರು. 'ಹಾಗೂ ನನ್ನಡಿಗೆಯ ದುಡಿಯುಂಟೇ ನಿಮ್ಮ ಕವಿತೆಗೆ' ಎಂಬ ಸಾಲುಗಳು. ಹೀಗೆ ಪ್ರಬಂಧಕಾರರ ಗಲಗು (ಲೇಖನಿ) ಅಲಗಿನಷ್ಟೇ ಹರಿತವಾಗಿದೆ, ಮತಿಸೂಕ್ಷ್ಮವಾಗಿದೆ, ಬರವಣಿಗೆಯಲ್ಲಿ ಚಾತುರ್ಯ ಎದ್ದು

ಕಾಣುತ್ತದೆ. ಘಟನೆಗಳನ್ನು ನಿದರ್ಶನಾರ್ಥವಾಗಿ ತಂದು ಪ್ರಬಂಧಕ್ಕೆ ಬಣ್ಣ ಕಟ್ಟುವ ಕಲೆಗಾರಿಕೆಯಿದೆ. ಲೇಖನಿ ಕತ್ತಿಗಿಂತ ಏಕೆ ಹರಿತ, ಎಷ್ಟರ ಮಟ್ಟಿಗೆ ಹರಿತ ಎಂಬುದನ್ನು ಮನಗಾಣಬಹುದಾಗಿದೆ.

ಆಯ್ದ ಪ್ರಬಂಧಗಳಲ್ಲಿ ಕೆಲವು ಒಮ್ಮೊಮ್ಮೆ ಹರಟೆಯ ಭಾವನೆಯನ್ನು ಮೂಡಿಸಿದರೂ ಅವು ಪೂರ್ಣವಾಗಿ ಹರಟೆಗಳಾಗದೆ ಹೆಚ್ಚು ಸಭ್ಯವಾಗಿ ಕ್ರಮಯುಕ್ತವಾದ ಭಾವನಿರೂಪಣೆ, ಔಚಿತ್ಯ ಮತ್ತು ಸಂಯಮ ಕಲೆಗಳಿಂದ ಗಂಭೀರ ಪ್ರಬಂಧಗಳಾಗಿ ರೂಪುಗೊಂಡಿವೆ. ಆದರೂ ಓದಿದಷ್ಟೂ ಮತ್ತೆ ಮತ್ತೆ ಓದಬೇಕು ಎನ್ನುವ ಭಾವನೆಗಳ ಆತ್ಮೀಯತೆಗೆ ತುಸು ದೂರವಾಗಿವೆ. ಅಂದ ಮಾತ್ರಕ್ಕೆ ಇದಮಿತ್ಥಂ ಆಗಲೀ, ನೀರಸತತ್ವ ಬೋಧನೆಯಾಗಲೀ, ಒಣ ತರ್ಕವಾಗಲೀ ವಿಷಯ ಪ್ರೌಢಮೆಯಾಗಲೀ ವ್ಯಕ್ತವಾಗದೆ ಸರಳತೆ ಆತ್ಮವಿನೋದಿಯಂತೆ ಪರಿಮಳದ ಕಂಪಿನ ಇಂಪಾದ ಅನುಭವವನ್ನು ತೆಳುವಾಗಿ ಹಿತವಾಗಿ ನೀಡುತ್ತಾ ಹೋಗುತ್ತವೆ. ಅನಾರೋಗ್ಯ ಭಾಗ್ಯ ಧಿಮಾಕಿನ ಚೀಲ, ಘಾಟಿ ಹುಡುಗರು ಪ್ರಬಂಧಗಳು-ಹಿಂದಿನ ಮತ್ತು ಇಂದಿನ ಸಮಾಜಗಳ ಚಿತ್ರಣವನ್ನು ಕೊಡುವುದರ ಜೊತೆಗೆ ಅವುಗಳ ಸಂಸ್ಕೃತಿಗಳ ವ್ಯತ್ಯಾಸ ಮತ್ತು ಅದರಿಂದಾಗುವ ಆಗುತ್ತಿರುವ ಮೌಲ್ಯಗಳ ಭಿನ್ನತೆ, ಅದು ಜೀವನದ ಮೇಲೆ ಬೀರುವ ಪರಿಣಾಮಗಳನ್ನು ಚುಚ್ಚುವಂತಾದರೂ ತಿಳಿ ಹಾಸ್ಯ ಲೇಪನದಿಂದ. ಆದಷ್ಟು ಸಾಂದ್ರತೆ ಮತ್ತು ಆರ್ದ್ರತೆಗಳಿಂದ ತಿಳಿಸುತ್ತಾರೆ. ಇದು ಪ್ರಬಂಧಕಾರರು ತನ್ನ ಆಶಯ, ತನ್ನ ಕಾಲದ ಬದುಕಿನ ಅದಮ್ಯ ಚೇತನ ಮತ್ತು ಜೀವಂತ ಸಂಸ್ಕೃತಿಯನ್ನು ಮತ್ತೊಂದು ಪೀಳಿಗೆಗೆ ಹಸ್ತಾಂತರಿಸುವ ಪ್ರಯತ್ನವನ್ನು ತಿಳಿಸುತ್ತದೆ ಹಾಗೂ ಅದರಲ್ಲಿಯು ಯಶಸ್ವಿಯೂ ಆಗಿದೆ ಎನ್ನಲಡ್ಡಿಯಿಲ್ಲ.

ಒಟ್ಟಾರೆ ಹೇಳುವುದಾದಲ್ಲಿ ಪ್ರಬಂಧಕಾರರ ಲೇಖನಿಯು ಸಮಾಜದ ಸಕಲ ಪಾರ್ಶ್ವಗಳನ್ನು ಅಭಿಯೋಗಿಸಿ ನಗೆ ನೋವುಗಳೆರಡನ್ನೂ ಅರಳಿಸಿ ಅವುಗಳ ಪತ್ರ ಪಟಲಗಳು ಒಂದರೊಳಗೊಂದು ಹೊಂದಿಕೊಂಡು ಲೇಖಕರ ಆಸೆ, ಆಕಾಂಕ್ಷೆ, ಆಶಯುಗಳು ಪ್ರಬಂಧರೂಪದಲ್ಲಿ ಕಲೆಗೊಂಡು ಹೇಳಬೇಕಾದುದನ್ನು ನಿರುದ್ವಿಗ್ನವಾಗಿ ಆದರೆ ಅಷ್ಟೇ ಸಾಮರಸ್ಯದ ಸಮಕಟ್ಟನಿಂದ ತಿಳಿಸಿವೆ. ಇದಕ್ಕೆ ಪ್ರಬಂಧಕಾರರ ಪ್ರತಿಭೆ ಚಾಲಕ ಶಕ್ತಿಯಾಗಿ ಕೆಲಸ ನಿರ್ವಹಿಸಿದೆ. ಆದ್ದರಿಂದ ಹಂಪನಾರವರ ಆಯ್ದ ಪ್ರಬಂಧಗಳು ಮೇಲ್ನೋಟಕ್ಕೆ ಗೋಚರಿಸದಂತಹ ಕೆಲವು ಇತಿಮಿತಿಗಳ ನಡುವೆಯೂ ಹೆಚ್ಚು ಸಹ್ಯ ಮತ್ತು ವಿಚಾರವಂತಿಕೆಯ ಭಾವೋಪಯೋಗಿಗಳೂ ಆಗಿವೆಯೆನ್ನಬಹುದು.

# ಸವ್ಯಸಾಚಿ ಪಂಪ

---

**ಸುಕನ್ಯಾ ಮಾರುತಿ**

ಸವ್ಯಸಾಚಿ ಪಂಪ ಕನ್ನಡದ ಆದಿಕವಿಯನ್ನು ಕುರಿತ ಕಾದಂಬರಿ. ಹಂಪನಾ ಅವರೇ ಹೇಳುವಂತೆ ಇದು ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆಯೇ ಬರೆದ ಕಾದಂಬರಿ. ೧೯೯೪ರಲ್ಲಿ ಇದರ ನಾಲ್ಕನೇ ಆವೃತ್ತಿ ಹೊರಬಂದಿದೆ. ಹತ್ತನೇ ಶತಮಾನದಲ್ಲಿ ಆಗಿಹೋದ ಮಹಾಕವಿಯೊಬ್ಬನ ಜೀವನವನ್ನು ಚಿತ್ರಿಸುವ ಐತಿಹಾಸಿಕ ಕಾದಂಬರಿ. ಶಿಲಾ ಶಾಸನಗಳು, ತಾಮ್ರ ಪತ್ರಗಳು, ಹಿಂದಿನ ಕವಿಗಳ ಹೇಳಿಕೆಗಳು ಮುಂತಾದ ಆಕರಗಳಿಂದ ದೊರೆತ ವಿವರಗಳನ್ನು ಒಟ್ಟು ಮಾಡಿ ಜೊತೆಗೆ ಕಲ್ಪನೆಯನ್ನೂ ಸೇರಿಸಿ, ಸ್ವತಃ ಕವಿಯೇ ಹೇಳಿಕೊಂಡ ವಿವರಗಳೊಂದಿಗೆ ಇಲ್ಲಿ ಪಂಪನ ವ್ಯಕ್ತಿತ್ವವನ್ನು ಕಡೆದು ನಿಲ್ಲಿಸಲಾಗಿದೆ.

ಪಂಪನ ಜನನದ ಪೂರ್ವದಲ್ಲಿ ಅವನ ಮನೆತನದ ವಿದ್ವತ್ಪೂರ್ಣ ವಾತಾವರಣ, ವೈದಿಕನಾದರೂ ಅವನ ಮುತ್ತಜ್ಜ ಅಭಿಮಾನ ಚಂದ್ರ ಅಹಿಂಸಾ ಧರ್ಮವನ್ನು ಮೆಚ್ಚಿಕೊಂಡದ್ದು, ಅದೇ ಅಭಿಮಾನವನ್ನು ಆತನ ಮಗ ಕೊಮರಯ್ಯ ಮುಂದುವರೆಸಿಕೊಂಡು ಹೋಗಿ ಆತನ ಮಗ ಭೀಮಪ ಜೈನ ಧರ್ಮ ಸ್ವೀಕಾರ ಮಾಡುವವರೆಗೂ ಸವಿಸ್ತಾರವಾಗಿ ವಿವರಿಸಿದ್ದಾರೆ. ಹಾಗೇ ಪಂಪನ ತಾಯಿಯ ತವರಿನ ವಿದ್ವತ್ಪೂರ್ಣ ವಾತಾವರಣ ಆಕೆಯ ತಂದೆ ಸಿಂಘಜೋಯಿಸ ಜಿನಧರ್ಮ ಸ್ವೀಕರಿಸಿದ್ದು, ಸ್ವತಃ ಪಂಪನ ತಾಯಿ ಅಬ್ಬಣಬ್ಬೆ ವಿದ್ಯಾ ಪಾರಂಗತಗಳಾಗಿದ್ದಳೆಂದು ಹೇಳುತ್ತಾರೆ. ಹೀಗೆ ಪಂಪನು ಹುಟ್ಟಿ ಬೆಳೆದ, ವಾತಾವರಣ ಅವನೊಬ್ಬ ಕವಿಯಾಗಲು ಮಾಡಿದ ಪೂರ್ವ ಸಿದ್ಧತೆಯಂತಿದೆ.

ಅರಿಕೇಸರಿಯೊಂದಿಗೆ ಪಂಪ ಬೋಧನದ ದೇವೇಂದ್ರ ಕೀರ್ತಿಗಳ ಗುರುಕುಲದಲ್ಲಿ ಸಕಲಶಾಸ್ತ್ರಗಳ ಅಭ್ಯಾಸದೊಂದಿಗೆ ಕ್ಷತ್ರಯೋಚಿತ ವಿದ್ಯೆಗಳನ್ನು ಕಲಿತು ಕಲಿಯಾಗಿ ರೂಪಗೊಳ್ಳುತ್ತಾನೆ. ಹೀಗಾಗಿ ಅವನು ಸವ್ಯಸಾಚಿ. ವೈದಿಕ ಧರ್ಮದ ಹಿನ್ನೆಲೆಯುಳ್ಳ ಜೈನ ಧರ್ಮದ ಪರಿಸರದಲ್ಲಿ ಬೆಳೆದದ್ದರಿಂದ ಧರ್ಮದ ಬಗ್ಗೆ ವಿಶಾಲ ಮನೋ ಭಾವವುಳ್ಳವ ನಾಗಿರುತ್ತಾನೆ. ಸಾತ್ವಿಕನೂ ಸ್ನೇಹಪರನೂ ಆದ ಪಂಪ ಲೌಕಿಕ ವೈಭೋಗ, ಪದವಿಗಳಿಗಿಂತ ಶಾಶ್ವತವಾದ ಸ್ನೇಹ ಶಾಂತಿಗಳನ್ನು ಬಯಸುವವನಾಗಿದ್ದ. ಹೀಗಾಗಿ ಚಕ್ರವರ್ತಿಗಳಿಂದ ಬಂದ ಆಸ್ಥಾನ ಕವಿಯಾಗುವ ಆಹ್ವಾನವನ್ನು ನಯವಾಗಿ ತಿರಸ್ಕರಿಸಿ ಸಾಮಂತನಾದ ಗೆಳೆಯ ಅರಿಕೇಸರಿಯಲ್ಲಿ ಸೇನಾನಾಯಕನಾಗಿ ನಿಲ್ಲುತ್ತಾನೆ. ಅನಾಯಾಸವಾಗಿ ಬಂದ ಕವಿ

ಚಕ್ರವರ್ತಿಯಾಗಬಹುದಾಗಿದ್ದ ಅವಕಾಶವನ್ನು ಗೆಳೆಯನಿಗಾಗಿ ಬಿಟ್ಟುಕೊಡುವಷ್ಟು ಸಂಸ್ಕಾರವಂತನಾಗಿದ್ದನೆಂದು ಉದಾತ್ತವಾಗಿ ಚಿತ್ರಿಸಿದ್ದಾರೆ.

ಇದು ಚಾರಿತ್ರಿಕ ಕಾದಂಬರಿಯಾದದ್ದರಿಂದ ಆಗಿನ ಕಾಲದ ಚಾರಿತ್ರಿಕ, ರಾಜಕೀಯ ವಿವರಗಳನ್ನು ಸ್ವಲ್ಪ ಹೆಚ್ಚೇ ಅನ್ನಿಸುವಷ್ಟು ನೀಡಿದ್ದಾರೆ. ಜೈನ ದರ್ಮದ ಒಳತಿರುಳನ್ನು ಅರಿತಿರುವವರೂ ಆ ಬಗ್ಗೆ ಒಲವಿರುವವರೂ ಆಗಿರುವುದರಿಂದ ಹಂಪನಾ ಇಲ್ಲಿ ಅವಕಾಶ ದೊರೆತಾಗಲೆಲ್ಲಾ ಜಿನಸೇನಾಚಾರ್ಯರು, ಗುಣಭದ್ರರು, ದೇವೇಂದ್ರ ಮುನಿಗಳಿಂದ ಧಾರಾಳವಾಗಿ ಧಾರ್ಮಿಕ-ವಿಷಯಗಳನ್ನು ವಿವರವಾಗಿ ಹೇಳಿಸುತ್ತಾರೆ, ಚರ್ಚಿಸುತ್ತಾರೆ. ಭೀಮಪನ ಜಿನಧರ್ಮದೀಕ್ಷಾ ಸಮಾರಂಭವನ್ನು ಭಾವುಕರಾಗಿ ವರ್ಣಿಸುತ್ತಾರೆ.

ಪಂಪನ ಕಾವ್ಯಗಳಿಂದಲೇ ತಿಳಿದು ಬಂದ ಆಗಿನಕಾಲದ ಮೌಲ್ಯಗಳನ್ನು ಸನ್ನಿವೇಶಕ್ಕೆ ತಕ್ಕಂತೆ ಅಳವಡಿಸಿದ್ದಾರೆ. ಗೊಜ್ಜಿಗ ಮತ್ತು ಅರಿಕೇಸರಿಯ ನಡುವೆ ನಡೆದ ಯುದ್ಧ ವರ್ಣನೆಗಳು ಪಂಪ ಭಾರತದ ಕೌರವ-ಪಾಂಡವರ ಯುದ್ಧ, ಯುದ್ಧಾನಂತರ ಸಂಜೆ ಸೈನಿಕರ ಪಾಳೆಯದಲ್ಲಿ ನಡೆದ ಚಟುವಟಿಕೆಗಳ ವರ್ಣನೆಗಳಿಂದ ಪ್ರಭಾವಿತವಾಗಿವೆ. ಅರಿಕೇಸರಿಯ ರಾಣಿ ಲೋಕಾಂಬಿಕೆ-ಪಂಪ ಪಗಡೆಯಾಡುವ ಸನ್ನಿವೇಶ ಕೂಡಾ ಪಂಪ ಭಾರತದ ಭಾನುಮತಿ-ಕರ್ಣರ ಲೆತ್ತದ ಪ್ರಸಂಗವನ್ನು ನೆನಪಿಗೆ ತರುತ್ತದೆ.

ಹಂಪನಾ ಅವರ ವರ್ಣನಾ ಕೌಶಲ್ಯ ವ್ಯಕ್ತವಾಗಿರುವುದು ಕಳ್ವಪ್ಪಿನ, ಬನವಾಸಿ, ಬೋಧನ ಗಳ ವರ್ಣನೆಯಲ್ಲಿ. ಪಂಪ ಬಾಲ್ಯದಲ್ಲಿ ಆನೆಯನ್ನು ಪಳಗಿಸಿದ್ದು, ಯೌವ್ವನದಲ್ಲಿ ಹುಲಿಯನ್ನು ಕೊಂದ ಸನ್ನಿವೇಶಗಳು ಹಂಪನಾ ಅವರ ಕಲ್ಪನೆಯ ನಿರ್ಮಿತಿಗಳು, ಅವನ ವೈವಾಹಿಕ ಜೀವನವನ್ನು ಕೂಡ ತುಂಬಾ ಶೃಂಗಾರಮಯವಾಗಿ ಚಿತ್ರಿಸಿದ್ದಾರೆ. ಜಕ್ಕಲೆ ಬಮ್ಮಲೆಯರ ಜೊತೆ ಪಂಪನ ಸರಸ, ಅವರೊಂದಿಗಿನ ಪ್ರವಾಸ, ವಿಹಾರಗಳನ್ನು ತನ್ಮಯರಾಗಿ ವರ್ಣಿಸಿದ್ದಾರೆ. ದಾಂಪತ್ಯ ಪ್ರಣಯವನ್ನು ಹಂಪನಾ ಇಲ್ಲಿ ದೈವೀಕರಿಸಿದ್ದಾರೆ. ಪಂಪ-ಚೇರಲಕ್ಷ್ಮಿಯರ ಭೇಟಿ, ಪಂಪ-ಲಚ್ಚಲದೇವಿಯರ ಸಂಬಂಧ, ಅರಿಕೇಸರಿ ಲಚ್ಚಲದೇವಿಯನ್ನು ಪಂಪನಿಗೆ ಕಾಣಿಕೆಯಾಗಿ ಕೊಡುವುದನ್ನು ಚಿತ್ರಿಸುವಾಗ ಹಂಪನಾ ಅವನ ರಸಜ್ಞತೆಯನ್ನು ಚಿತ್ರಿಸುವಲ್ಲಿ ತೋರಿದ ಸೂಕ್ಷ್ಮ ವಿಸ್ಮಯವನ್ನುಂಟುಮಾಡುವಂತಿದೆ. ಇದು ಪಂಪನ ರಸಿಕತೆಯ ಇನ್ನೊಂದು ಮಗ್ಗುಲಾಗಿದೆ. ತೆಳುವಾದ ಜವನಿಕೆಯ ಹಿಂದಿನ ಸ್ವಪ್ನಲೋಕದಂತೆ ಈ ಸನ್ನಿವೇಶವನ್ನು ನಿರ್ಮಿಸಿದ್ದಾರೆ.

ಒಟ್ಟಿನಲ್ಲಿ ಪಂಪ ಆದರ್ಶಮಗ, ಮೊಮ್ಮಗ, ಶಿಷ್ಯ, ಗೆಳೆಯ, ಬಂಧು, ಪತಿಯಾಗಿದ್ದನೆಂದು ಅವನ ವ್ಯಕ್ತಿತ್ವದ ಪರಿಪೂರ್ಣತೆಯನ್ನು ಬಿಡಿಸಿ ಇಟ್ಟಿದ್ದಾರೆ. ಹತ್ತನೇ ಶತಮಾನದ ವಸ್ತುವನ್ನು ಆಯ್ಕೆ ಮಾಡಿಕೊಂಡ ಕಾದಂಬರಿಕಾರರ ಒಮ್ಮೊಮ್ಮೆ ಭಾಷೆಯ ದೃಷ್ಟಿಯಿಂದ ಇಪ್ಪತ್ತನೇ ಶತಮಾನಕ್ಕೆ ಜಿಗಿದುಬಿಡುತ್ತಾರೆ. ಒಂದು ಕಡೆ ದೇವೇಂದ್ರ ಮುನಿಗಳ ಸಮ್ಮುಖದಲ್ಲಿ ಅರಸನಿಗೆ ಖಾವಂದರು ಎಂದು ಅನ್ನಿಸಿಬಿಡುತ್ತಾರೆ. ಹಂಪನಾ ಅವರ ಪ್ರಾಸಪ್ರಿಯತೆಯಿಂದಾಗಿ ಅಲ್ಲಲ್ಲಿ ಪಂಪ ಮಾಯವಾಗಿ ಹಂಪನಾ ಪ್ರತ್ಯಕ್ಷವಾಗಿ ಬಿಡುತ್ತಾರೆ. ಈ ಆವೃತ್ತಿಯಲ್ಲಿ ಮುದ್ರಾರಾಕ್ಷಸನ ಹಾವಳಿಯಂತೂ ಹೇಳತೀರದು. ಅಲ್ಲಲ್ಲಿ ಬರುವ ಇಂಥ ಸಣ್ಣ ಪುಟ್ಟ ದೋಷಗಳನ್ನು ಬಿಟ್ಟರೆ ಇದೊಂದು ಯಶಸ್ವೀ ಪ್ರಯತ್ನ. ಪಂಪನ ಸವ್ಯಸಾಚಿತನವನ್ನು ಜನ ಸಾಮಾನ್ಯರಿಗೆ ತಿಳಿಯುವಂತೆ ಮಾಡುವಲ್ಲಿ ಈ ಕೃತಿ ಸಹಕಾರಿಯಾಗಿದೆ.

# ಅತ್ತಿಮಬ್ಬೆ ಹಾಗೂ ನಾಗಶ್ರೀ

ಡಾ. ಬಾಳಣ್ಣ ಬಿ. ಶೀಗೀಹಳ್ಳಿ

ಡಾ. ಹಂಪನಾ ಅವರು ರಚಿಸಿರುವ ಅತ್ತಿಮಬ್ಬೆ ಮತ್ತು ನಾಗಶ್ರೀ ಎಂಬ ಎರಡೂ ಕೃತಿಗಳು ಜೈನ ಧಾರ್ಮಿಕ ಸಾಹಿತ್ಯದ ಇಬ್ಬರು ಪ್ರಮುಖ ವ್ಯಕ್ತಿಗಳನ್ನು ಪರಿಚಯಿಸುತ್ತವೆ. ಅತ್ತಿಮಬ್ಬೆ ಹತ್ತನೆಯ ಶತಮಾನದ ಕವಿ ರನ್ನನ ಅಜಿತನಾಥ ಪುರಾಣದಲ್ಲಿ ಚಿತ್ರಿತವಾಗಿರುವ ಮಹಿಳೆ. ನಾಗಶ್ರೀ ಇದಕ್ಕೂ ಮುಂಚಿನ ಪ್ರಾಚೀನ ಕನ್ನಡದ ಮೊದಲ ಗದ್ಯ ಗ್ರಂಥವಾದ ವಡ್ಡಾರಾಧನೆಯ ಸುಕುಮಾರ ಸ್ವಾಮಿ ಕಥೆಯ ಹಿಂದಿನ ಭವದ ಮಹಿಳೆ. ಈ ಎರಡೂ ಪಾತ್ರಗಳಲ್ಲಿ ಒಡೆದು ಕಾಣುವ ಅಂಶಗಳೆಂದರೆ ಇಬ್ಬರೂ ಜೈನ ಧರ್ಮಾಚರಣೆಗಳಿಗೆ ತಮ್ಮನ್ನು ಮುಡುಪಿಟ್ಟುಕೊಂಡವರು. ಆದರೆ ಅತ್ತಿಮಬ್ಬೆ ಮೂಲತಃ ಜೈನ ಮತಾವಲಂಬಿ, ನಾಗಶ್ರೀ ಮಾತ್ರ ಮೊದಲು ವೈದಿಕ ಮತಾವಲಂಬಿಯಾಗಿದ್ದು; ಪೂರ್ವ ಸಂಸ್ಕಾರ ಬಲದಿಂದ ಈಗ ಜೈನ ಮುನಿಗಳ ಪ್ರಭಾವನೆಗೆ ಒಳಗಾಗಿ ಆ ಧರ್ಮದ ಪಂಚಾಣುವ್ರತಗಳನ್ನು ಧಾರಣೆ ಮಾಡಿದವಳು. ಅತ್ತಿಮಬ್ಬೆ ನಾಗದೇವನ ಹೆಂಡತಿ. ನಾಗಶ್ರೀ ನಾಗಶರ್ಮನ ಮಗಳು. ಒಬ್ಬಳು ಜೈನಧರ್ಮವನ್ನು ಕನ್ನಡ ನಾಡಿನ ತುಂಬೆಲ್ಲ ತನ್ನ ಕಾರ್ಯಾಚರಣೆಯ ಮೂಲಕ ಪ್ರಚುರಪಡಿಸಿದವಳು. ಇನ್ನೊಬ್ಬಳು ವೈಯಕ್ತಿಕ ನೆಲೆಯಲ್ಲಿ ಆ ಧರ್ಮವನ್ನು ಬದುಕಿದವಳು. ಅತ್ತಿಮಬ್ಬೆ ವ್ಯಕ್ತಿತ್ವ ಚಿತ್ರಣಕ್ಕೆ ಮೀಸಲಾಗಿರುವ ಪುಸ್ತಿಕೆ. ನಾಗಶ್ರೀ ಕಾದಂಬರಿ. ಈ ಹಿನ್ನೆಲೆಯೊಂದಿಗೆ ಪ್ರಸ್ತುತ ಕೃತಿಗಳನ್ನು ಸಮೀಕ್ಷಿಸುವದು ಸೂಕ್ತ.

೧. ಅತ್ತಿಮಬ್ಬೆ

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಹತ್ತನೆಯ ಶತಮಾನವು ಹಲವು ವೈಶಿಷ್ಟ್ಯಗಳ ಆಗರವಾಗಿರುವಂತೆ ಪರಮೋಚ್ಚ ಆದರ್ಶಗಳ ನೆಲೆವೀಡು. ಸಾಹಿತ್ಯ, ಸಂಸ್ಕೃತಿ, ರಾಜಕೀಯ, ಧರ್ಮ, ಕಲೆ-ಹೀಗೆ ಹಲವು ರಂಗಗಳಲ್ಲಿ ಶ್ರೇಷ್ಠ ಕೊಡುಗೆಗಳನ್ನಿತ್ತ ಈ ಕಾಲಘಟ್ಟ, ಉದಾತ್ತಚರಿತ್ರೆಯ ನಿತ್ಯೋತ್ಸವಕ್ಕೆ ಆಡುಂಬೊಲವಾಗಿದೆ. ರಾಷ್ಟ್ರಕೂಟ, ಚಾಳುಕ್ಯ, ಗಂಗ-ಮೊದಲಾದ ರಾಜಮನೆತನಗಳು; ಇಮ್ಮಡಿ ಬೂತುಗ, ಮಾರಸಿಂಹ, ಚಾವುಂಡರಾಯ, ಮುಮ್ಮಡಿಕೃಷ್ಣ, ತೈಲಪ, ಸತ್ಯಾಶ್ರಯ ಇರಿವಬೆಡಂಗರಂತಹ ಅರಸರು; ಪಂಪ, ರನ್ನ, ಪೊನ್ನ, ೧ನೇ ನಾಗವರ್ಮ, ಪುಷ್ಪದಂತರಂತಹ ಕವಿಗಳು; ಆದಿಪುರಾಣ, ವಿಕ್ರಮಾರ್ಜುನ ವಿಜಯ, ಚಾವುಂಡರಾಯ ಪುರಾಣ, ಶಾಂತಿಪುರಾಣ, ಸಾಹಸ ಭೀಮ ವಿಜಯ ಮುಂತಾದ ಕೃತಿಗಳು,

ಸರ್ವಧರ್ಮ ಸಮನ್ವಯ ದೃಷ್ಟಿ ಉಳ್ಳ ವಾತಾವರಣ; ಚಲ, ನನ್ನಿ, ತ್ಯಾಗ, ಗಂಡುಗಾರಿಕೆ ಚಾಪವಿದ್ಯಾಬಲ, ಸಾಹಸ, ಧರ್ಮಾನುರಾಗ, ಸಮಾಧಿಮರಣ, ವೀರಮರಣ, ಬಲಿದಾನ ಮೂಲಕ ಆತ್ಮಾನುಸಂಧಾನ, ಆದರ್ಶಾನುಸಂಧಾನ, ಮೌಲ್ಯಾನುಸಂಧಾನಗಳಿಗೆ ತಮ್ಮನ್ನು ಸಮರ್ಪಿಸಿ ಕೊಂಡ ಜೈವಿಕ ಒತ್ತಾಸೆಯೇ ಫಲಬಿಟ್ಟಂತೆ ಮೂಡಿಬಂದವಳು ಅತ್ತಿಮಬ್ಬೆ.

ಇವಳ ಉದಾತ್ತ ಚಿಂತೆಗೆ ಮಾರುಹೋದ ಕವಿರನ್ನ ತನ್ನ ಅಜಿತಪುರಾಣದಲ್ಲಿ ಅದನ್ನು ಚಿತ್ರಿಸದೇ ಹೋಗಿದ್ದರೆ ಪುರುಷಪ್ರಧಾನ ಸಮಾಜ ವ್ಯವಸ್ಥೆಯ ಇತಿಹಾಸದಲ್ಲಿ ಈಕೆ-ಕಣ್ಮರೆಯಾಗಿ ಹೋಗುತ್ತಿದ್ದಳೇನೋ. ಆದರೆ ಅವಳ ಆಶ್ರಯದಲ್ಲಿ ನೆಲೆನಿಂತು ಕವಿರನ್ನ ಅವಳನ್ನು ತನ್ನ ಪುರಾಣಕಾವ್ಯ ಸಂದರ್ಭದಲ್ಲಿಟ್ಟು ಅಜರಾಮರಗೊಳಿಸಿದ. ಇಂದು ಕನ್ನಡ ವಿಮರ್ಶಾಕ್ಷೇತ್ರ ವನ್ನು ನಿಧಾನವಾಗಿಯಾದರೂ ಪ್ರವೇಶಿಸುತ್ತಿರುವ ಅಂತರ್‌ಶಿಸ್ತೀಯ ಅಧ್ಯಯನದ ಪರಿಣಾಮವಾಗಿ ಇಡೀ ಕನ್ನಡ ಸಾಹಿತ್ಯ ತನ್ನನ್ನು ಪುನರ್ ಮೌಲ್ಯೀಕರಣ ಪ್ರಕ್ರಿಯೆಗೆ ಒಡ್ಡಿಕೊಳ್ಳುವ ಸ್ಥಿತಿ ತಲೆದೋರಿದೆ. ಈವರೆಗಿನ ವಿಮರ್ಶಾಕ್ಷೇತ್ರದ ಗ್ರಹಿಕೆಗಳು ಈಗ ಹೊಸಸವಾಲನ್ನು ಎದುರಿಸುವಂತಾಗಿದೆ. ಇದರಿಂದಾಗಿ ಅತ್ತಿಮಬ್ಬೆಯೂ ಈಗ ಹೊಸ ಹುಡುಕಾಟದ ವಸ್ತುವಾಗಿದ್ದಾಳೆ; ಅವಳನ್ನು ಸ್ತ್ರೀವಾದಿ ಚಿಂತನೆಯ ನೆಲೆಯಲ್ಲಿಟ್ಟು ನೋಡುವ ಪ್ರಯತ್ನಗಳೂ ನಡೆದಿವೆ.

ಇಂಥ ಹೊಸ ಚಿಂತನೆಯ ಘಟ್ಟದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕನ್ನಡದ ಸಾಮಾನ್ಯ ಓದುಗರನ್ನು ಗಮನದಲ್ಲಿಟ್ಟುಕೊಂಡು ಏಕಕಾಲಕ್ಕೆ ಪರಿಚಯಾತ್ಮಕವೂ, ಚಿಂತನಾತ್ಮಕವೂ ಆಗಿರುವ ಪುಸ್ತಿಕೆಗಳನ್ನು ಪ್ರಕಟಿಸುವ ಇರಾದೆಯಿಂದ ಸಾಮಾಜಿಕ ಚಿಂತನಮಾಲೆ ಯೆಂಬ ಯೋಜನೆಯೊಂದನ್ನು ರೂಪಿಸಿಕೊಂಡು ಕಾರ್ಯಗತಗೊಳಿಸಿದುದರ ಫಲಿತರೂಪ, ಡಾ. ಹಂಪನಾ ಅವರ ಈ ಪುಸ್ತಿಕೆ (ಪುಟ ೪೭, ಬೆಲೆ ಎರಡು ರೂಪಾಯಿ. ಆಕಾರ : ಕ್ರೌನ್ ಅಷ್ಟದಳ) ಇದರಲ್ಲಿ ಹಿನ್ನೆಲೆ, ಪ್ರವೇಶ, ಅನಾವರಣ, ಅಮೃತಪುತ್ಥಲಿ ಎಂಬ ನಾಲ್ಕು ಅಧ್ಯಾಯಗಳನ್ನು ಕಲ್ಪಿಸಿಕೊಳ್ಳಲಾಗಿದ್ದು, ಜನಸಾಮಾನ್ಯರಿಗೂ ಬೋಧೆಯಾಗುವಂತೆ ಸರಳ ನಿರೂಪಣೆಯಿದೆ.

ಚರಿತ್ರ ಪುರುಷರ ಕಾರ್ಯಚಟುವಟಿಕೆಗಳು ಇದ್ದಕ್ಕಿದ್ದಂತೆ ಸಂಭವಿಸುವುದಿಲ್ಲ, ಅದಕ್ಕೊಂದು ಚಾರಿತ್ರಿಕ ಹಿನ್ನೆಲೆ ಇದ್ದೇ ಇರುತ್ತದೆ ಎಂಬ ಅಭಿಪ್ರಾಯವನ್ನು ಒಪ್ಪುವುದಾದಲ್ಲಿ ಈ ಹಿನ್ನೆಲೆಯನ್ನು ಅರ್ಥಮಾಡಿಕೊಂಡಾಗ ಮಾತ್ರ ಆಯಾ ಕಾಲಘಟ್ಟದ ಚಾರಿತ್ರಿಕ ವ್ಯಕ್ತಿಗಳೊಂದಿಗೆ ಹೆಚ್ಚು ಸಮರ್ಥವಾಗಿ ಮುಖಾಮುಖಿಯಾಗಲು ಸಾಧ್ಯವಾಗುತ್ತದೆ. ಈ ತಿಳಿವಳಿಕೆಯಿಂದ ಪ್ರೇರಿತವಾಗಿರುವ ಈ ಪುಸ್ತಿಕೆಯ ಮೊದಲ ಅಧ್ಯಾಯ 'ಹಿನ್ನೆಲೆ' ಎಂಬುದು ಅತ್ತಿಮಬ್ಬೆಯ ವ್ಯಕ್ತಿತ್ವ ವಿಕಸನಕ್ಕೆ ಬಳುವಳಿಯಾಗಿ ಬಂದ ಚಾರಿತ್ರಿಕ ಹಿನ್ನೆಲೆಯನ್ನು ತಕ್ಕಮಟ್ಟಿಗೆ ಸರಿಯಾಗಿಯೇ ಒದಗಿಸಿದೆ. ಸಾಹಿತ್ಯ, ಸಂಸ್ಕೃತಿ, ರಾಜಕೀಯ, ಕಲೆ, ಧರ್ಮ, ಸ್ತ್ರೀ ಜಾಗೃತಿ-ಇಂಥ ಅಂದಿನ ಒಟ್ಟು ಸಾಮಾಜಿಕ ಅರಿವು ಅತ್ತಿಮಬ್ಬೆಯ ವ್ಯಕ್ತಿತ್ವ ಸಂಪುಷ್ಟಗೊಳ್ಳುವುದಕ್ಕೆ ಹೇಗೆ ಪೋಷಕಾಂಶವಾಯಿತೆಂಬುದನ್ನು ಡಾ. ಹಂಪನಾ ಸಮರ್ಥವಾಗಿ ತೋರಿಸಿ ಕೊಟ್ಟಿದ್ದಾರೆ.

ಇಷ್ಟು ಹಲವು ರಾಜಮನೆತನಗಳ ರಾಜಕೀಯ ವಿಪ್ಲವದ ಮಧ್ಯೆಯೂ ಜೈನ ಪರಂಪರೆ ಗಟ್ಟಿಗೊಳ್ಳುತ್ತ ಬಂದು ಪಶ್ಚಿಮ ಚಾಳುಕ್ಯರ ದೊರೆ ಇಮ್ಮಡಿ ತೈಲಪನ ಕಾಲದಲ್ಲಿ ಅದಕ್ಕೆ ಇನ್ನೂ ಹೆಚ್ಚಿನ ಬಲ ಪ್ರಾಪ್ತವಾಯಿತು. ಈ ಅರಸನ ಎಲ್ಲ ಯುದ್ಧಗಳಲ್ಲೂ, ರಾಜ್ಯದ ಆಡಳಿತ ನಿರ್ವಹಣೆಯಲ್ಲೂ ನೆರವಾದ ಪ್ರಮುಖರೆಲ್ಲ ಎರಡು ದೊಡ್ಡ ಜೈನ ಕುಟುಂಬದವರು. ಅವರಲ್ಲಿ ಅತ್ಯಂತ ಪ್ರಮುಖರೆಂದರೆ ಮಲ್ಲಪಯ್ಯ, ಪುನ್ನಮಯ್ಯ, ಗುಂಡಮಯ್ಯ, ಆಹವಮಲ್ಲ, ಧಲ್ಲಪಯ್ಯ, ನಾಗದೇವ, ಅಣ್ಣಿಗದೇವ. ಇವರೆಲ್ಲರೂ ಅತ್ತಿಮಬ್ಬೆಯ ಬಳಗದ ಒಂದೇ ಬಳ್ಳಿಯ ಕುಡಿಗಳು-ಎಂದು ವಿವರಿಸುವ ಹಂಪನಾ ತಮ್ಮ ಈ ಅಭಿಪ್ರಾಯವನ್ನು ಈ ಪುಸ್ತಿಕೆಯ ಪ್ರವೇಶ ಎಂಬ ಎರಡನೆಯ ಅಧ್ಯಾಯದಲ್ಲಿ ಮನಮುಟ್ಟುವಂತೆ ಪ್ರತಿಪಾದಿಸಿದ್ದಾರೆ. ಅತ್ತಿಮಬ್ಬೆ ಗುಂಡಮಬ್ಬೆ, ಅವರ ಪತಿ ನಾಗದೇವ, ಮಗ ಅಣ್ಣಿಗದೇವ ಇವರ ಮೇಲೆ ಒಂದು ಶ್ರೀಮಂತ ಸಾಂಸ್ಕೃತಿಕ, ಧಾರ್ಮಿಕ, ವೀರ ಪರಂಪರೆಯ ಪ್ರಭಾವವನ್ನು ಪರಿಶೀಲಿಸುತ್ತ ಹೋಗುವುದು ಸರಿಯಾಗಿಯೇ ಇದೆ.

ಕೊನೆಯ ಎರಡು ಅಧ್ಯಾಯಗಳು ಅತ್ತಿಮಬ್ಬೆಯ ಬಾಳಿನ ಉತ್ತರಾರ್ಧದ ಚಿತ್ರಣವನ್ನು ನೀಡುತ್ತವೆ. ಪತಿ ನಾಗಮಯ್ಯನ ವೀರ ಮರಣ ಅವಳ ಬದುಕಿನಲ್ಲಿ ಬಹುದೊಡ್ಡ ಪಾತ್ರವನ್ನಾಡಿತು. ಬಿಳಿ ಅರಳೆಯಂತೆ, ಗಂಗಾ ಜಲದಂತೆ, ಅಜಿತಸೇನ ಮುನಿಪತಿಯ ಗುಣಾವಳಿಯಂತೆ, ಪವಿತ್ರ ಕೊಪಣಾಚಳದಂತೆ ಸತ್ಯ-ಸದಾಚಾರ-ಶುಚಿಭೂರ್ತ-ಗುಣ ಸಂಪನ್ನೆಯಾಗಿದ್ದ ಈಕೆಯ ವ್ಯಕ್ತಿತ್ವಕ್ಕೆ ಹೇಗೆ ಒಂದು ವಿಶಿಷ್ಟತೆ ಪ್ರಾಪ್ತವಾಗಿದೆ ಎಂಬುದನ್ನು ಲೇಖಕರು ಪ್ರತಿಪಾದಿಸುವ ರೀತಿ ಇನ್ನೂ ಹೆಚ್ಚಿನ ವಿಶ್ಲೇಷಣೆಗೆ ಸಹಾಯಕವಾಗುವಂತಿದೆ. ಅವಳು ಜಿನಭಕ್ತೆ, ಜಿನಶಾಸನ ದೀಪಿಕೆ, ಗುಣದಂಕಕಾರ್ತಿ, ಬುಧಜನವಂದಿತೆ, ಕವಿವರ ಕಾಮಧೇನು, ದಾನ ಚಿಂತಾಮಣಿ, ಆಸನ್ನಭವ್ಯೆ ಮುಂತಾದ ಗುಣ ಗೌರವಕ್ಕೆ ಯೋಗ್ಯಳೆನಿಸಿದ್ದುದರ ಜೊತೆಗೆ, ಸಾವಿರದ ಐನೂರಾ ಒಂದು ಜಿನಾಲಯಗಳು, ಅಷ್ಟೇ ಸಂಖ್ಯೆಯ ಜಿನಬಿಂಬಗಳು, ಪೊನ್ನನ ಶಾಂತಿಪುರಾಣವನ್ನು ಸಾವಿರ ಪ್ರತಿ ಮಾಡಿಸಿದ್ದು, ರನ್ನ ಮಹಾಕವಿಗೆ ಆಶ್ರಯ ನೀಡಿದ್ದು, ಕಾಲ್ನಡಿಗೆಯಲ್ಲಿ ಹೋಗಿ ಶ್ರವಣಬೆಳುಗೊಳದ ಗೊಮ್ಮಟ ದರ್ಶನ-ಇವೆಲ್ಲ ಕನ್ನಡ ನಾಡಿನ ಚರಿತ್ರೆಗೆ ಅತ್ತಿಮಬ್ಬೆ ನೀಡಿದ ಕೊಡುಗೆಗಳೇ. ಈವರೆಗಿನ ಒಂದು ಸಾವಿರ ವರುಷದ ಕನ್ನಡನಾಡಿನ ಇತಿಹಾಸದಲ್ಲಿ ಏಕಕಾಲಕ್ಕೆ ಇಷ್ಟೊಂದು ಮಹಾನ್ ಕಾರ್ಯಗಳನ್ನು ಸಮರ್ಪಕವಾಗಿ ಕಾರ್ಯಗತಗೊಳಿಸಿದ ಮಹಿಳೆ ಮತ್ತೊಬ್ಬಳಿಲ್ಲ. ಹೀಗಾಗಿ ಪ್ರಸ್ತುತ ಎಲ್ಲ ಕಾರ್ಯಗಳಿಗೂ ಅವಳೇ ಮೊದಲಿಗಳೂ ಅದ್ವಿತೀಯಳೂ ಎಂಬ ಗೌರವಕ್ಕೆ ಪಾತ್ರಳಾಗಿದ್ದಾಳೆ.

ಇಂಥ 'ಹಿಡಿದರೆ ಹಿಡಿತುಂಬ ಬಿಟ್ಟರೆ ಮನೆತುಂಬ' ಎಂಬಂತಹ ವ್ಯಕ್ತಿತ್ವವುಳ್ಳ ಚಾರಿತ್ರಿಕ ಮಹಿಳೆಯನ್ನು ಸಾಮಾನ್ಯರಿಗೂ ಅರ್ಥವಾಗುವಂತೆ-ಚಿತ್ರಿಸಿರುವ ಲೇಖಕರ ನೈಪುಣ್ಯ ಹಾಗೂ ಔಚಿತ್ಯ ಪ್ರಜ್ಞೆಗಳೆರಡನ್ನೂ ಈ ಪುಟ್ಟ ಪುಸ್ತಿಕೆ-ನಮಗೆ ಪರಿಚಯಿಸುತ್ತದೆ.

೨. ನಾಗಶ್ರೀ

ಈಗಾಗಲೇ ನಾಲ್ಕು ಮುದ್ರಣಗಳನ್ನು ಕಂಡಿರುವ ಈ ಪುಸ್ತಕ (ಪುಟ, ೧೪೩ ಬೆಲೆ ೨೫ರೂ ಆಕಾರ : ಕ್ರೌನ ಅಷ್ಟದಳ) ಗದುಗಿನ ವಿದ್ಯಾನಿಧಿ ಪ್ರಕಾಶನದಿಂದ ಪ್ರಕಟಗೊಂಡಿದೆ. ಪ್ರಕಾಶನ

ಸಂಸ್ಥೆಗಳ ಬದಲಾವಣೆಯನ್ನು ಬಿಟ್ಟರೆ ಈ ನಾಲ್ಕನೆಯ ಮುದ್ರಣದಲ್ಲಿಯೂ ಯಾವ ಬದಲಾವಣೆಯಿಲ್ಲ. ಪ್ರಾಚೀನ ಕನ್ನಡದ ಗದ್ಯ ಗ್ರಂಥವಾದ ಭ್ರಾಜಿಷ್ಣುವಿನ ಆರಾಧನಾ ಕರ್ನಾಟ ಟೀಕಾ ಎಂಬ ಹೆಸರಿನ ಆತನ ಹತ್ತೊಂಬತ್ತು ಕಥೆಗಳ ಕಥಾಗುಚ್ಛ 'ವಡ್ಡಾರಾಧನೆ.' ಈ ಕೃತಿಯ ಮೊದಲ ಕಥೆ 'ಸುಕುಮಾರ ಸ್ವಾಮಿ' ಎಂಬುದು. ವಸ್ತು, ಭಾಷೆ, ಕಥಾತಂತ್ರ, ಸನ್ನಿವೇಶಗಳ ಮುಖಾಮುಖಿ, ಒಂದು ಸಾಮಾಜಿಕ ಸಂದರ್ಭದ ವರ್ಣಮಯಜೀವನ ವಿಧಾನ, ಕಥಾಂತ್ಯದಲ್ಲಿ ಬರುವ ವಿಶೇಷ ರೀತಿಯ ಪರಿಸಮಾಪ್ತಿ, ಭೋಗ ಲೋಲುಪತೆಯ ಗರ್ಭದಲ್ಲೇ ಸಂಭವಿಸುವ ತ್ಯಾಗ-ಇವೆಲ್ಲವುಗಳಿಂದಾಗಿ ವಡ್ಡಾರಾಧನೆಗೆ ಅಪರೂಪದ ಆಕರ್ಷಣೆ ಪ್ರಾಪ್ತವಾಗಿದೆ. ಅದರಲ್ಲೂ ಸುಕುಮಾರ ಸ್ವಾಮಿಯ ಕಥೆ ಸಾಹಿತ್ಯವಲಯದಲ್ಲಿ ಸಾಕಷ್ಟು ಜನಜನಿತವಾಗಿರುವಂತಹದು. ಇಂಥ ಕಥೆಯನ್ನು ಡಾ. ಹಂಪನಾ ಅವರು ಕಾದಂಬರಿ ರೂಪದಲ್ಲಿ ಕೊಡಲು ಪ್ರಯತ್ನಿಸಿದ್ದಾರೆ. ನಾಗಶ್ರೀ ಸುಕುಮಾರ ಸ್ವಾಮಿಯ ಭವಾವಳಿಯಲ್ಲಿ ಬರುವ ಒಂದು ಪಾತ್ರವಾದರೂ ಅವಳ ಹೆಸರೇ ಕಾದಂಬರಿಗೆ ಶೀರ್ಷಿಕೆಯಾಗಿರುವುದನ್ನು ನೋಡಿದರೆ ಲೇಖಕರ ಮನಸ್ಸಿನಲ್ಲಿ ಸುಕುಮಾರ ಸ್ವಾಮಿಯ ಕತೆಯನ್ನು ನಾಗಶ್ರೀ ಕಾದಂಬರಿಯಾಗಿ ಪರಿವರ್ತಿಸುವ ಉದ್ದೇಶವಿದ್ದಂತೆ ತೋರುತ್ತದೆ. ಆದರೆ ಕಾದಂಬರಿಯಲ್ಲಿ ಈ ಉದ್ದೇಶ ಕೈಗೂಡಿದಂತೆ ಕಾಣುವುದಿಲ್ಲ. ಇಡೀ ಕಥೆಯನ್ನು ಪ್ರಮುಖ ಸನ್ನಿವೇಶಗಳಲ್ಲಿ ಸಂದುಗಳಲ್ಲಿ ಮುರಿದು ಅವುಗಳಿಗೆ ಮಂತ್ರಿಯ ಮಕ್ಕಳು, ವಿದ್ಯಾಭ್ಯಾಸ ಮುಗಿಯಿತು, ಇದುವೇ ಕರ್ಮದ ಫಲ-ಮೊದಲಾದ ಹತ್ತು ತಲೆಕಟ್ಟುಗಳನ್ನು ಕಲ್ಪಿಸಿ ಕಥೆಯನ್ನು ನಿರೂಪಿಸಿರುವುದು ಸಾಮಾನ್ಯ ಓದುಗರ ದೃಷ್ಟಿಯಿಂದ ಸಮರ್ಪಕವಾಗಿದೆ. ಪ್ರಾಚೀನ ಕನ್ನಡದ ಒಂದು ಸಂಕೀರ್ಣಕಥೆಯನ್ನು ಹೀಗೆ ಸರ್ವೇಸಾಮಾನ್ಯರಿಗೂ ಸಂವಹನಗೊಳ್ಳುವಂತೆ ಸಂಯೋಜಿಸಿದುದರಲ್ಲಿಯೇ ಈ ಕಾದಂಬರಿಯ ಹೆಚ್ಚುಗಾರಿಕೆಯಿದೆ. ಆದರೆ ನಾಗಶ್ರೀಯನ್ನು ಓದಿದಾಗ ಸುಕುಮಾರ ಸ್ವಾಮಿ ಕಥೆಯ ಹೊಸಗನ್ನಡ ರೂಪವನ್ನು ಓದಿದ ಅನುಭವವಾಗುತ್ತದೆಯೇ ವಿನಃ ಅದು ಕಾದಂಬರಿಯಾಗಿ ಸಂವಹನಗೊಳ್ಳುವುದಿಲ್ಲ.

ಒಂದು ಒಳ್ಳೆಯ ಕಥೆ ಕೈಯೊಳಗಿದ್ದೂ ಬಹುಶಃ ಹೀಗಾಗಲು ಕಾರಣ, ಮೂಲದ ಕಥಾ ಶಿಲ್ಪವನ್ನು ಲೇಖಕರು ಕಾದಂಬರಿಯ ಸಂವಿಧಾನಕ್ಕೆ ಸಾವಯವಗೊಳಿಸುವಲ್ಲಿ ಸೋಲುತ್ತಾರೆ. ಸಂವಾದ ಕೇಂದ್ರಿತವಾದ ವಡ್ಡಾರಾಧನೆಯ ಭಾಷೆ ವಾಕ್ಯರಚನಾ ವಿಧಾನವನ್ನು ಕಾದಂಬರಿಯಲ್ಲೂ ಲೇಖಕರು ಅನುಸರಿಸಿಕೊಂಡು ಹೋಗುವುದರಿಂದ ಕಥೆಯ ಗತ್ತಿಗನುಗುಣವಾಗಿ ಭಾಷೆ ಹೆಜ್ಜೆಹಾಕುವುದಿಲ್ಲ. ಭಾಷೆಯ ಬಳಕೆಯನ್ನು ಒಂದು ತಂತ್ರ ಎಂದೊಪ್ಪುವದಾದರೆ, ಅಂಥ ತಂತ್ರದ ಸೋಲಿನಿಂದಾಗಿಯೂ ಒಂದು ಕೃತಿಯ ಸಫಲತೆ ಹೇಗೆ ಮುಕ್ಕಾಗುತ್ತದೆ ಎಂಬುದಕ್ಕೆ ಡಾ. ಹಂಪನಾ ಅವರ ಕಾದಂಬರಿ ಒಂದು ಮಾದರಿಯಾಗಬಲ್ಲುದು.

ಒಂದೇ ವೇಳೆ ನಾಗಶ್ರೀ ಪಾತ್ರವನ್ನು ಕಾದಂಬರಿಯ ಕೇಂದ್ರ ಪ್ರಜ್ಞೆ ಮಾಡಿಕೊಂಡು ಅವಳ ಮೂಲಕ ಕಥೆ ನಿರೂಪಿತವಾಗಿದ್ದರೆ ಕಾದಂಬರಿಯ ಶೀರ್ಷಿಕೆಗೂ ಒಂದು ಅರ್ಥವಂತಿಕೆ ಪ್ರಾಪ್ತವಾಗಿ, ಒಂದು ಒಳ್ಳೆಯ ಕಾದಂಬರಿ ರೂಪುಗೊಳ್ಳಬಹುದಿತ್ತೇನೋ.

# ನೆನಪಿನಂಗಳದಲ್ಲಿ ಮಾಸ್ತಿ

ಡಾ. ವೀರಣ್ಣ ರಾಜೂರ

ಡಾ. ಹಂಪ. ನಾಗರಾಜಯ್ಯ ಅವರು ಸವ್ಯಸಾಚಿ ಬರಹಗಾರರು. ಅವರು ಕೃಷಿ ಮಾಡದ ಸಾಹಿತ್ಯಕ್ಷೇತ್ರವಿಲ್ಲ. ಸೃಜನ-ಸೃಜನೇತರ ಎರಡರಲ್ಲೂ ಸಮಾನ ಪ್ರಭುತ್ವ, ಪ್ರತಿಭೆಗಳನ್ನು ಪ್ರಕಟಿಸಿದ ಅಪೂರ್ವತೆ ಅವರದು. ಪ್ರಥಮ ಶ್ರೇಣಿಯ ಪ್ರಾಧ್ಯಾಪಕರಾಗಿ, ಉತ್ತಮ ಸಂಘಟಕರಾಗಿ, ಆತ್ಮೀಯ ಸಹೃದಯ ಸ್ನೇಹಿತರಾಗಿ, ಮಾನವೀಯ ಮೌಲ್ಯಗಳ ಆರಾಧಕರಾಗಿ ಅವರು ತಮ್ಮ ಮಾದರಿಯ ಸುಸಂಸ್ಕೃತ ಶ್ರೀಮಂತ ವ್ಯಕ್ತಿತ್ವವನ್ನು ಮೆರೆದಿದ್ದಾರೆ. ಈ ವ್ಯಕ್ತಿತ್ವದ ಅನನ್ಯ ಅಭಿವ್ಯಕ್ತಿಗಳಾಗಿ ಅವರ ಎಲ್ಲ ಕೃತಿಗಳು ಮೂಡಿಬಂದಿವೆ.

'ನೆನಪಿನಂಗಳದಲ್ಲಿ ಮಾಸ್ತಿ' ಹಂಪನಾ ಅವರ ಹೃದಯಾಂತರಾಳದ ಮಧುರ ನೆನಪಿನ ಗಣಿಯಿಂದ ತೆಗೆದು ಜೋಡಿಸಿದ ಆಣಿಮುತ್ತುಗಳ ಸುಂದರ ರತ್ನಹಾರ. ಕನ್ನಡದ ಆಸ್ತಿ ಎಂಬ ಅನ್ವರ್ಥಕ ಹೆಸರನ್ನು ಪಡೆದ ಮಾಸ್ತಿ ಅವರ ಸಂಪರ್ಕ ಸಹವಾಸ, ಅವರ ಸಾಹಿತ್ಯದ ಗಂಭೀರ ಅಧ್ಯಯನ, ಅವರ ವಿಧಾಯಕ ಕಾರ್ಯಚಟುವಟಿಕೆಗಳ ಸೂಕ್ಷ್ಮ ನಿರೀಕ್ಷಣೆ, ಅವರ ಹೃದಯ ಶ್ರೀಮಂತಿಕೆ, ಆತ್ಮೀಯತೆ, ಸ್ನೇಹಪರತೆ, ಸಹಕಾರ ಮನೋಭಾವ, ವ್ಯಕ್ತಿನಿಷ್ಠ ಗುಣ-ದೋಷ-ದೌರ್ಬಲ್ಯಗಳ ನಿಷ್ಕರ್ಷೆಯ ಮೂಲಕ-ತಾವು ಕಂಡುಕೊಂಡ ಆ ವಿರಾಟ್ ವ್ಯಕ್ತಿತ್ವದ ನೈಜ ದರ್ಶನವನ್ನು ಕರಿಯನ್ನು ಕನ್ನಡಿಯಲ್ಲಿ ಅಡಕಗೊಳಿಸುವಂತೆ ಈ ಚಿಕ್ಕಕೃತಿಯಲ್ಲಿ ಹಂಪನಾ ಅವರು ತಮ್ಮ ಪ್ರಾಸಾದಿಕ ಆತ್ಮೀಯ ಸುಂದರ ಶೈಲಿಯಲ್ಲಿ ಹಿಡಿದಿಟ್ಟು, ತಮ್ಮ ಪ್ರೀತಿ-ವಿಶ್ವಾಸ ಗೌರವಗಳನ್ನು ವಿನೀತ ಭಾವದಿಂದ ವಿನಮ್ರವಾಗಿ ಅರ್ಪಿಸಿ ಧನ್ಯತೆ ಪಡೆದಿದ್ದಾರೆ; ಓದುಗರಲ್ಲಿಯೂ ಆ ಧನ್ಯತಾಭಾವ ಮೂಡುವಂತೆ ಮಾಡಿದ್ದಾರೆ.

ಕೇವಲ ೭೭ ಪುಟಗಳ ಸೀಮಿತ ವ್ಯಾಪ್ತಿಯನ್ನು ಹೊಂದಿದ ಈ ಕಿರುಹೊತ್ತಿಗೆ ಹಲವು ದೃಷ್ಟಿಯಿಂದ ಅಪರೂಪದ ಬರವಣಿಗೆ ಎನಿಸಿದೆ. ಇದು ಇತ್ತ ಜೀವನ ಚರಿತ್ರೆಯೂ ಅಲ್ಲ; ಅತ್ತ ಕೃತಿ-ವಿಮರ್ಶೆಯೂ ಅಲ್ಲ; ವ್ಯಕ್ತಿ ಚಿತ್ರವೂ ಅಲ್ಲ. ಇವೆಲ್ಲವೂ ಹಿತಮಿತವಾಗಿ ಹದಗೊಂಡು ಬೆರೆತ ಸುಂದರ ಸ್ಮೃತಿ-ಚಿತ್ರ; ನೆನಪಿನಾಳದಿಂದ ನಿರ್ಮಿತಗೊಂಡ ನೀಳ್ಗವನ.

ಇದು ಮೈಸೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ನಡೆದ ಮಾಸ್ತಿ ಶತಮಾನೋತ್ಸವ ಸಮಾರಂಭದ ಉದ್ಘಾಟನಾ ಸಂದರ್ಭದಲ್ಲಿ ಮಾಡಿದ ಉಪನ್ಯಾಸದ ವಿಸ್ತೃತ ರೂಪ.

ಈ ಕೃತಿಯ ಆರಂಭದಲ್ಲಿ 'ಓದುವ ಮೊದಲು' ಎಂಬ ತಮ್ಮ ಮಾತಿನಲ್ಲಿ ಡಾ. ಹಂಪನಾ ಅವರು ಇದರ ಸ್ವರೂಪ, ಗುರಿ ಮತ್ತು ಆಶಯಗಳನ್ನು ಕುರಿತು ಹೀಗೆ ಹೇಳಿದ್ದಾರೆ :

'ಇಲ್ಲಿರುವುದು ಮಾಸ್ತಿಯವರ ಜೀವನ ಪ್ರಭೆಯೇ ಹೊರತು ಸಾಹಿತ್ಯ ಪ್ರಭೆಯಲ್ಲ; ಇದು ಜೀವನ ಚರಿತ್ರೆಯೂ ಅಲ್ಲ, ವ್ಯಕ್ತಿಚಿತ್ರವೂ ಅಲ್ಲ, ಕೃತಿ ಕೇಂದ್ರಿತ ವಿಮರ್ಶೆಯೂ ಅಲ್ಲ; ಅವೆಲ್ಲವೂ ಬೆರೆತಂತಿದೆ. ಅವರ ದೊಡ್ಡ ನಿಡುಬಾಳನ್ನು ಕಂಡಾಗ, ಅವರ ವಿಸ್ತಾರವಾದ ಜೀವನದ ಭಾವನೆಗಳ ಬೆಂಬಲವನ್ನು ನನ್ನ ಪರಿಚಯದ ಚೌಕಟ್ಟಿಗೆ ಸೀಮಿತವಾಗಿರಿಸಿ, ಹಸಿಹಸಿಯಾಗಿ ಬೊಗಸೆ ಬೊಗಸೆಯಾಗಿ ಹಿಡಿದಿಟ್ಟಿದ್ದೇನೆ. ಅವರ ಯಶಸ್ವಿ ಬದುಕಿನ ಒಲವು-ನಿಲವು, ಸವಿ-ಕಾಂತಿಗಳನ್ನು ಈ ಚಿಕ್ಕ ಬರೆಹದ ಕಿರುಹಣತೆ ತಕ್ಕಮಟ್ಟಿಗಾದರೂ ತೋರಿಸುತ್ತದೆಂದು ನಂಬಿದ್ದೇನೆ. ಮಾಸ್ತಿ ಸಾಹಿತ್ಯದ ಅರಿವಿಗೂ ಇದು ದಾರಿಯಾದೀತು. ಜೀವನ ಕೇಂದ್ರಿತ ಪೃಥಕ್ ಸ್ಮರಣೆಗಳ ಸರಪಳಿಯಾಗಿರುವ ಈ ಪುಸ್ತಿಕೆಯಲ್ಲಿರುವುದು ಟೀಕೆಯಿಲ್ಲದ ಟಿಪ್ಪಣಿಗಳು. ನಾನು ಕನ್ನಡಿ ಮಾತ್ರ. ಇದರಲ್ಲಿ ಕಾಣುವ ಬಿಂಬ-ಪ್ರತಿಬಿಂಬ ಚಿತ್ರಗಳೆಲ್ಲ ಅವರೇ ಆಗಿದ್ದಾರೆ. ಈ ಉಪನ್ಯಾಸದಲ್ಲಿ ವ್ಯಕ್ತಿ-ವ್ಯಕ್ತಿತ್ವ ಕುರಿತ ಮೌಲ್ಯಮಾಪನ ಸಾಹಸಕ್ಕೆ ತೊಡಗಿಲ್ಲ. ಅವರು ನನ್ನ ಅಳವಿಗೆ ಎಟುಕದವರು. ಇಲ್ಲಿರುವುದು ಬಹುಮಟ್ಟಿಗೆ ಶೇ ೯೮ರಷ್ಟು ಪ್ರಾಮಾಣಿಕ ದಾಖಲೆಗಳು ಎರಡರಷ್ಟು ಮಾತ್ರ ರಿಯಾಯಿತಿ. ಅವರೊಂದಿಗೆ ನನಗಿದ್ದ ಆತ್ಮೀಯತೆ ಹಾಗೂ ಸಲುಗೆಯ ಬೊಕ್ಕಸದ ಭಂಡಾರವನ್ನು ಅನಾವರಣಗೊಳಿಸುವುದು ನನ್ನ ಗುರಿ.

ಈ ಮಾತುಗಳಿಗೆ ವ್ಯಾಖ್ಯಾನದಂತಿದೆ ಈ ಕೃತಿ. ಇದರಲ್ಲಿ ಪರಿಚಯ, ಕಾಣಿಕೆ, ಜೀವನ, ಸಮ್ಮೇಳನ, ತುಪ್ಪಬರಲಿ, 'ಭಾವ' ಕೃತಿ ವಿಮರ್ಶೆ ಎಂಬ ಆರು ಭಾಗಗಳಿವೆ.

ಪರಿಚಯ ಎಂಬ ಮೊದಲ ಭಾಗದಲ್ಲಿ ತಮಗೆ ಮಾಸ್ತಿಯವರ ಪರಿಚಯವಾದ ರೀತಿಯನ್ನು ತಿಳಿಸುತ್ತ ಅವರ ಘನ ವ್ಯಕ್ತಿತ್ವದ ಪರಿಚಯವನ್ನೂ ಮಾಡಿಸುತ್ತಾರೆ. ಇಬ್ಬರೂ ಹುಟ್ಟಿದ್ದು ಒಂದೇ ಜಿಲ್ಲೆ, 'ಕೋಲಾರ' ಇಬ್ಬರ ಪಿತೃವೃತ್ತಿ (ಶಾನುಭೋಗ) ಒಂದೇ ಎಂಬ ಸಮಾನ ಅಂಶಗಳನ್ನು ಗುರುತಿಸುತ್ತ, ಅವರ ಮೊದಲ ಪರಿಚಯ ಅವರ ಕೃತಿಗಳಿಂದ, ನಂತರ ಕಾಲೇಜಿನ ಒಂದು ಕಾರ್ಯಕ್ರಮದ ಅತಿಥಿಯಾಗಿ ಬಂದಾಗ ಸಮಕ್ಷಮವಾಗಿ, ಆಮೇಲೆ ಸಮಾನ ವೇದಿಕೆಯ ಮೇಲೆ ಇಬ್ಬರೂ ಸು. ೫೦ ಸಮಾರಂಭಗಳಲ್ಲಿ ಭಾಗವಹಿಸಿದಾಗ-ಪಡೆದ ಪರಿಚಯದ ಅನುಭವದ ಪುಟಗಳನ್ನು ಇಲ್ಲಿ ತೆರೆದಿಟ್ಟಿದ್ದಾರೆ. ಇತರ ಸಾಹಿತಿಗಳ ಜೊತೆ ಮಾಸ್ತಿ ಅವರನ್ನು ತೂಗಿನೋಡುತ್ತ ಇವರ ವ್ಯಕ್ತಿತ್ವದ ಅಪೂರ್ವತೆಯನ್ನು ಒಂದು ಹಳ್ಳಿಯ ಹೆಸರು ಒಬ್ಬ ವ್ಯಕ್ತಿಯ ಹೆಸರಾಗಿ, ನಾಡಿನಲ್ಲಿ ಅಚ್ಚಳಿಯದ ಮೌಲ್ಯ ಪಡೆದು ಶ್ರೇಷ್ಠತೆಯ ಪ್ರತೀಕವಾಗಿರುವುದು ನಿರಂತರ ಸಾಧನೆಯಿಂದ ಎಂದು ತಿಳಿಸುತ್ತಾರೆ. ಹಾಗೆಯೇ ಸರ್ದಾರ್ ಕೆ.ಎಂ. ಫಣಿಕ್ಕರ್ ಅವರು ಮಲೆಯಾಳಂ ಸಮ್ಮೇಲನದ ಅಧ್ಯಕ್ಷ ಪೀಠದಿಂದ ಉದ್ಗರಿಸಿದ 'ಮಾಸ್ತಿ ಅವರು ಕನ್ನಡ ಸಾಹಿತ್ಯದ ಭೀಷ್ಮಾಚಾರ್ಯರು' ಎಂಬ ಮಾತನ್ನು ಉದ್ಧರಿಸುತ್ತ 'ಕನ್ನಡಕ್ಕೊಂದು ವರವಾಗಿ ಬಂದ ಮಾಸ್ತಿಯವರಿಂದ ಒಂದು ಕುಗ್ರಾಮಕ್ಕೆ ಏನು, ಇಡೀ ಕರ್ನಾಟಕಕ್ಕೇ ಕೀರ್ತಿ. ಹೆಚ್ಚು ಕಡಿಮೆ ಇಡೀ ಒಂದು ಶತಮಾನದ ಸಾಹಿತ್ಯ ಚರಿತ್ರೆಯದ್ದಕ್ಕೂ ಹಾಸುಹೊಕ್ಕಾಗಿ ಬೆರೆತು ಬರುವ ಇಂಥ ಸಾಹಿತಿಗಳು ಜಗತ್ತಿನ ಯಾವುದೇ ಭಾಷೆಯಲ್ಲಿ ವಿರಳ, ಕನ್ನಡದಲ್ಲಿ ಮಾತ್ರ ವಿಶೇಷ' ಎಂದು ಬಣ್ಣಿಸಿದ್ದಾರೆ.

'ಕಾಣಿಕೆ' ಎಂಬ ಎರಡನೆಯ ಭಾಗದಲ್ಲಿ 'ಒಬ್ಬ ವ್ಯಕ್ತಿ ಎಷ್ಟು ದೀರ್ಘಕಾಲ ಬಾಳಿದರೆಂಬುದು ಗೌಣ. ಎಷ್ಟೊಂದು ಹೆಚ್ಚಿನ ಸಂಖ್ಯೆಯ ಕೃತಿಗಳನ್ನು ಪ್ರಕಟಿಸಿದರೆಂಬುದು ಆನುಷಂಗಿಕ. ಹೇಗೆ ಬರೆವರು, ಎಂಥ ಬಾಳು ಬಾಳಿದರು, ಜೀವನದಲ್ಲಿ ಏನನ್ನು ಸಾಧಿಸಿದರು, ಸಾಕ್ಷಾತ್ಕರಿಸಿದರು ಎಂಬುದಷ್ಟೇ ಮುಖ್ಯ. ಈ ಮಾನದಂಡ ಅಳತೆಯಲ್ಲಿ ಮಾಸ್ತಿಗೆ ಮೊದಲ ವೀಳೆಯ' ಎಂದು ಅವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ, ಕನ್ನಡ ನಾಡು-ನುಡಿ ಸಂಸ್ಕೃತಿಗಳಿಗೆ ಕೊಟ್ಟ ಕಾಣಿಕೆಯ ವಿಶೇಷತೆಯನ್ನು ಎತ್ತಿ ಹೇಳುತ್ತಾರೆ.

ಇಲ್ಲಿಯೇ ಮಾಸ್ತಿ ಅವರ ದಾಂಪತ್ಯ ವಿಷಯವನ್ನು ಪ್ರಸ್ತಾಪಿಸುತ್ತ 'ಮಾಸ್ತಿ ಅವರ ಮಡದಿ ಪಂಕಜಮ್ಮನವರನ್ನು ಕಂಡಾಗ ಅಚ್ಚ ಹಿಂದೂ ಸ್ತ್ರೀದರ್ಶನವಾದಂತಾಯಿತು. ವಿಷಯದ ಗಣಿಯಾದ ಪುರುಷ ಮಾಸ್ತಿಗೆ ಇಂಥ ಕ್ಷಮಾವತಿ ಪಂಕಜಮ್ಮನೆ ಸರಿಯಾದ ಮಡದಿಯೆಂದು ಬ್ರಹ್ಮನು ಬುದ್ಧಿ ಚಾತುರ್ಯಗಳು ಎಚ್ಚರವಾಗಿರುವಾಗ ಸೃಷ್ಟಿಸಿರಬೇಕು' ಎಂದು ಹೇಳುತ್ತ, ದೀರ್ಘ ಕಾಲ ಸುಖೀದಾಂಪತ್ಯ ನಡೆಸಿದ ಈ ಜೋಡಿಯನ್ನು 'ಆರ್ಯಮರ್ಯಾದಿತ ದಂಪತಿಗಳು' ಎಂದು ಕರೆಯುತ್ತಾರೆ. ಹೆಂಡತಿ ತೀರಿದಾಗ ಮಾಸ್ತಿ ಅವರು ತೋರಿದ ಸಂಯಮವನ್ನು ಚಿತ್ರಿಸುತ್ತ, 'ದೈವಕ್ಕೆ ಆಕೆ ಇನ್ನು ಇಲ್ಲಿ ಇರುವುದು ಸಾಕು ಎಂದೆನಿಸಿತು. ಶ್ರೀನಿವಾಸರು ಕರೆಸಿಕೊಂಡರು.' ಎಂದು ಅವರು ಹೇಳಿದ ಮಾತುಗಳನ್ನು ದಾಖಲಿಸುತ್ತಾರೆ.

ಇದೇ ವಿಭಾಗದಲ್ಲಿ ತಮ್ಮ ದ್ರಾವಿಡ ಭಾಷಾವಿಜ್ಞಾನ ಕೃತಿಯನ್ನು ಮೆಚ್ಚಿಕೊಂಡು ಅವರು ಬೆನ್ನುತಟ್ಟಿದ್ದು, ಪುಸ್ತಕದ ಬೆಲೆಯ ಹಣವನ್ನು ಕವರಿನಲ್ಲಿ ಹಾಕಿ ಕೊಟ್ಟದ್ದು, ಸತ್ಪಾತ್ರವರಿತು ಅನೇಕ ಸಾಹಿತಿಗಳಿಗೆ, ಅವರ ಕೃತಿಗಳ ಪ್ರಕಟಣೆಗೆ ಧನ ಸಹಾಯ ನೀಡಿದ್ದು ಮೊದಲಾದ ಸಂಗತಿಗಳನ್ನು ವಿವರಿಸುತ್ತ ಮಾಸ್ತಿ ಅವರ ಹೃದಯ ಶ್ರೀಮಂತಿಕೆಯನ್ನು ತೆರೆದು ತೋರಿಸಿದ್ದಾರೆ.

'ಜೀವನ' ಎಂಬ ಭಾಗದಲ್ಲಿ ಮಾಸ್ತಿ ಅವರು ಸಂಪಾದಕರಾಗಿ 'ಜೀವನ' ಎಂಬ ಪತ್ರಿಕೆಯನ್ನು ತಮ್ಮ ಪ್ರಭಾವಶಾಲಿ ಬರವಣಿಗೆ ಹಾಗೂ ಶ್ರದ್ಧೆ ಶ್ರಮಗಳಿಂದ ಯಶಸ್ವಿಯಾಗಿ ನಡೆಸಿಕೊಂಡು ಬಂದು, ಅದಕ್ಕೆ ವಿಶೇಷ ಕೊಡುಗೆಯನ್ನು ಕೊಟ್ಟ ವಿಷಯವನ್ನು ನಿರೂಪಿಸುವುದರ ಜೊತೆಗೆ, ಅವರ ವ್ಯಕ್ತಿ ಜೀವನದ ಕೆಲವು ಮುಖಗಳ ಪರಿಚಯವನ್ನು ಮಾಡಿಸಿದ್ದಾರೆ.

ಮಾಸ್ತಿ ಅವರು ಕೆಲವು ದಿವಸಗಳ ನಂತರ 'ಜೀವನ' ಪತ್ರಿಕೆಯ ಸಂಪಾದಕತ್ವದ ಹೊಣೆಯನ್ನು ಹಂಪನಾ ಅವರಿಗೆ ವಹಿಸುತ್ತಾರೆ. ಅವರ ಮಾರ್ಗದರ್ಶನದಂತೆ ಹಂಪನಾ ಅವರು ಆ ಪತ್ರಿಕೆಯನ್ನು ಯಶಸ್ವಿಯಾಗಿ ಮುನ್ನಡೆಸಿಕೊಂಡು ಹೋಗುತ್ತಾರೆ. ಮುಂದೆ ಹಂಪನಾ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪದವಿಗೆ ಸ್ಪರ್ಧಿಸಿ ಆಯ್ಕೆಯಾಗುತ್ತಾರೆ. ಈ ಸಂದರ್ಭದಲ್ಲಿ ಮಾಸ್ತಿ ಅವರು ಹಂಪನಾ ಅವರಿಗೆ ನೀಡಿದ ಪ್ರೋತ್ಸಾಹ ಸಹಾಯ ಸಹಕಾರ, ತೋರಿದ ದಾರಿ ಚಿರಸ್ಮರಣೀಯ. ಹಂಪನಾ ಅವರು ಅಧ್ಯಕ್ಷರಾದ ನಂತರ ಸಾಹಿತ್ಯ ಪರಿಷತ್ತಿನ ಜೊತೆ ಅವರಿಟ್ಟುಕೊಂಡ ಸಂಬಂಧ ಅವಿನಾಭಾವ. ಈ ಸಂಗತಿಯನ್ನು ಇಲ್ಲಿ ಹಂಪನಾ ಅವರು ಮನದುಂಬಿ ಬಣ್ಣಿಸಿದ್ದಾರೆ.

ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿ ಬಂದ ಸುದ್ದಿ ತಿಳಿದು ಮಾಸ್ತಿ ಅವರು ಪಟ್ಟ ಕಳವಳ, ನಡೆದುಕೊಂಡ ರೀತಿ, ಶ್ರೀ ಅವರ ಅಭಿನಂದನ ಗ್ರಂಥ 'ಸಂಭಾವನೆ' ಮರು ಮುದ್ರಣದ ಬಿಡುಗಡೆ

ಸಮಾರಂಭದಲ್ಲಿ ಅವರು ತೋರಿದ ಉತ್ಸಾಹ ಈ ಸಂದರ್ಭದಲ್ಲಿ ಪ್ರಕಟವಾದ ಅವರ ಮಾನಸಿಕ ಸ್ಥಿತಿ-ಗತಿಗಳ ಚಿತ್ರವನ್ನೂ ಹಂಪನಾ ಅವರು ಇಲ್ಲಿ ನೈಜವಾಗಿ ಬಿಡಿಸಿದ್ದಾರೆ.

'ಸಮ್ಮೇಳನ' ಎಂಬ ನಾಲ್ಕನೆಯ ಭಾಗದಲ್ಲಿ ಹಂಪನಾ ಅವರು ಕಸಾಪ ಅಧ್ಯಕ್ಷರಾಗಿ ನಡೆಸಿದ ಹಲವಾರು ಸಭೆ ಸಮ್ಮೇಲನಗಳು, ಅವುಗಳಲ್ಲಿ ಹೆಚ್ಚಿನ ಸಂಖ್ಯೆಯ ಸಮಾರಂಭಗಳಲ್ಲಿ ಮಾಸ್ತಿ ಅವರು ಸಕ್ರಿಯವಾಗಿ ಭಾಗವಹಿಸಿ ನೀಡಿದ ಆತ್ಮೀಯ ಮಾರ್ಗದರ್ಶನ, ತನ್ಮೂಲಕ ಆ ಸಮಾರಂಭಗಳಿಗೆ ಅವರು ಒದಗಿಸಿಕೊಟ್ಟ ವಿಶೇಷ ಕಳೆ-ಕಾಂತಿಗಳನ್ನು ತಿಳಿಸಿದ್ದಾರೆ.

'ತುಪ್ಪ ಬರಲಿ' ಎಂಬ ಐದನೆಯ ಭಾಗದಲ್ಲಿ ಮಾಸ್ತಿಯವರ ಊಟದ ಅಭಿರುಚಿ, ತುಪ್ಪದ ಬಗೆಗಿನ ಅವರ ಪ್ರೀತಿ, ಜೊತೆಗೆ ಅವರ ಬದುಕಿಗೆ ಸಂಬಂಧಿಸಿದ ಇನ್ನೂ ಕೆಲವು ಘಟನೆಗಳನ್ನು ತುಂಬ ಸ್ವಾರಸ್ಯಕರವಾಗಿ ನಿರೂಪಿಸಿದ್ದಾರೆ.

'ಆಹಾರ ವಿಹಾರಗಳಲ್ಲಿ ಅವರು ಕಟ್ಟುನಿಟ್ಟು. ಕ್ಲುಪ್ತರು, ತೃಪ್ತರು, ಶುಚಿ ರುಚಿಗೆ ಮಹತ್ವ ಕೊಡುವವರು' ಎಂದು ಅವರ ಊಟದ ವಿಷಯವಾಗಿ ಹೇಳುತ್ತ ಎರಡು ಸಂದರ್ಭದಲ್ಲಿ ಅವರು ಊಟದಲ್ಲಿ ತೋರಿದ ರಸಿಕತೆಯ ಬಗ್ಗೆ ನವಿರಾದ ಹಾಸ್ಯ ಶೈಲಿಯಲ್ಲಿ ಸೊಗಸಾಗಿ ವರ್ಣಿಸುತ್ತಾರೆ.

ಮಾಸ್ತಿಯವರದು ಹೊಗಳಿಕೆಯನ್ನು ಸ್ವಾಗತಿಸುವ, ತೆಗಳಿಕೆಯನ್ನು ನಿರ್ಲಕ್ಷಿಸುವ ಸ್ವಭಾವ. ಇದನ್ನು ಹಂಪನಾ ಅವರು ಹೀಗೆ ವಿವರಿಸಿದ್ದಾರೆ. ಮಾಸ್ತಿಯವರು ಆತ್ಮರತಿ ಎನ್ನಬಹುದಾದಷ್ಟು ತಮ್ಮನ್ನು ತಾವು ಪ್ರೀತಿಸಿದವರು. ಹೊಗಳಿಕೆಗೆ ಎರಡೂ ಕಿವಿ ತೆರೆದಿಟ್ಟವರು. ಅವರ ಕಥೆ ಕವನ ಕಾದಂಬರಿ ನಾಟಕ ಕುರಿತು ಮೆಚ್ಚುಗೆ ಕೇಳಲು ಬೆಚ್ಚಗೆ ಕುಳಿತಿರುತ್ತಿದ್ದರು. ಭಿನ್ನಾಭಿಪ್ರಾಯ, ಟೀಕೆಯ ಮಾತು ಬಂದೊಡನೆ ಮೇಲಕ್ಕೆದ್ದು ನಿಂತು 'ನಮಸ್ಕಾರ ಸ್ವಾಮಿ ತೊಂದರೆ ತೊಗೊಂಡಿರಿ ಹೋಗಿ ಬರ್‍ತೀರಾ' ಎಂದು ಎರಡೂ ಕೈಜೋಡಿಸುತ್ತಿದ್ದರು. ಬಂದವರು ಎದ್ದು ಹೋಗಲು ಇದು ನೇರ ಸೂಚನೆ. ಟೀಕಿಸುವವರು ಹೆಂಗಸರಾದರೆ, ಒಳಗಿರುವ ಮಗಳನ್ನು ಕೂಗಿ 'ಇವರಿಗೆ ಕುಂಕುಮ ಕೊಡಮ್ಮಾ' ಎಂದು ಕುಂಕುಮ ಕೊಡಿಸಿ ದಯಮಾಡಿಸಿ ತಾಯಿ' ಎಂಬ ವಿದಾಯ ಹೇಳಿ ಕೊಠಡಿ ಸೇರಿಬಿಡುತ್ತಿದ್ದರು. ತೆಗಳಿಕೆಗೆ ಅವರದು ದಿವ್ಯ ನಿರ್ಲಕ್ಷ್ಯ.''

ಮಾಸ್ತಿ ಅವರ ಭಾಷಣದ ರೀತಿಯನ್ನು ಹೀಗೆ ದಾಖಲಿಸುತ್ತಾರೆ ಹಂಪನಾ : 'ಮಾಸ್ತಿ ಭಾಷಣದ ಗಮ್ಮತ್ತೇ ಬೇರೆ. ಅದು ಅನಕೃ, ತರಾಸು ರೀತಿ ಭೋರ್ಗರೆದು ಧುಮ್ಮಿಕ್ಕುವ ನಿರರ್ಗಳ ವಾಗ್ಧಾರೆಯಲ್ಲ. ಕುವೆಂಪು ಥರಾ ಕಾವ್ಯಮಯವೂ ಅಲ್ಲ. ಬೇಂದ್ರೆಯವರಂತೆ ಮಿಂಚಿನ ಸಂಚಾರವಲ್ಲ. ಪುತಿನ ಹಾಗೆ ಸಪ್ಪೆ ಸ್ವಗತವೂ ಅಲ್ಲ. ಮಾಸ್ತಿಯವರ ಶೈಲಿ ಸರಳ, ಸ್ಫುಟ.'

ಮಾಸ್ತಿ ಅವರಿಗೆ ಜ್ಞಾನಪೀಠ ಪ್ರಶಸ್ತಿ ಬಂದಾಗ ಅವರ ಮನಸ್ಥಿತಿ ಹೇಗಿತ್ತು ಎಂಬುದನ್ನು ಹಂಪನಾ ಅವರು ಒಳಹೊಕ್ಕು ನೋಡಿದ್ದು ಹೀಗೆ : 'ಅವರು ಸಾತ್ವಿಕ ಸಂಪನ್ನರಾಗಿದ್ದರೂ ನಿರ್ಲಿಪ್ತರೇನಲ್ಲ. ಮಾಸ್ತಿಯವರು ಅನಂತ ನಿರೀಕ್ಷೆಯಿಂದ ಎದುರು ನೋಡುತ್ತಿದ್ದ ಜ್ಞಾನಪೀಠ ಪ್ರಶಸ್ತಿ ಅಂತೂ ಬಂತು (೧೯೮೫). ಅದು ಅವರ ಮೂಲಕ ಕನ್ನಡಕ್ಕೆ ಬಂದ ನಾಲ್ಕನೆಯ

ಜ್ಞಾನಪೀಠ ಪ್ರಶಸ್ತಿ. ಮೊದಲ ಮೂರು ಸಲ ಬಂದಾಗಲೂ ಅವರು ತಮಗೇ ಬರಬಹುದೆಂದು ಪ್ರತಿಸಲವೂ ನಿರೀಕ್ಷಿಸಿದ್ದರು. ಅದು ಅವರ ಸಿದ್ಧಿ ಸಾಧನೆಗಳ ಎತ್ತರಕ್ಕೆ ಅರ್ಹವಾದುದು ಕೂಡ . ಅವರಿಗಿಂತ ವಯಸ್ಸಿನಲ್ಲಿ ಚಿಕ್ಕವರಾಗಿದ್ದ ಹನ್ನೊಂದು ಜನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದ ಮೇಲೆ ೧೨ನೆಯ ಸಲ ಕನ್ನಡಕ್ಕೆ ಬರುವಾಗ ಇವರಿಗೆ ಆ ಪಾಳಿ ಬಂದಿತು. ಈ ನೋವು ಒಳಜ್ವರವಾಗಿ ಪೀಡಿಸಿತ್ತು. ಕನ್ನಡಕ್ಕೆ ಬರುವ ಬಿರುದು ಬಾವಲಿಗಳೆಲ್ಲ ತಮಗೆ ಮೊದಲು ಸಂದು ಅನಂತರ ಅವರಿಗಿಂತ ಕಿರಿಯರಾದವರಿಗೆ ಸೇರಲೆಂಬ ಅವರ ಧೋರಣೆಯ ಹಿಂದೆ ಕ್ರಿಯಾ ಶೀಲವಾಗಿದ್ದ ತತ್ವಸರಳವಾಗಿತ್ತು. ಹಿರಿಯರಿಗೆ ಮೊದಲು, ಕಿರಿಯರಿಗೆ ತರುವಾಯ (ಅಂತೂ) ನೆಲಕಾದು ಮಳೆಬಂದ ಆನಂದವಾಯಿತು.'

ಹೀಗೆ ಬಂದ ಪ್ರಶಸ್ತಿಯ ಮೊತ್ತ ಒಂದೂವರೆ ಲಕ್ಷ ರೂಪಾಯಿಗಳನ್ನು ಸಾಹಿತ್ಯ ಪುರಸ್ಕಾರಗಳಿಗಾಗಿ ಮೀಸಲಾಗಿಡಲು ಘೋಷಿಸಿದ್ದು ಮಾಸ್ತಿಯವರ ಮಾನಸಿಕ ಎತ್ತರಕ್ಕೆ ಹಿಡಿದ ಪ್ರತಿಮೆಯಾಗಿದೆ ಎಂದು ಬಣ್ಣಿಸುತ್ತಾರೆ ಹಂಪನಾ :

'ಮಾಸ್ತಿ ದೊಡ್ಡ ಮನೆಯ ದೊಡ್ಡ ಮನೆತನದ ಕೂಸಾಗಿ ಹುಟ್ಟಿದರು. ಅವರು ತಾಯಿ ಬಸಿರಿಂದ ಬರುವ ಹೊತ್ತಿಗೆ ಬಡತನ ಬಂದಿತ್ತು. ಕಷ್ಟಕಾರ್ಪಣ್ಯಗಳನ್ನುಂಡ ಮಗು ಮೈಸೂರಲ್ಲಿ ವಾರಾನ್ನದ ಹುಡುಗನಾಗಿಯೂ ಬೆಳೆಯಿತು. ಕಾಸಿಗೆ ಕೈಯೊಡ್ಡಿ ಹಣದ ಗುಣ-ಗರಿಮೆ ಬಲ್ಲ ಮಾಸ್ತಿ ಅದಕ್ಕೆ ಆತುಕೊಳ್ಳಲಿಲ್ಲ, ನಿರ್ಲಿಪ್ತರಾಗಿರಲು ಪ್ರಯತ್ನಿಸಿದರು. ಅವರ ಮನಸ್ಸಿನ ಪರಿಪಾಕವನ್ನು, ನಿಷ್ಠೆ ನಂಬಿಕೆಯನ್ನು ಬಡತನ ಕೆಡಿಸಲಿಲ್ಲ, ಸಿರಿತನ ಕಸಿಯಲಿಲ್ಲ. ಜ್ಞಾನ ಪೀಠ ಕೊಟ್ಟ ಅಷ್ಟೂ ಮೊತ್ತವನ್ನು ದತ್ತಿಯಾಗಿ ಸಮಾಜಕ್ಕೆ ಒಪ್ಪಿಸಿದ್ದು ಅವರ ಮಾನಸಿಕ ಎತ್ತರಕ್ಕೆ ಹಿಡಿದ ಪ್ರತಿಮೆ.'

ಮಾಸ್ತಿ ಅವರ ಆರೋಗ್ಯದ ಬಗೆಗೆ ಹಂಪನಾ ಹೀಗೆ ಹೇಳುತ್ತಾರೆ : ೯೫ನೆಯ ಪ್ರಾಯದಲ್ಲಿ ಕಣ್ಣು ಕಾಣುತ್ತಿತ್ತು. ಕಿವಿ ಕೇಳುತ್ತಿತ್ತು. ಹಲ್ಲು ಕೈಕಾಲು ಎಲ್ಲ ದೃಢವಾಗಿ ಚಟುವಟಿಕೆಯಲ್ಲಿದ್ದುವು ರಕ್ತದ ಒತ್ತಡವಿರಲಿಲ್ಲ. ಸಿಹಿ ಮೂತ್ರವಿಲ್ಲ ಮೂಳೆ ರೋಗವಿಲ್ಲ ಯಾವ ಯಾವ ಮುಲಾಜಿಗೂ ಒಳಗಾಗದ ಧ್ರುವ ಅವರಲ್ಲಿತ್ತು. ನಿರ್ದಾಕ್ಷಿಣ್ಯಪರ ವಸ್ತುನಿಷ್ಠತೆ ಯನ್ನು ಸಾಧ್ಯವಾದಷ್ಟೂ ಪಾಲಿಸಿದ್ದರು. ಕ್ಯಾಲೆಂಡರಿನ ನಿಯತತೆಯಲ್ಲಿ ದಿನಚರಿ ನಡೆಸಿಕೊಂಡು ಬಾಳಿದರು. ಭಾರತೀಯ ಸಂಸ್ಕೃತಿ ಜೀರ್ಣಿಸಿಕೊಂಡಿರುವ ಸುಭಾಷಿತೋಕ್ತಿಯಂತೆ ವಿನಾ ದೈನ್ಯದ ಜೀವನ ನಡೆಸಿದರು. ಬಹು ಮಟ್ಟಿಗೆ ಅನಾಯಾಸದ ಮರಣ ಪಡೆದರು.'

ಮಾಸ್ತಿಯವರ ಪ್ರಭಾವದ ಬಗೆಗೆ ಎರಡು ರೀತಿಯ ಅಭಿಪ್ರಾಯಗಳು ಸಾರಸ್ವತ ಲೋಕದಲ್ಲಿವೆ. ಅವುಗಳನ್ನು ಉಲ್ಲೇಖಿಸುತ್ತ ಹಂಪನಾ ಅವರು ಹೀಗೆ ಮೌಲ್ಯಮಾಪನ ಮಾಡುತ್ತಾರೆ. ಮಾಸ್ತಿ ಕೇವಲ ಸಂಪ್ರದಾಯವಾದಿಗಳೇ ಹೊರತು ಸಂಪ್ರದಾಯ ನಿರ್ಮಾಪಕರಲ್ಲ : ಮುಂದಿನ ಪೀಳಿಗೆಯ ಮೇಲೆ ಸೆಳೆತವಾಗಲಿ ಪ್ರಭಾವವಾಗಲಿ ಬೀರಲು ಸಾಧ್ಯವಾಗಲಿಲ್ಲ ಎಂಬ ಪ್ರತಿಪಾದನೆ ಇದೆ. ಹೊಸಗನ್ನಡ ಸಾಹಿತ್ಯದ ಮೇಲೆ ಸಾಹಿತಿಗಳ ಮೇಲೆ ಅವರ ಪ್ರಭಾವವಿದೆ; ಹಲವರ ಪಾಲಿಗೆ ಅವರು ತೋರುಗಂಬ, ಕೆಲವರಿಗಂತೂ ದೀಪಸ್ತಂಭ ಎಂಬ ಮರು ಪ್ರತಿಪಾದನೆಯೂ ಇದೆ. ಇವೆರಡು ತುದಿಗಳ ನಡುವೆ ಸತ್ಯ ಜೀವಂತವಾಗಿದೆ.'

ಡಿವಿಜಿ ಮತ್ತು ಮಾಸ್ತಿ ಅವರನ್ನು ಹಂಪನಾ ಜೊತೆಗಿಟ್ಟುನೋಡಿದ ರೀತಿ ಮಾರ್ಮಿಕವಾಗಿದೆ. 'ಡಿವಿಜಿ ಮಾಸ್ತಿ ಸಮಕಾಲೀನರು. ಡಿವಿಜಿ ಮಾಸ್ತಿಗಿಂತ ಎತ್ತರ, ಮಾಸ್ತಿಗಿಂತ ದಪ್ಪ-ಢಡೂತಿ ಅವರು ಕುಂಬಳಕಾಯಿ, ಇವರು ಹಾಗಲಕಾಯಿ. ಡಿವಿಜಿಯವರಿಗೆ ಇಸ್ಪೀಟು ಚಟ ಇರಲಿಲ್ಲ, ಅವರಿಗೆ ಜಿಹ್ವಾದಿ ಇಂದ್ರಿಯ ಚಾಪಲ್ಯವಿತ್ತು, ಇಬ್ಬರಿಗೂ ಅಪೇಕ್ಷೆಗಳಿದ್ದುವು. ಡಿವಿಜಿ ಅವರಿಗೆ ಕಡೆಕಡೆಗೆ ಬೇಗ ಸಾಯುವ ಮನಸ್ಸು, ಮಾಸ್ತಿಗೆ ದೀರ್ಘವಾಗಿ ಬಾಳುವ ಕನಸು; ಇಬ್ಬರೂ ಕನ್ನಡದ ಸೀಮಾ ಪುರುಷರಾಗಿ ನೂರರ ಹತ್ತಿರದವರೆಗೆ ಬಾಳಿದರು.' ಇಲ್ಲಿ ಇಬ್ಬರು ಮಹಾನ್ ವ್ಯಕ್ತಿಗಳ ಭೌತಿಕ ಸ್ವರೂಪದ ಜೊತೆಗೆ ಆಂತರಿಕ ರೂಪವನ್ನೂ ತೆರೆದು ತೋರಿಸಿದ್ದಾರೆ.

ಹೀಗೆಯೇ ಮಾಸ್ತಿ ಅವರಿಗೆ ಗಂಡು ಮಕ್ಕಳಿರಲಿಲ್ಲವೆಂಬ ಕೊರಗಿನ ಬಗೆಗೆ, ಅವರು ಅಳಿಯನ ಮೇಲೆ ತೋರಿದ ನಿಷ್ಠುರದ ಬಗೆಗೆ-ಅವರ ಇನ್ನಿತರ ಕೌಟುಂಬಿಕ ಜೀವನದ ರೀತಿ ನೀತಿಗಳ ಬಗೆಗೆ; ಅವರ ಚಿಕವೀರಾರಾಜೇಂದ್ರ, ಚನ್ನಬಸವನಾಯಕ ಕಾದಂಬರಿಗಳ ಬಗೆಗೆ ಬಂದ ಟೀಕೆಯಿಂದ ಅಂತರಂಗದಲ್ಲಿ ಅವರು ಅನುಭವಿಸಿದ ಯಾತನೆಯ ಬಗೆಗೆ; ಅವರ ಗುಣ-ದೋಷ-ದೌರ್ಬಲ್ಯಗಳ ಬಗೆಗೆ ನಿರ್ವಿಕಾರ ಭಾವದಿಂದ ನಿರೂಪಿಸಿದ್ದಾರೆ.

ಮಾಸ್ತಿ ಹಂಪನಾ ಅವರ ನಡುವಿನ ಬಾಂಧವ್ಯ ತುಂಬ ನಿಕಟ ಹಾಗೂ ಮಧುರತಮ ವಾಗಿತ್ತು ಎಂಬುದಕ್ಕೆ ಈ ಕೃತಿಯಲ್ಲಿ ಬರುವ ಅವರ ಬಗೆಗೆ ವಹಿಸುವ ಸ್ವಾತಂತ್ರ್ಯ, ಸಲಿಗೆ, ಸರಸದ ಮಾತುಗಳು ನಿದರ್ಶನವಾಗಿವೆ. ಬೈಪಾಸ್ ಸರ್ಜರಿ ಆಗಿ ಮೂತ್ರ ವಿಸರ್ಜನೆಗಾಗಿ ಅವರು ಪ್ಲಾಸ್ಟಿಕ್ ಚೀಲ ಕಟ್ಟಿಕೊಂಡು ಓಡಾಡುತ್ತಿದ್ದ ಬಗ್ಗೆ ಅವರು ಕೊಡುವ ವಿವರ, ಅದರ ಬಗೆಗೆ ಮಾಸ್ತಿ ಅವರು ನೀಡುವ ವಿನೋದಕರ ಪ್ರತಿಕ್ರಿಯೆ ತುಂಬ ಸ್ವಾರಸ್ಯಕರವಾಗಿದೆ.

ಆರನೆಯ ಭಾಗದಲ್ಲಿ 'ಭಾವ' ಕೃತಿಯ ವಿಮರ್ಶೆ ಮಾಡಿದ್ದಾರೆ. 'ಭಾವ' ಮೂರು ಸಂಪುಟಗಳ ಹೆಬ್ಬೊತ್ತಿಗೆ. ಮಾಸ್ತಿ ಅವರ ನಿಡುಬಾಳಿನ ಚರಿತ್ರೆಯನ್ನು ನಿರೂಪಿಸುವ ಉದ್ಗ್ರಂಥ: ಈ ಕೃತಿಯ ಸ್ವರೂಪ-ವೈಶಿಷ್ಟ್ಯಗಳನ್ನು ಎಳೆ ಎಳೆಯಾಗಿ ಬಿಡಿಸಿ ತೋರಿಸಿದ ಹಂಪನಾ ಅವರು ಅದರಲ್ಲಿ ಕಾಣುವ ಮಾಸ್ತಿ ಅವರ ವೈವಿಧ್ಯಮಯ ವ್ಯಕ್ತಿತ್ವದ ಮುಖಗಳನ್ನು ಕೆಲವೇ ಮಾತುಗಳಲ್ಲಿ ಹೀಗೆ ಹಿಡಿದು ತೋರಿಸಿದ್ದಾರೆ 'ಭಾವದಲ್ಲಿ ಹಲವು ಮೊಗಗಳ ಕಾಣ್ಕೆಯಿದೆ. ಈ ಆತ್ಮಚರಿತೆಯಲ್ಲಿ ಒಬ್ಬ ಆದರ್ಶ ಪುತ್ರನನ್ನು, ಉತ್ತಮ ವಿದ್ಯಾರ್ಥಿಯನ್ನು, ಆದರ್ಶ ಪತಿಯನ್ನು, ನಿಷ್ಪಕ್ಷಪಾತ ದಕ್ಷ ಅಧಿಕಾರಿಯನ್ನು, ಆದರ್ಶಪಿತನನ್ನು, ಒಬ್ಬ ಸತ್ಯಪ್ರಿಯ ವ್ಯಕ್ತಿಯ ಸರಳ ಜೀವನವನ್ನು ಕಾಣುತ್ತೇವೆ.'

ಇಷ್ಟೆಲ್ಲ ಹೇಳಿದ ಹಂಪನಾ ಅವರು ಮಾಸ್ತಿ ಅವರ ಜೊತೆಗಿನ ತಮ್ಮ ಸಂಬಂಧವನ್ನು ಅದರ ಮಧುರ ಸ್ಮರಣೆಯನ್ನು ಕೊನೆಗೆ ಹೀಗೆ ಮಾಡಿಕೊಳ್ಳುತ್ತಾರೆ.

'ಮಾಸ್ತಿಯವರೊಂದಿಗಿನ ನನ್ನ ನೆನಪಿನ ಗಣಿ ಇಳಿದಷ್ಟೂ ಆಳಕ್ಕೆ ಹೋಗುತ್ತದೆ. ನಮ್ಮಿಬ್ಬರ ಜಿಲ್ಲೆಯ ಚಿನ್ನದ ಗಣಿಯ ಹಾಗೆ. ಆ ಅಕ್ಷಯ ಮಾಣಿಕ್ಯಕೋಶದಿಂದ ಕೇವಲ ಕೆಲವು ಪ್ರಸಂಗಗಳನ್ನಿಲ್ಲಿ ಮೆಲುಕು ಹಾಕಿದ್ದೇನೆ.' 'ಮೂರುವರೆ ದಶಕಗಳ ಕಾಲ ನನ್ನ ತಾರುಣ್ಯವನ್ನು ತಿದ್ದಿದ್ದಾರೆ, ಬದುಕು ತುಂಬಿದ್ದಾರೆ. ನನ್ನ ಬಾಳಿನ ಚೈತನ್ಯ ಚಿಮುಕಿಸಿದ

ಅವರನ್ನು ತುಂಬು ಹೊತ್ತಿನಲ್ಲಿ, ಪ್ರಾತಃಸ್ಮರಣೀಯರಾಮುದರಿಂದ ಪ್ರಾತಃಕಾಲದಲ್ಲಿ ನೆನೆಯುತ್ತೇನೆ' ಎಂದು ಕೃತಜ್ಞತೆ ಸಲ್ಲಿಸಿದ್ದಾರೆ.

ಹೀಗೆ ಈ ಕೃತಿಯಲ್ಲಿ ಹಂಪನಾ ಅವರು ಮಾಸ್ತಿಯವರ ಜೀವನ-ಸಾಧನೆ-ಸಿದ್ಧಿ ಗುಣ ಸ್ವಭಾವ ವ್ಯಕ್ತಿ ವೈಶಿಷ್ಟ್ಯಗಳನ್ನು ತುಂಬ ಆತ್ಮೀಯವಾಗಿ ಆಪ್ಯಾಯಮಾನವಾಗಿ ಬಿಡಿಸಿ ತೋರಿಸಿದ್ದಾರೆ. ಇದೊಂದು ಮಾಸ್ತಿಯವರ ಸುಸಂಸ್ಕೃತ ಶ್ರೀಮಂತ ಬದುಕಿನ ದರ್ಶನ ಮಾಡಿಸುವ ರಂಗಶಾಲೆಯಾಗಿದೆ. ಅಪೂರ್ವವಾದ ಹೃದ್ಯ ಗದ್ಯಶೈಲಿ, ಸರಸ ಸುಂದರ ಆತ್ಮೀಯ ನಿರೂಪಣೆ, ಸಮತೂಕದ ನಿರರ್ಗಳ ವಿಚಾರ ಸರಣಿಗಳಿಂದ ಈ ಕೃತಿ ಓದುಗನಿಗೆ ಹೊಸ ಅನುಭವವನ್ನು ಕೊಡುತ್ತದೆ. ಈ ಕೃತಿ ಕುರಿತು ಚದುರಂಗರು 'ನೆನಪಿನಂಗಳದಲ್ಲಿ ಮಾಸ್ತಿ' 'ಒಂದು ಅಪೂರ್ವ ಗ್ರಂಥ. ಕನ್ನಡದಲ್ಲಿ ಇಷ್ಟೊಂದು ಆಪ್ತವಾಗಿ ಬಂದಿರುವ ಇನ್ನೊಂದು ಜೀವನ ಚರಿತ್ರೆಯನ್ನು ನಾನಂತೂ ಓದಿಲ್ಲ' ಎಂದು ಹೇಳಿದ ಮಾತು ಅರ್ಥಪೂರ್ಣವಾಗಿದೆ; ಅನ್ವರ್ಥಕವೆನಿಸಿದೆ.

ಕೃತಿಯ ಆದಿಯಲ್ಲಿ ಹಂಪನಾ ಅವರು ಜೋಡಿಸಿದ ಈ ಸಾಲುಗಳು ಈ ಕೃತಿಗೆ ಬರೆದ ಸೂತ್ರದಂತಿದೆ :

'ಹೊಗಳಿಕೆ ಸರಿಯಲ್ಲ ವಿನಾಕಾರಣ
ತೆಗಳಿಕೆ ಅಪಚಾರ ನಿಷ್ಕಾರಣ
ಹೊಗಳಲಿ ತೆಗಳಲಿ ಸಕಾರಣ'

ಇಲ್ಲಿ ಹೇಳಿದ ಒಂದು ಮಾತೂ ವಿನಾಕಾರಣವಾದುವಲ್ಲ; ನಿಷ್ಕಾರಣವೂ ಎನಿಸಿಲ್ಲ. ಎಲ್ಲ ಸಕಾರಣದಿಂದ ಶೋಭಿಸುತ್ತವೆ.

ಈ ಕೃತಿಯನ್ನು ಓದುತ್ತಿದ್ದಂತೆ ಒಂದು ದಿವ್ಯಾರಾಮದಲ್ಲಿ ವಿಹಾರ ಕೈಕೊಂಡ ಅನುಭವವಾಗುತ್ತದೆ. ಆದರೆ ಈ ಅನುಭವವನ್ನು ಈ ಕೃತಿ ಪರಿಚಯದ ನನ್ನ ಮಾತುಗಳಿಂದ ಪಡೆಯಲು ಸಾಧ್ಯವಿಲ್ಲ. ಮೂಲ ಕೃತಿಯನ್ನೇ ಓದಿ ಆಸ್ವಾದಿಸಬೇಕು. ಅದಕ್ಕೆ ಪ್ರೇರಣೆ ನೀಡುವುದು ಮಾತ್ರ ಈ ಲೇಖನದ ಉದ್ದೇಶ.

# ಭಾಗ ೩ : ಬಾಗಿನ

- ಭಾಷಾ ವಿಜ್ಞಾನ
- ಜೈನಧರ್ಮ ಸಾಹಿತ್ಯ ಸಂಸ್ಕೃತಿ
- ಸಂಶೋಧನೆ, ಶಾಸನ ಸಾಹಿತ್ಯ ಗ್ರಂಥ ಸಂಪಾದನೆ
- ಜಾನಪದ
- ಸಂಕೀರ್ಣ

# ಭಾಷಾಜ್ಞಾನ : ಒಂದು ಚಿಂತನೆ

ಡಾ. ಎಚ್.ಎಂ. ಮಹೇಶ್ವರಯ್ಯ

ಭಾಷೆ ಬಲ್ಲ ವ್ಯಕ್ತಿ ಭಾಷೆಯ ಜ್ಞಾನವನ್ನು ಹೇಗೆ ಪಡೆಯುತ್ತಾನೆ? ಅದನ್ನು ಹೇಗೆ ಅಭಿವೃದ್ಧಿ ಪಡಿಸಿಕೊಳ್ಳುತ್ತಾನೆ ಎಂಬ ವಿಸ್ಮಯಕಾರಿ ವಿಚಾರದ ಬಗ್ಗೆ ಯಾರೂ ಚಿಂತಿಸುವುದಿಲ್ಲ. ಭಾಷಾ ಜ್ಞಾನ ಮೆದುಳಿನಲ್ಲಿ ಹೇಗೆ ರೂಪಗೊಳ್ಳುತ್ತದೆ? ಭಾಷೆಯ ಜ್ಞಾನ ಎಂದರೇನು ? ಭಾಷೆಯ ಜ್ಞಾನ ಯಾವ ವಿಧದಲ್ಲಿ ರೂಪಗೊಳ್ಳುತ್ತ ಹೋಗುತ್ತದೆ ಎಂಬ ಮೂಲಭೂತ ಚಿಂತನೆಗಳಿಗೆ ಸಮರ್ಪಕವಾದ ಉತ್ತರವನ್ನು ಕಂಡುಕೊಳ್ಳುವ ಕೆಲವು ಪ್ರಯತ್ನಗಳು ನಡೆದಿವೆ. ಮನುಷ್ಯನ ಅತ್ಯಂತ ಮುಖ್ಯವಾದ ಭಾಷಾವ್ಯಾಪಾರದ ಪ್ರಕ್ರಿಯೆ ಅವನ ಅರಿವಿನ ಮತ್ತು ಅಭಿವ್ಯಕ್ತಿಯ ಸಾಧನವಾದುದರಿಂದ ಅದರ ಬಗ್ಗೆ ಹೆಚ್ಚು ಅರಿಯುವ ಪ್ರಯತ್ನ ನಡೆಯಬೇಕಿದೆ. ಅನೇಕ ಜನ ಶಿಕ್ಷಣ ಶಾಸ್ತ್ರಜ್ಞರು, ಮನೋವಿಜ್ಞಾನಿಗಳು ಮನುಷ್ಯನ ಒಳ ಅರಿವಿನ ಭಾಷಿಕ ಜ್ಞಾನದ ಬಗ್ಗೆ ಚಿಂತನೆ ನಡೆಸಿದುದರ ಫಲಿತವಾಗಿ ಕೆಲವು ವಿಚಾರಗಳು ಹೊರಹೊಮ್ಮಿವೆ. ಇದರಲ್ಲಿ ಮುಖ್ಯವಾಗಿ ಅಮೇರಿಕೆಯ ಶಿಕಾಗೋ ವಿಶ್ವವಿದ್ಯಾಲಯದ ಶಿಕ್ಷಣ ಪ್ರಾಧ್ಯಾಪಕ ಬೆಂಜಾಮಿನ್.ಎಸ್. ಬ್ಲೂಮ್‌ನ ಪ್ರಯತ್ನ ಅವಿಸ್ಮರಣೀಯವಾದುದು. ಬ್ಲೂಮ್‌ನೊಡನೆ ಪ್ರಯತ್ನನಡೆಸಿದ ಡೇವಿಡ್ ಆರ್. ಕ್ರಾಥ್‌ವೋಲ್, ಬಟ್ರಾಮ್ ಬಿ ಮಾಸಿಯಾ, ಪಾಲ್ ಎಸ್ ಬರ್ನಾಮ್ ಹೆನ್ರಿ ಡೈಯರ್, ವಾರನ್ ಪಿಂಡ್ಲಿ, ಲೂಯಿಸ್ ಬಿ. ಮ್ಯಾಥ್ಯೂ, ವಿಲಿಯಂ ಕೋಲ್‌ಮನ್, ಫಿಲಿಪ್ ರುಂಕೆಲ್, ರಾಲ್ಫ್ ಡಬ್ಲು ಟೈಲರ್ ಮುಂತಾದವರ ಸಹಯೋಗದಿಂದ ಭಾಷಾ ಜ್ಞಾನದ ಬಗ್ಗೆ ಹೆಚ್ಚಿನ ಅರಿವನ್ನು ಅನೇಕ ವಿಚಾರ ಸಂಕಿರಣಗಳ ಮೂಲಕ, ಶಿಬಿರಗಳ ಮೂಲಕ ಪಡೆದುಕೊಂಡು Taxonomy of Educational Objectives Book-1 **cognitive Domain**, Book-2 **Affective Domain** ಎಂಬ ಎರಡು ಮಹತ್ವದ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಕನ್ನಡದಲ್ಲಿ ಜ್ಞಾನವಲಯ ಹಾಗೂ ಭಾವವಲಯ ಎಂದು ಹೆಸರಿಸಬಹುದು.

ಭಾಷೆಯ ಸಾಮರ್ಥ್ಯದ ಬಗ್ಗೆ ಅರಿಯುವ ಭಾಷಾ ಪರೀಕ್ಷೆ (Language Test) ಯಾಗಲಿ ಭಾಷೆಯ ವ್ಯಾಕರಣಜ್ಞಾನದ ಪರೀಕ್ಷೆಯಾಗಲಿ ತೀರ ಸಾಂಪ್ರದಾಯಿಕ ವಿಧಾನವಾಗಿದ್ದು, ಈ ವಿಧಾನಗಳನ್ನು ಆಧುನಿಕ ಚಿಂತನೆಯ ಹಿನ್ನೆಲೆಯಲ್ಲಿ ರೂಪಿಸುವ ಯಾವುದೇ ಪ್ರಯತ್ನ ಈವರೆಗೆ ನಡೆದಿರಲಿಲ್ಲ. ಆದರೆ ಇತ್ತೀಚೆಗೆ ಮೈಸೂರಿನ ಕೇಂದ್ರ ಸರ್ಕಾರದ ಮಾನವಸಂಪನ್ಮೂಲ ಇಲಾಖೆಯ ಭಾರತೀಯ ಭಾಷಾ ಸಂಸ್ಥಾನದ ಸಂಶೋಧಕ

ಫೇಷ್ ಸುಬ್ಬಯ್ಯ ಭಾರತೀಯ ಭಾಷೆಗಳಿಗೆ ಆಧುನಿಕ ಚಿಂತನೆಗಳನ್ನಳವಡಿಸಿ ಭಾರತೀಯ ಭಾಷಾ ವಿದ್ವಾಂಸರ ಸಹಕಾರದಿಂದ ಬಹುವಿಧದ ಭಾಷಾ ಪರೀಕ್ಷೆಯ ಕೇಂದ್ರ ಬ್ಯಾಂಕೊಂದನ್ನು ತೆರೆಯುವ ಪ್ರಯತ್ನದಲ್ಲಿದ್ದಾರೆ. ಭಾಷಾಗ್ರಹಿಕೆ ಮತ್ತು ಅಭಿವ್ಯಕ್ತಿಯ ಬಗ್ಗೆ ಇರುವ ನಮ್ಮ ಜ್ಞಾನದ ಕ್ಷಿತಿಜವನ್ನು ವಿಸ್ತರಿಸುವ ಇಂತಹ ಪ್ರಯತ್ನಗಳು ಸ್ವಾಗತಾರ್ಹವಾಗಿವೆ. ಈ ತರದ ಪ್ರಯತ್ನದ ಮೂಲಕ ಭಾಷೆಗಳ ಕಣಜದಂತಿರುವ ಭಾರತದ ಭಾಷೆಗಳ ಅಭಿವೃದ್ಧಿ ಹಾಗೂ ಭಾಷಾ ಅಧ್ಯಯನದ ವಿಸ್ತಾರ ಹೊಸ ವೈಧಾನಿಕತೆಯ ಹಿನ್ನೆಲೆಯಲ್ಲಿ ಆಗಲಿದೆ.

ಭಾಷೆ ಎಂಬುದು ಮೇಲು ನೋಟಕ್ಕೆ ಒಂದು ಸೀಮಿತವಾದ ಜ್ಞಾನದ ವಿಷಯ ಎನಿಸಿದರೂ ಇದರ ಅಂತರಾಳದಲ್ಲಿ ಅನೇಕ ಪ್ರಪಂಚಗಳು ಇರುವುದು ಸೂಕ್ಷ್ಮನೋಟದಿಂದ ಕಂಡು ಬರುತ್ತದೆ. ಭಾಷೆಯ ಅರಿವಿನ ಪ್ರಪಂಚದ ಒಳಪದರಗಳನ್ನು ಒಂದೊಂದಾಗಿ ನೋಡಿದರೆ ಅದರ ಸ್ಥೂಲರೂಪದ ಅರಿವಾಗುತ್ತದೆ.

## 1. ಜ್ಞಾನ Knowledge

ವ್ಯಕ್ತಿಯ ಅಂತರಾಳದಲ್ಲಿ ಇರುವ ಭಾಷೆಯ ಜ್ಞಾನವನ್ನು ತಿಳಿಯಬೇಕಾದರೆ ಅದರ ಸೂಕ್ಷ್ಮ ಪದರಗಳನ್ನು ಅರಿಯುವುದು ಅವಶ್ಯಕ. ಜ್ಞಾನ ಎಂಬುದು ಭಾಷಾಸಾಮರ್ಥ್ಯಕ್ಕೆ ಸಂಬಂಧಿಸಿದಂತೆ ಭಾಷಾ ರಚನೆಗಳನ್ನು ಮನಸ್ಸಿನಾಳದಿಂದ ಬರಿಯ ಜ್ಞಾಪನ ಶಕ್ತಿಯಿಂದ ಆಯ್ದುತರುವ ಯಾಂತ್ರಿಕ ಕ್ರಿಯೆಯಲ್ಲ. ವ್ಯಕ್ತಿ ಮಾತನಾಡುವಾಗ ಜ್ಞಾಪಕ ಶಕ್ತಿಯಿಂದ ಒಂದೊಂದನ್ನೇ ಆಯ್ದು ಅವುಗಳನ್ನು ಜೋಡಣೆ ಮಾಡುವುದಿಲ್ಲ. ಬದಲಾಗಿ ತನ್ನಲ್ಲಿ ಸುಪ್ತವಾಗಿ ಅಂತರ್ಗತವಾಗಿರುವ ಭಾಷೆಯ ಅರಿವಿನಿಂದ ತಂದು ಭಾಷಾ ನಿರ್ಮಿತಿಗೆ ತೊಡಗುತ್ತಾನೆ. ಅವನ ನೆನಪಿನ ಆಳದಲ್ಲಿ ಹುದುಗಿರುವ ಭಾಷಾ ಜ್ಞಾನದ ನಿರ್ದಿಷ್ಟಗಳು (Specifics) ಹಾಗೂ ಸಾರ್ವತ್ರಿಕಗಳ (Universals)ನ್ನು ಜ್ಞಾಪಕ ಶಕ್ತಿಯಿಂದ ಮೆಲಕ್ಕೆ ತಂದು ಆ ಶಕ್ತಿ (Competence) ಯಿಂದಲೇ ಭಾಷಾ ನಿರ್ಮಿತಿಗೆ ತೊಡಗುತ್ತಾನೆ. ಒಟ್ಟಿನಲ್ಲಿ ವ್ಯಕ್ತಿಯ ಭಾಷಾಜ್ಞಾನವೆನ್ನುವುದು ಅವನ ಅಂತರಾಳದಲ್ಲಿ ಹುದುಗಿರುವ ಭಾಷಾ ನಿರ್ಮಿತಿಯ ಸಾಮಾನ್ಯ ನಿಯಮಗಳಿಂದೊಡಗೂಡಿದ ಬೇಕೆಂದಾಗ ಭಾಷಾಭಿವ್ಯಕ್ತಿಗೆ ಕಾರಣವಾಗಿರುವ ಜ್ಞಾನವೆಂದು ಹೇಳಬೇಕಾಗುತ್ತದೆ. ವ್ಯಕ್ತಿಯ ಬುದ್ಧಿಯಲ್ಲಿ ಮಿಳಿತಗೊಂಡಿರುವ ಭಾಷಾ ನಿಯಮಗಳು ಹಾಗೂ ಅದರಿಂದ ಹೊರಬರುವ ವ್ಯವಸ್ಥಿತವಾದ ಭಾಷಾರೂಪಗಳು ಅವನಲ್ಲಿರುವ ಭಾಷಾಶಕ್ತಿಯ ಅಂಗಗಳಾಗಿರುತ್ತವೆ. ಭಾಷಾ ಜ್ಞಾನದ ಅಂತರ್ಗತವಾಗಿ ವ್ಯಕ್ತಿಯಲ್ಲಿ ರೂಪಗೊಳ್ಳುವ ಅನೇಕ ಭಾಷಾ ಶಕ್ತಿಯ ರೂಪಗಳನ್ನು ಒಂದೊಂದಾಗಿ ಅರಿಯುವ ಕ್ರಮದ ಭಾಗಗಳ ವಿವರಣೆ ಹೀಗಿದೆ.

### 1. ಮಾತಿನ ತುಣುಕಿನ ಜ್ಞಾನ (Knowledge of speeches)

ಜ್ಞಾನದ ಬಗ್ಗೆ ಅರಿಯುವಾಗ ಯಾವುದೇ ವಿಷಯ ಅಥವ ಚಿಂತನೆಗಳಿಗೆ ವ್ಯಕ್ತಿ ಹೇಗೆ ಮೂರ್ತರೂಪಕೊಡುತ್ತಾನೆ ಎಂಬ ವಿಸ್ಮಯಕಾರಿ ಅಂಶ ಅವನ ಭಾಷಾಶಕ್ತಿಯ ಭಾಗವಾಗಿರುತ್ತದೆ. ವ್ಯಕ್ತಿ ಮಾತಿನ ಅಥವ ಬರಹದ ಅಭಿವ್ಯಕ್ತಿಗೆ ತೊಡಗುವಾಗ ತನ್ನ

ಆಲೋಚನೆಗೆ ನಿರ್ದಿಷ್ಟವಾದ ಭಾಷಾ ರೂಪವನ್ನು ಕೊಡುತ್ತಾನೆ. ಈ ರೂಪಗಳೇ ವ್ಯಕ್ತಿಯ ಆಲೋಚನೆಯ ಪಾರಿಭಾಷಿಕಗಳು ಬ್ಲೂಮ್ ಈ ಜ್ಞಾನವನ್ನು Knowledge of Terminology ಎನ್ನುತ್ತಾನೆ. ವ್ಯಕ್ತಿಯ ಅಭಿವ್ಯಕ್ತಿಯ ಕ್ರಮದಲ್ಲಿ ತನ್ನ ಆಲೋಚನೆಯನ್ನು ಗುರುತಿಸುವ, ಬೇರ್ಪಡಿಸುವ, ನೆನಪಿಸುವ, ವ್ಯಾಖ್ಯಾನಿಸುವ ಹಂತದಲ್ಲಿ ವಸ್ತು ವಿಷಯದ ಪ್ರಾತಿನಿಧಿಕಗಳಾಗಿ ಪದಗಳು ನಿರ್ಮಾಣವಾಗುತ್ತವೆ. ಇವನ್ನೇ ಭಾಷಾಜ್ಞಾನದ ಪ್ರಾಥಮಿಕ ಹಂತದ ಮಾತಿನ ತುಣಕಿನ ಜ್ಞಾನ ಎಂದು ಕರೆಯುತ್ತಾರೆ.

**2. ಪರಿಭಾಷೆಯ ಜ್ಞಾನ (Knowledge of Terminology):**

ವ್ಯಕ್ತಿ ತನ್ನ ಅಭಿವ್ಯಕ್ತಿಯಲ್ಲಿ ನಿರ್ದಿಷ್ಟ ಪರಿಭಾಷೆಯನ್ನು ರೂಪಿಸಿಕೊಳ್ಳುವುದರ ಜೊತೆಗೆ ಪರಿಭಾಷೆಯನ್ನು ತನ್ನ ಭಾಷಾ ಅಭಿವ್ಯಕ್ತಿಯ ಕ್ರಮದಲ್ಲಿ ಎಲ್ಲಿ ಬಳಸಬೇಕೆಂಬ ಜ್ಞಾನವನ್ನು ಪಡೆದುಕೊಂಡಿರುತ್ತಾನೆ. ಪಾರಿಭಾಷಿಕ ಜ್ಞಾನವೆಂದರೆ ನಿರ್ದಿಷ್ಟ ಶಾಬ್ದಿಕ ಮತ್ತು ಅಶಾಬ್ದಿಕ ಸಂಕೇತಗಳು ಭಾಷೆಯ ಸ್ವರೂಪದಲ್ಲಿ ಹೇಗೆ ಪ್ರತಿನಿಧಿಸಲ್ಪಡುತ್ತವೆ ಎಂಬುದನ್ನು ಅರಿಯುವುದೇ ಆಗಿದೆ. ಯಾವುದೇ ವಿಚಾರದ ಅಭಿವ್ಯಕ್ತಿಯ ಮೂರ್ತಸ್ವರೂಪವನ್ನು ನೀಡುವಾಗ ಆ ಪರಿಭಾಷೆಯನ್ನು ಯಾವ ಸಂದರ್ಭದಲ್ಲಿ ಬಳಸಬೇಕು ಅದರ ಗುಣಲಕ್ಷಣಗಳೇನು? ಅದರ ಅಂತಃಸಂಬಂಧಗಳೇನು ? ಭಾಷೆಯ ಅನಂತ ಪದಲೋಕದಲ್ಲಿ ತಾನು ಬಳಸಿದ ಪರಿಭಾಷೆಯ ಅರ್ಥವೆಂಥದು ಎಂಬ ಅರಿವು ವ್ಯಕ್ತಿಯಲ್ಲಿ ಇರುವುದರಿಂದಲೇ ಸೂಕ್ತ ಸಂದರ್ಭದಲ್ಲಿ ಸೂಕ್ತಪದವನ್ನು ಬಳಸುವ ಸಾಮರ್ಥ್ಯವನ್ನು ಪಡೆದುಕೊಂಡಿರುತ್ತಾನೆ. ಇಂಥ ಅರಿವಿನಿಂದಲೇ ಭಾಷೆಯ ಬಳಕೆ ಸಾಧ್ಯವಾಗುತ್ತದೆ. 'ಕನಸು' ಎಂಬ ಪದ ಸುಪ್ತಾವಸ್ಥೆಯಲ್ಲಿ ಕಂಡ ಯಾವುದೋ ಅನುಭವದರ್ಶನವನ್ನು ನೀಡುವ ಶಾಬ್ದಿಕ ಪರಿಭಾಷೆ ಎಂದು ವ್ಯಕ್ತಿಗೆ ತಿಳಿಯುತ್ತದೆ. ಆದ್ದರಿಂದ ಕನಸು ಎಂಬ ಪದ ಒಂದು ನಿರ್ದಿಷ್ಟ ಅರ್ಥ ಪರಿಕಲ್ಪನೆಯನ್ನು ನೀಡುವ ಪಾರಿಭಾಷಿಕ ಪದವಾಗಿದೆ. ಪರಿಭಾಷೆಯ ನಿರ್ಮಾಣ ಮನಸ್ಸಿನಲ್ಲಿ ಸಹಜವಾಗಿಯೇ ಆದರೂ ಅದು ಆ ಪದದ ಗುಣಧರ್ಮಸಂಬಂಧ ಹಾಗೂ ಅದು ಭಾಷೆಯ ಅರ್ಥಪ್ರಪಂಚದಲ್ಲಿ ಪಡೆದುಕೊಂಡ ಪ್ರಸಾರವನ್ನು ನಿರ್ದೇಶಿಸುತ್ತದೆ. ಮನಸ್ಸಿನಲ್ಲಿ ರೂಪಗೊಂಡ ವಿಚಾರಧಾರೆಯ ಬಾಹ್ಯ ಭಾಷಿಕ ಅಭಿವ್ಯಕ್ತಿಯಾಗಿ ಪರಿಭಾಷೆ ನಿಲ್ಲುತ್ತದೆ.

**ಸಂಪ್ರದಾಯದ ಜ್ಞಾನ (Knowledge of Convention)**

ಭಾಷಾ ಬಳಕೆ ಎಂದರೆ ಹೊಸತರ ನಿರ್ಮಾಣವಲ್ಲ. ಅದೇ ನಿರ್ದಿಷ್ಟ ವಿಧಾನವನ್ನು ಅನುಸರಿಸುತ್ತಾ ಸಂಪ್ರದಾಯವನ್ನು ಮೀರದೆ ಅಭಿವ್ಯಕ್ತಿಸುವ ಕ್ರಮ. ವಿಷಯ, ಅಭಿಪ್ರಾಯ, ಆಲೋಚನೆಯನ್ನು ನಿರ್ದಿಷ್ಟ, ಪದಬಳಕೆ, ರೀತಿ, ವಿಧಾನದ ಮೂಲಕ ತೆರದಿಡುವಿಕೆಗೆ ಸಾಂಪ್ರದಾಯಿಕ ಭಾಷಾ ಪರಿಜ್ಞಾನ ಸಹಾಯಕವಾಗುತ್ತದೆ.

ಕೆಳಗಿನ ನಾಲ್ಕು ವಾಕ್ಯಗಳನ್ನು ಪರಿಶೋಧಿಸಿ ಯಾವುದು ಸೂಕ್ತ ಎಂಬುದನ್ನು ಆಯ್ದುಕೊಳ್ಳಬೇಕು.

1 He was energetic and ambitious, his brother being lazy and indifferent.

2. He was energetic and ambitious, but his brother was lazy and indifferent
3. He was energetic and ambitious, as his brother was lazy and indifferent.
4. He was energetic and ambitious, and his brother was lazy and indifferent.

ಮೇಲಿನ ನಾಲ್ಕೂ ವಾಕ್ಯಗಳಲ್ಲಿ ಮೊದಲನೆಯ ಭಾಗ ಒಂದೇ ತೆರನಾಗಿದೆ. ಆದರೆ ಎರಡನೇ ಭಾಗ ಭಿನ್ನವಾಗಿದ್ದು ಯಾವುದು ಮೊದಲನೇ ಭಾಗದ ಅರ್ಥ ಸಾಮ್ಯತೆಯೊಂದಿಗೆ ಸೂಕ್ತವಾಗುತ್ತದೆ ಎಂಬುದನ್ನು ನೋಡಿದಾಗ ತಾರತಮ್ಯ ಜ್ಞಾನ ಹಾಗೂ ಸೂಕ್ತವನ್ನು ಕಂಡುಕೊಳ್ಳುವಿಕೆಯಲ್ಲಿ ಎರಡನೇ ವಾಕ್ಯವೇ ಹೆಚ್ಚು ಸೂಕ್ತವೆನಿಸುತ್ತದೆ. ಅವನು ಶಕ್ತಿ ಶಾಲಿಯೂ, ಆಶಾವಾದಿಯೂ ಆಗಿದ್ದ, ಆದರೆ ಅವನ ಸೋದರ ಸೋಮಾರಿ ಮತ್ತು ಉದಾಸೀನನಾಗಿದ್ದ ಎಂಬಲ್ಲಿ ಆದರೆ ಎನ್ನುವ ಪದವೇ ಎರಡೂ ಪದಪುಂಜಗಳ ವಾಕ್ಯಬಂಧಗಳನ್ನು ಬೆಸೆಯುವಲ್ಲಿ ಸೂಕ್ತವಾಗುತ್ತದೆ. ನಮ್ಮ ಸಾಂಪ್ರದಾಯಿಕ ರೀತಿಯೂ ಗ್ರಹಿಕೆಯೂ ನಮಗೆ ವಿಷಯ ಪರಿಜ್ಞಾನವನ್ನು ನೀಡುತ್ತದೆ.

**ನಿರ್ದಿಷ್ಟ ವಸ್ತುಸ್ಥಿತಿಯ ಜ್ಞಾನ (Knowledge of specific facts):**

ಭಾಷೆಯನ್ನು ಬಳಸುವಾಗ ವಸ್ತುಸ್ಥಿತಿಯ ಜ್ಞಾನಕೂಡ ಮುಖ್ಯವಾಗುತ್ತದೆ. ಶಾಬ್ದಿಕ ಸಂವಹನಕ್ಕೆ ವಸ್ತುಸ್ಥಿತಿಯ ಜ್ಞಾನವು ಹೆಚ್ಚು ಖಚಿತತೆಯನ್ನು ನೀಡುತ್ತದೆ. 'ಭಾರತದ ಸ್ವಾತಂತ್ರ್ಯಾನಂತರ' ಎಂದಾಗ 1947ರ ನಂತರ ಎಂಬ ಖಚಿತ ಪರಿಜ್ಞಾನ ನಮಗೆ ಇರಬೇಕಾಗುತ್ತದೆ. ನಮ್ಮ ಭಾಷಾ ಜ್ಞಾನದ ಭಾಗವಾದ ನಿರ್ದಿಷ್ಟ ವಸ್ತುಸ್ಥಿತಿ ಜ್ಞಾನವು ನಮ್ಮ ಅಭಿವ್ಯಕ್ತಿಗೆ ಖಚಿತತೆಯನ್ನು ನೀಡಲು ಸಹಕಾರಿಯಾಗುತ್ತದೆ.

**ವರ್ಗೀಕರಣದ ಜ್ಞಾನ (Knowledge of Classification)**

ಭಾಷಾ ಬಳಕೆಯಲ್ಲಿ ವಸ್ತುವಿನ ಪ್ರತಿಪಾದನೆಗೆ ಪೂರಕವಾಗಿ ಅದರ ವರ್ಗ ವಿಭಜನೆ ಜೋಡಣೆಗಳ ಅರಿವು ಆಗತ್ಯವಾಗಿ ಬೇಕಾಗುತ್ತದೆ. ಸಾಹಿತ್ಯದ ಬಗ್ಗೆ ಅಭಿವ್ಯಕ್ತಿಸುವಾಗ ಸಹಜವಾಗಿ ಗದ್ಯಪದ್ಯಪ್ರಕಾರದ ವಿಭಜನೆ ಅಗತ್ಯವಾಗಿ ತಿಳಿದಿರಬೇಕಾಗುತ್ತದೆ. ಅಂತೆಯೇ ಅಭಿವ್ಯಕ್ತಿಯಲ್ಲಿ ಪ್ರಕಟಗೊಳ್ಳುವ ತರತಮಜ್ಞಾನದಂತೆ ಭಿನ್ನ ರಚನೆಗಳನ್ನು ಆರಿಯುವ ಜ್ಞಾನವು ವ್ಯಕ್ತಿಯಲ್ಲಿ ಅಂತರ್ಗತವಾಗಿ ಇರುತ್ತದೆ. ಇದನ್ನೇ ಭಾಷಾ ಜ್ಞಾನದ ಅಂತರ್ಗತವಾದ ವರ್ಗೀಕರಣ ಜ್ಞಾನ ಎಂದು ಗುರುತಿಸುತ್ತಾರೆ.

**ಪ್ರವೃತ್ತಿ ಹಾಗೂ ಅನುಕ್ರಮದ ಜ್ಞಾನ (Knowledge of Trends and sequences)**

ಜನಜೀವನದಲ್ಲಿ ಸ್ಥಿತ್ಯಂತರಗೊಳ್ಳುತ್ತಿರುವ ಚಲನಶೀಲ ಸಂಸ್ಕೃತಿಯ ಅರಿವು, ಭಾಷೆಯನ್ನು ಬಳಸುವ ಸಾಮರ್ಥ್ಯ ಮೇಲ್ಮೈಸ್ತರದಲ್ಲಿ ಸಾಮಾನ್ಯವಾಗಿರುವಂತೆ ಕಂಡರೂ ಅದರ ಅಂತರಾಳದಲ್ಲಿ ಇಡೀ ಮನುಷ್ಯಕುಲದ ಅಭಿವ್ಯಕ್ತಿಯ ಎಷ್ಟೋ ಅಂಶಗಳು ಹುದುಗಿಕೊಂಡಿವೆ. ಕಾಲ, ದೇಶ ಸಂದರ್ಭಕ್ಕನುಗುಣವಾಗಿ ಬದಲಾವಣೆಗೊಳ್ಳುತ್ತಿರುವ ಆಲೋಚನಾ ಪ್ರವೃತ್ತಿಯ

ಅರಿವಿನ ಜೊತೆಗೆ ಅದನ್ನುಅನುಕ್ರಮವಾಗಿ ಜೋಡಿಸುವ ಕ್ರಮವೂ ತಿಳಿದಿರುವುದು ಅವಶ್ಯಕ. ಭಾಷಾ ಜ್ಞಾನದಲ್ಲಿ ಅಂತರ್ಗತವಾದ ಈ ಪ್ರವೃತ್ತಿ ಹಾಗೂ ಅದನ್ನು ಅನುಕ್ರಮವಾಗಿ ಜೋಡಿಸಿಡುವ ಜ್ಞಾನ ಕೂಡ ಮುಖ್ಯವಾಗಿದೆ.

**ವಸ್ತುವಿನ ಗುಣ ವಿಮರ್ಶೆಯ ಜ್ಞಾನ (Knowledge of criteria)**

ಶಾಬ್ದಿಕ ಸ್ವರೂಪದಲ್ಲಿ ಅಭಿವ್ಯಕ್ತಗೊಳ್ಳದ ಭಾಷಾ ಪರಿಜ್ಞಾನದಲ್ಲಿ ನಮ್ಮ ಆಲೋಚನೆಯ ಒಳಗಡೆಯೆ ವಸ್ತುವಿನ ಗುಣ ವಿಮರ್ಶೆಯ ಜ್ಞಾನದ ಅರಿವು ಸುಪ್ತವಾಗಿ ರೂಪಗೊಂಡಿರುತ್ತದೆ.

**ಪದ್ಧತಿಯ ಜ್ಞಾನ (Knowledge of methodology)**

ಭಾಷಾಭಿವ್ಯಕ್ತಿಯಲ್ಲಿ ವಿಷಯದ ಪ್ರತಿಪಾದನೆಗೆ, ವಿಷಯದ ಅನ್ವೇಷಣೆಗೆ ಬೇಕಾದ ವೈಧಾನಿಕತೆಯ ಅರಿವು ಭಾಷಾಜ್ಞಾನದಲ್ಲಿ ಅಂತಃರ್ಗತವಾಗಿರುತ್ತದೆ. ಈ ವೈಧಾನಿಕತೆಯ ಅರಿವಿಲ್ಲದಿದ್ದರೆ ಭಾಷೆಯನ್ನು ಕಾಲ, ದೇಶ, ಸಂದರ್ಭದ ವಿಭಿನ್ನಪರಿಸರಗಳಲ್ಲಿ ಇಷ್ಟು ನಿಖರವಾಗಿ ಬಳಸಲು ಆಗುತ್ತಿರಲಿಲ್ಲ. ನಿರ್ಮಲ ಆರೋಗ್ಯ ರಕ್ಷಣೆಗೆ ದೇಹಕ್ಕೆ ಬೇಕಾದ ಪೌಷ್ಠಿಕ ಆಹಾರದಲ್ಲಿ ವಿಟಮನ್‌ಗಳ ಸಮಪ್ರಮಾಣದ ಬೆರಕೆ ಹೇಗೆ ಆಗಿರುತ್ತದೆಯೋ ಹಾಗೆಯೇ ನಿಖರವಾದ ಭಾಷಾಜ್ಞಾನದಲ್ಲಿ ನಿರ್ದಿಷ್ಟ ಪದ್ಧತಿಯ ಜ್ಞಾನದ ಅರಿವು ಅಂತರ್ಗತವಾಗಿ ಮಿಳಿತ ಗೊಂಡಿರುತ್ತದೆ.

**ಸಾರ್ವತ್ರಿಕಗಳ ಹಾಗೂ ಅಮೂರ್ತಗಳ ಜ್ಞಾನ (Knowledge of the Universals and Abstractions):**

ಭಾಷಾ ಜ್ಞಾನದ ಒಳಹೊಕ್ಕು ನೋಡಿದಾಗ ಅನೇಕ ಸಾರ್ವತ್ರಿಕ ಹಾಗೂ ಅಮೂರ್ತ ಪರಿಕಲ್ಪನೆಗಳ ಜ್ಞಾನ ಪದರ ಪದರವಾಗಿ ರೂಪಗೊಂಡಿರುವುದು ಗೋಚರವಾಗುತ್ತದೆ. ಈ ಜ್ಞಾನದ ಅಡಿಯಲ್ಲಿ ಅನೇಕ ಸಂಕೀರ್ಣ ವ್ಯವಸ್ಥೆಗಳು ಮಿಳಿತಗೊಂಡು ಭಾಷಾಜ್ಞಾನದ ಅಭಿವ್ಯಕ್ತಿ. ಆಲೋಚನಾ ಕ್ರಮವಾಗಿ ರೂಪಗೊಂಡಿರುತ್ತದೆ. ನಿರ್ದಿಷ್ಟ ತತ್ವ ಹಾಗೂ ಸಾಮಾನ್ಯೀಕರಣ (Generalization) ದ ನಿಯಮ ಸೇರಿಕೊಂಡು ಭಾಷೆಯ ಅರಿವಾಗಿ ರೂಪಗೊಂಡಿರುತ್ತದೆ. ಉದಾಹರಣೆಗೆ ದೈವಾರಾಧನೆಯೆಂಬ ಸಾಮಾನ್ಯ ಸಾಂಸ್ಕೃತಿಕ ಸಂರಚನೆಯೊಳಗೆ ಸ್ತ್ರೀ ಶಕ್ತಿಯ ಆರಾಧನೆಯೆಂಬ ನಿರ್ದಿಷ್ಟ ತತ್ವ ಅಡಕಗೊಂಡಿರುತ್ತದೆ. ಇದು ಸಾರ್ವತ್ರಿಕದೊಳಗಿರುವ ನಿರ್ದಿಷ್ಟ ತತ್ವ. ಭಾಷಾಗ್ರಹಿಕೆ, ಭಾಷಾಭಿವ್ಯಕ್ತಿಯೊಳಗೆ ಎಷ್ಟೋ ಸಿದ್ಧಾಂತಗಳು, ಸಂರಚನೆಗಳು ಒಂದಕ್ಕೊಂದು ಬೆಸದುಕೊಂಡಿರುತ್ತವೆ. ಉದಾಹರಣೆಗೆ ನಿರ್ದಿಷ್ಟ ಸಂಸ್ಕೃತಿಯ ಆಗುಹೋಗುಗಳಲ್ಲಿ ಅಹಿಂಸಾವಾದ ಎಂಬ ಸಿದ್ಧಾಂತ ಹೇಗೆ ಮೂಡಿಬಂದಿದೆ ಎಂಬುದನ್ನು ಅರಿಯಬಹುದು. ಅಲ್ಲದೆ ವಿಶ್ವ ಹೇಗೆ ಹುಟ್ಟಿತು ಎಂಬ ಬಗ್ಗೆ ತಮ್ಮದೇ ಆದ ಸಿದ್ಧಾಂತವನ್ನು ಮಂಡಿಸುವ ಆದಿವಾಸಿಗಳು ತಾವು ಕಂಡುಕೊಂಡ ಬದುಕಿನ ವಿಚಾರದಲ್ಲಿ ಯಾವುದೋ ಚೈತನ್ಯ ರೂಪವನ್ನು ಒಂದು ಸಿದ್ಧಾಂತವಾಗಿ ಮಂಡಿಸುತ್ತಾರೆ;

ಅಲ್ಲದೇ ವಿಶ್ವದ ರಚನೆಗಳನ್ನು ಗ್ರಹಿಸಿಕೊಳ್ಳುವ ಪ್ರಯತ್ನ ಮಾಡುತ್ತಾರೆ. ಎಷ್ಟೋ ಸಾರ್ವತ್ರಿಕ ಅಂಶಗಳಿಂದ ಅಮೂರ್ತ ಜಗತ್ತಿನ ಒಳಗೆ ಪ್ರವೇಶ ಮಾಡುತ್ತಾರೆ.

ಭಾಷಾ ಜ್ಞಾನದ ಅರಿವೆಂಬುದು ತುಂಬ ಸಂಕೀರ್ಣವಾದ ಭಾಷಾ ಸಾಮರ್ಥ್ಯದ ತುಂಬ ಒಳನೋಟಗಳನ್ನು ಬಿಂಬಿಸುವ ಹೊಸ ಅನುಭವ. ಎಲ್ಲರೂ ಭಾಷೆಯನ್ನು ಸರಳವಾದ ಕ್ರಿಯೆ ಎಂದು ಗಮನಿಸುತ್ತಾರೆ. ಆದರೆ ಅದರ ಅಂತರಂಗದಲ್ಲಿ ಹುದುಗಿರುವ ಎಷ್ಟೋ ಸೂಕ್ಷ್ಮ ಅಂಶಗಳು ಭಾಷೆ ಹೇಗೆ ರೂಪಗೊಳ್ಳುತ್ತದೆ ಎಂಬ ಅಂಶದ ಕಡೆ ನಮ್ಮ ಗಮನವನ್ನು ಹರಿಸಲು ಸಹಕಾರಿಯಾಗಿದೆ. ಬಿಡಿ ಬಿಡಿಯಾಗಿ ಭಾಷಾಜ್ಞಾನವನ್ನು ನೋಡಿದಾಗ ಅದರ ಕ್ರಿಯಾತ್ಮಕ ಮುಖದ ಪರಿಚಯವಾಗುತ್ತದೆ.

**ಬೌದ್ಧಿಕ ಸಾಮರ್ಥ್ಯಗಳು ಮತ್ತು ಕೌಶಲಗಳು :**

ಭಾಷಿಕ ವಸ್ತು ಮತ್ತು ಸಮಸ್ಯೆಗಳೊಡನೆ ವ್ಯವಹರಿಸುವಾಗ ಬೌದ್ಧಿಕ ಸಾಮರ್ಥ್ಯ (Intellectual Ablity) ಮತ್ತು ಕೌಶಲಗಳು ಯಾವಾಗಲೂ ಪ್ರತಿನಿಧಿಸುವುದು ವ್ಯವಸ್ಥಿತವಾದ ವಿಧಾನ ಮತ್ತು ಸಾಮಾನ್ಯ ತಂತ್ರಗಳನ್ನು. ಇದೊಂದು ರೀತಿಯ ಮಾನಸಿಕ ಪ್ರಕ್ರಿಯೆ. ನಿರ್ದಿಷ್ಟ ಉದ್ದಿಶ್ಯವನ್ನು ಸಾಧಿಸಲು, ಅವುಗಳನ್ನು ವ್ಯವಸ್ಥಿತವಾಗಿ ರೂಪಿಸಲು ಹಾಗೂ ಪುನರ್‌ರೂಪಿಸಲು ಇವು ಸಹಕಾರಿಯಾಗುತ್ತವೆ. ಭಾಷಿಕ ಜ್ಞಾನದ ಕೆಳಹಂತದ ಸಾಮರ್ಥ್ಯಕ್ಕಿಂತ ಸ್ವಲ್ಪ ಮುಂದುವರಿದ ಸಾಮರ್ಥ್ಯಗಳಲ್ಲಿ ಗ್ರಹಿಕೆ (comprehension) ಬಹಳ ಮುಖ್ಯವಾದುದು. ಇದನ್ನು ಮಧ್ಯದ ಹಂತದ ಸಾಮರ್ಥ್ಯ ಎಂದೂ ಗುರುತಿಸಲಾಗುತ್ತದೆ.

**ಗ್ರಹಿಕೆ (Comprehensions):**

ಗ್ರಹಿಕೆ ಎಂಬುದು ಸಾಮಾನ್ಯ ಜ್ಞಾನಕ್ಕಿಂತ ಸ್ವಲ್ಪ ಉನ್ನತವಾದ ಹಾಗೂ ಅರಿವಿನ ಹಂತಕ್ಕಿಂತ ಕೆಳಹಂತದ ಸಾಮರ್ಥ್ಯವನ್ನು ಪ್ರತಿನಿಧಿಸುತ್ತದೆ. ಕೇವಲ ಜ್ಞಾನದಿಂದ ಭಾಷಾಕ್ರಿಯೆ ರೂಪಗೊಳ್ಳುವುದಿಲ್ಲ. ಭಾಷೆ ಬಗೆಗಿನ ಜ್ಞಾನ ಭಾಷೆಯನ್ನು ಗುರುತಿಸಿಕೊಳ್ಳುವಲ್ಲಿ ಸಹಾಯಕವಾಗುತ್ತದೆ. ಬರಿಯ ಭಾಷೆಯ ಬಗೆಗೆ ಇರುವ ಜ್ಞಾನದಿಂದಲೇ ವ್ಯಕ್ತಿ ತನ್ನೆದುರಿಗಿರುವ ಮೂರ್ತ ಮತ್ತು ಅಮೂರ್ತ ವಿಚಾರಗಳನ್ನು ಶಾಬ್ದಿಕ ಚಿಹ್ನೆಗಳ ಮೂಲಕ ಗ್ರಹಿಸುವುದಿಲ್ಲ. ಅದಕ್ಕೂ ಮುಂದೆ ಹೋಗಿ ತನ್ನ ಮನಸ್ಸಿನೊಳಗೆ ಜ್ಞಾನದಿಂದ ಪಡೆದುಕೊಂಡ ಭಾಷಿಕ ಅನುಭವವನ್ನು ಗ್ರಹಿಸಿಕೊಳ್ಳುತ್ತಾನೆ. ಇತರರು ಮಾತನಾಡಿದ ವಿಚಾರವನ್ನು ಗ್ರಹಿಸಿಕೊಂಡು ತಾನು ಅದನ್ನು ತನ್ನ ಮನಸ್ಸಿನಲ್ಲಿ ಪುನರ್‌ರೂಪಿಸಿಕೊಂಡು ಅಭಿವ್ಯಕ್ತಿಸುವ ಕ್ರಿಯೆಯನ್ನು ಸ್ಥೂಲವಾಗಿ ಗ್ರಹಿಕೆ ಎನ್ನಬಹುದು. ತಾನು ಗ್ರಹಿಸಿಕೊಂಡದ್ದನ್ನು ಈ ಹಂತದಲ್ಲಿ ಇತರ ವಿಚಾರದ ಜೊತೆಗೆ ತುಲನೆಮಾಡದೆ ಕೇವಲ ಅಂತರ್ಗತ ಮಾಡಿಕೊಂಡು ಗ್ರಹಿಸುವ ಸಾಮರ್ಥ್ಯ ಪಡೆಯುವ ಕ್ರಮವೇ ಗ್ರಹಿಕೆ. ತಾನು ಗ್ರಹಿಸಿಕೊಂಡ ವಿಚಾರವನ್ನು ವಿವೇಚಿಸುವ ಪ್ರಕ್ರಿಯೆಗೂ ತೊಡಗದೆ ಕೇವಲ ಇಂದ್ರಿಯಗಳ ಮೂಲಕ ಗ್ರಹಿಸುವ ಸಾಮರ್ಥ್ಯವನ್ನು ಪಡೆದುಕೊಂಡಿರುವ ಕ್ರಮವೇ ಗ್ರಹಿಕೆ.

ತಾನು ಕೇಳಿಸಿಕೊಂಡ ಶಾಬ್ದಿಕ ವಿಚಾರವನ್ನು ಸಂಕೇತಾತ್ಮಕ ವ್ಯಾಖ್ಯೆಯಾಗಿ ಪರಿವರ್ತಿಸುವ

(Translation) ಹಾಗೂ ಸಂಕೇತಾತ್ಮಕ ವ್ಯಾಖ್ಯೆಯನ್ನು ಶಾಬ್ದಿಕ ವ್ಯಾಖ್ಯೆಯಾಗಿ ರೂಪಿಸುವ ಜ್ಞಾನವೇ ಗ್ರಹಿಕೆ. ಅಸಾಹಿತ್ಯಿಕ ರೂಪಕಗಳು, ಚಿಹ್ನೆಗಳು, ವ್ಯಂಗ್ಯ ಹಾಗೂ ಉತ್ಪ್ರೇಕ್ಷೆಗಳನ್ನು ಅರ್ಥೈಸಿಕೊಳ್ಳುವ ಸಾಮಾನ್ಯ ಜ್ಞಾನವನ್ನು ಗ್ರಹಿಕೆ ಎಂದು ಗುರುತಿಸುತ್ತಾರೆ.

ಗ್ರಹಿಕೆಯನ್ನು ಸಾಮಾಜಿಕ ವಸ್ತುವನ್ನು ಅರ್ಥಮಾಡಿಕೊಳ್ಳುವ, ಅದನ್ನು ನಿರೂಪಿಸುವ (Interpretation) ಜ್ಞಾನವೆನ್ನಬಹುದು. ಅಪೇಕ್ಷಿತ ಹಂತದ ಸಾಮಾನ್ಯ ನಿಯಮಗಳ ಮೂಲಕ ಆಲೋಚನೆಯ ಕ್ರಿಯೆಯನ್ನು ಗ್ರಹಿಸುವ ಕ್ರಮವೇ ಗ್ರಹಿಕೆ. ಸಂವಹನ ಪ್ರಕ್ರಿಯೆಯನ್ನು ಸಾರರೂಪದಲ್ಲಿ ಗ್ರಹಿಸಿ ವಿವರಿಸುವ ಜ್ಞಾನವೇ ಗ್ರಹಿಕೆ.

ಅಭಿವ್ಯಕ್ತಿಯ ಮೂಲ ಹಂತದ ದತ್ತ ಸಾಮಗ್ರಿಯನ್ನು ಪೂರ್ಣ ಜಾಲಾಡಿ ಅದರಾಚೆ ಇರುವ ಪರಿಣಾಮ, ಪ್ರಭಾವ ಹಾಗೂ ಸಾಮ್ಯತೆಯ ಪರಿಣಾಮವನ್ನರಿಯುವ ಗ್ರಹಿಕಾ ಸಾಮರ್ಥ್ಯವನ್ನೇ ಹೆಚ್ಚಿನ ಗ್ರಹಿಕೆ (Extrapolation)ಎನ್ನಬಹುದು.

**3. ಅನ್ವಯ (Application):**

ಭಾಷೆಯನ್ನು ಬಳಸುವ ಸಂದರ್ಭದಲ್ಲಿ ಆನ್ವಯಿಕತೆ ಮುಖ್ಯವಾದ ಕಾರ್ಯವನ್ನು ಮಾಡುತ್ತದೆ. ಭಾಷೆಯ ಜ್ಞಾನದ ಗ್ರಹಿಕೆಗೆ ಪೂರಕವಾಗಿ ಕೆಲಸ ಮಾಡುವ ಆನ್ವಯಿಕತೆ ಯಾವುದೇ ನಿರ್ದಿಷ್ಟ ಹಾಗೂ ಮೂರ್ತ ಸಂದರ್ಭದಲ್ಲಿ ಭಾಷಾ ಬಳಕೆಯ ವೈಧಾನಿಕತೆ ಹಾಗೂ ಸಾಮಾನ್ಯ ನಿಯಮಗಳನ್ನು ಅನ್ವಯಿಸುವ ಕೌಶಲ. ಕೇವಲ ಜ್ಞಾನದ ಗ್ರಹಿಕೆಯಿಂದಲೇ ಭಾಷಾ ಭಿವ್ಯಕ್ತಿ ಸಾಧ್ಯಗೊಳ್ಳುವುದಿಲ್ಲ. ನಿರ್ದಿಷ್ಟ ಆಲೋಚನೆ, ವಿಚಾರಗಳಿಗೆ ಮೂರ್ತ ಸ್ವರೂಪ ನೀಡುವ ಭಾಷಾ ಸೂತ್ರಗಳನ್ನು ಗ್ರಹಿಕೆಯ ಹಂತದಲ್ಲೇ ಸ್ಥಗಿತಗೊಳಿಸದೇ ಅವನ್ನು ಸಂದರ್ಭಕ್ಕೆ ತಕ್ಕಂತೆ ಅನ್ವಯಿಸುವ ಜ್ಞಾನವೂ ಅವಶ್ಯಕ. ಅನ್ವಯ ಎಂಬುದು ಭಾಷೆಯ ತಾಂತ್ರಿಕ ತತ್ವಗಳ, ವಿಚಾರಗಳ, ಸಿದ್ಧಾಂತಗಳ ಹಿನ್ನೆಲೆಯಲ್ಲಿ ಅದನ್ನು ಅನುಷ್ಠಾನ ಗೊಳಿಸಿಕೊಳ್ಳುವ ಕ್ರಿಯೆ. ಭಾಷೆ ಮನಸ್ಸಿನ ಮೂಸೆಯುಲ್ಲಿ ಬೆಂದು ಪಕ್ವಗೊಂಡು ಹೊರಬರುವ ಹಂತದಲ್ಲಿ ಏನೇನು ವಿಸ್ತೃತವಾದ ಕ್ರಿಯೆ ಜರುಗುತ್ತದೆ ಎಂಬುದನ್ನು ನೋಡಿದ ಭಾಷಾಜ್ಞಾನ, ಗ್ರಹಿಕೆಯ ನಂತರದ ಕ್ರಿಯೆ ಅನ್ವಯ ಇದರ ನಂತರದ ಸಾಮರ್ಥ್ಯಗಳೆಲ್ಲ ಉನ್ನತದ ಹಂತದ ಸಾಮರ್ಥ್ಯಗಳು.

**4. ವಿಶ್ಲೇಷಣೆ (Analysis)**

ವಿಶ್ಲೇಷಣೆ ಭಾಷಾಪ್ರಕ್ರಿಯೆಯಲ್ಲಿ ನಡೆಯುವ ಉನ್ನತ ಹಂತದ ಕ್ರಿಯೆ. ಸಂವಹನ ಸಮಸ್ಯೆಯನ್ನು ವಿಭಿನ್ನ ಘಟಕಗಳಾಗಿ ವಿಭಾಗಿಸಿ ಅದರ ಅರ್ಥವನ್ನು ಸಮಗ್ರವಾಗಿ ನೋಡುವ ಪ್ರಕ್ರಿಯೆಯೇ ವಿಶ್ಲೇಷಣೆ. ಅಂದರೆ ಭಾಷೆಯನ್ನು ತಿಳಿಯುವ ಗ್ರಹಿಸುವ ಅನ್ವಯಿಸುವ ವಿಶ್ಲೇಷಿಸುವ ಜ್ಞಾನ ವಲಯದ ಉನ್ನತ ಕೌಶಲವೇ ವಿಶ್ಲೇಷಣೆ. ವಿಶ್ಲೇಷಣೆಯ ಕ್ರಿಯೆ ಮೂರು ಹಂತಗಳಲ್ಲಿ ನಡೆಯುತ್ತದೆ.

**ಘಟಕಗಳ ವಿಶ್ಲೇಷಣೆ**

ಭಾಷಾ ಸಂವಹನವನ್ನು ವಿವಿಧ ಘಟಕಗಳಾಗಿ ವಿಂಗಡಿಸಿ ಅವುಗಳಿಂದ ಭಾಷಾಕ್ರಿಯೆಯನ್ನು

ನೋಡುವ ಕ್ರಿಯೆ ವಿಶ್ಲೇಷಣೆಯಲ್ಲಿ ನಡೆಯುತ್ತದೆ. ಸಂವಹನವನ್ನು ಬಿಡಿ ಬಿಡಿ ಘಟಕಗಳಾಗಿ ವಿಭಜಿಸಿ ಅದರ ಅರ್ಥವನ್ನು ಸಮಗ್ರವಾಗಿ ನೋಡುವ ಕ್ರಿಯೆ ಉನ್ನತ ಹಂತದ ಸಾಮರ್ಥ್ಯವಾಗಿದೆ. ಭಾಷಾಘಟಕಗಳನ್ನು ಸಮಗ್ರವಾಗಿ ಗ್ರಹಿಸುವ, ಅರ್ಥವಲಯವಾಗಿ ಬೇರ್ಪಡಿಸುವ ಜ್ಞಾನವಲಯದ ಕಲೆಗಾರಿಕೆಯೆ ಘಟಕಗಳ ವಿಶ್ಲೇಷಣೆ. ಸಂವಹನದಲ್ಲಿ ವ್ಯಕ್ತವಾಗಿರುವ ಮೂಲ ಅಂಶಗಳನ್ನು ಗುರುತಿಸುವ ಸಾಮರ್ಥ್ಯವೇ ವಿಶ್ಲೇಷಣೆ. ಸಂವಹನದಲ್ಲಿ ಧ್ವನಿಸುವ ಅರ್ಥವನ್ನು ಗುರುತಿಸಿ ಸಂಗತಿಗಳನ್ನು ಊಹೆಗಳಿಂದ ಬೇರ್ಪಡಿಸಿ ನೋಡುವ ಕಲೆಗಾರಿಕೆ ಭಾಷಾವಿಶ್ಲೇಷಣೆಯ ಪ್ರಮುಖ ಅಂಗವಾಗಿದೆ.

**ಸಂಬಂಧದ ವಿಶ್ಲೇಷಣೆ**

ಸಂವಹನ ವಸ್ತು ಹಾಗೂ ಅದರ ಘಟಕಗಳಿಗಿರುವ ಅಂತಃಸಂಬಂಧವನ್ನು ಅರಿಯುವ ಕೌಶಲವೇ ಸಂಬಂಧದ ವಿಶ್ಲೇಷಣೆ. ಯಾವುದೇ ನಿರ್ದಿಷ್ಟ ಸುದ್ದಿಯಲ್ಲಿರುವ ವಸ್ತುವಿನ ಸುಸಂಗತಿಯ ಪರಿಚಯ ಸಂಬಂಧ ವಿಶ್ಲೇಷಣೆಯ ಅಂಗವಾಗಿರುತ್ತದೆ. ಕೊಟ್ಟ ಪಠ್ಯದ ವಿಚಾರಗಳ ಒಳ ಸಂಬಂಧಗಳನ್ನು ಅರಿಯುವ ಕೌಶಲವೇ ಸಂಬಂಧದ ವಿಶ್ಲೇಷಣೆಯಾಗಿದೆ.

**ವ್ಯವಸ್ಥಿತ ತತ್ವಗಳ ವಿಶ್ಲೇಷಣೆ**

ಸಂಘಟನೆ, ವ್ಯವಸ್ಥಿತವಾದ ಜೋಡಣೆ ಮತ್ತು ರಚನೆಗಳು ಒಗ್ಗೂಡಿಕೊಂಡು ಸಂವಹನವಾಗಿರುತ್ತದೆ. ಅಂದರೆ ಈ ರೀತಿಯ ಸಂವಹನದಲ್ಲಿ ಬಾಹ್ಯ ಮತ್ತು ಆಂತರಿಕ ರಚನೆಗಳಿರುತ್ತವೆ. ರಚನೆ ಹಾಗೂ ಅವುಗಳ ಜೋಡಣೆ ಇಡೀ ಸಂವಹನವನ್ನು ಒಂದು ಘಟಕವನ್ನಾಗಿ ಮಾಡಿರುತ್ತದೆ.

ಸಾಹಿತ್ಯಿಕ ರೂಪಗಳ ಮತ್ತು ರಚನೆಗಳ ಅಥವ ಕಲಾತ್ಮಕ ಕೃತಿಯಲ್ಲಿ ಅಡಕವಾಗಿರುವ ಅರ್ಥವನ್ನು ತಿಳಿಯುವ ಸಾಮರ್ಥ್ಯದಿಂದ ವ್ಯವಸ್ಥಿತ ತತ್ವಗಳ ವಿಶ್ಲೇಷಣೆಯಾಗುತ್ತದೆ. ಮಾತಿನ ಸಂವಹನ ಇಡಿಯಾಗಿ ಘಟಕಗಳ, ಅವುಗಳ ಸಂಬಂಧಗಳ ವ್ಯವಸ್ಥಿತ ವಿಶ್ಲೇಷಣೆಯಾಗಿರುತ್ತದೆ.

**5. ಸಂಯೋಜನೆ (Synthesis)**

ಭಾಷಾ ಘಟಕಗಳನ್ನು ಹಾಗೂ ಅವುಗಳ ರಚನೆಗಳನ್ನು ಒಂದುಗೂಡಿಸಿ ಒಟ್ಟು ರೂಪವಾಗುವಂತೆ ಮಾಡುವುದೇ ಸಂಯೋಜನೆ. ಇದು ಭಾಷಾ ತುಣುಕುಗಳ ಭಾಗಗಳ ಹಾಗೂ ವಸ್ತುಗಳೊಡನೆ ನಡೆಸುವ ಕ್ರಿಯೆಯ ಭಾಗವಾಗಿರುತ್ತದೆ. ಭಾಷಾ ಭಾಗಗಳನ್ನು ಒಗ್ಗೂಡಿಸಿ ಹೊಸ ರಚನೆಯೊಂದರ ಹಾಗೂ ಹೊಸ ಅರ್ಥದ ರೂಪವೊಂದರ ನಿರ್ಮಾಣವೇ ಸಂಯೋಜನೆ. ಇದು ವಿಶಿಷ್ಟ ಸಂವಹನದ ನಿರ್ಮಾಣ ಹಾಗೂ ಅಮೂರ್ತ ಸಂಬಂಧಗಳ ನಿಷ್ಪನ್ನತೆಯಿಂದ ಕೂಡಿಕೊಂಡಿರುತ್ತದೆ.

**ವಿಶಿಷ್ಟಸಂವಹನದ ನಿರ್ಮಾಣ**

ಮಾತುಗಾರ, ಬರಹಗಾರರು ತನ್ನ ವಿಚಾರಗಳನ್ನು ಅನುಭವಗಳನ್ನು ಇತರರಿಗೆ ಸಂವಹಿಸಿಸಲು ತನ್ನ ಭಾಷಾಸಾಮಗ್ರಿಯನ್ನು ವಿಶೇಷವಾಗಿ ಸಿದ್ಧಪಡಿಸಿಕೊಳ್ಳಬೇಕಾಗುತ್ತದೆ.

ಪರಿಣಾಮಕಾರಿಯಾಗಿ ಸ್ವಂತ ಅನುಭವವನ್ನು ಇತರರಿಗೆ ಕಥನಿಸುವ ಸಾಮರ್ಥ್ಯವೇ ವಿಶಿಷ್ಟ ಸಂವಹನದ ವಿಧಾನವಾಗುತ್ತದೆ. ಭಾಷಾ ಘಟಕಗಳ ಸಂಯೋಜನೆ ವಿಶಿಷ್ಟ ಸಂವಹನದ ನಿರ್ಮಾಣಕ್ಕೆ ಕಾರಣವಾಗುತ್ತದೆ. ಸಂವಹನಿಗ ಭಾಷೆಯನ್ನು ಹದಗೊಳಿಸಿಕೊಳ್ಳುತ್ತಾನೆ.

**ಜೋಡಿ ಅಮೂರ್ತ ಸಂಬಂಧಗಳ ನಿಷ್ಪನ್ನ**

ನಿರ್ದಿಷ್ಟ ದತ್ತ ಸಾಮಗ್ರಿಯನ್ನು ವಿವರಿಸಲು ಅಥವ ವರ್ಗೀಕರಿಸಲು ಬೇಕಾದ ಅಮೂರ್ತ ರಚನೆಗಳು ಹೇಗೆ ಸಂಯೋಜಿಸಲ್ಪಟ್ಟಿರುತ್ತವೆ ಎಂಬುದು ಸಂಯೋಜನೆಯ ಮುಖ್ಯ ವಿಚಾರ. ಅಮೂರ್ತ ವಿಚಾರಗಳಿಗೆ ಭಾಷೆಯ ಮೂಲಕ ಮೂರ್ತರೂಪಕೊಡುವ ಕ್ರಿಯೆ ಇಲ್ಲಿ ನಡೆಯುತ್ತದೆ.

ಭಾಷಾ ಸಾಮರ್ಥ್ಯದ ಕೊನೆಯ ಮೆಟ್ಟಿಲು ಮೌಲ್ಯ ನಿರ್ಣಯ.

**6. ಮೌಲ್ಯ ನಿರ್ಣಯ (Evaluation)**

ನಿರ್ದಿಷ್ಟ ಉದ್ದಿಶ್ಯಕ್ಕಾಗಿ ಬಳಸುವ ಭಾಷೆಯ ರಚನೆ ಮತ್ತು ಪದ್ಧತಿಗಳು ಮೌಲ್ಯನಿರ್ಣಯಗೊಳ್ಳುತ್ತವೆ. ಭಾಷೆಯ ಬಳಕೆಯಲ್ಲಿ ಗುಣಾತ್ಮಕ ಹಾಗೂ ಪರಿಣಾಮಾತ್ಮಕ ನಿರ್ಣಯದ ನಂತರ ಭಾಷೆ ಪ್ರಕಟಗೊಳ್ಳುತ್ತದೆ. ಭಾಷೆಯ ಉತ್ಪನ್ನದ ಹಂತದಲ್ಲಿ ಮೌಲ್ಯನಿರ್ಣಯ ಎಂಬುದು ಭಾಷೆಯೊಳಗಿನ ಆಂತರಿಕ ಸಾಕ್ಷ್ಯಾಧಾರಗಳ ಆಧಾರದ ಮೂಲಕ ನಿರ್ಣಯಿಸಲ್ಪಡುತ್ತದೆ. ಆಂತರಿಕ ಆಧಾರದ ಮೇಲೆ ಸಂವಹನದ ಖಚಿತತೆಯನ್ನು ಮೌಲ್ಯಮಾಪನ ಮಾಡುವ ತಾರ್ಕಿಕ ಖಚಿತತೆ, ಸುಸಂಬದ್ಧತೆ ಮತ್ತು ಆಂತರಿಕ ಮಾನದಂಡ ಬೇಕಾಗುತ್ತದೆ. ವಾದದಲ್ಲಿ ತಾರ್ಕಿಕತೆಯನ್ನು ಬಳಸುವ ಸಾಮರ್ಥ್ಯ ಕೂಡ ಮೌಲ್ಯ ನಿರ್ಣಯದಿಂದ ಬರುತ್ತದೆ. ಈಗಾಗಲೇ ಬಳಕೆಯಲ್ಲಿರುವ ಸಿದ್ಧಾಂತಗಳು, ಸಾಮಾನ್ಯೀ ಕೃತಜ್ಞಾನ ಹಾಗೂ ವಿಷಯಗಳಿಂದ ನಮ್ಮ ಮನಸ್ಸು ನಿರ್ದಿಷ್ಟ ತೀರ್ಮಾನಕ್ಕೆ ಬರುತ್ತದೆ. ನಮಗೆ ಅರಿವಿಲ್ಲದಂತೆಯೇ ನಮ್ಮ ಮನಸ್ಸು ಭಾಷೆಯನ್ನು ಮೌಲ್ಯನಿರ್ಣಯದ ಮೂಲಕ ಅಭಿವ್ಯಕ್ತಿಗೆ ತೊಡಗಿಸಿಕೊಂಡಿರುತ್ತದೆ.

ಭಾಷಾಜ್ಞಾನವೆಂಬುದು ಮೇಲುನೋಟಕ್ಕೆ ತೀರ ಸರಳವೆಂದು ಕಂಡರೂ ಅದರ ಒಳಹೊಕ್ಕು ನೋಡಿದಾಗ ಜ್ಞಾನದ ಅನೇಕ ವಲಯಗಳಿಂದ ಮೂಡಿಬಂದು ಗ್ರಹಿಕೆಯಿಂದ ರೂಪಗೊಂಡು ಆನ್ವಯ ವಿಶ್ಲೇಷಣೆಗಳ ಮೂಲಕ ಸಂಯೋಜನೆಗೊಂಡು ಮನಸ್ಸಿನಲ್ಲಿಯೇ ಮೌಲ್ಯನಿರ್ಣಯ ಪಡೆದು ಸಂಹವಹನಗೊಳ್ಳುವ ಸಂಕೀರ್ಣ ಪ್ರಕ್ರಿಯೆ. ಇದರ ಅಂತರಾಳಕ್ಕೆ ಪ್ರವೇಶಿಸಿದಷ್ಟೂ ತೀರಾ ವಿಸ್ಮಯವಾಗಿ ಕಾಣುವ ಭಾಷಾ ಪ್ರಪಂಚದ ಬಗ್ಗೆ ತಿಳಿದಿರುವುದು ಅತ್ಯಲ್ಪವೆಂದೇ ಹೇಳಬೇಕು.

**Referenceses**

1. Benjamin S. Bloom and others (ed) 1964 Taxonomy of educational objectives, David McKay Comp. Inc New.York.

# ಭಾಷಾ ಭಿನ್ನತೆ-ಪ್ರಾದೇಶಿಕ ಮತ್ತು ಐತಿಹಾಸಿಕ

**ಡಾ. ಎ. ಮುರಿಗೆಪ್ಪ**

ನಾನು ನನ್ನೂರನ್ನು ಬಿಟ್ಟು ಧಾರವಾಡಕ್ಕೆ ಬಂದು ಇಪ್ಪತ್ತೈದು ವರ್ಷಕ್ಕೂ ಮೇಲಾಯ್ತು ಅಂತ ಕಾಣುತ್ತೆ. ನನ್ನೂರು ದಕ್ಷಿಣ ಕರ್ನಾಟಕ ಪ್ರದೇಶಕ್ಕೆ ಸೇರಿದೆ. ನನ್ನದು ಶಿವಮೊಗ್ಗ ಜಿಲ್ಲೆ. ಹೀಗಾಗಿ ಭಾಷೆಯ ದೃಷ್ಟಿಯಿಂದ ನನ್ನ ಮೂಲಭಾಷಾ ಪರಿಸರ ಮತ್ತು ಸ್ವರೂಪವೇ ಬೇರೆ, ಪ್ರಸ್ತುತ ಭಾಷಾ ಪರಿಸರ ಮತ್ತು ಸ್ವರೂಪವೇ ಬೇರೆ. ಆದ್ರೆ ಆಶ್ಚರ್ಯ ಏನೊಂದ್ರೆ, ನಾನು ಊರಿಗೆ ಹೋದಾಗ ನಾನು ಮಾತನಾಡುತ್ತಿದ್ದಂತೆಯೇ ನನ್ನ ಗೆಳೆಯರು ನನ್ನನ್ನು ಧಾರವಾಡದವರು ಎಂದು ಗುರುತಿಸುತ್ತಾರೆ. ಅದೇ ನಾನು ಧಾರವಾಡದಲ್ಲಿ ಇದ್ದಾಗ ಇಲ್ಲಿಯ ನನ್ನ ಸ್ನೇಹಿತರೇ ಆಗಲಿ ಅಪರಿಚಿತರೇ ಆಗಲಿ ನನ್ನ ಮಾತಿನಿಂದ ಓಹೋ ನೀವುಹಳೇ ಮೈಸೂರಿನವರು ಅಂತಕಾಣ್ತದ, ನಿಮ್ದು ಯಾವೂರು? ಅಂತಾರೆ. ನಾನು ಕ್ಲಾಸಿನಲ್ಲಿ ಪಾಠ ಹೇಳುತ್ತಿದ್ದಂತೆ ನನ್ನ ವಿದ್ಯಾರ್ಥಿಗಳು ತಮ್ಮ ಭಾಷೆಯಿಂದ ನನ್ನ ಭಾಷೆ ಬೇರೆ ಅಂತ ಭಾವಿಸ್ತಾರೆ. ಧಾರವಾಡದ ನನ್ನ ಗೆಳೆಯರು ನನ್ನನ್ನು ಭಾಷೆಯಿಂದಾಗಿ ಹಳೇ ಮೈಸೂರಿನವನು ಎಂದು ಗುರುತಿಸುವುದು ಸರಿ. ಆದರೆ ನನ್ನೂರಿನವರೇ ನನ್ನನ್ನು ಧಾರವಾಡದವ ಎಂದು ಗುರುತಿಸುವುದು ಗಮನಿಸಬೇಕಾದ ಅಂಶ. ನನ್ನ ಭಾಷೆ ಮೂಲರೂಪದಲ್ಲಿ ಇಲ್ಲ ಎಂಬುದನ್ನು ಈ ಅಂಶ ವ್ಯಕ್ತಪಡಿಸುತ್ತದೆ. ಸುಮಾರು ಇಪ್ಪತ್ತೈದು ವರ್ಷಗಳ ಅವಧಿಯಲ್ಲಿ ನನ್ನಂತಹ ಒಬ್ಬ ವ್ಯಕ್ತಿಯ ಭಾಷೆಯಲ್ಲಿಯೇ ಇಷ್ಟೊಂದು ಭಿನ್ನತೆ ಅಂದ್ರೆ, ಸಾವಿರಾರು ವರ್ಷಗಳಿಂದ ಅಸ್ತಿತ್ವದಲ್ಲಿ ಇರುವ ಹಾಗೂ ಲಕ್ಷಗಟ್ಟಲೆ ಭಿನ್ನ ಭಾಷಿಕರಿಂದ ಬಳಕೆಗೊಳಗಾದ ಭಾಷೆಗಳಲ್ಲಿ ಉಂಟಾಗಿರಬಹುದಾದ ಬದಲಾವಣೆಯನ್ನು ಕಲ್ಪಿಸಿಕೊಳ್ಳಬಹುದು.

ನಮಗೆ ಗೊತ್ತಿರುವ ಹಾಗೆ ಭಾಷೆ ಪ್ರದೇಶದಿಂದ ಪ್ರದೇಶಕ್ಕೆ ಬದಲಾವಣೆ ಆಗುತ್ತೆ. ಧಾರವಾಡದ ಕನ್ನಡವೇ ಬೇರೆ. ಮೈಸೂರಿನ ಕನ್ನಡವೇ ಬೇರೆ. ಸಮಾಜಸಮಾಜಗಳ ನಡುವೆಯೂ ಭಾಷೆ ಭಿನ್ನ. ಬ್ರಾಹ್ಮಣರ ಕನ್ನಡದ ಸ್ವರೂಪ, ಕೃಷಿಕರ ಕನ್ನಡದ ಸ್ವರೂಪದಿಂದ ಭಿನ್ನ. ಕಾಲದಿಂದ ಕಾಲಕ್ಕೆ ಭಾಷೆ ಬೇರೆಯಾಗುವುದು ಸಹ ವಾಸ್ತವ. ಪಂಪನ ಕಾಲದ ಕನ್ನಡವಿಂದ ವಚನಕಾರರ ಕಾಲದ ಕನ್ನಡ ಬೇರೆಯೇ. ಇಂತಹ ಕಾಲಗಳ ನಡುವಿನ ಭಾಷಾ ಭಿನ್ನತೆ ಒಂದು ಭಾಷೆ ನಡೆದು ಬಂದ ದಾರಿಯನ್ನು ಗುರುತಿಸುತ್ತದೆ.

ಕನ್ನಡ ಭಾಷೆಯನ್ನೆ ತೆಗೆದುಕೊಂಡರೆ, ಈ ಕನ್ನಡ ಭಾಷೆಗೆ ಎರಡು ಸಾವಿರಕ್ಕೂ ಮಿಕ್ಕ

ವರ್ಷಗಳ ಇತಿಹಾಸವಿದೆ. ಆದರೆ ಅಂದಿನಿಂದ ಇಂದಿನವರೆಗೆ ಕನ್ನಡ ಒಂದೇ ಆಗಿಲ್ಲ. ಕನ್ನಡದ ಅತಿ ಪ್ರಾಚೀನ ದಾಖಲೆ ಅಂದ್ರೆ ಹಲ್ಮಿಡಿ ಶಾಸನ. ಇದರ ಕಾಲ ಐದನೆ ಶತಮಾನ ಅಂತ ಗುರುತಿಸುತ್ತಾರೆ. ಈ ಕಾಲದ ಕನ್ನಡವನ್ನು ಪೂರ್ವದ ಹಳಗನ್ನಡ ಎಂದು ಗುರುತಿಸಿದರೆ, ಪಂಪ, ರನ್ನ ಮುಂತಾದ ಚಂಪು ಸಾಹಿತಿಗಳ ಕನ್ನಡ ಹಳಗನ್ನಡ. ವಚನಕಾರರ ಕನ್ನಡ ನಡುಗನ್ನಡ. ನಂತರದ ಇತ್ತೀಚಿನ ರೂಪವೆ ಹೊಸಗನ್ನಡ. ಈ ಎಲ್ಲ ಕಾಲಘಟ್ಟಗಳ ಭಾಷಾರೂಪವನ್ನು ವಿಶ್ಲೇಷಿಸಿದಾಗ ಕನ್ನಡ ಭಾಷೆ ಐತಿಹಾಸಿಕ ಬೆಳವಣಿಗೆಗೆ ಒಳಗಾಗಿರುವುದು ತಿಳಿದು ಬರುತ್ತದೆ.

'ಕಲ್ವೆಟ್ಟಿನಾ ವೆಟ್ಟದುಳ್'ವ ಎಂಬುದು ಪೂರ್ವದ ಹಳಗನ್ನಡದ ಪ್ರಯೋಗ, ಬೆಟ್ಟ ಎಂಬ ರೂಪಕ್ಕೆ ಬದಲಾಗಿ ವೆಟ್ಟ ಎಂಬ ವಕಾರಾದಿ ರೂಪ ಇಲ್ಲಿದೆ. ಬೆಟ್ಟದಲ್ಲಿ ಎಂಬ ವಿಭಕ್ತಿ ರೂಪಕ್ಕೆ ಬದಲಾಗಿ ವೆಟ್ಟದುಳ್ ಎಂಬ-ಉಳ್ ವಿಭಕ್ತಿ ಪ್ರತ್ಯಯ ರಚನೆ ಇಲ್ಲಿ ಬಳಕೆಯಾಗಿದೆ.

ಹೊಸಗನ್ನಡದ ಹೋಗಬೇಡ ಎಂಬ ನಿಷೇಧಾತ್ಮಕ ರಚನೆಯಲ್ಲಿ ಬೇಡ ಎಂಬುದು ನಿಷೇಧ ಸೂಚಕ. ಇದಕ್ಕೆ ಬದಲಾಗಿ ಹಳಗನ್ನಡದಲ್ಲಿ ಅಲ್ ನಿಷೇಧ ಪ್ರತ್ಯಯ ಸಹಿತವಾದ ಪುಗಲ್ ಬಳಕೆಯಲ್ಲಿದೆ. ಹಳಗನ್ನಡದಲ್ಲಿ **'ಕರೆ'** ಮತ್ತು **'ಕಱೆ'** ಭಿನ್ನ ಉಚ್ಚರಿತ, ಭಿನ್ನಾರ್ಥ ರೂಪಗಳು. ಆದರೆ ಇಂದು ಇವೆರಡೂ **'ಕರೆ'** ಎಂಬ ಏಕ ಉಚ್ಚರಿತ ರೂಪಗಳು.

ಇದರಂತೆಯೇ ಹಳಗನ್ನಡದಲ್ಲಿ ಕಳಿ ಪದದ ಉಚ್ಚಾರ ಅರ್ಥ ಬೇರೆ. ಕಱಿ ಪದದ ಉಚ್ಚಾರ-ಅರ್ಥ ಬೇರೆ. ಹಳಗನ್ನಡದ ಪಾಲು ಇಂದಿನ ಹಾಲು, ಕುಪ್ಪಸ ಪುರುಷರು ಧರಿಸಬಹುದಾದ ಮೇಲುಡುಗೆ ಹಳಗನ್ನಡದಲ್ಲಿ. ಇಂದು ಅದು ಸ್ತ್ರೀಯರು ಧರಿಸುವ ಮೇಲುಡುಗೆ. ಅಂತೆಯೇ ಅಮ್ಮ ಎಂಬ ಪದದ ಹಳಗನ್ನಡದ ಅರ್ಥವೇ ಬೇರೆ; ಇಂದಿನ ಅರ್ಥವೇ ಬೇರೆ.

ಈ ಎಲ್ಲ ಅಂಶಗಳು ಕನ್ನಡ ಭಾಷೆಯಲ್ಲಿ ಉಂಟಾಗಿರುವ ಬದಲಾವಣೆಯನ್ನು ಸೂಚಿಸುತ್ತವೆ. ಈ ರೀತಿಯ ಬದಲಾವಣೆ ಕೇವಲ ಕನ್ನಡಭಾಷೆಗೆ ಮಾತ್ರ ಸೀಮಿತ ಎಂದುಕೊಳ್ಳಬೇಕಾಗಿಲ್ಲ. ತಮಿಳೇ ಇರಲಿ, ತೆಲುಗು ಭಾಷೆಯೇ ಇರಲಿ, ಇಂಗ್ಲೀಷೇ ಇರಲಿ, ಸಾವಿರಾರು ವರ್ಷಗಳ ಅವಧಿಯಲ್ಲಿ ಎಲ್ಲ ಭಾಷೆಗಳಲ್ಲಿ ಬದಲಾವಣೆ ಅನಿವಾರ್ಯ.

ಭಾಷೆಯಲ್ಲಿ ವ್ಯಕ್ತವಾಗುವ ಇಂತಹ ಬದಲಾವಣೆ ಕಾಲಾನುಗತ ಬದಲಾವಣೆ. ಕಾಲಾನುಗತವಾದ ಬದಲಾವಣೆ ಒಂದು ಸಮುದಾಯದ ಎಲ್ಲ ಸದಸ್ಯರಲ್ಲಿ ಒಂದೇ ರೀತಿಯಾಗಿ ಬದಲಾದರೆ ಮತ್ತೊಂದು ಕಾಲಪ್ರಭೇದ ಅಸ್ತಿತ್ವಕ್ಕೆ ಬರುತ್ತದೆ. ಕಾಲಾನುಗತ ಬದಲಾವಣೆ ಸಮುದಾಯದ ಸದಸ್ಯರಲ್ಲಿ ಭಿನ್ನವಾದರೆ ನಂತರದ ಕಾಲದಲ್ಲಿ ಒಂದಕ್ಕಿಂತ ಹೆಚ್ಚು ಪ್ರಭೇದಗಳ ನಿರ್ಮಾಣವಾಗುತ್ತವೆ.

ತಮಿಳು, ಕನ್ನಡ, ತೆಲುಗು, ಮಲಯಾಳಂ ಕೊಡಗು ತುಳು ಇತ್ಯಾದಿ ಭಾಷೆಗಳು ಒಂದೇ ಮೂಲಕ್ಕೆ ಸೇರಿದ ಭಾಷೆಗಳು. ಈ ಭಾಷೆಗಳನ್ನು ದ್ರಾವಿಡ ಭಾಷೆಗಳೆಂದು ಗುರುತಿಸಲಾಗಿದೆ. ಈ ಎಲ್ಲಾ ಭಾಷೆಗಳ ಮೂಲ ಒಂದೇ. ಅದೇ ಮೂಲ ದ್ರಾವಿಡ. ಮೂಲದ್ರಾವಿಡವನ್ನು ಮಾತನಾಡುವ ಸಮುದಾಯ ಕಾಲಾನಂತರದಲ್ಲಿ ಬೇರೆಯಾಗಿ ಪರಸ್ಪರ ಸಂಪರ್ಕ ಕಳೆದುಕೊಂಡು ಪ್ರತ್ಯೇಕ ರೂಪಗಳನ್ನು ನಿರ್ಮಿಸಿಕೊಳ್ಳುವುದರ ಮೂಲಕ ಇಂದಿನ ಈ ಎಲ್ಲ ಭಾಷೆಗಳು ಅಸ್ತಿತ್ವಕ್ಕೆ ಬಂದವು.

ತಮಿಳಿನಲ್ಲಿ ಎಲೈ, ತಲೈ, ಮುರೈ, ಕುಡೈ ಮುಂತಾದ ಪದಗಳ ಅತ್ಯದಲ್ಲಿ ಐ ಕಾರವಿದೆ. ಕನ್ನಡದಲ್ಲಿ -ಐ ಕಾರ -ಎಕಾರವಾಗಿ ಬದಲಾಯಿತು. ಹೀಗಾಗಿ ಎಲೆ, ತಲೆ, ಮೊರೆ, ಕೊಡೆ ಎಂಬ ಕನ್ನಡ ಸಮುದಾಯಕ್ಕೆಲ್ಲ ಸಮಾನವಾದ ರೂಪಗಳು ಬಳಕೆಗೆ ಬಂದವು. ಕನ್ನಡದ ಎ ಕಾರಾಂತ ರೂಪಗಳು ಆಂತರಿಕವಾಗಿ ಇನ್ನೊಮ್ಮೆ ಬದಲಾವಣೆಗೆ ಒಳಗಾದವು. ಧಾರವಾಡ ಹಾಗೂ ಇನ್ನಿತರ ಉತ್ತರ ಕರ್ನಾಟಕದ ಭಾಗಗಳಲ್ಲಿ -ಇ ಕಾರಾಂತವಾದವು. ಇದರಿಂದಾಗಿ ಕೆರಿ,ತಲಿ,ವಲಿ, ಕತ್ತಿ ಮುಂತಾದ ಇ ಕಾರಾಂತ ಪದಗಳು ಬಳಕೆಗೆ ಬಂದವು. ಈ ಬದಲಾವಣೆಯ ಪ್ರಮಾಣ ಕಡಿಮೆ ಇದ್ದಾಗ ಈ ಬದಲಾವಣೆ ಗೌಣವಾಗುತ್ತದೆ. ಹಾಗೂ ಉಪಭಾಷೆಗಳು ನಿರ್ಮಾಣವಾಗುತ್ತವೆ. ಬದಲಾವಣೆಯ ಪ್ರಮಾಣ ಜಾಸ್ತಿಯಾದಂತೆ ಭಿನ್ನ ಭಾಷೆಗಳು ನಿರ್ಮಾಣವಾಗುತ್ತವೆ. ಒಂದೇ ಆಗಿದ್ದ ಮೂಲ ದ್ರಾವಿಡ, ಕನ್ನಡ, ತಮಿಳು, ತೆಲುಗು ಮುಂತಾದ ಭಾಷೆಗಳಾಗಿ ಬದಲಾಗಿರುವುದು ಇದಕ್ಕೆ ಉತ್ತಮ ಉದಾಹರಣೆ.

ಕನ್ನಡದ-ಎ ಕಾರಾಂತ ರೂಪಗಳು ಇಕಾರಾಂತವಾಗಿರುವುದು ಧ್ವನ್ಯಾತ್ಮಕ ಬದಲಾವಣೆ ಇದರಂತೆಯೇ ಓ ಕಾರ ವಾ ಕಾರವಾಗಿ ಬದಲಾಗಿರುವುದು ಧಾರವಾಡದ ಇನ್ನೊಂದು ಧ್ವನ್ಯಾತ್ಮಕ ಬದಲಾವಣೆ. ಉದಾಹರಣೆಗೆ ಕೋಟೆ-ಕ್ವಾಟೆ, ತೋಟ-ತ್ವಾಟ, ಇದರಂತೆಯೇ-ಉ ಕಾರಾಂತ ರೂಪಗಳು-ಅಕಾರಾಂತವಾಗುವುದು. ಉದಾಹರಣೆಗೆ ಆಕಳು-ಆಕಳ, ಹಾಲು ಹಾಲ, ಮೊಸರು-ಮುಸರ ಮುಂತಾದವು. ಧ್ವನ್ಯಾತ್ಮಕ ಬದಲಾವಣೆಯಂತೆಯೇ ಪದ ಬದಲಾವಣೆ, ಅರ್ಥ ಬದಲಾವಣೆ ಎರಡು ಪ್ರದೇಶಗಳ ನಡುವೆ ಕಂಡುಬರುತ್ತದೆ. ಒಮ್ಮೆ ಮೈಸೂರಿನ ಹತ್ತಿರದ ಹಳ್ಳೀಲಿ ನನ್ನ ಸ್ನೇಹಿತರೊಬ್ಬರ ಮದುವೆ. ಮದುವೆಗೆ ನಾನೂ ಹೋಗಿದ್ದೆ. ಬೆಳಗಿನ ಹೊತ್ತು, ನೆಂಟರು ಇಷ್ಟರು ಒಬ್ಬೊಬ್ಬರಾಗಿ ಬರ್ತಾ ಇದ್ರು. ಮನೆಯ ಯಜಮಾನ್ರು ಬಂದ ಪ್ರತಿಯೊಬ್ಬರನ್ನೂ ಪ್ರೀತಿಯಿಂದ ಮಾತನಾಡಿಸಿ ಬರಮಾಡಿಕೊಳ್ತಾ ಇದ್ರು.-ಅಷ್ಟರಲ್ಲಿ ನನ್ನ ಗೆಳೆಯನ ಧಾರವಾಡದ ಸ್ನೇಹಿತರೊಬ್ರು ಬಂದ್ರು. ಯಜಮಾನರು ಅವರು ಮಾತಾಡಸ್ತಾ 'ಬನ್ನಿ ಬನ್ನಿ ಒಬ್ರೆ ಬಂದ್ರಲ್ಲ. ನಿಮ್ಮ ಹೆಂಗಸ್ನ ಕರ್‍ಕೊಂಡು ಬರ್‍ಲಿಲ್ವಾ?'' ಅಂದ್ರು. ಬಂದ ಅತಿಥಿಯ ಮುಖ ಒಂಥರಾ ಆಯ್ತು. ಸಂದರ್ಭದ ಸೂಕ್ಷ್ಮತೆಯನ್ನು ಅರಿತ ನಾನು ಮಧ್ಯ ಪ್ರವೇಶಿಸಿ 'ಯಾಕ್ರಿ ನಿಮ್ಮ ಮನೇವರ್‍ನ ಕರ್‍ಕೊಂಡು ಬರ್‍ಲಿಲ್ವ?' ಎಂದೆ. ಚೇತರಿಸಿಕೊಂಡ ಅತಿಥಿ 'ಇಲ್ರಿ, ಅಕಿ ಅವರ ಬೀಗರ ಪೈಕಿ ಒಬ್ರ ಮದುವೀಗೆ ಹೋಗ್ಯಾಳ' ಅಂದ್ರು. ನಂತರ ಮದುವೆ ಗದ್ದಲ ಮುಗಿದು ಬಿಡುವಾಗಿದ್ದಾಗ, ನನ್ನ ಗೆಳೆಯ, ಹಾಗೂ

ಯಜಮಾನರ ಎದುರು ಈ ವಿಷಯ ಪ್ರಸ್ತಾಪಿಸಿದ. ಹೆಂಗಸು ಪದಕ್ಕೆ ಧಾರವಾಡದಲ್ಲಿಯ ಅರ್ಥ ವಿವರಣೆ ನೀಡಿದೆ. ಯಜಮಾನರು ತಮ್ಮ ತಪ್ಪು ಪದದ ಬಳಕೆಯಿಂದ ಆದ ಪ್ರಮಾದಕ್ಕೆ ಹಳಹಳಿಸಿದರು.

ಇದ್ಯಾಕ್ ಹೀಗಾಗುತ್ತೆ ? ಕನ್ನಡ ಭಾಷೇನೆ ಇರಲಿ ಅಥವ ಇನ್ಯಾವುದೇ ಭಾಷೆ ಇದ್ರೂ, ಅದರ ಬಳಕೆಯ ವಿಸ್ತಾರದ ಉದ್ದಕ್ಕೂ ಅದು ಒಂದೇ ರೀತಿಯಾಗಿ ಬಳಕೆ ಆಗೋಲ್ವಲ್ಲ ಯಾಕೆ? ಎಂಬ ಪ್ರಶ್ನೆ ಹುಟ್ಟುತ್ತೆ. ಈ ಪ್ರಾದೇಶಿಕ ಪ್ರಯೋಗ ಭೇದಗಳನ್ನು ಆಧರಿಸಿ ಒಬ್ಬರನ್ನು ಒಬ್ಬರು ಹಂಗಿಸುವುದೂ ಉಂಟು. ಎರಡು ಪ್ರಾದೇಶಿಕ ಪರಿವಾರಗಳ ನಡುವೆ ವೈವಾಹಿಕ ಸಂಬಂಧ ಏರ್ಪಟ್ಟಾಗ ಈ ಪ್ರಾದೇಶಿಕ ಭಾಷಾ ಭಿನ್ನತೆ ಪರಸ್ಪರರನ್ನು ಮೂದಲಿಸುವ ವಿಷಯಗಳಾಗುತ್ತವೆ.

ಧಾರವಾಡದ ಶಿಕ್ಷಕರೊಬ್ಬರನ್ನು ಶಿವಮೊಗ್ಗಕ್ಕೆ ವರ್ಗಾಯಿಸಿದರು ಎಂದಿಟ್ಟಕೊಳ್ಳಿ ಶಿಕ್ಷಕರು ವಿದ್ಯಾರ್ಥಿಗಳನ್ನು ಉದ್ದೇಶಿಸಿ 'ಕಡು ತಗೊಂಬಾ ಎಂದರೆ' ಆ ವಿದ್ಯಾರ್ಥಿ ಕಣ್ಣು ಕಣ್ಣು ಬಿಡಬೇಕಾಗುತ್ತದೆ. ಅಲ್ಲಿಯ ವಿದ್ಯಾರ್ಥಿಗೆ ಕಡು ಎಂಬುದು ಕಡವೆ ಎಂಬ ಕಾಡು ಪ್ರಾಣಿಯ ಸಂಕ್ಷೇಪರೂಪ. ಆದರೆ ಶಿಕ್ಷಕರಿಗೆ ಅದೊಂದು ಕರಿಹಲಗೆಯ ಮೇಲೆ ಬರೆಯಲು ಬಳಸುವ ಸಾಧನ. ಅಂದ್ರೆ ಶಿವಮೊಗ್ಗ ಪ್ರದೇಶದ ಸೀಮೆಸುಣ್ಣ ಅಥವ Chalk piece.

ನಾನು ಧಾರವಾಡದಲ್ಲಿ ಎಂ.ಎ. ಮುಗಿಸಿ ಅದೇ ತಾನೆ ಪಿಎಚ್‌ಡಿ ಅಧ್ಯಯನದಲ್ಲಿ ತೊಡಗಿದ್ದೆ. ಒಂದು ದಿನ ವಿಭಾಗಕ್ಕೆ ಬಂದು ನನ್ನ ಕೆಲಸದಲ್ಲಿ ನಿರತನಾಗಿದ್ದೆ. ನನ್ನ ಮಾರ್ಗದರ್ಶಕರು ನನ್ನೆದುರಿಗೆ ಒಳಕ್ಕೆ ಹೋದರು. ಯಾಕೊ ಎಂದಿನಂತೆ ಇರಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ನಾನು ಒಳಕ್ಕೆ ಹೋದೆ. ನನ್ನ ಮಾರ್ಗದರ್ಶಕರನ್ನು ಉದ್ದೇಶಿಸಿ 'ಯಾಕೆ ಸಾರ್ ಹುಷಾರಿಲ್ವ?' ಎಂದೆ ತಕ್ಷಣ. ಅವರು 'ಯಾಕೆ ನಾನು ಹುಷಾರಿದೀನಲ್ಲ' ಎಂದ್ರು. 'ಇಲ್ಲ 'ಸಾರ್ ನೀವಿವತ್ತು ಹುಷಾರಿದ್ದಾಗೆ ಕಾಣೋಲ್ಲ' ಅಂದೆ. ಮೂಗು ವರಸ್ತಾ, ಕೆಮ್ಮಿನ ಮಧ್ಯೆ 'ಇಲ್ಲಿಲ್ಲ ನಾನು ಹುಷಾರಿದೀನಿ' ಅಂದ್ರು. 'ಅಲ್ಲ ಸಾರ್ ಕೆಮ್ತಿದೀರ, ನೆಗಡಿ ಆಗಿದೆ' ಎಂದು ಮುಂದುವರಿಸುತ್ತಿದ್ದಂತೆ 'ಓಹೊ ಅರಾಮಿಲ್ಲೇನು ? ಅಂದ್ರಾ?' ಎಂದರು. ಆಗಲೆ ನನಗೆ ಹುಷಾರು ಎಂಬ ಪದ ನಿರ್ಮಿಸಿದ ಸಮಸ್ಯೆ ಅರಿವಾಯ್ತು. ಒಂದೆಡೆ ಹುಷಾರು ಎಂಬ ಪದಕ್ಕೆ ಜಾಣತನ ಎಂಬರ್ಥವಾದರೆ ಇನ್ನೊಂದೆಡೆ ಅದೇ ಪದಕ್ಕೆ ಆರೋಗ್ಯ ಎಂಬರ್ಥ.

ಈ ರೀತಿಯ ಅನುಭವ ಪ್ರಾದೇಶಿಕ ಭಿನ್ನತೆಗಳ ನಡುವೆ ತೀರಾ ಸಾಮಾನ್ಯ.

ಹಿಂಡಿ ಪದವನ್ನು ಗಮನಿಸೋಣ ಧಾರವಾಡ ಹಾಗೂ ಕರ್ನಾಟಕದ ಉತ್ತರಭಾಗದಲ್ಲಿ ಹಿಂಡಿ, ಜನರು ಬಳಸಬಹುದಾದ, ಕಾಳುಗಳಿಂದ ತಯಾರಿಸಿದ ಪುಡಿ ಪದಾರ್ಥ ಅಂದರೆ ಚಟ್ನಿಪುಡಿ ಆದರೆ ದಕ್ಷಿಣ ಭಾಗದಲ್ಲಿ ಪುಡಿಂಡಿ ಎಂದೆ ಕರೆಯುಬೇಕು. ಕರಿಂಡಿ ಎಂಬ ಪದದ ಬಳಕೆ ಇಲ್ಲಿಯೂ ಇದೆ. ದಕ್ಷಿಣ ಕರ್ನಾಟಕದ ಭಾಗದಲ್ಲಿ ಹಿಂಡಿ ಎಂದರೆ ಸೇಂಗಾ, ಎಳ್ಳು, ಇನ್ನಿತರ ಚರಟದಿಂದ ತಯಾರಿಸಿದ ಪಶು ಆಹಾರ. ಉತ್ತರ ಭಾಗದಲ್ಲಿ ಹಿಂಡಿ ಪದಕ್ಕೆ ವಿಶಾಲಾರ್ಥವಿದ್ದು ದಕ್ಷಿಣ ಭಾಗದಲ್ಲಿ ಪಶು ಎಂಬ ಭಿನ್ನಾರ್ಥ.

ಹಿಂಡಿಯಂತೆಯೇ ಗೊಂದಲ ಎಬ್ಬಿಸಬಹುದಾದ ಇನ್ನೊಂದು ಪದ ಹೆಂಡಿ. ಶಿವಮೊಗ್ಗ

ಜಿಲ್ಲೆ ಹಾಗೂ ಇನ್ನಿತರ ದಕ್ಷಿಣದ ಜಿಲ್ಲೆಗಳಲ್ಲಿ ಹೆಂಡಿ ಎಂದರೆ ಮಣ್ಣಿನ ಉಂಡೆ ಗದ್ದೇಲಿ ಹೆಂಡಿ ಒಡೆಯೋದು ಎಂಬ ವಾಕ್ಯ ಪ್ರಯೋಗ ಇಲ್ಲಿ ಕಂಡುಬರುತ್ತದೆ. ಬೇರೆ ಸಂದರ್ಭದಲ್ಲಿ ಹೆಂಡಿ ಪದದ ಬಳಕೆ ಇಲ್ಲ. ಬೀದರ್, ಬಿಜಾಪುರ ಇನ್ನಿತರ ಜಿಲ್ಲೆಗಳಲ್ಲಿ ಹೆಂಡಿ ಎಂಬುದು ಆಕಳ ಸಗಣಿ. ಸಗಣಿ ಹೆಂಡಿ ಎಂದೂ ಇದನ್ನು ಕರೆಯಬಹುದು. ಇದನ್ನು ದಕ್ಷಿಣ ಭಾಗದಲ್ಲಿ ಸಗಣಿ ಉಳ್ಳಿ ಎನ್ನುವರು. ಉಳ್ಳಿ ಎಂಬ ಪದ ಸಗಣಿ ಪದದೊಡನೆ ಬಳಕೆಯಾದಾಗ ಉತ್ತರ ಕರ್ನಾಟಕದ ಜನ ಮೂಗು ಮುಚ್ಚುವ ಸಾಧ್ಯತೆ ಇದೆ. ಹೆಂಡಿ ಪದದ ಇನ್ನಿತರ ರೂಪಗಳು ಪೆಂಡಿ, ಹೆಂಟೆ, ಪೆಂಟೆ ಮುಂತಾದವು. ಈ ಪೆಂಟೆ ಎಂಬ ಪದ ಬೆಲ್ಲದ ಪೆಂಟೆ ಎಂಬ ಪದರಚನೆಯಾಗಿ ಇಲ್ಲಿಯೂ ಬಳಕೆಯಲ್ಲಿದೆ.

ಹೆಂಗಸು ಕರ್ನಾಟಕದ ಉತ್ತರ ಹಾಗೂ ದಕ್ಷಿಣ ಭಾಗದಲ್ಲಿ ಭಿನ್ನಾರ್ಥಹೊಂದಿದ ಪದ. ಮೈಸೂರು, ತುಮಕೂರು, ಶಿವಮೊಗ್ಗ ಮುಂತಾದ ಜಿಲ್ಲೆಗಳಲ್ಲಿ ಇದೊಂದು ಸಾಮಾನ್ಯ ಪದ. ಇದನ್ನು ಇಲ್ಲಿಯ ಜನ ಸಂಕೋಚವಿಲ್ಲದೆ ಬಳಸುವರು. ನಮ್ಮ ಹೆಂಗಸರು ಇವತ್ತು ಊರಿಗೆ ಹೋಗಿದ್ದಾರೆ ಎನ್ನಬಹುದು. ಇದರರ್ಥ ನನ್ನ ಹೆಂಡತಿ ಇವತ್ತು ಊರಿಗೆ ಹೋಗಿದ್ದಾಳೆ ಎಂದಾಗುತ್ತದೆ. ಹೆಂಗಸು ಒಂದು ಕಡೆ ಕಟ್ಟಿಕೊಂಡವಳಾದರೆ, ಇನ್ನೊಂದೆಡೆ ಇಟ್ಟುಕೊಂಡವಳು. ಇಕ್ಕು ಎಂಬುದೊಂದು ವಿಶಿಷ್ಟವಾದ ಪದ. ಇದನ್ನು ಸ್ವತಂತ್ರವಾಗಿ ಒಂದು ಕ್ರಿಯಾಪದವಾಗಿ ಬಳಸಬಹುದು. ಆದರೆ ಇದರ ಪರಿಣಾಮ ಪ್ರಾದೇಶಿಕವಾಗಿ ಭಿನ್ನ. ಒಂದೆಡೆ, ನಿಮ್ಮೆದುರು ತಟ್ಟೇನೊ, ಎಲೆನೊ ಹಾಕಿ, ಅದರ ಮೇಲೆ ರೊಟ್ಟಿ, ಪಲ್ಯ, ಅನ್ನ, ಸಾರು ಇತ್ಯಾದಿಗಳು ಎದುರಾಗಿ ನಿಮಗೆ ಆತಿಥ್ಯ ಪರಿಸರ ನಿರ್ಮಾಣವಾದರೆ, ಇನ್ನೊಂದೆಡೆ, ಕೈ, ಕೋಲು, ಬಡಿಗೆಯಿಂದ ಗುದ್ದು, ಹೊಡೆತ, ಬಡಿತ, ಮೈ ಮುರಿತದ ಔತಣ ಪರಿಸರ ನಿರ್ಮಾಣವಾಗಬಹುದು. ಇಕ್ಕು ಎಂಬುದಕ್ಕೆ ಒಂದೆಡೆ ಉಚ್ಚಾರ್ಥ. ಇನ್ನೊಂದೆಡೆ ಇದಕ್ಕೆ ಹೀನಾರ್ಥ. ಹೀನಾರ್ಥ ಪ್ರಾಪ್ತಿಯಾದುದು ಐತಿಹಾಸಿಕ ಬೆಳವಣಿಗೆ.

ಅರ್ಥ ಬದಲಾವಣೆ ಒಮ್ಮೊಮ್ಮೆ ಗೊಂದಲ ಸನ್ನಿವೇಶಕ್ಕೆ ಎಡೆ ಮಾಡಿ ಕೊಡಬಹುದು. ತಿಂಡಿ ಎಂಬ ಪದವನ್ನು ಹರಿಹರದಿಂದ ಬೆಂಗಳೂರಿನ ಕಡೆಗೆ ಸಹಜವಾಗಿ ಬಳಸಬಹುದು. ಬೆಳಗ್ಗೆ ಏಳುತ್ತಿದ್ದಂತೆ ತಿಂಡಿಗೆ ಏನ್ಮಾಡ್ತೀರ ತಿಂಡಿ ಏನಿದೆ ಎಲ್ಲರೂ ತಿಂಡಿಗೆ ಬನ್ನಿ ಎಂಬ ವಾಕ್ಯಗಳು ಇಲ್ಲಿ ತೀರ ಸಾಮಾನ್ಯ ಆದರೆ ಹರಿಹರದಿಂದ ಹಾವೇರಿ ಕಡೆ ಬರುತ್ತಿದ್ದಂತೆ ಈ ಪದವನ್ನು ಬಳಸಬೇಕಾದರೆ ಸ್ವಲ್ಪ ಹಿಂದು ಮುಂದೆ ನೋಡಬೇಕಾಗುತ್ತದೆ. ಹರಿಹರದಿಂದ ಆಚೆಗೆ ಇದಕ್ಕೆ ಉಪಹಾರ ಎಂಬರ್ಥವಾದರೆ ಹರಿಹರದಿಂದ ಈಚೆಗೆ ಇದು ತುರಿಕೆ ಎಂಬ ಹೀನಾರ್ಥದಲ್ಲಿ ಬಳಕೆಯಲ್ಲಿದೆ.

ಬೆರಕಿ ಎಂಬುದು ಮತ್ತೊಂದು ಅರ್ಥ ವ್ಯತ್ಯಾಸವುಳ್ಳ ಪದ. ನಿಮ್ಮಗ ಬಾಳ ಬೆರಕಿ ಅದಾನ ಎಂದು ನಿಮ್ಮ ಸ್ನೇಹಿತನನ್ನು ಕುರಿತು ಧಾರವಾಡ ವಿಜಾಪುರಗಳಲ್ಲಿ ಹೇಳಬಹುದು. ಹಾಸನ, ಶಿವಮೊಗ್ಗ ಕಡೆ ಹೀಗೆ ಬಳಸಲಾಗದು. ಧಾರವಾಡದಲ್ಲಿ ಇದಕ್ಕೆ ಜಾಣತನ ಎಂಬರ್ಥವಾದರೆ, ಶಿವಮೊಗ್ಗದ ಕಡೆ ಮಿಶ್ರಣ ಎಂದಾಗುತ್ತದೆ. ಹೀಗಾಗಿ ಮೇಲಿನ

ಸಂದರ್ಭದಲ್ಲಿ ಒಂದೆಡೆ ಜಾಣತನದ ಪ್ರಶಂಸೆಯಾದರೆ ಮತ್ತೊಂದೆಡೆ ಹುಟ್ಟಿನ ಮೂಲವನ್ನೆ ಪ್ರಶ್ನಿಸುತ್ತದೆ.

'ಕಾವಲಿ' ಹರಿಹರದಿಂದ ಆಚೆಗೆ ದೋಸೆ ಬೇಯಿಸುವ ಹೆಂಚು. ಆದರೆ ಧಾರವಾಡ ಭಾಗದಲ್ಲಿ ನೀರು ಹರಿಯುವ ಗಟಾರ.

ಕೂಡಾ ಪದವನ್ನು ಮೈಸೂರು, ಬೆಂಗಳೂರು ಕಡೆ 'ಸಹ' ಎಂಬರ್ಥದಲ್ಲಿ ಬಳಸಲಾಗುತ್ತದೆ. ಧಾರವಾಡ, ವಿಜಾಪುರಗಳಲ್ಲಿ 'ಕೂಡ' ಎಂದರೆ ಸಂಗಡ ಜೊತೆ ಎಂಬ ಅರ್ಥ. ಹೀಗಾಗಿ ಸುರೇಶ್ ಕೂಡ ಬರ್ಲಿಲ್ಲ ಎಂಬ ವಾಕ್ಯ ಸುರೇಶನು ಸಹ ಬರ್ಲಿಲ್ಲ ಸುರೇಶ ಸಂಗಡ ಬರಲಿಲ್ಲ ಎಂಬ ಪ್ರಾದೇಶಿಕಾರ್ಥ ಪ್ರಾಪ್ತವಾಗುತ್ತದೆ.

'ಹರ್ಯಾಗೆದ್ ಬಾ' ಎಂಬ ಬೆಳಗಾವಿ ಪ್ರದೇಶದ ವಾಕ್ಯದ ಅರ್ಥ 'ಬೆಳಗು ಮುಂಜಾನೆ ಎದ್ದು ಬಾ' ಎಂದಾಗುತ್ತದೆ. ಆದರೆ ಅದೇ ಧಾರವಾಡದಲ್ಲಿ ಬಚ್ಚಲ ಹರಿಯಲ್ಲಿ ಅದ್ದಿ ಬಾ ಎಂದಾಗುವ ಸಾಧ್ಯತೆ ಇದೆ. 'ಗುಂಗಾಡು ಕಡೀತವೆ' ಎಂಬುದು ಧಾರವಾಡದ ಸುತ್ತ ಮುತ್ತ ಸೊಳ್ಳೆಗಳು ಕಡೀತವೆ ಎಂಬರ್ಥದಲ್ಲಿ ಬಳಕೆ ಆಗುತ್ತದೆ. ಆದರೆ ಹರಿಹರದಿಂದಾಚೆ 'ಗುಂಗಾಡು ಆಡ್ತವೆ' ಎಂಬುದು ಮೊಸರು ಅಥವ ಇನ್ನಾವುದೇ ಆಹಾರ ಪದಾರ್ಥದ ಮೇಲೆ ಹಾರಾಡುವ ನೊರಜನ್ನು ಪ್ರತಿನಿಧಿಸುತ್ತದೆ.

'ಗುದ್ದಲಿ' ಪದದ ಬಳಕೆ ಎಲ್ಲಾ ಕಡೆ ಇದೆ. ಆದರೆ ಬೆಳಗಾವಿ, ಧಾರವಾಡ ಇನ್ನಿತರ ಜಿಲ್ಲೆಗಳಲ್ಲಿ ನೆಲವನ್ನು ಕಡಿಯಲು ಬಳಸುವ, ಎರಡೂ ಕಡೆ ಚೂಪಾದ ಸಾಧನ ಗುದ್ದಲಿ. ಶಿವಮೊಗ್ಗ ಜಿಲ್ಲೆಯಲ್ಲಿ ಕಡಿದ ಮಣ್ಣನ್ನು ಬಳಿದು ತುಂಬಲು ಬಳಸುವ ಸಾಧನ. ಶಿವಮೊಗ್ಗದಲ್ಲಿ ನೆಲ ಕಡಿಯಲು ಬಳಸುವ ಎರಡೂ ಕಡೆ ಚೂಪಾದ ಸಾಧನವನ್ನು 'ಪಿಕಾಸಿ' ಎನ್ನುತ್ತಾರೆ. 'ಪಿಕಾಸಿ' ಅಥವ ಧಾರವಾಡದ ಗುದ್ದಲಿ ಇನ್ನಿತರ ಭಾಗದಲ್ಲಿ 'ಠಿಕಾವು' ಎಂದಾಗುತ್ತದೆ.

ಮಕ್ಕಳಿಗೆ ಮುದುಕ, ಮುದುಕಿ ಎಂದು ಕರೆಯುವುದು, ಪ್ರೀತಿಯಿಂದ ಅವ್ವ, ಅವ್ವಿ ಎಂದು ಸಂಬೋಧಿಸುವುದು ಕರ್ನಾಟಕದ ಉತ್ತರದಲ್ಲಿ ತೀರ ಸಾಮಾನ್ಯ. ಈ ಬಳಕೆ ದಕ್ಷಿಣ ಭಾಗದಲ್ಲಿ ದೊರಕದು. ಉತ್ತರ ಕರ್ನಾಟಕದಲ್ಲಿ 'ತಲೆ ಮೇಲೆ ನೀರು ಹಾಕಿಕೊ' ಎಂಬರ್ಥದಲ್ಲಿ 'ಹೊಯ್ಕೊ' ಪದ ಬಳಕೆ ಇದೆ. ದಕ್ಷಿಣದ ಪ್ರದೇಶದಲ್ಲಿ 'ಹೊಯ್ಕೋ' ಎಂದರೆ ಬಾಯಿ ಬಾಯಿ ಬಡಿದುಕೊಳ್ಳುವುದು.

'ಸತ್ತ, ಪದ ವಿಜಾಪುರ, ಬೆಳಗಾವಿಯಲ್ಲಿ ಹಕ್ಕನ್ನು ಪ್ರತಿನಿಧಿಸುತ್ತದೆ. ಇನ್ನಿತರ ಕಡೆ ಸಾವನ್ನು ಸೂಚಿಸುತ್ತದೆ.

ಭಾಷೆಯಲ್ಲಿ ಸಂಕೇತಗಳು ಅರ್ಥ'ವನ್ನು ಪಡೀತವೆ. ಸಂಕೇತದಲ್ಲಿ ಅರ್ಥ' ಹುದುಗಿರುವುದಿಲ್ಲ. ಅರ್ಥವನ್ನು ನೀಡಲಾಗುತ್ತದೆ. ಸಂಕೇತ ಮತ್ತು ಕಲ್ಪನೆಗಳ ನಡುವೆ ತರ್ಕಬದ್ಧವಾದ ಸಂಬಂಧ ಇರುವುದಿಲ್ಲ. ಆದರೆ ಸಾಮೂಹಿಕ ಒಪ್ಪಂದದಿಂದಾಗಿ ಅರ್ಥ

ಉತ್ಪತ್ತಿ ಆಗುತ್ತದೆ. 'ಮರ' ಅಂತ ಕರೀತೇವೆ. ಯಾಕೆ ? ಅಂತ ಕೇಳಿದರೆ? ರೆಂಬೆ, ಕೊಂಬೆ, ಎಲೆ, ಕಾಂಡ, ಬೇರು ಎಂಬ ವಿವರಣೆ ನೀಡೋಣವೆ? ಈ ವಿವರಣೆ ಉಳ್ಳ ವಸ್ತು ಮರ ಎಂಬುದು ಒಂದು ಭಾಷಾ ಸಮುದಾಯಕ್ಕೆ ಮಾತ್ರ ಪ್ರಸ್ತುತ. ಇದು ಮಾನವ ಜನಾಂಗಕ್ಕೆ ಸಾರ್ವತ್ರಿಕ ಅಲ್ಲ. ಆದ್ದರಿಂದಲೇ ಇದೇ ವಿವರಣೆ ಉಳ್ಳ ವಸ್ತುವಿಗೆ ಇನ್ನೊಂದು ಸಮುದಾಯ 'Tree' ಅಂತ ಗುರುತಿಸುತ್ತದೆ. ಮತ್ತೊಂದು ಸಮುದಾಯ 'ಪೇಡ್' ಎನ್ನುತ್ತದೆ. ಸಂಕೇತ ನೀಡುವುದು ಅಂದರೆ ಮಕ್ಕಳಿಗೆ ಹೆಸರು ಕೊಟ್ಟ ಹಾಗೆ. ಮಗು ಬೆಳ್ಳಗೆ ಇರುತ್ತೆ; ಆದರೆ ಕರಿಯಪ್ಪ ಅಂತ ಕರೀತೇವೆ. ನೀಳವಾಗಿರುತ್ತದೆ; ಆದರೂ ಗಿಡ್ಡಣ್ಣ ಅಂತ ಕರೀತೇವೆ. ಅಜ್ಜನ ಹೆಸರು, ದೇವರ ಹೆಸರು ಅಂತ ಹೆಸರು ಇಡ್ತೇವೆ. ಅಂದರೆ ಹೆಸರು ಕೊಡೋದು ವೈಯಕ್ತಿಕ ಅನುಕೂಲವನ್ನು ಅವಲಂಬಿಸಿದೆಯೇ ವಿನಹ ಅನ್ವರ್ಥಕ ಅಲ್ಲ. ನಮ್ಮ ಸುತ್ತಮುತ್ತಲ ವಸ್ತು, ಕ್ರಿಯೆ, ಕಲ್ಪನೆ ಇತ್ಯಾದಿಗಳಿಗೆ ಹೆಸರಿಡುವಾಗ ವೈಯಕ್ತಿಕ ಅನುಕೂಲ, ಸಾಮುದಾಯಿಕ ಒಪ್ಪಿಗೆ ಅವಶ್ಯಕ. ಸಮುದಾಯ ಯಾವುದನ್ನು ಒಪ್ಪಿಕೊಳ್ಳುತ್ತದೆಯೋ ಅದು ಹೆಸರಾಗ್ತದೆ, ಸಂಕೇತವಾಗ್ತದೆ. ಅದೇ ಸಂಕೇತ ಕಾಲಾನಂತರದಲ್ಲಿ ಅಥವ ಪ್ರಾದೇಶಿಕವಾಗಿ ಭಿನ್ನ ಅರ್ಥ, ಭಿನ್ನ ರೂಪ ಪಡೆಯಬಹುದು.

ಒಂದು ಭಾಷೆಯನ್ನು ಮಾತನಾಡುವ ಸದಸ್ಯರಲ್ಲಿ ಸಂಪರ್ಕ ಕ್ವಚಿತತೆ ಅಥವ ಸಂಪರ್ಕ ಕಡಿತ ಉಂಟಾದರೆ, ಒಂದು ಗುಂಪಿನಲ್ಲಿ ನಿರ್ಮಾಣವಾಗುವ ಒಂದು ರೂಪ, ಇನ್ನೊಂದು ಗುಂಪಿನಲ್ಲಿ ಪ್ರಸಾರ ಆಗುವುದಿಲ್ಲ ಆಗ ಆ ಎರಡು ಗುಂಪುಗಳಲ್ಲಿ ಪ್ರತ್ಯೇಕ ರೂಪಗಳು ನಿರ್ಮಾಣ ಆಗುತ್ತವೆ. ಉದಾಹರಣೆಗೆ 'ಕಸ ಗುಡಿಸು' ಎಂಬ ವಾಕ್ಯ. ಇದನ್ನೇ ರಾಯಚೂರಿನ ಕೆಲವೊಂದು ಸಮುದಾಯ 'ಕಸ ಬಳಿ' ಎಂದರೆ ಶಿವಮೊಗ್ಗದ ಕಡೆ 'ಕಸ ಹೊಡಿ' ಎನ್ನುವುದುಂಟು. ಕೆಲವೆಡೆ ಇದನ್ನ 'ಕಸ ಜಾಡಿಸು' ಎಂದು ಕರೀತಾರೆ. ಇದಕ್ಕೆ ಕಾರಣ ಕನ್ನಡ ಮಾತನಾಡುವ ಈ ಸಮುದಾಯಗಳ ನಡುವಿನ ಸಾಂಸ್ಕೃತಿಕ, ಸಾಮಾಜಿಕ ಪ್ರಾದೇಶಿಕವಾಗಿರುವ ಅಥವ ಇದರಲ್ಲಿ ಯಾವುದಾದರೊಂದರಿಂದಾಗಿ ಪರಸ್ಪರ ಸಂಪರ್ಕ ಕೊರತೆ ಮತ್ತು ಪ್ರತ್ಯೇಕ ಬೆಳವಣಿಗೆ. ಹಾಗಾದ್ರೆ ಸಂಪರ್ಕ ಕೊರತೆಗೆ ಕಾರಣಗಳೇನು? ಎಂಬ ಪ್ರಶ್ನೆ ಹುಟ್ಟುತ್ತದೆ. ಇದಕ್ಕೆ ಪರಿಸರವೇ ಕಾರಣ. ಪರಿಸರಗಳು ಮೇಲೆ ತಿಳಿಸಿದ ಪರಿಸರಗಳಿರಬಹುದು. ಅಥವ ನೈಸರ್ಗಿಕ ಪರಿಸರವೂ ಕಾರಮವಾಗಬಹುದು. ನದಿ, ಪರ್ವತ, ಅರಣ್ಯ ಇವುಗಳಲ್ಲಿ ಯಾವುದೇ ಒಂದು ಅಂಶ ಭಾಷಾ ಸಮುದಾಯವನ್ನು ಪ್ರತ್ಯೇಕಿಸುವ ಅಂಶವಾಗಬಹುದು. ಈ ಕೋಟೆ, ತೋಟ, ತೊಡೆ ಎಂಬ ಪದಗಳನ್ನು ಇಲ್ಲಿ ಉದಾಹರಿಸಬಹುದು. ಹರಿಹರದಿಂದ ಆಚೆ ದಕ್ಷಿಣ ಕರ್ನಾಟಕದಲ್ಲಿ ಇವು ಮೂಲ ರೂಪದಲ್ಲಿವೆ. ತುಂಗಭದ್ರ ನದಿಯನ್ನು ದಾಟಿ ಈಚೆ ರಾಣೆಬೆನ್ನೂರನ್ನ ದಾಟಿ ಉತ್ತರ ಕರ್ನಾಟಕದತ್ತ ಬರುತ್ತಿದ್ದಂತೆ ಕ್ವಾಟೆ, ತ್ವಾಟ, ತ್ವಡಿ ಆಗಿ ಬದಲಾವಣೆ ಆಗುತ್ತವೆ. ಈ ಬದಲಾವಣೆ ಹರಿಹರ ಹಾಗೂ ಮುಂದೆ ಪಸರಿಸದಿರಲು ನದಿಯೇ ಕಾರಣವಾಗುತ್ತದೆ.

ಇದರಂತೆಯೇ ಧಾರವಾಡ ಹಾಗೂ ಉತ್ತರದ ಕಡೆ ಬಳಕೆಯಲ್ಲಿ ಇರುವ ಒಟ್ಟ ಕೆಟ್ಟ ಒರ್‍ಯಾಲಿಲ್ಲ ಎಂಬ ಪದಗಳು. ಹಳಿಯಾಳ, ಯಲ್ಲಾಪುರವನ್ನು ದಾಟಿ ಶಿರ್ಸಿಗೆ ಬರುತ್ತಿದ್ದಂತೆ

ಇವುಗಳ ಬಳಕೆ ಸಂಪೂರ್ಣವಾಗಿ ಇಲ್ಲವಾಗುತ್ತದೆ. ಇದಕ್ಕೆ ಕಾರಣ ಈ ಪ್ರದೇಶಗಳ ನಡುವಿನ ಅರಣ್ಯ ಪರಿಸರ.

ನೀವು ಮಂಗಳೂರಿಗೆ ಹೋಗಿದೀರ? ಅಥವ ಮಂಗಳೂರಿನ ಕನ್ನಡವನ್ನು ಕೇಳಿದೀರ? ಏನು ಮಾರಾಯ್ರೆ, ಹೌದು ಮಾರಾಯ್ರೆ, ನಾನು ಹೋಗ್ಲಿಕ್ ಉಂಟು, ರಾಯರು ಬರ್ಲಿಕ್ ಉಂಟು ಎಂಬ ವಾಕ್ಯ ರೂಪಗಳು ಇಲ್ಲಿ ಮೇಲಿಂದ ಮೇಲೆ ಕಾಣ ಸಿಗುತ್ತವೆ. ಈ ರಚನೆಗಳು ಸಮುದ್ರ ತೀರದಿಂದ ಆರಂಭಿಸಿ ಆಗುಂಬೆಯ ಕೆಳಗೆ ಸೋಮೇಶ್ವರದವರೆಗೆ ಬಳಕೆ ಆಗ್ತವೆ. ಆದರೆ ಆಗುಂಬೆಯಲ್ಲಿ ಸಿಗುವುದಿಲ್ಲ. ಸೋಮೇಶ್ವರ ಘಟ್ಟದ ಕೆಳಗೆ ಇದ್ದರೆ, ಆಗುಂಬೆ ಘಟ್ಟದ ಮೇಲೆ. ಇವೆರಡನ್ನು ಪ್ರತ್ಯೇಕಿಸುವುದು ಪರ್ವತ. ಹೀಗಾಗಿ ಕರಾವಳಿಯ ಕನ್ನಡವೇ ಬೇರೆ; ಮಲೆನಾಡ ಕನ್ನಡವೇ ಬೇರೆ.

ಭಾಷಾ ಭಿನ್ನತೆಯ ಪ್ರಮಾಣ ಕಡಿಮೆ ಇದ್ದಷ್ಟು ಎರಡು ಸಮುದಾಯಗಳ ನಡುವೆ ಪರಸ್ಪರ ಅರ್ಥೈಸಿಕೊಳ್ಳುವಿಕೆ ಸುಲಭ ಸಾಧ್ಯ. ಇಂತಹ ಪ್ರಭೇದಗಳೇ ಉಪಭಾಷೆಗಳು. ಉದಾಹರಣೆಗೆ, ಧಾರವಾಡದ ಕನ್ನಡ, ಮೈಸೂರು ಕನ್ನಡ, ಮಂಗಳೂರು ಕನ್ನಡ ಇತ್ಯಾದಿ, ಸಂಪರ್ಕ ಕಡಿಮೆ ಆದಂತೆ ಭಿನ್ನತೆಯ ಪ್ರಮಾಣ ಜಾಸ್ತಿ ಆಗುತ್ತದೆ. ಪರಸ್ಪರರು ಅರ್ಥೈಸಿಕೊಳ್ಳಲಾರದ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಆಗ ಭಿನ್ನ ಭಾಷೆಗಳೇ ನಿರ್ಮಾಣವಾಗುತ್ತವೆ.

ಅಂದ ಮಾತ್ರಕ್ಕೆ ನೈಸರ್ಗಿಕ ಪರಿಸರವೆ ಭಾಷಾ ಭಿನ್ನತೆಗೆ ಮುಖ್ಯ ಕಾರಣ ಅಲ್ಲ. ಭಿನ್ನ ಭಾಷೆಯೂ ಸಹ ಇದರಷ್ಟೆ ಪರಿಣಾಮ ಬೀರಬಲ್ಲುದು. ಇತರಭಾಷಾ ಸಂಪರ್ಕ ತನ್ನ ಪ್ರಭಾವವನ್ನು ಬೀರುವುದರ ಮೂಲಕ ಭಾಷಿಕ ಬದಲಾವಣೆಯನ್ನು ಉಂಟು ಮಾಡಬಲ್ಲುದು. ಸಂಪರ್ಕಕ್ಕೆ ಬರುವ ಎಲ್ಲ ಭಾಷೆಗಳೂ ಪ್ರಭಾವವನ್ನು ಬೀರುತ್ತವೆ ಎಂದೇನೂ ಅಲ್ಲ. ಒಂದು ಭಾಷೆ ಪ್ರತಿಷ್ಠಿತ ಭಾಷೆ ಆಗಿದ್ದರೆ ಇತರ ಭಾಷೆಗಳ ಮೇಲೆ ಪ್ರಭಾವ ಬೀರಬಲ್ಲುದು. ಅಂತೆಯೇ ಒಂದು ಅನಿವಾರ್ಯ ಭಾಷೆ ತನ್ನ ಅಂಶಗಳನ್ನು ಇನ್ನೊಂದು ಭಾಷೆಯ ಮೇಲೆ ಪ್ರಭಾವ ಬೀರಬಲ್ಲುದು. ಇವಲ್ಲದೆ ಒಂದು ಭಾಷೆ ಆಡಳಿತ ಭಾಷೆಯಾಗುತ್ತಲೆ ಇತರ ಭಾಷೆಗಳ ಮೇಲೆ ತನ್ನ ಪ್ರಭಾವವನ್ನು ಬೀರಬಲ್ಲುದು.

ಸಂಸ್ಕೃತದಂತಹ ಭಾಷೆ ದೇವಭಾಷೆ ಎಂದೆನಿಸಿಕೊಂಡ ಕಾರಣ ಕನ್ನಡ ಹಾಗೂ ಇನ್ನಿತರ ಭಾರತೀಯ ಭಾಷೆಗಳು ಇದರಿಂದ ಪ್ರಭಾವಿತವಾದವು. ಧನ, ಭಾಗ್ಯ, ಶ್ರೀ, ಕ್ರಮ, ಅನುದಾನ ಮುಂತಾದ ಸಾವಿರಾರು ಶಬ್ದಗಳು ಕನ್ನಡಕ್ಕೆ ಬಂದವು ಕನ್ನಡಕ್ಕೆ ಹೊರತಾದ ಮಹಾಪ್ರಾಣ ಕನ್ನಡಕ್ಕೆ ಬಂದಿತು.

ದ್ರಾವಿಡ ಭಾಷೆಗಳಲ್ಲಿ ಪದಾದಿಯಲ್ಲಿ ವ್ಯಂಜನ ದ್ವಿತ್ವ ಇಲ್ಲ. ಆದರೆ ಸಂಸ್ಕೃತದಿಂದ ಕನ್ನಡ ಕ್ಲಿಷ್ಟ, ಗ್ರೀಷ್ಮ, ಪ್ರಾಣ, ಕೃತಿ ಮುಂತಾದ ಅನೇಕ ಪದಗಳನ್ನು ಪದಾದಿ ದ್ವಿತ್ವದೊಡನೆ ಸ್ವೀಕರಿಸಿತು. ದ್ರಾವಿಡ ಭಾಷೆಗಳಲ್ಲಿ ಅಂತ್ಯ ಪ್ರತ್ಯಯಕ್ಕೆ ಅವಕಾಶ ಇದೆ. -ಗಳು ಬಹುವಚನ ಪ್ರತ್ಯಯ. ಬಂದನು ಎಂಬ ಕ್ರಿಯಾದರಚನೆಯಲ್ಲಿ -ಅನು ಪುರುಷವಾಚಕ ಅಂತ್ಯಪ್ರತ್ಯಯ. ಈ

ಭಾಷೆಗಳಲ್ಲಿ ಮಧ್ಯ ಪ್ರತ್ಯಯವಾಗಲಿ, ಆದಿ ಪ್ರತ್ಯಯವಾಗಲಿ ಇಲ್ಲ. ಆದರೆ ಸಂಸ್ಕೃತದಿಂದಾಗಿ ರೂಪ ಕುರೂಪವಾಗಿ, ಆದರ ಅನಾದರವಾಗಿ, ವಂದನೆ-ಅಭಿವಂದನೆಯಾಗಿ ಕನ್ನಡಕ್ಕೆ ಸ್ವೀಕಾರವಾದವು. ಆದಿ ಪ್ರತ್ಯಯ ಕನ್ನಡಕ್ಕೆ ಎರವಲು ಬಂದಿತು. ಸಂಸ್ಕೃತದ ಕರ್ಮಣಿ ಪ್ರಯೋಗ ರಾವಣನು ರಾಮನಿಂದ ಕೊಲ್ಲಲ್ಪಟ್ಟನು ಕನ್ನಡಕ್ಕೆ ಬಂದಿತು. ಸಂಸ್ಕೃತದ ರೂಪಗಳನ್ನು ಹೊರತುಪಡಿಸಿದರೆ ಕನ್ನಡ ಮಾತನಾಡಲು ಬಾರದು ಎನ್ನುವಷ್ಟು ಸಂಸ್ಕೃತ ಕನ್ನಡದ ಮೇಲೆ ಪ್ರಭಾವ ಬೀರಿತು.

ಇದರಂತೆಯೇ ಕನ್ನಡ ಇಂಗ್ಲೀಷಿನಿಂದ ಬಸ್ಸು, ಕಾರು, ಸಿನಿಮಾ, ರಾಕೆಟು, ಮುಂತಾದ ಅಧಿಕ ಸಂಖ್ಯೆಯ ಪದಗಳನ್ನು ಸ್ವೀಕಾರ ಮಾಡಿತು. ರೇಡಿಯೊ ಕನ್ನಡದ ಪದವೊ ಅಥವ ಇಂಗ್ಲೀಷಿನ ಪದವೋ? ಎಂಬ ಅನುಮಾನ ಮೂಡಿಸುವಷ್ಟು ಆಂತರಿಕ ಶಬ್ದವಾಯಿತು. ವೈಜ್ಞಾನಿಕ ಆವಿಷ್ಕಾರದ ಇಂದಿನ ಯುಗದಲ್ಲಿ ಇಂಗ್ಲೀಷು ಅನಿವಾರ್ಯವಾಗ ತೊಡಗಿತು.

ಕಾಗದ, ತಹಶೀಲ್ದಾರ, ಪಂಚನಾಮ, ದಫೇದಾರ, ಶಿರಸ್ತೆದಾರ ಮುಂತಾದ ಶಬ್ದಗಳು ಎಲ್ಲಿಂದ ಬಂದವು? ಅವು ಕನ್ನಡ ಶಬ್ದಗಳೆ ? ಮುಸ್ಲಿಂ ಆಡಳಿತದಿಂದಾಗಿ ಬಳುವಳಿಯಾಗಿ ಕನ್ನಡಕ್ಕೆ ಬಂದ ಆಡಳಿತಾತ್ಮಕ ಶಬ್ದಗಳಿವು.

ಹೀಗೆ ಇಡಿಯಾಗಿ ಈ ಭಾಷೆಗಳು ಕನ್ನಡದ ಉದ್ದಗಲಕ್ಕೂ ಪ್ರಭಾವ ಬೀರಿ ಭಾಷಿಕ ಬದಲಾವಣೆಗೆ ಕಾರಣವಾದವು. ಹೀಗಂದೇಂತ ಒಂದು ಭಾಷೆಯ ಉದ್ದಗಲಕ್ಕೂ ಇನ್ನೊಂದು ಭಾಷೆ ಒಂದೇ ಪ್ರಮಾಣದಲ್ಲಿ ಪ್ರಭಾವ ಬೀರುವುದಿಲ್ಲ. ಒಂದು ಭಾಷೆ ಪ್ರಾದೇಶಿಕವಾಗಿ ಪಕ್ಕದಲ್ಲಿ ಇದ್ದಾಗ ಆ ಭಾಷೆಯ ಪ್ರಭಾವ ತನ್ನ ಪಕ್ಕದ ಭಾಷೆಗೆ ಮಾತ್ರ ಸೀಮಿತ ಹಾಗೂ ಹೆಚ್ಚು ಪರಿಣಾಮಕಾರಿ. ಇದು ಪ್ರಾದೇಶಿಕವಾದ ಮತ್ತೊಂದು ರೂಪವನ್ನೇ ನಿರ್ಮಿಸಬಹುದು.

ಧಾರವಾಡ, ಬೆಳಗಾವಿ ಮಾತನಾಡುವ ಪ್ರದೇಶದ ಪಕ್ಕದಲ್ಲಿ ಇರುವ ಕಾರಣ ಮರಾಠಿ ಪ್ರಭಾವಕ್ಕೆ ಒಳಗಾಗುತ್ತದೆ. ಈ ಪ್ರಭಾವ ಒಳಕ್ಕೆ ಚಲಿಸಿದಂತೆ ಕ್ರಮೇಣವಾಗಿ ಕ್ಷೀಣಿಸಿ ಇಲ್ಲವಾಗುತ್ತದೆ. ಇದರಂತೆ ಮಂಗಳೂರು ಮಲಯಾಳಂ ಭಾಷಾ ಪ್ರಭಾವಕ್ಕೆ ಒಳಗಾಗುತ್ತದೆ. ಕೊಳ್ಳೇಗಾಲ ಹಾಗೂ ಪಕ್ಕದ ಪ್ರದೇಶ ತಮಿಳು ಭಾಷೆಯ ಪ್ರಭಾವಕ್ಕೆ ಒಳಗಾಗುತ್ತವೆ. ರಾಯಚೂರು ತೆಲುಗು ಭಾಷಾ ಪ್ರಭಾವಕ್ಕೆ ಒಳಗಾಗುವುದು ಸಹ ಇಂತಹದೆ ಪ್ರಕ್ರಿಯೆ.

ಒಂದು ಉಪಭಾಷೆ ಇನ್ನೊಂದು ಉಪಭಾಷೆಯ ಮೇಲೆ ಪ್ರಭಾವ ಬೀರಬಹುದು. ನಾನು ಮೈಸೂರು ಕನ್ನಡದ ಪ್ರದೇಶಕ್ಕೆ ಸೇರಿದ್ದರೂ ಸಹ ದೀರ್ಘಕಾಲದ ಧಾರವಾಡದ ನನ್ನ ಒಡನಾಟ, ಒಟ್ಟ ಕೆಟ್ಟ, ಬರ್ರಿ, ಹೊಗ್ಬರ್ರಿ, ಇತ್ಯಾದಿ ಪ್ರಯೋಗಗಳನ್ನು ನನ್ನದಾಗಿಸಿದೆ.

ಒಂದು ಭಾಷೆ ಕಾಲಾನಂತರದಲ್ಲಿ ಬದಲಾವಣೆ ಮಾಡಿಕೊಳ್ಳಲು ಕಾರಣ ಭಾಷಾಸರಳೀಕರಣ. ಯಾವುದೇ ರಚನೆ ದೀರ್ಘ, ಉಚ್ಚಾರ ಕ್ಲಿಷ್ಟ ಎನ್ನಿಸಿದಾಗ ಸರಳೀಕರಣದತ್ತ ಭಾಷಿಕ ಮನಗೊಡುತ್ತಾನೆ. ತಮಿಳು ಭಾಷಿಕರಿಗೆ ರ ಕಾರವನ್ನು ಆದಿಯಲ್ಲಿ

ಉಚ್ಚರಿಸಲು ಕಷ್ಟ ಕಾರಣ ಇ ಕಾರವನ್ನು ಸೇರಿಸಿ ಇರಾಮನ್ ಎಂಬ ರಚನೆ ಮಾಡಿಕೊಂಡು ಬಳಸಿದರು.

ಉತ್ತರ ಕರ್ನಾಟಕದಲ್ಲಿ ಕರಡ ಎಂಬ ಪದವನ್ನು ಕರ್ದ-ಕಳ್ದ-ಕಡ್ದ ಎಂದು ಸಮರೂಪಧಾರಣೆ ಮಾಡಿ ಬದಲಾಯಿಸಿ ಬಳಸುತ್ತಿದ್ದಾರೆ. ವೀರರಾಜಪೇಟೆ ಎಂಬಲ್ಲಿ ರ ಕಾರ ಪುನರಾವರ್ತನೆ ಆದ ಕಾರಣ ಅದರಲ್ಲಿ ರ ಕಾರ ಲೋಪ ಮಾಡಿ ವಿರಾಜಪೇಟೆ ಎಂದರು.

ಆಡುಗನ್ನಡದಲ್ಲಿ ತಂಬಾ ಎಂಬ ಪದ ಬಳಕೆಯಲ್ಲಿದೆ. ಇದರ ಪೂರ್ಣ ರೂಪ 'ತೆಗೆದುಕೊಂಡು ಬಾ' ಚೆನ್ನಮಲ್ಲಣ್ಣ ಎಂಬ ಹೆಸರಿದೆ ಅಲ್ವ? ಇದನ್ನ ನನ್ನೂರಿನಲ್ಲಿ ಚಮ್ಮಲ್ಲಣ್ಣ ಅಂತಾನೊ ಚಮ್ಮಣ್ಣ ಅಂತಾನೊ ಕರೀತಾರೆ. ಧಾರವಾಡದ ಕಡೆಗೆ ಚಂಬಕ್ಕ ಎಂಬ ಹೆಸರಿದೆ. ಇದು ಚನ್ನಮಲ್ಲಕ್ಕ ಎಂಬುದರ ಸಂಕ್ಷೇಪರೂಪ ಇರಬೇಕು.

ಏನೇ ಇರಲಿ ಭಾಷಿಕ ಬದಲಾವಣೆ ಒಬ್ಬ ವ್ಯಕ್ತಿಯಿಂದ ಅರಂಭವಾಗಿ ಸಮುದಾಯದಲ್ಲಿ ಪ್ರಸರಣವಾಗುತ್ತದೆ. ಹಾಗೂ ಭಾಷಿಕ ಬದಲಾವಣೆಗೆ ಕಾರಣವಾಗುತ್ತದೆ.

ಯಾವುದೇ ಭಾಷೆ ನಿಂತ ನೀರಲ್ಲ. ಅದು ಹರಿವ ನದಿ. ತನ್ನ ಹಳೆಯ ರೂಪಗಳನ್ನು ಅಲ್ಲಲ್ಲೆ ಬಿಟ್ಟುಕೊಡುತ್ತ, ಹೊಸ ರೂಪಗಳನ್ನು ಸ್ವೀಕಾರ ಮಾಡುತ್ತ ಬದಲಾವಣೆಗೆ ಒಳಗಾಗುವುದರ ಮೂಲಕ ಬೆಳೆಯುತ್ತದೆ.

# ಶಿಷ್ಟ ಭಾಷೆ

ಡಾ. ಸೋಮಶೇಖರ ಗೌಡ

**ಶಿಷ್ಟ ಭಾಷೆ ಎಂದರೇನು ?**

ಯಾವ ಭಾಷೆಯ ಒಂದು ರೂಪ ವರ್ಗ ವಲಯಗಳನ್ನು ದಾಟಿ, ಸಾಮಾಜಿಕ, ಪ್ರಾದೇಶಿಕ ಪ್ರತಿಬಂಧಕಗಳನ್ನು ಮೀರಿ ಆ ಭಾಷೆಯನ್ನಾಡುವ ಎಲ್ಲರಿಗೂ ಅರ್ಥವಾಗುತ್ತದೆಯೋ ಅದೇ ಶಿಷ್ಟ ಭಾಷೆ. ಚಾಮರಾಜನಗರ, ಕೊಳ್ಳೇಗಾಲ, ಮಂಡ್ಯ, ಮದ್ದೂರುಗಳಲ್ಲಿ ಮಾತಾಡುವಂಥ ಕನ್ನಡ, ಕರ್ನಾಟಕದ ಎಲ್ಲ ಭಾಗಗಳಲ್ಲಿರುವ ಕನ್ನಡಿಗರಿಗೆಲ್ಲ ಸಂಪೂರ್ಣವಾಗಿ ಅರ್ಥವಾಗದೇ ಹೋಗಬಹುದು. ಹಾಗೆಯೇ ಧಾರವಾಡ, ಹುಬ್ಬಳ್ಳಿ, ಗುಲ್ಬರ್ಗಗಳಲ್ಲಿ ಮಾತನಾಡುವ ಕನ್ನಡ ಕೂಡ. ಆದರೆ, ಆಡಳಿತ, ಕಾನೂನು, ಶಿಕ್ಷಣ ಮಾಧ್ಯಮಗಳಲ್ಲಿ ಬಳಸುವ ಕನ್ನಡ, ಕರ್ನಾಟಕದ ಎಲ್ಲ ಭಾಗಗಳ ಕನ್ನಡಿಗರಿಗೂ ತಿಳಿಯುತ್ತದೆ. ಆದುದರಿಂದಲೇ ಇದನ್ನು ದಿನ ಪತ್ರಿಕೆಗಳು, ರೇಡಿಯೊ, ದೂರದರ್ಶನದಂಥ ಸಮೂಹ ಮಾಧ್ಯಮಗಳು ಅವಲಂಬಿಸಿರುವುದು.

**ಶಿಷ್ಟ ಭಾಷೆಯನ್ನು ಗುರುತಿಸುವುದು ಹೇಗೆ ?**

ಶಿಷ್ಟ ಭಾಷೆಗೆ ಹೆಚ್ಚು ಜನರಿಗೆ ತಲುಪುವಂಥ, ಹೆಚ್ಚು ಜನರಿಗೆ ಅರ್ಥವಾಗುವಂಥ ಉಚ್ಚಾರಣೆ, ಪದಸಂಪತ್ತು, ವಾಕ್ಯರಚನೆ ಹಾಗೂ ವ್ಯಾಕರಣರೂಪ ಇರುತ್ತದೆ. ಶಿಕ್ಷಣ ವೇತ್ತರು, ಅಧಿಕಾರಿಗಳು ಶಿಷ್ಟ ಭಾಷೆಯನ್ನು ಬಳಸುತ್ತಾರೆ. ಅನ್ಯಭಾಷಿಗರು ಯಾವಾಗಲೂ ಕಲಿಯುವುದು ಶಿಷ್ಟಭಾಷೆಯನ್ನೇ. ಹೀಗಾಗಿ ಬೋಧಕರು ತಮ್ಮ ಬೋಧನಾ ಸಾಮಗ್ರಿಯನ್ನು ಶಿಷ್ಟ ಭಾಷೆಯಲ್ಲಿಯೇ ಸಿದ್ಧಪಡಿಸುತ್ತಾರೆ. ವಿದ್ಯಾವಂತರನ್ನು ಗುರುತುಹಚ್ಚುವುದೇ ಅವರು ಆಡುವ ಶಿಷ್ಟಭಾಷೆಯಿಂದ. ಈ ಕಾರಣಗಳಿಂದಾಗಿ ಶಿಷ್ಟಭಾಷೆ ಇತರ ಉಪಭಾಷಾ ರೂಪಗಳ ಮೇಲೆ ಕುಳಿತು ಸವಾರಿ ಮಾಡುತ್ತದೆ. ಆದುದರಿಂದಲೇ ಇದಕ್ಕೆ Superposed Variety, Prestigeous variety ಎಂಬ ಗೌರವ, ಸನ್ಮಾನಗಳು ಲಭ್ಯವಾಗಿವೆ.

**ಶಿಷ್ಟ ಭಾಷೆ ರೂಪುಗೊಳ್ಳುವ ಬಗೆ ಎಂಥದು ?**

ಶಿಷ್ಟಭಾಷೆ ಏಕಾಏಕಿ ಎಲ್ಲಿಂದಲೂ ಬಂದುಬಿಡುವುದಿಲ್ಲ. ಉಪಭಾಷೆಗಳ ನಡುವಣ ಅಂತರವನ್ನು ಕಡಿಮೆ ಮಾಡುವ ನೆಪದಲ್ಲಿ ಇದು ಏಕಸ್ವಾಮ್ಯ ಗಳಿಸಿ ಗದ್ದುಗೆ ಏರುತ್ತದೆ.

ಐತಿಹಾಸಿಕವಾಗಿ, ಇಂಗ್ಲಿಷ್, ಶಿಷ್ಟ ಭಾಷಾರೂಪವನ್ನು ಪಡೆದ ಬಗೆಯನ್ನಿಲ್ಲಿ ಹೆಸರಿಸಬಹುದು. ಲಂಡನ್ ನಗರದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇಂಗ್ಲೀಷ್‌ನ ಅನೇಕ ಉಪಭಾಷೆಗಳು ಪ್ರಚಲಿತವಿದ್ದವು. ಆದರೆ ಲಂಡನ್ ನಗರದಲ್ಲಿದ್ದ ಇಂಗ್ಲಿಷ್ ಭಾಷೆ ವಿಶ್ವವಿದ್ಯಾನಿಲಯಗಳಲ್ಲಿ, ಅನಂತರ ಲೇಖಕರಿಂದ, ಆಮೇಲೆ ಸಾರ್ವಜನಿಕ ಶಾಲೆಗಳಲ್ಲಿ, ಶತಮಾನಗಳ ಕಾಲ ನ್ಯಾಯಾಲಯದಲ್ಲಿ ಬಳಕೆಗೊಳ್ಳುತ್ತ, ಬದಲಾಗುತ್ತ ಬಂತು. ಕಾಲಾನಂತರದಲ್ಲಿ ಇದು ಲಂಡನ್‌ನ ಉನ್ನತ ವರ್ಗದವರು, ಸಮಾಜದ ಗಣ್ಯರು ಬಳಸುವಂಥ ಮನ್ನಣೆಗೆ ಪಾತ್ರವಾಯಿತು. ಕ್ರಮೇಣ ಇತರ ಇಂಗ್ಲಿಷ್ ರೂಪಗಳಿಗಿಂತ ಇದು ರಚನೆಯಲ್ಲಿ ತೀರಾ ಭಿನ್ನವಾಗತೊಡಗಿತು. ಇದನ್ನು ಕಲಿಯಲು, ಮಾತನಾಡಲು ಮತ್ತು ಬರೆಯಲು ಹಾತೊರೆಯುವಂಥ ಪರಿಸ್ಥಿತಿ ನಿರ್ಮಾಣವಾಯಿತು. ಅದೇ ವೇಳೆಗೆ ಮುದ್ರಣದ ಅನ್ವೇಷಣೆ ಯಾಯಿತು. ಮುದ್ರಣಕ್ಕೆ ಬೇರೆಲ್ಲ ರೂಪಗಳಿಗಿಂತ ಲಂಡನ್ ಇಂಗ್ಲಿಷ್ ರೂಪವನ್ನು ಅನಿವಾರ್ಯವಾಗಿ ಬಳಸಿಕೊಳ್ಳಲಾಯಿತು. ಹೀಗಾಗಿ, ಈ ರೂಪಕ್ಕೆ ಉಳಿದೆಲ್ಲ ಉಪಭಾಷಾ ರೂಪಗಳಿಗಿಂತ ಹೆಚ್ಚು ವ್ಯಾಪಕತೆ ಲಭಿಸಿತು; ಇದರಿಂದ ಹೆಚ್ಚು ಜನರನ್ನು ತಲುಪುವಲ್ಲಿ ಇದು ಯಶಸ್ವಿಯಾಯಿತು. ಅಗತ್ಯಕ್ಕೆ ತಕ್ಕಂತೆ ಬದಲಾವಣೆ ಹೊಂದುತ್ತ ಎಲ್ಲೆಲ್ಲೂ ವಿರಾಜಮಾನವಾಗಿ ಬೆಳೆಯಿತು, ಬೆಳಗಿತು. ತನ್ಮೂಲಕ ಶಿಷ್ಟತೆಯನ್ನು ಪಡೆಯಿತು.

**ಶಿಷ್ಟಭಾಷೆಗಿರುವುದು ಒಂದೇ ಶಿಷ್ಟರೂಪವೆ ?**

ಶಿಷ್ಟ ಭಾಷೆಯಲ್ಲಿಯೂ ಅನೇಕ ಪ್ರಾದೇಶಿಕ ಪ್ರಭೇದಗಳಿರಲು ಸಾಧ್ಯ. ಉದಾಹರಣೆಗೆ, ಇಂಗ್ಲಿಷಿನಲ್ಲಿ ಈಗ ಅನೇಕ ಶಿಷ್ಟಭಾಷಾರೂಪಗಳಿವೆ; Standard English, Standard Scottish English, Standard American English ಹೆಸರಿಸುವಂಥವು. ಕನ್ನಡ ದಲ್ಲಿಯೂ ಮೈಸೂರು ಕನ್ನಡದ ಮತ್ತು ಧಾರವಾಡ ಕನ್ನಡಗಳು ಹೊಯ್‌ಕಯ್‌ಯಾಗಿ ಶಿಷ್ಟತೆಯ ಪಟ್ಟಕ್ಕೆ ಪೈಪೋಟಿ ನಡೆಸಿರುವುದು ಇತಿಹಾಸ. ಇಂಗ್ಲಿಷನ್ನು ಎರಡನೇ ಭಾಷೆಯಾಗಿ ಅಥವಾ ವಿದೇಶೀ ಭಾಷೆಯಾಗಿ ಕಲಿಯಲಿಚ್ಛಿಸುವವರು ಇಂದಿಗೂ 'Oxford English' ನ ಉಚ್ಚಾರಣೆಗೂ 'B.B.C. English'ನ ಶೈಲಿಗೂ ಮಾರು ಹೋಗುವುದು ವಾಡಿಕೆ.

**ಶಿಷ್ಟ ಭಾಷೆ ಏಕೆ ಬೇಕು ?**

ಒಂದು ಭಾಷೆಯ ಉಪಭಾಷೆಗಳ ನಡುವಣ ದೂರವನ್ನು, ಅಂತರವನ್ನು ಕಡಿಮೆ ಮಾಡಲು (to reduce the distance) ಶಿಷ್ಟ ಭಾಷೆ ಬೇಕು. ಇಲ್ಲವಾದರೆ ಉಪ ಭಾಷೆಗಳೇ ಪರಭಾಷೆಗಳಂತೆ ಅರ್ಥಮಾಡಿಕೊಳ್ಳಲು ತೊಡಕನ್ನುಂಟು ಮಾಡಬಹುದು. ಜೊತೆಗೆ ಒಂದು ಭಾಷೆಯ ಎಲ್ಲ ಉಪ ಭಾಷೆಗಳನ್ನೂ ಶಿಕ್ಷಣ, ಕಾನೂನು, ಆಡಳಿತ, ವಾರ್ತಾಮಾಧ್ಯಮಗಳಾಗಿ ಬಳಸಲು ಸಾಧ್ಯವಿಲ್ಲ ಇವುಗಳ ಪ್ರತಿನಿಧಿಯಾಗಿ ಒಂದು ಶಿಷ್ಟ ಭಾಷೆ ಈ ಎಲ್ಲ ಕಾರ್ಯಗಳನ್ನು ನಿರ್ವಹಿಸಬಲ್ಲದು. ಕನ್ನಡ ಕಲಿಯುವವರು ಕನ್ನಡದ ಎಲ್ಲ ಉಪಭಾಷೆಗಳನ್ನು ಕಲಿಯುವುದು ಸಾಧ್ಯವಿಲ್ಲ. ಅಥವಾ ಯಾವುದಾದರೂ ಒಂದು ಉಪಭಾಷಾರೂಪವನ್ನು ಕರಗತ ಮಾಡಿಕೊಂಡರೆ ಕನ್ನಡ ಬಂದಂತಾಗುವುದಿಲ್ಲ. ಏಕೆಂದರೆ,

ಓದಲು ಮುದ್ರಣದಲ್ಲಿ ಕಲಿತ ಉಪಭಾಷೆ ದಕ್ಕದಿದ್ದರೆ ಆದರಿಂದ ಲಾಭವೇನು ? ಅಲ್ಲದೆ, ಒಂದು ಭಾಷೆ ಸಂಪದ್ಭರಿತವಾಗಬೇಕಿದ್ದಲ್ಲಿ ಆಧುನಿಕ ಅಗತ್ಯಗಳಿಗೆ ತಕ್ಕಂತೆ ಬದಲಾಗುವ, ಬೇರೆ ಆಕರಗಳಿಂದ ಸ್ವೀಕರಿಸಿ ಅರಗಿಸಿಕೊಳ್ಳುವ, ಇತರ ಭಾಷೆಗಳೊಡನೆ ಪೈಪೋಟಿಗಿಳಿಯುವ ಗತ್ತು ಗೈರತ್ತುಗಳನ್ನು ಹೊಂದಿರಬೇಕಾಗುತ್ತದೆ. ಹೀಗಾಗುವುದು ಒಂದು ಭಾಷೆಯ ಎಲ್ಲ ಉಪಭಾಷೆಗಳಿಗೂ ಸಾಧ್ಯವಿಲ್ಲ. ಯಾವುದಾದರೂ ಒಂದು ಅವುಗಳಿಂದಲೇ ಒಡಮೂಡಿ ಈ ತಾಕತ್ತನ್ನು ಪಡೆಯಬೇಕಾಗುತ್ತದೆ. ಹೀಗಾಗಿ, ಇಡೀ ಭಾಷೆಯ ಹಿತದೃಷ್ಟಿಯಿಂದ ಒಂದು ಸಮರ್ಥ ಶಿಷ್ಟಭಾಷೆ ರೂಪ ತಳೆಯಬೇಕಾದ್ದು ಅನಿವಾರ್ಯ ಹಾಗೂ ಅಪೇಕ್ಷಣೀಯ.

**ಶಿಷ್ಟ ಭಾಷೆಯಿಂದ ಉಪಭಾಷೆಗಳಿಗಾಗಿರುವ ಹಾನಿಯೇನು ?**

ಶಿಷ್ಟ ಭಾಷೆಯನ್ನು ಬರೆಹದ ಭಾಷೆಗೆ, ವಿದ್ಯಾವಂತರ ಭಾಷೆಗೆ ಸಮೀಕರಿಸುವುದುಂಟು. ಅರ್ಥಾತ್ ಬರೆಹದ ಭಾಷೆಯನ್ನು, ವಿದ್ಯಾವಂತರು ಆಡುವ ಭಾಷೆಯನ್ನು ಭಾಷಾವಿಜ್ಞಾನಿಗಳು ಆಡುನುಡಿಯಂತೆ, ಗ್ರಾಮ್ಯ (colloquial) ಭಾಷೆಯಂತೆ ಸೈಜವಾದುದೆಂದು ಪರಿಗಣಿಸುವುದಿಲ್ಲ. ಶಿಕ್ಷಣ ಆಡು ಮಾತಿನ ದೊಡ್ಡಶತ್ರು. ಏಕೆಂದರೆ, ಓದಲು, ಬರೆಯಲು ಕಲಿತವರು ಬಹುಬೇಗ ತಮ್ಮ ಆಡುನುಡಿಯನ್ನು ಕೈಬಿಡುತ್ತಾರೆ. ಅದನ್ನು ಬಳಸುವುದರಿಂದ ಎಲ್ಲಿ ನಗೆಪಾಟಲಿಗೆ ತುತ್ತಾದೇವೋ ಎಂಬ ಹುಸಿ ಭ್ರಮೆ, ಭಯ ಅವರನ್ನು ಕಾಡುತ್ತಿರುತ್ತದೆ. ತಾವು ವಿದ್ಯಾವಂತರೆನಿಸಿಕೊಳ್ಳಲು, ತಾವು ಬೆಳೆದು ಬಂದ ಪರಿಸರದ ಜನರಿಗಿಂತ ಭಿನ್ನ ಎಂದು ಗುರುತಿಸಿಕೊಳ್ಳಲು ಇಂಥವರು ಶಿಷ್ಟಭಾಷೆಗೆ ಮರೆಹೋಗುತ್ತಾರೆ. ತಮ್ಮ ಪ್ರಾದೇಶಿಕ ಅಥವಾ ಸಾಮಾಜಿಕ ಉಪಭಾಷೆಗೆ ಗುದ್ದು ತೋಡುತ್ತಾರೆ.

**ಸಾಮಾಜಿಕ ಭಾಷಾ ವಿಜ್ಞಾನಿಗಳ ನಿಲುವೇನು ?**

ಸಾಮಾಜಿಕ ಭಾಷಾವಿಜ್ಞಾನಿಗಳ ಪ್ರಕಾರ ಯಾವುದೇ ಒಂದು ಭಾಷೆ, ಅದನ್ನಾಡುವ ಸಮಾಜದ ಜನರ ಸೊತ್ತು. ಅದರ ಬಗೆಗೆ ತಳೆಯುವ ಧೋರಣೆ, ನಿಲುವು, ಅಭಿಪ್ರಾಯಗಳು ಸಮಾಜದ ಜನರಿಂದ ರೂಪಿತವಾಗುವಂಥವು; ಆಯಾ ಸಮಾಜದ ರಚನೆ ಮತ್ತು ಸಾಮಾಜಿಕ ಮೌಲ್ಯಗಳಿಗೆ ಅವು ನಿಕಟವಾಗಿರುತ್ತವೆ, ನಿಷ್ಠವಾಗಿರುತ್ತವೆ. ಹೀಗಾಗಿ, ಶಿಷ್ಟ ಭಾಷಾ ರೂಪಕ್ಕೆ ಸಮಾಜದಲ್ಲಿ ಉಳಿದೆಲ್ಲ ಉಪಭಾಷಾ ರೂಪಗಳಿಗಿಂತ ಉನ್ನತವಾದ ಸ್ಥಾನಮಾನಗಳು ಲಭ್ಯವಾಗುತ್ತವೆ. ಸಾಮಾಜಿಕವಾಗಿ ಅಷ್ಟೇ ಅಲ್ಲ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ವಿಶೇಷವಾದ ಸವಲತ್ತುಗಳು ಶಿಷ್ಟಭಾಷೆಯನ್ನು ಮಾತನಾಡುವ. ಓದುವ ಬರೆಯುವ ಜನರಿಗೆ ದಕ್ಕುತ್ತವೆ. ಶಿಷ್ಟಭಾಷೆಯನ್ನು ಬಲ್ಲವರು ಅದನ್ನು ಸಹಜ ಭಾಷಾರೂಪ, ಸುಂದರ ರೂಪ, ಸ್ಪಷ್ಟರೂಪ, ಅರ್ಥೈಸಿಕೊಳ್ಳಲು ಸುಲಭ ಹಾಗೂ ಸೊಗಸಾದ ರೂಪ ಎಂದೆಲ್ಲ ಹಾಡಿ ಹೊಗಳುತ್ತಾರೆ. ಅದೇ ವೇಳೆಗೆ ಇವರು ಆಡುನುಡಿಯನ್ನು ಭಾಷಿಕ ಕುರೂಪ, ಕಲುಷಿತ ಅಸಹಜರೂಪ,ಅರ್ಥವಾಗದ ಅಸ್ಪಷ್ಟ ರೂಪ ಎಂದೂ ಹೀನಾಯವಾಗಿ ಕಾಣುವುದುಂಟು.

ಸಾಮಾಜಿಕ ಭಾಷಾವಿಜ್ಞಾನಿ ಈ ಬಗೆಯ ತಾರತಮ್ಯವನ್ನು ಒಪ್ಪುವುದಿಲ್ಲ. ಅವನ ದೃಷ್ಟಿಯಲ್ಲಿ ಶಿಷ್ಟಭಾಷೆ ಕೂಡ ಉಳಿದೆಲ್ಲ ಉಪಭಾಷೆಗಳಲ್ಲಿ ಒಂದು ಅಷ್ಟೆ.

ಶಿಷ್ಟಭಾಷಾರೂಪ ಯಾವುದೇ ಉಪಭಾಷಾರೂಪಗಳಿಗಿಂತ ಮೇಲೂ ಅಲ್ಲ ಕೀಳೂ ಅಲ್ಲ. ಭಾಷಾರೂಪಗಳ ನಡುವೆ ಹಾಗೆ ಭೇದ ಎಣಿಸುವುದು ಅವೈಜ್ಞಾನಿಕ. ಆದುದರಿಂದಲೇ ಆತ ಖಂಡತುಂಡವಾಗಿ ಘೋಷಿಸುತ್ತಾನೆ. "Lingusitically speaking it (study, cannot even legitimately be consider better than other varieties... The scientific study of language has convinced most scholars that all languages, and correspondingly all dialects are equally good as linguistic systems" (Trudgill Sociolinguistics) ಶಿಷ್ಟವಲ್ಲದ ಉಪಭಾಷೆಗಳಲ್ಲಿ ಅವು ಕೀಳೆಂದು ಪರಿಗಣಿಸುವಂಥ ಯಾವುದೇ ಜನ್ಯ ಲಕ್ಷಣ ಇರುವುದಿಲ್ಲ.

ಒಂದು ಭಾಷಾರೂಪ ಮೇಲು ಇನ್ನೊಂದು ಕೀಳು ಎಂಬ ತೀರ್ಮಾನಗಳು ಸಾಮಾಜಿಕವಾದುದೇ ಹೊರತು ಭಾಷಾವೈಜ್ಞಾನಿಕವಾದುವಲ್ಲ. ಒಂದು ಉಪಭಾಷೆಗೆ ಅಥವಾ ಭಾಷೆಗೆ ಕೀಳರಿಮೆ ಉಂಟಾಗುವುದು, ಅಥವಾ ಪ್ರಾಪ್ತವಾಗುವುದು ಅದನ್ನು ಕೆಳದರ್ಜೆಯ ಗುಂಪಿನ ಅವಕಾಶ ವಂಚಿತ ಜನ ಬಳಸುವುದರಿಂದ. ಅರ್ಥಾತ್ ಶಿಷ್ಟವಲ್ಲದ ಭಾಷಾ ರೂಪಗಳು ಅಥವಾ ಉಪಭಾಷೆಗಳು ಆಯಾ ಸಮಾಜದ ವ್ಯವಸ್ಥೆಯನ್ನು ಪ್ರತಿನಿಧಿಸುವಂಥ ವರ್ತನೆಗಳು ಮಾತ್ರ. ಆದುದರಿಂದ, ಒಂದು ಗೊತ್ತಾದ ಭಾಷಾರೂಪ ಶಿಷ್ಟವೋ ಅಲ್ಲವೋ ಎನ್ನುವಂಥ ನಿರ್ಧಾರ, ತೀರ್ಮಾನ ಕೂಡ ಸಾಮಾಜಿಕ ವ್ಯವಸ್ಥೆಯ ಪ್ರತೀಕ ಮೌಲ್ಯ ಅಷ್ಟೆ.

ಉದಾಹರಣೆಗೆ, ಇಂಗ್ಲೆಂಡ್‌ನಲ್ಲಿ ಬಳಸುವ ಇಂಗ್ಲಿಷ್‌ನ ಉಚ್ಚಾರಣೆಯಲ್ಲಿನ ಶಿಷ್ಟತೆ, ಅಮೆರಿಕನ್ನರು ಬಳಸುವ ಇಂಗ್ಲಿಷ್‌ಗೆ ಶಿಷ್ಟವಲ್ಲ. rat, rich, carry, sorry, ಪದಗಳಲ್ಲಿ |r|ನ ಉಚ್ಚಾರಣೆ ಇದೆ. ಆದರೆ Cart, car, ಈ ಪದಗಳಲ್ಲಿ |r| ನ ಉಚ್ಚಾರಣೆ ಇಲ್ಲ. Care ಎನ್ನುವಂಥ ಪದಗಳಲ್ಲಿ ಬರುವ ಸ್ವರಗಳ ನಡುವಣ |r| ಇದಕ್ಕೆ ಅಪವಾದ. ಇಂಗ್ಲೆಂಡ್‌ನಲ್ಲಿ ಸ್ವರದ ಮುಂದೆ ಬರುವ |r| ನ್ನು ಉಚ್ಚರಿಸುವುದು ಶಿಷ್ಟವಲ್ಲ. ಹೀಗಾಗಿ ma, mar ಪದಗಳು ಉಚ್ಚಾರಣೆಯ ಹಂತದಲ್ಲಿ ಒಂದೇ ಆಗಿ ಕೇಳಿಸುತ್ತವೆ. ಆದರೆ ಅಮೆರಿಕನ್ ಇಂಗ್ಲಿಷ್‌ನಲ್ಲಿ Post vocalic |r|ಉಚ್ಚಾರಣೆ ಶಿಷ್ಟವಾದದ್ದು. ವೆಸ್ಟ್‌ಇಂಡೀಸ್, ನ್ಯೂಜಿಲ್ಯಾಂಡ್, ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕಾಗಳಲ್ಲೂ |r| ಉಚ್ಚಾರಣೆ ಅಮೆರಿಕನ್ ಇಂಗ್ಲಿಷ್ ಮಾದರಿಯದೆ. ಇಂಗ್ಲೆಂಡ್ ಬಗೆಯ ಉಚ್ಚಾರಣೆ ಇಲ್ಲೆಲ್ಲ ಗ್ರಾಮ್ಯವಾದುದು, ಅವಿದ್ಯಾವಂತರು ಆಡುವಂಥದು ಎಂದು ಅಪಹಾಸ್ಯಕ್ಕೆ ಗುರಿಯಾಗುತ್ತದೆ. ರೇಡಿಯೊ, ದೂರದರ್ಶನ, ನಾಟಕಗಳಲ್ಲಿ ಒಂದು ಪಾತ್ರ ಗ್ರಾಮೀಣ ಪರಿಸರದ್ದು, ನಿರಕ್ಷರ ಕುಕ್ಷಿಯಂಥದು ಎಂದು ಚಿತ್ರಿತವಾಗಲು ಈ ಬಗೆಯ ಉಚ್ಚಾರಣೆಯನ್ನು ಬಳಸಲಾಗುತ್ತದೆ. ಒಂದು ಪಾತ್ರದ ಮೂಲಕ ಹಾಸ್ಯರಸವನ್ನು ಉಕ್ಕಿಸಲೂ ಇಂಗ್ಲೆಂಡ್ ಬಗೆಯ ಉಚ್ಚಾರಣೆಯನ್ನು ಅಳವಡಿಸುವುದುಂಟು, ಅಮೆರಿಕನ್ನರು. ಆದರೆ ಇಂಗ್ಲೆಂಡ್‌ನಲ್ಲಿ ಬಹುತೇಕ ಜನ Post Vocalic |r|ಉಚ್ಚಾರಣೆಯನ್ನು ಆದರದಿಂದ ಕಾಣುತ್ತಾರೆ. ಅತ್ಯಂತ Prestigeous ಎಂದು ಪರಿಗಣಿಸಿ BBC ಯಲ್ಲೂ ಪ್ರಸಾರಮಾಡುತ್ತಾರೆ.

ಮೇಲಿನ ಉದಾಹರಣೆಯಿಂದ ಭಾಷೆಯಲ್ಲಿರುವ ಒಂದು ಅಂಶ ಶಿಷ್ಟತೆಗೆ ಅಥವಾ ಹೀನಾಯಕ್ಕೆ ಒಳಗಾಗುವಂಥ ಯಾವುದೇ ಜನ್ಯ ಗುಣವನ್ನು ಹೊಂದಿಲ್ಲ. ಆದರೆ ಅದಕ್ಕೆ ಶಿಷ್ಟತೆಯ ಅಥವಾ ಅಶಿಷ್ಟತೆಯ ಗುಣದ ಲೇಪನವನ್ನು ಮಾಡುವುದು ಒಂದು ಸಾಮಾಜಿಕ ವರ್ತನೆಯೇ ಹೊರತು ಭಾಷಾವಿಜ್ಞಾನ ಅಲ್ಲ. ಒಂದು ದೃಷ್ಟಿಯಲ್ಲಿ ಇಂಥ ತೀರ್ಮಾನಗಳು ಯಾದೃಚ್ಛಿಕವಾದುವು ಎನ್ನಲೂ ಅಡ್ಡಿಯಿಲ್ಲ. ಅಂದರೆ, ಸ್ವರದ ಮುಂದೆ ಬರುವ ಇಂಗ್ಲಿಷ್‌ನ |r| ಕಾರದಲ್ಲಿ ವಾಸ್ತವವಾಗಿ ಏನೂ ದೋಷವಿಲ್ಲ. ಒಳ್ಳೆಯ ಅಥವಾ ಕೆಟ್ಟ, ನಾಗರಿಕ ಅಥವಾ ಅನಾಗರಿಕ ಎಂದು ಕರೆಸಿಕೊಳ್ಳುವ ಯಾವ ಜನ್ಯ ಗುಣವೂ ಅದರಲ್ಲಿಲ್ಲ. ಅದರ ಬಗೆಗೆ ಅಮೆರಿಕನ್ನರು ತಳೆದ ನಿಲುವಾಗಲೀ, ಇಂಗ್ಲೆಂಡಿನವರು ತಳೆದಿರುವ ನಿಲುವಾಗಲೀ ಕೇವಲ ಸಾಮಾಜಿಕವಾಗಿ ರೂಪುಗೊಂಡವು. ಈ ನಿಲುವುಗಳು ಅಥವಾ ತೀರ್ಮಾನಗಳು ಆ ಉಚ್ಚಾರಣೆಗೆ ಸಂಬಂಧಿಸಿದಂಥ ಆಯಾ ದೇಶದ ಸಾಮಾಜಿಕ ಮೌಲ್ಯಗಳು ಅಥವಾ ಭಾಷಿಕ ವರ್ತನೆಗಳು ಎಂದು ಸಾಮಾಜಿಕ ಭಾಷಾವಿಜ್ಞಾನಿಗಳು ಭಾವಿಸುತ್ತಾರೆಯೇ ವಿನಃ ಭಾಷಾವಿಜ್ಞಾನ ಕಾರಣಕ್ಕಾಗಿ ಅಲ್ಲ.

**ಭಾಷಾ ಶಿಷ್ಟೀಕರಣ ಎಂದರೇನು ?**

ಭಾಷಾ ಶಿಷ್ಟೀಕರಣ ಒಂದು ಪ್ರಕ್ರಿಯೆ. ಭಾಷಾ ಸಾಮಗ್ರಿಗೆ ಸಂಬಂಧಿಸಿದ್ದು. ಈ ಪ್ರಕ್ರಿಯೆಯಲ್ಲಿ ಪ್ರಾದೇಶಿಕ ಹಾಗೂ ಸಾಮಾಜಿಕ ಉಪಭಾಷೆಗಳನ್ನು ಮೀರಿದ, ಅತಿಕ್ರಮಿಸಿದ ಒಂದು ಮಾದರಿ ಭಾಷಾರೂಪ ಸಾಧಿತವಾಗುತ್ತದೆ. ಇಂಥ ಭಾಷಾರೂಪ ಸಿದ್ಧಿಸುವಲ್ಲಿ. ಎರಡು ಮುಖ್ಯ ಹಂತಗಳನ್ನು ಶಿಷ್ಟೀಕರಣ ಪ್ರಕ್ರಿಯೆಯಲ್ಲಿ ಗಮನಿಸಬೇಕಾಗುತ್ತದೆ :

೧. ಮಾದರಿ ಸೃಷ್ಟಿ (Formation or creation of a model)

೨. ಮಾದರಿಯನ್ನು ಜನಪ್ರಿಯಗೊಳಿಸುವಿಕೆ (Popularisation of model)

ಮಾದರಿ ಸೃಷ್ಟಿ, ಪ್ರಾದೇಶಿಕ ಹಾಗೂ ಸಾಮಾಜಿಕ ಉಪಭಾಷೆಗಳನ್ನಾಡುವ ಆಯಾ ಭಾಷೆಯ ಎಲ್ಲ ಜನರೂ ಮೆಚ್ಚುವಂಥ ರೀತಿಯಲ್ಲಿ ಆಗಬೇಕು. ಮಾದರಿಸೃಷ್ಟಿಯಾದ ಮಾತ್ರಕ್ಕೆ ಭಾಷಾ ಶಿಷ್ಟೀಕರಣ ಮಾಡಿದಂತಲ್ಲ. ಅದನ್ನು ಸರ್ವತ್ರ ಜನಪ್ರಿಯಗೊಳಿಸಬೇಕು. ಆಡಳಿತ ನಡೆಸುವವರು ಸೃಜಿತ ಮಾದರಿ ಜನಪ್ರಿಯವಾಗುವಂಥ ತಂತ್ರಗಳನ್ನು ರೂಪಿಸಬೇಕು. ಲೇಖಕರಿಗೆ, ಜನ ಸಾಮಾನ್ಯರಿಗೆ ತಲುಪುವಂಥ ಸರ್ಕಾರೀ ಪ್ರಕಟಣೆಗಳನ್ನು, ವರದಿಗಳನ್ನು, ಬುಲೆಟಿನ್ನುಗಳನ್ನು, ಕೈಪಿಡಿಗಳನ್ನು ಸೃಜಿತ ಭಾಷಾ ಮಾದರಿಯನ್ನು ಬಳಸಿಕೊಂಡು ಹೊರತರಬೇಕು. ಹಾಗೆಯೇ ವ್ಯಾಕರಣ, ನಿಘಂಟು, ಪದಕೋಶ, ಪರಾಮರ್ಶನ, ಪಾರಿಭಾಷಿಕ ಪದಗಳ ಸ್ಥಳ ನಾಮಗಳು, ಪ್ರಾಣಿ ಪಕ್ಷಿ ಹಾಗೂ ಮಾನವ ಹೆಸರುಗಳು ಶಿಷ್ಟಭಾಷಾರೂಪದಲ್ಲಿ ಪ್ರಕಟಗೊಳ್ಳಬೇಕು. ಹೀಗೆ ಮಾಡುವಲ್ಲಿ ಗುಣ ಮತ್ತು ಮೌಲ್ಯವನ್ನು ಕಾಪಾಡಿಕೊಳ್ಳಬೇಕು. ಈ ನಿಟ್ಟಿನಲ್ಲಿ ದುಡಿದ ಗಣ್ಯ ಮಹನೀಯರನ್ನು ಲೇಖಕರಾಗಿ, ಅನುವಾದಕರಾಗಿ ಸರ್ಕಾರ ನಿಯೋಜಿಸಿಕೊಳ್ಳಬೇಕು. ಅವರಿಂದ ಅಧಿಕೃತವಾಗಿ ಶಿಫಾರಸು ಪಡೆದ, ಅನುಮೋದಿಸಲ್ಪಟ್ಟ ಮಾಹಿತಿಯನ್ನು ಭಾಷಿಕವಾಗಿ ಜಾರಿಗೊಳಿಸಬೇಕು. ಭಾಷೆಯ ಪ್ರಗತಿಗೆ, ಅಭಿವೃದ್ಧಿಗೆ, ಶಿಷ್ಟ

ರೂಪ ನಿರ್ಮಾಣಕ್ಕೆ ದುಡಿದು ಗಣ್ಯ ಕಾಣಿಕೆ ಇತ್ತಂಥ ನಿಷ್ಠಾವಂತರನ್ನು ಪ್ರಶಸ್ತಿ ಗೌರವಗಳಿಂದ ಸನ್ಮಾನಿಸಿ ಉತ್ತೇಜಿಸಬೇಕು. ಆಗ ಮಾತ್ರ ಸೃಜಿತ ಮಾದರಿಗೆ ಮನ್ನಣೆ ದೊರಕುತ್ತದೆ.

ಆಧುನಿಕ ಜಗತ್ತಿನಲ್ಲಿ ಇತರ ಭಾಷೆಗಳೊಡನೆ ತಲೆ ಎತ್ತಿ ನಿಲ್ಲಲು, ತನ್ನ ಜಾಗತಿಕ ಅಗತ್ಯಗಳನ್ನು ಪೂರೈಸಿಕೊಳ್ಳಲು ಯಾವುದೇ ಭಾಷೆ ಶಿಷ್ಟೀಕರಣಗೊಳ್ಳುವುದು ಅನಿವಾರ್ಯ. ಕೇವಲ ಪ್ರಾದೇಶಿಕ ಹಾಗೂ ಸಾಮಾಜಿಕ ನೆಲೆಗಟ್ಟಿನಲ್ಲಷ್ಟೇ ಜೀವಂತವಾಗುಳಿಯುವ ಭಾಷೆಗೆ ನವ್ಯ ಸಮಾಜದ ಭಾಷಿಕ ಸವಾಲುಗಳನ್ನು ಎದುರಿಸುವಂಥ ಸಾಮರ್ಥ್ಯ ಇರುವುದಿಲ್ಲ.

# ಅಶಾಬ್ದಿಕವಾದ ಆಲೋಚನೆಗಳು

ಡಾ. ಕೃಷ್ಣ ಪರಮೇಶ್ವರ ಭಟ್ಟ

1. ಪ್ಲೇಟೋನ ಥೇಟಟಸ್‌ದಲ್ಲಿಯ ಒಂದು ಭಾಗ ಹೀಗಿದೆ :

ಸಾಕ್ರೆಟಿಸ್ :.... ಆಲೋಚನೆಯ ಪ್ರಕ್ರಿಯೆಯನ್ನು ಕುರಿತ ನನ್ನ ವರ್ಣನೆಯನ್ನು ಒಪ್ಪುತ್ತೀಯಾ?

ಥೇಟಟಸ್ : ನೀನು ವರ್ಣಿಸುವುದು ಹೇಗೆ ?

ಸಾಕ್ರೆ : ಮನಸ್ಸು ತಾನು ಬಯಸಿದ ಯಾವುದೇ ವಿಷಯವನ್ನು ಕುರಿತು ತನ್ನೊಳಗೇ ಸಂಭಾಷಣೆ ನಡೆಸಿದಂತೆ ಅದು. ಇದು ಒಬ್ಬ ಮುಗ್ಧ ವ್ಯಕ್ತಿ ನೀಡಿದ ವರ್ಣನೆ ಎಂದಿಟ್ಟುಕೊ. ಆದರೆ ನಾನು ನೀಡಬಹುದಾದ ವರ್ಣನೆ ಹೀಗೆ : ಮನಸ್ಸು ಆಲೋಚಿಸುತ್ತಿರುವಾಗ ಅದು ತನಗೇ ಪ್ರಶ್ನೆ ಹಾಕಿಕೊಂಡು ಅದಕ್ಕೆ ಉತ್ತರಿಸುತ್ತಾ ತನಗೆ ತಾನೇ ಮಾತನಾಡಿಕೊಳ್ಳುತ್ತಿರುತ್ತದೆ.....ಆದ್ದರಿಂದ ನನ್ನ ಪ್ರಕಾರ, ಆಲೋಚನೆಯೆಂಬುದು ಇನ್ನೊಬ್ಬರೊಂದಿಗೆ ದೊಡ್ಡದಾಗಿ ಮಾತನಾಡಿದಂತೆ ಅಲ್ಲ, ಆದರೆ ತನ್ನೊಳಗೇ ಮೌನವಾಗಿ ನಡೆಸಿದ ಒಂದು ಸಂಭಾಷಣೆ ಹಾಗೂ ಹೇಳಿಕೆಯ ರೂಪದ ಒಂದು ತೀರ್ಮಾನ[1]

ಗಮನಿಸಿ : ಪ್ಲೇಟೋ ಆಲೋಚನೆಯೆಂಬುದು ಮಾತನಾಡಿದ ಹಾಗೆ ( ಆಡುಮಾತಿಗೆ ಇರುವ ರಚನೆಯೇ ಇಲ್ಲಿಯೂ ಇರುತ್ತದೆ ಎಂಬ ಕಾರಣದಿಂದ-) ಎಂದು ಹೇಳಿಲ್ಲ, ಆದರೆ ಇದು ಮೌನವಾಗಿ, ತನ್ನನ್ನೇ ಉದ್ದೇಶಿಸಿ ಆಡಿದ ಮಾತೇ ಎಂದಿದ್ದಾನೆ. ಇದರಿಂದಾಗಿ, ಅದು ಒಂದು ನಿರ್ದಿಷ್ಟ ಭಾಷೆಯಲ್ಲಿಯೇ (-ಆತನದು ಗ್ರೀಕ್‌ನಲ್ಲಿ, ನಮ್ಮಂತಹ ಇತರರದು ಇಂಗ್ಲಿಷ್‌ನಲ್ಲಿ) ಜರುಗುತ್ತದೆ ಎಂದು ಆತ ಅರ್ಥೈಸುವಂತೆ ತೋರುತ್ತದೆ.

ಈ ಅಭಿಪ್ರಾಯವನ್ನು ಅರಿಸ್ಟಾಟಲ್ ಒಪ್ಪುವುದಿಲ್ಲ. ಈ ಬಗೆಗೆ ಆತನ ಕೆಲವು ಸಾಲುಗಳನ್ನು ಗಮನಿಸಿ :

ಆಡು ಭಾಷೆಯ ಶಬ್ದಗಳು ಮಾನಸಿಕ ಅನುಭವದ ಸಂಕೇತಗಳು ಹಾಗೂ ಲಿಪಿರೂಪದ ಶಬ್ದಗಳು ಆಡುಮಾತಿನ ಶಬ್ದಗಳಿಗೆ ಸಂಕೇತಗಳು. ಎಲ್ಲ ವ್ಯಕ್ತಿಗಳೂ ಒಂದೇ ರೀತಿಯಲ್ಲಿ ಹೇಗೆ ಬರೆಯುವುದಿಲ್ಲವೋ ಹಾಗೆಯೇ ಎಲ್ಲರೂ ಅವೇ ಧ್ವನಿಗಳನ್ನು ಬಳಸುವುದಿಲ್ಲ.. ಆದರೆ ಅವು ಸಂಕೇತಿಸುವ ಮಾನಸಿಕ ಅನುಭವ ಮಾತ್ರ ಎಲ್ಲರಿಗೂ ಸಾಮಾನ್ಯವಾದುದು, ಅಂತೆಯೇ ಪ್ರತಿಮಾರೂಪದಲ್ಲಿ ಅನುಭೂತವಾಗುವ ವಿಷಯಗಳು ಕೂಡಾ.

1. 189e-190a (Hamilton and Cairns, 1963 : 895-96) ಇದು ಅಲ್ಪ ವ್ಯತ್ಯಾಸದೊಡನೆ Sophist (1963:1011) ದಲ್ಲಿ ಪುನರ್ ಮುದ್ರಿತವಾಗಿದೆ. ಪ್ಲೇಟೋನ 'ನಿಜವಾದ' ಆಲೋಚನ ಸಿದ್ಧಾಂತವೇನಿತ್ತೆಂಬುದರ ಬಗ್ಗೆ ಐತಿಹಾಸಿಕವಾದ ಚರ್ಚೆಗೆ ಇಲ್ಲಿ ಕೈಹಾಕದೆ ಈ ಸಾಲುಗಳಲ್ಲಿ ವ್ಯಕ್ತವಾದ ಆತನ ಅಭಿಪ್ರಾಯವನ್ನು 'ಪ್ಲೇಟೊ ಸಿದ್ಧಾಂತ' ಎಂದು ಇಲ್ಲಿ ಕರೆಯುತ್ತೇನೆ.

ಆ ಮುಂದಿನ ಪರಂಪರೆಗಳೆಲ್ಲ ಅರಿಸ್ಟಾಟಲಿನ ವಿಚಾರಕ್ಕೇ ಅಂಟಿಕೊಂಡವು, ಪ್ಲೇಟೋ ನದಕ್ಕಲ್ಲ. ಮಧ್ಯಯುಗದುದ್ದಕ್ಕೂ ಆಲೋಚನೆಯೆಂಬುದು ಮೌನರೂಪದಲ್ಲಿ ಅದುಮಿಡಲಾದ ಆಡುಮಾತು ಎಂಬುದಕ್ಕೆ ವಿರುದ್ಧವಾಗಿ ಆಡುಮಾತೆಂಬುದು ಆಲೋಚನೆಯ (ಭಾಷೆಯ ಮೂಲಕವಾದ) ಸಾಂಕೇತಿಕ ಅಭಿವ್ಯಕ್ತಿ ಎಂದೇ ಪರಿಗಣಿತವಾಯಿತು. ವಿಚಾರ ವಾದಿಗಳು ಇದನ್ನೇ ಅನುಸರಿಸಿದರು. ಮನೋನಿರ್ಧಾರದಂತಹ ಆಲೋಚನ ಪ್ರಕ್ರಿಯೆಗಳು ಭಾಷೆಯನ್ನು ಒಳಗೊಳ್ಳುವುದಿಲ್ಲ ಎಂದು ಡೆಸ್ಕಾರ್ಟೆ ಹೇಳುತ್ತಾನೆ. ಭಾಷೆಯ ರೀತಿಗಳು ಹಾಗೂ ಅವುಗಳ ಮೂಲಕ ವ್ಯಕ್ತವಾಗುವ ಆಲೋಚನೆ ಇವುಗಳಲ್ಲಿ ಹೋಲಿಕೆಯೇನೂ ಇಲ್ಲ ಎಂದು ಆತನ ಕೃತಿ Grammaire generale et raisonne'e ಹೇಳುತ್ತದೆ.

ಪ್ಲೇಟೋ ಸಿದ್ಧಾಂತಕ್ಕೆ ಹಿಂದಿರುಗುವ ಪ್ರವೃತ್ತಿ ಪ್ರಮಾಣವಾದಿಗಳ ಬರೆಹಗಳಲ್ಲಿ ಕ್ವಚಿತ್ತಾಗಿ (ವಿಶೇಷವಾಗಿ ಹಾಬ್ಸ್ ಮತ್ತು ಬರ್ಕ್‌ಲೇ ಅವರಲ್ಲಿ) ಕಾಣಿಸಿಕೊಂಡರೂ ಆಲೋಚನೆಯನ್ನು ಕುರಿತ 'ಭಾಷಿಕ' ದೃಷ್ಟಿ ಕೋನ ಮತ್ತೆ ಜೀವಪಡೆದದ್ದು ಈಚೆಗೆ. ನನ್ನ ಗ್ರಹಿಕೆ ಸರಿಯಾಗಿದ್ದರೆ, ಇದು, ಮನುಷ್ಯನ ವರ್ತನೆಗಳೆಲ್ಲವನ್ನೂ ಹೊರಗಿನಿಂದ ಗಮನಿಸಬಹುದಾದ ಬಾಹ್ಯಚಟುವಟಿಕೆಗಳ ರೂಪದಲ್ಲಿ ವಿವರಿಸಬಹುದೆಂದು ತಿಳಿದ ವರ್ತನಶೀಲ ಸಿದ್ಧಾಂತವು ಪ್ರಚಾರಕ್ಕೆ ಬಂದದ್ದರ ಫಲವಾಗಿದೆ. ಆಲೋಚನ ಪ್ರಕ್ರಿಯೆಯನ್ನು ಹೊರಗಿನಿಂದ ಗಮನಿಸುವುದು ಸಾಧ್ಯವಾಗದಿದ್ದರೂ ಅದುಮಿಟ್ಟ ಸಂಭಾಷಣೆಯೆಂದು ಪರಿಗಣಿಸುವುದರಿಂದಾಗಿ ಅದನ್ನುಬಾಹ್ಯದ ಆಡುಮಾತಿನ ರೂಪಕ್ಕೆ ಹತ್ತಿರ ತಂದಂತಾಯಿತು. ಹಾಗಲ್ಲದೇ ಇದು ಒಂದು ವಿಶಿಷ್ಟವಾದ, ಆಂತರಿಕವಾದ ಹಾಗೂ ಗಮನಿಸಲಾಗದ ಕ್ರಿಯೆ ಎಂದು ಪರಿಗಣಿಸಿದರೆ ಇದನ್ ಒಂದು ವರ್ತನೆ ಎಂದು ಹೇಳಲು ಸಾಧ್ಯವಾಗದು.

ಇದರಿಂದಾಗಿಯೇ ಪ್ಲೇಟೋ ಸಿದ್ಧಾಂತವು ಗಿಲ್ಬರ್ಟ್ ರೈಲ್ ಹಾಗೂ ಲುಡ್‌ವಿಗ್ ವಿಟ್‌ಗನ್ ಸ್ಟೀನ್‌ರಂತಹವರನ್ನು ಆಕರ್ಷಿಸಿತು. "ನಮ್ಮ ಸಾಮಾನ್ಯ ಆಲೋಚನೆಗಳ ಬಹುಭಾಗವೆಲ್ಲ ಸ್ವಗತಸಂಭಾಷಣೆ ಅಥವಾ ಸ್ವಗತ ಭಾಷಣ (ಹಾಗೂ ಚಲನಶೀಲ ದೃಶ್ಯಪ್ರತಿಮೆಗಳ ಜೊತೆಜೊತೆಗೆ)ಗಳ ಮೂಲಕ ನಡೆಯುತ್ತದೆ" ಎಂಬ ರೈಲ್‌ನ ಮಾತುಗಳು ಪ್ಲೇಟೋನ ಮಾತುಗಳ ಪ್ರತಿಧ್ವನಿಯೇ ಆಗಿದೆ. ಆಲೋಚನಕ್ರಿಯೆಯ ಮೂಲವನ್ನು ಆತ ವಿವರಿಸುವುದು ಹೀಗೆ :

> ತನಗೆ ತಾನೇ ಮೌನವಾಗಿ ಮಾತನಾಡುವ ಈ ತಂತ್ರ ಶೀಘ್ರವಾಗಿ ಹಾಗೂ ಸುಲಭವಾಗಿ ಸಿದ್ಧಿ ಸಿದುದಲ್ಲ; ಇದಕ್ಕೆ ಮೊದಲು, ನಾವು ದೊಡ್ಡದಾಗಿ ಮಾತನಾಡುವುದನ್ನೂ ಇತರರ ಮಾತುಗಳನ್ನು ಕೇಳಿ, ಅರ್ಥಮಾಡಿಕೊಳ್ಳುವುದಕ್ಕೂ ಕಲಿತಿರಬೇಕು. ನಮ್ಮ ಆಲೋಚನೆಗಳನ್ನು ನಮ್ಮೊಳಗೇ ಅದುಮಿಟ್ಟುಕೊಳ್ಳುವುದು ಒಂದು ಪರಿಪೂರ್ಣ ಸಾಧನೆಯೇ ಸರಿ" (ರೈಲ್ 1949 : 27)

'ಆಡುಮಾತಿನ ಅದುಮಿಕೆ'ಯ ಸಿದ್ಧಾಂತ ಇಲ್ಲಿ ಸುಂದರವಾಗಿ ವರ್ಣಿತವಾಗಿದೆ. ಅಷ್ಟೇ ಅಲ್ಲ; ಪ್ಲೇಟೋನ ವರ್ಣನೆಯ ಒಪ್ಪಿದ್ದರ ಫಲವಾಗಿ ಆಲೋಚನೆಯ ಸಾಮರ್ಥ್ಯವು ಮಾತನಾಡುವ ಸಾಮರ್ಥ್ಯವನ್ನು ಆಧರಿಸಿದೆ ಎಂಬ ವಿಚಾರವೂ ಇಲ್ಲಿ ವ್ಯಕ್ತವಾಗಿದೆ. ಅಶಾಬ್ದಿಕವಾದ (=ಶಬ್ದರೂಪತಾಳದ) ಆಲೋಚನೆ ಸಾಧ್ಯವೆಂಬುದನ್ನು ವಿಟ್‌ಗನ್‌ಸ್ಟೀನ್ ಕೂಡ ತಳ್ಳಿಹಾಕುತ್ತಾನೆ. ಕಿವುಡ-ಮೂಗರು ಆಲೋಚಿಸಬಲ್ಲರೆಂಬುದನ್ನು ಅವನು ಒಪ್ಪಲಾರ. (ವಿಟ್‌ಗನ್‌ಸ್ಟೀನ್ 1953 : 109) ಪ್ರಾಣಿಗಳಲ್ಲಿ - ಅವು ಮಾತನಾಡಲಾರವಾದ್ದರಿಂದ ಪ್ರತೀಕ್ಷೆ ಅಥವಾ ನಂಬಿಕೆಗಳು

ಮೂಡುವುದು ಸಾಧ್ಯವೆಂಬುದರ ಬಗ್ಗೆ ಅವನಿಗೆ ಸಂದೇಹ. 'ನಾನು ಭಾಷೆಯಲ್ಲಿ ಆಲೋಚಿಸುತ್ತಿರುವಾಗ ಭಾಷಿಕರೂಪಗಳ ಜೊತೆ 'ಅರ್ಥ'ಗಳು ಮನಸ್ಸಿನಲ್ಲಿ ಹಾದುಹೋಗುವುದಿಲ್ಲ. ಬದಲಾಗಿ ಭಾಷೆ ಆಲೋಚನೆಯ ವಾಹಕವೇ ಆಗಿರುತ್ತದೆ' ಎಂಬುದು ಆತನ ಹೇಳಿಕೆ (1953: 107)

ಭಾಷಾವಿಜ್ಞಾನಿಗೆ ಈ ವಿಷಯ ಮಹತ್ವವಾದದ್ದೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಈ ವಿಷಯದ ಮೂರು ಪ್ರಮುಖ ಮುಖಗಳನ್ನು ಮಾತ್ರ ನಾನಿಲ್ಲಿ ಸೂಚಿಸುತ್ತೇನೆ. ಅರಿಸ್ಟಾಟಲನ ಸಿದ್ಧಾಂತವು ನಿಜವಾಗಿದ್ದ ಪಕ್ಷದಲ್ಲಿ, ಆಡುಮಾತೆಂಬುದು ಆಲೋಚನೆಯನ್ನು ಸಂಕೇತರೂಪಕ್ಕೆ ಪರಿವರ್ತಿಸುತ್ತದೆ (encodes) ಹಾಗೂ ಅರ್ಥಗ್ರಹಣವು ಇದಕ್ಕೆ ವಿರುದ್ಧವಾಗಿ ನಿಸ್ಸಂಕೇತಿಸುವುದರ ಮೂಲಕ (decode) ನಡೆಯುತ್ತದೆ. ಈ ರೀತಿಯ ಗ್ರಹಿಕೆಯು ಸ್ವಾಭಾವಿಕವಾಗಿ, ಅರ್ಥ, ಅನ್ವಯ, ಅನುವಾದ ಈ ಪರಿಕಲ್ಪನೆಗಳನ್ನು ಪ್ರಭಾವಿಸುತ್ತದೆ. ಪ್ಲೇಟೋ ಸಿದ್ಧಾಂತವು ಇವಕ್ಕೆ ಭಿನ್ನರೀತಿಯ ವಿವರಣೆ ನೀಡುವಂತೆ ಒತ್ತಾಯಿಸುತ್ತದೆ. ಹಾಗೆಯೇ ಮಾತೃಭಾಷೆಯ ಕಲಿಕೆಯು ಈ ಎರಡು ವಿರೋಧಿ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಮೂಲಭೂತವಾಗಿಯೇ ವಿಭಿನ್ನವಾದ ವಿವರಣೆಯನ್ನೇ ಬಯಸುತ್ತದೆ. ಹಾಗೂ ಕೊನೆಯದಾಗಿ ಭಾಷಾಸಾಪೇಕ್ಷಸಿದ್ಧಾಂತವು (= ಭಾಷೆಯ ರಚನೆಗೆ ಅನುಗುಣವಾಗಿ ಆಲೋಚನಾ ವಿಧಾನವೂ ಇರುತ್ತದೆ.) ಅರಿಸ್ಟಾಟಲನ ಬದಲು ಪ್ಲೇಟೋ ಸಿದ್ಧಾಂತವನ್ನು ಒಪ್ಪಿಕೊಂಡಲ್ಲಿ, ಹೆಚ್ಚು ಮಹತ್ವ ಪಡೆಯುತ್ತದೆ.

2. ಪ್ಲೇಟೋನ ಗ್ರಹಿಕೆಯು ತಪ್ಪಾದದ್ದೆಂಬುದನ್ನು ಈ ಪ್ರಬಂಧದಲ್ಲಿ ತೋರಿಸಿಕೊಡುವ ಉದ್ದೇಶವನ್ನಿಟ್ಟುಕೊಂಡಿದ್ದೇನೆ. ಆಲೋಚನೆಯೆಂದರೆ ತನ್ನನ್ನೇ ಉದ್ದೇಶಿಸಿ ಮೌನವಾಗಿ ಮಾತನಾಡುವುದಲ್ಲ; ಅದು ಯಾವುದೇ ಮನುಷ್ಯಸಹಜ ಭಾಷೆಯಲ್ಲಿ ಶಬ್ದ/ವಾಕ್ಯಗಳ ಮೂಲಕ ನಡೆಯುವುದಿಲ್ಲ ಎಂಬುದನ್ನು ತೋರಿಸಿಕೊಡುತ್ತೇನೆ. ಸಂಕ್ಷೇಪವಾಗಿ, ಮಾತನಾಡುವಿಕೆ ಮುಖ್ಯವಾಗಿ ಭಾಷೆಯ ಬಳಕೆಯನ್ನೇ ಅವಲಂಬಿಸಿದ್ದರೆ ಆಲೋಚನೆಯು ಅದರಿಂದ ಸ್ವತಂತ್ರವಾಗಿದೆ ಎಂದು ಹೇಳಬಹುದು.

ಎಲ್ಲಕ್ಕೂ ಮೊದಲು, ಆಲೋಚಿಸುವಿಕೆ (Thinking) ಹಾಗೂ ಆಲೋಚನೆ (Thought) ಈ ಎರಡು ಶಬ್ದಗಳ ಬಗೆಗೆ ಸ್ವಲ್ಪ ವಿವರವಾಗಿ ಹೇಳಬೇಕು ಎನಿಸುತ್ತದೆ[2]. ಆಲೋಚನೆ ಎಂಬ ಶಬ್ದವನ್ನು ಸಾಮಾನ್ಯವಾಗಿ ವ್ಯಕ್ತಿಯೊಬ್ಬನ ಮಾನಸಿಕ ಕ್ರಿಯೆಗಳಿಗೆ (ಕಂಡುಕೊಳ್ಳುವಿಕೆ, ತೀರ್ಮಾನ, ಪೂರ್ವ ಗ್ರಹಿಕೆ, ನಿರ್ಧರಿಸುವಿಕೆ ಇತ್ಯಾದಿ) ಅಥವಾ ಮಾನಸಿಕ ಸ್ಥಿತಿಗಳಿಗೆ (ಉದಾ-ನಂಬಿಕೆ, ಅಭಿಪ್ರಾಯ, ಉದ್ದೇಶ ಇತ್ಯಾದಿ) ಇವುಗಳಿಗೆ ಒಳಗಾದ ವಿಷಯಗಳನ್ನು ಅಥವಾ ಇನ್ನೂ ವಿಸ್ತೃತವಾದ ಅರ್ಥದಲ್ಲಿ, ವ್ಯಕ್ತಿಯೊಬ್ಬನು ನಡೆಸುವ ಭಾಷಾವ್ಯಾಪಾರಗಳ (ಉದಾ : ಹೇಳಿಕೆ, ಸಲಹೆ ನೀಡುವುದು, ಉಪದೇಶಮಾಡುವುದು, ಬೇಡುವುದು ಇ) ವಿಷಯಗಳನ್ನು ನಿರ್ದೇಶಿಸಲು ಬಳಸಲಾಗುತ್ತದೆ. ಆಲೋಚನೆಗಿರುವ ಈ ಅರ್ಥದಲ್ಲಿ 'ಕೆಂಪು ಪುಸ್ತಕ'ವು ಮಾವೋತ್ಸೆ ತುಂಗನ ಆಲೋಚನೆಗಳನ್ನು

---

2. ಇದು ನನ್ನ Res cogitans (1972) ನೀಡಿದ ಸಿದ್ಧಾಂತದ ಸಂಕ್ಷೇಪರೂಪ.
ಅನುವಾದಕ : ಮೇಲೆ Thought ಎಂಬುದಕ್ಕೆ ಹಲವೆಡೆಗಳಲ್ಲಿ ವಿಚಾರ ಎಂಬುದು ಹೆಚ್ಚು ಉಚಿತವಾದ ಪದ. ಹಾಗೆಯೇ Think ಎಂಬುದಕ್ಕೆ ತಿಳಿ ಎಂಬುದು ಕೆಲವೆಡೆ ಸರಿಯಾದ ಪದ.

ಒಳಗೊಂಡಿದೆ; ಈ ಅರ್ಥದಲ್ಲಿ ಯಾವುದೋ ಒಂದು ವಸ್ತುವನ್ನು ಕುರಿತಾಗಿ ನಿಮ್ಮ ಆಲೋಚನೆ ಏನು ಎಂದು ನಾನು ಕೇಳಬಹುದು ಅಥವಾ ಆ ಆಲೋಚನೆಯ ಬಗೆಗೆ ನಾನು ಆಶ್ಚರ್ಯವನ್ನು ವ್ಯಕ್ತಪಡಿಸಬಹುದು. ಹಾಗೂ ಈ ಅರ್ಥದಲ್ಲಿ 'ಮೂಲತಃ ಪೈಥಾಗೋರಸ್‌ಸದ್ವಾದ ಈ ವಿಷಯದ ಬಗೆಗೆ ಪ್ಲೇಟೋನ ಆಲೋಚನೆ...' 'ಆಗ ಇದ್ದಕ್ಕಿದ್ದಂತೆ ಈ ಆಲೋಚನೆ ಹೊಳೆಯಿತು'. 'ಅವನು ಕೆಟ್ಟ ಆಲೋಚನೆಯೊಂದನ್ನು ಆಲೋಚಿಸುತ್ತಿದ್ದಾನೆ' ಮುಂತಾದ ವಾಕ್ಯಗಳ ಮಾದರಿಯಲ್ಲಿ ಆಲೋಚನೆ ಶಬ್ದವನ್ನು ಬಳಸಬಹುದು. ಇಲ್ಲೆಲ್ಲ ಆಲೋಚನೆ ಎಂಬ ಶಬ್ದದ ಬದಲಾಗಿ ವಿಚಾರ( IDEA) ಎಂಬುದನ್ನೂ ಬಳಸಬಹುದು. ಆಲೋಚನೆ ಎಂಬುದು ಬಳಕೆಯಾಗಬಹುದಾದ ಕೆಲವು ರೀತಿಯ ವಾಕ್ಯಗಳಲ್ಲಿ ಆಲೋಚಿಸುವಿಕೆ ಎಂಬುದನ್ನೂ ಬಳಸಬಹುದೆಂಬುದನ್ನು ಗಮನಿಸಬೇಕು. ಉದಾಹರಣೆಗೆ, 'ಈ ವಿಷಯ ಕುರಿತಾಗಿ ಅವನ ಆಲೋಚನೆ/ ಆಲೋಚಿಸುವಿಕೆ ಒಪ್ಪುವಂತಹುದಲ್ಲ'.

ಆಲೋಚನೆ ಎಂಬುದು ಆಲೋಚಿಸು ಎಂಬ ಕ್ರಿಯಾಪದದ ನಾಮರೂಪ. ಹಲವೆಡೆಗಳಲ್ಲಿ ಈ ಕ್ರಿಯಾಪದಕ್ಕೆ ಸಮಾನಾರ್ಥಕಾಗಿ ಬೇರೆಯದನ್ನೂ ಬಳಸಬಹುದು. ಉದಾ : 'ಜೋ ಹೀಗೆ ಆಲೋಚಿಸುತ್ತಾನೆ...' (ಅಥವಾ ಭಾವಿಸುತ್ತಾನೆ, ಸಂದೇಹಿಸುತ್ತಾನೆ ಇ.), 'ಆಗ ನಾನು ಹೀಗೆ ಆಲೋಚಿಸಿದೆ' ( ಅಥವಾ ನಿರ್ಧರಿಸಿದೆ, ತಿಳಿದುಕೊಂಡೆ ಇ. ) ಈ ವಾಕ್ಯಗಳಲ್ಲಿ ಕ್ರಿಯಾಪದದ ಮುಂದೆ ನಾಮೀಕರಣಗೊಂಡ ವಾಕ್ಯವೊಂದು ಕ್ರಿಯಾಪದಕ್ಕೆಕರ್ಮವಿಷಯವಾಗಿ ಬರುತ್ತದೆ. ( ಉದಾ- 'ನಾನು ಮನೆಗೆ ಹೋಗುವುದನ್ನು ಕುರಿತು ಆಲೋಚಿಸಿದೆ. ) ತತ್ತ್ವಶಾಸ್ತ್ರದ ಪರಿಭಾಷೆಯಲ್ಲಿ ಹೇಳುವುದಾದರೆ 'ಪ್ರಸ್ತಾವನಾ ವಿಷಯ'ಗಳು ಕ್ರಿಯೆಗೆ ವಿಷಯಗಳಾಗಿವೆ.

ಮೇಲೆ ತಿಳಿ (Think) ಎಂಬುದು ಬಳಕೆಯಾಗಬಹುದಾದ ಕೆಲವು ವಾಕ್ಯಮಾದರಿಗಳಲ್ಲಿ ಅದನ್ನು ನಿರಂತರರೂಪದಲ್ಲಿ (Progressive form) ಬಳಸಲು ಸಾಧ್ಯವಾಗದೆಂಬುದನ್ನು ಗಮನಿಸಬೇಕು. ಉದಾ-ತಾನು ಪ್ರಾಮಾಣಿಕನೆಂದು ಆತ ತಿಳಿದಿದ್ದಾನೆ. ಇಲ್ಲಿ ತಿಳಿಯುತ್ತಿದ್ದಾನೆ ಎಂದು ಬಳಸುವಂತಿಲ್ಲ) ಆದರೆ ಕೆಲವೆಡೆ ನಿರಂತರ ಕ್ರಿಯಾರೂಪವೇ ಬಳಕೆಯಾಗಬೇಕಾಗುತ್ತದೆ. ಉದಾ: ನೀನು ಏನನ್ನು ಕುರಿತು ಆಲೋಚಿಸುತ್ತ ಇದ್ದೀಯ ?' 'ನಿನ್ನೆ ರಾತ್ರಿ ನಿಮ್ಮ ಬಗೆಗೇ ಆಲೋಚಿಸುತ್ತಿದ್ದೆ' ಇಲ್ಲೆಲ್ಲ ಆಲೋಚಿಸವಿಕೆಯೆಂಬುದು ಕಾಲಕ್ರಮದಲ್ಲಿನಡೆಯುತ್ತಿರುವ ಒಂದು ಪ್ರಕ್ರಿಯೆ ಅಥವಾ ಚಟುವಟಿಕೆಯೆಂದಾಗಿ ಭಾವಿಸಬಹುದು. ಆದರೆ ಈ ಹಿಂದಿನ ವಾಕ್ಯಗಳಲ್ಲಿ ಹೀಗಿಲ್ಲ. ಕಾಲದುದ್ದಕ್ಕೂ ನಡೆಯುವ ಪ್ರಕ್ರಿಯೆಯನ್ನು ಹೇಳುವುದಿಲ್ಲ. ಉದಾ- 'ಇಂದು ಮಳೆ ಬರಬಹುದೆಂದು ಆಲೋಚಿಸಿದೆ' (=ಭಾವಿಸಿದೆ, ತಿಳಿದೆ) ಇಲ್ಲಿ ಕಾಲಾನುಸಾರವಾಗಿ ನಡೆಯುವ ಪ್ರಕ್ರಿಯೆಯನ್ನು ಹೇಳುವುದಿಲ್ಲ. ಜೋ ಗಾಢನಿದ್ರೆಯಲ್ಲಿದ್ದರೂ 'ವಾಟರ್‌ಗೇಟ್ ಹಗರಣ ನಿಕ್ಸನ್‌ಗೆ ತಿಳಿದಿತ್ತೆಂದು ಅವನು ಭಾವಿಸಿದ್ದಾನೆ' ಎಂದು ನಾನು ಹೇಳಬಹುದು. ಆದರೆ ಆತ 'ಆಲೋಚಿಸುತ್ತಿದ್ದಾನೆ' ಎಂದು ಬಳಸಲು ಸಾಧ್ಯವಿಲ್ಲ. ಸಂಗತಿಯೊಂದರ ಬಗ್ಗೆ ಆಲೋಚಿಸುವುದು ಒಂದು ಕ್ರಿಯೆಯಾದರೆ ಸಂಗತಿಯೊಂದರ ಇರುವಿಕೆಯನ್ನು (ಉದಾ- ಆತ ಪ್ರಾಮಾಣಿಕ) ಹೇಳುವುದು ಕ್ರಿಯೆಯಲ್ಲ.

ಆದರೆ ಕಾಲಕ್ರಮದಲ್ಲಿಜರುಗುವ ಕ್ರಿಯೆ/ ಅಥವಾ ಘಟನೆ ಇರುವಿಕೆ ಅಥವಾ ಸ್ಥಿತಿಯನ್ನೂ ಒಳಗೊಳ್ಳುತ್ತದೆ. ಈ ಸಂಬಂಧವನ್ನು ತೋರಿಸಲು ಎರಡು ಪರಸ್ಪರ ಸಂಬಂಧಿತವಾದ ಪರಿಕಲ್ಪನೆಗಳನ್ನು ಇಲ್ಲಿ ನೀಡುತ್ತೇನೆ. ಒಂದು ವಿಷಯದ ಬಗೆಗೆ ಮಾತನಾಡುತ್ತಾ ಇರುವುದೆಂದರೆ ಕಾಲಾನುಕ್ರಮದಲ್ಲಿ

ಒಂದು ಪ್ರಕ್ರಿಯೆ ನಡೆದಂತೆ. ಆದ್ದರಿಂದ ಮಾತನಾಡುತ್ತ ಇರುವುದು ಹಾಗೂ ಆಲೋಚಿಸುತ್ತ ಇರುವುದು - ಇವೆರಡೂ 'ಕಾಲಕ್ರಮ'ದಲ್ಲಿ ನಡೆಯುವ ಸಂಗತಿಗಳು. ವ್ಯಕ್ತಿಯೊಬ್ಬ ಮಾತನಾಡುತ್ತಾ ಇರುವಾಗ ಆತ ನಿಜಕ್ಕೂ ಮಾಡುತ್ತಿರುವುದಾದರೂ ಏನು ? ಒಬ್ಬ 'ಕ್ಷ'ನ ಬಗೆಗೆ ಮಾತನಾಡುತ್ತಿದ್ದಾನೆ ಎಂದರೆ ಆತ 'ಕ್ಷ'ನಿಗೆ ಸಂಬಂಧಿಸಿದ ಕೆಲವು ವಿಷಯಗಳನ್ನು ಹೇಳುತ್ತಿದ್ದಾನೆ. ಎಂದರ್ಥ. ಒಂದು ವಿಷಯದ ಬಗೆಗೆ ನಾನು ಮಾತನಾಡುತ್ತಿದ್ದೇನೆ. ಎಂದರೆ ನಾನು ಆ. ಬಗೆಗೆ ಹೇಳುವುದು, ವಾದಮಾಡುವುದು, ಪ್ರಶ್ನಿಸುವುದು, ಊಹಿಸುವುದು ಮುಂತಾದ ಅನೇಕ ಭಾಷಾವ್ಯಾಪಾರವನ್ನು ನಡೆಸುತ್ತಿದ್ದೇನೆ ಎಂದೇ ಅರ್ಥ. ನಾನು ನೀಡುವ ಹೇಳಿಕೆ, ನಾನು ಸೂಚಿಸುವ ಸಾಧ್ಯತೆ, ನಾನು ಕೈಗೊಂಡ ತೀರ್ಮಾನ, ಭಾಗಿಗಳಾದ ವ್ಯಕ್ತಿಗಳನ್ನು ಕುರಿತ ನನ್ನ ನಿಂದನೆ ಮುಂತಾದವೆಲ್ಲವೂ ವಾಟರ್‌ಗೇಟ್ ಹಗರಣಕ್ಕೇ ಸಂಬಂಧಿಸಿದ್ದಾದರೆ ನಾನು ವಾಟರ್‌ಗೇಟ್ ಹಗರಣವನ್ನು ಕುರಿತು ಮಾತನಾಡುತ್ತಿದ್ದೇನೆ ಎಂದರ್ಥ. ಹಾಗಾದರೆ ವಾಟರ್‌ಗೇಟ್ ಬಗೆಗೆ ಆಲೋಚಿಸುವುದು ಎಂದರೇನು? ಇಲ್ಲಿ ನಡೆಯುವುದೂ ಮೇಲಿನಂತೆಯೇ. ವಾಟರ್‌ಗೇಟ್‌ಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ವಿಚಾರಗಳನ್ನು ( ಈ ಹಿಂದೆಯೇ ಹೇಳಿದಂತೆ ಪ್ರಸ್ತಾವನ ರೀತಿಯವು) ಒಳಗೊಳ್ಳದೆ ನಾನು ಆಲೋಚಿಸುತ್ತಿದ್ದೇನೆ ಎನ್ನುವಂತಿಲ್ಲ. ಇಲ್ಲಿ ನಾನು ಹಿಂದಿನ ಘಟನೆಗಳನ್ನು ನೆನಪಿಸಿಕೊಳ್ಳಬಹುದು, ಅವುಗಳ ಪರಿಣಾಮಗಳನ್ನು ಕಂಡುಕೊಳ್ಳಬಹುದು. ಆಶ್ಚರ್ಯ ಪಡಬಹುದು. ವಾಶಿಂಗ್ಟನ್ ಪೋಸ್ಟ್ ಪತ್ರಿಕೆಯನ್ನು ಓದಲು ನಿರ್ಧರಿಸಬಹುದು ಇತ್ಯಾದಿ.

ಕೆಲಮಟ್ಟಿಗೆ ಪ್ಲೇಟೋ ಹೇಳಿದ್ದು ಸರಿ : ಆಲೋಚಿಸುವುದು ಎಂದರೆ ಮಾತನಾಡಿದ ಹಾಗೆ, ಕಾರಣ ನೀಡುವುದೆಂದರೆ ವಾದಮಾಡಿದಂತೆ. 'ಕ್ಷ'ದ ಬಗೆಗೆ ಕೆಲವಾರು ವಿಷಯಗಳನ್ನು ಹೇಳದೆ 'ಕ್ಷ'ದ ಬಗೆಗೆ ಮಾತನಾಡಿದ ಹಾಗೆ ಆಗಲಿಲ್ಲ; 'ಕ್ಷ'ದ ಬಗೆಗೆ ಕೆಲವು ವಿಚಾರಗಳನ್ನು ಒಳಗೊಳ್ಳದೆ ಅದರ ಬಗೆಗೆ ಆಲೋಚಿಸುವುದೂ ಸಾಧ್ಯವಿಲ್ಲ. ಜಾನ್ ವಾಟರ್‌ಗೇಟ್ ಬಗ್ಗೆ ಮಾತನಾಡಿದ ಎಂದು ನಾನು ಹೇಳಿದಾಗ ಅದರ ಬಗೆಗೆ ಏನು ಹೇಳಿದ ಎಂದು ನೀವು ಪ್ರಶ್ನಿಸಬಹುದು. ನಾನು ವಾಟರ್‌ಗೇಟ್ ಬಗೆಗೆ ಆಲೋಚಿಸುತ್ತಿದ್ದೆ ಎಂದು ಹೇಳಿದಾಗ ನೀವು ಆ ಬಗ್ಗೆ ಏನು ಆಲೋಚಿಸಿದ್ದೀರಿ ಎಂದು ಪ್ರಶ್ನಿಸುವುದು ಸಾಧ್ಯ.

ಆಲೋಚನೆಗಳೆಲ್ಲ ಪ್ರಸ್ತಾವನಾರೂಪದಲ್ಲಿಯೇ ಇರುತ್ತವೆ ಎಂದು ನಾನು ಹೇಳುವುವಿದಿಲ್ಲ. ಚಿತ್ರಕಾರನೊಬ್ಬ, ತಾನು ಅರ್ಧಮುಗಿಸಿದ ಚಿತ್ರವನ್ನು ನೋಡುತ್ತಾ ಗಂಭೀರವಾಗಿ ಆಲೋಚಿಸುತ್ತಿರಬಹುದು; ಸಂಗೀತಗಾರನೊಬ್ಬ ಕೀಬೋರ್ಡ್ ಮೇಲೆ ಬೆರಳುಗಳನ್ನಿಟ್ಟು ಆಲೋಚಿಸುತ್ತಿರಬಹುದು ಅಥವಾ ಚೆಸ್ ಆಟಗಾರ ಆಟದ ಯಾವುದೋ ಒಂದು ಘಟ್ಟದಲ್ಲಿ ಆಲೋಚನೆಯಲ್ಲಿ ಮುಳುಗಿರಬಹುದು. ಆದರೆ ಇಲ್ಲೆಲ್ಲ ಅವರು ಪ್ರಸ್ತಾವನ ರೀತಿಯ ಆಲೋಚನೆಯನ್ನೂ ಬಹುಮಟ್ಟಿಗೆ ಹೊಂದಿರಲಾರರು. ಅವರು ಮನಸ್ಸಿನೊಳಗೆ ರೇಖೆಗಳನ್ನು 'ಕಾಣು'ತ್ತಿರಬಹುದು, ಸಂಗೀತವನ್ನು 'ಕೇಳು'ತ್ತಿರಬಹುದು, ಆಟದ ಹೊಸ ಸಂದರ್ಭವೊಂದನ್ನು ಬಯಸಿದರೂ, ಮಾತಿನಲ್ಲಿ ಹೇಳಲಾಗದ ಸ್ಥಿತಿಯಲ್ಲಿರಬಹುದು. ಹೀಗಿದ್ದರೂ ಅವರ (ಮಾನಸಿಕ) ಕ್ರಿಯೆಗಳು ಉದ್ದೇಶಪೂರ್ವಕವಾಗಿದ್ದರೆ, ಅವರು ಆಲೋಚಿಸುತ್ತಿದ್ದಾರೆ ಎನ್ನಬಹುದು. ಆದರೆ ಈ ರೀತಿಯ ಆಲೋಚನೆ ಅಪವಾದವೇ ಹೊರತು ಸಾಮಾನ್ಯವಲ್ಲ. ಆಲೋಚನೆಯನ್ನು

ಸ್ವಗತಸಂಭಾಷಣೆಯೆಂಬಂತೆ ನೋಡುವ ಪ್ರಯತ್ನವೇ ಸಾಮಾನ್ಯವಾಗಿ ಆಲೋಚನೆಗಳು ಮಾತಿನಲ್ಲಿ ವ್ಯಕ್ತಪಡಿಸಬಹುದಾದ ಪ್ರಸ್ತಾವನ ರೀತಿಯ ಆಲೋಚನೆಯಾಗಿರುತ್ತವೆ ಎಂದು ಸೂಚಿಸುತ್ತದೆ.

ಇದು ಸರಿಯಾಗಿದ್ದಲ್ಲಿ, ನಮ್ಮ ಮೂಲ ಸಮಸ್ಯೆಯನ್ನು ಹೀಗೆ ಕೇಂದ್ರೀಕರಿಸಿಕೊಳ್ಳಬಹುದು: ವಿಷಯವೊಂದರ ಬಗೆಗಿನ ಆಲೋಚನೆಗಳಿಂದ ಕೂಡಿದ ಅನೇಕ ಮಾನಸಿಕ ಕ್ರಿಯೆಗಳನ್ನು ಗಮನಿಸಿ ನಾವು ಹೀಗೆ ಪ್ರಶ್ನಿಸಿಕೊಳ್ಳಬಹುದೇ ? - ನಿಜವಾಗಿ ನಾವು ನಮ್ಮೊಳಗೇ ಮೌನವಾಗಿ ಮಾತನಾಡುತ್ತೇವೆಯೇ ? ನಾವು ಶಬ್ದ, ವಾಕ್ಯಗಳನ್ನು ಬಳಸಿಕೊಳ್ಳುತ್ತೇವೆಯೇ, ? ಒಂದು ನಿರ್ದಿಷ್ಟ ಭಾಷೆಯಲ್ಲಿಯೇ ಆಲೋಚಿಸುತ್ತೇವೆಯೇ ? ಆಲೋಚಿಸುವುದಕ್ಕೆ ಭಾಷೆಯೊಂದನ್ನು ಹೊಂದಿರಲೇಬೇಕೇ ?

. ಪ್ಲೇಟೋನ ದೃಷ್ಟಿಕೋನಕ್ಕೆ ವಿರುದ್ಧವಾಗಿ ವಾದಿಸುವಲ್ಲಿ, ಇದರಿಂದ ಹೊರಡಬಹುದಾದ ಕೆಲವು ನಿರ್ಣಯಗಳು ಅಂತಃಪ್ರೇರಣೆಗೆ ವಿರುದ್ಧವಾದವುಗಳೆಂಬುದನ್ನೂ ಬಹುಮಟ್ಟಿಗೆ ಅರ್ಥಹೀನವೆಂಬುದನ್ನೂ ಮೊದಲು ತೋರಿಸುತ್ತೇನೆ. ಆನಂತರದಲ್ಲಿ ಈ ವಾದ ಹುಸಿಯಾದುದೆಂಬುದಕ್ಕೆ ತಾಂತ್ರಿಕವಾದ ಕಾರಣಗಳನ್ನು ನೀಡುತ್ತೇನೆ.

ಕಿವುಡ-ಮೂಗರಲ್ಲಿ ಆಲೋಚನೆಯ ಸಾಧ್ಯತೆ ಇಲ್ಲವೆಂದು ವಿಟ್‌ಗನ್‌ಸ್ಟೀನ್‌ನ ಅಭಿಪ್ರಾಯವನ್ನು ಈ ಹಿಂದೆಯೇ ಪ್ರಸ್ತಾಪಿಸಿದ್ದೇನೆ. ಪ್ಲೇಟೋ ಸಿದ್ಧಾಂತ ನಿಜವಾಗಿದ್ದಲ್ಲಿ, ಪ್ರಬುದ್ಧರಾದ ಕಿವುಡ-ಮೂಗರಲ್ಲಿ. ವಿಷಯಪ್ರಸ್ತಾವನೆಯಂತಹ ( ಚರ್ಚೆ ಹಾಗಿರಲಿ ) ಆಲೋಚನೆ ಕೂಡಾ ಮೂಡದು; ಅವರಿಗೆ ಭಾಷೆ ಗೊತ್ತಿಲ್ಲವಾದ್ದರಿಂದ ತಮ್ಮಲ್ಲಿ ತಾವೇ ಮಾತನಾಡುವುದೂ ಸಾಧ್ಯವಿಲ್ಲ. ಈ ರೀತಿಯ ಗ್ರಹಿಕೆಯಿಂದ ಹೊರಡುವ ನಿರ್ಣಯಗಳನ್ನು ಸ್ವಲ್ಪ ವಿವರವಾಗಿ ಪರೀಕ್ಷಿಸೋಣ.

ಮೊದಲಿಗೆ, ಆಲೋಚಿಸು ಎಂಬ ಪದ ಸೂಚಿಸಬಹುದಾದ ಎಲ್ಲ/ಯಾವುದೇ ಅರ್ಥ (ಗಳೂ) ಇಂತಹ ವ್ಯಕ್ತಿಗಳಲ್ಲಿ ಮೂಡುವುದು ಸಾಧ್ಯವಿಲ್ಲ ಎಂದೇನೂ ತಿಳಿಯಬೇಕಾಗಿಲ್ಲ.° ಕಾರಣ, ಮೂಕಪ್ರಾಣಿಗಳೂ ಕೆಲಮಟ್ಟಿಗೆ ಆಲೋಚಿಸುತ್ತವೆ ಎನ್ನಬಹುದು. ಮರದ ಕಡೆ ನೋಡಿ ಬೊಗಳುತ್ತಿರುವ ನಾಯಿ, ಬೆಕ್ಕುಮರದ ಮೇಲೆ ಇನ್ನೂ ಇದೆ ಎಂದು ತಿಳಿದಿರಬಹುದು; ಯಂತ್ರದ ಮೊಲವೊಂದನ್ನು ಅಟ್ಟಿಸಿಕೊಂಡು ಓಡುತ್ತಿರುವ ಗ್ರೇಹೌಂಡ್ ಅದನ್ನು ನಿಜವಾದ ಮೊಲವೆಂದು ತಿಳಿದಿರಬಹುದು. ಆದರೆ ಇಂತಹ ಕಡೆ ಈ ಪ್ರಾಣಿಗಳಲ್ಲಿ 'ಬೆಕ್ಕು ಮರದ ಮೇಲೆ ಇದೆ' ಅಥವಾ 'ಮೊಲವು ನಿಜವಾಗಿ ಜೀವಂತವಾದುದು' ಎಂಬ ಆಲೋಚನೆ ಇದೆ, ಅವುಗಳಲ್ಲಿ ಈ ಬಗೆಯ ಆಲೋಚನೆ ಹುಟ್ಟಿದೆ ಎಂದು ಯಾರೂ ಹೇಳಲಾರರು. ಏಕೆ ಹೀಗೆ ?[3]

ವ್ಯಕ್ತಿಯೊಬ್ಬನು ಪ್ರಯಾಣಿಸುತ್ತಾ ಅಭದ್ರವಾದ ಸೇತುವೆಯೊಂದನ್ನು ತಲುಪಿ ಅದನ್ನು ದಾಟುತ್ತಿದ್ದಾನೆ ಎಂದಿಟ್ಟುಕೊಳ್ಳೋಣ. ಅದನ್ನು ನೋಡುತ್ತಿದ್ದ ಇನ್ನೊಬ್ಬ 'ಅದು ತನ್ನ ಭಾರವನ್ನು ಹೊರಬಲ್ಲದು ಎಂದು ತಿಳಿದಿದ್ದಾನೆ'' ಎನ್ನಬಹುದು. ಪ್ರಯಾಣಿಕ ಈ ಬಗೆಗೆ ಏನನ್ನೂ ಆಲೋಚಿಸಿರದಿದ್ದರೂ ಈ ಹೇಳಿಕೆ ನಿಜವೇ ಅಂತೆಯೇ, ನನಗೆ ಗೊತ್ತಿಲ್ಲದಂತೆ ಸ್ಕ್ರೂಗಳನ್ನು ಕಳಚಿದ

3. ಈ ವ್ಯತ್ಯಾಸವನ್ನು ನನಗೆ ಸ್ಪಷ್ಟಪಡಿಸಿದವರು ಪ್ರೊ.ನಾರ್ಮನ್ ಮಾಲ್ಕೊಮ್

ಮನುಷ್ಯನೊಬ್ಬ ನಾಯಿ ಕುರ್ಚಿಯ ಮೇಲೆ ಕೂರುತ್ತಿರುವುದನ್ನು ನೋಡಿ ಸಂತೋಷದಿಂದ ''ಆತ ಅದರ ಮೇಲೆ ತಾನು ಕುಳಿತುಕೊಳ್ಳಬಲ್ಲೆ ಎಂದು ತಿಳಿದಿದ್ದಾನೆ'' ಎಂದುಕೊಳ್ಳಬಹುದು. ಇದೂ ನಿಜವೇ. ಆದರೆ ನಾವು ಹೀಗೆ ಹೇಳಲಾರೆವು.

ಇದರ ತಾತ್ಪರ್ಯ : ಪ್ರಾಣಿಗಳಲ್ಲಿ ಮಾನಸಿಕ ಕ್ರಿಯೆ ಅಥವಾ ಪ್ರಕ್ರಿಯೆಯೊಂದು ನಡೆಯುತ್ತದೆ ಎನ್ನುವುದನ್ನು ನಮ್ಮ ಸಾಮಾನ್ಯಜ್ಞಾನ ಒಪ್ಪಲಾರದು. ಈ ಹಿಂದೆ ನೋಡಿದಂತೆ ವಿಷಯವೊಂದರ ಬಗೆಗೆ ಆಲೋಚಿಸುವುದೆಂದರೆ ಮಾನಸಿಕ ಪ್ರಕ್ರಿಯೆಯೊಂದು ಜರುಗುತ್ತಿರುವುದು. ಇದು ಪ್ರಾಣಿಗಳಲ್ಲಿ ನಡೆಯಲಾರದು.

ಆದರೆ ಕಿವುಡ-ಮೂಗರಲ್ಲಿಯೂ ಹೀಗೆಯೇ ಇರುತ್ತದೆಯೇ? ಅವರು ಆಶ್ಚರ್ಯಪಡುತ್ತಾರೆ, ಊಹಿಸುತ್ತಾರೆ, ನಟಿಸುತ್ತಿದ್ದಾರೆ, ಆಸೆಹೊಂದಿದ್ದಾರೆ, ಉದ್ದೇಶಿಸಿದ್ದಾರೆ ಇತ್ಯಾದಿಯಾಗಿ ಹೇಳಲಾರೆವೇ? ಅವರಿಗೆ ನಂಬಿಕೆಯನ್ನು ತಾಳಲು, ಸಂದೇಹಪಡಲು, ತಾನು ತಪ್ಪಿದ್ದೇನೆಂದು ಭಾವಿಸಲು ಅಥವಾ ಮನಸ್ಸು ಬದಲಾಯಿಸಿಕೊಳ್ಳಲು - ಈ ಮುಂತಾದವು ಸಾಧ್ಯವಿಲ್ಲವೇ ? ಆದ್ದರಿಂದ ಅವರಲ್ಲಿ, ಕಲಮಟ್ಟಿಗಾದರೂ, ಆಲೋಚಿಸುವ ಶಕ್ತಿ ಇದೆ ಎಂದು ಹೇಳಲು ಸಾಧ್ಯವಿಲ್ಲವೇ ? ಸಾಧ್ಯವಿಲ್ಲವೆಂದು ಹೇಳಲು ಹಾಗೂ ಮೊದಲು ಕಿವುಡ-ಮೂಗರಾಗಿದ್ದಾಗ ಏನನ್ನೂ ಆಲೋಚಿಸಲು ಸಾಧ್ಯವಾಗದೇ ನಂತರ ಭಾಷೆಯೊಂದನ್ನು ಕಲಿತಮೇಲೆಯೇ ಆಲೋಚಿಸತೊಡಗುತ್ತಾರೆ ಎಂದು ಹೇಳಲು ಕಾರಣವೇನು ತೋರದು.[4]

ಕಿವುಡ-ಮೂಗರು ಆಲೋಚಿಸಬಲ್ಲರೆಂಬುದಕ್ಕೆ ಇನ್ನೂ ಒಂದು ಚಿಕ್ಕ ಆಧಾರವಿದೆ. ನಾವು ಕಿವುಡ-ಮೂಗರೊಡನೆ ಸಂಭಾಷಣೆಯಲ್ಲಿ ತೊಡಗುವುದು ಸಾಧ್ಯವಲ್ಲವಾದರೂ ನಾವು ತಿಳಿಯದ ಭಾಷೆಯೊಂದನ್ನು ಮಾತನಾಡುವ ವ್ಯಕ್ತಿಯೊಬ್ಬನೊಡನೆ ನಡೆಸುವಷ್ಟೇ ಸಮರ್ಥವಾಗಿ ಕಿವುಡ-ಮೂಗ ವ್ಯಕ್ತಿಯೊಡನೆಯೂ ಕೈಕರಣಗಳ , ಮುಖಭಾವಗಳ ಮೂಲಕ ಕೆಲಮಟ್ಟಿಗೆ ಸಂವಹನ ಹೊಂದಬಹುದು. ಟಿಬೆಟನ್ ಮಾತ್ರ ಬಲ್ಲ ವ್ಯಕ್ತಿಯೊಬ್ಬನೊಡನೆ ನಡೆಸಬಹುದಾದ ಸಂವಹನ ಸಾಧ್ಯತೆಗೂ ಕಿವುಡ-ಮೂಗನೊಡನೆ ನಡೆಸಬಹುದಾದ ಸಂವಹನ ಸಾಧ್ಯತೆಗೂ ವ್ಯತ್ಯಾಸವೇನೂ ಇರುವಂತೆ ನನಗೆ ತೋರದು. ಒಬ್ಬ ಟಿಬೆಟನ್ ಆಲೋಚಿಸಬಲ್ಲವನು (ಕಾರಣ ಆತನಿಗೆ ಮಾತನಾಡಲು ಗೊತ್ತಿದೆ) ಹಾಗೂ ಕಿವುಡ-ಮೂಗನೊಬ್ಬ ಆಲೋಚಿಸಲಾರ (ಕಾರಣ ಅವನು ಮಾತನಾಡಲಾರ) ಎಂಬ ಗ್ರಹಿಕೆ ನಿಜವಾಗಿದ್ದರೆ ಅವರಿಬ್ಬರೊಡನೆ ನಡೆಸುವ ಸಂವಹನ ರೀತಿಯಲ್ಲಿಯೂ ಗುಣಾತ್ಮಕವಾದ ವ್ಯತ್ಯಾಸವಿರಬೇಕಾಗಿತ್ತು. ಯಾಕೆಂದರೆ ಆಲೋಚಿಸಲಾರದ ಜೀವಿಯೊಡನೆ ಸಂವಹನ ಸಾಧ್ಯವಿಲ್ಲ. ಸಂವಹನಗೊಳಿಸುವುದು ಎಂದರೆ ನಮ್ಮ ಆಲೋಚನೆ- ಬಯಕೆಗಳನ್ನು ಇನ್ನೊಬ್ಬ ತಿಳಿದುಕೊಳ್ಳುವಂತೆ ಮಾಡುವುದು ಹಾಗೂ ಇದಕ್ಕೆ ಪ್ರತಿಯಾಗಿ ಆತನ ಆಲೋಚನೆ - ಬಯಕೆಗಳೇನೆಂಬುದನ್ನೂ ತಿಳಿದುಕೊಳ್ಳುವುದು - ಇವುಗಳನ್ನು ಯಾವುದೇ ಬಾಹ್ಯಸೂಚನೆ (ಸಂಜ್ಞೆ)ಯಿಲ್ಲದೇ ಮಾಡುವುದು - ಎಂದರ್ಥ. ಈ ಅರ್ಥದಲ್ಲಿ, ಪ್ರಾಣಿಯೊಡನೆ ಸಂವಹನ ಸಾಧ್ಯವಿಲ್ಲ, ಆದರೆ ಒಬ್ಬ ಅಪರಿಚಿತ ಭಾಷಿಕನೊಡನೆ ಹಾಗೂ ಅಷ್ಟೇ ಸಮರ್ಥವಾಗಿ ಒಬ್ಬ ಕಿವುಡ-

4. ಇಲ್ಲಿ ಬಹುಶಃ ವಿಟ್‌ಗನ್‌ಸ್ಟೀನ್‌ನ ಮನಸ್ಸಿನಲ್ಲಿದ್ದ ಹೆಲೆನ್ ಕೆಲರ್ ಹಾಗೂ ವಿಲಿಯಂ ಜೇಮ್ಸ್‌ನ ಡಿ ಎಸ್ಟೆಲಾ (1892: 613-624) - ಇವರನ್ನು ನೆನಪಿಸಿಕೊಳ್ಳಿ.

ಮೂಗನಲ್ಲಿ, ಆತ ನಮ್ಮೊಡನೆ ಮಾತನಾಡಲು ಸಾಧ್ಯವಾಗದಿದ್ದರೆ ಆಲೋಚಿಸುವುದು ಅರ್ಥಾತ್ ತನಗೆ ತಾನೇ ಹೇಳಿಕೊಳ್ಳುವುದಾದರೂ ಹೇಗೆ ಸಾಧ್ಯ ?

4. ''ಕಿವುಡ-ಮೂಗರೂ 'ಮಾತನಾಡ'ಬಹುದು. ಅದು ಶಬ್ದಗಳಿಂದ ಅಲ್ಲ, ನಿಜ, ಆದರೆ ನೀವೇ ಹೇಳಿದಂತೆ ಆಂಗಿಕ ಸಂಜ್ಞೆಗಳಿಂದ ಸಂವಹನಗೊಳಿಸಬಲ್ಲರು. ಸೇಂಟ್ ಆಗಸ್ಟಿನ್ ಹೇಳಿದ ಹಾಗೆ, 'ಮುಕ್ತಭಾವ, ಕಣ್ಣುಗಳ ಚಲನೆ, ಇತರ ಅಂಗಾಂಗಗಳ ಚಲನೆಯಿಂದ ಸೂಚಿಸಬಹುದಾದ, ಮನುಷ್ಯರೆಲ್ಲರಿಗಿರುವ ಸಹಜಭಾಷೆ ಅವರಿಗೆ ಲಭಿಸಿದೆ.'' (ಪಿಟ್‌ಗನ್‌ಸ್ಟೀನ್ 1953:2) ಎಂದು ನೀವು ಹೇಳಬಹುದು.

ಇದನ್ನು ನಾನು ಒಪ್ಪುತ್ತೇನೆ, ಯಾಕಾಗಬಾರದು ? ಅವರಲ್ಲಿ ಜಾಗ್ರತವಾದ ಆಲೋಚನೆಗಳಿರುತ್ತವೆ ಹಾಗೂ ತಮಗಿರುವ ಸೀಮಿತವಾದ ವಿಧಾನದಲ್ಲಿ ಅವನ್ನು ಅಭಿವ್ಯಕ್ತಿಗೊಳಿಸಲು ಪ್ರಯತ್ನಿಸುತ್ತಾರೆ ಎಂಬುದು ನನ್ನ ವಾದ ಕೂಡ. ಆದರೆ ಪ್ಲೇಟೊ ಸಿದ್ಧಾಂತದ ಪ್ರಕಾರ ಇದಕ್ಕೆ ವಿವರಣೆ ಹೇಗೆ ? - ಅವರು ಆಲೋಚಿಸುವುದೇ ಆದರೆ ಮನಸ್ಸಿನಲ್ಲಿಯೇ ಮುಖಭಾವ, ಆಂಗಿಕ ಚಲನೆಗಳನ್ನು (ಶಬ್ದಗಳಿಗೆ ಬದಲಾಗಿ) ಆಲೋಚನೆಯ ಕಾಲದಲ್ಲಿ ಕಲ್ಪಿಸಿಕೊಳ್ಳುತ್ತಾರೆ ಎಂದೇ ? ಆದರೆ ಇದು ಹೇಗೆ ಸಾಧ್ಯ? ತಮ್ಮನ್ನು ತಾವೇ ಹೊರಗಿನಿಂದ (ಕನ್ನಡಿಯಲ್ಲಿ) ನೋಡಿಕೊಳ್ಳುವಂತೆ ಈ ಆಂಗಿಕ ಸಂಜ್ಞೆಯಂತಹ ಕ್ರಿಯೆಗಳನ್ನು ನಡೆಸುತ್ತಿದ್ದೇವೆ ಎಂದು (ಮನಸ್ಸಿನ ಒಳಗಣ್ಣಿಂದ ನೋಡಿದಂತೆ) ಕಲ್ಪಿಸಿಕೊಳ್ಳುತ್ತಲೇ? ಒಂದು ಪಕ್ಷ ಅವರು ಕನ್ನಡಿಯನ್ನೇ ನೋಡಿಲ್ಲ ಎಂದುಕೊಳ್ಳೋಣ. ಅಥವಾ (ಹೆಲನ್ ಕೆಲರ್ ಹಾಗೆ) ಕುರುಡರೂ ಆಗಿರುತ್ತಾರೆ ಎಂದು ಕೊಳ್ಳೋಣ, ಆಗ, ಅವರು ತಾವು ಆಂಗಿಕ ಚಲನೆಯ ಸಮಯದಲ್ಲಿ ಹೇಗೆ ಕಾಣುತ್ತೇವೆ ಎಂಬುದನ್ನು ಕಲ್ಪಿಸಿಕೊಳ್ಳಲು ಸಾಧ್ಯವೇ ? ಇವರ ಆಲೋಚನ ವಿಧಾನವನ್ನು ವಿವರಿಸಬಹುದಾದ ಇನ್ನೊಂದು ರೀತಿಯೆಂದರೆ -ಆಂಗಿಕ ಚಲನೆ, ಮುಖಭಾವ ಇತ್ಯಾದಿಗಳನ್ನು ಮಾಡುವಾಗ ಉಂಟಾಗಬಹುದಾದ ಸ್ನಾಯುಚಲನೆಗಳನ್ನು ಅನುಭವವನ್ನು ಆಲೋಚನೆಯ ಕಾಲದಲ್ಲಿ ನೆನಪಿಸಿಕೊಳ್ಳುವುದು. ನಮಗೆ (ಅವರಿಗೆ ಇದು ಸಾಧ್ಯವಿದ್ದರೆ ನಮಗೂ ಇದು ಸಾಧ್ಯವಾಗಬೇಕು) ಇದು ಸಾಧ್ಯವೇ ? ಅಸಹ್ಯವಾದ ಮುಖಭಾವ ಮಾಡುವಾಗ ಆಗಬಹುದಾದ ಅನುಭವವನ್ನು ನೆನಪಿಸಿಕೊಳ್ಳಲು ಪ್ರಯತ್ನಿಸಿ ನೋಡಿ. ಇಂತಹ ಅಸಂಬದ್ಧ ವಿವರಣೆಯ ಮಾಲಿಕೆಗೆ ಮತ್ತಷ್ಟು ಮಣಿಗಳನ್ನು ಪೋಣಿಸುವುದರಲ್ಲಿ ಅರ್ಥವಿಲ್ಲ.

ಈ ವಿವರಣೆಗಳು ಅಸಂಬದ್ಧವೆಂದು ಹೇಳುವುದಾದರೆ 'ತನ್ನನ್ನೇ ಉದ್ದೇಶಿಸಿ ತಾನು ಮಾತನಾಡುವುದೆ'ಂಬುದೂ ಅಷ್ಟೇ ಅಸಂಬದ್ಧವಾದ ವಿಚಾರವಲ್ಲವೇ ? - ಇಲ್ಲ, ಹಾಗೇನೂ ಇರಬೇಕಾಗಿಲ್ಲ. ಕವನ, ಭಾಷಣಗಳನ್ನು ನಾವು ಮೊದಲೇ ಕಲ್ಪಿಸಿಕೊಂಡು ರಿಹರ್ಸಲ್ ಮಾಡುತ್ತೇವೆ. ಮಾಡಬಲ್ಲೆವು, ಪ್ರಬಂಧರಚನೆ ಅಥವಾ ಅನುವಾದ ಕಾರ್ಯಗಳಲ್ಲಿ ಶಬ್ದ, ವಾಕ್ಯಗಳನ್ನು ಕಲ್ಪಿಸಿಕೊಂಡು ಆಯ್ಕೆಮಾಡುತ್ತೇವೆ. ಇಂತಹ ಶಾಬ್ದಿಕಕ್ರಿಯೆಗಳಲ್ಲಿ ಮಾತ್ರವಲ್ಲ ಶಾಬ್ದಿಕವಲ್ಲದ ವಿಷಯಗಳನ್ನು ಕುರಿತಾದ ಆಲೋಚನೆಗಳಲ್ಲಿಯೂ ಕೆಲವೊಮ್ಮೆ ಶಬ್ದ ವಾಕ್ಯಗಳನ್ನು ಕಲ್ಪಿಸಿಕೊಳ್ಳಲಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಶಬ್ದಗಳ ಉಚ್ಚಾರಣೆ ಕಿವಿಗೆ 'ಕೇಳಿಸುತ್ತದೆ'ಯೆಂದೂ ಕೆಲವರ ಅನುಭವದಂತೆ ಶಬ್ದಗಳು ಮುದ್ರಿತ/ಲಿಖಿತ ರೂಪದಲ್ಲಿ 'ಕಾಣುತ್ತವೆ'ಯೆಂದೂ ಅಂತರ್‌ಪರಿವೀಕ್ಷಣೆಗಳಿಂದ (introspection) ತಿಳಿದುಬಂದಿದೆ. ಇಂತಹ ಅನುಭವಗಳೊಂದಿಗೆ ಹಲವೊಮ್ಮೆ ಧ್ವನ್ಯಂಗಗಳ

ಚಲನೆಯಿಲ್ಲದ (=ಉಚ್ಚಾರವಾಗದ) - ಕಾಲ್ಪನಿಕವಾದ ಶಬ್ದಗಳೂ ಸೇರಿರುತ್ತವೆ. ಆಗಾಗ ಇಂತಹ ಒಳಮುಖಿಯಾದ 'ಮಾತು'ಗಳು ಹೊರಮುಖಿವಾಗಿ ನುಗ್ಗಿ ಚಿಂತಕನು 'ದೊಡ್ಡದಾಗಿ ಆಲೋಚಿಸು'ವಂತೆ ಮಾಡುತ್ತವೆ.

ಈ ಕೊನೆಯ ವಾಕ್ಯ ಹಾಗೂ "ಗಲಾಟೆ ಮಾಡಬೇಡಿ, ನನ್ನ ಆಲೋಚನೆ ನನಗೇ ಕೇಳಿಸುತ್ತಿಲ್ಲ" ಅಥವಾ "ಆಗ ನನಗೆ ನಾನೇ ಹೇಳಿಕೊಂಡೆ (=ಯೋಚಿಸಿದೆ)... " ಎಂಬಂತಹ ಮಾತುಗಳು ಪ್ಲೇಟೋ ವಾದಕ್ಕೆ ನಿಷ್ಠರಾಗಿರುವವರಿಗೆ ಸ್ವಲ್ಪ ಸಮಾಧಾನವನ್ನುಂಟುಮಾಡಬಹುದು[6]. ಹೀಗೆ ಕಿವುಡ-ಮೂಗರಿಗೆ ಅನ್ವಯಿಸುವಾಗ ಈ ದೃಷ್ಟಿಕೋನವು ಅಸಂಗತವೆನಿಸಿದರೂ ಸಾಮಾನ್ಯರ ವಿಷಯದಲ್ಲಿ ಇದೂ ಒಂದು ಸಾಧ್ಯತೆ ಎಂದು ಹೇಳಬಹುದು. ಆದ್ದರಿಂದ ಈ ವಾದವನ್ನು ಒಪ್ಪುವವರಿಗೆ ಕಿವುಡ-ಮೂಗರು ಮನಸ್ಸಿನಲ್ಲಿ ಹಾವಭಾವ, ಆಂಗಿಕಸಂಜ್ಞೆಗಳನ್ನ ಕಲ್ಪಿಸಿಕೊಂಡು ಆಲೋಚನೆ ನಡೆಸುತ್ತಾರೆ ಎಂದು ಅರ್ಥೈಸಬೇಕಾಗಿ ಬರುವ ಹೆಚ್ಚಿನ ಅಸಂಗತ ವಿವರಣೆಗಿಂತ ಅವರು (ಭಾಷೆಯಿಲ್ಲವಾದ್ದರಿಂದ) ಆಲೋಚಿಸುವುದೇ ಸಾಧ್ಯವಿಲ್ಲ ಎಂಬ ಕಡಿಮೆ ಅಸಂಗತವಾದ ಹೇಳಿಕೆಯನ್ನು ಸ್ವೀಕರಿಸುವುದೇ ಉತ್ತಮ.

5. ಪ್ಲೇಟೋ ಸಿದ್ಧಾಂತವು ನಮ್ಮ ಅಂತಃ ಪ್ರೇರಣೆಗೆ ವಿರುದ್ಧವಾಗಿರುವುದು ಮಾತ್ರವಲ್ಲ, ಇದು ಸಂಪೂರ್ಣವಾಗಿ ತಪ್ಪಾದುದೆಂಬುದನ್ನು ತೋರಿಸಿಕೊಡುವ ವಾದ ಭೂಮಿಕೆಗೆ ಈಗ ಬರುತ್ತೇನೆ. ಪ್ರಸ್ತಾವನಾ ರೀತಿಯು ಆಲೋಚನೆ ತನಗೆ ತಾನೆ ಮಾತನಾಡಿಕೊಳ್ಳುವುದನ್ನು ಒಳಗೊಳ್ಳುವುದಿಲ್ಲ ಮಾತ್ರವಲ್ಲ, ಅದು ತೋರಿಕೆಗೆ ಭಾಷೆಯ ಬಳಕೆಯನ್ನೇ ಒಳಗೊಳ್ಳದು ಎಂಬುದನ್ನು ತೋರಿಸಿಕೊಡುವ ಉದ್ದೇಶ ನನ್ನದು.

ಮಾತನಾಡುವ ಕ್ರಿಯೆ ಮನುಷ್ಯನಿಗೇ ವಿಶಿಷ್ಟವಾದುದು ಹಾಗೂ ಅದು ಅವನ ಇಚ್ಛೆಯಂತೆ ನಡೆಯುವಂಥಾದ್ದು. ಇದರ ಅರ್ಥ : ಮಾತನಾಡುವ ವ್ಯಕ್ತಿ ತಾನು ಏನು ಮಾಡುತ್ತಿದ್ದೇನೆಂಬುದರ ಬಗೆಗೆ ಅರಿವು ಇರುತ್ತದೆ. ಹಾಗೂ ಅದನ್ನು ಮಾಡುವ ಉದ್ದೇಶವೂ ಅವನಲ್ಲಿ ಇರುತ್ತದೆ. ಮನುಷ್ಯ ಮಾಡುವ ಎಲ್ಲ ಕ್ರಿಯೆಗಳೂ ಹೀಗೆ ಇರುವುದಿಲ್ಲ. ನಮ್ಮ ಆಹಾರ ಜೀರ್ಣವಾಗುವ ಕ್ರಿಯೆ ನಮಗೆ ಅರಿವಾಗದಂತೆಯೆ ನಡೆಯುತ್ತದೆ; ನಮ್ಮ ಹೃದಯಬಡಿತ ನಮ್ಮ ಉದ್ದೇಶವನ್ನನುಸರಿಸಿ ನಡೆಯುವುದಲ್ಲ. ಇಂತಹ ಕ್ರಿಯೆಗಳು ನಮ್ಮ ಇಚ್ಛೆಗೆ ಅನುಗುಣವಾಗಿ ನಡೆಯುವುದಿಲ್ಲ. ಆದರೆ ಬೇರೆ ಕೆಲವು, ಉದಾಹರಣೆಗೆ, ಇನ್ನೊಬ್ಬರನ್ನು ಡಿಕ್ಕಿಹೊಡೆಯುವುದೊ ಅತವಾ ಕಿಟಕಿಯ ಗಾಜುಗಳನ್ನು ಒಡೆಯುವುದೋ ಉದ್ದೇಶಪೂರ್ವಕವಾಗಿರಬಹುದು ಅಥವಾ ಇಲ್ಲದಿರಬಹುದು. ಇವುಗಳನ್ನು ಬಯಸಿದಲ್ಲಿ, ಉದ್ದೇಶಪೂರ್ವಕವಾಗಿ ಮಾಡಬಹುದು. ಹೀಗೆ ಮಾಡಲು ಮಾಡುವ ವ್ಯಕ್ತಿಗೆ ಕಾರಣಗಳೂ ಇರಬಹುದು. ಹೀಗಲ್ಲದೇ, ಇನ್ನು ಕೆಲವು ಕ್ರಿಯೆಗಳು ಮಾಡುವಾತ ಇಚ್ಛೆಪಟ್ಟರೆ ಮಾತ್ರವೇ ನಡೆಯುವಂಥವು. ಬ್ಯಾಂಕ್‌ದರೋಡೆ ಮಾಡುವುದು, ಕಾವಲುಗಾರನನ್ನು ಕೊಲೆಮಾಡುವುದು ಮೊದಲಾದವು ಇಂತಹ ಕ್ರಿಯೆಗಳು. ಕಿಟಕಿಯ ಗಾಜನ್ನು ಒಡೆದಿರುವುದು ಆಕಸ್ಮಿಕವಾಗಿ ನಡೆದಿರುವ

6. ಈ ಮಾತುಗಳು, - ಪಾಲ್ ಜಿಪ್ ತನ್ನ ಅಪ್ರಕಟಿತ ಪ್ರಬಂಧವೊಂದರಲ್ಲಿ ಗುರುತಿಸುವಂತೆ, 'ಆಲೋಚನೆ' ಎಂಬುದನ್ನು 'ತನಗೆ ತಾನೇ ಮೌನವಾಗಿ ಮಾತನಾಡಿಕೊಳ್ಳುವುದು' ಎಂದು ನಿರ್ವಚಿಸಿದರೆ 'ದೊಡ್ಡದಾಗಿ ಆಲೋಚಿಸುವುದು' ಎಂದರೆ 'ತನಗೆ ತಾನೇ ಮೌನವಾಗಿ, ದೊಡ್ಡದಾಗಿ ಮಾತನಾಡುವುದು' ಎಂದಾಗುತ್ತದೆ. ಇದು ವಿಚಿತ್ರವೆನಿಸುತ್ತದೆ - ಎಂಬಂತಹ ಹೇಳಿಕೆಗೆ ಅವಕಾಶನೀಡಿದರೂ.

ಕ್ರಿಯೆಯಾಗಿರಬಹುದು. ಆದರೆ ಬ್ಯಾಂಕ್‌ದರೋಡೆ ಇಚ್ಛಾಪೂರ್ವಕವಾಗಿಯಲ್ಲದೇ ನಡೆಯುವುದು ಸಾಧ್ಯವಿಲ್ಲ. ಅಕಸ್ಮಾತ್ತಾಗಿ ಒಬ್ಬನನ್ನು ಸಾಯಿಸಬಹುದು, ಆದರೆ ಕೊಲೆಮಾಡುವುದು ಉದ್ದೇಶಪೂರ್ವಕವಾಗಿಯೇ. ಮಾತನಾಡುವ ಕ್ರಿಯೆಯೂ ಈ ಮೂರನೇ ಜಾತಿಗೆ ಸೇರುವ ಕ್ರಿಯೆಯೇ. ಉದ್ದೇಶವಿಲ್ಲದೇ ವ್ಯಕ್ತಿಯೊಬ್ಬ ಹೇಳಿಕೆ ನೀಡಲಾರ, ಭರವಸೆ ಕೊಡಲಾರ, ಆಜ್ಞೆಮಾಡಲಾರ ಅಥವಾ ಆರೋಪ ಹೊರಿಸಲಾರ ಇತ್ಯಾದಿ. ಮಾತನಾಡುವ ವ್ಯಕ್ತಿಗೆ ತಾನು ಏನು ಮಾತನಾಡುತ್ತಿದ್ದೇನೆಂಬ ಅರಿವಿರಬೇಕು ಹಾಗೂ ಮಾತನಾಡುವ ಇಚ್ಛೆ/ ಉದ್ದೇಶವೂ ಇರಬೇಕು.

ಆದ್ದರಿಂದ ಆಲೋಚನೆಯೆಂಬುದು, ಮೌನವಾಗಿಯಾದರೂ, ತನಗೆ ತಾನೇ ಮಾತನಾಡುವುದು ಎನ್ನುವುದಾದರೆ,(ಮಾತನಾಡುವುದು ಉದ್ದೇಶಪೂರ್ವಕ ಅಥವಾ ಇಚ್ಛಾನುಸಾರಿಯಾದ್ದರಿಂದ) ಆಲೋಚನೆಗಳೂ ಉದ್ದೇಶಪೂರ್ವಕವಾಗಿಯೇ ಅಥವಾ ಇಚ್ಛೆಗನುಗುಣವಾಗಿಯೇ ನಡೆಯುತ್ತವೆ ಎಂದಂತಾಯಿತು. ಆದರೆ ಇದು ತಪ್ಪು. ಇದಕ್ಕೆ ಕಾರಣ, ಕೆಲವೊಮ್ಮೆ ಆಲೋಚನೆಗಳು ನಮ್ಮನ್ನು ಕೇಳದೇ ಹೊರಚಿಮ್ಮುತ್ತವೆ (ಇಂತಹ ಸಂದರ್ಭಗಳಲ್ಲಿ 'ಹೊಳೆಯಿತು', 'ನನ್ನನ್ನು ಸೆಳೆಯಿತು' ಮುಂತಾದ ಶಬ್ದಗಳು ಬಳಕೆಯಾಗುವುದನ್ನು ಗಮನಿಸಿ) ಹಾಗೂ ನಮ್ಮನಮ್ಮ ಗೀಳಿನಂತೆ ಆವರಿಸಿ ಚಿಂತೆಗೀಡುಮಾಡುತ್ತದೆ ಎಂಬುದು ಮಾತ್ರವಲ್ಲ, ಹೆಚ್ಚು ಆಳವಾದ ಹಾಗೂ ಸಾಮಾನ್ಯವಾದ ಬೇರೊಂದು ಕಾರಣವೂ ಇದೆ.

ಒಂದಿ ಕ್ರಿಯೆ (ಉದಾ-ಗಾಜು ಒಡೆಯುವುದು) ಉದ್ದೇಶಪೂರ್ವಕವಾಗಿ ನಡೆಯಿತೆಂದು ಹೇಳಿದಾಗ ಅದನ್ನು ಮಾಡಿದವನಿಗೆ ಅದರ ಅರಿವಿತ್ತೆಂಬುದಷ್ಟೇ ಅರ್ಥವಲ್ಲ, ಆತ (ಬಯಸಿದಲ್ಲಿ) ಹಾಗೆ ಮಾಡದೇ ಇರಬಹುದಿತ್ತು ಎಂದೂ ಅರ್ಥವಾಗುತ್ತದೆ. ಆಲೋಚನೆಯ ಸಂದರ್ಭದಲ್ಲಿ, ನನ್ನ ಆಲೋಚನೆಯ ಬಗೆಗೆ ನನಗೆ ಅರಿವಿದೆ ಎಂಬುದು ನಿಜವಾದರೂ (ನಾನು ಬಯಸಿದ್ದಲ್ಲಿ) ಹೀಗೆ ಆಲೋಚಿಸದೆ ಇರಬಹುದಿತ್ತು ಎಂದು ಹೇಳುವುದು ಅರ್ಥಹೀನ ಮಾತಾಗುತ್ತದೆ. ನಿರ್ಧಾರವನ್ನು ಕೈಗೊಳ್ಳುವುದು, ಪೂರ್ವಗ್ರಹಿಕೆಯನ್ನು ತಾಳುವುದೇ ಮೊದಲಾದ ಕೆಲವು ರೀತಿಯ ಆಲೋಚನೆಗಳು ನಮ್ಮ ಇಚ್ಛೆಯನ್ನನುಸರಿಸಿ ನಡೆಯುತ್ತವೆ ಎಂಬುದನ್ನು ಒಪ್ಪಿದರೂ ಇನ್ನು ಕೆಲವು ರೀತಿಯ ಆಲೋಚನೆಗಳು ಇಂತಹ ಸ್ವಾತಂತ್ರ್ಯವನ್ನು ನಮಗೆ ನೀಡಲಾರವು ಎಂದೇ ಹೇಳಬೇಕಾಗುತ್ತದೆ. ಮಿತ್ರನನ್ನು ಗುರುತಿಸುವ, ಸಮಸ್ಯೆಗೆ ಪರಿಹಾರವೊಂದು ಹೊಳೆಯುವ, ಮುಂದಾಗುವ ಪರಿಣಾಮವೊಂದು ಗೋಚರಿಸುವ ಇವೇ ಮುಂತಾದ ಸಂದರ್ಭಗಳನ್ನು ಗಮನಿಸಿ. ಇವನ್ನು ಉದ್ದೇಶಪೂರ್ವಕ, ಮುಕ್ತ, ಇಚ್ಛೆಗನುಗುಣವಾಗಿ ಹುಟ್ಟಿದ ಆಲೋಚನೆಗಳೆಂದು ಕರೆಯಬಹುದೇ ? ''ನಾನು ಈ ಸಮಸ್ಯೆಗೆ ಪರಿಹಾರವೊಂದನ್ನು ಇದ್ದಕಿದ್ದಂತೆ ಕಂಡುಕೊಂಡೆ, ಆದರೆ ಹಾಗೆ ಮಾಡದೆಯೂ ಇರಬಹುದಿತ್ತು'' ಅಥವಾ ''ಈ ಎರಡು ಸಂಗತಿಗಳ ನಡುವಿನ ಸಂಬಂಧವು ಗೋಚರಿಸಲು ನಾನು ಪ್ರಯತ್ನಿಸಿದೆ'' – ಈ ಮುಂತಾದ ವಾಕ್ಯಗಳು ಅರ್ಥಪೂರ್ಣವಾಗಿವೆ ಎನ್ನಬಹುದೇ ? ಆಲೋಚನೆ ಮಾಡುವ ರೀತಿಗೂ ಮಾತನಾಡುವ ರೀತಿಗೂ ಎಂತಹ ವ್ಯತ್ಯಾಸವಿದೆ ! ಮಾತನಾಡುವಾಗ ''ನಾನು ಪರಿಹಾರವೊಂದನ್ನು ಸೂಚಿಸಿದ್ದೇನೋ ನಿಜ, ಆದರೆ ಹಾಗೆ ಮಾಡದೆಯೂ ಇರಬಹುದಿತ್ತು'' ಹಾಗೂ '' ಈ ಎರಡು ಸಂಗತಿಗಳ ನಡುವಿನ ಸಂಬಂಧವನ್ನು ತಿಳಿಸಲು ಆ ಮೇಲೆ ನಿರ್ಧರಿಸಿದೆ'' – ಈ ಮುಂತಾದ ವಾಕ್ಯಗಳನ್ನು ಬಳಸುವುದರಲ್ಲಿ ತಪ್ಪೇನಿಲ್ಲ.

ಇದರಿಂದಾಗಿ, ಪ್ಲೇಟೋ ಸಿದ್ಧಾಂತವು ನಿಜವಾಗಿದ್ದಲ್ಲಿ, ಈ ತೀರ್ಮಾನಕ್ಕೆ ಬರಬೇಕಾಗುತ್ತದೆ. ನಾವು ಆಲೋಚಿಸುವಾಗ ಅನುದ್ದೇಶಪೂರ್ವಕವಾಗಿ, ಅನೈಚ್ಛಿಕವಾಗಿ ನಮ್ಮೊಳಗೇ 'ಹೇಳಿಕೊಳ್ಳುತ್ತೇವೆ', ಹಾಗೂ ಹೀಗೆ ಹೇಳದೇ ಇರಲು ನಮಗೆ ಸಾಧ್ಯವಾಗುವುದಿಲ್ಲ. ಅಲ್ಲದೇ ಹಿಂದಿನ ಪ್ಯಾರಾದಲ್ಲಿ ಹೇಳಿದಂತೆ ಕೆಲವು ಇಷ್ಟವಾಗದ ಆಲೋಚನೆಗಳಿಂದ (ಅವು ನಮ್ಮನ್ನು ಅಂಟಿಕೊಳ್ಳುವುದರಿಂದ) ನಮಗೆ ಮುಕ್ತಿಯೂ ಇಲ್ಲ. ಕೆಲವು ವ್ಯಕ್ತಿಗಳು ಬಾಯಿಮುಚ್ಚಿಕೊಳ್ಳಲಾರದೆ ಸತತವಾಗಿ ಮಾತನಾಡುವ ಸಂಗತಿ ನಮಗೆ ಗೊತ್ತು. ಇದು ಸ್ವಯಂ ನಿಯಂತ್ರಣವನ್ನು ಕಳೆದುಕೊಂಡ ಒಂದು ರೋಗಸ್ಥಿತಿ. ಈ ವಿವರಣೆ ಸಾಮಾನ್ಯ ಚಿಂತಕರಿಗೆ ಅನ್ವಯಿಸದು.

ಸಾರಾಂಶವಾಗಿ ಹೇಳುವುದಾದರೆ -ಮಾತನಾಡುವುದು ಒಂದು ಇಚ್ಛಾನುಸಾರವಾದ ಕ್ರಿಯೆ. ಆದರೆ ಕೆಲವು ಸಾಮಾನ್ಯರೀತಿಯ ಆಲೋಚನೆಗಳು ಇಚ್ಛಾನುಸಾರ ನಡೆಯುವುದಿಲ್ಲ. ಆದ್ದರಿಂದ ಸಾಮಾನ್ಯವಾಗಿ ಆಲೋಚನೆಗಳು ತನ್ನೊಳಗೇ ತಾನು ಮಾತನಾಡಿದಂತೆ ಅಲ್ಲ. ಆದರೆ ಪ್ರಸ್ತಾವನಾ ರೀತಿಯ ಆಲೋಚನೆಗಳು ಭಾಷಿಕ ಅಂಶಗಳನ್ನು ಆಧರಿಸಿರುವ ಸಾಧ್ಯತೆಯಿರುವುದರಿಂದ ಅವು ಈ ಚರ್ಚೆಯಿಂದ ಹೊರತಾಗಿ ಉಳಿಯುತ್ತವೆ. ಪ್ಲೇಟೋ ಸಿದ್ಧಾಂತದ ಈ ಒಂದು ದುರ್ಬಲವಾದ (Watered-down) ರೂಪವನ್ನು ಮುಂದೆ ಪರಿಶೀಲಿಸುತ್ತೇನೆ.[7]

6. ಮಾತನಾಡುವ ವ್ಯಕ್ತಿಗೆ ಮಾತನಾಡುವ ಉದ್ದೇಶವಿರಬೇಕೆಂದೂ ಮಾತುಗಳು ಸೂಚಿಸುವ ಇಂಗಿತವನ್ನು ಆತ ಹೊಂದಿರುತ್ತಾನೆಂದೂ ಹಿಂದೆಯೇ ಹೇಳಿದೆ. ಈ ಉದ್ಧೇಶವೆಂದರೆ ಏನು ? - ಇದು ಮಾತನಾಡುವಾತ ನಡೆಸುವ ಭಾಷಾವ್ಯಾಪಾರ (Speech act) ವನ್ನವಲಂಬಿಸಿದೆ. ಉದಾ : ''ಈತ ಒಹ್ಯಾಯೋ ಪ್ರಾಂತದ ಅಸ್ತಾಬುಲಾದಲ್ಲಿ ಹುಟ್ಟಿದವನು'' ಎಂಬ ಹೇಳಿಕೆಯನ್ನು ನೀಡಿದಾಗ ಅದನ್ನು ಕೇಳಿದವನು ಈ ವಾಕ್ಯವು ಪ್ರಸ್ತಾಪಿಸುವ ಸಂಗತಿಯನ್ನು ನಂಬಬೇಕು ಎಂಬುದು ಹೇಳುಗನ ಉದ್ದೇಶವಾಗಿರಬಹುದು. ರೂಮಿನಿಂದ ಹೊರಗೆ ಹೋಗುವಂತೆ ಆಜ್ಞೆಮಾಡಿದಾಗ ಈ ಮಾತುಗಳನ್ನು ಕೇಳಿಸಿಕೊಂಡ ವ್ಯಕ್ತಿ ಹೊರಹೋಗುವ ಕಾರ್ಯನಡೆಯುವುದು ಹೇಳುಗನ ಉದ್ದೇಶವೆನ್ನಬಹುದು. ಹೀಗೆಯೇ ಇತರೆಡೆ ಕೂಡ[8] ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಮಾತನ್ನು ಕೇಳುವ ವ್ಯಕ್ತಿ ವಾಕ್ಯದಲ್ಲಿಯ ಶಬ್ದಗಳನ್ನು ಮಾತ್ರವಲ್ಲ ಅದು ಸಾಧಿಸಬೇಕೆನ್ನುವ ಇಂಗಿತ (ಕಾರ್ಯ)ವನ್ನೂ ತಿಳಿದುಕೊಳ್ಳಬೇಕೆಂಬುದನ್ನು ಮಾತನಾಡುವಾತ ಬಯಸಿರುತ್ತಾನೆ (ನೋಡಿ, ಆಸ್ಟಿನ್ 1962).

ಈ ವಿಚಾರಗಳ ಬೆಳಕಿನಲ್ಲಿ, ಪ್ಲೇಟೋನ ಸಿದ್ಧಾಂತದ ಹಿನ್ನೆಲೆಯೊಂದಿಗೆ ಮಾನಸಿಕಕ್ರಿಯೆಗಳನ್ನು ಗಮನಿಸಿ. ಈಗ ಅವು ತೀರ ಅಸಂಬದ್ಧವಾಗಿ ತೋರುತ್ತವೆ. ಕಾರಣ, ನಾನು ನನಗೆ/ನನ್ನೊಳಗೇ ಹೇಳಿಕೊಳ್ಳುವಾಗ (ನಾನೇ ಮಾತನಾಡುವವನಾಗಿದ್ದು, ಇದರಿಂದಾಗಿ ಮಾತಿನ ಅರ್ಥ ನನಗೆ ತಿಳಿದಿರುವುದರಿಂದ) ನನ್ನನ್ನು ನಾನೇ (ಕೇಳುವ ವ್ಯಕ್ತಿಯಾಗಿ) ಅರ್ಥಮಾಡಿಕೊಳ್ಳುವುದೆಂದರೆ ಏನರ್ಥ ? ಅಥವಾ ನಾನು ಮೊದಲು ಅರ್ಥಮಾಡಿಕೊಳ್ಳದೇ ಮಾತನಾಡಿದ್ದರೆ ನಾನೇ (ಕೇಳುಗನಾಗಿ) ಅದನ್ನು ಅರ್ಥಮಾಡಿಕೊಳ್ಳಬೇಕೆಂದು ಬಯಸುವುದು ಹೇಗೆ ?

---

7. ಈ ವಾದದ ಹಿಂದೆ ಇರುವ ವಿಚಾರಕ್ಕಾಗಿ ನಾನು ಟೋಮ್ ದೀಮಾಸ್ ಅವರಿಗೆ ಋಣಿಯಾಗಿದ್ದೇನೆ.

8. ಇಲ್ಲಿ ನಾನು ಹೆಚ್.ಪಿ.ಗ್ರೈಸ್ ಅವರು ನಿರೂಪಿಸಿದ ಅರ್ಥ ಸಿದ್ಧಾಂತವನ್ನು ಅನುಸರಿಸಿದ್ದೇನೆ.

ಈಗ ನಿರ್ಧಾರಕ್ಕೆಗೊಳ್ಳುವಂತಹ ಇನ್ನೊಂದು ಬಗೆಯ ಮಾನಸಿಕ ಕ್ರಿಯೆಯನ್ನು ಉದಾಹರಣೆಯನ್ನಾಗಿ ತೆಗೆದುಕೊಳ್ಳೋಣ. ಈ ಬೇಸಗೆಯಲ್ಲಿ ಪ್ಯಾರಿಸ್ಸಿಗೆ ಹೋಗಬೇಕೆಂದು ಈಗ ತಾನೇ ನಿರ್ಧರಿಸಿದ್ದೇನೆ. ಇಲ್ಲಿ ಇದು ನನ್ನ ಆಲೋಚನೆಯಾದಾಗ, ನಾನು ನನಗೇ ಹೇಳಿಕೊಳ್ಳುವುದಾದರೂ ಏನು ? "ಪ್ಯಾರಿಸ್ಸಿಗೆ ಹೋಗು" ಎಂತಲೇ ? ಇದು ಒಂದು ಆಜ್ಞೆಯಾಗಿ ತೋರುವುದರಿಂದ ಮಾತನಾಡುವವನಲ್ಲಿ ಆಜ್ಞೆಮಾಡುವ ಅಧಿಕಾರವೂ ಅದೇ ಕಾಲಕ್ಕೆ (ಅವನೇ ಕೇಳುಗನೂ ಆದ್ದರಿಂದ) ಅದನ್ನು ಪಾಲಿಸುವ ವಿಧೇಯತೆಯೂ ಹೇಳುವವನಲ್ಲಿರಬೇಕಾಗುತ್ತದೆ. ನನ್ನ ಮೇಲೆ ನಾನೇ ಅಧಿಕಾರ ಚಲಾಯಿಸುವ ಕ್ರಿಯೆಯೊಂದು ನನ್ನೊಳಗೇ ಇರುವುದರ ಅಸಂಬದ್ಧತೆಯನ್ನು ನಿರ್ಲಕ್ಷಿಸಿದರೂ, ಅದನ್ನು ಗೌರವಿಸುವ ಕ್ರಿಯಯು ಇನ್ನೊಂದು ಆಯಾಮವನ್ನು ತೆರೆದಿಡುತ್ತದೆ. ನಾನು ಈ ಆಜ್ಞೆಯನ್ನು ಪಾಲಿಸಬೇಕೆ ? ಅಥವಾ ಬೇಡವೇ ? ಎಂಬ ಪ್ರಶ್ನೆಯೇ ಅದು. "ಇಲ್ಲ, ನಾನು ಪಾಲಿಸುವುದಿಲ್ಲ" ಎಂಬುದು ನನ್ನೊಳಗಿನ ಕೇಳುಗನ ಉತ್ತರವಾದರೆ ನನ್ನ ನಿರ್ಧಾರವೇನಾಯಿತು ? ಅಥವಾ "ನಾನು ಪ್ಯಾರಿಸ್ಸಿಗೆ ಹೋಗುತ್ತೇನೆ" ಎಂದಿಷ್ಟೇ ಹೇಳುತ್ತೇನೆ ಎಂದಿಟ್ಟುಕೊಳ್ಳೋಣ. ಆಗ ಈ ಒಳಮಾತು ನಿರ್ಧಾರವೆಂದು ತಿಳಿಯುವುದು ಹೇಗೆ ? (ಊಹೆಯಾಗಿರಬಹುದು) ಇದು ನಿರ್ಧಾರವೆಂದು ಸ್ಪಷ್ಟವಾಗಲು " ನಾನು ಪ್ಯಾರಿಸ್ಸಿಗೆ ಹೋಗಲು ನಿರ್ಧರಿಸಿದ್ದೇನೆ" ಎಂದೋ " ನಾನು ಪ್ಯಾರಿಸ್ಸಿಗೆ ಹೋಗುತ್ತೇನೆ ಹಾಗೂ ಇದೊಂದು ನಿರ್ಧಾರ" ಎಂದೋ ಹೇಳಿಕೊಳ್ಳಬೇಕು. ಆದರೆ ನಿರ್ಧಾರವನ್ನು ಕೈಗೊಳ್ಳುವಾಗ ಇದು ನನ್ನ ನಿರ್ಧಾರ'ವೆಂದು ನನಗೆ ನಾನೇ ಹೇಳಿಕೊಳ್ಳುವುದರ ಔಚಿತ್ಯವೇನು ? ನನ್ನ ನಿರ್ಧಾರವನ್ನು ನಿಮಗೆ ತಿಳಿಸುವಾಗ ನಿಮ್ಮ ನಂಬಿಕೆಯನ್ನು ಆಧರಿಸಿರುತ್ತೇನೆ, ಆಜ್ಞೆ ಮಾಡುವಾಗ ನಿಮ್ಮ ವಿಧೇಯನ್ನು ನಿರೀಕ್ಷಿಸಿರುತ್ತೇನೆ. ಈ ಎರಡು ಬಗೆಗಳಲ್ಲಿ ಯಾವುದೂ ವ್ಯಕ್ತಿ ತನಗೇ ಹೇಳಿಕೊಳ್ಳುವಾಗ ಅನ್ವಯಿಸದು.

ಇದರಿಂದ ತಿಳಿಯುವುದಿಷ್ಟೇ : ಆಲೋಚನೆಯೆಂದರೆ ತನಗೆ ತಾನೇ ಮೌನವಾಗಿ ಹೇಳಿಕೊಳ್ಳುವುದು ಎಂದು ಹೇಳುವುದು ಸರಿಯಲ್ಲ. ಇನ್ನು ಪ್ರಸ್ತಾವನಾ ರೀತಿಯ ಆಲೋಚನೆಗಳು ಪದ, ಪದಗುಚ್ಛ, ವಾಕ್ಯ ಮೊದಲಾದ ಭಾಷಿಕ ಅಂಶಗಳನ್ನು ಒಳಗೊಳ್ಳುತ್ತವೆಯೇ ಎಂಬುದನ್ನು ಪರೀಕ್ಷಿಸುವುದಷ್ಟೇ ಉಳಿಯಿತು.

7. ಸಾಮಾನ್ಯವಾಗಿ, ಇನ್ನೊಬ್ಬರು ಹೇಳಿದ ಸಂಗತಿಯೊಂದನ್ನು ಪುನಃ ಪ್ರಸ್ತಾಪಿಸುವಾಗ ಪರೋಕ್ಷಕಥನ ಅಥವಾ ವರದಿಯ ರೂಪದಲ್ಲಿ ಹೇಳುತ್ತೇವೆ. "ಅವನು ತಾನು ಅಪ್ಪಾಬುಲಾದಲ್ಲಿ ಹುಟ್ಟಿದೆನೆಂದು ಹೇಳಿದ" ಅಥವಾ "ಈ ಸ್ಥಳವನ್ನು ಬಿಟ್ಟುಹೊರಡು ಎಂದು ಆತ ಆಜ್ಞೆಮಾಡಿದ' ಎಂದು ಮುಂತಾದ ವಾಕ್ಯಗಳನ್ನು ಇದಕ್ಕೆ ಉದಾಹರಣೆಯಾಗಿ ಇಲ್ಲಿ ನೋಡಬಹುದು. ಇಂತಹ ವಾಕ್ಯಗಳನ್ನು ಹೇಳಿದಾಗ ಅದನ್ನು ಕೇಳಿದ ವ್ಯಕ್ತಿ ಇದರಿಂದ ತೃಪ್ತನಾಗದೇ"ಆತ ನಿಮಗೆ ಹೇಳಿದ್ದೇನು? ಅದೇ ಶಬ್ದಗಳಲ್ಲಿಯೇ ಹೇಳಿ" ಎಂದು ಪುನಃ ಕೇಳುವುದು ಸಾಧ್ಯ. ಇದು ಅನುಚಿತವೇನೂ ಅಲ್ಲ. ಆದರೆ ತಟ್ಟನೇ ವ್ಯಕ್ತಿಯ ಗುರುತು ಸಿಗುವಂತಹ, ಇಲ್ಲವೇ, ಸಮಸ್ಯೆಯೊಂದಕ್ಕೆ ತಟ್ಟನೇ ಪರಿಹಾರವೊಂದು ಹೊಳೆದಂತಹ ಮಾನಸಿಕ ಕ್ರಿಯೆ ನಡೆದ ಸಂದರ್ಭಗಳನ್ನು ಇದರೊಂದಿಗೆ ಹೋಲಿಸಿ. "ನಿನ್ನೆ ನನ್ನ ಆಫೀಸಿನಲ್ಲಿಯ ರಹಸ್ಯಪತ್ರವನ್ನು ಓದಿದವನು ಆಫೀಸಿನ ಕಸ್ಟೋಡಿಯನ್, ಜೋನ್ಸ್ ಎನ್ನುವುದು ನಿನ್ನೆ ರಾತ್ರಿ ನನ್ನ ಮನಸ್ಸಿಗೆ ಇದ್ದಕ್ಕಿದಂತೆ ಹೊಳೆಯಿತು" ಎಂದು ನಿಮಗೆ ಹೇಳಿದೆ ಎಂದಿಟ್ಟುಕೊಳ್ಳಿ. ಆಗ 'ಅದು ಯಾವ ಶಬ್ದ/ವಾಕ್ಯಗಳಲ್ಲಿ ಹೊಳೆಯಿತು ?" ಎಂದು

ಕೇಳುವುದು ಉಚಿತವಾಗುತ್ತದೆಯೇ ? ಕೆಲವೊಮ್ಮೆ ''...ಹೀಗೊಂದು ಒಳಧ್ವನಿ ಹೇಳಿತು'' ಎಂದೇನೋ ನಾವು ಹೇಳುವುದುಂಟು. ಆದರೆ ಇದು 'ಹೊಳೆ'ಯುದರ ವರ್ಣನೆಯಾಗುತ್ತದೆಯೇ ಹೊರತು 'ಹೊಳೆದ ಶಬ್ದಗಳಲ್ಲ.

ಇಂತಹ ಸಂದರ್ಭಗಳಲ್ಲಿ ಶಬ್ದ-ವಾಕ್ಯಗಳನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಬಾರದೆಂದೇನೂ ಇದರ ಅರ್ಥವಲ್ಲ. ಅಥವಾ ಸ್ಪಷ್ಟವಾಗಿ ಅವುಗಳನ್ನು ಬಾಯಲ್ಲಿ ಉಚ್ಚರಿಸಲೂಬಹುದು. ಸಂಗತಿಯೊಂದು ಥಟ್ಟನೆ ಮನಸ್ಸಿನಲ್ಲಿ ಹೊಳೆದಾಗ, ''ಅಯ್ಯೋ ನಾನಿದನ್ನು ಮೊದಲೇ ಯೋಚಿಸಿರಲೇ ಇಲ್ಲವಲ್ಲಾ!'' ಎಂದೋ ಅಥವಾ ಮತ್ತೇನನ್ನೋ ಹೇಳಬಹುದು. ಆದರೆ ಇದು ಸಂಗತಿಯು ಹೊಳೆದ ಸಂದರ್ಭದಲ್ಲಿ ಅದರ ಜೊತೆಗೆ ಹುಟ್ಟುವ ವಾಕ್ಯವೇ ಹೊರತು 'ಹೊಳೆ'ಯುವುದೇ ಈ ವಾಕ್ಯದ ಮೂಲಕ ಅಲ್ಲ. ಕೆಲವರಿಗೆ ಕೈಯಿಂದ ತಾಳಹಾಕದೇ ಹಾಡನ್ನು ಗುನುಗುವುದಾಗಲೀ ರಾಗವನ್ನು ಮನಸ್ಸಿಗೆ ತಂದುಕೊಳ್ಳುವುದಾಗಲೀ ಸಾಧ್ಯವಾಗದು. ಹಾಗೆಯೇ ಕೆಲವರಿಗೆ, ಮನಸ್ಸಿನಲ್ಲಿ ವಾಕ್ಯವೊಂದನ್ನು ಹೇಳಿಕೊಳ್ಳದೇ ಆಲೋಚಿಸುವುದು ಕಷ್ಟ. ಆದರೆ ಹೇಗೆ ತಾಳಹಾಕುವುದಕ್ಕಿಂತ ಗುನುಗುವುದು ಬೇರೆಯೋ ಹಾಗೆಯೇ ಶಬ್ದಗಳಲ್ಲಿ ಕಲ್ಪಿಸಿಕೊಳ್ಳುವುದಕ್ಕಿಂತ (ಅಥವಾ ಅದನ್ನು ಉಚ್ಚರಿಸುವುದಕ್ಕಿಂತ) ಆಲೋಚನೆ ಬೇರೆಯಾಗಿರುತ್ತದೆ.

ಇದೇ ವಿವರಣೆ ರೈಲ್ ಹೇಳು 'ಚಲನಚಿತ್ರದ ಪ್ರದರ್ಶನ' ರೀತಿಯ ಅಥವಾ ಯಾವುದೇ ಪ್ರತಿಮಾತ್ಮಕ ರೀತಿಯ ಆಲೋಚನೆಗೂ ಅನ್ವಯಿಸುತ್ತದೆ. ಆಲೋಚನೆಯೊಂದಿಗೆ ಪ್ರತಿಮೆಗಳೂ ಕಾಣಿಸಿಕೊಳ್ಳಬಹುದು. ಕಾನೂನಿನ ಬಗ್ಗೆ ಆಲೋಚನೆ ನಡೆಸುವಾಗ ಧೂಳು ಹಿಡಿದ ದೊಡ್ಡಗ್ರಂಥವೊಂದೋ ಅತವಾ ನ್ಯಾಯಾಲಯದ ಕೋಣೆಯೋ ಮನಸ್ಸಿನಲ್ಲಿ ಮೂಡಬಹುದು; ಗಣಿತದ ಸಮಸ್ಯೆಯೊಂದರ ಬಗ್ಗೆ ಯೋಚಿಸುತ್ತಿರುವಾಗ ಎಣಿಕೆಯ ಮಣಿಗಳೋ ಅಥವಾ ಸಂಖ್ಯೆಗಳೋ ಮನಸ್ಸಿಗೆ ಕಾಣಬಹುದು. ಇದರರ್ಥ, ಗ್ರಂಥದ ಚಿತ್ರವನ್ನು ಕಲ್ಪಿಸಿಕೊಳ್ಳುವುದರ ಮೂಲಕ ಅಥವಾ ಸಂಖ್ಯೆಯ ಮೂಲಕ ಆಲೋಚಿಸುತ್ತೇವೆ ಎಂದಲ್ಲ.

೮. ಮೇಲೆ ಪ್ರಸ್ತಾಪಿಸಿದ ಕಸ್ಟೋಡಿಯನ್, ಜೋನ್ಸ್‌ನೇ ನನ್ನ ಕಾಗದವನ್ನು ಒಡೆದು ನೋಡಿರಬೇಕು ಎಂಬ ಸಂಗತಿ 'ಹೊಳೆದ ಸಂದರ್ಭದಲ್ಲಿ 'ಅವನೇ ಅದನ್ನು ಒಡೆದಿರಬೇಕು'' ಎಂಬ ವಾಕ್ಯ ಮನಸ್ಸಿನಿಂದ ಹೊರಟಿತು ಎನ್ನೋಣ. ಇಲ್ಲಿ ಒಂದು ಸಮಸ್ಯೆ ಎದುರಾಗುತ್ತದೆ. ಸಾಮಾನ್ಯ ಮಾತುಕತೆಯಲ್ಲಿ 'ಅವನು' ಎಂಬುದು ಅದಕ್ಕೆ ಮೊದಲು ಪ್ರಸ್ತಾಪಿಸಿದ ವ್ಯಕ್ತಿಯೊಬ್ಬನನ್ನು ನಿರ್ದೇಶಿಸಲು ಬಳಕೆಯಾಗುತ್ತದೆ. ಕೇಳುವ ವ್ಯಕ್ತಿ ಹಿಂದಿನ ಪ್ರಯೋಗಗಳನ್ನು ಗಮನಿಸಿ 'ಅವನು' ಯಾರೆಂಬುದನ್ನು ತಿಳಿದುಕೊಳ್ಳಬೇಕಾಗುತ್ತದೆ. ಆದರೆ ತನಗೇ ತಾನೇ ಹೇಳಿಕೊಳ್ಳುವಾಗ 'ಅವನೇ' ಎಂಬ ನಿರ್ದೇಶಕ ಪದವನ್ನು ಬಳಸುವ ಔಚಿತ್ಯವಾದರೂ ಏನು ? (ಇಲ್ಲಿ ಹೇಳುವವನವೇ ಕೇಳುವವನೂ ಆಗಿರುವುದರಿಂದ 'ತಿಳಿದುಕೊಳ್ಳುವುದು' ಎಂಬುದಕ್ಕೆ ಅರ್ಥವೇ ಇಲ್ಲ) ''ಅವನೇ...'' ಎಂಬುದರ ಬದಲಾಗಿ 'ಆ ಮನುಷ್ಯನೇ' ಅಥವಾ 'ಕಸ್ಟೋಡಿಯನ್‌ನೇ ' ಈ ಮೊದಲಾದ ಪದಗಳನ್ನು ಕಲ್ಪಿಸಿಕೊಂಡಾಗಲೂ ಇದೇ ಪ್ರಶ್ನೆಯನ್ನು ಹಾಕಬಹುದು.

9. ಸಂದಿಗ್ಧ ವಾಕ್ಯಗಳ ವಿಷಯದಲ್ಲಿಯೂ ಮಾತು - ಮತ್ತು ಆಲೋಚನೆಗಳ ನಡುವೆ ಇಂತಹುದೇ ಅದ ವೈರುದ್ಧ್ಯವಿದೆ. (ಈ ಸಂದಿಗ್ಧತೆ ವಾಕ್ಯರಚನೆಯಿಂದಾಗಿರಬಹುದು ಅಥವಾ

ಶಬ್ದಾರ್ಥದಿಂದಲೂ ಆಗಿರಬಹುದು ) ಉದಾಹರಣೆಗೆ, "ನಿನ್ನೆ ಧಾರವಾಡದಲ್ಲಿ ನನ್ನ ಕ್ಷೌರವಾಯಿತು" ಎಂದು ಹೇಳಿದೆ ಎಂದುಕೊಳ್ಳೋಣ. ಸಂದರ್ಭವನ್ನನುಸರಿಸಿ ಕೇಳುಗ ಇಲ್ಲಿ 'ಕ್ಷೌರ' ಎಂಬುದನ್ನು ಒಂದು ರೀತಿಯ ಕ್ರಿಯೆ ಅಥವಾ ಮೋಸ ಎಂದು ಅರ್ಥೈಸುತ್ತಾನೆ. ಅಥವಾ ನಾನು ಉದ್ದೇಶಿಸಿದ ಅರ್ಥವನ್ನು ತಿಳಿದುಕೊಳ್ಳುತ್ತಾನೆ. ಹಾಗೂ ಅದು ನಿಜವೋ ಸುಳ್ಳೋ ಎಂಬುದನ್ನೂ ಪರೀಕ್ಷಿಸಬಹುದು. ಇದೇ ವಾಕ್ಯವನ್ನು ವ್ಯಕ್ತಿಯೊಬ್ಬ ತನಗೇ ತಾನೇ ಹೇಳಿಕೊಂಡಾಗ ( -ಆಲೋಚನೆಯಲ್ಲಿ ) ಹೇಳುಗನೇ ಇಲ್ಲಿ ಕೇಳುಗನೂ ಆದ್ದರಿಂದ ಯಾವ ಅರ್ಥ ಇಲ್ಲಿ ಉದ್ದಿಷ್ಟವಾದುದು ಎಂದು ನಿರ್ಧರಿಸುವುದು ಹೇಗೆ? ಅಲ್ಲದೇ ಇದು ಅಸತ್ಯವಾಗಿದ್ದರೆ ಅದು ಮನಸ್ಸಿನಲ್ಲಿ ನಿರೂಪಿತವಾಗುವುದು ಹೇಗೆ ? "ನಿನ್ನೆ...ಕ್ಷೌರವಾಯಿತು" – " ಇದು ಅಸತ್ಯ" ಎಂತಲೇ ? ಮೊದಲ ವಾಕ್ಯವನ್ನು ಹೇಳಿಕೊಳ್ಳುವಾಗಲೇ ಮನಸ್ಸಿಗೆ ಅದು ಅಸತ್ಯವೆಂದು ತಿಳಿಯದೇ? ಸಂದಿಗ್ಧವಾಕ್ಯದ ವಿಷಯದಲ್ಲಿಯೂ ಇದೇ ಸಮಸ್ಯೆಯಿದೆ.

ಸಾರಾಂಶ : ಭಾಷೆಯಬಳಕೆಯಲ್ಲಿ ಸಂದಿಗ್ಧತೆಗಳಿರುವುದು ಸಾಧ್ಯ. ಇಂತಹ ಸಂದಿಗ್ಧತೆಗಳು ಆಗದಂತೆ ನೋಡಿಕೊಳ್ಳುವುದು ಮಾತನಾಡುವ ವ್ಯಕ್ತಿಗೆ ಬಿಟ್ಟದ್ದು ಹಾಗೂ ಇದ್ದರೆ ಅದನ್ನು ಸರಿಯಾಗಿ ಅರ್ಥೈಸುವುದು ಮಾತನಾಡುವ ವ್ಯಕ್ತಿಗೆ ಬಿಟ್ಟದ್ದು ಹಾಗೂ ಇದ್ದರೆ ಅದನ್ನು ಸರಿಯಾಗಿ ಅರ್ಥೈಸುವುದು ಕೇಳುಗನಿಗೆ ಬಿಟ್ಟದ್ದು. ಇಂತಹ ಸಂದರ್ಭಗಳಲ್ಲಿ ಹೇಳುಗ-ಕೇಳುಗರು ಅದು ಬಳಕೆಯಾದ ಸಂದರ್ಭವನ್ನು ಗಮನಿಸುವುದು ಅಗತ್ಯ. ಆಲೋಚನೆಯಲ್ಲಿಯೂ ಭಾಷೆಯ ಬಳಕೆಯಾಗುತ್ತಿದ್ದರೆ ಅಲ್ಲಿಯೂ ಸಂದಿಗ್ಧತೆ ಇರುವುದು ಸಾಧ್ಯ; ಚಿಂತಕನು ಅದನ್ನು ಬಿಡಿಸುವ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ ಹಾಗೂ ಅವನು ಇದಕ್ಕಾಗಿ ಸಂದಿಗ್ಧ ರೂಪಗಳು ಬಳಕೆಯಾದ ಸಂದರ್ಭಗಳನ್ನು ಗಮನಿಸಬೇಕಾಗುತ್ತದೆ. – ಇವೆಲ್ಲ ಅಸಂಬದ್ಧಗಳಾಗಿ ತೋರುತ್ತವೆ.

10. ಸಾಮಾನ್ಯವಾಗಿ ಜನರು ಇತರ ವಿಷಯಗಳಲ್ಲಿ. ತಪ್ಪುಮಾಡುವುದು ಸಾಧ್ಯವಿರುವಂತೆ ಭಾಷೆಯ ಬಳಕೆಯಲ್ಲಿಯೂ ಮಾಡುವುದು ಸಾಧ್ಯ. ಶಬ್ದಗಳ ಬಳಕೆ, ವಾಕ್ಯಗಳ ರಚನೆಯಲ್ಲಿ ತಪ್ಪು ಮಾಡಬಹುದು; ಶಬ್ದಗಳು ಸ್ಥಳಾಂತರಗೊಳ್ಳಬಹುದು ಅಥವಾ ತಡೆ ತಡೆದು ಹೊರಡಬಹುದು ಇತ್ಯಾದಿ. ಇದೇ ರೀತಿ ಕೇಳುಗರಿಂದಲೂ ಪ್ರಮಾದವಾಗಬಹುದು. ಸರಿಯಾಗಿ ಕೇಳಿಸಿ ಕೊಳ್ಳದಿರಬಹುದು, ಕೇಳಿಸಿಕೊಂಡರೂ ತಪ್ಪಾಗಿ ಅರ್ಥೈಸಬಹುದು. ಇತ್ಯಾದಿ.

ಪ್ಲೇಟೋನ ಸಿದ್ಧಾಂತವನ್ನೊಪ್ಪಿಕೊಂಡಲ್ಲಿ, ಆಲೋಚನೆಯ ಸಂದರ್ಭದಲ್ಲಿ ಈ ಸಾಧ್ಯತೆ ಸಮಸ್ಯೆಯನ್ನು ಹುಟ್ಟುಹಾಕುತ್ತದೆ. ಆಲೋಚನೆಯೆಂಬುದು ತನಗೇ ತಾನು ಹೇಳಿಕೊಳ್ಳುವುದಾದರೆ ಮೇಲೆ ಹೇಳಿದ ಮಾತನಾಡುವ ವ್ಯಕ್ತಿ ಅಥವಾ/ ಹಾಗೂ ಅದನ್ನು ಕೇಳುವ ವ್ಯಕ್ತಿ ಎಸಗಬಹುದಾದ ತಪ್ಪನ್ನೇ ಇಲ್ಲಿ ಆಲೋಚಿಸುವ ವ್ಯಕ್ತಿಯೂ ಮಾಡಬೇಕಲ್ಲವೇ ? ಆಲೋಚಿಸುವ ವ್ಯಕ್ತಿ ತಾನೇ ಹೇಳಿದುದನ್ನು ತಾನೇ (ಕೇಳುಗನಾಗಿ) ತಪ್ಪಾಗಿ ಕೇಳಿಸಿಕೊಳ್ಳುವುದೆಂದರೇನು ? ತನ್ನ ಮಾತನ್ನು ತಾನೇ ತಪ್ಪಾಗಿ ಅರ್ಥೈಸುವುದು ಹೇಗೆ ಸಾಧ್ಯ ?

11. ಪ್ಲೇಟೋನ ವಾದವು ತಪ್ಪಾದುದು ಹಾಗೂ ಅಸಂಭವನೀಯವಾದದನ್ನು ಹೇಳುತ್ತದೆ ಎಂಬುದಕ್ಕೆ ಮುಖ್ಯವಾದ ಕಾರಣಗಳನ್ನು ನೀಡಿದ ಮೇಲೆ, ಈಗ ಕೊನೆಯದಾಗಿ, ಅದನ್ನು ಪುಷ್ಟೀಕರಿಸುವ ಕೆಲವು ವಿಚಾರಗಳನ್ನು ಇಲ್ಲಿ ಹೇಳುತ್ತೇನೆ.

ಕೆಲವೊಮ್ಮೆ ''ನೀವು ಯಾವ ಭಾಷೆಯಲ್ಲಿ ಆಲೋಚಿಸುತ್ತೀರಿ?'' ಎಂದು ವ್ಯಕ್ತಿಯೊಬ್ಬನನ್ನು ಕೇಳಬಹುದಾದರೂ ಅವನಿಂದ'' ನಾನು ಇಂಗ್ಲಿಷಿನಲ್ಲಿ ಆಲೋಚಿಸುತ್ತೇನೆ. ಆದರೆ ನನ್ನದು ಶುದ್ಧ ಇಂಗ್ಲಿಷ್ ಅಲ್ಲ. ಆಗಾಗ ಶಬ್ದಪ್ರಯೋಗ, ವ್ಯಾಕರಣಗಳ ತಪ್ಪು ಮಾಡುತ್ತೇನೆ. ಅದಕ್ಕಾಗಿ ನಾನು ನಿಧಾನವಾಗಿ ತುಂಬ ಸರಳವಾಕ್ಯಗಳಲ್ಲಿ ಆಲೋಚಿಸುತ್ತೇನೆ '' ಎಂಬಂತಹ ಉತ್ತರವನ್ನು ನಿರೀಕ್ಷಿಸಲಾರೆವು.''ಇಂಗ್ಲಿಷಿನಲ್ಲಿ ಆಲೋಚಿಸು'ವುದೆಂದರೆ ನೇರವಾಗಿ ನಾನು ಇಂಗ್ಲಿಷಿನಲ್ಲಿ ಹೇಳಬಲ್ಲೆ ಎಂದರ್ಥವಲ್ಲದೆ ಬೇರೊಂದು ಭಾಷೆಯಲ್ಲಿ ಮೊದಲು ಹೇಳಿಕೊಂಡು ಆನಂತರ ಅದನ್ನು ಇಂಗ್ಲಿಷಿಗೆ ಅನುವಾದಿಸುತ್ತೇನೆ ಎಂಬರ್ಥವಲ್ಲ ಎನ್ನುವುದಷ್ಟೇ ಈ ಮಾತಿನ ತಾತ್ಪರ್ಯವಾಗಿ ನನಗೆ ತೋರುತ್ತದೆ.

ಆಗಾಗ ನಾವು'' ನಾನು ಹೇಳಬೇಕೆಂದಿರುವುದಕ್ಕೆ ನನಗೆ ಸರಿಯಾದ ಶಬ್ದಗಳೇ ಸಿಗುತ್ತಿಲ್ಲ'' ಎಂಬಂತಹ ಮಾತನ್ನು ಕೇಳುತ್ತೇವೆ. ಇದರರ್ಥ ಈ ಮಾತನಾಡುತ್ತಿರುವವನಿಗೆ ವಿಷಯ ಗೊತ್ತಿದೆ ಆದರೆ ಅಭಿವ್ಯಕ್ತಿಸಲು ಶಬ್ದವಿಲ್ಲ ಎಂಬುದು; ಸ್ವಲ್ಪ ಹೊತ್ತಿನ ಮೇಲೆ ಆತ ಹೇಳಬಹುದು : ''ಓಹ್! ಸಿಕ್ಕಿತು! ಅದು...'' ಈಗ ವಿಚಾರವನ್ನು ಹೇಳಲು ಯೋಗ್ಯವಾದ ಶಬ್ದ ದೊರೆಯಿತು. ಇಲ್ಲ ''ಯೋಗ್ಯವಾದ'' ಎಂದರೆ ಆತನ ಆಲೋಚನೆಯನ್ನು ಹೇಳುವ ಎಂದರ್ಥ. ಅಂದರೆ ಆಲೋಚನೆಯು ಶಬ್ದದಿಂದ ಬೇರೆ ಎಂದಂತಾಯಿತು.

ಹೀಗೆಯೇ, ಅನುವಾದ ಮಾಡುವ ಸಂದರ್ಭಗಳಲ್ಲಿಯಾರು ಶಬ್ದಕ್ಕೆ ಶಬ್ದವನ್ನಿಟ್ಟು ಅನುವಾದ ಮಾಡಲಾರರು; ಅದು ಸಾಧ್ಯವಿಲ್ಲ. ಒಂದು ಭಾಷೆಯ ವಾಕ್ಯವೊಂದರ 'ಅರ್ಥ'ವನ್ನು ಗ್ರಹಿಸಿ, ಅದನ್ನೇ ಹೇಳುವ ಇನ್ನೊಂದು ಭಾಷೆಯ ವಾಕ್ಯವನ್ನು ಪಡೆಯಲು ಪ್ರಯತ್ನಿಸಲಾಗುತ್ತದೆ. ಅನುವಾದವೆನ್ನುವುದು ಒಂದು ಚಿತ್ರವನ್ನು ಯಾವುದಾದರೂ ವಿಧಾನದಿಂದ ಮತ್ತೊಂದನ್ನಾಗಿ ಪ್ರೊಜೆಕ್ಟ್ ಮಾಡಿದಂತಲ್ಲ; ಮೊದಲಿನ ಚಿತ್ರ ಹೇಳುವ ಸಂಗತಿಯನ್ನೇ ಬೇರೊಂದು ಮಾಧ್ಯಮದಲ್ಲಿ ಬೇರೊಂದು ಚಿತ್ರವನ್ನು ಬರೆದಂತೆ ಅದು.

(ಈ ಲೇಖನವು ಜಿನೋ ವೆಂಡ್ಲರ್ ಅವರ ಲೇಖನದ ಸಂಗ್ರಹಾನುವಾದವಾಗಿದೆ)

# ಕನ್ನಡ ವ್ಯಕ್ತಿನಾಮಗಳ ಭಾಷಿಕ ವಿಶ್ಲೇಷಣೆ

ಡಾ॥ ಆರ್. ರಾಮಕೃಷ್ಣ

೦. ಈ ಪ್ರಪಂಚದಲ್ಲಿಹೆಸರಿಲ್ಲದ ವ್ಯಕ್ತಿ ಯಾರೂ ಇಲ್ಲ. ಭುವಿಗೆ ಬಂದ ಬಳಿಕ ಯಾವ ವ್ಯಕ್ತಿಯೇ ಆಗಲಿ, ಉನ್ನತಮಟ್ಟದಲ್ಲಿರಲಿ ಕೆಳಮಟ್ಟದಲ್ಲಿರಲಿ, ಆ ವ್ಯಕ್ತಿಗೆ ಹೆಸರಿಲ್ಲದಿರುವುದು ಸಾದ್ಯವಿಲ್ಲ ಎಂಬ ಮಾತು ಒಡಿಸ್ಸಿ ಕೃತಿಯಿಂದ ತಿಳಿದು ಬರುತ್ತದೆ. ಮಾನವನ ಸುದೀರ್ಘ ಇತಿಹಾಸದಲ್ಲಿ ವ್ಯಕ್ತಿನಾಮಗಳಿಲ್ಲದ ಯಾವುದೇ ಸಮಾಜ ಸಮುದಾಯ ಕಂಡುಬಂದಿಲ್ಲ. ಹುಟ್ಟಿದ ಮಗುವಿಗೆ ಒಂದುಹೆಸರು, ನಿರ್ಮಿಸಿದ ಊರಿಗೆ ಒಂದು ಹೆಸರು, ಸಾಕುಪ್ರಾಣಿಗಳಿಗೂ ಹೆಸರು ಇದ್ದೇ ಇರುತ್ತದೆ. ಹುಟ್ಟು ಹೆಸರಿನೊಂದಿಗೆ ಕೆಲವೊಮ್ಮೆ ಅಡ್ಡ ಹೆಸರೂ ಸೇರಿಕೊಂಡಿರುತ್ತದೆ. ಹುಟ್ಟು ಹೆಸರನ್ನು ಸಾಂಪ್ರದಾಯಕವಾಗಿ ಇಟ್ಟರೆ, ಅಡ್ಡಹೆಸರನ್ನು ವ್ಯಕ್ತಿಯ ರೂಪು, ಗಾತ್ರ ನಡತೆಗಳಿಗೆ ಸಂಬಂಧಿಸಿದಂತೆ ಕಟ್ಟಿರುತ್ತಾರೆ. ಅಂದರೆ ಅಡ್ಡ ಹೆಸರು ಅರ್ಜಿಸಿದ್ದು. ಇನ್ನು ಹುಟ್ಟು ಹೆಸರಿನಲ್ಲೇನಿದೆ? ಅದು ಪಂಚಾಂಗ ತೆಗೆದು ಗುಣಿಸಿ, ನಕ್ಷತ್ರವನ್ನು ಗುರುತಿಸಿ ಪುರೋಹಿತರು ಇಟ್ಟದ್ದು ಅಥವಾ ಮನೆದೇವರ ಕುಲದೈವದ ಹೆಸರನ್ನೇ ಮಗುವಿಗೆ ಕರೆದದ್ದು ಇಲ್ಲವೆ ವಂಶದ ಹಿರಿಯರ ಹೆಸರನ್ನು ನೆಪಿಗಾಗಿ ಮನೆಯವರೇ ಇಟ್ಟದ್ದು. ಗ್ರಾಮೀಣ ಪರಿಸರದಲ್ಲಿ ಈಗಲೂ 'ಹೆಸರು ಬಲಕ್ಕೆ ನೋಡೇಳಿ ಸ್ವಾಮಿ' ಎಂದು ಜೋಯಿಸರಿಗೆ ದುಂಬಾಲು ಬೀಳುವವರುಂಟು. ಹೆಸರು ಬಲ ನೋಡಿಯೇ ಹೆಣ್ಣು ಗಂಡಿನ ಮದುವೆ ಕಾರ್ಯಕಲಾಪಗಳನ್ನು ನಿರ್ಧರಿಸುವವರು ನಮ್ಮ ಜನ. ಜನ್ಮ ನಕ್ಷತ್ರ, ದಿನ ತಿಳಿಯದಿದ್ದರೂ ಹೆಸರಿನ ಮೊದಲ ಅಕ್ಷರದ ಆಧಾರದಿಂದಲೆ ಜೋಯಿಸರು ಯುಕ್ತಾಯುಕ್ತ ಫಲಗಳನ್ನು ಹೇಳುವುದಿಲ್ಲವೆ ? ಆದುದರಿಂದ ಹೆಸರು ವ್ಯಕ್ತಿಯನ್ನು ಗುರುತಿಸಲು ಮಾತ್ರ ಇಟ್ಟಂಥದ್ದಲ್ಲ ಎಂಬಂಶ ಸ್ಪಷ್ಟವಾಗುತ್ತದೆ. ಅದು ಜೀವನದಲ್ಲಿ ಅವಿನಾ ಸಂಬಂಧವನ್ನು ಇಟ್ಟುಕೊಂಡ ಸಾರ್ಥಕನಾಮ. ಜೀವನವನ್ನು ರೂಪಿಸುವುದು, ನಡೆಸುವುದು, ಕೆಡಿಸುವುದು ಕೂಡ ಹೆಸರಿನಿಂದ ಸಾಧ್ಯಎಂಬ ವಿಚಾರ ಎಲ್ಲರಿಗೂ ತಿಳಿದಿರುವಂಥದು.

೧.೦ ವ್ಯಕ್ತಿನಾಮಗಳ ಅಧ್ಯಯನ ಬಲು ಸ್ವಾರಸ್ಯದ ವಿಷಯ. ದ್ರಾವಿಡ ಭಾಷೆಗಳ ಹೆಸರುಗಳ ರಾಚನಿಕ ಅಧ್ಯಯನ ಸ್ವಾರಸ್ಯಕರವಾದುದು ಎಂಬುದಾಗಿ ಶಾಸನ ತಜ್ಞ ಡಾ॥ ಬಾರ್ನೆಟ್ ಅಭಿಪ್ರಾಯಪಟ್ಟಿದ್ದಾನೆ. ಮತದಾರರ ಪಟ್ಟಿಗಳು, ಹಾಜರಾತಿ ಪುಸ್ತಕಗಳು, ದೈನಿಕಗಳು, ಗ್ರಾಮಲೆಕ್ಕಿಗರ ದಾಖಲೆಗಳು ಮೊದಲಾದವು ವ್ಯಕ್ತಿನಾಮಾಧ್ಯಯನಕ್ಕೆ ಆಕರಗಳು. ಇವುಗಳ ಅಧ್ಯಯನದಿಂದ ಭಾಷಾವಿಜ್ಞಾನಿ ಭಾಷಿಕ ಸ್ವೀಕರಣ, ಪ್ರಸರಣ, ಸಂಸ್ಕೃತೀಕರಣಗಳನ್ನು ಶೋಧಿಸಬಹುದು. ವ್ಯಕ್ತಿ

ಸಮುದಾಯದ ಸಾಂಸ್ಕೃತಿಕ ಇತಿಹಾಸವನ್ನು ರೂಪಿಸಬಹುದು, ನಾಮನಿಷ್ಪತ್ತಿ ತಿಳಿಯಬಹುದು. ಈ ಇಟ್ಟನಲ್ಲಿ ಭಾಷಿಕ ಸಂರಚನೆಯೂ ಪ್ರತಿಫಲಿತವಾಗುತ್ತದೆ. ಇಟ್ಟ ಹೆಸರೊಂದರಲ್ಲಿ ಅಕ್ಷರ ವಿನ್ಯಾಸ, ಧ್ವನಿಮಾಗಳ ವಿತರಣೆ, ಸಂಯುಕ್ತಾಕ್ಷರಗಳ ರಚನೆ ಮೊದಲಾದ ಅಂಶಗಳನ್ನು ಪರಿಶೀಲಿಸಬಹುದು. ಕನ್ನಡ ಮಾತನಾಡುವ ಹಿಂದೂಗಳಲ್ಲಿ ಏಕಾಕ್ಷರ ಹೆಸರುಗಳಿಲ್ಲ. ಎರಡರಿಂದ ಒಂಬತ್ತು ಅಕ್ಷರಗಳ ಅಕ್ಷರ ವಿನ್ಯಾಸವಿರುವ ಹೆಸರುಗಳಂಟು.

| | |
|---|---|
| ಸಿರಿ | ಎರಡಕ್ಷರ ವಿನ್ಯಾಸ |
| ರಜನಿ | ಮೂರಕ್ಷರ ವಿನ್ಯಾಸ |
| ಬಿಳಿಗಿರಿ | ನಾಲ್ಕಕ್ಷರ ವಿನ್ಯಾಸ |
| ವರದರಾಜ | ಐದಕ್ಷರ ವಿನ್ಯಾಸ |
| ರಂಗನಾಥರಾಯ | ಆರಕ್ಷರ ವಿನ್ಯಾಸ |
| ಬಾಲಶ್ರೀನಿವಾಸಯ್ಯ | ಏಳಕ್ಷರ ವಿನ್ಯಾಸಸ |
| ತುಳಸೀ ವಾಸುದೇವಯ್ಯ(ಗಂ) | ಎಂಟಕ್ಷರ ವಿನ್ಯಾಸ |
| ಕರಿವರದರಾಯ ಸ್ವಾಮಿ | ಒಂಬತ್ತಕ್ಷರ ವಿನ್ಯಾಸ |

೧.೧. ಹುಟ್ಟು ಹೆಸರಿನೊಂದಿಗೆ ಅನೇಕರಿಗೆ ಸ್ಥಳನಾಮಗಳೂ ಸೇರಿಕೊಂಡಿರುತ್ತವೆ. ಪೂರ್ವಪ್ರತ್ಯಯ ರೂಪದದಲ್ಲಿ ಇವು ಹೆಸರಿಗೆ ಸೇರುತ್ತವೆ. ಉದಾ : ಹಂಡ್ರ ಕಳ್ಳಿ ಉಪಾದ್ರು ಗಣಪತಪ್ಪ. ಇದರಲ್ಲಿ ಹಂಡ್ರಕಳ್ಳಿ ಸ್ಥಳನಾಮ. ಚಾಮರಾಜ ನಗರ ತಾಲ್ಲೋಕು ಮಾದಾಪುರ ಮಂಡಲ ಪಂಚಾಯಿತಿ ಕೇಂದ್ರದ ಕಂದಾಯ ಗ್ರಾಮ. ಉಪಾದ್ರು (ಉಪಾಧ್ಯಾಯರು)ವೃತ್ತಿ. ಜೊತೆಗೆ ಜನಪದ ಚಿಕಿತ್ಸಕರೂ ಕೂಡ. ಗಣಪತಪ್ಪ ಹುಟ್ಟು ಹೆಸರು. ಅನೇಕ ವೇಳೆ ತುರ್ತುಪರಿಸ್ಥಿತಿಗಳಲ್ಲಿ ಹಂಡ್ರಕಳ್ಳಿ ಕೆಲ್ಸಿ ಪುಟ್ಸಾಮಿ. ಮೋಳೆ (ಚೆನ್ನೀಪುರದ ಮೋಳೆ)ಕೂಡ ಮಾದಾಪುರ ಮಂಡಲ ಪಂಚಾಯಿತಿ ಕೇಂದ್ರದ ಒಂದು ಕಂದಾಯ ಗ್ರಾಮ. ಕೆಲ್ಸಿ (ಕ್ಷೌರಿಕ)ವೃತ್ತಿ. ಪುಟ್ಸಾಮಿ ಹೆಸರು. ಇಂತೆಯೇ ಮತ್ತೊಂದು ಉದಾಹರಣೆ ಗಮನಿಸಬಹುದು–ದೊಡ್ರಾಪೇಟೆ ಶೆಟ್ಟರು ಇಟ್ಟಿಗೆಹಟ್ಟಿ ತಿಮ್ಮಯ್ಯ. ದೊಡ್ರಾಪೇಟೆ (ದೊಡ್ಡರಾಯಪೇಟೆ) ಚಾಮರಾಜನಗರ ತಾಲ್ಲೂಕಿನ ಸಣ್ಣಗ್ರಾಮ. ವೃತ್ತಿಯಿಂದ ಶೆಟ್ಟರು(ನೆಯ್ಗೆ ಕಾಯಕ). ಗ್ರಾಮದಲ್ಲೇ ಮೊತ್ತ ಮೊದಲಿಗೆ ಇಟ್ಟಿಗೆಯಿಂದಲೇ ಹಟ್ಟಿಯನ್ನು ಕಟ್ಟಿದ್ದರಿಂದ, ಇಟ್ಟಿಗೆಹಟ್ಟಿ ಎಂಬುದು ವಿಶೇಷಣರೂಪವಾಗಿ ಅಂಟಿಕೊಂಡಿದೆ. ತಿಮ್ಮಯ್ಯ ವ್ಯಕ್ತಿನಾಮ. ದೊಡ್ರಾಪೇಟೆ ಶೆಟ್ಟರು ಎಂದರೂ ಇಟ್ಟಿಗೆ ಹಟ್ಟಿ ತಿಮ್ಮಯ್ಯ ಎಂದರೂ ತಿಮ್ಮಯ್ಯ ಶೆಟ್ಟರು ಎಂದರೂ ಜನರಿಗೆ ಅರ್ಥವಾಗುತ್ತಿತ್ತು. ಯಾವುದೇ ಗೊಂದಲಕ್ಕೆ ಕಾರಣವಾಗುತ್ತಿರಲಿಲ್ಲ. ಅಂತೆಯೇ ಕುಳ್ಳೂರು ಬೈಲಿಗೆ ಸುಬ್ಬ. ಕುವಳ್ಳೂರು ಗ್ರಾಮ ನಾಮ. ಬೈಲಿಗೆ (ಬೈರಿಗೆ) ವೃತ್ತಿ ಅಂದರೆ ಬಡಗಿ ವೃತ್ತಿ. ಸುಬ್ಬ ವ್ಯಕ್ತಿನಾಮ.

೧.೨. ಇಂದಿನ ದಿನಗಳಲ್ಲಿ ಹುಟ್ಟು ಹೆಸರಿನೊಂದಿಗೆ ಸ್ಥಳನಾಮ ವೃತ್ತಿನಾಮಗಳಿಗೆ ಬದಲಾಗಿ ಪೂರ್ವಪ್ರತ್ಯಯ ರೂಪದಲ್ಲಿ ತಂದೆ ಹೆಸರನ್ನು ಸೇರಿಸಿಕೊಳ್ಳುವ ಪರಿಪಾಠವಿದೆ. ಆದರೂ ಕೆಲವು

ಸಂಪ್ರದಾಯನಿಷ್ಠ ಕುಟುಂಬಗಳಲ್ಲಿ ಹಾಗೂ ಇನ್ನಿತರ ಜಾತಿವರ್ಗದಲ್ಲಿ ಸ್ಥಳನಾಮ ವೃತ್ತಿನಾಮ ವ್ಯಕ್ತಿನಾಮಗಳನ್ನು ಹೊಂದಿರುವ ಹೆಸರುಗಳುಳ್ಳ ಮಂದಿಯಿದ್ದಾರೆ. ಭಾಷೆಯ ಆಕ್ಷರಿಕ ವಿನ್ಯಾಸದೊಡನೆ ಹೆಸರಿನ ರಚನೆಯನ್ನು ಹೋಲಿಸಿ ನೋಡಬಹುದು. ಹೆಸರು (ಹುಟ್ಟುಹೆಸರು) ಕೇಂದ್ರ ಸ್ಥಾನದಲ್ಲಿದ್ದು, ಇದರ ಪೂರ್ವಪ್ರತ್ಯಯ ಸ್ಥಾನದಲ್ಲಿ ಊರ ಹೆಸರು (ಸ್ಥಳನಾಮ) ಬಳಿಕ ತಂದೆಯ ಹೆಸರು (ಪಿತೃನಾಮ), ಅಂತ್ಯಪ್ರತ್ಯಯ ಸ್ಥಾನದಲ್ಲಿ. ಜಾತಿ ವರ್ಗ ಸೂಚಕ ರೂಪಗಳಿರುತ್ತವೆ. ಇದನ್ನು ಸೂತ್ರ ರೂಪದಲ್ಲಿ ಈ ಕೆಳಗಿನಂತೆ ಬರೆಯಬಹುದು :

**ಸೂತ್ರ೧. ( ಊ ) ತಹೆ ( ಜಾ )**

ಈ ಸೂತ್ರದಲ್ಲಿ ಊ - ಊರು ಹೆಸರು, ತ-ತಂದೆಯ ಹೆಸರು, ಹೆ-ಹುಟ್ಟುಹೆಸರು ಮತ್ತು ಜಾ- ಜಾತಿ ಸೂಚಕ ರೂಪ.

ಉದಾ : ಸಿ.ಎಂ. ಮಾರನಾಯಕ-ಚಾಮರಾಜನಗರದ ಮಾರನಾಯಕನ ಮಗ ಮಾರನಾಯಕ. ತಂದೆಯ ಹೆಸರನ್ನೇ ಹಿರಿಮಗನಿಗೆ ಇಟ್ಟಿರುವುದನ್ನಿಲ್ಲಿ ಕಾಣಬಹುದು. ಸೂತ್ರದಲ್ಲಿಯ ಊ ಮತ್ತು ಜಾ ಐಚ್ಛಿಕ ಅಂಶಗಳು. ಆದುದರಿಂದ ಅವನ್ನು ಕಂಸದಲ್ಲಿ ಕೊಟ್ಟಿದೆ. ವಾಂಶಿಕವಾಗಿ ವಿವರಿಸುವಾಗ ಕೆಲವೊಮ್ಮೆ ತಂದೆಯ ಹೆಸರಿನೊಂದಿಗೆ ತಾತ, ಮುತ್ತಾತನ ಹೆಸರೂ ಸೇರುವುದುಂಟು. ಆಗ ಸೂತ್ರವಿನ್ಯಾಸ ಬದಲಾಗುತ್ತದೆ:

**ಸೂತ್ರ:೨ ( ಊ )( ಮು ) ( ತಾ ) ತಹೆ ( ಜಾ )**

ಈ ಸೂತ್ರದಲ್ಲಿ ಮು-ಮುತ್ತಾತ, ತಾ-ತಾ. ಇವು ಕೂಡ ಐಚ್ಛಿಕವಾದ್ದರಿಂದ ಕಂಸಗಳಲ್ಲಿ ಕೊಟ್ಟಿದೆ.

೨.೦ ವ್ಯಕ್ತಿನಾಮವನ್ನು ಅರ್ಥವಿಜ್ಞಾನ (ಸಿಮ್ಯಾಂಟಿಕ್ಸ್) ದೃಷ್ಟಿಯಿಂದ, ಹಲವಾರು ಹೊಸ ವಿಚಾರಗಳು ಬೆಳಕಿಗೆ ಬರುತ್ತಿವೆ. ಮಗುವಿಗೆ ಹೆಸರನ್ನಿಡುವಾಗ ಮಾನವ ಮನಸ್ಸು ಹೇಗೆ ಕೆಲಸ ಮಾಡುತ್ತಿದೆ ? ಪ್ರಕೃತಿಯ ಚರಾಚರ ವಸ್ತುಗಳಲ್ಲಿ ಯಾವುದನ್ನು ಹೆಸರಿಗಾಗಿ ಆಯ್ಕೆ ಮಾಡುತ್ತಾರೆ? ಹೆಣ್ಣು ಮಗುವಿಗೆ ಯಾವ ಹೆಸರು, ಗಂಡು ಮಗುವಿಗೆ ಯಾವ ಹೆಸರು, ಹೆಣ್ಣು ಗಂಡು ಎರಡಕ್ಕೂ ಹೊಂದುವ ಸಮಾನ ಹೆಸರುಗಳಾವುವು ? ಬಣ್ಣಗಳಿಗೆ ಸಂಬಂಧಿಸಿದ ಹೆಸರುಗಳನ್ನು ಇಡುವರೇ ? ಅವುಗಳ ವೈಶಿಷ್ಟ್ಯಗಳಾವುವು ? ಮೊದಲಾದ ವಿಚಾರಗಳ ಕಡೆಗೆ ಗಮನಹರಿಸಬೇಕಾಗುತ್ತದೆ.

೨.೧ ಪುಷ್ಪಲೋಕದ, ಪೂಜಾಗಿಡಗಳ ಬಳ್ಳಿಗಳ, ಸುಗಂಧ ದ್ರವ್ಯಗಳ ಹೆಸರುಗಳು ವ್ಯಕ್ತಿನಾಮಗಳಾಗಿ ಬಳಕೆಗೊಂಡಿವೆ.

ಕನಕ, ಕನಕರಾಜು, ಕಮಲ, ಗುಲಾಬಿ, ಚಂದನ, ಚಂಪಕ, ಚಾರುಲತಾ, ಜಲಜ, ತುಳಸಿ, ತುಳಸೀವಾಸುದೇವಯ್ಯ(ಗಂ), ತೊಳಸಮ್ಮ, ಪದ್ಮಜ, ಮಲ್ಲಿ, ಮಲ್ಲಿಕಾ, ಮಲ್ಲಿಕಾರ್ಜುನ, ಮಲ್ಲೆ, ಮೊಲ್ಲೆ, ರೋಜ, ಲತಾ, ಸಂಪಿಗಮ್ಮ, ಸರೋಜ, ಸರೋಜಿನಿ, ಸೂರ್ಯಕಾಂತಿ, ಸ್ವರ್ಣಲತಾ, ಇ. ಹೆಣ್ಣು ಮಕ್ಕಳಿಗೇ ಹೂವಿನ ಹೆಸರುಗಳು ಹೆಚ್ಚಾಗಿ ಬಂದಿವೆ.

೨.೨ ಬಣ್ಣಗಳ ವರ್ಗಕ್ಕೆ ಸಂಬಂಧಿಸಿದಂತೆ ವ್ಯಕ್ತಿನಾಮಗಳು : ಕರಿಯ, ಕರಿಯಮ್ಮ, ಕೆಂಪ, ಕೆಂಪಿ, ನೀಲಿ, ನೀಲಮ್ಮ, ನೀಲಕ್ಕ, ನೀಲಯ್ಯ, ಬಿಳಿಗಿರಿ, ಬೆಳ್ಳಿ, ಬೆಳ್ಳಮ್ಮ ಇ.

೨.೬ ಆರಾಧ್ಯದೈವ ಸುಬ್ರಹ್ಮಣ್ಯನ ಹಲವಾರು ಹೆಸರುಗಳ ಪೈಕಿ ಷಣ್ಮುಖ ಕೂಡ ಒಂದು. ಇದರಿಂದ ನಿಷ್ಪನ್ನವಾಗಿರುವ ಸ್ತ್ರೀನಾಮ : ಷಣ್ಮುಖಿಮ್ಮ.

೨.೪ ಪ್ರಕೃತಿಯಲ್ಲಿಯ ಅನೇಕ ವಸ್ತುವಿಶೇಷಗಳಿಗೆ ಸಂಬಂಧಿಸಿದಂತೆ ವ್ಯಕ್ತಿ ನಾಮಗಳು:

ಇಳಾ, ಕಿರಣ (ಹೆ-ಗಂ), ಗಿರಿ, ಗಿರಿಜ, ತೋಟಪ್ಪ, ತೋಟದಪ್ಪ, ಪ್ರಕಾಶ, ಮಂಜು, ಮಂಜುನಾಥ, ಮಂಜುಳ,ಮೇಘನಾ, ಮೇಘನಾದ, ಲೋಕನಾಥ, ಲೋಕಮಣಿ, ಲೋಕೇಶ ಇ.

೨.೫ ಗ್ರಹ ತಾರೆಗಳ ಹೆಸರುಗಳೂ ವ್ಯಕ್ತಿನಾಮಗಳಾಗಿವೆ.

೨.೫.೧ ಸೂರ್ಯ (ಕಾಂತ), ಸೂರ್ಯ (ನಾರಾಯಣ), ಗುರಪ್ಪ, ಗುರಮ್ಮ, ಗುರು, ಗುರುನಾಥ್, ಗುರುಸ್ವಾಮಿ,ಚಂದ್ರ, ಚಂದ್ರಿ, ಚಂದ್ರಕಾಂತ, ಚಂದ್ರನಾಥ್, ಚಂದ್ರಿಕಾ, ಚಂದ್ರಕಲಾ, ಮಂಗಳ, ಸರ್ವಮಂಗಳಬೆಳ್ಳಿ, ಇ.

೨.೫.೨ ಅನುರಾಧ, ಅಶ್ವಿನಿ, ರೇವತಿ, ರೋಹಿಣಿ, ಸ್ವಾತಿ ಇ.

೨.೬ ಅಷ್ಟದಿಕ್ಕುಗಳ ಪೈಕಿ ಕೆಲವು ಹೆಸರಾಗಿ ಬಳಕೆಗೊಂಡಿರುವುವು. : ಈಶಾನ್ಯ(ಹೆ), ಉತ್ತರ (ದೇವಿ), ದಕ್ಷಿಣಾಮೂರ್ತಿ ಇ.

೨.೭ ಗ್ರೀಷ್ಮ ಋತು ಬಿಟ್ಟು ಉಳಿದೆಲ್ಲವೂ ಹೆಸರುಗಳಾಗಿ ಬಳಕೆಗೊಂಡಿವೆ. ವಸಂತ, ಶರತ್ (ಹೆ-ಗಂ), ವರ್ಷ, ಶಿಶಿರ (ಹ), ಹೇಮಂತ (ಗಂ).

೨.೮ ನದಿ ಹೆಸರುಗಳನ್ನು ಸಾಮಾನ್ಯವಾಗಿ ಹೆಣ್ಣುಮಕ್ಕಳಿಗೆ ಆಯ್ಕೆಮಾಡಲಾಗುತ್ತದೆ: ಕಾವೇರಿ, ತುಂಗಾ, ತ್ರಿವೇಣಿ (ಸಂಗಮ), ನರ್ಮದಾ, ಯಮುನಾ, ಸರಸ್ವತಿ, ಸಿಂಧು ಮೊದಲಾದುವು. ಕೃಷ್ಣಾ, ಗಂಗಾ-ಹೆಣ್ಣು ಗಂಡು ಇಬ್ಬರಿಗೂ ಇಡುವ ಸಾಮಾನ್ಯ ಹೆಸರು.

೨.೯ ಚಿನ್ನ,ತಾಮ್ರ (ಚೆಂಬೊನ್), ಬೆಳ್ಳಿ, ವಜ್ರ, ರತ್ನ, ಹವಳ, ಮುತ್ತು, ಮಣಿ ಮೊದಲಾದವು ಹೆಸರುಗಳಾಗಿ ಬಳಕೆಗೊಂಡಿವೆ.

ಚಿನ್ನಪ್ಪ, ಚಿನ್ನಮ್ಮ, ಚಿನ್ನಸ್ವಾಮಿ, ಬಂಗಾರು (ಗಂ), ಬಂಗಾರಪ್ಪ, ಬಂಗಾರ, ಸ್ವಾಮಿ,ಬಂಗಾರಮ್ಮ, ಶಂಭು, (ಕೆಂ/ಪೊನ್>ಚೆಂ/ಬೊನ್ > ಶಂಭು), ಶಂಭುನಾಥ, ಬೆಳ್ಳಿ, ಬೆಳ್ಳಮ್ಮ, ವಜ್ರನಾಭ,ರತ್ನ, ನವರತ್ನ, ನಾಗರತ್ನ, ಹವಳಯ್ಯ, ಹವಳಪ್ಪ, ಮುತ್ತು, ಮುತ್ತುಸ್ವಾಮಿ, ಮಣಿ, ದಿನಮಣಿ, ನಾಗಮಣಿ, ಸ್ಯಮಂತಕ ಮಣಿ, ಲೋಕಮಣಿ, ಸ್ವರ್ಣ, ಸುವರ್ಣ, ಹೊನ್ನ, ಹೊನ್ನಿ, ಹೊನ್ನಮ್ಮ, ಹೊನ್ನಾ ದೇವಿ, ಹೊನ್ನರಂಗಪ್ಪ ಇ.

೨.೧೦ ಪುರಾಣ ಪ್ರಸಿದ್ಧಸ್ಥಳ ಕಾಶಿ ಕೂಡ ವ್ಯಕ್ತಿನಾಮಕ್ಕೆ ಕಾರಣವಾಗಿದೆ : ಕಾಶಿ, ಕಾಶೀನಾಥ್, ಕಾಶೀಯರು ಇ.

೨.೧೧ ಸಿಹಿರುಚಿಯ ದ್ರವ್ಯಗಳು ವ್ಯಕ್ತಿನಾಮಗಳಾಗಿವೆ: ಅಮೃತ, ಸುಧಾ, ಸುಧಾಕರ, ಹಾಲಪ್ಪ, ಹಾಲಮ್ಮ ಇ.

೨.೧೨ ಕಣ್, ಮೂಗು,ಮಚ್ಚೆ, ಜಡೆ ಮೊದಲಾದ ದೈಹಿಕ ಭಾಗಗಳು ಹೆಸರುಗಳಾಗಿ ಹೆಸರುಗಳಲ್ಲಿ ರೂಪುಗೊಂಡಿವೆ:ಕಣ್ಮಣಿ (ಹೆ), ಮೂಕಯ್ಯ, ಮಚ್ಚೆಗೌರಿ, ಜಡೆಮಾದ, ಜಡೆಸ್ವಾಮಿ ಇ.

೨.೧೩ ಮಾನವ ಮತ್ತು ಪ್ರಾಣಿ ಪಕ್ಷಿಗಳ ಸಂಬಂಧ ನಿಕಟವಾದುದು. ಈ ನಿಟ್ಟಿನಲ್ಲಿ ರೂಪುಗೊಂಡಿರುವ ವ್ಯಕ್ತಿನಾಮಗಳು : ಕಾಳ,(ನರ) ಸಿಂಹ, ನಾಗ, ನಾಗಮ್ಮ, ನಾಗವಳ್ಳಿ, ನಾಗರಾಜ, ಕೋಕಿಲ, ಮಯೂರ ಇ. ಹಾವಿಗೆ ಸಂಬಂಧಿಸಿದ ಹೆಸರುಗಳಿರುವುದನ್ನು ಗಮನಿಸಿದರೆ ನಾಗಾರಾಧನೆ ಪ್ರಚಲಿತದಲ್ಲಿರುವ ಅಂಶ ತಿಳಿದುಬರುತ್ತದೆ.

೨.೧೪ ಬಂಧುತ್ವ ಪರಿಬಾಷೆ ಕೂಡ ಹೆಸರುಗಳಿಗೆ ಬಳಕೆಗೊಂಡಿದೆ. ಅಣ್ಣಪ್ಪ, ಅಣ್ಣಮ್ಮ, ಅಪ್ಪಣ್ಣ, ಅಪ್ಪಣ್ಣಯ್ಯ, ಅಮ್ಮಣ್ಣಮ್ಮ, ಅಕ್ಕಯ್ಯ, ಅಣ್ಣಯ್ಯಗೌಡ, ಅಣ್ಣೇಗೌಡ, ಚಿಕ್ಕಮ್ಮಣ್ಣಿ, ತಂಗವ್ವ, ದೊಡ್ಡಮ್ಮಣ್ಣಿ, ಚಿಕ್ಕಣ್ಣ, ದೊಡ್ಡಣ್ಣ, ತಮ್ಮಣ್ಣ, ತಮ್ಮೇಗೌಡ, ತಮ್ಮಯ್ಯ, ಹಿರಿಯಣ್ಣ, ಹಿರಿಯಣ್ಣಯ್ಯ ಇ.

೩.೦ ಹಿಂದೂ ದೇವ ದೇವಿಯರ, ಕುಲದೈವ ಗ್ರಾಮದೇವತೆಗಳ ಹೆಸರನ್ನಿಡುವುದು ಗ್ರಾಮೀಣರಲ್ಲಿ ಸಾಮಾನ್ಯ ಸಂಗತಿ. ಸ್ವರ್ಗಕ್ಕೆ ಸಂದ ಹಿರಿಯರ, ಪುರಾಣ ಪ್ರಸಿದ್ಧ ವ್ಯಕ್ತಿಗಳ, ವೀರರ, ಐತಿಹಾಸಿಕ ಅಥವಾ ಸಮಕಾಲೀನ ವ್ಯಕ್ತಿಗಳ ಹೆಸರುಗಳೂ ಬಳಕೆಗೊಂಡಿವೆ. ಇವೆಲ್ಲಕ್ಕಿಂತ ಮಿಗಿಲಾಗಿ ತಾಯ್ನುಡಿಯ ನಾಮಪದ, ಗುಣವಾಚಕಗಳಿಂದ ಹಲವಾರು ಹೆಸರುಗಳು ಸೃಷ್ಟಿಯಾಗಿವೆ.

೩.೧ ವ್ಯಕ್ತಿನಾಮಗಳನ್ನು ಗಮನಿಸಿದಾಗ, ಭಾಷಿಕ ಸ್ವೀಕರಣ ನಡೆದಿರುವ ಅಂಶ ಗೋಚರವಾಗುತ್ತದೆ. ವ್ಯಕ್ತಿನಾಮ ರೂಪಿಸಲು, ಸಂಸ್ಕೃತ ಶಬ್ದಗಳನ್ನು ನೇರವಾಗಿ ಯಾವುದೇ ರೀತಿ ವ್ಯತ್ಯಯಗೊಳಿಸದೆ ಸ್ವೀಕರಿಸಿರುವುದೂ ಉಂಟು; ತದ್ಭವರೂಪಗಳನ್ನಾಗಿ ಸ್ವೀಕರಿಸಿರುವುದೂ ಉಂಟು. ಈ ಬಗೆಯಲ್ಲಿಭಾಷೆಯ ಸ್ವೀಕರಣ, ಪ್ರಸರಣ ಸಂಸ್ಕೃತೀಕರಣ ಕಾರ್ಯಗಳು ನಡೆದಿವೆ. ಆದರೂ ಹಳ್ಳಿಯ ಅನಕ್ಷರಸ್ಥ ಕುಟುಂಬಗಳೂ ಜೀವನ, ಪ್ರಕೃತಿಗೆ, ಕುಲದೈವಕ್ಕೆ, ನಂಬಿರುವ ದೇವ ದೇವತೆಗೆ ಶರಣಾಗಿದೆ. ಸಾಮಾಜಿಕವಾಗಿ ಜಾತಿ ಶ್ರೇಣಿಯಲ್ಲಿ ಮೇಲುಸ್ತರದ ವರ್ಗಗಳಲ್ಲಿ ಮಾರಿ, ಮಾರ, ಕಾಳಿ, ಭದ್ರಿ (ಭದ್ರಕಾಳಮ್ಮ), ತಿಪ್ಪಿ, ತಿಪ್ಪ, ತಿಮ್ಮ, ತಿಮ್ಮಿ, ನಂಜ, ನಂಜಿ, ಗುತ್ತಿ, ಗುತ್ಯವ್ವ, ಮಾಳ,ಮಳಿ, ಇ. ಹೆಸರುಗಳು ಇಂದಿಗೂ ಚಾಲ್ತಿಯಲ್ಲಿವೆ. ಆದರೆ ಮಧ್ಯಮಸ್ತರದ ವರ್ಗಗಳು ಇವೆರಡೂ ಸ್ತರಗಳನ್ನು ಅಪ್ಪಿಕೊಂಡು, ವ್ಯಕ್ತಿನಾಮಗಳನ್ನು ಎರಡರಿಂದಲೂ ಸ್ವೀಕರಿಸಿದೆ. ಇಂದಿನ ದಿನಗಳಲ್ಲಿ ಪತ್ರಿಕೆ, ನಿಯತಕಾಲಿಕ, ರೇಡಿಯೋ, ದೂರದರ್ಶನ ಚಲನಚಿತ್ರ ಮೊದಲಾದ ಮಾಧ್ಯಮಗಳ ಪ್ರಭಾವದಿಂದಾಗಿ ಗ್ರಾಮೀಣ ಪರಿಸರಗಳಲ್ಲೂಹೊಸ ಹೊಸ ಹೆಸರುಗಳು ಚಾಲ್ತಿಗೆ ಬರುತ್ತಿವೆ. ಆಧುನಿಕತೆಯಿಂದಾಗಿ ನಮ್ಮ ಜನಪದರು ಹೆಸರಿಡುವ ಪದ್ಧತಿಯಲ್ಲೂ ತೀವ್ರ ಮಾರ್ಪಾಡುಗಳು ಉಂಟಾಗುತ್ತಿವೆ. ಅಂತೂ ಬದಲಾವಣೆ ಎಂಬುದು ಸಹಜ ಕ್ರಿಯೆಯಷ್ಟೆ ?

ಧಾರ್ಮಿಕವಾಗಿ ಕನ್ನಡಿಗರಲ್ಲಿ ಕನ್ನಡ ಹಿಂದೂ, ಕನ್ನಡ ಕ್ರೈಸ್ತ ಎಂಬ ಪ್ರಮುಖವರ್ಗಗಳುಂಟು. ಇವುಗಳಲ್ಲಿ ಸಾಂಸ್ಕೃತಿಕವಾಗಿ ಕೆಲವು ಸಮಾನ ಅಂಶಗಳಿದ್ದರೂ, ವ್ಯಕ್ತಿನಾಮಗಳ ದೃಷ್ಟಿಯಿಂದ ಅಧ್ಯಯನ ನಡೆಸಿದಾಗ ನೂತನ ಸಂಗತಿಗಳು ಗೋಚರವಾಗುತ್ತವೆ.

೪.೦ ವ್ಯಕ್ತಿನಾಮಗಳ ಬಗೆಗಿನ ಪ್ರಸ್ತುತ ಭಾಷಿಕ ವಿಶ್ಲೇಷಣೆ ಸ್ಥೂಲವಾದುದು. ವಿವರಣಾತ್ಮಕ ವಿಶ್ಲೇಷಣೆ ಕನ್ನಡಿಗರ ಸಾಂಸ್ಕೃತಿಕ ವೈಲಕ್ಷಣ್ಯಗಳ ಮೇಲೆ ಹೆಚ್ಚುಬೆಳಕು ಬೀರುತ್ತದೆ. ಈ ನಿಟ್ಟಿನಲ್ಲಿಭಾಷಾ ವಿಜ್ಞಾನಿಗಳೂ ಜಾನಪದ ತಜ್ಞರೂ ಮಾನವಶಾಸ್ತ್ರಜ್ಞರೂ ಗಮನ ಹರಿಸಿ, ಪ್ರಮುಖವಾಗಿ ವ್ಯಕ್ತಿನಾಮಗಳ ರಾಚನಿಕ ವಿಶ್ಲೇಷಣೆಯನ್ನು ನಡೆಸಬೇಕು.

# ದ್ರಾವಿಡಭಾಷಾ ವಿಜ್ಞಾನ
## ಒಂದು ವಿಹಂಗಮ ನೋಟ

---

ಡಾ. ವಿಲ್ಯಂ ಮಾಡ್ತ

### ೦. ಪ್ರಸ್ತಾವನೆ

ಅನುಗಮನ ಪದ್ಧತಿ (Inductive Method) ಯನ್ನು ಅಳವಡಿಸಿ ವಿವರಣಾತ್ಮಕವಾಗಿ ಭಾಷೆಯ ಅಧ್ಯಯನ ಮಾಡುವ ಶಿಸ್ತಿಗೆ ಭಾಷಾವಿಜ್ಞಾನ ಎನ್ನುತ್ತಾರೆ. ಭಾಷಾಶಾಸ್ತ್ರ ಇದಕ್ಕಿಂತ ಭಿನ್ನ. ಅದು ಸಾಂಪ್ರದಾಯಿಕವಾದ ನಿಗಮನ ಪದ್ಧತಿ (Deductive Method) ಯನ್ನು ಅಳವಡಿಸಿ ವಿಧಿಯಾತ್ಮಕವಾಗಿ ಭಾಷೆಯ ಅಧ್ಯಯನ ಮಾಡುತ್ತದೆ. ದ್ರಾವಿಡ ಭಾಷೆಗಳಿಗೆ ಸೀಮಿತವಾಗಿ, ವಿವರಣಾತ್ಮಕವಾಗಿ ಅಧ್ಯಯನ ಮಾಡುವ ಶಿಸ್ತಿಗೆ ದ್ರಾವಿಡ ಭಾಷಾವಿಜ್ಞಾನ ಎನ್ನುತ್ತಾರೆ.

ದ್ರಾವಿಡ ಭಾಷಾವಿಜ್ಞಾನದಲ್ಲಿ ಸಾಮಾನ್ಯವಾಗಿ ದ್ರಾವಿಡ ಪದದ ನಿಷ್ಪತ್ತಿ, ದ್ರಾವಿಡ ಜನಾಂಗ ಸಂಸ್ಕೃತಿಗಳ ಪರಿಚಯ, ದ್ರಾವಿಡ ಭಾಷಾವೈಜ್ಞಾನಿಕ ಅಧ್ಯಯನ, ದ್ರಾವಿಡ ಭಾಷೆಗಳ ವರ್ಗೀಕರಣ, ಮೂಲ ದ್ರಾವಿಡ ಭಾಷೆಯ ಸ್ವರೂಪ, ಭಾಷಾಪ್ರಕ್ರಿಯೆಗಳು, ಆಕೃತಿಮ ವಿಚಾರಗಳು ಹಾಗೂ ಈ ಭಾಷಾವರ್ಗದ ವೈಶಿಷ್ಟ್ಯಗಳ ಅಧ್ಯಯನ ಮಾಡಲಾಗುತ್ತದೆ.

### ೧.೦ ದ್ರಾವಿಡ – ಪದನಿಷ್ಪತ್ತಿ

'ದ್ರಾವಿಡ' ಎಂಬ ಶಬ್ದದ ನಿಷ್ಪತ್ತಿಯ ಬಗ್ಗೆ ತುಂಬ ಚರ್ಚೆ ನಡೆದಿದೆ. ಈ ಶಬ್ದವನ್ನು ದೇಶ, ಜನಾಂಗ ಮತ್ತು ಭಾಷಾವಾಚಕಗಳಾಗಿ ಮಹಾಭಾರತ, ಮನುಸ್ಮೃತಿ, ಬೃಹತ್ಸಂಹಿತೆ ಮೊದಲಾದ ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಉಲ್ಲೇಖವಿದೆ. ಗ್ರೀಕರ ಇತಿಹಾಸದಲ್ಲಿಯೂ ಈ ಪದ ಕಂಡುಬರುತ್ತದೆ. ಕಾಲ್ಡ್‌ವೆಲರು, ಸಂಸ್ಕೃತ ದ್ರಾವಿಡ >ದ್ರವಿಡ >ದ್ರಮಿಡ >ದ್ರಮಿಳ >ತಮಿಳ್ ಆಗಿದೆಯೆಂದು ಅಭಿಪ್ರಾಯಪಡುತ್ತಾರೆ. ತಮಿಳಿನಲ್ಲಿ ಘೋಷ ಧ್ವನಿಮಗಳಾಗಲಿ, ಆದಿ ದ್ವಿತ್ವಗಳಾಗಲಿ ಇಲ್ಲದೆ ಇರುವುದರಿಂದ ದ್ರಾ > ತ ಬದಲಾವಣೆಯಾಯಿತು. ಕೊನೆಯ ಡಕಾರದ ಸ್ಥಾನದಲ್ಲಿ ಹೆಚ್ಚು ಪ್ರಸಾರದಲ್ಲಿರುವ ಟ ಕಾರ ಬಂದು ಸೇರಿತು ಎಂಬುದು ಅವರ ತರ್ಕ. ಆದರೆ, ವಾಸ್ತವವಾಗಿ ಉದಾಹರಣೆಗಳನ್ನು ಗಮನಿಸಿದಾಗ ಅದು ಕೇವಲ ಊಹೆ ಎಂದೆನಿಸುತ್ತದೆ.

| ಸಂಸ್ಕೃತ | | ತಮಿಳು |
|---|---|---|
| 1. ದ್ರವ | > | ತಿರವಮ್ |

2. ದ್ರಾಕ್ಷಾ > ತಿರಾಟ್‌ಚೈ

3. ದ್ರವ್ಯ > ತಿರವಿಯಮ್

ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ದ್ರ > ತಿರ/ತಿರಾ ಎಂದು ಬದಲಾಗುತ್ತದೆಯೇ ಹೊರತು/ತ/ ಅಲ್ಲ ಎಂದು ಸ್ಪಷ್ಟವಾಗುತ್ತದೆ. ಎರಡನೆಯದಾಗಿ ಡಕಾರ ಆ ಸ್ಥಾನದಲ್ಲಿ ತಮಿಳಿನಲ್ಲಿರುವಾಗ ಅದು ಟಕಾರವಾಗಿ ಬದಲಾಗುವ ಪ್ರಮೇಯ ಉಂಟಾಗುವುದಿಲ್ಲ. ಕೊನೆಯದಾಗಿ ಸಂಸ್ಕೃತದ ಅಕಾರಾಂತ ಪದಗಳು ಮಕಾರಾಂತಗೊಳ್ಳುತ್ತವೆಯೇ ಹೊರತು, ಅಲ್ಲಿ ಸ್ವರಲೋಪವಾಗುವುದಿಲ್ಲ.

ಸಂಸ್ಕೃತದಿಂದ ತಮಿಳು ( < ತಮಿಟ್) ಪದ ನಿಷ್ಪತ್ತಿಯಾಯಿತು ಎಂದು ಹೇಳುವುದಕ್ಕಿಂತ ಮೂಲ ದ್ರಾವಿಡದಲ್ಲಿ 'ತರಮಿಟಿಂ' ಎಂಬ ಪದವನ್ನು ಊಹಿಸಿ ಅದರಿಂದ ಇಂದಿನ 'ತಮಿಟ್' ಹಾಗೂ 'ದ್ರಾವಿಡ' ಪದಗಳ ನಿಷ್ಪತ್ತಿಯನ್ನು ಆಧಾರಸಹಿತ ಕೊಡಬಹುದು.

ಸಂಸ್ಕೃತ : ತರಮಿಟಮ್ > ತರಮಿಟ್ > ದ್ರಾಮಿಟ್ > ದ್ರಾಮಿಡ್ > ದ್ರಾವಿಡ

* ತರಮಿಟಿಮ್

ತಮಿಳಾದಿ ಭಾಷೆಗಳು : ತರಮಿಟಮ್ > ತರಮಿಟ್ > ತಮಿಟ್/ತಮಿಳು

ರೆಡ್ಡಿ (1976) ಯವರ ಈ ನಿಷ್ಪತ್ತಿ ಭಾಷಾವೈಜ್ಞಾನಿಕವಾಗಿ ಹೆಚ್ಚು ಸೂಕ್ತವೆನಿಸುತ್ತದೆ. ಆದರೆ/ತರಮಿಟಮ್/ ರೂಪಕ್ಕೆ ಪ್ರಮಾಣಗಳು (Attestions) ಎಲ್ಲಿಯೂ ದೊರಕುವುದಿಲ್ಲ. ಆದುದರಿಂದ ಇದನ್ನು ಒಂದು ಪ್ರಮೇಯ (Hypothesis) ಮಾತ್ರ ಎಂದು ಇಟ್ಟುಕೊಳ್ಳಬಹುದು. ಆದರೆ ಒಂದು ಮಾತು: ಸಂಸ್ಕೃತದಿಂದ ದ್ರಾವಿಡ ಪದವನ್ನು ಉತ್ಪಾದಿಸುವುದಕ್ಕಿಂತ ಈ ಪ್ರಮೇಯವನ್ನು ಒಪ್ಪಿಕೊಂಡು *ತರಮಿಟಮ್ ರೂಪದಿಂದ ತಮಿಟ್ ಹಾಗೂ ದ್ರಾವಿಡ ರೂಪಗಳನ್ನು ನಿಷ್ಪನ್ನಗೊಳಿಸುವುದು ಧ್ವನಿವ್ಯತ್ಯಾಸ (Phonetic change) ದೃಷ್ಟಿಯಿಂದ ಹೆಚ್ಚು ಸೂಕ್ತವೆನಿಸುತ್ತದೆ. ಐತಿಹಾಸಿಕ ಪ್ರಮಾಣಗಳಿಗೆ ಇನ್ನೂ ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ.

### ೨.೦ ದ್ರಾವಿಡ ಜನಾಂಗ

ದ್ರಾವಿಡ ಜನಾಂಗ ಪೂರ್ವೇತಿಹಾಸದ್ದು (Pre-historical); ಕಾರಣ, ಈ ವಿಷಯದ ಬಗ್ಗೆ ಎಷ್ಟು ಸಂಶೋಧಕರಿದ್ದಾರೋ, ಅಷ್ಟು ಅಬಿಪ್ರಾಯಗಳು ಕಾಣುತ್ತವೆ : ಮಾನವ ಹುಟ್ಟು, ಬೆಳವಣಿಗೆ ಹಾಗೂ ಪ್ರಸಾರಗಳ ಬಗೆಗೆಯೇ ಹಲವಾರು ಪ್ರಮೇಯಗಳಿವೆ. ಅವುಗಳನ್ನು ಎರಡು ಪ್ರಮೇಯಗಳಲ್ಲಿ ಕ್ರೋಢೀಕರಿಸಿದ್ದಾರೆ.

1. Monogenesis : ಏಕಮೂಲ ತತ್ತ್ವ

2. Polygenesis : ಬಹುಮೂಲ ತತ್ತ್ವ

ಬಹುಮೂಲ ತತ್ತ್ವದ ಪ್ರಕಾರ ಜನರು ಬೇರೆ ಬೇರೆ ಪ್ರದೇಶಗಳಲ್ಲಿ ಪೂರ್ವೇತಿಹಾಸ ಕಾಲದಲ್ಲಿ ಸು. 5-6 ಸಾವಿರ ವರ್ಷಗಳ ಹಿಂದೆ ಹುಟ್ಟಿರಬೇಕು. ಈ ಜನಸಮುದಾಯಗಳಿಗೆ ಪರಸ್ಪರ

ಸಂಬಂಧಗಳಿಲ್ಲ. ಅನಂತರ ಪ್ರಕೃತಿಯ ವಿಕೋಪಗಳಿಂದಾಗಿ, ಬೇಟೆ - ಮೇವುಗಳಿಗಾಗಿ, ವ್ಯಾಪಾರ ವಿನಿಮಯಗಳಿಗಾಗಿ ನಾಗರಿಕತೆ ಬೆಳೆದಂತೆ ಅವರು ದೂರದೂರ ಪ್ರಯಾಣ ಮಾಡಿ ಹಲವಾರು ಕಡೆ ಕಲೆತು ಬೆರೆತಿರಬೇಕು.

ಏಕ ಮೂಲತತ್ತ್ವದ ಪ್ರಕಾರ ಯಾವುದೋ ಒಂದು ಕಡೆ, ಬಹುಶಃ ಮೆಡಿಟರೇನಿಯನ್ ಪ್ರದೇಶದಲ್ಲಿ, ಮಾನವನ ಸೃಷ್ಟಿಯಾಗಿ ಅಲ್ಲಿಂದ ಕಾಲಕ್ರಮೇಣ ಮಾನವ, ಜಗತ್ತಿನಲ್ಲೆಲ್ಲ ಹಬ್ಬಿದ್ದಾನೆ. ಬೇರೆ ಬೇರೆ ಪ್ರದೇಶಗಳ ಹವಾಮಾನ ಹಾಗೂ ಪರಿಸರಗಳಿಗೆ ತಕ್ಕಂತೆ ಆತ ದೇಹ - ಮನಸ್ಸುಗಳು ಬದಲಾಗಿ ಆತನಲ್ಲಿ ವೈವಿಧ್ಯತೆಯನ್ನು ಕಾಣುತ್ತೇವೆ. ಮೂಲತಃ ಮಾನವ ಕುಲ ಒಂದೇ ಎಂಬುದು ಹೆಚ್ಚು ಪ್ರಚಲಿತವಾಗಿರುವ ಪ್ರಮೇಯ. ಈ ಪ್ರಮೇಯಕ್ಕೆ ಬೈಬಲಿನ ಆದಿಕಾಂಡದಲ್ಲಿರುವ ಸೃಷ್ಟಿ ಪುರಾಣ, ಆ ಬಳಿಕ ಕುರ್‌ಆನಿನಲ್ಲಿಯ ಸೃಷ್ಟಿಪುರಾಣ ಪ್ರಮುಖ ಆಧಾರಗಳಾಗಿ ಈ ಎರಡು ಮತಗಳು ವಿಶ್ವವನ್ನೆಲ್ಲ ವ್ಯಾಪಿಸಿಕೊಂಡಂತೆ ಈ ಪ್ರಮೇಯ ಪ್ರಬಲವಾಗಿ ಅದೇ ಸತ್ಯವಾಗಿ ಇಂದು ಜನಮನಗಳಲ್ಲಿ ನಿಂತಿದೆ.

ಮಾನವ ವಿಜ್ಞಾನಿಗಳು ಜನರ ದೇಹ ಹಾಗೂ ವರ್ಣವನ್ನು ಗಮನಿಸಿ ಪ್ರಮುಖವಾಗಿ ಜಗತ್ತಿನ ಜನಸಮುದಾಯಗಳನ್ನು

1. ಕಾಕೇಶಿಯನ್ಸ್ (Caucasians) : ಬಿಳಿಯರು
2. ಮಂಗೋಲಿಯನ್ಸ್ (Mongoloids) : ಹಳದಿಯರು
3. ನಿಗ್ರೋಯ್ಡ್ಸ್ (Negroids ) : ಕರಿಯರು

- ಎಂದು ವರ್ಗೀಕರಿಸಿದ್ದಾರೆ. ಆದರೆ ಎಣ್ಣೆ ಕಪ್ಪುಬಣ್ಣದ ಸುಂದರ ದ್ರಾವಿಡರನ್ನು ಈ ಮೂರು ವರ್ಗಗಳಲ್ಲಿ ಯಾವುದರಲ್ಲಿ ಸೇರಿಸಬೇಕೆಂಬುದು ಯಕ್ಷಪ್ರಶ್ನೆಯಾಗಿಯೇ ಉಳಿದಿದೆ. ಕಾಲ್ಡ್‌ವೆಲ್ ಮೊದಲಾದವರ ಲಿಮೂರಿಯನ್ ಸಂಸ್ಕೃತಿವಾದವನ್ನು ಒಪ್ಪಿದರೆ ಬಹುಶಃ ದ್ರಾವಿಡರು ಮೂಲತಃ ಭಾರತ, ಆಸ್ಟ್ರೇಲಿಯ, ಆಫ್ರಿಕೆಗಳನ್ನು ಸೇರಿದ ಅಖಂಡ ಪ್ರದೇಶಕ್ಕೆ ಸೇರಿದ ಜನಾಂಗ; ಆದುದರಿಂದ ಅವರು ಕರಿಯ (Negroid) ವರ್ಗಕ್ಕೆ ಸೇರಿದವರಾಗುತ್ತಾರೆ. ಇತ್ತೀಚೆಗೆ ನಡೆದ Bio-genetic ಸಂಶೋಧನೆಯ ಪ್ರಕಾರ DNA ಯಲ್ಲಿ ಬದಲಾಗದ gene ನ ಮೂಲವನ್ನು ಆಫ್ರಿಕೆಯ ಜನಾಂಗದಲ್ಲಿ ಅರ್ಥಾತ್ ಕರಿಯ ಜನಾಂಗದಲ್ಲಿ ಗುರುತಿಸಿ ಅದಕ್ಕೆ ಸು. 20,000 ವರ್ಷದ ಹಿಂದಿನ ಕಾಲವನ್ನು ಗುರುತಿಸಿದ್ದಾರೆ. ಮಾನವ ಅಧ್ಯಯನದಲ್ಲಿ Bio-genetic ಅಧ್ಯಯನಕ್ಕೆ ಇರುವ ಪ್ರಾಶಸ್ತ್ಯವನ್ನು ಗಮನಿಸಿದಾಗ ಹಾಗೂ ಭಾರತ, ಆಫ್ರಿಕೆ, ಆಸ್ಟ್ರೇಲಿಯಾ ದೇಶಗಳ ಭೂಪ್ರದೇಶಗಳ ಗಡಿಗಳ ಆಕಾರಗಳನ್ನು ಗಮನಿಸಿದಾಗ ಬಿಷಪ್ ಡಾ. ಕಾಲ್ಡ್‌ವೆಲರ ಲಿಮೂರಿಯನ್ ಪ್ರಮೇಯಕ್ಕೆ ಹೆಚ್ಚು ಪುಷ್ಟಿ ದೊರಕಿದಂತಾಗಿ ಮಾನವ ಮೂಲವನ್ನು ಮೆಡಿಟರೇನಿಯನಿನಿಂದ ಆಫ್ರಿಕೆಗೆ, ಬಿಳಿಯ ಸಂಸ್ಕೃತಿಯಿಂದ ಕರಿಯ ಸಂಸ್ಕೃತಿಗೆ ನಾವು ಒಯ್ಯಬೇಕಾಗುತ್ತದೆ. ಇದರ ಫಲಿತಾಂಶ ಇಷ್ಟೇ: ದ್ರಾವಿಡರು ಆರಂಭದಿಂದಲೇ ಭಾರತ, ಆಫ್ರಿಕೆ, ಆಸ್ಟ್ರೇಲಿಯಾದ ಮೂಲ ನಿವಾಸಿಗಳು; ಬಿಳಿಯರು, ಹಳದಿಯರು ಹಾಗೂ ಇತರ ವರ್ಣದವರು gene mutation - ಜೀನ್ ವ್ಯತ್ಯಾಸ - ದಿಂದಾಗಿ ಭಿನ್ನ ಭಿನ್ನವಾಗಿದ್ದಾರೆ ಎಂಬ ಮಾತನ್ನು ಇವತ್ತಿನ ಮಟ್ಟಿಗೆ ಒಪ್ಪತಕ್ಕಂತಹ ಒಂದು ಪ್ರಮೇಯ.

ಇದರಿಂದಾಗಿ ದ್ರಾವಿಡರು ಎಲ್ಲಿಂದ ಬಂದರು ಎಂಬ ಪ್ರಶ್ನೆ ಅಸಗತ್ಯ. ಅಷ್ಟೇ ಅಲ್ಲದೆ ಪಾಕಿಸ್ತಾನದಿಂದ ದಕ್ಷಿಣ ಭಾರತದವರೆಗೆ ಇರುವ ದ್ರಾವಿಡ ಭಾಷೆಗಳಿಗೂ ಹಾಗೂ ಅವುಗಳಿಗೂ ಹಲವಾರು ಆಫ್ರಿಕೆಯ ಭಾಷೆಗಳಿಗೂ ಇರುವ ಹೋಲಿಕೆಗಳಿಗೂ ಒಂದು ಸಂಬಂಧ ಕಲ್ಪಿಸಲು ಸಾಧ್ಯವಾಗುತ್ತದೆ. ಕೇರಳದ ಚೋಳನಾಯಕ ಜನಾಂಗದಲ್ಲಿ ಕಂಡುಬರುವ ನೀಗ್ರೋಯ್ಡ್ ಹಾಗೂ ಆಧುನಿಕ ದ್ರಾವಿಡ ಅಂತೆಯೇ ಬಿಹಾರದ ಆದಿವಾಸಿಗಳಲ್ಲಿ ಕಂಡುಬರುವ ಅದೇ ಲಾಕ್ಷಣಿಕ ಅಂಶಗಳನ್ನು ವಿವರಿಸಲಿಕ್ಕೂ ಸಾಧ್ಯವಾಗುತ್ತದೆ.

### ೩.೦ ದ್ರಾವಿಡ ಸಂಸ್ಕೃತಿ

ಪ್ರಾಚೀನ ಮೊಹೆಂಜೊದಾರೊ - ಹರಪ್ಪ ಸಂಸ್ಕೃತಿ ಮೂಲ ದ್ರಾವಿಡ ಜನಾಂಗದ ಸಾಂಸ್ಕೃತಿಕ ಪಳೆಯುಳಿಕೆ. ಇದನ್ನು ಕೂಲಂಕಷವಾಗಿ ಗಮನಿಸಿದಾಗ, ದ್ರಾವಿಡ ಸಂಸ್ಕೃತಿಯ ಉನ್ನತಿಯ ಅರಿವು ನಮಗುಂಟಾಗುವುದು. ಇವರ ಉಪಾಸನಾ ರೀತಿ,ಶವಸಂಸ್ಕಾರ ಪದ್ಧತಿ, ಆದ್ಯಾತ್ಮಿಕ ಸಾಧನ, ಮಾತೃಪ್ರಧಾನ ಕುಟುಂಬ ವ್ಯವಸ್ಥೆ, ನಗರ ರಚನೆ, ಕೃಷಿಜ್ಞಾನ, ಪರಿಸರ ಪ್ರೇಮ, ಕಲಾಪ್ರವೃತ್ತಿ, ಕಟ್ಟಡಗಳ ರೀತಿ ಇತ್ಯಾದಿಗಳನ್ನು ಗಮನಿಸಿದಾಗ ದ್ರಾವಿಡ ಸಂಸ್ಕೃತಿಯ ಉನ್ನತಿಯ ಪರಾಕಾಷ್ಠೆ ಗೋಚರವಾಗುತ್ತದೆ. ಇವರು ಖಡ್ಗಕ್ಕಿಂತ ನೇಗಿಲಿಗೆ ಪ್ರಾಧಾನ್ಯತೆ ಕೊಟ್ಟಿರುವುದರಿಂದ ಯುದ್ಧಪ್ರಿಯ ಅಲೆಮಾರಿ ಆರ್ಯರಿಗಿಂತ ಭಿನ್ನರಾಗಿ ಮೂಲನಿವಾಸಿ ದ್ರಾವಿಡರು, ಮೌಲಿಕ ಜೀವನದ ಸಲುವಾಗಿ, ಹಲವರಿಗೆ ಶರಣರಾಗಬೇಕಾಯಿತು. ಇದೇ ಅವರ ಮಾನವೀಯತೆಯ ಹಾಗೂ ಆಧ್ಯಾತ್ಮಿಕ ಶ್ರೇಯಸ್ಸು, ಅಂತೆಯೇ ಲೌಕಿಕ ದುರಂತ!

ದ್ರಾವಿಡರಲ್ಲಿ ನಮಗೆ ಆಧಾರಸಹಿತ ಚಾರಿತ್ರಿಕ ದಾಖಲೆಗಳು ದೊರಕುವುದು ಕೇವಲ ತಮಿಳು, ಕನ್ನಡ, ತೆಲುಗು ಮತ್ತು ಅಲ್ಪಮಟ್ಟಿಗೆ ತುಳುವ ಸಂಸ್ಕೃತಿ ಹಾಗೂ ಜನಜೀವನಗಳ ಬಗ್ಗೆ ಮಾತ್ರ. ಇವುಗಳಿಗೆ ಸು. 2000 - 3000 ವರ್ಷಗಳ ಚರಿತ್ರೆ ಇದ್ದರೆ ಮಲಯಾಳಂ ಜನಸಮುದಾಯಕ್ಕೆ ಸು. 1000 ವರ್ಷಗಳ ಇತಿಹಾಸ ಮಾತ್ರ ದೊರಕುತ್ತದೆ. ತುಳುವಿನ ಬಗ್ಗೆ ಸಂಗಂ-ಸಾಹಿತ್ಯದಲ್ಲಿಯೇ ಉಲ್ಲೇಖ ದೊರಕುತ್ತದೆ.

ದ್ರಾವಿಡರಲ್ಲಿ ಸ್ವರ್ಗ ನಗರಕಗಳ ಕಲ್ಪನೆ ಇದ್ದಿಲ್ಲವಾದರೂ ಮಾನವ, ಆತ್ಮ-ಶರೀರದಿಂದ ಕೂಡಿದ ವ್ಯಕ್ತಿ. ಈ ವ್ಯಕ್ತಿ ದೈವೀಶಕ್ತಿಗೆ ಅಧೀನನಾಗಿರಬೇಕು; ಸಾವಿನಾಚೆ ಬದುಕಿದೆ. ಪ್ರಕೃತಿದತ್ತ ಎಲ್ಲ ಯೋಗ್ಯ ಸಸ್ಯ ಪ್ರಾಣಿಗಳೂ ಆಹಾರೀಯವೇ, ಹಿಗ್ಗಿಗಾಗಿ ಮಾದಕ ರಸಗಳ ಸೇವನೆ, ಹಾಡು ಕುಣಿತಗಳಿಗೆ ಬೇಕಾದ ವಾದ್ಯ ಮೊದಲಾದ ಕಲಾಪರಿಕರಗಳು, ಮೋಜಿಗಾಗಿ ಕೋಳಿಯಂಕ, ಕಂಬಳ ಇತ್ಯಾದಿಗಳು ಅವರ ಸಾಮಾಜಿಕ ಜೀವನದ ಅಂಗಗಳಾಗಿದ್ದುವು. ನ್ಯಾಯ ನೀತಿಗಳಿಗೆ ಹೆಚ್ಚು ಒತ್ತುಕೊಡುತ್ತಿದ್ದ ಈ ಜನಾಂಗ, ಸಂಬಂಧಪಟ್ಟ ಸಮಸ್ಯೆಗಳನ್ನು ಊರ ಪಂಚರ ಸಮ್ಮುಖದಲ್ಲಿಯೇ ಪರಿಹರಿಸಿಕೊಳ್ಳುತ್ತಿದ್ದರು.

ಲಲಿತ ಕಲೆಗಳ ಅಭಿರುಚಿ ಹಾಗೂ ಪ್ರೋತ್ಸಾಹ ಅಲ್ಲಿ ಕಂಡುಬರುತ್ತಿತ್ತು. ಆಡಳಿತದಲ್ಲಿ ಪಂಡಿತರಿಗೆ ಗೌರವ ಸ್ಥಾನಮಾನಗಳಿದ್ದುವು. ಒಟ್ಟಿನಲ್ಲಿ ದ್ರಾವಿಡ ರೀತಿ ನೀತಿಗಳು ಇಂದಿಗೂ ಸಾಂಸ್ಕೃತಿಕ ಹಾಗೂ ಆಡಳಿತ ರಂಗಗಳಲ್ಲಿ ಬಹುಮಟ್ಟಿಗೆ ಅನುಕರಣೀಯವೇ. ಆದರೆ ಸಮಗ್ರ ದ್ರಾವಿಡ ಸಂಸ್ಕೃತಿಯ ಪುನರ‍್ರಚನೆಗೆ ಮಾನವ ವಿಜ್ಞಾನ, ಸಸ್ಯವಿಜ್ಞಾನ, ಪ್ರಾಣಿವಿಜ್ಞಾನ, ಮಾನವ

ಸಂಸ್ಕೃತಿ ವಿಜ್ಞಾನ, ಪಳೆಯುಳಿಕೆ ವಿಜ್ಞಾನ, ಪುರಾಣ-ಪ್ರತೀಕ ಮೊದಲಾದವುಗಳ ಜಾನಪದ ವೈಜ್ಞಾನಿಕ ಹಾಗೂ ಸಂಕೇತ ವೈಜ್ಞಾನಿಕ ಅಧ್ಯಯನಗಳ ಬೆಂಬಲದಿಂದ ಇನ್ನೂ ಹೆಚ್ಚಿನ ಆಳವಾದ ಅಧ್ಯಯನ ಆಗಬೇಕಾಗಿದೆ. ಕನ್ನಡ ವಿಶ್ವವಿದ್ಯಾಲಯದಂತಹ ಭಾಷಿಕ ಸಂಸ್ಥೆಗಳ ಅಸ್ತಿತ್ವ ಈ ಹಿನ್ನೆಲೆಯಲ್ಲಿ ಉಚಿತವೆಂದೆನಿಸುತ್ತದೆ. ಈ ನಿಟ್ಟಿನಲ್ಲಿ ಅವು ಕಾರ್ಯಪ್ರವೃತ್ತವಾಗಬೇಕಷ್ಟೆ!

## ೪.೦ ದ್ರಾವಿಡಭಾಷಾವೈಜ್ಞಾನಿಕ ಅಧ್ಯಯನ - ಸ್ಥೂಲ ಪರಿಚಯ :

ದ್ರಾವಿಡಬಾಷಾವೈಜ್ಞಾನಿಕ ಅಧ್ಯಯನದ ಚರಿತ್ರೆಯನ್ನು ಸ್ವಾತಂತ್ರ್ಯಪೂರ್ವ ಯುಗ ಮತ್ತು ಸ್ವಾತಂತ್ರ್ಯೋತ್ತರ ಯುಗ ಎಂದು ವರ್ಗೀಕರಿಸಬಹುದು.

ಸ್ವಾತಂತ್ರ್ಯಪೂರ್ವ ಯುಗ : ಸರ್ ಫ್ರಾನ್ಸಿಸ್ ವೈಟ್ ಎಲ್ಲಿಸ್ (Sir Francis Whyte Ellis, 1780--1819) ಇವರು ಭಾರತದಲ್ಲಿ ಆಡಳಿತಾಧಿಕಾರಿಯಾಗಿದ್ದುಕೊಂಡೇ ದ್ರಾವಿಡ ಭಾಷೆಗಳ ತೌಲನಿಕ ಅಧ್ಯಯನವನ್ನು ಆರಂಭಿಸಿ ತೌಲನಿಕ ದ್ರಾವಿಡ ಭಾಷಾ ವಿಜ್ಞಾನ (Comparative Dravidian Linguistics) ದ ಅಧ್ಯಯನಕ್ಕೆ ಸುಭದ್ರ ತಳಹದಿಯನ್ನು ಹಾಕಿ ಆಡಳಿತ ಅಧಿಕಾರಿಗಳು ಮಾಡಬಹುದಾದ ಸಾಂಸ್ಕೃತಿಕ ಸೇವೆಗೆ ಮಾರ್ಗದರ್ಶಿಯಾಗಿದ್ದಾರೆ. ಎ.ಡಿ. ಕ್ಯಾಂಪ್‌ಬೆಲ್ ಬರೆದ ತೆಲುಗು ವ್ಯಾಕರಣ ( A Grammar of Teloogoo Language, Madras, 1816) ಗ್ರಂಥಕ್ಕೆ ಬರೆದ ಸುದೀರ್ಘ ಮುನ್ನುಡಿಯಲ್ಲಿ 'ದ್ರಾವಿಡ ಭಾಷೆಗಳು ಸ್ವತಂತ್ರ ಭಾಷಾವರ್ಗಕ್ಕೆ ಸೇರುತ್ತವೆ; ಸಂಸ್ಕೃತಕ್ಕೂ ಅವುಗಳಿಗೂ ಆಮೂಲಾಗ್ರ ಸಂಬಂಧವಿಲ್ಲ ' ಎಂದು ಪ್ರಥಮ ಬಾರಿಗೆ ಪ್ರಸ್ತಾಪ ಮಾಡಿದರು.

ತಮಿಳು, ಮಲಯಾಳಂ ಭಾಷೆಗಳ ಅಭ್ಯಾಸ ಕ್ರೈಸ್ತ ಮಿಷನರಿಗಳಿಂದ ಈ ಹಿಂದೆಯೇ ನಡೆದಿತ್ತು. ಯೇಸು ಸಮಾಜದ (The Society of Jesus) ಮಿಷನರಿಗಳು 1542 ರಲ್ಲಿಯೇ ಭಾರತಕ್ಕೆ ಬಂದಿದ್ದರು. ಅವರ ಪೂರ್ವದಲ್ಲಿಯೂ ಕ್ರೈಸ್ತ ಮಿಷನರಿಗಳು ಭಾರತದಲ್ಲಿದ್ದರು. 16ನೆಯ ಶತಮಾನದಲ್ಲಿಯೇ ರೊಬೆರ್ತೊ ದೆ ನೊಬಿಲಿ, ಹೆನ್ರಿಕ್ಸ್, ಮಾರ್ಟಿನ್ಸ್, ಮೆನಾರ್ಡ್, ಪ್ರೊಯೆನ್ಸಾ, ಬೆತೊಲ್ಟಿ, ಬೆಸ್ಕಿ ಮೊದಲಾದ ಮಿಷನರಿಗಳು ತಮಿಳು ಅಧ್ಯಯನ ಸಂಶೋಧನೆಗಳನ್ನೂ, ಲಿಯೊನಾರ್ದೊ ಚಿನ್ನಾಮಿ ( 1609-1676 ) ಕನ್ನಡ ಅಧ್ಯಯನ ಸಂಶೋಧನೆಗಳನ್ನೂ', ಹೆಂಕ್ಸಲ್ಡನ್ ಮಲಯಾಳಂ ಕುರಿತ ಅಧ್ಯಯನವನ್ನೂ ಲಲಾನ್ ಎಂಬಾತನು ತೆಲುಗು ಅಧ್ಯಯನವನ್ನೂ ನಡೆಯಿಸಿ ಅವುಗಳನ್ನು ಕುರಿತ ದಿಕ್ಸೂಚಿ ಗ್ರಂಥಗಳನ್ನು ರಚಿಸಿದ್ದರು. 1817 ರಲ್ಲಿ ರೆ.ವಿಲ್ಯಂ ಕೈರಿ ಅವರು ಕನ್ನಡ ವ್ಯಾಕರಣವನ್ನು ರಚಿಸಿದ್ದರು.

ರಾಸ್ಮಸ್ ರಾಸ್ಕ್ (1787-1832) ಎಂಬ ವಿದ್ವಾಂಸರು ಎಲಿಸ್ ಅವರ ಅಬಿಪ್ರಾಯವನ್ನೇ ಹೆಚ್ಚು ಖಚಿತಗೊಳಿಸಿ ದ್ರಾವಿಡ ಭಾಷೆಗಳು ಸಂಪೂರ್ಣ ಭಿನ್ನವೆಂದು ಸಾರಿ ಹೇಳಿದರು. ಶ್ರೀರಂಗ ಪಟ್ಟಣದ ಕೃಷ್ಣಮಾಚಾರ್ಯ ಅವರು ತಮ್ಮ 'ಹೊಸಗನ್ನಡ ನುಡಿಗನ್ನಡ ಎಂಬ ವ್ಯಾಕರಣವು' (1838) ಎಂಬ ಗ್ರಂಥದಲ್ಲಿ ಧ್ವನಿ ನಿಯಮಗಳನ್ನು (Phonetic Laws) ಪ್ರಸ್ತಾಪಿಸಿ, ಅವುಗಳ ಆಧಾರದ ಮೇಲೆ ದ್ರಾವಿಡ ಭಾಷೆಗಳು ಸಂಸ್ಕೃತದಿಂದ ಪ್ರತ್ಯೇಕವೆಂದು ಸಾರಿದ ಪ್ರಪ್ರಥಮ ಕನ್ನಡಿಗರೆಂದು ಹೆಸರುವಾಸಿಯಾದರು.

ಬಿಷಪ್ ಡಾ. ಕಾಲ್ಡ್‌ವೆಲರು (1818-1819) ಸು. ಹನ್ನೆರಡು ದ್ರಾವಿಡ ಭಾಷೆಗಳನ್ನು ಗುರುತಿಸಿ, ಆಳವಾಗಿ ಅಧ್ಯಯನ ಮಾಡಿ 'ತೌಲನಿಕ ದ್ರಾವಿಡ ವ್ಯಾಕರಣ' (Comparative Grammar of the Dravidian orSouth Indian Family of languages ) ಎಂಬ ಬೃಹತ್ ಗ್ರಂಥವನ್ನು 1856ರಲ್ಲಿ ಪ್ರಕಟಿಸಿ ತೌಲನಿಕ ಭಾಷಾ ವಿಜ್ಞಾನದ ಪಿತಾಮಹರೆನಿಸಿಕೊಂಡರು. ಸಂಸ್ಕೃತ ಮೂಲಭೂತವಾದಿಗಳು ಸ್ವತಂತ್ರ ದ್ರಾವಿಡಭಾಷಾ ವರ್ಗವನ್ನು ಒಪ್ಪಲಾರದೆ ವೈಜ್ಞಾನಿಕ ತಳಹದಿಯನ್ನಿತ್ತ ಮಿಷನರಿಗಳನ್ನು ಖಂಡಿಸಿದರು. ಇವರಲ್ಲಿ ಎಂ. ಶೇಷಗಿರಿ ಸಾಸ್ತ್ರಿ, ಕೊಳಕೆ ಪರಮೇಶ್ವರಯ್ಯ ಮತ್ತು ಆರ್. ಸ್ವಾಮಿನಾಥ ಅಯ್ಯರ್ ಪ್ರಮುಖರು (ನೋಡಿ : Bh.k.p 312 f.n. 6 ಮತ್ತು ಹಂಪನಾ, ಪು. 20-22).

ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಕಾಲ್ಡ್‌ವೆಲ್, ಗುಂಡರ್ಟ್ ಹಾಗೂ ಕಿಟ್ಟೆಲ್ಲರು ದ್ರಾವಿಡ ಭಾಷೆಗಳಿಂದ ಸಂಸ್ಕೃತ ಸ್ವೀಕರಿಸಿದ ಪದಗಳ ಬಗೆಗೆ ಸಂಶೋಧನೆ ನಡೆಯಿಸಿದರು. ದ್ರಾವಿಡದಿಂದ ಸಂಸ್ಕೃತಕ್ಕೆ ಎರವಲಾಗಿ ಹೋದ 420 ಶಬ್ದಗಳ ಪಟ್ಟಿಯನ್ನು ರೆ. ಫರ್ಡಿನಾಂಡ್ ಕಿಟ್ಟೆಲ್ಲರು (1832-1903) ತಮ್ಮ 'ಕನ್ನಡ - ಇಂಗ್ಲಿಷ್ ಶಬ್ದಕೋಶ' (1894) ದಲ್ಲಿ ಕೊಟ್ಟು ಸಂಸ್ಕೃತ ಪಡೆದುಕೊಂಡ ದ್ರಾವಿಡ ಪದಗಳನ್ನು ಗುರುತಿಸಲು ಕೆಲವು ತತ್ವಗಳನ್ನು ನಿರೂಪಿಸಿದ್ದಾರೆ. ಈ ಕಾರಣದಿಂದಾಗಿ ಈ ಬೃಹತ್ ಗ್ರಂಥ ದ್ರಾವಿಡ ಭಾಷಾ ವಿಜ್ಞಾನದಲ್ಲಿ ಅತ್ಯಂತ ಗಮನಾರ್ಹ ಕೃತಿಯಾಗಿದೆ.

ಜಿ.ಎ. ಗ್ರಿಯರ್‌ಸನ್ ಇವರ ನೇತೃತ್ವದಲ್ಲಿ ಭಾರತೀಯ ಭಾಷೆಗಳ ಸರ್ವೇಕ್ಷಣೆ ನಡೆದು Linguistic Survey of India ಎಂಬ ಗ್ರಂಥ ನಾಲ್ಕು ಸಂಪುಟಗಳಲ್ಲಿ ಬೆಳಕನ್ನು ಕಂಡಿತು. ಆದರೆ ದುರ್ದೈವವಶಾತ್ ದ್ರಾವಿಡ ಭಾಷೆಗಳ ಕುರಿತಾದ ಕೊನೆಯ ಸಂಪುಟದಲ್ಲಿ (ಕಲ್ಕತ್ತಾ, 1906) ದ್ರಾವಿಡ ಭಾಷೆಗಳ ವಿವರ, ಸರ್ವೇಕ್ಷಣೆಯ ಕೊರತೆಯಿಂದಾಗಿ, ಲಭ್ಯವಾಗಿಲ್ಲ.

ಭಾರತೀಯ ವಿದ್ವಾಂಸರಲ್ಲಿ ಕೆ.ವಿ. ಸುಬ್ಬಯ್ಯ ಮತ್ತು ಎಲ್.ವಿ. ರಾಮಸ್ವಾಮಿ ಅಯ್ಯರ್ ಇವರ ಸಂಶೋಧನೆ ಶ್ಲಾಘನೀಯ (ನೋಡಿ Bh.k. p.314 f.n. 11 & 12 ). ಎಲ್.ವಿ.ಆರ್. ಇವರಿಗೆ ತಮಿಳು ಮಲಯಾಳಂಗಳ ಜೊತೆಗೆ ತುಳು, ಕನ್ನಡ, ತೆಲುಗು ಭಾಷೆಗಳ ಜ್ಞಾನ ಚೆನ್ನಾಗಿತ್ತು. ಹಲವು ಇಂಡೋ - ಯುರೋಪಿಯನ್ ಭಾಷೆಗಳ ಪರಿಚಯವಿತ್ತು. ಈ ಕಾರಣದಿಂದಾಗಿ ಅವರು ಹಲವಾರು ಉಪಯುಕ್ತ ಹಾಗೂ ಮೌಲಿಕ ತೌಲನಿಕ ದ್ರಾವಿಡ ಸಂಬಂಧಿತ ಲೇಖನಗಳನ್ನು ಬರೆದರು. ಅವುಗಳಲ್ಲಿ 'ದ್ರಾವಿಡ ಸಂಧಿ' 'ದ್ರಾವಿಡ ಧ್ವನಿ ಬದಲಾವಣೆ' 'ತಮಿಳು - ಮಲಯಾಳಂಗಳಲ್ಲಿ ವರ್ತ್ಸ್ಯ ಸ್ಪರ್ಶಗಳ ಇತಿಹಾಸ' ಮುಂತಾದ ಸಂಶೋಧನಾತ್ಮಕ ಲೇಖನಗಳನ್ನೂ ಗ್ರಂಥಗಳನ್ನೂ ಬರೆದಿದ್ದಾರೆ. ತೀನಂಶ್ರೀಯವರ ಕನ್ನಡ ಧ್ವನಿವ್ಯತ್ಯಾಸ ನಿಯಮವನ್ನು ಕುರಿತ ಮುದ್ರಿತ ಲೇಖನ ವಿಶ್ವಮಾನ್ಯವಾಗಿದೆ.

ಯೂಲ್ಸ್ ಬ್ಲಾಕ್ (Jules Bloch) ಎಂಬಾತ 1946 ರಲ್ಲಿ Structure Grammaticable des langues Dravidiennes ಎಂಬ ಗ್ರಂಥವನ್ನು ಬರೆದು ಕಾಲ್ಡ್‌ವೆಲರ ಸಿದ್ಧಾಂತಗಳಿಗೆ ಹೆಚ್ಚಿನ ಆಧಾರಗಳನ್ನು ಒದಗಿಸಿಕೊಟ್ಟ. ದ್ರಾವಿಡ ನಾಮಪದ ಹಾಗೂ ಕ್ರಿಯಾಪದಗಳ ತೌಲನಿಕ ಅಧ್ಯಯನಕ್ಕೆ ಈ ಗ್ರಂಥ ಅಮೂಲ್ಯವಾದ ಆಕರವಾಗಿದೆ. ಅಮೇರಿಕೆಯ ಇ.ಎಚ್. ಟಟ್ಲ್ ಇವರ ಅಧ್ಯಯನ ಸಹಾಯಕಾರಿಯಾದರೂ ಕೆಲವೊಂದು ಪ್ರಾಕ್ ರೂಪಗಳು ವಿಚಿತ್ರವೆನಿಸುತ್ತವೆ. ಅದೇನೇ ಇದ್ದರೂ

ಇಂಗ್ಲೆಂಡಿನ ಟ.ಬರೊ ಮತ್ತು ಕೆಲಿಫೋರ್ನಿಯಾದ ಎಂ. ಬಿ. ಎಮಿನೊ ಇವರ ಸಂಶೋಧನೆಗಳು ದ್ರಾವಿಡ ಭಾಷೆಗಳ ತೌಲನಿಕ ಅಧ್ಯಯನದಲ್ಲಿ ಮೈಲುಗಲ್ಲುಗಳೆಂದರೆ ಅತಿಶಯೋಕ್ತಿಯಾಗಲಾರದು. ನೀಲಗಿರಿ ಬೆಟ್ಟದ ಜನಾಂಗಗಳ ಭಾಷೆಗಳ ಅಧ್ಯಯನ, ದ್ರಾವಿಡ ಕ್ರಿಯಾಪದಗಳು : 'ಬಾ' ಮತ್ತು 'ಕೊಡು', ಎಮಿನೊ ಅವರ ವೈಯಕ್ತಿಕ ಮಹತ್ವವಾದ ಕೊಡುಗೆಗಳು. ಸಂಸ್ಕೃತಕ್ಕೆ ದ್ರಾವಿಡದಿಂದ ಎರವಲಾಗಿ ಹೋದ ಪದಗಳ ಅಧ್ಯಯನ ಬರೊ ಅವರ ಅತ್ಯುತ್ತಮ ಕಾಣಿಕೆ. ಈ ಸಂಶೋಧನಾತ್ಮಕ ಲೇಖನಗಳು 1938 - 1946 ರ ವರೆಗಿನ BSOAS ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡವು.

### ೪.೨ ಸ್ವಾತಂತ್ರ್ಯೋತ್ತರ ಯುಗ :

ಸ್ವಾತಂತ್ರೋಯತ್ತರ ಯುಗದ ದ್ರಾವಿಡ ಭಾಷಾ ವಿಜ್ಞಾನದ ತೌಲನಿಕ ಅಧ್ಯಯನವನ್ನು ಪ್ರಮುಖವಾಗಿ ಈ ಐದು ವರ್ಗಗಳಲ್ಲಿ ವಿಭಾಗಿಸಬಹುದು :

1. ಧ್ವನಿಮ ವಿಜ್ಞಾನ (Phonology)
2. ಆಕೃತಿಮ ವಿಜ್ಞಾನ (Morphology)
3. ಶಬ್ದೋತ್ಪತ್ತಿ ವಿಜ್ಞಾನ (Etymology)
4. ಭಾಷಾ ಸಂಪರ್ಕ (Language Contact) ಮತ್ತು
5. ಉಪವರ್ಗೀಕರಣ (Subgrouping)

### ಧ್ವನಿಮ ವಿಜ್ಞಾನ

ಎಮಿನೊ ಮತ್ತು ಬರೊ ಮಾಡಿದ ಅಧ್ಯಯನಗಳೇ ದ್ರಾವಿಡ ಧ್ವನಿಮ ವಿಜ್ಞಾನ ಅಧ್ಯಯನಕ್ಕೆ ಬುನಾದಿ. ಭದ್ರಿರಾಜು ಕೃಷ್ಣಮೂರ್ತಿಯವರ Teleugu Verbal Bases (1961) ಎಂಬ ಗ್ರಂಥದಲ್ಲಿ ದ್ರಾವಿಡ ಧ್ವನಿಮಗಳ ತೌಲನಿಕ ಅಧ್ಯಯನ ಆಕೃತಿಮ ವಿವೇಚನೆಗೆ ಪೀಠಿಕೆಯಾಗಿ ಬಹು ವಿಸ್ತೃತ ರೂಪದಲ್ಲಿ ಕಂಡುಬರುತ್ತದೆ. ತದನಂತರದ ಅಧ್ಯಯನಗಳಲ್ಲಿ ಎಮಿನೊ ಅವರ Dravidian comparative Phonology (Annamalainagar, 1970) ಮತ್ತು ಜ್ವೆಲೆಬಿಲ್ ಅವರ Comparative Dravidian Phonology (Mouton,1970) ಎಂಬ ಎರಡು ಗ್ರಂಥಗಳು ಅತ್ಯಂತ ಅಮೂಲ್ಯವಾದವುಗಳಾಗಿವೆ.

### ಆಕೃತಿಮ ವಿಜ್ಞಾನ

ಎಮಿನೊ ಅವರ 'ದ್ರಾವಿಡ ಸಂಬಂಧವಾಚಕಗಳು ' (1930) ಸ್ವಾತಂತ್ರ್ಯೋತ್ತರ ಕಾಲದಲ್ಲಿ ಬಂದರೂ ಅವರ ಸಂಖ್ಯಾವಾಚಕಗಳ ಪ್ರಾಕ್-ರೂಪಗಳು (1957), ನಿರ್ದೇಶಕ ಸರ್ವನಾಮಗಳ ಅಧ್ಯಯನ (1960) ಹಾಗೂ 'ಬ್ರಾಹೂಯಿ ಮತ್ತು ತೌಲನಿಕ ದ್ರಾವಿಡ ವ್ಯಾಕರಣ' ಗಮನಾರ್ಹವಾದ ವಿವೇಚನೆಗಳಾಗಿವೆ.

ಭ.ಕೃಷ್ಣಮೂರ್ತಿಯವರು ತೆಲುಗನ್ನು ತಳಹದಿಯನ್ನಾಗಿಟ್ಟುಕೊಂಡು ದ್ರಾವಿಡ ಆಕೃತಿಮ ವಿಜ್ಞಾನದ ತೌಲನಿಕ ಅಧ್ಯಯನವನ್ನು ತಮ್ಮ Telugu Verbal Bases ಎಂಬ ಗ್ರಂಥದಲ್ಲಿ 1961

ರಲ್ಲಿ ಹೊರತಂದಿದ್ದಾರೆ. ಪಿ.ಎಸ್. ಸುಬ್ರಹ್ಮಣ್ಯಂ (1964) ಪರ್ಜಿ ಭೂತಕಾಲ ಪ್ರಕೃತಿ 'ಇ' ಕಾರದ ಬಗೆಗೆ, 1965 ರಲ್ಲಿ ತಮಿಳು ಮತ್ತು ಕುಯಿ ಸಕರ್ಮಕ ಮತ್ತು ಅಕರ್ಮಕ ರೂಪಗಳನ್ನು ಕುರಿತು ವಿಶ್ಲೇಷಿಸಿ ಪ್ರಕಟಿಸಿದ್ದಾರೆ. 1968ರಲ್ಲಿ ಭ.ಕೃಷ್ಣಮೂರ್ತಿಯವರು ದ್ರಾವಿಡ ಪುರುಷವಾಚಕ ಸರ್ವನಾಮಗಳ ಬಗೆಗೆ ವಿವೇಚಿಸಿ ಉತ್ತಮ ಮತ್ತು ಮಧ್ಯಮ ಪುರುಷವಾಚಕಗಳಲ್ಲಿ ಕಂಡುಬರುವ ಧ್ವನಿಮಾತ್ಮಕ ಹಾಗೂ ಆಕೃತಿಮಾತ್ಮಕ ಸಮಸ್ಯೆಗಳನ್ನು ಚರ್ಚಿಸಿದ್ದಾರೆ.

ಅಣ್ಣಾಮಲೈ ವಿಶ್ವವಿದ್ಯಾಲಯದಿಂದ ಪ್ರಕಟಗೊಂಡ ಎಸ್.ವಿ. ಷಣ್ಮುಗಂ ಅವರ 'ದ್ರಾವಿಡ ನಾಮಪದಗಳ ತೌಲನಿಕ ಅಧ್ಯಯನ' (1971) ಹಾಗೂ ಪಿ.ಎಸ್. ಸುಬ್ರಹ್ಮಣ್ಯಂ ಅವರ 'ದ್ರಾವಿಡ ಕ್ರಿಯಾಪದಗಳ ತೌಲನಿಕ ಅಧ್ಯಯನ' (1971) ಹೆಸರುವಾಸಿ ಕೃತಿಗಳಾಗಿವೆ. ಕಮಿಲ್ ಸ್ವೆಲೆಬಿಲ್ ಇವರ 'ತೌಲನಿಕ ದ್ರಾವಿಡ ಆಕೃತಿಮ ವಿಜ್ಞಾನ' ಇತ್ತೀಚೆಗಿನ ಸಂಶೋಧನೆಗಳನ್ನೊಳಗೊಂಡ ಕೃತಿಯಾಗಿದೆ.

### ೪.೨.೩ ಶಬ್ದೋತ್ಪತ್ತಿ ವಿಜ್ಞಾನ

ಶಬ್ದೋತ್ಪತ್ತಿ ವಿಜ್ಞಾನದಲ್ಲಿ ಅತ್ಯಂತ ಮೌಲಿಕ ಕೃತಿ ಎಂದರೆ ಟಿ. ಬರೋ ಹಾಗೂ ಎಂ. ಬಿ. ಎಮಿನೊ ಸಂಪಾದಿಸಿದ Dravidian Etymological Dictionary ಎಂಬ ದ್ರಾವಿಡ ಶಬ್ದೋತ್ಪತಿ ಕೋಶ. ಇದು 1961 ರಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಿಂದ ಪ್ರಕಟಗೊಂಡಿತು. ಇದು ಪರಿಷ್ಕೃತಗೊಂಡು ಹಾಗೂ ವಿಸ್ತೃತಗೊಂಡು 1984 ರಲ್ಲಿ ಪ್ರಕಟಗೊಂಡಿದೆ.

ಭ.ಕೃಷ್ಣಮೂರ್ತಿಯವರ 'ತೆಲುಗು ಕ್ರಿಯಾಪ್ರಕೃತಿಗಳು' ಪರ್ಜಿ, ಗದಬ, ಕುಯಿ, ಕುವಿ ಮತ್ತು ಗೊಂಡಿಗಳ ಬಗೆಗೆ ಬರೊ ಮತ್ತು ಭಟ್ಟಾಚಾರ್ಯ ಮಾಡಿದ ಅಧ್ಯಯನಗಳು, ಅಂತೆಯೇ ಭಟ್ಟಾಚಾರ್ಯರ Naiki of Chanda ಇವುಗಳಲ್ಲಿ ಶಬ್ದೋತ್ಪತ್ತಿ ವಿಚಾರಗಳು ಹೇರಳವಾಗಿ ಮೂಡಿಬಂದಿದೆ.

### ೪.೩.೪ ಭಾಷಾ ಸಂಪರ್ಕ

ಬರೋ ಅವರ Dravidian Studies VII (1948) The Sanskrit language (1958) ಹಾಗೂ ಎಮಿನೊ ಅವರ Linguistic Pre-histoy of India (1954) ಇವುಗಳಲ್ಲಿ ದ್ರಾವಿಡ ಭಾಷೆಗಳಿಂದ ಸಂಸ್ಕೃತಕ್ಕೆ ಸೇರಿದ ಶಬ್ದಗಳ ವಿವೇಚನೆ ಇದೆ. ಇವುಗಳ ಬಗ್ಗೆ ಈ ಮೊದಲೇ ಹೇಳಿದಂತೆ ಬುನಾದಿ ಹಾಕಿದವರೆಂದರೆ ಗುಂಡರ್ಟ್ ಮತ್ತು ಕಿಟ್ಟೆಲ್ಲರು. ಎಮಿನೊ ಅವರು ತಮ್ಮ 'India as a Linguistic Area' (1956) ಎಂದು ಲೇಖನದಲ್ಲಿ ದ್ರಾವಿಡ, ಇಂಡೋ-ಆರ್ಯನ್ ಮತ್ತು ಮುಂಡಾ ಭಾಷೆಗಳಲ್ಲಿಯ ಧ್ವನಿಮಾತ್ಮಕ ಮತ್ತು ಆಕೃತಿಮಾತ್ಮಕ ವಿಚಾರಗಳನ್ನು ತೌಲನಿಕವಾಗಿ ಚರ್ಚಿಸಿದ್ದಾರೆ. ಎಮಿನೊ (1964) ಮತ್ತೊಂದು ಲೇಖನದಲ್ಲಿ ಬ್ರಾಹೂಯಿ ಭಾಷೆಯಲ್ಲಿ ಭಾಷಾ ಸಂಪರ್ಕದಿಂದಾಗಿ ಉಂಟಾದ ಬದಲಾವಣೆಗಳ ಬಗೆಗೆ ಚರ್ಚಿಸಿದ್ದಾರೆ.

ಎಂ. ಎಸ್. ಅಂದ್ರೋನಫ್ (M.s. Andronov, 1964) ಇವರು ಇಂಡೋ ಆರ್ಯನ್ ಭಾಷಾಸಂಪರ್ಕದಿಂದಾಗಿ ದ್ರಾವಿಡ ಭಾಷೆಗಳಲ್ಲಾದ ಭಾಷಿಕ ಬದಲಾವಣೆಗಳ ಕುರಿತು ವಿವೇಚಿಸಿದ್ದಾರೆ. ವಿಲ್ಯಂ ಬ್ರೈಟ್ ಇವರ 'Dravidian Metophony' (1966) ಕೂಡ ಈ ಸಂದರ್ಭದಲ್ಲಿ ನೆನಪಿಸಬೇಕಾದ ಅಧ್ಯಯನ.

## ೪.೨.೫ ಉಪವರ್ಗೀಕರಣ

ಎಲ್.ವಿ. ರಾಮಸ್ವಾಮಿ ಅಯ್ಯರ್ ದ್ರಾವಿಡ ಭಾಷೆಗಳನ್ನು ದಕ್ಷಿಣ ದ್ರಾವಿಡ ಮತ್ತು ಉತ್ತರ ದ್ರಾವಿಡಗಳೆಂದು ವರ್ಗೀಕರಿಸುತ್ತಾರೆ. ಅವರ ಪ್ರಕಾರ ತೆಲುಗು ದಕ್ಷಿಣ ದ್ರಾವಿಡ ವರ್ಗಕ್ಕೆ ಸೇರಿದ ಭಾಷೆ. ಟಟ್ಲ್ ಇವರ ಪ್ರಕಾರ ತೆಲುಗು, ಗೊಂಡಿ, ಕೂಯಿ ಮತ್ತು ತುಳು ಭಾಷೆಗಳಲ್ಲಿಯ ವಾಕ್ಯಶ್ರುತಿ ಏಕಪ್ರಕಾರವಾಗಿರುವುದರಿಂದ ಇವೆಲ್ಲವೂ ಒಂದು ಉಪವರ್ಗಕ್ಕೆ ಸೇರಿದ ಭಾಷೆಗಳು. ಟಿ.ಬರೊ ಇವರ ಅಭಿಪ್ರಾಯದಂತೆ ಶಬ್ದದಾದಿಯ * ಚ್/ಸ್ ಲೋಪ, ದಕ್ಷಿಣ ದ್ರಾವಿಡ ಭಾಷೆಗಳ ಸಾಮಾನ್ಯ ಲಕ್ಷಣ. ಬರೊ ಮತ್ತು ಭಟ್ಟಾಚಾರ್ಯರು (1953) ಕೊಲಾಮಿ ಮತ್ತು ನಾಯ್ಕಿ, ಗೊಂಡಿ ಮತ್ತು ಕೊಂಡ; ಕುಇ ಮತ್ತು ಕುವಿಗಳನ್ನು ಉಪವರ್ಗಗಳೆಂದು ಗುರುತಿಸುತ್ತಾರೆ. ಎಮಿನೊ (1955) ಅದನ್ನು ಒಪ್ಪಿಕೊಳ್ಳುತ್ತಾರೆ.

ಭ. ಕೃಷ್ಣಮೂರ್ತಿ ತೆಲುಗನ್ನು ಮಧ್ಯ ದ್ರಾವಿಡಕ್ಕೆ ಸೇರಿಸುತ್ತಾರೆ. ಅದರ ನೆರೆಹೊರೆಯಲ್ಲಿ ದಕ್ಷಿಣ ದ್ರಾವಿಡ ಭಾಷೆಗಳಿರುವುದರಿಂದ ಅದು ಕೆಲವು ದಕ್ಷಿಣ ದ್ರಾವಿಡ ಭಾಷೆಗಳ ಲಕ್ಷಣಗಳನ್ನು ಪಡೆದುಕೊಂಡಿದೆ ಎಂಬುದು ಅವರ ವಾದ. ಎಮಿನೊ ಅವರು ಭೂತಕಾಲದ ಪ್ರತ್ಯಯಗಳ ಆಧಾರದ ಮೇಲೆ ದಕ್ಷಿಣ ದ್ರಾವಿಡ ಭಾಷೆಗಳನ್ನು ಉಪವರ್ಗೀಕರಿಸುತ್ತಾನೆ. ಬ್ರಾಹೂಯಿ ಭಾಷೆಯ ಗುಣಲಕ್ಷಣಗಳನ್ನು ಗಮನಿಸಿ ಅದನ್ನು ಉತ್ತರ ದ್ರಾವಿಡ ಉಪವರ್ಗದಲ್ಲಿ ಸೇರಿಸುತ್ತಾನೆ.

ಈ ಮಾರ್ಗೀಯ ಅಧ್ಯಯನಗಳಲ್ಲದೆ ಇತ್ತೀಚೆಗಿನ ಹಲವಾರು ದ್ರಾವಿಡ ಭಾಷಾ ಅಧ್ಯಯನಗಳು ಅಣ್ಣಾಮಲೈ ವಿಶ್ವವಿದ್ಯಾಲಯ, ಉಸ್ಮಾನಿಯಾ ವಿಶ್ವವಿದ್ಯಾಲಯ, ಕರ್ನಾಟಕ ವಿಶ್ವವಿದ್ಯಾಲಯ, ದ್ರವಿಡಿಯನ್ ಲಿಂಗ್ವಿಸ್ಟಿಕ್ ಅಸೋಸಿಯೇಶನ್(ಕೇರಳ), ಇಂಟರ್‌ನ್ಯಾಷನಲ್ ಸ್ಕೂಲ್ ಆಫ್ ದ್ರವಿಡಿಯನ್ ಲಿಂಗ್ವಿಸ್ಟಿಕ್ಸ್(ಕೇರಳ), ಸೆಂಟ್ರಲ್ ಇನ್ಸ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಲ್ಯಾಂಗ್ವೇಜಸ್, ಪಾಂಡಿಚೇರಿಯ ಇನ್‌ಸ್ಟಿಟ್ಯೂಟ್ ಆಫ್ ಲಿಂಗ್ವಿಸ್ಟಿಕ್ಸ್ ಆ್ಯಂಡ್ ಕಲ್ಚರ್ ಮುಂತಾದ ಅಧ್ಯಯನ ಕೇಂದ್ರಗಳು ದ್ರಾವಿಡ ಭಾಷೆಗೆ ಸಂಬಂಧಿಸಿದ ಸಂಶೋಧನೆ ಪ್ರಕಟನೆಗಳನ್ನು ಬೆಳಕಿಗೆ ತರುತ್ತವೆ. ತಮಿಳು ವಿಶ್ವವಿದ್ಯಾಲಯ, ತೆಲುಗು ವಿಶ್ವವಿದ್ಯಾಲಯ, ಕನ್ನಡ ವಿಶ್ವವಿದ್ಯಾಲಯ ಈ ದೆಸೆಯಲ್ಲಿ ಮುಂದುವರೆದು ಈ ಅಧ್ಯಯನಗಳಲ್ಲಿ ಮಾರ್ಗದರ್ಶಿಯಾಗಲು ರೂಪಿತಗೊಂಡಿವೆ. ದ್ರಾವಿಡ ಭಾಷೆ, ಜನಾಂಗ, ಸಂಸ್ಕೃತಿ, ಕಲೆಗಳ ಅಧ್ಯಯನಗಳಿಂದ ಮಾತ್ರ ಅವುಗಳಿಗೆ ಅರ್ಥವಿದೆ ಹಾಗೂ ಭವಿಷ್ಯವಿದೆ. ಈ ಕಾರಣದಿಂದಲೇ ಆಂಧ್ರಪ್ರದೇಶ 'ಕುಪ್ಪಮ್' ಎಂಬಲ್ಲಿ ಪ್ರತ್ಯೇಕ ದ್ರಾವಿಡ ವಿಶ್ವವಿದ್ಯಾಲಯ ಸ್ಥಾಪನೆಗೆ ಪ್ರೊ.ವಿ. ಸುಬ್ರಹ್ಮಣ್ಯಂ ಇವರ ನೇತೃತ್ವದಲ್ಲಿ ಪ್ರಯತ್ನ ನಡೆದಿರುತ್ತದೆ. ಭ. ಕೃಷ್ಣಮೂರ್ತಿ, ವಿ.ಆಯ್.ಸುಬ್ರಹ್ಮಣ್ಯಂ, ಎಸ್.ಅಗಸ್ತ್ಯಲಿಂಗಂ, ಎನ್.ಕುಮಾರಸ್ವಾಮಿರಾಜ, ಪಿ.ಎಸ್. ಸುಬ್ರಹ್ಮಣ್ಯಂ, ಎಸ್.ವಿ. ಷಣ್ಮುಗಂ, ಕೆ. ಕುಶಾಲಪ್ಪಗೌಡ, ಯು.ಪಿ. ಉಪಾಧ್ಯಾಯ ಮೊದಲಾದ ಆಧುನಿಕ ಸಂಶೋಧನಾಕಾರರು, ಹಿಂದಿನ ಟಿ.ಪಿ. ಮೀನಾಕ್ಷಿ ಸುಂದರಂ, ತೀನಂಶ್ರೀ, ಎಲ್.ವಿ. ರಾಮಸ್ವಾಮಿ ಅಯ್ಯರ್ ಮೊದಲಾದವರಂತೆ ತಮ್ಮ ಮೂಲಭೂತ ಅನ್ವೇಷಣೆಗಳಿಂದ ಹಾಗೂ ಸಿದ್ಧಾಂತಗಳಿಂದ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಆರ್.ಸಿ. ಹಿರೇಮಠ, ಎಚ್.ಎಸ್.ಬಿಳಿಗಿರಿ, ಚಿದಾನಂದಮೂರ್ತಿ, ಹಂಪ ನಾಗರಾಜಯ್ಯ, ಬಿ. ರಾಮಚಂದ್ರ ರಾವ್, ವಿಲ್ಯಂ ಮಾಡ್ತ ಮೊದಲಾದವರು ದ್ರಾವಿಡ ಭಾಷೆಗಳ ಅಧ್ಯಯನ ಸಂಶೋಧನೆಗಳಲ್ಲಿ ಹೆಚ್ಚೆಚ್ಚು ತೊಡಗಿಸಿ ಕೊಂಡಿದ್ದಾರೆ. ಕೆಂಪೇಗೌಡ, ಸವದತ್ತಿಮಠ, ಎಂ. ರಾಮ, ಮೊದಲಾದವರು ದ್ರಾವಿಡ ಭಾಷಾ

ವ್ಯಾಸಂಗವನ್ನು ವಿದ್ಯಾರ್ಥಿಗಳಿಗೆ ತಿಳಿಸಿ ಹೇಳುವಲ್ಲಿ ವಿಶೇಷ ಶ್ರಮ ವಹಿಸಿದ್ದಾರೆ. ಇನ್ನೂ ಅನೇಕ ತರುಣ ಪೀಳಿಗೆಯ ಸಂಶೋಧಕರು ತಮಿಳಿನಲ್ಲಿ, ತೆಲುಗಿನಲ್ಲಿ, ಮಲಯಾಳಂದಲ್ಲಿಮತ್ತು ಕನ್ನಡದಲ್ಲಿ ದ್ರಾವಿಡ ಭಾಷಾ ಸಂಶೋಧನೆಗಳನ್ನು ಮಂಡಿಸುತ್ತಿದ್ದಾರೆ ಹಾಗೂ ಪ್ರಕಟಿಸುತ್ತಿದ್ದಾರೆ. ಆದರೆ ಎಮಿನೊ ಮತ್ತು ಬರೊ ಮಟ್ಟದ ವಿದ್ವಾಂಸರು ಕಾಣದೆ ಇರುವುದು ಮಾತ್ರ ದುರ್ದೈವದ ಸಂಗತಿ!

## ೫.೦. ದ್ರಾವಿಡ ಭಾಷೆಗಳ ವರ್ಗೀಕರಣ

ಭಾಷಾ ರಚನೆಯನ್ನು ಗಮನಿಸಿ ದ್ರಾವಿಡ ಭಾಷೆಗಳನ್ನು ಮೂರು ವರ್ಗಗಳಲ್ಲಿ ವಿಭಜಿಸುತ್ತಾರೆ.

1. ದಕ್ಷಿಣ ದ್ರಾವಿಡ ಭಾಷೆಗಳು
2. ಮಧ್ಯ ದ್ರಾವಿಡ ಭಾಷೆಗಳು
3. ಉತ್ತರ ದ್ರಾವಿಡ ಭಾಷೆಗಳು

## ೫.೧. ದಕ್ಷಿಣ ದ್ರಾವಿಡ ಭಾಷೆಗಳು ವರ್ಗೀಕರಣ



## ೫.೨. ಮದ್ಯ ದ್ರಾವಿಡ ಭಾಷೆಗಳ ವರ್ಗೀಕರಣ




## ೫.೩. ಉತ್ತರ ದ್ರಾವಿಡ ಭಾಷೆಗಳ ವರ್ಗೀಕರಣ




## ೬. ದ್ರಾವಿಡ ಭಾಷೆಗಳ ವಿಶಿಷ್ಟ ಲಕ್ಷಣಗಳು

ದ್ರಾವಿಡ ಭಾಷೆಗಳು ತಮ್ಮದೇ ಆದ ವಿಶಿಷ್ಟ ಸ್ವರೂಪ ಲಕ್ಷಣಗಳನ್ನು ಹೊಂದಿದ್ದು ಅವು ಸಂಸ್ಕೃತಜನ್ಯವಲ್ಲ ಎಂಬುದನ್ನು ಖಚಿತಗೊಳಿಸುತ್ತವೆ.

### ೬.೧. ಧ್ವನಿಗಳು

1. ಋ, ೠ, ಌ, ೡ, ಶ್, ಷ್ ಮತ್ತು ಯೋಗವಾಹಗಳು ಇಲ್ಲ
2. ಲ್ ಳ್‌ಗಳಿಗೆ ಧ್ವನಿಮ ವ್ಯತ್ಯಾಸವಿದೆ : ಮಲೆ + ಮಳೆ
3. ಎ ಏ, ಒ ಓ ಗಳಿಗ ಧ್ವನಿಮ ವ್ಯತ್ಯಾಸವಿದೆ

   ಬೆಳೆ + ಬೇಳೆ, ಒಲೆ + ಓಲೆ

4. ವರ್ತ್ಸ್ಯ ಪ್ರಕಾರ ಉಂಟು (ಈಗಲೂ ಕೋತ, ತೊದ, ಮಲಯಾಳಂ, ತಮಿಳುಗಳಲ್ಲಿ ದ್ವಿತ್ವದಲ್ಲಿದೆ).

5. ಪದಾದಿಯಲ್ಲಿ ಸಂಯುಕ್ತ ವ್ಯಂಜನಗಳಿಲ್ಲ; ಪದ ಮಧ್ಯದಲ್ಲಿ ಎರಡು ಆಕೃತಿಮಗಳು ಸೇರುವಲ್ಲಿ ಮಾತ್ರ ಸಂಯಕ್ತ ವ್ಯಂಜನಗಳಿರುತ್ತವೆ.

6. ಮಹಾಪ್ರಾಣಗಳಿಲ್ಲ.

## ೬.೨. ವ್ಯಾಕರಣ

1. ಪೂರ್ವ ಪ್ರತ್ಯಯಗಳು ಇಲ್ಲ.
2. ವಚನಗಳು ಎರಡು.
3. ತರತಮ ಭಾವವಿಲ್ಲ.
4. ಮಹತ್ ಮತ್ತು ಅಮಹತ್ ಎರಡು ಲಿಂಗಭೇದ ಎರಡು.
5. ಮಾನವ ಮತ್ತು ಮಾನವೇತರ ಎಂದು ಸಂಖ್ಯಾವಾಚಿಗಳಲ್ಲಿ ಎರಡು ರೀತಿ.
6. ನಾಮಗುಣವಾಚಿಗಳು ಅವ್ಯಯಗಳಾಗಿರುತ್ತವೆ.
7. ನಿಷೇಧ ಸೂಚಕ, ಕ್ರಿಯಾಪದದಲ್ಲಿ ಬರುತ್ತದೆ.
8. ವಾಕ್ಯರಚನೆ, ಕರ್ತೃ - ಕರ್ಮ - ಕ್ರಿಯಾಪದ ಅನುಕ್ರಮದಲ್ಲಿ ಸಾಮಾನ್ಯವಾಗಿ ಇರುತ್ತದೆ.

## ೭.೦. ಮೂಲ ದ್ರಾವಿಡ ಭಾಷಾ ಸ್ವರೂಪ

ಮೂಲದ್ರಾವಿಡದ ಸ್ವರೂಪ ತಿಳಿಯಲು ಅದರ ಧ್ವನಿಗಳನ್ನು ಮತ್ತು ವ್ಯಾಕರಣವನ್ನು ವಿವೇಚಿಸಬೇಕು.

## ೭.೧. ಧ್ವನಿಗಳು

ಧ್ವನಿಗಳಲ್ಲಿ ಸ್ವರ ಮತ್ತು ವ್ಯಂಜನ ಎಂದು ಎರಡು ಪ್ರಭೇದಗಳು.

1. ಸ್ವರಗಳು : ಸ್ವರಗಳಲ್ಲಿ ಹ್ರಸ್ವ ಮತ್ತು ದೀರ್ಘ ಎಂದು ಎರಡು ತೆರ.
   ಅ) ಹ್ರಸ್ವ ಸ್ವರಗಳು : ಅ, ಇ, ಉ, ಎ, ಒ = 5
   ಆ) ದೀರ್ಘ ಸ್ವರಗಳು : ಆ, ಈ, ಊ, ಏ, ಓ = 5

2. ವ್ಯಂಜನಗಳು :

| | ಕಂಠ್ಯ | ತಾಲವ್ಯ | ಮೂರ್ಧನ್ಯ | ದಂತ | ವರ್ತ್ಸ್ಯ | ಉಭಯೋಷ್ಠ್ಯ |
|---|---|---|---|---|---|---|
| 5. ಸ್ಪರ್ಶಗಳು | ಕ್ | ಚ್ | ಟ್ | ತ್ | ತ್ | ಪ್ |
| 4. ಅನುನಾಸಿಕಗಳು | – | ಞ | – | ಣ್ | ನ್ | ಮ್ |
| 2. ಕಂಪಿತಗಳು | – | – | – | – | ರ್ | – |
| 3 ಪಾರ್ಶ್ವಿಕಗಳು | – | – | ಳ್, ೞ್ | ಲ್ | – | – |
| 2 ಅರೆವ್ಯಂಜನಗಳು | – | ಯ್ | – | – | – | ವ್ |
| 16 | | | | | | |

## ೭.೩. ವ್ಯಾಕರಣ

### 1. ವಿಭಕ್ತಿ ಪ್ರತ್ಯಯಗಳು

| | | | |
|---|---|---|---|
| ದ್ವಿತೀಯ | – ಆನ್, | –ಅಯ್ | – ಸ್ವರ + ನ್ಕ್ |
| ತೃತೀಯ | – ಆನ್, | –ಅಲ್, | – ಒಡು/ಓಡು/ ಸ್ವರ+ನ್ |
| ಚತುರ್ಥಿ | –ಕ್ಕ್ + ಸ್ವರ | | |
| ಪಂಚಮಿ | –ನ್, ಇನ್ತು, –ನ್ತು | | |
| ಷಷ್ಠಿ | –ಅ, –ಅತು | | |
| ಸಪ್ತಮಿ | –ಅನ್, ಆನ್/ಅಲ್, (ಅ) ತ್ತ್ | | |

### 2. ಪುರುಷವಾಚಕ ಸರ್ವನಾಮಗಳು

| ಪುರುಷ | ಏಕವಚನ | ಬಹುವಚನ |
|---|---|---|
| ಉತ್ತಮ | ಯಾನ್ | ಯಾಮ್ (ಸಮಾವೇಶಕ) |
| | | ನಾಮ್ (ಅಸಮಾವೇಶಕ) |
| ಮಧ್ಯಮ | ನೀನ್ | ನೀಮ್/ನಿರ್ |
| ಪ್ರಥಮ | ಅವನ್ (ಮಹತ್) | ಅವರ್ |
| | ಅದು (ಅಮಹತ್) | ಅವೈ |

3. ಆತ್ಮಾರ್ಥಕ ಸರ್ವನಾಮ : ತಾನ್

4. ಪ್ರಶ್ನಾರ್ಥಕ ಸರ್ವನಾಮ : ಯಾ

5. ಬಹುವಚನ ಪ್ರತ್ಯಯಗಳು :

ಮಹತ್ : – ಅರ್, –ವರ್

ಅಮಹತ್ : – ಳ್, –ಕಳ್

6. ಮೂಲ ಪ್ರಕೃತಿಗಳು

ಮೂಲ ದ್ರಾವಿಡದಲ್ಲಿ ಕ್ರಿಯಾ ಪ್ರಕೃತಿಗಳು ಹಾಗೂ ನಾಮಪ್ರಕೃತಿಗಳು ಹೆಚ್ಚಾಗಿ ವ್ಯಂಜನಾಂತಗಳಿದ್ದು ಕ್ರಿಯಾಪ್ರಕೃತಿಗಳು ಏಕಾಕ್ಷರೀಯವಾಗಿವೆ :

| ನಾಮಪ್ರಕೃತಿಗಳು | ಕ್ರಿಯಾಪ್ರಕೃತಿಗಳು |
|---|---|
| ಕಾಲ್ | ತಿನ್ |
| ಕಣ್ | ಉಣ್ |
| ಮೀನ್ | ಕಾಣ್ ಇತ್ಯಾದಿ |

## ೮.೦. ಭಾಷಾಪ್ರಕ್ರಿಯೆಗಳು

ದ್ರಾವಿಡ ಭಾಷೆಗಳಲ್ಲಿ ಹೆಚ್ಚಾಗಿ ಕಂಡುಬರುವ ಧ್ವನಿ ಬದಲಾವಣೆಗಳೆಂದರೆ :

1. ಇ > ಎ, ಉ > ಒ ಪರಿವರ್ತನೆ

2. ಕಕಾರದ ತಾಲವ್ಯೀಕರಣ

3. ಶಬ್ದದ ಆದಿಯ ಚಕಾರದ ಲೋಪ

4. ಅಘೋಷಗಳ ಘೋಷೀಕರಣ

5. ವರ್ಣ ಪಲ್ಲಟ

1. ಇ/ಉ > ಎ/ಒ ಪರಿವರ್ತನೆ : ಮೂಲ ಶಬ್ದದ ಆದಿಯ ಅಕ್ಷರದಲ್ಲಿ ಇ/ಉ ಸ್ವರವಿದ್ದು ಅದರ ಮುಂದೆ ಯಾವುದೇ ವ್ಯಂಜನ ಬಂದು ಅದಕ್ಕೆ ತದ್ಧಿತ ಸ್ವರ - ಅ ಕೂಡಿದರೆ, ಶಬ್ದದ ಆದಿಯಲ್ಲಿ ಅಕ್ಷರದಲ್ಲಿದ್ದ ಇ/ಉ ಸ್ವರಗಳು ಕ್ರಮವಾಗಿ ಎ/ ಒ ಗಳಾಗಿ ಪರಿವರ್ತಿತಗೊಳ್ಳುತ್ತವೆ.

ಈ ಬದಲಾವಣೆ ದ. ದ್ರಾವಿಡದಲ್ಲಿ ಕನ್ನಡ ಮತ್ತು ತೆಲುಗಿನಲ್ಲಿ ಇಟ್ಟುಕೊಳ್ಳಲಾಗಿದೆ; ತಮಿಳು ಮತ್ತು ಮಲಯಾಳಂಗಳಲ್ಲಿ ಈ ಬದಲಾವಣೆ ಆಗಿಲ್ಲ.

| | ತಮಿಳು/ ಮಲಯಾಳಂ | ತೆಲುಗು/ ಕನ್ನಡ |
|---|---|---|
| *ಇಲೈ | ಇಲೈ/ಇಲ | -ಎಲೆ |
| *ತಿರೈ | ತಿರೈ/ತಿರ | ತೆರ / ತೆರೆ |
| *ಪುಗೈ | ಪುಗೈ/ಪುಗ | ಪೊಗ/ಪೊಗೆ |

2. ಕಕಾರದ ತಾಲವ್ಯೀಕರಣ : ಶಬ್ದದ ಆದಿಯ *ಕಕಾರಕ್ಕೆ ಪೂರ್ವಸ್ವರ ಪರವಾದರೆ ತಮಿಳು, ಮಲಯಾಳಂ ಹಾಗೂ ತೆಲುಗು ಭಾಷೆಗಳಲ್ಲಿ ಕಕಾರ ತಾಲವ್ಯೀಕರಣಗೊಳ್ಳುತ್ತದೆ.

| ಕನ್ನಡ | ತಮಿಳು | ಮಲಯಾಳಂ | ತೆಲುಗು |
|---|---|---|---|
| ಕಿವಿ | ಚೆವಿ | ಚೆವಿ | ಚೆವಿ |
| ಕೆದರು | ಚಿದ | ಚಿದರ್ | ಚೆದರು |
| ಕೆರ್ಪು/ಕೆರವು | ಚೆರುಪ್ಪು | ಚೆರಿಪ್ಪು | ಚೆಪ್ಪು |

3. ಶಬ್ದದ ಆದಿಯ ಚಕಾರ ಲೋಪ :

| | ತಮಿಳು/ಮಲಯಾಳಂ | ಕನ್ನಡ | ತೆಲುಗು |
|---|---|---|---|
| * ಚವಲ್ | ಅವಲ್ | ಅವಲ್ | ಅವಿಯು |
| * ಚುಪು | ಉಪ್ಪು | ಉಪ್ಪು | ಉಪ್ಪು |
| * ಚಯ್ | ಅಂಯ್ದು/ಅಞ್ಜು | ಅಯ್ದು | ಅಯ್ದು |

### 4. ಅಘೋಷಗಳ ಘೋಷೀಕರಣ

ಮೂಲ ದ್ರಾವಿಡ ಭಾಷೆಯಲ್ಲಿ ಶಬ್ದದ ಆದಿಯಲ್ಲಿ ಘೋಷ ಧ್ವನಿಮಗಳು ಇಲ್ಲ. ಆದರೆ ಕಾಲಕ್ರಮೇಣ ಕನ್ನಡ ತೆಲುಗುಗಳಲ್ಲಿ ಘೋಷ ಧ್ವನಿಮಗಳು ಕಂಡುಬರುತ್ತವೆ.

| ತಮಿಳು | ಕನ್ನಡ | ತೆಲುಗು |
|---|---|---|
| ತಿಟ್ಟಂ | ದಿಟ್ಟ | ದಿಟ್ಟಮು |
| ಕಟ್ಟಂ | ಗಡ್ಡ | ಗಡ್ಡಮು |
| ಚೋಳಿಗ್ಯೆ | ಜೋಳಿಗೆ | ಚೋಳಿಯ |

5. ವರ್ಣಪಲ್ಲಟ:

ಆಕೃತಿಮದಲ್ಲಿಯ ಧ್ವನಿಮಗಳ ಪಲ್ಲಟವೇ ವರ್ಣಪಲ್ಲಟ (Metathesis).

* ಅವನ್ಬ > ವಾನ್ಬ > ವಾಂಡು >ವಾಡು (ತೆಲುಗು)

* ಅವರ್ > ವಾರ್ > ವಾರು

* ಮರಮ್ > ಮ್ರಾಮ್ > ಮ್ರಾನ್ > ಮ್ರಾನು

* ಕೊರಲ್ > ಕ್ರೋಲ್ > ಕ್ರೋಲು

### ೯.೦. ಸಮಾರೋಪ :

ಒಟ್ಟಿನಲ್ಲಿ, ದ್ರಾವಿಡ ಭಾಷೆಗಳು ಸಂಸ್ಕೃತಜನ್ಯವಾಗಿರದೆ ಅವು ಒಂದು ವಿಶಿಷ್ಟ ಜನಾಂಗಕ್ಕೆ ಸೇರಿದವುಗಳಾಗಿದ್ದು, ಸ್ವಂತ ಗುಣಲಕ್ಷಣಗಳಿಂದ ಕೂಡಿದ್ದು ಇಂಡಿಯಾದಲ್ಲಿ ಒಂದು ಸ್ವತಂತ್ರ ಭಾಷಾವರ್ಗವನ್ನು ನಿರ್ಮಿಸುತ್ತವೆ ಎಂದು ಸಾರಿ ಅಧ್ಯಯನ ಶಿಸ್ತಿನಲ್ಲಿ ದ್ರಾವಿಡಕ್ಕೆ ಒಂದು ಸ್ವತಂತ್ರ ಸ್ಥಾನಮಾನ ಕಲ್ಪಿಸಿದ ಕೀರ್ತಿ ಕ್ರೈಸ್ತ ಮಿಷನರಿಗಳಿಗೆ ಹಾಗೂ ವಿದ್ವಾಂಸರಿಗೆ ಸಲ್ಲುತ್ತದೆ. ಇವರಲ್ಲಿ ಬಿಷಪ್ ರಾಬರ್ಟ್ ಕಾಲ್ಡವೆಲರು ಅಗ್ರಗಣ್ಯರು. ಈ ದೆಸೆಯಲ್ಲಿ ಭಾರತೀಯ ವಿದ್ವಾಂಸರೂ ಸಂಶೋಧನೆ ಮುಂದುವರೆಯಿಸಿದ್ದಾರೆ. ಇವರಿಗೆ ಎಂ. ಬಿ. ಎಮಿನೊ ಮತ್ತು ಟಿ.ಬರೊ ಹಾಗೂ ಕೆ.ಸ್ವೆಲೆಬಿಲ್ ಮಾರ್ಗದರ್ಶಿಯಾಗಿದ್ದಾರೆ. ನಡೆದ ದಾರಿ ಹಲವಾರು ಕಿಲೊಮಿಟರ್‌ಗಳಾದರೂ ನಡೆಯಬೇಕಾದ ದಾರಿ ಇನ್ನೂ ಸಾಕಷ್ಟಿದೆ.

### ೧೦.೦. ಆಧಾರ ಸಾಹಿತ್ಯ :

ಗೌಡ, ಕೆ.ಕುಶಾಲಪ್ಪ, ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಅಧ್ಯಯನ, ಮೈಸೂರು : ಪ್ರಸಾರಾಂಗ, ಮಾನಸಗಂಗೋತ್ರಿ, 1986

ನಾಗರಾಜಯ್ಯ, ಹಂಪ - ದ್ರಾವಿಡ ಬಾಷಾ ವಿಜ್ಞಾನ, ಮೈಸೂರು, 1972

ಮಾಡ್ರ್ರ, ವಿಲ್ಯಂ, ಕನ್ನಡ ಭಾಷೆಯ ರೂಪರೇಷೆಗಳು, ಧಾರವಾಡ : ಕರ್ನಾಟಕ ವಿಶ್ವವಿದ್ಯಾಲಯ 1975

ಮಾಡ್ತ, ವಿಲ್ಯಂ (ಅನು) - ಕನ್ನಡ ಭಾಷೆ, ಎಂ.ಎಸ್. ಅಂದ್ರೋನಫ್, ಧಾರವಾಡ : ಕರ್ನಾಟಕ ವಿಶ್ವವಿದ್ಯಾಲಯ, 1976

ಮಾಡ್ತ, ವಿಲ್ಯಂ, ಫರ್ಡಿನಾಂಡ್ ಕಿಟಲ್ : ಜೀವನ ಸಾಧನೆ - ಕೋಶ ರಚನೆ; ಹಂಪಿ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, 1994

ಸವದತ್ತಿಮಠ, ಸಂಗಮೇಶ. ದ್ರಾವಿಡಭಾಷಾ ವ್ಯಾಸಂಗ, ಕಲಬುರ್ಗಿ : ಸತೀಶ ಪ್ರಕಾಶ, 1981

De Souza, Teotonio R. and Charles J. Borges (eds.) Jesuits in India : In Historical Perspective Goa ; Xavier Center of Historical Research, 1992

Emeneau, M.B. Dravidian Comparative Phonology : A Sketch. Annamalainagar : Annamalai Univeristy, 1970.

Ferroli (S.J.), D. Jesuits in Mysore, Kozhikod : Xavier Press, 1955.

Kothandaraman, R. "The Riddle that Is Tamil", ISDL Working Papers in Linguistics (2.2), 1986.

Krishnamurthy, Bh. "Comparative Dravidian Studies" in Current Trends in Linguistics V. Mouton, 1969.

Madtha, William. "comparative Drvidian Linguistics: A Rapid Survey ", the Third All India Conference of Dravidian Linguists (Souvenir), Dharwad : Karnataka University, 1973.

Madtha, William, "Jesuits and Kannada Linguistics and Literature". (An unpublished Paper Presented in the National Seminar at Arnos Padiri Institute, Kerala), 1994.

Reddy, K. Govinda (alias K. Anban) "Dravidian : Race, Language, Culture", The Third All India Conference of Dravidian Linguists (Souvernir), Dharwad : Karnataka University, 1973.

Reddy, K. Govinda. " A Note on the Origin of Dravidian", Proceedings of the Third All India Conference of Dravidian Linquists, Dharwad; Institute of Kannada Studies, Karnatak University, 1976.

Swadesh, Morris. " Linguistics as an Instrument of Prehistory" in Dell Hymes, Language in culture and Society, Bombay : Allied Publishers Private Limited, 1964 : 575-584.

Zvelebil, Kamil. Comparative Dravidian Phonology, The Hague, Paris : Mouton, 1970.

Zvelebil, Kamil. A Sketch of Comparative Dravidian Morphology (Part I), The Hague Paris. New York : Mouton Publishers, 1977.

# ಜೈನಧರ್ಮ ಮತ್ತು ಸಂಸ್ಕೃತಿ

---

**ಶಾಂತಾ ಸನ್ಮತಿ ಕುಮಾರ್**

''ಜೈನ ಧರ್ಮ'' ಇದು ಎರಡು ಶಬ್ದಗಳಿಂದ ಕೂಡಿದೆ. ಇನ್ನು ''ಸಂಸ್ಕೃತಿ'' ಇದು ಸಂಸ್ಕೃತ ಶಬ್ದವಾಗಿದ್ದು ಇದು ಸಂಸ್ಕಾರ ಅರ್ಥದಿಂದ ಇಲ್ಲಿ ಬಹು ಅರ್ಥಗರ್ಭಿತವಾದ ಸ್ಥಾನದಲ್ಲಿ ಪರಂಪರೆಯ ಜಾಡನ್ನು ಪ್ರತಿಪಾದಿಸಿ, ಧರ್ಮದ ಸ್ಥಾನವನ್ನು ಹಾಗು ಧರ್ಮದ ಪರಂಪರಾಗತ ಪವಿತ್ರತೆಯನ್ನು ಉಲ್ಲೇಖಿಸಿ, ಧರ್ಮದ ಅನಾದಿ ನಿಧನತ್ವನ್ನು ಪ್ರತಿಬಿಂಬಿಸುವ ಶಬ್ದ ಇದಾಗಿದೆ.

ಇಲ್ಲಿ ''ಜೈನ'' ಮತ್ತು ಇನ್ನೊಂದು ಶಬ್ದ ''ಧರ್ಮ''. ಜೈನ ಎಂದರೆ ಜಿನನನ್ನು ಪೂಜಿಸುವವ ಜೈನ.' 'ಜಿನ'' ಶಬ್ದದ ಅರ್ಥ ಜಯಶೀಲ. ಸಾಮಾನ್ಯವಾಗಿ ಈ ಜಯ ಶಬ್ದ, ಆಟ ಪಾಠಗಳಲ್ಲಿ ಇನ್ನೂ ಹಿಂದೆ ಹೋದಲ್ಲಿ ಯುದ್ಧ ಇತ್ಯಾದಿಗಳಲ್ಲಿ ಗೆದ್ದವರಿಗೆ ಜಯಶೀಲನಾಗಿದ್ದಾನೆ ಎನ್ನುವ ಶಬ್ದವಿರುವುದು ರೂಡಿಯಲ್ಲಿದೆ. ಆದರೆ ಇಲ್ಲಿ ಕಣ್ಣಿಗೆ ಕಾಣದ ಕರ್ಮಾದಿ ಶತ್ರುವಿನೊಡನೆ ಹೋರಾಡಿ ಅತಿಂದ್ರಿಯನಾಗುವುದೇ ಜಯ. ಇಲ್ಲಿ ಯುದ್ಧ ಇತ್ಯಾದಿಗಳಲ್ಲಿ ಪಂಚೇಂದ್ರಿಯಗಳನ್ನೆಲ್ಲ ಕಟ್ಟಿಟ್ಟು ಅಂದರೆ ನಿಗ್ರಹ ಮಾಡಿ ಕಣ್ಣಿಗೆ ಕಾಣದಿರುವ ಅಲೌಕಿಕ ಅತೀಂದ್ರಿಯ ಸುಖ ಕಾಣಲು ಧ್ಯಾನವೆಂಬ ಆಯುಧವ ಹಿಡಿದು ಪಂಚೇಂದ್ರಿಯಗಳನ್ನು ನಿಗ್ರಹಿಸಿ ಪಂಚಪಾಪರೂಪಿ ಕರ್ಮ ಶತ್ರುವನ್ನು ಬಲ ಮುರಿದು ಜಯಗಳಿಸುವುದೇ ಇಲ್ಲಿ ಜಯ ಅಥವಾ ಜಿನ. ಜಿನ ಎಂದರೆ ಗೆದ್ದವರು ಎಂದರ್ಥ. ಇಂಥವರು ತಮ್ಮ ಅತೀಂದ್ರಿಯ ಜ್ಞಾನದಿಂದ ತಾವು ತಿಳಿದ ಲೋಕಾಲೋಕದ ವಿಷಯವನ್ನು ಜಗದ ಜೀವಿಗಳ ಹಿತಕ್ಕಾಗಿ ಬೋಧಿಸಿದ ಧರ್ಮವೇ ಜೈನಧರ್ಮವಾಗಿದ್ದು ಅದು ಪ್ರಾಮಾಣಿಕವಾದ ಧರ್ಮವಾಗಿರುತ್ತದೆ.

ಈ ರೀತಿ ಜಿನನಾಗುವ ಶಕ್ತಿ ಎಲ್ಲಾ ಜೀವಿಗಳಲ್ಲೂ ಇದೆ ಎಂಬುದೇ ಈ ಧರ್ಮದ ಸಿದ್ಧಾಂತ. ಇದನ್ನು ಮರೆಮಾಚಿಸುವ ಕರ್ಮದ ಆಟದಿಂದಾಗಿ ಜೀವಿಗಳೆಲ್ಲರಲ್ಲೂ ಅಜ್ಞಾನ, ರಾಗ-ದ್ವೇಷಗಳು ತುಂಬಿ ತುಳುಕುತ್ತಿವೆ. ಆದ್ದರಿಂದಲೇ ಇವು ಅಪ್ರಾಮಾಣಿಕತೆಗೆ ಕಾರಣವಾಗಿವೆ.

ಈ ರೀತಿ ಜಗತ್ತಿನ ಜೀವಿಗಳನ್ನು ಸಂಸಾರವೆಂಬ ದಳ್ಳುರಿಗೆ ತಳ್ಳಲು ಕಾರಣವಾದವುಗಳೇ ರಾಗ-ದ್ವೇಷಗಳು. ಇವು ಒಂದು ನಾಣ್ಯದ ಎರಡು ಮುಖಗಳಂತೆ ಚಲಾವಣೆಯಲಿದ್ದು ನಿತ್ಯ ಸತ್ಯ ನಿಜಸ್ವರೂಪವನ್ನು ಇವು ಕೊಂಡುಕೊಂಡುಬಿಟ್ಟಿವೆ. ಅಂದರೆ ಮರೆಸಿಬಿಟ್ಟಿವೆ. ಹೀಗಾಗಿ ಇವುಗಳ ಹಿಡಿತದಲ್ಲಿ ತನ್ನ ತನವನ್ನು ಮರೆತ ಜೀವ ಸಂಸಾರ ಸಾಗರದಲ್ಲಿ ಈಜುತ್ತ ದಡಕಾಣದೆ ತಿರುಗುತ್ತಿದ್ದಾನೆ.

ಹೀಗಾಗಿ ಆತನಿಗೆ ನಿತ್ಯ ಯಾವುದು ಸತ್ಯಯಾವುದು ಎಂಬ ಅರಿವುಂಟಾಗುವುದೇ ಕಷ್ಟವಾಗಿದೆ. ಇಂಥ ಕಷ್ಟದಿಂದ ಮೇಲೆತ್ತಲು ಬೋಧಿಸಿದ ಜಿನರ ಧರ್ಮವು ಸತ್ಯಧರ್ಮವಾಗಿರುವುದು ಸ್ವಾಭಾವಿಕವಾಗಿದೆ.

ಇಂಥ ಜಿನರು ಸಕಲ ಜೀವಿಗಳ ಕಲ್ಯಾಣಕ್ಕಾಗಿ ಬೋಧಿಸಿದ ಸ್ಯಾದ್ವಾದ ದೃಷ್ಟಿಯು ಅವರ ಸತ್ಯವಾದಿತ್ವಕ್ಕೆ ಒಂದು ಪ್ರಬಲ ಪ್ರಮಾಣವಾಗಿದೆ. ಆದ್ದರಿಂದಲೇ ಇಲ್ಲಿ -

ಸದ್ಧೃಷ್ಟಿ ಜ್ಞಾನ ವೃತ್ತಾನಿ। ಧರ್ಮಂ ಧರ್ಮೇಶ್ವರಾ ವಿದುಃ ॥
ಯದೀಯ ಪ್ರತ್ಯನೀಕಾನಿ। ಭವಂತಿ ಭವ ಪದ್ಧತಿ ः ॥೩॥

ಎಂದು ರತ್ನ ಕರಂಡಕ ಶ್ರಾವಕಾಚಾರದಲ್ಲಿ ಹೇಳಿದ್ದಾರೆ. ಇಲ್ಲಿ ವಸ್ತುವಿನ ಪೂರ್ಣ-ಅಪೂರ್ಣ ಹಾಗೂ ಸತ್ಯದರ್ಶನ ಮಾಡುವ ಎಲ್ಲಾ ಲೋಕಾಲೋಕಗಳ ವಿಚಾರ ಕುರಿತು ವಿಮರ್ಶೆ ಮಾಡಿ ಒರೆ ಹಚ್ಚುವ ಕಾರ್ಯಕ್ಕೆ ಜೀವಿಗಳನ್ನು ಬಿಟ್ಟು ಸತ್ಯವನ್ನು ಖಚಿತ ಪಡಿಸುವ ವಿಚಾರವೇ ಸ್ಯಾದ್ವಾದ. ಈ ರೀತಿಯ ವಿಚಾರವು ಈ ಧರ್ಮದ ಒಂದಂಗವಾದರೆ ಆಚಾರವು ಇನ್ನೊಂದು ಅಂಗವಾಗಿದೆ. ವಿಚಾರವಿಲ್ಲದೆ ಆಚಾರವಾಗಲಿ ಆಚಾರವಿಲ್ಲದೆ ನಿತ್ಯ ಸತ್ಯತ್ವದೆಡೆಗೆ ಜೀವದ ವಿಹಾರವಾಗಲಿ ಸಾಧ್ಯವಿಲ್ಲ. ಆದ್ದರಿಂದಲೇ ಜೈನಧರ್ಮದ ವಿಚಾರವು ಸ್ಯಾದ್ವಾದ ಭೂಮಿಕೆಯ ಮೇಲೆ ನಿಂತಿದೆ.

ಈ ಸ್ಯಾದ್ವಾದ ಭೂಮಿಕೆಯ ಮೇಲೆ ನಿಂತು ವಿಚಾರ ಮಾಡಿ ಆಚಾರಕ್ಕೆ ಮೂಲಾಧಾರವಾಗಿರುವ ಅಹಿಂಸೆಯ ತಳಪಾಯ ಹಾಕಿಕೊಂಡು ಅದರ ಮೂಲಕ ಯಾವ ಜೀವಕ್ಕೂ ಬಾಧೆ ತಟ್ಟದಂತೆ ತಂತಿಯ ಮೇಲೆ ನಡೆಯುವ ಮನುಷ್ಯನಂತೆ ಎಚ್ಚರವಾಗಿ ತನ್ನ ಹೆಜ್ಜೆಯನ್ನಿಡುತ್ತ ಜೀವಿಗಳನ್ನು ರಕ್ಷಿಸುವುದೇ ಜೀವನದ ನಿಜವಾದ ವಿಹಾರವಾಗಿದೆ ಹಾಗೂ ಇದು ಜಿನರ ಉಪದೇಶವೂ ಆಗಿದೆ. ಆದ್ದರಿಂದಲೇ ಜಿನರಿಗೆ'ಹಿತೋಪದೇಶಿ' ಎಂಬ ಸಾರ್ಥಕ ನಾಮವು ಇದೆ. ಇವರು ಯಾವುದೇ ವ್ಯಕ್ತಿಗಾಗಲಿ, ವರ್ಗಕ್ಕಾಗಲಿ, ಸಂಪ್ರದಾಯಕ್ಕಾಗಲಿ ಅಥವಾ ಒಂದರ ಹಿತದ ದೃಷ್ಟಿಯಿಂದಾಗಲಿ ಉಪದೇಶಿಸಿದವರಲ್ಲ. ಸಮಸ್ತ ಪ್ರಾಣಿಗಳ ಹಿತಕ್ಕಾಗಿ ಇವರು ಬೋಧಿಸಿರುವುದರಿಂದ ಇವರು ಬೋಧಿಸಿದ ಈ ಧರ್ಮವು ವಿಶ್ವಧರ್ಮವಾಗಿದೆ ಹಾಗೂ ಮಾನವನಾಗಿ, ಜಿನನಾಗಿ, ಅನುಭವಿಸಿದ ಅನುಭವದ ಸಾರವೂ ಆಗಿದೆ. ಆದ್ದರಿಂದಲೇ 'ವತ್ಥು ಸಹಾವೋ ಧಮ್ಮೋ' ಎಂಬ ಮಾತು ಇಲ್ಲಿ ಸಾರ್ಥಕವಾಗಿದೆ. ಇಲ್ಲಿ ವಸ್ತುವಿನ ಸ್ವಭಾವಕ್ಕೆ ಧರ್ಮ ಎಂದು ಹೇಳಲಾಗಿದೆ.

ಅಗ್ನಿಗೆ ಸುಡುವುದೇ ಧರ್ಮವಾದರೆ, ವಾಯುವಿಗೆ ವಹನವು ಧರ್ಮವಾಗಿದೆ. ಅದೇ ರೀತಿ ಜೀವಕ್ಕೆ ಅಥವಾ ಆತ್ಮಕ್ಕೆ ಅದರ ಚೈತನ್ಯಗುಣವೇ ಅದರ ಧರ್ಮವಾಗಿದೆ. ಆದ್ದರಿಂದಲೇ ಆಚಾರವೂ ಕೂಡ ಧರ್ಮವೆನ್ನಿಸಿದೆ. ಈ ಆಚಾರದ ಮೂಲಕ ಅಭ್ಯುದಯ ಮತ್ತು ನಿಃಶ್ರೇಯಸ-ಮುಕ್ತಿಯು ಲಭಿಸುವುದರಿಂದ ಇಲ್ಲಿ ಧರ್ಮವೆಂಬ ಮಾತೂ ಸೂಕ್ತವಾಗಿದೆ. ಒಟ್ಟನಲ್ಲಿ ಸ್ವಸ್ವಭಾವರೂಪ ಯಾವ ಗುಣವಿದೆಯೋ ಅದು ಅದರ ಧರ್ಮ, ಇದು ಜಡ ಮತ್ತು ಚೇತನಗಳೆರಡರಲ್ಲೂ ಇರುವಂಥದು. ಇದನ್ನು ಯಾರೂ ನೋಡಬಹುದು. ಏಕೆಂದರೆ ಸ್ವಭಾವಿಲ್ಲದ ವಸ್ತುಗಳೇ ಪ್ರಪಂಚದಲ್ಲಿಲ್ಲ. ಅದಿಲ್ಲದೆ ಪ್ರಪಂಚವೂ ಇಲ್ಲ.

ಆಚಾರ ಮಾತ್ರ ಚೈತನ್ಯ ಶಕ್ತಿಯುಳ್ಳ ಆತ್ಮನಲ್ಲಿ ಮಾತ್ರವೇ ಇರುವಂಥಾದ್ದು. ಆದ್ದರಿಂದಲೇ ಇದು ಅತ್ಯಂತ ಬೆಲೆಯುಳ್ಳದ್ದೂ ಆಗಿದೆ. ಈ ಜೀವಕ್ಕೆ ಬೆಲೆ ಕಟ್ಟಲು ಸಾಧ್ಯವೇ ಇಲ್ಲ. ಏಕೆಂದರೆ

ಈ ಬೆಲೆ ಕಟ್ಟಲೂ ಕೂಡ ಚೈತನ್ಯವೇ ಬೇಕು. ಇದು ಜಡದ ಬೆಲೆಯನ್ನು ನಿಗದಿ ಪಡಿಸಬಹುದೇ ವಿನಹ ಚೈತನ್ಯಕ್ಕಲ್ಲ; ವಸ್ತುಸ್ವಭಾವ ನಿರೂಪಣವು ಆಯಾ ಧರ್ಮದ ದರ್ಶನವೆನಿಸುವುದರಿಂದಲೇ ಈ ದರ್ಶನದಿಂದ ಸಿದ್ಧಿಯ ಅರಿವು ಉಂಟಾಗಿ ಆ ಸಿದ್ಧಿಯ ಸಾಧನೆಗಾಗಿ ಆಚಾರರೂಪ ಧರ್ಮವು ಸಾಧಕವಾಗಲು ಕಾರಣವಾಗುತ್ತದೆ. ಇಲ್ಲಿ ಪ್ರತಿಯೊಂದರ ಧರ್ಮಕ್ಕೂ ತನ್ನದೇ ಆದ ಒಂದು ದರ್ಶವಿರುತ್ತದೆ. ದರ್ಶನದಲ್ಲಿ ಆತ್ಮವೆಂದರೇನು ? ಲೋಕಾಲೋಕವೆಂದರೇನು ? ಪರಮಾತ್ಮನ ಸ್ವರೂಪವೇನು ? ಇತ್ಯಾದಿಗಳ ಪ್ರತಿಕ್ರಿಯೆಗಳ ಪ್ರತಿ ವಿವೇಚನೆ ಇರುತ್ತದೆ.

ಇಲ್ಲಿ ಯಾವ ಆಚರಣಾರೂಪ ಧರ್ಮದ ವಿವರಣೆ ಇದೆಯೋ ಅದು ಆತ್ಮವು. ಇದು ಪರಮಾತ್ಮ ಸ್ವರೂಪವನ್ನು ಹೊಂದುವ ಮಾರ್ಗವನ್ನು ಸೂಚಿಸುತ್ತದೆ. ಆದ್ದರಿಂದಲೇ ವಿಚಾರದ ವಿವೇಚನೆಯು ಆಚಾರದ ಮೇಲಾಗಿ ಅದರಿಂದುಂಟಾದ ದರ್ಶನವು ಧರ್ಮವನ್ನು ಅಂದರೆ ಸ್ವಸ್ವಬಾವವನ್ನು ಪರಿಚಯಿಸುವ ಕಾರ್ಯಕ್ಕೆ ಹಚ್ಚಿಸಲು ಕಾರಣವಾಗುತ್ತದೆ. ಆದ್ದರಿಂದಲೇ ಧರ್ಮದ ವಿವೇಚನೆಯಲ್ಲಿ ದರ್ಶನ ಹಾಗೂ ಚಾರಿತ್ರ್ಯಗಳ ಸಮಾಲೋಚನೆಯ ಅವಶ್ಯಕತೆ ಇದೆ. ಇದರಿಂದಾಗಿಯೇ ಜೈನದರ್ಶನವು ವಸ್ತು ಸ್ವಭಾವ ನಿರೂಪಣೆಯಲ್ಲಿ ಅಂತರ್ಗತವಾಗಿ ಧರ್ಮವೆಂಬ ಸಂಜ್ಞೆಯಿಂದ ಪ್ರಸಿದ್ಧವಾಗಿದೆ. ಇಲ್ಲಿ ಆತ್ಮ ಹಾಗು ಪರಮಾತ್ಮರಲ್ಲಿಯ ಅಂತರದ ಅರಿವಾದಾಗಲೇ ಚಾರಿತ್ರದ ಅವಲಂಬನೆಯೇ ಮುಖ್ಯವಾಗಿ ಮನುಷ್ಯನು ಮೋಕ್ಷ ಸಾಧಕನಾಗಲು ಕಾರಣವಾಗುವುದು. ಆದ್ದರಿಂದಲೇ ಆಚಾರಕ್ಕೆ ಪ್ರಮುಖ ಸ್ಥಾನವಿದೆ. ಆದ್ದರಿಂದಲೇ –

ಗುರೌರ್ಭಕ್ತಿರ್ ಗುರೌರ್ಭಕ್ತಿರ್ ಗುರೌ ಭಕ್ತಿರ್ ಸದಾಸ್ತುಮೇವ
ಚಾರಿತ್ರ ಮೇವ ಸಂಸಾರವಾರಣಂ ಮೋಕ್ಷ ಕಾರಣಂ.

ಎಂದಿದ್ದಾರೆ. ಚಾರಿತ್ರದಲ್ಲಿರುವ ಅಂದರೆ ಆಚರಣೆಯಲ್ಲಿರುವ ಗುರುಗಳ ಮೇಲಿನ ಭಕ್ತಿಯಿಂದಲೇ ಚಾರಿತ್ರ ವೃದ್ಧಿಯೂ, ಈ ವೃದ್ಧಿಯಿಂದಲೇ ಸಂಸಾರ ಹರಣವೂ, ಈ ಸಂಸಾರ ಹರಣದಿಂದಲೇ ಮೋಕ್ಷವೂ, ಸಾಧ್ಯ ಎನ್ನುವುದೇ ಸಾರಾಂಶವಾಗಿದೆ. ಆದ್ದರಿಂದಲೇ 'ಜಿನ' ದೇವನಿಂದ ಉಪದೇಶಿಸಲಾದ ವಿಚಾರವೇ ಮುಕ್ತಿಗೆ ಸೋಪಾನ ಹಾಗೂ ಉಪದೇಶವೇ ಶೃತ ಅಥವಾ ಜಿನವಾಣಿಯಾಗಿದೆ.

ಶೃತವಿದ್ಯೆ : ಇದು ಅನಾದಿ ಕಾಲದಿಂದಲೂ ಜೀವರುಗಳ ಜ್ಞಾನ ವಿಕಾಸ ಕ್ರಮದಲ್ಲಿ ತನ್ನ ಮತ್ತು ಅನ್ಯ ವಿಚಾರಗಳ ಕುರಿತು ಸ್ವಾನುಭವದಿಂದುಟಾದ ಸತ್ಯಜ್ಞಾನದ ಸಂಗ್ರಹ. ಇದನ್ನೆ ಜೈನ ಶೃತವಿದ್ಯೆ ಎಂದು ಹೇಳಲಾಗಿದೆ. ಇದರ ಧ್ಯೇಯವು ಸತ್ಯ ಸ್ಪರ್ಶಿಯಾದ ಯಾವ ವಿಚಾರ ಸರಣಿಯನ್ನೂ ಉಪೇಕ್ಷಿಸಲಾಗದ ರೀತಿಯಲ್ಲಿ ಪ್ರತಿಪಾದಿಸುವುದಾಗಿದೆ. ಆದ್ದರಿಂದಲೇ ಇಲ್ಲಿ ಅನೇಕಾಂತ ದೃಷ್ಟಿಯ ಕಾರ್ಯ ಬಹುವಿಶಾಲ. ಇಲ್ಲಿ ಜೀವಿಗಳ ಜೀವನಕ್ಕೆ ಹಿತವೆನಿಸುವ ಎಲ್ಲ ಲೌಕಿಕ ಅಲೌಕಿಕ ವಿದ್ಯೆಗಳು ತಮತಮಗೆ ಯೋಗ್ಯವಾದ ಸ್ಥಾನವನ್ನು ಪಡೆಯುವುದರ ಮೂಲಕ ಮೂಲ ಸತ್ವದ ಹುರುಳನ್ನು ಉಳಿಸಿಕೊಳ್ಳಲು ಸಾಧಕ–ಬಾಧಕಗಳ ಪರಿಚಯಕ್ಕೆ ಅವಕಾಶವಿರುತ್ತದೆ. ಇದನ್ನೇ ಸ್ಯಾದ್ವಾದ ಶಾಸ್ತ್ರವೆಂದೂ ಹೇಳಲಾಗಿದೆ. ಇದು ಜೈನಧರ್ಮದ ಹೃದಯವಾಗಿದೆ.

ಜೈನ ಧರ್ಮದ ಆಚಾರ ವಿಚಾರ ವಿಭಾಗಗಳಲ್ಲಿ ಅಂದರೆ ದರ್ಶನದಲ್ಲಿ ತೋರುವ ಸಾಮ್ಯ ಸಮತೆ ಈ ಭಾವನೆಯ ಫಲವೇ ಇಲ್ಲಿ ಸ್ಯಾದ್ವಾದ ದೃಷ್ಟಿಯಾಗಿದೆ. ಕೇವಲ ತನ್ನ ವಿಚಾರ, ತನ್ನ

ದೃಷ್ಟಿ, ತಾನು ತಿಳಿದಿರುವುದೇ ಸರಿ ಎಂದು ನಂಬಿ ಅದೇ ಅಂತಿಮವೆಂದು ಹಟಹಿಡಿದು ವಾದಿಸುವುದು ಸಾಮ್ಯಭಾವನೆಗೆ ಘಾತುಕವಾಗಿದೆ. ಆದ್ದರಿಂದಲೇ ಇಲ್ಲಿ ಎಲ್ಲಾ ದರ್ಶನಗಳನ್ನೂ ಕೂಡ ಆದರದಿಂದ ಕಾಣುವ ಭಾವವಿದೆ. ಹಾಗೂ ಇದೇ ಅನೇಕಾಂತವಾದದ ಮೂಲಭೂತ ಭೂಮಿಕೆಯಾಗಿದೆ. ಈ ಭೂಮಿಕೆಯಿಂದಲೇ ಭಾಷಾ ಪ್ರಧಾನವಾದ ಸ್ಯಾದ್ವಾದ ಹಾಗೂ ವಿಚಾರಪ್ರಧಾನವಾದ ನಯವಾದಗಳು ಹೊರಹೊಮ್ಮಿ ಸತ್ಯ ನಿಷ್ಠವಾದ ಅಂತಃಸತ್ವವನ್ನು ತೋರಿಸಲು ಕಾರಣವಾಗಿದೆ.

ಲೋಕದಲ್ಲಿರುವ ಪ್ರತಿಯೊಂದು ಆತ್ಮವೂ ಕೂಡ ತಾತ್ವಿಕ ದೃಷ್ಟಿಯಿಂದ ಸಮಾನವಾಗ್ಗಿವೆ. ಇದು ಜೈನ ಆತ್ಮವಿದ್ಯೆಯ ಸಾರವಾಗಿದೆ. ಈ ಆತ್ಮ ಸಮಭಾವವನ್ನು ಎಲ್ಲ ಜೀವಿಗಳೂ ತಮ್ಮ ತಮ್ಮ ನಿತ್ಯ ಜೀವನದಲ್ಲಿ ಆಚರಣೆಗೆ ತರುವುದಕ್ಕೆ ಪ್ರಯತ್ನಪಡುವುದೇ ಅಹಿಂಸೆಯಾಗಿದೆ. ಆದ್ದರಿಂದಲೇ ಈ ಅಹಿಂಸೆಯ ತಳಹದಿಯ ಮೇಲೆ ನಿಂತ ಜೈನಧರ್ಮ ವಿಶ್ವಧರ್ಮವಾಗಿದೆ. ಎಲ್ಲ ಆತ್ಮರುಗಳು ತಾತ್ವಿಕ ದೃಷ್ಟಿಯಿಂದ ಅಂದರೆ ಆತ್ಮನ ದೃಷ್ಟಿಯಿಂದ ಸಮಾನವಾದರೂ ಕರ್ಮದ ದೃಷ್ಟಿಯಿಂದಾಗಿ ದೇಶ, ಕಾಲ, ಸ್ಥಿತಿ ವರ್ತಮಾನಗಳ ಹಾಗೂ ಜೀವಿಗಳ ಪುನರ್ ಜನ್ಮಾದಿ ಮರುಹುಟ್ಟುಗಳ ದೃಷ್ಟಿಯಿಂದ, ಈ ಕರ್ಮಕ್ಕನುಸರಿಸಿ ಗತಿ ಇತ್ಯಾದಿಗಳ ಭೇದದಿಂದ, ಭಿನ್ನ ಭಿನ್ನ ಅವಸ್ಥೆಯಲ್ಲಿ ಭಿನ್ನ ಬಿನ್ನ ರೀತಿಯ ವೈಪರಿತ್ಯವನು, ಇಲ್ಲಿ ಕಾಣಲಾಗುತ್ತಿದೆ. ಇದನ್ನೇ ಇಲ್ಲಿ ಕರ್ಮ ಸಿದ್ಧಾಂತವೆಂದು ಹೇಳಲಾಗಿದೆ. ಈ ವೈಪರೀತ್ಯಕ್ಕೆ ಮುಖ್ಯ ಕಾರಣ ಅಜ್ಞಾನ ಹಾಗೂ ರಾಗ ದ್ವೇಷಗಳು. ಈ ಅಜ್ಞಾನದಿಂದ ಹುಟ್ಟಿದ ಬೇಕು ಬೇಡಗಳ ಕಲ್ಪನೆಯ ಕಾರಣದಿಂದಾಗಿ ಹುಟ್ಟುವ ವೃತ್ತಿ ವಿಕಾರಗಳೇ ಈ ರಾಗದ್ವೇಷಗಳು. ಹಾಗೂ ಇವುಗಳಿಂದಲೇ ಜೀವಿಗಳು ಹಿಂಸೆಗೆ ಕಾರಣರಾಗಿ ಅಜ್ಞಾನಭಾವದಲ್ಲಿ ಮುಳುಗಿ ಮಾಡಬಾರದ್ದನ್ನು ಮಾಡಲು ಕಾರಣರಾಗುವರು. ಇದಕ್ಕೆಲ್ಲ ಕಾರಣವಾದ ಕರ್ಮವನ್ನು ಭಾವಕರ್ಮ ಮತ್ತು ದ್ರವ್ಯಕರ್ಮವೆಂದು ಹೇಳಲಾಗಿದೆ. ಇವು ಆತ್ಮಗತ ಸಂಸ್ಕಾರ ಸ್ವರೂಪವಾಗಿ ಜೀವಿಗಳಲ್ಲಿ ಅನಾದಿಯಿಂದಲೂ ಹರಿದು ಬರುತ್ತಿರುವುದರಿಂದಲೇ ಜೈನ ಧರ್ಮವು ಜೀವ ಅನಾದಿ, ಲೋಕ ಅನಾದಿ ಎಂದು ಹೇಳದೆ. ಜೀವಿಗಳಲ್ಲಿ ಅಜ್ಞಾನದಿಂದುಟಾಗುವ ಈ ಭಾವಕರ್ಮವು ಸೂಕ್ಷ್ಮಾತಿಸೂಕ್ಷ್ಮವಾದ ಪೌದ್ಗಲಿಕ ಪರಮಾಣುಗಳನ್ನು ಸತತವಾಗಿ ಆಕರ್ಷಿಸುತ್ತದೆ; ಹಾಗೂ ಆಯಾ ಭಾವಗಳಿಗನುಸಾರವಾಗಿ ಅವುಗಳಿಗೊಂದು ವಿಶಿಷ್ಟರೂಪವನ್ನು ಕೊಡುತ್ತದೆ. ಹೀಗೆ ವಿಶಿಷ್ಟರೂಪವನ್ನು ಹೊಂದಿದ ಯಾವ ಪೌದ್ಗಲಿರ್ ಪರಮಾಣು ಪುಂಜವಿದೆಯೋ ಅದೇ ದ್ರವ್ಯಕರ್ಮವಾಗಿದ್ದು ಇದಕ್ಕೆ ಕಾರ್ಮಣ ಶರೀರವೆಂಬ ಸಂಜ್ಞೆಇದೆ. ಇದು ಜನ್ಮ ಜನ್ಮಾಂತರದಲ್ಲೂ ಜೀವದ ಜೊತೆ ಸಾಗಿ, ಸ್ಥೂಲ ಶರೀರದ ನಿರ್ಮಾಣಕ್ಕೆ ಭೂಮಿಕೆಯಾಗುತ್ತದೆ. ಆದ್ದರಿಂದಲೇ ಜೀವಕ್ಕೆ ಈ ಸಂಸಾರರೂಪಿ ಕರ್ಮ ಬಂಧನವಾಗಿ 'ಪುನರಪಿ ಜನನಂ ಪುನರಪಿ ಮರಣಂ' ಆಗಲು ಕಾರಣವಾಗಿದೆ.

ಈ ರೀತಿಯ ಪುನರ್ ಜನ್ಮದಿಂದಲೇ ಜೀವವು ದುಃಖಕ್ಕೆ ಕಾರಣವಾಗಿದ್ದು ಇದೇ ಪರಂಪರೆಯಾಗಿ ಸಕಲ ಜೀವಿಗಳೂ ಕೂಡ ತಮ್ಮ ತಮ್ಮ ಸಂಪೂರ್ಣ ವ್ಯಕ್ತಿತ್ವ ಹಾಗು ಶಕ್ತಿಯನ್ನು ವಿಷಯ ಸುಖಕ್ಕಾಗಿಯೇ ಮೀಸಲಾಗಿಟ್ಟು ತಮ್ಮ ಜೀವಿತ ಸಮಯವನ್ನು ವ್ಯರ್ಥಗೊಳಿಸುತ್ತಲೇ ಬಂದಿವೆ. ಇದಕ್ಕೆ ಕಾರಣ ಅವು ತಮ್ಮ ಜೀವನದಲ್ಲಿ ಅನೇಕ ಆಸೆ, ಆಕಾಂಕ್ಷೆಗಳನ್ನು ಹೊತ್ತು ಆಮಿಷಕ್ಕೆ ಒಳಗಾಗಿ ಅವುಗಳನ್ನು ಪೂರೈಸಿಕೊಳ್ಳಲೂ ಆಗದೆ ಹಗಲೂ ರಾತ್ರಿ ಸಾರವಿಲ್ಲದ ಹಾಗೂ ಅಗ್ಗವಾದ ಸಂಸಾರ ಸುಖವನ್ನುಹೊಂದಲು ಬಯಸುತ್ತ ಬಂದಿವೆ. ಹೀಗಾಗಿ ತಮಗೆ ದೊರಕಿರುವ ಸಾರವಾದ ಅಂತಃಶಕ್ತಿಯನ್ನು ಹೊಂದಿಂಥ, ಅದರಲ್ಲೂ ಮಾನವ ಜನ್ಮದಲ್ಲಿ ಹುಟ್ಟಿದ ಜೀವ ಇಂಥ ಅಸಾರಸುಖಕ್ಕೆ

ತನ್ನತನವನ್ನು ವಿನಿಯೋಗಿಸಿಕೊಂಡು ಬರುತ್ತಿರುವುದೇ ಒಂದು ದುರಂತವೆಂದು ತಿಳಿಸಿದ ಈ ಜೈನ ಧರ್ಮ. ಇದರಿಂದ ಪಾರಾಗುವ ವಿದ್ಯೆಯನ್ನೂ ಅಂದರೆ ಆಚಾರ-ವಿಚಾರ-ವಿಹಾರಗಳ ಪರಿಕಲ್ಪನೆಯನ್ನು ನೀಡಿ, ಆ ಮುಖಾಂತರ ಸ್ಯಾದ್ವಾದ ಅನೇಕಾಂತದ ಒರೆಗಲ್ಲಿಗೆ ಒರೆ ಹಚ್ಚಿ ಸತ್ಯಾಸತ್ಯದ ಅಂತಃ ಸ್ಸತ್ವವನ್ನು ಪಡೆಯುವ ಮಾರ್ಗವನ್ನೂ ಅತ್ಯಂತ ವಿಶದವಾಗಿ ಇಲ್ಲಿ ನಿರೂಪಿಸಲಾಗಿದೆ.

ತೀರ್ಥಂಕರರುಗಳೂ ಕೂಡ ಇಂಥ ದುಃಖಮಯವಾದ ಸಂಸಾರದಲ್ಲಿ ತೊಳಲಿ ಬಳಲಿ ಬೆಂಡಾಗಿ ಅವುಗಳಿಂದ ಪಾರಾಗುವ ಮಾರ್ಗವನ್ನು ಕಂಡುಕೊಂಡು ತಾವು ಕಂಡುಕೊಂಡ ಸತ್ಯವನ್ನು ಜಗದ ಒಳಿತಿಗಾಗಿ ತಿಳಿಸುತ್ತಾ ಬಂದಿದ್ದಾರೆ. ಅವರಾಡಿದ ಮಾತು, ಧ್ವನಿ ಅಥವಾ ವಾಣಿ ಪೌದ್ಗಲಿಕ ಪುದ್ಗಲ ಪರಮಾಣುಗಳ ಪುಂಜ. ಈ ಪುದ್ಗಲ ಪರಮಾಣುಗಳು ಎಲ್ಲೆಡೆಯಲ್ಲೂ ಚದುರುವ ಅಂದರೆ ಹರಡುವ ಶಕ್ತಿಯುಳ್ಳದ್ದೆನ್ನುವುದನ್ನು ನಾವು ರೇಡಿಯೋ, ಟಿ.ವಿ.ಗಳ ಮುಖಾಂತರ ಎಲ್ಲೋ ನಡೆಯುವ ಮಾತುಗಳನ್ನು ನಾವು ಇನ್ನೆಲ್ಲಿಯೋ ಕುಳಿತು ಆಲಿಸುತ್ತಿದ್ದೇವೆ. ಇದರಿಂದಾಗಿ ತಿಳಿದು ಬರುವ ಅಂಶವೆಂದರೆ - ಶಬ್ದಗಳು ಹರಡಿಕೊಂಡಿದ್ದು ಅವುಗಳನ್ನು ಹಿಡಿದಿಡುವ ಶಕ್ತಿ ಮತ್ತೊಂದು ಪುದ್ಗಲ ಸಾಮಗ್ರಿಯಾದ ರೇಡಿಯೋ ಇತ್ಯಾದಿಗಳಿಗೆ ಇದೆ ಎನ್ನುವುದು. ಅದೇ ರೀತಿ, ತೀರ್ಥಂಕರರಿಂದ ಹೊರಟ ದಿವ್ಯಧ್ವನಿಯ ಶಬ್ದಪರಮಾಣುಗಳೂ ಕೂಡ ಯಾವ ಜೀವ ತನ್ನ ಆತ್ಮಕಲ್ಯಾಣದ ಹಾದಿಗಾಗಿ ಹಾತೊರೆಯುವದೋ ಆಗ ಅವನಂತರಂಗವೆಂಬ ರೇಡಿಯೋ ಮೂಲಕ ಈ ರೀತಿಯ ತೀರ್ಥಂಕರ ಬೋಧಿತ ತತ್ವಶಬ್ದ ಪರಮಾಣುಗಳು ಆ ಜೀವದ ಉನ್ನತಿಗೆ ಕಾರಣವಾಗುವ ಭಾವಗಳನ್ನು ಉದ್ರೇಕಿಸಲು ಕಾರಣವಾಗಬಹುದೆಂದು ಕಾಣುತ್ತದೆ. ಆದ್ದರಿಂದಲೇ ಕಾಲ ಕಾಲಕ್ಕೆ ಜೀವಿಗಳಲ್ಲಿ ಈ ಸಂಸಾರವನ್ನು ಗೆಲ್ಲುವ ಅಥವಾ ಶಾಶ್ವತವಾದ ಸುಖವನ್ನು ಹೊಂದುವ ಮನೋಭಿಲಾಷೆ ಉಂಟಾಗಿ ಸುಪ್ತಚೈತನ್ಯದಲ್ಲಿದ್ದ ಒಂದು ರೀತಿಯ ಪರಮಶಾಂತಿಯುತ ಶಕ್ತ ಛಾಪು ಅಥವಾ ಹೊಳಪು ಮೂಡಿ ಎಚ್ಚರಿಸುತ್ತಿರಬೇಕು. ಇದನ್ನೇ ಸಂಸ್ಕೃತಿ ಎಂದರೂ ತಪ್ಪಾಗಲಾರದೇನೋ.

ಹೀಗೆ ಜೈನಧರ್ಮ ಮತ್ತು ಸಂಸ್ಕೃತಿಯು ಜೀವಹಿತ ಚಿಂತನೆಯಲ್ಲಿ ಅನೇಕ ರೀತಿಯ ವಿಚಾರಧಾರೆಯನ್ನು ಹರಿಸಿ ಜೀವ, ಪುದ್ಗಲ, ಧರ್ಮ, ಅಧರ್ಮ ಕಾಲ ಆಕಾಶ, ಇತ್ಯಾದಿ ಷಡ್ ದ್ರವ್ಯ ಸ್ವರೂಪಗಳನ್ನೂ, ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ ತತ್ವವನ್ನೂ, ಇವುಗಳಿಗೆ ಪಾಪ ಪುಣ್ಯಗಳೆ ಸೇರಿಸಿ ನವಪದಾರ್ಥಗಳೆಂದೂ ಹೇಳಿ ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶಗಳೇ ಪಂಚಾಸ್ತಿಕಾಯಗಳೆಂದು ತಿಳಿಸಿ, ಈ ತತ್ವಗಳ ಮೂಲಕ ಜೀವದ ಇರುವಿಕೆ, ಹಾಗೂ ಸಂಸಾರ ಮತ್ತು ಈ ಸಂಸಾರದಿಂದ ಬಿಡುಗಡೆಗೆ ಬೇಕಾದ ಮಾರ್ಗಕ್ಕಾಗಿ ಆಚಾರವಿಚಾರ, ವಿಹಾರಗಳನ್ನು ಕುರಿತು ಚಿಂತಿಸಿ ಮಾಡಬೇಕಾದ ವಿಚಾರವನ್ನೂ ಅತ್ಯಂತ ವಿಶದವಾಗಿ ಈ ಜೈನಧರ್ಮದಲ್ಲಿ ವಿವರಿಸಿದೆ. ಇಲ್ಲಿ ವಿತಂಡವಾದಕ್ಕಾಗಲಿ, ಮಾಯಾಚಾರಕ್ಕಾಗಲಿ, ಮಿಥ್ಯಾತ್ವಕ್ಕಾಗಲಿ ಅವಕಾಶವಿಲ್ಲ. ಸಮ್ಯಕ್ ರೂಪ ಸಿದ್ಧಾಂತವನ್ನು ಬೋಧಿಸುವುದಕ್ಕಾಗಿ ರತ್ನತ್ರಯ ಮಾರ್ಗವನ್ನು ಸುಲಲಿತವಾಗಿ ಬೋಧಿಸಿ ಸುದೀರ್ಘವಾದ ಸಂಸಾರವನ್ನು ಮೊಟಕು ಗೊಳಿಸಿ ಸತ್ಯನಿರಂಜನ ಅವಿನಾಶಿ ಸುಖದ ಸಾರವನ್ನು ಹೊಂದುವ ಉಪಾಯವನ್ನು ಇಲ್ಲಿ ಬೋಧಿಸಲಾಗಿದೆ. ಇದಕ್ಕಾಗಿ ಜೀವದ ಮೌಲ್ಯವನ್ನು ಹೆಚ್ಚಿಸಿಕೊಳ್ಳಲು ಷೋಡಶ ಭಾವನೆ, ದಶಧರ್ಮಗಳನ್ನೂ, ಸಂಸಾರದ ಅಸಾರತೆಯನ್ನು ಅರಿತು ಹಂತ ಹಂತವಾಗಿ ಮೇಲೇರಲು ದ್ವಾದಶಾನುಪ್ರೇಕ್ಷಾಭಾವನೆಯನ್ನೂ ಭಾವಿಸುವುದರ ಮೂಲಕ ಭವದ ತಾಪವನ್ನು ನೀಗುವ ಉಪಾಯವನ್ನೂ ಇಲ್ಲಿ ಮಾರ್ಮಿಕವಾಗಿ ಹೇಳಲಾಗಿದೆ. ಹೀಗೆ ಇವು ಜೈನಧರ್ಮದಲ್ಲಿ ತನ್ನದೇ ಆದ ಸಂಸ್ಕೃತಿಗೆ ಎತ್ತಿಹಿಡಿದ ಕನ್ನಡಿಯಾಗಿವೆ.

# ಜೈನ ಮೋಕ್ಷ ವಿಚಾರ

ಹೊ. ಶ್ರೀ. ಮದನಕೇಸರಿ

ಚತುರ್ಗತಿ, ಜನನ-ಮುಪ್ಪು-ಮರಣ, ರಾಗ-ದ್ವೇಷ, ಸುಖ-ದುಃಖ ಇವು ಭವಸಾಗರ ಅಥವಾ ಸಂಸಾರದ ಮೇಲ್ಮೈ ಲಕ್ಷಣಗಳು. ಈ ಸಂಸಾರದಲ್ಲಿರುವವರೆಗೂ ಚತುರ್ಗತಿಗಳಲ್ಲಿ ತೊಳಲಿ, ಬಳಲಿ, ಸುತ್ತುವುದು ತಪ್ಪಿದ್ದಲ್ಲ. ಈ ಸಂಸಾರದ ಸುಖ ಕ್ಷಣಿಕ, ನಾಯಿಯ ತಲೆಯ ಮೇಲಿನ ಬುತ್ತಿ, ನೀರ ಮೇಲಿರುವ ಗುಳ್ಳೆಯಂತೆ ಅಶಾಶ್ವತ, ಅನಿತ್ಯ, ಮತ್ತು ಅಸ್ಥಿರ. ಇದಕ್ಕೆ ಕಾರಣ ಸಂಸಾರೀ ಜೀವರು ಮಾಡುವ ಪಾಪ-ಪುಣ್ಯ ಕರ್ಮಗಳೇ ಕಾರಣ.

'ಪಾಪಂ ನಾರಕಭೂಮಿಗೊಯ್ಯುದಸುವಂ ಪುಣ್ಯಂದಿವಕ್ಕೊಯ್ಯುದಾ
ಪಾಪಂ ಪುಣ್ಯಂವೊಂದುಗೂಡಿದೊಡೆ ತಿರ್ಯಜ್ಮರ್ತ್ಯ ಜನ್ಮಂಗಳೊಳ್
ರೂಪಂ ಮಾಳ್ಕುಮಿವೆಲ್ಲ ಮಧ್ರುಮಮಿವೇ ಜನ್ಮಕ್ಕೆ ಸಾವಿಂಗೊಡಲ್
ಪಾಪಪುಣ್ಯಮಿವಾತ್ಮ ಬಾಹ್ಯಕವಲಾ ರತ್ನಾಕರಾಧೀಶ್ವರಾ!

- ರತ್ನಾಕರಾಧೀಶ್ವರನೆ! ಪಾಪವು ಜೀವವನ್ನು ನರಕ ಭೂಮಿಗೆ ತೆಗೆದುಕೊಂಡು ಹೋಗುವುದು; ಪುಣ್ಯವು ಸ್ವರ್ಗಕ್ಕೆ ತೆಗೆದುಕೊಂಡು ಹೋಗುವುದು; ಆ ಪಾಪ-ಪುಣ್ಯಗಳೆರಡೂ ಸೇರಿದರೆ ತಿರ್ಯಕ್ ಜನ್ಮದಲ್ಲೂ ಮನುಷ್ಯ ಜನ್ಮದಲ್ಲೂ ರೂಪವನ್ನುಂಟು ಮಾಡುತ್ತವೆ. ಇವೆಲ್ಲವೂ ಅನಿತ್ಯವಾದುವು; ಈ ಪಾಪ-ಪುಣ್ಯಗಳೇ ಜನನ-ಮರಣಗಳಿಗೆ ಕಾರಣಗಳು; ಇವು ಆತ್ಮ ಬಾಹ್ಯಗಳಲ್ಲವೇ ?

ಸುಕೃತಂ ದುಷ್ಕೃತಮುಂ ಸಮಾನಮದನನ್ಯರ್ಮೆಚ್ಚರೇಕೆಂದೊಡಾ
ಸುಕೃತಂ ಸ್ವರ್ಗ ಸುಖಕ್ಕೆ ಕಾರಣಮೆನಲ್ತತ್ಸೌಖ್ಯ ಮೇಂ ನಿತ್ಯಮೋ
ವಿಕೃತಂಗೊಂಡಳಿವಂದಳಲ್ಲನಿಸದೋ ಸ್ವಪ್ನಂಬೊಲೇಂ ಮಾಂಜದೋ
ಪ್ರಕೃತಿ ಪ್ರಾಪ್ತಿಗೆ ನೂಂಕದೋ ಪಿರಿದದೇಂ ರತ್ನಾಕರಾಧೀಶ್ವರಾ

- ರತ್ನಾಕರಾಧೀಶ್ವರನೇ ! ಪುಣ್ಯವೂ ಪಾಪವೂ ಸಮಾನವಾದುವುಗಳು; ಆ ಮಾತನ್ನು ಬೇರೆಯವರು ಮೆಚ್ಚರು. ಏಕೆಂದರೆ ಆ ಪುಣ್ಯವು ಸ್ವರ್ಗ ಸುಖಕ್ಕೆ ಕಾರಣವೆಂದು ಹೇಳಿದರೆ ಆ ಸುಖವೇನು ನಿತ್ಯವೋ ? ವಿಕಾರವನ್ನು ಹೊಂದಿ ಸಾಯುವಾಗ ದುಃಖವುಂಟಾಗುವುದಿಲ್ಲವೋ ? ಸ್ವಪ್ನದಂತೆ ಆ ಸ್ವರ್ಗ ಸುಖವೇನು ನಾಶವಾಗುವುದಿಲ್ಲವೋ ? ಕರ್ಮ ಪ್ರಕೃತಿಯ ಪ್ರಾಪ್ತಿಗೆ ತಳ್ಳುವುದಿಲ್ಲವೋ ? ಅಹುದಾದರೆ ಅದೇನು ದೊಡ್ಡದು ?

ಮುಱಿತಂ ತೀರ್ದೊಡೆ ಪುಣ್ಯದೊಳ್ನಿಲುವನಾ ಪುಣ್ಯಂ ಕರಂ ತೀರ್ದೊಡಾ
ಮುಱಿತ ಪೊರ್ದುವನಿತ್ತಲತ್ತಲೆಡೆಯಾಟಂ ಕುಂದದಾತ್ಮಂಗಿವಂ
ಸರಿಗಂಡಾತ್ಮ ವಿಚಾರವೊಂದರೊಳೆ ನಿಂದಾನಂದಿಸುತ್ತಿರ್ಪನೇ ಸ್ಥಿರ
ನಕ್ಕುಂ ಸುಖಿಯಕ್ಕುಮಕ್ಷಯನಲಾ ರತ್ನಾಧೀಶ್ವರಾ!

- ರತ್ನಾಕರಾಧೀಶ್ವರನೇ ! ಆತ್ಮನು ತನ್ನ ಪಾಪವು ತೀರಿದರೆ ಪುಣ್ಯದಲ್ಲಿ ನಿಲ್ಲುವನು; ಆ ಪುಣ್ಯವು ಸಂಪೂರ್ಣವಾಗಿ ಮುಗಿದು ಹೋದರೆ ಆ ಪಾಪವನ್ನು ಹೊಂದುವನು; ಆತ್ಮನಿಗೆ ಈ ಕಡೆ ಆ ಕಡೆ ತಿರುಗಾಟವು ಮುಗಿಯುವುದಿಲ್ಲವು, ಈ ಪುಣ್ಯ ಪಾಪಗಳನ್ನು ಸಮಾನವಾಗಿ ಕಂಡು ಆತ್ಮ ವಿಚಾರದಲ್ಲೇ ಇದ್ದು ಆನಂದ ಪಡುವವನೇ ಸ್ಥಿರನೂ, ಸುಖಿಯೂ, ನಾಶ ರಹಿತನೂ ಆಗುತ್ತಾನಲ್ಲವೇ?

ಈ ಸಂಸಾರೀ ಜೀವಿಗಳನ್ನು ದುಃಖದಲ್ಲಿ ಮುಳುಗಿಸುವ ಪಾಪಕರ್ಮಗಳು ಕಬ್ಬಿಣದ ಬೇಡಿಯಾದರೆ ಸುಖದಲ್ಲಿ ಮುಳುಗಿಸುವ ಪುಣ್ಯಕರ್ಮಗಳು ಚಿನ್ನದ ಬೇಡಿಗಳು; ಬೇಡಿ ಅಥವಾ ಸಂಕೋಲೆಯ ದೃಷ್ಟಿಯಿಂದೆರಡೂ ಒಂದೇ; ಅವುಗಳಿಂದ ಬಂಧಿತರಾದ ಜೀವಿಗಳು ನಾವು ಭವಸಾಗರ ಅಥವಾ ಸಂಸಾರವೆಂಬ ಜೈಲಿನಲ್ಲಿ ಅನಾದಿ ಕಾಲದಿಂದ ತಿರುಗುತ್ತಿದ್ದೇವೆ. ಈ ಎರಡೂ ಬೇಡಿಗಳಿಂದ ಆತ್ಮನು ಬಿಡುಗಡೆಯಾಗುವುದೇ ಮೋಕ್ಷ. ಈ ರೀತಿ ಬಿಡುಗಡೆಯಾಗ ಬೇಕಾದರೆ ಸಂಸಾರಕ್ಕೆ ಕಾರಣವಾದ ಪಾಪ-ಪುಣ್ಯ ಕರ್ಮಗಳನ್ನು ಸಂಪೂರ್ಣವಾಗಿ ನಾಶ ಮಾಡಲು ತೊಡಗುವಲ್ಲಿ 14 ಶ್ರೇಣಿ,ಹಂತ ಅಥವಾ ಮೆಟ್ಟಲುಗಳನ್ನು ಏರಬೇಕಾಗುತ್ತದೆ. ಆ ಹಂತ ಅಥವಾ ಮೆಟ್ಟಲುಗಳನ್ನು ಜೈನ ಧರ್ಮದಲ್ಲಿ ಗುಣಸ್ಥಾನಗಳೆಂದು ಕರೆದಿರುತ್ತಾರೆ.

'ಗುಣಸ್ಥಾನೈಶ್ಚ ಚತುರ್ದಶಭಿರ್ಭವಂತಿ' ದ್ರಸಂ.

-ಸಂಸಾರೀ ಜೀವಿಗಳು ಹದಿನಾಲ್ಕು ಪ್ರಕಾರವಾದ ಗುಣಸ್ಥಾನಗಳಿಂದ ಗುರುತಿಸಲ್ಪಡುತ್ತವೆ.

ಸಂಸಾರೀ ಜೀವಿಗಳಿಗೆ ಪ್ರಾಮುಖ್ಯವಾಗಿ ಐದು ಅಸಾಧಾರಣ ಭಾವ (ಅವಸ್ಥೆ)ಗಳಿರುತ್ತವೆ.

ಔಪಶಮಿಕ ಕ್ಷಾಯಿಕೌ ಭಾವೌ ಮಿಶ್ರಶ್ಚ ಜೀವಸ್ಯ ಸ್ವತತ್ವಮೌದಯಿಕ ಪಾರಿಣಾಮಿಕೌ ಚ ತ.ಸೂ.

**1.** ಉಪಶಮ ಭಾವ : ದ್ರವ್ಯ, ಕ್ಷೇತ್ರ, ಕಾಲ, ಭಾವಗಳ ಕಾರಣದಿಂದ ಕರ್ಮಗಳ ಶಕ್ತಿಯು ಪ್ರಕಟವಾಗದಿರುವುದಕ್ಕೆ 'ಉಪಶಮ' ಭಾವವೆಂದು ಹೆಸರು. ಇದರ ಮೂಲಕ ಉಂಟಾಗುವ ಆತ್ಮನ ಪರಿಣಾಮಕ್ಕೆ 'ಔಪಶಮಿಕ' ವೆಂದು ಹೆಸರು. ಉದಾ: ನಿರ್ಮಲೀ ಬೀಜದ ಸಂಪರ್ಕದಿಂದ ನೀರಿನಲ್ಲಿರುವ ಕೆಸರು ತಳಕ್ಕೆ ಹೋಗಿ ನೀರು ಸ್ವಚ್ಛವಾಗಿರುವಂತೆ.

**2.** ಕ್ಷಯ ಭಾವ: ಕರ್ಮಗಳು ಬುಡಮಟ್ಟ ನಾಶವಾಗುವುದಕ್ಕೆ 'ಕ್ಷಯ'ವೆಂದು ಹೆಸರು. ಇದರ ಮೂಲಕ ಉಂಟಾಗುವ ಆತ್ಮನ ಪರಿಣಾಮಕ್ಕೆ 'ಕ್ಷಾಯಿಕ' ಭಾವವೆಂದು ಹೆಸರು.

**3.** ಕ್ಷಾಯೋಪಶಮಿಕ ಭಾವ : ಕರ್ಮಗಳ ಕೆಲವು ಭಾಗ ಕ್ಷಯ ಮತ್ತೆ ಕೆಲವು ಭಾಗ ಉಪಶಮದಿಂದುಂಟಾಗುವ ಆತ್ಮನ ಪರಿಣಾಮಕ್ಕೆ 'ಕ್ಷಾಯೋ ಪಶಮಿಕ'' ಭಾವವೆಂದು ಹೆಸರು. ಉದಾ: ನೀರನ್ನು ಹಾಳು ಮಾಡುವ ಕೆಸರಿನ ಪರಮಾಣುಗಳು ತಳದಲ್ಲಿರುವುದೂ ಮತ್ತು ಸೂಕ್ಷ್ಮವಾದ ಕೆಸರಿನ ಹಲವು ಪರಮಾಣುಗಳು ನೀರಿನೊಡನೆ ಬೆರೆತಿರುವುದೂ ಈ ಎರಡರ ಬಗೆಯಿಂದ ನೀರಿನಲ್ಲಿ ಸ್ವಚ್ಛತೆ ಮತ್ತು ಅಸ್ವಚ್ಛತೆ ಎರಡೂ ಕೂಡಿರುವಂತೆ.

**4.** ಉದಯ ಭಾವ : ಕರ್ಮಗಳ ಸ್ಥಿತಿಯು ಪೂರ್ತಿಯಾದೊಡನೆ ಕರ್ಮಗಳ ಫಲ ಉಂಟಾಗುವುದಕ್ಕೆ 'ಉದಯ' ಭಾವವೆಂದು ಹೆಸರು.

ಈ ಮೂಲಕ ಉಂಟಾಗುವ ಆತ್ಮನ ಪರಿಣಾಮಕ್ಕೆ 'ಔದಯಿಕ' ಭಾವವೆಂದು ಹೆಸರು.

**5.** ಪಾರಿಣಾಮಿಕ ಭಾವ : ಕರ್ಮಗಳ ಉಪಶಮ, ಕ್ಷಯೋಪಶಮ ಮತ್ತುಉದಯಗಳ ಅಪೇಕ್ಷೆ ಇಲ್ಲದೆ ಜೀವನ ಭಾವವು ಆತ್ಮಸ್ವಭಾವ ರೂಪವಾಗಿರುವುದೇ 'ಪಾರಿಣಾಮಿಕ' ಭಾವವಾಗಿದೆ.

ಈ ಮೇಲೆ ಹೇಳಿದ ಅವಸ್ಥೆಗಳಲ್ಲಿ ಉಂಟಾಗುವ ಭಾವಗಳಿಗೆ 'ಗುಣಸ್ಥಾನ'ಗಳೆಂದು ಹೆಸರು. ಗೊಮ್ಮಟಸಾರದಲ್ಲಿ.-

'ಜೇಹಿದು ಲಕ್ಖಿಜ್ಜಂತೇ ಉದಯಾದಿಸು ಸಂಭವೇ ಹಿಂ ಭಾವೇಹಿಂ
ಜೀವಾತೇ ಗುಣಸಣ್ಣಾ ಣಿದ್ದಿಟ್ಠಾ ಸವ್ವದರ ಸೀಹಿಂ

– ಸಂಸಾರೀ ಜೀವಿಗಳಲ್ಲಿ ಕರ್ಮಗಳ ಉದಯ, ಉಪಶಮ, ಕ್ಷಯ, ಕ್ಷಾಯೋಪಶಮ ಮತ್ತು ಪಾರಿಣಾಮಿಕ ಮೊದಲಾದ ಅವಸ್ಥೆಗಳಲ್ಲುಂಟಾಗುವ ಭಾವಗಳಿಗೆ 'ಗುಣಸ್ಥಾನ'ಗಳೆಂದು ಹೆಸರು.

ಹದಿನಾಲ್ಕು ಗುಣಸ್ಥಾನಗಳು : 1. ಮಿಥ್ಯಾತ್ವ 2. ಸಾಸಾದನ ಸಮ್ಯಕ್ತ್ವ 3. ಮಿಶ್ರ 4. ಅವಿರತ ಸಮ್ಯಕ್ತ್ವ 5. ದೇಶವಿರತ 6. ಪ್ರಮತ್ತ 7. ಅಪ್ರಮತ್ತ 8. ಅಪೂರ್ವಕರಣ 9. ಅನಿವೃತ್ತಿಕರಣ 10. ಸೂಕ್ಷ್ಮ 11. ಉಪಶಾಂತ ಕಷಾಯ 12. ಕ್ಷೀಣ ಕಷಾಯ 13. ಸಂಯೋಗ ಕೇವಲಿ 14. ಅಯೋಗ ಕೇವಲಿ.

1. ಮಿಥ್ಯಾತ್ತ್ವ - ಮಿಥ್ಯಾತ್ತ್ವ ದರ್ಶನ ಮೋಹನೀಯ ಕರ್ಮದ ಉದಯದಿಂದ ದೇವ ಮತ್ತು ಶಾಸ್ತ್ರಗಳಲ್ಲಿ ವಿಪರೀತವಾದ ನಂಬಿಕೆಯುಂಟಾಗುವ ಪರಿಣಾಮಕ್ಕೆ 'ಮಿಥ್ಯಾದೃಷ್ಟಿ' ಗುಣಸ್ಥಾನವೆಂದು ಹೆಸರು.

2. ಸಾಸಾದನ ಸಮ್ಯಕ್ತ್ವ - ಮಿಥ್ಯಾತ್ವ, ಸಮ್ಯಕ್ ಮಿಥ್ಯಾತ್ವ, ಸಮ್ಯಕ್ತ್ವ ಪ್ರಕೃತಿ, ಅನಂತಾನು ಬಂಧಿ, ಕ್ರೋಧ, ಮಾನ, ಮಾಯಾ, ಲೋಭ ಈ ಏಳು ಕರ್ಮಗಳ ಉಪಶಮದಿಂದಾದ ಉಪಶಮ ಸಮ್ಯಕ್ತ್ವವು ಅನಂತಾನು ಬಂಧಿ ಕ್ರೋಧ, ಮಾನ, ಮಾಯಾ, ಲೋಭಗಳಲ್ಲಿ ಯಾವುದಾದರೊಂದು ಕರ್ಮದ ಉದಯದಿಂದ ಬಿಟ್ಟುಹೋಗಿ ಮಿಥ್ಯಾತ್ವವನ್ನುಹೊಂದುವ ಮೊದಲಿನ (ಸಮ್ಯಕ್ತ್ವಕ್ಕೂ ವಿಥ್ಯಾತ್ವಕ್ಕೂ ಮದ್ಯಕಾಲದ) ಪರಿಣಾಮಕ್ಕೆ 'ಸಾಸಾದನ ಸಮ್ಯಕ್ತ್ವ' ಗುಣಸ್ಠಾವೆಂದು ಹೆಸರು.

3. ಮಿಶ್ರ - ಮಿಥ್ಯಾತ್ವ, ಸಮ್ಯಕ್ ಮಿಥ್ಯಾತ್ವ, ಸಮ್ಯಕ್ತ್ವ ಪ್ರಕೃತಿ, ಅನಂತಾನು ಬಂಧಿ ಕ್ರೋಧ, ಮಾನ, ಮಾಯಾ, ಲೋಭ ಈ ಏಳು ಕರ್ಮಗಳಲ್ಲಿ ಸಮ್ಯಕ್ ಮಿಥ್ಯಾತ್ವದ ಕರ್ಮದ ಉಪದಯದಿಂದ ಸರ್ವಜ್ಞ ಪ್ರಣೀತವಾದ ಸನ್ಮಾರ್ಗದಲ್ಲಿಯೂ, ತದ್ವಿಪರೀತವಾದ ದುರ್ಮಾರ್ಗದಲ್ಲಿಯೂ, ಮೊಸರನ್ನೂ ಬೆಲ್ಲವನ್ನೂ ಬೆರೆಸುವುದರಿಂದುಂಟಾಗುವ ರುಚಿಯಂತೆ ಸಮಾನ ಪರಿಣಾಮ ಉಂಟಾಗುವುದಕ್ಕೆ 'ಮಿಶ್ರ ಗುಣಸ್ಥಾನ'ವೆಂದು ಹೆಸರು.

4. ಅವಿರತ ಸಮ್ಯಕ್ತ್ವ - ವಿಥ್ಯಾತ್ವ, ಸಮ್ಯಕ್ ಮಿಥ್ಯಾತ್ವ, ಸಮ್ಯಕ್ತ್ವ ಪ್ರಕೃತಿ ಅನಂತಾನು ಬಂಧಿ ಕ್ರೋಧ, ಮಾನ, ಮಾಯಾ, ಲೋಭ ಈ ಏಳು ಕರ್ಮಗಳ ಉಪಶಮದಿಂದ ಔಪಶಮಿಕ ಸಮ್ಯಕ್ತ್ವವೂ,

ಕ್ಷಯದಿಂದ ಕ್ಷಾಯಿಕ ಸಮ್ಯಕ್ತ್ವವೂ. ಪಿಳನೆಯ ಸಮ್ಯಕ್ತ್ವ ಪ್ರಕೃತಿಯ ಉದಯದಿಂದಲೂ ಉಳಿದ ಆರು ಕರ್ಮಗಳ ಕೆಲವು ಭಾಗ ಕ್ಷಯ, ಕೆಲವು ಭಾಗ ಉಪಶಮ ಇವುಗಳಿಂದಲೂ ಕ್ಷಾಯೋಪಶಮಿಕ, ವೇದಕ ಸಮ್ಯಕ್ತ್ವವ ಉಂಟಾಗುವುವು.. ಅಪ್ರತ್ಯಾಖ್ಯಾನ ಕ್ರೋಧ, ಮಾನ, ಮಾಯಾ, ಲೋಭ ಕಷಾಯಗಳ ಪರಿಣಾಮದಿಂದ ಅಣುವ್ರತಗಳುಂಟಾಗುವುದಿಲ್ಲ. ಅಂತಹ ಪರಿಣಾಮಕ್ಕೆ 'ಅವಿರತ ಸಮ್ಯಗ್ದೃಷ್ಟಿ' ಗುಣಸ್ಥಾನವೆಂದು ಹೆಸರು.

5. ದೇಶವಿರತ - ಚಾರಿತ್ರ ಮೋಹನೀಯ ಕರ್ಮದ ಎರಡನೇ ಭೇದವಾದ ಅಪ್ರತ್ಯಾಖ್ಯಾನ ಕ್ರೋಧ, ಮಾನ, ಮಾಯ, ಲೋಭ ಕಷಾಯಗಳ ಉಪಶಮದಿಂದಲೂ, ಮೂರನೆಯ ಭೇದವಾದ ಪ್ರತ್ಯಾಖ್ಯಾನ ಕ್ರೋಧ, ಮಾನ, ಮಾಯಾ, ಲೋಭ ಕಷಾಯಗಳ ಉದಯದಿಂದಲೂ ಏಕದೇಶ ದೋಷ ನಿವೃತ್ತಿ ರೂಪವಾದ ಚಾರಿತ್ರವುಂಟಾಗುವುದು. ಅದಕ್ಕೆ 'ದೇಶವಿರತಿ, ಅಥವಾ 'ದೇಶ ಸಂಯತ' ಅಥವಾ 'ದೇಶವ್ರತ' ಗುಣ ಸ್ಥಾನವೆಂದು ಹೆಸರು.

6. ಪ್ರಮತ್ತ ಸಂಯತ - ಪ್ರತ್ಯಾಖ್ಯಾನ ಕ್ರೋಧ, ಮಾನ, ಮಾಯಾ, ಲೋಭ ಕಷಾಯಗಳ ಉಪಶಮದಿಂದಲೂ, ಸಂಜ್ವಲನ ಕ್ರೋಧ, ಮಾನ, ಮಾಯಾ, ಲೋಭ ಕಷಾಯಗಳ ಉಪಶಮದಿಂದಲೂ, ಸಂಜ್ವಲನ ಕ್ರೋಧ, ಮಾನ, ಮಾಯಾ, ಲೋಭ, ಮತ್ತು ಹಾಸ್ಯಾದಿ ನೋಕಷಾಯಗಳ ಉದಯದಿಂದಲೂ ಸಕಲ ಚಾರಿತ್ರ ವ್ರತ ಉಂಟಾಗುವುದು. ಇದಕ್ಕೆ 'ಪ್ರಮತ್ತ ಸಂಯತ' ಗುಣಸ್ಥಾನವೆಂದು ಹೆಸರು. ಈ ಗುಣಸ್ಥಾನವ್ರತಿಗಳಿಗೆ ಮಹಾವ್ರತ, ದಿಗಂಬರ, ನಿರ್ಗ್ರಂಥರೆಂದೂ ಹೆಸರುಗಳಿವೆ.

7. ಅಪ್ರಮತ್ತ ಸಂಯತ - ಸಂಜ್ವಲನ ಕಷಾಯ ಚತುಷ್ಟಯ ನೋಕಷಾಯ ಇವುಗಳ ಮಂದೋದಯದಿಂದ ಪ್ರಮಾದ ರಹಿತವೂ ಸಕಲ ವ್ರತ ಗುಣಶೀಲ ಸಹಿತವೂ ಆದ ಶುದ್ಧಾತ್ಮತತ್ತ್ವ ಭಾವನೆಯುಂಟಾಗುವುದಕ್ಕೆ'ಅಪ್ರಮತ್ತ ಸಂಯತ' ಗುಣಸ್ಥಾನವೆಂದು ಹೆಸರು.

8. ಅಪೂರ್ವಕರಣ - ಅಪ್ರತ್ಯಾಖ್ಯಾನ, ಪ್ರತ್ಯಾಖ್ಯಾನ ಸಂಜ್ವಲನ ಕ್ರೋಧ, ಮಾನ, ಮಾಯಾ, ಲೋಭಗಳು 12, ನೋಕಷಾಯಗಳು 9 ಒಟ್ಟು21 ಕರ್ಮ ಭೇದಗಳ ಉಪಶಮವು ಅಥವಾ ಕ್ಷಯವು ಆಗುತ್ತಾಹೋಗುವಾಗ ಅಧಃ ಪ್ರವೃತ್ತ, ಅಪೂರ್ವ ಮತ್ತು ಅನಿವೃತ್ತ ಕರಣಗಳೆಂಬ ಮೂರು ಪರಿಣಾಮಗಳುಂಟಾಗುತ್ತವೆ. ಅಧಃ ಪ್ರವೃತ್ತಕರಣವು 7ನೇ ಗುಣಸ್ಥಾನದಲ್ಲಾಗುವುದು. ಅದರ ಕಾಲವು ಅಂತರ್ಮುಹೂರ್ತಕರಣವೆಂದು ಪರಿಣಾಮಕ್ಕೆ ಹೆಸರು. ದ್ವಿತಿಯಾದಿ ಸಮಯದಲ್ಲಿರುವ ಜೀವದ ವಿಶುಧ . ಪರಿಣಾಮಗಳು ಪ್ರಥಮಾದಿ ಸಮಯದಲ್ಲಿರುವ ಜೀವನ ವಿಶುದ್ಧ ಪರಿಣಾಮಗಳೊಡನೆಸಾದೃಶ್ಯವನ್ನು ಹೊಂದುವುದರಿಂದ ಈ ಪರಿಣಾಮಕ್ಕೆ 'ಅಧಃ ಪ್ರವೃತ್ತಕರಣ'ವೆಂದು ಹೆಸರು. ಅಧಃ ಪ್ರವೃತ್ತಕರಣಾ ನಂತರದಲ್ಲಿ ಪ್ರತಿ ಸಮಯ ಶುದ್ಧಿ ಹೊಂದುವುವೂ ಅಪೂರ್ವಗಳೂ ಆದ ಪರಿಣಾಮಗಳುಂಟಾಗುತ್ತವೆ. ಪೂರ್ವೋತ್ತರ ಸಮಯಗಳಲ್ಲಿರುವ ನಾನಾ ಜೀವಗಳಿಗೆ ಪರಸ್ಪರ ಹೋಲಿಕೆ ಸಾಧ್ಯವಿಲ್ಲ. ಸಮಾನ ಸಮಯಗಳಲ್ಲಿರುವ ನಾನಾ ಜೀವಗಳ ಪರಿಣಾಮಗಳಿಗೆ ಪರಸ್ಪರ ಸಾದೃಶ್ಯವೂ ವೈಸಾದೃಶ್ಯವೂ ಇರುತ್ತವೆ

ಅಪೂರ್ವ ಪರಿಣಾಮಕ್ಕೆ 'ಅಪೂರ್ವಕರಣ' ಗುಣಸ್ಥಾನವೆಂದು ಹೆಸರು. ಇದರ ಕಾಲ ಅಂತಮುಹೂರ್ತ 9ನೇಯ ಗುಣಸ್ಥಾನದ ಅಂತಮುಹೂರ್ತ ಕಾಲದಲ್ಲಿ ಎಷ್ಟು ಸಮಯಗಳಿರುತ್ತವೆಯೋ ಅಷ್ಟೇ ಪರಿಣಾಮಗಳಿರುತ್ತವೆ. ಈ ಪರಿಣಾಮಗಳು ಅತಿ ನಿರ್ಮಲವಾದ ಧ್ಯಾನಾಗ್ನಿಯಿಂದ ಕರ್ಮವೆಂಬ ವನವನ್ನು ಸುಡುತ್ತವೆ.

9. ಅನಿವೃತ್ತಿಕರಣ - ಭಿನ್ನ ಸಮಯಗಳಲ್ಲಿರುವ ಜೀವಗಳ ಪರಿಣಾಮಗಳಿಗೆ ಸರ್ವಥಾ ಸಾದೃಶ್ಯವಿರುವುದಿಲ್ಲ. ಸಮಾನ ಸಮಯಗಳಲ್ಲಿರುವ ಜೀವಗಳ ಪರಿಣಾಮಗಳಿಗೆ ಸರ್ವಥಾ ಸಾದೃಶ್ಯವಿರುವುದು. ಇದಕ್ಕೆ 'ಅನಿವೃತ್ತಿ ಕರಣ' ಗುಣಸ್ಥಾನವೆಂದು ಹೆಸರು. ಈ ಗುಣಸ್ಥಾನದ ಮೊದಲ ಭಾಗದಲ್ಲಿ ನಿದ್ರಾನಿದ್ರಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ, ನರಕಗತಿ, ತಿರ್ಯಗ್ಗತಿ, ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಜಾತಿ, ನರಕಗತಿ ಪ್ರಾಯೋಗ್ಯಾನು ಪೂರ್ವ್ಯ, ತಿರ್ಯಗ್ಗತಿ ಪ್ರಾಯೋಗ್ಯಾನುಪೂರ್ವ್ಯ, ಆತಪ, ಉದ್ಯೋತ, ಸ್ಥಾವರ, ಸೂಕ್ಷ್ಮ, ಸಾಧಾರಣವೆಂಬ 16 ಕರ್ಮಗಳು ನಾಶವಾಗುತ್ತವೆ. ಎರಡನೇ ಭಾಗದಲ್ಲಿ ಅಪ್ರತ್ಯಾಖ್ಯಾನ, ಮತ್ತು ಪ್ರತ್ಯಾಖ್ಯಾನ ಕ್ರೋಧ, ಮಾನ, ಮಾಯಾ, ಲೋಭ ನಪುಂಸಕ ವೇದ, ಸ್ತ್ರೀವೇದ, ಹಾಸ್ಯ, ರತಿ, ಆರತಿ, ಶೋಕ, ಭಯ, ಜಿಗುಪ್ಸಾ ಪುಂವೇದ, ಸಂಜ್ವಲನ ಕ್ರೋಧ, ಮಾನ, ಮಾಯಾ ಈ 20 ಕರ್ಮಗಳು ನಾಶವಾಗುತ್ತವೆ.

10. ಸೂಕ್ಷ್ಮಸಾಂಪರಾಯ - ಚಾರಿತ್ರ ಮೋಹನೀಯ ಕರ್ಮದ 21 ಭೇದಗಳಲ್ಲಿ 20 ಭೇದಗಳು ಉಪಶಮ ಅಥವಾ ಕ್ಷಯವಾಗಿ ಹತ್ತನೇ ಗುಣಸ್ಥಾನದಲ್ಲಿ ಸಂಜ್ವಲನ ಸೂಕ್ಷ್ಮ ಲೋಭ ಕರ್ಮದ ಉದಯವಿರುವುದರಿಂದ ಅದಕ್ಕೆ 'ಸೂಕ್ಷ್ಮಸಾಂಪರಾಯ' ಗುಣಸ್ಥಾನವೆಂದು ಹೆಸರು. ರಂಗಿಸಿದ ಕುಸುಂಭ ವಸ್ತ್ರವನ್ನು ಪ್ರಕ್ಷಾಲಿಸಿದ ಮೇಲೆ ಅದರಲ್ಲಿ ಸೂಕ್ಷ್ಮವಾಗಿ ಆ ರಂಗು ಕಾಣುವಂತೆ ಸೂಕ್ಷ್ಮ ಲೋಭ ಕಷಾಯದ ಅನುಭವವಾಗುತ್ತದೆ.

11. ಉಪಶಾಂತ ಕಷಾಯ - ಚಿಲ್ಲದ ಬೀಜವನ್ನು ತೇದು ಕೆಸರುಳ್ಳ ನೀರಿನಲ್ಲಿ ಕದಡಿದರೆ ಆ ಕೆಸರೆಲ್ಲ ತಳದಲ್ಲಿ ನಿಂತು ಮೇಲೆ ನೀರು ತಿಳಿಯಾಗುತ್ತದೆ. ಶರತ್ಕಾಲದಲ್ಲಿ ಸರೋವರದ ಕೆಸರೆಲ್ಲ ತಳಕ್ಕೆ ನಿಂತು ಮೇಲೆ ನೀರು ತಿಳಿಯಾಗಿರುತ್ತದೆ. ಅದರಂತೆ 21 ಮೋಹನೀಯ ಕರ್ಮಗಳು ಉಪಶಮ ಭಾವವನ್ನು ಹೊಂದುವುದರಿಂದುಂಟಾಗುವ ನಿರ್ಮಲ ಪರಿಣಾಮಕ್ಕೆ 'ಉಪಶಾಂತ ಕಷಾಯ' ಗುಣಸ್ಥಾನವೆಂದು ಹೆಸರು. ಈ ಗುಣ ಸ್ಥಾನ ವರ್ತಿಯಾದ ಜೀವನು ಆ ಮೋಹನೀಯ ಕರ್ಮದ ಉದಯದಿಂದ 4ನೇ ಗುಣಸ್ಥಾನಕ್ಕೆ ಬೀಳುತ್ತಾನೆ.

12. ಕ್ಷೀಣ ಕಷಾಯಿ - ಮೋಹನೀಯ ಕರ್ಮವು ಸಂಪೂರ್ಣವಾಗಿ ನಾಶವಾದ ಮೇಲೆ ನಿರ್ಮಲವಾದ ಸ್ಪಟಿಕದ ಪಾತ್ರೆಯಲ್ಲಿರಿಸಿದ ನಿರ್ಮಲವಾದ ನೀರಿನಂತೆ ಯಾವ ಪರಿಣಾಮವು ನಿಷ್ಕಲ್ಮಷವಾಗಿರುವುದೋ ಅದಕ್ಕೆ 'ಕ್ಷೀಣ ಕಷಾಯ' ಗುಣಸ್ಥಾನವೆಂದು ಹೆಸರು. ಈ ಗುಣಸ್ಥಾನದಲ್ಲಿ ಕ್ರಮವಾಗಿ ನಿದ್ರ ದರ್ಶನಾವರಣ, ಪ್ರಚಲ ದರ್ಶನಾವರಣ. ಮತಿ, ಶ್ರುತಿ, ಅವಧಿ, ಮನಃಪರ್ಯಾಯ ಮತ್ತು ಕೇವಲ ಜ್ಞಾನಾವರಣ, ಚಕ್ಷು ಅಚಕ್ಷು ಅವಧಿ, ಕೇವಲ ದರ್ಶನಾವರಣ, ದಾನ, ಲಾಭ, ಭೋಗ, ಉಪಭೋಗ ಮತ್ತು ವೀರ್ಯಾಂತರಾಯ ಈ ಕರ್ಮಗಳು ನಾಶವಾಗುತ್ತವೆ.

13. ಸಯೋಗಿ ಕೇವಲಿ - ಐದು ಜ್ಞಾನಾವರಣ, ಒಂಭತ್ತು ದರ್ಶನಾವರಣ, ಇಪ್ಪತ್ತೆಂಟು ಮೋಹನೀಯ, ಐದು ಅಂತರಾಯ ಈ 47 ಕರ್ಮ ಪ್ರಕೃತಿಗಳು ಮತ್ತು 101 ಅಘಾತಿ ಕರ್ಮ ಪ್ರಕೃತಿಗಳಲ್ಲಿ ನರಕ ತಿರ್ಯಕ್ ಮತ್ತು ದೇವಾಯುಷ್ಯ, ನರಕ ಮತ್ತು ತಿರ್ಯಗ್ಗತಿ, ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ ಮತ್ತು ಚತುರಿಂದ್ರಿಯ ಜಾತಿ ನರಕ ಮತ್ತು ತಿರ್ಯಗತ್ಯಾನುಪೂರ್ವಿ, ಆತಪ, ಉದ್ಯೋತ, ಸ್ಥಾವರ, ನರಕ ಮತ್ತು ತಿರ್ಯಗತ್ಯಾನುಪೂರ್ವಿ, ಆತಪ, ಉದ್ಯೋತ, ಸ್ಥಾವರ, ಸೂಕ್ಷ್ಮ, ಸಾಧಾರಣ ಕರ್ಮ ಪ್ರಕೃತಿಗಳು ಸೇರಿ 63 ಕರ್ಮಗಳು ಕ್ರಮದಿಂದ ನಾಶವಾದ ನಂತರ ಸೂರ್ಯನನ್ನು ಮುಚ್ಚಿಕೊಂಡಿದ್ದ ಮೋಡವು ದೂರವಾದ ಮೇಲೆ ಅವನ ಕಿರಣಗಳು ಹೊರಬೀಳುವಂತೆ, ಆತ್ಮನಲ್ಲಿ ಕ್ಷಾಯಿಕ ಸಮ್ಯಕ್ತ್ವ, ಜ್ಞಾನ, ದರ್ಶನ, ಚಾರಿತ್ರ್ಯ, ದಾನ, ಲಾಭ, ಭೋಗ, ಉಪಭೋಗ ಮತ್ತು ಶಕ್ತಿಗಳೆಂಬ ಲಬ್ಧಿಗಳು ಅಭಿವ್ಯಕ್ತವಾಗುತ್ತವೆ. ಈ ಜ್ಞಾನಾದಿ ಗುಣಗಳು ಇಂದ್ರಿಯಾದಿ ಪರ ವಸ್ತುಗಳ ಸಹಾಯವಿಲ್ಲದೆ ಆತ್ಮನಲ್ಲುಂಟಾಗುವುದರಿಂದ ಆ ಆತ್ಮನಿಗೆ ಕೇವಲಿಯೆಂದೂ, ಪರಮಾತ್ಮ, ಜಿನನೆಂದೂ, ಕಾಯಯೋಗ ಸಹಿತನಾಗಿರುವುದರಿಂದ ಸಯೋಗಿ ಕೇವಲಿಯೆಂದೂ ಆ ಅವಸ್ಥೆಗೆ 'ಸಯೋಗಿ ಕೇವಲಿ' ಗುಣಸ್ಥಾನವೆಂದು ಹೆಸರು.

14. ಅಯೋಗಿ ಕೇವಲಿ - ಸಮಸ್ತ ಕರ್ಮಗಳ ಆಸ್ರವವನ್ನು ತಡೆದವನೂ, ಶೀಲಗಳಿಗೆ ಸ್ವಾಮಿಯೂ ಕರ್ಮಧೂಳಿ ರಹಿತನೂ, ಶರೀರಯೋಗ ರಹಿತನೂ ಆದ ಆತ್ಮನಿಗೆ ಅಯೋಗ ಕೇವಲಿಯೆಂದೂ ಈ ಅವಸ್ಥೆಗೆ 'ಅಯೋಗ ಕೇವಲಿ' ಗುಣಸ್ಥಾನವೆಂದೂ ಹೆಸರು. ಈ ಗುಣಸ್ಥಾನದ ಉಪಾಂತ್ಯ ಸಮಯದಲ್ಲಿ ವೇದನೀಯವೊಂದು, ದೇವಗತಿ, ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ ಮತ್ತು ಕಾರ್ಮಣ ಶರೀರ, ಬಂಧನ, ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ ಮತ್ತು ಕಾರ್ಮಣ ಶರೀರ ಸಂಘಾತ, ಸಮಚತುರಸ್ರ, ನ್ಯಗ್ರೋಧ ಪರಿಮಂಡಲ, ಸ್ವಾತಿ, ಕುಬ್ಜ, ವಾಮನ, ಮತ್ತು ಹುಂಡ ಸಂಸ್ಥಾನ, ಔದಾರಿಕ, ವೈಕ್ರಿಯಕ ಮತ್ತು ಆಹಾರಕ ಶಿರೀರಾಗರೋಪಾಂಗ, ವಜ್ರ ವೃಷಭನಾರಾಚ, ವಜ್ರನಾರಾಚ, ನಾರಾಚ, ಅರ್ಧನಾರಾಚ, ಕೀಲಿತ ಮತ್ತು ಅಸಂಪ್ರಾಪ್ತಾಸೃಪಾಟಿಕ ಸಂಹನನ, ಪ್ರಶಸ್ತಾಪ್ರಶಸ್ತಶ್ವೇತ, ಪೀತ, ಹರಿತ, ಅರುಣ, ಕೃಷ್ಣ ವರ್ಣಗಳು, ಸುಗಂಧ, ದುರ್ಗಂಧ ಪ್ರಶಸ್ತಾಪ್ರಶಸ್ತ ತಿಕ್ತ, ಕಟು, ಕಷಾಯ, ಆಮ್ಲ, ಮಧುರ ರಸಗಳು, ಮೃದು, ಕರ್ಕಶ, ಗುರು, ಲಘು, ಶೀತ, ಉಷ್ಣ, ಸ್ನಿಗ್ಧ, ರೂಕ್ಷ, ದೇವಗತಿ ಪ್ರಾಯೋಗ್ಯಾನುಪೂರ್ವ್ಯ, ಅಗುರುಲಘು, ಉಪಘಾತ, ಪರಘಾತ, ಉಚ್ಛ್ವಾಸ, ಪ್ರಶಸ್ತ ವಿಹಾಯೋ ಮತ್ತು ಅಪ್ರಶಸ್ತ ವಿಹಾಯೋ ಗತಿ, ಅಪರ್ಯಾಪ್ತಕ, ಪ್ರತ್ಯೇಕ ಶರೀರ, ಸ್ಥಿರ ಅಸ್ಥಿರ, ಶುಭ, ಅಶುಭ, ದುರ್ಭಗ, ಸುಸ್ವರ, ಅನಾದೇಯ, ಅಯಶಸ್ಕೀರ್ತಿ, ನಿರ್ಮಾಣ ಮತ್ತು ನೀಚಗೋತ್ರ ಈ 72 ಕರ್ಮಗಳು ಅಂತ್ಯ ಸಮಯದಲ್ಲಿ ಉಳಿದ ವೇದ ನೀಯ, ಮನುಷ್ಯಾಯುಷ್ಯ, ಮನುಷ್ಯಗತಿ, ಪಂಚೇಂದ್ರಿಯ ಜಾತಿ, ಮನುಷ್ಯ ಗತಿ ಪ್ರಾಯೋಗ್ಯಾನು ಪೂರ್ವ್ಯ, ತ್ರಸ, ಬಾದರ, ಪರ್ಯಾಪ್ತಕ, ಸುಭಗ, ಆದೇಯ, ಯಶಸ್ಕೀರ್ತಿ, ತೀರ್ಥಕರತ್ವ, ಉಚ್ಚಗೋತ್ರ - ಈ 13 ಕರ್ಮಗಳು ನಾಶವಾಗಿ ಆತ್ಮನು ಮುಕ್ತನಾಗುತ್ತಾನೆ.

"ಬಂಧ ಹೇತ್ವಭಾವ ನಿರ್ಜರಾಭ್ಯಾಂ ಕೃತ್ಸ್ನ ಕರ್ಮವಿಪ್ರ ಮೋಕ್ಷೋ ಮೋಕ್ಷಃ ॥೧೦-೨೦॥
(ತತ್ವಾರ್ಥ ಸೂತ್ರ)

- ಬಂಧ ಕಾರಣಗಳ ಅಭಾವದಿಂದ ಮತ್ತು ನಿರ್ಜರೆಯಿಂದ ಜ್ಞಾನಾವರಣ ಮೊದಲಾದ ಸಮಸ್ತ ಕರ್ಮ ಪ್ರಕೃತಿಗಳ ಬಂಧನದಿಂದ ಬಿಡಲ್ಪಡುವುದಕ್ಕೆ 'ಮೋಕ್ಷ' ವೆಂದು ಹೆಸರು. ಅಂದರೆ ಈ

ಆತ್ಮ ಪ್ರದೇಶದಿಂದ ಕರ್ಮಗಳು ದೂರವಾಗಲು ಅವುಗಳಿಂದ ಈ ಆತ್ಮನು ಬಿಡಲ್ಪಡುತ್ತಾನೆ. ಇದು ಸಂವರ ಮತ್ತು ನಿರ್ಜರೆಯಿಂದಾಗುತ್ತದೆ.

ರಾಗವಿದ್ದಲ್ಲಿ ದ್ವೇಷವಿರುತ್ತದೆ; ದ್ವೇಷವಿದ್ದಲ್ಲಿ ರಾಗವಿರುತ್ತದೆ. ರಾಗ ದ್ವೇಷಗಳಿಂದ ಮೋಹನೀಯ ಕರ್ಮವೂ, ಮೋಹನೀಯ ಕರ್ಮದಿಂದ ಸಂಸಾರವೂ ಅಭಿವೃದ್ಧಿಯಾಗುತ್ತದೆ. ಕರ್ಮಗಳಲ್ಲೆಲ್ಲ ಮೋಹನೀಯ ಕರ್ಮವು ಅತ್ಯಂತ ಪ್ರಬಲವಾಗಿದೆ. 'ಮೋ' ಯೆಂದರೆ ಮೋಹನೀಯ ಕರ್ಮದ 'ಕ್ಷ'ಯೆಂದರೆ ಕ್ಷಯದಿಂದುಂಟಾಗುವ ಸುಖಕ್ಕೆ ಮೋಕ್ಷವೆಂದು ಹೆಸರು. ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ, ಅಂತರಾಯ, ವೇದನೀಯ, ಆಯುಷ್ಯ, ನಾಮ ಮತ್ತು ಗೋತ್ರಗಳೆಂಬ ಸಕಲ ಕರ್ಮಗಳೂ ಆತ್ಮನಿಂದ ಸಂಪೂರ್ಣ ಬಿಡುಗಡೆಯಾಗುವುದಕ್ಕೆ ''ಮೋಕ್ಷ''ವೆಂದು ಹೆಸರು. ಕರ್ಮಗಳ ಸಂಕೋಲೆಯಿಂದ ಸಂಸಾರಿಯಾಗಿದ್ದ ಜೀವನು ಸಕಲ ಕರ್ಮಗಳ ಸಂಪೂರ್ಣ ಬಿಡುಗಡೆಯಿಂದ ಮುಕ್ತ ಜೀವ, ಸಿದ್ಧ, ಪರಮಾತ್ಮನಾಗಿ ಲೋಕದ ತುತ್ತ ತುದಿಯಲ್ಲಿರುವ ಅಥವಾ ಮುಕ್ತಿ ಅಥವಾ ಮೋಕ್ಷ ಸ್ಥಾನದಲ್ಲಿ ಅನಂತ ಕಾಲದವರೆಗೆ ಶಾಶ್ವತ, ಸ್ಥಿರ, ನಿತ್ಯ, ಧ್ರುವವಾದ ಅನಂತ ಸುಖದ ಒಡೆಯನಾಗಿರುತ್ತಾನೆ. ಪರಮಾತ್ಮನು ಜನನ ಮುಪ್ಪು-ಮರಣ, ಸುಖ, ದುಃಖ ರೂಪವಾದ ಸಂಸಾರಕ್ಕೆ ಕಾರಣವಾದ ಸಮಸ್ತ ಪಾಪ ಪುಣ್ಯಗಳೆಂಬ ಕರ್ಮ ಬೀಜಗಳನ್ನು ಸಂಪೂರ್ಣವಾಗಿ ನಾಶಮಾಡಿರುವುದರಿಂದ ಹುರಿದ ಬೀಜ ಬೆಳೆಯದಿರುವಂತೆ ಸಂಸಾರಾವಸ್ಥೆಗೆ ಯಾವ ಕಾರಣದಿಂದಲೂ ಎಂದೂ ಹಿಂದಿರುಗಿ ಬರುವುದಿಲ್ಲ.

# ದಕ್ಷಿಣ ಕನ್ನಡ ಜಿಲ್ಲೆಯ ಧರ್ಮಪರಂಪರೆ

ಎಸ್. ಡಿ. ಶೆಟ್ಟಿ

'ದಕ್ಷಿಣ ಕನ್ನಡ ಜಿಲ್ಲೆಯ ಧಾರ್ಮಿಕ ಪರಂಪರೆಯು ವಿಶಾಲ ಭಾರತದ ಪರಂಪರೆಗೆ ಹಿಡಿದ ಕೈಗನ್ನಡಿ. ಪ್ರಾಚೀನ ಕಾಲದಿಂದಲೂ ಇಲ್ಲಿ ವಿಶಿಷ್ಟವಾದ ಭೂತಾರಾಧನೆ, ನಾಗಾರಾಧನೆ, ವೃಕ್ಷಾರಾಧನೆಗಳು ಪ್ರಚಲಿತವಾಗಿವೆ. ಭಾರತದ ಪ್ರಮುಖ ಧರ್ಮಗಳಾದ ಶೈವ, ವೈಷ್ಣವ, ಶಾಕ್ತ, ಸೌರ ಕೌಮಾರ, ಗಾಣಪತ್ಯ ಮುಂತಾದ ಪಂಥಗಳೂ ಇಲ್ಲಿ ನೆಲೆಸಿದ್ದವು. ಬೌದ್ಧಮತದಂತೆ, ಜೈನಮತವೂ ಉತ್ತರ ಭಾರತದಿಂದ ಆಗಮಿಸಿ ನೆಲೆನಿಂತು ತನ್ನ ವಿಶಿಷ್ಟವಾದ ಧಾರ್ಮಿಕ ಪರಂಪರೆಯೊಂದನ್ನು ಸೃಷ್ಟಿಸಿತು.

ಈ ಜಿಲ್ಲೆಗೆ ಜೈನಧರ್ಮದ ಆಗಮನದ ಕುರಿತಂತೆ ಸಾಕಷ್ಟು ಜಿಜ್ಞಾಸೆಗಳು ನಡೆದಿವೆ. ನಿರ್ದಿಷ್ಟವಾಗಿ ಗುರುತಿಸಲು ಆಧಾರ ಸಾಮಗ್ರಿಗಳ ಕೊರತೆಯೂ ಇವೆ. ಭದ್ರಬಾಹು ಭಟ್ಟಾರಕರ ಮತ್ತು ಸಂಪ್ರತಿ ಚಂದ್ರಗುಪ್ತರ ಕಾಲದಲ್ಲಿ ಅಂದರೆ ಕ್ರಿ.ಪೂ. ಸು. 230ರಲ್ಲಿ ಶ್ರವಣಬೆಳಗೊಳಕ್ಕೆ ಆಗಮಿಸಿ ನೆಲೆನಿಂತ ಜೈನಧರ್ಮವು ಅಲ್ಲಿಂದ 100-200 ವರ್ಷಗಳೊಳಗೆ ಅಂದರೆ, ಕ್ರಿ.ಶ. 2ನೆಯ ಶತಮಾನದೊಳಗೆ ತುಳುನಾಡಿಗೆ ಬಂದು ನೆಲೆಸಿರಬೇಕೆಂಬದು ಗೋವಿಂದ ಪೈಗಳ ಅಭಿಪ್ರಾಯ. ವಿಶೇಷವಾಗಿ ತುಳುನಾಡಿನ ಮೇಲೆ ಅಧ್ಯಯನ ನಡೆಸಿದ ಡಾ॥ ಸಾಲೆತ್ತೂರು, ಶ್ರೀಪಾದ ಶರ್ಮ, ಡಾ॥ ಸೂರ್ಯನಾಥ ಕಾಮತ್, ಡಾ। ಗುರುರಾಜ ಭಟ್ಟ ಮೊದಲಾದ ವಿದ್ವಾಂಸರು ವಿವಿಧ ರೀತಿಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಮುಖ್ಯವಾಗಿ ಶಾಸನ, ಜೈನವಾಸ್ತು ಶಿಲ್ಪ, ಮೂರ್ತಿ ಶಿಲ್ಪ, ಕಾವ್ಯ, ಪುರಾಣಗಳ ಆಧಾರದಿಂದ ಜೈನಧರ್ಮದ ಆಗಮನದ ಕಾಲವನ್ನು ಪ್ರಾಚೀನ ಆಳುಪರ ಕಾಲದಲ್ಲಿ ಗುರುತಿಸುವ ಪ್ರಯತ್ನಗಳೂ ನಡೆದಿವೆ. 8-9ನೆಯ ಶತಮಾನದಲ್ಲಿ ಪುಲಿಗೆರೆಯಿಂದ ಜೈನ ವರ್ತಕರು ವ್ಯಾಪಾರಕ್ಕಾಗಿ ಇಲ್ಲಿಗೆ ಬಂದ ದೃಷ್ಟಾಂತಗಳಿವೆ. ಆಳುಪರಾಜ 1ನೆಯ ಚಿತ್ರವಾಹನನು (ಕ್ರಿ.ಶ. 680-730) ವಾತಾಪಿಯ ಚಾಳುಕ್ಯ ಚಕ್ರವರ್ತಿ ವಿಕ್ರಮಾದಿತ್ಯ ಸತ್ಯಾಶ್ರಯನ ತಂಗಿಯಾದ ಕುಂಕುಮದೇವಿಯನ್ನು ಮದುವೆಯಾದ ಮಹತ್ವದ ಸಂಗತಿಯು ಕ್ರಿ.ಶ. 707ರ ಶಿಗ್ಗಾಂವಿಯ ತಾಮ್ರಶಾಸನದಲ್ಲಿ ಬಂದಿದೆ. ಕುಂಕುಮದೇವಿಯು ಜೈನಳಾಗಿದ್ದು ಆಕೆ ಪುಲಿಗೆರೆಯಲ್ಲಿ (ಲಕ್ಷ್ಮೇಶ್ವರ) ನಿರ್ಮಿಸಿದ ಜಿನಭವನಕ್ಕೆ ಚಿತ್ರವಾಹನನ ಬೇಡಿಕೆಯ ಮೇರೆಗೆ ಚಾಳುಕ್ಯ ವಿಕ್ರಮಾದಿತ್ಯನು ಗುಡ್ಡಿಕೆರೆ ಗ್ರಾಮವನ್ನು ದಾನನೀಡುತ್ತಾನೆ. ಶೈವ ಆಳುಪರಿಗೂ ಜೈನರಿಗೂ ವೈವಾಹಿಕ ಸಂಬಂಧ ಏರ್ಪಟ್ಟಿರುವುದನ್ನು ಇಲ್ಲಿ ಕಾಣುತ್ತೇವೆ. ಇದೇ ರೀತಿ ಘಟ್ಟದ ಮೇಲಿನ ಜೈನ ಶಾಂತರರ

ಜೊತೆಯಲ್ಲಿಯೂ, ಆಲೂಪರು ನಿರಂತರವಾಗಿ ಸಖ್ಯ ಬೆಳೆಸಿದ್ದರಲ್ಲದೆ ವೈವಾಹಿಕ ಸಂಬಂಧಗಳನ್ನೂ, ಇಟ್ಟುಕೊಂಡಿದ್ದರು. ಕ್ರಿಶ. 4ನೆಯ ಶತಮಾನದ ಉದಯಾವರ ಶಾಸನದಲ್ಲಿ ಜೈನ ಬಳಿಗಳ ಪ್ರಸ್ತಾಪ ಬಂದಿರುವುದನ್ನು ವಿದ್ವಾಂಸರು ತೋರಿಸಿಕೊಟ್ಟಿದ್ದಾರೆ.

ಪ್ರಾಚೀನ ಆಳ್ವಖೇಡವು (ತುಳುನಾಡು) ಕದಂಬ ಮಂಡಲದ ವ್ಯಾಪ್ತಿಗೆ ಒಳಪಟ್ಟಿತ್ತು. ಪ್ರಾಚೀನ ಕದಂಬರ ಕಾಲದಲ್ಲಿ ಜೈನಧರ್ಮವು ಬನವಾಸಿಯಲ್ಲಿದ್ದ ಬಗ್ಗೆ ಸೂಚನೆಗಳು ದೊರೆಯುತ್ತವೆ. ಕದಂಬರಾಜನಾದ ಮೃಗೇಶವರ್ಮನು (ಕ್ರಿ.ಶ. 455-480) ಚೈತ್ಯಾಲಯದ ಪೂಜೆಗಾಗಿ ಅರಹಂತರಿಗೆ ದಾನ ಬಿಟ್ಟದ್ದನ್ನೂ ಅನಂತರ ರವಿವರ್ಮನು (ಕ್ರಿ.ಶ. 485-519) ಕಾಮಜಿನಾಲಯವೊಂದನ್ನು ಕಟ್ಟಿಸಿ ದಾನ ನೀಡಿದ್ದನ್ನೂ ಇಲ್ಲಿ ಸ್ಮರಿಸಬಹುದಾಗಿದೆ. ಕ್ರಿ.ಶ. 450ರ ಕನ್ನಡದ ಪ್ರಥಮ ದಾಖಲೆಯಾದ ಹಲ್ಮಿಡಿ ಶಾಸನದಲ್ಲಿ ಕದಂಬ ಕಾಕುಸ್ಥವರ್ಮನು ಆಳುತ್ತಿದ್ದಾಗ, ಅವನ ಸಾಮಂತನಾದ ಆಳುಪ ಪಶುಪತಿಯ ಆದೇಶದ ಮೇರೆಗೆ ಕೇಕೆಯ ಪಲ್ಲವರೊಡನೆ ಕಾದಿ ಜಯವನ್ನು ತಂದಿತ್ತ ಕೆಲ್ಲಭಟರಿಯಾ ಪ್ರೇಮದಾ ಸುತನಾದ ವಿಜಅರಸನ ಪ್ರಸ್ತಾಪವನ್ನು ಗಮನಿಸಬಹುದು. 'ಕೆಲ್ಲಭಟರಿಯ' ಎನ್ನುವುದು ಆಳುಪರ ಕುಲನಾಮವೆಂದೂ 'ಎಲ್ಲ ಭಟರಿಯ ಮಗ ವಿಜಅರಸ ಪಶುಪತಿಯ ಬಂಧು, ಇರಬಹುದೆಂದೂ ಕೆಲವರು ಬಾವಿಸುತ್ತಾರೆ. ಇದು ಸಮಂಜಸವೆಂದು ತೋರುವುದಿಲ್ಲ. 'ಕೆಲ್ಲಭಟರಿ' ಈ ಸಮಸ್ತ ಪದದಲ್ಲಿಯ ಪೂರ್ವಪದ 'ಕೆಲ್ಲ' - ಶಬ್ದವನ್ನು ಗಮನಿಸಬೇಕು. ಪ್ರಾಚೀನಕಾಲದಿಂದಲೂ ತುಳುನಾಡಿನಲ್ಲಿ ವಾಸವಾಗಿದ್ದ ಜೈನ ಕೆಲ್ಲರಸರಿಗೆ ಇದು ಸಂಬಂಧಿಸಿದ್ದಾಗಿದೆ. ಈ ಅರಸರಿಗೆ ಸಂಬಂಧಿಸಿದ ಕೆಲವು ಶಾಸನಗಳು ಪೊಳಲಿ, ವೇಣೂರು, ಕೆಲ್ಲಪುತ್ತಿಗೆಗಳಲ್ಲಿ ದೊರೆತಿವೆ. ಇವೆಲ್ಲವೂ ವೀರಗಲ್ಲುಗಳೆಂಬುದನ್ನು ಗಮನಿಸಬೇಕು. ಸ್ವಾಮಿನಿಷ್ಠ ವೀರಯೋಧರಾಗಿದ್ದ ಕೆಲ್ಲರು ತಮ್ಮ ಒಡೆಯರಾದ ಆಳುಪರ ಪರವಾಗಿ ಯುದ್ಧಮಾಡಿದ್ದನ್ನು ಇವು ಸ್ಪಷ್ಟಪಡಿಸುತ್ತವೆ. ಆರು ವೀರಗಲ್ಲುಗಳು ಕೆಲ್ಲಪುತ್ತಿಗೆಯಲ್ಲಿ ದೊರೆತಿರುವುದರಿಂದ ಅದು ಇವರ ರಾಜಧಾನಿಯಾಗಿರಬೇಕೆಂದು ಕೆಲವು ಸಂಶೋಧಕರು ಭಾವಿಸುತ್ತಾರೆ[10]. ಅಂಕೆಲ್ಲ, ಸೇಬ್ಯಅರಕೆಲ್ಲ, ಸೇವ್ಯಗೆಲ್ಲ, ಕಲಿಕೆಲ್ಲ, ಪುತ್ತಿಗೆಯ ಪೇಬ್ಯಕೆಲ್ಲ ಮೊದಲಾದ ಹೆಸರುಗಳು ಶಾಸನದಲ್ಲಿ ಬಂದಿರುವುದನ್ನು ಅವರು ಎತ್ತಿತೋರಿಸುತ್ತಾರೆ.[11] ತುಳುನಾಡಿನ ಜೈನರಲ್ಲಿ ಈಗಲೂ 'ಕೆಲ್ಲ' ಹೆಸರು ಪ್ರಚಲಿತವಿದೆ. ಆದಕಾರಣ, ಹಲ್ಮಿಡಿ ಶಾಸನದಲ್ಲಿ ಉಕ್ತನಾದ ವಿಜಅರಸ (ವಿಜ, ವಿಜಯ, ಶ್ರೀವಿಜಯ ಮುಂತಾದ ಹೆಸರುಗಳೂ ಕೂಡ ಜೈನಮತೀಯರಲ್ಲಿ ಹೆಚ್ಚು ಪ್ರಚಲಿತವಿದೆ) ಜೈನ ಮತದವನಾಗಿದ್ದು ಯುದ್ಧದಲ್ಲಿ ಭಾಗವಹಿಸಿದ್ದನೆಂದು ಯೋಚಿಸಲವಕಾಶವಿದೆ.

ಕ್ರಿ.ಪೂ. 3ನೆಯ ಶತಮಾನದಲ್ಲಿ ಜೈನಧರ್ಮವು ಬನವಾಸಿಯಲ್ಲಿ ಇತ್ತೆಂಬ ಅಂಶವು ಇತ್ತೀಚಿನ ಸಂಶೋಧನೆಯಿಂದ ದೃಢಪಟ್ಟಿದೆ. ಇದರ ಜೊತೆಗೆ ಇಂದ್ರನಂದಿಯ ಶ್ರುತಾವತಾರದ ಕಥೆಯನ್ನೂ ಇಲ್ಲಿ ನೆನೆಯಬಹುದು. ಊರ್ಜಯಂತ ಗಿರಿಯ ಚಂದ್ರಗುಹೆಯಲ್ಲಿ (ಗುಜರಾಥ - ಜುನಾಗಡ) ವಾಸವಾಗಿದ್ದ ಧರಸೇನರಿಂದ ಪುಷ್ಪದಂತ ಮತ್ತು ಭೂತಬಲಿಯೆಂಬ ಇಬ್ಬರು ಜೈನಾಚಾರ್ಯರು ಮಹಾಪ್ರಾಭೃತವನ್ನು ಕಲಿತು ಪ್ರಥಮ ಬಾರಿಗೆ ಅದನ್ನು ಬರಹರೂಪಕ್ಕೆ ಇಳಿಸುತ್ತಾರೆ. ಪುಷ್ಪದಂತನು ಬನವಾಸಿಯಲ್ಲಿ ವಾಸವಿದ್ದು 'ಸತ್ಪರೂಪಣ ಅಧಿಕಾರ'ಕ್ಕೆ 20 ಮೂಲಸೂತ್ರಗಳನ್ನು ಬರೆದು ಆ ಹಸ್ತಪ್ರತಿಯನ್ನು ತಮಿಳುದೇಶದಲ್ಲಿ ವಾಸವಾಗಿದ್ದ ಭೂತಬಲಿಗೆ ಕಳುಹಿಸಿಕೊಡುತ್ತಾನೆ. ಅಲ್ಲಿ ಭೂತಬಲಿಯು ಈ ಕೃತಿಯನ್ನು ಪೂರ್ಣಗೊಳಿಸುತ್ತಾನೆ.[12] ಇದು ಆರು ಖಂಡಗಳಲ್ಲಿ

ನಿರೂಪಿತವಾಗಿರುವ ಜೈನರ ಪವಿತ್ರಗ್ರಂಥ ಷಟ್ಖಂಡಾಗಮ. ಇದರ ಪ್ರಾಚೀನ ಹಸ್ತಪ್ರತಿಯೊಂದು (ಧವಳಾಗ್ರಂಥ) ಮೂಡಬಿದಿರೆಯಲ್ಲಿ ಇನ್ನೂ ಸುರಕ್ಷಿತವಾಗಿವೆ. ಈ ಗ್ರಂಥಕ್ಕೆ ಮೊದಲನೆಯ ಸಮಂತಭದ್ರರು (ಕ್ರಿ.ಶ.450) ಬನವಾಸಿಯಲ್ಲಿದ್ದಾಗ ವ್ಯಾಖ್ಯಾನವೊಂದನ್ನು ರಚಿಸಿದ್ದಾರೆ.

ಕಾಕುಸ್ಥವರ್ಮನ ಕಾಲದಲ್ಲಿ ಜೈನಮತದವನಾದ ಶ್ರುತಕೀರ್ತಿಯು ಸೇನಾಧಿಪತಿಯಾಗಿದ್ದನು. ಜೈನಾಚಾರ್ಯ ಧಾಮಕೀರ್ತಿ, ಮಂತ್ರಿ ಜಯಂತಯೆಂಬುವರು ಮೃಗೇಶವರ್ಮನ ಕಾಲದಲ್ಲಿದ್ದವರು. ಕುಮಾರದತ್ತ ಪಂಡಿತನು ರವಿವರ್ಮನ ಕಾಲದಲ್ಲಿದ್ದ ದೊಡ್ಡವಿದ್ವಾಂಸ. ವಾದಿ ಸೇನಾಚಾರ್ಯ, ಆಚಾರ್ಯ ಧರ್ಮನಂದಿ ಇವರಿಗೆ ಕದಂಬ ಹರಿವರ್ಮನು ಜಿನಪೂಜೆಗಾಗಿ ದಾನನೀಡಿದ್ದಾನೆ. 'ವನವಾಸೀ ಗಚ್ಛ' ವೆಂಬ ಜೈನ ಮುನಿಗಳ ಶಾಖೆಯೇ ಆ ಕಾಲದಲ್ಲಿ ಪ್ರಸಿದ್ಧಿ ಪಡೆದಿತ್ತು. ಉತ್ತರ ಕನ್ನಡ ಜಿಲ್ಲೆಯ ಹಲವಾರು ಕಡೆಗಳಲ್ಲಿ ಕದಂಬರ ಕಾಲದ ವಾಸ್ತುಶಿಲ್ಪವು (ಜೈನ ಬಸದಿ) ಕಂಡು ಬಂದಿರುವಂತೆ ದ.ಕ. ಜಿಲ್ಲೆಯಲ್ಲಿಯೂ ಕಂಡು ಬಂದಿವೆ. ಶಿಶಿಲದಲ್ಲಿ ಎರಡು ಪ್ರಾಚೀನ ಜೈನಬಸದಿಗಳು ನಿರ್ಮಾಣಗೊಂಡಿದ್ದವೆಂದು ಸಂಶೋಧಕರು ಊಹಿಸುತ್ತಾರೆ.

ಕದಂಬರು ವೈದಿಕ ಮತಾವಲಂಬಿಗಳಾಗಿದ್ದರೂ ಜೈನಧರ್ಮಕ್ಕೆ ಪ್ರೋತ್ಸಾಹ ನೀಡಿದ್ದರಲ್ಲದೆ, ವೈವಾಹಿಕ ಸಂಬಂಧವನ್ನೂ ಬೆಳೆಸಿದ್ದರು. ಕದಂಬ ರಾಣಿಯೋರ್ವಳು ಸಲ್ಲೇಖನವನ್ನು ಸ್ವೀಕರಿಸಿ ಮಡಿದ ನಿಸದಿಶಾಸನವೊಂದು ಕುಮಟಾದ ಜೈನ ಬಸದಿಯಲ್ಲಿ ಕಂಡು ಬಂದಿದೆ [14] ಗೇರುಸೊಪ್ಪೆಯ ಸಾಳುವರು ತಮ್ಮನ್ನು ಕಂದಬಾನ್ವಯದವರೆಂದು ಹೇಳಿಕೊಂಡಿದ್ದಾರೆ.[15] ಚಂದಾವರದ ಕದಂಬ ಶಾಖೆಯೊಡನೆ ಅವರು ವೈವಾಹಿಕ ಸಂಬಂಧವನ್ನು ಬೆಳೆಸಿದ್ದರು.* ಈ ಎಲ್ಲ ಅಂಶಗಳನ್ನು ಗಮನಿಸಿ ಹೇಳುವುದಾದರೆ ದ.ಕ. ಜಿಲ್ಲೆಯಲ್ಲಿ ಮೊದಲನೆಯ ಆಳುವರಸನು ಅರಸೊತ್ತಿಗೆಯನ್ನು ಆರಂಭಿಸುವ ಮುನ್ನವೇ ಜೈನ ಧರ್ಮವು ಕ್ರಿ.ಶ. 2-3ನೆಯ ಶತಮಾನದ ಸುಮಾರಿಗೆ ಆಗಮಿಸಿತ್ತೆಂದು ಹೇಳಬಹುದಾಗಿದೆ.

## ದ.ಕ.ಜಿಲ್ಲೆಯ ಜೈನ ಪರಂಪರೆ

ಕರ್ನಾಟಕದಲ್ಲಿ ಜೈನ ಧರ್ಮವೆಂದರೆ ದಿಗಂಬರ ಸಂಪಾದಾಯದ ಜೈನಧರ್ಮವೆಂದೇ ಅರ್ಥ. ಭದ್ರಬಾಹು ಭಟ್ಟಾರಕರ ಮೂಲಕ ಆಗಮಿಸಿದ ಈ ಪಂಥವು ರಾಜಾಶ್ರಯ ಪಡೆದು ಇಡೀ ಕರ್ನಾಟಕದ ತುಂಬ ಜನಪ್ರಿಯತೆಯನ್ನು ಗಳಿಸಿತು. ಬನವಾಸಿ ಕದಂಬರ ಕಾಲದಲ್ಲಿ ಶ್ವೇತಪಟ (ಶ್ವೇತಾಂಬರ) ಮತ್ತು ಯಾಪನೀಯ ಶಾಖೆಗಳಿದ್ದ ಸೂಚನೆಗಳು ದೊರೆಯುತ್ತವೆಯಾದರೂ ಇವು ದ.ಕ. ಜಿಲ್ಲೆಗೆ ಆಗಮಿಸಿದ ಸೂಚನೆಗಳು ಕಂಡುಬರುವುದಿಲ್ಲ. ಇಲ್ಲಿ ಪ್ರಸಿದ್ಧಿ ಪಡೆದುದು ದಿಗಂಬರಪಂಥ. ಆರಂಭದಲ್ಲಿ ಇಲ್ಲಿಗೆ ಆಗಮಿಸಿ ಧರ್ಮಪ್ರಚಾರಕಾರ್ಯವನ್ನು ಕೈಕೊಂಡ ಜೈನ ಮುನಿಗಳು ಎತ್ತರವಾದ ಬೆಟ್ಟಗುಡ್ಡಗಳಲ್ಲಿ ತಮ್ಮ ಕೇಂದ್ರಗಳನ್ನು ಸ್ಥಾಪಿಸಿಕೊಂಡರು. ಹಟ್ಟಿಯಂಗಡಿ, ವರಾಂಗ, ಕುರುಳಿಕುಂದ, ಆಲೂರು, ಶಿಶಿಲ, ಪುದ್ದೊಟ್ಟು, ನೆಲ್ಲಿಕಾರು, ಚಾರ ಮುಂತಾದ ಪ್ರದೇಶಗಳ ಪ್ರಶಾಂತ ವಾತಾವರಣವು ಅವರ ತಪಸ್ಸಿಗೆ ಅನುಕೂಲವಾಗಿದ್ದವು. ವರಾಂಗವನ್ನು ಆದಿತೀರ್ಥವೆಂದು ಕುಂದಣನ ಶಾಸನವು

---

* ಬಂಗಾಡಿಯ ಬಂಗರು ಕದಂಬ ಶಾಖೆಯವರೆಂದು ವಿಜಯವರ್ಣಿ (ಕ್ರಿ.ಶ.೧೪೬೦) ಯು ತನ್ನ ಕೃತಿಯಲ್ಲಿ ಹೇಳಿದ್ದಾನೆ. ಜೊತೆಗೆ ಅವರ ಹಿಂದಿನ ಪರಂಪರೆಯನ್ನೂ ವರ್ಣಿಸಿದ್ದಾನೆ. ಈ ಅಂಶವನ್ನೂ ಗಮನಿಸಬಹುದಾಗಿದೆ.

ವಿವರಿಸುತ್ತದೆ[16] ಜೈನ ಪಟ್ಟಾವಳಿಯಲ್ಲಿ ವರಾಂಗದ ಹೆಸರಿರುವುದು ಅದರ ಪ್ರಸಿದ್ಧಿ ಮತ್ತು ಪ್ರಾಚೀನತೆಗೆ ಸಾಕ್ಷಿಯಾಗಿದೆ. ಮೂಲಸಂಘದ ಕೊಂಡಕುಂದಾನ್ವಯದ ಕಾನೂರ್ಗಣದ ಮೇಷಪಾಷಾಣಗಚ್ಛದ ಜೈನ ಮುನಿಗಳಾದ ಕಠೋರತಪಸ್ವಿ, ಮಲಧಾರಿದೇವ, ಜೈನ ಶಾಸನ ರಕ್ಷಾಮಣಿ ಮಾಧವಚಂದ), ಪರಸಮಯಾದಿಗೆ ವಜ್ರ ನಾದ ಪ್ರಭಾಚಂದ್ರ, ಬೆಟ್ಟದ ಧಾಮನಂದಿ, ಮುನಿಚೂಡಾಮಣಿ ನೇಮಿಚಂದ್ರಸಿದ್ಧಾಂತೇಶಗುಣಿ ಶ್ರೀಚಂದ್ರಯೋಗಿ ಇವರ ಪರಂಪರೆಯೇ ಜೈನಧರ್ಮಕಾರ್ಯದಲ್ಲಿ ಪ್ರವೃತ್ತವಾಗಿದ್ದುದನ್ನು ಆ ಶಾಸನವು ಬಣ್ಣಿಸುತ್ತದೆ. ಜೈನಗೃಹ, ತಟಾಕ, ಬಾಗಿಲ್ಗೊಟ್ಟಿಗೆಯನ್ನು ಪುನರ್ ನಿರ್ಮಿಸಿದಂತೆ ಅದರಲ್ಲಿ ವಿವರಿಸಲಾಗಿದೆ. ಕುರುಳಿಕುಂದ, ಅಲೆವೂರು ಬಸದಿಗಳು ಕೋಟಿಕೂಟದ ಸಂಬಂಧವನ್ನು ಪಡೆದಿದ್ದವೆಂದು ಅದರಲ್ಲಿ ವರ್ಣಿಸಲಾಗಿದೆ. ಕುಲಶೇಖರನ ರಾಣಿ ಜಾತಲ ಮಹಾದೇವಿಯು ಅನೇಕ ಧರ್ಮಕಾರ್ಯವನ್ನು ನಡೆಸಿದ ವಿವರವಿದೆ. ಶಾಂತರಮನೆತನದ ಕುಂಡಣನು ಆಳುಪ ಸಿಂಹಾಸನವನ್ನೇರಿದ ಸ್ಪಷ್ಟಸೂಚನೆಯಿದೆ. ಬಂಮದೇವಾಳುಪೇಂದ್ರನ ಕಾಲದ (ಕ್ರಿ.ಶ.1165) ನಿಸದಿ ಶಾಸನವೊಂದು ಮೂಡಬಿದಿರೆ ಶೆಟ್ಟರಬಸದಿಯಲ್ಲಿ ದೊರೆತಿದೆ. ಆಳುಪ 3ನೆಯ ಕುಲಶೇಖರನು ಮೂಡಬಿದಿರೆ ಬಸದಿಯಲ್ಲಿ ರತ್ನ ಸಿಂಹಾಸನಾರೂಢನಾಗಿದ್ದಾಗ ಪಾರ್ಶ್ವನಾಥನಿಗೆ ದಾನ ನೀಡಿದಂತೆಯೂ ಆತನು ಜೈನಗುರು ಚಾರುಕೀರ್ತಿದೇವರ 'ದಿವ್ಯ ಶ್ರೀಪಾದ ಪದ್ಮಾರಾಧಕನೆಂದು' ವರ್ಣಿಸಲಾಗಿದೆ. [17] ಈ ದೃಷ್ಟಿಯಿಂದ ಪ್ರಾಚೀನ ಆಳುಪದಿಂದ ಮೊದಲ್ಗೊಂಡು ಮಧ್ಯಯುಗೀನ ಆಳುಪರಕಾಲದ (ಕ್ರಿ.ಶ.450-1384) ವರೆಗೂ ಜೈನಧರ್ಮವು ತುಳುನಾಡಿನಲ್ಲಿ ನಿರಂತರವಾಗಿ ರಾಜಾಶ್ರಯವನ್ನು ಪಡೆದುಕೊಂಡು ಪ್ರವರ್ಧಮಾನಕ್ಕೆ ಬರತೊಡಗಿತೆಂದು ಹೇಳಬಹುದು. ಮುಂದೆ ಹೊಯ್ಸಳ ಮತ್ತು ವಿಜಯನಗರ ಕಾಲವು ಜೈನಧರ್ಮದ ಸುವರ್ಣಯುಗವಾಗಿದೆ. ಕರ್ನಾಟಕದ ಇತರ ಭಾಗದಲ್ಲಿ ರಾಜಾಶ್ರಯವನ್ನು ಕಳೆದುಕೊಂಡು ದುಸ್ಥಿತಿಗೆ ಗುರಿಯಾದಾಗ ಅದಕ್ಕೆ ಆಸರೆ ನೀಡಿ ಕಾಪಾಡಿದ ಶ್ರೇಯಸ್ಸು ತುಳುನಾಡಿಗೆ ಸಲ್ಲುತ್ತದೆ. ಹೊಯ್ಸಳ 3ನೆಯ ಬಲ್ಲಾಳನ ಕಾಲದಲ್ಲಿ ಚಿಕ್ಕಾಯಿತಾಯಿ ತುಳುನಾಡಿನ ಮೇಲೆ ಪ್ರಭುತ್ವವನ್ನು ಸ್ಥಾಪಿಸಿದಾಗ, ಜೈನಧರ್ಮಕ್ಕೆ ಪ್ರೋತ್ಸಾಹ ದೊರೆತಿರುವುದನ್ನು ಕೆಲವು ಶಾಸನಗಳು ವಿವರಿಸುತ್ತವೆ. ವಿಜಯನಗರ ಚಕ್ರವರ್ತಿಗಳ ಕಾಲದಲ್ಲಿ ಅವರಿಗೆ ಅಧೀನವಾಗಿ ಅನೇಕ ಜೈನ ತುಂಡರಸರು, ತುಳುನಾಡಿನಲ್ಲಿ ಸ್ವತಂತ್ರವಾಗಿ ಆಡಳಿತ ನಡೆಸತೊಡಗಿದರು. ಕರಾವಳೀ ತೀರದ ಗೇರುಸೊಪ್ಪೆ - ಹಾಡುವಳ್ಳಿಯ ಸಾಳುವರು, ಕಾರ್ಕಳದ ಬೈರರಸರು, ಸುರಾಲಿನ ತೋಳದರು, ಹೊಸಂಗಡಿಯ ಹೊನ್ನಕಂಬಳಿಯರಸರು, ಪುತ್ತಿಗೆಯ ಚೌಟರು, ಮೂಲ್ಕಿಯ ಸಾವಂತರು, ಬಂಗಾಡಿಯ - ಬಂಗರು, ಆಳವಂಗಡಿಯ ಅಜಿಲರು, ಬೈಲಂಗಡಿಯ ಮೂಲರು, ಪಡುಪಣಂಬೂರು, ಯೆರ್ಮಾಳು, ಪಡುಬಿದಿರೆ, ಕಾಪು, ಯೆಲ್ಲೂರು, ಮುಂತಾದ ಪ್ರದೇಶದ ಹೆಗ್ಗಡೆ, ಬಲ್ಲಾಳರು ಅನೇಕ ಬೀಡುಗುತ್ತುಗಳ ಮುಖ್ಯಸ್ಥರು ಜೈನ ಮತಾವಲಂಬಿಗಳಾಗಿದ್ದು, ಜೈನ ಸಂಸ್ಕೃತಿಯ ಬೆಳವಣಿಗೆಗೆ ಕಾರಣರಾದರು. ಈ ಅರಸರ ಅರಸೊತ್ತಿಗೆಯ ಕಾಲದಲ್ಲಿ ವೈಮನಸ್ಸುಗಳಿಂದ ಪರಸ್ಪರ ಸಣ್ಣಪುಟ್ಟ ಕಲಹಗಳು ನಡೆಯುತ್ತಿದ್ದರೂ ಜೈನ ಧರ್ಮದ ಬೆಳವಣಿಗೆಗೆ ಮಾತ್ರ ಯಾವ ತೊಂದರೆಯೂ ಉಂಟಾಗಲಿಲ್ಲ.

ಜೈನರಾಜರ ಆಳ್ವಿಕೆಯ ಕಾಲದಲ್ಲಿ ಜೈನ ಮತ್ತು ಜೈನೇತರ ಧರ್ಮಗಳು ಒಟ್ಟಾಗಿಯೇ ಬೆಳವಣಿಗೆ ಹೊಂದಿದವು. ಜೈನ ಬಸದಿಗಳ ನಿರ್ಮಾಣದ ಜೊತೆಗೆ ಹಿಂದೂ ದೇವಾಲಯಗಳೂ ಸಂಖ್ಯೆಯಲ್ಲಿ ವೃದ್ಧಿಗೊಂಡವು. ರಾಜರು ಹಾಗೂ ಅವರ ಕೈಕೆಳಗಿನ ಅಧಿಕಾರಿಗಳು ಇವೆರಡಕ್ಕೂ

ದಾನ ಧರ್ಮಗಳನ್ನು ನಡೆಸಿದರು. ತಮ್ಮ ಮನೆದೇವರಾದ ತೀರ್ಥಂಕರರು, ಯಕ್ಷ-ಯಕ್ಷಿಯರ ಜೊತೆಗೆ ಊರ ದೇವರುಗಳನ್ನೂ ಗೌರವಿಸಿದರು. ವೇಣೂರಿನ ಅಜಿಲರಿಗೆ - ಮಹಾಲಿಂಗೇಶ್ವರ, ಬಂಗರಿಗೆ ಸೋಮನಾಥ, ಚೌಟರಿಗೆ - ಪುತ್ತಿಗೆ ಸೋಮನಾಥ, ಕಾರ್ಕಳ ಭೈರರಸರಿಗೆ - ಕಳಸನಾಥ, ಮುಲ್ಕಿಯ ಸಾವಂತರಿಗೆ - ಜನಾರ್ದನ, ಪಡುಬಿದ್ರೆ ಬಲ್ಲಾಳರಿಗೆ - ಮಹಾಲಿಂಗೇಶ್ವರ, ಎರ್ಮಾಳು ಹೆಗ್ಗಡೆಯವರಿಗೆ - ಜನಾರ್ದನ, ಕಾಪು ಹೆಗ್ಗಡೆಯವರಿಗೆ - ಜನಾರ್ದನ, ತೊಳಹರಿಗೆ ಮಹಾಲಿಂಗೇಶ್ವರ ಮುಂತಾದ ದೇವರುಗಳು ಇಷ್ಟದೇವರಾಗಿರುವ ಅಂಶವನ್ನು ಗಮನಿಸಬಹುದು. ಕೆರವಸೆ, ಮಿಯಾರು, ಪೆರುವಾಜೆಗಳ ಮಹಾಲಿಂಗೇಶ್ವರ, ಮಾಳ, ಅಜೆಕಾರು, ಹೆರ್ಮುಂಡಗಳಲ್ಲಿನ ಜನಾರ್ದನ, ಹಿರಿಯಂಗಡಿ, ಕಾಪೆಟ್ಟುಗಳ ವೇಣುಗೋಪಾಲ, ಕಟೀಲಿನ - ದುರ್ಗಾಪರಮೇಶ್ವರಿ, ಪೊಳಲಿಯ - ರಾಜರಾಜೇಶ್ವರಿ, ಮುಂತಾದ ದೇವರುಗಳೂ ಕೂಡ ಈ ಅರಸರುಗಳಿಂದ ಪೂಜೆಗೊಳಗಾಗಿದ್ದಾರೆ. ದಾನ ಧರ್ಮಗಳನ್ನು ಪಡೆದಿದ್ದಾರೆ. ಕಾಂತಾವರದ ಕಾಂತೇಶ್ವರ, ಬಾರಾಡಿ ಬೀಡಿನವರ ಇಷ್ಟದೇವವಾದರೆ, ಲೋಕನಾಥರಸನ ಶಾಸನವೊಂದರಲ್ಲಿ ಆ ರಾಜನನ್ನು 'ಶ್ರೀಮತ್ಕಾಂತೇಶ್ವರ ದೇವರ ದಿವ್ಯ ಪಾದ ಪದ್ಮಾರಾಧಕರಪ್ಪ ಲೋಕನಾಥ ದೇವರಸರು' ಎಂದು ಸ್ತುತಿಸಲಾಗಿದೆ19 ನಂದಳಿಕೆಯ ದೈವಗಳು, ತುಳುನಾಡಿನ ಭೂತಸ್ಥಾನಗಳು ಕೂಡ ಹೆಗ್ಗಡೆ, ಬಲ್ಲಾಳರ ಆಡಳಿತಕ್ಕೆ ಒಳಪಟ್ಟವೆ. ಅವುಗಳ ಜವಾಬ್ದಾರಿ, ಕಾಲಕಾಲಕ್ಕೆ ಪರ್ವ-ನೇಮಗಳನ್ನು ನಡಸುವುದು ಕೂಡ ಇವರ ಕರ್ತವ್ಯವೇ ಆಗಿದೆ. ಈಗ ಇದೊಂದು ಸಂಪ್ರದಾಯವೇ ಆಗಿ ಮುಂದುವರಿಯುತ್ತಿದೆ. ಇಂಥಗಳೆಲ್ಲವೂ ಜೈನ - ಜೈನೇತರರನ್ನು ಒಂದೆಡೆ ಸೇರುವಂತೆ ಮಾಡಿದವು - ಜೈನರಸರ ಈ ತೆರನಾದ ಧಾರ್ಮಿಕ ಭಾವನೆ ದಕ್ಷಿಣ ಕನ್ನಡಕ್ಕೆ ವಿಶಿಷ್ಟವಾದುದು.

ಧರ್ಮ ಮತ್ತು ಸಮಾಜದಲ್ಲಿ ಶಾಂತಿ ಸಾಮರಸ್ಯಗಳು ನಲೆಗೊಂಡಾಗ ಸಂಸ್ಕೃತಿಯು ಗರಿಗೆದರಿ ತನ್ನ ಕೊಡುಗೆಗಳನ್ನು ನೀಡುತ್ತದೆ. ವಿಜಯನಗರ ಸಾಮ್ರಾಜ್ಯ ಅಸ್ತಂಗತವಾಗುವವರೆಗೆ ರಾಜಕೀಯರಂಗದಲ್ಲಿ ಜೈನಧರ್ಮಕ್ಕೆ ಯಾವ ಬಾಧಕವೂ ಉಂಟಾಗಲಿಲ್ಲ. ಸುಮಾರು ಒಂದೂವರೆ ಸಾವಿರ ವರ್ಷಗಳಕಾಲ ಅದು ಈ ಜಿಲ್ಲೆಯ ಮಣ್ಣಿನ ಸಾರವನ್ನು ಹೀರಿಕೊಂಡು ಪ್ರಮುಖ ಧರ್ಮವಾಗಿ ಮೆರೆಯಿತು. ಅನೇಕ ಮೌಲಿಕವಾದ ಕೊಡುಗೆಗಳನ್ನು ನೀಡಿ ತನ್ನ ಪರಂಪರೆಯನ್ನು ಸೃಷ್ಟಿಸಿತು. ಜೈನವಾಸ್ತುಶಿಲ್ಪ, ಮೂರ್ತಿಶಿಲ್ಪ , ಶಾಸ್ತ್ರ, ಸಾಹಿತ್ಯ, ಚಿತ್ರ, ಮುಂತಾದ ಹತ್ತು ಹಲವು ರೀತಿಯ ಅಭಿವ್ಯಕ್ತಿಯನ್ನು ಇಲ್ಲಿ ಹೆಸರಿಸಬಹುದು. ನೂರಾರು ಬಸದಿಗಳ ವಾಸ್ತು ಶಿಲ್ಪ, ಮಾನಸ್ತಂಭ, ಬ್ರಹ್ಮಸ್ತಂಭ, ಸಮಾಧಿಗೃಹಗಳು, ಲೋಹ, ಕಾಷ್ಠ ಶಿಲೆ, ಲೆಪ್ಪ, ನವರತ್ನಗಳ ಜಿನ ಪ್ರತಿಮೆಗಳು, ಅಷ್ಟಮ ನಂದೀಶ್ವರ, ಶ್ರುತ, ಗಣಧರರಪಾದ, ಯಕ್ಷ-ಯಕ್ಷಿಯರ ಬಿಂಬಗಳು, ಗಣಧರವಲಯ, ಮೃತ್ಯುಂಜಯ, ಷೋಡಶಭಾವನಾ, ಭಕ್ತಾಮರ, ವಜ್ರಪಂಜರೆ, ಕಲಿಕುಂಡಲ, ಸಿದ್ಧಚಕ್ರ, ಶಾಂತಿಚಕ್ರ ಮುಂತಾದ ಆರಾಧನೆಗಳಿಗೆ ಸಂಬಂಧಪಟ್ಟ ಯಂತ್ರಗಳನ್ನೂ ಇಲ್ಲಿ ಉಲ್ಲೇಖಿಸಬಹುದು. ಗೊಮ್ಮಟಮೂರ್ತಿಯ ನಿರ್ಮಾಣದ ಪರಂಪರೆಯನ್ನು ಮುಂದುವರಿಸಿದ ಕೀರ್ತಿ ಇಲ್ಲಿಯ ಅರಸರಿಗೆ ಸಲ್ಲುತ್ತದೆ. ಕಲ್ಯಾಣಕೀರ್ತಿದೇವ (ಕ್ರಿ.ಶ.1439) ಸಾಳ್ವ (ಕ್ರಿ.ಶ. 1550) ರತ್ನಾಕರವರ್ಣಿ (ಕ್ರಿ.ಶ. 1557) ಚದುರ ಚಂದ್ರಮ (ಕ್ರಿ.ಶ.1646) ಆದಿಯಪ್ಪ (ಕ್ರಿ.ಶ.1442) ಮೊದಲಾದ ಕವಿಗಳು ಕನ್ನಡದಲ್ಲಿ ಕಾವ್ಯರಚಿಸಿದರೆ; ವಿಜಯವರ್ಣಿ(ಕ್ರಿ.ಶ.1460) ಪಾಂಡ್ಯಪ್ಪೊಡೆಯ (ಕ್ರಿ.ಶ.1450) ಕಲ್ಯಾಣಕೀರ್ತಿದೇವ (ಕ್ರಿ.ಶ.1439) ಮುಂತಾದವರು

ಅನುಕ್ರಮವಾಗಿ ಶೃಂಗಾರಾರ್ಣವ ಚಂದ್ರಿಕಾ, ಭವ್ಯಾನಂದ ಕಾರತ, ಜಿನಯಜ್ಞಫಲೋದಯ-ಮುಂತಾದ ಕೃತಿಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ. ಅಪರೂಪವಾಗಿ ದೊರೆಯುವ ಒಬ್ಬನೇ ಒಬ್ಬ ಈ ಜಿಲ್ಲೆಯ ಪ್ರಾಕೃತ ಕವಿಯೆಂದರೆ ಲಲಿತಕೀರ್ತಿಗಳ ಶಿಷ್ಯನಾದ ಯಶಃ ಕೀರ್ತಿ. ಹರಿವಂಸ ಪುರಾಣ, ಚಂದಪ್ಪಹ ಚರಿಉ ಎಂಬ ಎರಡು ಕೃತಿಗಳನ್ನು ನೀಡಿದ್ದಾನೆ. ಈ ಗುಂಪಿಗೆ ಇದುವರೆಗೆ ಬೆಳಕಿಗೆ ಬಾರದ ಅಕಳಂಕ ಬ್ರಹ್ಮನ (ಕ್ರಿ.ಶ.1510) ಚಂದ್ರಸುಧಾಸೋನೆ ಕೃತಿಯನ್ನು ಸೇರಿಸಿಕೊಳ್ಳಬುಹುದು.[20] ಜೊತೆಗೆ ದೇವರಸ [21] (ಕ್ರಿ.ಶ.1471) ಶಂಕರಾರ್ಯ[22] (ಕ್ರಿ.ಶ.1484) ವರ್ಧಮಾನ ಮುನೀಂದ್ರ[23] (ಕ್ರಿ.ಶ.1530), ಅಭಿನವವಾದಿ ವಿದ್ಯಾನಂದ[24] (ಕ್ರಿ.ಶ1520) ಮುಂತಾದ ಶಾಸನೋಕ್ತಕವಿಗಳನ್ನೂ ಹೆಸರಿಸಬಹುದು. ಮೂಡಬಿದಿರೆಯ ಚಾರುಕೀರ್ತಿ ಭಟ್ಟಾರಕರ ಮಠ, ಕಾರ್ಕಳದ ಲಲಿತ ಕೀರ್ತಿಭಟ್ಟಾರ್ರರ ಮಠ, ವರಾಂಗದ - ದೇವೇಂದ್ರಕೀರ್ತಿ ಭಟ್ಟಾಂಕರ ಮಠ, ಗೇರುಸೊಪ್ಪೆ - ಹಾಡುವಳ್ಳಿಯ ಅಕಳಂಕ ಮಠಗಳು ಧಾರ್ಮಿಕ ಕಾರ್ಯದಲ್ಲಿ ಪ್ರವೃತ್ತವಾಗಿದ್ದವು. ಮಾಘಣಂದಿ ಮುನಿಗಳು (ಕ್ರಿ.ಶ. 1253) 'ಶಾಸ್ತ್ರಸಾರ ಸಮುಚ್ಚಯ' ಗ್ರಂಥವನ್ನು ನೆಲ್ಲಿಕಾರಿನ ಬಸದಿಯಲ್ಲಿ ಬರೆದು ಪೂರ್ತಿಗೊಳಿಸಿದರೆ, ಗೊಮ್ಮಟಸಾರಕ್ಕೆ ಕೇಶವವರ್ಣಿ ರಚಿಸಿದ ಅಪರೂಪದ ಕನ್ನಡ ವ್ಯಾಖ್ಯಾನ ಗ್ರಂಥ ಪ್ರತಿಯು ಮರದಾಳ ಬಸದಿಯಲ್ಲಿ ಪ್ರತಿಮಾಡಲ್ಪಟ್ಟಿತು. ತುಳುನಾಡಿನಲ್ಲಿ ಆಗಿಹೋದ ಜೈನ ಮುನಿಪರಂಪರೆಯಂತೂ ಇಲ್ಲಿಯ ಜನರ ಮೇಲೆ ತೀವ್ರವಾದ ಪ್ರಭಾವವನ್ನು ಬೀರಿದ್ದವು. ಪ್ರಭಾಚಂದ್ರ (ಕ್ರಿ.ಶ.1200), ಬಾಳಚಂದ್ರ ತ್ರೈವಿದ್ಯ (ಕ್ರಿ.ಶ.1285), ಧರ್ಮಚಂದ್ರ (ಕ್ರಿ.ಶ.1410), ವೀರಸೇನಮುನಿ (ಕ್ರಿ.ಶ.1429), ಶ್ರುತಕೀರ್ತಿ (ಕ್ರಿ.ಶ.1470), ಕಾಳಿಂಜಿಯ ಗುಣಭದ್ರದೇವರು (ಕ್ರಿ.ಶ.1545), ಚಂದ್ರಕೀರ್ತಿ (ಕ್ರಿ.ಶ.1637), ಮಹೇಂದ್ರ ಕೀರ್ತಿ(ಕ್ರಿ.ಶ.1646), ಮುಂತಾದ ಇನ್ನೂ ಅನೇಕ ಮುನಿಶ್ರೇಷ್ಠರು ಧರ್ಮಕಾರ್ಯದಲ್ಲಿ ನಿರತರಾಗಿದ್ದರು. ಇವರ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ. ಧವಳಾಗ್ರಂಥದ ಓಲೆಯ ಮೇಲೆ ಬರೆದ ಅಪೂರ್ವ ಚಿಕಣಿ ಚಿತ್ರಗಳು ಚಿತ್ರಕಲೆಯ ಅಭಿವ್ಯಕ್ತಿಗೆ ಅತ್ಯುತ್ತಮ ಉದಾಹರಣೆಗಳಾದರೆ, ಮೂಡಬಿದಿರೆಯ ಜೈನಮಠ, ಲೆಪ್ಪದ ಬಸದಿ ಮತ್ತು ಅಮ್ಮನವರ ಬಸದಿಗಳ ಗರ್ಭಗೃಹಗಳ ಗೋಡೆಗಳ ಮೇಲೆ ಪಂಚವರ್ಣಗಳನ್ನು ಬಳಸಿ ಬಿಡಿಸಿದ ಜೈನ ಪರಂಪರೆಯ ಚಿತ್ರಗಳು ಉತ್ತಮ ಭಿತ್ತಿಚಿತ್ರಗಳಾಗಿವೆ. ಇದಕ್ಕೆ ಸರಿಯಾದ ರಕ್ಷಣೆಯಿಲ್ಲದೆ ಹಾಳಾಗುತ್ತಿರುವುದು ದುರ್ದೈವದ ಸಂಗತಿ ಅಂದಿನ ಸಾಮಾಜಿಕ ಜೀವನದ ಮೇಲೆ ಬೆಳಕುಬೀರಬಲ್ಲ ಸುಮಾರು 50 ತಾಮ್ರ ಪಟಗಳು ಮೂಡಬಿದಿರೆಯ ಜೈನಮಠದಲ್ಲಿವೆ. ಬಸದಿಗಳಲ್ಲಿ, ಮಠಗಳಲ್ಲಿ, ಶ್ರಾವಕರಮನೆಗಳಲ್ಲಿ ತಾಡವೋಲೆಯ ಅಪೂರ್ವಗ್ರಂಥಭಂಡಾರವಿದೆ. ಇವನ್ನೆಲ್ಲ ಶೋಧಿಸಿದರೆ ಜೈನ ಪರಂಪರೆಗೆ ಸಂಬಂಧಿಸಿದಂತೆ ಹಲವಾರು ಅಪೂರ್ವ ವಿಚಾರಗಳು ಬೆಳಕಿಗೆ ಬರುವುದರಲ್ಲಿ ಸಂದೇಹವಿಲ್ಲ.

## ದ.ಕ.ಜಿಲ್ಲೆಯ ಜೈನಧರ್ಮದ ಸ್ವರೂಪ

ತುಳುನಾಡಿನ ಜೈನಧರ್ಮದ ಸ್ವರೂಪವು ಕರ್ನಾಟದ ಇತರ ಭಾಗಗಳಲ್ಲಿರುವ ಜೈನಧರ್ಮದ ಸ್ವರೂಪಕ್ಕಿಂತ ಭಿನ್ನವಾದುದು. ಕರ್ನಾಟಕದ ಇತರ ಭಾಗಗಳಲ್ಲಿಜೈನ ಬೋಗಾರರು, ಕಾಸಾರ, ಪಂಚಮ, ಚತುರ್ಥ,ಸೇತುವಾಳ ಸಾದಗೌಡ, ನಾಯಕ ಇತ್ಯಾದಿ ಒಳಪಂಗಡಗಳಿರುವಂತೆ, ತುಳುನಾಡಿನಲ್ಲಿ ಶೆಟ್ಟರು, ಜೈನರು, ಇಂದ್ರರು ಎಂಬ ಮೂರು ಪಂಗಡಗಳಿವೆ. ಈ ಮೂರೂ ಪಂಗಡಗಳಲ್ಲಿ ಪರಸ್ಪರ ವೈವಾಹಿಕ ಸಂಬಂಧಗಳಿಲ್ಲ. ಹುಟ್ಟು, ಸಾವುಗಳಂಥ ವಿಧಿಗಳ ಆಚರಣೆಯಲ್ಲಿ,

ಮದುವೆ, ಉಪನಯನಗಳಂಥ ಧಾರ್ಮಿಕ ಕಾರ್ಯಗಳಲ್ಲಿ ಕೆಲವು ವ್ಯತ್ಯಾಸಗಳಿವೆ. ಆದರೆ ಈ ಮೂರೂ ವರ್ಗದವರು ಬಸದಿಗಳಲ್ಲಿ ನಡೆಸುವ ಅಭಿಷೇಕ, ಪೂಜೆ, ವ್ರತಾಚರಣೆಗಳಲ್ಲಿ ಮಾತ್ರ ಯಾವ ಬದಲಾವಣೆಗಳೂ ಕಂಡುಬರುವುದಿಲ್ಲ.

## 1. ಶೆಟ್ಟಿಗಳು ( ಶ್ರೇಷ್ಠಿಗಳು )

ಶೆಟ್ಟಿಗಳು ಅಥವಾ ಶ್ರೇಷ್ಠಿಗಳು ಇಲ್ಲಿಯ ಮೂಲ ನಿವಾಸಿಗಳಲ್ಲ. ಕರ್ನಾಟಕದ ಇತರ ಭಾಗಗಳಿಂದ ಇಲ್ಲಿಗೆ ಬಂದು ನೆಲೆಸಿದವರು. ವ್ಯಾಪಾರ ಇವರ ಮುಖ್ಯ ವೃತ್ತಿ. 7-8ನೆಯ ಶತಮಾನದ ಸುಮಾರಿಗೆ ವ್ಯಾಪಾರಕ್ಕಾಗಿ ಬಂದ ಸೂಚನೆಗಳು ಶಾಸನಗಳಲ್ಲಿ ಕಂಡುಬಂದಿವೆ. ಇವರು ನಗರ, ಪೇಟೆಗಳಲ್ಲಿ ನೆಲೆನಿಂತ ಕಾರಣ ಪೇಟೆಯವರೆಂದು ಕರೆಯುತ್ತಾರೆ. ಪಿತೃಂ ಪ್ರಧಾನ ಕೌಟುಂಬಿಕ ವ್ಯವಸ್ಥೆ, ವಂಶ, ಗೋತ್ರ, ಸೂತ್ರದ ಆಚರಣೆ ಇವರಲ್ಲಿದ್ದರೂ; ಇಲ್ಲಿಯ ಪ್ರಾದೇಶಿಕತೆಯ ಪ್ರಭಾವದಿಂದಾಗಿ ಅಳಿಯಕಟ್ಟನ್ನೂ, ಬಳಿಯ ಪದ್ಧತಿಯನ್ನೂ ಕ್ವಚಿತ್ತಾಗಿ ಅಳವಡಿಸಿಕೊಂಡರು. ಶಾಸನಗಳಲ್ಲಿ ಬರುವ ನೂರಾರು ಬಳಿಗಳ ಹೆಸರುಗಳನ್ನು ಡಾ॥ಗುರುರಾಜ ಭಟ್ಟರು ಗುರುತಿಸಿದ್ದಾರೆ. ತುಳುನಾಡಿನ ತುಂಡರಸರಲ್ಲಿ ಹೆಚ್ಚಿನ ಎಲ್ಲಾ ಅರಸರೂ ಶ್ರೇಷ್ಠಿಗಳೆಂಬುದನ್ನು ಗಮನಿಸಬೇಕು. ಅಂದಿನ ಅಧಿಕಾರ ಸೂಚಕವಾದ ಹೆಗ್ಗಡೆ, ಬಲ್ಲಾಳ, ಸಾಮಂತ, ಮತ್ತು ಅಜಿಲ, ಚೌಟ, ತೋಳಹರ, ಬಿನ್ನಾಣಿ, ಕೊನ್ನ, ಬಂಗ ಮುಂತಾದ ಹೆಸರುಗಳು ರೂಢಿಯಿಂದ ಬಂದಿದ್ದರೂ ಮೂಲತಃ ಇವರೆಲ್ಲರೂ ಶ್ರೇಷ್ಠಿಗಳೇ ಆಗಿದ್ದಾರೆ.

ನಾಡಿನ ಆರ್ಥಿಕ ಹಿಡಿತ ಇವರ ಕೈಯಲ್ಲಿ ಇದ್ದುದರಿಂದ ಕ್ರಮೇಣ ಅಂದಿನ ರಾಜಕೀಯ ವ್ಯವಸ್ಥೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತ ಬಂದರು. ಮುಂದೆ ಅರಸರಾಗಿ ಅಧಿಕಾರ ಸೂತ್ರವನ್ನು ಹಿಡಿದುಕೊಂಡ ಬಳಿಕ ಜೈನೇತರ ಶ್ರದ್ಧೆಯನ್ನು ಬೆಳೆಸಿಕೊಳ್ಳುವುದು ಅನಿವಾರ್ಯವಾಯಿತು. ಹಿಂದೂ ದೇವರಾದ ಮಹಾಲಿಂಗೇಶ್ವರ, ಜನಾರ್ದನ, ಮುಂತಾದವರನ್ನು ಇಷ್ಟದೇವರಾಗಿ ಸ್ವೀಕರಿಸಿದರು. ಸಮ್ಯಕ್ತ್ವಕ್ಕೆ ವಿರುದ್ಧವಾದರೂ ಭೂತಾರಾಧನೆಯನ್ನು ಸ್ವೀಕರಿಸಿ ಒಪ್ಪಿಕೊಂಡರು. ಬೀಡು, ಅರಮನೆಗಳಲ್ಲಿ ಈಗಲೂ ತೂಗುಮಂಚವನ್ನಿಟ್ಟು ದೈವಗಳನ್ನು ಆರಾಧಿಸುವ ಪದ್ಧತಿಯಿದೆ. ತುಳುನಾಡಿನ ಶೈವ, ವೈಷ್ಣವ, ಹಾಗೂ ಕೆಳವರ್ಗದ ಜನಾಂಗವನ್ನು ಒಲೈಸಿಕೊಳ್ಳಲು, ಬುಕ್ಕರಾಜನು ಕುರಾನ್ ಗ್ರಂಥವನ್ನು ಸಿಂಹಾಸನದ ಪಕ್ಕದಲ್ಲಿಟ್ಟು ಮುಸ್ಲಿಂರನ್ನು ಒಲೈಸಿಕೊಂಡಂತೆ, ಅಕ್ಬರನು ಹಿಂದೂ ಗ್ರಂಥವನ್ನು ಗೌರವಿಸಿ ಹಿಂದುಗಳನ್ನು ಓಲೈಸಿಕೊಂಡಂತೆ, ಅಧಿಕಾರದ ವಿಕೇಂದ್ರೀಕರಣವನ್ನು ತಡೆಗಟ್ಟಿ, ಮೂಲಸೂತ್ರವನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಅವರಿಗೆ ಅನಿವಾರ್ಯವಾದ ಕಾರಣ, ಬಹುಶಃ ತೀರ್ಥಂಕರ ಭಕ್ತಿಯ ಜೊತೆಗೆ ಹಿಂದೂ ಶ್ರದ್ಧೆ, ಭೂತಗಳಲ್ಲಿ ನಂಬಿಕೆ ಈ ಮೂರನ್ನೂ ಪರಿಪಾಲಿಕೊಂಡು ಬಂದಿರಬೇಕು. ಮುಂದೆ ಅದೊಂದು ಪರಂಪರೆಯೇ ಆಗಿ ಮುಂದುವರಿದುಕೊಂಡು ಬಂತು.

### ಜೈನರು

ತುಳುನಾಡಿನಲ್ಲಿ ಜೈನರು ಎಂಬುದು ಜೈನಮತದಲ್ಲಿರುವ ಒಂದು ಒಳಪಂಗಡದ ಹೆಸರೆಂಬುದನ್ನು ಗಮನಿಸಬೇಕು. ಇವರ ಆಕಾರ, ಮಾತನಾಡುವ ತುಳುಭಾಷೆ, ಶ್ರೇಷ್ಠಿಗಳಿಗಿಂತ ಭಿನ್ನ. ವ್ಯವಸಾಯ, ಗೋಪಾಲನೆ ಇವರ ಮುಖ್ಯ ವೃತ್ತಿ. ಹಳ್ಳಿಯಲ್ಲಿ ಇವರು ವಾಸವಿರುವ ಕಾರಣ

ಇವರನ್ನು ಹಳ್ಳಿಯವರೆಂದೂ ಕರೆಯುತ್ತಾರೆ. ಭೂತಾರಾಧನೆಯಲ್ಲಿ ಅಚಲ ನಂಬಿಕೆ, ಇವರಿಗಿದೆ. ಅಳಿಯಕಟ್ಟನ್ನು, ಬಳಿಪದ್ಧತಿಯನ್ನು ಆಚರಿಸುತ್ತಾರೆ. ವಿಧವಾ ವಿವಾಹ ಹಿಂದೆ ಇವರಲ್ಲಿ ಪ್ರಚಲಿತವಿತ್ತು. ಮದುವೆಯಲ್ಲಿ ಬಾಸಿಂಗ ಕಟ್ಟುವ ಸಂಪ್ರದಾಯವಿಲ್ಲ ಹಾಗೂ ಹೋಮ ವಿಧಿಯನ್ನೂ ಮದುವೆಯಲ್ಲಿ (ಹಿಂದೆ) ಮಾಡುತ್ತಿರಲಿಲ್ಲ. ಇಲ್ಲಿಯ ಸಮಾಜದ ಪ್ರಮುಖ ಪಂಗಡವಾದ ಬಂಟರಿಗೂ - ಇವರಿಗೂ ಸಮಾನವಾಗಿರುವ ಹಲವಾರು ಅಂಶಗಳನ್ನು ವಿದ್ವಾಂಸರು ಗುರುತಿಸಿದ್ದಾರೆ.[25] ಹುಟ್ಟು, ಸಾವುಗಳ ಸೂತಕ ಆಚರಣೆಗಳಲ್ಲಿ ಮತ್ತು ಮಾಂಸಾಹಾರ, ಮಾದಕ ಪೇಯಗಳ ತ್ಯಾಗ, ಯಜ್ಞೋಪವೀತ ಧಾರಣೆಗಳನ್ನು ಬಿಟ್ಟರೆ ಇವರಿಗೂ ಬಂಟರಿಗೂ ಹೆಚ್ಚಿನ ವ್ಯತ್ಯಾಸಗಳು ಕಂಡುಬರುವುದಿಲ್ಲ. ಹೆಸರುಗಳಲ್ಲಿ, ಮತ್ತು ಬಳಿಗಳಲ್ಲಿ ಸಮಾನವಾಗಿರುವ ಕೆಲವು ಅಂಶಗಳು ಹೀಗಿವೆ:

**ಹೆಸರುಗಳು :** ಪೂವಣಿ, ಬಂಗ, ಪಡಿವಾಳ, ಆಳ್ವ, ಕಂಬಳಿ, ಭಂಡಾರಿ, ಬಲಿಪ ಮುಂತಾದವು.

**ಬಳಿಗಳು :** ಬಾಗ್ಯೆಟ್ಟನ್ನಾಯ, ಬುನ್ನನ್ನಾಯ, ಪುಲ್ಯೊಟ್ಟನ್ನಾಯ, ಸಾಲನ್ನಾಯ, ಗುಜೆಟ್ಟಬನ್ನಾಯ - ಇತ್ಯಾದಿ

ಬಂಟರನ್ನು ಅಥವಾ ನಾಡವರನ್ನು ಕನ್ನಡ ನಾಡಿನ ಮೂಲಜನಾಂಗಗಳಲ್ಲಿ ಒಬ್ಬರಿರಬೇಕೆಂದು ಗುರುತಿಸುವ ತೀವ್ರಯತ್ನವೊಂದನ್ನು ಡಾ|| ಶಂಬಾ ಜೋಶಿಯವರು ಮಾಡಿದ್ದಾರೆ.[26] ಈ ಬಗ್ಗೆ ವಿವರಿಸುತ್ತ.... ನಾಡವರು ಕನ್ನಡದ ಮೂಲ ಜನಾಂಗ, ಈ ಜನಾಂಗವೇ ಈ ನಾಡಿನ ಜೀವಾಳ. ಅತಿ ಪ್ರಾಚೀನ ಕಾಲದಿಂದಲೂ ಇವರು ವೀರ ಪೂಜಕರು. ವೀರನ ಹಾಗೂ ರುದ್ರನ ಉಪಾಸಕರು. ಆದರೆ ಮುಂದೆ ಮಹಾವೀರನ ಅನುಯಾಯಿಗಳಾದರು'' ಎನ್ನುತ್ತಾರೆ. ಇದಕ್ಕೆ ಉದಾಹರಣೆಯಾಗಿ ಗಂಗ, ಚಾಳುಕ್ಯ, ರಾಷ್ಟ್ರಕೂಟ ಮನೆತವನ್ನು ಉದಾಹರಿಸುತ್ತಾರೆ. ಇವರ ಪ್ರಾಚೀನತೆಯನ್ನು ಉಲ್ಲೇಖಿಸುತ್ತ, ಕ್ರಿ.ಪೂ. ಕಾಲದಲ್ಲಿ ಮನುಸ್ಮೃತಿ ಮೊದಲಾದ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟ ನಾಟಕೀಯವರು ನಾಡವರೆಂದೂ - ಕನ್ನರು, ನಟರು, ಮುಂತಾದ ಹೆಸರುಗಳೂ ಕೂಡ ಅವರಿಗೆ ಅನ್ವಯಿಸುತ್ತದೆಂದು ಹೇಳಿದ್ದಾರೆ. ಇದನ್ನು ಸಂಭಾವ್ಯ ತೀರ್ಮಾನವೆಂದು ಸಧ್ಯಕ್ಕೆ ಸ್ವೀಕರಿಸಬಹುದಾಗಿದೆ. ಆದ್ದರಿಂದ ಜೈನರು ಇಲ್ಲಿಯ ಮೂಲ ನಿವಾಸಿಗಳಲ್ಲಿ ಒಂದು ಪಂಗಡದವರೆಂದು ಹೇಳಬಹುದು. ಈ ಅಭಿಪ್ರಾಯದ ಜೊತೆಗೆ 'ಉತ್ತರದಲ್ಲಿದ್ದ ನಾಡವರು ಭಟರಾಗಿ ದಕ್ಷಿಣಕ್ಕೆಬಂದು ಬಂಟರಾದ್ದರು' ಎಂಬ ಡಾ|| ಗುರುರಾಜ ಭಟ್ಟರ ಅಭಿಪ್ರಾಯವನ್ನು ಪರಿಶೀಲಿಸಬಹುದು.[27] ಪ್ರಸ್ತುತ ತುಳುನಾಡಿನ ಜೈನರು ಮತಾಂತರ ಹೊಂದಿ ಬಂಟರಾದರೆ ? ಅಥವಾ ಬಂಟರು ಮತಾಂತರ ಹೊಂದಿ ಜೈನರಾದರೆ? ಎಂದು ನಿರ್ಧರಿಸಲು ನಮಗೆ ಸ್ಪಷ್ಟವಾದ ಆಧಾರಗಳು ದೊರೆತಿಲ್ಲ.

ಆದರೆ ಬಂಟರಲ್ಲಿ ಪ್ರಚಲಿತವಿರುವ ಕೆಲವು ಸೂಕ್ಷ್ಮವಾದ ಆಚರಣೆಗಳನ್ನು ಪರಿಶೀಲಿಸಿದರೆ, ಜೈನರೇ ಮತಾಂತರ ಹೊಂದಿ ಬಂಟರಾಗಿರಬೇಕು ಎಂದು ಹೇಳುವುದಕ್ಕೆ ಅವಕಾಶವಿದೆ. ಬಂಟರಿಗೆ ಗುರುಮಠವಿಲ್ಲ. ದೇವರೂ ಇಲ್ಲ. ವೆಂಕಟರಮಣ ಭಕ್ತಿ ವೈಷ್ಣವ ಧರ್ಮದಿಂದ ಇತ್ತೀಚೆಗೆ ಬಂದುದು. ಅವರು ತಮ್ಮ ಮನೆಗಳಲ್ಲಿ ಹಿರಿಯರಿಗೆ (ಪಿತೃಗಳಿಗೆ) ಅನ್ನಹಾಕುವಾಗ ಮೊದಲನೆಯ ಎಡೆಯನ್ನು ಜೈನಎಡೆಯೆಂದು ಇಡುತ್ತಾರೆ. ಆ ದಿನ ಅವರು ಮಾಂಸಾಹಾರದ ಅಡುಗೆಯನ್ನು ಮಾಡುವುದಿಲ್ಲ. ಶುದ್ಧ ಸಾತ್ವಿಕ ಆಚರಣೆಯಲ್ಲಿರುತ್ತಾರೆ. ಈ ಕ್ರಿಯೆಯು ಸಾಂಕೇತಿಕವಾಗಿ ಅವರ

ಹಿರಿಯರು ಜೈನರಾಗಿರಬೇಕೆಂಬುದನ್ನು ಸೂಚಿಸುತ್ತದೆ. ಉತ್ತರ ಕನ್ನಡದ ನಾಡವರಲ್ಲಿಯೂ ಈ ಪದ್ಧತಿಯಿದೆ. ಅಲ್ಲಿ ಅವರು ವೀರ ಪೂಜಕರು. ಅವರು ಪೂಜಿಸುವ ಕುದುರೆಬೀರ, ಗೋಳಿಬೀರ ಜಟ್ಟಿಗ ಮುಂತಾದ ದೇವರ ಪ್ರತಿಷ್ಠೆಯ ಕಾರ್ಯವನ್ನು ನೆರವೇರಿಸಲು ಜೈನಪುರೋಹಿತರನ್ನು ಈಗಲೂ ಆಮಂತ್ರಿಸುತ್ತಾರೆ. 'ಜೈನರಗಂಟ' ನಾಡವರಿಗೆ ಸಿಕ್ಕುತ್ತದೆಯೆಂಬ ಗಾದೆಯ ಮಾತಿನ ಧ್ವನಿಯಲ್ಲೂ ಈ ಸಂಬಂಧದ ಸೂಚನೆಯಿದೆ. ಅವರಲ್ಲಿ ಬಳಕೆಯಲ್ಲಿರುವ ಜಿನದೇವನಾಯಕ, ದೇವರಾಯ ನಾಯಕ ಮುಂತಾದ ಹೆಸರುಗಳಲ್ಲೂ ಈ ಸಂಬಂಧದ ಸುಳಿವು ಇದೆ. ಈ ಕೆಲವು ಆಧಾರಗಳ ಮೇಲಿಂದ ಜೈನಧರ್ಮವು ಕರ್ನಾಟಕದಲ್ಲಿ ತೀವ್ರವಾಗಿ ಪ್ರಚಾರಗೊಂಡಾಗ ಜೈನ ಶ್ರದ್ಧೆಯನ್ನು ಬೆಳೆಸಿಕೊಂಡು ಮುಂದೆ ಯಾವುದೋ ಒಂದು ಘಟ್ಟದಲ್ಲಿ ಮಾಂಸಾಹಾರ, ಮಾದಕ ಪೇಯಗಳನ್ನು ಸೇವಿಸಿ ಪ್ರತ್ಯೇಕಗೊಂಡಿರಬೇಕೆಂದು ಹೇಳಬಹುದು.

### ಇಂದ್ರರು :

ಜೈನಮತದಲ್ಲಿ ಪುರೋಹಿತವರ್ಗವನ್ನು ಇಂದ್ರರೆಂದು ಕರೆಯುತ್ತಾರೆ. ಬಸದಿಗಳಲ್ಲಿ ಪೂಜೆ, ಶ್ರಾವಕರ ಮನೆಗಳಲ್ಲಿ ಪೌರೋಹಿತ್ಯ ಇವರ ಮುಖ್ಯವೃತ್ತಿ. ಹಿಂದಿನ ಕಾಲದಲ್ಲಿ ಜೈನ ಶಾಸ್ತ್ರಗ್ರಂಥಗಳನ್ನು ಪ್ರತಿಮಾಡಿಕೊಡುವ ಮಹತ್ಕಾರ್ಯವನ್ನು ಇವರು ಕೈಗೊಂಡಿದ್ದರು. ಉತ್ತರ ಕರ್ನಾಟಕದಲ್ಲಿ ಇವರನ್ನು ಉಪಾಧ್ಯಾಯರೆಂದು ಕರೆದರೆ, ಮೈಸೂರು ಭಾಗದಲ್ಲಿ ಶರ್ಮರೆಂದು ಕರೆಯುತ್ತಾರೆ. 'ಜೈನ ಬ್ರಾಹ್ಮಣ'ರೆಂಬ ಹೆಸರೂ ಅಲ್ಲಲ್ಲಿ ಪ್ರಚಲಿತವಿದೆ. ತುಳುನಾಡಿನಲ್ಲಿ ಕರ್ನಾಟಕ ಇಂದ್ರರೆಂದೂ, ತುಳು ಇಂದ್ರರೆಂದೂ ಎರಡು ವರ್ಗಗಳಿವೆ. ಇದು ಭಾಷಾ ವಾಚಕ ವ್ಯತ್ಯಾಸವೆಂದು ಕಂಡುಬಂದರೂ ಹಿಂದೆ ಇಬ್ಬರಲ್ಲಿ ಪರಸ್ಪರ ವೈವಾಹಿಕ ಸಂಬಂಧಗಳು ನಡೆಯುತ್ತಿರಲಿಲ್ಲ. ಕರ್ನಾಟಕ ಇಂದ್ರರು ಕರ್ನಾಟಕ ಇತರ ಭಾಗಗಳಿಂದ ತುಳುನಾಡಿಗೆ ಬಂದು ನೆಲೆಸಿದವರಾದರೆ, ತುಳು ಇಂದ್ರರು ಬಹುಶಃ ಇಲ್ಲಿಯವರಾಗಿದ್ದು, ಪೌರೋಹಿತ್ಯವನ್ನು ಕಲಿತು ತುಳು ಇಂದ್ರರೆಂದು ಹೆಸರು ಪಡೆದಿರಬೇಕು.

ಹೀಗೆ ಶೆಟ್ಟರು, ಜೈನರು, ಇಂದ್ರರು ಈ ಮೂರೂ ವರ್ಗಗಳಲ್ಲಿ ಕಂಡುಬರುವ ಗೊಂದಲಗಳನ್ನು ಪರಿಹರಿಸಲು ಶ್ರವಣಬೆಳಗೊಳದ ಚಾರುಕೀರ್ತಿಭಟ್ಟಾರಕರು ಪ್ರಯತ್ನನಡೆಸಿದಂತೆ ಕಂಡುಬರುತ್ತದೆ. ಮೂಡಬಿದಿರೆಯ ಶ್ರೀವೀರವಾಣಿ ವಿಲಾಸಗ್ರಂಥ ಭಂಡಾರದ ಹಸ್ತಪ್ರತಿಯೊಂದರಲ್ಲಿ ಈ ವಿಚಾರವಿದೆ.[28] ಇಲ್ಲಿ ಜೈನ ಮತದಲ್ಲಿರುವ ಬಳಿ ಪದ್ಧತಿಗಳು ಆಸ್ತಿಗೆ ಮಾತ್ರ ಸಂಬಂಧಿಸಿದ್ದೆಂದೂ , ಬೇರೆ ಆಚಾರ ವ್ಯವಹಾರ ಧಾರ್ಮಿಕ ಕ್ರಿಯೆಗಳಿಗೆ ಸಂಬಂಧಿಸಿಲ್ಲವೆಂದೂ ಸ್ಪಷ್ಟಪಡಿಸುತ್ತ, ಇನ್ನು ಮುಂದೆ ಎಲ್ಲವೂ ವಂಶ, ಗೋತ್ರ ಸೂತ್ರಗಳನ್ನು ಪರಿಪಾಲಿಸಬೇಕೆಂದು ವಿಧಿಸಿದರು. ಬಸದಿಗಳಲ್ಲಿ ಪೂಜೆ ಮಾಡುವ ತುಳುನಾಡಿನ ಎಲ್ಲಾ ಇಂದ್ರವರ್ಗವನ್ನು ಹತ್ತು ಬಗೆಯಾಗಿಯೂ[29], ಅದೇ ರೀತಿ ಜೈನರಲ್ಲಿ ಪ್ರಚಲಿತವಿದ್ದ ಆರು ಬಳಿಯವರನ್ನು ಆರು ರೀತಿಯಾಗಿಯೂ[30] ವಿಂಗಡಿಸಿ ವಂಶ ಗೋತ್ರ ಸೂತ್ರಗಳನ್ನು ಅವರಿಗೆ ಅನ್ವಯಿಸಿದರು.

ಜೈನ ಮತೀಯರಲ್ಲಿ ಆರಂಭದಿಂದಲೂ ವಂಶ, ಗೋತ್ರ, ಸೂತ್ರ ಪ್ರವರಗಳಿವೆ. ವಂಶಗಳಲ್ಲಿ ಇಕ್ಷ್ವಾಕುವಂಶ, ಕುರುವಂಶ, ಹರಿವಂಶ, ಉಗ್ರವಂಶ, ನಾಥವಂಶ, ಸೋಮವಂಶವೆಂಬ ಆರು ವಂಶಗಳಿವೆ. ಜೈನರಲ್ಲಿ ಆಗಿಹೋದ 24 ಜನ ತೀರ್ಥಂಕರರು ಈ ಆರುವಂಶಕ್ಕೆ ಸೇರಿದವರು. ಗೋತ್ರಗಳಲ್ಲಿ ಗೌತಮ, ಕಶ್ಯಪ, ಶ್ರೀವತ್ಸ, ಭಾರದ್ವಾಜ, ಆತ್ರೇಯ, ಪ್ರಜಾಪತಿ (ವಿಶ್ವಾಮಿತ್ರ)

ಕೌಂಡಿನ್ಯ, ವಶಿಷ್ಠ, ಕಣ್ವ, (ಆಗಸ್ತ್ಯ) ಭಾರ್ಗವರೆಂಬ ಹತ್ತು ಗೋತ್ರಗಳು ಪ್ರಮುಖವಾದವುಗಳು. ಸೂತ್ರವೆಂದರೆ ಆಯಾ ಗೋತ್ರ ವಂಶದವರು ಮುಖ್ಯವಾಗಿ ಆರಾಧಿಸಲ್ಪಡುವ ಶಾಸ್ತ್ರಗಳಾಗಿವೆ. ಪ್ರಭಾಕರಸೂತ್ರ, ಅಹನೀಯಸೂತ್ರ, ಉಪಾಸಕಾಧ್ಯಯನ ಸೂತ್ರ, ತ್ರಿಭುವನ ಸೂತ್ರ, ತತ್ವಾರ್ಥ ಸೂತ್ರ, ವಿಶಾಖಸೂತ್ರ, ಸಾಮಾಯಿಕ ಸೂತ್ರ, ಸೋಮಪ್ರಭ ಸೂತ್ರ ಎಂಬ ಎಂಟುಪ್ರಕಾರಗಳು. ಪ್ರವರಗಳಲ್ಲಿ ಪ್ರಾಲೇಯ ವೃಷಭ, ಕಾಶ್ಯಪ, ಪದ್ಮಾಕರ, ವಿಶಾಖ, ಮೇಘ, ಚಂದ್ರ, ಮಹಾನುಭಾವ, ಕಲ್ಯಾಣವೆಂಬ ಒಂಬತ್ತು ಪ್ರಕಾರಗಳು. ಶಾಖೆಗಳೆಂದರೆ ವೇದ ವಿಭಾಗಗಳೆಂದೇ ಅರ್ಥ. ಜೈನ ಧರ್ಮದಲ್ಲಿ ಪ್ರಥಮಾನುಯೋಗ, ನಂದಾನುಯೋಗ, ಚರಣಾನುಯೋಗ, ದ್ರವ್ಯಾನುಯೋಗ, ವೃಷಭಾನುಯೋಗ, ಧರ್ಮಾನುಯೋಗ, ಅನಂತಾನುಯೋಗವೆಂಬ ಏಳು ಶಾಖೆಗಳು ಮಾತ್ರ.

ಜೈನ ಧರ್ಮದ ಸೈದ್ಧಾಂತಿಕ ತತ್ವಗಳು ಮತ್ತು ಆಚರಣೆಗಳು ಆರಂಭಕಾಲದಲ್ಲಿ ಒಂದೇ ಬಗೆಯಾಗಿದ್ದವು. ಧರ್ಮದ ಪ್ರಧಾನ ಅಂಗಗಳಾಗಿ ಮುನಿ, ಆರ್ಯಿಕಾ, ಶ್ರಾವಕ, ಶ್ರಾವಿಕಾಯೆಂಬ ಚತುಃ ಸಂಘಗಳಿದ್ದವು. ಧರ್ಮಾಚರಣೆಯಲ್ಲಿ ಮುನಿಧರ್ಮ, ಶ್ರಾವಕಧರ್ಮವೆಂದು ಎರಡು ಬಗೆ ಸಮ್ಯಗ್ ದರ್ಶನ, ಜ್ಞಾನ, ಚಾರಿತ್ರ್ಯ ಈ ಮೂರು ರತ್ನತ್ರಯಗಳ ಪಾಲನೆ, ಅಹಿಂಸಾ, ಸತ್ಯ, ಅಸ್ತೇಯ, ಅಪರಿಗ್ರಹ, ಬ್ರಹ್ಮಚರ್ಯವೆಂಬ ಪಂಚಾಣುವ್ರತಗಳ ಪಾಲನೆ, ಈ ಎರಡೂ ವರ್ಗಕ್ಕೆ ಸಮಾನವಾದ ಅಂಶಗಳು. ಆದರೆ ಶ್ರಾವಕರು ದೇವಪೂಜೆ, ಗುರೂಪಾಸನೆ, ಸ್ವಾಧ್ಯಾಯ, ಸಂಯಮ, ತಪ, ದಾನ ಈ ಷಟ್‌ಕರ್ಮಗಳನ್ನು ಆಚರಿಸಬೇಕು. ಮುನಿಗಳು ಸಂಸಾರತ್ಯಾಗಿಗಳಾದ ಕಾರಣ ಕಠೋರ ವ್ರತಗಳನ್ನು ಪಾಲಿಸುತ್ತಾರೆ. ಇವನ್ನು ಮಹಾವ್ರತಗಳೆಂದು ಕರೆಯುತ್ತಾರೆ. ಜೈನಧರ್ಮವು ಮೂಲತಃ ಆತ್ಮಧರ್ಮವಾದ ಕಾರಣ ಸೃಷ್ಟಿಕರ್ತನಾದ ಭಗವಂತನನ್ನು ನಂಬುವುದಿಲ್ಲ. ಕರ್ಮಬಂಧನದಿಂದ ಬಿಡುಗಡೆಯೇ ಜೀವನದ ಗುರಿ. ಅದಕ್ಕಾಗಿ ಸಲ್ಲೇಖನ ಪೂರ್ವಕ ದೇಹತ್ಯಾಗವನ್ನು ಬಯಸುತ್ತಾರೆ. ಕರ್ಮವನ್ನು ಜಯಿಸಿದವನೇ ಜಿನ ಅಥವಾ ತೀರ್ಥಂಕರ. ಯಾವ ವ್ಯಕ್ತಿಯಾದರೂ ತನ್ನ ಪ್ರಯತ್ನದಿಂದ ಜಿನನಾಗಬಹುದು. ಇಂಥ ಜಿನನಿಗೆ ಆಲಯವನ್ನು ನಿರ್ಮಿಸಿ ಸಾಕಾರರೂಪದಿಂದ ಪೂಜೆ, ಅಭಿಷೇಕಾದಿ ಕಾರ್ಯಗಳನ್ನು ಮಾಡುವ ಉದ್ದೇಶ ಆತ್ಮಕಲ್ಯಾಣಕ್ಕಾಗಿ. ಶ್ರಾವಕರು ಫಲ ಪುಷ್ಪಗಳನ್ನು ಇಟ್ಟು ತೀರ್ಥಂಕರನನ್ನು ಪೂಜಿಸಬಹುದು ಶಾಸ್ತ್ರಗ್ರಂಥಗಳು ಇದಕ್ಕೆ ಅವಕಾಶಮಾಡಿಕೊಟ್ಟಿವೆ. ಇದಕ್ಕೆ 'ಸಾಕಾರ ಪೂಜೆ'ಯೆನ್ನುತ್ತಾರೆ. ಜೈನಮುನಿಗಳು ಈ ಪೂಜೆಯನ್ನು ಮಾಡುವುದಿಲ್ಲ. ಬಸದಿಯಲ್ಲಿರುವ ತೀರ್ಥಂಕರ ಬಿಂಬವನ್ನು ವಂದಿಸುತ್ತಾರೆ. ಇದಕ್ಕೆ 'ಭಾವಪೂಜೆ' ಯೆಂದು ಹೆಸರು. 'ಶ್ರಾವಕನೂ ಕೂಡ ಸಾಕಾರಪೂಜೆಯನ್ನೇ ಅವಲಂಬಿಸಿಕೊಂಡು ಇರಬಾರದು. ಕ್ರಮೇಣ ಸಂಸಾರದಲ್ಲಿದ್ದೂ ಪರಿಗ್ರಹಗಳನ್ನೆಲ್ಲ ತ್ಯಜಿಸುತ್ತ 'ಭಾವ ಪೂಜಕ'ನಾಗಿ ಕೊನೆಗೆ ಸಲ್ಲೇಖನ ಪೂರ್ವಕ ದೇಹವನ್ನು ತ್ಯಜಿಸಬೇಕು. ಇದು ಜೈನರ ಆರಾಧನೆಯ ರೀತಿ.

ತುಳುನಾಡಿಗೆ ಆಗಮಿಸುವ ಮುನ್ನವೇ ಜೈನಧರ್ಮವು ತೀರ್ಥಂಕರನ ಜೊತೆಗೆ ಆತನ ಶಾಸನ ದೇವತೆಯರಾದ ಯಕ್ಷ-ಯಕ್ಷಿಯರ ಆರಾಧನೆ, ಯಂತ್ರ ಮಂತ್ರಗಳ ತಾಂತ್ರಿಕ ಆರಾಧನೆ, ಉಪಾಸನೆ ಮತ್ತು ಸಾತ್ವಿಕ ಯಜ್ಞಯಾಗಾದಿಗಳನ್ನು ಆಚರಣೆಗೆ ತಂದಿತ್ತು. ಇಂಥ ಆರಾಧನೆಗಳ ಬಗೆಗೆ ಆರಂಭದಲ್ಲಿ ವಾದ-ವಿವಾದಗಳೂ ಹುಟ್ಟಿಕೊಂಡಿದ್ದವು. ಸೋಮದೇವನ ಯಶಸ್ತಿಲಕ ಚಂಪೂ ಗ್ರಂಥವನ್ನು ಪರಿಶೀಲಿಸಿದರೆ ಈ ಅಂಶವು ಸ್ಪಷ್ಟವಾಗುತ್ತದೆ. 'ಎಲ್ಲಿಯವರೆಗೆ ಸಮ್ಯಕ್ತ್ವಕ್ಕೆ ಹಾನಿ ಬರುವದಿಲ್ಲವೋ ಅಲ್ಲಿಯವರೆಗೆ ಸಾತ್ವಿಕ ಯಜ್ಞ-ಯಾಗಾದಿಗಳನ್ನೂ ಯಕ್ಷ ಯಕ್ಷಿಯರ

ಆರಾಧನೆಗಳನ್ನೂ ಮಾಡಬಹುದೆಂದು ಆತ ಹೇಳುತ್ತಾನೆ. ಮುಂದೆ ಈ ಆರಾಧನೆಗಳಿಗೆ ಶಾಸ್ತ್ರದ ಅಂಗೀಕಾರವೂ ದೊರೆಯಿತು. ತುಳುನಾಡಿಗೆ ಬಂದ ಬಳಿಕ ಜೈನ ಧರ್ಮವು ಪ್ರಾದೇಶಿಕತೆಯ ಸತ್ವವನ್ನು ಮೈಗೂಡಿಸಿಕೊಂಡು ಭೂತಾರಾಧನೆಯನ್ನೂ ಸ್ವೀಕರಿಸಿತು. ಇದಕ್ಕೆ ಜೈನಧರ್ಮದ ಅನೇಕಾಂತ ದೃಷ್ಟಿವಾದವೂ ಪೂರಕ ಅಂಶವಾಯಿತು.

ಯಾವುದೇ ಧರ್ಮವಾದರೂ ದೇಶ, ಕಾಲ, ಪರಿಸರದೊಡನೆ ಒಂದು ಮಟ್ಟದಲ್ಲಿ ರಾಜಿ ಮಾಡಿಕೊಳ್ಳಬೇಕಾಗುತ್ತದೆ. ತನ್ನ ಜೀವನದೃಷ್ಟಿ, ಧೋರಣೆಗಳನ್ನು ಬದಲಾಯಿಸಿಕೊಳ್ಳಬೇಕಾಗುತ್ತದೆ. ಒಂದು ಕಾಲದಲ್ಲಿ ಪ್ರಚಲಿತವಿದ್ದ ಪರಸ್ಪರ ವಿರುದ್ಧ ಆಚರಣೆಗಳು ಕಾಲಸರಿದಂತೆ ಮೈತ್ರಿಯನ್ನು ಸಾಧಿಸಬಹುದು. ಹಳೆಯ ನಂಬಿಕೆಗಳು ಕಳಚಿ ಹೊಸನಂಬಿಕೆಗಳ ಹುಟ್ಟಿಗೆ ಕಾರಣವಾಗಬಹುದು. ಈ ದೃಷ್ಟಿಯಿಂದ ತುಳುನಾಡಿನ ಜೈನಧರ್ಮವು ಇಲ್ಲಿಯ ಧರ್ಮದೊಡನೆ ಸಂಘರ್ಷಕ್ಕಿಳಿಯದೆ ಸಮನ್ವಯದ ಹಾದಿಯನ್ನು ಹಿಡಿಯಿತು. ಇದು ತುಳುನಾಡಿನ ಜೈನಧರ್ಮದ ವಿಶೇಷತೆಯೆಂದು ಹೇಳಬಹುದು.

ತುಳುನಾಡಿನ ಜೈನಮತೀಯರಲ್ಲಿ ಪ್ರಚಲಿತವಿರುವ ಆಚರಣೆಗಳನ್ನು ಮೂರು ರೀತಿಯಲ್ಲಿ ವರ್ಗೀಕರಿಸಬಹುದು.

1. ಸಾಂಪ್ರದಾಯಿಕ ಆಚರಣೆಗಳು : ಷೋಡಶಕ್ರಿಯೆಗಳು, ಅಷ್ಟಾಗ್ನಿ, ಷೋಡಶಭಾವನೆ, ದಶದಕ್ಷಣಪರ್ವ, ನವರಾತ್ರಿ, ಜೀವದಯಾಷ್ಟಮಿ, ದೀಪಾವಳಿ, ಯುಗಾದಿ, ಮಹಾವೀರ ಜಯಂತಿ ಮೊದಲಾದವು.

2. ಸಾಂದರ್ಭಿಕ ಆಚರಣೆಗಳು : ಪಂಚಕಲ್ಯಾಣ, ಶುದ್ಧಸಂಪ್ರೋಕ್ಷಣೆ, ಮಹಾಮಸ್ತಕಾಭಿಷೇಕ, ನೋಂಪಿವ್ರತಗಳು.

3. ಪ್ರಾದೇಶಿಕ ಆಚರಣೆಗಳು : ರಥೋತ್ಸವ, ಭೂತಾರಾಧನೆ, ನಾಗಾರಾಧನೆ, ಮುಂತಾದವು.

ಜೈನ ಗೃಹಸ್ಥರ ಆಚರಣೆಯಲ್ಲಿ ಷೋಡಶಕ್ರಿಯೆಯು ಮುಖ್ಯವಾದುದು[32] ಗರ್ಭಾದಾನದಿಂದ ಮೊದಲ್ಗೊಂಡು, ಮರಣದವರೆಗೆ ಹದಿನಾರು ರೀತಿಯ ಕ್ರಿಯೆಗಳನ್ನು ಮಾಡಲಾಗುತ್ತದೆ. ಇದಕ್ಕೆ ಸಂಸ್ಕಾರಗಳೆಂದೂ ಕರೆಯುತ್ತಾರೆ. ಇವುಗಳಲ್ಲಿ ಗರ್ಭಾದಾನ, ಸೀಮಂತ, ನಾಮಕರಣ, ಚವಲಕರ್ಮ, ಉಪನಯನ, ವಿವಾಹ ಇವು ಮುಖ್ಯವಾದವುಗಳು. ಜೀವನದ ಪ್ರತಿಯೊಂದು ಘಟ್ಟದಲ್ಲಿಯೂ ಧಾರ್ಮಿಕ ಸಂಸ್ಕಾರವನ್ನು ತಂದುಕೊಡುವುದು ಇದರ ಉದ್ದೇಶವಾಗಿದೆ. ಪ್ರಾದೇಶಿಕತೆಯ ಹಿನ್ನೆಲೆಯಲ್ಲಿ ಇವುಗಳ ಆಚರಣೆಗಳಲ್ಲೂ ಭಿನ್ನತೆಗಳಿವೆ.

ತುಳುನಾಡಿನಲ್ಲಿ ಮಗುವಿನ ನಾಮಕರಣ ಸಂಸ್ಕಾರವನ್ನು ತೊಟ್ಟಿಲಿಗೆ ಹಾಕುವ ದಿನ ಅಂದರೆ ಮಗು ಹುಟ್ಟಿದ ೧೬ನೆಯ ದಿನದಂದು ಆಚರಿಸುತ್ತಾರೆ. ಮಗುವಿಗೆ ಅಜ್ಜಿ, ಅಜ್ಜನ ಹೆಸರಿಡುವುದು ಸಾಮಾನ್ಯ ಪದ್ಧತಿ. ಮನೆದೇವರ ಹೆಸರಿಡುವ ಸಂಪ್ರದಾಯವೂ ಇದೆ. ಇಂದ್ರರು ತೊಟ್ಟಿಲ ಪೂಜೆಯನ್ನು ಮಾಡಿ, ಮಂಡಲ ಬರೆದು (ಪಂಚವರ್ಣ)[33] ಹೋಮ ವಿಧಿಯನ್ನು ನಡೆಸುತ್ತಾರೆ. ಆ ಬಳಿಕ ಮಗುವನ್ನು ತೊಟ್ಟಿಲಿಗೆ ಹಾಕಿ ಅದರ ಕೈಯಲ್ಲಿ ಬೆಳ್ಳಿಯ ರೂಪಾಯಿಯನ್ನಿಡುತ್ತಾರೆ. ಜನ್ಮನಕ್ಷತ್ರದ ಪ್ರಕಾರ ಬಂದ ಹೆಸರನ್ನು ಮಗುವಿನ ಕಿವಿಯೊಳಗೆ ಹೇಳಿ ಹಿರಿಯರು, ಮುತ್ತೈದೆಯರು

ತೊಟ್ಟಿಲು ತೂಗಿ ಜೋಗುಳ ಹಾಡುತ್ತಾರೆ. ಮನೆದೇವರಿಗೂ, ಊರ ಬಸದಿಗಳಲ್ಲೂ ಅಭಿಷೇಕ, ಪೂಜೆಗಳಾಗುತ್ತವೆ. ಸಂತಾನದ ಬಗ್ಗೆ ಹರಕೆ ಹೇಳಿಕೊಳ್ಳುವ ಪದ್ಧತಿಯೂ ಇದೆ. ಹೊಂಬುಜದ ಪದ್ಮಾವತಿಗೆ ಹರಕೆ ಹೇಳಿಕೊಂಡರೆ, ಮಗುವನ್ನು ಹೊಂಬುಜಕ್ಕೆ ಕರೆದೊಯ್ದು ಮುಡಿಯೊಪ್ಪಿಸಿ ಹರಕೆಯನ್ನು ಪೂರೈಸುತ್ತಾರೆ. ಮಗುವಿಗೆ ಪದ್ಮಪ್ಪನೆಂದೋ, ಪದ್ಮಾವತಿ, ಪದ್ಮಶ್ರೀಯೆಂದೋ ಹೆಸರಿಡುತ್ತಾರೆ. ಇದೇ ರೀತಿ ಕೂಷ್ಮಾಂಡಿನಿ, ಜ್ವಾಲಾಮಾಲಿನಿ, ಬ್ರಹ್ಮದೇವರಿಗೂ ಸಂತಾನಕ್ಕಾಗಿ ಹರಕೆ ಹೇಳಿಕೊಳ್ಳುವ ಪದ್ಧತಿಯಿದೆ. ಯಾವ ಊರಿನ ದೇವರಿಗೆ ಹರಕೆ ಹೇಳಿಕೊಂಡಿದ್ದಾರೋ ಅಲ್ಲಿಯೇ ಹೋಗಿ ಹರಕೆ ಒಪ್ಪಿಸಬೇಕು. ಇದು ಸಂಪ್ರದಾಯ. ಈ ಯಕ್ಷಿಯರು ಮತ್ತು ಬ್ರಹ್ಮನ ಆರಾಧನೆಯಲ್ಲಿ ಮಾತ್ರ ದೇವತೆಯ ಆರಾಧನೆ ಮತ್ತು ಫಲಶಕ್ತಿಯ (Fertility Cuit) ಆರಾಧನಾವಿಧಿಯ ಅಂಶವನ್ನು ಗುರುತಿಸಬಹುದಾಗಿದೆ. ತುಳುನಾಡಿನಲ್ಲಿ ನಲ್ಲೂರಿನ ಕೂಷ್ಮಾಂಡಿನಿ, ವರಾಂಗದ ಪದ್ಮಾವತಿ, ಮೂಡಬಿದಿರೆಯ ಲೆಪ್ಪದ ಬಸದಿ ಜ್ವಾಲಾಮಾಲಿನಿಯರು ಪ್ರಸಿದ್ಧರಾಗಿದ್ದಾರೆ. ಅಂತೆಯೇ ಬ್ರಹ್ಮದೇವರಲ್ಲಿ ಅಳದಂಗಡಿ, ಬಂಗಾಡಿ, ನಿಡಗಲ್ಲು ನೆಲ್ಲಿಕಾರಿನ ಬ್ರಹ್ಮದೇವರು ವಿಶೇಷವಾಗಿ ಆರಾಧಿಸಲ್ಪಡುತ್ತಾರೆ.

ವಿವಾಹವೂ ಕೂಡ ಪ್ರಮುಖವಾದ ಸಂಸ್ಕಾರ. ಸಪ್ತಪರಮಸ್ಥಾನಗಳು[34] ಲಭ್ಯವಾಗಲೆಂದು ಇದನ್ನು ಆಚರಿಸುತ್ತಾರೆ. ಒಂದರ್ಥದಲ್ಲಿ ಸತಿ-ಪತಿಯರಾಗಿ ಸಂಸಾರ ಹೂಡಲು ಧರ್ಮಸಮ್ಮತವಾದ ಸಾಮಾಜಿಕ ಒಪ್ಪಿಗೆಯೇ ವಿವಾಹ ಸಂಸ್ಕಾರವೆನ್ನಬಹುದು. ಸ್ವಗೋತ್ರದಲ್ಲಿ ಮದುವೆ ನಡೆಯುವುದಿಲ್ಲ. ಸ್ತಂಭ ಮುಹೂರ್ತದಿಂದ (ಅತ್ತಿಯ ಮರದ ರೆಂಬೆಯನ್ನು ಇಟ್ಟಿರುತ್ತಾರೆ) ಮದುವೆಯ ಚಡಂಗಗಳು ಆರಂಭವಾಗುತ್ತವೆ. ತೋರಣ ಮುಹೂರ್ತ, ತಾಳಿಬಂದಿ, ಧಾರೆ, ಹೋಮ ಮುಂತಾದ ಕಲಾಪಗಳು ಜರಗುತ್ತವೆ. ಈ ಸಂದರ್ಭದಲ್ಲಿ ಉಲ್ಲೇಖಿಸಬೇಕಾದ ಒಂದು ವಿಧಿಯೆಂದರೆ ನಾಗಬಲಿ ಅಥವಾ ನಾಗೋಲೆ ಶಾಸ್ತ್ರ. ಇದನ್ನು ಧಾರೆಯಾದ ನಾಲ್ಕನೆಯದಿನ ಮಾಡುವ ಪದ್ಧತಿ ಹಿಂದೆ ಇತ್ತು. ಈಗ ಎಲ್ಲಾ ಶಾಸ್ತ್ರಗಳನ್ನು ಒಂದೇ ದಿನದಲ್ಲಿ ಪೂರೈಸಿಬಿಡುತ್ತಾರೆ. ವಧೂ-ವರರು ಮಂಗಳಸ್ನಾನ ಮಾಡಿ ಬಸದಿಗೆ ಹೋಗಿ ಪೂಜೆಯನ್ನು ಪೂರೈಸಿ ವಿವಾಹ ಮಂಟಪಕ್ಕೆ ಬರುತ್ತಾರೆ. ಅಲ್ಲಿ ಇಂದ್ರರು ಪಂಚವರ್ಣಗಳಲ್ಲಿ ಮಂಡಲವನ್ನು ಬರೆದು ಅದರಲ್ಲಿ ಅಷ್ಟದಳ ಕಮಲವನ್ನು ಬಿಡಿಸುತ್ತಾರೆ. ಪಂಚರತ್ನ, ಸಪ್ತಧಾನ್ಯ, ದರ್ಭೆ, ದೂರ್ವಾಂಕುರದಿಂದ ಸಿಂಗರಿಸುತ್ತಾರೆ. ನಾಗದೇವತೆಗಳಾದ ವಾಸುಕಿ, ಶಂಖಪಾಲ, ಕುಲಿಶ, ಕಾರ್ಕೋಟಕ, ತಕ್ಷಕ, ಪದ್ಮ ಚಕ್ರ, ಅನಂತರೆಂಬ ನಾಗದೇವತೆಗಳನ್ನೂ ಅಷ್ಟದಿಕ್ಪಾಲಕರನ್ನೂ ವಧುವಿನ ತಾಯಿಯು ಭಕ್ತಿಯಿಂದ ಪೂಜಿಸುತ್ತಾಳೆ. ಈ ಎಲ್ಲ ದೇವತೆಗಳು ದೀರ್ಘಾಯು, ಆರೋಗ್ಯ, ಭಾಗ್ಯ, ಫಲಶಕ್ತಿಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತಾಳೆ. ಈ ಮಂಟಪದ ನಾಲ್ಕು ದ್ವಾರಗಳಲ್ಲಿ ಆನೆ, ಕುದುರೆ, ಆನೆ-ವೃಷಭನ ಚಿತ್ರವನ್ನು ಬರೆದು ದಕ್ಷಿಣದ್ವಾರದಲ್ಲಿ ಕನ್ಯೆಯ ಗೋತ್ರ, ಸೂತ್ರಾದಿಗಳನ್ನೂ ಉತ್ತರ ದ್ವಾರದಲ್ಲಿ ವರನ ಗೋತ್ರ ಸೂತ್ರಗಳನ್ನೂ ಬರೆದಿರುತ್ತಾರೆ. ಈ ಮಂಡಲಕ್ಕೆ ಪ್ರದಕ್ಷಿಣೆ ಬರುವಾಗ, ವಧುವು ಇದು ಯಾಕೆ ? ಎಂದು ಪ್ರಶ್ನಿಸುತ್ತಾಳೆ. ಅದಕ್ಕೆ ವರನು ಇನ್ನು ನಮ್ಮ ನಮ್ಮಲ್ಲಿ ಭೇದ ಸರಿಯಲ್ಲ , ನೀನು ನನ್ನ ವಂಶ ಗೋತ್ರಕ್ಕೆ ಬಂದು ಬಿಡು ಎಂದು ಆಹ್ವಾನಿಸುತ್ತಾರೆ. ಆಗ ವಧುವು ನೀವು ನನ್ನನ್ನು ನಿಮ್ಮ ವಂಶ, ಗೋತ್ರಕ್ಕೆ ಬರಮಾಡಿಕೊಳ್ಳುವುದು ನಿಜವಾದಲ್ಲಿ ಅದರ ಕುರುಹಾಗಿ ನಿಮ್ಮ ಕೊರಳಲ್ಲಿರುವ ಸಂಬಂಧಮಾಲೆಯನ್ನು ನನ್ನ ಕೊರಳಿಗೆ ಹಾಕಿ ಕೈ ಹಿಡಿದು ಕರೆಯಿಸಿಕೊಳ್ಳಬೇಕು ಎಂದು ವಿನಂತಿಸಿಕೊಂಡಾಗ ವರನು ಒಪ್ಪಿ,

ಸಂಬಂಧಮಾಲೆಯನ್ನು ಆಕೆಯ ಕೊರಳಿಗೆ ಹಾಕಿ, ಕೈಹಿಡಿದು ಕರೆಯಿಸಿಕೊಳ್ಳುವನು. ಇದನ್ನು ನಾಗಬಲಿ ಶಾಸ್ತ್ರವೆನ್ನುತ್ತಾರೆ. ಈ ವಿಧಿಯ ಹಿಂದೆ ದ.ಕ. ಜಿಲ್ಲೆಯ ಪ್ರಾಚೀನ ನಾಗಾರಾಧನೆಯ ಪರಿಕಲ್ಪನೆಯನ್ನು ಜೈನರು ಅಂಗೀಕರಿಸಿರುವುದನ್ನು ಗುರುತಿಸಬಹುದು.

'ಯುಗಾದಿಯು ವರ್ಷದ ಮೊದಲನೆಯ ದಿನ ಚೈತ್ರಮಾಸ ಶುಕ್ಲಪಕ್ಷದ ಪಾಡ್ಯದ ದಿನ ಆಚರಿಸಲ್ಪಡುವ ಸಾಂಪ್ರದಾಯಿಕ ಪರ್ವ. ಪಾಡ್ಯದ ಹಿಂದಿನ ರಾತ್ರಿ ಜೈನರು ವೃಷಭ ಜಿನನ ಪ್ರತಿಕೃತಿಯಾಗಿ ಸಂಕಲ್ಪ ಪೂರ್ವಕ ಮಂಗಲ ಕಲಶವನ್ನು ತಮ್ಮ ಮನೆಗಳಲ್ಲಿ ಸ್ಥಾಪನೆ ಮಾಡುತ್ತಾರೆ. ಮಾರನೆಯ ಮುಂಜಾನೆ ಆ ಕಲಶಕ್ಕೆ ಫಲ, ಪುಷ್ಪ ಸಲ್ಲಿಸಿ ದರ್ಶನ ಮಾಡುತ್ತಾರೆ. ಇದಕ್ಕೆ 'ಶ್ರೀ ಮುಖದರ್ಶನ' ವೆನ್ನುತ್ತಾರೆ. ಅನಂತರ ಜಿನಮಂದಿರಗಳಲ್ಲಿ ವೃಷಭನಾಥನಿಗೆ ವಿಶೇಷ ಪೂಜೆಗಳು ಸಾಮೂಹಿಕವಾಗಿ ಜರಗುತ್ತವೆ. ಇದೇ ರೀತಿ ಮಹಾವೀರಜಯಂತಿಯನ್ನೂ ಆಚರಿಸುತ್ತಾರೆ. ಆ ದಿನ ತಮ್ಮ ಮನೆಗಳಲ್ಲಿ ಪೂಜೆ, ಜಿನಮಂದಿರಗಳಲ್ಲಿ ಅಷ್ಟವಿಧಾರ್ಚನೆ, ಅಭಿಷೇಕಗಳನ್ನು ಜರುಗಿಸಿ, ಮಹಾವೀರನ ತತ್ವ ಬೋಧನೆಯನ್ನು ಮನನಮಾಡುತ್ತಾರೆ. 'ಅಷ್ಟಾಹ್ನಿಕ ಪರ್ವ' ದಂದು ಎಂಟು ದಿನಗಳ ಕಾಲ ಸತತವಾಗಿ ಉಪವಾಸಾದಿ ವ್ರತ, ಏಕಭುಕ್ತ, ಪೂಜೆಗಳನ್ನು ನಡೆಸುತ್ತಾರೆ. ವರ್ಷದ ಮೂರುತಿಂಗಳಲ್ಲಿ ಅಂದರೆ ಆಷಾಢ, ಫಾಲ್ಗುಣ, ಕಾರ್ತಿಕ ಮಾಸಗಳಲ್ಲಿ ಇದನ್ನು ಆಚರಿಸುವುದು ಪದ್ಧತಿ. ಆರಂಭದ ಎರಡನ್ನು 'ನಂದೀಶ್ವರ ಅಷ್ಟಾಹ್ನಿಕ' ವೆಂದೂ ಕೊನೆಯದನ್ನು 'ಪಂಚಮೇರು ಅಷ್ಟಾಹ್ನಿಕ'ವೆಂದೂ ಕರೆಯುತ್ತಾರೆ. ಪ್ರತಿಯೊಂದು ಜಿನಮಂದಿರಗಳಲ್ಲೂ 'ಅಷ್ಟಮ ನಂದೀಶ್ವರ' ಪ್ರತಿಮೆ [35] ಇರುತ್ತದೆ. ಇದಕ್ಕೆ ವಿಶೇಷವಾದ ಆರಾಧನೆಗಳನ್ನು ನಡೆಸುತ್ತಾರೆ. ಮೂಡಬಿದಿರೆಯ ಸಾವಿರ ಕಂಬದ ಬಸದಿಯ ಸಿದ್ಧರ ಕೂಟದಲ್ಲಿ ಭಾರತದಲ್ಲಿಯೇ ಅತ್ಯಂತ ಮನೋಹರವೂ ಆದ ಕಂಚಿನ ನಂದೀಶ್ವರ ಪ್ರತಿಮೆಯಿರುವುದನ್ನು ಇಲ್ಲಿ ಉಲ್ಲೇಖಿಸಬಹುದು.

ಆಷಾಢಮಾಸದಿಂದ ಮೊದಲ್ಗೊಂಡು ನಾಲ್ಕು ತಿಂಗಳವರೆಗೆ ಮಳೆಗಾಲವಾದ್ದರಿಂದ ಜೈನಮುನಿಗಳು ಬಸದಿಯಲ್ಲಿ ವಾಸವಿರುತ್ತಾರೆ. ಆಗ ಅವರ ನೇತೃತ್ವದಲ್ಲಿ ಶ್ರಾವಕರು ಅನೇಕ ವ್ರತಾದಿಗಳನ್ನು ಆಚರಿಸುವುದರಿಂದ ಚಾತುರ್ಮಾಸ ಪರ್ವವೆಂದೂ ಕರೆಯುತ್ತಾರೆ. ಜೈನರಲ್ಲಿ ಉಪಾಕರ್ಮವೂ ರೂಢಿಯಲ್ಲಿದೆ. ಇದಕ್ಕೆ ಜನಿವಾರದ ಹಬ್ಬವೆಂದೂ ಕರೆಯುತ್ತಾರೆ.ಜನಿವಾರದ ಮುಖ್ಯ ಮೂರು ಎಳೆಗಳಲ್ಲಿ, ಪ್ರತಿಯೊಂದು ಎಳೆಯಲ್ಲಿ ಅಂತರ್ಗತವಾಗಿ ಮೂರು ಮೂರರಂತೆ, ಒಟ್ಟು 27 ಎಳೆಗಳಿರುತ್ತವೆ. ಇವು ಜೈನ ಸಿದ್ಧಾಂತದಲ್ಲಿರುದ 27 ತತ್ವಗಳನ್ನು (ಪಂಚಾಸ್ತಿಕಾಯ[36] ಷಟ್‌ದ್ರವ್ಯ[37] ಸಪ್ತತತ್ವಗಳು[38], ನವಪದಾರ್ಥ[39] ಪ್ರತಿನಿಧಿಸುತ್ತವೆಂದು ಹೇಳುತ್ತಾರೆ. ಭಾದ್ರಪದಮಾಸದ ಶುಕ್ಲಪಕ್ಷದ ಪಂಚಮಿಯಿಂದ ಪೂರ್ಣಿಮೆಯವರೆಗೆ 'ದಶಲಕ್ಷಣ ಪರ್ವ' ವನ್ನು[40] ಆಚರಿಸುತ್ತಾರೆ, ಜೈನ ಧರ್ಮದಲ್ಲಿ ಪ್ರತಿಪಾದಿತವಾದ ಹತ್ತು ತತ್ವಗಳ ಆಚರಣೆ ಇದರ ಉದ್ದೇಶ. ಇದೇ ರೀತಿ 16 ರೀತಿಯ ಭಾವನೆಗಳನ್ನು ಆಚರಿಸುವುದಕ್ಕೆ ಷೋಡಶ ಭಾವನಾ[41] ಪರ್ವಯೆನ್ನುತ್ತಾರೆ. ಈ ಸಂದರ್ಭದಲ್ಲೂ ಶ್ರಾವಕರು ಬಸದಿಗಳಲ್ಲಿ ಸೇರಿ ಅಷ್ಟವಿಧ್ಯಾರ್ಚನೆ, ಪೂಜೆ, ವ್ರತ, ಶಾಸ್ತ್ರಾಧ್ಯಯನ, ವ್ಯಾಖ್ಯಾನ, ಶ್ರವಣ, ಗುರುಸೇವೆ ಮುಂತಾದ ಕಾರ್ಯಗಳಲ್ಲಿ ನಿರತರಾಗುತ್ತಾರೆ. ಆಶ್ವಯುಜ ಶುದ್ಧ ಪಾಡ್ಯದಿಂದ ದಶಮಿಯವರೆಗೆ ಆಚರಿಸುವ ಪರ್ವ ನವರಾತ್ರಿ. ಈ ಸಂದರ್ಭದಲ್ಲಿ ಜ್ವಾಲಾಮಾಲಿನಿ, ಪದ್ಮಾವತಿ, ಚಕ್ರೇಶ್ವರಿ, ಬ್ರಹ್ಮ ಇವರಿಗೆ ವಿಶೇಷ ಉತ್ಸವ ಆರಾಧನೆಗಳು ಜರಗುತ್ತವೆ. ಮೂಲಾ ನಕ್ಷತ್ರದ ಮೊದಲ ದಿನ ಜೈನ ಆಗಮ ಗ್ರಂಥಗಳನ್ನು ಲಿಪಿಬದ್ಧಗೊಳಿಸಲಾಯಿತೆಂಬ ನಂಬಿಕೆಯಿಂದ,

ಶ್ರುತದೇವಿಯನ್ನು (ಶಾಸ್ತ್ರಗ್ರಂಥ) ಪೂಜಿಸುತ್ತಾರೆ. ಇದೇ ರೀತಿ ಜೀವದಯಾಷ್ಟಮಿ ಕೂಡ ಜೈನರಿಗೆ ಪವಿತ್ರವಾದ ಹಬ್ಬ. ಜೈನಧರ್ಮದ ಅಹಿಂಸಾ ವ್ರತದ ಪಾಲನೆ ಇದರ ಉದ್ದೇಶ. ಯಶೋಧರ ಚರಿತೆಯಲ್ಲಿ ಮಾರಿದತ್ತನು ಹಿಂಸಾ ಧರ್ಮವನ್ನು ತ್ಯಜಿಸಿದ್ದನ್ನೂ, ಚಂಡಮಾರಿಯು ಜೀವ ಹಿಂಸೆಯನ್ನು ತ್ಯಜಿಸಿ ಸಾತ್ವಿಕಪೂಜೆಯನ್ನು ಒಪ್ಪಿಕೊಂಡಂತೆಯೂ ಚಿತ್ರಿಸಲಾಗಿದೆ. ಯಾವುದೇ ಧರ್ಮಾಚರಣೆಯ ವಿರುದ್ಧ ಸಂಘರ್ಷಕ್ಕೆ ಇಳಿಯದ ಜೈನಧರ್ಮವು ಈ ಒಂದು ವಿಷಯದಲ್ಲಿ ಮಾತ್ರ ಹೋರಾಡುತ್ತ ಬಂದಿದೆ. ತುಳುನಾಡಿನ ಭೂತಾರಾಧನೆ, ಮಾರಿಜಾತ್ರೆಗಳಲ್ಲಿ ಜೀವ ಹಿಂಸಾ ಪದ್ಧತಿಯು ಕಡಿಮೆಯಾಗಿ, ಸಾತ್ವಿಕ ಆರಾಧನೆಯು ನಡೆಯುತ್ತಿರುವುದಕ್ಕೆ ಜೈನರ ಈ ಅಹಿಂಸಾವ್ರತವೇ ಬಹುಮಟ್ಟಿಗೆ ಕಾರಣವಾಗಿದೆಯೆನ್ನಬಹುದು. ಒಂದರ್ಥದಲ್ಲಿ ಜೈನಧರ್ಮ ಹುಟ್ಟಿದ್ದೇ ಯಜ್ಞ-ಯಾಗಾದಿಗಳಲ್ಲಿ ನಡೆಯುತ್ತಿದ್ದ ಜೀವಹಿಂಸೆಯನ್ನು ವಿರೋಧಿಸುವುದಕ್ಕೆ ಎಂಬ ಅಂಶವನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಮಹಾವೀರನು ಮುಕ್ತಿಯನ್ನು ಪಡೆದ ನೆನಪಿಗಾಗಿ ದೀಪಾವಳಿಯನ್ನು ಆಚರಿಸುತ್ತಾರೆ. ಇದೇ ರೀತಿ, ಮಾಘಬಹುಳ ಅಮವಾಸ್ಯೆಂದು ವೃಷಭದೇವನು ಮುಕ್ತಿಯನ್ನು ಪಡೆದನೆಂಬ ಹಿನ್ನೆಲೆಯಲ್ಲಿ ಜಿನರಾತ್ರಿಯನ್ನು ಜೈನರು ಆಚರಿಸುತ್ತಾರೆ ಜೈನೇತರರಲ್ಲಿ ಈ ದಿವಸವನ್ನು ಶಿವರಾತ್ರಿಯೆಂದು ಆಚರಿಸುವ ಪದ್ಧತಿಯಿದೆ. ಇವೆಲ್ಲವೂ ಜೈನರಲ್ಲಿ ಪ್ರಚಲಿತವಿರುವ ಸಾಂಪ್ರದಾಯಿಕ ಆಚರಣೆಗಳು.

ಜಿನಮಂದಿರವನ್ನು ನೂತನವಾಗಿ ಕಟ್ಟಿಸಿದಾಗ, ಇಲ್ಲವೇ ಹಳೆಯ ಮಂದಿರವನ್ನು ಜೀರ್ಣೋದ್ಧಾರ ಗೊಳಿಸಿದಾಗ ಆಯಾ ಬಸದಿಗಳಲ್ಲಿರುವ ತೀರ್ಥಂಕರನ ಪಂಚಕಲ್ಯಾಣವನ್ನು ವಿಧಿಪೂರ್ವಕವಾಗಿ ಆಚರಿಸುತ್ತಾರೆ. ಇದೇ ರೀತಿ 12 ವರ್ಷಗಳಿಗೊಮ್ಮೆ ಬಾಹುಬಲಿಯ ಮಹಾಮಸ್ತಕಾಬಿಷೇಕವನ್ನು ವೈಭವದಿಂದ ನಡೆಸುತ್ತಾರೆ. ಇವನ್ನು ಸಾಂದರ್ಭಿಕ ಆಚರಣೆಗಳೆಂದು ಕರೆಯಬಹುದು.

ದ.ಕ. ಜಿಲ್ಲೆಯ ಮೂಡಬಿದಿರೆ, ಕಾರ್ಕಳ, ನೆಲ್ಲಿಕಾರು, ವರಾಂಗ ಮೊದಲಾದ ಕಡೆಗಳಲ್ಲಿ ರಥೋತ್ಸವವನ್ನು ಆಚರಿಸುವ ಪದ್ಧತಿಯಿದೆ. ಜೈನ ಬಸದಿಯು ತೀರ್ಥಂಕರನ ಸಮವಸರಣ ಮಂಟಪದ ಕಲ್ಪನೆಯಲ್ಲಿರುವಂತೆ, ಈ ರಥೋತ್ಸವವನ್ನು ಕೂಡ ಸಮವಸರಣದ ಪರಿಕಲ್ಪನೆಯಲ್ಲಿ ಆಚರಿಸಲಾಗುತ್ತಿದೆ. ತೀರ್ಥಂಕರನ ಉತ್ಸವ ಬಿಂಬವನ್ನು ಶೃಂಗರಿಸಿದ ರಥದಲ್ಲಿಟ್ಟು ವೈಭವದಿಂದ ಮೆರವಣಿಗೆ ಹೋಗುವುದಕ್ಕೆ ಶ್ರೀವಿಹಾರವೆಂದು ಕರೆಯುತ್ತಾರೆ. ಇದನ್ನು ಜಿನನ ಪಂಚಕಲ್ಯಾಣಗಳಲ್ಲಿ ಒಂದಾದ ಕೇವಲಜ್ಞಾನ ಕಲ್ಯಾಣ ಮಹೋತ್ಸವವೆಂದೂ ಕರೆಯಬಹುದು. ಇದರ ಅಂಗವಾಗಿ ಆರಂಭದಲ್ಲಿನಡೆಯುವ ಧ್ವಜಾರೋಹಣಕ್ಕೆ ಉಪಯೋಗಿಸುವ ಧ್ವಜದಲ್ಲಿ ಧರ್ಮ ಚಕ್ರವನ್ನು ಹೊತ್ತ ಸರ್ವಾಣಯಕ್ಷನ ಚಿತ್ರವಿರುವುದನ್ನು ಗಮನಿಸಬಹುದು.

ಶಕ್ತಿ ಆರಾಧನೆಯಂತೆ ವೀರರ ಆರಾಧನೆಯೂ ಇಲ್ಲಿಯ ಜೈನಮತೀಯರಲ್ಲಿರುವುದು ಕುತೂಹಲದ ಅಂಶವಾಗಿದೆ. ಭೂತಾರಾಧನೆ ಇಂಥ ಆರಾಧನೆಗಳಲ್ಲೊಂದು. ಇದೊಂದು ಸಂಕೀರ್ಣರೂಪದ ಆಚರಣೆಯಾಗಿದೆ. ತುಳುನಾಡಿನ ಚಾರಿತ್ರಿಕ, ಸಾಮಾಜಿಕ, ಧಾರ್ಮಿಕ, ಕಲೆ, ನ್ಯಾಯ ಮುಂತಾದ ಅಂಶಗಳು ಇದರಲ್ಲಿ ಅಡಕವಾಗಿರುವುದನ್ನು ವಿದ್ವಾಂಸರು ತೋರಿಸಿಕೊಟ್ಟಿದ್ದಾರೆ. ಈ ಆರಾಧನೆಯು ಒಂದು ಜಾತಿಯ ಅಥವಾ ಒಂದು ಕುಟುಂಬಸ್ಥರಿಗೆ ಮಾತ್ರ ಸೀಮಿತವಾದುದಲ್ಲ.

ಇದು ಸಮಗ್ರ ಸಮಾಜದ ನಂಬಿಕೆಯ ಸಾಮೂಹಿಕ ಅಭಿವ್ಯಕ್ತಿಯೆನ್ನಬಹುದು. ಈ ಹಿಂದೆ ಉಲ್ಲೇಖಿಸಿದಂತೆ, ಇಲ್ಲಿಯ ಜೈನ ಅರಸರು, ಅಧಿಕಾರಿಗಳು ಈ ಪದ್ಧತಿಯನ್ನು ರಾಜಕೀಯ ಸಾಮಾಜಿಕ ಅಗತ್ಯಗಳಿಗಾಗಿ ಸ್ವೀಕರಿಸಿದರೂ, ಮುಂದೆ ಅದು ಅವರ ಧಾರ್ಮಿಕ ನಂಬಿಕೆಯ ಒಂದು ಭಾಗವಾಗಿ ಬೆಸೆದುಕೊಂಡಿತು. ಭೂತಗಳ ಪಾಡ್ದನಗಳಲ್ಲಿ ಬರುವ ಕೆಲವು ಪ್ರಸಂಗಗಳು, ಒಂದಲ್ಲ ಒಂದು ರೀತಿಯಿಂದ ಜೈನ ಅರಸ, ಅಧಿಕಾರಿಗಳ ಜೊತೆಗೆ ಸಂಬಂಧವನ್ನು ಪಡೆದುಕೊಳ್ಳುತ್ತವೆ. ಸತ್ತು ಭೂತವಾದ ಆ ಚೇತನವು ತೊಂದರೆಯನ್ನುಂಟುಮಾಡಿದಾಗ ಅದನ್ನು ಗೌರವಿಸತೊಡಗುತ್ತಾರೆ. ಇದೇ ರೀತಿ ಸಿರಿಜಾತ್ರೆ ಭೂತಕೋಲಗಳು ನಡೆಯುವಾಗ ಆ ಊರಿನ ಬಸದಿಯಿಂದ ಪ್ರಸಾದ ತೆಗೆದುಕೊಂಡು ಹೋಗುವ ಪದ್ಧತಿಯಿದೆ. ಭೂತಗಳ ಭಂಡಾರಗಳು ಜೈನರ ಮನೆಗಳಲ್ಲಿ ಬರುವಂತೆ, ಅವರ ಬಸದಿಗಳಲ್ಲೂ ಸ್ಥಾನ ಪಡೆದಿವೆ. ಕಾಲ ಕಾಲಕ್ಕೆ ಪರ್ವಗಳನ್ನೂ ನಡೆಸಲಾಗುತ್ತಿದೆ. ಜೈನರು ತಮ್ಮ ಯಕ್ಷ-ಯಕ್ಷಿಯರ ಜೊತೆಯಲ್ಲಿ ಈ ಭೂತಗಳನ್ನೂ ಸಮಾನವಾಗಿ ಗೌರವಿಸುತ್ತಾರೆ. ವೀತರಾಗಿಯಾದ ತೀರ್ಥಂಕರನು ಅವರಿಗೆ ಆದರ್ಶ ಮಾತ್ರ. ಆತನು ಏನನ್ನೂ ದಯಪಾಲಿಸಲಾರ. ಹೀಗಾಗಿ ಲೌಕಿಕ ಇತ್ಯರ್ಥಗಳನ್ನು ಪೂರೈಸುವ ಈ ದೇವರುಗಳಿಗೆ ಹರಕೆ, ಪ್ರಾರ್ಥನೆಗಳನ್ನು ಸಲ್ಲಿಸುತ್ತಾರೆ.

ಯುದ್ಧದಲ್ಲಿ ಮಡಿದ ವೀರನಿಗೆ ಸ್ಮಾರಕವಾಗಿ ವೀರಗಲ್ಲುಗಳನ್ನು ಹಾಕಿ ಗೌರವಿಸುವ ಪದ್ಧತಿ ಇಲ್ಲಿಯ ಜೈನರಲ್ಲೂ ರೂಢಿಯಲ್ಲಿದೆ. ಕೆಲ್ಲ ಪುತ್ತಿಗೆ, ಕಾಯ್ಕಿಣಿ, ಮೂಡಬಿದಿರೆ, ಕಾರ್ಕಳಗಳಲ್ಲಿರುವ ವೀರಗಲ್ಲುಗಳ ಮೇಲೆ ಬರೆದ ಶಾಸನಗಳಿಂದ ಇದು ಸ್ಪಷ್ಟವಾಗುತ್ತದೆ. ಇದೇ ರೀತಿ ಸಲ್ಲೇಖನ ಸ್ವೀಕರಿಸಿ ಮಡಿದವರ ಸ್ಮಾರಕವಾಗಿ ಸ್ಥಾಪಿಸುವ ನಿಸಧಿಕಲ್ಲು, ಸ್ತೂಪಗಳನ್ನು ವೀರಸ್ಮಾರಕಗಳೆಂದು ಸಂಶೋಧಕರು ಭಾವಿಸುತ್ತಾರೆ. ತುಳುನಾಡಿನಲ್ಲಿ ಇಂಥ ಹಲವಾರು ವೀರಸ್ಮಾರಕಗಳಿವೆ. ಕೆಲವು ನಿಸಧಿಕಲ್ಲುಗಳು ಬಸದಿಯ ಆವರಣದೊಳಗಡೆಯ ಕ್ಷೇತ್ರಪಾಲನ ಸ್ಥಾನದಲ್ಲಿಯೇ ಇರುತ್ತವೆ. ಅದರ ಜೊತೆಗೆ ವೀರಗಂಬ ಗಳಿರುವುದನ್ನೂ ಗಮನಿಸಬಹುದು. ಈ ಕ್ಷೇತ್ರಪಾಲನ ಜೊತೆಗೆ ಬ್ರಹ್ಮನಿಗೂ, ನಾಗನಿಗೂ ಅಲ್ಲಿ ಸ್ಥಾನದೊರೆತಿದೆ. ಇವೆಲ್ಲಕ್ಕೂ ಒಟ್ಟಿಗೇ ಪೂಜೆ ನಡೆಯುತ್ತವೆ. ಹೀಗೆ ವೀರರ ಆರಾಧನೆಯೂ ಜೈನರಲ್ಲಿ ವಿಶಿಷ್ಟವಾಗಿ ನಡೆದುಕೊಂಡು ಬರುತ್ತಿರುವುದನ್ನು ಗಮನಿಸಬಹುದು. ಇವನ್ನು ಸಾಂದರ್ಭಿಕ ಆಚರಣೆಗಳೆಂದು ಕರೆಯಬಹುದು. ಈ ಆಚರಣೆಗಳೆಲ್ಲವೂ ಇಲ್ಲಿಯ ಸಾಂಸ್ಕೃತಿಕ ಪರಿವೇಷದೊಡನೆ ಬೇರ್ಪಡಿಸಲಾರದಷ್ಟು ಗಾಢವಾಗಿ ಬೆಸೆದುಕೊಂಡಿವೆ.

## ಅಡಿ ಟಿಪ್ಪಣಿಗಳು

1. ತೆಂಕನಾಡು - ಪುಟ 39, 1947, 31ನೆಯ ಕನ್ನಡ ಸಾಹಿತ್ಯ ಸಮ್ಮೇಳನ - ಕಾಸರಗೋಡು
2 ಡಾ। ಗುರುರಾಜ ಭಟ್ಟ : 'Studies in Tuluva History & Culture, page 428, 1975
   ಡಾ। ಸೂರ್ಯನಾಥ ಕಾಮತ್ - ತುಳುನಾಡಿನ ಧಾರ್ಮಿಕ ಪರಂಪರೆಗಳು ಪುಟ೧೫ ದಿ। ಶ್ರೀ ಡಿ.ರತ್ನವರ್ಮ ಹೆಗಡೆ ಸ್ಮಾರಕ ಉಪನ್ಯಾಸಮಾಲೆ ೧
   ಶ್ರೀಪಾದ ಶರ್ಮ - ತೆಂಕನಾಡು - ಪು೫೫ 'ದ.ಕ ಜಿಲ್ಲೆಯಲ್ಲಿ ಜೈನಧರ್ಮದ ಕುರುಹುಗಳು' ಲೇಖನ ನೋಡಿ.
   ಡಾ। ಸಾಲೆತ್ತೂರು 'Medieval Jainism' - page 1-15 Karnataka Publishing House, Bombay 1938
4. ಡಾ। ಪಿ.ಎನ್. ನರಸಿಂಹಮೂರ್ತಿ, ಹಟ್ಟಿಯಂಗಡಿ ಒಂದು ಐತಿಹಾಸಿಕ ಸಮೀಕ್ಷೆ ಪುಟ 4-5 ಲೋಕನಾಥೇಶ್ವರ ಜೀರ್ಣೋದ್ಧಾರ ಸಮಿತಿ, ಹಟ್ಟಿಯಂಗಡಿ 1986

4. Ep. Ind XXXII page -317
5. ಡಾ। ಪಿ.ಎನ್. ನರಸಿಂಹಮೂರ್ತಿ 'ಕಾರ್ಕಳ ಒಂದು ಪ್ರಾದೇಶಿಕ ಅಧ್ಯಯನ ಪುಟ 1 - 25 ನೇತ್ರಾವತಿ ' - 'ದಕ್ಷಿಣ ಕನ್ನಡದಲ್ಲಿ ಜೈನ ಧರ್ಮ' ಪುಟ ೨೬ ದ.ಕ. ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ -೧೯೮೫
6. Indian Anliquary Vol -VIII Page - 35-37
7. ಅದೇ
8. MAR - 1936
9. ಡಾ। ಕೆ.ವಿ ರಮೇಶ; ತುಳುನಾಡಿನ ಇತಿಹಾಸ - ಪುಟ ೨೧-೨೨ ರಾಷ್ಟ್ರಕವಿ ಗೋವಿಂದಪೈ ಸ್ಮಾರಕ ಸಂಶೋಧನ ಕೇಂದ್ರ ಉಡುಪಿ ೧೯೬೯
10. ಡಾ। ಪಿ.ಎನ್. ನರಸಿಂಹ ಮೂರ್ತಿ. ಕಾರ್ಕಳ ಒಂದು ಪ್ರಾದೇಶಿಕ ಅಧ್ಯಯನ. ಪುಟ - 4
11. ಅದೇ
12. ಸುಬ್ಬಯ್ಯ ಶಾಸ್ತ್ರೀ - ಷಟ್ಖಂಡಾಗಮ - ಪುಟ 1೧೫-೨೪, ೧೯೭೮ ಇಂದ್ರನಂದಿಯ ಶ್ರುತಾವತಾರ - ಭಾಗ ನೋಡಿ. ಕದಂಬರ ರಾಜಧಾನಿ ಬನವಾಸಿಯು ಬೌದ್ಧರ ಕೇಂದ್ರವಾಗಿದ್ದಂತೆ ಜೈನರ ಕೇಂದ್ರವೂ ಆಗಿದ್ದು ಕ್ರಿ.ಪೂ. 3ನೆಯ ಶತಮಾನದಲ್ಲಿ ಜೈನಧರ್ಮವು ಅಲ್ಲಿ ನೆಲಸಿತ್ತೆಂದು ಹರಿಷೇಣನ ಬೃಹತ್ಕಥಾಕೋಶದಲ್ಲಿಯ ಆಧಾರಗಳನ್ನು ನೀಡಿ. ಎಂ.ಡಿ. ವಸಂತರಾಜ ಹೇಳುತ್ತಾರೆ( - ಕರ್ನಾಟಕದಲ್ಲಿಜೈನಧರ್ಮ - ಡಾ। ಟಿ.ಜಿ. ಕಲಘಟಗಿ, ಪುಟ ೯೩ ಪ್ರಸಾರಾಂಗ ಮೈ. ವಿ.ವಿ ನಿಲಯ ೧೯೭೭)
13. ಈ ವಿಷಯವನ್ನು ನನ್ನ ಗಮನಕ್ಕೆ ತಂದವರು ಡಾ। ಪಿ.ಎನ್. ನರಸಿಂಹಮೂರ್ತಿ ಕಾರ್ಕಳ ಅವರು. ಅವರಿಗೆ ಕೃತಜ್ಞನಾಗಿದ್ದೇನೆ.
14. ಸ್ವತಃ ಪರಿಶೀಲನೆ
15. Annual Report of Mysor Archacological Department for they year 1928, No.105, 108
16. ಕೆ.ವಿ. ರಮೇಶ ಮತ್ತುಎಂ.ಜೆ. ಶರ್ಮ, ತುಳುನಾಡಿನ ಶಾಸನಗಳು ಸಂಪುಟ-೧ ಪು:75 ರಾಷ್ಟ್ರಕವಿ ಗೋವಿಂದ ಪೈ ಸ್ಮಾರಕ ಸಂಶೋಧನ ಕೇಂದ್ರ, ಉಡುಪಿ ೧೯೭೮
17. 'ಮಹಾವೀರ' - ಮಹಾವೀರರ ಸಂಘ ಮೂಡಬಿದಿರೆ: ಸ್ಮರಣ ಸಂಚಿಕೆ ೧೯೯೨-೯೩; ಶೆಟ್ಟರ ಬಸದಿಯ ಕೆಲವು ಚಾರಿತ್ರಿಕ ಅಂಶಗಳು - ಎಸ್.ಡಿ. ಶೆಟ್ಟಿ
18. ಕೆ.ವಿ. ರಮೇಶ 'ತುಳುನಾಡಿನ ಇತಿಹಾಸ' ಪೂರ್ವೋಕ್ತ ಪು : ೭೭
19. ಡಾ॥ ಪಿ.ಎನ್. ನರಸಿಂಹ ಮೂರ್ತಿ 'ಕಾರ್ಕಳ' ಪೂರ್ವೋಕ್ತ ಪು - 36
20. ಇದರ ತಾಡವೋಲೆಯ ಪ್ರತಿ ನನ್ನ ಸಂಗ್ರಹದಲ್ಲಿದೆ
21. S.I.I.VI No.198
22. K.I. Vol-I No. 65 of 1939-40
23. K.I. Vo. -III Part -1 No. 80 of 1939-40
24. E.C.volVIII Nr. 46
25. ಕಾರ್ಕಳ ಒಂದು ಪ್ರಾದೇಶಿಕ ಅಧ್ಯಯನ - ಪೂರ್ವೋಕ್ತ ಪುಟ 100-102
26. ಕನ್ನಡದ ನೆಲೆ - ಡಾ। ಶಂಬಾ ಜೋಶಿ; ತೆಂಕನಾಡು; ಪೂರ್ವೋಕ್ತ ಪು.59
27. ತುಳುನಾಡು: ಡಾ। ಗುರುರಾಜ ಭಟ್ಟ ಪುಟ 61
28. ಸೂತಕ ಗೋತ್ರ ವಿಚಾರ - ವಿ. ಲೋಕನಾಥ ಶಾಸ್ತ್ರಿಗಳು ಪುಟ 15 ಸರಸ್ವತೀ ಪ್ರಿಂಟಿಂಗ್ ವರ್ಕ್ಸ್, ಮಂಗಳೂರು ೧೯೫೦
29. ಅದೇ - 1 ಉಗ್ರವಂಶಗೌತಮ ಗೋತ್ರಪ್ರಭಾಕರ ಸೂತ್ರ ಪ್ರಾಲೇಯಮಪ್ರವರ ಚರಣಾನುಯೋಗ ಶಾಖೆ.
    2. ಇಕ್ಷ್ವಾಕುವಂಶ ಕಾಶ್ಯಪಗೋತ್ರ ತ್ರಿಭುವನಸೂತ್ರ ವೃಷಭಪ್ರವರ ಪ್ರಥಮಾನುಯೋಗ
    3. ಇಕ್ಷ್ವಾಕುವಂಶ ಶ್ರೀವತ್ಸಗೋತ್ರ ಉಪಾಸನಾಧ್ಯಯನ ಸೂತ್ರ ಕಾಶ್ಯಪ ಪ್ರವರ ಪ್ರಥಮಾನುಯೋಗ
    4. ಕುರುವಂಶ ಭಾರದ್ವಾಜಗೋತ್ರ ತ್ರಿಭುವನಸೂತ್ರ ಪದ್ಮಾಕರಪ್ರವರ ಚರಣಾನುಯೋಗ
    5. ಕುರುವಂಶ ಆತ್ರೇಯ ಗೋತ್ರ ತತ್ವಾರ್ಥಸೂತ್ರ ವಿಶಾಖ ಪ್ರವರ ನಂದಾನುಯೋಗ ಶಾಖೆ

6. ಹರಿವಂಶ ಪ್ರಜಾಪತಿ ( ವಿಶ್ವಾಮಿತ್ರ ) ಗೋತ್ರ ವಿಶಾಖ ಸೂತ್ರ ಮೇಘ ಪ್ರವರ ದ್ರವ್ಯಾನುಯೋಗ
7. ಹರಿವಂಶ ಕೌಂಡಿನ್ಯ ಗೋತ್ರ ಸಾಮಾಯಿಕಸೂತ್ರ ಚಂದ್ರಪ್ರವರ ಚರಣಾನುಯೋಗ ಶಾಖೆ
8. ಕುರುವಂಶ ವಶಿಷ್ಠಗೋತ್ರ ಸೂರ್ಯಸೂತ್ರ ಮಹಾನುಭಾವಪ್ರವರ ಪ್ರಥಮಾನುಯೋಗ
9. ಇಕ್ಷ್ವಾಕುವಂಶ ಕಣ್ವ ( ಅಗಸ್ತ್ಯ ) ಗೋತ್ರ ತತ್ವಾರ್ಥಸೂತ್ರ ವಿಶಾಖಪ್ರವರ ನಂದಾನುಯೋಗ ಶಾಖೆ
10. ಹರಿವಂಶ ಭಾರ್ಗವ ಗೋತ್ರ ಸೋಮಪ್ರಭಸೂತ್ರ ಕಲ್ಯಾಣಪ್ರವರ ಅನುವಾದ ಯೋಗ ಶಾಖೆ

30. 1.ಬಾಗ್ಯೆಟ್ಟನ್ವಾಯ ಬಲಿ : ಇಕ್ಷ್ವಾಕುವಂಶ ಶ್ರೀವತ್ಸಗೋತ್ರ ಉಪಾಸಕಾಧ್ಯಯನ ಸೂತ್ರ ಕಾಶ್ಯಪ ಪ್ರವರ ಚರಣಾನುಯೋಗ ಶಾಖೆ
2. ಬುನ್ನನ ಬಳಿ : ಹರಿವಂಶ ಗೌತಮಗೋತ್ರ ಪ್ರಭಾಕರ ಸೂತ್ರ ಪ್ರಾಲೇಯ ಪ್ರವರ ಚರಣಾನುಯೋಗ
3. ಪುಲ್ಲೊಟ್ಟನ್ವಾಯ : ಹರಿವಂಶ ವಶಿಷ್ಠಗೋತ್ರ ಸೂರ್ಯಸೂತ್ರ ಮಹಾನುಭಾವ ಪ್ರವರ ವೃಷಭಾನುಯೋಗ
4. ಸಾಲನ್ವಾಯ ಬಳಿ ಹರಿವಂಶ ಭಾರ್ಗವಗೋತ್ರ ಸೋಮಪ್ರಭಸೂತ್ರ ಕಲ್ಯಾಣಪ್ರವರ ಅನಂತಾನುಯೋಗ
5. ಬಂಗರನ್ವಾಯಬಳಿ : ನಾಥವಂಶ ಭಾರದ್ವಾಜಗೋತ್ರ ತ್ರಿಭುವನ ಸೂತ್ರ ಪದ್ಮಾಕರ ಪ್ರವರ ಚರಣಾನುಯೋಗ
6. ಗುಜ್ಜೆಟ್ಟಬನ್ವಾಯಬಳಿ : ಹರಿವಂಶ ವಿಶ್ವಾಮಿತ್ರಗೋತ್ರ ವಿಶಾಖಸೂತ್ರ ಮೇಘಪ್ರವರ ಧರ್ಮಾನುಯೋಗ ಶಾಖೆ.

31. ಡಾ। ಚಿದಾನಂದ ಮೂರ್ತಿ - ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೯೧
32. ಷೋಡಶ ಸಂಸ್ಕಾರಗಳು : 1 ಗರ್ಭಧಾರಣ 2. ಪುಂಸವ 3. ಸೀಮಂತೋನ್ನಯ 4. ಜಾತಕರ್ಮ 5. ನಾಮಕರಣ 6. ನಿಷ್ಕ್ರಮಣ 7. ಅನ್ನಪ್ರಾಶನ 8. ಚೂಡಾಕರಣ 9. ಕರ್ಣಬೇಧ 10. ವಿದ್ಯಾರಂಭ 11. ಉಪನಯನ 12. ವೇದಾರಂಭ 13. ಕೇಶಾಂತ 14. ಸಮಾವರ್ತನ 15. ವಿವಾಹ 16. ಅಂತೇಷ್ಟಿ.
33. ಪಂಚವರ್ಣಗಳು : ಬಿಳಿ, ಕೆಂಪು, ಕಪ್ಪು, ಹಳದಿ ಹಸಿರು.
34. ಸಪ್ತ ಪರಮಸ್ಥಾನಗಳು 1.ಸಜ್ಜಾತಿ 2 ಸದ್ ಗೃಹಸ್ಥ 3. ಪರಿವ್ರಾಜ್ಯ 4. ಇಂದ್ರ ಪದವಿ 5. ಸಾಮ್ರಾಜ್ಯಪದ 6. ಸರ್ವಜ್ಞತ್ವ 7. ನಿರ್ವಾಣ
35. ಅಷ್ಟಮ ನಂದೀಶ್ವರ ಪ್ರತಿಮೆ : ನಂದೀಶ್ವರ ದ್ವೀಪವೆಂತಲೂ ಹೆಸರಿದೆ. ಅಲ್ಲಿನ 52 ಜಿನಾಲಯಗಳಲ್ಲಿ ವಿರಾಜಮಾನವಾಗಿರುವ ರತ್ನಖಚಿತ ಜಿನ ಪ್ರತಿಮೆಗಳಿಗೆ ಭಕ್ತಿಯಿಂದ ದೇವತೆಗಳು ಪೂಜಿಸುತ್ತಾರೆಂಬ ನಂಬಿಕೆಯಿಂದ. ಕಲ್ಪವಾಸಿದೇವತೆಗಳು ಪೂರ್ವದಿಕ್ಕಿನಲ್ಲೂ, ಭವನವಾಸಿಗಳು ದಕ್ಷಿಣದಿಕ್ಕಿನಲ್ಲೂ ವ್ಯಂತರರು ಪಶ್ಚಿಮದಿಕ್ಕಿನಲ್ಲೂ, ಜ್ಯೋತಿಷ್ಕರು ಉತ್ತರ ದಿಕ್ಕಿನಲ್ಲೂ - ಭಕ್ತಿ ಭಾವದಿಂದ ವರ್ತಿಸುತ್ತಾ, ಅತಿ ವೈಭವದಿಂದ ಪೂಜಿಸುತ್ತಾರೆಂದು ಶಾಸ್ತ್ರದಲ್ಲಿ ವಿವರಿಸಿದೆ. - ಇದರ ಪ್ರತಿಕೃತಿಯನ್ನೂ ಶ್ರಾವಕರು ಆಯಾತಿಂಗಳಲ್ಲಿ ಪೂಜಿಸುತ್ತಾರೆ.
36. ಪಂಚಾಸ್ತಿಕಾಯ : ಜೀವ ಪುದ್ಗಲ, ಧರ್ಮ, ಅಧರ್ಮ, ಆಕಾಶ, ಈ ಐದುತತ್ವಗಳು
37. ಷಡ್‌ದ್ರವ್ಯಗಳು ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ
38. ಸಪ್ತತತ್ವಗಳು : ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ
39. ನವಪದಾರ್ಥಗಳು : ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ ಪಾಪ, ಪುಣ್ಯ
40. ದಶಲಕ್ಷಣ : ಉತ್ತಮ ಕ್ಷಮಾ, ಮಾರ್ದವ, ಆರ್ಜವ, ಶೌಚ, ಸತ್ಯ, ಸಂಯಮ ತಪ, ತ್ಯಾಗ, ಆರೆಂಚನ್ಯ, ಬ್ರಹ್ಮಚರ್ಯವೆಂಬ ಹತ್ತು ಧರ್ಮಗಳು
41. ಷೋಡಶಭಾವನಾ: ದರ್ಶನವಿಶುದ್ಧಿ, ವಿನಯಸಂಪನ್ನತೆ, ಶೀಲವ್ರತೇಷ್ವನತೀಚಾರ ಅಭೀಕ್ಷ್ಣ ಜ್ಞಾನೋಪಯೋಗ, ಸಂವೇಗ, ಶಕ್ತಿತಸ್ತ್ಯಾಗ, ತಪ, ಸಾಧುಸಮಾಧಿ, ವೈಯಾವೃತ್ಯ ಅರ್ಹದ್ಭಕ್ತಿ, ಆಚಾರ್ಯಭಕ್ತಿ. ಬಹುಶ್ರುತಭಕ್ತಿ, ಪ್ರವಚನಭಕ್ತಿ, ಅವಶ್ಯಕಾಪರಿಹಾಣಿ, ಮಾರ್ಗಪ್ರಭಾವನಾ, ಪ್ರವಚನವಾತ್ಸಲ್ಯ

# ಉತ್ತರ ಕನ್ನಡ ಜಿಲ್ಲೆಯ ಜೈನ ಕೇಂದ್ರಗಳು

ಡಾ I ಜಿ. ಎಂ. ಹೆಗಡೆ

'ಆರಂಕುಸವಿಟ್ಟೊಡಂ ನೆನೆವುದೆನ್ನಮನಂ ಬನವಾಸಿ ದೇಶಮಂ' ಎಂದು ಆದಿಕವಿ ಪಂಪನಿಂದ ಹಾಡಿ ಹೊಗಳಿಸಿಕೊಂಡ, ವಿಶ್ವಕವಿ ರವೀಂದ್ರರಿಗೆ ಸ್ಫೂರ್ತಿಯನ್ನು ಕೊಟ್ಟ ಉತ್ತರಕನ್ನಡ ಜಿಲ್ಲೆ ಚೆಲುವಿನ ಬೀಡು, ನಿಸರ್ಗ ಸೌಂದರ್ಯದ ನೆಲೆವೀಡು. ಬೌದ್ಧ, ಜೈನ, ಹಿಂದೂ ಧರ್ಮದ ಶೈವ, ವೈಷ್ಣವ ಶಾಖೆಗಳು, ಮುಸ್ಲಿಂ, ಕ್ರೈಸ್ತ ಮೊದಲಾದ ಹಲವು ಧರ್ಮಗಳು ಬಾಳಿ ಬೆಳಗಿದ, ಏಕತೆಯಲ್ಲಿ ವೈವಿಧ್ಯತೆಯನ್ನು ಸಾರುತ್ತ ಬಂದ, ಪ್ರಾಚೀನ ಇತಿಹಾಸ ಪರಂಪರೆಯನ್ನು ಹೊಂದಿರುವ ಇಲ್ಲಿಯ ಸಂಸ್ಕೃತಿಯ ಸ್ವರೂಪ ವಿಶ್ವವಿಶಾಲವಾಗಿದೆ. ಈ ನೆಲದಲ್ಲಿ ಶಿಲ್ಪಕಲೆ, ಧರ್ಮತತ್ವಗಳನ್ನು, ಸಾಹಿತ್ಯ ಸಂಸ್ಕೃತಿಯನ್ನು ಅಭಿವೃದ್ಧಿ ಪಡಿಸಿ, ಸೃಷ್ಟಿ ಸೌಂದರ್ಯದ ತವರೂರಾದ ಉತ್ತರ ಕನ್ನಡದ ವಿಖ್ಯಾತಿಯನ್ನು ಕಡಲಾಚೆ ಸಾಗುವಂತೆ ಮಾಡಿದ ಜೈನದೊರೆಗಳ ಕಾರ್ಯ ಅವರ್ಣನೀಯವಾದುದು. ಮೂರು ಶತಮಾನಗಳವರೆಗೆ ಈ ನೆಲವನ್ನಾಳಿದ ಸಾಳ್ವ ರಾಜಮನೆತನ ಮತ್ತು ಹೈದರಸರ ಕಾಲದಲ್ಲಿ ಬೆಳೆದುಬಂದ ಜೈನ ಸಂಸ್ಕೃತಿ ಪರಂಪರೆಗಳನ್ನು ಈ ಪ್ರಬಂಧದಲ್ಲಿ ಪ್ರಸ್ತುತ ಪಡಿಸಲಾಗುತ್ತದೆ.

'ದಕ್ಷಿಣ ಭಾರತದ ಜೈನ ಇತಿಹಾಸವೆಂದರೆ ಕರ್ನಾಟಕದ ಜೈನ ಇತಿಹಾಸ'ವೆಂಬ ಅಭಿಮತವು ಬಹು ಪ್ರಚಲಿತವಾಗಿದೆ. ಪ್ರಾಚೀನ ಕಾಲದಿಂದ ಜೈನಧರ್ಮವು ಸಮಗ್ರ ಕರ್ನಾಟಕದ ತುಂಬ ಹರಡಿತ್ತು. ಉತ್ತರ ಕನ್ನಡದ ರಾಜಮನೆತನದವರೂ ಜೈನ ಧರ್ಮಕ್ಕೆ ಸಾಕಷ್ಟು ಉತ್ತೇಜನವನ್ನೂ, ರಾಜಾಶ್ರಯವನ್ನೂ ನೀಡಿದ್ದರು. ಕದಂಬರ ನಂತರ ಆಡಳಿತ ನಡೆಸಿದ ಚಾಲುಕ್ಯರ ಕಾಲದಲ್ಲಿ ಹೊನ್ನಮ ಎನ್ನುವ ದೊರೆ ಹೊನ್ನಾವರದಲ್ಲಿ ಕ್ರಿ.ಶ. ೮ನೇ ಶತಮಾನದಷ್ಟೊತ್ತಿಗೆ ರಾಜ್ಯಭಾರ ಮಾಡಿದ ಸಂಗತಿ ತಿಳಿಯುತ್ತದೆ. ಮುಂದೆ ನಗ್ಗೆರೆಯ ಸಾಳ್ವದೊರೆಗಳು ಗೇರುಸೊಪ್ಪೆಯನ್ನು ಅಥವಾ ಹೈವನಾಡನ್ನು ಆಳಿದ್ದು ಕ್ರಿ.ಶ. ಸುಮಾರು ೧೩೫೦ ರಿಂದ ೧೬೦೬ರ ವರೆಗೆ. ಹೈವೆನಾಡಿನ ಆಡಳಿತವು ಲೋಕಪ್ರಸಿದ್ದವಾದ ಜೋಗಜಲಪಾತದಿಂದ ಗಂಗಾವಳಿ (ಅಂಕೋಲಾ)ಯ ವರೆಗೆ ಕರಾವಳಿಯ ಸುತ್ತಲೂ ಹರಡಿತ್ತು. ಹಾಡುವಳ್ಳಿ ಇವರ ಕಾಲದಲ್ಲಿ ಶಿಲ್ಪಕಲೆ, ಸಂಸ್ಕೃತಿಗಳ ತೊಟ್ಟಿಲಾಗಿ ಬೆಳೆಯಿತು.

ಕಾರಕಳ, ಬಾರಕೂರ, ಹಾಡುವಳ್ಳಿ, ನಗಿರೆ, ಭಟ್ಕಳ ಇವು ಒಂದು ಕಾಲದಲ್ಲಿ ಜೈನರ ಧಾರ್ಮಿಕ ಆಡಳಿತ ಕೇಂದ್ರಗಳಾಗಿ ಬೆಳಗಿದ್ದವು. ಸ್ವಾದಿಯ ಅರಸರು ಜೈನ ಧರ್ಮಕ್ಕೆ ಕಲೆ ಸಂಸ್ಕೃತಿಗೆ ಉತ್ತೇಜನ ನಿಡೀದ್ದರು. ಸ್ವಾದಿಯಲ್ಲಿ ಇಂದಿಗೂ ಜೈನಮಠ, ಭಟ್ಟಾಕಳಂಕ ಹಾಗೂ ಅಕಳಂಕರ ಸ್ಮಾರಕ ನಿಷಧಿಗಲ್ಲುಗಳ ಅವಶೇಷವಿದೆ. ಉತ್ತರ ಕನ್ನಡದ ಹೈವೆನಾಡು ಅಥವಾ ಹಾಡುವಳ್ಳಿ,

ನಗ್ಗಿರೆ ಅಥವಾ ನಗಿರೆ ತುಳುನಾಡಿನೊಡನೆ ಧಾರ್ಮಿಕ ಆಡಳಿತ ಸಂಬಂಧವನ್ನು ಸ್ಥಾಪಿಸಿಕೊಂಡ ಉಲ್ಲೇಖಗಳು ಶಾಸನಗಳಲ್ಲಿ ಉಲ್ಲೇಖಿತವಾಗಿದೆ. ಈ ಸಾಂಸ್ಕೃತಿಕ ಸಂಬಂಧಕ್ಕೆ ಜೈನಧರ್ಮ ಕಾರಣವಾಗಿತ್ತೆಂಬುದು ಸುಸ್ಪಷ್ಟವಾಗಿದೆ. ಹೀಗೆ ಕಡಲ - ತಡಿಯುದ್ದಕ್ಕೂ ಜೈನ ಧರ್ಮ ಸಂಸ್ಕೃತಿ ಕಲೆಗಳನ್ನು ನೆಲೆ ನಿಲ್ಲಿಸುವ ಆಯಾ ರಾಜರ ಧ್ಯೇಯಾದರ್ಶಗಳು ಅನುಪಮವಾಗಿದ್ದವೆಂದು ಹೇಳಬಹುದು.

ನಗಿರೆ ರಾಜ್ಯ, ಗೇರುಸೊಪ್ಪೆಯ ಹತ್ತಿರವಿದ್ದ ಸಾಳ್ವದೊರೆಗಳ ಆಡಳಿತ ಕೇಂದ್ರ. ಇದಕ್ಕೆ ಕ್ಷೇಮಪುರ, ಭಲ್ಲಾತಕಿಪುರವೆಂದೂ ಕರೆಯಲಾಗುತ್ತಿತ್ತು. ನಗ್ಗಿರೆಯೇ ಮುಂದೆ ನಗರಿಯಾಗಿ ಕರೆಸಿಕೊಂಡಿತು. ನಗಿರೆಯನ್ನು ಆಳಿದ ಸಾಳ್ವದೊರೆಗಳ ವಂಶಚಿತ್ರ ಈ ಕೆಳಗಿನಂತಿದೆ.

**ಉತ್ತರ ಕನ್ನಡದ ನಗಿರೆಯನ್ನಾಳಿದ ಸಾಳ್ವರಾಜರ ವಂಶ ಚಿತ್ರ**

ಸಾಳ್ವನಾರಣ
|
ಸಾಳ್ವನಾಗಣ
|
ಹೊನ್ನ

ರಾಮ
1ನೇ ಮಂಗ ಮಾವರಸ
|
ಹಯಿನರಸ(ಹೈವರಸ) ಸಂ. ೧೩೯೮-೯೯
|
2ನೇ ಮಂಗನೃಪಮಹೀಪಾಲ
|
ಕೇಶವರಾಜ. 1420-1425

ಲಕ್ಷ್ಮೀವಂತಿ=ತಾಯಪ್ಪರಸ
ಸಿಂಗಿರಾಯ ಸಂ. 1425-30

ಭೈರವ ಸು.೧೪೩೦-೬೧
ಚಿಕ್ಕಭೈರವ ಸು.೧೪೬೧-೭೧
ಯುವರಾಜ (ಅಂಬಿರಾಯ)
ಕೇಶವದೇವಿ
ಸಿರಿಯಮರಸಿ

ಶಂಕರಾಂಬಿಕೆ (ವಂಶ ಬಯ್ಯಾನೃಪ ಇಂದ್ರ ?)

ಸಾಳ್ವಮಲ್ಲ ಮಲ್ಲಿರಾಯ. ತಿಪ್ಪರಸ ಸು ೧೪೭೧-೧೪೮೪
ತಂಗಿ(?)
|
ಭೈರರಸ ಒಡೆಯರು ಸು. ೧೫೦೯-೧೫೧೫

ಮಲ್ಲಿದೇವಿ=ಶಾಂತದಂಡಾಧೀಶ
ಸಾಳ್ವದೇವ ದೇವರಸ ಒಡೆಯ ಸು.೧೪೮೫-೧೪೯೯
ಪದ್ಮಾಂಬಿಕೆ

2ನೇ ಸಾಳ್ವದೇವರಸ
ಒಡೆಯ
(ಕೃಷ್ಣದೇವರಸ ಒಡೆಯ)
ಸು. ೧೫೧೫-೧೫೩೦

ಸಾಳ್ವ ದೊರೆಗಳು ಪರಮ ಜಿನಪದ ಭಕ್ತರೂ ಧರ್ಮಪರಾಯಣರೂ ಆಗಿದ್ದರು. ಅಹಿಂಸಾ ತತ್ವವನ್ನು ಜೀವನದ ಪರಮಮೌಲ್ಯವೆಂದು ಆರಾಧಿಸಿದ್ದರು. ಶಾಂತಿ, ಸಹನೆ, ಔದಾರ್ಯದಿಂದ

ರಾಜ್ಯಭಾರಮಾಡಿದ ಇವರು ಸಾಹಿತ್ಯ ಕಲೆಗಳಿಗೆ ನೀಡಿರುವ ಪ್ರೋತ್ಸಾಹ ಅಪೂರ್ವವಾದದ್ದೆಂದು ಹೇಳಬಹುದು. ಸಾಳ್ವಮಲ್ಲನ ಕಾಲದಲ್ಲಿ ಕನ್ನಡದ ಪ್ರಸಿದ್ಧ ಕವಿ ಸಾಳ್ವ 'ಸಾಳ್ವಭಾರತ' ವನ್ನು ಬರೆದು ವಿಖ್ಯಾತನಾದ. 'ಸಾಳ್ವಭಾರತ'ವು ಕನ್ನಡದ ಮೊಟ್ಟಮೊದಲನೆಯ ಜೈನ ಮಹಾಭಾರತ ಕಾವ್ಯವಾಗಿದೆ. ಇದನ್ನು ನೇಮಿನಾಥ ಪುರಾಣವೆಂದೂ ಕರೆಯಲಾಗುತ್ತದೆ. ಭಾಮಿನಿ ಷಟ್ಪದಿಯಲ್ಲಿ ಬರೆಯಲಾದ ಈ ಕಾವ್ಯದಿಂದ ಕುಮಾರವ್ಯಾಸರಿಗೆ ಸರಿ ದೊರೆಯಾಗಿ ನಿಲ್ಲಬಲ್ಲ ವ್ಯಕ್ತಿತ್ವವನ್ನು ಗಳಿಸಿದ್ದಾನೆ ಕವಿ ಸಾಳ್ವ. ಜೈನ ಕವಿ ಸಾಳ್ವನೇ ಉತ್ತರಕನ್ನಡದ ಪ್ರಮುಖ ಕವಿಯೆಂದು ವಿದ್ವಾಂಸರು ತೀರ್ಮಾನಿಸಿದ್ದಾರೆ. ಏಕಹಸ್ತ ಪ್ರತಿಯಿಂದ ಸಿದ್ಧವಾದ 'ಸಾಳ್ವಭಾರತ' ಬೃಹತ್ ಕಾವ್ಯವನ್ನು ಹಂಪನಾ ಅವರು 1976 ರಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ. ನಗಿರೆ ರಾಜ್ಯವನ್ನೂ, ಸಾಳ್ವ ರಾಜರನ್ನೂ, ಉತ್ತರಕನ್ನಡದ ಬೆಡಗನ್ನೂ, ಜಿನಧರ್ಮದ ಗುರು ಮುನಿಗಳನ್ನೂ ಸಾಳ್ವನು ತನ್ನ ಕಾವ್ಯದಲ್ಲಿ ಕೊಂಡಾಡಿದ್ದಾನೆ. ಸಾಳ್ವಭಾರತದೊಂದಿಗೆ 'ರಸರತ್ನಾಕರ' 'ವೈದ್ಯಸಾಂಗತ್ಯ', 'ಶಾರದಾವಿಲಾಸ' ವನ್ನೂ ರಚಿಸಿ ಸಾಳ್ವ ತನ್ನ ಪಾಂಡಿತ್ಯ ಪ್ರತಿಭೆಯನ್ನು ಬೆಳಗಿ 15ನೇ ಶತಮಾನದ ಕನ್ನಡ ಸಾಹಿತ್ಯದಲ್ಲಿ ಮಹತ್ವದ ಸ್ಥಾನ ಗಳಿಸಿದ್ದಾನೆ.

ಉತ್ತರ ಕನ್ನಡದ ಇನ್ನೊಬ್ಬ ಮುಖ್ಯಕವಿ ಬತ್ತಲೇಶ್ವರನು ಬರೆದ 'ಕೌಶಿಕರಾಮಾಯಣ' (ಕ್ರಿ.ಶ. ಸು. ೧೯೩೦) ವೂ.. ತಿಮ್ಮನ 'ನವರಸಾಲಂಕಾರ ವೂ. ಅಡಿಯಪ್ಪನ 'ಧನ್ಯಕುಮಾರ ಚರಿತೆ'ಯೂ, ಪಾಯಣನ 'ಅಹಿಂಸಾಚರಿತೆ'ಯೂ ಬೆಳಕಿಗೆ ಬಂದದ್ದು ಈ ಕಾಲದಲ್ಲಿಯೇ. ಹೀಗಾಗಿ ಜೈನ ಕವಿಗಳು ಕನ್ನಡ ಸಾಹಿತ್ಯ ಸಂಪತ್ತನ್ನು ಸಾಳ್ವದೊರೆಗಳ ಕಾಲದಲ್ಲಿ ರಚಿಸಿ ಕನ್ನಡಕ್ಕೆ ಉಪಕಾರ ಮಾಡಿದ್ದಾರೆ.

ಜೈನ ಶಿಲ್ಪಕಲೆಯ ವೈಭವದ ಅವಶೇಷವನ್ನು ಹೊತ್ತು ನಿಂತ ಹಾಡುವಳ್ಳಿಸಂಗೀತಪುರವೆಂದು ಕರೆಯಲ್ಪಡುತ್ತಿತ್ತು ಹಾಡುವಳ್ಳಿ ಹೈವರಸರ ಆಡಳಿತ ಕೇಂದ್ರವೂ, ಜೈನರ ಪವಿತ್ರ ಧಾರ್ಮಿಕ ಕೇಂದ್ರವೂ ಆಗಿದೆ. ಈಗಿನ ಶರಾವತಿಯ ಪಕ್ಕದಲ್ಲಿರುವ ನಗರಬಸ್ತಿ ಕೇರಿಯೇ ಹೈವೆನಾಡಿನ ಪ್ರಮುಖ ಸ್ಥಳವಾಗಿತ್ತು. ಹಾಡುವಳ್ಳಿಯನ್ನು ಆಳಿದ ರಾಜಮನೆತನದ ವಂಶಚಿತ್ರ ಈ ಕೆಳಗಿನಂತಿದೆ.



ಹಾಡುವಳ್ಳಿಯ ಮೊದಲನೆಯ ಹೈವರಸನು ಒಬ್ಬ ಶ್ರೇಷ್ಠ ಯುದ್ಧವೀರನೆಂದೂ ಅವನೇ ಮೂಲಮೊರೆಯೆಂದೂ ತಿಳಿಯುತ್ತದೆ. ಅವನು ವಿಜಯನಗರದ ಮಂಗಪ್ಪದಂಡನಾಯಕನಿಗೆ ಮತ್ತು ದಕ್ಷಿಣ ಕನ್ನಡದ ತುಳುನಾಡಿನ ಸಣ್ಣ ಪಾಳೆಯಗಾರರಿಗೆ ನೆರವು ನೀಡುತ್ತಿದ್ದನು. (ಕ್ರಿ.ಶ. ೧೩೯೮) ಅವನ ಮಗ ಸಿಂಗಿರಾಯ ಹಾಡುವಳ್ಳಿಯನ್ನು ಆಳಿದರೆ ಅವನ ಚಿಕ್ಕಪ್ಪ ಕೇಶವರಾಯನು ನೈಗರೆ (ನಗಿರೆ) ಯಲ್ಲಿ ಆಡಳಿತ ನಡೆಸಿದ್ದನು, ಇದು ಇಂದಿನ ಜೋಗ ಜಲಪಾತದಿಂದ ೧-೨೦ ಮೈಲು ದೂರದಲ್ಲಿದೆ.

ಹೈವ (ಪೈವ -ಪೈ) ಸಾಮಾಜಿಕ - ಭೌಗೋಳಿಕ ಹಿನ್ನೆಲೆಯಲ್ಲಿ ರೂಪಗೊಂಡ ಪ್ರಾದೇಶಿಕ ಜನಸಮೂಹ. ಹೈವರಸನ ಕಾಲದಲ್ಲಿ ರಾಜಕೀಯ, ಸಾಮಾಜಿಕ ಮಹತ್ವ ಈ ಜನಾಂಗಕ್ಕೆ ಲಭ್ಯವಾಯಿತು. ಉತ್ತರಕನ್ನಡದ ಹವ್ಯಕರು ಹೈವ ನಾಡಿನವರೆಂದು ಹೈವ ಜನಸಮುದಾಯಕ್ಕೆ ಸೇರಿದವರೆಂದೂ ಪ್ರಸಿದ್ಧ ಸಂಶೋಧಕರಾದ ಗೋವಿಂದ ಪೈ, ಬಿ. ಎಚ್. ಶ್ರೀಧರ್ ಮೊದಲಾದವರು ಹೇಳುತ್ತಾರೆ. ಹಳಗನ್ನಡದ ಮಾತುಗಳು ಹವ್ಯಕರ ಆಡುನುಡಿಯಲ್ಲಿ ಇಂದಿಗೂ ಜೀವಂತವಾಗಿರುವುದು ಕಂಡು ಬರುತ್ತದೆ. ಜೈನ ಕಥೆಗಳ ಸಂಗ್ರಹ ವಡ್ಡಾರಾಧನೆಯಲ್ಲಿಯ ಅನೇಕ ಪದಪುಂಜಗಳು ಹವ್ಯಕರ ಆಡು ನುಡಿಯಲ್ಲಿ ಇಂದಿಗೂ ಗುರುತಿಸಬಹುದಾಗಿದೆ.

ಹಾಡುವಳ್ಳಿಯನ್ನು ಆಳಿದ ಭೈರಾದೇವಿ (ಚೆನ್ನಾದೇವಿ) ಮತ್ತು ಅವಳ ಸೋದರಿ ಚೆನ್ನಭೈರಾದೇವಿಯರು ಕರ್ನಾಟಕದ ಇತಿಹಾಸದಲ್ಲಿಯೇ ಪ್ರಸಿದ್ಧರಾಗಿದ್ದಾರೆ. ಚೆನ್ನಾದೇವಿ ೧೫೪೦-೪೭ರ ವರೆಗೆ ಆಡಳಿತ ನಡೆಸಿದಳು. ಈ ಕಾಲದಲ್ಲಿ ಇವಳು ಪೋರ್ತುಗೀಸರೊಡನೆ ಸತತವಾಗಿ ಯುದ್ಧ ಮಾಡಬೇಕಾಗಿ ಬಂದು ೧೫೪೨ರ ಯುದ್ಧದಲ್ಲಿ ಅಪಾರವಾದ ಸೋಲನ್ನುಂಡಳು. ಆಗಲೇ ಭಟ್ಕಳ್ ಬಂದರವನ್ನು ಪೋರ್ತುಗೀಸರು ಸುಟ್ಟು ಸೂರೆ ಮಾಡಿದರು. ಮಿಕ್ಲರ್ ಎಂಬ ಪೋರ್ತುಗೀಸ್ ಕವಿ ತನ್ನ ಲ್ಯೂಸಿಯಾದ್‌ದಲ್ಲಿ ಗೋವೆಯ ಗವರ್ನರ್ ಡಿಸೋಜನ ಸಾಹಸವನ್ನು ಹೀಗೆ ವರ್ಣಿಸಿದ್ದಾನೆಂದು ಡಾ॥ ಸೂರ್ಯನಾಥ ಕಾಮತರು ಉದ್ಧರಿಸಿದ ಸಾಲುಗಳಿವು:

Bhatikala inflamed by
treacherous hate !
provokes the horrors of
Badalo's fate
Her streets in blood
Her skies enwrapt in fire
confess the storm of
souza's ire

ಈ ಯುದ್ಧ ಭೀಕರವಾಗಿತ್ತೆಂಬುದು ಈ ವರ್ಣನೆಯಿಂದ ವಿದಿತವಾಗುತ್ತದೆ. ಈ ಯುದ್ಧದ ಸಮಯದಲ್ಲಿ ಭಟ್ಕಳದ ಅನೇಕ ಜೈನ ಬಸದಿಗಳು ಮಣ್ಣುಪಾಲಾದವು. ಅನೇಕ ಸುಂದರ ಜೈನ ಮೂರ್ತಿಗಳನ್ನು ಪೋರ್ತಗೀಸರು ಕೊಳ್ಳೆಹೊಡೆದರು.

ಚೆನ್ನಾದೇವಿಯ ತರುವಾಯ ಅವಳ ಸೋದರಿ ಚೆನ್ನಭೈರಾದೇವಿ ವೀರಳೂ, ಧರ್ಮಿಷ್ಠೆಯೂ, ಸಾಹಿತ್ಯ, ಸಂಗೀತದಲ್ಲಿ ಅಭಿರುಚಿಯುಳ್ಳವಳೂ ಆಗಿ ಹಾಡುವಳ್ಳಿಯನ್ನು ೧೫೪೭ರಿಂದ ೧೫೯೯ರ

ವರೆಗೆ ಬಹು ದೀರ್ಘ ಕಾಲ ರಾಜ್ಯಭಾರ ಮಾಡಿದಳು. ಚೆನ್ನಭೈರಾದೇವಿಯನ್ನು ದಾನಚಿಂತಾಮಣಿ ಅತ್ತಿಮಬ್ಬೆಯೆಂದು ಕರೆಯಬಹುದು. ಇವಳು ಉತ್ತರ ಕನ್ನಡದಲ್ಲಿ ಜೈನ ಧರ್ಮದ ಅಭ್ಯುದಯಕ್ಕೆ ಕಾರಣಳಾದಳು. ಪೋರ್ತುಗೀಸರೊಡನೆ ಸ್ನೇಹ ಬೆಳಸಿ ಉತ್ತರ ಕನ್ನಡದ ಸಿರಿಸಂಪತ್ತಿನ ನಿಧಿಯಾದ ಕರಿಮೆಣಸನ್ನು ವಿದೇಶಗಳಿಗೆ ರಫ್ತುಮಾಡಿ 'ಕರಿಮೆಣಸಿನ ರಾಣಿ' ಎಂದು ಲೋಕವಿಖ್ಯಾತಳಾದಳು. ಚೆನ್ನಾದೇವಿಯ ಕಾಲದಲ್ಲಿ ನಾಶವಾದ ಭಟ್ಕಳವನ್ನು ಸರಿಪಡಿಸಿ ಪ್ರಜಾಕಲ್ಯಾಣವನ್ನುಂಟು ಮಾಡಿದಳು, ಪೋರ್ತುಗೀಸರೊಡನೆ, ಕೆಳದಿಯ ನಾಯಕರ ಜೊತೆ ಚೆನ್ನಭೈರಾದೇವಿ ಸತತವಾಗಿ ಹೋರಾಡಬೇಕಾಯಿತು. ಕೆಳದಿಯ ವೆಂಕಪ್ಪನಾಯಕ ತನ್ನ ಸೇನಾನಿ ದಳವಾಯಿ ಲಿಂಗಣ್ಣನನ್ನು ಕಳಿಸಿ ಚೆನ್ನಭೈರಾದೇವಿಯನ್ನು ಸೆರೆಹಿಡಿಸಿದ. ಹಾಡುವಳ್ಳಿ ಮುಂದೆ ಯಾರಿಂದಲೂ ಆಡಳಿತ ನಡೆಸಲಾಗದೆ ಇತಿಹಾಸದ ಅವಶೇಷವಾಗಿರುವ ಒಂದು ಹೃದಯವೇದಕ ಘಟನೆಯಾಗಿದೆ.

ಚೆನ್ನಭೈರಾದೇವಿಯು ಕವಿ, ಪಂಡಿತರಿಗೆ, ವೀರರಿಗೆ, ಜೈನ ಮುನಿಪುಂಗವರಿಗೆ ರಾಜಾಶ್ರಯ ನೀಡಿದ್ದಳು. ಕನ್ನಡದ ಕವಿ ವರ್ಧಮಾನ ಇವಳ ಕಾಲದಲ್ಲಿ ಬೆಳಗಿದ ಕವಿ. ಕರ್ನಾಟಕದ ಜೈನ ಪರಂಪರೆಯ ಪುರೋಭಿವೃದ್ಧಿಗೆ ಸ್ಫೂರ್ತಿಶಕ್ತಿಯಾಗಿದ್ದಾಳೆ ಚೆನ್ನಭೈರಾದೇವಿ.

ಒಟ್ಟಿನಲ್ಲಿ ಜೈನ ಕಲೆ, ಸಂಸ್ಕೃತಿಗೆ ಹೈವರಸರು ನೀಡಿದ ಕೊಡುಗೆ ಅಪಾರ, ಅಮೋಘ, ಹಾಡುವಳ್ಳಿಯಲ್ಲಿಯ ಚತುರ್ಮುಖ ಮತ್ತು ಪಾರ್ಶ್ವನಾಥ ಬಸದಿಗಳು ಹೈವರಸರ ನೆನಪನ್ನು ನಿತ್ಯವಾಗಿರುವಂತೆ ಕಣ್ಮನಗಳನ್ನು ಸೆಳೆಯುತ್ತವೆ. ಬಸದಿಯ ಮಧ್ಯಭಾಗದಲ್ಲಿ ಜೈನ ತೀರ್ಥಂಕರರ ಮೂರ್ತಿಗಳನ್ನು ಮಂಟಪದ ನಾಲ್ಕೂ ಭಾಗಗಳಲ್ಲಿ ಬಹುಮನೋಜ್ಞವಾಗಿ ಕೆತ್ತಿ ನಿಲ್ಲಿಸಲಾಗಿದೆ. ಯೋಗಮುದ್ರೆಯಲ್ಲಿ ವಿರಾಜಮಾನರಾದ ತೀರ್ಥಂಕರರ ಈ ಮೂರ್ತಿಗಳು ಅದ್ಭುತಕಲೆಯ ದ್ಯೋತಕಗಳಾಗಿವೆ. ನಮ್ಮ ನಾಡಿನ ಭವ್ಯ ಕಲಾ ಶ್ರೀಮಂತಿಕೆಯನ್ನು ಇವು ಪ್ರತಿನಿಧಿಸುತ್ತವೆ. ಸಮ್ಯಗ್‌ದರ್ಶನ, ಜ್ಞಾನ, ಚಾರಿತ್ರ್ಯಗಳನ್ನು ವಿಶ್ವಕ್ಕೆ ಸಾರಲು ಕುಳಿತಂತೆ ತೋರುತ್ತವೆ ಈ ತಪೋಮೂರ್ತಿಗಳು. ಹಾಡುವಳ್ಳಿಯ ಪಾರ್ಶ್ವನಾಥ ಬಸದಿಯನ್ನು ಹಿರೇಬಸದಿಯೆಂದು ಕರೆಯುವರು. ೧೬ನೇ ಶತಮಾನದ ಆರಂಭದಲ್ಲಿ ಇದು ಕಟ್ಟಲ್ಪಟ್ಟಿತ್ತೆಂದು ತಿಳಿಯುತ್ತದೆ. ಸಂಗೀತಪುರದ ಇಮ್ಮಡಿ ಸಾಳವೇಂದ್ರನು ಈ ಬಸದಿಯ ಪೂಜಾವಿಧಾನಗಳಿಗಾಗಿ ದತ್ತಿಯನ್ನು ಬಿಟ್ಟಿದ್ದನು. ಈ ಬಸದಿಯನ್ನು ಅದೇ ಶತಮಾನದ ಕೊನೆಯಲ್ಲಿ ಪೋರ್ತುಗೀಸರು ಹಾಳುಗೆಡವಿರಬೇಕೆಂದು ತೋರುತ್ತದೆ. ಚೆನ್ನಭೈರಾದೇವಿಯ ಕಾಲದಲ್ಲಿ ಇಲ್ಲಿ ಅನಂತನಾಥ, ಚಂದ್ರನಾಥ ಮತ್ತು ಪಾರ್ಶ್ವನಾಥ ಜಿನರ ಸುಂದರವಾದ ವಿಗ್ರಹಗಳನ್ನು ಸಕಲ ವೈಭವಗಳೊಂದಿಗೆ ಸ್ಥಾಪಿಸಲಾಗಿತ್ತು. ಹಾಡುವಳ್ಳಿಯ ವರ್ತಕರು ಇವುಗಳ ಪೂಜೆಗಾಗಿ ದತ್ತಿ ಬಿಟ್ಟ ಉಲ್ಲೇಖಗಳು ಅವರ ಧರ್ಮನಿಷ್ಠೆಯನ್ನು ಪ್ರಚುರ ಪಡಿಸುತ್ತವೆ. ಚೆನ್ನಭೈರಾದೇವಿಯೇ ಈ ಬಸದಿಯ ಮಾನಸ್ತಂಭವನ್ನು ನಿರ್ಮಿಸಿದವಳೆಂದು ಹೇಳುತ್ತಾರೆ.

ಹಾಡುವಳ್ಳಿಯಲ್ಲಿರುವ ರತ್ನತ್ರಯ ಬಸದಿಯನ್ನು ಬಂಡ ಬಸ್ತಿ ಎಂದು ಕರೆಯುತ್ತಾರೆ. ಇದರಲ್ಲಿ ಚಂದ್ರನಾಥ, ಅರನಾಥ ಮತ್ತು ಮಲ್ಲಿನಾಥ ತೀರ್ಥಂಕರರಿರು ವರು. ೧೫೩೬ರಲ್ಲಿ ಚೆನ್ನಭೈರಾದೇವಿಯ ಸೇನಾನಿಯಾದ ಜಟ್ಟಪ್ಪನಾಯಕನು ಬಂಡಬಸ್ತಿಯ ಮುಂದೆ ಮಾನಸ್ತಂಭವನ್ನು ನಿರ್ಮಿಸಿದನಂತೆ. ಇದು ೫ ಕಂಭಗಳಿಂದ ಕೂಡಿದ್ದು ಕರ್ನಾಟಕದ ಪ್ರಸಿದ್ಧ ಮಾನಸ್ತಂಭಗಳ ಲ್ಲೊಂದಾಗಿದೆ. ಇದೇ ರೀತಿ ಭಟ್ಕಳದಲ್ಲಿರುವ ಚತುರ್ಮುಖ ಬಸದಿ ತುಂಬಾ ರಿಕ್ತ ಸ್ಥಿತಿಯಲ್ಲಿದೆ.

"ಶ್ರೀಮತ್ ಪರಮ ಗಂಭೀರ ಸ್ಯಾದ್ವಾದಾ ಮೋಘ ಲಚ್ಚಣಮ್!
ಜಿಯಾತ್ ತ್ರೈ ಲೋಕ್ಯನಾಥಸ್ಯ ಶಾಸನಂ ಜಿನ ಶಾಸನಂ ॥"

ಎಂದು ಪ್ರಾರಂಭವಾಗುವ ಜಿನಶಾಸನಗಳು ಜೈನ ಸಂಸ್ಕೃತಿಯ ಸಾರವನ್ನು ಶಾಸನಗಳ ಮೂಲಕ ಆಚಂದ್ರಾರ್ಕವಾಗಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಸಾರುವ ಅನೇಕ ಶಾಸನಗಳಿವೆ. ಜಿನಪದ ಛತ್ರ ನಿಶದಿಗಲ್ಲುಗಳಿವೆ. ಬಿಳಗಿ, ಕಾಯ್ಕಿಣಿ ಮೊದಲಾದೆಡೆ ಜೈನ ಸಂಸ್ಕೃತಿಯ ಅವಶೇಷ ಇಂದಿಗೂ ಗೋಚರಿಸುತ್ತವೆ. ಹೀಗಿದ್ದರೂ ಉತ್ತರ ಕನ್ನಡದ ಪ್ರಾಚೀನ ಪರಂಪರೆಯ ಸಂಕೇತಗಳಾದ ಜೈನ ಸಂಸ್ಕೃತಿಯ ಕೇಂದ್ರಗಳಾದ ಹಾಡುವಳ್ಳಿ ನಗಿರೆಯ ಅವಶೇಷಗಳ ಆಳವಾದ ಅಧ್ಯಯನ ಎಂದಿಗಿಂತ ಇಂದು ಬಹು ಅಗತ್ಯವಾದ ಕಾರ್ಯ.

## ಗ್ರಂಥ ಋಣ


1. B.H. Sridhar - Behind the curtain of silvan Deity
2. Epigraphia Carnatica - Vol VII sa164, Nr 46, Sa,16
3. Karnataka Inscriptions - Vol - I, 56
4. ಡಾ. ಎಂ. ಚಿದಾನಂದ ಮೂರ್ತಿ – ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ
5. ಹಂಪನಾ – ಸಾಳ್ವ ಭಾರತ

8290

# ಬೆಳಗಾವಿ ಜಿಲ್ಲೆಯ ಮುನಿಪರಂಪರೆ

ಡಾ। ಎಸ್.ಪಿ.ಪಾಟೀಲ

ಕರ್ನಾಟಕ ಮತ್ತು ಜೈನಧರ್ಮಗಳ ಇತಿಹಾಸ ಜೊತೆ ಜೊತೆಯಾಗಿ ಕೂಡಿ ಬೆಳೆಯುತ್ತ ಬಂದಿವೆ. ಪ್ರಾಚೀನ ಕರ್ನಾಟಕದ ಇತಿಹಾಸವೆಂದರೆ ಜೈನಧರ್ಮದ ಇತಿಹಾಸವೇ ಆಗಿದೆ. ಇತಿಹಾಸದ ವಿವಿಧ ಕಾಲಘಟ್ಟಗಳಲ್ಲಿ ರಾಜ ಮಹಾರಾಜ, ಮಂತ್ರಿ ಮಾನ್ಯ, ವಿದ್ವಾಂಸ ಧನಿಕರ ಪ್ರೇರಣೆ ಹಾಗೂ ಪೋಷಣೆಗಳಿಂದಾಗಿ ಕರ್ನಾಟಕದಲ್ಲಿ ಜೈನಧರ್ಮವು ಶ್ರೀಮಂತವಾಗಿ ವೈವಿಧ್ಯಪೂರ್ಣವಾಗಿ ಬೆಳೆದುಬಂದಿವೆ. ಈ ಬೆಳವಣಿಗೆಯಲ್ಲಿ ಯತಿ, ಮುನಿ ಆಚಾರ್ಯರುಗಳ ಕೊಡುಗೆ ಅವಿಸ್ಮರಣೀಯವಾದುದು. ಜನಮನದಲ್ಲಿ ಜೈನ ಧರ್ಮದ ತತ್ವಗಳು ಬೇರೂರಲು ಸದಾ ಜಾಗೃತವಾಗಿರಲು ಹಾಗೂ ಬೆಳೆದು ಬಂದು ಭವ್ಯ ಪರಂಪರೆಯಾಗಿ ಮುಂದುವರಿಯಲು ಈ ಮುನಿ, ಆಚಾರ್ಯರುಗಳ ಪಾಂಡಿತ್ಯ ಹಾಗೂ ಚಾರಿತ್ರ್ಯಗಳೇ ಕಾರಣವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಒಂದು ಕಾಲದಲ್ಲಿ ಇಡೀ ಕರ್ನಾಟಕವನ್ನು ವ್ಯಾಪಿಸಿದ್ದ, ಪ್ರಭಾವಿಯಾಗಿ ಮೆರೆದ ಜೈನಧರ್ಮದ ಪ್ರಭಾವ ಹಲವಾರು ಕಾರಣಗಳಿಂದ ಕಡಿಮೆಯಾದರೂ ಹಾಸನ, ಮೈಸೂರು, ಶಿವಮೊಗ್ಗ, ತುಮಕೂರು, ಬೆಂಗಳೂರು, ಉತ್ತರ ಹಾಗೂ ದಕ್ಷಿಣ ಕನ್ನಡ, ಧಾರವಾಡ, ವಿಜಾಪುರ ಹಾಗೂ ಬೆಳಗಾಂವಿ ಜಿಲ್ಲೆಗಳಲ್ಲಿ ಅಲ್ಲಲ್ಲಿ – ನಡುಗಡ್ಡೆಗಳಂತೆ – ಜೈನಸಮಾಜ, ಸಂಸ್ಕೃತಿಗಳು ಇಂದಿಗೂ ಜೀವಂತವಾಗಿ ಮುಂದುವರಿದುಕೊಂಡು ಬಂದಿವೆ. ಇವುಗಳಲ್ಲಿ ಬೆಳಗಾವಿ ಜಿಲ್ಲೆಯ ಪಾತ್ರ ತುಂಬ ಮಹತ್ವದ್ದು . ಕರ್ನಾಟಕದ ಬೆಳಗಾವಿ ಹಾಗೂ ಮಹಾರಾಷ್ಟ್ರದ ಸಾಂಗಲಿ, ಕೊಲ್ಹಾಪುರ ಜಿಲ್ಲೆಗಳ ಈ ತ್ರಿಕೂಟ ಪ್ರದೇಶವು ಜೈನ ಸಂಸ್ಕೃತಿಯ ಪ್ರಭಾವೀ ಕ್ಷೇತ್ರವಾಗಿದೆ. ಇದರಲ್ಲೂ ಜೈನಸಂಸ್ಕೃತಿ ಪರಂಪರೆಗಳ ಮುಂದುವರಿಕೆಯಲ್ಲಿ ಬೆಳಗಾವಿ ಜಿಲ್ಲೆಯ ಕೊಡುಗೆ ಅನುಪಮವಾಗಿದೆ. ಇದು ದಿಗಂಬರ ಮುನಿಪರಂಪರೆಯನ್ನು ಮುಂದುವರಿಸಿಕೊಂಡು ಬಂದ ಜಿಲ್ಲೆಯಾಗಿದೆ.

ವರ್ತಮಾನ ಕಾಲದ ತೀರ್ಥಂಕರರೆಲ್ಲ ಉತ್ತರ ಭಾರತದಲ್ಲಿ ಜನಿಸಿ ವಿಹಾರದ ಮೂಲಕ ಜೈನಸಿದ್ಧಾಂತವನ್ನು ಪ್ರಚಾರಪಡಿಸಿದರೆ ಅವರ ಉಪದೇಶರೂಪದ ಆಗಮಗಳಿಗೆ ಟೀಕೆ-ಟಿಪ್ಪಣಿ ಬರೆದು ತಮ್ಮ ವಿದ್ವತ್ತಿನ ಮೂಲತ ಜೈನಸಿದ್ಧಾಂತವನ್ನು ಲೋಕಕ್ಕೆ ಬೆಳಗಿದವರು, ಸಾಮಾನ್ಯರ ಮನೆ, ಮನಗಳಿಗೆ ತಲುಪಿಸಿದವರು ದಕ್ಷಿಣದ ವಿಶೇಷವಾಗಿ ಕರ್ನಾಟಕದ – ಆಚಾರ್ಯರು. ತೀರ್ಥಂಕರ ಹಾಗೂ ಆಚಾರ್ಯರಿಂದ ಸ್ಥಾಪಿತವಾದ ಉತ್ತರ ಹಾಗೂ ದಕ್ಷಿಣ ಭಾರತಗಳ ಸಂಪರ್ಕವು ಮುಂದುವರೆಯಲು ಕರ್ನಾಟಕದ ಹಲವಾರು ತೀರ್ಥಕ್ಷೇತ್ರಗಳು ಕಾರಣವಾಗಿವೆ.

ಇದಕ್ಕೆ ಇನ್ನೊಂದು ಮುಖ್ಯ ಕಾರಣವೆಂದರೆ ಕರ್ನಾಟಕದ, ಅದರಲ್ಲೂ ಬೆಳಗಾವಿ ಜಿಲ್ಲೆಯ ಮುನಿಪರಂಪರೆ. ಇವರು ತಮ್ಮ ಚಾರಿತ್ರ್ಯ, ತಪಸ್ಸುಗಳಿಂದ, ದೇಶಾದ್ಯಂತ ವಿಹಾರದಿಂದ ಈ ಸಂಪರ್ಕ ನಿಕಟಗೊಳ್ಳಲು, ಕಾರಣರಾಗಿದ್ದಾರೆ. ಭದ್ರವಾಗಲು ಸಹಾಯಕರಾಗಿದ್ದಾರೆ. ಬೆಳಗಾವಿಯ ಜಾನಪದ ಕವಿ ದ್ವಾರಪಾಲನ,

''ಕ್ಷಿತಿ ಮೇಲೆ ಮೆರೆಯೋದು ಬೆಳಗಾವಿ ಪಟ್ಟಣಾ।
ಅತಿವಿಸ್ತಾರದ ಕವಿ ಹುಟ್ಟುತಾರಣ್ಣಾ।
ಮಳೆವಂತ ನಮ್ಮ ದ್ವಾರಪಾಲ ಇಟ್ಟುಕರುಣಾ।
ಉತ್ತಮೋತ್ತಮ ಪದಗಳ ರಚಿಸಿದನೋ ಜಾಣಾ ॥

ಎಂಬ ಸಾಲುಗಳು ಬರೀ ಬೆಳಗಾವಿ ಪಟ್ಟಣಕ್ಕೆ ಮಾತ್ರವಲ್ಲ, ಇಡೀ ಜಿಲ್ಲೆಗೆ ಅನ್ವಯವಾಗುವ ಸತ್ಯವನ್ನು ದಾಖಲಿಸುತ್ತವೆ.

ಇತ್ತೀಚಿನ ಎರಡು ಶತಮಾನಗಳ ಕಾಲಾವಧಿಯಲ್ಲಿ ಈ ಮುನಿಪರಂಪರೆಯನ್ನು ಮುಂದುವರಿಸಿಕೊಂಡುಬಂದ ಬೆಳಗಾವಿ ಜಿಲ್ಲೆಯ ಪ್ರಮುಖ ಮುನಿಗಳ ಬಗ್ಗೆ ಕೆಲವು ವಿಚಾರಗಳನ್ನು ತಿಳಿದುಕೊಳ್ಳುವುದು ಅವಶ್ಯಕವಾಗಿದೆ.

### 1. ಆಚಾರ್ಯ ಸಿದ್ಧಸಾಗರ ಮಹಾರಾಜರು

ಅಥಣಿ ತಾಲೂಕಿನ ಕೃಷ್ಣಾತೀರದ ಮಹೀಶವಾಡಿಯಲ್ಲಿ ೧೮೨೮ ರಲ್ಲಿ ಮಲ್ಲಪ್ಪ ಚಿನ್ನವ್ವ ಎಂಬ ದಂಪತಿಗಳಿಗೆನಿಸಿದ ಸಿದ್ದಪ್ಪ, ಸಿದ್ಧಸಾಗರರಾಗಿ ಆತ್ಮಕಲ್ಯಾಣದೊಂದಿಗೆ ಇತರರಿಗೂ ಆತ್ಮಕಲ್ಯಾಣದ ಮಾರ್ಗವನ್ನು ಬೋಧಿಸಿ, ಮುನಿಧರ್ಮವನ್ನು ಆಚರಿಸಿ, ಜನಮನದಲ್ಲಿ ಧರ್ಮಶ್ರದ್ಧೆ, ಸದಾಚಾರಗಳು ಬೆಳೆಯಲು ಕಾರಣರಾದುದು ಒಂದು ಪವಾಡದಂತೆ ನಡೆದುಹೋದ ಘಟನೆ. ಬಾಲ್ಯದ ಏಳು ವರ್ಷದವರೆಗೆ ನಡೆಯಲು ಬರದ ಬಾಲಕನಿಗೆ 'ಸಿದ್ಧರಮುತ್ಯಾ'ನ ಉಪಚಾರದಿಂದ ನಡೆಯುವ ಶಕ್ತಿ ಬಂದಿತಲ್ಲದೆ, ಸರಿಯಾದ ದಾರಿಯಲ್ಲಿ ನಡೆದು ಇತರರಿಗೂ ದಾರಿ ತೋರುವ ದೃಷ್ಟಿ ಲಭಿಸಿತು. ಶಿಕ್ಷಣದ ಸೌಲಭ್ಯವಿರದ ಹಳ್ಳಿಯಲ್ಲಿ, ದುಡಿದು ಹೊಟ್ಟೆಹೊರೆದುಕೊಳ್ಳುವುದೇ ಮುಖ್ಯ ಕಾಯಕವಾದ ಸಂಸಾರದಲ್ಲಿ ಸಿದ್ಧಪ್ಪ ಅಂತರ್ಮುಖಿಯಾಗಿಯೇ ಉಳಿದ. ಅವನ 20ನೆ ವಯಸ್ಸಿನಲ್ಲಿಯೇ (೧೯೪೮) ಮದುವೆಯಾಗಿ, ನಾಲ್ಕು ಮಕ್ಕಳ ತಂದೆಯಾದರೂ, ಪುರಾಣಕೇಳುವ ಆಸಕ್ತಿಯಿಂದಾಗಿ ಸ್ಥಿತಪ್ರಜ್ಞನಾಗಿ ಜೀವನ ಸಾಗಿಸುತ್ತ, ತಾಯಿ - ತಂದೆಗಳ ಶಿಖರಜಿ ಯಾತ್ರೆ ಮಾಡಿಸಿ, ಆರ್ಥಿಕ ಮುಗ್ಗಟ್ಟಿಗೆ ಒಳಗಾಗಿ, ಸಾಲವನ್ನು ತೀರಿಸಲೆಂದು ಇದ್ದ ಸ್ವಲ್ಪ ಭೂಮಿಯನ್ನೂ ಮಾರಿ, ಕುಲಕರ್ಣಿಯವರಲ್ಲಿ ಜೀತದಾಳಾಗಿ ದುಡಿಯಲಾರಂಭಿಸಿದ. ಮಡಿ-ಮೈಲಿಗೆ, ವ್ರತ-ಆಚಾರ, ತ್ರಿಕಾಲ ಜಿನದರ್ಶನಗಳನ್ನು ಎಷ್ಟೇ ಎಡರು-ತೊಡರುಗಳು ಬಂದರೂ ಬಿಡದೆ ಮುಂದುವರಿಸಿಕೊಂಡು ಬಂದ. ಮೊದಮೊದಲು ಅವನನ್ನು ಕಂಡು ಹಾಸ್ಯಮಾಡುತ್ತಿದ್ದ ಜನರೇ ನಂತರ ಅವನ ಬಗ್ಗೆ ಗೌರವಾದರಗಳನ್ನು ತೋರಲಾರಂಭಿಸಿದರು. ಮಹಾರಾಷ್ಟ್ರದ ಕುಂಭೋಜ ಎಂಬ ಊರಿನಗೌಡರು ಬಂದು ಅವನ ಸಾಲವನ್ನು ತೀರಿಸಿ, ಕುಲಕರ್ಣಿಯವರ ಜೀತದಿಂದ ಬಿಡುಗಡೆ ಮಾಡಿದರು. ಗೌಡರ ಮನೆಯಿಂದ ಹೊರಟ ೬೪ ವರ್ಷದ ಸಿದ್ದಪ್ಪ ತನ್ನ ಮನೆಗೆ ಹೋಗುವ ಬದಲು ನೇರವಾಗಿ ಬಸದಿಗೆ ನಡೆದ. ಅಲ್ಲಿಂದ ನಾಂದಣಿಯ ಜಿನಸೇನ ಭಟ್ಟಾರಕರಿಂದ ೧೮೯೨ರಲ್ಲಿ ಕ್ಷುಲ್ಲಕ ದೀಕ್ಷೆ ಸ್ವೀಕರಿಸಿ

ಸಿದ್ಧಸಾಗರರಾದರು. ಕಠೋರ ತಪಸ್ಸು, ಧ್ಯಾನದಲ್ಲಿ ಏಕಾಗ್ರತೆ, ಇವುಗಳಿಂದ ಶಾಸ್ತ್ರವನ್ನು ಇತರರಿಂದ ಓದಿಸಿ ಕೇಳಿಕೊಂಡರೂ ಸಕಲ ಶಾಸ್ತ್ರಗಳ ಸಾರವನ್ನು ಅರಗಿಸಿಕೊಂಡರು. ಧರ್ಮ ಜಾಗೃತಿಗಾಗಿ ದಕ್ಷಿಣ ಹಾಗೂ ಉತ್ತರ ಭಾರತಗಳ ವಿಹಾರ ಕೈಗೊಂಡರು. ಅವರ ತಪಸ್ಸಿನ ಸಂದರ್ಭದಲ್ಲಿ ಜರುಗಿದ ಅನೇಕ ಪವಾಡಸದೃಶ ಘಟನೆಗಳ ಬಗ್ಗೆ ಜನ ಇಂದಿಗೂ ಮಾತನಾಡುತ್ತಾರೆ. ಸಿದ್ಧಸಾಗರರ ಉಪದೇಶದಲ್ಲಿ ಜೈನತತ್ವಗಳ ಪಾಲನೆ, ಹಾಗೇ ಹಾಳುಬಿದ್ದ ಬಸದಿಗಳ ಜೀರ್ಣೋದ್ಧಾರಗಳಿಗೆ ಹೆಚ್ಚಿನ ಮಹತ್ವವಿದ್ದಿತು. ಲೌಕಿಕ ಶಿಕ್ಷಣವಿಲ್ಲದಿದ್ದರೂ ಆತ್ಮ ಜಾಗೃತಿ, ಸಮತ್ವ, ಸದಾಚಾರಗಳ ಮೂಲಕ ಆತ್ಮಕಲ್ಯಾಣದ ಮಾರ್ಗವನ್ನು ಅನುಸರಿಸಿ ಬದುಕನ್ನು ಸಾರ್ಥಕ ಪಡಿಸಿಕೊಳ್ಳಬಹುದೆಂಬುದನ್ನು 20ನೆಯ ಶತಮಾನದ ಆರಂಭದಲ್ಲಿ ಸಿದ್ಧಸಾಗರ ಮಹಾರಾಜರು ಜನಮನದಲ್ಲಿ ಬಿಂಬಿಸಿ ೧೯೦೭ರಲ್ಲಿ ಸಮಾಧಿ ಮರಣವನ್ನು ಸ್ವೀಕರಿಸಿದರು. ಇವರನ್ನು ಕುರಿತು ಬೆಳಗಾವಿಯ ಜನಪದ ಕವಿ ದ್ವಾರಪಾಲ ಮರಾಠಿಯಲ್ಲಿ ಹಾಗೂ ಪ್ರೊ. ಭುಜೇಂದ್ರ ಮಹೀಶವಾಡಿ ಅವರು ಕನ್ನಡದಲ್ಲಿ ಚರಿತ್ರೆ ಬರೆದಿದ್ದಾರೆ.

## 2. ಚಾರಿತ್ರ ಚಕ್ರವರ್ತಿ ಶ್ರೀ ಶಾಂತಿಸಾಗರ ಮಹಾರಾಜರು

ಆಚಾರ್ಯ ಶಾಂತಿಸಾಗರ ಮಹಾರಾಜರು ಚಿಕ್ಕೋಡಿ ತಾಲೂಕಿನ ಭೋಜ ಗ್ರಾಮದ ಭೀಮಗೌಡ-ಸತ್ಯವತಿಯವರ ಮಗನಾಗಿ ಪ್ರಾಮಾಣಿಕತೆ, ಧರ್ಮಶ್ರದ್ಧೆ, ಸದಾಚಾರಸಂಪನ್ನ ಕೃಷಿಕ ಮನೆತನದಲ್ಲಿ ೧೮೭೨ರಲ್ಲಿ ಜನಿಸಿದರು. ಇವರ ಮೊದಲ ಹೆಸರು ಸಾತಗೌಡ. ಇವರಿಗೆ ಮರಾಠಿಮಾಧ್ಯಮದಲ್ಲಿ 3ನೆಯ ವರ್ಗದವರೆಗೆ ಶಿಕ್ಷಣವಾಯಿತು. 9ನೆಯ ವಯಸ್ಸಿನಲ್ಲಿ ಅಣ್ಣನ ಮದುವೆಯಲ್ಲಿ ೫ ವರ್ಷಪ್ರಾಯದ ಕನ್ನೆಯೊಂದಿಗೆ ವಿವಾಹವೂ ಆಯಿತು - ಒಂದು ರೀತಿ ಮಕ್ಕಳಆಟದಲ್ಲಿನ ಲಗ್ನದಂತೆ. ಮುಂದೆ ಆರೇ ತಿಂಗಳಲ್ಲಿ ಬಾಲಪತ್ನಿಯ ಮರಣ. ನಂತರ ಮರುಮದುವೆಗೆ ಎಷ್ಟೇ ಒತ್ತಾಯಬಂದರೂ ಒಪ್ಪಲಿಲ್ಲ. ವೈರಾಗ್ಯ ಭಾವದಿಂದ ಬಹ್ಮಚಾರಿಯಾಗಿದ್ದು ಸನ್ಯಾಸದ ಮೂಲಕ ಆತ್ಮಕಲ್ಯಾಣದ ದಾರಿಹಿಡಿದರು. ಅವರ ಸ್ಥಿತಪ್ರಜ್ಞತೆ ಮುಗ್ಧತೆ ಲೌಕಿಕದಲ್ಲಿ ನಿರಾಸಕ್ತಿ, ಸರ್ವಜೀವಿಗಳ ಬಗೆಗಿನ ದಯಾಭಾವ ಜನರಲ್ಲಿ ಮನೆಮಾತಾಗಿ ಪ್ರಚಾರದಲ್ಲಿದ್ದವು.

ಸಂಸಾರದಲ್ಲಿ ನಿರಾಸಕ್ತಿ, ಮುನಿಧರ್ಮದತ್ತ ಒಲವುಗಳಿದ್ದರೂ ಅವರಿಗೆ ಗುರುವಿನ ಮಾರ್ಗದರ್ಶನ ಸಿಗಲಾರದಾಗಿತ್ತು. ದಿಗಂಬರ ಮುನಿಗಳೇ ವಿರಳವಾಗಿದ್ದ ಕಾಲದಲ್ಲಿ ಅವರಿಗೆ ದೀಕ್ಷೆಕೊಡುವವರಾರು ? ಕೊನೆಗೆ ಉತ್ತೂರ ಗ್ರಾಮದಲ್ಲಿ ಮುನಿಶ್ರೀ ದೇವೇಂದ್ರಕೀರ್ತಿ ಅವರನ್ನು ಸಂಪರ್ಕಿಸಿ, ೪೨ನೆಯ ವಯಸ್ಸಿನಲ್ಲಿ ೧೯೧೪ರಲ್ಲಿ ಕ್ಷುಲ್ಲಕದೀಕ್ಷೆ ೧೯೧೭ ರಲ್ಲಿ ಐಲಕದೀಕ್ಷೆ ೧೯೧೭ರಲ್ಲಿ ಆದಿಸಾಗರರಿಂದ ಯರನಾಳದಲ್ಲಿ ಮುನಿದೀಕ್ಷೆಯನ್ನು ಪಡೆದರು. ಕಠಿಣ ತಪಸ್ಸು, ಸ್ವಾಧ್ಯಾಯ, ಪರಿಶುದ್ಧ ಚಾರಿತ್ರ್ಯಗಳ ಮೂಲಕ ಯತಿಧರ್ಮದ ಆಚರಣೆಗೆ ತಾವೇ ಮಾದರಿಯಾದರು. ಅವರು ಉಗ್ರತಪಸ್ಸು, ಧ್ಯಾನ, ಉಪವಾಸ ಹಾಗೂ ವ್ರತಗಳ ಸಂದರ್ಭದ ಅನೇಕ ಪವಾಡಗಳು ಪ್ರಚಲಿತದಲ್ಲಿವೆ. ದಕ್ಷಿಣ-ಉತ್ತರ ಭಾರತಗಳ ವಿಹಾರದ ಮೂಲಕ ಸಮಗ್ರ ಭಾರತದಲ್ಲಿ ಜೈನಧರ್ಮ, ಅಹಿಂಸೆ, ಸದಾಚಾರಗಳನ್ನು ಪ್ರಸಾರಮಾಡಿದ ಸಾತ್ವಿಕ ಮೂರ್ತಿ ಶಾಂತಿಸಾಗರರು ಸಿದ್ಧಕ್ಷೇತ್ರ ಕುಂಥಲ ಗಿರಿಯಲ್ಲಿ ೩೬ ದಿನಗಳ ಕಾಲ ಯಮಸಲ್ಲೇಖನ ಸ್ವೀಕರಿಸಿ ೧೮-೯-೧೯೫೫ರಂದು ಪ್ರಾತಃಕಾಲ ಸಮಾಧಿ ಮರಣದಿಂದ ಭೌತಿಕ ದೇಹವನ್ನು ತೊರೆದರು.

ದಿನಾಂಕ 8-9-1955ರಂದು ನೀಡಿದ ಅವರ ಅಂತಿಮ ಉಪದೇಶದ ಸಾರ :

"ಪ್ರತಿಯೊಬ್ಬರೂ ನಿತ್ಯವೂ ಪಂಚನಮಸ್ಕಾರ ಮಂತ್ರವನ್ನು ಪಠಿಸಬೇಕು. ಸಂಯಮಧಾರಿಯಾಗಿರಬೇಕು. ತ್ಯಾಗ ಮಾಡಬೇಕು. ಸತ್ಯ ಅಹಿಂಸೆಗಳನ್ನು ಪಾಲಿಸಬೇಕು; ಸತ್ಯದಲ್ಲಿ ಸಮತ್ವವಿದೆ. ಅಹಿಂಸೆಯಲ್ಲಿ ಜೀವಗಳ ರಕ್ಷಣೆಯಿದೆ."

ಆಚಾರ್ಯ ಶಾಂತಿಸಾಗರರ ಉಪದೇಶ ಯಾವಾಗಲೂ ಸಂಕ್ಷೇಪವಾಗಿರುತ್ತಿತ್ತು, ಸರಳವಾಗಿರುತ್ತಿತ್ತು, ಸ್ವಾನುಭವ ಸ್ವಆಚರಣೆಗಳಿಂದಾಗಿ ಪರಿಣಾಮಕಾರಿಯಾಗಿರುತ್ತಿತ್ತು.

ಸನಾತನ ಮುನಿಧರ್ಮವನ್ನು ಆಚರಣೆಯಲ್ಲಿ ತಂದ ಸಂಪ್ರದಾಯವಾದಿ ಆಚಾರ್ಯ ಶಾಂತಿಸಾಗರರು "ಹರಿಜನರನ್ನು ನೋಡಿ ನನಗೆ ಬಹಳ ದಯೆ ಬರುತ್ತದೆ. ಆ ಬಡಪಾಯಿಗಳ ಮೇಲೆ ನನಗೆ ಸ್ವಲ್ಪವೂ ದ್ವೇಷವಿಲ್ಲ. ಅವರ ಕಷ್ಟವನ್ನು ದೂರಮಾಡಬೇಕು. ಎಲ್ಲರ ಮೇಲೂ ದಯೆ ತೋರಿಸುವುದು ಜೈನಧರ್ಮದ ಮೂಲ ಸಿದ್ಧಾಂತವಾಗಿದೆ." "ಪಾಪ ಬುದ್ಧಿಯನ್ನು ತ್ಯಾಗ ಮಾಡುವುದರಿಂದ ಮಾತ್ರವೇ ಜೀವನ ಉದ್ಧಾರವಾಗುತ್ತದೆ. ಹರಿಜನರಿಂದ ಹೆಂಡ ಕುಡಿಯುವುದನ್ನು ಬಿಡಿಸಿರಿ. ಮಾಂಸ ತಿನ್ನುವುದರಿಂದ ರಕ್ಷಿಸಿರಿ. ಅವರ ಬಡತನದ ಕಷ್ಟವನ್ನು ದೂರಮಾಡಿರಿ. ಪ್ರತಿಯೊಬ್ಬ ಬಡವರಿಗೂ ಉಚಿತವಾಗಿ ಭೂಮಿ ನೀಡಿರಿ. ಇದರಿಂದ ಮಾತ್ರವೇ ನೀವು ಹರಿಜನರ ಜೀವನವನ್ನು ಮೇಲಕ್ಕೆ ಎತ್ತಲು ಸಾಧ್ಯವಾಗುವುದು." - ಎಂಬ ಮಾತುಗಳನ್ನು ಗಮನಿಸಿದರೆ ಸನಾತನ ಧರ್ಮದ ಆಚರಣೆಯೊಂದಿಗೆ ಸರ್ವ ಜೀವಿಗಳಲ್ಲಿ ದಯೆ, ಸಮಾನಭಾವ, ಅನುಕಂಪೆಗಳನ್ನು ಹೊಂದಿದ್ದರೆಂಬುದು ಸ್ಪಷ್ಟವಾಗುತ್ತದೆ. ಪುಕ್ಕಟ್ಟೆ ಪ್ರಚಾರಕ್ಕಾಗಿ ದೀನ-ದಲಿತರ ಉದ್ಧಾರದ ಬಗ್ಗೆ ಘೋಷಣೆ ಕೊಡುವ ಇಂದಿನ ಅನೇಕ ಜನರನ್ನು ಕಂಡಾಗ, ಪ್ರಚಾರ ಪ್ರಸಾರಗಳಿಂದ ದೂರವಿದ್ದ, ಲೌಕಿಕವನ್ನು ಸಂಪೂರ್ಣವಾಗಿ ತ್ಯಾಗ ಮಾಡಿದ್ದ, ವೀತರಾಗ ಮುನಿಗಳ ಪರಿಶುದ್ಧ ಅಂತಃಕರಣದ ಈ ಚಿಂತನೆ, ಮಾರ್ಗದರ್ಶನ ಯಾವ ಕಾಲಕ್ಕೂ, ಯಾವ ದೇಶಕ್ಕೂ ಮಾರ್ಗದರ್ಶಿಯಾದುದು ಎಂಬುದು ನಿಸ್ಸಂದೇಹ.

ಇಂಥದೇ ಇನ್ನೊಂದು ಸಂದರ್ಭ ಈ ಲೇಖಕ ಬಾಲಕನಿದ್ದಾಗ ಕಂಡುದು. ೧೯೫೩-೫೪ ನೆಯ ಇಸ್ವಿಯಲ್ಲಿ ಆಚಾರ್ಯ ಶಾಂತಿಸಾಗರ ಮಹಾರಾಜರು ಕುಂಥಲಗಿರಿಗೆ ವಿಹಾರ ಕೈಗೊಳ್ಳುವ ಪೂರ್ವದಲ್ಲಿ ಶೇಡಬಾಳ ಆಶ್ರಮದಲ್ಲಿ ಕೆಲವು ದಿನಗಳನ್ನು ಕಳೆದರು. ನಿತ್ಯ ಪ್ರವಚನ ಕೇಳಲು ಸಾವಿರಾರು ಜನ ಭಾವಿಕರು ಸೇರುತ್ತಿದ್ದರು. ಅವರ ಆಗಮನ ಯಾವ ಪತ್ರಿಕೆ ಅಥವಾ ಪ್ರಕಟಣೆಯ ಮೂಲಕ ಪ್ರಚಾರಗೊಳಿಸಿದುದಾಗಿರಲಿಲ್ಲ. ಒಂದು ದಿನ ಪ್ರವಚನ ಮುಗಿಯುವ ಪೂರ್ವದಲ್ಲಿ ಸಾಯಂಕಾಲ ೪-೦೦, ೪-೩೦ ರ ಸಮಯ. ಒಬ್ಬ ಅಜಾನುಬಾಹು, ಬೊಕ್ಕತಲೆಯ, ನವುರಾದ ಗಡ್ಡಬಿಟ್ಟು ದಪ್ಪ ಖಾದೀದೋತರ ನೆಹರೂ ಶರ್ಟ ಧರಿಸಿದ ವ್ಯಕ್ತಿ, ಕೈಯಲ್ಲಿ ಒಂದು ಕೋಲು ಹಿಡಿದು ಬಂದು, ಮುನಿಗಳಿಗೆ -ಮುನಿಸಂಘಕ್ಕೆ ಭಕ್ತಿಯಿಂದ ನಮಸ್ಕರಿಸಿ, ಸಮೀಪದ ಸ್ಥಳದಲ್ಲಿ ಕುಳಿತು ಪ್ರವಚನ ಆಲಿಸತೊಡಗಿದರು. ಅಲ್ಲಿಯವರೆಗೆ ಪ್ರವಚನದಲ್ಲಿ ತನ್ಮಯರಾದ ಶ್ರಾವಕರಲ್ಲಿ ಬಂದ ವ್ಯಕ್ತಿಯ ಬಗ್ಗೆ ಗುಸುಗುಸು ಪ್ರಾರಂಭವಾಯಿತು. ಮಹಾರಾಜರು ನಿತ್ಯದಂತೆ ಪ್ರವಚನ ಮುಂದುವರಿಸಿ ಪ್ರವಚನ ಮುಗಿದ ಮೇಲೆ ಬಂದ ವ್ಯಕ್ತಿಯ ಯೋಗಕ್ಷೇಮವನ್ನು ವಿಚಾರಿಸಿದರು. ಆ ವ್ಯಕ್ತಿ ತಮ್ಮ ಸ್ವಾಸ್ಥ್ಯವನ್ನು ತಿಳಿಸಿ ಯಾವುದಾದರೂ ವ್ರತವನ್ನು ನೀಡಲು ಕೇಳಿಕೊಂಡರು. ಆಗ

ಮಹಾರಾಜರು ''ಬಾವುರಾವ್, ನೀವು ಈಗಾಗಲೆ ಮಾಡುತ್ತಿರುವ ಕಾರ್ಯ ಮಹಾನ್. ಗೃಹಸ್ಥನು ಅನುಸರಿಸಬೇಕಾದ ಅಣುವ್ರತಗಳನ್ನು ತಪ್ಪದೆ ಪಾಲಿಸುತ್ತಿರುವಿರಿ. ಅಲ್ಲದೆ ಸಮಾಜದ ಬಡವ, ದೀನ-ದಲಿತರಿಗಾಗಿ ನೀವು ಹಗಲಿರುಳೂ ಶ್ರಮಿಸುತ್ತಿರುವುದನ್ನು ಕಂಡರೆ ನಿಮಗೆ ಬೇರಾವ ವ್ರತದ ಅಗತ್ಯವೂ ಇಲ್ಲ.'' ಎಂದು ಆಶೀರ್ವದಿಸಿದರು. ಬಾಲಕುತೂಹಲದಿಂದ ಇದನ್ನೆಲ್ಲ ನೋಡುತ್ತ, ಕೇಳುತ್ತಲಿದ್ದ ನನಗೆ ಬಂದವರು ಪದ್ಮಶ್ರೀ ಡಾ. ಕರ್ಮವೀರ ಭಾವುರಾವ ಪಾಟೀಲರೆಂಬುದು ತರುವಾಯ ತಿಳಿಯಿತು. ಜಾತಿಯಾಧಾರಿತ ಧರ್ಮವನ್ನು ಬದಿಗಿರಿಸಿ, ಹರಿಜನ ಬಾಲಕರನ್ನು ಮನೆಯಲ್ಲಿರಿಸಿಕೊಂಡು, ವಿದ್ಯಾಭ್ಯಾಸದ ಏರ್ಪಾಡುಮಾಡಿ, ರೈತ ಶಿಕ್ಷಣ ಸಂಸ್ಥೆಯ ಸಾವಿರಾರು ಸಂಸ್ಥೆಗಳ ಮೂಲಕ ಗ್ರಾಮೀಣ ಪ್ರದೇಶದ ದಲಿತರನ್ನು ಸುಶಿಕ್ಷಿತಗೊಳಿಸಿ ಆಧುನಿಕ ಮಹಾರಾಷ್ಟ್ರದ ನಿರ್ಮಾಣದಲ್ಲಿ ಮಹತ್ವದ ಕೊಡುಗೆಯನು ನೀಡಿದ ಪ್ರಗತಿಪರ ದೃಷ್ಟಿಯ ಕರ್ಮವೀರ ಹಾಗೂ ಸನಾತನ ಮುನಿಪರಂಪರೆಯ ಆದರ್ಶ ಶಾಂತಿಸಾಗರರು, ಇವರೀರ್ವರ ದೃಷ್ಟಿಕೋನದಲ್ಲಿನ ಸಮಾನತೆಯನ್ನು ಕಂಡು ಆಶ್ಚರ್ಯವಾಯಿತು. ಅವರ ಬಗ್ಗೆ ಭಕ್ತಿ, ಶ್ರದ್ಧೆ ಅಧಿಕವಾಯಿತು.

'ಧರ್ಮದ ರಕ್ಷಣೆ ಮಾಡಿರಿ, ಸಮಾಜದ ರಕ್ಷಣೆ ಮಾಡಿರಿ. ಸಾಧು ಸಂತರನ್ನು ರಕ್ಷಿಸಿರಿ, ವಿದ್ವಾಂಸರನ್ನು ಗೌರವಿಸಿರಿ' ಎಂದು ಆಚಾರ್ಯ ಶಾಂತಿಸಾಗರರು ಜಿನಸೇನ ಭಟ್ಟಾರಕರಿಗೆ ನೀಡಿದ ಉಪದೇಶದಲ್ಲಿ ಸಮಾಜದ ಹಿತಕ್ಕಾಗಿ ಭಟ್ಟಾರಕರು ಕೈಗೊಳ್ಳಬೇಕಾದ, ಶ್ರಾವಕರಿಗೆ ಮಾರ್ಗದರ್ಶನ ಮಾಡಬೇಕಾದ ಮಹತ್ವದ ವಿಚಾರಗಳು ಅಡಕವಾಗಿವೆ. ಧರ್ಮ-ಸಮಾಜಗಳನ್ನು ಬೇರ್ಪಡಿಸಲಿಕ್ಕಾಗದು, ಅವುಗಳ ರಕ್ಷಣೆಯಾಗಬೇಕಾಗದರೆ ಸಾಧು - ಸಂತರಂತೆಯೆ ವಿದ್ವಾಂಸರ ರಕ್ಷಣೆ, ಗೌರವ, ಪ್ರೋತ್ಸಾಹಗಳೂ ಅಗತ್ಯವೆಂಬುದನ್ನು ಪೂಜ್ಯರು ಅರಿತಿದ್ದರು. ಸಂದರ್ಭ ಬಂದಾಗಲೆಲ್ಲ ಅವರ ಉನ್ನತಿಗಾಗಿ ಶ್ರಮಿಸಿದರು.

ದಕ್ಷಿಣಭಾರತ, ಉತ್ತರಭಾರತಗಳ ಕ್ಷೇತ್ರದರ್ಶನದೊಂದಿಗೆ ದೇಶದುದ್ದಕ್ಕೂ ಸಂಚರಿಸಿ ಗ್ರಾಮ,ನಗರ, ಪಟ್ಟಣ ಪ್ರದೇಶಗಳಲ್ಲಿ ಧರ್ಮೋಪದೇಶ ನೀಡಿದರು.

ಈ ಎಲ್ಲ ವಿಹಾರ ಸಂದರ್ಭಗಳಲ್ಲಿ ಅವರು ಕಂಡುಕೊಂಡಂತೆ ಬೆಳಗಾವಿ ಜಿಲ್ಲೆಯ ಜೈನಸಂಸ್ಕೃತಿಯ ಪ್ರಮುಖ ಸ್ಥಳಗಳು - ನಸಲಾಪುರ, ಕೊಣ್ಣೂರು, ಐನಾಪುರ, ಶೇಡಬಾಳ, ಮಹಾರಾಷ್ಟ್ರದ ದಾನವಾಡ, ಫಲಟಣ, ಬಾರಾಮತಿ, ದಹಿಗಾವ ಮೊದಲಾದವು, ಈ ಪ್ರದೇಶಗಳ ಜನರು ಧರ್ಮದಲ್ಲಿ ಶ್ರದ್ಧೆಯುಳ್ಳವರೆಂದೂ, ಅಂಥಲ್ಲಿ ಮುನಿಗಳು ವಿಹಾರಮಾಡುವ ಮೂಲಕ ಆ ಧರ್ಮಶ್ರದ್ಧೆಯನ್ನು ಜಾಗೃತವಾಗಿಡಬಹುದೆಂದೂ, ಅದರಂತೆ ಸುಸಂಸ್ಕೃತ ಪ್ರದೇಶದ ವಿಹಾರದ ಮೂಲಕ ಮುನಿಗಳ ಸ್ವಾಧ್ಯಾಯ ತಪ, ಸಂಯಮಗಳೊಂದಿಗೆ ರತ್ನತ್ರಯ ಕುಶಲವೆಂಬುದನ್ನು ಇತರರಿಗೆ ತಿಳಿಸಿಹೇಳುವ ಮೂಲಕ ಮಾರ್ಗದರ್ಶನ ಮಾಡಿದ್ದಾರೆ. ಹೀಗೆ ಶಾಸ್ತ್ರದಲ್ಲಿ ಸಿಗದ ಅನೇಕ ವಿಚಾರಗಳ ಬಗ್ಗೆ ಅವರು ಮುನಿಪರಂಪರೆಗೆ ಮಾರ್ಗದರ್ಶನ ನೀಡಿದುದು ಮಹತ್ವ ಪೂರ್ಣವಾಗಿದೆ. ಆಚಾರ್ಯ ಪಾಯಸಾಗರರ ಪೂರ್ವಾಶ್ರಮದ ಸಂಯಮರಹಿತ ಬದುಕಿನ ಬಗ್ಗೆ ಕಿಂಚಿತ್ತೂ ಯೋಚಿಸದೆ ಆ ಸಂದರ್ಭದಲ್ಲಿನ ವೈರಾಗ್ಯದ ತೀವ್ರತೆಯನ್ನು ಕಂಡು, ಅದು 'ಭದ್ರಜೀವಿ' ಎಂಬುದನ್ನು ಅರಿತು ಅವರಿಗೆ ದೀಕ್ಷೆಯನ್ನೀಯುವ ಮೂಲಕ ವೈಯಕ್ತಿಕವಾಗಿ ಆ ಒಂದು ಆತ್ಮಕ್ಕೂ ಹಾಗೂ ತನ್ಮೂಲಕ ಅವರಿಂದ ದೇಶದಾದ್ಯಂತ ಧರ್ಮಪ್ರಭಾವನೆಗೂ ಕಾರಣರಾದುದು ಅಪೂರ್ವ ಕೊಡುಗೆಯಾಗಿದೆ.

ಆಚಾರ್ಯ ಶಾಂತಿಸಾಗರರು ಶಿಕ್ಷಣಕ್ಕೆ, ಅದರಲ್ಲೂ ದೀನ, ದಲಿತ, ಅನಾಥ ಮಕ್ಕಳ ಶಿಕ್ಷಣದ ಬಗ್ಗೆ ಆಸಕ್ತಿವಹಿಸಿ ಶೇಡಬಾಳದಲ್ಲಿ ಅನಾಥ ಬಾಲಕರಿಗಾಗಿ ಆಶ್ರಮ (ಗುರುಕುಲ ಶಿಕ್ಷಣ ಸಂಸ್ಥೆ) ಸ್ಥಾಪಿಸಲು ಪ್ರೇರಣೆ ನೀಡಿದರು. ಇಂದು ಅದು ಅವರೂರಿನಲ್ಲಿಯೆ ಮುಂದುವರಿದಿರುವ, ಅತಿಶಯ ಕ್ಷೇತ್ರವಾಗಿ ಹೆಸರು ಪಡೆದಿದೆ. ಶಿಕ್ಷಣದ ಜೊತೆಗೆ 'ಧಾರ್ಮಿಕ ಪಾಠಶಾಲೆ'ಗಳ ಆರಂಭದ ಅಗತ್ಯವನ್ನು ಅವರು ಪ್ರತಿಪಾದಿಸುತ್ತ ಕಾರ್ಯಗತಗೊಳಿಸುತ್ತ ಬಂದವರು.

ಮಿಥ್ಯಾತ್ವದಿಂದ ಕೂಡಿದ ಅಂದಿನ ಜನತೆಯಲ್ಲಿ ಜಾಗೃತಿಯನ್ನು ಮೂಡಿಸಿ, ಮೂಢನಂಬಿಕೆಗಳನ್ನು, ಮಿಥ್ಯಾದೈವಾರಾಧನೆಯನ್ನು ನಿವಾರಿಸಲು ತುಂಬಾ ಪ್ರಯತ್ನಿಸಿದರು. ಅಂಧಶ್ರದ್ಧೆಯನ್ನು ಹೋಗಲಾಡಿಸಿ ಪಂಚಣಮೋಕಾರ ಮಂತ್ರದ ಮಹತ್ವವನ್ನು ಪ್ರತಿಪಾದಿಸಿದರು. ಜೈನಸಂಸ್ಕೃತಿ, ಸಿದ್ಧಾಂತಗಳು ತಲೆತಲಾಂತರ ಮುಂದುವರಿಯಬೇಕಾದರೆ ಆಚಾರ್ಯರು ಬರೆದ ಧರ್ಮಗ್ರಂಥಗಳು ಮೂಲ ಸ್ವರೂಪದಲ್ಲಿ, ಟೀಕೆ-ಟಿಪ್ಪಣಿಗಳೊಂದಿಗೆ ಎಲ್ಲರಿಗೂ ಉಪಲಬ್ಧವಾಗಬೇಕೆಂಬ ಜ್ಞಾನದಾಸೋಹದ ಬಗ್ಗೆ ಖಚಿತವಾದ ಅಭಿಪ್ರಾಯವುಳ್ಳವರಾಗಿದ್ದರು. ಫಲಟಣದಲ್ಲಿ ಸ್ಥಾಪಿತವಾದ 'ಆಚಾರ್ಯ ಶಾಂತಿಸಾಗರ ದಿಗಂಬರ ಜೈನ ಜಿನವಾಣಿ ಜೀರ್ಣೋದ್ಧಾರ ಸಂಸ್ಥೆ' - ಈ ದಿಸೆಯಲ್ಲಿ ಮಾಡಿದ ಕಾರ್ಯ ಯಾವ ಕಾಲಕ್ಕೂ ಸ್ಮರಣೀಯವಾಗಿದೆ. ನೂರಾರು ಶಾಸ್ತ್ರಗಳು ಈ ಸಂಸ್ಥೆಯಿಂದ ಪ್ರಕಟವಾಗಿ ಸ್ವಾಧ್ಯಾಯಪ್ರಿಯರಿಗೆ ವಿನಾಮೂಲ್ಯವಾಗಿ ದೊರೆಯುವಂತಾದುದು ಶ್ರುತಸಂರಕ್ಷಣೆಯ ವಿಷಯದಲ್ಲಿ ಅವರು ವಹಿಸಿದ ಪಾತ್ರ ನಿತ್ಯ ನೂತನವಾದುದಕ್ಕೆ ನಿದರ್ಶನ. ಅದರಂತೆ 'ಧವಲಾ''ಜಯಧವಲಾ' 'ಮಹಾಧವಲಾ' ದಂಥ ಅಪೂರ್ವ ಗ್ರಂಥಗಳು ಓದಲು ಲಭ್ಯವಿರದೆ, ಕೇವಲ ಪೂಜೆಗೊಳುತ್ತಲಿದ್ದುದನ್ನು ಕಂಡು ಅವುಗಳ ಪ್ರಕಟಣೆಗಾಗಿ ಅವರು ನೀಡಿದ ಪ್ರೇರಣೆ, ನಿರ್ಮಿಸಿದ ಪರಿಸರ, ನಿಯೋಜಿಸಿದ ಪಂಡಿತವರ್ಗ, ಶಾಶ್ವತರಕ್ಷಣೆಯ ದೃಷ್ಟಿಯಿಂದ ಮುದ್ರಣದೊಂದಿಗೆ ತಾಮ್ರಪತ್ರಗಳಲ್ಲಿಯೂ ಅಕ್ಷರಗಳನ್ನು ಕೊರೆಯಿಸಿದುದನ್ನು ಕುರಿತು ಚಿಂತಿಸಿದರೆ, ಮೇಲ್ನೋಟಕ್ಕೆ ತೀರ ಸಾಮಾನ್ಯರಂತೆ ಕಾಣುತಿದ್ದ, ವಿದ್ವತ್ತಿನ ಪ್ರದರ್ಶನವಿಲ್ಲದ, ಸರಳ-ಸುಲಭ ಮಾತುಗಳಿಂದ ಕೂಡಿದ, ಆದರೆ ತಪಸ್ಸಿನ ತೇಜಸ್ಸಿನಿಂದ ತುಂಬಿದ ವ್ಯಕ್ತಿಯಲ್ಲಿನ ಮಹಾಚೈತನ್ಯದ ದರ್ಶನವಾಗುತ್ತದೆ.

### 3. ಸ್ಯಾದ್ವಾದ ಕೇಸರಿ ಆಚಾರ್ಯ ಶ್ರೀ ಪಾಯಸಾಗರ ಮಹಾರಾಜರು

ಅಕ್ಷರಾಭ್ಯಾಸವನ್ನೇ ಅರಿಯದ ಶ್ರೀ ಸಿದ್ಧಸಾಗರ ಮಹಾರಾಜರು ದೀಕ್ಷೆವಹಿಸಿ ಶಾಸ್ತ್ರಾಭ್ಯಾಸ ಮಾಡಿ, ಆತ್ಮಧ್ಯಾನ, ಸಚ್ಚಾರಿತ್ರ್ಯ ಹಾಗೂ ಉಪದೇಶಗಳ ಮೂಲಕ ಜನರಲ್ಲಿ ಧಾರ್ಮಿಕ ಶ್ರದ್ಧೆಯನ್ನು ಪ್ರಚಾರಪಡಿಸಿದರೆ, ಅದನ್ನು ಇನ್ನೂ ಅಧಿಕಗೊಳಿಸಿದ ಆಚಾರ್ಯ ಪಾಯಸಾಗರರು, ಲೌಕಿಕ ಶಿಕ್ಷಣ ಪಡೆಯುವ ಅವಕಾಶವನ್ನು ಹೊಂದಿದ್ದರೂ ಕೇವಲ ಎರಡನೆಯ ವರ್ಗಕ್ಕೆ ಅದು ಕುಂಠಿತವಾದದ್ದು ಜ್ಞಾನಾವರಣೀಯ ಕರ್ಮದ ಫಲವಾಗಿ. ಗೋಕಾಕದ ಡೋಂಗರೆ ಮನೆತನದಲ್ಲಿ ೧೮೮೮ರಲ್ಲಿ ಜನಿಸಿದ ಪೀತಾಂಬರ ತನ್ನ ಒಂಭತ್ತನೆಯ ವಯಸ್ಸಿನಲ್ಲಿಯೆ ತಂದೆ-ತಾಯಿಗಳನ್ನು ಕಳೆದುಕೊಂಡು, ಅಜ್ಜಿಯ ಅಕ್ಕರೆಯಲ್ಲಿ ವಿದ್ಯೆಗೆ ಶರಣು ಹೊಡೆದು ನಾಟಕದ ಗೀಳನ್ನು ಹಚ್ಚಿಕೊಂಡ. ಗೋಕಾಕಕ್ಕೆ ಬಂದಿದ್ದ ಕೊಣ್ಣೂರ ನಾಟಕ ಕಂಪನಿ ಸೇರಲು ಹೋಗಿ ಸಂಭಾಷಣೆ ಹೇಳಲಿಕ್ಕಾಗದೆ ಹೊರಬಂದು ಅಪಮಾನದಿಂದ ಬೆಂದು ಗೆಳೆಯನೊಂದಿಗೆ ಮುಂಬಯಿಗೆ ಹೋಗಿ ಬಟ್ಟೆ ಗಿರಣಿಯಲ್ಲಿ

ಕೆಲಸಕ್ಕೆ ಸೇರಿದ. ಬಿಡುವಿನ ವೇಳೆಯಲ್ಲಿ ಇತರ ಕಾರ್ಮಿಕರೊಂದಿಗೆ ಭಜನೆ ಕೀರ್ತನೆಗಳಲ್ಲಿ ಆಸಕ್ತಿ ತಾಳಿ ಅದರಲ್ಲಿ ಪರಿಣತಿಯನ್ನು ಪಡೆದ. ಕಾರ್ಮಿಕರ ನಾಯಕನಾಗಿ, ಚಳುವಳಿಯ ನೇತೃತ್ವವನ್ನು ವಹಿಸಿ ಹೋರಾಟಕ್ಕಿಳಿದು, ಕೆಲಸವನ್ನು ಬಿಟ್ಟು ಕಾಶಿಗೆ ಹೋಗಿ ಸ್ವಯಂ ಸಾಧುವೆಂದು ಘೋಷಿಸಿಕೊಂಡು ಕಾವಿಬಟ್ಟೆ ರುದ್ರಾಕ್ಷಿ ತೊಟ್ಟು 'ಸಿದ್ಧಪುರುಷ'ನಾಗಿ ಪ್ರವಚನ ಮಾಡುತ್ತ ದೇಶಸಂಚಾರ ಕೈಕೊಂಡ. ಸೊಲ್ಲಾಪುರದ ಸಿದ್ಧರಾಮನ ಗುಡಿಯಲ್ಲಿ ನಾಲ್ಕು ತಿಂಗಳು ಪ್ರವಚನ ಮಾಡಿ, ಬಾಗಿಲಕೋಟೆಗೆ ಆಗಮಿಸಿದಾಗ ಕೊಣ್ಣೂರ ಕಂಪನಿ ಅಲ್ಲಿಯೇ ಕ್ಯಾಂಪ್ ಮಾಡಿ, ಕಷ್ಟದಲ್ಲಿತ್ತು. ಅದಕ್ಕೆ ಜೀವತುಂಬಲು ಪೀತಾಂಬರನ ಅಗತ್ಯವುಂಟಾಯಿತು. ಅವನೂ ಕಾವಿಬಟ್ಟೆ ಕಿತ್ತೆಸೆದು ನಾಟಕ ಕಂಪನಿ ಸೇರಿ, ಜನಪ್ರಿಯ ಹಾಸ್ಯ ನಟನಾಗಿ 'ಹಾಸ್ಯ ರತ್ನಾಕರ'ನೆಂಬ ಹೆಸರು ಪಡೆದನು. ಕಂಪನಿಯ ಎಲ್ಲ ಜವಾಬ್ದಾರಿ ಪೀತಾಂಬರನ ಮೇಲೆ ಬಿದ್ದಿತು. ನಾಟಕಗಳೇನೋ ಜನದಟ್ಟಣೆಯಿಂದ ಸಾಗುತ್ತಿದ್ದವು. ಆದರೆ ಪೀತಾಂಬರನಿಗೆ ವ್ಯವಹಾರದತ್ತ ಗಮನವಿರಲಿಲ್ಲ. ಧಾರಾಳ ಖರ್ಚಿನಿಂದ ಕಂಪನಿ ಆರ್ಥಿಕ ಮುಗ್ಗಟ್ಟಿನಿಂದ ಮುಗ್ಗರಿಸಿತು. ಪೀತಾಂಬರ ಪುನಃ ಗೋಕಾಕಕ್ಕೆ ಬಂದು ನಿಂತ. ಅವನ ಮದುವೆಯ ಪ್ರಸ್ತಾಪ ಬಂದಾಗ 'ನಾಟಕದ ಗೀಳು ಇರಿಸಿಕೊಂಡವನಿಗೆ ಯಾರು ಹೆಣ್ಣು ಕೊಡುವರು ?' ಎಂಬ ಮಾತು ಕಿವಿಗೆ ಬಿದ್ದು, 'ಈ ಜನ್ಮದಲ್ಲಿಯೆ ಮದುವೆಯಾಗುವುದಿಲ್ಲ' ಎಂದು ಪ್ರತಿಜ್ಞೆಮಾಡಿದ.

ಚಾರಿತ್ರ್ಯ ಚಕ್ರವರ್ತಿ ಆಚಾರ್ಯಶಾಂತಿಸಾಗರ ಮಹಾರಾಜರ ಚಾತುರ್ಮಾಸ ಸಮೀಪದ ಕೊಣ್ಣೂರಿನಲ್ಲಿ ಜರುಗುತ್ತಿತ್ತು. ಸುತ್ತ ಮುತ್ತಲಿನ ಜನ ನಿತ್ಯ ಪ್ರವಚನ ಕೇಳಲು ಧಾವಿಸುತ್ತಿದ್ದರು. ಜನರ ಬಾಯಲ್ಲಿ ದಿನ ಬೆಳಗಾದರೆ ಆಚಾರ್ಯರದೇ ಹೆಸರು. ಇದನ್ನು ಕೇಳಿ ಉಳಿದ ಜನರಂತೆ ತಾನು ಆಚಾರ್ಯರನ್ನು ಕಾಣಬೇಕೆಂದು ಪೀತಾಂಬರ ವೇಷ ಭೂಷಣ ಧರಿಸಿಕೊಂಡು ಠೀವಿಯಿಂದಲೇ ಬಂದ. ಜನ ಭಕ್ತಿ ಭಾವದಿಂದ ಮುನಿಗಳಿಗೆ ವಂದಿಸುತ್ತಿದ್ದರೆ, ಕೋಟು ಹಾಕಿಕೊಂಡು, ಟೈಕಟ್ಟಿಕೊಂಡು, ಸುವಾಸನಾ ದ್ರವ್ಯಗಳನ್ನು ಸಿಂಪಡಿಸಿಕೊಂಡು ಬಂದ ರಸಿಕನಿಗೆ ಮುನಿಗಳಿಗೆ ವಂದಿಸುವ ಕ್ರಮವೂ ಗೊತ್ತಿರಲಿಲ್ಲ. ಇದನ್ನೆಲ್ಲ ಗಮನಿಸಿದರೂ ಆಚಾರ್ಯ ಶಾಂತಿಸಾಗರರಿಗೆ ಕೋಪವಿಲ್ಲ. ಬದಲಿಗೆ ಅವನ ಅಜ್ಞಾನದ ಬಗ್ಗೆ ದಯೆ ಉಂಟಾಯಿತು. ಪ್ರವಚನ ಮುಗಿದ ಮೇಲೆ 'ನನಗೂ ನಿಮ್ಮಂತಹ ದೀಕ್ಷೆ ಕೊಡಿರಿ' ಎಂದು ಪೀತಾಂಬರನು ಕೇಳಿದಾಗ ಆ ವ್ಯಕ್ತಿಯು ಭದ್ರಜೀವಿ, ಆತ್ಮಕಲ್ಯಾಣದೊಂದಿಗೆ ಲೋಕಕಲ್ಯಾಣವನ್ನೂ ಮಾಡಬಲ್ಲ ಅವ್ಯಕ್ತ ಶಕ್ತಿಯಿಂದ ಕೂಡಿದವನು, ಅವನಿಗೆ ಕಾಲಲಬ್ಧಿ ಕೂಡಿ ಬಂದಿದೆ ಎಂಬುದನ್ನು ಅರಿತ ಶಾಂತಿಸಾಗರರು ಚಾತುರ್ಮಾಸದ ಕೊನೆಯಲ್ಲಿ ಗೋಕಾಕದಲ್ಲಿ ಅವನಿಗೆ ಬ್ರಹ್ಮಚರ್ಯದೀಕ್ಷೆ ನೀಡಿದರು. ಜನತೆಗೆ ಆಶ್ಚರ್ಯ, ಏನಾಗುತ್ತದೋ ಎಂಬ ಕಳವಳ.

ಆದರೆ ಪೀತಾಂಬರನು ದೀಕ್ಷೆಯಲ್ಲಿ ದೃಢಮನಸ್ಕನಾದನು. ಅವನ ವೈರಾಗ್ಯದ ಹಸಿವೆ ಹೆಚ್ಚಾಯಿತು. ಮುಂದೆ ನಾಲ್ಕೆಂಟು ದಿನಗಳಲ್ಲಿ ಐಲಕ ದೀಕ್ಷೆಯನ್ನು ಪಡೆದು ಪಾಯಸಾಗರರಾದರು. 'ರತ್ನಕರಂಡಕ ಶ್ರಾವಕಾಚಾರ' ಮೊದಲಾದ ಶಾಸ್ತ್ರಗ್ರಂಥಗಳ ಅಧ್ಯಯನದಿಂದ ಸಮ್ಯಕ್ತ್ವ ಬಲಗೊಂಡು, ಜ್ಞಾನದ ಬಲದಿಂದ ಚಾರಿತ್ರ್ಯದಲ್ಲಿಪರಿಣಮಿಸಿತು.

ಜನತೆಯ ಭಾವನೆಗಳನ್ನು ಅರ್ಥಮಾಡಿಕೊಂಡು ಒಲಿಸಿಕೊಳ್ಳಬಲ್ಲ ನುರಿತ ನಟನಿಗೆ ನಾಟಕದ ಬದಲು ಧರ್ಮದ ವಿಚಾರಗಳನ್ನು ದೃಷ್ಟಾಂತಗಳ ಮೂಲಕ ಬೋಧಿಸುವುದು ಕಷ್ಟವಾಗಲಿಲ್ಲ. 'ಭರತೇಶ ವೈಭವ'ವನ್ನು ಲಯಬದ್ಧವಾಗಿ ಹಾಡುತ್ತ,'ಪ್ರವಚನ ಪರಮೇಷ್ಠಿ' 'ಸ್ಯಾದ್ವಾದ ಕೇಸರಿ'

ಬೆಸಿಸಿದರು. ಗುರುಗಳಾದ ಆಚಾರ್ಯ ಶಾಂತಿಸಾಗರರ ಆಶೀರ್ವಾದದಂತೆ ಪ್ರತ್ಯೇಕ ವಿಹಾರ ಮಾಡುತ್ತ ಧರ್ಮ ಜಾಗೃತಿ ಮಾಡಿದರು. ಜೈನ ಹಾಗೂ ಜೈನೇತರರ ಮನಗಳನ್ನು ಗೆದ್ದರು. ಜೀರ್ಣಗೊಂಡ ಜಿನ ಮಂದಿರಗಳ ಜೀರ್ಣೋದ್ಧಾರ ಜಿನಮಂದಿರಗಳಿಲ್ಲದ ಹಳ್ಳಿಗಳಲ್ಲಿ ಜೈನರಿಂದ, ಕೆಲವೆಡೆ ಜೈನೇತರರಿಂದ ಜಿನಮಂದಿರಗಳ ನಿರ್ಮಾಣಕ್ಕೆ ಪ್ರೇರಕ ಶಕ್ತಿಯಾದರು.

ಕೆಲವೆಡೆ ಜೈನೇತರರು ಜಾತ್ರೆಯ ನೆಪದಲ್ಲಿ ಪ್ರಾಣಹಿಂಸೆ ಮಾಡುವುದನ್ನು ಕಂಡು, ಅಹಿಂಸೆಯ ಮಹತ್ವವನ್ನು ತಿಳಿಸಿ ಅವರ ಮನಃಪರಿವರ್ತನೆಯನ್ನು ಮಾಡಿ ಸಾತ್ವಿಕ ಪೂಜೆಗೆ ಅಣಿಗೊಳಿಸಿದರು. 'ಪರಮಾತ್ಮ ಪ್ರಕಾಶ'ವನ್ನು ಅನುವಾದಿಸಿದರು. ಹಾಸ್ಯಭರಿತ ಮಾತು, ದೃಷ್ಟಾಂತಗಳ ಮೂಲಕ ಜನಮನವನ್ನು ಗೆದ್ದು ರತ್ನಾಕರನ 'ಭರತೇಶವೈಭವ'ವನ್ನು ಕರ್ನಾಟಕ - ಮಹಾರಾಷ್ಟ್ರಗಳ ಹಳ್ಳಿಹಳ್ಳಿಗಳಲ್ಲಿ ಪ್ರಚಾರಗೊಳಿಸಿದರು. ಕೊನೆಗೆ ೧೯೫೭ ರಲ್ಲಿ ಸ್ತವನಿಧಿಯಲ್ಲಿ ಸೂರ್ಯೋದಯ ಸಮಯಕ್ಕೆ ತಮ್ಮ ಭೌತಿಕ ಶರೀರವನ್ನು ತೊರೆದರು.

ಉಪವಾಸ, ಧ್ಯಾನ, ತಪಗಳಲ್ಲಿ ತೊಡಗಿದ ಆಚಾರ್ಯ ಪಾಯಸಾಗರರು ಜನಸಾಮಾನ್ಯರ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದರು. ಅಂತಿಮ ಕಾಲದಲ್ಲಿ ಶ್ರಾವಕರೊಬ್ಬರು ಅವರಿಗೆ ಸಲ್ಲೇಖನ ತೆಗೆದುಕೊಳ್ಳುವ ವಿಚಾರವನ್ನು ಕೇಳಿದರಂತೆ. ಅದಕ್ಕೆ ಅವರು 'ಈ ಶರೀರ ಅನೇಕ ರೀತಿಯ ರೋಗ-ರುಜಿನಗಳಿಂದ ಜೀರ್ಣಗೊಂಡಿದೆ. ಸಲ್ಲೇಖನದ ಮೂಲಕ ಆ ಸಮಾಧಿ ಮರಣವನ್ನು ತಾಳುವಷ್ಟು ಗಟ್ಟಿಯಾಗಿಲ್ಲ. ಏನಾದರೂ, ತಪಸ್ಸು ಧ್ಯಾನಗಳ ಮೂಲಕವೇ ಈ ಶರೀರವನ್ನು ಬಿಡಬೇಕು'ಎಂದು ತಿಳಿಸಿದರಂತೆ.

ಧಾರ್ಮಿಕ ಸಂಸ್ಕಾರವುಳ್ಳ ಮನೆಯಲ್ಲಿ ಜನಿಸಿಯೂ ವಿಲಾಸವೃತ್ತಿ ರಸಿಕತೆಗಳಿಂದಾಗಿ ನಾನಾವೇಷತೊಟ್ಟು, ಕಲಾವಿದನಾಗಿ, ನಟನಾಗಿ ಜನಪ್ರಿಯತೆ ಸಂಪಾದಿಸಿಯೂ, ವ್ಯವಹಾರವನ್ನರಿಯದೆ, ದುಂದುವೆಚ್ಚದಿಂದ ಮತ್ತೆ ಕಷ್ಟಕ್ಕೆ ಸಿಲುಕಿ ಇನ್ನೇನು ಹಾಳಾಗಿಹೋಗಬೇಕು ಎನ್ನುವ ಸಂದರ್ಭದಲ್ಲಿ ಕಾಲಲಬ್ಧಿ ಒದಗಿಬಂದು, ಸದ್ಗುರುವಿನ ದರ್ಶನವುಂಟಾಗಿ, ಮನಸ್ಸು ಭೋಗದಿಂದ ವೈರಾಗ್ಯದತ್ತ ತಿರುಗಿ, ಈ ವೈರಾಗ್ಯವು ಶಾಸ್ತ್ರಾಧ್ಯಯನ, ಪ್ರವಚನ, ಚಾರಿತ್ರಗಳಿಂದ ಸಾಲಂಕೃತಗೊಂಡು ಆತ್ಮಕಲ್ಯಾಣಕ್ಕೆ ಕಾರಣವಾದ ಅದ್ಭುತ ದರ್ಶನ ಇಲ್ಲಿದೆ. ಆತ್ಮದ ಏಳು-ಬೀಳಿನ ಚಿತ್ರದ ಹಿನ್ನೆಲೆಯಲ್ಲಿ ಬಿದ್ದ ಜೀವವೂ ಭದ್ರವಾಗುವುದರಲ್ಲಿ ಸಂದೇಹವಿಲ್ಲವೆಂಬುದನ್ನು ಆಚಾರ್ಯ ಪಾಯಸಾಗರರ ಜೀವನ ಸುಂದರವಾಗಿ ಪ್ರತಿಮಿಸುತ್ತದೆ.

### 4. ಆಚಾರ್ಯರತ್ನ ಭಾರತಗೌರವ ದೇಶಭೂಷಣ ಮಹಾರಾಜರು

ಚಿಕ್ಕೋಡಿ ತಾಲೂಕಿನ ಕೋಥಳಿ (ತುಪ್ಪನವಾಡಿ) ಗ್ರಾಮದ ಸಾತಗೌಡ-ಅಕ್ಕ ತಾಯಿ ದಂಪತಿಗಳಿಗೆ ಜನಿಸಿದ ಬಾಲಕನಿಗೆ ಬಾಳಗೌಡನೆಂದು ಹೆಸರಿಡಲಾಯಿತು. ಏಳನೆಯ ವರ್ಷದಲ್ಲಿಯೆ ತಾಯಿ-ತಂದೆಗಳನ್ನು ಕಳೆದುಕೊಂಡು ಅನಾಥನಾದ ಬಾಲಕನಿಗೆ ಅಜ್ಜಿ ಪದ್ಮಾವತಿ ಹಾಗೂ ಚಿಕ್ಕಪ್ಪ ಆಶ್ರಯವಾದರು. ಬಾಲ್ಯದಿಂದಲೂ ಸಂಯಮ-ಅಹಿಂಸೆಗಳನ್ನು ಮೈಗೂಡಿಸಿಕೊಂಡಿದ್ದ ಬಾಳಗೌಡ ತಾರುಣ್ಯಕ್ಕೆ ಕಾಲಿಟ್ಟಾಗ ಮದುವೆಯ ಬಂಧನದಲ್ಲಿ ಸಿಲುಕಿಕೊಳ್ಳಲು ಒಪ್ಪಿಕೊಳ್ಳಲಿಲ್ಲ. ದನಗಳಿಗೂ ನೀರನ್ನು ಸೋಸಿ ಕುಡಿಸುತ್ತಿದ್ದ ಬಾಳಪ್ಪನು ಬಂಧುಗಳಿಂದ ಉಪಸರ್ಗವುಂಟಾದಾಗ ಮನೆಯನ್ನೇ ತೊರೆದು ಗುರುವಿನ ಶೋಧದಲ್ಲಿ ತೊಡಗಿದ. ಆಗ ಆಚಾರ್ಯ ಶ್ರೀ ಜಯಕೀರ್ತಿ ಮಹಾರಾಜರ

ದರ್ಶನವಾಗಿ ಮನಸ್ಸಿಗೆ ಆನಂದವಾಯಿತು. ಅವರಿಂದ ಕ್ಷುಲ್ಲಕ ದೀಕ್ಷೆಯನ್ನು ಸ್ವೀಕರಿಸಿ, ಅಕ್ಷರಾಭ್ಯಾಸವನ್ನು ಆರಂಭಿಸಿ, ಜ್ಞಾನಿಗಳಾದರು. ಅದನ್ನು ಕಂಡು ಗುರುಗಳು ಐಲಕ ದೀಕ್ಷೆಯನ್ನು ನೀಡಿದರು. ಕನ್ನಡ, ಮರಾಠಿ, ಸಂಸ್ಕೃತ, ಪ್ರಾಕೃತ ಹಿಂದಿ ಭಾಷೆಗಳ ಮೇಲೆ ಪ್ರಭುತ್ವ ಸಂಪಾದಿಸಿದರು. ಕುಂಥಲಗಿರಿ ಸಿದ್ಧಕ್ಷೇತ್ರದಲ್ಲಿ ಆಚಾರ್ಯ ಜಯಕೀರ್ತಿ ಮಹಾರಾಜರು ನಿರ್ಗ್ರಂಥ ದೀಕ್ಷೆಯನ್ನು ನೀಡಿ ದೇಶಭೂಷಣರೆಂಬ ಸಾರ್ಥಕ ಹೆಸರನ್ನಿಟ್ಟು, ಆಚಾರ್ಯ ಪದವಿಯನ್ನು ನೀಡಿದರು. ಶ್ರೇಷ್ಠಯೋಗಿಯ ಎಲ್ಲ ಗುಣಗಳನ್ನು ಮೈಗೂಡಿಸಿಕೊಂಡಿದ್ದ ಅವರನ್ನು 'ಯೋಗೀಂದ್ರ ಚೂಡಾಮಣಿ' ಎಂದು ಗೌರವಿಸಿದರು.

ಆಚಾರ್ಯ ದೇಶಭೂಷಣರು ಉತ್ತರ-ದಕ್ಷಿಣ ಭಾರತಗಳ ವಿಹಾರ ಮಾಡಿ ಧರ್ಮ ಜಾಗೃತಿಯ ಕಾರ್ಯವನ್ನು ಕೈಗೊಂಡರು. ಸ್ವತಃ ಸಿದ್ಧಾಂತ ಗ್ರಂಥಗಳ ಆಳವಾದ ಅಧ್ಯಯನ ಕೈಗೊಂಡು ಅವು ಸಾಮಾನ್ಯ ಜನರಿಗೂ ಅರ್ಥವಾಗಲೆಂದು ಸರಳ ಕನ್ನಡ ಭಾಷೆಯಲ್ಲಿ ಅನುವಾದ ಮಾಡಿ ಪ್ರಕಟಿಸಿದರು. ನಯಸೇನನ 'ಧರ್ಮಾಮೃತ', ರತ್ನಾಕರನ 'ಭರತೇಶವೈಭವ'ಗಳನ್ನು ಹಿಂದಿ ಭಾಷೆಗೆ ಅನುವಾದ ಮಾಡಿಸಿ ಅವುಗಳ ಮಹತ್ವ ಉತ್ತರ ಭಾರತೀಯರಿಗೆ ತಿಳಿಯುವಂತೆ ಮಾಡಿದರು.

ಆಚಾರ್ಯ ದೇಶಭೂಷಣರು ಅನೇಕ ಜಿನಮಂದಿರಗಳ ಜೀರ್ಣೋದ್ಧಾರ, ಹೊಸಮಂದಿರಗಳ ನಿರ್ಮಾಣ, ಅವುಗಳ ಪಂಚಕಲ್ಯಾಣಗಳ ನೇತೃತ್ವವನ್ನೂ ವಹಿಸಿದ್ದರು. ಅಯೋಧ್ಯೆಯಲ್ಲಿ ವೃಷಭನಾಥನ 31 ಅಡಿ ಎತ್ತರದ ಬೃಹತ್ ಧವಲಶಿಲಾಮೂರ್ತಿ ಅವರಿಂದ ಪ್ರತಿಷ್ಠಾಪಿಸಲ್ಪಟ್ಟಿತು. ಚೂಲಗಿರಿ ಕ್ಷೇತ್ರದ ನಿರ್ಮಾಣವಾಯಿತು. ಶ್ರವಣಬೆಳಗೊಳದಲ್ಲಿ ೧೯೮೧ರಲ್ಲಿ ಜರುಗಿದ ಗೊಮ್ಮಟೇಶ ಸಹಸ್ರಾಬ್ದಿ ಮಹಾಮಸ್ತಕಾಭಿಷೇಕದ ಪ್ರಮುಖ ಆಚಾರ್ಯರಾಗಿ ಅವರು ಉಪಸ್ಥಿತರಿದ್ದರು. ಕೋಥಳಿ-ಕುಪ್ಪನವಾಡಿಗಳ ಮಧ್ಯೆ ಸುಂದರ ಜಿನಮಂದಿರ, ಗುರುಕುಲ ಶಿಕ್ಷಣಕ್ಕಾಗಿ ಮಾಧ್ಯಮಿಕ ಶಾಲೆಗಳ ಸ್ಥಾಪನೆಗೆ ಕಾರಣರಾದರು. ಅಲ್ಲದೆ ಅಲ್ಲಿಯೆ ಸ್ಥಾಪಿತವಾದ ಜವಾಹರ ನವೋದಯ ಶಾಲೆಯ ಸ್ಥಾಪನೆಗೆ ಪ್ರೇರಣೆ ನೀಡಿದುದಲ್ಲದೆ ಅಲ್ಲಿನ ವಿದ್ಯಾರ್ಥಿಗಳಿಗೆ ಸಸ್ಯಾಹಾರವನ್ನೇ ನೀಡುವಂತೆ ಆದೇಶ ನೀಡಿ ಅಹಿಂಸಾಧರ್ಮದ ಆಚರಣೆಗೆ ಕಾರಣರಾದರು. ಆಚಾರ್ಯ ಶ್ರೀ ವಿದ್ಯಾನಂದ ಮಹಾರಾಜರಿಗೆ ದಿಲ್ಲಿಯಲ್ಲಿ ನಿರ್ಗ್ರಂಥ ಮುನಿ ದೀಕ್ಷೆಯನ್ನು ನೀಡಿ ಅವರಿಂದ ಧರ್ಮ ಪ್ರಭಾವನೆ ವ್ಯಾಪಕವಾಗಲು ಆಶೀರ್ವದಿಸಿದರು. (ಆಚಾರ್ಯ ವಿದ್ಯಾನಂದರ ಬಗ್ಗೆ ಪ್ರತ್ಯೇಕ ವಿವರವಿದೆ) ಆಚಾರ್ಯ ಶ್ರೀ ಬಾಹುಬಲಿ ಮಹಾರಾಜರು ಅವರ ಇನ್ನೊಬ್ಬ ಶಿಷ್ಯರು. ಗುರುವಿನ ಮಾರ್ಗದಲ್ಲಿ ಮುನ್ನಡೆದು ಇದೀಗ ಮಹಾರಾಷ್ಟ್ರದ ಸಾಂಗಲಿ-ಕೊಲ್ಲಾಪುರ ರಸ್ತೆಯ ಬದಿಯಲ್ಲಿ ಜಿಪಂಗ್ರಾಮದ ಹತ್ತಿರ 'ಧರ್ಮನಗರ' ವನ್ನು ಸ್ಥಾಪಿಸಿ ಅದನ್ನು ಧರ್ಮ ಶಿಕ್ಷಣದ ಕೇಂದ್ರವನ್ನಾಗಿಸಲು ಪ್ರಯತ್ನಿಸುತ್ತಿದ್ದಾರೆ.

ಧರ್ಮಶ್ರದ್ಧೆ, ಕಠೋರ ತಪಸ್ಸು, ಕ್ಷೇತ್ರ ಸುಧಾರಣೆ, ಶಿಕ್ಷಣದ ಏರ್ಪಾಡು, ಪ್ರಾಚೀನ ಶಾಸ್ತ್ರಗ್ರಂಥಗಳನ್ನು ಕನ್ನಡ ಭಾಷೆಗೆ ಅನುವಾದ ಮಾಡಿದಂತೆ, ಕನ್ನಡ ಭಾಷೆಯ ಕೃತಿಗಳನ್ನು ಹಿಂದೀ, ಮರಾಠಿ ಭಾಷೆಗಳಿಗೆ ಅನುವಾದಿಸಿ ರಾಷ್ಟ್ರೀಯ ಮಟ್ಟದಲ್ಲಿ ಅವುಗಳ ಅಧ್ಯಯನಕ್ಕೆ ಏರ್ಪಾಡು ಮಾಡಿಕೊಟ್ಟು, ಯೋಗ್ಯ ಶಿಷ್ಯರಿಗೆ ಪ್ರೋತ್ಸಾಹನ ನೀಡಿ 'ಭಾರತಗೌರವ' ಬಿರುದಿನಿಂದ ಅಲಂಕೃತರಾದರು. ಆಚಾರ್ಯ ಶ್ರೀ ದೇಶಭೂಷಣರ ಷಷ್ಟಿಪೂರ್ತಿ ಸಮಾರಂಭ ೧೯೬೨ರಲ್ಲಿ ಕೋಥಳಿಯಲ್ಲಿ ಜರುಗಿದಾಗ ಕರ್ನಾಟಕದ ಧೀಮಂತ ರಾಜಕಾರಣಿ ಶ್ರೀ ಎಸ್. ನಿಜಲಿಂಗಪ್ಪ ಹಾಗೂ

ಆದರ್ಶ ಶ್ರಾವಕರೂ, ದೇಶಭೂಷಣರ ಶಿಷ್ಯರೂ ಆದ ಅಂದಿನ ಕರ್ನಾಟಕ ಉಚ್ಚನ್ಯಾಯಾಲಯದ ನ್ಯಾಯಮೂರ್ತಿ ಶ್ರೀ ಟಿ.ಕೆ. ತುಕೋಲ ಅವರೂ ಉಪಸ್ಥಿತರಿದ್ದುದು ಅವರ ಬಗೆಗಿನ ಪೂಜ್ಯ ಭಾವನೆಗೆ ನಿದರ್ಶನ. ಮಾನ್ಯ ಶ್ರೀ ಎಸ್. ನಿಜಲಿಂಗಪ್ಪ ಅವರು ಸಮಾರಂಭದ ಮುಂಚಿನ ದಿನವಷ್ಟೇ ದಿಲ್ಲಿಯಲ್ಲಿದ್ದು ಅಖಿಲಭಾರತ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಆಯ್ಕೆಗೊಂಡಿದ್ದರಲ್ಲದೆ ಅಂದೇ ಹೊರಟು ಬಂದು ದೇಶದ ಪ್ರಗತಿಗಾಗಿ ತಾವು ಹೊತ್ತ ಹೊಸ ಜವಾಬ್ದಾರಿ ಸಂದರ್ಭದಲ್ಲಿ ''ಪೂಜ್ಯ ಮುನಿಗಳ ಆಶೀರ್ವಾದ ತೀರ ಅಗತ್ಯ ಅದಕ್ಕಾಗಿ ದಿಲ್ಲಿಯಿಂದ ಧಾವಿಸಿ ಬಂದೆ'' ಎಂದು ನುಡಿದರು. ಸಾತ್ವಿಕ ಪ್ರವೃತ್ತಿಯ ಭಾರತದ ಪ್ರಧಾನ ಶ್ರಿ ಲಾಲಬಹದ್ದೂರ ಶಾಸ್ತ್ರೀಯವರು ಆಚಾರ್ಯ ಶ್ರೀ ದೇಶಭೂಷಣರ ಬಗ್ಗೆ ವಿಶೇಷ ಭಕ್ತಿ, ಗೌರವ, ಆದರಗಳನ್ನು ಹೊಂದಿದ್ದರೆಂಬುದೂ ಉಲ್ಲೇಖನೀಯ ಸಂಗತಿಯಾಗಿದೆ.

ಧರ್ಮ ಪ್ರಭಾವನೆ, ಜನಕಲ್ಯಾಣ, ಆತ್ಮಧ್ಯಾನ, ತಪಸ್ಸುಗಳಲ್ಲಿ ತೊಡಗಿದ ಆಚಾರ್ಯರು ವೃದ್ಧಾಪ್ಯಕಾರಣವಾಗಿ 'ಸಮಾಧಿ ಮರಣ'ವನ್ನು ಬರಮಾಡಿಕೊಳ್ಳಲು ಸಿದ್ಧರಾದರು. ಆಚಾರ್ಯ ಕುಂಥುಸಾಗರರ ನೇತೃತ್ವದಲ್ಲಿ ಸಲ್ಲೇಖನ ವ್ರತಸ್ವೀಕರಿಸಿ ಕೋಥಳಿಯಲ್ಲಿ ೨೮-೫-೧೯೮೭ ರಂದು ಮರಣವನ್ನು ಗೆದ್ದು ಸ್ವರ್ಗವಾಸಿಗಳಾದರು.

## 5. ಆಚಾರ್ಯ ಕುಲಭೂಷಣ ಮಹಾರಾಜರು

ಬೈಲಹೊಂಗಲ ತಾಲೂಕಿನ ಹಣಬರಹಟ್ಟಿ ಗ್ರಾಮದ ಬಸವಂತಪ್ಪ - ಗಂಗವ್ವ ಎಂಬ ದಂಪತಿಗಳಿಗೆ ವೀರಪ್ಪ ಹಾಗೂ ಜಿನ್ನಪ್ಪ ಎಂಬ ಇಬ್ಬರು ಮಕ್ಕಳು. ವೀರಪ್ಪನು ಬಾಲ್ಯದಲ್ಲಿಯೆ ನಿಧನಹೊಂದಿದನು. ಜಿನ್ನಪ್ಪನು ಜನಿಸಿದ ಒಂದೇ ವರ್ಷದಲ್ಲಿ ತಂದೆ-ತಾಯಿಗಳನ್ನು ಕಳೆದುಕೊಂಡ. ಚಿಕ್ಕಮ್ಮನ ಜೊತೆಗೆ ದೇವಲಾಪುರದಲ್ಲಿ ಜನಿಸಿ ಪ್ರಾಥಮಿಕ ಶಿಕ್ಷಣವನ್ನು ಪೂರೈಸಿದ. ಬಾಲ್ಯದಿಂದಲೂ ಆಧ್ಯಾತ್ಮದತ್ತ ಒಲವು ಹೊಂದಿದ್ದ ಬಾಲಕನಿಗೆ ನಿಧಿ ದೊರೆತಂತೆ ಜಯಕೀರ್ತಿ ಮಹಾರಾಜರು ವಿಹಾರಾರ್ಥ ದೇವರ ಶೀಗಿಹಳ್ಳಿಗೆ ಆಗಮಿಸಿದರು. ಅವರ ಸಹವಾಸ ಭಾಗ್ಯ ಹಾಗೂ ಪ್ರವಚನ ಕೇಳುವ ಅವಕಾಶಗಳು ದೊರೆತು ಅದು ಜಿನ್ನಪ್ಪನ ಮೇಲೆ ಪ್ರಭಾವ ಬೀರಿ ಅವನ ಮನದ ಒಲವನ್ನು ಬಲಗೊಳಿಸಿತು. ಆಚಾರ್ಯ ಜಯಕೀರ್ತಿ ಮಹಾರಾಜರಿಂದ ೧೫-೮-೧೯೩೪ ರಂದು ಬ್ರಹ್ಮಚರ್ಯ ದೀಕ್ಷೆಯನ್ನು ಸ್ವೀಕರಿಸಿದ. ಜಯಕೀರ್ತಿ ಮಹಾರಾಜರೇ ಮುಂದೆ ನಾಗಮಂಗಲ ತಾಲೂಕಿನ ಬೆಳ್ಳೂರಿನಲ್ಲಿ ಪ.ಪೂ. ದೇಶಭೂಷಣರಿಗೂ ಇವರಿಗೂ ಏಕಕಾಲದಲ್ಲಿ ಕ್ಷುಲ್ಲಕ ದೀಕ್ಷೆ ನೀಡಿದರು. ಜಿನ್ನಪ್ಪನು 'ಕುಲಭೂಷಣ' ರೆಂಬ ಹೆಸರು ಪಡೆದ. ದೇಶಭೂಷಣ, ಕುಲಭೂಷಣರು ಗುರುಗಳ ಎರಡು ಕಣ್ಣಾದರು. ಅವರೊಂದಿಗೆ ಶಿಖರಜಿ ಯಾತ್ರೆಕೈಗೊಂಡರು. ಜಯಕೀರ್ತಿ ಮಹಾರಾಜರು ಅಲ್ಲಿಯೇ ದೇಹ ತ್ಯಜಿಸಿದರೂ ಸಮಾಜ ಪರಿವರ್ತನೆಗೆ ಎರಡು ಅಮೂಲ್ಯ ರತ್ನಗಳನ್ನು ನೀಡಿದರು.

ಪೂಜ್ಯ ಕುಲಭೂಷಣರು ಮಹಾತಪಸ್ವಿಗಳೂ ಕಠಿಣ ಉಪವಾಸಾದಿ ವ್ರತಗಳಿಂದ ಸಿದ್ಧಿ ಸಂಪನ್ನರೂ ಆಗಿದ್ದರು. ಮಂತ್ರ ತಂತ್ರ-ಪೂಜಾ ವಿಧಾನಗಳಲ್ಲಿ ಪರಿಣತರಾಗಿದ್ದರು. ಅಕಿವಾಟದ ವಿದ್ಯಾಸಾಗರರ ಸಮಾಧಿ ಬಳಿ ಕುಳಿತು ಅನುಷ್ಠಾನ ಕೈಗೊಂಡಿದ್ದರು. ಅನೇಕ ಜಿನಮಂದಿರಗಳ ಮೂರ್ತಿ ಪ್ರತಿಷ್ಠಾಪನೆ, ಪಂಚಕಲ್ಯಾಣಗಳ ನೇತೃತ್ವ ವಹಿಸಿ ಶಾಸ್ತ್ರಾನುಸಾರ ಪೂಜಾಕಾರ್ಯಗಳನ್ನು ಸಾಂಗಗೊಳಿಸಿದರು. ಅನೇಕ ಪಾಠಶಾಲೆಗಳ ಸ್ಥಾಪನೆಗೆ ಕಾರಣರಾದರು. ಪೂಜ್ಯ ಕುಲಭೂಷಣ

ಮಹಾರಾಜರು ಸಾಹಿತ್ಯ ಪ್ರೇಮಿಗಳಾಗಿದ್ದರು. ಶ್ರೀ ದಿಗಂಬರ ಜೈನ ಸ್ಯಾದ್ವಾದ ಗ್ರಂಥಮಾಲೆಯ ಮೂಲಕ ಕನ್ನಡ ಹಾಗೂ ಮರಾಠಿ ಭಾಷೆಗಳಲ್ಲಿ 19ಕ್ಕೂ ಮೇಲ್ಪಟ್ಟು ಗ್ರಂಥಗಳನ್ನು ಪ್ರಕಟಿಸಿದ್ದಾರೆ. 'ಸಮಾಧಿಮರಣ'ವನ್ನು ಕುರಿತ ಅವರ ಗ್ರಂಥ ಪ್ರಸಿದ್ಧವಾದುದು. ಪೂಜ್ಯ ಗುರುಗಳಾದ ಶ್ರೀ ಜಯಕೀರ್ತಿ ಮಹಾರಾಜರ ಬಗ್ಗೆ ತಮ್ಮ ಗೌರವಭಾವವನ್ನು ಸುಮಾರು ೧೦೦ ಸಾಂಗತ್ಯ ಪದ್ಯಗಳಲ್ಲಿ ವ್ಯಕ್ತಪಡಿಸಿದ್ದಾರೆ. ಅವರ ಹೆಸರನ್ನು, ಧರ್ಮಕಾರ್ಯವನ್ನು ಸ್ಮರಿಸುವುದಕ್ಕಾಗಿ ಗರಗದಲ್ಲಿ ಶ್ರೀ ಜಯಕೀರ್ತಿ ವಿದ್ಯಾಲಯದ ಸ್ಥಾಪನೆಗೆ ಪ್ರೇರಣೆ ನೀಡಿ, ಅದು ಆದರ್ಶ ಶಿಕ್ಷಣ ಸಂಸ್ಥೆಯಾಗಿ ರೂಪತಾಳಲು ಕಾರಣರಾಗಿದ್ದಾರೆ.

ಕಠಿಣ ತಪಸ್ಸು, ಆಧ್ಯಾತ್ಮದಲ್ಲಿ ದೃಢನಿಲುವು, ಶಿಕ್ಷಣ ಪ್ರೇಮ, ಸಮಾಜಸುಧಾರಣೆ, ಮುಂತಾದ ಕಾರ್ಯಗಳಲ್ಲಿ ಇವರ ನಿಷ್ಠೆ ಅಪಾರವಾದದ್ದು. ಆಚಾರ್ಯ ಕುಲಭೂಷಣರು ಕೊನೆಗೆ ೨೪-೨-೧೯೮೪ ರಂದು ಬೆಳಗಾವಿಯಲ್ಲಿ ಸಮಾಧಿಮರಣವನ್ನು ಹೊಂದಿದರು.

## 6. ಆದಿಸಾಗರ ಮಹಾರಾಜರು

ಶೇಡಬಾಳದ ಬಾಳಗೌಡ, ದೇವಗೌಡ ಪಾಟೀಲರು ನ್ಯಾಯಾಲಯ ಇಲಾಖೆಯಲ್ಲಿ ಸೇವೆ ಸಲ್ಲಿಸಿ ೧೯೬೩ರಲ್ಲಿ ನಿವೃತ್ತರಾದರು. ಮೊದಲಿನಿಂದಲೂ ಆಧ್ಯಾತ್ಮದಲ್ಲಿ ಆಸಕ್ತಿ ಹೊಂದಿದ್ದ ಅವರು ತಪಸ್ವಿಯಂತೆಯೇ ಬದುಕಿದವರು. ಮುನಿದೀಕ್ಷೆ ಸ್ವೀಕರಿಸುವ ಮುಂಚೆಯೇ ಎಷ್ಟೋ ವರ್ಷಗಳವರೆಗೆ ಬ್ರಹ್ಮಚಾರಿಯಾಗಿ ಜೀವನ ರೂಪಿಸಿಕೊಂಡವರು. ಚಾರಿತ್ರ್ಯಚಕ್ರವರ್ತಿ ಆಚಾರ್ಯ ಶಾಂತಿಸಾಗರ ಮಹಾರಾಜರಿಂದ ತುಂಬಾ ಪ್ರಭಾವಿತರಾದವರು. ಅವರು ಪ್ರೇರಣೆಯಿಂದ ಸ್ಥಾಪಿಸಲ್ಪಟ್ಟ 'ಶ್ರೀ ಶಾಂತಿಸಾಗರ ಅನಾಥಾಶ್ರಮ, ರತ್ನತ್ರಯ ಪುರಿ' - ಶೇಡಬಾಳದ ಸಂಚಾಲಕರಾಗಿ ಅನೇಕವರ್ಷಗಳ ಕಾಲ ಸೇವೆ ಸಲ್ಲಿಸಿದರು. ಶ್ರೀ ಶಾಂತಿಸಾಗರ ಮಹಾರಾಜರ ಸಂಘ ಶೇಡಬಾಳಕ್ಕೆ ಆಗಮಿಸಿದಾಗ ಅವರಲ್ಲಿ ಮುನಿದೀಕ್ಷೆ ನೀಡುವಂತೆ ವಿನಂತಿಸಿಕೊಂಡು, ಅವರ ಸಮ್ಮತಿಯ ಮೇರೆಗೆ ವರ್ಧಮಾನ ಸಾಗರರಿಂದ ಮುನಿದೀಕ್ಷೆ ಸ್ವೀಕರಿಸಿ ತಪಸ್ಸು, ಸ್ವಾಧ್ಯಾಯ, ಪ್ರವಚನಗಳ ಮೂಲಕ ಜನಜಾಗೃತಿ ಕೈಗೊಂಡರು.

ಶ್ರೀ ಆದಿಸಾಗರ ಮಹಾರಾಜರಿಗೆ ಸಾಹಿತ್ಯದಲ್ಲಿ, ವಿಶೇಷವಾಗಿ ಪದ್ಯರಚನೆಯಲ್ಲಿ ಹೆಚ್ಚಿನ ಆಸಕ್ತಿ. ಸಾಮಾನ್ಯ ಜನರ ಮನದಲ್ಲಿ ಉಳಿಯಬಹುದಾದ ಲಾವಣಿಗಳ ಮೂಲಕ ಧರ್ಮದ ಸೂಕ್ಷ್ಮ ತತ್ವಗಳನ್ನು ಸುಲಭ-ಸರಳ ರೀತಿಯಲ್ಲಿ ಪ್ರತಿಪಾದಿಸುವುದರಲ್ಲಿ ಅವರು ಸಿದ್ಧಹಸ್ತರು. ಹಾಡಿನ ಗತ್ತಿನೊಂದಿಗೆ ಈ ಉಪಯುಕ್ತ ವಿಚಾರಗಳು ಜನಮನದಲ್ಲಿ ನೆಲೆಸುವುದು ಸಾಧ್ಯವೆಂದು ಅವರ ದೃಢ ನಂಬುಗೆಯಾಗಿತ್ತು. ತಮ್ಮ ಜನ್ಮಸ್ಥಳ, ಕಾರ್ಯಕ್ಷೇತ್ರ ಹಾಗೂ ಗುರುಗಳಾದ ಪೂಜ್ಯ ಶ್ರೀ ಶಾಂತಿಸಾಗರ ಮಹಾರಾಜರ ಬಗೆಗಿನ ಅವರ ಪೂಜ್ಯಭಾವನೆ, ಗೌರವಗಳು ಅನೇಕ ಹಾಡುಗಳಲ್ಲಿ ವ್ಯಕ್ತವಾಗಿರುವುದನ್ನು ಕಾಣುತ್ತೇವೆ.

ದೇವಗವಡ ಜನಕ, ಜನಿಸಿದ ಬಾಲಕ ಬಾಳಗೌಡ ಅಂತ ಹೆಸರಾ।<br>
ಶಾಂತಿಸಾಗರ ಶಿಷ್ಯ, ದೇವಕುಮಾರ ಅಂತಾ ಪಡೆದ ಹೆಸರಾ ಶ್ರೀ ಸಿದ್ಧಾಂತ ಶಾಹೀರಾ ॥<br>
ಶೇಡಬಾಳ ಅಂತರ್ಗತ ರತ್ನತ್ರಯಪುರಿ ವಳಗ ನೆಲಸಿದಾರ ಶಾಂತಿನಾಥತೀರ್ಥಂಕರಾ।<br>
ಸದ್ಯಕ್ಕೆ ಸದ್ಗುರು ಶಾಂತಮೂರ್ತಿ ಆಚಾರ್ಯ ಇರತಾರ ಶಾಂತಿಸಾಗರಾ ॥

ಸತ್ಯಗುರು

ಇದಕೆಲ್ಲ ಮೂಲಕಾರಣ ಮೂಲಗುಣಾಪಾಲನೆ ಮಾಡು
ಮುಖ್ಯ ಗುರು ಶ್ರೀ ಶಾಂತಿಸಾಗರಾ ।
ಬರೇ ಗುರು ಯಾರ ಅಂತ ಗೊತ್ತು ಮಾಡಿ ಹೇಳುವಂಥ ಸ್ಥಾನ
ಐತಿ ಕೇಳಿಕೊಳ್ಳಿರಿ ಶೇಡಬಾಳ ಊರಾ ॥

ದೇವಾಧಿದೇವ ಯಾರು ?

ಇಂಥ ದೇವರ ಭಕ್ತಿ ಮಾಡಿ ಮುಕ್ತಿ ಪಡೀರೆಂತ ನಿಮಗ
ಉಪದೇಶ ಮಾಡಿದಾರ ಸದ್ಗುರು ಶಾಂತಿಸಾಗರಾ ।
ದೇವಾಧಿದೇವರ ಯಾರ, ಬರೆದೇವರ ಲಕ್ಷಣ ಏನ ಸ್ಪಷ್ಟವಾಗಿ
ಹೇಳ್ಯಾನ ಶಿಷ್ಯ 'ದೇವಕುಮಾರಾ' ॥

ಇಂತ ಸರಳ - ಸುಲಭ ರಚನೆಯಿಂದಾಗಿ '' ಶ್ರೀ ಸಿದ್ಧಾಂತ ಶಾಹೀರ ಕಿ ಪದ್ಯಾವಲಿ'' ಉಪಯುಕ್ತ ಕೃತಿಯಾಗಿ ಪರಿಣಮಿಸಿದೆ. ಇದರಂತೆ 'ಸೇಡಬಾಳ ಪಾಟೀಲ ಘರಾಣ್ಯಾಚಾ ಇತಿಹಾಸ' (ಭಾಗ ೧-೨) ವಿಶಿಷ್ಟ ಕೃತಿಯಾಗಿದೆ. ಶೇಡಬಾಳ ಪಾಟೀಲ ಮನೆತನದ ಮೂಲ ಪುರುಷನಿಂದ ಸುಮಾರು ೧೯೫೦ ರವರೆಗೆ ಅದು ಬೆಳೆದು ಬಂದ ರೀತಿ, ಹೆಸರುಗಳನ್ನು ವ್ಯವಸ್ಥಿತವಾಗಿ ಸಿದ್ಧಪಡಿಸಿಕೊಟ್ಟು, ಅದಕ್ಕೆ ವಿವರಣೆಯನ್ನೂ ನೀಡಿದ್ದಾರೆ. ಕರ್ನಾಟಕ ಮಹಾರಾಷ್ಟ್ರಗಳ ಗಡಿಪ್ರದೇಶಗಳಲ್ಲಿ ವಿಹಾರ ಮಾಡಿ ಧರ್ಮಪ್ರಭಾವನೆ ಕೈಕೊಂಡ ಮುನಿಗಳಲ್ಲಿ ಶ್ರೀ ಆದಿಸಾಗರರೂ ಒಬ್ಬರು.

## 7. ಆಚಾರ್ಯ ಶ್ರೀ ವಿದ್ಯಾನಂದರು

೧೯೨೫ರ ಏಪ್ರೀಲ್ 22 ರಂದು ಶೇಡಬಾಳದ ಶ್ರೀ ಕಾಳಪ್ಪ ಹಾಗೂ ಸರಸ್ವತಿ ಎಂಬ ದಂಪತಿಗಳಿಗೆ ಜನಿಸಿದ ಬಾಲಕ ಸುರೇಂದ್ರ. 'ರಾಷ್ಟ್ರಸಂತ' ರೆಂಬ ಖ್ಯಾತಿಯನ್ನು ಪಡೆದು ಅನೇಕ ಧರ್ಮ, ಸಾಹಿತ್ಯ, ಸಮಾಜ ಹಾಗೂ ಸಾಂಸ್ಕೃತಿಕ ಕಾರ್ಯಗಳಿಗೆ ಪ್ರೇರಕ ಶಕ್ತಿಯಾಗಿ ಪರಿಣಮಿಸಿದುದು ಒಂದು ಅದ್ಭುತ, ರೋಮಾಂಚಕ ಕಥೆಯಾಗಿದೆ. ಜನ್ಮಸ್ಥಳವಾದ ಶೇಡಬಾಳ- ಕರ್ನಾಟಕ ಮಹಾರಾಷ್ಟ್ರಗಳ ಗಡಿಪ್ರದೇಶದ ಗ್ರಾಮ; ಸಂಸ್ಕೃತಿ, ಧರ್ಮಾಚರಣೆಗಳಿಗೆ ಹೆಸರಾದುದು. ಪೂಜ್ಯ ವಿದ್ಯಾನಂದರು ಜನಿಸಿದ ಮನೆತನ ಪಂಡಿತಮಾನ್ಯವಾಗಿತ್ತು. ಎರಡನೆಯ ನಾಗವರ್ಮನ ವರ್ಧಮಾನ ಪುರಾಣವನ್ನು ಪ್ರತಿಮಾಡಿದವರು ವಿದ್ಯಾನಂದರ ಪೂರ್ವಜರು. ತಂದೆ ಜೈನ ಶಾಸ್ತ್ರವನ್ನು ಆಸಕ್ತಿಯಿಂದ ಓದಿ ಕರಗತ ಮಾಡಿಕೊಂಡವರು. ಶಾಂತಿನಾಥ ಜಿನಾಲಯದ ಪರಿಸರ, ಮುನಿ-ಆರ್ಯಿಕೆಯರ ಸೇವಾಭಾಗ್ಯ, ಬಾಲ ಸುರೇಂದ್ರನನ್ನು ಆಕರ್ಷಿಸಿದ್ದರೆ ಆಶ್ಚರ್ಯವಿಲ್ಲ. ಮರಾಠಿಯಲ್ಲಿ ಪ್ರಾಥಮಿಕ ಶಿಕ್ಷಣ ನಡೆದರೂ ಅದು ಒಂದು ನಿಲುಗಡೆಯನ್ನು ತಲುಪಲಿಲ್ಲ. ಆದರೆ ವಿಶ್ವಕೋಶಗಳನ್ನೇ ಓದಿ, ಅದರ ಸಾರಸಂಗ್ರಹವನ್ನು ಆತ್ಮಸಾತ್ ಮಾಡಿಕೊಳ್ಳುವ ಮಟ್ಟಿಗೆ ಆತ್ಮವಿಕಾಸ ಪಡೆದುದು ಅದ್ಭುತವೆನಿಸಿದರೂ ಸತ್ಯವಾಗಿದೆ.

ಮುನಿಗಳ ಸಾನ್ನಿಧ್ಯ, ಸತ್ಕಾರಗಳು ಒಂದೆಡೆಯಾದರೆ, ಸ್ವಾತಂತ್ರ್ಯ ಧ್ಯೇಯವಾದ ಇನ್ನೊಂದೆಡೆ. ತನ್ನ ಸುತ್ತಲಿನ ಪರಿಸರಕ್ಕೆ ಸದಾ ಸ್ಪಂದಿಸುತ್ತಿದ್ದ ಯುವಕ ಸುರೇಂದ್ರ ದೇಶದ ಸ್ವಾತಂತ್ರ್ಯ ಸಂಗ್ರಾಮದತ್ತ

ಆಕರ್ಷಿತರಾದುದು ಸಹಜ. ರಾಷ್ಟ್ರಧ್ವಜ ಹಾರಿಸಿ, ಬಂಧನಕ್ಕೊಳಗಾಗದೆ ತಪ್ಪಿಸಿಕೊಂಡು ಊರು ಬಿಟ್ಟು ಸಮೀಪದ ಕೃಷ್ಣಾಕಿತ್ತೂರಿನ ಸಕ್ಕರೆ ಕಾರಖಾನೆಯಲ್ಲಿ ಕೆಲಸಕ್ಕೆ ಸೇರಿದರೆ ಮನಸ್ಸಿಗೆ ಸಮಾಧಾನವಿಲ್ಲದ ಸುರೇಂದ್ರನಿಗೆ ೧೯೪೫ ರಲ್ಲಿ ಶ್ರೀ ಮಹಾವೀರಕೀರ್ತಿಗಳ ಚಾತುರ್ಮಾಸ ಸಂದರ್ಭದಲ್ಲಿ ಬ್ರಹ್ಮಚರ್ಯ ದೀಕ್ಷೆ ಲಭಿಸಿತು. ಅವರಿಂದಲೇ ಮುಂದೆ ೧೯೪೬ ರಲ್ಲಿ ತಮದಡ್ಡಿಯಲ್ಲಿ ಕ್ಷುಲ್ಲಕ ದೀಕ್ಷೆಲಭಿಸಿ ಅವರು ಪಾರ್ಶ್ವಕೀರ್ತಿಗಳಾದರು. ಅನೇಕ ವರ್ಷಗಳವರೆಗೆ ಆಚಾರ್ಯ ಶ್ರೀ ಶಾಂತಿಸಾಗರರ ಪ್ರೇರಣೆಯಿಂದ ಶೇಡಬಾಳದಲ್ಲಿ ಆರಂಭವಾದ ಶ್ರೀ ಶಾಂತಿಸಾಗರ ಆಶ್ರಮದ ಸಂಚಾಲಕ ಪದವನ್ನು ನಿರ್ವಹಿಸಿದರು. ಬಾಲಕರಲ್ಲಿ ಸುಸಂಸ್ಕಾರ, ಧಾರ್ಮಿಕ ಅಭಿರುಚಿಯೊಂದಿಗೆ ಸಾಹಿತ್ಯ, ಕಲೆ, ಸಂಗೀತಗಳ ಬಗ್ಗೆ ಆಸಕ್ತಿ ಬೆಳೆಸುವಂತೆ ಕಾರ್ಯಕ್ರಮಗಳನ್ನು ಹಾಕಿಕೊಂಡರು. ಬಡ-ಅನಾಥ ಮಕ್ಕಳಲ್ಲಿ ಹೊಸ ಭರವಸೆಯನ್ನು ಮೂಡಿಸಿದರು. ಈ ಮಧ್ಯೆ ಸಂಸ್ಕೃತ- ಪ್ರಾಕೃತ ಶಾಸ್ತ್ರಗ್ರಂಥಗಳ ಅಧ್ಯಯನದ ಮೂಲಕ ಜ್ಞಾನವನ್ನು ಪ್ರಜ್ವಲಗೊಳಿಸಿಕೊಂಡರು. ೧೯೬೩ರಲ್ಲಿ ಭಾರತ ಗೌರವ ಆಚಾರ್ಯ ಶ್ರೀ ದೇಶಭೂಷಣರಿಂದ ದಿಲ್ಲಿಯಲ್ಲಿ ನಿರ್ಗ್ರಂಥದೀಕ್ಷೆ ಪಡೆದು 'ವಿದ್ಯಾನಂದ' ರಾದರು; ನಿರಂತರ ಜ್ಞಾನಾರಾಧನೆಯಿಂದ ತಮ್ಮ ಹೆಸರನ್ನು ಅನ್ವರ್ಥಕಗೊಳಿಸಿಕೊಂಡರು. ಅಲ್ಲಿಂದ ಉತ್ತರ ಭಾರತದ ಅನೇಕ ಸ್ಥಳಗಳಲ್ಲಿ ಚಾತುರ್ಮಾಸಗಳನ್ನು ಕಳೆಯುತ್ತ ವಿಶೇಷ ಉಪನ್ಯಾಸ, ಗ್ರಂಥ ಪ್ರಕಟಣ ಕಾರ್ಯ ಕೈಗೊಳ್ಳುತ್ತ ಬಂದರು. ಜೈಪುರ, ಮೀರತ್, ಇಂದೋರ್, ದಿಲ್ಲಿ ಮೊದಲಾದ ಸ್ಥಳಗಳಲ್ಲಿ ಜರುಗಿದ ಚಾತುರ್ಮಾಸಗಳು ಜನಮನದ ಮೇಲೆ ವಿಶೇಷ ಪ್ರಭಾವ ಬೀರಿವೆ. ಆದಿ ತೀರ್ಥಂಕರ ನಿರ್ವಾಣ ಕ್ಷೇತ್ರವಾದ ಕೈಲಾಸದರ್ಶನ ನಿಮಿತ್ತ ದಿಗಂಬರ ಅವಸ್ಥೆಯಲ್ಲಿ ಹಿಮಾಲಯದಲ್ಲಿ ವಿಹಾರ ಮಾಡಿ ಅದ್ಭುತವನ್ನು ಮೆರೆದರು.

ಪಾರ್ಶ್ವಕೀರ್ತಿಗಳಾಗಿ ಶೇಡಬಾಳದ ಆಶ್ರಮದ ಸಂಚಾಲಕರಾಗಿದ್ದಾಗಲೇ ಮಹಾವೀರ ಜಯಂತಿಯನ್ನು ವಿಶೇಷ ಜನಜಾಗೃತಿಯ ಸಾಧನವನ್ನಾಗಿ ಆಚರಿಸಲು ಆರಂಭಿಸಿ ಹೊಸ ಪರಂಪರೆಯನ್ನು, ತಮ್ಮ ಕಲ್ಪಕಶಕ್ತಿಯನ್ನು ತೋರಿದವರು ಶ್ರೀ ವಿದ್ಯಾನಂದರು. ಸಭೆ, ಸಮಾರಂಭ, ಮೆರವಣಿಗೆ, ಅದರಲ್ಲಿ ಸಾಹಿತ್ಯ, ಸಂಗೀತ, ಕಲೆಗಳ ಪ್ರದರ್ಶನಕ್ಕೆ ಅವಕಾಶವನ್ನು ಉಂಟುಮಾಡಿದರು. ಇದನ್ನೇ ರಾಷ್ಟ್ರವ್ಯಾಪಿಯಾಗಿ, ವಿಸ್ತೃತ ರೂಪದಲ್ಲಿ ಜಾರಿಗೆ ತರಲು ಮಾರ್ಗದರ್ಶನ ಮಾಡಿ ಮಹಾವೀರರ ೨೫೦೦ ನೆಯ ನಿರ್ವಾಣ ಮಹೋತ್ಸವದ ಕಾರ್ಯಕ್ರಮವನ್ನು ರೂಪಿಸಿ ದೇಶಾದ್ಯಂತ ಹೊಸ ಶಕ್ತಿ ಸಂಚಾರಕ್ಕೆ ಕಾರಣರಾದರು. 'ಧರ್ಮಚಕ್ರ ಶ್ರೀ ವಿಹಾರ', 'ಜನಮಂಗಳ ಕಲಶವಿಹಾರ' ೧೯೮೧ ರಲ್ಲಿ 'ಶ್ರೀ ಗೋಮಟೇಶ ಸಹಸ್ರಾಬ್ದಿ ಮಹೋತ್ಸವ' ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನೆರವೇರಿಸಿದರು. ಅದೇ ರೀತಿ ದಕ್ಷಿಣ ಮಹಾರಾಷ್ಟ್ರದ ಶೈಕ್ಷಣಿಕ ಕ್ರಾಂತಿಗೆ ಕಾರಣಪುರುಷರಾದ, ರೈತ ಶಿಕ್ಷಣ ಸಂಸ್ಥೆಯ 'ಪದ್ಮಶ್ರೀ ಕರ್ಮವೀರ ಡಾ।ಬಾವುರಾವ್ ಪಾಟೀಲ ಶತಮಾನೋತ್ಸವ' 'ಆಚಾರ್ಯ ಕುಂದಕುಂದ ದ್ವಿಸಹಸ್ರಾಬ್ದಿ ಮಹೋತ್ಸವ' ಇಂದೂರಿನ ಗೊಮ್ಮಟ ಕ್ಷೇತ್ರ ನಿರ್ಮಾಣ, ದೆಹಲಿಯ ಕುಂದಕುಂದ ಭವನ ನಿರ್ಮಾಣ, ಮೊದಲಾದ ಕಾರ್ಯಗಳಲ್ಲಿ ಹಾಗೂ ಪ್ರಾಕೃತ ಭಾಷೆ ಸಾಹಿತ್ಯಗಳಿಗೆ ರಾಷ್ಟ್ರ ಮಟ್ಟದಲ್ಲಿ ಪ್ರೇರಣೆ ಮನ್ನಣೆ ಒದಗಿಸಿಕೊಡುವಲ್ಲಿ ಆಚಾರ್ಯ ಶ್ರೀ ವಿದ್ಯಾನಂದರ ದೂರದೃಷ್ಟಿ, ಸೂತ್ರಬದ್ಧ ಯೋಜನೆ, ಕಾರ್ಯಕರ್ತರಲ್ಲಿ ಚೈತನ್ಯವನ್ನುಂಟುಮಾಡುವ ಸಾಮರ್ಥ್ಯಗಳು ವ್ಯಕ್ತವಾಗಿವೆ.

'ವಿದ್ಯಾನಂದ' ಎಂಬ ಹೆಸರಿಗೆ ಅನ್ವರ್ಥಕವಾಗುವಂತೆ ಅವರು ರಚಿಸಿದ ಗ್ರಂಥರಾಶಿ ನಮ್ಮೆದುರಿಗೆ ಇದೆ. ''ವಿಶ್ವಧರ್ಮದ ರೂಪರೇಷೆ'' ''ಅಭೀಕ್ಷ್ಣ ಜ್ಞಾನೋಪಯೋಗ'' ''ಸಮಯ್ ಕಾ ಮೌಲ್ಯ'', ''ಮಹಾವೀರ ಭಕ್ತಿಗಂಗಾ'' ''ಪಾವನಪರ್ವ ರಕ್ಷಾಬಂಧನ'' '' ಪಿಂಛ ಕಮಂಡಲು'' ''ಮೋಹೆಂಜದಾರೋ'' - ಮೊದಲಾದ ಅನೇಕ ಕೃತಿಗಳು ಅವರಆಳವಾದ ಜ್ಞಾನಕ್ಕೆ ನಿದರ್ಶನಗಳಾಗಿವೆ. ಇತ್ತೀಚೆಗೆ ಪ್ರಾಕೃತ ಅಧ್ಯಯನವನ್ನು ವ್ಯಾಪಕಗೊಳಿಸಲು ಪ್ರಾಕೃತದಿನದ ಆಚರಣೆಗೆ ಕರೆಕೊಟ್ಟುದ್ದಲ್ಲದೆ ''ಪ್ರಾಕೃತವಿಲ್ಲದ ಸಂಸ್ಕೃತ ಅಧ್ಯಯನ ಅಪೂರ್ಣ'' ಎಂದು ಸರಿಯಾಗಿ ಮಾರ್ಗದರ್ಶನ ಮಾಡಿದ್ದಾರೆ. ಸಂಘಟನಾ ಶಕ್ತಿ, ಕಲ್ಪಕತೆ, ವಿದ್ವತ್ತು, ವಿದ್ವಜ್ಜನ ಮನ್ನಣೆ, ಗ್ರಂಥಪ್ರಕಾಶನ, ಸಾಮಾಜಿಕ ಸುಧಾರಣೆ, ಮೊದಲಾದವುಗಳನ್ನು ಸಮರ್ಪಕವಾಗಿ ನಿರ್ವಹಿಸಿ, ಅವು ಜನಮನದಲ್ಲಿ ಬೇರೂರುವಂತೆ ಪ್ರೇರೇಪಿಸುತ್ತಿರುವ ರಾಷ್ಟ್ರಸಂತ ವಿದ್ಯಾನಂದರಿಂದಾಗಿ ಜೈನಧರ್ಮ, ಸಮಾಜ, ಸಿದ್ಧಾಂತ, ಸಾಹಿತ್ಯಗಳ ಪುನರುಜ್ಜೀವನದ ಯುಗ' ಮತ್ತೆ ಆರಂಭವಾದಂತಿದೆ.

## 8. ಆಚಾರ್ಯ ವಿದ್ಯಾಸಾಗರ ಮಹಾರಾಜರು

ಆಚಾರ್ಯ ಶ್ರೀ ಶಾಂತಿಸಾಗರ, ದೇಶಭೂಷಣರಂತೆಯೇ ರಾಷ್ಟ್ರಮಟ್ಟದಲ್ಲಿ ತಮ್ಮ ವಿದ್ವತ್ತು ಹಾಗೂ ನಿಖರ ಜ್ಞಾನದಿಂದ ಪ್ರಖ್ಯಾತರಾದ ಚಿಕ್ಕೋಡಿ ತಾಲೂಕಿನ ಇನ್ನೋರ್ವ ಮುನಿಗಳು ಶ್ರೀ ವಿದ್ಯಾಸಾಗರರು. ಸದಲಗಾದ ಅಷ್ಟಗಿ ಮನೆತನದ ಮಲ್ಲಪ್ಪ ಹಾಗೂ ಶ್ರೀಮತಿಯರಿಗೆ ೧೯೪೬ರ ಅಕ್ಟೋಬರ್ 10 ರಂದು ಜನಿಸಿದ ಬಾಲಕ, ಮರಾಠಿ ಮಾಧ್ಯಮದ ಮಾಧ್ಯಮಿಕ ಶಿಕ್ಷಣ ಪೂರಯಿಸಿ ತನ್ನ ಆತ್ಮಚಿಂತನೆ ಆಧ್ಯಾತ್ಮದ ಒಲವಿನಿಂದಾಗಿ ಆಚಾರ್ಯ ಜ್ಞಾನಸಾಗರರಿಂದ ೧೯೬೮ರ ನವೆಂಬರ್ 22 ರಂದು ಮುನಿದೀಕ್ಷೆ ಪಡೆದುದು ಜೈನಧರ್ಮದ ಸಾಮಾಜಿಕ, ಧಾರ್ಮಿಕ ಚರಿತ್ರೆಯಲ್ಲಿ ಮಹತ್ವಪೂರ್ಣವಾದುದು. ಸ್ವಾಧ್ಯಾಯ, ಚಿಂತನ - ಮಂಥನ, ತಪಸ್ಸುಗಳೊಂದಿಗೆ ನಿರಂತರ ಲೇಖನ ವ್ಯವಸಾಯವನ್ನು ಮುಂದುವರಿಸಿಕೊಂಡು ಬಂದವರು ಆಚಾರ್ಯ ವಿದ್ಯಾಸಾಗರರು. ಅವರ ಮುನಿದೀಕ್ಷೆಯ ರಜತವರ್ಷ ೧೯೭೨ರಲ್ಲಿ ದೇಶದಾದ್ಯಂತ 'ಸಂಯಮ ವರ್ಷ' ವೆಂದು ಆಚರಿಸಲ್ಪಟ್ಟಿತು. ಸಂಸ್ಕೃತ, ಪ್ರಾಕೃತ, ಇಂಗ್ಲೀಷ್, ಹಿಂದೀ ಮರಾಠಿ ಕನ್ನಡ ಭಾಷೆಗಳ ಮೇಲೆ ಪ್ರಭುತ್ವ ಸ್ಥಾಪಿಸಿದ ಮುನಿಶ್ರೀಗಳು ವಿಶಾಲಸಂಘದ ನೇತೃತ್ವವನ್ನು ವಹಿಸಿ ಜ್ಞಾನ, ಧ್ಯಾನ, ತಪಸ್ಸು ವೀತರಾಗ ಭಾವದಲ್ಲಿ ಅದನ್ನು ಮುನ್ನಡೆಸುತ್ತಿದ್ದಾರೆ.

ಜ್ಞಾನಾರಾಧನೆ, ತಪಸ್ಸುಗಳಲ್ಲಿ ತೊಡಗಿದ ಆಚಾರ್ಯ ಶ್ರೀ ವಿದ್ಯಾಸಾಗರರು ಹಿಂದಿ ಭಾಷೆಯಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಸಮಯಸಾರ, ನಿಯಮಸಾರ, ಪ್ರವಚನಸಾರಗಳ ಪದ್ಯಾನುವಾದ; ಗುರುವಾಣಿ, ಪ್ರವಚನ ಪಾರಿಜಾತ, ಪ್ರವಚನ ಪ್ರಮೇಯ, ಪ್ರವಚನ ಸಂಗ್ರಹಗಳು; 'ನರ್ಮದಾ ಕಾನನ ಮಕಂಕರ', 'ಡುಬೊಮತ್', 'ಲಗಾವೋ ಡುಬಕಿ', 'ತೋತಾ ರೋತಾ ಕ್ಯೊಂ', 'ಮೂಕಮಾಟೀ' ಮೊದಲಾದ ಕಾವ್ಯಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ' ಮೂಕಮಾಟೀ'' ಮಹಾಕಾವ್ಯವಾಗಿ ಹಿಂದಿ ಸಾಹಿತ್ಯದ ಉಪಾಸಕರಿಂದ ಗೌರವಿಸಲ್ಪಟ್ಟಿದೆ. ಧರ್ಮದರ್ಶನ ಹಾಗೂ ಅಧ್ಯಾತ್ಮದ ಸಾರವನ್ನು ಇಂದಿನ ಭಾಷೆಯಲ್ಲಿ, ಮುಕ್ತ ಛಂದದಲ್ಲಿ, ಮನೋಹರ ಕಾವ್ಯಶೈಲಿಯಲ್ಲಿ ರೂಪಿಸಿದ ಅನುಪಮ ಕೃತಿಯಾಗಿದೆ. ಮಣ್ಣಿನಂತಹ ಪದದಲಿತ - ವ್ಯಥಿತ ವಸ್ತುವನ್ನು ಮಹಾಕಾವ್ಯದ ವಸ್ತುವನ್ನಾಗಿ ಆಯ್ದುಕೊಂಡು ಅದರ ಮೂಕ ವೇದನೆ ಹಾಗೂ ಮುಕ್ತಿಯ ಆಕಾಂಕ್ಷೆಗೆ ಧ್ವನಿಯುಸ್ಸಿತ್ತಿದ್ದಾರೆ. ಪಾತ್ರೆಯ ರೂಪದಲ್ಲಿ ಪರಿವರ್ತನೆಯಾಗಬೇಕಾದ ಮಣ್ಣು ಅನುಭವಿಸಬೇಕಾದ

ಸಂಸ್ಕಾರಗಳು ಕರ್ಮಬದ್ಧ ಆತ್ಮವು ಪರಿಶುದ್ಧವಾಗುತ್ತ ಸಾಗುವ ಮುಕ್ತಿಯಾತ್ರೆ ಯ ರೂಪಕವಾಗಿ ಇಲ್ಲಿ ನಿರೂಪಿತವಾಗಿವೆ. ಆಧುನಿಕ ಹಿಂದಿ ಸಾಹಿತ್ಯದಲ್ಲಿದಾರ್ಶನಿಕ ಮಹಾಕಾವ್ಯವಾಗಿ ಇದು ಮನ್ನಣೆ ಪಡೆದಿದೆ. ಆತ್ಮಹಿತದೊಂದಿಗೆ ಮಿತವಚನದಿಂದ ಜನಕಲ್ಯಾಣದಲ್ಲಿ ನಿರತರಾದ ಆಚಾರ್ಯ ಶ್ರೀ ವಿದ್ಯಾಸಾಗರರು ಬೆಳಗಾವಿ ಜಿಲ್ಲೆಯು ದೇಶಕ್ಕೆ ನೀಡಿದ ಮುನಿಶ್ರೇಷ್ಠರಲ್ಲೊಬ್ಬರು.

## ಸಮಾರೋಪ

ಒಟ್ಟಿನಲ್ಲಿ ಪ್ರಾಚೀನ ಕಾಲದಿಂದಲೂ ಶಾಸ್ತ್ರಸಮ್ಮತ ರೀತಿಯಲ್ಲಿ ಮುನಿಪರಂಪರೆಯನ್ನು ರಕ್ಷಿಸಿಕೊಂಡು, ಅದಕ್ಕೆ ಯಾವುದೇ ರೀತಿಯ ಅಪಚಾರವುಂಟಾಗದಂತೆ ಮುಂದುವರಿಸಿಕೊಂಡು ಬರುವಲ್ಲಿ ಕರ್ನಾಟಕದ ಬೆಳಗಾವಿ ಜಿಲ್ಲೆಯ ಮುನಿಶ್ರೇಷ್ಠರ ಚಾರಿತ್ರ್ಯ ಉಲ್ಲೇಖಾರ್ಹವಾದುದು. ಸರ್ವಸಂಗ ಪರಿತ್ಯಾಗಿಗಳಾಗಿ, ವೀತರಾಗಭಾವವನ್ನು ಧರಿಸಿ, ಸದಾ ರತ್ನ ತ್ರಯಗಳ ಆರಾಧನೆಯಲ್ಲಿ ತೊಡಗಿ, ತಮ್ಮ ಸದಾಚಾರ, ತಪಸ್ಸು ಸ್ವಾಧ್ಯಾಯಗಳ ಮೂಲಕ ಸಮಾಜಕ್ಕೆ ಮಾರ್ಗದರ್ಶನ ಮಾಡುತ್ತ, ಅದರ ಒಳಿತಿಗಾಗಿ, ಈ ಮುನಿಗಳು ಶ್ರಮಿಸಿದ್ದಾರೆ. ಲೌಕಿಕ ಶಿಕ್ಷಣದ ಅನುಕೂಲತೆ ಇಲ್ಲದ ಸಂದರ್ಭಗಳಲ್ಲಿಯೂ, ಆಯುಷ್ಯದ ಇಳಿವಯಸ್ಸಿನಲ್ಲಿಯೂ ದೀಕ್ಷೆವಹಿಸಿದ ಮುನಿಗಳು ತಮ್ಮ ಅವಿರತ ಅಧ್ಯಯನದ ಮೂಲಕ ಜ್ಞಾನಾವರಣೀಯ ಕರ್ಮ ಉಪಶಮನಗೊಳ್ಳಲು ಶಾಸ್ತ್ರಗ್ರಂಥಗಳನ್ನು ಓದಿ - ಓದಿಸಿ, ಮನನ ಮಾಡಿಕೊಂಡು ಶಾಸ್ತ್ರದ ಸೂಕ್ಷ್ಮ, ಕ್ಲಿಷ್ಟ ವಿಚಾರಗಳನ್ನೂ ಅರಿಯಬಲ್ಲ ಪಾಂಡಿತ್ಯವನ್ನುಪಡೆದವರಾದುದು ಆತ್ಮವಿಕಾಸದ ಮಾರ್ಗದಲ್ಲಿನ ಅಭೂತಪೂರ್ವ ಪ್ರಗತಿಗೆ ನಿದರ್ಶನವಾಗಿದೆ.''ಬದುಕು, ಬದುಕಗೊಡು'' ''ಸರ್ವಜೀವಿ ಮಾತ್ರಗಳ ಹಿತಬಯಸುವುದು ಜೈನಧರ್ಮ'' ಎಂಬಂತೆ ಈ ಮುನಿಶ್ರೇಷ್ಠರು ಸನಾತನ ಜೈನ ಧರ್ಮದ ಆಚರಣೆಗಳನ್ನು ಸೂಕ್ಷ್ಮವಾಗಿ ಪಾಲಿಸುತ್ತಿದ್ದರೂ ಪ್ರಚಲಿತ ಸಂದರ್ಭಕ್ಕನುಸರಿಸಿ ಮಾನವಕಲ್ಯಾಣಕ್ಕಾಗಿ ಉಚಿತ ಮಾರ್ಗದರ್ಶನ ಮಾಡುತ್ತ ಬಂದಿದ್ದಾರೆ. ಜಿನಮಂದಿರಗಳ ನಿರ್ಮಾಣ, ಜೀರ್ಣೋದ್ಧಾರ, ಪಂಚಕಲ್ಯಾಣ, ಸಭೆ-ಸಮಾರಂಭ, ಪ್ರವಚನ, ಶಾಸ್ತ್ರ ಚಿಂತನೆ, ಪ್ರಕಟಣೆ, ಸಂರಕ್ಷಣೆ - ಮೊದಲಾದ ಕಾರ್ಯಗಳಲ್ಲಿ ಅವರು ನೀಡಿದ ಪ್ರೇರಣೆ, ಮಾರ್ಗದರ್ಶನ ಅತಿಶಯವಾದದ್ದು. ಸರ್ವಜೀವಿಗಳಿಗೆ ಉಪಯುಕ್ತವಾಗುವ ಧರ್ಮಶಾಲೆ, ಆಸ್ಪತ್ರೆ, ವಿದ್ಯಾಸಂಸ್ಥೆಗಳ ಸ್ಥಾಪನೆಗೆ ಕಾರಣರಾದಂತೆಯೇ ಸಾಹಿತಿ, ಕಲಾವಿದ, ಪಂಡಿತರಿಗೆ ಮಾನ್ಯತೆ ನೀಡುವ ಮೂಲಕ 'ಗುಣಾಗೌರವ' ಕಾರ್ಯಕ್ಕೆ ಪ್ರೇರಣೆ ನೀಡಿ ಸಾಹಿತ್ಯ, ಕಲೆ, ದಾನ-ಧರ್ಮಗಳ ಬೆಳವಣಿಗೆಗೆ ಮುನಿಗಳು ಅಪಾರ ಸೇವೆ ಸಲ್ಲಿಸಿದ್ದಾರೆ. ದಕ್ಷಿಣ-ಉತ್ತರ ಭಾರತಗಳೆಂಬ ಭೇದವನ್ನು ಅಳಿಸಿ ಹಾಕಿ ತಮ್ಮ ಸದಾಚಾರದಿಂದ ಭಾವೈಕ್ಯವನ್ನು ನಿರ್ಮಿಸಿ ಆದಾನ-ಪ್ರದಾನ ಕಾರ್ಯವನ್ನು ಕೈಕೊಂಡಿದ್ದಾರೆ. ಕನ್ನಡದ ಭರತೇಶ ವೈಭವ, ರತ್ನಾಕರನ ಶತಕಗಳು, ನಯಸೇನನ ಧರ್ಮಾಮೃತಗಳಂತಹ ಕೃತಿಗಳು ಹಿಂದಿ, ಮರಾಠಿ ಭಾಷೆಗಳಿಗೆ ಅನುವಾದವಾದುದು ಮುನಿಗಳ ಪ್ರೇರಣೆಯಿಂದಾಗಿ. ಅದೇ ರೀತಿ - ಇತರ ಭಾಷೆಗಳ ಪ್ರಾಚೀನ ಕೃತಿಗಳು ಕನ್ನಡದಲ್ಲಿ ಲಭ್ಯವಾಗುವಂತೆ ಮಾಡಿದ್ದಾರೆ. ಈ ರೀತಿಯ ಕೊಳು-ಕೊಡೆ ಯಾವುದೇ ಸಮಾಜವನ್ನು ಸಜೀವವಾಗಿ ಜಾಗೃತವಾಗಿ ಇಡಲು ಸಾಧ್ಯ. ಸ್ವಂತದ ಆತ್ಮಕಲ್ಯಾಣದೊಂದಿಗೆ ಲೋಕದ ಸರ್ವಜೀವಿಗಳ ಕಲ್ಯಾಣವನ್ನು ಬಯಸುತ್ತ, ತಮ್ಮ ಚಾರಿತ್ರ್ಯದ ಮೂಲಕ ಬದುಕಿನುದ್ದಕ್ಕೂ ಆ ನಿಟ್ಟಿನಲ್ಲಿ ಚಿಂತಿಸುತ್ತ ಬಂದ ಮುನಿಶ್ರೇಷ್ಠರನ್ನು ನೀಡಿರುವಲ್ಲಿ ಬೆಳಗಾವಿ ಜಿಲ್ಲೆಗೆ ಮನ್ನಣೆಯ ಸ್ಥಾನ ಮೀಸಲಾಗಿದೆ.

# 'ಪಾರ್ಶ್ವನಾಥ ಪುರಾಣ' ಬೊಮ್ಮರಸ ಪಂಡಿತರ ಸಂಪಾದನಕ್ರಮ

ಡಾ॥ ಎನ್. ಎಸ್. ತಾರಾನಾಥ್

ಕನ್ನಡ ಸಾಹಿತ್ಯ-ಸಂಸ್ಕೃತಿಗಳ ಸಂಶೋಧನ ಕ್ಷೇತ್ರದ ಆರಂಭ ಕಾಲದಲ್ಲಿ ಕೆಲಸಮಾಡಿ ಖ್ಯಾತಿಗಳಿಸಿದ ವಿದೇಶೀಯರಲ್ಲಿ ಮುಖ್ಯರು ಬಿ.ಎಲ್. ರೈಸ್. ಶಾಸನಗಳನ್ನು ಸಂಪಾದಿಸುವಾಗಾಗಲೀ, ಗ್ರಂಥಗಳನ್ನು ಸಂಪಾದಿಸುವಾಗಾಗಲೀ ರೈಸರು ದೇಶೀಯ ವಿದ್ವಾಂಸರ ನೆರವನ್ನು ಅಪಾರವಾಗಿ ಪಡೆದಿದ್ದರು. 'ಶಬ್ದಾನುಶಾಸನ', 'ಪಂಪಭಾರತ'ಗಳನ್ನು ಪರಿಷ್ಕರಿಸುವಾಗ ರೈಸರು ಬುರುಡುಗುಂಟೆ ಶ್ರೀನಿವಾಸಯ್ಯಂಗಾರ್, ಚಿಂಚೋಳಿ ವೆಂಕಣ್ಣಾಚಾರ್, ಬೇಗೂರು ಮಲ್ಲಪ್ಪ, ಅರಮನೆ ಪಂಡಿತ ಅಯ್ಯಾಶಾಸ್ತ್ರಿಗಳ ಕಣ್ಣರಿಕೆಯಲ್ಲಿ ಕೃತಿ ಪರಿಷ್ಕರಣಕಾರ್ಯ ನಡೆಸಿದರು. ರೈಸರು ಇವರ ನೆರವನ್ನು ತಮ್ಮ ಗ್ರಂಥಗಳ ಆರಂಭದಲ್ಲಿ ನೆನೆದಿದ್ದರೂ ಈ ವಿದ್ವಾಂಸರು ಕನ್ನಡಿಗರ ಗಮನಕ್ಕೆ ಅಷ್ಟಾಗಿ ಬರಲೇ ಇಲ್ಲ. ರೈಸರ ಖ್ಯಾತಿಗೆ ಪರೋಕ್ಷವಾದ ಪಾಲು ಈ ವಿದ್ವಾಂಸರದೇ. ರೈಸರೊಂದಿಗೆ ಕೆಲಸ ಮಾಡಿದವರಿರಲಿ, ರೈಸರ ಸಮಕಾಲದಲ್ಲೇ ಕೆಲಸ ಮಾಡಿದ ಪುಸ್ತಕಂ ಅಳಸಿಂಗಾಚಾರಿ, ಬಿ. ಮಲ್ಲಪ್ಪ, ಕೆ.ಬಿ ಪಾಠಕ್ ಇಂಥವರೂ ರೈಸರ ಕಾಂತಿಯ ಮುಂದೆ ಮಸುಳಿ ಹೋದರೆನ್ನಬೇಕು. ರೈಸರ ಸಮಕಾಲದಲ್ಲಷ್ಟೇ ಅಲ್ಲ, ರೈಸರೊಂದಿಗೆ ಕೆಲಸ ಮಾಡಿದ ಬೊಮ್ಮರಸ ಪಂಡಿತರು ಕೂಡ ಈ ವರ್ಗಕ್ಕೆ ಸೇರಿದವರೆನ್ನಬಹುದು.

ಹಲವು ಭಾಷೆಗಳನ್ನು ಬಲ್ಲವರಾಗಿದ್ದ ಬೊಮ್ಮರಸ ಪಂಡಿತರು ಬೆಂಗಳೂರಿನಲ್ಲಿ ಪುರಾತತ್ವ ಇಲಾಖೆಯಲ್ಲಿ ರೈಸರೊಂದಿಗೆ ಕೆಲಸ ಮಾಡಿದ ಹಿರಿಯರು. ಅವರಿಗೆ ಕನ್ನಡ, ಸಂಸ್ಕೃತ, ಹಿಂದಿ, ಉರ್ದು, ಇಂಗ್ಲಿಷ್‌ಗಳಲ್ಲಿ ಪರಿಣತಿಯಿತ್ತು. ವ್ಯಾಕರಣ, ಛಂದಸ್ಸು, ವೈದ್ಯ, ಜ್ಯೋತಿಷ ಮುಂತಾದ ನಾನಾ ಶಾಸ್ತ್ರ ಕ್ಷೇತ್ರಗಳ ಪರಿಚಯವಿತ್ತು. ರೈಸರ ಕಾರ್ಯಕ್ಷೇತ್ರದ ಸ್ವರೂಪ ಪರಿಚಯ, ಎಚ್ ಶೇಷಯ್ಯಂಗಾರ್, ಎಂ. ಎ. ರಾಮಾನುಜ ಅಯ್ಯಂಗಾರ್ಯರ ಗೆಳೆತನಗಳು ಅವರನ್ನು ಗ್ರಂಥ ಸಂಪಾದಕರನ್ನಾಗಿ, ಪ್ರಾಚೀನ ಕೃತಿ ವ್ಯಾಖ್ಯಾನಕಾರರನ್ನಾಗಿ ರೂಪಿಸಿದುವು. ಫಲವಾಗಿ ಅವರು 'ಯಶೋಧರ ಚರಿತ್ರೆ'ಯೇ ಮುಂತಾದ ಕೆಲವು ಕೃತಿಗಳನ್ನು ಸಂಪಾದಿಸಿದರು, ವ್ಯಾಖ್ಯಾನಿಸಿದರು. ಪ್ರಸ್ತುತ ಅವರ 'ಪಾರ್ಶ್ವನಾಥ ಪುರಾಣ'ವನ್ನು ಕುರಿತು ವಿವೇಚಿಸಿದೆ.

೨೩ನೆಯ ತೀರ್ಥಂಕರನಾದ ಪಾರ್ಶ್ವನಾಥನನ್ನು ಕುರಿತು ಪಾರ್ಶ್ವಪಂಡಿತ ಬರೆದಿರುವ 'ಪಾರ್ಶ್ವನಾಥ ಪುರಾಣಂ' ೧೬ ಆಶ್ವಾಸಗಳಿರುವ ಒಂದು ದೊಡ್ಡ ಕೃತಿ. ಈ ಕೃತಿಯನ್ನು ಬೊಮ್ಮರಸ ಪಂಡಿತರು ತುಂಬ ಶ್ರಮವಹಿಸಿ ಸಂಪಾದಿಸಿದ್ದಾರೆ. ಕೃತಿ ಸಂಪಾದನೆಗೆ ಶ್ರವಣಬೆಳಗೊಳದ

ಜೈನಮಠದ ಓಲೆ ಪ್ರತಿ, ಮೈಸೂರಿನ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ ಕಾಗದದ ಪ್ರತಿ, ಮದರಾಸಿನ ಶೇಷಯ್ಯಂಗಾರ್ಯರ ಅಸಮಗ್ರ ಪ್ರತಿ, ಮೂಡುಬಿದರೆಯ ಪುಸ್ತಕ ಭಂಡಾರದ ಎರಡು ಓಲೆ ಪ್ರತಿಗಳನ್ನು ಅವಲಂಬಿಸಿದ್ದಾರೆ. ಶ್ರವಣ ಬೆಳುಗೊಳದ ಜೈನಮಠದ ಓಲೆಪ್ರತಿಯನ್ನು ಮೂಲ ಪ್ರತಿಯನ್ನಾಗಿ ಅಥವಾ ಆಧಾರ ಪ್ರತಿಯನ್ನಾಗಿ ಇರಿಸಿಕೊಂಡು ಇತರ ಪ್ರತಿಗಳನ್ನು ಪಾಠಪರಿಷ್ಕರಣ ಕಾರ್ಯದಲ್ಲಿ ಉಪಯೋಗಿಸಿಕೊಂಡಿದ್ದಾರೆ. ಕೃತಿಯ ಆರಂಭದಲ್ಲಿ ಬರೆದಿರುವ ಸಂಪಾದಕರ ಮಾತಿನಲ್ಲಿ ಅವರು ಹಸ್ತಪ್ರತಿಗಳನ್ನು ಯಾರಿಂದ, ಯಾರ ಮೂಲಕ , ಹೇಗೆ ಸಂಗ್ರಹಿಸಿದರು ಎಂಬುದನ್ನು ಕೆಲವೇ ಮಾತುಗಳಲ್ಲಿ ತಿಳಿಸಿದ್ದಾರೆ. ಅಲ್ಲಿಯೇ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ನ ಕಾಗದ ಪ್ರತಿ ಅಶುದ್ಧ ಪ್ರತಿಯೆಂದೂ, ಅದು ಶ್ರವಣಬೆಳುಗೊಳ ಮಠದ ಪ್ರತಿಯ ಪರಂಪರಾಗತ ಪ್ರತಿಯೆಂದೂ ಗುರುತಿಸಿದ್ದಾರೆ. ಶೇಷಯ್ಯಂಗಾರ್ಯರ ಪ್ರತಿ ೪ ಆಶ್ವಾಸಗಳವರೆಗೂ, ಮೂಡುಬಿದರೆಯ ಪ್ರತಿಗಳು ೧೫ ಆಶ್ವಾಸಗಳವೆಗೂ ಮಾತ್ರ ಇದ್ದು ಅವು ಹೇಗೆ ಅಸಮಗ್ರವಾಗಿವೆ ಎಂಬುದನ್ನು ವಿವರಿಸಿದ್ದಾರೆ. 'ನಮ್ಮ ಮೂಲ ಪ್ರತಿಯ ಹದಿನಾರನೆಯ ಆಶ್ವಾಸದಲ್ಲಿದ್ದ ಗ್ರಂಥಪಾತಗಳನ್ನು ಸರಿಪಡಿಸಲು ಸಾಧ್ಯವಾಗಲೇ ಇಲ್ಲ' ಎಂದು ಪಂಡಿತರು ಹೇಳಿರುವ ಮಾತು ಸಂಪಾದಕನಿಗಿರಬೇಕಾದ ಪ್ರಾಮಾಣಿಕತೆಗೆ ಸಾಕ್ಷಿಯಾಗಿದೆ.

ಸಂಪಾದಿಸಿದ ಗ್ರಂಥ ಭಾಗವನ್ನು ಪ್ರಕಟಿಸುವ ಮುನ್ನ ಬೊಮ್ಮರಸ ಪಂಡಿತರು ಗ್ರಂಥಾರಂಭದಲ್ಲಿ 'ಕವಿಚರಿತ್ರೆ ಮತ್ತು ಗ್ರಂಥ 'ಎಂಬ ಮೂರ್‍ನಾಲ್ಕು ಪುಟಗಳ ಒಂದು ಕವಿಕಾವ್ಯ ಪ್ರವೇಶಿಕೆ ಬರೆದಿದ್ದಾರೆ. ಅದರಲ್ಲಿ ಪಾರ್ಶ್ವಕವಿಯ ಇತಿವೃತ್ತ ವಿವರವನ್ನು ರೇಖಾಮಾತ್ರವಾಗಿ ಹೇಳಿದ್ದಾರೆ. ಆರ್.ನರಸಿಂಹಾಚಾರ್ಯರ 'ಕವಿಚರಿತೆ'ಯ ಮೊದಲನೆಯ ಸಂಪುಟದ ನೆರವನ್ನು ಈ ಸಂಬಂಧದಲ್ಲಿ ಪಡೆದಿರುವುದು ಸ್ಪಷ್ಟವಾದರೂ ಕೆಲ್ಲೊಳೆ ಶಾಸನವನ್ನು ಕಣ್ಣಾರೆ ನೋಡಿ ಅದರ ಕರ್ತೃ ಪಾರ್ಶ್ವನೇ ಎಂಬುದನ್ನು ಪದ್ಯಗಳ ಭಾವಸಾಮ್ಯ ತೋರಿಸಿ ದೃಢೀಕರಿಸಿದ್ದಾರೆ. ತರುವಾಯ, ಗ್ರಂಥಾರಂಭದ ವಿವರ ನೀಡಿದ್ದಾರೆ. ಅನಂತರ ಗ್ರಂಥವಿನ್ಯಾಸ, ವಸ್ತುವಿಮರ್ಶೆ, ಕವಿಕಾವ್ಯದ ಬಗ್ಗೆ ಕೆಲವು ವಿಶ್ಲೇಷಣಾತ್ಮಕ ಮಾತು, ಕಾವ್ಯದ ಆಕರಗಳನ್ನು ಕುರಿತು ಪ್ರಸ್ತಾಪಿಸಿದ್ದಾರೆ. ಕವಿಕಾವ್ಯವನ್ನು ಕುರಿತು ಬೊಮ್ಮರಸ ಪಂಡಿತರು ಆಡಿರುವ ಮಾತುಗಳು ಪ್ರಶಂಸೆಯದೇ, ಆದರೂ ಅವು ವಿಶೇಷಣಗಳಾಗದೆ, ಗುಣವನ್ನು ಎತ್ತಿತೋರುವಂಥವಾಗಿವೆ. 'ಪದ್ಯಗಳು ಸರಳವಾಗಿವೆ. ಪ್ರಾಸಿಗಾಗಿ ಯಾವ ಶ್ರಮವನ್ನೂ ಪಟ್ಟಿಲ್ಲ. ಪದಗಳು ಹೊಂದಿಕೆಯಾಗಿ ಪ್ರವಾಹದಂತೆ ಹರಿದು ಪದ್ಯಗಳು ಸಾಗುತ್ತವೆ. ಕವಿಗೆ ವರ್ಣನೆಯಲ್ಲಿ ಹೆಚ್ಚು ಉತ್ಸಾಹವೆಂದು ತೋರುತ್ತದೆ. ಅರ್ಥಾಂತರವುಳ್ಳ ಪದಗಳನ್ನು ಪ್ರಯೋಗಿಸಿ, ವಿರೋಧವನ್ನು ಹೇಳಿ- ಆ ಪದಗಳ ಅರ್ಥಾಂತರದಿಂದಲೇ ಅದಕ್ಕೆ ಪರಿಹಾವನ್ನು ಹೇಳುವುದರಲ್ಲಿ (ವಿರೋಧಾಭಾಸಾಲಂಕಾರದಲ್ಲಿ) ಈ ಕವಿಗೆ ತುಂಬಾ ಇಷ್ಟವೆಂದು ತೋರುತ್ತದೆ... ಶ್ಲೇಷೆ ಮೊದಲಾದ ಸಾಮಾನ್ಯವಾದ ಎಲ್ಲಾ ಅಲಂಕಾರಗಳನ್ನೂ ಬಳಸಿದ್ದಾನೆ. ದೂರಾನ್ವಯದ ಪದ್ಯಗಳು ಹೇರಳವಾಗಿವೆ. ವರ್ಣನೆಯಲ್ಲಿ ಚಮತ್ಕಾರ ಕಂಡುಬರುತ್ತದೆ. ಸಾಮಾನ್ಯ ವಿಷಯವನ್ನು ಜಾಣ್ಮೆಯಿಂದ ಹೇಳುವುದು ಕವಿಗೆ ಇಷ್ಟ'' ಈ ಮಾತುಗಳನ್ನು ಪಂಡಿತ ವರ್ಗಕ್ಕೆ ಸೇರಿದ ಬೊಮ್ಮರಸರು ಬರೆದರೇ ಎನ್ನುವಂತಿವೆ. ವಿಶೇಷಣ ಮುಕ್ತವೂ, ಖಚಿತಾಭಿಪ್ರಾಯದ್ದೂ ಆದ ಇವು ಕೃತಿಭಾಗದ ಸೂಕ್ತಿ ವಿಮರ್ಶೆಯ ವಾಕ್ಯಗಳಾಗಿವೆ. ಜಲಕೇಳಿ, ವನಕೇಳಿ, ನರ್ತನ ಸಂಗೀತಗೋಷ್ಠಿ, ವಜ್ರನಾಭಿ ಚಕ್ರವರ್ತಿಯಾಗುವ ಸಂದರ್ಭದಲ್ಲಿ ಬರುವ ಸಂಪತ್ತು ಭೋಗಗಳು ಇಂಥ ಕಡೆಗಳಲ್ಲಿ ಕವಿ ವಿಸ್ತಾರವಾಗಿ ವರ್ಣಿಸಿರುವುದನ್ನು

ಗುರುತಿಸಿ'ಹೀಗೆ ಗ್ರಂಥದ ಮೊದಲಿಂದ ಕೊನೆಯವರೆಗೂ ವರ್ಣನೆಗಳು ಮಿತಿಮೀರಿವೆಯೋ ಎನ್ನುವಷ್ಟು ಹೆಚ್ಚಾಗಿದೆ' ಎಂದಿದ್ದಾರೆ. ಇದು ಪಂಡಿತರ ನಿಷ್ಪಾಕ್ಷಿಕ ಗುಣದ ಕುರುಹು.

ಪಂಡಿತರ ಉಪೋದ್ಘಾತದ ಕೊನೆಯ ಪ್ಯಾರಾ ಪಾರ್ಶ್ವಚರಿತೆಗಳ ಹಿನ್ನೆಲೆಯಲ್ಲಿ ಮುಖ್ಯವಾದುದು ಪಾರ್ಶ್ವಪಂಡಿತನ ಕೃತಿ ಗುಣಭದ್ರ, ಚಾಮುಂಡರಾಯರ ಕಥಾ ಮಾರ್ಗದ್ದೇ ಎಂಬುದನ್ನು ಪಂಡಿತರು ಸ್ಪಷ್ಟವಾಗಿ ಹೇಳಿದ್ದಾರೆ. ಅವರೊಂದಿಗೆ ಕಮಠನ ಪತ್ನಿ ಹೆಣ್ಣಾನೆಯಾಗಿ ಹುಟ್ಟುವುದರ ಲೋಪ, ಮಹೀಪಾಲ ಪಾರ್ಶ್ವನ ತಾಯಿಯ ಅಣ್ಣನೆಂಬ ಪ್ರತ್ಯೇಕ ಸೂಚನೆ, ಪಾರ್ಶ್ವ ತೀರ್ಥಂಕರನ ತಂದೆಯ ಹೆಸರು 'ಅಶ್ವಸೇನ' ಎಂಬ ನಾಮಾಂಕಿತ ಮಾರ್ಪಾಡುಗಳನ್ನು ಗುರುತಿಸಿ ಈ ವ್ಯತ್ಯಾಸಗಳನ್ನು ನೋಡಿದರೆ ಪಾರ್ಶ್ವಪಂಡಿತನು ಬೇರಾವುದೋ ಗ್ರಂಥವನ್ನು ಆಧಾರವಾಗಿಟ್ಟುಕೊಂಡು ತನ್ನ ಗ್ರಂಥವನ್ನು ಬರೆದಿರಬಹುದೆಂದೂಹಿಸಲು ಅವಕಾಶವಿದೆ' ಎಂದಿದ್ದಾರೆ. ಇವೇನೂ ಸಣ್ಣ ವಿಷಯವಲ್ಲ. ಈ 'ಕವಿಚರಿತ್ರೆ ಮತ್ತು ಗ್ರಂಥ'ವೆಂಬ ಭಾಗ ಎಷ್ಟೇ ಚಿಕ್ಕದಾಗಿದ್ದರೂ ಮೌಲಿಕ ಅಂಶಗಳನ್ನು ಒಳಗೊಂಡಿದೆ.

ಇನ್ನು - ಗ್ರಂಥ ಸಂಪಾದನೆಯ ವಿಷಯ. ಗ್ರಂಥವನ್ನು ಆಶ್ವಾಸಗಳಿಗನುಗುಣವಾಗಿ ವಿಭಾಗಿಸಿಕೊಂಡು ಆಶ್ವಾಸಗಳಲ್ಲಿ ಪದ್ಯ-ಗದ್ಯಗಳನ್ನು ಘಟಕಗಳಾಗಿ ಪ್ರತ್ಯೇಕಿಸಿಕೊಂಡು ಗ್ರಂಥವನ್ನು ಬೊಮ್ಮರಸ ಪಂಡಿತರು ಸಂಪಾದಿಸಿದ್ದಾರೆ. ಇದು ಸರ್ವತ್ರವೂ ಪ್ರಚುರವಿರುವ ಕ್ರಮವೇ. ಶ್ರವಣಬೆಳುಗೊಳದ ಪ್ರತಿಯನ್ನು ಮೂಲ ಪ್ರತಿಯನ್ನಾಗಿರಿಸಿಕೊಂಡು ಇತರ ಪ್ರತಿಗಳ ನೆರವನ್ನು ಪಡೆದಿದ್ದರೂ ಶುದ್ಧಪಾಠವನ್ನು ನೀಡುವಾಗ ಎಲ್ಲ ಪ್ರತಿಗಳ ಪಾಠಗಳನ್ನೂ ಪದ್ಯದ ಅಡಿಯಲ್ಲಿ ಪಾಠಾಂತರಗಳಾಗಿ ಕೊಟ್ಟಿಲ್ಲ. ಬಳಸಿದ ಹಸ್ತಪ್ರತಿಗಳಿಗೆ ಅಂಕಿತಗಳನ್ನೇ ನೀಡಿಲ್ಲ. ಹೀಗಾಗಿ ಗ್ರಂಥದಲ್ಲಿ ತಮಗೆ ಅವಶ್ಯವೆಂದೂ, ಮುಖ್ಯವೆಂದೂತೋರಿದ ಕಡೆಗಳಲ್ಲಿ ಪಂಡಿತರು ಪಾಠಾಂತರಗಳನ್ನು ಕೊಟ್ಟಿದ್ದರೂ ಅದು ಯಾವ ಪ್ರತಿಯ ಪಾಠವೆಂಬುದನ್ನು ಸಾಮಾನ್ಯ ಮೂಲಪ್ರತಿ, ಪುತ್ರಿಕಾಪ್ರತಿ, ಗ್ರಂಥಪಾತ, ಶೋಧನೆ, ಅಸಮಗ್ರಪ್ರತಿ ಇತ್ಯಾದಿ ಮಾತುಗಳನ್ನು ಬೊಮ್ಮರಸ ಪಂಡಿತರು ಗ್ರಂಥಾರಂಭದಲ್ಲಿ ಬಳಸಿದ್ದಾರೆ, ಮೈಸೂರಿನ ಕಾಗದದ ಪ್ರತಿ ಶ್ರವಣಬೆಳಗೊಳದ ಪರಂಪರೆಯ ಪ್ರತಿ ಎಂಬುದನ್ನು ತಿಳಿಸಿದ್ದಾರೆ. ಆದರೆ ತೀರ ಆಧುನಿಕವಾದ, ಗ್ರಂಥಸಂಪಾದನ ವಿಜ್ಞಾನದ ಎಲ್ಲ ತತ್ತ್ವಗಳನ್ನೂ ಅವರು ಬಳಸಿಲ್ಲ. ಪೀಠಿಗೆಯ ರಚನೆ, ಪಾಠ ಸಂಕಲನ, ತ್ರುಟಿತ ಭಾಗಗಳ ನಿಖರ ಸೂಚನೆ, ಊಹಾತ್ಮಕ ಪರಿಷ್ಕರಣದ ಪ್ರತ್ಯೇಕ ಇಂಗಿತ, ಇತ್ಯಾದಿಗಳೆಡೆ ಅವರು ಗಮನ ಹರಿಸಿಲ್ಲ. ಬಹುಮಟ್ಟಿಗೆ ಅವರ ಗ್ರಂಥ ಸಂಪಾದನ ಕ್ರಮ ಶೇಷಯ್ಯಂಗಾರ್ಯರ ಹಾದಿಯದಾಗಿದೆ.

ಬೊಮ್ಮರಸ ಪಂಡಿತರು ತುಂಬ ಶ್ರಮವಹಿಸಿ ಈ ಕೃತಿ ಸಂಪಾದಿಸಿದ್ದಾರೆ ಎಂದು ಈ ಹಿಂದೆ ಹೇಳಿದೆ. ಇವರ ಈ ಕೃತಿ ಸಂಪಾದಿತವಾಗಿ ಪ್ರಕಟವಾದುದು ೧೯೫೬ ರಲ್ಲಿ. ಇವರಿಗಿಂತ 2 ವರ್ಷಗಳ ಹಿಂದೆಯೇ ಎಂದರೇ ೧೯೫೪ರಲ್ಲಿ ಎಂ. ಮರಿಯಪ್ಪಭಟ್ಟ ಮತ್ತು ಎಂ. ಗೋವಿಂದರಾವ್ ಅವರು ಸೇರಿ ಈ ಕೃತಿಯನ್ನು ಸಂಪಾದಿಸಿ ಪ್ರಕಟಿಸಿದ್ದರು. ಮದರಾಸು ವಿಶ್ವವಿದ್ಯಾನಿಲಯದ ವತಿಯಿಂದ ಮುದ್ರಿತವಾದ ಆ ಕೃತಿಯು ಆಕರ್ಷಕವಾಗಿ ಅಚ್ಚಾಗಿದ್ದರೂ, ಮೈಸೂರಿನ ಓರಿಯಂಟಲ್ ಲೈಬ್ರರಿಯ ಏಕಮಾತ್ರ ಕಾಗದದ ಪ್ರತಿಯನ್ನು ಅವಲಂಬಿಸಿ ಸಂಪಾದಿತವಾಗಿದೆ. ಯಾವುದನ್ನು ಬೊಮ್ಮರಸ ಪಂಡಿತರು ಅಶುದ್ಧ, ನಿಷ್ಪ್ರಯೋಜಕ ಎಂದು ತಿರಸ್ಕರಿಸಿ ಪಾಠಾಂತರ ಕೂಡ ಸೂಚಿಸಲು ಹಿಂಜರಿವರೋ, ಅದನ್ನೇ ಅವಲಂಬಿಸಿ ಮರಿಯಪ್ಪಭಟ್ಟರು ಕೃತಿಯನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಹೀಗಾಗಿ

ಮರಿಯಪ್ಪಭಟ್ಟರ ಆವೃತ್ತಿಯಲ್ಲಿಹಲವಾರು ದೋಷ ಲೋಪ, ನ್ಯೂನತೆಗಳು ಉಳಿದುಹೋಗಿವೆ. ಹದಿನಾರನೆಯ ಆಶ್ವಾಸದ ಹಲವಾರು ಪದ್ಯಗಳು ಗ್ರಂಥಪಾತಗಳಿಂದ ಹಾಗೆಯೇ ಉಳಿದುಹೋಗಿವೆ. ಇತರೆಡೆಗಳಲ್ಲಿ ಕೂಡ ಅವರ ಸಂಪಾದನೆ ಬೊಮ್ಮರಸ ಪಂಡಿತರ ಸಂಪಾದನೆಯ ಮಟ್ಟದೊಂದಿಗೆ ಹೋಲಿಸಿದರೆ ಸಮರ್ಪಕವಲ್ಲ ಎನಿಸುತ್ತದೆ. ಬೊಮ್ಮರಸ ಪಂಡಿತರಿಗಿದ್ದ ಪ್ರಾಚೀನ ಕಾವ್ಯಗಳ ತಲಸ್ಪರ್ಶಿ ಪರಿಚಯ. ಹಳಗನ್ನಡದ ಮೇಲಣಭಾಷಾ ಪ್ರಭುತ್ವ, ಅನ್ಯಶಾಸ್ತ್ರಗಳ ಅರಿವು, ಅವರ ಪರಿಷ್ಕರಣವನ್ನು ಉತ್ತಮ ಮಟ್ಟಕ್ಕೇರಿಸಿದೆ. ಕಠಿಣವೆನಿಸುವ ಪಾಠಕ್ಲಿಷ್ಟತೆಯಿರುವ, ಅರ್ಥದ ಅಸ್ಪಷ್ಟತೆಯಿರುವಂತೆ ತೋರುವ ಯಾವ ಪದ್ಯವನ್ನಾದರೂ ಆರಿಸಿಕೊಂಡು ಪಂಡಿತರ ಮತ್ತು ಭಟ್ಟರ ಪರಿಷ್ಕರಣಗಳನ್ನು ಹೋಲಿಸಿದರೂ ಈ ವಿಷಯ ಖಚಿತಗೊಳ್ಳುತ್ತವೆ. ಉದಾಹರಣೆಗೆ - ಕಮಠನ ಕೆಟ್ಟ ಗುಣ ಹೇಳುವ ಪದ್ಯವೊಂದು ಭಟ್ಟರ ಪರಿಷ್ಕರಣದಲ್ಲಿ ಹೀಗಿದೆ:

ನಂಟರ್ ಕಿತವರೆ ಜೂದಿನ
ತೀಂಟೆಯೆ ನೆಲಸಿರ್ಪ ತಾಣಮನ್ಯಾಂಗನೆಯಂ
ಕಂಟಣಿಸದೆ ತಂದು ಕುಡುವ
ಕುಂಟಣಿಗಳವಂಗೆ ಮಾನ್ಯವಿನ್ನೇವೇಳ್ವಂ ||

(ಕಿತವರ್ = ಧೂರ್ತಜನ, ಕಂಟಣಿಸು = ಕುಗ್ಗಿಸು)

ಈ ಪದ್ಯ ಹಾಗೆಯೇ ಓದಿದರೆ ಅರ್ಥವಾಗುವುದಿಲ್ಲ. ಪಂಡಿತರ ಪರಿಷ್ಕರಣದಲ್ಲಿಹೀಗಿದೆ -

ನಂಟರ್ ಕಿತವರೆ ಜೂದಿನ
ದೀಂಟೆಯೆ ನೆಲಸಿರ್ಪ ತಾಣಮನ್ಯಾಂಗನೆಯಂ
ಕಂಟಿಸದೆ ತಂದು ಕೂಡುವ
ಕೂಂಟಣಿಗಳವಂಗೆ ಮಾನ್ಯರಿನ್ನೇವೇಳ್ವಂ ||

(ದೀಂಟಿ = ಜಗಲಿ ಕಟ್ಟೆ ಕಂಟಿಸದೆ = ತಪ್ಪಿಸದೆ)

ತಪಸ್ಸು ಮಾಡುತ್ತಿದ್ದ ಪಾರ್ಶ್ವನಾಥ ಮುನಿಯ ಮೇಲೆ ಅಸುರನು ಭೂತತಂಡ ಕಳಿಸಿದ ಚಿತ್ರವೊಂದು ಹೀಗಿದೆ -

ಆ ದೊರೆಯುಪಸರ್ಗಮನು
ತ್ಪಾದಿಸಿಯುಂ ಮುನಿಯ ಮನದ ಧೈರ್ಯಮನೆನಸುಂ
ಭೇದಿಸಲಾಱದೆ ನೆರಪಿದ
ನಾದನುಜಂ ಭೂತಮಂ ಪ್ರಭೂತಮನಾಗಳ್

ಇದರ ಪೂರ್ವಾರ್ಧದ ಹಾಗೂ 3ನೆಯ ಪಾದದ ಪಾಠ ಪಂಡಿತರ ಪರಿಷ್ಕರಣದಲ್ಲೂ ಹೀಗೆಯೇ ಇದೆ. ಉತ್ತರಾರ್ಧದ ಕೊನೆಯ ಸಾಲು 'ನೆರಪಿದನಾದಮೆ ದನುಜಂ ಪ್ರಭೂತ ಭೂತಮನಾಗಳ್' ಎಂದು ಪಂಡಿತರು ಪರಿಷ್ಕರಿಸಿದ್ದಾರೆ. ಮತ್ತೆಭೂತಗಳ ದೊಡ್ಡ ಗುಂಪನ್ನೇ ಆ ಋಷಿಯನ್ನು ಬೆದರಿಸಿ ಹಿಂಸಿಸಲು ಕಳಿಸಿದನು. ಪಾರ್ಶ್ವನಾಥನಿಗೆ ಅಭಿಷೇಕ ಮಾಡುವ ಒಂದು ವರ್ಣನೆಯ ಭಾಗದಲ್ಲಿ - 'ಅಮೃತ ಶ್ರೀ ಪ್ರಿಯನಪ್ಪಂ |ಗಮೃತಾಂಬು ಸಾರವಾರಿಯಿಂದಲಿಷವಮಂ| ಸಮೆವುದು ಕರಮುಚಿತಮೆನು |ತ್ತಮೃತಾಂಬುಧಿಗಾಲಿಗಟ್ಟಿ ನಿಂದು ನಿಳಿಂಪರ್' (14-7) ಎಂದು

ಭಟ್ಟರ ಪರಿಷ್ಕರಣದಲ್ಲಿ ಇದೆ. ಇಲ್ಲಿ 'ಆಲಿಗಟ್ಟಿ' ಎಂದರೆ ಅರ್ಥವಾಗುವುದಿಲ್ಲ. ಇದನ್ನು 'ಓಳಿಗಟ್ಟಿ' (ಸಾಲಾಗಿ ನಿಂತು) ಎಂಬರ್ಥದಲ್ಲಿ ಪಂಡಿತರು ಪರಿಷ್ಕರಿಸಿದ್ದಾರೆ. ಪಂಡಿತರು ಪಾಠ ಪರಿಷ್ಕರಿಸುವಾಗ ಛಂದೋಜ್ಞಾನವನ್ನೂ ಹಾಗೂ ಭಾಷಾಜ್ಞಾನವನ್ನೂ ಉದ್ದಕ್ಕೂ ಗಮನದಲ್ಲಿರಿಸಿಕೊಂಡಿದ್ದಾರೆ. ಐರಾವತ ಈಶಾನ್ಯದಿಕ್ಕಿನಲ್ಲಿ ಬಂದು ನಿಲ್ಲುವ ವರ್ಣನೆಯ ಭಾಗವನ್ನೂ ಭಟ್ಟರ ಪರಿಷ್ಕರಣದಲ್ಲಿ 'ಶತಯೋಜನ ವಿಷ್ಕಂಭಂ। ವಿತಾನ ಪರಿಶೋಭಿಪಂಚಷತ್ಯೋಜನ ವಿಸ್ತ್ರತಮಪ್ಪ' ಎಂದು ಬಂದಿದೆ. ಇಲ್ಲಿಯ 'ಪಂಚಷತ್ಯೋಜನ' ಎಂಬ ರೂಪ ಅವ್ಯಾಕ್ರಿಯವಾದುದು. ಇದು 'ಪಂಚಶದ್ಯೋಜನ' ಎಂದಿರಬೇಕು. ಹಾಗಾದಲ್ಲಿ ವಿತಾನ।ಪರಿಶೋ।ಭಿಪಂಚಾ ಎಂದು ಬರಬೇಕು. ಶದ್ಯೋ ಎಂದು ದೀರ್ಘವಾದರೆ 5 ಮಾತ್ರೆ ಗಣ ಬರುತ್ತದೆ. ಆದ್ದರಿಂದ ಇದನ್ನು ಪಂಡಿತರು 'ವಿತಾನ ಪರಿಶೋಭಿ ಪಂಚಶತಯೋಜನ ವಿಸ್ತೃತ' ಎಂದು ಪರಿಷ್ಕರಿಸಿದ್ದಾರೆ. ಇಂಥ ಹಲವು ಉದಾಹರಣೆಗಳನ್ನು ಕೊಡಬಹುದು. ಆದರೆ ಅವೆಲ್ಲ ಪಂಡಿತರ ಪರಿಷ್ಕರಣದ ಉತ್ತಮಿಕೆ ತೋರುತ್ತದೆ.

ಬೊಮ್ಮರಸ ಪಂಡಿತರು ಪಾರ್ಶ್ವನಾಥ ಪುರಾಣದ ಈ ಆವೃತ್ತಿಯನ್ನು ಪ್ರಕಟಿಸುವಾಗ ಮತ್ತೊಂದು ವಿಶೇಷತೆಯಿದೆ. ಅದೆಂದರೆ -ಪ್ರತೀಪದ್ಯದ ತಾತ್ಪರ್ಯವನ್ನು ಅವರು ಕೃತಿಯ ಪದ್ಯಭಾಗದ ಕೆಳಗಡೆ ಕೊಟ್ಟಿರುವುದು. ಕನ್ನಡ ಚಂಪೂಕಾವ್ಯವೊಂದು ಸಮಗ್ರವಾಗಿ ತಾತ್ಪರ್ಯಸಹಿತಅಚ್ಚಾದುದರಲ್ಲಿ ಇದೇ ಮೊದಲಿನದು ಎಂದು ನನಗನಿಸುತ್ತದೆ. ಈ ಕೆಲಸವನ್ನು ಅವರು ತುಂಬ ಶ್ರದ್ಧೆಯಿಂದ, ಮೂಲಾರ್ಥಕ್ಕೆ ಕುಂದುಬರದಂತೆ ಮಾಡಿದ್ದಾರೆ. 'ಪಾರ್ಶ್ವಪುರಾಣದಂತಹ ದೊಡ್ಡ ಗ್ರಂಥಕ್ಕೆ ಸಂಕ್ಷೇಪವಾದ ಹೊಸಗನ್ನಡ ತಾತ್ಪರ್ಯವನ್ನು ಬರೆಯುವುದು ನನ್ನಂತಹ ಸಾಮಾನ್ಯನಿಗೆ ಸಾಧ್ಯವಾಗದ ಕೆಲಸವಾದರೂ ಕೇವಲ ಸಾಹಿತ್ಯಾಭಿಮಾನದಿಂದ ನನ್ನ ಶಕ್ತಿಯಿದ್ದಷ್ಟು ಮಟ್ಟಿಗೆ ತಾತ್ಪರ್ಯವನ್ನು ಬರೆದು ಮುದ್ರಿಸಿದೆ.' ಎಂದು ಅವರು ಹೇಳಿದ್ದಾರೆ. ಇದು ವಿನಯೋಕ್ತಿ. ಆದರೆ ಈ ಕೆಲಸದಲ್ಲಿ ಅವರು ಸಫಲರಾಗಿದ್ದಾರೆ. ಮೂಲದ ಅರ್ಥವನ್ನು ಸರಳಗನ್ನಡದಲ್ಲಿ ಹೇಳುವುದಿರಲಿ, ಮೂಲಕೃತಿಯಲ್ಲಿ ಬರುವ ಹಲವು ಪಾರಿಭಾಷಿಕ ಪದಗಳ ಅರ್ಥ ಕೂಡ ಅವಶ್ಯವಿದ್ದೆಡೆ ವಿವರಿಸಿದ್ದಾರೆ. ಪಾರ್ಶ್ವಪುರಾಣದ ೨-೫೮ರ 'ನೃಪರ್ ಬಿಟ್ಟು ಭುಜಗರ್ವಮಂ ಮೂವಿಟ್ಟಿಗೆ ಬರೆ'ಎಂಬಲ್ಲಿ ಬರುವ ಮೂವಿಟ್ಟಿಯನ್ನು 'ಒಬ್ಬನಿಗೆ ಆಳಾಗಿ ಕೊಡಬೇಕಾದ ಕಾರ್ಯವನ್ನು ತಾನೇ ಮಾಡುವುದು ತನ್ನ ಬದಲಿಗೆ ಮತ್ತೊಬ್ಬನನ್ನು ಕಳುಹಿಸುವುದು, ಮತ್ತೊಬ್ಬನಿಗೆ ಹಣಕೊಟ್ಟು ಮಾಡಿಸುವುದು, ಎಂದು ಒಟ್ಟು 3 ಬಗೆ, ಎಂದು ವಿವರಿಸಿದ್ದಾರೆ. 2-6ರಲ್ಲೇ ಬರುವ, 'ಅಂಬುದಿವ್ಯ' ಎಂಬುದನ್ನು ಕೂಡ ವಿವರಿಸಿದ್ದಾರೆ. 'ದಿವ್ಯವೆಂಬುದು ಒಂದು ಪ್ರಮಾಣ' ಎಂದು ಸೂಕ್ತಿಸಿ ವರ್ಣಿಸಿದ್ದಾರೆ. ಅಗ್ನಿದಿವ್ಯ, ಜಲದಿವ್ಯ, ಅಸಿಲದಿವ್ಯಗಳನ್ನು ಉಲ್ಲೇಖಿಸಿದ್ದಾರೆ. ೧೩-೧೧೦ ರಲ್ಲಿ ಬರುವ - ''ತಮ್ಮ ಇಭಕುಲತೆಯನಲ್ಲಿ ಸಸ್ಸಿಮಾಜ್ಜಿರ್ ಪರವರ್ ಎಂಬ ಭಾಗಕ್ಕೆ ವ್ಯಾಖ್ಯಾನಿಸುತ್ತ -''ವರ್ತಕರಲ್ಲಿ ಎಟಗ, ಗೋತ, ಇಭ ಎಂಬ ೩ ವರ್ಗಗಳುಂಟು. ವರ್ತಕನು ತನ್ನ ಹಣವನ್ನು ರಾಶಿಹಾಕಿ ಮಗ್ಗುಲಲ್ಲಿ ಆನೆಯನ್ನು ನಿಲ್ಲಿಸಿ ನೋಡಿದರೆ ಆಚೆಯುವ ಕಾಣದಿರಬೇಕು. ಅಷ್ಟು ಹಣವುಳ್ಳವನು ಇಭ'' ಎನ್ನುತ್ತಾರೆ. ಇಂಥ ಟೀಕೆ - ಟಿಪ್ಪಣಿಗಳಿಂದ ಈ ತಾತ್ಪರ್ಯಾರ್ಥ ಭಾಗ ಕೂಡ ಮೌಲಿಕವಾದುದೇ ಆಗಿದೆ.

ಇಂಥ ಕ್ರಮ, ಶ್ರಮಗಳ ಕೆಲಸವಾದ ಬೊಮ್ಮರಸ ಪಂಡಿತರ 'ಪಾರ್ಶ್ವನಾಥ ಪುರಾಣ' ಗ್ರಂಥ ಸಂಪಾದನೆ ಮಾಡುವವರಿಗೂ, ವ್ಯಾಖ್ಯಾನ ಬರೆಯುವರಿಗೂ ಒಂದು ಮಾದರಿ ಆಗಿದೆ ಎನ್ನಲು ಅಡ್ಡಿಯಿಲ್ಲ.

# ಅತ್ತಿಮಬ್ಬೆ ಕಾಲದ ಜೈನ ವಾಸ್ತುಶಿಲ್ಪ

ಡಾ॥ ಎಸ್. ರಾಜಶೇಖರ

ದಂಡನಾಯಕ ನಾಗದೇವನ ಪತ್ನಿ ಮಾಸವಾಡಿ ಪ್ರಾಂತಾಧಿಕಾರಿ ಪಡೆವಳ ತೈಲನ ತಾಯಿ ಅತ್ತಿಮಬ್ಬೆ ಕ್ರಿ.ಶ.೧೧೦೭ರಲ್ಲಿ ಲೊಕ್ಕಿಗುಂಡಿಯಲ್ಲಿ (ಲಕ್ಕುಂಡಿ) ಬ್ರಹ್ಮಜಿನಾಲಯವನ್ನು ನಿರ್ಮಿಸಿ, ಜೈನಧರ್ಮದ ಪ್ರಗತಿಗೆ ಅಪಾರ ಕೊಡುಗೆ ಸಲ್ಲಿಸಿದಳು. ಅವಳ ಕಾಲದ ಜೈನ ವಾಸ್ತುಶಿಲ್ಪದ ಅಧ್ಯಯನವೆಂದರೆ, ಕಲ್ಯಾಣ ಚಾಲುಕ್ಯರ ಆರಂಭಕಾಲ ಮತ್ತು ಗಂಗರ ಕಾಲದ ಮುಕ್ತಾಯ ಹಂತದ ವಾಸ್ತುಶೈಲಿಯ ಅಧ್ಯಯನವೇ ಆಗಿದೆ. ಅಂದರೆ ಕ್ರಿ.ಶ. ೯೮೦ ರಿಂದ ಕ್ರಿ.ಶ. ೧೧೧೦ ರವರೆಗಿನ ಸು.೫೦ ವರ್ಷಗಳಲ್ಲಾದ ಜೈನ ವಾಸ್ತು ಶೈಲಿಯ ಬೆಳವಣಿಗೆಯನ್ನು ಈ ಪ್ರಬಂಧದಲ್ಲಿ ಮೂಡಿಸಲು ಯತ್ನಿಸಿದೆ. ಈ ಒಂದು ಘಟ್ಟದಲ್ಲಿ ಮೂರು ಮುಖ್ಯಜಿನಾಲಯಗಳು ನಿರ್ಮಾಣಗೊಂಡಿದ್ದು, ಅವುಗಳ ಲಕ್ಷಣಗಳನ್ನು ಕುರಿತು ಇಲ್ಲಿ ವಿವೇಚಿಸಲಾಗಿದೆ. ಅವು - ಶ್ರವಣಬೆಳ್ಗೊಳದ ಚಾವುಂಡರಾಯ ಬಸದಿ, ಐಹೊಳೆಯ ಸೆಟ್ಟವ್ವನಗುಡಿ, ಮತ್ತು ಲಕ್ಕುಂಡಿಯ ಬ್ರಹ್ಮಜಿನಾಲಯ. ಚಾವುಂಡರಾಯ ಬಸದಿಯ ಕರ್ತೃ ಗಂಗರ ಮಂತ್ರಿ ಚಾವುಂಡರಾಯ, ಲಕ್ಕುಂಡಿಯ ಬ್ರಹ್ಮಜಿನಾಲಯದ ನಿರ್ಮಾತೃ ಅತ್ತಿಮಬ್ಬೆ, ಆದರೆ ಐಹೊಳೆಯ ತ್ರಿಕೂಟಬಸದಿಯ ನಿರ್ಮಾತೃ ಯಾರೆಂದು ತಿಳಿಯದು. ಕೊನೆಯವೆರಡು ಕಲ್ಯಾಣ ಚಾಲುಕ್ಯ ಶೈಲಿಯ ಅಧ್ಯಯನಕ್ಕೆಮಾಹಿತಿ ಕೊಡುತ್ತವೆ. ಚಾವುಂಡರಾಯ ಬಸದಿ ಗಂಗ ವಾಸ್ತುಶಿಲ್ಪದ ಅಧ್ಯಯನಕ್ಕೆ ಉತ್ಕಷ್ಟ ಉದಾಹರಣೆಯಾಗಿದೆ. ಶ್ರವಣಬೆಳ್ಗೊಳದ ಚಂದ್ರಗಿರಿ ಬೆಟ್ಟ ಜೈನ ಯಾತ್ರಿಕರಿಗೆ ಪ್ರಮುಖ ಸ್ಥಳವಾಗಿತ್ತು. ಗಂಗರಸರಾದ ಮಾರಸಿಂಹ ಹಾಗೂ ನಾಲ್ವಡಿ ರಾಚಮಲ್ಲನ ಮಂತ್ರಿಯೂ, ದಂಡನಾಯಕನೂ ಆಗಿದ್ದ ಚಾವುಂಡರಾಯನು ಜೈನಧರ್ಮದ ಬೆಳವಣಿಗೆಗೆ ಮಹತ್ತರ ಕೊಡುಗೆ ನೀಡಿದವನು. ಇಂದ್ರಗಿರಿ ಬೆಟ್ಟದ ತುತ್ತತುದಿಯಲ್ಲಿ ಅಖಂಡ ಶಿಲೆಯನ್ನು ಕೊರೆದು ಗೊಮ್ಮಟನ ಬೃಹತ್ ವಿಗ್ರಹವನ್ನು ಪ್ರತಿಷ್ಠಾಪಿಸಿದ ಇವನು ಚಂದ್ರಗಿರಿಯ ಮೇಲೆ ದ್ರಾವಿಡಶೈಲಿಯಲ್ಲಿಯೇ ಅನುಪಮವಾದ ಬಸದಿಯೊಂದನ್ನು ನಿರ್ಮಿಸಿದನು. ಅದನ್ನು ಶಾಸನದಲ್ಲಿ ಚಾವುಂಡರಾಯ ಬಸದಿಯೆಂದೇ ಹೆಸರಿಸಲಾಗಿದೆ.[೧].

ಶ್ರವಣಬೆಳ್ಗೊಳದ ಬಸದಿಗಳಲ್ಲಿಯೇ ಅತ್ಯಂತ ಸುಂದರವಾದ ಚಾವುಂಡರಾಯ ಬಸದಿ ೧೧ನೇ ಶತಮಾನದ ಕೊನೆಯಲ್ಲಿ ನಿರ್ಮಿತವಾದುದು. ಈ ಬಸದಿ ಗರ್ಭಗೃಹ, ಅರ್ಧಮಂಟಪ, ವಿಶಾಲವಾದ ನವರಂಗ ಹಾಗೂ ಚಿಕ್ಕದಾದ ಮುಖಮಂಟಪ ಹೊಂದಿದೆ. ಕೆಳಗಿನ ಗರ್ಭಗೃಹದ ಮೇಲ್ಗಡೆ, ಮಾಳಿಗೆಯನ್ನೇರಿದಾಗ ಇನ್ನೊಂದು ಗರ್ಭಗೃಹವಿರುವುದು ಗೋಚರಿಸುತ್ತದೆ. ಅಂದರೆ

ಇದು ಒಂದಂತಸ್ತಿನ ಬಸದಿ. ಗರ್ಭಗೃಹ ಚೌಕಾಕಾರವಾಗಿದ್ದರೆ, ಅರ್ಧಮಂಟಪವು ಸಮಚತುರಸ್ರಾಕಾರವಾಗಿದೆ. ಅರ್ಧಮುಖಮಂಟಪದ ಮುಖಭಾಗದಲ್ಲಿ ಎರಡು ಕಂಬಗಳು ಎರಡು ಅರ್ಧಕಂಬಗಳಿವೆ. ವಿಶಾಲವಾದ ನವರಂಗವು ಚೌಕಾಗಿದ್ದು ೧೬ ಕಂಬಗಳನ್ನು ಹೊಂದಿದೆ. ಈ ಕಂಬಗಳನ್ನು ನಾಲ್ಕು ಸಾಲುಗಳಲ್ಲಿ ನಿಲ್ಲಿಸಲಾಗಿದೆ. ಮಧ್ಯದ ನಾಲ್ಕು ಕಂಬಗಳು ದುಂಡಾಗಿದ್ದರೆ ಉಳಿದವು ಚೌಕ ಮತ್ತು ದುಂಡಾಗಿವೆ. ಕಂಬಗಳ ಸಾಲಿಗೆ ನೇರವಾಗಿ ಗೋಡೆಗಳ ಮೇಲೆ ಅರ್ಧ ಕಂಬಗಳಿವೆ. ನವರಂಗದ ಆಗ್ನೇಯ ದಿಕ್ಕಿನಲ್ಲಿ ಮೇಲಿನ ಗರ್ಭಗೃಹಕ್ಕೆ ಹೋಗಲು ಮೆಟ್ಟಿಲುಗಳನ್ನು ಅಳವಡಿಸಲಾಗಿದೆ.

ಗರ್ಭಗೃಹದಲ್ಲಿರುವ ನೇಮಿನಾಥನ ವಿಗ್ರಹ ಮೂಲವಿಗ್ರಹವಲ್ಲ. ಮೂಲ ವಿಗ್ರಹ ಭಿನ್ನವಾದಾಗ ಹೊಯ್ಸಳರ ಕಾಲದಲ್ಲಿ ಅದರ ಬದಲಿಗೆ ಪ್ರತಿಷ್ಠೆಮಾಡಿದುದಾಗಿದೆ. ಅದೇ ರೀತಿ ಮೇಲಿನ ಗರ್ಭಗೃಹದಲ್ಲಿರುವ ವಿಗ್ರಹವು ಚಾವುಂಡರಾಯನ ಮಗ ಜಿನದೇವರಾಯ ಪ್ರತಿಷ್ಠೆ ಮಾಡಿದುದಾಗಿದೆ[1] ಇಲ್ಲಿರುವ ಸುಮಾರು[2] ಅಡಿ ಎತ್ತರದ ಪಾರ್ಶ್ವನಾಥನ ವಿಗ್ರಹದ ಪೀಠಭಾಗದಲ್ಲಿರುವ ಶಾಸನವು ಜಿನದೇವರಾಯನು ಬೆಳಗೊಳದಲ್ಲಿ ಬಸದಿಯೊಂದನ್ನು ಕಟ್ಟಿಸಿದ ಎಂದು ತಿಳಿಸುತ್ತದೆ. ಬಹುಶಃ ಈ ಬಸದಿ ಚಾವುಂಡರಾಯನ ಕಾಲದಲ್ಲಿ ಶುರುವಾಗಿ ಇದರ ನಿರ್ಮಾಣ ಜಿನದೇವಣನಿಂದ ಕೊನೆಗೊಂಡಿತೆಂದು ಹೇಳಬಹುದಾದರೂ ಬಸದಿಯ ಅಧಿಷ್ಠಾನದ ಮೇಲಿರುವ ಶಾಸನದಲ್ಲಿ ಇದನ್ನು ಚಾಮುಂಡರಾಯ ಬಸದಿಯೆಂದು ಕರೆದಿರುವುದರಿಂದ, ಕೆಳಗಿನ ಬಸದಿ ಚಾಮುಂಡರಾಯನ ಕಾಲದಲ್ಲಿ ಪೂರ್ಣಗೊಂಡಿದ್ದು, ಮೇಲಿನ ಗರ್ಭಗೃಹವನ್ನು ಜಿನದೇವಣನು ಕಟ್ಟಿಸಿರಬಹುದೆಂಬ ಆರ್. ನರಸಿಂಹಾಚಾರ್ಯರ ಅಭಿಪ್ರಾಯವನ್ನು ಒಪ್ಪಬಹುದಾಗಿದೆ.[3] ಜಿನದೇವಣನ ಶಾಸನ ಕ್ರಿ.ಶ.೯೯೫ರದು. ಅರ್ಧ ಮಂಟಪದಲ್ಲಿ ಸರ್ವಾಹ್ಣಯಕ್ಷ ಮತ್ತು ಅಂಬಿಕಾಯಕ್ಷಿಯರ ಮೂರ್ತಿಗಳಿವೆ. ಇವು ಕೂಡ ಹೊಯ್ಸಳ ಕಾಲದವು.

ಚಾವುಂಡರಾಯ ಬಸದಿಯ ವಿಶಿಷ್ಟ ಲಕ್ಷಣಗಳಲ್ಲಿ ಕೆಳಗಿನವುಗಳನ್ನು ಹೆಸರಿಸಬಹುದು 1.ಇದೊಂದು ಅಂತಸ್ತುಳ್ಳ ಬಸದಿ 2. ಗೋಡೆಗಳ ಅಲಂಕರಣೆಯಲ್ಲಿ ಹಿಂಬಣೆ ಮುಂಬಣೆಗಳು, ಅರ್ಧಕಂಬಗಳು ಮತ್ತು ಆಳವಾದ ಕೋಷ್ಠಗಳ ಅಳವಡಿಕೆ 3. ಬಸದಿಯ ಸುತ್ತಲಿರುವ ಪ್ಯಾರಾಪೆಟ್- ಇಲ್ಲಿ ಅತ್ಯುತ್ತಮವಾಗಿ ಕಡೆದ ಶಾಲ, ಕೂಟ, ಕರ್ಣಕೂಟಗಳಿದ್ದು, ಅವುಗಳನ್ನು ಚೈತ್ಯಗಳಿಂದ ಅಲಂಕರಿಸಲಾಗಿದೆ. ಈ ಚೈತ್ಯಗಳ ಕೆಳಗಡೆ, ತೀರ್ಥಂಕರರ, ಯಕ್ಷ-ಯಕ್ಷಿಯರ, ಗಂಧರ್ವರ ಹಾಗೂ ಇತರ ಭಕ್ತರ ಮೂರ್ತಿಗಳನ್ನು ಕೊರೆಯಲಾಗಿದೆ. ಇವುಗಳಲ್ಲಿ ಕುಬೇರ, ಪದ್ಮಾವತಿಯರ ಮೂರ್ತಿಗಳು ಆಕರ್ಷಣೀಯವಾಗಿದೆ. ಪದ್ಮಾವತಿಯ ಮೂರ್ತಿ ಮಹಾಬಲಿಪುರಂನಲ್ಲಿರುವ ಗಜಲಕ್ಷ್ಮಿ ಶಿಲ್ಪವನ್ನು ನೆನಪಿಸುತ್ತದೆ. ಇಲ್ಲಿ ಗಂಗರ ಲಾಂಛನವಾದ ಆನೆಯನ್ನು ಕೂಡ ಕೆತ್ತಲಾಗಿದ್ದು, ಇದು ಗಂಗರ ಕಾಲದ್ದೆಂಬುದನ್ನು ಸ್ಪಷ್ಟಪಡಿಸುತ್ತದೆ. 4. ಸುಕನಾಸವನ್ನುಳ್ಳ ದ್ರಾವಿಡ ಶಿಖರ 5. ಶಿಖರ ಮತ್ತು ಸುಕನಾಸಭಾಗದಲ್ಲಿ ಮೇಲಿನ ಗರ್ಭಗೃಹವನ್ನು ಅಳವಡಿಸಲಾಗಿದೆ.

ಹತ್ತನೆಯ ಶತಮಾನದ ಕೊನೆಯಲ್ಲಿ ಕಟ್ಟಿದ ವಾಸ್ತು ಶೈಲಿಯ ದೃಷ್ಟಿಯಿಂದ ಮಹತ್ವವಾದ ಇನ್ನೊಂದು ಬಸದಿ - ಐಹೊಳೆಯ ಬಸದಿ. ಇದನ್ನು ಇಲ್ಲಿಯ ಜನರು ಸೆಟ್ಟೆವ್ವನ ಗುಡಿಯೆಂದು

ಕರೆದರೂ ಇದು ಪಾರ್ಶ್ವನಾಥನ ಬಸದಿ. ಇದೊಂದು ತ್ರಿಕೂಟ ಬಸದಿಯಾಗಿದ್ದು, ಕರ್ನಾಟಕದಲ್ಲಿ, ಅದರಲ್ಲೂ ಹೊಯ್ಸಳ ಕಾಲದಲ್ಲಿನ ತ್ರಿಕೂಟಬಸದಿಗಳ ವಾಸ್ತುಶೈಲಿಯ ಬೆಳವಣಿಗೆಯನ್ನು ಅರಿಯಲು ಉಪಯುಕ್ತವಾದ ಬಸದಿ. ಅಲ್ಲದೆ ಕರ್ನಾಟಕದಲ್ಲಿಯ ಅತ್ಯಂತ ಹಳೆಯ ತ್ರಿಕೂಟ ಬಸದಿ. ಇದು ಮೂರುಗರ್ಭ ಗೃಹಗಳು ಮೂರು ಅರ್ಧಮಂಟಪಗಳು ಮತ್ತು ಒಂದೇ ನವರಂಗವನ್ನು ಹೊಂದಿದೆ. ಮಧ್ಯದ ಗರ್ಭಗೃಹದ ಮೇಲಿನ ಶಿಖರದಲ್ಲಿ ಇನ್ನೊಂದು ಗರ್ಭಗೃಹ ಮತ್ತು ಅರ್ಧ ಮಂಟಪವನ್ನು ಅಳವಡಿಸಲಾಗಿದೆ. ಐಹೊಳೆಯ ಈ ತ್ರಿಕೂಟಬಸದಿಯಲ್ಲಿ ರಾಷ್ಟ್ರಕೂಟಕಾಲದ ಕೆಲವು ಲಕ್ಷಣಗಳ ಜೊತೆಗೆ, ಕಲ್ಯಾಣ ಚಾಲುಕ್ಯರ ಆರಂಭಕಾಲದ ಕೆಲವು ವಾಸ್ತುಲಕ್ಷಣಗಳು ಇರುವುದು ಗಮನೀಯ. ಇದನ್ನು ನವರಂಗದ ಕಂಬಗಳು ಪುಷ್ಟೀಕರಿಸುತ್ತವೆ. ಮುಕ್ಕಾದ ಈ ಕಂಬಗಳು ಚೌಕಾಕಾರವಾಗಿದ್ದು, ಕಾಂಡಭಾಗದಲ್ಲಿ ಚೌಕಾಕಾರದ ಗಂಟೆಯಾಕಾರವಾಗಿದೆ. ಕಂಬದ ಮೇಲ್ಭಾಗದಲ್ಲಿ ಒಂದು ಕಾಂಡಭಾಗದ ಮೇಲೆ ತ್ರಿಪಟ್ಟಾಕಾರದ ತಡಿ ಇದೆ. ಇಲ್ಲಿ ಬೋದಿಗೆಯ ಕೆಳಗೆ ಫಲಕವಿಲ್ಲದಿರುವುದು ಗಮನೀಯ.

ಮಧ್ಯದ ಗರ್ಭಗೃಹದಲ್ಲಿ ಸು.ನಾಲ್ಕು ಅಡಿ ಎತ್ತರವಾದ ಪಾರ್ಶ್ವನಾಥನ ವಿಗ್ರಹವಿದೆ. ಗರ್ಭಗೃಹದ ದ್ವಾರ ಶಾಖೆಗಳಲ್ಲಿ ಹೂಗಳು, ಕಬ್ಬಿನ ಜಲ್ಲೆಯಾಕಾರದ ಅರ್ಧ ಕಂಬ, ಹೂದಳಗಳೂ ಮತ್ತು ಯಕ್ಷಶಿಲ್ಪವನ್ನೊಳಗೊಂಡ ಲತಾಸುರುಳಿಗಳಿವೆ. ಮಂಗಲ ಫಲಕದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಉಳಿದ ಎರಡೂ ಗರ್ಭಗೃಹದ ದ್ವಾರಗಳು ಪಾರ್ಶ್ವನಾಥ ಗರ್ಭಗೃಹದ ದ್ವಾರವನ್ನು ಬಹುಮಟ್ಟಿಗೆ ಹೋಲುತ್ತವೆ. ಎಡಭಾಗಕ್ಕಿರುವ ದ್ವಾರದ ಮಂಗಲ ಫಲಕದಲ್ಲಿ ಪದ್ಮಾಸನದಲ್ಲಿರುವ ಜಿನಮೂರ್ತಿ ಇದೆ. ಬಲಗಡೆಯ ದ್ವಾರದ ಮಂಗಲಫಲಕದಲ್ಲಿ ಯಾವುದೇ ಮೂರ್ತಿ ಇಲ್ಲ.

ಮೂರೂ ಗರ್ಭಗೃಹಗಳ ಮೇಲೆ ಶಿಖರಗಳಿವೆ. ಇವು ದ್ರಾವಿಡ ಶಿಖರಗಳು. ಮಧ್ಯದ ಶಿಖರದಲ್ಲಿ ಮೇಲಿನ ಗರ್ಭಗೃಹದ್ವಾರದ ಮಂಗಲ ಫಲಕದಲ್ಲಿ ಜಿನಬಿಂಬವಿದೆ. ಗರ್ಭಗೃಹದಲ್ಲಿ ಯಾವುದೇ ವಿಗ್ರಹವಿಲ್ಲ. ಅರ್ಧ ಮಂಟಪದ ಎರಡೂ ಬದಿಗೆ ಕಕ್ಷಾಸನಗಳಿದ್ದು ಅದರಲ್ಲಿ ಕುಂಭಗಳನ್ನು ಕೆತ್ತಲಾಗಿದೆ. ಉಳಿದ ಎರಡು ಶಿಖರಗಳಲ್ಲಿಗರ್ಭಗೃಹಗಳಿಲ್ಲ.

ಬಸದಿಯ ಗೋಡೆಯಲ್ಲಿಅರ್ಧಕಂಬಗಳ ಮತ್ತು ಪಂಜರಗಳ ಅಲಂಕರಣೆ ಇದೆ. ಕೆಲಪಂಜರಗಳಲ್ಲಿ ಜಿನಮೂರ್ತಿಗಳಿದ್ದು ಇವು ಒಡೆದು ಹೋಗಿವೆ.

ಗೋಡೆಗಳ ಅಲಂಕರಣೆಯ ವಿನ್ಯಾಸ, ನವರಂಗದ ಕಂಬಗಳ ಮಾದರಿ, ದ್ರಾವಿಡ ಶಿಖರದ ವಿನ್ಯಾಸ ಮತ್ತು ದೇವಾಲಯ ಗಿಡ್ಡಾಗಿರುವುದು - ಇವೆಲ್ಲಾ ಈ ತ್ರಿಕೂಟ ಬಸದಿ ಹತ್ತನೆ ಶತಮಾನದ ಕೊನೆಯಲ್ಲಿ ಕಟ್ಟಿದ ಕಟ್ಟಡವೆಂದು ದೃಢಪಡಿಸುತ್ತವೆ. ಲಕ್ಕುಂಡಿಯಲ್ಲಿ ಕಂಡು ಬರುವ ನಾಲ್ಕು ಜೈನ ಬಸದಿಗಳಲ್ಲಿ ಅತ್ತಿಮಬ್ಬೆ ನಿರ್ಮಿಸಿದ ಬ್ರಹ್ಮಜಿನಾಲಯ ಪ್ರಮುಖವಾದುದು' ಮತ್ತು ಲಕ್ಕುಂಡಿಯಲ್ಲಿ ಕಲ್ಯಾಣ ಚಾಲುಕ್ಯ ಕಾಲದಲ್ಲಿ ನಿರ್ಮಿತವಾದ ಕಟ್ಟಡಗಳಲ್ಲಿಯೇ ಮೊದಲನೆಯದು. ಬ್ರಹ್ಮಜಿನಾಲಯವನ್ನು ನೀಲಿಮಿಶ್ರಿತ ಕಪ್ಪು ಛಾಯೆಯ ಬಳಪದ ಕಲ್ಲಿನಲ್ಲಿ (ಸಿಸ್ಟ್) ಕಟ್ಟಲಾಗಿದೆ. ಈ ಜಿನಾಲಯ ಗರ್ಭಗೃಹ, ಅರ್ಧಮಂಟಪ, ನವರಂಗ ಮತ್ತು ಮುಖಮಂಟಪಗಳನ್ನು ಹೊಂದಿದ್ದು 9' ಅಗಲ 9' ಉದ್ದವಿರುವ ಗರ್ಭಗೃಹದಲ್ಲಿ ಸು. 2'.4'' ಎತ್ತರದ ಸಿಂಹಪೀಠವಿದೆ. ಈ ಪೀಠ ಬಸದಿಯನ್ನು ಕಟ್ಟಿದಾಗ ಇಲ್ಲಿ ಇರಿಸಿದ ಪೀಠವಾಗಿದ್ದು, ಅದರ ಮೇಲೆ ಪ್ರತಿಷ್ಠೆ ಮಾಡಿದ್ದ

ತೀರ್ಥಂಕರನ ವಿಗ್ರಹ ಇಲ್ಲ. ಅದರ ಬದಲಿಗೆ ನಂತರ ತಂದಿರಿಸಿದ ಕಾಯೋತ್ಸರ್ಗ ಭಂಗಿಯಲ್ಲಿರುವ ಜಿನವಿಗ್ರಹವನ್ನು ಈಗ ಕಾಣಬಹುದು. ಜಿನನ ಬದಿಗಳಲ್ಲಿ ಚಾಮರಗಳನ್ನು ಕೊರೆದಿದ್ದಾರೆ. ತಲೆಯ ಮೇಲೆ ಮುಕ್ಕೊಡೆ ಇದ್ದು, ಜಿನನ ಸುತ್ತ ಮಕರ ತೋರಣವಿದೆ. ಜಿನನ ಆಚೀಚೆ ಶಾಸನದೇವತೆಗಳಾದ ಯಕ್ಷ-ಯಕ್ಷಿಯರಿದ್ದಾರೆ. ಚತುರ್ಭುಜ ಯಕ್ಷನು ಅರ್ಧಪರ್ಯಂಕಾಸನದಲ್ಲಿ ಕುಳಿತಿದ್ದು, ಕೈಗಳಲ್ಲಿ ಅಂಕುಶ, ಪಾಶ, ಫಲಗಳನ್ನು ಹಿಡಿದಿದ್ದಾನೆ. ನಾಲ್ಕನೆಯದು ವರದಮುದ್ರೆಯಲ್ಲಿದೆ. ಈ ಜಿನ ವಿಗ್ರಹದ ಕೆಳಭಾಗದಲ್ಲಿ ವಿಗ್ರಹವನ್ನು ಪ್ರತಿಷ್ಠೆಮಾಡಿದ ಗಂಡ-ಹೆಂಡಿರು ಅಂಜಲೀ ಹಸ್ತದಲ್ಲಿರುವಂತೆ ತೋರಿಸಲಾಗಿದೆ. ಈ ವಿಗ್ರಹ ಅತ್ತಿಮಬ್ಬೆಯ ಕಾಲದ ವಿಗ್ರಹವಲ್ಲ. ಯಾಕೆಂದರೆ ಮೂಲ ಪೀಠದ ಹಿಂಭಾಗದಲ್ಲಿ ಜಿನನು ಆತು ಕುಳಿತುಕೊಳ್ಳುವುದಕ್ಕಿರುವ ದಿಂಬು ಮತ್ತು ಆಚೀಚೆ ಇರುವ ಮಕರಗಳು ಇದನ್ನು ದೃಢೀಕರಿಸುತ್ತವೆ. ಅಂತೆಯೇ ಆಚೀಚೆ ಇರುವ ಚಾಮರಧಾರಿ ಮೂರ್ತಿಗಳ ಶಿಲ್ಪಗಳುಳ್ಳ ಪೀಠದ ಈ ಭಾಗ ಸುಮಾರು ಆರು ಅಡಿ ಎತ್ತರ ಮತ್ತು ಐದು ಅಡಿ ಅಗಲವಿದೆ. ಹೆನ್ರಿ ಕಝಿನ್ಸ್‌ನು ೧೯೨೬ರಲ್ಲಿ ಲಕ್ಕುಂಡಿಯ ಬ್ರಹ್ಮಜಿನಾಲಯವನ್ನು ಅಭ್ಯಸಿಸಿದಾಗ, ಮೂಲ ವಿಗ್ರಹ ಪದ್ಮಾಸನವಲ್ಲಿದ್ದ ಮಹಾವೀರನ ವಿಗ್ರಹವೆಂದು ತಿಳಿಸುತ್ತಾನೆ. ಸುಮಾರು 4' ಎತ್ತರವಿತ್ತೆಂದು ಬರೆದಿದ್ದಾನೆ. ಇದು ಸಿಸ್ಟ್ ಕಲ್ಲಿನಲ್ಲಿ ಮಾಡಿದ ಮೂರ್ತಿಯಾಗಿದ್ದು, ಹೆಚ್ಚು ಹೊಳಪುಳ್ಳ ಪಾಲಿಶ್ ಹೊಂದಿತ್ತೆಂದು ಕೂಡ ತಿಳಿಸುತ್ತಾನೆ.

ಗರ್ಭಗೃಹದ ಒಳಗಡೆ ಅರ್ಧಕಂಬಗಳು ಮತ್ತು ಮೂಲೆಕಂಬಗಳಿರುವುದು ಒಂದು ವಿಶೇಷ. ಈ ಅರ್ಧಕಂಬಗಳ ಕಾಂಡಭಾಗದ ಮೇಲೆ $45^{\circ}$ ವಿನ್ಯಾಸದಲ್ಲಿ ಕಟೆದಿರುವ ಬೋದಿಗೆಗಳಿವೆ. ಗರ್ಭಗೃಹದ ಭುವನೇಶ್ವರಿಯು ಅಷ್ಟಕೋನಾಕೃತಿಯದಾಗಿದ್ದು, ಯಾವುದೇ ಕೆತ್ತನೆಗಳಿಲ್ಲ. ಗರ್ಭಗೃಹದ ದ್ವಾರವು ಸುಂದರ ಕೆತ್ತನೆಯಿಂದ ಕೂಡಿದ್ದು, ಇದು ದ್ವಾರಶಾಖೆಗಳನ್ನೂ ಹೊಂದಿದೆ. ಇವುಗಳಲ್ಲಿ ದುಂಡಾಕಾರದ ಕೋಲು, ಸಿಂಹಗಳು, ಖಡ್ಗಧಾರಿ ಸೈನಿಕರು, ಚೌಕಾಕಾರ ಗಂಟೆಯಾಕಾರದ ಅರ್ಧಕಂಬ, ಲತಾಸುರುಳಿಗಳಲ್ಲಿ ಅನೇಕ ವಿಧದ ಸಂಗೀತವಾದ್ಯಗಳನ್ನು ನುಡಿಸುತ್ತಿರುವ ಯಕ್ಷರ ಚಿಕಿಣಿ ಶಿಲ್ಪಗಳನ್ನು ಮತ್ತು ಹೂವುಗಳನ್ನು ಕೆತ್ತಿದ್ದಾರೆ. ಈ ರೀತಿಯ ದ್ವಾರಶಾಖೆಗಳು ಹತ್ತನೆಯ ಶತಮಾನದ ಕೊನೆ ಮತ್ತು ಹನ್ನೊಂದನೆಯ ಶತಮಾನದ ಚಾಲುಕ್ಯದೇವಾಲಯಗಳಲ್ಲಿ ಸರ್ವೇಸಾಮಾನ್ಯ. ದ್ವಾರಶಾಖೆಯ ಕೆಳಗಿನ ಭಾಗದಲ್ಲಿ ರತಿ - ಮನ್ಮಥ ಮತ್ತು ಇತರ ಸ್ತ್ರೀ ಮೂರ್ತಿಗಳಿವೆ. ದ್ವಾರದ ಮಂಗಲ ಫಲಕದಲ್ಲಿ ಮುಕ್ಕೊಡೆಯ ಕೆಳಗೆ ಪದ್ಮಾಸನದಲ್ಲಿ ಕುಳಿತಿರುವ ಜಿನನ ಶಿಲ್ಪವಿದ್ದು, ಅವನ ಅಕ್ಕಪಕ್ಕದಲ್ಲಿ ಚಾಮರಧಾರಿಗಳಿದ್ದಾರೆ. ದ್ವಾರದ ಮೇಲಿರುವ ಕಪೋತದಲ್ಲಿ ಕೆಳಭಾಗದಲ್ಲಿ ಹಂಸಗಳ ಸಾಲಿದೆ. ಕಪೋತದಲ್ಲಿ ಚೈತ್ಯಗಳ, ಆನೆಗಳ, ಮತ್ತು ಕಪೋತದ ಮಧ್ಯದಲ್ಲಿ ಅರ್ಧಪರ್ಯಂಕಾಸನದಲ್ಲಿ ಕುಳಿತಿರುವ ಜೈನ ಯಕ್ಷಿಯ ಮೂರ್ತಿಯನ್ನು ಕಂಡರಿಸಿದ್ದಾರೆ. ಯಕ್ಷಿಯು ಅಂಕುಶ, ಪಾಶ, ಫಲ ಮತ್ತು ಪದ್ಮಗಳನ್ನು ಹಿಡಿದಿದ್ದಾಳೆ. ಚೌಕಾಕಾರದ ಅರ್ಧಮಂಟಪದಲ್ಲಿ ಎರಡು ಮೂಲೆಕಂಬಗಳು ಮತ್ತು ನಾಲ್ಕು ಅರ್ಧಕಂಬಗಳಿವೆ. ಕಾಂಡಭಾಗದಲ್ಲಿ ಕಟ್ಟುಗಳಿದ್ದು ಎಲೆಯಾಕಾರದ ಅಲಂಕರಣವಿದೆ. ಭುವನೇಶ್ವರಿಯಲ್ಲಿ ಯಾವುದೇ ಕೆತ್ತನೆ ಇಲ್ಲ. ತೊಲೆಗಳ ಮೇಲೆ ಸಾಲಾಗಿ ಹೂದಳಗಳಿವೆ.

ಅರ್ಧಮಂಟಪಕ್ಕೆ ಹೊಂದಿಕೊಂಡಂತೆ ವಿಶಾಲವಾದ ನವರಂಗವಿದೆ. ಇದು ಸುಮಾರು ೨೧ ಅಡಿ ಅಗಲ ೨೧ ಅಡಿ ಉದ್ದವಿದೆ. ನವರಂಗದ ಮಧ್ಯದಲ್ಲಿ ಸುಮಾರು ಆರು ಇಂಚು ಎತ್ತರವಿರುವ ಕಟ್ಟೆಯಿದೆ. ಈ ಕಟ್ಟೆಯ ನಾಲ್ಕು ಮೂಲೆಗಳಲ್ಲಿ ನಾಲ್ಕು ಕಂಬಗಳನ್ನು ನಿಲ್ಲಿಸಲಾಗಿದೆ. ಮಧ್ಯದಲ್ಲಿ

ಈ ನಾಲ್ಕು ಕಂಬಗಳನ್ನು ನಿಲ್ಲಿಸುವುದರ ಮೂಲಕ ಒಂಭತ್ತು ಅಂಕಣಗಳನ್ನು ಸೃಷ್ಟಿಸಲಾಗಿದ್ದು ಜೊತೆಗೆ ನವರಂಗವನ್ನು ಹಜಾರ ಮತ್ತು ಇಕ್ಕೆಲಗಳಾಗಿ ವಿಂಗಡಿಸಲಾಗಿದೆ. ಕಂಬಗಳನ್ನು ಪೀಠಗಳ ಮೇಲೆ ನಿಲ್ಲಿಸಲಾಗಿದೆ. ಕಂಬಗಳ ಕೆಳಭಾಗ ಚೌಕಾಗಿದ್ದು, ಕಾಂಡಭಾಗವು ಗಂಟೆಯಾಕಾರವಾಗಿದೆ. ಮೇಲ್ಭಾಗದಲ್ಲಿ ವೃತ್ತಾಕಾರದ ತಡಿ, ಅದರ ಮೇಲೆ ಚೌಕಾಕಾರದ ಫಲಕ. ಫಲಕದ ಮೇಲೆ $45^0$ ಕೋನದಲ್ಲಿ ಕಟೆದ ಬೋದುಗೆ. ಈ ಬೋದುಗೆಯ ತಳದಲ್ಲಿ ಸಿಂಹಗಳು ಮತ್ತು ಕೀರ್ತಿಮುಖದ ಅಲಂಕರಣೆ ಇದೆ. ಈ ರೀತಿಯ ಬೋದುಗೆಗಳನ್ನು ಇದೇ ಸ್ಥಳದ ಕಾಶಿವಿಶ್ವೇಶ್ವರ ದೇವಾಲಯದಲ್ಲಿ ನೋಡಬಹುದು. ಕಂಬದ ಚೌಕಾದ ಭಾಗದಲ್ಲಿ ಮಕರ ತೋರಣಗಳನ್ನು ಕಟೆದಿದ್ದು, ಅವುಗಳಲ್ಲಿ ಕೂದಲುಗಳನ್ನು ಬಾಚಿಕೊಳ್ಳುತ್ತಿರುವ ಸ್ತ್ರೀ, ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತಿರುವ ಸ್ತ್ರೀ ಮುಂತಾದ ಶಿಲ್ಪಗಳಿವೆ.

ನವರಂಗ ಒಂಭತ್ತು ಅಂಕಣದ್ದಾಗಿದ್ದು, ಮಧ್ಯದ ಅಂಕಣದ ಭುವನೇಶ್ವರಿಯಲ್ಲಿ ನಿಮ್ನ ಪದ್ಮವನ್ನು ಕೆತ್ತಲಾಗಿದೆ. ಇದರ ಅರ್ಧಮಂಟಪದ ಆಚೀಚೆ ಬ್ರಹ್ಮ ಮತ್ತು ಪದ್ಮಾವತಿಯ ಮೂರ್ತಿಗಳಿವೆ. ಬಲಗಡೆ ಪೀಠದ ಮೇಲೆ ಪ್ರತಿಷ್ಠೆ ಮಾಡಲಾಗಿರುವ ಮೂರ್ತಿ ಪದ್ಮಾವತಿಯದು. ಪದ್ಮಾವತಿ ಅರ್ಧಪರ್ಯಂಕಾಸನದಲ್ಲಿ ಕುಳಿತಿದ್ದು, ಜಿನವಿಗ್ರಹವನ್ನೊಳಗೊಂಡ ಮುಕುಟವನ್ನು ಧರಿಸಿದ್ದಾಳೆ. ಮುಕುಟದ ಮೇಲೆ ಹೆಡೆಬಿಚ್ಚಿದ ಸರ್ಪ. ಕಂಕಣ, ನೂಪುರ, ಕಟಿಬಂಧ, ಉಂಗುರ, ಕುಂಡಲ, ಹಾರಗಳಿಂದ ಅಲಂಕೃತಳಾದ ಪದ್ಮಾವತಿ ಚತುರ್ಭುಜೆ. ಮೂರು ಕೈಗಳಲ್ಲಿ ಅಂಕುಶ, ಪಾಶ, ಫಲಗಳನ್ನು ಹಿಡಿದಿದ್ದು, ನಾಲ್ಕನೆಯ ಕೈ ವರದ ಹಸ್ತದಲ್ಲಿದೆ. ಈ ಮೂರ್ತಿ ಸುಮಾರು ೩ ಅಡಿ ನಾಲ್ಕು ಅಂಗಲ ಎತ್ತರವಿದೆ.

ಎಡಗಡೆಯ ಪೀಠದ ಮೇಲಿರುವ ಮೂರ್ತಿ ಬ್ರಹ್ಮನದು. ಸಮಭಂಗದಲ್ಲಿರುವ ಬ್ರಹ್ಮ ಚತುರ್ಮುಖನು. ಹಿಂದಿನ ಮುಖದಲ್ಲಿ ಗಡ್ಡವಿದೆ. ಹೆಚ್ಚು ಕುಸುರಾಗಿ ಕೆತ್ತಿದ ಈ ಬ್ರಹ್ಮ ಜಟಾಮುಕುಟಧಾರಿ. ಕುಂಡಲ ಕಂಕಣ, ಉದರ ಬಂಧ, ಕಟಿಬಂಧ, ನೂಪುರ, ಉಂಗುರ ಕೇಯೂರ, ಯಜ್ಞೋಪವೀತ, ವೈಜಯಂತಿ ಮಾಲಾ ಮುಂತಾದ ಆಭರಣಗಳಿಂದ ಅಲಂಕೃತನಾಗಿರುವ ಬ್ರಹ್ಮನಿಗೆ ನಾಲ್ಕು ಕೈಗಳಿವೆ. ಮೇಲಿನ ಎರಡು ಕೈಗಳು ಭಗ್ನವಾಗಿವೆ. ಕೆಳಗಿನ ಬಲಗಡೆ ಕೈ ಅಭಯಹಸ್ತದಲ್ಲಿದ್ದು, ರುದ್ರಾಕ್ಷಿ ಮಾಲೆಯನ್ನು ಹಿಡಿದಿದ್ದರೆ, ಕೆಳಗಿನ ಎಡಕೈ ದಂಡವೊಂದರ ಮೇಲೆ ಊರಿದ್ದು, ಕೈಯಲ್ಲಿ ಕಲಶವನ್ನು ಹಿಡಿದಿದೆ. ಬ್ರಹ್ಮನ ಆಚೀಚೆ ಚಾಮರಧಾರಿಣಿಯರು ಇದ್ದಾರೆ. ಈ ಮೂರ್ತಿ ನಾಲ್ಕು ಅಡಿಗಿಂತ ಸ್ವಲ್ಪ ಎತ್ತರವಿದೆ. ಈ ಮೂರ್ತಿ ಕಲ್ಯಾಣದ ಚಾಲುಕ್ಯರ ಕಾಲದ ಶ್ರೇಷ್ಠಮೂರ್ತಿಗಳಲ್ಲಿ ಒಂದು. ಹೆನ್ರಿ ಕಝಿನ್ಸ್‌ನು ಸರಸ್ವತಿಯ ಮೂರ್ತಿಯೊಂದು ಮುಖಮಂಟಪದಲ್ಲಿತ್ತೆಂದು ತಿಳಿಸುತ್ತಾ, ಸರಸ್ವತಿಯು ಅಂಕುಶ, ಪುಸ್ತಕ, ಫಲ ಮತ್ತು ಹೂವೊಂದನ್ನು ಕೈಗಳಲ್ಲಿ ಹಿಡಿದಂತೆ ಕಂಡರಿಸಲಾಗಿದೆ ಎಂದು ಬರೆದಿದ್ದಾನೆ. ಇಂದು ಈ ಮೂರ್ತಿ ಇಲ್ಲಿ ಕಾಣಸಿಗುವುದಿಲ್ಲ.

ನವರಂಗದ ದ್ವಾರವನ್ನು ನಯವಾಗಿ ಕೆತ್ತಲಾಗಿದ್ದು, ದ್ವಾರಶಾಖೆಗಳನ್ನು ಸಿಂಹದ ಸಾಲು, ಕುಂಭವನ್ನುಹೊಂದಿದ ಕಬ್ಬಿನ ಜಲ್ಲೆಯಾಕಾರದ ಅರ್ಧಕಂಬ, ಲತಾಸುರುಳಿಗಳು ಮತ್ತು ಹೂವುಗಳಿಂದ ಅಲಂಕರಿಸಲಾಗಿದೆ. ಲತಾಸುರುಳಿಗಳಲ್ಲಿ ನೃತ್ಯಗಾರರು ಮತ್ತು ಸಂಗೀತಗಾರರ ಚಿಕ್ಕ ಚಿಕ್ಕ ಶಿಲ್ಪಗಳನ್ನು ಕೊರೆಯಲಾಗಿದೆ. ದ್ವಾರದ ಮಂಗಲ ಫಲಕದಲ್ಲಿ ಗಜಲಕ್ಷ್ಮಿಯನ್ನು ಕೆತ್ತಿದ್ದಾರೆ. ದ್ವಾರದ

ಮೇಲಿನ ಕಪೋತದ ಕೆಳಭಾಗದಲ್ಲಿ ಹಂಸಗಳ ಸಾಲಿದೆ. ದ್ವಾರಶಾಖೆಯ ಕೆಳಭಾಗದಲ್ಲಿ ರತಿ, ಮನ್ಮಥರ ಮೂರ್ತಿಗಳಿವೆ.

ನವರಂಗಕ್ಕೆ ಹೊಂದಿಕೊಂಡು ಮುಖಮಂಟಪವಿದೆ. ಇದರಲ್ಲಿ ಆರು ಸಾಲುಕಂಬಗಳಿವೆ. ಮಂಟಪದ ಮಧ್ಯದಲ್ಲಿ ಚೌಕಾಕಾರದ ಸುಮಾರು ೪ ಇಂಚು ಎತ್ತರದ ಕಟ್ಟೆಯಿದ್ದು ಅದರ ನಾಲ್ಕು ಮೂಲೆಗಳಲ್ಲಿ ಗಂಟೆಯಾಕಾರದ ಕಂಬಗಳಿವೆ. ಮುಖಮಂಟಪದಲ್ಲಿ ವಿವಿಧ ಆಕಾರದ ಕಂಬಗಳಿರುವುದು ಒಂದು ವಿಶೇಷ. ಇಲ್ಲಿ ಗಂಟೆಯಾಕಾರದ ಕಾಂಡಭಾಗವುಳ್ಳ ಕಂಬಗಳು, ಅಷ್ಟಕೋನಗಳುಳ್ಳ ಗಂಟೆಯಾಕಾರದ ಕಂಬಗಳು, ಕಚ್ಚುಗಳುಳ್ಳ ಚೌಕಾಕಾರದ ಕಂಬಗಳು ಮತ್ತು ಚೌಕಾಕಾರದ ಕೆಳಭಾಗ, ಅದರ ಮೇಲೆ ಹದಿನಾರು ಮೂಲೆಯ ಮತ್ತು ಅಷ್ಟಕೋನಾಕಾರದ ಕಾಂಡಭಾಗವನ್ನುಳ್ಳ ಕಂಬಗಳಿವೆ.

ಈ ಬಸದಿಯ ಮುಖ ಮಂಟಪದ ಅಧಿಷ್ಠಾನ ಸುಮಾರು ೩.೫ ಅಡಿ ಎತ್ತರವಿದ್ದು ಉಪಾನ, ಜಗತಿ ಆಳವಾದ ಮತ್ತು ಅಗಲವಾದ ಗಳ ಮತ್ತು ವಿವಿಧ ಆಕಾರದ ಅಂದರೆ ಚೌಕಾಕಾರ, ದೀರ್ಘ, ಚತುರ ಪ್ರಾಕಾರ ಮತ್ತು ಶಿಂಬೆಯಾಕಾರದ ಅಲಂಕಾರಿಕ ಪಟ್ಟಿಕೆಯನ್ನು ಒಳಗೊಂಡಿದೆ. ಗರ್ಭಗೃಹ, ಅರ್ಧ ಮಂಟಪ ಮತ್ತು ನವರಂಗದ ಅಧಿಷ್ಠಾನ, ಸುಮಾರು ಐದು ಅಡಿ ಎತ್ತರವಿದ್ದು, ಇದರಲ್ಲಿ ಉಪಾನ, ಜಗತಿ, ಆಳವಾದ ಗಳ ಮುಂಚಾಚಿದ ಕಿರಿದಟ್ಟಿಕೆ, ಮತ್ತೊಂದು ಆಳವಾದ ಗಳ, ಪಟ್ಟಿಕೆ ಮತ್ತು ಮಕರ ಮುಖವನ್ನು ಹೊಂದಿದ ಪಟ್ಟಿಕೆಯನ್ನು ಕೆತ್ತಿದ್ದಾರೆ. ಅಧಿಷ್ಠಾನದ ಉತ್ತರದಿಕ್ಕಿನಲ್ಲಿ ಮಕರದ ಆಕಾರದಲ್ಲಿರುವ ನಾಳವಿದೆ.

ಬಸದಿಯ ಹೊರಗೋಡೆಯ ಅಲಂಕರಣೆ ಕುಕ್ಕನೂರಿನ ಕಲ್ಲೇಶ್ವರ ದೇವಾಲಯದ ಅಲಂಕರಣೆಯನ್ನು ಬಹುಮಟ್ಟಿಗೆ ಹೋಲುತ್ತದೆ. ಗೋಡೆಯಲ್ಲಿ ಹಿಂಬಣೆ-ಮುಂಬಣೆಗಳಿದ್ದು, ಅದರಲ್ಲಿ ತೆಳುವಾದ ಅರ್ಧಕಂಬಗಳು, ಕೋಷ್ಠಗಳು ಮತ್ತು ಪಂಜರಗಳನ್ನು ಬಹುಸೂಕ್ಷ್ಮವಾಗಿ ಕೆತ್ತಲಾಗಿದೆ. ಪಂಜರಗಳ ಮೇಲೆ ಚಿಕಣಿ ಶಿಖರಗಳನ್ನು ಕೂಡಿಸಲಾಗಿದೆ. ಈ ಪಂಜರಗಳ ಮೇಲೆ ಮಕರ ತೋರಣಗಳಿವೆ. ಕೋಷ್ಠಗಳ ಮೇಲೆ ಕೂಡ ಚಿಕಣಿ ಶಿಖರಗಳನ್ನು ಅಳವಡಿಸಲಾಗಿದೆ. ಕೋಷ್ಠಗಳು ಆಳವಾಗಿರದ ಕಾರಣ ಅದರಲ್ಲಿ ಯಾವುದೇ ಮೂರ್ತಿ ಶಿಲ್ಪಗಳಿಲ್ಲ.

ಗೋಡೆಯ ಮೇಲಿನ ಪ್ಯಾರಾಪೆಟ್ ಎರಡು ತರಗಳದ್ದಾಗಿದ್ದು, ಕೆಳಗಿನ ಭಾಗದಲ್ಲಿ ಯಕ್ಷರ ಮತ್ತು ಮಕರಗಳ ಅಲಂಕರಣೆ ಇದೆ. ಮೇಲ್ಭಾಗದಲ್ಲಿ ಶಾಲಗಳು, ಕೂಟಗಳು, ಕರ್ಣಕೂಟಗಳಿದ್ದು, ಅವುಗಳಲ್ಲಿ ಯಕ್ಷರ-ಯಕ್ಷಿಯರ ಮತ್ತು ಜಿನನ ಮೂರ್ತಿಗಳನ್ನು ಕಂಡರಿಸಿದ್ದಾರೆ. ಗರ್ಭಗೃಹದ ಮೇಲೆ ಮತ್ತೊಂದು ಗರ್ಭಗೃಹವಿದ್ದು, ಅದರ ಮೇಲ್ಗಡೆ ಚಾಳುಕ್ಯ ಶೈಲಿಯ ದ್ರಾವಿಡ ವಿಮಾನವಿದೆ. ಇದು ಎರಡು ತಲಗಳನ್ನು ಹೊಂದಿದ್ದು, ಮೇಲ್ಭಾಗದಲ್ಲಿ ಕಚ್ಚುಗಳುಳ್ಳ ಸ್ತೂಪ ಮತ್ತು ಕಲಶವನ್ನು ಹೊಂದಿದೆ. ಶಿಖರದಲ್ಲಿರುವ ಶಾಲಗಳಲ್ಲಿ ಯಕ್ಷ ಯಕ್ಷಿಯರ ಮೂರ್ತಿಗಳಿವೆ.

ಬ್ರಹ್ಮಜಿನಾಲಯದ ಉತ್ತರಕ್ಕೆ ಮತ್ತೊಂದು ಚಿಕ್ಕ ಬಸದಿ ಇದೆ. ಇದರ ಅಧಿಷ್ಠಾನ ಬ್ರಹ್ಮಜಿನಾಲಯದ ಅದಿಷ್ಠಾನವನ್ನು ಹೋಲುತ್ತದೆ. ಗೋಡೆಗಳಲ್ಲಿ ಹಿಂಬಣೆ-ಮುಂಬಣೆಗಳಿದ್ದು,

ಕೇವಲ ತೆಳುವಾದ ಅರ್ಧಕಂಬಗಳಿಂದ ಅಲಂಕರಿಸಲ್ಪಟ್ಟಿದೆ. ಈ ಬಸದಿಯನ್ನು ಜೀರ್ಣೋದ್ಧಾರಗೊಳಿಸಿದ್ದು, ಬಸದಿಯ ಮುಂಭಾಗದಲ್ಲಿದ್ದ ಮುಖಮಂಟಪದ ಬಹುಭಾಗ ಈಗ ಕಾಣಸಿಗುವುದಿಲ್ಲ.

ಇದುವರೆಗೆ ಅಭ್ಯಸಿಸಿದ ಮೂರು ಬಸದಿಗಳಲ್ಲಿ ಎದ್ದು ಕಾಣುವ ಒಂದಂಶವೆಂದರೆ - ಈ ಎಲ್ಲಾ ಬಸದಿಗಳು ಅಂತಸ್ತುಳ್ಳ ಬಸದಿಗಳು. ಅಂತಸ್ತುಗಳುಳ್ಳ ಕರ್ನಾಟಕದ ಅನೇಕ ಬಸದಿಗಳಲ್ಲಿ ಈ ಬಸದಿಗಳು ಬಹುಮುಖ್ಯ. ಇವು ಬಾದಾಮಿ ಚಾಲುಕ್ಯ ಮತ್ತು ರಾಷ್ಟ್ರಕೂಟ ಕಾಲದಲ್ಲಿ ನಿರ್ಮಿಸಲಾದ ಅಂತಸ್ತುಳ್ಳ ಬಸದಿಗಳಿಂದ ಪ್ರಭಾವಿತವಾದವೆಂಬುದು ನಿರ್ವಿವಾದ. ಕರ್ನಾಟಕದ ಮೊತ್ತ ಮೊದಲನೆಯ ಅಂತಸ್ತುಳ್ಳ ಬಸದಿ ಐಹೊಳೆಯ ಬಾದಾಮಿ ಚಾಲುಕ್ಯ ಕಾಲದ ಬಸದಿ. ಮೇಗುತಿ ಎಂದೇ ಪ್ರಸಿದ್ಧವಾದ ಈ ಬಸದಿಯನ್ನು ಕ್ರಿ.ಶ. ೬೩೪ರಲ್ಲಿ ರವಿಕೀರ್ತಿಯು ನಿರ್ಮಿಸಿದನು.[೪] ಗರ್ಭಗೃಹದ ಮೇಲ್ಗಡೆ ಶಿಖರದ ಬದಲು ಇನ್ನೊಂದು ಗರ್ಭಗೃಹವಿದೆ. ರಾಷ್ಟ್ರಕೂಟಕಾಲದಲ್ಲಿ ಮೇಗುತಿಯಿಂದ ಪ್ರಭಾವಿತವಾಗಿ ಕಟ್ಟಿದ ಎರಡು ಬಸದಿಗಳಿದ್ದು, ಅವು ಪಟ್ಟದಕಲ್ಲು ಮತ್ತು ಹಳ್ಳೂರಿನಲ್ಲಿವೆ. ಈ ಎರಡೂ ಬಸದಿಗಳು ರಾಷ್ಟ್ರಕೂಟ ಕಾಲದ ಆರಂಭಕಾಲದ ಕಟ್ಟಡಗಳು. ಈ ಮೂರು ಅಂತಸ್ತುಳ್ಳ ಬಸದಿಗಳಿಂದ ಪ್ರಬೆಭಾವಿತವಾಗಿ ನಿರ್ಮಾಣಗೊಂಡ ಬಸದಿಗಳೆಂದರೆ ಐಹೊಳೆಯ ಸೆಟ್ಟವ್ವಗುಡಿ, ಶ್ರವಣಬೆಳ್ಗೊಳದ ಚಾವುಂಡರಾಯ ಬಸದಿ ಮತ್ತು ಲಕ್ಕುಂಡಿಯ ಬ್ರಹ್ಮಜಿನಾಲಯ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಬಾದಾಮಿ ಚಾಲುಕ್ಯರ ಕಾಲದಲ್ಲಿ ಮೇಗುತಿಯಿಂದ ಪ್ರಭಾವಿತವಾಗಿ ಲಾಡಖಾನಗುಡಿಗೆ ಅನಂತರ ಕಾಲದಲ್ಲಿ ಮಾಳಿಗೆಯ ಮೇಲೆ ಇನ್ನೊಂದು ಗರ್ಭಗೃಹವನ್ನು ನಿರ್ಮಿಸಿದರೂ ಈ ರೀತಿಯ ಅಂತಸ್ತುಳ್ಳ ದೇವಾಲಯಗಳು ಹಿಂದೂಗಳಿಗೆ ಪ್ರಿಯವಾಗಲಿಲ್ಲ. ಆದರೆ ಜೈನರು ಮೇಗುತಿಯಿಂದ ಆರಂಭವಾದ ಈ ಪರಂಪರೆಯನ್ನು ಮುಂದುವರೆಸಿಕೊಂಡು ಬಂದರು. ಈ ಪರಂಪರೆಯಲ್ಲಿ ಐಹೊಳೆ, ಶ್ರವಣಬೆಳಗೊಳ ಮತ್ತು ಲಕ್ಕುಂಡಿಯ ಬಸದಿಗಳು ಪ್ರಮುಖ ಉದಾಹರಣೆಗಳೆಂಬುದು ಗಮನಾರ್ಹ.

**ಅಡಿಟಿಪ್ಪಣಿಗಳು**

೧. ಎ.ಕ.೨ (ಪರಿಷ್ಕೃತ ಆವೃತ್ತಿ, ೧೯೭೩) ೧೫೧ (೧೨೨)
೨. ಅದೇ., ೧೫೦ (೧೨೧)
೩. ಎ.ಕ. ೨ (ಹಳೇ ಆವೃತ್ತಿ, ೧೯೨೩) ಪು.೪೬
೪. ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ ೯ - ಭಾಗ ೧, ೫೨
೫. ಡಾ। ಸಿಂದಿಗಿ ರಾಜಶೇಖರ, ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಧಾರವಾಡ, ೧೯೮೮ ಪುಟ ೨೬.

# ಅತ್ತಿಮಬ್ಬೆ ಮತ್ತು ಚಾಲುಕ್ಯ ಸಾಮ್ರಾಜ್ಯ*

ಡಾ। ಶಾಂತಿನಾಥ ದಿಬ್ಬದ

ಕರ್ನಾಟಕದ ಧಾರ್ಮಿಕ, ಸಾಮಾಜಿಕ ಕ್ಷೇತ್ರದಲ್ಲಿ ಸಾವಿರ ವರ್ಷಗಳ ಹಿಂದೆ ವಿಶಿಷ್ಟ ಸೇಗ್ಯೆದ ಅತ್ತಿಮಬ್ಬೆ ''ಸಾವಿರದ ಸ್ತ್ರೀ'' ೧. ಭಾರತ ಕಂಡಿರುವ ಕೆಲವೇ ಜನ ಮಹಾನ್ ಮಹಿಳೆಯರಲ್ಲಿ ಅವಳು ಒಬ್ಬಳು. ಅವಳ ಸಾಧನೆಗಳನ್ನು ಸ್ಮರಿಸಿಕೊಳ್ಳುವ ಮೂಲಕ ಅವಳ ಸಹಸ್ರಮಾನೋತ್ಸವವನ್ನು ಇಂದು ಅರ್ಥಪೂರ್ಣವಾಗಿಸಲಾಗುತ್ತಿದೆ. ಅತ್ತಿಮಬ್ಬೆಯ ಕಾಲದಲ್ಲಿ ಕರ್ನಾಟಕದಲ್ಲಿ ಚಾಲುಕ್ಯ ಸಾಮ್ರಾಜ್ಯವು ಆಡಳಿತ ಸೂತ್ರ ಹಿಡಿದಿತ್ತು. ಆ ರಾಜ ಮನೆತನದೊಂದಿಗೆ ಅತ್ತಿಮಬ್ಬೆ ಹೊಂದಿದ ಸಂಬಂಧ, ಅದರಿಂದ ಅವಳಿಗೆ ದೊರೆತ ಪ್ರೇರಣೆ ಹಾಗೂ ಅತ್ತಿಮಬ್ಬೆಮತ್ತು ಚಾಲುಕ್ಯ ಸಾಮ್ರಾಜ್ಯದಿಂದ ಕರ್ನಾಟಕದ ಸಂಸ್ಕೃತಿಗೆ ದೊರೆತ ಪ್ರೇರಣೆ ಇವುಗಳನ್ನು ನಾವು ಸ್ಮರಿಸಿಕೊಳ್ಳುವುದು ಅಗತ್ಯವಾಗಿದ್ದು ಆ ದೃಷ್ಟಿಯಿಂದ ರಚಿತವಾದ ಪ್ರಬಂಧ ಇದಾಗಿದೆ.

ಪೊನ್ನನ ಶಾಂತಿಪುರಾಣ, ರನ್ನನ ಅಜಿತಪುರಾಣ ಹಾಗೂ ಲಕ್ಕುಂಡಿಯ ಶಾಸನ ಮತ್ತು ಬ್ರಹ್ಮಶಿವನ ಸಮಯ ಪರೀಕ್ಷೆಗಳು ಅತ್ತಿಮಬ್ಬೆಮತ್ತು ಅವಳ ಸಮಕಾಲೀನ ವಿವರಗಳನ್ನು ನೀಡುತ್ತವೆ. ಹೆಚ್ಚಿನ ಚಾರಿತ್ರಿಕ ವಿವರಗಳು ನಮಗೆ ದೊರೆಯುವುದು ಅಜಿತ ಪುರಾಣ ಹಾಗೂ ಲಕ್ಕುಂಡಿಯ ಶಾಸನದಿಂದ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹತ್ತನೆಯ ಶತಮಾನಕ್ಕೆ ವಿಶಿಷ್ಟ ಸ್ಥಾನವಿರುವಂತೆ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿಯೂ ಹತ್ತನೆಯ ಶತಮಾನಕ್ಕೆ ವಿಶಿಷ್ಟ ಸ್ಥಾನವಿದೆ. ಈ ಅವಧಿಯಲ್ಲಿ ಸಾಹಿತ್ಯ ಹಾಗೂ ರಾಜಕೀಯ ಕ್ಷೇತ್ರಗಳೆರಡೂ ಹುರಿಗೊಂಡು ಬೆಳೆದದ್ದು ಕರ್ನಾಟಕದ ಪುಣ್ಯವೆಂದು ಹೇಳಬಹುದು. ಈ ಪ್ರಕ್ರಿಯೆಯಲ್ಲಿ ರಾಜಕೀಯ ಹಾಗೂ ಸಾಹಿತ್ಯ ಕ್ಷೇತ್ರಗಳೆರಡರ ಕೇಂದ್ರ ವ್ಯಕ್ತಿಯಾಗಿ ದುಡಿದವಳು ಅತ್ತಿಮಬ್ಬೆ. ಅದಕ್ಕೆಲ್ಲಾ ಅವಳಿಗೆ ಬೆಂಬಲವಾಗಿ ನಿಂತಿದ್ದು ಚಾಲುಕ್ಯ ಸಾಮ್ರಾಜ್ಯ. ಅತ್ತಿಮಬ್ಬೆ ಮತ್ತು ಚಾಲುಕ್ಯ ಸಾಮ್ರಾಜ್ಯದ ನಡುವಿನ ಗಾಢ ಸಂಬಂಧವನ್ನು ನೋಡಿದಾಗ ಅತ್ತಿಮಬ್ಬೆಯನ್ನು ಬಿಟ್ಟು ಚಾಲುಕ್ಯ ಮನೆತನವಿಲ್ಲ; ಚಾಲುಕ್ಯ ಮನೆತನವನ್ನು ಬಿಟ್ಟು

---

ಋಷಭದೇವ ಫೌಂಡೇಶನ್ ನವದೆಹಲಿ ಅವರ ಸಹಯೋಗದೊಂದಿಗೆ ಡಾ. ಹಂಪನಾಗರಾಜಯ್ಯ, ನಿರ್ದೇಶಕರು, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಅವರು ದಿ-೪ ಮತ್ತು ೫ ಏಪ್ರಿಲ್ ೧೯೯೪ ರಂದು ಬೆಂಗಳೂರಿನಲ್ಲಿ ಏರ್ಪಡಿಸಿದ ವಿಚಾರಸಂಕಿರಣದಲ್ಲಿ ಮಂಡಿಸಿದ ಪ್ರಬಂಧ.

ಅತ್ತಿಮಬ್ಬೆಯಿಲ್ಲ; ಇವರಿಬ್ಬರನ್ನು ಬಿಟ್ಟು ಕರ್ನಾಟಕ ಸಂಸ್ಕೃತಿಯಿಲ್ಲ ಎಂಬ ಸತ್ಯ ನಮಗೆ ಗೋಚರವಾಗುತ್ತದೆ.

ಅತ್ತಿಮಬ್ಬೆ ಹಾಗೂ ಚಾಲುಕ್ಯ ದೊರೆಗಳ ಸಾಧನೆಗಳನ್ನು ಶೋಧಿಸುತ್ತಾ ಹೋದಂತೆ ಅವರಿಬ್ಬರೂ ಬೇರೆ ಬೇರೆ ಮನೆತನಗಳೊಡನೆ ಹಾಗೂ ಜನರೊಡನೆ ಸಂಬಂಧ ಪಡೆದದ್ದು ನಮಗೆ ಕಂಡು ಬರುತ್ತದೆ. ಹೀಗಾಗಿ ನಾವು ಒಂದು ದೊಡ್ಡ ಸಂಪರ್ಕವೃಕ್ಷವನ್ನೇ[೧] ರೂಪಿಸಿಕೊಳ್ಳಬೇಕಾಗುತ್ತದೆ. ಇದರಲ್ಲಿ ರಾಷ್ಟ್ರಕೂಟ, ಗಂಗ, ಶಿಲಾಹಾರ, ಪರಮಾರ, ಚೋಳರೆಲ್ಲರೂ ಬಂದು ಹೋಗುತ್ತಾರೆ. ಆದರೆ ವಿಸ್ತಾರದ ಭಯದಿಂದ ಇಲ್ಲಿ ಒಂದು ದಡವನ್ನಾಗಿ ಅತ್ತಿಮಬ್ಬೆಯನ್ನೂ ಇನ್ನೊಂದು ದಡವನ್ನಾಗಿ ಚಾಲುಕ್ಯ ಸಾಮ್ರಾಜ್ಯವನ್ನೂ ಇರಿಸಿಕೊಂಡು ಕೇವಲ ಮಹತ್ವದ ವಿಷಯಗಳನ್ನು ಮಾತ್ರ ದಾಖಲಿಸಲಾಗಿದೆ.

ಪೊನ್ನ-ರನ್ನರು ಅತ್ತಿಮಬ್ಬೆಯ ಪೂರ್ವಜರ ಚರಿತ್ರೆಯನ್ನು ತಮ್ಮ ಶಾಂತಿಪುರಾಣ ಹಾಗೂ ಅಜಿತಪುರಾಣಗಳಲ್ಲಿ ತಿಳಿಸಿದ್ದಾರೆ. ಅವರು ವೆಂಗಿದೇಶಕ್ಕೆ ಸೇರಿದವರು. ಈ ವೆಂಗಿ ದೇಶಕ್ಕೂ ಕನ್ನಡ ಸಾಹಿತ್ಯಕ್ಕೂ ಇನ್ನೂ ಹೆಚ್ಚಿನ ಸಂಬಂಧವಿರುವುದನ್ನು ಬೇರೆ ಪ್ರಸಂಗಗಳಲ್ಲಿಯೂ ನಾವು ಕಾಣುತ್ತೇವೆ. ಪುಂಗನೂರಿನ ಶ್ರೇಷ್ಠ ವ್ಯಕ್ತಿ ನಾಗಮಯ್ಯ. ನಾಗಮಯ್ಯನದು ಜೈನ ಬ್ರಾಹ್ಮಣ ಮನೆತನ. ಅವನಿಗೆ ಮಲ್ಲಪಯ್ಯ ಮತ್ತು ಪುನ್ನಮಯ್ಯ ಎಂಬ ಇಬ್ಬರು ಮಕ್ಕಳು. ಹಿರಿಯನಾದ ಮಲ್ಲಪ ಬಹುಶ್ರುತ ವಿದ್ವಾಂಸ. ಮಲ್ಲಪನಲ್ಲದವನು ಪ್ರಭುವಲ್ಲ, ಉದಾತ್ತನಲ್ಲ, ಶುಚಿಯಲ್ಲ, ದಾನಿಯಲ್ಲ, ಗುಣಿಯಲ್ಲ, ಪೂಜ್ಯನಲ್ಲ ಎಂದು ಪೊನ್ನ ಹೊಗಳಿರುವುದನ್ನು ನೋಡಿದರೆ ಮಲ್ಲಪಯ್ಯನ ವ್ಯಕ್ತಿತ್ವದ ಅಗಾಧತೆ ನಮಗರಿವಾಗುತ್ತದೆ. ಪುನ್ನಮಯ್ಯನನ್ನು ಪೊನ್ನ 'ಪುರುಷರತ್ನ'ವೆಂದು ಕೊಂಡಾಡಿದ್ದಾನೆ. ರನ್ನನು ತನ್ನ ಅಜಿತ ಪುರಾಣದಲ್ಲಿ ಈ ಮನೆತನವನ್ನು ಹೊಗಳಿದ್ದಾನೆ. ರಾಜನಿಷ್ಠೆ, ಸಾಹಿತ್ಯಪ್ರೇಮ, ಕಲಿತನ, ಧರ್ಮಾನುರಾಗ ಇವು ಈ ಮನೆತನದ ಗುಣಗಳಾಗಿದ್ದವು. ಮಲ್ಲಪನಂತಹ ಶೂರರಿಲ್ಲ, ನೃಪಶಾಸ್ತ್ರಕೋವಿದರಿಲ್ಲ, ಭವ್ಯರಿಲ್ಲ, ಆಚಾರಿಗಳಿಲ್ಲ ಎಂದೂ ಆತನು ಕವಿಗಳಿಗೆ, ಪಂಡಿತರಿಗೆ ತವರ್ಮನೆಯಂತಿದ್ದನೆಂದೂ ಅವನ ತಮ್ಮ ಪುನ್ನಮಯ್ಯನು ನಯವಿನಯ ಸಂಪನ್ನನಾಗಿದ್ದ ಹಾಗೂ ಧರ್ಮನಂದನನಂತಿದ್ದನೆಂದೂ ರನ್ನ ತಿಳಿಸಿದ್ದಾನೆ. ಹೀಗೆ ಶೀಲಸಂಪನ್ನರೂ, ಸಾಹಿತ್ಯಪ್ರೇಮಿಗಳೂ ಆದ ಈ ಇಬ್ಬರು ಸಹೋದರರು ಪೊನ್ನನಿಂದ ಪುರಾಣ ಚೂಡಾಮಣಿಯೆನಿಸಿದ 'ಶಾಂತಿಪುರಾಣ'ವನ್ನು ಬರೆಯಿಸಿದ್ದಾರೆ. ಜಿನಚಂದ್ರನೆಂಬಾತ ಈ ಸೋದರರ ಧರ್ಮಗುರುವಾಗಿದ್ದ. ಆ ಗುರುವಿನ ಮೇಲಿನ ಭಕ್ತಿಯಿಂದಾಗಿ ಇವರು ಪೊನ್ನನಿಂದ ಶಾಂತಿಪುರಾಣ ಬರೆಯಿಸಿ ಕೃತಾರ್ಥರಾದರು. ಕಮ್ಮೆ ಮನೆತನದ ಈ ಅಪೂರ್ವ ಜೋಡಿ ಕರ್ನಾಟಕ ಸಂಸ್ಕೃತಿಯ ಮಹಾ ಪೋಷಕ ಶಕ್ತಿಯಾಗಿ ಮೆರೆದಿದೆ. ದಾನ ಧರ್ಮ ಸಾಹಸ, ಸಾಹಿತ್ಯಪೋಷಣೆ, ಪಂಡಿತರಿಗೆ ಆಶ್ರಯ, ಯುದ್ಧ - ಹೀಗೆ ಹಲವು ಹತ್ತು ನೆಲೆಗಳಿಂದ ಇವರು ನಾಡಿಗೆ ಗೈದ ಸೇವೆ ಅಪಾರವಾದುದು.

ಈ ಮಲ್ಲಪಯ್ಯನೇ ಅತ್ತಿಮಬ್ಬೆಯ ತಂದೆ. ಈತ ಚಾಲುಕ್ಯ ಪ್ರಭು 'ತೈಲಪನ ಅತಿ ನೆಚ್ಚಿನ ಬಂಟ, ಮಲ್ಲಪನು ತನ್ನನ್ನು ತಾನು 'ತೈಲಪನ ಮನೆಯ ಮಗ'ನೆಂದು ಭಾವಿಸಿದುದಾಗಿ ರನ್ನನು

---

೧. ಪ್ರಬಂಧದ ಕೊನೆಗೆ ಕೊಡಲಾಗಿದೆ.

ತಿಳಿಸಿದ್ದಾನೆ (ಅಜಿತ ಪುರಾಣ1-30). ಆತನು ತೈಲಪನ ಪರವಾಗಿ 'ಅಂಕಕಾರ'ನಾಗಿ 'ಕುಮಾರ ಯೋಧ್ರ ಸಮರ'ದಲ್ಲಿ ಹೋರಾಡಿದ ಪ್ರಸಂಗವನ್ನು ಅಲ್ಲಿ ತಿಳಿಸುತ್ತಾನೆ. ಅಲ್ಲಿಯ ಕುಮಾರ ಎಂಬ ಪದಕ್ಕೆ 'ಅಂಕಕಾರ' ಎಂಬ ಅರ್ಥವನ್ನು ಇಟ್ಟುಕೊಂಡು ಅಜಿತಪುರಾಣದ ರಚನಾಕಾಲವನ್ನಾಧರಿಸಿ ಮೇಲೆ ತಿಳಿಸಲಾದ ಯುದ್ಧದಲ್ಲಿಯ ಕುಮಾರನು ತೈಲಪನ ಮಗ ಇರಿವ ಬೆಡಂಗನಾಗಿರಬಹುದು, ತನ್ನ ತಂದೆ ತೈಲಪನ ಪರವಾಗಿ ಆತ ಹೋರಾಡಿದ ಯಾವುದೇ ಯುದ್ಧದಲ್ಲಿ ಮಲ್ಲಪಯ್ಯನು ಭಾಗಿಯಾಗಿರಬಹುದೆಂದು ಡಾ। ಬಿ.ಆರ್. ಗೋಪಾಲ್ ಅವರು ತರ್ಕ ಮಾಡಿದ್ದಾರೆ.

ಮೇಲಿನ ಈ ಸಂದರ್ಭವು ರಾಷ್ಟ್ರಕೂಟರ ಕರ್ಕ, ಚೋಳರಾಜ ಉತ್ತಮಚೋಳ, ಪರಮಾರಮುಂಜಿ ಮೊದಲಾದವರೊಂದಿಗೆ, 'ಅಂಕಕಾರ' ನಾಗಿ ಮಾಡಿದ ಯುದ್ಧಗಳಲ್ಲಿ ಒಂದಾಗಿರಬಹುದೆಂದು ತಿಳಿಯಲಾಗಿದ್ದು ಇವೆಲ್ಲಾ ಮಲ್ಲಪಯ್ಯನ ಚಾಲುಕ್ಯ ನಿಷ್ಠೆಗೆ ಸಾಕ್ಷಿಗಳಾಗಿವೆ. ಮಲ್ಲಪಯ್ಯನ ತಮ್ಮನೂ ಅತ್ತಿಮಬ್ಬೆಯ ಕಕ್ಕನೂ ಆಗಿದ್ದ ಪುನ್ನಮಯ್ಯನು ಚಾಲುಕ್ಯರ ಪರವಾಗಿ ಹೋರಾಡಿದ ವೀರನು. ಅಷ್ಟೇ ಅಲ್ಲ ತನ್ನ ಸ್ವಾಮಿ ಇಮ್ಮಡಿ ತೈಲಪನ ಪರವಾಗಿ ಆತ ರಾಷ್ಟ್ರ ಕೂಟರ ಸಾಮಂತನಾಗಿದ್ದ. ಗಂಗರೊಡನೆ ನಡೆಸಿದ ಯುದ್ಧದಲ್ಲಿಯೇ ಅಸುನೀಗಿದವ. (ಅಜಿತ ಪುರಾಣ 1-36). ಈ ಪುನ್ನಮಯ್ಯ ಎದುರಿಸಿದ್ದು ಗಂಗದೊರೆ ಇಮ್ಮಡಿ ಬೂತುಗನ ಕಿರಿಯ ಮಗನಾದ ನೀತಿ ಮಾರ್ಗ ಗೋವಿಂದನೆಂಬುವನನ್ನು ಎಂದು ಹುಂಚದ ಶಾಸನ ತಿಳಿಸುತ್ತದೆ. (ಈತ ಗಂಗರ ಇಮ್ಮಡಿ ಮಾರಸಿಂಹನ ತಮ್ಮ.) ಮುಂದೆ ಮಲ್ಲಪಯ್ಯನ ಹಿರಿಯ ಮಗ ಗುಂಡಮಯ್ಯನು ತನ್ನ ಚಿಕ್ಕಪ್ಪನ ಸಾವಿನ ಸೇಡನ್ನು ಗೋವಿಂದನ ಮೇಲೆ ತೀರಿಸಿಕೊಂಡ ಬಗ್ಗೆ ಅಜಿತಪುರಾಣವು (1-39) ತಿಳಿಸುತ್ತದೆ. ಇದನ್ನು ನೋಡಿದರೆ ಪುನ್ನಮಯ್ಯನು ಗೋವಿಂದನಿಂದಲೇ ಹತನಾಗಿರುವಂತೆ ತೋರುತ್ತದೆ. ತೈಲಪನೊಂದಿಗೆ ನಿಕಟ ಸಂಪರ್ಕವಿದ್ದುದನ್ನೂ ರನ್ನ ತಿಳಿಸಿದ್ದಾನೆ. ಆತ ಪುನ್ನಮಯ್ಯನನ್ನು 'ಚಾಲುಕ್ಯಾಭರಣ' 'ಶ್ರೀಮದಾಹವಮಲ್ಲದೇವ ಸಾಮ್ರಾಜ್ಯ ಲಕ್ಷ್ಮೀ ಪ್ರವರ್ಧಮಾನ ಹೇತುಭೂತ ನಿಜಾದೇಶ ಪರಂಪರಾ ಪ್ರಕಾಶಿತ ಪರಿಜ್ಞಾನಾತಿಶಯನುಂ ಅಪ್ರತಿಮ ಮಲ್ಲನಂ' ಎಂದು ವಿಶೇಷವಾಗಿ ಹೊಗಳಿದ್ದಾನೆ.

ಹೀಗೆ ಅತ್ತಿಮಬ್ಬೆಯ ಪೂರ್ವಜರಾದ ಮಲ್ಲಪಯ್ಯ-ಪುನ್ನಮಯ್ಯರು ಚಾಲುಕ್ಯ ಮನೆತನಕ್ಕೆ ನಿಷ್ಠರಾಗಿ ನಡೆದದ್ದು ಚರಿತ್ರೆಯ ಮಹತ್ವದ ಅಂಶವಾಗಿದೆ. ಪುನ್ನಮಯ್ಯನ ಈ ವಿವರಗಳು ಪೊನ್ನನಲ್ಲಿಲ್ಲ. ಇದರಿಂದ ಶಾಂತಿಪುರಾಣದ ರಚನೆಯ ಕಾಲಕ್ಕೆ ಪುನ್ನಮಯ್ಯ ಇನ್ನೂ ಬದುಕಿದ್ದುದು ತಿಳಿದು ಬರುತ್ತದೆ.

ಈ ಇಬ್ಬರಲ್ಲಿ ಹಿರಿಯನಾದ ಮಲ್ಲಪನ ಮಡದಿ ಅಪ್ಪಕಬ್ಬೆ. ಅವರಿಬ್ಬರ ಉದರದಲ್ಲಿ ಗುಂಡಮಯ್ಯ, ಏಳಮಯ್ಯ, ಪೊನ್ನಮಯ್ಯ (ತೀರಿಹೋದ ತನ್ನ ತಮ್ಮನ ಹೆಸರನ್ನು ಮಲ್ಲಪ ತನ್ನ ಮಗನಿಗೆ ಇಟ್ಟಿದ್ದಾನೆ) ಆಹವಮಲ್ಲ ಹಾಗೂ ವಲ್ಲ ಎಂಬ ಐದು ಜನ ಗಂಡು ಮಕ್ಕಳು ಹಾಗೂ ಅತ್ತಿಮಬ್ಬೆ, ಗುಂಡಮಬ್ಬೆ ಹಾಗೂ ನಾಗಿಯಬ್ಬೆ ಎಂಬ ಮೂರು ಜನ ಹೆಣ್ಣುಮಕ್ಕಳಾದರು. ಅತ್ತಿಮಬ್ಬೆಯ ತಂದೆ ಮಲ್ಲಪಯ್ಯ ಮತ್ತು ಕಕ್ಕ ಪೊನ್ನಮಯ್ಯರು - ಹೀಗೆ ಒಂದೆಡೆಯಿಂದ ಚಾಲುಕ್ಯ ಮನೆತನದ ಪರವಾಗಿ ದುಡಿದರೆ ಇನ್ನೊಂದೆಡೆಯಿಂದ ಅತ್ತಿಮಬ್ಬೆಯ ಪತಿಯ ಮನೆತನದವರೂ ಚಾಲುಕ್ಯರ ಪರವಾಗಿ ದುಡಿದಿದ್ದಾರೆ. ನಿಜಕ್ಕೂ ಇದೊಂದು ಅಪರೂಪದ ಪ್ರಸಂಗ.

ಚಾಲುಕ್ಯ ತೈಲಪ ಹಾಗೂ ಅವನ ಮಗ ಇರಿವ ಬೆಡಂಗ ಸತ್ಯಾಶ್ರಯರು ರಾಷ್ಟ್ರಕೂಟರ ಬದ್ಧ ವೈರಿಗಳಾಗಿದ್ದರು. ತೈಲಪನ ಬಲಗೈ ಬಂಟನಾಗಿದ್ದವನು ದಲ್ಲಪ. ಅತ್ತ ಗಂಗ ಮಾರಸಿಂಹ ಹಾಗೂ ಚಾವುಂಡರಾಯರು ರಾಷ್ಟ್ರಕೂಟರ ನೆಚ್ಚಿನ ಬಂಟರಾಗಿದ್ದರು. ಇದರಿಂದಾಗಿ ಒಂದು ಕಡೆ ರಾಷ್ಟ್ರಕೂಟರು ಹಾಗೂ ಅವರು ವಿಶ್ವಾಸದವರೂ ಇನ್ನೊಂದೆಡೆ ಚಾಲುಕ್ಯರು ಹಾಗೂ ಅವರು ವಿಶ್ವಾಸದವರೂ, ಎದುರುಬದುರು ನಿಂತು ಹೋರಾಡಬೇಕಾಯಿತು.

ಚಾಲುಕ್ಯ ಚಕ್ರವರ್ತಿಯ ಮಹಾಮಂತ್ರಿಯಾಗಿದ್ದ ದಲ್ಲಪನ ಮಗ ನಾಗದೇವ. ರೂಪದಲ್ಲಿ ಕಾಮ, -ಶೌರ್ಯದಲ್ಲಿ ಬಂಟರ ಮಲ್ಲ. ಸುಭಟರಿಗೆ ಚೂಡಾಮಣಿಯಾಗಿ ರಾಜನಿಷ್ಠೆಯಲ್ಲಿ ''ಆಹವಮಲ್ಲದೇವ ಪಾದಪಂಕಜಭ್ರಮರ'' ನಾಗಿದ್ದವನು. ಈತನು ಮಲ್ಲಪನ ಮಕ್ಕಳಾದ ಅತ್ತಿಮಬ್ಬೆ ಗುಂಡಮಬ್ಬೆಯರನ್ನು ವಿವಾಹವಾದ. ನಾಗದೇವ ಹಾಗೂ ಅತ್ತಿಮಬ್ಬೆಯ ಉದರದಲ್ಲಿ ಅಣ್ಣಿಗದೇವ ಜನಿಸಿದ.

ಈ ದಲ್ಲಪನ ಬಗ್ಗೆ ಮತ್ತು ಆತನ ಚಾಲುಕ್ಯ ನಿಷ್ಠೆಯ ಬಗ್ಗೆರನ್ನ ತಿಳಿಸಿದ್ದಾನೆ. ದಲ್ಲಪನನ್ನು ಆತ'ಸಚಿವೋತ್ತಮನುತ್ತಮ ಜಾತಿಯುಂ ಸಕಲ ಚಕ್ರವರ್ತಿಯ ಸಭಾಸಂವಾಸಂ ಚತುರನುಂ ಚತುರುಪದಾವಿಶುದ್ಧನುಂ' (ಅಜಿತಪುರಾಣ ೧-೮೮ವ) ಎಂದು ಹೊಗಳಿದ್ದಾನೆ. ಹೀಗೆ ಚಾಲುಕ್ಯ ಚಕ್ರವರ್ತಿಯಾಗಿದ್ದ ದಲ್ಲಪನು ಆಹವಮಲ್ಲ ಭುಜಾದಂಡನೆನಿಸಿದವ'. ಆತ ಕೊಂಕಣ, ವೆಂಗಿ, ತಿಗುಳ, ಮಾಳವರ ಮೇಲೆ ತೈಲಪನ ಪರವಾಗಿ ಯುದ್ಧ ಮಾಡಿದ್ದು ಶಾಸನದಿಂದ ತಿಳಿಯುತ್ತದೆ. ಶಿಲಾಹಾರ, ಚೋಳರನ್ನು ಸದೆ ಬಡಿಯುವಲ್ಲಿಯೂ ತೈಲಪನಿಗೆ ದಲ್ಲಪ ನೆರವಾಗಿದ್ದನೆಂದು ತರ್ಕಿಸಲಾಗಿದೆ. ರಾಷ್ಟ್ರಕೂಟರನ್ನು ತೈಲಪನು ಪ್ರತಿಭಟಿಸಿದ ಆರಂಭದ ದಿನಗಳಲ್ಲಿ ದಲ್ಲಪನು ತೈಲಪನಿಗೆ ಬಹುವಾಗಿ ನೆರವು ನೀಡಿರುವ ಸಾಧ್ಯತೆಯಿದೆ.

ಇವನ ಮಗ ನಾಗದೇವ ಅತ್ತಿಮಬ್ಬೆಯ ಪತಿ. ಈತನೂ ತಂದೆಯ ಹಾಗೆಯೇ ತೈಲಪನ ಮಹಾಮಂತ್ರಿಯಾಗಿದ್ದವ. ಲಕ್ಕುಂಡಿಯ ಶಾಸನ ಇವನ ಸಾಹಸ-ಸಾಧನೆಗಳನ್ನು ಕೊಂಡಾಡುತ್ತದೆ. ಈತ ಆಂಧ್ರ, ಮಾಗಧ, ಲಾಳ, ಖಸ, ಪಾಂಡ್ಯ ಪ್ರಭುಗಳೊಂದಿಗೆ ತೈಲಪನ ಪರವಾಗಿ ಹೋರಾಡಿದ ಸೂಚನೆ ಈ ಶಾಸನದಲ್ಲಿದೆ.

ರನ್ನ ನಾಗದೇವನ ಮೂರು ಸಾಧನೆಗಳನ್ನು ವಿಶೇಷವಾಗಿ ವರ್ಣಿಸಿದ್ದಾನೆ. 1. ಕುಮಾರರ ಕಾಳಗ 2. ಪಂಚಲನೆಂಬುವವನ ಜೊತೆಗಿನ ಹೋರಾಟ 3. ಕರಹಟಮಲ್ಲನೆಂಬುವವನನ್ನು ಎದುರಿಸಿದ್ದು. ಇಲ್ಲಿ ತಿಳಿಸಲಾದ 'ಕುಮಾರರ ಕಾಳಗ' ವು ರಾಜಕುಮಾರರ ನಡುವೆ ನಡೆದ ಕಾಳಗವೋ ಅಥವಾ ರಾಜರ ಪರವಾಗಿ ಅಂಕಕಾರರ ನಡುವೆ ನಡೆದ ಕಾಳಗವೋ ತಿಳಿಯುವುದಿಲ್ಲ, ಅಂತೂ ನಾಗದೇವ ಅದರಲ್ಲಿ ಹೋರಾಡಿದ್ದು ನಿಜ.

ಪಂಚಲನು ಪಾಂಚಾಲದೇವ ಗಂಗ ಮಾರಸಿಂಹನ ಅಧೀನ ಅಧಿಕಾರಿ. ಆತ ಮಾರಸಿಂಹನ ಕೈಕೆಳಗೆ ಸಬ್ಬಿ ೩೦ ಹಾಗೂ 'ತೊಂಬತ್ತಾರರ' ಪ್ರದೇಶವನ್ನು ಆಳುತ್ತಿದ್ದುದನ್ನು ಇತಿಹಾಸಕಾರರು ಗುರುತಿಸಿದ್ದಾರೆ. ಈತ ತೈಲಪನನ್ನು ಎದುರಿಸಿದಾಗ ನಾಗದೇವ ಇವನನ್ನು ಹಿಂದಕ್ಕೆ ತಳ್ಳಿದ ಪ್ರಸಂಗವನ್ನು ಅಜಿತಪುರಾಣವು ಸೊಗಸಾಗಿ ಹಿಡಿದಿಟ್ಟಿದೆಯಲ್ಲದೆ ತೈಲಪ ಪಾಂಚಾಲನನ್ನು ಎದುರಿಸಿದ ಪ್ರಸಂಗವನ್ನು ತಿಳಿಸುವ ಮೊದಲ ಆಕರವೆನಿಸುತ್ತದೆ.

ತೈಲಪನ ಆಜ್ಞೆಯಂತೆ ನಾಗದೇವ ಕರಹಟದಿಂದ ಮಲ್ಲಯನೆಂಬುವನನ್ನು ಓಡಿಸಿದ ಇನ್ನೊಂದು ಸಾಧನೆಯನ್ನು ಅಜಿತ ಪುರಾಣವು ತಿಳಿಸುತ್ತದೆ. (1-45) ಈ ಮಲ್ಲಯನು ಯಾರೆಂಬುದು ಇನ್ನೂ ಸ್ಪಷ್ಟವಾಗಿಲ್ಲ. ನಾಗಮಯ್ಯನು ಬಹುಶಃ ಇಂಥದೇ ಮತ್ತಾವುದೋ ಯುದ್ಧದಲ್ಲಿ ತೈಲಪನ ಸಲುವಾಗಿ ವೀರಮರಣ ಹೊಂದಿರಬಹುದು. ಆಗ ಅವನ ಇಬ್ಬರು ಸತಿಯರಲ್ಲಿ ಕಿರಿಯವಳಾದ ಗುಂಡಮಬ್ಬೆ ಪತಿಯೊಡನೆ ಚಿತೆಯೇರಿರಬಹುದು. ಅತ್ತ ಅತ್ತಿಮಬ್ಬೆ ತನ್ನ ಮಗ ಅಣ್ಣಿಗದೇವನ ಅಭ್ಯುದಯದ ಹೊಣೆ ಹೊತ್ತಳು.

ಪತಿಯ ಮರಣದ ಅನಂತರ ಅತ್ತಿಮಬ್ಬೆಯ ಬದುಕು ಸಂಪೂರ್ಣ ಧಾರ್ಮಿಕಕ್ಕೆ ತಿರುಗಿದಂತಿದೆ. ಅವಳು ಸನ್ಯಾಸಿನಿಯಾಗಲಿಲ್ಲ. ಶ್ರಾವಕಿಯಾಗಿದ್ದುಕೊಂಡೇ ಧರ್ಮಪಾಲನೆ - ಸಮಾಜ ಸೇವೆಗೆ ತೊಡಗಿದಳು. ಅವಳ ಆ ಅವಧಿಯ ಬದುಕನ್ನು ರನ್ನ ತುಂಬಾ ಭಕ್ತಿಭಾವದಿಂದ ಕಂಡರಿಸಿದ್ದಾನೆ. ಅವಳಲ್ಲಿ ''ತನು ವಿರೋಧ ಅತನು ವಿರೋಧ'' ಗಳೆರಡೂ ಬೆಳಗಿದವಂತೆ

''ಒಡಲುನು ಪವಾಸದಿಂ ತನ್ನೊಡಮೆಯನನವರತ ದಾನದಿಂತವಿಸಿ ಜಸಂ
ಬಡೆದಳ್ ನೂರ್ಮಡಿ ತೈಲನ ಪಡೆವಳ ತೈಲಪನ ಜನನಿಗೆಣೆ ಪೆರರೊಳರೇ''

(ಅಜಿತ ಪುರಾಣ ೧-೧೫)

ಎಂದು ರನ್ನ ಉದ್ಗಾರವೆತ್ತಿದ್ದಾನೆ. ಅತ್ತಿಮಬ್ಬೆ''ಜಗತ್ರಯ ವಂದಿತೆ'' ಚಕ್ರವರ್ತಿ ಪೂಜಿತೆ, ಎಂದು ಹೇಳಿರುವುದನ್ನು ನೋಡಿದರೆ ಚಾಲುಕ್ಯ ಸಾಮ್ರಾಜ್ಯದ ಚಕ್ರವರ್ತಿಯೂ ಅವಳ ಬಗ್ಗೆ ಭಯ-ಭಕ್ತಿಯನ್ನಿಟ್ಟುಕೊಂಡಿದ್ದುದು ತಿಳಿಯುತ್ತದೆ. ಅವಳು'ಕಲಿ' ಎಂಬಲ್ಲಿ ಧರ್ಮವೀರತೆಯನ್ನು 'ಕಸವರಗಲಿ' ಎಂಬಲ್ಲಿ ದಾನವೀರತೆಯನ್ನೂ ತಿಳಿಸಿದ್ದಾನೆ. ಅವಳ ಮುಂದೆ ಮೀಸೆ ಹೊತ್ತ ಅಣ್ಣಂಗಳು ಅರ್ಥ ಹೀನರೆಂದು ತನ್ನ ಅತ್ತಿಮಬ್ಬೆಯನ್ನು ಪ್ರಶಂಶಿಸಿದ್ದಾನೆ. ಅವಳು 'ಜಿನಧರ್ಮ ಪತಾಕೆ' ಎಂದೂ, 'ಧರ್ಮವಿರೋಧೀ ಜನಕೆ ಅಸಿಲತೆ'ಯೆಂದೂ ಧರ್ಮದಿಂದ ನಡೆಯುವವರಿಗೆ 'ಕಲ್ಪವಸಿತೆ'ಯೆಂದೂ ರನ್ನ ಹೇಳಿರುವಲ್ಲಿ ಅವಳ ಧರ್ಮವೀರತೆಯ ಸೂಚನೆಯಿದೆ. ಇಷ್ಟು ಹೊಗಳಿದ ಮೇಲೂ ರನ್ನನಿಗೆ ಸಮಾಧಾನವಿಲ್ಲ. ಅವಳನ್ನು ಕಿಚ್ಚು ಮುಟ್ಟಲಾರದು. ವಿಷಸರ್ಪ ಮುಟ್ಟಲಾರದು. ಅವಳಿದ್ದರೆ ಮಳೆ-ಬೆಳೆ ಸಮೃದ್ಧಿಯಾಗಿರುತ್ತದೆ. ಅವಳು 'ಭೂತಲ ಪವಿತ್ರೆ', 'ಗುಣಪವಿತ್ರೆ', 'ಸತಿ' 'ಮಹಾಸತಿ ತಿಳಕೆ' ಎಂದೆಲ್ಲಾ ಹೊಗಳಿ ಅವಳ ನಾಮ ಸ್ಮರಣೆಯಿಂದ ಪುಣ್ಯಬರುತ್ತದೆಯೆಂದು ಎದೆತುಂಬಿ ಹೇಳಿದ್ದಾನೆ. ಇಷ್ಟೇ ಅಲ್ಲ, ರನ್ನ ತನ್ನ ಮಗಳಿಗೆ ಅತ್ತಿಮಬ್ಬೆಯ ಹೆಸರನ್ನೇ ಇಟ್ಟು ಕೃತಾರ್ಥನಾಗಿದ್ದಾನೆ.

ಅತ್ತಿಮಬ್ಬೆಯ ಗುಣಶೀಲಗಳನ್ನು ಹೊಗಳುವ ರನ್ನನ ಇನ್ನೊಂದು ಪದ್ಯ ಅತ್ತಿಮಬ್ಬೆಯಂತೆಯೇ ನಿರ್ಮಲ ಗಂಭೀರವಾಗಿದೆ.

''ಬೆಳಿಯುರಳಿಯಂತೆ ಗಂಗಾ ಜಳದಂತೆಸವಜಿತಸೇನ ಮುನಿಪತಿಯ ಗುಣಾ
ವಳಿಯಂತೆ ನೆಗಳ್ದ ಕೊಪಣಾಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ''

ಅತ್ತಿಮಬ್ಬೆಗೆ ರನ್ನಕವಿ ಅರ್ಪಿಸಿದ ಭಾವ ಪುಷ್ಪವಾಗಿದೆ ಈ ಪದ್ಯ.

ಅತ್ತಿಮಬ್ಬೆಯ ಬದುಕಿನ ಕೆಲವು ಪವಾಡ ಸದೃಶ ಪ್ರಸಂಗಗಳನ್ನು ರನ್ನ - ಬ್ರಹ್ಮಶಿವರು ತಿಳಿಸಿದ್ದಾರೆ; ಹಾಗೂ ಲಕ್ಕುಂಡಿ ಶಾಸನವೂ ತಿಳಿಸುತ್ತದೆ. ತಲೆಯ ಮೇಲೆ ಜಿನಮೂರ್ತಿಯನ್ನಿಟ್ಟು

ಕೊಂಡು ಅತ್ತಿಮಬ್ಬೆ ಗೋದಾವರಿ ನದಿಯನ್ನು ದಾಟಹೋದಾಗ ನದಿಯು ಅವಳಿಗೆ ಎಡೆಮಾಡಿ ಕೊಟ್ಟ ಪ್ರಸಂಗ, ಅತ್ತಿಮಬ್ಬೆ ಆರಾಧಿಸುತ್ತಿದ್ದ ಜಿನಪ್ರತಿಮೆ ಒಮ್ಮೆ ಕೈಜಾರಿ ಬಿದ್ದಾಗ ಅದು ದೊರೆಯದೇ ತಾನು ಊಟ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿ ಎಂಟು ದಿನ ಕಳೆದನಂತರ ಆ ಪ್ರತಿಮೆ ಸಿಕ್ಕ ಮೇಲೆ ಊಟ ಮಾಡಿದ ಪ್ರಸಂಗ, ಹೊತ್ತಿ ಉರಿಯುವ ಉರಿಯನ್ನು ಜಿನ ಗಂಧೋದಕದಿಂದ ಆರಿಸಿದ ಪ್ರಸಂಗ, ಶ್ರವಣಬೆಳ್ಗೊಳದ ಗೊಮ್ಮಟ ದರ್ಶನಕ್ಕೆ ಹೋದಾಗ ಅತ್ತಿಮಬ್ಬೆಯ ಮೇಲೆ ಅಕಾಲ ವೃಷ್ಟಿಯಾದ ಪ್ರಸಂಗ... ಹೀಗೆ ಆ ಪಟ್ಟಿ ಸಾಗುತ್ತದೆ. ಇವುಗಳಲ್ಲಿಯ ಕೆಲವು ಪ್ರಸಂಗಗಳು ಅತಿಶಯೋಕ್ತಿಯಿಂದ ಅಥವಾ ಅತ್ತಿಮಬ್ಬೆಯ ವ್ಯಕ್ತಿತ್ವವನ್ನು ಕುರಿತಾದ ಭಕ್ತಿಭಾವಾವೇಶಗಳಿಂದ ಕೂಡಿದ ಹಾಗೆ ಕಂಡರೂ ಅವಳ ವ್ಯಕ್ತಿತ್ವವು ಅನನ್ಯವಾಗಿತ್ತೆಂಬ ಸತ್ಯವನ್ನು ಯಾರೂ ಅಲ್ಲಗಳೆಯಲಿಕ್ಕಾಗದು.

ಇಂಥದ್ದೇ ಚಾರಿತ್ರಿಕ ಪ್ರಸಂಗವೊಂದು ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ದಾಖಲಾಗಿದ್ದು ಅದು ನಿಜವಾಗಿ ನಡೆದ ಒಂದು ಪ್ರಸಂಗವೇ ಆಗಿರಬೇಕು. ಬ್ರಹ್ಮಶಿವ ಅತ್ತಿಮಬ್ಬೆಯನ್ನು 'ಘಟಾಂತಿಕೆ' ಎಂದು ಕರೆದಿದ್ದಾನೆ. ಈ ವಿಚಾರ ಪೊನ್ನ, ರನ್ನರಲ್ಲಿ ಇದ್ದಂತಿಲ್ಲ. ಬೌದ್ಧ ದೇವತೆಯಾದ ತಾರಾದೇವಿಯನ್ನು ಅತ್ತಿಮಬ್ಬೆಯು ವಾಗ್ಯುದ್ಧದಲ್ಲಿ ಸೋಲಿಸಿದ ಹಾಗೂ ಕಟ್ಟಿದ ಪಣದ ಪ್ರಕಾರ ಅವಳ ಸಾವಿಗೆ ಕಾರಣವಾದ ಪ್ರಸಂಗವನ್ನು ಬ್ರಹ್ಮಶಿವ 'ಘಟಾಂತಿಕೆ' ಎಂಬ ವಿಶೇಷಣದಲ್ಲಿ ಸೂಚಿಸಿದ್ದಾನೆ. 'ಧರ್ಮವಿರೋಧಿಗಳಿಗೆ ಅಸಿಲತೆ' ಎಂದು ರನ್ನ ಹೇಳಿರುವುದೂ ಅವಳು 'ಜೈನ ಶಾಸನ ರಕ್ಷಾಮಣಿ' ಎಂದು ಬ್ರಹ್ಮಶಿವ ಹೇಳಿರುವುದೂ ಮೇಲಿನ ವಿಚಾರವನ್ನು ಎತ್ತಿ ಹಿಡಿಯುವಂತಿದೆ. ಒಟ್ಟಾರೆ ಇವೆಲ್ಲಾ ಪ್ರಸಂಗಗಳು ಅತ್ತಿಮಬ್ಬೆಯ ಧರ್ಮ ರಕ್ಷಣೆಯ ಹಾಗೂ ಧರ್ಮವೀರತೆಯ ಮೌಲ್ಯಗಳನ್ನು ಪ್ರತಿಪಾದಿಸುತ್ತವೆ.

ಇದುವರೆಗೆ ನೋಡಿದ ಬಹುಮುಖ್ಯ ಪ್ರಸಂಗಗಳಲ್ಲಿ ಅತ್ತಿಮಬ್ಬೆಗೆ ಚಾಲುಕ್ಯ ದೊರೆಗಳ ಸಮ್ಮತಿಯಿತ್ತು; ಇನ್ನೂ ಕೆಲವು - ಅವರ ಸಮ್ಮುಖದಲ್ಲಿಯೇ ನಡೆದಿರುವಂತಹವು. ಹೀಗೆ ಅತ್ತಿಮಬ್ಬೆಯು ಚಾಲುಕ್ಯ ಸಾಮ್ರಾಜ್ಯದ ಜೊತೆಗೆ ಸಂಬಂಧವನ್ನಿಟ್ಟುಕೊಂಡವಳಾಗಿದ್ದಾಳೆ. ಇನ್ನೂ ಕೆಲವೊಮ್ಮೆ ಅದನ್ನು ಪ್ರತಿನಿಧಿಸಿದವಳಾಗಿದ್ದಾಳೆ.

ಅತ್ತಿಮಬ್ಬೆ-ಚಾಲುಕ್ಯ ಮನೆತನಗಳ ಸಂಬಂಧಗಳು ಸಾಧನೆಗಳು ಇಷ್ಟಕ್ಕೇ ಮುಗಿಯಲಿಲ್ಲ. ಅವಳು ತನ್ನ ಮಗ ಅಣ್ಣಿಗದೇವನನ್ನು ಚಾಲುಕ್ಯ ಚಕ್ರವರ್ತಿಯ ಸೈನ್ಯಕ್ಕೆ ಸೇನಾನಾಯಕನನ್ನಾಗಿ ನಿಲ್ಲಿಸಿದ್ದಾಳೆ. ತನ್ನ ತಂದೆ, ಅಜ್ಜರ ಸ್ಥಾನವನ್ನು ಅಣ್ಣಿಗದೇವ ತುಂಬಾ ಸಮರ್ಥ ರೀತಿಯಿಂದ ತುಂಬಿಕೊಟ್ಟ. ಅವರಂತೆ ಇವನೂ ರಣರಂಗ ಶೂರ. ಚಾಲುಕ್ಯನಿಷ್ಠ. ಅಂತೆಯೇ 'ಪಡೆವಳ ತೈಲ' ' 'ವಿನಯಾಲಂಕಾರ' 'ನನ್ನಿ ನಾರಾಯಣ' ಎಂಬ ಬಿರುದುಗಳಿಗೆ ಪಾತ್ರನಾದ. ರನ್ನನ ಅಜಿತಪುರಾಣವು ಅಣ್ಣಿಗದೇವನು ಚಾಲುಕ್ಯ ಅಹವಮಲ್ಲ ತೈಲಪನ ಪ್ರೀತಿಪಾತ್ರನಾದ ಬಗ್ಗೆ ತಿಳಿಸುತ್ತದೆ. ಆದರೆ ಅವನ ಶೌರ್ಯ ಸಾಹಸಗಳ ಹೆಚ್ಚಿನ ವಿವರ ಎಲ್ಲಿಯೂ ಸಿಗುವುದಿಲ್ಲ. ಈತ ಯಾಪನೀಯ ಸಂಘದ ಕಾಣೂರ್ಗಣದ ನೇಮಿಚಂದ್ರ ಮುನಿಗಳ ಶಿಷ್ಯ ಅಯ್ಯಣಯ್ಯನ ಶಿಷ್ಯನಾಗಿದ್ದ. ರನ್ನ ತನ್ನ ಕಾವ್ಯವನ್ನು 'ಚಕ್ರೇಶ್ವರಂ ಮಂಡಳೇಶ್ವರಂ ಬೆಸಸೆ' ಬರೆದುದಾಗಿಯೂ ಅದನ್ನು 'ಗುಣೋನ್ನತಿ' ಅತ್ತಿಮಬ್ಬೆ ಪೇಳಿಸಿದುದಾಗಿಯೂ ತಿಳಿಸಿರುವುದನ್ನು ನೋಡಿದರೆ ಅಣ್ಣಿಗದೇವನೇ ರನ್ನ ತಿಳಿಸಿರುವ ಮಂಡಳೇಶ್ವರನಾಗಿರಬೇಕೆಂದು ಭಾಸವಾಗುತ್ತದೆ.

ಲಕ್ಕುಂಡಿ ಶಾಸನದಿಂದ ಅತ್ತಿಮಬ್ಬೆಯ ಬಗ್ಗೆ ನಮಗೆ ಕೆಲವು ಹೆಚ್ಚಿನ ಅಂಶಗಳು ತಿಳಿದು ಬರುತ್ತವೆ. ಅವಳು ನಾಡಿನಲ್ಲಿ ಸಾವಿರದ ಐನೂರು ಜಿನಮಂದಿರಗಳನ್ನು ಕಟ್ಟಿಸಿದ್ದಳು. ಮಣಿ ಖಚಿತವಾದ 1,500 ಜಿನ ಪ್ರತಿಮೆಗಳನ್ನು ದಾನಮಾಡಿದ್ದಳು. ಅವೆಲ್ಲವುಗಳನ್ನು ಮೀರಿಸುವಂತಹ ಜಿನಾಲಯವನ್ನು ಲಕ್ಕುಂಡಿಯಲ್ಲಿ ನಿರ್ಮಿಸಿದಳು.'' ಅತ್ತಿಮಬ್ಬೆಯರಸಿಯರ್ ಸಕಳ ಗೂರ್ಜರ ವಿಜಯಾನನ್ತರಂ ಶ್ರೀಮದಾಹವಮಲ್ಲದೇವಂಗೆ ಬಿನ್ನಪಂಗೆಯ್ದು ಚಕ್ರವರ್ತಿದತ್ತಿ ಪ್ರಖ್ಯಾತಮಪ್ಪ ಶಾಸನಮುಂ ಪೊನ್ನ ಕಳಸಂಬೆರಸು ಪಡೆದು ಸಕವರ್ಷ ೯೨೯ನೆಯ ಪ್ಲವಂಗ ಸಂವತ್ಸರದ ಫಾಲ್ಗುಣ ಮಾಸದ ನಂದೀಶ್ವರದಷ್ಟಮಿಯ ಬೃಹಸ್ಪತಿವಾರದಂದು ಶುಭ ಲಗ್ನೋದಯದೊಳ್ ಮಹಾಧ್ವಜ ಮಹಾಭಿಷೇಕ ಮಹಾದಾನ ಧರಣಾನನ್ತರಂ ತಮ್ಮ ಗುರುಗಳು ಸೂರಸ್ತಗಣದ ಕೌರೂರ್ಗಚ್ಛದ ಅರ್ಹನಂದಿ ಪಂಡಿತ ದೇವರ್ಗೆ ಶ್ರೀ ಲೊಕ್ಕಿ ಗುಂಡಿಯೊಳ್ ಬಸದಿಯಂ ಮಾಡಿಸಿಯದಕ್ಕೆ ತಳವೃತ್ತಿಯೆಂದು'' 'ಸುರಕಿ' ಎಂಬ ಗ್ರಾಮವನ್ನು ಬಿಟ್ಟ ಬಗ್ಗೆ ಲಕ್ಕುಂಡಿಯ ಶಾಸನವು ತಿಳಿಸುತ್ತದೆ. ಇದರ ಕಾಲ ಕ್ರಿ.ಶ ೧೦೦೭. ಆಗ ನಾಡನ್ನು ಆಳುತ್ತಿದ್ದವರು ಆಹವಮಲ್ಲ ನೂರ್ಮಡಿ ತೈಲಪನ ಮಗನಾದ ಇರಿವ ಬೆಡಂಗ ಸತ್ಯಾಶ್ರಯ. ರನ್ನ ತನ್ನ ಗದಾಯುದ್ಧ ಕೃತಿಯನ್ನು ಬರೆದದ್ದು ಅವನ ಆಶ್ರಯದಲ್ಲಿ.

ಅತ್ತಿಮಬ್ಬೆಯು ಚಾಲುಕ್ಯ ಚಕ್ರವರ್ತಿ ಸಾಕ್ಷಿಯಾಗಿ ಸಂಪ್ರದಾಯಬದ್ಧವಾಗಿ ಸಕಲ ರಾಜಮರ್ಯಾದೆಗಳಿಗನುಸಾರವಾಗಿ ಲಕ್ಕುಂಡಿಯಲ್ಲಿ ಜಿನಮಂದಿರವನ್ನು ಕಟ್ಟಿಸಿದ್ದು ಒಂದು ಮಹಾ ಪ್ರಸಂಗವೇ ಆಗಿರಬೇಕು. ಅದು ಆ ಮೊದಲೇ ಕಟ್ಟಿಸಿದ ಸಾಸಿರದೈನೂರು ಬಸದಿಗೆ ಕಳಸಪ್ರಾಯವಾಗಿತ್ತಂತೆ. ಲಕ್ಕುಂಡಿಯ ಶಾಸನವು ಆ ಜಿನಾಲಯದ ಬಗ್ಗೆ ಇನ್ನಷ್ಟು ವಿವರಗಳನ್ನು ನೀಡುತ್ತಿದ್ದು ಅದು ಅಜಿತಪುರಾಣದಲ್ಲಿಯ ಅತ್ತಿಮಬ್ಬೆಯ ವಿಚಾರಗಳ ಮುಂದುವರಿಕೆಯಾಗಿದೆಯೆಂದು ಡಾ. ಹಂಪನಾ ಅಭಿಪ್ರಾಯಪಟ್ಟಿದ್ದಾರೆ. 'ಲೊಕ್ಕಿಗುಣ್ಡಿಯೂರೊಡೆಯ ಪ್ರಮುಖ ಮಹಾಜನ ಸಾಸಿರ್ವರು ತಮ್ಮೂರಿನಲ್ಲಿ ಅತ್ತಿಮಬ್ಬೆ ಕಟ್ಟಿಸಿದ ಜಿನಾಲಯದಿಂದ ಸಂತುಷ್ಟರಾಗಿ ಅದಕ್ಕೆ 'ಬ್ರಹ್ಮ ಜಿನಾಲಯ'ವೆಂದು ಹಾಗೂ ಆ ಊರಿನ ಗ್ರಾಮಸ್ಥರು ಗ್ರಾಮಾಧಿಪನು ಮೂರು ಪರ್ವಗಳಲ್ಲಿ ತಮ್ಮ ಪರಿವಾರದೊಡನೆ ಅಲ್ಲಿ ಬಂದು ಪೂಜಿಸಿ ಹೋಗುತ್ತಿದ್ದ ಬಗ್ಗೆ ಆ ಶಾಸನ ತಿಳಿಸುತ್ತದೆ.

ಲಕ್ಕುಂಡಿಯ ಶಾಸನದ ಪಾಠವನ್ನಾಧರಿಸಿ ಡಾ. ಹಂಪನಾ ಅವರು ಅತ್ತಿಮಬ್ಬೆಯು ಲಕ್ಕುಂಡಿಯಲ್ಲಿ ಕಟ್ಟಿಸಿದ ಜಿನಾಲಯವು ಆದಿತೀರ್ಥಂಕರ ವೃಷಭನದೆಂದು ಸ್ಪಷ್ಟವಾಗಿ ಸಾಧಿಸಿದ್ದಾರೆ. 'ಬ್ರಹ್ಮನೆ ದಲ್ ನಮಗೆ - ಆದಿಬ್ರಹ್ಮಜಿನಂ ತಾನ್- ಬ್ರಹ್ಮಜಿನಾಳಯಮೆನಿಪ್ಪ ಪೆಸರಂ ಮುದದಿಂ' ಎಂಬ ಪಾಠ ಅವರಿಗೆ ಒಂದು ಆಧಾರವಾದರೆ, ಜಿನಸೇನಾಚಾರ್ಯರು ಆದಿಪುರಾಣದಲ್ಲಿ ಆದಿತೀರ್ಥಂಕರ ವೃಷಭನನ್ನು ''ಆದಿಬ್ರಹ್ಮಜಿನ' ಎಂದು ಕರೆದಿರುವುದು ಇನ್ನೊಂದು ಆಧಾರ. ಹೀಗೆ ಜಿನಸೇನರ ಕಾಲದಲ್ಲಿಯೇ ಉಂಟಾಗಿದ್ದ ಜೈನ-ವೈದಿಕ ಸಮನ್ವಯದ ಈ ಪ್ರಕ್ರಿಯೆ ಬಹುಶಃ ಅತ್ತಿಮಬ್ಬೆಯ ಕಾಲಕ್ಕೆಮತ್ತೊಮ್ಮೆ ಸಾಕಾರಗೊಂಡಂತಿದೆ. ಇಂದು ಲಕ್ಕುಂಡಿಯಲ್ಲಿ ಸುಸ್ಥಿತಿಯಲ್ಲಿರುವ ಬ್ರಹ್ಮಜಿನಾಲಯವೆಂಬ ಬಸದಿಯ ಜೊತೆಗೆ ಈಗ ನಾಶವಾಗಿರುವ ಬಲ್ಲೆಯ ಜೇಮಯ್ಯನ ಬಸದಿ ಹಾಗೂ ವಸುಧೈಕ ಬಾಂಧವ ಜಿನಾಲಯ ಬಸದಿ ಮೊದಲಾದ ಇತರ ಜಿನಾಲಯಗಳಿದ್ದವೆಂಬ ಅಂಶವನ್ನು ಹಂಪನಾ ಅವರು ಹೊರಹಾಕಿದ್ದು ಅವುಗಳ ಬಗ್ಗೆಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ.

ಲಕ್ಕುಂಡಿಯ ಶಾಸನವನ್ನುಸೂಕ್ಷ್ಮವಾಗಿ ವಿಶ್ಲೇಷಿಸಿ ನೋಡಿದ ಡಾ. ಹಂಪನಾ ಅವರು, ಅತ್ತಿಮಬ್ಬೆ ಹಾಗೂ ಅವಳ ಮನೆತನಕ್ಕೆ ಸಂಬಂಧಿಸಿದ ಹಲವಾರು ಹೊಸ ವಿಷಯಗಳನ್ನು ಆ ಶಾಸನವು ಒಳಗೊಂಡಿರುವುದನ್ನು ಮೊದಲ ಬಾರಿಗೆ ತೆರೆದು ತೋರಿಸಿದ್ದು ಅವುಗಳಲ್ಲಿ ಮಹತ್ವದ ಅಂಶಗಳನ್ನಿಲ್ಲಿ ಪಟ್ಟಿಮಾಡಿಕೊಡಲಾಗಿದೆ.

1. ಎಸ್‌ಐಐ IX-೧-೫೩ ಮತ್ತು 52 ಇವೆರಡೂ ಶಾಸನಗಳು ಕ್ರಮವಾಗಿ ಹಳೆಯ, ಹೊಸ ಶಾಸನಗಳಾಗಿದ್ದು, ಹಳೆಯದರ ಪ್ರತಿ ಮಾಡುವ ಸಂದರ್ಭದಲ್ಲಿ ನಡೆದ ಸಂಕ್ಷಿಪ್ತ ವಿಸ್ತಾರ ಮೊದಲಾದವುಗಳನ್ನು ಡಾ. ಹಂಪನಾ ಪಾಠಸಮೇತವಾಗಿ ತಿಳಿಸಿದ್ದಾರೆ.

2. ಹಾಗೆ ನಡೆದ ಸೇರ್ಪಡೆಯಲ್ಲಿ ಅತ್ತಿಮಬ್ಬೆಯ ನಿಧನದ ನಂತರ ನಡೆದಿರುವ ಘಟನೆಗಳು ದಾಖಲಾಗಿವೆಯೆಂದು ಡಾ. ಹಂಪನಾ ತಿಳಿಸಿದ್ದಾರೆ. 52ನೆಯ (ಹೊಸ) ಶಾಸನದ 62ನೆಯ ಸಾಲಿನಿಂದ 88ನೆಯ ಸಾಲುಗಳವರೆಗೆ ಈ ಘಟನೆಗಳು ಸೇರಿಕೊಂಡಿದ್ದು ಅದು ಪೂರ್ತಿ ನೂತನ ರಚನೆ, ಮರು ಸೇರ್ಪಡೆಯೆಂಬುದಾಗಿ ಅವರು ಅಭಿಪ್ರಾಯಪಟ್ಟಿದ್ದಾರೆ.

3. ಅತ್ತಿಮಬ್ಬೆಯ ಗಂಡನ ಮನೆಯವರು ಲಕ್ಕುಂಡಿ ಮೂಲದವರಾಗಿರಬಹುದು. ''ತತ್-ಪುರವರ-ಅಚಳಶೇಖರಂ-ಎಂಬಿನಂ ದಿಶಾದಂತಿಯದಂತ ನಿಜಸೌಧ...'' ಎಂದು ಶಾಸನಕಾರ ತಿಳಿಸಿರುವ ಸೌಧವು ಲಕ್ಕುಂಡಿಯಲ್ಲಿದ್ದ ಅತ್ತಿಮಬ್ಬೆಯ ಮನೆಯೇ.

4. ಲಕ್ಕುಂಡಿಯಲ್ಲಿ ಅತ್ತಿಮಬ್ಬೆ ಕಟ್ಟಿಸಿದ ಆದಿಬ್ರಹ್ಮ ಜಿನಾಲಯವು ಆದಿ ತೀರ್ಥಂಕರ ವೃಷಭನದು. ಅದು ಅತ್ತಿಮಬ್ಬೆಯ ಮನೆದೇವರು, ಮನೆತನದ ಬಸದಿ ಆಗಿತ್ತು. ಆಕೆಯ ಮಗನೂ ಆ ದೇವಾಲಯದ ಸಮುಚ್ಚಯದ ವ್ಯಾಪ್ತಿಯೊಳಗೇ ಇದ್ದಿರಬೇಕು.

5. ಅತ್ತಿಮಬ್ಬೆ ಕಟ್ಟಿಸಿದ ಬಸದಿ ಕುಸಿದು ಬಿದ್ದಾಗ ಅದನ್ನು ದೆಯ್ವಭರತಾರ್ಯನು ಹೊಸದಾಗಿ ಮಾಡಿಸಿದನು. ಪುನಃ ಅದು ಸುಟ್ಟು ಹೋಗಲು ಆಗ ನಾಕಿ ಎಂಬಾತನು ಸುಂದರವಾಗಿಸಿದನು. ನಾಕಿಯು ಪ್ರಾರಂಭಿಸಿದ ಜೀರ್ಣೋದ್ಧಾರದ ಕೆಲಸ ಪರಮೋಪಕಾರಿಯಾದ ಸಿರಿಪಾಳಶೆಟ್ಟಿಯಿಂದ ಪೂರ್ಣವಾಯಿತು. ಸಮ್ಯಕ್ತ್ವರತ್ನಾಕರ ಸಿರಿಪಾಳ ಶೆಟ್ಟಿಯ ಮಗನಾದ ಬಾಹುಬಲಿಕವಿಯು ಇದನ್ನು ಸವಿಸ್ತಾರವಾಗಿ ಬರೆದನು.

6. ಅತ್ತಿಮಬ್ಬೆ ಹುಟ್ಟಿದ್ದು ಪುಂಗನೂರಿನಲ್ಲಿ. ಅನಂತರ ಮಳಖೇಡ, ಪೊಟ್ಟಲಕೆರೆಗಳಲ್ಲಿ ಹಾಗೂ ವೈಧವ್ಯದ ಅವಧಿಯನ್ನು ಲಕ್ಕುಂಡಿಯಲ್ಲಿ ಕಳೆದಳು.

7. ಅತ್ತಿಮಬ್ಬೆಯ ಮಗ ಪಡೆವಳ ತೈಲ ಅಣ್ಣಿಗದೇವನು ಚಾಳುಕ್ಯ ಚಕ್ರವರ್ತಿಗಳ ಬೀಳವೃತ್ತಿಯಿಂದ ಆಳುತ್ತಿದ್ದ, ಮಾಸವಾಡಿ 140 ಕಂಪಣದ ಮುಖ್ಯ ಪಟ್ಟಣವು ಲಕ್ಕುಂಡಿಯೇ.

ಡಾ. ಹಂಪನಾ ಅವರ ಈ ವಿಚಾರಗಳು ಅತ್ತಿಮಬ್ಬೆಯ ಮತ್ತು ಚಾಲುಕ್ಯ ಸಾಮ್ರಾಜ್ಯಗಳ ಚರಿತ್ರೆಯ ಮೇಲೆ ಹೊಸ ಬೆಳಕು ಬೀರುತ್ತಿದುದ ಸಂಪೂರ್ಣ ಸಮರ್ಥನೆಯೊಂದಿಗೆ ಹಾಗೂ ಕೃತಜ್ಞತೆಯೊಂದಿಗೆ ಈ ಅಂಶಗಳನ್ನು ನಾನಿಲ್ಲಿಬಳಸಿಕೊಳ್ಳುತ್ತಿದ್ದೇನೆ.

ಹೀಗೆ ಅತ್ತಿಮಬ್ಬೆ ಮತ್ತು ಚಾಲುಕ್ಯ ಮನೆತನಗಳು ಕರ್ನಾಟಕ ಸಂಸ್ಕೃತಿಯ ಎರಡು ಮಹತ್ವದ ಆಧಾರ ಸ್ತಂಭಗಳಂತಿದ್ದು ಇವರಿಬ್ಬರ ನಡುವೆ ನಿರಂತರವಾಗಿ ಮೂರು ತಲೆಮಾರುಗಳ ಸಂಬಂಧವಿದ್ದುದು ಮೇಲಿನ ವಿವರಣೆಗಳಿಂದ ತಿಳಿದು ಬರುತ್ತದೆ. ಇವರಿಬ್ಬರ ಸುತ್ತಮುತ್ತನ್ನು ಒಂದಿಷ್ಟು ಗಮನಿಸಿ ಹೇಳುವುದಾದರೆ ಚಾಲುಕ್ಯ ಸಾಮ್ರಾಜ್ಯ, ಪೊನ್ನ, ರನ್ನ, ಅತ್ತಿಮಬ್ಬೆ, ಚಾವುಂಡರಾಯ ಇವರೆಲ್ಲರ ಸಮಾಗಮ ಕನ್ನಡ ನಾಡಿನ ಪುಣ್ಯವೆನ್ನಬೇಕಾಗುತ್ತದೆ. ಇವರೆಲ್ಲರ ಕೇಂದ್ರ ವ್ಯಕ್ತಿ ಅತ್ತಿಮಬ್ಬೆ. ಒಂದೆಡೆ ತಂದೆಯ ಮನೆಯ ಕಡೆಯ ಸಂಬಂಧ, ಮತ್ತೊಂದೆಡೆ ಪತಿಯ ಮನೆಯ ಕಡೆಯ ಸಂಬಂಧ, ಇನ್ನೊಂದೆಡೆ ನೇರವಾಗಿ ತನ್ನದೇ ಆದ ಸಂಬಂಧ - ಮಗದೊಂದೆಡೆ ಮಗನ ಮೂಲಕ ಏರ್ಪಟ್ಟ ಸಂಬಂಧಗಳಿಂದಾಗಿ ಅತ್ತಿಮಬ್ಬೆ ಆ ಯುಗದ ಚಾಲುಕ್ಯ ಸಾಮ್ರಾಜ್ಯದ ಕೇಂದ್ರವ್ಯಕ್ತಿಯಾಗಿ ಕಾಣುತ್ತಾಳೆ. ಅಂತೆಯೇ ರನ್ನನು ಹೇಳಿದ 'ದಾನಿಗಳೊಳಗ್ಗಳದ ದಾನಚಿಂತಾಮಣಿ ಚಕ್ರಿಗಳೊಳಗಾಹವಮಲ್ಲಂ ಮಿಗಿಲೆನಿಕುಂ ವಿಷಯದೊಳಗೆ ವೆಂಗಿ ವಿಷಯಂ' ಎಂಬ ಮಾತು ವಸ್ತುಸ್ಥಿತಿಯನ್ನೇ ತಿಳಿಸುವಂತಿದೆ. ಇದನ್ನು ಇನ್ನೂ ಒಂದು ರೀತಿಯಲ್ಲಿ ಸಾಧಿಸಬಹುದು. ಯಾವುದೇ ಸಾಮ್ರಾಜ್ಯವಿರಲಿ - ಅದು ದೊರೆ, ಮಂತ್ರಿ ಸೇನಾಪತಿ, ಭಂಡಾರಿ, ರಾಜಗುರು, ಧರ್ಮಗುರು, ಕವಿ, ಪಂಡಿತ, ಇತರ ಅಧಿಕಾರಿಗಳು, ಪ್ರಜೆಗಳು, ಭಟರು ಎಂಬೆಲ್ಲಾ ಬಿಡಿ ಬಿಡಿ ವ್ಯಕ್ತಿಗಳ ಒಂದು ಸಂಘಟಿತ ರೂಪವೇ ಆಗಿರುತ್ತದೆ. ಇವೆಲ್ಲಾ ಘಟಕಗಳ ಸೂತ್ರೀಕೃತ ಸಮಾವೇಶವೇ ಒಂದು ಸಾಮ್ರಾಜ್ಯವಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಪೊನ್ನ, ರನ್ನ, ನಾಗದೇವ, ಮಲ್ಲಪಯ್ಯ, ಪುನ್ನಮಯ್ಯ, ದಲ್ಲಪ, ನಾಗಮಯ್ಯ, ಅತ್ತಿಮಬ್ಬೆ, ಅಣ್ಣಿಗದೇವ ಇವರೆಲ್ಲಾ ಒಂದೊಂದು ಬೇರೆ ಬೇರೆ ನೆಲೆಯಿಂದ ನಾಡಿಗೆ ಸಲ್ಲಿಸಿದ ಸೇವೆಯನ್ನೇ ನಾವು ವಿಶಾಲಾರ್ಥದಲ್ಲಿ ಚಾಲುಕ್ಯ ಸಾಮ್ರಾಜ್ಯದ ಸೇವೆಯೆಂದು ಕರೆಯುತ್ತೇವೆ. ಒಂದು ಸಾಮ್ರಾಜ್ಯದ ಚರಿತ್ರೆಯನ್ನು ಅದರ ಆಳ್ವಿಕೆಯ ಕಾಲದ ( ಅವಧಿಯ ) ಆಧಾರದಿಂದ ಅಳೆಯುವುದು ಅಷ್ಟು ಉಚಿತವೆನಿಸುವುದಿಲ್ಲ. ಅದರ ಸಾಧನೆಗಳ ಆಧಾರದಿಂದ ರೂಪಿಸಬೇಕೆಂಬ ವಿಚಾರವನ್ನು ಬಹುಶಃ ಎಲ್ಲರೂ ಒಪ್ಪುತ್ತಾರೆ. ಆ ದೃಷ್ಟಿಯಿಂದ ಚಾಲುಕ್ಯ ಸಾಮ್ರಾಜ್ಯದ ಸಾಧನೆಗಳನ್ನು ನೋಡಿದಾಗ ಅವು ನಿಜಕ್ಕೂ ಅರ್ಥಪೂರ್ಣವೆನಿಸುತ್ತವೆ. ಆ ಅರ್ಥಪೂರ್ಣತೆಗೆ ಬಹುಮಟ್ಟಿಗೆ ಕಾರಣಳಾದವಳು ದಾನಚಿಂತಾಮಣಿ ಅತ್ತಿಮಬ್ಬೆ. ಅವಳಿಗೂ ಚಾಲುಕ್ಯ ಸಾಮ್ರಾಜ್ಯಕ್ಕೂ ಕನ್ನಡಿಗರೆಲ್ಲಾ ಋಣಿಗಳಾಗಿರಬೇಕು.

ರಾಷ್ಟ್ರಕೂಟರಾಗಲೀ, ಚಾಲುಕ್ಯರಾಗಲೀ ಇವರು ಜೈನರಲ್ಲ. ಶೂದ್ರ ಸಂತತಿಯಿಂದ ಬಂದವರು. ಬಹುಶಃ ಈ ಕಾರಣಕ್ಕಾಗಿ ಅವರು ಮಡಿವಂತಿಕೆಯ ಬ್ರಾಹ್ಮಣವರ್ಗದವರನ್ನು ದೂರ ಸರಿಸಿ ವೈದಿಕೇತರರಾದ ಜೈನ ಹಾಗೂ ಇತರರನ್ನು ತಮ್ಮ ಸಮೀಪವರ್ತಿಗಳನ್ನಾಗಿ ಮಾಡಿಕೊಂಡಿರಬೇಕು. ಅಂತೆಯೇ ಅನೇಕ ಜನ ಜೈನ ಮಂತ್ರಿಗಳು, ಸೇನಾನಿಗಳು, ಕವಿಗಳು, ಪಂಡಿತರು ಚಾಲುಕ್ಯ ಪರಿಸರದಲ್ಲಿ ವಿಶಿಷ್ಟಸ್ಥಾನ ಪಡೆದರು. ಇದರಿಂದಾಗಿ ೧೦ನೇ ಶತಮಾನದಲ್ಲಿ ಜೈನಧರ್ಮಕ್ಕೆಹಾಗೂ ಕನ್ನಡ ಭಾಷೆಗೆ ಹಿಂದಿಗಿಂತ ಹೆಚ್ಚಿನ ರಾಜಾಶ್ರಯ ಮತ್ತು ರಾಜಮನ್ನಣೆ ದೊರೆಯುವಂತಾಯಿತು.

ಅತ್ತಿಮಬ್ಬೆ ಮತ್ತು ಚಾಲುಕ್ಯ ಸಾಮ್ರಾಜ್ಯ
ಸಂಪರ್ಕವೃಕ್ಷ



# ಬಂಟರು ಜೈನರಾದುದು

---

ಡಾ। ಸಂಜೀವ ಶೆಟ್ಟಿ

ಭಾರತವು ಅನೇಕ ಧರ್ಮಗಳಿಗೆ ತವರು; ಅನೇಕ ಧರ್ಮಗಳಿಗೆ ಆಶ್ರಯನೀಡಿದ ದೇಶ; ಎಲ್ಲಾ ಧರ್ಮಗಳನ್ನು ತನ್ನಲ್ಲಿಟ್ಟುಕೊಂಡು ಸಾಮರಸ್ಯದ ಬದುಕನ್ನು ಬಾಳುವ ಆದರ್ಶವನ್ನು ಜಗತ್ತಿಗೆ ತೋರಿದ ರಾಷ್ಟ್ರ ಭಾರತ. ಬೃಹತ್ ಭಾರತದ ರಾಜ್ಯಗಳಲ್ಲೊಂದಾದ ಕರ್ನಾಟಕದಲ್ಲಿಯೂ ವಿವಿಧ ಧರ್ಮಗಳ ಪ್ರಚಾರ ಪ್ರಭಾವ ಆಚಾರ ವಿಚಾರಗಳ ಜನರನ್ನು ಕಾಣುತ್ತೇವೆ. ಅಂತೆಯೇ ಕರ್ನಾಟಕದ ಜಿಲ್ಲೆಗಳಲ್ಲೊಂದಾದ ದಕ್ಷಿಣ ಕನ್ನಡದಲ್ಲಿ ಅರ್ಥಾತ್ ತುಳುನಾಡಿನಲ್ಲಿಯೂ ವಿವಿಧ ಧರ್ಮೀಯರೂ ಮಣ್ಣಿನಮಕ್ಕಳಾಗಿ ಬಾಳುತ್ತಿರುವುದು ಸಂತೋಷದಾಯಕವಾಗಿರುತ್ತದೆ.

ಭಾರತದಲ್ಲಿ ನೂರಾರು ಜಾತಿ ಪಂಗಡಗಳಿವೆ; ಅವುಗಳೆಲ್ಲವು ಸೌಹಾರ್ದತೆಯ ಬಾಳುವೆಯನ್ನು ನಡೆಸಿಕೊಂಡು ದೇಶದೇಕತೆಯನ್ನು ಬಲಿಷ್ಠತೆಯನ್ನು ಕಾಪಾಡಿಕೊಂಡು ಹೋಗುತ್ತಿರುವುದು ಅತ್ಯಂತ ಅಭಿಮಾನದ ಸಂಗತಿಯಾಗಿರುತ್ತದೆ. ಅಂತಹ ಜಾತಿ ಪಂಗಡಗಳಲ್ಲಿ ದಕ್ಷಿಣಕನ್ನಡದಲ್ಲಿಯ ಬಂಟರ ಸಮುದಾಯ, ಅಲ್ಲಿಯ ಸಾಮಾಜಿಕ ಘಟಕಗಳಲ್ಲಿ ಪ್ರಬಲವೂ ಪ್ರಧಾನವೂ ಆಗಿರುತ್ತದೆಂಬುದಕ್ಕೆ ಇತಿಹಾಸವೇ ಸಾಕ್ಷಿಯಾಗಿರುತ್ತದೆ.

ಈ ನಾಡಿನ ಬಂಟರ ಮತ್ತು ಜೈನರ ಸಂಬಂಧದ ಬಗ್ಗೆ ಅನೇಕ ವಿಚಾರಗಳು ಪ್ರಚಲಿತವಾಗಿವೆ. ಅದರಲ್ಲಿ ಬಂಟರು ಜೈನರಾದರೋ ಜೈನರು ಬಂಟರಾದರೋ ಎಂಬ ಜಿಜ್ಞಾಸೆಯೂ ಕುತೂಹಲಕರವಾದ ಗಮನಾರ್ಹ ವಿಚಾರವಾಗಿರುತ್ತದೆ. ತುಳುನಾಡಿನಲ್ಲಿ ಜೈನರು ಸಂಖ್ಯೆಯಲ್ಲಿ ಕಡಿಮೆಯಾಗಿದ್ದರೂ ಸಾಹಸಸಾಧನೆಯಲ್ಲಿ ಸಾಮಾಜಿಕರಂಗದಲ್ಲಿಎದ್ದು ಕಾಣುವವರು; ತಮ್ಮ ಕೊಡುಗೆಗಳಿಂದ ಇತಿಹಾಸದಲ್ಲಿಯೂ ಪ್ರಸಿದ್ಧಿಪಡೆದಿರುವವರು. ಬಂಟಪದ ಒಂದು ಜಾತಿಗೆ ಅನ್ವಯಿಸುವಂತಿದ್ದರೆ ಜೈನಪದ ಒಂದು ಧರ್ಮಕ್ಕೆ ಸೇರಿದ್ದು. ಜೈನಧರ್ಮವು ಅಹಿಂಸಾ ಪ್ರಧಾನವಾದುದು; ಬಂಟರು ಮಾಂಸಾಹಾರಿಗಳಾಗಿದ್ದದು ಸರ್ವವಿದಿತ. ''ಆರನೆಯ ಶತಮಾನದಿಂದ ಹನ್ನೆರಡನೆಯ ಶತಮಾನದವರೆಗೆ ಜೈನಧರ್ಮ ಕನ್ನಡ ನಾಡಿನ ರಾಜಧರ್ಮವಾಗಿ ವೈಭವದಲ್ಲಿ ಹಬ್ಬಿತ್ತು. ಗುಡಿಸಲಿನಿಂದ ಅರಮನೆಯವರೆಗೆ ಜೈನಧರ್ಮದ ಅನುಯಾಯಿಗಳಿದ್ದರು; ಹನಸೋಗೆ (ಸಾಲಿಗ್ರಾಮದ ಬಳಿ, ಮೈಸೂರು ಜಿಲ್ಲೆ), ಸೋದೆ (ಸ್ವಾದಿ, ಸೋಂದ, ಉತ್ತರ ಕನ್ನಡ ಜಿಲ್ಲೆ) ಶ್ರವಣಬೆಳಗೊಳ; ಹುಂಚ (ಹಾಸನ ಜಿಲ್ಲೆ) ಮೂಡಬಿದ್ರಿ ಕಾರ್ಕಳ (ದಕ್ಷಿಣ ಕನ್ನಡ ಜಿಲ್ಲೆ), ನರಸಿಂಹರಾಜಪುರ (ಸಿಂಗನಗದ್ದೆ - ಚಿಕ್ಕಮಗಳೂರು ಜಿಲ್ಲೆ), ಮುಂತಾದ ಕಡೆ ಜೈನಮಠಗಳು

ಜೈನಪೀಠಗಳು ಶಾಂತಿ ಸಂದೇಶ ಬೀರುವ ಅಹಿಂಸಾ ಕೇಂದ್ರಗಳಾಗಿದ್ದವು.''[೧] ಎಂಬ ವಿಚಾರಗಳು ಜೈನಧರ್ಮವು ಕರ್ನಾಟಕದಲ್ಲಿ ಪ್ರಚಾರಗೊಂಡು ಪ್ರಬಲವಾದ ತಳಹದಿಯಲ್ಲಿ ನೆಲೆಸಿಂತ ಯಶೋಗಾಥೆಯನ್ನು ಸಾರುವಂತಿವೆ.

ಕರ್ನಾಟಕದ ಸುಪ್ರಸಿದ್ಧ ಜಿಲ್ಲೆಯಾದ ದಕ್ಷಿಣ ಕನ್ನಡ ಅಂದರೆ ತುಳುನಾಡಿನಲ್ಲಿ ಹನ್ನೊಂದನೆಯ ಶತಮಾನದಲ್ಲಿ ಜೈನಧರ್ಮವು ಪ್ರಬಲವಾದ ರೀತಿಯಲ್ಲಿ ಪಸರಿಸಿ ಜನಮಾನಸದಲ್ಲಿ ಸ್ಥಿರವಾಗಿ ಜನರನ್ನು ತನ್ನತ್ತ ಆಕರ್ಷಿಸಿ ಮತಾಂತರಗೊಳಿಸಿದ ಕತೆಯು ಇತಿಹಾಸಕ್ಕೆ ಸೇರಿರುತ್ತದೆ. ೧೧ನೇ ಶತಮಾನದ ನಂತರ ತುಳುನಾಡು ಜೈನರಾಜ್ಯವಾಯಿತು. ಆ ವರೆಗೆ ತುಳುವರಲ್ಲಿ ಪಾಂಡಿ, ಪಡಾಲ, ಆಳುವ, ಸೆಟ್ಟಿ, ಪಾಲವ, ಅರಿಗ, ಬಾರಗ, ನಾಯಿಗ, ಪೂಂಜ, ಪೆರ್ಗಡೆ, ಕೊಟ್ಯಾರಿ, ಪೂಜಾರಿ, ಬಂಡಾರಿ, ಅತಿಕಾರಿ ಮೊದಲಾದ ನಾಮ ಕೀರ್ತಿಗಳು ಇದ್ದಂತೆ ಪುರಾತನ ಪಾಡ್ದನಗಳಲ್ಲಿ ಕಾಣುತ್ತದೆ.''[೨] 'ಕ್ರಿ.ಶ೧೧ನೇ ಶತಮಾನದಲ್ಲಿ ಮೈಸೂರು ಮೊದಲಾದ ಕನ್ನಡ ಪ್ರಾಂತದಲ್ಲಿದ್ದ ಜೈನರಾದ ಶಾಂತಾರ ವಂಶದವರಲ್ಲಿ ಚುಟುಕುಲದ ಚೌಟ, ಬಂಗ, ಅಜಿಲ, ಸಾಮಂತ, ಮೂಲ, ತೋಳಹಾರ, ಕಂಬಳಿ, ಬೈರರಸ, ಭಾರಸ, ಬಿನ್ನಾಣ(ಬುನ್ನ) ಕೊನ್ನ ಮೊದಲಾದ ಜೈನ ಶಾಂತಾರರು ತುಳುನಾಡಿಗೆ ಬಂದು ಅಲ್ಲಿಯ ಆಳುವ ರಾಜರ ಹೆಂಗಸರನ್ನು ಮದುವೆಯಾಗಿ, ಅವರ ಸಂತತಿ ಜೈನಬಂಟರು, ಬಲ್ಲಾಳರಾಗಿ ೧೮ನೇ ಶತಮಾನದವರೆಗೆ ತುಳುನಾಡನ್ನು ಆಳಿತು''[೩] ಎಂಬ ಮಾತುಗಳನ್ನು ಗಮನಿಸಿದಾಗ, ಬಂಟರ ಮತ್ತು ಜೈನರ ಮತೀಯ ಸಂಬಂಧವಾದ ವಿಚಾರವು ಸೂಕ್ತವಾಗಿ ಬೆಳಕು ಚೆಲ್ಲುತ್ತದೆ. ಧಾರ್ಮಿಕ ಮತಾಂತರ, ಸಾಮಾಜಿಕ ಮಿಶ್ರಣ ಭಾರತದಲ್ಲಿ ಘಟಿಸಿದ್ದು, ಇತಿಹಾಸಗಳ ಪುಟಗಳಲ್ಲಿ ಅವುಗಳ ಉಲ್ಲೇಖಗಳೂ ಮೇಲಿನ ವಿಚಾರಕ್ಕೆ ಪುಷ್ಟಿ ನೀಡುತ್ತದೆ.

"There are reasonable grounds for us to surmise that by about the 10th Century A.D. Jainism must have made its headway in South Kanara. It has been proved that the contact between the santaras of pombuchcha who were staunch Jains and Alupas, was close from the 10th century A.D. which resulted in matrimonial alliance in the 11th Century between the two dyanasties. Based on sound epigraphic evidence, Jainism must have definitely gained ground in South kanara in the 12th Century A.D. because two inscriptions of Nellikaru of the Karkala Taluk speak in no uncertain terms of Jain activities. Both of these are assignable to the 12 th century A.D.[4]

ಹತ್ತನೆಯ ಶತಮಾನದಲ್ಲಿ ತುಳುನಾಡಿನಲ್ಲಿ ಪ್ರಬಲವಾದ ರೀತಿಯಲ್ಲಿ ಜೈನರು ತಮ್ಮ ಅಸ್ತಿತ್ವವನ್ನು ನೆಲೆಗೊಳಿಸಿದ್ದರು; ಶಾಂತಾರರಿಗೂ ಆಲೂಪರಿಗೂ ನಿಕಟತನವುಂಟಾಗಿ ಹನ್ನೊಂದನೆಯ ಶತಮಾನದಲ್ಲಿ ಎರಡು ರಾಜಕುಟುಂಬಗಳ ನಡುವೆ ಲಗ್ನ ಸಂಬಂಧ ಉಂಟಾಯಿತು. ಶಿಲಾಶಾಸನಗಳ ಆಧಾರದಿಂದಲೂ ಹನ್ನೆರಡನೆಯ ಶತಮಾನದಲ್ಲಿ ಜೈನರು ತುಳುನಾಡಿನಲ್ಲಿ ನೆಲೆಯೂರಿದ್ದರೆಂಬುದು ಸ್ಪಷ್ಟವಾಗಿರುತ್ತದೆಂದು ಪ್ರಖ್ಯಾತ ಇತಿಹಾಸಜ್ಞ ಡಾ। ಗುರುರಾಜ ಭಟ್ಟರ ಮಾತುಗಳಿಂದ ತಿಳಿಯಬಹುದಾಗಿದೆ. ದಕ್ಷಿಣ ಕನ್ನಡದ ಇತಿಹಾಸಕಾರರಲ್ಲಿ ಮೊದಲಿಗರೆನಿಸಿದ ಶೀನಪ್ಪ ಹೆಗ್ಗಡೆ ಅವರು ಮತ್ತು ಡಾ। ಭಟ್ಟರ ಅಭಿಪ್ರಾಯಗಳ ಸಾಮ್ಯವಿದ್ದುದರಿಂದಲೂ ಕನ್ನಡದ ಆದಿಕವಿ ಪಂಪ, ಕವಿಚಕ್ರವರ್ತಿ ರನ್ನ ಮೊದಲಾದ ಜೈನಧರ್ಮದ ಮಹಾಕವಿಗಳು ಆಗಿಹೋಗಿರುವುದನ್ನು

ಗಮನಿಸಿದಾಗಲೂ ತುಳುನಾಡಿನಲ್ಲಿ ಜೈನಧರ್ಮವು ಹತ್ತನೆಯ ಶತಮಾನದಲ್ಲಿ ಪ್ರವೇಶಿಸಿ, ಹನ್ನೊಂದನೆಯ ಶತಮಾನದಲ್ಲಿ ಪ್ರಭಾವಿತವಾದ ವಿಧಾನದಲ್ಲಿ ಹರಡಿರಬೇಕೆಂಬ ವಿಚಾರ ಸ್ವೀಕಾರಾರ್ಹವಾಗಿದೆ. ಈ ಮೇಲೆ ಉಲ್ಲೇಖಿಸಿರುವ ಜೈನಮತಗಳ ಜೈನಪೀಠಗಳ ಪ್ರದೇಶಗಳು ತುಳುನಾಡಿಗೆ ನಿಕಟವಾಗಿರುವ ಪ್ರದೇಶಗಳು ಎಂಬುದನ್ನು ಗಮನಿಸಿದಾಗಲೂ ಆಯಾ ಪ್ರದೇಶಗಳಲ್ಲಿ ಜೈನಧರ್ಮ ಭದ್ರಬಾಹುವಿನಾದಿಯಿಂದ ಸ್ಥಿರಗೊಂಡ ಕಾಲಮಾನವನ್ನು ತಿಳಿದಾಗಲೂ ನಮಗೆ ತುಳುನಾಡಿನಲ್ಲಿ ಹನ್ನೊಂದನೆಯ ಶತಮಾನದಲ್ಲಿ ಜೈನಧರ್ಮವು ಗಟ್ಟಿಯಾಗಿ ನೆಲೆಯೂರಿತ್ತೆಂದು ಹೇಳಲು ಸುಲಭಸಾಧ್ಯವಾಗುತ್ತದೆ.

''ರಾಷ್ಟ್ರಕೂಟ ದೊರೆ ನೃಪತುಂಗನು (ಕ್ರಿ.ಶ. ೮೧೪-೮೨೮) ತುಳುನಾಡಿನಲ್ಲಿ ಬಂಡೆದ್ದ ಆಲೂಪ ವಿಜಯಾದಿತ್ಯನನ್ನು ಬಗ್ಗು ಬಡಿದ. ರಾಜಪುತ್ರಿಯರನ್ನು ಗಂಗ ವಂಶಕ್ಕೂ ಪಲ್ಲವ ವಂಶಕ್ಕೂ ಮದುವೆ ಮಾಡಿಕೊಟ್ಟ. ರಾಷ್ಟ್ರಕೂಟರು ಗರುಡ ಲಾಂಛನರು; ವೈಷ್ಣವರು. ಆಲೂಪರು ನಾಗಸಮಾಜದವರು, ಶಿವಭಕ್ತರೆಂಬುದಕ್ಕೆ ಶಾಸನಾಧಾರಗಳಿವೆ. ಈ ಅಂಶಗಳಿಂದ ನಾವು ಕ್ರಿ.ಶ. ೧೦ನೆಯ ಶತಮಾನಗಳವರೆಗೆ ಅಂದರೆ ಕ್ರಿ.ಶ. ೯೨೦ ರವರೆಗೆ ಜೈನರ ಪ್ರಾಬಲ್ಯತೆ ತುಳುನಾಡಿನಲ್ಲಿ ಇರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ.''[೫]

''ವೇದಕಾಲಕ್ಕೆ ಮೊದಲೇ ತುಳುವರಿಗೆ ನಾಗಬ್ರಹ್ಮನೇ ಸೃಷ್ಟಿಕರ್ತನು; ಆತನೇ ದೇವರು. ಅವನು ಮನುಷ್ಯರನ್ನು ಉಂಟುಮಾಡಿದ ದಿವಸವನ್ನು ಸಟ್ಟಿಯೆಂದು ಆಚರಿಸುತ್ತಾರೆ. ಸಟ್ಟಿ ಅಂದರೆ ತುಳುವಿನಲ್ಲಿ ಹುಟ್ಟಿದ ದಿನ. ಆ ನಾಗಬ್ರಹ್ಮನ ಜತೆಯಲ್ಲಿಯೇ ತುಳುವರ ಆದಿಮೂಲ ದೈವಗಳು ಇರುತ್ತವೆ. ಆ ದೈವಗಳ ಮಹಿಮೆಯಿಂದಲೇ ಹೆಣ್ಣು ಮೂಲವಾದ ಅಳಿಯಕಟ್ಟು ಶಾಶ್ವತವಾಗಿ ನಡೆದುಕೊಂಡು ಬಂದಿದೆ. ದೈವದ ಅನುಮತಿಯನ್ನು ಕೇಳದೆ ತುಳುವರು ಯಾವ ಕಾರ್ಯವನ್ನು ಮಾಡುತ್ತಿರಲಿಲ್ಲ. ಒಂದು ಕುಟುಂಬದ ಯಜಮಾನನು ದೈವದ ಪ್ರತಿನಿಧಿಯೆಂದು ಕುಟುಂಬದವರು ನಂಬುತ್ತಿದ್ದರು. ಅವನ ಇಚ್ಛೆಗೆ ಯಾರೂ ವಿರೋಧ ಮಾಡುತ್ತಿರಲಿಲ್ಲ. ಎಲ್ಲಾದರು ಅಪ್ಪಿತಪ್ಪಿ ವಿರೋಧವಂತ ಕಂಡರೆ, ಹೂಂ ನನಗೇನು ಆ ದೈವಕ್ಕೆ ಸರಿಯಾದರೆ ನನಗೂ ಸರಿ ಎಂತ ಹೇಳಿದರೆ ಸಾಕು. ತಪ್ಪು ಮಾಡಿದವನಿಗೆ ಆಗಲೇ ಏನಾದರೊಂದು ವಿಪತ್ತು ಬರುತ್ತಿತ್ತು. ಆಗ ಎಲ್ಲರೂ ಯಜಮಾನನಿಗೆ ಸಮಾಧಾನ ಹೇಳಿ, ಅವನು ದೈವಕ್ಕೆ ಕೈಮುಗಿದರೆ ಆಪತ್ತು ಗುಣವಾಗುತ್ತಿತ್ತು. ತುಳುವರು ದೈವಗಳನ್ನು ತಮ್ಮ ಮನೆಯಲ್ಲಿ ಮಾತ್ರವಲ್ಲ, ತಮ್ಮ ಇಡೀ ಗ್ರಾಮಕ್ಕೆ - ಗ್ರಾಮದೈವ, ಕೆಲವು ಗ್ರಾಮುಗಳಿಗೆ ಮಾಗಣೆ ದೈವ, ಸೀಮೆ ದೈವಗಳೆಂದು ಹತ್ತು ಸಮಸ್ತರು (ಪತ್ತೋರಿ ಕೂಲ) ಕೂಡಿ ಆರಾಧಿಸುತ್ತಾರೆ.''[೬] ನಾಗಾರಾಧನೆ, ಭೂತಾರಾಧನೆ ಪ್ರಧಾನವಾಗಿರುವ ತುಳುವರು ಶಕ್ತಿಯ ಶಿವನ ಆರಾಧಕರೆಂಬುದೂ ಗಮನೀಯವಾಗಿದೆ. ಭೂತಗಣಗಳು ಶಿವಗಣಗಳೇ ಎಂಬ ವಿಚಾರ ಬಹಳ ಮಹತ್ವದ್ದಾಗಿರುತ್ತದೆ. ತುಳುವರು ಧರ್ಮಸಹಿಷ್ಣುಗಳು. ತುಳುವರಿಗೆ ಯಾವ ದೈವದೇವರುಗಳ ಬಗ್ಗೆಯೂ ಭಿನ್ನತೆಯಿಲ್ಲ ಅಂತಹ ತುಳುವರೂ ಆದರಲ್ಲೂ ಬಲಿಷ್ಠರಾಗಿದ್ದ ಬಂಟರು ಜೈನಧರ್ಮದ ಅಹಿಂಸಾ ತತ್ವಗಳನ್ನು ಒಪ್ಪಿಕೊಂಡು ಮತಾಂತರ ಹೊಂದಿರುವುದೂ, ಅವರು ಜೈನ ಧರ್ಮವನ್ನು ವಿಶಾಲ ಮನೋಭಾವನೆಯಿಂದಲೇ ಸ್ವೀಕಾರಮಾಡಿರಬೇಕೆಂದು ತರ್ಕಿಸುವುದು ಯಥಾರ್ಥತೆಯಿಂದ ಕೂಡಿರುತ್ತದೆ.

''ಡಾ|ಪಿ.ಎಸ್. ಈಶ್ವರಭಟ್ಟರು 'ಬಂಟರ ಮೂಲ ಯಾವುದು ?' ಎಂಬ ಲೇಖನದಲ್ಲಿ ಬಂಟಜೈನರ ಬಗ್ಗೆ ಚರ್ಚಿಸಿ ಬಹಳ ಖಚಿತವಾದ ನಿರ್ಧಾರಕ್ಕೆ ಬಂದಿದ್ದಾರೆ. ಅವರ ಅಭಿಪ್ರಾಯದಲ್ಲಿರಾಜಾಶ್ರಯ ಕಾಲದಲ್ಲಿ ಜೈನಧರ್ಮದ ಬೆಳವಣಿಗೆಯ ಹಂತದಲ್ಲಿ ಅನೇಕ ಶ್ರೀಮಂತ ಬಂಟ ಸಮಾಜದವರು ಅದರ ಆಚಾರ ವಿಚಾರಗಳಿಗೆ ಒಳಪಟ್ಟುದರಲ್ಲಿ ಆಶ್ಚರ್ಯವೇನಿಲ್ಲ. ಅದರ ಪ್ರಕಾರ ತುಳುನಾಡಿನಲ್ಲಿ ಜೈನರು ಬಂಟರ ಮೂಲದಿಂದಲೇ ಬಂದವರು ಎಂದು ಹೇಳಬೇಕಾಗುತ್ತದೆಯೇ ಹೊರತು ತದ್ವಿರುದ್ಧವಾಗಿ ಹೇಳುವುದಕ್ಕೆ ಯಾವ ಆಧಾರವೂ ಇಲ್ಲ. ಬಂಟರ ಅನೇಕ ಉಪನಾಮ ಹೆಸರುಗಳು ಜೈನರಿಗೆ ಬಂಟರಿಂದಲೇ ಬಂದುದು ಹೊರತು ಬಂಟರಿಗೆ ಜೈನರಿಂದ ಬಂದುದಲ್ಲ''[೭] ಎಂಬ ಮಾತು ಸತ್ಯವಾಗಿದೆ. ಈ ವಿಚಾರಕ್ಕೆ ಪೂರಕವಾಗಿರುವಂತೆ 'ಡಿಸ್ಟ್ರಿಕ್ ಮನ್ವಲ್ ಆಫ್ ಸೌತ್ ಕೆನರಾ' ಎಂಬ ಕೃತಿಯಲ್ಲಿ ವ್ಯಕ್ತವಾಗಿರುವ ಈ ಕೆಳಗಿನ ವಾಕ್ಯಗಳನ್ನು ಗಮನಿಸೋಣ.

"A large number of Jains in Tuluva were converts from the Bunt Community, which was a powerful class in Tuluva Society. it is fitting to cite a few lines from the Manual of the District of South Kanara. The other Jains are mainly of the same class as Tulu Bunts land holder and cultivators In their dress, customs and manner of life, the Jains differ by little from the Bunts proper except that they wear the sacred thread, abstain from animal food and spirituous liquors and do not partake of food except cakes and trifles of that kind before sun-rise and after sunset. The marriage ceremonies and funeral obsequies are similar to those of Bunts with the addition that Jains perform Abhishekam in their bastis and temples on the 16th day after death. The names and titles are in almsot all cases the same as those in use amongst the Bunts"[೮]

ಈ ಮೇಲಿನ ಇಂಗ್ಲಿಷ್‌ನಲ್ಲಿರುವ ವಿಚಾರವನ್ನು ಗಮನಿಸಿದಾಗ ತುಳುನಾಡಿನಲ್ಲಿರುವ ಹೆಚ್ಚಿನ ಜೈನರು ಬಂಟರ ಸಮಾಜದಿಂದ ಮತಾಂತರಗೊಂಡವರು 'ಮನ್ವಲ್ ಆಫ್ ದಿ ಡಿಸ್ಟ್ರಿಕ್ ಆಫ್ ಸೌತ್ ಕೆನರಾ''ದಲ್ಲಿ ಜೈನರಲ್ಲಿ ಅನೇಕರು ಬಂಟರಂತೆ ಭೂಮಾಲಕರು ಮತ್ತು ಕೃಷಿಕರಾಗಿರುತ್ತಾರೆ. ಪೋಷಾಕುಗಳು ಸಂಪ್ರದಾಯಗಳು ಜೀವನದ ರೀತಿ ನೀತಿಗಳು ಬಂಟರಿಗಿಂತ ಜೈನರಲ್ಲಿ ಬಹಳ ಸ್ವಲ್ಪವೇ ಭಿನ್ನವಾಗಿರುತ್ತವೆ.... ಮದುವೆ ಸಮಾರಂಭಗಳು ಮತ್ತು ಸತ್ತವರ ಕ್ರಿಯಾಕರ್ಮಗಳು ಎರಡು ಪಂಗಡಗಳಲ್ಲೂ ಸಮಾನವಾಗಿವೆ. ಹೆಸರುಗಳು (ಉಪನಾಮಗಳು) ಬಿರುದುಗಳು ಹೆಚ್ಚಿನಂಶವಾಗಿ ಜೈನರಲ್ಲೂ ಬಂಟರಲ್ಲಿಯೂ ಒಂದೇ ಆಗಿರುತ್ತದೆಂಬ ಮುಖ್ಯಾಂಶಗಳನ್ನು ಗಮನಿಸಿದಾಗಲು ಬಂಟರ ಜೈನರ ನಿಕಟ ಸಂಬಂಧದ ಬಗ್ಗೆ ಅರ್ಥಪೂರ್ಣ ವಿಚಾರಗಳು ನಮ್ಮ ಗಮನಕ್ಕೆ ಬರುತ್ತವೆ.

ತುಳುನಾಡಿಗೆ ''ಈ ಭಾಗದಲ್ಲಿ ಜೈನಮತ ಪ್ರಚಾರಕರು ಬಂದಾಗ ಬಂಟರಲ್ಲಿ ಕೆಲವರು ಜೈನ ಮತಾವಲಂಬಿಗಳಾದರು; ಮಾಂಸಾಹಾರ ತ್ಯಜಿಸಿ ಸಸ್ಯಾಹಾರಿಗಳಾದರು. ಈ ಎರಡು ಜಾತಿಗಳಲ್ಲಿಯೂ ಸಮಾನ ಕಟ್ಟುಕಟ್ಟಳೆಗಳಿವೆ; ಸರ್‌ನೇಮ್ (ಉಪನಾಮ) ಅವುಗಳ್ಲೊಂದಾಗಿದೆ. ಆ ಕುಟುಂಬ ಬಾಂಧವ್ಯವೇ ಸಂಪ್ರದಾಯ ರೂಢವಾಗಿ ಈಗಲೂ ಇಂದಿಗೂ ಬಂಟರಲ್ಲಿ 'ಪ್ರೇತಕ್ಕೆ ಅಗೆಲು

ಹಾಕುವಾಗ ಅಡ್ಡ ಪಂಕ್ತಿಯಲ್ಲಿ ಒಂದು. ಅಗೆಲು', 'ಜೈನ ಅಗೆಲು' ತರಕಾರಿ ಪಲ್ಯದಿಂದ ಪ್ರತ್ಯೇಕ ಹಾಕುತ್ತಾರೆ. ಇದು ದಿವಂಗತ ಶೀನಪ್ಪ ಹೆಗ್ಡೆ ಮತ್ತು ನನ್ನ ಒಮ್ಮತದ ಅಭಿಪ್ರಾಯವಾಗಿತ್ತು''[೯] ಎಂದು ಮಂಗಳೂರಿನ ಅಗ್ರಾಳ ಪುರಂದರ ರೈ ಅವರ ಮಾತುಗಳು ಮೇಲಿನ ವಿಚಾರಗಳಿಗೆ ಪೂರಕವಾಗಿವೆ.

ಮಾತೃಪ್ರಧಾನ ಪದ್ಧತಿ ಅರ್ಥಾತ್ ಅಳಿಯಕಟ್ಟು ತುಳುವರ ಜೀವನ ವಿಧಾನದ ಪ್ರಮುಖ ಶಕ್ತಿಯಾಗಿ ಇತ್ತೀಚಿನ ದಶಕದವರೆಗೆ ನಡೆದುಕೊಂಡು ಬಂದುದು ಐತಿಹಾಸಿಕ ಸತ್ಯ.

ಬಂಟರ ಕೆಲವು ಉಪನಾಮಗಳು ಜೈನರಲ್ಲಿ, ಬ್ರಾಹ್ಮಣರಲ್ಲಿ, ಕೊಂಕಣಿಗರಲ್ಲಿ ಸಮಾನವಾಗಿರುವುದನ್ನು ಕಾಣಬಹುದು. ಜೈನರಲ್ಲಿ : ಅಧಿಕಾರಿ, ಅತ್ಯಂತಾಯ, ಅಜಿಲ, ಆಳ್ವ, ಅರಸ, ಅರಿಗ, ಉಲ್ಲಾಳ, ಭಂಡಾರಿ, ಬಂಗ, ಚೌಟ, ಕದಂಬ, ಕಂಬಳಿ, ಕಾವ, ಕಿಲ್ಲೆ, ಕೊಂಡೆ, ಕೋಶಾರಿ, ಮಾಡ, ಮೇಲಂತ,, ನಾಯಕ, ಪಾಂಡ್ಯ, ಪೆರ್ಗಡೆ, ಸಮಾನಿ, ಸೆಟ್ಟಿ, ಶೇಖ, ಸಾಮಂತ. ಬ್ರಾಹ್ಮಣರಲ್ಲಿ: ಅರಸ, ಬಲ್ಲಾಳ, ಕಲೆಂಬಿ, ಮೇಲಂತ; ಕೊಂಕಣಿಗರಲ್ಲಿ: ನಾಯಕ, ಹೆಗ್ಗಡೆ. ಬಂಟರ ಉಪನಾಮಗಳು ಇಂತಿವೆ: ''ಅತ್ಯಂತಾಯ, ಅಜಿಲ, ಅರಸ, ಅರಿಗ, ಅಧಿಕಾರಿ, ಅತ್ರ, ಅಡಪ, ಅತ್ತಾರ, ಆಳ್ವ, ಬಲ್ಲಾಳ, ಬಂಟ ಬಂಗ, ಬಂಗೇರ, ಬುಡಲ, ಬೈತಾನಿ, ಬಾರಿ, ಭಂಡಾರಿ, ಚೌಟ, ಗಂಭೀರ್ಯ (ಗಂಭೀರ್), ಹೆಗ್ಡೆ. ಕಡಂಬ, ಕಂಬ್ಳಿ, ಕಾಜವ, ಕಾವ, ಕರಿಯಾಲ್, ಕಿಲ್ಲೆ, ಕುಂದಡೆ, ಕೊಟ್ಟಾರಿ, ಕೊಂಡೆ, ಮರ್ತೆ, ಮಲ್ಲಿ, ಮಾಡ, ಮಾಣ್ಯಾ,ಮಾರ್ಲ, ಮಾರ್ಡಿ ಮಾಣಿ, ಮುದ್ಯ, ಪಯ್ಯಡೆ, ಪತ್ತ್ಯಾರ್, ಪಲಾಯಿ, ಪೂಂಜ, ಪೂವಣಿ, ಪೆರ್ಗಡೆ, ಪೆಗ್ಗೆ, ರೈ ಸಾಮಾನಿ, ಸಾಂತ, ಸೂಡ, ಸುಲಯೆ, ಸೇಮಿತ, ಸೇನವ, ಶೇಕ, ಶೇರ್ವೆಗಾರ್, ಸಂಕಯ, ಸೊರಫ್, ಶೆಟ್ಟಿ, ತೊಲಾರ್''[೧೦] ಹೀಗೆ ಬಂಟರ ಸಮಾಜದಲ್ಲಿ ೬೪ ಉಪನಾಮಗಳಿವೆ. ಬಂಟರ ಮತ್ತು ಜೈನರ ಉಪನಾಮಗಳನ್ನು ಗಮನಿಸಿದಾಗ ಹೆಚ್ಚಿನ ಉಪನಾಮಗಳು ಒಂದೇ ರೀತಿಯಲ್ಲಿರುವುದನ್ನು ನಾವು ಮನಗಾಣುತ್ತೇವೆ. ಬಂಟರು ಜೈನಧರ್ಮಕ್ಕೆ ಮತಾಂತರಗೊಂಡಾಗಲೂ ತಮ್ಮ ಮೂಲ ಉಪನಾಮಗಳ ಸಂಪ್ರದಾಯಗಳನ್ನು ಬದಲಿಸದೆ ಯಥಾರೀತಿಯಲ್ಲಿ ಮುನ್ನಡೆದಿರಬೇಕೆಂಬುದರಲ್ಲಿ ಯಾವುದೇ ಸಂದೇಹ ಇಲ್ಲ.

''ಬಂಟರಲ್ಲಿ ಕೆಲವರು ಅಧಿಕಾರದ ವ್ಯಾಮೋಹದಿಂದ ೧೦ನೆಯ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದಿರುವ ಜೈನರೊಂದಿಗೆ ಸಂಬಂಧಗಳನ್ನು ಬೆಳೆಸಿ ಜೈನಮತವನ್ನು ಸೇರಿದ್ದಿರಬೇಕು. ಆದರೆ ಜೈನರ ಮಧುಮಾಂಸವಿಲ್ಲದ ಊಟ, ಶಿಸ್ತುಬದ್ಧ ಜೀವನಕ್ರಮವನ್ನು ಅನುಸರಿಸುವುದು ಕಷ್ಟವಾದುದರಿಂದ ಜೈನಮತಸ್ಥರಾಗಿ ಉಳಿಯಲು ಒಪ್ಪಿಕೊಳ್ಳದೆ ಪುನಃ ತಮ್ಮ ಮಾತೃ ಸಮಾಜಕ್ಕೆ ಹಿಂತಿರುಗಿ ಬಂದವರು ಹಲವಾರು ಮಂದಿ ಇರಬಹುದು; ಶಿಸ್ತುಬದ್ಧ ಜೀವನ ಕ್ರಮವನ್ನು ಮೆಚ್ಚಿಕೊಂಡವರು ಅಲ್ಲೇ ಜೈನಮತಸ್ಥರಾಗಿ ಉಳಿದರು'' ಎಂದು ಹೇಳುವ ಮಾತುಗಳಲ್ಲಿ ಜೈನರ ಮಧುಮಾಂಸವಿಲ್ಲದ ಊಟ, ಶಿಸ್ತುಬದ್ಧ ಜೀವನಕ್ರಮವನ್ನು ಅನುಸಿರಸುವುದು ಕಷ್ಟಕರವಾದುದರಿಂದ ಜೈನ ಮತಸ್ಥರಾಗಿ ಉಳಿಯಲು ಒಪ್ಪಿಕೊಳ್ಳದೆ ಪುನಃ ತಮ್ಮ ಮಾತೃ ಸಮಾಜಕ್ಕೆ ಹಿಂತಿರುಗಿ ಬಂದವರು ಹಲವಾರು ಮಂದಿ ಇರಬಹುದು ಎಂಬ ವಿಚಾರವನ್ನು ಒಪ್ಪುವುದು ಸಮಂಜಸವಾಗುವುದಿಲ್ಲ; ಯೋಧತನದಿಂದ ಕೂಡಿದ ಬಂಟ ಜನಾಂಗದಲ್ಲಿ ಶಿಸ್ತುಬದ್ಧ ಕಟ್ಟಿದೆಗಾರಿಕೆ ಸಹಜವಾಗಿಯೆ ಇತ್ತೆಂಬುದನ್ನು ಬಂಟಸಮಾಜದ ಇತಿಹಾಸ ಸಾಹಸ ಸಾಧನೆಗಳನ್ನು ಗಮನಿಸಿದಾಗ ಕೇವಲ

ಮಾಂಸಾಹಾರದ ದೌರ್ಬಲ್ಯದಿಂದಾಗಿ ಶಿಸ್ತು ಬದ್ಧ ಜೀವನಕ್ಕೆ ಒಪ್ಪದವರಾಗಿ ಜೈನಧರ್ಮವನ್ನು ತ್ಯಜಿಸಿ ಮೂಲಕ್ಕೆ ಹಿಂತಿರುಗಿದರೆಂಬುದು ಸರ್ವಥಾ ಸ್ವೀಕಾರ್ಹವಲ್ಲ.

ಜೈನ-ಬಂಟರ ಸಂಬಂಧಿತವಾಗಿ ಮೇಲೆ ನಿರೂಪಿಸಿರುವ ವಿವಿಧ ತಜ್ಞರ ಅಬಿಪ್ರಾಯಗಳನ್ನು ತೌಲನಿಕವಾಗಿ ತೂಗಿ ನೋಡಿ, ಸಮೀಕ್ಷೆಗೊಳಪಡಿಸಿದಾಗ ಬಂಟರು ಜೈನರಾದರೆಂಬುದನ್ನು ಖಚಿತವಾಗಿ ಒಪ್ಪಿಕೊಳ್ಳಬಹುದು; ಜೈನರೂ ಬಂಟರೊಡನೆ ಬೆರೆತು ಸಾಮರಸ್ಯದ ಜೀವನ ನಡೆಸಿದರು. ಅಹಿಂಸಾ ತತ್ವದ ಆರಾಧಕರಾದ ಜೈನರು ಮಾಂಸಾಹಾರ ಪ್ರಿಯರಾದ ಬಂಟರ ಸಮಾಜಕ್ಕೆ ಸೇರುವ ಪ್ರಶ್ನೆ ಅರ್ಥವಿಲ್ಲದು. ಕರ್ನಾಟಕದ ಇತಿಹಾಸವನ್ನು ಗಮನಿಸಿದಾಗಲೂ ಕ್ರಿ.ಪೂ. ೨ನೆಯ ಶತಮಾನಕ್ಕೆ ಜೈನರು ಕರ್ನಾಟಕಕ್ಕೆ ಆಗಮಿಸಿರಬೇಕೆಂಬ ಮಾತನ್ನೂ, ತುಳುನಾಡಿಗೆ ಹತ್ತನೆಯ ಶತಮಾನದ ಮೊದಲೇ ಬಂದವರಾಗಿದ್ದರೂ ಹನ್ನೊಂದನೆಯ ಶತಮಾನದಲ್ಲಿ ಜೈನಧರ್ಮಾವಲಂಬಿ ರಾಜರು ತುಳುನಾಡಿನಲ್ಲಿ ತಮ್ಮ ಪ್ರಭುತ್ವ ಸ್ಥಾಪಿಸಿ, ಬಲಿಷ್ಠರಾಗಿದ್ದ ತುಳುನಾಡಿನ ಮೂಲ ನಿವಾಸಿಗಳಾಗಿದ್ದ ಬಂಟರಲ್ಲಿ ಅನೇಕರು ಜೈನಧರ್ಮವನ್ನು ಸ್ವೀಕರಿಸುವಂತೆ ಮಾಡಿರಬೇಕೆಂಬ ತರ್ಕವೂ ಸೂಕ್ತವಾಗಿರುತ್ತದೆ.

ಉತ್ತರ ಭಾರತದಲ್ಲಿ ಜೈನಧರ್ಮಾವಲಂಬಿಗಳಾಗಿರುವ ಸರ್ವರೂ ಪಿತೃಪ್ರಧಾನ ಕುಟುಂಬ ಪದ್ಧತಿಗೆ ಸೇರಿದವರಾಗಿರುವುದರಿಂದ, ತುಳುನಾಡಿನ ಜೈನರು ಅಳಿಯ ಸಂತಾನಕಟ್ಟು ಪದ್ಧತಿಯನ್ನು ಸ್ವೀಕರಿಸುವುದಕ್ಕೆ ಮೂಲ ಕಾರಣ ಬಂಟರು ಜೈನ ಧರ್ಮಕ್ಕೆ ಮತಾಂತರಗೊಂಡದ್ದು ಮಾತ್ರವಲ್ಲದೆ ತಮ್ಮ ಮೂಲದ ಗುಣಸ್ವಭಾವ ಆಚಾರ ವಿಚಾರಗಳನ್ನು ಬಿಡದಿರುವುದು; ಜೈನಧರ್ಮದವರಿಂದಲೂ ಅದು ಸ್ವೀಕೃತವಾಗಿತ್ತು. ಜೈನರ ಅನೇಕ ಉಪನಾಮಗಳು ಸಂಪ್ರದಾಯ ಪದ್ಧತಿಗಳು, ಭೂತಾರಾಧನೆಗಳು, ಜೀವನಕ್ರಮಗಳು, ಕೃಷಿಕತನ ಮುಂತಾದುವು ಬಂಟರು ಸಮಾಜದ್ದಾಗಿದ್ದು ಬಂಟರು ಜೈನಧರ್ಮಕ್ಕೆ ಸೇರಿದರೂ ತಮ್ಮ ಮೂಲ ಸಮಾಜದ ಗುಣಧರ್ಮಗಳನ್ನು ತದ್ರೀತಿಯಲ್ಲಿ ಉಳಿಸಿಕೊಂಡರು. ಜೈನರ ಮತ್ತು ಬಂಟರ ನಡುವಿನ ಸಾಮಾಜಿಕವಾಗಿರುವ ಸಂಬಂಧವು ಸಾಮರಸ್ಯದಿಂದ ಕೂಡಿದ್ದು ಪರಸ್ಪರ ಸ್ನೇಹಭಾವದಿಂದ ಬಾಳುತ್ತಿರುವ ಪ್ರಸ್ತುತ ಪರಿಸ್ಥಿತಿಯೂ ಪುರಾತನ ಸಂಬಂಧದ ಹಿನ್ನೆಲೆಯನ್ನು ಗಮನಿಸಿದಾಗ ನಮಗೆ ಅರಿವಿಗೆ ಬರುತ್ತದೆ. ಒಟ್ಟಿನಲ್ಲಿ ಬಂಟರು ಜೈನಧರ್ಮಕ್ಕೆ ಮತಾಂತರಗೊಂಡದ್ದರಲ್ಲಿ ಸಂದೇಹವಿಲ್ಲ.

## ಅಡಿಟಿಪ್ಪಣಿ – ಗ್ರಂಥ ಋಣ


1. ಅವಲೋಕನ – ಪ್ರಕಟಣೆ, ಕರ್ನಾಟಕ ಸರಕಾರ ೧೯೮೫ (ಲೇ.ಡಾ। ಕಮಲಾ ಹಂಪನಾ)
೨. ಶೀನಪ್ಪ ಹೆಗ್ಡೆ ಸಮಗ್ರ ಸಾಹಿತ್ಯ – ೧೯೯೧ ಪ್ರ. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ
೩. ಅದೇ
೪. Studies in Tuluva History and Culture - Prof Gururaj Bhatt
೫. ತುಳು ನಾಡ ಬಂಟರು – ಎಸ್.ಎಸ್. ಹೆಗ್ಡೆ
೬. ಶೀನಪ್ಪ ಹೆಗ್ಡೆ ಸಮಗ್ರ ಸಾಹಿತ್ಯ
೭. ಅದೇ
೮. Studies in Tuluva History and Culture.
೯. ತುಳುವಾಲ – ಅಗ್ರಾಳ ಪುರಂದರ ರೈ
೧೦. ಬಂಟರ ಸಂಘ (ಮುಂಬಯಿ) ೭೭ನೇ ವಾರ್ಷಿಕ ವರದಿ
೧೧. ತುಳುವರು – ಬಂಟರು : ಹೆಗ್ಡೆ

# 'ಮೂಲಾರಾಧನಾ' ಗ್ರಂಥದಲ್ಲಿ ದೃಷ್ಟಾಂತಾಲಂಕಾರಗಳ ಪ್ರಯೋಗ

ಡಾ। ಸರಸ್ವತಿ ವಿಜಯಕುಮಾರ್

ದಿಗಂಬರ ಜೈನ ಮುನಿಧರ್ಮವನ್ನು ತಿಳಿಸುವ ಮಹತ್ವಪೂರ್ಣವಾದ, ಎರಡು ಸಾವಿರದ ನೂರು ಅರವತ್ತನಾಲ್ಕು ಗಾಹೆಗಳನ್ನೊಳಗೊಂಡ ಬೃಹದ್ಗ್ರಂಥವಾಗಿದೆ 'ಮೂಲಾರಾಧನಾ'. 'ಭಗವತೀ ಆರಾಧನಾ' ಎಂಬ ಮತ್ತೊಂದು ಹೆಸರೂ ಇದಕ್ಕುಂಟು. 'ವಡ್ಡಾರಾಧನೆಯ' ಕರ್ತೃವಾದ ಶಿವಕೋಟ್ಯಾಚಾರ್ಯರು ಇದರ ಕರ್ತೃ. ಕಾಲ ಸು. ಕ್ರಿ.ಶ. ಒಂಬತ್ತನೆಯ ಶತಮಾನ.

ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರ ಮತ್ತು ಸಮ್ಯಕ್ ತಪಗಳೇ ಆರಾಧನೆಗಳಾಗಿವೆ. ಅವುಗಳನ್ನು ಅನುಸರಿಸುವ ಮುನಿಯು ಆರಾಧಕನೆನಿಸಿಕೊಳ್ಳುತ್ತಾನೆ. ಮುನಿಯಾದವನು ಇವುಗಳ ಆರಾಧನೆಯನ್ನು ಮರಣಪರ್ಯಂತ ಮಾಡಬೇಕು. ಅದಕ್ಕೆ ಊನವಾಗದಂತೆ ನಡೆದುಕೊಳ್ಳಬೇಕು. ಹಾಗೆ ನಡೆದುಕೊಳ್ಳುವ ಮಾರ್ಗ ಯಾವುದು ಎಂಬುದನ್ನು ಪ್ರಮುಖವಾಗಿ ಈ ಗ್ರಂಥವು ತಿಳಿಸುತ್ತದೆ.

ಕಥೆಗಳನ್ನೇ ಮುಂದಾಗಿರಿಸಿಕೊಂಡು, ಅದರ ಹಿನ್ನೆಲೆಯಲ್ಲಿ ಧಾರ್ಮಿಕ ಆಚಾರ-ವಿಚಾರಗಳನ್ನು ಪ್ರತಿಪಾದಿಸುವುದು ಧಾರ್ಮಿಕ ಕಾವ್ಯಗಳ ಕ್ರಮವಾದರೆ, ಧಾರ್ಮಿಕ ಆಚಾರ-ವಿಚಾರಗಳ ಸಂಗತಿಗಳನ್ನೇ ಮುಂದುಮಾಡಿಕೊಂಡು ಅದರ ಹಿನ್ನೆಲೆಯಲ್ಲಿ ವಿಷಯಸ್ಪಷ್ಟನೆಗಾಗಿ ಅಲ್ಲಲ್ಲಿ ಆಲಂಕಾರಿಕ ಅಭಿವ್ಯಕ್ತಿಯನ್ನು ತಂದು ನಿರೂಪಿಸುವುದು ಶಾಸ್ತ್ರಗ್ರಂಥದ ಕ್ರಮ. ಈ ಎರಡನೆಯ ಕ್ರಮವನ್ನು ಮೂಲಾರಾಧನೆಯು ಅನುಸರಿಸುತ್ತದೆ.

ಮೂಲಾರಾಧನೆಯು ಮುನಿಧರ್ಮಾಚರಣೆಯನ್ನು ಸಾರುವ ಶಾಸ್ತ್ರೀಯ ಗ್ರಂಥವಾದರೂ, ಅಲ್ಲಲ್ಲಿ ಕಂಡುಬರುವ ಆಲಂಕಾರಿಕ ಅಭಿವ್ಯಕ್ತಿಗಳು ಒಂದು ರೀತಿಯ ಸಾಹಿತ್ಯಕ ವಾತಾವರಣವನ್ನು ತಂದುಕೊಡುತ್ತವೆ. ಮುನಿಧರ್ಮಾಚರಣೆಗೆ ಸಂಬಂಧಿಸಿದ ವಿಷಯಗಳು, ಅಲ್ಲಲ್ಲಿ ದೃಷ್ಟಾಂತದ ಮೂಲಕ ಪರಿಸ್ಫುಟಗೊಂಡಿವೆ. ಕಷಾಯನಿಗ್ರಹ, ಮನೋನಿಗ್ರಹ, ಇಂದ್ರಿಯನಿಗ್ರಹ, ಸಂಯಮ-ತಪ, ಜ್ಞಾನಮಹಿಮೆ, ಸಮ್ಯಕ್ತ್ವ-ಮಿಥ್ಯಾತ್ವ ವಿಚಾರ, ಪಂಚವ್ರತಗಳ ಭಾವನೆ-ಆಚರಣೆ, ಸತ್ಸಂಗ-ದುಸ್ಸಂಗಗಳ ಲಾಭಾಲಾಭ, ಪರನಿಂದಾದೋಷ, ಶಲ್ಯ ನಿವಾರಣೆ, ಆರಾಧನೆಯ ಸಾಧನೆ, ಶಲ್ಯೋದ್ಧರಣ ಶುದ್ಧಿ (ತಾನು ಮಾಡಿದ ಪಾಪವನ್ನು ನಿಷ್ಕಪಟ ಭಾವದಿಂದ ಗುರುಗಳ ಬಳಿ ಹೇಳುವುದು. ಧ್ಯಾನಮಹಿಮೆ, ವೈರಾಗ್ಯಭಾವ ವಿಚಾರ, ಮುನಿಪದಚ್ಯುತಿಯಿಂದ ಆಗುವ ಹೀನತೆ, ಗುಪ್ತಿ, ಸಮಿತಿ, ನಿದಾನ, ಸಂಸಾರದ ಅಸಾರತೆ, ನಿರ್ಯಾಪಕಾಚಾರ್ಯರ ಮಹತ್ವ - ಹೀಗೆ ಹಲವಾರು ವಿಚಾರಗಳನ್ನು ಕುರಿತು ಹೇಳುವಾಗ ಗ್ರಂಥಕಾರರು ದೃಷ್ಟಾಂತಗಳನ್ನು ಬಳಸಿಕೊಂಡಿದ್ದಾರೆ. ಈ

ದೃಷ್ಟಾಂತಗಳು ವಿಷಯ ಪರಿಪುಷ್ಟಿಗೆ ಸಹಾಯಕವಾಗಿರುವುದಲ್ಲದೆ, ಆ ಕಾಲದ ಆಚಾರ-ವಿಚಾರ-ವ್ಯವಹಾರಾದಿಗಳನ್ನು ಸಹ ಕೆಲವೆಡೆ ಪ್ರತಿಬಿಂಬಿಸುತ್ತವೆ.

ಇಲ್ಲಿ ಕಂಡುಬರುವ ದೃಷ್ಟಾಂತಗಳು ವೈವಿಧ್ಯಪೂರ್ಣವಾದವುಗಳು. ಪ್ರಾಣಿ-ಪಕ್ಷಿ, ಗಿಡ-ಮರ-ಬಳ್ಳಿ, ಅಗ್ನಿ-ವಾಯು, ಮಣ್ಣು-ನೀರು, ಬೆಟ್ಟ-ಗುಡ್ಡ ನದಿ-ಸಮುದ್ರ, ಹೂ-ಮುಳ್ಳು ಸೂರ್ಯ, ಬಿಸಿಲ್ಗುದುರೆ, ಬೇಲಿ-ಕಂದಕ, ಲೋಹ, ರೋಗಿ-ವೈದ್ಯ-ಔಷಧಿ, ರಣರಂಗ-ಯೋಧ-ಹೇಡಿ, ಸಾಲಗಾರ ಹೀಗೆ ಹಲವಾರು ವಿಷಯ ಸಾಮಗ್ರಿಗಳನ್ನು ತಮ್ಮ ದೃಷ್ಟಾಂತಗಳಿಗೆ ವಿಷಯವನ್ನಾಗಿಸಿಕೊಂಡಿದ್ದಾರೆ. ಇಂಥಲ್ಲೆಲ್ಲಾ ಗ್ರಂಥಕಾರರ ಸೂಕ್ಷ್ಮ ಪರಿಶೀಲನಾ ಮನೋಭಾವವನ್ನು ಗುರುತಿಸಿಕೊಳ್ಳಬಹುದಾಗಿದೆ. ಮುಂದೆ ಕೆಲವು ಉದಾಹರಣೆಗಳನ್ನು ಗಮನಿಸಬಹುದಾಗಿದೆ:

ಸಮ್ಯಗ್ದೃಷ್ಟಿ ಎನಿಸಿಕೊಂಡವನು ವ್ರತಾಚಾರಗಳಲ್ಲಿ ತೊಡಗಿರಬೇಕು. ಹಾಗಿಲ್ಲದೆ ಹೋದಲ್ಲಿ ಅವನು ತಪವನ್ನು ಕೈಗೊಂಡರೂ ವ್ಯರ್ಥ-ಎಂಬುದನ್ನು ಗ್ರಂಥಕಾರರು ಹೀಗೆ ಅಭಿವ್ಯಕ್ತಿಗೊಳಿಸಿದ್ದಾರೆ.

ಅವಿರತನಾದ ಸಮ್ಯಗ್ದೃಷ್ಟಿಯು ಮಾಡುವ ತಪ ಹೆಚ್ಚು ಉಪಕಾರಿಯಾಗದು. ಅದು 'ಗಜಸ್ನಾನ' ದಂತೆ ಮತ್ತು ಕಡೆಗೋಲಿನ ಹಗ್ಗದಂತೆ ಆಗುತ್ತದೆ. ಆನೆಯು ಒಂದು ಕಡೆಯಿಂದ ಮೈಮೇಲೆ ನೀರನ್ನು ಹೊಯ್ದುಕೊಂಡು ಮತ್ತೊಂದು ಕಡೆಯಿಂದ ಮಣ್ಣನ್ನು ಹೊಯ್ದುಕೊಳ್ಳುತ್ತದೆ. ತೇವಾಂಶವು ಮಣ್ಣನ್ನು ಹೆಚ್ಚಾಗಿ ಮೆತ್ತಿಕೊಳ್ಳುವಂತೆ ಮಾಡುತ್ತದೆ. ಹಾಗೆಯೇ ತಪಸ್ಸಿನಿಂದ ಸ್ವಲ್ಪ ಕರ್ಮ ನಿರ್ಜರೆಯಾದರೂ ಕೂಡ ಅಸಂಯಮದಿಂದ ಮನುಷ್ಯನಿಗೆ ಹೆಚ್ಚು ಕರ್ಮಬಂಧವೇ ಆಗುತ್ತದೆ. ಇನ್ನು ಕಡೆಗೋಲಿನ ವಿಚಾರ. ಕಡೆಗೋಲಿನ ಹಗ್ಗವು ಕಡೆಯುವಾಗ ಒಂದು ಕಡೆಯಿಂದ ಎಷ್ಟು ಬಿಚ್ಚಿಕೊಳ್ಳುತ್ತದೋ ಅಷ್ಟೇ ಇನ್ನೊಂದು ಕಡೆಯಿಂದ ಸುತ್ತಿಕೊಳ್ಳುವುದು. ಹಾಗೆಯೇ ಅಸಂಯಮಿಯ ತಪಸ್ಸಿನಿಂದ ಎಷ್ಟು ಕರ್ಮ ನಿರ್ಜರೆಯಾಗುತ್ತಾಹೋಗುತ್ತದೋ ಅಷ್ಟೇ ಕರ್ಮವು ಅಸ್ರವವಾಗಿ ಬಂದು ಆತ್ಮ ಪ್ರದೇಶದ ಮೇಲೆ ಅಂಟಿಕೊಳ್ಳುವುವು. ಇಲ್ಲಿ ಗೃಹಕೃತ್ಯದ ವಸ್ತುವೂ ಸಹ ಗ್ರಂಥಕಾರರ ಅವಲೋಕನಕ್ಕೆ ಬಂದಿರುವುದು ಸ್ವಾರಸ್ಯಕರವಾಗಿದೆ. ಅಲ್ಲದೆ ಅದು ನೀಡುವ ಅರ್ಥ ಸ್ಫುರಣೆಯೂ ಅಷ್ಟೇ ಸ್ವಾರಸ್ಯಕರ. ಈ ಭಾಗದಲ್ಲಿ ಕಂಡುಬರುವ 'ಗಜಸ್ನಾನ' (ಪತ್ತಿಣ್ಹಾಣಂ) 'ಕಡೆಗೋಲಿನ ಹಗ್ಗ' (ಚುಂದಚ್ಚುದಕಮ್ಮ) ದಂತಹ ಪದಪುಂಜಗಳು ನುಡಿಗಟ್ಟಿನ ಮಾದರಿಗಳಾಗಿವೆ.

ಗಾದೆಯಂತಹ ಮಾತುಗಳೂ ಸಹ ಅಲ್ಲಲ್ಲಿ ಕಂಡುಬರುತ್ತವೆ. ಪರೀಷಹಗಳು ಬಂದರೆ ಸಂಕ್ಲೇಶ ಪಡುವುದರಿಂದ ಅದು ದೂರವಾಗದು. ಹಾಗೆ ಮಾಡಿದಲ್ಲಿ ಅದು ವ್ಯರ್ಥ ಎಂಬ ಪ್ರಸಂಗದಲ್ಲಿ ಗಾದೆಯಂತಹ ಮಾತಿನ ದೃಷ್ಟಾಂತ ಮಾಲೆಯೇ ಕಂಡುಬರುತ್ತದೆ. ಆ ವ್ಯರ್ಥವಾದ ಸಂಕ್ಲೇಶವು ಹೀಗಿರುತ್ತದೆ .

ಉದಾಹರಣೆಗೆ -

'ಹದಮಾಕಾಸಂ ಮುಟ್ಠೀಹಿಂ ಹೋಇತಹ ಕಂಡಿಯಾ ತುಸಾ ಹೋಂತಿ।

ಸಿಗದಾ ಓ ಪೀಲಿದಾ ಓ ಘುಸಿಲಿದಮುದಯಂ ಚಹೋ ಇಜಹಾ ॥೧೯೬೦ ॥

... ಮುಷ್ಟಿಯಿಂದ ಆಕಾಶವನ್ನು ಗುದ್ದಿದಂತೆ; ಅಕ್ಕಿಗಾಗಿ ಬತ್ತದ ಹೊಟ್ಟನ್ನು ಕುಟ್ಟಿದಂತೆ; ಎಣ್ಣೆಗಾಗಿ ಮರಳನ್ನು ಅರೆದಂತೆ; ಬೆಣ್ಣೆಗಾಗಿ ನೀರನ್ನು ಕಡೆದಂತೆ.

ಕೆಲವೆಡೆ ಒಂದು ಅಭಿಪ್ರಾಯದ ಸ್ಪಷ್ಟತೆಗಾಗಿ ಆ ಭಾವಕ್ಕೆ ಹೊಂದಿಕೊಳ್ಳುವ ಅನೇಕ ದೃಷ್ಟಾಂತಗಳನ್ನು ನೀಡಿದ್ದಾರೆ :

'ಸುಗಂಧ ಅತವಾ ದುರ್ಗಂಧದ ಸಂಸರ್ಗದಿಂದ ಮಣ್ಣೂ ಕೂಡ ಸುಗಂಧಿತ ಅತವಾ ದುರ್ಗಂಧಿತವಾಗುತ್ತದೆ. (೩೪೪) ಎಂಬುದಾಗಿ ಹೇಳಿ ಸತ್ಸಂಗದಿಂದಾಗುವ ಲಾಭವನ್ನೂ, ದುರ್ಜನರ ಸಂಗದಿಂದ ಆಗುವ ಅನರ್ಥವನ್ನು ಹಲವಾರು ದೃಷ್ಟಾಂತಗಳ ಮೂಲಕ ಸ್ಪಷ್ಟಪಡಿಸಿದ್ದಾರೆ –

ಸಜ್ಜನರ ಸಂಗದಿಂದ ದುರ್ಜನರೂ ತಮ್ಮ ದೋಷವನ್ನು ಬಿಡುತ್ತಾರೆ ಎಂಬುದಕ್ಕೆ :

1. ಚಾಕುವಿಗೆ ಸುವರ್ಣ ಮೊದಲಾದವುಗಳ ಲೇಪ ಮಾಡಿದರೆ ಸುವರ್ಣ ಸ್ವರೂಪದಂತೆಯೇ ಕಾಣುತ್ತದೆ(೩೪೫)

2. ಕಾಗೆಯು ಸುಮೇರು ಪರ್ವತದ ಆಶ್ರಯವನ್ನು ಪಡೆದಾಗ ತನ್ನ ಅಸುಂದರತ್ವವನ್ನು ಬಿಟ್ಟು ಬಿಡುತ್ತದೆ.(೩೫೨)

3. ಸುಗಂಧ ಪಳಿಮಳವಿಲ್ಲದ ಹೂವನ್ನೂ ಇದು ದೇವತೆಯ ಆಶೀರ್ವಾದವೆಂದು ಗೌರವಿಸಿ ತಲೆಯ ಮೇಲೆ ಧರಿಸುತ್ತಾರೆ. (೩೫೩)

ದುರ್ಜನರ ಸಂಗ ಅನರ್ಥಕಾರಿಯಾದುದು ಎಂಬುದಕ್ಕೆ :

1. ಬೆಂಕಿಯ ಸಂಬಂಧದಿಂದ ನೀರು ತನ್ನ ಶೀತಲ ಸ್ವಭಾವವನ್ನು ಬಿಟ್ಟುಬಿಡುತ್ತದೆ.(೩೪೬)

2. ಹೂಗಳ ಬಹುಮೂಲ್ಯವಾದ ಮಾಲೆಯೂ ಕೂಡ ಶವದ ಮೇಲೆ ಹಾಕುವುದರಿಂದ ತನ್ನ ಮೌಲ್ಯವನ್ನು ಕಳೆದುಕೊಳ್ಳುತ್ತದೆ. (೩೪೭)

3. ಮದಿರಾಲಯದಲ್ಲಿ ಕುಳಿತುಕೊಂಡು ಹಾಲನ್ನು ಕುಡಿಯುವ ಬ್ರಾಹ್ಮಣನನ್ನು ಕೂಡ ಕುಡುಕನಾಗಿರಬಹುದೆಂದು ಸಂದೇಹ ಪಡುತ್ತಾರೆ.(೩೪೮)

ಆಚಾರ್ಯರಿಗೆ ಭಾವಪುಷ್ಟಿ ಮಾಡಿಕೊಡಬೇಕೆಂಬುದು ಧ್ಯೇಯ. ಅದಕ್ಕಾಗಿ ಒಂದೇ ಅಂತರಾರ್ಥವನ್ನು ಬೀರುವ ಹಲವಾರು ವೈವಿಧ್ಯಮಯ ದೃಷ್ಟಾಂತಗಳನ್ನು ಅಲ್ಲಲ್ಲಿ ಬಳಸಿದ್ದಾರೆ. ಇದೇ ಮಾದರಿಗೆ ಮತ್ತಷ್ಟು ಉದಾಹರಣೆ :

ದೀಕ್ಷಿತನಾದ ಮುನಿಯು ಅದರಿಂದ ಚ್ಯುತನಾದರೆ ಮತ್ತೆ ಸಂಸಾರದ ಬಂಧನಕ್ಕೆ ಆಸೆಪಟ್ಟರೆ ಅದು ಕೆಳಗಿನ ದೃಷ್ಟಾಂತಗಳಿಗೆ ಸಮನಾಗುತ್ತದೆ.

1. ಬೇಡನ ಭಯದಿಂದ ತಪ್ಪಿಸಿಕೊಂಡಿದ್ದ ಚಿಂಕೆ ತನ್ನ ಗುಂಪು ಬಲೆಯಲ್ಲಿರುವುದನ್ನು ಕಂಡು ತಾನೂ ಬಲೆಯಲ್ಲಿ ಸಿಕ್ಕಿಕೊಂಡಂತೆ (೧೩೧೩)

2. ಬೆಂಕಿಯಿಂದ ಸುತ್ತುವರಿದು ದಹಿಸುತ್ತಿದ್ದ ವೃಕ್ಷದಿಂದ, ಪಕ್ಷಿ ಹಾರಿದರೂ ತನ್ನ ಗೂಡಿನ ವ್ಯಾಮೋಹ ಕಾರಣದಿಂದ ಪುನಃ ಆ ವೃಕ್ಷಕ್ಕೇ ಹೋಗಿ ಸತ್ತಿತು. (೧೩೧೬)

3. ಲಜ್ಜಾ ಹೀನವಾದ ನಾಯಿ ತಾನೇ ವಮನ ಮಾಡಿದ ಭೋಜನವನ್ನು ತಿನ್ನುವ ಅತ್ಯಾಸೆಯಿಂದ ಅದನ್ನು ತಿನ್ನುತ್ತದೆ (೧೩೧೮)

4. ಯೋಧ ರಣದಿಂದ ಪಲಾಯನ ಮಾಡಿದರೆ ನಿಂದೆಗೆ ಪಾತ್ರ ನಾಗುತ್ತಾನೆ. (೧೩೨೮)

5. ಅಂಧಕಾರದಲ್ಲಿ ಸಮುದ್ರದಲ್ಲಿ ಬಿದ್ದ ರತ್ನವನ್ನು ಹುಡುಕಲೂ ಬಾರದು. ದೀಕ್ಷಾಭ್ರಷ್ಟನಾದರೆ ಅದನ್ನು ಮತ್ತೆಪಡೆದುಕೊಳ್ಳುವುದು ದುರ್ಲಭ (೧೮೬೬)

ಒಂದು ವಸ್ತುವಿಷಯದಲ್ಲಿ ಕಂಡುಬರುವ ವಿವಿಧಾಂಶಗಳನ್ನು ಸ್ಪಷ್ಟಪಡಿಸಿರುವುದಕ್ಕೆ ಕೆಲವು ಉದಾಹರಣೆಗಳು :

ಭೋಗ-ಕಾಮಗಳು ಅಪಾಯಕಾರಿಯಾದುವು, ಅನಿತ್ಯವಾದವು, ಅಸಾರವಾದವು ಎಂಬುದಕ್ಕೆ:

1. ನಾಯಿಯು ಒಣಗಿದ ಮೂಳೆಗಳನ್ನು ಕಡಿಯುತ್ತಿದ್ದರೂ ರಸವನ್ನು ಪಡೆಯುವುದಿಲ್ಲ. ಆದರೆ ಕಠೋರವಾದ ತನ್ನ ದವಡೆಯಿಂದಲೇ ಹರಿಯುತ್ತಿರುವ ರಕ್ತವನ್ನು ಸವಿಯುತ್ತಾ ಸುಖವೆಂದು ತಿಳಿಯುತ್ತದೆ. ಅದೇ ರೀತಿ ಕಾಮಿಯೂ ತನ್ನ ಸತ್ವವನ್ನು ಕಳೆದುಕೊಳ್ಳುತ್ತಿದ್ದರೂ ಅದನ್ನು ಸುಖವೆಂದು ತಿಳಿದುಕೊಳ್ಳುತ್ತಾನೆ. (೧೨೪೯)

2. ಕಜ್ಜಿಯನ್ನು ಉಗುರುಗಳಿಂದ ಕೆರೆಯುವಾಗ ಉಂಟಾಗುವ ದುಃಖವನ್ನು ಮನುಷ್ಯನು ಸುಖವೆಂದೇ ತಿಳಿಯುತ್ತಾನೆ. ಅದರಂತೆಯೇ ಮೈಥುನ ಸಮಯದಲ್ಲಿ ಉಂಟಾಗುವ ವೇದನೆಯನ್ನೂ ಕೂಡ ಕಾಮಿಯು ಸುಖವೆಂದೇ ಭಾವಿಸುತ್ತಾನೆ. (೧೨೪೬)

3. ಬಡಪಾಯಿ ಕೀಟವು ಕಹಿಯಾದ ಒಂದು ಬಳ್ಳಿಯನ್ನು ತಿನ್ನುತ್ತಾ ಅದನ್ನು ಸಿಹಿಯೆಂದು ತಿಳಿಯುತ್ತದೆ. ಕಾಮಿ ಜನರು ದುಃಖದ ಅನುಭವವನ್ನು ಸುಖವೆಂದು ಭಾವಿಸುತ್ತಾರೆ. (೧೨೪೭)

4. ಸೂರ್ಯಕಿರಣ ಸಂತಪ್ತನಾದ ಮನುಷ್ಯನು ಮರದ ನೆರಳಿನಲ್ಲಿ ಅಲ್ಪಕಾಲ ಮಾತ್ರಸುಖವನ್ನು ಅನುಭವಿಸಲು ಸಾಧ್ಯ. ಅದು ಶಾಶ್ವತವಲ್ಲ. ಅಂತೆಯೇ ಭೋಗ (೧೨೫೩)

5. ಬಾವಿಯ ಗೋಡೆಯ ಒಂದು ಕಡೆ ಜೋತಾಡುತ್ತಿರುವ ಮನುಷ್ಯನು ಹನಿ ಬೀಳುತ್ತಿರುವ ಜೇನುತುಪ್ಪದ ಹನಿಗಳನ್ನೇ ನೋಡುತ್ತಾನೆಯೇ ಹೊರತು ತನ್ನ ಪತನವನ್ನು ನೋಡುವುದಿಲ್ಲ. ಭೋಗ ವಿಧಾನವನ್ನು ಕೈಗೊಳ್ಳುವವನೂ ಹಾಗೆಯೇ (೧೨೫೩)

6. ರೇಷ್ಮೆ ಹುಳು ತನ್ನ ಮುಖದಿಂದ ದಾರವನ್ನು ತೆಗೆದು, ಅದರಿಂದ ತನ್ನನ್ನು ಕಟ್ಟಿಹಾಕಿಕೊಳ್ಳುತ್ತದೆ. ದುರ್ಬುದ್ಧಿಯುಳ್ಳ ಮನುಷ್ಯನು ಬಿಡಿಸಿಕೊಳ್ಳಲು ಅಶಕ್ಯವಾದ ಕಾಮಮೋಹದಲ್ಲಿಸಿಕ್ಕಿ ಬಿದ್ದು ನಿತ್ಯವೂ ತನ್ನನ್ನು ಬಂಧಿಸಿಕೊಳ್ಳುತ್ತಾನೆ. (೯೧೩)

7. ಉದ್ದವಾದ ದಾರದಿಂದ ಕಟ್ಟಿರುವ ಪಕ್ಷಿಯು ಬಹುದೂರ ಹಾರಿಹೋದರೂ ಪುನಃ ಅಲ್ಲಿಗೇ ಬಂದು ಸೇರುತ್ತದೆ. ಪರಭವಕ್ಕೆ ಸಂಬಂಧಿಸಿದ ಭೋಗಕ್ಕಾಗಿ ನಿದಾನವನ್ನು ಮಾಡುವವನು ಸ್ವರ್ಗಾದಿ ಸ್ಥಾನಗಳಿಗೆ ಹೋಗುವುದನ್ನು ಕಳೆದುಕೊಂಡು ಮರಳಿ ಸಂಸಾರಕ್ಕೆ ಹಿಂದಿರುಗುತ್ತಾನೆ (೧೨೭೨)

೩. ಜೇನುತುಪ್ಪವನ್ನು ಲೇಪಿಸಿರುವ ಕತ್ತಿಯ ಹರಿತವಾದ ಧಾರೆಯನ್ನು ನೆಕ್ಕುವ ಮನುಷ್ಯನಂತೆ ವಿಷಯಭೋಗಾಪೇಕ್ಷೆಯ ಸ್ಥಿತಿ (೧೩೪೬).

ಒಂದು ಭಾವವನ್ನು ಸ್ಪಷ್ಟಪಡಿಸಲು ನಾನಾ ದೃಷ್ಟಾಂತಗಳು ಕಂಡು ಬರುವಂತೆ, ಒಂದೇ ದೃಷ್ಟಾಂತ ವಸ್ತುವು ಹಲವು ರೀತಿಯ ಭಾವಪುಷ್ಟಿಗೆ ಬಳಕೆಯಾಗಿ ಬಂದಿರುವುದನ್ನು ಕಾಣಬಹುದಾಗಿದೆ.

ಉದಾಹರಣೆಗೆ : ವೀರಯೋಧನ ದೃಷ್ಟಾಂತ -

1. ಯೋಧನು ಹೇಗೆ ಯುದ್ಧದಲ್ಲಿ ಹೆದರುವುದಿಲ್ಲವೋ ಹಾಗೆಯೇ ಮುನಿಗಳೂ ಕೂಡ ಸತ್ತ್ವ ಭಾವನೆಯಿಂದ ಉಪಸರ್ಗವು ಬಂದಮೇಲೆ ಹೆದರುವುದಿಲ್ಲ. (೧೯೯)

2. ಕಿರೀಟಧಾರಿ ಶಸ್ತ್ರದಾರಿ ಭಿಕ್ಷೆ ಬೇಡಿದರೆ ನಿಂದೆಗೊಳಗಾಗುತ್ತಾನೆ. ಹಾಗೆಯೇ ದೀಕ್ಷೆಗೆ ಒಳಗಾದವನು ಕಷಾಯಕ್ಕೆ ಒಳಗಾದರೆ ನಿಂದೆಗೊಳಗಾಗುತ್ತಾನೆ. (೧೩೨೯)

3. ಶತ್ರು ಸಮೀಪ ಶತ್ರುಧಾರಿ ಯೋಧ ಹೇಗೆ ಮಲಗಲಾರನೋ ಹಾಗೆ ರಾಗಾದಿಗಳು ಉಪಶಾಂತವಾಗದ ಹೊರತು ಯಾವುನೂ ನಿರ್ಭಯನಾಗಿ ಮಲಗಲಾರನು. (೧೪೪೧)

4. ಸುಭಟರು ಯುದ್ಧದಲ್ಲಿ ಸತ್ತರೂ ಸರಿಯೇ ಶತ್ರುಗಳನ್ನು ಬೆಳೆಯಗೊಡುವುದಿಲ್ಲ. ಅದೇ ರೀತಿ ಸ್ವಾಭಿಮಾನಿಗಳಾದ ಸಾಧುಗಳು ಸಂಕ್ಲೇಶದ ಪರಿಸ್ಥಿತಿಯಲ್ಲಿ ತೀವ್ರವಾದ ಅಕ್ಲೇಶವನ್ನು ಸಹಿಸುತ್ತಾರೆಯೇ ಹೊರತು ರತ್ನತ್ರಯಗಳ ಆರಾಧನೆ ಬಿಡುವುದಿಲ್ಲ. (೧೫೧೬-೧೫೧೭)

5. ಪರೀಕ್ಷಹಗಳಿಗೆ ಈಡಾಗದ ಕ್ಷಪಕನು ಕವಚಧಾರಿ ಯೋಧನಂತೆ(೧೬೭೭)

6. ಕವಚ ಧರಿಸಿದ ಯೋಧನಂತೆ ಧ್ಯಾನವು ಕಷಾಯದಿಂದ ಮುಕ್ತಿಗೊಳಿಸುತ್ತದೆ. (೧೮೮೭)

7. ಮಲ್ಲನಿಗೆ ಬಲವನ್ನು ವೃದ್ಧಿಪಡಿಸುವ ಕ್ಷೀರಪಾನದಂತೆ ಕ್ಷಪಕನಿಗೆ ಧ್ಯಾನ. (೧೮೮೯)

ಕೆಲವೆಡೆ ಆ ಕಾಲದ ಪ್ರಚಲಿತ ಕಥೆಗಳ ರೂಪರೇಷೆಗಳನ್ನು, ಕಥಾ ವ್ಯಕ್ತಿಗಳ ಹೆಸರುಗಳನ್ನೂ ದೃಷ್ಟಾಂತವಾಗಿ ಬಳಸಿಕೊಳ್ಳಲಾಗಿದೆ. ಕೆಲವೆಡೆ ಐತಿಹಾಸಿಕ ವಿಷಯ ಸಂಬಂಧಿ ಎನಿಸುವ ಕಥಾಂಶಗಳೂ ಕಂಡುಬರುತ್ತವೆ. ಬೃಹತ್ಕಥಾಕೋಶದಲ್ಲಿ ಕಂಡುಬರುವ ಹಲವಾರು ಕಥೆಗಳು ಇಲ್ಲಿ ಅವುಗಳ ರೂಪರೇಷೆಗಳನ್ನು ಮಾತ್ರ ಪಡೆದು ಕೆಲವೆಡೆ ಬಂದಿವೆ.

**ಕಥಾ ದೃಷ್ಟಾಂತಕ್ಕೆ ಉದಾಹರಣೆ :**

ಕಾಮದಿಂದಾಗುವ ಅನರ್ಥಕ್ಕೆ :

ಅಯೋಧ್ಯಾ ನಗರಿಯ ರಾಜನಾದ ದೇವರತಿಯು ರಾಜ್ಯಸುಖದಿಂದ ವಂಚಿತನಾದನು. ಆವನ 'ರಕ್ತಾ' ಎಂಬ ಹೆಸರಿನ ರಾಣಿಯು, ಸಂಗೀತ ವಿದ್ಯೆಯಲ್ಲಿ ಪ್ರವೀಣನಾದ ಕುಂಟನಾಗಿದ್ದ ಒಬ್ಬ ವ್ಯಕ್ತಿಯ ಮೇಲೆ ಆಸಕ್ತಳಾಗಿ ತನ್ನ ಪತಿಯನ್ನು ನದಿಯಲ್ಲಿ ನೂಕಿಬಿಟ್ಟಳು.(೯೪೩)

ಚಾರುದತ್ತನು ವಿನಯವುಳ್ಳವನಾಗಿದ್ದರೂ ಕೂಡ ಸಂಗತಿಯ ದೋಷದಿಂದ ವೇಶ್ಯೆಯಲ್ಲಿ ಆಸಕ್ತನಾದನು, ದೂಷಣೆಗೆ ಪಾತ್ರನಾದನು.(೧೦೭೬)

ಆರಾಧನೆಯ ಫಲಕ್ಕೆ : ಜಯಸೇನನ ದೃಷ್ಟಾಂತ :

ಶ್ರಾವಸ್ತೀ ನಗರದ ಜಯಸೇನನು ಬೌದ್ಧ ಧರ್ಮವನ್ನು ತ್ಯಜಿಸಿ, ಜೈನಧರ್ಮವನ್ನು ಸ್ವೀಕರಿಸಿದ್ದನು. ಇದರಿಂದ ಕೋಪಗೊಂಡ 'ಅಹಿಮಾರಕ'ನೆಂಬ ಬೌದ್ಧನು, ಜಯಸೇನನು ಆಚಾರ್ಯ ಯತಿ ವೃಷಭರಿಗೆ ನಮಸ್ಕಾರ ಮಾಡುತ್ತಿದ್ದಾಗ ಅವನನ್ನು ಅದೇ ಸಮಯದಲ್ಲಿ ಕೊಂದುಹಾಕಿದನು. ತನ್ನ ಘಾತದ ಸಮಯದಲ್ಲಿ ಆತನು ರತ್ನತ್ರಯ ಆರಾಧನೆಯನ್ನು ಮಾಡಿದನು. (೨೦೯)

ಇಂತಹ ಕಥಾಂಶಗಳ ಉದಾಹರಣೆಗಳು ಇಲ್ಲಿ ಹಲವಾರು.

'ಮಧುಬಿಂದು' ದೃಷ್ಟಾಂತವೆಂದು ಪ್ರಸಿದ್ಧವಾಗಿರುವ ಸಂಸಾರದ ಅನಿತ್ಯತೆಯನ್ನು ಪ್ರತಿಪಾದಿಸುವ ದೃಷ್ಟಾಂತವು ಮೂರು ಗಾಹೆಗಳಲ್ಲಿ ಮೂಡಿಬಂದಿದೆ.

ಉದಾಹರಣೆಗೆ : ಕಾಡಿನಲ್ಲಿ ಬೆನ್ನಟ್ಟಿ ಬಂದ ಹುಲಿಯ ಭಯದಿಂದ ಒಬ್ಬ ಮನುಷ್ಯನು ಸರ್ಪವಿರುವ ಒಂದು ಬಾವಿಯ ಒಳಗೆ ಬಿದ್ದನು. ಆ ಬಾವಿಯ ಗೋಡೆಯಲ್ಲಿ ಒಂದು ವೃಕ್ಷವಿತ್ತು. ಅದರ ಬಿಳಲನ್ನು ಹಿಡಿದುಕೊಂಡು ಅವನು ಜೋತುಬಿದ್ದನು. ಆ ಬಿಳಲನ್ನು ಇಲಿಗಳು ಕತ್ತರಿಸುತ್ತಿದ್ದವು. ಆದರೆ ಆ ವೃಕ್ಷದ ಮೇಲೆ ಒಂದು ಜೇನುಗೂಡಿತ್ತು ಮತ್ತು ಅದರಿಂದ ಜೇನಿನ ಒಂದೊಂದು ಹನಿ ತೊಟ್ಟಿಕ್ಕಿ ಅವನ ತುಟಿಯ ಮೇಲೆ ಬೀಳುತ್ತಿತ್ತು. ಅವನು ಸಂಕಟವನ್ನು ಮರೆತು ಅದೇ ಜೇನಿನ ಹನಿಯ ರುಚಿಯ ಸ್ವಾದವನ್ನು ಸವಿಯುವುದರಲ್ಲಿ ಮಗ್ನನಾದನು. (೧೦೫೭)

ಆ ಮನುಷ್ಯನಂತೆಯೇ ಮೃತ್ಯುವೆಂಬ ಹುಲಿಗೆ ಭೀತನಾದ ಆತ್ಮನು ಅನೇಕ ದುಃಖಗಳೆಂಬ ಸರ್ಪಗಳಿಂದ ತುಂಬಿರುವ ಸಂಸಾರದ ಕೂಪದಲ್ಲಿ ಬಿದ್ದುಕೊಂಡಿದ್ದಾನೆ ಮತ್ತು ಆಶಾರೂಪದ ಬಿಳಲನ್ನು ಹಿಡಿದುಕೊಂಡಿದ್ದಾನೆ. (೧೦೫೮)

ಆದರೆ ಆ ಆಶಾರೂಪದ ಬಿಳಲನ್ನು ಬಹಳಷ್ಟು ವಿಘ್ನರೂಪದ ಇಲಿಗಳು ಕತ್ತರಿಸುತ್ತಿವೆ. ಆದರೂ ಸಹ ಆ ನಿರ್ಲಜ್ಜನು ನಿರ್ಭಯನಾಗಿ ಕ್ಷಣಿಕ ಸುಖಕ್ಕೆ ಕಾರಣವಾದ ವಿಷಯವೆಂಬ ಜೇನಿನ ಹನಿಯ ರುಚಿಯನ್ನು ಸವಿಯುವುದರಲ್ಲಿ ಮುಳುಗಿಹೋಗಿದ್ದಾನೆ. (೧೦೫೯)

ಸಾಕೇದ ಪುರಾಧಿವದೀ ದೇವರದೀ ರಜ್ಜಸುಕ್ಖ ಪಬ್ಭಟ್ಠೋ।

ಪಂಗುಲಹೇಮಂ ಛೂಡೋ ಣದೀವಿ ರತ್ತಾವಿ ದೇವಿವಿ॥ (೧೦೭೬)

ಜಾದೋ ಖು ಜಾರುದತ್ತೋ ಗೋಟ್ಠೇಮೋಸೇಣ ತಹ ವಿಣಾಇದೋ ವಿ।

ಗಣಿಯಾ ಸತ್ತೋ ಮಜ್ಜಾಸತ್ತೋ ಕುಲದೂಸ್‌ಓ ಯತಹಾ ॥ (೧೦೭೬)

ಅಹಿಮಾರ್‌ಏಣ ಣಿವದಿಮ್ಮಿ ಮಾರಿದೇ ಗಹಿದ ಸಮಣಲಿಂಗೇಣ।

ಉಟ್ಠಾಹ ಪಸ ಮಣತ್ತಂ ಸತ್ಥಗ್ಗ ಹಣಾ ಆರಾಸೀ ಗಣೀ॥

(ವಗ್ಧ ಪರದ್ಧೋ ಲಗ್ಗೋ ಮೂಲೇಯ ಜಹಾ ಸಸಪ್ಪ ಬಿಲಪಡಿದೋ ।

ಪಡಿದ ಮಧು ಬಿಂದು ಚಕ್ಖಣ ರದಿಓ ಮೂಲಮ್ಮಿ ಛಿಜ್ಜಂತೇ ॥ (೧೦೫೭)

ತಹಚೇವ ಮಚ್ಚು ವಗ್ಘಪರದ್ಧೋ ಬಹುಕ್ಕಸಪ್ಪ ಬಹುಲಮ್ಮಿ।

ಸಂಸಾರಬಿಲೇ ಪಡಿದೋ ಆಸಾಮೂಲಮ್ಮಿಸಂಲಗ್ಗೋ ॥ (೧೦೫೮)

ಬಹುವಿಗ್ಘ ಮೂಸ್ ಎಹಿಂ ಆಶಾಮೂಲಮ್ಮಿ ತಮ್ ಛಜ್ಜಂತೇ ।

ಲೇಹದಿ ತಹವಿ ಅಲಜ್ಜೋ ಅಪ್ಪಸುಹಂ ವಿಸಯ ಮಧುಬಿಂದು ॥ (೧೦೫೯)

ಮಹೋಪಮೆಯ ಮಾದರಿಯ ಈ ದೃಷ್ಟಾಂತವು ಜೈನ ಪರಂಪರೆಯಲ್ಲಿ ಬಹಳ ಪ್ರಸಿದ್ಧವಾದುದು.

ಗ್ರಂಥಕಾರರು ತಮ್ಮ ಸುತ್ತಮುತ್ತಲಿನ ಪರಿಸರದ ಅನುಭವಗಳನ್ನು, ಪರಂಪರಾನುಗತವಾಗಿ ಬಂದಿರುವ ನಿರೂಪಣೆಗಳನ್ನು, ಕಥಾಂಶಗಳನ್ನು, ತಾವು ನಿರೂಪಿಸಬೇಕೆಂದಿರುವ ವಿಷಯಗಳ ಅರ್ಥ ದೀಪ್ತಿಗಾಗಿ ಬಳಸಿಕೊಂಡಿದ್ದಾರೆ. ಆಚಾರ್ಯರು ಲೌಕಿಕ ಸಂಗತಿಗಳನ್ನು ತಮ್ಮ ಶಾಸ್ತ್ರ ಗ್ರಂಥದಲ್ಲಿ ದುಡಿಸಿಕೊಂಡಿರುವ ರೀತಿ ಗಮನಾರ್ಹವಾದುದು.

ಮುನಿ ಆಚರಣೆಯನ್ನು ಸಾರುವ ಈ ಗ್ರಂಥ ಸಾಧಕ ಮುನಿಗಳಿಗಷ್ಟೇ ಅಲ್ಲದೆ ಶ್ರಾವಕರಿಗೂ ಮಾರ್ಗದರ್ಶಿಯಾಗಿ ನಿಲ್ಲುತ್ತದೆ. ಈ ಗ್ರಂಥ ಆಚರಣೆಗಳ ವಿಧಿ-ನಿಷೇಧಗಳನ್ನು ಅಲ್ಲಲ್ಲಿ ಸ್ವಾರಸ್ಯಕರವಾಗಿ ಮಂಡಿಸುತ್ತದೆ. ಇಲ್ಲಿ ಸುಮಾರು ಇನ್ನೂರು ಇಂತಹ ಆಲಂಕಾರಿಕ ಅಭಿವ್ಯಕ್ತಿಗಳು ಕಂಡುಬರುತ್ತವೆ.

ಜೈನಶಾಸ್ತ್ರ ಗ್ರಂಥಗಳಲ್ಲಿ ಕಂಡುಬರುವ ಇಂತಹ ಆಲಂಕಾರಿಕ ಅಭಿವ್ಯಕ್ತಿಯನ್ನು ಒಟ್ಟು ದೃಷ್ಟಿಯಲ್ಲಿಟ್ಟುಕೊಂಡು ಅವುಗಳ ಅಧ್ಯಯನವನ್ನು ವಿಸ್ತೃತ ರೂಪದಿಂದ ಮಾಡಬೇಕಾಗಿದೆ.

# ಜೈನ ಕವಿಗಳ ಮಾನವೀಯ ದೃಷ್ಟಿ : ಒಂದು ಚಿಂತನೆ

ಡಾ । ವ್ಹಿ. ಜಿ. ಪೂಜಾರ

ಭಾರತೀಯ ಎಲ್ಲ ಭಾಷೆಗಳ ಸಾಹಿತ್ಯ ಸೃಷ್ಟಿಗೆ ಧರ್ಮ ಒಂದಿಲ್ಲೊಂದು ದೃಷ್ಟಿಯಿಂದ ಪ್ರೇರಣೆ ನೀಡಿದುದನ್ನು ಅರಿಯುವೆವು. ಇದಕ್ಕೆ ಕನ್ನಡ ಸಾಹಿತ್ಯವೂ ಹೊರತಾಗಿಲ್ಲ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಜೈನ, ವೀರಶೈವ ಮತ್ತು ಬ್ರಾಹ್ಮಣ ಮತಗಳ ಕವಿಗಳು ಪ್ರಮುಖವ್ವಾಗಿ ಕಾವ್ಯ ರಚಿಸಿರುವರು. ಇವರೆಲ್ಲರೂ ತಂತಮ್ಮ ಧರ್ಮಗಳ ತತ್ವಗಳನ್ನು ಪ್ರತ್ಯಕ್ಷ ಇಲ್ಲವೆ ಪರೋಕ್ಷವಾಗಿ ತಮ್ಮ ಕೃತಿಗಳಲ್ಲಿ ತಂದು ಅವುಗಳನ್ನು ಜನತೆಗೆ ಬಿಂಬಿಸಲು ಯತ್ನಿಸಿರುವರು. ಹೀಗೆ ಇವರೆಲ್ಲ ಧರ್ಮದ ತತ್ವಗಳನ್ನು ತಂದರೂ ಮಾನವಧರ್ಮವನ್ನು ನಿರ್ಲಕ್ಷಿಸಿಲ್ಲವೆಂಬುದನ್ನು ಕಾಣುವೆವು. ಇದು ಗಮನಾರ್ಹ ಸಂಗತಿ. ಮಹಾಕವಿ ಪಂಪ 'ಮನುಜ ಜಾತಿ ತಾನೊಂದೆ ವಲಂ' ಎಂದೂ ಸಾರಿದ್ದುಂಟು. ಈತನ ಹಾಗೆಯೇ ಇನ್ನುಳಿದವರೂ ಮಾನವಧರ್ಮ, ಮಾನವೀಯತೆಯತ್ತಲೂ ಗಮನ ಹರಿಸಿರುವರು. ಇವರಲ್ಲಿ ಜೈನ ಕವಿಗಳು ತೋರಿದ ಮಾನವೀಯ ದೃಷ್ಟಿ ಅನನ್ಯವಾದುದು. ಸತ್ಯ, ಪ್ರಾಮಾಣಿಕತೆ, ತ್ಯಾಗ, ಸಹನೆ, ಶಾಂತಿ, ಜೀವದಯೆ, ಮಾನವಾನುಕಂಪೆ ಹಾಗೂ ಹೃದಯ ವೈಶಾಲ್ಯತೆ ಈ ಗುಣಗಳನ್ನೆಲ್ಲ ಮೈಗೂಡಿಸಿಕೊಂಡು ಜೀವಿಸುವುದೇ ಮಾನವೀಯತೆಯ ಲಕ್ಷಣ, ಮಾನವ ಧರ್ಮ.

ಕನ್ನಡ ಸಾಹಿತ್ಯ ಮೊದಲುಗೊಳ್ಳುವುದು ಜೈನ ಕವಿಗಳಿಂದಲೇ. ಪಂಪನೇ ಆದಿ ಕವಿ. ಈತ ಆಗಮಿಕ ಹಾಗೂ ಲೌಕಿಕ ವೆಂಬೆರಡು ಕಾವ್ಯಪರಂಪರೆಗಳನ್ನು ರೂಢಿಯಲ್ಲಿ ತಂದ. ಮುಂಬಂದ ಜೈನ ಕವಿಗಳು ಬಹುಮಟ್ಟಿಗೆ ಇದನ್ನೇ ಅನುಸರಿಸಿರುವರು. ಪಂಪ, ರನ್ನ, ನಾಗಚಂದ್ರ ಮತ್ತು ಜನ ಮುಂತಾದವರು ತಮ್ಮ ಆಗಮಿಕ ಕಾವ್ಯಗಳಲ್ಲಿ ಜೈನ ತೀರ್ಥಂಕರರ ಚರಿತ್ರೆಯನ್ನೂ ತಂದರೆ , ಲೌಕಿಕ ಕಾವ್ಯಗಳಲ್ಲಿ ರಾಮಾಯಣ, ಮಹಾಭಾರತ ಮತ್ತು ಪರಂಪರೆಯಿಂದ ಬಂದ ದಂತಕಥೆಗಳನ್ನು ಕಾವ್ಯಕ್ಕೆ ವಸ್ತುವಾಗಿಸಿಕೊಂಡಿದ್ದಾರೆ. ಇವರ ಲೌಕಿಕ ಕಾವ್ಯಗಳಲ್ಲಿಯೂ ಜೈನ ಧರ್ಮದ ತತ್ವಗಳು ಬೆರೆತುಕೊಂಡುದನ್ನು ಗುರುತಿಸಬಹುದು. 'ಆರಂಭದಲ್ಲಿ ತೀರ್ಥಂಕರರ ಚರಿತ್ರೆಯಲ್ಲಿ ಅಡಕವಾದ ರಾಮಾಯಣ, ಮಹಾಭಾರತಗಳು ನಂತರ ಪ್ರತ್ಯೇಕ ಪುರಾಣ ಜೈನ ಕವಿಗಳಿಂದ ರಚಿಸಲ್ಪಟ್ಟವು ಆದರೂ ಅಲ್ಲಿ ಜೈನ ಮತದ ಛಾಯೆ ತುಂಬಿಕೊಂಡೇ ಬಿಟ್ಟಿತು. ಅಲ್ಲಿ ಬರುವವರೆಲ್ಲ ಜೈನ ಮತಾಲವಂಬಿಗಳು ಯಜ್ಞ ಯಾಗಾದಿಗಳ ಶಿಶುಹತ್ಯೆಗಳ ವಿಷಯಗಳನ್ನು ದೂರಿಡಲು ಯತ್ನಿಸಲಾಗಿದೆ. ಅಮಾನುಷ ಕೃತಿಗಳನ್ನು ಸಹಜ ಮಾನವ ಕೃತಿಗಳಾಗಿ ಮಾರ್ಪಡಿಸುವುದರ ಜೊತೆಗೆ ಅವರೆಲ್ಲರೂ

ಮಾನವರೆಂಬಂತೆ ಚಿತ್ರಿತರಾಗಿದ್ದಾರೆ. ಮಾನವರಲ್ಲಿರಬೇಕಾದ ಒಳ್ಳೆಯ ಗುಣಗಳ ಜೊತೆಗೆ ಸಣ್ಣ ಸಣ್ಣ ಕುಂದು ಕೊರತೆಗಳೂ ರಾವಣ ದುರ್ಯೋಧನ ಮುಂತಾದವರಲ್ಲಿದ್ದುವೆಂದು ಚಿತ್ರಿಸಿದ್ದಾರೆ.[೧]

ದುರ್ಯೋಧನ ರಾವಣರು ವ್ಯಾಸರ ಮಹಾಭಾರತ ಮತ್ತು ವಾಲ್ಮೀಕಿ 'ರಾಮಾಯಣ'ಗಳಲ್ಲಿ ದುಷ್ಟರು ಕಾಮುಕರು ಎಂದೇ ಚಿತ್ರಿತರಾಗಿರುವರು. ವ್ಯಾಸರ ದೃಷ್ಟಿಯಲ್ಲಿ ಮಹಾಭಾರತ ಧರ್ಮಾಧರ್ಮಗಳ ಯುದ್ಧ ಪಾಂಡವರು ಎಂಥ ಕಠಿಣ ಪ್ರಸಂಗದಲ್ಲೂ ಧರ್ಮವನ್ನು ಬಿಡದೆ, ನ್ಯಾಯಯುತವಾದ ಮಾರ್ಗದಲ್ಲಿ ನಡೆದರು. 'ಧರ್ಮೋ ರಕ್ಷತಿ ರಕ್ಷಿತಃ' ಎನ್ನುವಂತೆ ಧರ್ಮವನ್ನು ರಕ್ಷಿಸಿದ ಪಾಂಡವರನ್ನು ಅದು ಉಳಿಸಿತು. ಧರ್ಮವನ್ನು ರಕ್ಷಿಸದ ಅಧರ್ಮದಿಂದ, ಅನ್ಯಾಯದಿಂದ ನಡೆದುಕೊಂಡ ಕೌರವರನ್ನು ಅದು ಕೈಬಿಟ್ಟಿತು. ಅನೀತಿಯಿಂದ ನಡೆದ ದುರ್ಯೋಧನನಿಗೆ ಶಿಕ್ಷೆಯಾಗಬೇಕೆಂಬುದನ್ನು ಎಲ್ಲರೂ ಒಪ್ಪುವಂಥದೇ. ವಿಷಯಲಂಪಟನಾದ ರಾವಣ ಸೀತೆಯ ಮೇಲೆ ಮನಸ್ಸಿಟ್ಟು, ಅವಳನ್ನು ಕದ್ದೊಯ್ಯುದ್ದಕ್ಕಾಗಿ ಆತನಿಗೆ ರಾಮ-ಲಕ್ಷ್ಮಣರಿಂದ ಹತನಾಗುವ ಸ್ಥಿತಿಯೊದಗಿತು. ಇದು ಕಾಮುಕರಿಗೆ ಒದಗುವ ದುರ್ಗತಿಯೆಂಬುದು ವಾಲ್ಮೀಕಿಯ ವಿಚಾರ.

ಇದೆಲ್ಲ ಸರಿ, ಆದರೆ ಜೈನ ಕವಿಗಳ ದೃಷ್ಟಿಯೇ ಬೇರೆ. ಮಾನವ ಮೂಲತಃ ದುಷ್ಟನಲ್ಲ, ಕಾಮುಕನಲ್ಲ, ಪಾಪಿಯಲ್ಲ. ಆತ ಯಾವುದೋ ಕಹಿಗಳಿಗೆಯಲ್ಲಿ ವಿಧಿವಿಲಾಸಕ್ಕೊಳಗಾಗಿ ತಪ್ಪು ಮಾಡುತ್ತಾನೆ. 'ಎಷ್ಟೇ ಸದ್ಗುಣ ವ್ರತವುಳ್ಳವನಾದರೂ ಕಿಂಚಿತ್ ಅಶುಭಕರ್ಮ ವಿಪಾಕದಿಂದ ಅವನು ಅಧೋಗತಿಗಿಳಿಯುತ್ತಾನೆ.'[೨] ಹೀಗೆ ಅಧೋಗತಿಗಿಳಿದಾಗ ಎಲ್ಲರೂ ಆತನನ್ನು ತುಚ್ಛವಾಗಿ ಕಾಣುವುದು ಸರಿಯಲ್ಲ. ಪ್ರಪಂಚದಲ್ಲಿರುವ ಯಾವ ಜೀವಿಯೂ ಕೀಳಲ್ಲ, ಕ್ಷುದ್ರವಲ್ಲ. ಪ್ರತಿಯೊಂದು ಅಣುವಿಗೂ ತನ್ನದೇ ಆದ ಸ್ಥಾನವಿರುವುದು. ತಪ್ಪುಮಾಡಿದವರಿಗೆ ಪ್ರತಿಯಾಗಿ ಅನುಕಂಪೆ ತೋರಬೇಕು. ಇದರಿಂದ ಅವರು ಪಶ್ಚಾತ್ತಾಪಪಟ್ಟು ತಮ್ಮ ತಪ್ಪನ್ನು ತಿದ್ದಿಕೊಂಡು ಪರಿಶುದ್ಧರಾಗುವರು. ಅವರ ಮನಃ ಪರಿವರ್ತನೆಯಾಗುವುದು - ಮನಃ ಪರಿವರ್ತನೆಯಾದರೆ ಅವರೂ ಒಳ್ಳೆಯವರಾಗುವರೆಂಬುದು ಜೈನಕವಿಗಳ ನಂಬುಗೆ. ಇಂಥ ನಂಬುಗೆಗೆ ಜೈನ ಧರ್ಮದ ತತ್ವಗಳೇ ಪ್ರೇರಣೆ ನೀಡಿವೆಯೆಂಬುದನ್ನು ಬೇರೆ ಹೇಳಬೇಕಿಲ್ಲ. ಯೇಸುವಿನ ಜೀವನದಲ್ಲಿ ನಡೆದ ಘಟನೆಯೊಂದನ್ನಿಲ್ಲಿ ಸ್ಮರಿಸಿಕೊಳ್ಳಬಹುದು : ಊರಿನ ಜನರೆಲ್ಲ ಸೇರಿ ಸ್ತ್ರೀಯೊಬ್ಬಳನ್ನು ನೀತಿಬಾಹಿರಳೆಂದು ಹೀಗಳೆದು ಛೀ, ಥೂ ಹಾಕುತ್ತ ಅವಳಿಗೆ ಕಲ್ಲೆಸೆಯುತ್ತಿದ್ದರು. ಇದನ್ನು ಕಂಡು ಯೇಸುವು ಹೀಗೇಕೆ ಎಂದು ಕೇಳಿದಾಗ, ಇವಳು ನೀತಿಗೆಟ್ಟವಳು ಎಂದು ಉತ್ತರಿಸುವರು. ಆಗ ಏಸುವು ನಿಮ್ಮಲ್ಲಿ ಯಾರೂ ಜೀವನದಲ್ಲಿ ಒಂದೂ ತಪ್ಪನ್ನು ಮಾಡಿರದಿದ್ದರೆ ಅಂಥವರು ಮಾತ್ರ ಕಲ್ಲೆಸೆಯಿರಿ ಎಂದಾಗ, ಅವರೆಲ್ಲರೂ ತಂತಮ್ಮ ಕೈಯಲ್ಲಿನ ಕಲ್ಲುಗಳನ್ನು ಕೆಳಚೆಲ್ಲಿ ನಡೆಯುವರು. ಇಲ್ಲಿ ಏಸುವು ಅನೀತಿಗೆ ಪ್ರಾಶಸ್ತ್ಯವಿತ್ತಿರುವನೆಂಬರ್ಥವಲ್ಲ. ನೀತಿಗೆಟ್ಟವರಿಗೆ ಶಿಕ್ಷೆಯಾಗಲೇ ಬೇಕು. ಆದರೆ ಇಂಥದಲ್ಲ. ಅವಳ ತಪ್ಪನ್ನು ಮನ್ನಿಸಿ, ಅದನ್ನವನು ತಿದ್ದಿಕೊಳ್ಳುವಂತೆ ಯತ್ನಿಸಬೇಕು. ಅವಳನ್ನು ಮಾನವೀಯ ಅನುಕಂಪೆಯಿಂದ ಕಾಣಬೇಕು. ಇಂಥ ಮಾವವೀಯ ದೃಷ್ಟಿಯೇ ಅವಳನ್ನು ಸನ್ಮಾರ್ಗದಲ್ಲಿ ಮುನ್ನಡೆಸಬಲ್ಲುದೆಂಬುದು ಆತನ ಮಾತಿನ ಧೋರಣೆ. ಜೈನ ಕವಿಗಳು ಇದೇ ಧೋರಣೆಯುಳ್ಳವರು.

೧. ಕರ್ನಾಟಕ ಮತ್ತು ಜೈನ ಸಂಸ್ಕೃತಿ, ಪು: ೫೫-೫೬. ಕ.ವಿ.ವಿ. ಪುಸ್ತಕಮಾಲೆ ಪು ೧೬
೨. ವಿದ್ಯಾಶಂಕರ ಎಸ್ ಮತ್ತು ಇತರರು (ಸಂ) : 'ಸ್ನೇಹ ಕಾರ್ತಿಕ', ಪು. : ೬೨೨

ದುರ್ವ್ಯಸನಿಗಳು, ದುಷ್ಟರು, ಕುಹಕಿಗಳು, ಕಾಮುಕರು ಎಂದು ಬಹು ಹಿಂದಿನಿಂದಲೂ ವರ್ಣಿತರಾಗುತ್ತ ಬಂದ ಕರ್ಣ, ದುರ್ಯೋಧನ, ರಾವಣ ಮತ್ತು ಚಂಡಶಾಸನರ ಪಾತ್ರಗಳನ್ನು ತಮ್ಮ ಕಾವ್ಯಗಳಲ್ಲಿ ಉದಾತ್ತೀಕರಣಗೊಳಿಸಿ ದುರಂತನಾಯಕರನ್ನಾಗಿಸಿದ್ದಾರೆ. ಅವರ ಬಗ್ಗೆ ಅನುಕಂಪೆ ತೋರಿ, ಅವರ ಪಾತ್ರ ಚಿತ್ರಣದಲ್ಲಿ ಮಾನವೀಯ ದೃಷ್ಟಿ ಹರಿಸಿದ್ದಾರೆ.

ತನ್ನದೇನೂ ತಪ್ಪಿರದಿದ್ದರೂ ವಿಧಿಯ ಕೈವಾಡದಿಂದ ದುರಂತವನ್ನಪ್ಪುವ ಕರ್ಣನ ಪಾತ್ರವನ್ನು ಪಂಪ ಮಾನವಾನುಕಂಪೆಯಿಂದ ಚಿತ್ರಿಸಿದ್ದಾನೆ. ಆತನ ದೃಷ್ಟಿ ಕರ್ಣನ ವಿಲಕ್ಷಣವಾದ ವ್ಯಕ್ತಿತ್ವವನ್ನು ಬೆಳಕಿಗೆ ತಂದಿದೆ. ಕರ್ಣ ಸೂರ್ಯನ ವರದಿಂದ ಕುಂತಿಯಲ್ಲಿ ಜನಿಸಿದ್ದರೂ ಜೀವನದುದ್ದಕ್ಕೂ ಸೂತ ಪುತ್ರನೆನ್ನಿಸಿಕೊಳ್ಳಬೇಕಾಯಿತು. ಪರಶುರಾಮ ದ್ರೋಣಾಚಾರ್ಯರಿಂದ ಹೀನ ಕುಲಜನೆಂದು ಶಾಪಕ್ಕೆ ಗುರಿಯಾಗಬೇಕಾಯಿತು. 'ಇದೆಲ್ಲಕ್ಕಿಂತಲೂ ಹೆಚ್ಚಾಗಿ ಕರ್ಣನ ವಿಷಯದಲ್ಲಿ ಕವಿಗೆ ಕರುಣೆ ಉಕ್ಕುವುದು. ಅವನು ದುರ್ಯೋಧನನ ದುಃಸಂಗಕ್ಕೆ ಬಲಿಯಾದನಲ್ಲಾ ಎಂಬ ಕಾರಣದಿಂದ'[೧] ದುರ್ಯೋಧನನ ಸ್ವಾರ್ಥಕ್ಕೆ ಬಲಿಯಾಗಿ, ಆತನ ನೆಚ್ಚಿನ ಸ್ನೇಹಿತನಾಗಿ ಮುಂದುವರಿದಾಗಲೂ ದೈವ ಆತನನ್ನು ಸುಮ್ಮನೇ ಬಿಡಲಿಲ್ಲ. ಕರ್ಣಾರ್ಜುನರಲ್ಲಿ ಯುದ್ಧ ನಡೆಯಲಿರುವುದನ್ನು ಇಂದ್ರನು ದಿವ್ಯಜ್ಞಾನದಿಂದ ತಿಳಿದು ಆತನ ಕವಚ ಕುಂಡಲಗಳನ್ನು ದಾನವಾಗಿ ಪಡೆದು, ಆತನನ್ನು ದುರ್ಬಲನನ್ನಾಗಿಸುವನು. ಯುದ್ಧಕ್ಕಿಂತ ಮೊದಲು ತಾನು ಕುಂತೀಪುತ್ರನೆಂಬುದನ್ನು ಕೃಷ್ಣನಿಂದ ಅರಿಯುವನು. ಕುಂತಿ ಬಂದು ತಾಯ್ತನದ ಹೃದಯ ಬಿಚ್ಚಿ ದುಃಖಿಸಿದಾಗ ಆಕೆಯ ಇಂಗಿತವರಿತು ಯುದ್ಧದಲ್ಲಿ ಸಹೋದರರನ್ನು ಕೊಲ್ಲುವುದಿಲ್ಲವೆಂದು ವಚನವೀಯುವನು. ಈಗ ಕರ್ಣ ಸಂದಿಗ್ಧಕ್ಕೊಳಗಾಗುವನು. ಒಂದೆಡೆ ತನ್ನ ನೆಚ್ಚಿನ ಸ್ನೇಹಿತನ ಋಣವನ್ನು ಯುದ್ಧದಲ್ಲಿ ತೀರಿಸುವುದು. ಇನ್ನೊಂದೆಡೆ ಈ ಋಣ ತೀರಿಸಲು ತನ್ನ ಸಹೋದರರೊಂದಿಗೇ ಯುದ್ಧ ಮಾಡಬೇಕಾಗಿ ಬಂದುದು. 'ಈ ಇಕ್ಕಟ್ಟಿನ ಪರಿಸ್ಥಿತಿಯೇ ಅವನ ಮಾನವ ಸ್ವಭಾವವನ್ನರಳಿಸಿ ಅವನನ್ನು ಉನ್ನತ ವ್ಯಕ್ತಿಯನ್ನಾಗಿ ಕಡೆದು ನಿಲ್ಲಿಸಲು ಕಾರಣವಾಯಿತು.'[೨]

ದುರ್ಯೋಧನ ಭೀಷ್ಮನಿಗೆ ಸೇನಾಧಿಪತಿ ಪಟ್ಟಗಟ್ಟಿದಾಗ ಆತ ಮುದುಕನೆಂದು ಮೂದಲಿಸಿ 'ಪಗೆವರ ನಿಟ್ಟೆಲ್ವ ಮುರಿವಡೆನಗೆ ಪಟ್ಟಂಗಟ್ಟಾ'[೩] ಎಂದಂತಹ ಕರ್ಣ, ಭೀಷ್ಮನು ಶರಶಯ್ಯೆಯಲ್ಲಿ ಚಿರನಿದ್ರೆಯಲ್ಲಿದ್ದಾಗ ಆತನ ಪಾದಗಳನ್ನು ತನ್ನ ತಲೆಯ ಮೇಲಿಟ್ಟುಕೊಂಡು

''ಅಮ್ಮಾತಱಿಯದೆ ಮುಳಿದುಂ
ನಿಮ್ಮಡಿಯಂ ನೋಯೆ ನುಡಿದೆನುಱಿದೇಳಿಸಲೇ
ನೆಮ್ಮಳವೆ ಮಱೆವುದಾ ಮನ
ದುಮ್ಮಚ್ಚಮನಜ್ಜ ನಿಮ್ಮನೆರೆಯಲೆ ಬಂದೆಂ ॥''[೪]

ಎಂದು ರೋಧಿಸುವನು. ಹೀಗೆ ಶೋಕಿಸುವ ಆತನ ದುಃಖದಲ್ಲಿ ಸಹೃದಯರೂ ಭಾಗಿಗಳಾಗದೆ ಇರರು. ಕರ್ಣನು ಅರ್ಜುನನ ಬಾಣಕ್ಕೆ ಹತನಾಗಿ ನೆಲಕ್ಕುರುಳಿ ಸಾವನ್ನಪ್ಪಿದಾಗ ಪಂಪ ಮರುಗುವನು.

---

೧. 'ಮಹಾಕವಿಪಂಪ ಹಾಗೂ ಅವನ ಕೃತಿಗಳು', ಪು: ೩೫, ಕ.ವಿ.ವಿ ಪುಸ್ತಕಮಾಲೆ -೩

೨. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೨, ಪುಟ೭೬, ಬೆಂ.ವಿ.ವಿ.

೩. 'ಪಂಪ ಭಾರತಂ', ದಶಮಾಶ್ವಾಸಂ, ಪ:೫೭

೪. 'ಪಂಪಭಾರತಂ', ದ್ವಾದಶಾಶ್ವಾಸಂ, ಪ: ೫೪

ಕರುಣಾರ್ದ್ರ ಹೃದಯಿಯಾದ ಆತನ ಬಾಯಿಂದ ಆ ಕ್ಷಣ : ''ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ.... ಕರ್ಣ ರಸಾಯನಮಲ್ತೆ, ಭಾರತಂ'[೭] ಎಂಬ ಚರಮಶ್ಲೋಕ ಹೊಮ್ಮುವುದು. ಹೀಗೆ ಪಂಪ ಉನ್ನತ ಶ್ರೇಣಿಯ ವ್ಯಕ್ತಿಗಳ ಪಾತ್ರ ಚಿತ್ರಣದ ಬಗೆಗೆ ತೋರಿದ ಅನುಕಂಪೆಯನ್ನು ಆಸಕ್ತಿಯನ್ನು ಅಂದಿನ ಜನಸಾಮಾನ್ಯರ ಆಗು ಹೋಗುಗಳ ಬಗೆಗೂ ತೋರಿದ್ದಾನೆ. 'ಅವನು ಕೊಡುವ ಶಿಬಿರ ಜೀವನದ ಚಿತ್ರಗಳು - ರಣರಂಗಕ್ಕೆ ಹಿಂದಿನ ಇರುಳು, ನಲ್ಲ-ನಲ್ಲೆಯರು ಮಾತನಾಡಿಕೊಳ್ಳುವ - ವೀರರಾದವರು ಯುದ್ಧವನ್ನು ಕುರಿತು ಮಾತನಾಡಿಕೊಳ್ಳುವ, ಬಿಡಿ ಬಿಡಿ ಚಿತ್ರಗಳಲ್ಲಿ ಎಂಥ ಮಾನವೀಯ ಸಂಬಂಧಗಳ ಸಂಗತಿ ಬಂದಿದೆಯೆನ್ನುವುದನ್ನು ಗುರುತಿಸಬಹುದು[೮]

ವ್ಯಾಸ 'ಮಹಾಭಾರತ'ದಲ್ಲಿ ಗದಾಸೌಪ್ತಿಕ ಪರ್ವಗಳ ಕಥೆಯನ್ನು ಪಂಪ ಭಾರತ, ಗದಾಯುದ್ಧಗಳಲ್ಲಿ ವರ್ಣಿತವಾದ ಅದೇ ಕಥೆಯನ್ನು ಪಂಪ ಭಾರತ, ಗದಾಯುದ್ಧಗಳಲ್ಲಿ ವರ್ಣಿತವಾದ ಅದೇ ಕಥೆಯನ್ನೂ ಹೋಲಿಸಿ ನೋಡಿದರೆ ಪಂಪ-ರನ್ನರ ದುರ್ಯೋಧನನು ಮಾನವತೆಯಲ್ಲಿಯೂ, ಉದಾತ್ತತೆಯಲ್ಲಿಯೂ ಮಿಗಿಲಾಗಿದ್ದಾನೆ.[೯] ಪಂಪ-ರನ್ನರು ಆತನ ಪಾತ್ರವನ್ನು ಚಿತ್ರಿಸುವಲ್ಲಿ ಹರಿಸಿದ ಮಾನವೀಯ ದೃಷ್ಟಿಯೇ ಕಾರಣ. ವ್ಯಾಸ ಮಹಾಭಾರತದಲ್ಲಿ ಅಧರ್ಮದ, ಅನ್ಯಾಯದ ಪ್ರತೀಕವಾಗಿ ಚಿತ್ರಿತನಾಗಿರುವ ದುರ್ಯೋಧನ ಪಂಪಭಾರತದಲ್ಲಿ ಅಲ್ಲಿ ದುರ್ಗುಣಗಳನ್ನೊಳಗೊಂಡೂ ಛಲದಂಕಮಲ್ಲನಾಗಿ, ಅಭಿಮಾನಧನನಾಗಿ ಸಹೃದಯರ ಮನ ಸೂರೆಗೊಳ್ಳುವಂತೆ ಚಿತ್ರಿತನಾಗಿದ್ದಾನೆ. ಪಾಂಡವರನ್ನು ಮೋಸದಿಂದ ದ್ಯೂತ ಕೇಳಿಯಲ್ಲಿ ಸೋಲಿಸಿ ವನವಾಸಕ್ಕಟ್ಟಿ ಮುಂದೆಯೂ ಅವರಿಗೆ ಅನೇಕ ತೊಂದರೆಗಳನ್ನು ಕೊಟ್ಟು ದುಷ್ಟನೆನ್ನಿಸಿದ ದುರ್ಯೋಧನನಲ್ಲಿ ಕೆಲವು ಒಳ್ಳೆಯ ಗುಣಗಳೂ ಇದ್ದುವೆಂಬುದನ್ನು ಹೇಳಲು ಪಂಪನು ಮರೆತಿಲ್ಲ.

ಗುರುದ್ರೋಣರು ಯುದ್ಧ ಭೂಮಿಯಲ್ಲಿ ಮಡಿದು ಬಿದ್ದುದನ್ನು ಕಂಡು 'ಎನ್ನಯ ದೂಸಱಿನೆನ್ನ ಕರ್ಮದಿಂದ ಪಗೆವರಿನಕ್ಕಟಾ ನಿಮಗಮಿಾಯಿರವಾದುದೆ ಕುಂಭ ಸಂಭವಾ'[೧೦] ಎಂದು ದುಃಖಿಸುವನು. ತನ್ನ ಲೋಪ-ದೋಷಗಳನ್ನೆಂದೂ ಎಣಿಸದ ದುರ್ಯೋಧನನೀಗ ಮರುಗುವನು. ತಪ್ಪಿನ ಅರಿವಾಗಿ ಪಶ್ಚಾತ್ತಾಪ ಪಡುವನು. ಕರ್ಣ ಮಡಿದಾಗ 'ನೀನುಮಗಲ್ದೆಯಿನ್ನೆನಗೆ ಪೇೞ್ ಪೆಱರಾರೆನಗಾಸೆ...ನಿಂ ಪೊಱಗಾಗೆ ಬಾೞ್ವೆನೇ'[೧೧] 'ಒಡಲೆರಡೊಂದೆ ಜೀವಮಿವರ್ಗೆಂಬುದನೆಂಬುದು ಲೋಕ ಮಿಾಗಳಾನುಡಿ ಪುಸಿಯಾಯ್ತು'[೧೨] ಎಂದು ದುಃಖಿಸುವನು. ತನಗೆ ಕರ್ಣನಾರೆಂಬುದು ಗೊತ್ತಿದ್ದರೂ, ತನ್ನ ಸ್ವಾರ್ಥಕ್ಕಾಗಿ ಅದನ್ನುರಹಸ್ಯವಾಗಿಯೇ ಉಳಿಸಿಕೊಂಡು ಬಂದುದು ಆತನಿಗೆ ಈಗ ನೋವನ್ನುಂಟುಮಾಡುವುದು. ನಿನ್ನನ್ನು ಪಾಂಡವರು ಕೊಲ್ಲಲಿಲ್ಲ ನಾನೇ ಕೊಂದೆನೆಂದು ನುಡಿದು ಸ್ವವಿಮರ್ಶೆ ಮಾಡಿಕೊಳ್ಳುವನು. ಕರ್ಣನೊಂದಿಗಿದ್ದ ಆತನ ಸ್ನೇಹ ಸ್ವಾರ್ಥಪರವಾದರೂ

---

೭ ಪಂಪಭಾರತಂ : ದ್ವಾದಶಾಶ್ವಾಸಂ . ಪ : ೨೧೭

೮. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೨, ಪುಟ : ೯೭ ಬೆಂ.ವಿ.ವಿ

೯. ಮಹಾಕವಿ ರನ್ನ ಹಾಗೂ ಅವನ ಕೃತಿಗಳು, ಪುಟ-೭೦, ಕ.ವಿ.ವಿ. ಪುಸ್ತಕಮಾಲೆ -೨

೧೦. ಪಂಪಭಾರತಂ, ತ್ರಯೋದಶಾಶ್ವಾಸಂ ಪದ್ಯ : ೫೭

೧೧. ಪಂಪಭಾರತಂ ತ್ರಯೋದಶಾಶ್ವಾಸಂ, ಪದ್ಯ:೩,

೧೨. 'ಪಂಪಭಾರತಂ' 'ತ್ರಯೋದಶಾಶ್ವಾಸಂ' ಪದ್ಯ:೪

ಆತ್ಮೀಯವಾದುದು, ಅನ್ಯೋನ್ಯವಾದುದು. ಒಮ್ಮೆ ಲೆತ್ತಮನಾಡುವಾಗ ಭಾನುಮತಿ ಕರ್ಣನಿಗೆ ಸೋಲಲು ಆತ ಸೋಲನ್ನೊಪ್ಪಿಸೆಂದು ಛೇಡಿಸುವನು. ಆಕೆಯ ಕೊರಳೊಳಗಿನ ಮುತ್ತಿನ ಹಾರ ಹರಿಯುವುದು. ಮುತ್ತುಗಳು ಬೀಳುವವು ಆಗ ಕರ್ಣ ಹೆದರಿ ಅವುಗಳನ್ನು ನೋಡುತ್ತ ನಿಲ್ಲಲು, ದುರ್ಯೋಧನ 'ಏನುನೋಡ್ತಿಯೋ ಆರಿಸಿಕೊಡು' ಎನ್ನುವನು[೧೩] ಈ ಸಂದರ್ಭವೊಂದೇ ಸಾಕು. ಅವರ ಮೈತ್ರಿ ಎಂಥದೆನ್ನಲು, ದುರ್ಯೋಧನನ ಇಂಥ ಮಾನವೀಯ ಗುಣಗಳನ್ನೆತ್ತಿ ಹೇಳಿದುದು ಪಂಪನ ವೈಶಿಷ್ಟ್ಯ, ಇದಕ್ಕೆ ಇನ್ನಷ್ಟು ಮೆರುಗುಕೊಟ್ಟವನು ರನ್ನ.

ಈ ರನ್ನ ದುರ್ಯೋಧನನನ್ನು ಮಾನವತೆಯ ಸಾಕಾರ ಮೂರ್ತಿ ಯಾಗಿಸಿದ್ದಾನೆ. ಗದಾಯುದ್ಧದ ನಾಯಕನಾದ ಭೀಮನಿಗಿಂತಲೂ ದುರ್ಯೋಧನನೇ ಸಹೃದಯರ ಮನಸ್ಸನ್ನು ತುಂಬಿ ಅವರ ಅನುಕಂಪೆಗೆ ಪಾತ್ರನಾಗುವನು. ವ್ಯಾಸರ ದುರ್ಯೋಧನ ಯುದ್ಧದಲ್ಲಿ ತನ್ನೆಲ್ಲ ಬಾಂಧವರನ್ನು ಸೈನ್ಯವನ್ನು ಕಳೆದುಕೊಂಡಾಗ ಪಾಂಡವರಿಗೆ ಹೆದರಿ ರಣಭೂಮಿಯಿಂದ ಕಾಲ್ದೆಗೆಯುವನು. ವಿಸ್ರಾಂತಿಯ ನೆಪವೊಡ್ಡಿ ವೈಶಂಪಾಯನ ಸರೋವರದಲ್ಲಿ ಅಡಗಿಕೊಳ್ಳುವನು. ರನ್ನನ ದುರ್ಯೋಧನ ಹೀಗೆ ಹೇಡಿಯಲ್ಲ, ಸಾಹಸಿ, ಅಭಿಮಾನಧನ ಉದಾತ್ತ ಚರಿತ್ರ, ಸ್ನೇಹಜೀವಿ ಕೃತಜ್ಞ, ಮಾನವಾನುಕಂಪೆಯುಳ್ಳವ, ಇಂಥವನ ಜೀವನದ ಉತ್ತರಾರ್ಧವನ್ನು ರನ್ನ ಬಹುದುಃಖಕರವಾಗಿ ಚಿತ್ರಿಸಿದ್ದಾನೆ.

ಏಕದಶಾಕ್ಷೋಹಿಣೀ ಪತಿಯಾದ ದುರ್ಯೋಧನ ದೇಸಿಗನಂತೆ ಸಂಜಯನೊಡನೆ 'ಭಿಂಡಿವಾಳದಂಬಿನ ಕರವಾಳ ಕಕ್ಕಡೆಯ'[೧೪] ಅಲಗುಗಳಿಂದ ತುಂಬಿದ ಸಮರ ಭೂಮಿಯಲ್ಲಿ ನಡೆದು ಬರುತ್ತಿದ್ದ. ಸಂಜಯನು ಸಹಿಸಲಾರದೆ 'ಕಾಂಚನ ಕಮಲಾಯಮಾನಮಿವು ನಿಮ್ಮಯ ಮೆಲ್ಲಡಿ ವಿಧಾತ್ರ ವಶದಿಂದ ನಿಮಗಂ ನಡೆವಂತುಂಟಾದುದೇ ?'[೧೫] ಎಂದು ಗಳಗಳ ಕಣ್ಣೀರು ಸುರಿಸುವನು. ಇದಕ್ಕುತ್ತರವಾಗಿ ನುಡಿದ ದುರ್ಯೋಧನನನ ನುಡಿ ಎಂಥ ಕಲ್ಲೆದೆಯವರನ್ನೂ ಕರಗಿಸುವಂಥದು. ಯುದ್ಧಭೂಮಿಯಲ್ಲಿ ಮಡಿದನನ್ನ ಬಾಂಧವರ ಸಾವು ನನ್ನ ಹೃದಯವನ್ನಿರಿಯದು ಇನ್ನು ಈ ಆಯುಧಗಳಿಂದೇನು ನೋವಾಗುವುದು ?[೧೬] ಎಂದು ತನ್ನ ಕಠಿಣ ಹೃದಯವನ್ನು ಜರೆಯುತ್ತ ಮುನ್ನಡೆಯುವನು; ಮಡಿದು ಬಿದ್ದ ದ್ರೋಣರನ್ನು ಕಂಡು ಆತನಿಗೆ ದುಃಖ ಉಮ್ಮಳಿಸಿ ಬರುವುದು. ಹಿಂದೆ ತಾನವರಿಗೆ ಜೋಳದ ಪಾಟಿಯನ್ನರಿಯದ ನೆನೆಯದ ಕೃತಘ್ನರೆಂದು ಮೂದಲಿಸಿದುದು ತಪ್ಪೆಂದು ಪಶ್ಚಾತ್ತಾಪ ಪಡುವನು. ಅವರ ಸಾವಿಗೆ ತಾನೇ ಕಾರಣನೆಂದೂ, ಎಲ್ಲವೂ ತನ್ನ ಕರ್ಮಫಲವೆಂದೂ ನುಡಿಯುವನು. ಮುಂದೆ ಶತ್ರುಕುಮಾರನಾದ ಅಭಿಮನ್ಯುವಿನ ಶವವನ್ನು ಕಾಣುವನು. ಅವನ ಸಾಹಸವನ್ನು ಮೆಚ್ಚಿಕೊಂಡಾಡಿ ಆತನಂತೆ ತನಗೂ ಸಾಹಸದ ಸಾವು ಬರಲೆಂದು ಆತನಿಗೆ ಕೈಮುಗಿದು ಬೇಡಿಕೊಳ್ಳುವನು. ತನ್ನ ಮಗನಾದ ಲಕ್ಷಣಕುಮಾರನ ಶವವನ್ನು ಕಂಡು :

---

೧೩. ಪಂಪಭಾರತಂ ನವಮಾಶ್ವಾಸಂ

೧೪. ಗದಾಯುದ್ಧಂ'ಚತುರ್ಥಾಶ್ವಾಸಂ. ಪದ್ಯ:೧೮

೧೫. ಗದಾಯುದ್ಧಂ ಚತುರ್ಥಾಶ್ವಾಸಂ, ಪದ್ಯ -೧೮

೧೬. ಗದಾಯುದ್ಧಂ ಚತುರ್ಥಾಶ್ವಾ ಸಂ. ಪದ್ಯ-೧೯

"ಜನಕಂಗೆ ಜಲಾಂಜಲಿಯಂ
ತನೂಭವಂ ಕುಡುವುದುಚಿತಮದುಗೆಟ್ಟೀಗಳ್
ನಿನಗಾಂ ಕುಡುವಂತಾದುದೆ
ತನೂಜ ನೀಂ ಕ್ರಮ ವಿಪರ್ಯಯಂ ಮಾಡುವುದೇ ॥[೧೭]

ಎಂದು ರೋಧಿಸುವ ದಾರುಣ ಚಿತ್ರ ಕರುಳಿರಿಯುವಂಥದು. ದುಶ್ಶಾಸನನ ಶವವನ್ನು ಕಂಡಾಗಲೂ ಹೀಗೆಯೇ ದುಃಖಿಸುವನು. ಕರ್ಣನ ಶವವನ್ನು ಕಂಡಾಗಲಂತೂ ಆತನ ದುಃಖದ ಕಟ್ಟೆಯೊಡೆಯುವುದು. ಸ್ನೇಹಿತನ ಒಡನಾಟವನ್ನು ಸ್ಮರಿಸಿಕೊಂಡು ಹಲುಬುವನು.

'ಅನೃತಂ ಲೋಭಂ ಭಯಮೆಂ
ಬಿನಿತುಂ ನೀನಿರ್ದನಾಡೊಳಿರ್ಕುಮೆ ರವಿನಂ
ದನ ನನ್ನಿಚಾಗಮಣ್ಮಿಂ
ಬಿನಿತರ್ಕಂ ನೀನೆ ಮೊತ್ತ ಮೊದಲಿಗನಾದಯ್ ॥[೧೮]

ನಿನ್ನನ್ನು ಕಳೆದುಕೊಂಡ ನನಗೆ ರಾಜ್ಯ, ಪಟ್ಟ, ಬೆಳ್ಗೊಡೆಗಳೆಲ್ಲ ನಿರುಪಯುಕ್ತವೆಂದು ಪ್ರಲಾಪಿಸುವ ದುರ್ಯೋಧನನ ನಿಷ್ಕಪಟ ಹೃದಯದ ದರ್ಶನವಾಗುವುದು. ಅವರ ಸ್ನೇಹವೆಂಥದೆಂಬುದು ವಿದಿತವಾಗುವುದು. 'ಕರ್ಣನ ವಿಷಯಕವಾದ ವಿಲಾಪವು ಬರಿಯ ಭಾವೋದ್ರೇಕವಾಗಿರದೆ ಆತನ ಜೀವನದ ರಹಸ್ಯವನ್ನರಿತು ಪಡೆದ ತಿಳಿವಾಗಿದ್ದುದು ದುರ್ಯೋಧನನ ಸಂಸ್ಕೃತಿಯನ್ನು ತೋರುತ್ತದೆ.[೧೯] ಇಲ್ಲಿ ರನ್ನನು ಮಾನವ ಸ್ವಭಾವದ ವೈಚಿತ್ರ್ಯವನ್ನು ಹೃದಯಂಗಮವಾಗಿ ತೋರಿಸಿದ್ದಾನೆ.

ತಾನು ಪಾಪಕರ್ಮವೆಂದೂ ತಪ್ಪುದಾರಿಯಲ್ಲಿ ಅಡಿ ಇಡುತ್ತಿರುವೆನೆಂದೂ ದುರ್ಯೋಧನನಿಗೆ ಗೊತ್ತು. ಆದರೂ ಆತ ಸಹೋದರರ ಸಾವಿನ ಸೇಡಿಗಾಗಿ ಪಾಂಡವರೊಡನೆ ಯುದ್ಧ ಮಾಡುವೆನೆನ್ನುವನು. ದೈವಬಲವಿಲ್ಲದ ಆತನ ಹೋರಾಟ ಪ್ರವಾಹದ ವಿರುದ್ಧ ಈಜುವಂಥದು. ಆತನ ಅಂತ್ಯವನ್ನಂತೂ ರನ್ನ ಕರುಣಾಜನಕವಾಗುವಂತೆ ವರ್ಣಿಸಿದ್ದಾನೆ. ಗದಾಯುದ್ಧದಲ್ಲಿ ಭೀಮ ಮೂರ್ಛೆ ಹೋಗಿ ಬಿದ್ದಾಗ ದುರ್ಯೋಧನ ಆತನನ್ನು ಹೊಡೆಯದೆ, ಇದು ಧರ್ಮಯುದ್ಧವೆನ್ನುವನು. 'ಇಜೆಯೆಂ ಬಿಳ್ದನನ್'[೨೦] ಎಂದು ಗಾಳಿ ಹಾಕಿ ಆತನನ್ನು ಎಬ್ಬಿಸುವನು. ಆದರೆ ಭೀಮ, ದುರ್ಯೋಧನನ ತೊಡೆಯು ಆತನ ಮರ್ಮಸ್ಥಳವೆಂಬುದನ್ನು ಕೃಷ್ಣನ ಸನ್ನೆಯಿಂದ ತಿಳಿದು ಗದಾಯುದ್ಧದ ನಿಯಮ ಮೀರಿ ತೊಡೆಗೆ ಹೊಯ್ದು ಕೆಳಗುರುಳಿಸಿ, ಆತನ ಕಿರೀಟವನ್ನೊದೆದು ತನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸುವನು. ಈ ಸಂದರ್ಭದಲ್ಲಿ ಸಹೃದಯರಿಗೆ ಭೀಮನ ಬಗೆಗೆ ಜಿಗುಪ್ಸೆಯೂ ದುರ್ಯೋಧನನ ಬಗ್ಗೆ ಸಹಾನುಭೂತಿಯೂ ಉಂಟಾಗುವುದು. ರನ್ನ ಈ ರೀತಿ ಸಹೃದಯರೆದುರು ಭೀಮನ ಪಾಶವೀವೃತ್ತಿಯನ್ನು ಕೌರವನ ಘನತೆಯನ್ನು ವ್ಯಕ್ತಪಡಿಸಿದ್ದಾನೆ. ಇದು ಆತನ ಮಾನವೀಯ ದೃಷ್ಟಿಗೆ ಶ್ರೇಷ್ಠ ನಿದರ್ಶನ.

---

೧೭. ಗದಾಯುದ್ಧಂ ಚತುರ್ಥಾಶ್ವಾಸಂ ಪ : ೬೨
೧೮. ಗದಾಯುದ್ಧಂ, ಪಂಚಮಾಶ್ವಾಸಂ, ಪ.೧೮
೧೯. ಮುಗಳಿ ರಂ. ಶ್ರೀ. 'ರನ್ನನ ಕೃತಿರತ್ನ' ಪು.೮೮
೨೦. ಗದಾಯುದ್ಧಂ. ಅಷ್ಟಮಾಶ್ವಾಸಂ. ಪ. ೩೨

ಪಂಪ-ರನ್ನರ ದುರ್ಯೋಧನನಂತೆಯೇ ನಾಗಚಂದ್ರನ ರಾವಣನೂ ದುರಂತನಾಯಕ. ಸಹೃದಯರ ಅನುಕಂಪೆಗೆ ಪಾತ್ರನಾದವ. ಸೀತೆಯನ್ನು ಈತ ಮೋಹಿಸಿದ್ದು ದೈವ ದುರ್ವಿಪಾಕದಿಂದ. ಧರ್ಮಪರನೂ ನೀತಿವಂತನೂ ಆಗಿದ್ದ ರಾವಣನು ಪರಾಂಗನಾ ವಿರತಿವ್ರತವನ್ನು ಕೈಕೊಂಡ ಸಚ್ಚರಿತ್ರ. ಹಿಂದೆ ಹಲವು ವಿದ್ಯಾಧರ ಸ್ತ್ರೀಯರೂ ಮಾನವ ಸ್ತ್ರೀಯರೂ ದೇವಕನ್ಯೆಯರೂ ತಾವಾಗಿ ಒಲಿದು ಬಂದಿದ್ದರೂ ನಿರಾಕರಿಸಿದವ. ನಳಕೂಬರನ ರಾಣಿ ಈತನ ಮೇಲೆ ಮೋಹಗೊಂಡು ದೂತಿಯನ್ನು ಕಳಿಸಿದಾಗ, ರಹಸ್ಯವಾಗಿ ಆಕೆಯನ್ನೇ ಕರೆಸಿ, 'ನೀನು ರಾಜನ ಪತ್ನಿ, ಶ್ರೇಷ್ಠ ಕುಲದವಳು. ಶೀಲವನ್ನು ಕಾಪಾಡಿಕೊಂಡು ಹೋಗು. ನಿನ್ನ ಪತಿಗೆ ದ್ರೋಹ ಬಗೆಯಬೇಡ' ಎಂದು ಧರ್ಮೋಪದೇಶ ಮಾಡಿ ಕಳಿಸಿದವ. ಇಂಥ ಜಿತೇಂದ್ರಿಯನಾದ, ಉದಾತ್ತಚರಿತನಾದ ರಾವಣನ ಚಿತ್ತವನ್ನು ಸೀತೆಯ ಹೊಳಪಿನ ಕಣ್ಣುಗಳು ಕಲಕುವದು. ಆ ಕ್ಷಣ ತನ್ನ ಪರಾಂಗನಾ ವಿರತಿ ವ್ರತವನ್ನು ಮರೆಯುವನು. ಕರ್ಮ ವಿಪಾಕದಿಂ ವಿಧಿಯ ಕೈಗೊಂಬೆಯಾಗಿ ಪಾತಕಿಯಾಗುವನು. 'ಅಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ'[೨೧] ಎಂಬಂತೆ ರಾವಣನಲ್ಲಿ ದುರ್ಬುದ್ಧಿ ಅಂಕುರಿಸುವುದು. ಸೀತೆಯನ್ನು ಕದ್ದೊಯ್ದು ಲಂಕೆಯಲ್ಲಿಟ್ಟು ಅವಳ ಮನವೊಲಿಸಲೆತ್ನಿಸುವನು. ಅವಳು ಒಲಿಯದಾಗಲು, ರಾಮನ ಯೋಚನೆಯನ್ನು ಬಿಟ್ಟು ಬಿಡು ಎಂದು ಹೆದರಿಸುವನು. ಆಗ ಆಕೆ 'ರಾಮನ ಪ್ರಾಣಾಪಹರಣ ಮಾತ್ರ ಮಾಡಬೇಡ'ವೆನ್ನುತ್ತ ಮೂರ್ಛೆ ಹೋಗುವಳು. ಇದನ್ನು ಕಂಡು ಆತನಿಗೆ ಸೀತೆಯ ಮೇಲೆ ಅನುಕಂಪೆ ಹುಟ್ಟುವುದು. ಅವನ ಕಲುಷಿತ ಮನಸ್ಸು 'ಕದಡಿದ ಸಲಿಲಂ ತಿಳಿವಂದದೆ'[೨೨] ತಿಳಿಯಾಗುವುದು.

''ರಾಮನಿನಗಲ್ಚಿ ತಂದಾ
ನೀ ಮಾನಿನಿಗಿನಿತು ದುಃಖಮಂ ಪುಟ್ಟಿಸಿದೆಂ
ಕಾಮ ವ್ಯಾಮೋಹದಿನಾ
ಶಾ ಮುಖಮಂ ಪುದಿಯೆ ದುರ್ಯಶಃ ಪಟಹ ರವಂ[೨೩]

ಎಂದು ದುಃಖಿಸುವನು. ತಾನು ಮಾಡಿದ ತಪ್ಪಿಗೆ ತನ್ನನ್ನೇ ನಿಂದಿಸಿಕೊಂಡು ಪಶ್ಚಾತ್ತಾಪ ಪಡುವನು. ಸೀತೆಯನ್ನು ಮರಳಿ ರಾಮನಲ್ಲಿಗೆ ಕಳಿಸಬೇಕೆನ್ನುವನು. ಮತ್ತೆ ಯೋಚಿಸಿ, ಈಗಲೇ ಕಳಿಸಿದರೆ ತನ್ನ ಶೌರ್ಯ ಪರಾಕ್ರಮ, ಬಿರುದುಗಳು ರಾಮ ಲಕ್ಷ್ಮಣರಿಗೆ ಗೊತ್ತಾಗುವುದಿಲ್ಲ. ಯುದ್ಧದಲ್ಲಿ ಅವರನ್ನು ಸೋಲಿಸಿ ರಾವಣ ಯಾವುದೋ ಕಹಿಗಳಿಗೆಯಲ್ಲಿ ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪ ಪಡುವ ಉದಾತ್ತ ವ್ಯಕ್ತಿಯಂತೆ ಚಿತ್ರಿತನಾಗಿದ್ದಾನೆ.

ಜನ್ನ ತನ್ನ 'ಯಶೋಧರ ಚರಿತೆ' ಮತ್ತು 'ಅನಂತನಾಥ ಪುರಾಣ'ಗಳಲ್ಲಿ ವಿಷಮ ಪ್ರಣಯದ ಭೀಷಣ ದುರಂತ ಚಿತ್ರವನ್ನು ಸಹೃದಯರ ಮರುಕಕ್ಕೆಪಾತ್ರವಾಗುವ ಹಾಗೆ ಬಿಡಿಸಿದ್ದಾನೆ. ಮಾನವೀಯ ದೌರ್ಬಲ್ಯವನ್ನು ನೈಜವಾಗಿ ಅಭಿವ್ಯಕ್ತಪಡಿಸಿದ್ದಾನೆ. 'ಯಶೋಧರ ಚರಿತೆ'ಯಲ್ಲಿ ತನ್ನ ಪತಿಗೆ ದ್ರೋಹವೆಸಗಿ ಅಷ್ಟಾವಕ್ರನೊಡನೆ ಅನೈತಿಕ ಸಂಬಂಧ ಹೊಂದಿದ ಅಮೃತಮತಿ ಕ್ಷಮೆಗೆ ಅರ್ಹಳಲ್ಲವಾದರೂ ಕವಿಯು ಅವಳ ಪಕ್ಷವಹಿಸಿ ಬೆಂದ ಬಿದಿಗೆ ಕಣ್ಣಿಲ್ಲಕ್ಕು[೨೪] ಮನಸಿಜನ ಮಾಯೆ ವಿಧಿವಿಳಸನದ ನೆರಬಂಡೆಯೆ ಕೊಂದು ಕೂಗದೇ ನರರಂ'[೨೫] ಎಂದು ಉದ್ಗಾರ ತೆಗೆದಿರುವನು.

---

೨೧. ಪಂಪರಾಮಾಯಣ ಸಂಗ್ರಹ, ಸೀತಾಹರಣಂ, ಪದ್ಯ:೪೮
೨೨. ಪಂಪರಾಮಾಯಣ ಸಂಗ್ರಹಂ - 'ರಘುವೀರ ವಿಜಯಂ'
೨೩. ಪಂಪರಾಮಾಯಣ ಸಂಗ್ರಹ, ರಘುವೀರವಿಜಯ, ಪದ್ಯ : ೪೮
೨೪. ಯಶೋಧರ ಚರಿತೆ, ಅವತಾರ-೨, ಪದ್ಯ : ೪೨
೨೫. ಯಶೋಧರ ಚರಿತೆ, ಅವತಾರ -೨, ಪದ್ಯ : ೧೬

ಅಮೃತಮತಿ ತನ್ನ ಪತಿಗೆ ದ್ರೋಹವೆಸಗಿ ಅಷ್ಟಾವಕ್ರನಿಗೆ ಮನಸೋತರೆ, ಅನಂತನಾಥ ಪುರಾಣ'ದಲ್ಲಿ ಚಂಡಶಾಸನ ತನಗೊಲಿಯದ ತನ್ನ ಮಿತ್ರನ ಮಡದಿ ಸುನಂದೆಯ ಮೇಲೆ ಮೋಹಗೊಂಡು ಆತನಿಗೆ ದ್ರೋಹವೆಸಗುವನು. ಆಕೆಯನ್ನು ಕದ್ದೊಯ್ದು 'ನಾನು ನಿನ್ನ ಗಂಡುದೊತ್ತು. ನಿನಗೆ ಎರಡಿಲ್ಲದೆ ಒಲಿದಿದ್ದೇನೆ' ಎಂದು ಚಂಡಶಾಸನ ಅವಳನ್ನು ಒಲಿಸಿಕೊಳ್ಳಲೆತ್ನಿಸುವುದನ್ನು ಕಂಡಾಗ ಸಹೃದಯರಿಗ ಆತನ ಮೇಲೆ ಅನುಕಂಪ ಉಂಟಾಗುವುದು. ಆತನ ವ್ಯಾಮೋಹದ ಉತ್ಕಟತೆ ವ್ಯಕ್ತವಾಗುವುದು. ಹೇಗಾದರೂ ಮಾಡಿ ಅವಳನ್ನು ಒಲಿಸಿಕೊಳ್ಳಬೇಕೆಂದು ಅವಳ ಪತಿಯ ಮಾಯಾಶಿರವನ್ನು ತೋರಿಸುವನು. ಅದನ್ನು ಕಂಡು ಅವಳು ಮೂರ್ಛೆ ಹೋಗುವಳು. ಅನಂತರ ಅವಳ ಪ್ರಾಣವೂ ಹೋಗುವುದು. ಆಗ ಚಂಡಶಾಸನ 'ಕೂಡುವೆಂ ಬೆರಗಿಂದಿಂದಿದನಿಂತು ಮಾಡೆ ಮರಣಂ ಮೂಡಿತ್ತು ಹೋ ಬೆಂದೆನಾ'[26] ಎಂದು ಶೋಕಿಸುತ್ತ ಅವಳ ದೇಹವನ್ನಪ್ಪಿಕೊಂಡು ತಾನೂ ಮೂರ್ಛೆ ಹೋಗುವನು. ಆಮೇಲೆ ಎಚ್ಚೆತ್ತು 'ದೇವಿ ನಿಮ್ಮನಂ ನೋಡುವೆ ಸಾವಿನಂ ಸರಸವಾಡುವರೇ ಮರು ಮೆಯ್ಯೊಳಾದೊಡಂ ಕೂಡದೇ ಮಾಣೆನಬ್ಜದಳ ಲೋಚನೆ'[27] ಎನ್ನುವನು ಮುಂದಿನ ಜನ್ಮದಲ್ಲಾದರೂ ಕೂಡುವೆನೆಂದು ಅವಳೊಡನೆ ಸಹಗಮನ ಮಾಡುವನು.

ಚರಿತ್ರೆಯಲ್ಲಿ ಸತಿಯು ಪತಿಯೊಡನೆ ಸಹಗಮನ ಮಾಡಿದ ಉದಾಹರಣೆಗಳಿವೆಯೇ ಹೊರತು ಗಂಡು ಹೆಣ್ಣಿನೊಡನೆ-ಅದರಲ್ಲೂ ತನಗೊಲಿಯದ ಮಿತ್ರನ ಮಡದಿಯೊಡನೆ ಸಹಗಮನ ಮಾಡಿದ್ದು ಒಂದು ವಿಚಿತ್ರ ಸಂಗತಿ. ಚಂಡಶಾಸನನ ವಿಷಯಲಂಪಟತೆ, ಅದರಿಂದ ಆತ ಗೈದ್ದು ಅಪರಾಧ ಅಕ್ಷಮ್ಯವೇ ಸರಿ. ಆದರೂ ಆತ ಸುನಂದೆಯೊಡನೆ ಸಹಗಮನ ಮಾಡಿ ಅಗ್ನಿಸ್ಪರ್ಶದಿಂದ ಪರಿಶುದ್ಧನೇ ಆದನೆನ್ನುವುದು ಕವಿಯ ಅಭಿಮತ.

ವ್ಯಕ್ತಿ ಎಷ್ಟೇ ದೋಷಪೂರ್ಣನಾದರೂ ಕಾಲಗತಿಯಲ್ಲಿ ಆತನಿಗೆ ವಿವೇಕೋದಯವಾಗಿ ಆತ ಒಳ್ಳೆಯವನೂ ಆಗಬಹುದು. ತಪ್ಪು ಮಾಡಿದ ಮಾತ್ರಕ್ಕೆ ಆತನನ್ನು ಹೀನಾಯವಾಗಿ ಕಾಣದೆ ಅನುಕಂಪೆಯಿಂದ ಕಾಣಬೇಕೆಂಬುದು ಜೈನ ಕವಿಗಳ ದೃಷ್ಟಿ. ಇಂಥ ಮಾನವೀಯ ದೃಷ್ಟಿಯಿಂದ ಹೊಂದಿದ ಅವರು ದುಷ್ಟರನ್ನು, ಕಾಮುಕರನ್ನು ಶಿಷ್ಟರಂತೆ, ಜಿತೇಂದ್ರಿಯರಂತೆ ಕಂಡು ಮಾನವರಂತೆ ಚಿತ್ರಿಸಿದ್ದಾರೆ. ದುರ್ಯೋಧನ, ರಾವಣನಂಥವರು ತಾವು ಮಾಡಿದ್ದು ತಪ್ಪೆಂದು ಪಶ್ಚಾತ್ತಾಪಪಟ್ಟು ವಿವೇಕೋದಯವುಳ್ಳವರಾಗುವರು. ಸತ್ಯ, ತ್ಯಾಗ, ಪೌರುಷಗಳ ಸಾಕಾರಮೂರ್ತಿಯಾದ ಕರ್ಣ ದೈವದ ಕಾಲ್ತುಳಿತಕ್ಕೆ ಸಿಕ್ಕು ದುರಂತ ಸಾವನ್ನಪ್ಪಿದಾಗ, ತನಗೊಲಿಯದ ಮಿತ್ರನ ಸತಿಯೊಡನೆ ಚಂಡಶಾಸನ ವಿಚಿತ್ರ ರೀತಿಯಲ್ಲಿ ಸಹಗಮನ ಮಾಡಿದಾಗ ಅವರ ಬಗ್ಗೆ ಅನುಕಂಪೆ ತೋರಿದ್ದಾರೆ. ಜೈನ ಕವಿಗಳು ಇಂಥ ದುರಂತ ಪಾತ್ರಗಳಲ್ಲೂ ಮಾನವೀಯ ಭಾವಗಳ ಅವತರಣವಿರುವುದನ್ನು ಎತ್ತಿತೋರಿಸಿ ಅವರ ಉದ್ಧಾರದ ಅಭೀಪ್ಸೆಯನ್ನೂ ವ್ಯಕ್ತಪಡಿಸಿದ್ದಾರೆ. ಈ ದೃಷ್ಟಿಯೇ ಅವರನ್ನು ಜಗತ್ತಿನ ಮಾನವತಾವಾದಿ ಕವಿಗಳ ಸಾಲಿನಲ್ಲಿ ನಿಲ್ಲುವಂತೆ ಮಾಡಿದೆ.

---

೨೬. 'ಅನಂತನಾಥ ಪುರಾಣಂ' ಆಶ್ವಾಸ-೧೨, ಪದ್ಯ೭

೨೭. 'ಅನಂತನಾಥ ಪುರಾಣಂ' ಆಶ್ವಾಸ-೧೨, ಪದ್ಯ:೯,

# ಜೈನ ಶತಕ ಸಾಹಿತ್ಯ

ಡಾ॥ ಶ್ರೀಕೃಷ್ಣ ಭಟ್ ಅರ್ತಿಕಜೆ

ಭಾರತೀಯ ಸಾಹಿತ್ಯದಲ್ಲಿ ಶತಕವು ಒಂದು ಪ್ರತ್ಯೇಕ ಹಾಗೂ ವಿಶಿಷ್ಟ ಸಾಹಿತ್ಯ ಪ್ರಕಾರವಾಗಿ ಬೆಳೆದು ಬಂದಿದೆ. ಭಕ್ತಿ, ಜ್ಞಾನ, ವೈರಾಗ್ಯ, ಶೃಂಗಾರ, ತತ್ತ್ವ, ಧರ್ಮ, ಇತಿಹಾಸ ಮುಂತಾದ ಹಲವು ವಿಚಾರಗಳಿಗೆ ಸಂಬಂಧಿಸಿದ ಶತಕಗಳು ರಚನೆಯಾಗಿವೆ. ಪ್ರಾಕೃತ, ಸಂಸ್ಕೃತ, ಕನ್ನಡ, ತಮಿಳು, ತೆಲುಗು, ಮಲಯಾಳ, ಹಿಂದಿ ಮೊದಲಾದ ಭಾಷೆಗಳಲ್ಲಿ ಶತಕಗಳು ರಚನೆಯಾಗಿವೆ. ಸಂಸ್ಕೃತದಲ್ಲಿ ಪ್ರಧಾನವಾಗಿ ಸ್ತೋತ್ರ ಸಾಹಿತ್ಯವೆಂದು ಪ್ರಸಿದ್ಧವಾಗಿರುವ ಶತಕ ಉಗಮ ಎಲ್ಲಿ, ಯಾವಾಗ ಆಯಿತು ಎಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಆದರೂ ಈಗ ತಿಳಿದಿರುವ ಮಟ್ಟಿಗೆ ಶತಕವು ಮೊದಲು ಆರಂಭವಾದುದು ಪ್ರಾಕೃತದಲ್ಲಿ. ''ಶತಕ ಸಾಹಿತ್ಯವು ಪ್ರಾಕೃತ ಸಾಹಿತ್ಯದಲ್ಲಿ ಉಗಮಗೊಂಡು ಸಂಸ್ಕತ ಸಾಹಿತ್ಯದಲ್ಲಿ ಸರ್ವತೋಮುಖವಾಗಿ ಬೆಳೆದು ದ್ರಾವಿಡ ಭಾಷೆಗಳಲ್ಲಿ ತನ್ನ ತಣಿಯಾದ ಫಲಗಳನ್ನು ನೀಡಿದೆ ಎಂದು ಕಂಡು ಬರುತ್ತದೆ'' (ಬಿ.ವಿ. ಗುಂಜೆಟ್ಟಿ, ಕನ್ನಡದಲ್ಲಿ ಶತಕ ಸಾಹಿತ್ಯ ೧೯೭೨ಪು ೪೦೫) ಸಂಸ್ಕೃತ ಸಾಹಿತ್ಯದ ಪ್ರಭಾವದಿಂದ ಮುಂದೆ ಭಾರತದ ಇತರ ಅನೇಕ ಭಾಷೆಗಳಲ್ಲಿ ಈ ಸಾಹಿತ್ಯ ಪ್ರಕಾರದ ಸೃಷ್ಟಿಯಾಯಿತು.' 'ಪ್ರಾಕೃತ, ಸಂಸ್ಕೃತ ಭಾಷೆಗಳಲ್ಲಿ ಪ್ರಾಚೀನ ಕಾಲದಿಂದ ಶತಕಗಳು ರೂಢಿಯಲ್ಲಿದ್ದಂತೆ ಕಂಡುಬರುತ್ತದೆ. ಕ್ರಿ.ಶ. ೩ನೆಯ ಶತಮಾನದಲ್ಲಿ ಚೀಣಾ ಭಾಷೆಗೆ ಭಾಷಾಂತರಿಸಲ್ಪಟ್ಟ 'ಅವದಾನಶತಕ' ಎಂಬುದು ಪ್ರಾಕೃತ ಭಾಷೆಯಲ್ಲಿ ಈಗ ಉಪಲಬ್ಧವಾಗುವ ಗ್ರಂಥಗಳಲ್ಲಿ ಆದ್ಯ ಶತಕ ಗ್ರಂಥವೆಂದು ಹೇಳುತ್ತಾರೆ'' ಎಂಬುದಾಗಿ ಪ್ರೊಂಎಂ. ಮರಿಯಪ್ಪ ಭಟ್ಟರು ಅಭಿಪ್ರಾಯ ಪಟ್ಟಿದ್ದಾರೆ (ಕನ್ನಡ ಸಂಸ್ಕೃತಿ ೧೯೬೭ ಪು. ೧೯೨) ಭಾರತದ ಹೆಚ್ಚಿನ ಪ್ರಮುಖ ಭಾಷೆಗಳಲ್ಲಿ ಶತಕ ಸಾಹಿತ್ಯ ರಚನೆಯಾಗಿರುವಂತೆ ಕಂಡು ಬರುತ್ತದೆ. ಸಂಸ್ಕೃತ ಪ್ರಾಕೃತಗಳನ್ನು ಬಿಟ್ಟರೆ ಇತರ ಭಾಷೆಗಳಲ್ಲಿ ಕ್ರಿ.ಶ. ಹನ್ನೊಂದನೆಯ ಶತಮಾನದಿಂದೀಚೆಗೆ 'ಶತಕ' ಎನ್ನುವ ನಿರ್ದಿಷ್ಟ ಶೀರ್ಷಿಕೆಯಲ್ಲಿ ಕೃತಿರಚನೆಯಾಗಿರುವುದನ್ನುಕಾಣಬಹುದು. ಕನ್ನಡದಲ್ಲಿ ನಾಗವರ್ಮಾಚಾರ್ಯನಿಂದ ರಚಿತವಾದ ಚಂದ್ರಚೂಡಾಮಣಿ ಶತಕವೇ (ಕ್ರಿ.ಶ.೧೦೭೦) ಅತ್ಯಂತ ಪ್ರಾಚೀನ ಶತಕವೆಂದು ಪರಿಗಣಿತವಾಗಿದೆ. ದ್ರಾವಿಡ ಭಾಷೆಗಳಾದ ತಮಿಳು, ಕನ್ನಡ, ತೆಲುಗು ಹಾಗೂ ಮಲಯಾಳ ಭಾಷೆಗಳಲ್ಲಿ ಶತಕಗಳ ರಚನೆಯಾಗಿದ್ದರೂ ಸಂಖ್ಯಾದೃಷ್ಟಿಯಿಂದ ತೆಲುಗಿನಲ್ಲಿ ರಚಿತವಾಗಿರುವಷ್ಟು ಶತಕಗಳು ಬೇರೆಯಾವ ಭಾಷೆಯಲ್ಲಿಯೂ ಕಂಡು ಬರುವುದಿಲ್ಲ. ಆಂಧ್ರವಾಙ್ಮಯದಲ್ಲಿ ಶತಕಗಳಿಗೆ ವಿಶಿಷ್ಟ ಸ್ಥಾನವಿದೆ. ತೆಲುಗನ್ನು ಬಿಟ್ಟರೆ ತಮಿಳು, ಮಲಯಾಳ ಭಾಷೆಗಳಿಗಿಂತ ಕನ್ನಡದಲ್ಲಿ ಗುಣ, ಪ್ರಮಾಣ, ವಸ್ತು ಶೈಲಿ, ಛಂದಸ್ಸುಗಳ ವೈವಿಧ್ಯದೃಷ್ಟಿಯಿಂದ ಗಮನಾರ್ಹವಾದ ಶತಕ ಸಾಹಿತ್ಯದ ಸೃಷ್ಟಿಯಾಗಿದೆ. ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿರುವಷ್ಟು

ಅಧಿಕ ಸಂಖ್ಯೆಯ ಶತಕಗಳು ತಮಿಳು ಹಾಗೂ ಮಲಯಾಳಗಳಲ್ಲಿಲ್ಲ. ವಿದ್ವಾಂಸರ ಅಭಿಪ್ರಾಯದ ಪ್ರಕಾರ ಕನ್ನಡದಲ್ಲಿ ಸುಮಾರು ನಾಲ್ಕು ನೂರರಿಂದ ಐನೂರರವರೆಗೆ ಶತಕಗಳು ರಚಿತವಾಗಿದೆಯೆಂದು ಹೇಳಬಹುದು.

ಗಣನೀಯ ಸಂಖ್ಯೆಯಲ್ಲಿ ರಚಿತವಾಗಿರುವ ಕನ್ನಡ ಶತಕ ಸಾಹಿತ್ಯಕ್ಕೆ ವೀರಶೈವ, ಜೈನ, ಹಾಗೂ ಬ್ರಾಹ್ಮಣ ಕವಿಗಳು ತಮ್ಮದೇ ಆದ ವಿಶಿಷ್ಟ ಕೊಡುಗೆಗಳನ್ನು ನೀಡಿದ್ದಾರೆ. ಶತಕ ಸಾಹಿತ್ಯವು ಸಂಸ್ಕೃತದ ಸಂಪ್ರದಾಯಕ್ಕೆ ಅನುಗುಣವಾಗಿ ಹುಟ್ಟಿಬೆಳೆದರೂ ದ್ರಾವಿಡ ಭಾಷೆಗಳಲ್ಲಿ ಅದು ತನ್ನದೇ ಆದ ಸ್ವತಂತ್ರ ಮಾರ್ಗವನ್ನು ಅವಲಂಬಿಸಿರುವುದು ಕಂಡು ಬರುತ್ತದೆ. ಚಂಪೂ, ರಗಳೆ, ಷಟ್ಪದಿ, ತ್ರಿಪದಿ, ಸಾಂಗತ್ಯ, ಕೀರ್ತನೆ ಮೊದಲಾದ ಸಾಹಿತ್ಯ ಪ್ರಕಾರಗಳಂತೆ ಶತಕವೂ ಕನ್ನಡದ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರ. ಆದರೆ ಇದು ರಗಳೆ, ಷಟ್ಪದಿ, ತ್ರಿಪದಿ, ಸಾಂಗತ್ಯ ಮೊದಲಾದ ಸಾಹಿತ್ಯ ಪ್ರಕಾರಗಳಂತೆ ಛಂದಸ್ಸಿನ ಆಧಾರದಲ್ಲಿ ಗುರುತಿಸಲ್ಪಟ್ಟ ಪ್ರಕಾರಗಳಂತೆ ಗುರುತಿಸಲ್ಪಟ್ಟ ಪ್ರಕಾರವಲ್ಲ. ಪಂಡಿತ ಪಾಮರ ಹೃದಯ ರಂಜಕವಾದರೂ ಈ ಶತಕ ಕಾವ್ಯದಲ್ಲಿ ಇತರ ಸಾಹಿತ್ಯ ಪ್ರಕಾರಗಳಂತೆ ಕಥಾ ವಸ್ತುವಾಗಲೀ ನಾಯಕ, ನಾಯಿಕೆ ಮೊದಲಾದ ಪಾತ್ರಗಳ ಚಿತ್ರಣವಾಗಲೀ, ಪ್ರಧಾನವಾದೊಂದು ರಸ, ಅದಕ್ಕೆ ಪೋಷಕವಾದ ಇತರ ರಸಗಳ ನಿರೂಪಣೆಯಾಗಲಿ, ವಿವಿಧ ರೀತಿಯ ವರ್ಣನೆಗಳಾಗಲಿ ಇಲ್ಲ. ಆಕಾರದಲ್ಲಿ ಕಿರಿದಾದ ಇದು ಭಾವನಾತ್ಮಕವೂ ವೇದಾಂತ ತತ್ವ ಬೋಧಕವೂ ಭಕ್ತಿ, ನೀತಿ, ಶೃಂಗಾರ, ವೈರಾಗ್ಯ ನಿರೂಪಣಾತ್ಮಕವೂ ಆಗಿದೆ. ಶತಕಗಳನ್ನು ಸಾಮಾನ್ಯ ಕವಿಗಳಂತೆಯೇ ಕೆಲವು ಪ್ರಸಿದ್ಧ ಕವಿಗಳೂ ರಚಿಸಿದಾರೆ. ಶತಕಗಳು ಪಂಡಿತರನ್ನು ಪಾಮರರನ್ನು ಒಂದೇ ರೀತಿ ರಂಜಿಸಬಲ್ಲ ಗುಣಗಳನ್ನು ಹೊಂದಿವೆ. ಶತಕಗಳಲ್ಲಿ ಪ್ರತಿಯೊಂದು ಪದ್ಯವೂ ಸ್ವತಂತ್ರವಾಗಿದ್ದು ಮುಕ್ತಕದ ಲಕ್ಷಣದಿಂದ ಕೂಡಿರುತ್ತದೆ. ಶತಕ ಸಾಹಿತ್ಯವು ವಸ್ತುನಿಷ್ಠವಾದುದಲ್ಲ. ಅದು ವ್ಯಕ್ತಿನಿಷ್ಠವಾದುದೆಂದೂ ಮುಕ್ತಕದ ಲಕ್ಷಣದಿಂದ ಕೂಡಿದೆಯೆಂದೂ ಕೆಲವು ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ. (ಕನ್ನಡ ಶತಕ ಸಾಹಿತ್ಯ - ಕಾಶಿ ವಿಶ್ವನಾಥ ಶೆಟ್ಟಿ ೧೯೭೬ ಪು. ೧೫-೧೬) ಹರಿಹರ, ರತ್ನಾಕರವರ್ಣಿ ಮೊದಲಾದ ಪ್ರಸಿದ್ಧ ಕವಿಗಳು ತಮ್ಮ ಕಾವ್ಯದಲ್ಲಿ ನಿರೂಪಿಸಿದ ಆತ್ಮ ಕಥನ ವೈಯಕ್ತಿಕ ವಿಚಾರ ಧಾರೆಗಳು ಅವರ ಶತಕಗಳಲ್ಲಿ ಸ್ಪಷ್ಟವಾಗಿ ಒಡಮೂಡಿವೆ. ಶತಕಗಳಲ್ಲಿ ಹೆಚ್ಚಾಗಿ ಕಾವ್ಯಸೌಂದರ್ಯ ಹಾಗೂ ಉತ್ಕಟ ಭಾವೋನ್ನತಿಗಳ ಕೊರತೆ ಕಂಡು ಬರುತ್ತದೆ. ಆದರೆ ಕನ್ನಡದಲ್ಲಿ ಹರಿಹರ, ಮುಗ್ಗೆಯ ಮಾಯಿದೇವ, ರತ್ನಾಕರವರ್ಣಿಗಳಂತಹ ಬೆರಳೆಣಿಕೆಯ ಕವಿಗಳು ಮಾತ್ರ ಶತಕವನ್ನು ಕೂಡ ಉತ್ತಮ ಕಾವ್ಯವನ್ನಾಗಿ ಮಾಡಿದ್ದಾರೆ. ಶತಕವು ನೀತಿ ಪ್ರಧಾನವೂ, ತತ್ವಬೋಧಕವೂ ಆಗಿರುವುದಾದರೂ ಶೃಂಗಾರ ಹಾಗೂ ಭಕ್ತಿ ಶತಕಗಳಂತಹ ಹಲವು ಶತಕಗಳಲ್ಲಿ ಅಲ್ಲಲ್ಲಿ ಕಾವ್ಯಾಂಶವಿರುವುದನ್ನು ಕಾಣಬಹುದು. ಇದಕ್ಕೆ ಹರಿಹರ ಮತ್ತು ರತ್ನಾಕರವರ್ಣಿಯ ಶತಕಗಳೇ ನಿದರ್ಶನ. ಕನ್ನಡದಲ್ಲಿ ಶಾಸ್ತ್ರ ಕಾವ್ಯಗಳಿರುವಂತೆಯೇ ಶತಕವೂ ಒಂದು ಪ್ರತ್ಯೇಕವಾದ ಕಾವ್ಯ ಪ್ರಕಾರವಾಗಿದ್ದು ಅದು ತನ್ನದೇ ಆದ ಸ್ವತಂತ್ರ ಮಾರ್ಗದಲ್ಲಿ ನಡೆದುಬಂದಿರುವುದು ತಿಳಿಯುತ್ತದೆ.

ಶತಕವು ಸಂಖ್ಯೆ ಹಾಗೂ ಕಾವ್ಯದ ವಸ್ತುವನ್ನು ಪ್ರಧಾನವಾಗಿಟ್ಟುಕೊಂಡು ಬೆಳೆದು ಬಂದ ಸಾಹಿತ್ಯ ಪ್ರಕಾರವಾಗಿದೆ. ಅದು ಕೆಲವು ವಿಶಿಷ್ಟ ಲಕ್ಷಣಗಳಿಂದ ಕೂಡಿದೆ. ಡಾ|| ವಿ. ಶಿವಾನಂದ ಅವರು ಶತಕವನ್ನು ಕುರಿತು ''ನೂರು ಇಲ್ಲವೆ ನೂರಕ್ಕಿಂತ ತುಸು ಹೆಚ್ಚು ಕಡಿಮೆ ಇರುವ ಒಂದೇ ಮಕುಟವುಳ್ಳ ಕೆಲವೊಮ್ಮೆ ಇಲ್ಲದಿರುವ ವೃತ್ತ, ಪದ, ಪದ್ಯಗಳ ವಿಶಿಷ್ಟ ಸಾಹಿತ್ಯ ಪ್ರಕಾರವನ್ನು ಶತಕವೆಂದು ನಿರ್ಧರಿಸಬಹುದು.'' ಎಂದಿದ್ದಾರೆ (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ ೪

ಭಾಗ೩ ೧೯೭೭ ಪು. ೭೬೦) ಶತಕ ಕಾವ್ಯವು ನೂರು ಪದ್ಯಗಳಿಂದ ಕೂಡಿದ್ದು ಪ್ರತಿಯೊಂದು ಪದ್ಯದ ಕೊನೆಯಲ್ಲಿ ಇಷ್ಟದೈವದ ಅಂಕಿತ ಅಥವಾ ಮಕುಟವಿರುತ್ತದೆ. ಕನ್ನಡದ ಶತಕ ಕವಿಗಳು ಸಂಖ್ಯಾ ನಿಯಮ ಹಾಗೂ ಮಕುಟ ನಿಯಮಗಳನ್ನು ಶತಕ ಸಾಹಿತ್ಯದ ಮುಖ್ಯ ಲಕ್ಷಣಗಳೆಂದು ಪರಿಗಣಿಸಿದ್ದಾರೆ. ಸಂಸ್ಕೃತದ ಶತಕಗಳಲ್ಲಿ ಮಕುಟ ನಿಯಮವಿಲ್ಲ. ಅಂತೆಯೇ ಹಿಂದಿ ಹಾಗೂ ಮಲಯಾಳ ಶತಕಗಳಲ್ಲಿಯೂ ಈ ನಿಯಮವಿಲ್ಲದಿರುವುದು ಗಮನಾರ್ಹ. ಶತಕ ಎಂಬ ಸಾಹಿತ್ಯ ಪ್ರಕಾರಕ್ಕೆ ಇದೇ ಛಂದಸ್ಸಿನಲ್ಲಿರಬೇಕೆಂಬ ನಿರ್ಬಂಧವಿಲ್ಲ. ಕವಿಯು ತನ್ನ ಭಾವದ ಸಾರವನ್ನು ಹೇಳಲು ಸಮರ್ಥವಾದ ಯಾವ ಛಂದಸ್ಸಿನಲ್ಲಾದರೂ ಶತಕವನ್ನು ರಚಿಸಬಹುದು.

ಛಂದೋನಿಯಮದಲ್ಲಿ ಕನ್ನಡ ಶತಕ ಕವಿಗಳು ಮೊದ ಮೊದಲು ಸಂಸ್ಕೃತ ಶತಕ ಕವಿಗಳ ಮಾರ್ಗವನ್ನೇ ಅನುಸರಿಸಿದರೂ ಮುಂದೆ ತಮ್ಮದೇ ಆದ ಸ್ವತಂತ್ರ ಮಾರ್ಗವನ್ನು ಕಂಡು ಕೊಂಡರು. ಈ ರೀತಿ ಕನ್ನಡದ ಶತಕ ಸಾಹಿತ್ಯ ರಚನೆಯಲ್ಲಿ ವೈವಿಧ್ಯಕಂಡು ಬರುತ್ತದೆ. ಇತ್ತೀಚೆಗೆ ರಚಿತವಾದ ಕೆಲವು ಶತಕಗಳಲ್ಲಿ ನಿರ್ದಿಷ್ಟವಾದ ಛಂದಸ್ಸು ಇಲ್ಲದಿರುವುದು ಕಂಡುಬರುತ್ತದೆ. ಕೆಲವು ಕವಿಗಳು ತಮಗೆ ಇಷ್ಟಬಂದಂತೆ ಮುಕ್ತ ಛಂದಸ್ಸಿನಲ್ಲಿ ಶತಕಗಳನ್ನು ಬರೆದಿದ್ದಾರೆ. ಶತಕಗಳ ವಸ್ತು ಇಂತಹುದೇ ಆಗಬೇಕೆಂಬ ನಿರ್ಬಂಧವಿಲ್ಲ. ಆದರೂ ಕನ್ನಡದ ಪ್ರಮುಖ ಶತಕಗಳು ಭಕ್ತಿ, ಜ್ಞಾನ, ನೀತಿ, ವೈರಾಗ್ಯ ಮತತತ್ವ ಬೋಧಕವಾಗಿವೆ. ಕನ್ನಡದಲ್ಲಿ ಕೆಲವು ಶೃಂಗಾರ ಶತಕಗಳೂ ಇವೆ. ಸಂಖ್ಯಾ ನಿಯಮ ಮಕುಟನಿಯಮ, ಛಂದೋನಿಯಮಗಳನ್ನು ಪಾಲಿಸಿದಂತೆಯೇ ಕನ್ನಡದ ಹಿಂದಿನ ಕವಿಗಳು ವಸ್ತು ನಿಯಮವನ್ನು ಪಾಲಿಸುತ್ತಿದ್ದರು. ಆದರೆ ಮುಂದಿನ ಶತಕ ಕವಿಗಳು ತಮಗೆ ಇಷ್ಟಬಂದ ವಿಷಯಗಳಲ್ಲಿ ಶತಕಗಳನ್ನು ರಚಿಸತೊಡಗಿದರು. ಕನ್ನಡದಲ್ಲಿ ರಚಿತವಾದ ಹೆಚ್ಚಿನ ಶತಕಗಳಲ್ಲಿ ಕಂಡುಬರುವ ಲಕ್ಷಣಗಳ ಆಧಾರದಲ್ಲಿ ''ಮಕುಟವಿದ್ದು ಶತಸಂಖ್ಯೆಗಳಿಂದ ಕೂಡಿದ ಭಕ್ತಿ, ಜ್ಞಾನ, ವೈರಾಗ್ಯ, ನೀತಿ, ತತ್ತ್ವ, ಶೃಂಗಾರ ಮೊದಲಾದುವು ಗಳನ್ನು ನಿರೂಪಿಸುವ ಮುಕ್ತಕಗಳ ಸಮುದಾಯವೇ ಶತಕ' ಎಂದು ಶತಕಸಾಹಿತ್ಯ ಪ್ರಕಾರವನ್ನು ನಿರ್ವಚಿಸಬಹುದು.

ಶತಕಗಳಲ್ಲಿ ನಿರೂಪಿತವಾದ ವಿಷಯಗಳ ಆಧಾರದಲ್ಲಿ ಅವುಗಳನ್ನು ಭಕ್ತಿ ಜ್ಞಾನ ನಿರೂಪಕ ಶತಕಗಳು, ನೀತಿ ಶತಕಗಳು, ವೈರಾಗ್ಯ ಶತಕಗಳು, ಶೃಂಗಾರ ಶತಕಗಳು, ಮತ ಧರ್ಮ ತತ್ವ ನಿರೂಪಕ ಶತಕಗಳು, ಚಾರಿತ್ರಿಕ ಶತಕಗಳು, ಸಂಕೀರ್ಣ ಶತಕಗಳು ಮತ್ತು ಇತರ ಶತಕಗಳೆಂದು ವಿಭಾಗಿಸಬಹುದು. ಆದರೆ ಕೆಲವು ಶತಕಗಳಲ್ಲಿ ಒಂದಕ್ಕಿಂತ ಹೆಚ್ಚು ವಿಷಯಗಳು ನಿರೂಪಿತವಾಗಿರುವುದು ಕಂಡು ಬರುತ್ತದೆ. ವೀರಶೈವ, ವೈಷ್ಣವ, ಬ್ರಾಹ್ಮಣ, ಜೈನ ಮುಂತಾದ ಮತಕ್ಕೆ ಸಂಬಂಧಪಟ್ಟ ಅನೇಕರು ಶತಕಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಜೈನ ಮತಕ್ಕೆ ಸಂಬಂಧ ಪಟ್ಟ ಶತಕಗಳ ಸಂಖ್ಯೆ ಇತರ ಮತಗಳ ಶತಕಗಳಿಗಿಂತ ಕಡಿಮೆಯೆಂಬುದು ತಿಳಿದು ಬರುತ್ತದೆ. ಅಪರಾಜಿತೇಶ್ವರಶತಕ, ಆದಿನಾಥ ಶತಕ, ತ್ರಿಲೋಕ ಶತಕ, ನೀತಿ ರಸಾಯನ ಶತಕ, ಭಕ್ತಿ ಸಾರ ಶತಕತ್ರಯ, ರತ್ನಾಕರಾಧೀಶ್ವರ ಶತಕ, ಸುಮೇರು ಶತಕ, ಸ್ತನಶತಕ, ಜೈನ ವೈರಾಗ್ಯ ಶತಕ, ಶ್ರೀಧರ್ಮಸ್ಥಳ ಗೊಮ್ಮಟೇಶ್ವರ ಶತಕ, ಪರಂಜ್ಯೋತಿ ಶತಕ, ಪಾರ್ಶ್ವನಾಥ ಶತಕ, ಮಹಾವೀರ ಜೀವನ ಶತಕ ಮುಂತಾದುವು ಜೈನ ಶತಕಗಳೆಂದು ಅಭಿಪ್ರಾಯ ಪಡಲಾಗಿದೆ.

ಜೈನ ಶತಕಗಳಲ್ಲಿ ಅತ್ಯಂತ ಮಹತ್ವಪೂರ್ಣವಾದುವು ರತ್ನಾಕರ ವರ್ಣಿಯ ಶತಕ ತ್ರಯಗಳಾದ ರತ್ನಾಕರಾಧೀಶ್ವರ ಶತಕ, ಅಪರಾಜಿತೇಶ್ವರ ಶತಕ ಹಾಗೂ ತ್ರಿಲೋಕ ಶತಕಗಳು. ಈ ಮೂರು ಶತಕಗಳು ಸಪಾದ ಶತಕಗಳು. ಪ್ರತಿಯೊಂದು ಶತಕದಲ್ಲೂ ೧೨೮ ಪದ್ಯಗಳಿವೆ. ತ್ರಿಲೋಕ ಶತಕವು ಕಂದದಲ್ಲಿದ್ದು ಉಳಿದ ಎರಡು ಶತಕಗಳು ವೃತ್ತದಲ್ಲಿ ರಚಿತವಾಗಿವೆ. ರತ್ನಾಕರ ಶತಾಕದಲ್ಲಿನ ಪದ್ಯಗಳು ಶಾರ್ದೂಲ ಹಾಗೂ ಮತ್ತೇಭ ವಿಕ್ರೀಡಿತಗಳಲ್ಲಿಯೂ ಅಪರಾಜಿತ ಶತಕದಲ್ಲಿನ ಪದ್ಯಗಳು ಉತ್ಪಲಮಾಲಾ ಹಾಗೂ ಚಂಪಕಮಾಲಾ ವೃತ್ತಗಳಲ್ಲಿಯೂ ರಚಿತವಾಗಿವೆ. ರತ್ನಾಕರವರ್ಣಿಯು ತನ್ನ ಶತಕಗಳಲ್ಲಿ ಜೈನ ಧರ್ಮ ತತ್ವ ವಿಚಾರಗಳನ್ನು ಮಾತ್ರವಲ್ಲದೆ ವೈರಾಗ್ಯ, ನೀತಿ, ಆತ್ಮ ತತ್ವ ವಿಚಾರಗಳನ್ನೂ, ಅಧ್ಯಾತ್ಮ - ವೇದಾಂತದ ವಿಚಾರಗಳನ್ನೂ ನಿರೂಪಿಸಿದ್ದಾನೆ. ಜೈನನಾದ ರತ್ನಾಕರನು ತನ್ನ ಧರ್ಮದ ಕೊರತೆಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುತ್ತಾನೆ. ಆದರೆ ಪರಧರ್ಮ ದೂಷಣೆ ಮಾಡುವುದಿಲ್ಲ. ಅವನದು ಸಮನ್ವಯ ದೃಷ್ಟಿ. ''ರತ್ನಾಕರ ಕಲಿತವರಿಗೆ ಕಲ್ಪವೃಕ್ಷ, ಕಲಿಯದವರಿಗೆ ಕಾಮಧೇನು. ತನ್ನ ಕಾವ್ಯ ಶಕ್ತಿಯ ಬಗ್ಗೆ ವಿಶ್ವಾಸವಿದ್ದ ಕವಿ. ಅದನ್ನು ಹೇಗೆ ಸದ್ವಿನಿಯೋಗಿಸಿಕೊಳ್ಳಬೇಕೆಂಬುದರ ಬಗ್ಗೆ ಸ್ಪಷ್ಟ ನಿಲುವು ಇದ್ದವನು. ''ಕವಿತಾಶಕ್ತಿಯೆ ಕಲ್ಪವಲ್ಲಿಯದನಾ ಸದ್ಧರ್ಮಮೆಂದೆ ಮೇರುವಿನೊಳ್' ಬಿತ್ತಬೇಕೆಂದು ಹೇಳುತ್ತಾನೆ. (ಸಾಂಗತ್ಯ ಕವಿಗಳು - ಹಂಪ ನಾಗರಾಜಯ್ಯ ೧೯೭೫ ಪು. ೧೮೧)

### ರತ್ನಾಕರಾಧೀಶ್ವರ ಶತಕ :

ರತ್ನಾಕರ ಶತಕದಲ್ಲಿ ವೈರಾಗ್ಯ, ನೀತಿ, ಆತ್ಮತತ್ವ ವಿಚಾರಗಳು ಸುಂದರವಾಗಿ ಚಿತ್ರಿತವಾಗಿವೆ. ತತ್ವವನ್ನು ಕೂಡ ತುಂಬ ಸರಳವಾಗಿ ಎಲ್ಲರಿಗೂ ಅರ್ಥವಾಗುವಂತೆ, ತತ್ವಪ್ರೀತಿ ಮನಕ್ಕೆ ಮುಟ್ಟುವಂತೆ ನಿರೂಪಿಸಿದ್ದಾನೆ. ಜೈನರಲ್ಲಿ ಬರುವ ರತ್ನತ್ರಯದ ಕಲ್ಪನೆಯನ್ನು ಸರಳಗೊಳಿಸಿದ್ದಾನೆ. ಕರ್ಮಸಿದ್ಧಾಂತವನ್ನು ಸುಂದರವಾಗಿ ಹೇಳಿ ಸರಿಯಾದ, ಯೋಗ್ಯ ಜೀವನ ನಡೆಸಿದವರು ಸಾವಿಗೆ ಅಂಜಬೇಕಾಗಿಲ್ಲ. ಶ್ರಾವಕನ ಅಥವಾ ಗೃಹಸ್ಥನ ಕಾರ್ಯಗಳನ್ನು ನಿರ್ವಂಚನೆಯಿಂದ ನಿರ್ವಹಿಸಬೇಕು ಎಂಬುದಾಗಿ ಉಪದೇಶಿಸುತ್ತಾನೆ. ರತ್ನಾಕರ ಶತಕದ ಮೊದಲ ಪದ್ಯದಲ್ಲಿಯೇ ಜೈನಧರ್ಮ ತತ್ವಗಳಾದ ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ ಚಾರಿತ್ರ್ಯ ಎಂಬ ರತ್ನತ್ರಯಗಳೇ ಆತ್ಮಕ್ಕೆ ಸುಂದರವಾದ ಅಲಂಕಾರಗಳೆಂದು ಹೇಳಿದ್ದಾನೆ. ಜೀವವೇ ಮುಂತಾದ ತತ್ವದ ಮೇಲೆ ಶ್ರದ್ಧೆ ಹುಟ್ಟುವುದೇ ಸಮ್ಯಗ್ದರ್ಶನ, ಈ ತತ್ವವನ್ನೂ ಇದರ ನಾನಾ ಸ್ವರೂಪಗಳನ್ನೂ ಚೆನ್ನಾಗಿ ಗ್ರಹಿಸಿದರೆ ಸಮ್ಯಗ್‌ಜ್ಞಾನ ಲಭಿಸುವುದು. ಅಜ್ಞಾನದಿಂದ ಪ್ರಾಣಿ ಸಮೂಹಕ್ಕೆ ಆಘಾತ, ಹಿಂಸೆಯಾಗದಂತೆ ನಡೆಯುವುದು ಸಮ್ಯಗ್ ಚಾರಿತ್ರ. ಮುಕ್ತಿಗೆ ಈ ರತ್ನಗಳೇ ಸೋಪಾನ.

ಮಿಗೆ ಷಡ್ದ್ರವ್ಯಮನಸ್ತಿಕಾಯಮೆನಿಪ್ಪೈದಂ ತತ್ತ್ವಮೇಳಂ ಮನಂ
ಬುಗಲೊಂಬತ್ತು ಪದಾರ್ಥಮಂ ತಿಳಿದೊಡಂ ತನ್ನಾತ್ಮನೀ ಮೆಯ್ಯದಂ
ದುಗದಿಂ ಬೇರೊಡಲೇನ ಚೇತನಮೆ ಜೀವಂ ಚೇತನಂ ಜ್ಞಾನರೂ
ಪಿ ಗಡಾಯೆಂದರಿದಿರ್ದಕನೇ ಸುಖಿಯಲಾ ರತ್ನಾಕರಾಧೀಶ್ವರಾ

(ರತ್ನಾಕರ ಶತಕ, ಪದ್ಯ೩)

ಇಲ್ಲಿ ಕವಿಯು ಜೈನ ತತ್ವದ ಸ್ಥೂಲ ರೂಪವನ್ನು, ಜೈನ ಸಿದ್ಧಾಂತದ ರೂಪರೇಷೆಯನ್ನೂ, ಜೈನಧರ್ಮದ ಸಾರವನ್ನೂ ತಿಳಿಸಿದ್ದಾನೆ. ಷಡ್‌ದ್ರವ್ಯ, ಪಂಚಾಸ್ತಿಕಾಯ, ಏಳುತತ್ತ್ವ, ಮತ್ತು

ಒಂಬತ್ತು ಪದಾರ್ಥಗಳನ್ನು ತಿಳಿದ ಆತ್ಮನು ದೇಹಬಾಧೆಗಳಿಂದ ದೂರವಾಗುತ್ತಾನೆ. ದೇಹ ಜಡ, ಆತ್ಮ ಚೈತನ್ಯಮಯ, ಜ್ಞಾನರೂಪಿ ಎಂಬ ತಿಳುವಳಿಕೆ ಬಂದಾಗ ಸುಖಿಯಾಗುವನು. ಮುಂದೆ ಆತ್ಮದ ಸ್ವರೂಪವನ್ನು ತಿಳಿಸಿ ಆತ್ಮ ಪರಮಾತ್ಮ ಒಂದೇ ಎಂಬುದನ್ನೂ ದೇಹ ಅಸ್ಥಿರ, ಆತ್ಮನಿಗೆ ನಾಶವಿಲ್ಲ, ಸಾಧಕನ ದೇಹವೇ ದೇಗುಲ, ಸಾವಿಗಂಜಬಾರದು, ಅಸ್ಥಿರ ಬಾಳನ್ನು ನಂಬಿ ಕೆಡಬಾರದು, ವೈರಾಗ್ಯವು ದಿನಚರಿಯಲ್ಲಿ ಮೂಡಿಬರಬೇಕು. ನಿರ್ಲಿಪ್ತತೆಯೇ ನಿರಂಜನಾವಸ್ಥೆಗೆ ತಾಯ್ಬೇರು, ಭಾವಪೂಜೆ - ದ್ರವ್ಯಪೂಜೆ, ಜಂಗಮ ಜಿನಮೂರ್ತಿಗಳ ಮಹಾಮಂತ್ರದ ಮಹಿಮೆ, ಜಿನನಾಮದ ಮಹಿಮೆ ಮುಂತಾದ ಅನೇಕ ವಿಚಾರಗಳನ್ನು ಜೈನ ಧರ್ಮ ಮತಾನುಸಾರವಾಗಿ ವಿವರಿಸಲಾಗಿದೆ. ರತ್ನಾಕರನು ಮಹಾವೀರನ ವಿಶ್ವಧರ್ಮವನ್ನು ಪ್ರಚಾರಕ್ಕೆ ತಂದಿರುವನು. ಮುಖ್ಯವಾಗಿ ರತ್ನಾಕರ ಶತಕವು ಶ್ರಾವಕನು ಸಾಧಕನಾಗುವ ಮಾರ್ಗವನ್ನು ನಿರೂಪಿಸಿದೆ. ಇಲ್ಲಿ ವ್ಯವಹಾರ ದೃಷ್ಟಿಯನ್ನು ಬೋಧಿಸಲಾಗಿದೆ.

ರತ್ನಾಕರವರ್ಣಿಯು ರತ್ನಾಕರಾಧೀಶ್ವರ ಶತಕದಲ್ಲಿ ನೀತಿ ಆತ್ಮ ವಿಚಾರಗಳನ್ನು ನಿರೂಪಿಸಿದಂತೆಯೇ ವೈರಾಗ್ಯವನ್ನೂ ಚಿತ್ರಿಸಿದ್ದಾನೆ. ಶತಕದ ಆರಂಭದಲ್ಲಿಯೇ ಲೇಪನದ್ರವ್ಯಗಳು. ಪರಿಮಳಯುಕ್ತ ಹೂವುಗಳು, ರತ್ನಹಾರ, ವಸ್ತ್ರ ಇವೆಲ್ಲ ಶರೀರಕ್ಕೆ ಮಾತ್ರ ಅಲಂಕಾರ. ಆದರೆ ಆತ್ಮನಿಗೆ ಹೇಯವಾದುವು. ಆತ್ಮತತ್ವಗಳ ಆಸಕ್ತಿ, ಜ್ಞಾನ, ಚಾರಿತ್ರಗಳೆಂಬ ಮೂರು ರತ್ನಗಳೇ ಆತ್ಮಕ್ಕೆ ಸುಂದರವಾದ ಅಲಂಕಾರಗಳು ಎಂದು ನೇರವಾಗಿ ವೈರಾಗ್ಯ ವಿಷಯವನ್ನೇ ಪ್ರತಿಪಾದಿಸಿದ್ದಾನೆ. ಕುಶಲನಾದ ಆತ್ಮನು ಹೆಣದಂತಿರುವ ದೇಹವನ್ನು ಸಾರಥಿಯಂತೆ ನಡೆಸಿ ಅನಗತ್ಯವೆನಿಸಿದಾಗ ವೇಷಧಾರಿಯು ವೇಷಭೂಷಣಗಳನ್ನು ತ್ಯಜಿಸುವಂತೆ ದೂರಮಾಡುವನು. ಜೀವನು ಶರೀರವೆಂಬ ಅಸ್ಥಿರವಾದ ಕರ್ಮದ ಕವಚ ತೊಟ್ಟಿದ್ದಾನೆ. ಉತ್ತಮ ಜ್ಞಾನ ಬಲದಿಂದ ಜೀವನು ದೇಹಕ್ಕೆ ಹೇಸಿ ದೂರಹೋಗುವನು. ನಾಶವಾಗುವ ಶರೀರವನ್ನು ತ್ಯಜಿಸಿ ಶಾಶ್ವತವಾದ ಮೋಕ್ಷವನ್ನುಸದ್ಧರ್ಮದಿಂದ ಪಡೆಯುವವನೇ ಜಾಣ.

ಧನಮಂ ಧಾನ್ಯಮನೂಟಮಂ ವನಿತೆಯಂ ಬಂಗಾರಮಂ ವಸ್ತ್ರವಾ
ಹನ ರಾಜ್ಯಾದಿಗಳಂ ಸದಾ ಬಯಸುವೀ ಭ್ರಾತಾತ್ಮರಾ ಪಾಟಿಯೊಳ್
ಜನರಂ ಸಿದ್ಧರನಾರ್ಯವರ್ಯರನುಪಾಧ್ಯಾಯರ್ಕಳಂ ಸಾಧು ಪಾ
ವನರಂ ಚಿಂತಿಸಿ ಮುಕ್ತಿಗೇಕೊದಗರೋ ರತ್ನಾಕರಾಧೀಶ್ವರಾ

(ರತ್ನಾಕರ ಶತಕ ಪದ್ಯ.೧೯)

ಇಂದ್ರಿಯ ಸುಖಗಳಿಗಾಗಿ ಧನಧಾನ್ಯ, ವನಿತೆ, ಬಂಗಾರಗಳನ್ನು ಇಚ್ಛಿಸುವ ಬದಲು ಪವಿತ್ರರಾದ ಜಿನ ಸಿದ್ಧ, ಆಚಾರ್ಯ, ಉಪಾಧ್ಯಾಯ ಸಾಧು ಮೊದಲಾದವರನ್ನು ನೆನೆದು ಮುಕ್ತಿ ಪಡೆಯಬಹುದು.

ಭವದ ಬವಣೆಗಳಿಗೆ ಲೆಕ್ಕವಿಲ್ಲ. ನಾನಾರೀತಿಯ ಕಷ್ಟ ಪರಂಪರೆಗಳಿಗೆ ಸಿಕ್ಕಿ ಮಾನವ ತೊಳಲಾಡುತ್ತಾನೆ. ವ್ಯಾವಹಾರಿಕ ದೃಷ್ಟಿಗೆ ಮಾತ್ರ ಕುಲಬಲ ಸ್ಥಾನಮಾನ. ಆತ್ಮನಿಗೆ ಕುಲ ಗೋತ್ರವಿಲ್ಲ. ಹುಟ್ಟು ಸಾವಿಲ್ಲ. ಪಾಪ-ಪುಣ್ಯಗಳಿಂದಾಗಿ ಹುಟ್ಟು-ಸಾವು, ಜೀವನ ಬೆನ್ನು ಬಿಡುವುದಿಲ್ಲ. ಅವುಗಳನ್ನು ತ್ಯಜಿಸಿದಾಗ ಮಾತ್ರ ಮುಕ್ತಿ, ಪಂಚೇಂದ್ರಿಯಗಳ ಆಶೆಗೆ ಒಳಗಾಗಿ ಮಾನವನು ಅಧಃಪತನ ಹೊಂದುತ್ತಾನೆ.

ಎತ್ತೆತ್ತಂ ಲತಾಂಗಿಯರ್ಸುಳಿದರತ್ತತ್ತಾಮಗುಂ ಕಣ್ಗಳಿ
ತ್ತತ್ತಂ ಕಾಮಿನಿಯರ್ಮೊಗಂದೆಗೆದರತ್ತತ್ತೊಂದುಗುಂ ಜಿಹ್ವೆ ಮ
ತ್ತೆತ್ತತ್ತಂ ಸರಿ ಮಿಂಡಿಯರ್ತೆಗೆದರತ್ತತ್ತೆಯ್ದುಗುಂ ಬುದ್ಧಿ ನಿ
ಮ್ಮತ್ತಂ ಬಾರದು ಕೆಟ್ಟೆನೇವೆನಕಟಾ ರತ್ನಾಕರಾಧೀಶ್ವರಾ

(ರತ್ನಾಕರ ಶತಕ ಪದ್ಯ ೫೩)

ಇಲ್ಲಿ ಕವಿಯು ಲಜ್ಜೆ ಸಂಕೋಚಗಳಿಲ್ಲದೆ ತನ್ನ ನಡೆನುಡಿಗಳ ನಡಾವಳಿಯನ್ನು ನಿರ್ದಾಕ್ಷಿಣ್ಯವಾಗಿ ತಾನೇ ಪರಾಂಬರಿಸಿ ಅದರ ಹುಳುಕುಗಳನ್ನು ತಿಳಿಸುತ್ತಾನೆ. ವಿಷಯ ವ್ಯಾಪಾರದಲ್ಲಿ ತೊಡಗಿದ ಮನಸ್ಸನ್ನು ದೇವನತ್ತ ತಿರುಗಿಸಬೇಕು. ಸುಜ್ಞಾನ ಸಂಪತ್ತಿನ ಮುಂದೆ ಮಿಕ್ಕ ಸಂಪತ್ತುಗಳು ಕ್ಷುಲ್ಲಕ. ವಿಷಯ ಸುಖ, ಅಹಂಕಾರಾದಿಗಳನ್ನು ತೊರೆದು ಯಾವಾಗಲೂ ವ್ರತ ನಿಯಮಗಳನ್ನು ನಿಷ್ಠೆಯಿಂದ ಪಾಲಿಸಿ ಮೋಕ್ಷಪದವಿಯನ್ನು ಹೊಂದಬೇಕು ಎಂದು ವೈರಾಗ್ಯಭಾವನೆಯನ್ನು ನಾನಾ ಉದಾಹರಣೆಗಳೊಂದಿಗೆ ಚಿತ್ರಿಸಿ ಕವಿ ಮೋಕ್ಷಮಾರ್ಗವನ್ನು ತೋರಿಸುತ್ತಾನೆ.

ಅಟ್ಟಹಾಸ, ಅಹಂಕಾರ, ಭೋಗಗಳಿಂದ ಬೀಗುವ ಮನುಷ್ಯ ಮದ ಕರಗುತ್ತ ಸಾಗಿ, ಸ್ವಂತ ವ್ಯಥೆಯ ಒಳದನಿಯೊಂದು ಮೂಡಿ ವ್ಯಕ್ತಿ ಅಂತರ್ಮುಖಿಯಾಗುತ್ತಿರುವ ಬೆಳವಣಿಗೆ ಕಾಣತೊಡಗುತ್ತದೆ. ಈ ಬಗೆಯ ಪದ್ಯಗಳಲ್ಲಿ ಸ್ಪಷ್ಟನಿಲುವಿನ ಎಳೆಗಳನ್ನು ನೇಯುತ್ತಿರುವ ಒಂದು ಆರೋಗ್ಯಕರ ಜೀವನ ದೃಷ್ಟಿಯನ್ನು ಮೂಡಿಸಲು ಸಮರ್ಥವಾಗುವ ವ್ಯವಸ್ಥೆಯಿದೆ.

ಮದವದ್ದಾನೆಗೆ ಕಲ್ಲಪೊಯ್ಯುದಿನಿದೇ ಮೇಯ್ತೀಟೆಗಂ ಕಜ್ಜಗಂ
ಬದಿಯಂ ತೋಡುವುದೊಳ್ಳಿತಲ್ತು ಬಗೆಮದಾತ್ಮಂಗೆ ನಾರೀ ರತಂ
ಮುದವಲ್ತಾದೊಡಮಂತದು ಬಿಡಲಶಕ್ಯಂ ಬಿಟ್ಟೋಡಿ ಯೌವನೋ
ನ್ಮದದುದ್ರೇಕವಡಂಗದೇವೆನಕಟಾ ರತ್ನಾಕರಾಧೀಶ್ವರಾ

(ರತ್ನಾಕರ ಶತಕ ಪದ್ಯ ೬೦)

ಭರತೇಶವೈಭವದಲ್ಲಿ ಹೆಣ್ಣಿನ ಲಾವಣ್ಯವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ. ಆ ಭೋಗದ ನೆಲೆಯಿಂದ ಯೋಗಭೂಮಿಕೆಗೆ ಏರಿಹೋದ ರತ್ನಾಕರ ಹಿಂದೆ ತಾನಿದ್ದ ರಸಭೂಮಿಕೆಯ ಕುಂದು ಕೊರತೆಗಳನ್ನು ಕಂಡು ಜುಗುಪ್ಸಾ ಭಾವದಿಂದ –

ಪೆರರಂ ಪೇಳ್ವೊಡೆ ನೋವರಾನೆನಗೆ ಪೇಳ್ದಂ ಕಾಮಿನೀ ಮೂತ್ರದೊ
ಜ್ವರ ಮೈಯ್ಯಂ ಲತೆಯೆಂದು ಮಾಂಸ ಕುಚಮಂ ಹೇಮಾಬ್ಜಮೆಂದೆಂದು ನೆ
ತ್ತರನುಂಡಾತುಟಿಯಂ ಸುಧಾರುಚಿಯೆನುತ್ತಂ ಬಿಳ್ದುದುಂ ಸಾಲದ
ನ್ನರನೊಯ್ದಂ ಕವಿಯೊ ವಲಂ ಕಪಿಯೊ ನಾಂ ರತ್ನಾಕರಾಧೀಶ್ವರ

(ರತ್ನಾಕರ ಶತಕ ಪದ್ಯ ೬೭)

ಎನ್ನುತ್ತಾನೆ. ಮತ್ತೊಬ್ಬರನ್ನು ನುಡಿದು ಪ್ರಯೋಜನವಿಲ್ಲವೆಂದು ತನಗೆ ತಾನೇ ಆತ್ಮಗತವಾಗಿ ಹೇಳಿ ಗತಬದುಕಿಗೆ ನೊಂದು ನುಡಿಯುತ್ತಾನೆ. ಈ ವಿವರಣೆಯಲ್ಲಿ ಭಾವತೀವ್ರತೆಯನ್ನು ಕಾಣಬಹುದು. ಈ ದೇಹದ ಅಸ್ಥಿರತೆಯನ್ನು ಕುರಿತು 'ಉಂಬೂಟಂ ಮಿಾಗಿಲಾಗೆ ಯೇರುವ ಹಯಂ ಬೆಚ್ಚಲ್ಕೆ, ಸೀರ್ಪೊಗಿಸೊಳ್ ತುಂಬಲ್ ಪೋಗುತೆ ಮುಗ್ಗಿಯುಮರಣಮುಕ್ಕುಂ' ಎಂದು ನಿರೂಪಿಸಿ ಇಂಥ ದೇಹಿಯು ಆತ್ಮವನ್ನರಿಯದೆ ಕರ್ಮ ಬಾಧೆಗಳಿಂದ ನೆನೆ ನೆನೆದು ಶರೀರ ಭಾವವನ್ನು ಹೊಂದಿ ಕರ್ಮ

ತಿರುಗಿಸಿದಂತೆ ತಿರುಗುತ್ತಾನೆಂದು ಹೇಳುತ್ತಾನೆ. ನಾಶವಾಗುವ ಈ ದೇಹವನ್ನು ತ್ಯಜಿಸಿ ಧರ್ಮ ಮಾರ್ಗದಿಂದ ನಿತ್ಯವಾದ ಮುಕ್ತಿಯನ್ನು ಪಡೆಯುವವನೇ ಚತುರನೆಂಬ ಅಭಿಪ್ರಾಯವನ್ನು ಕವಿ ಹೊಂದಿದ್ದಾನೆ.

''ರತ್ನಾಕರ ಶತಕದಲ್ಲಿ ಶೃಂಗಾರ ಸನ್ನಿವೇಶಗಳಿಲ್ಲ. ಸರಸ ಸಲ್ಲಾಪಗಳಿಲ್ಲ. ಇಲ್ಲಿಯ ವಾತಾವರಣ ಬಿಗಡಾಯಿಸಿದ ವಾತಾವರಣ. ಎಲ್ಲರ ಬೆನ್ನ ಹಿಂದೆಯೂ ಜವರಾಯ ಹೊಂಚು ಹಾಕಿರುವ ರಹಸ್ಯವನ್ನು ರತ್ನಾಕರ ಭೇದಿಸಿರುವನು. ಮೈಮರೆತ ಜೀವ ಕೋಟಿಯನ್ನು ವಿಶ್ವಾನುಕಂಪದಿಂದ ಈ ಕವಿ ಎಚ್ಚರಿಸುತ್ತಿರುವನು. ಆತ್ಮಸಿರಿಯ ಅನಂತತೆಯನ್ನು ನೆನಪಿಗೆ ತಂದು ಅದನ್ನು ಗಳಿಸಬೇಕೆಂದು ಎಲ್ಲರನ್ನೂ ಒತ್ತಾಯ ಮಾಡುತ್ತಿರುವನು. ಪ್ರಗತಿ ಸಾಲದೆಂದು ಆಗಾಗ ತನ್ನನ್ನೇ ನಿಟ್ಟಿಸಿಕೊಂಡು ನಿಟ್ಟುಸಿರು ಬಿಡುವನು. ತನ್ನನ್ನು ತಾನೇ ಸಮಾಧಾನ ಪಡಿಸಿಕೊಳ್ಳುವನು. ಎಲ್ಲರ ಪಾಡೂ ಇಷ್ಟೆ! ಯಾರಿಗೆ ಯಾರುಂಟು? ನಮ್ಮ ದಾರಿಯನ್ನು ನಾವೇ ಸವೆಸಬೇಕು ಎಂದು ಧರ್ಮರಹಸ್ಯವನ್ನು ಬಿತ್ತರಿಸಿರುವನು'' (ರತ್ನಾಕರ ಮಹಾಕವಿ. ಜಿ. ಬ್ರಹ್ಮಪ್ಪ 1973 ಪು. 52) ರತ್ನಾಕರ ಶತಕವನ್ನು ಗೃಹಸ್ಥರ ಚಾರಿತ್ರದಲ್ಲಿ ಕಂಡುಬರುವ ಕುಂದು ಕೊರತೆಗಳನ್ನು ತಿದ್ದುವುದಕ್ಕಾಗಿ ಕವಿ ಬರೆದಿದ್ದಾನೆ.

**ಅಪರಾಜಿತೇಶ್ವರ ಶತಕ :** ಅಪರಾಜೀತೇಶ್ವರ ಶತಕದಲ್ಲಿ ಶುದ್ಧ ನಿಶ್ಚಯ ದೃಷ್ಟಿಯನ್ನು ಪ್ರತಿಪಾದಿಸಲಾಗಿದೆ. ಕೃತಿಯ ಆರಂಭದಲ್ಲಿಯೇ ಜೈನಧರ್ಮಗಳ ಮುಖ್ಯ ತತ್ವವಾದ ರತ್ನತ್ರಯದ ಮಹತ್ವವನ್ನು ಕವಿ ತಿಳಿಸಿದ್ದಾನೆ. ಈ ಶತಕವು ಆತ್ಮ ಸಾಧಕರಿಗೆ ಒಂದು ನಿಧಿ. ಇಲ್ಲಿ ಅಧ್ಯಾತ್ಮ ತತ್ವವನ್ನು ವಿವರವಾಗಿ ಕವಿ ನಿರೂಪಿಸಿದ್ದಾನೆ. ರತ್ನಾಕರವರ್ಣಿ ಜೈನಧರ್ಮದ ಸಿದ್ಧಾಂತದ ಸಾರವನ್ನು ಅಪರಾಜಿತ ಶತಕದ ಮೊದಲ ಹದಿನಾಲ್ಕು ಪದ್ಯಗಳಲ್ಲಿ ತುಂಬಿದ್ದಾನೆ.

ಬಳಿಕಣುವಕ್ಕೆ ಪನ್ನೆರಡರಲ್ಲಿ ಚತುಷ್ಕದದಮ್ಮ ಜಾನದೊಳ್
ಸುಳಿ ಸುಳಿದಾಡಿ ಕೂಡೆ ಗುರು ಪಂಚದೊಳ್ಪುಳಿದಾಡಿ ಚಿತ್ತದ
ಗ್ಗಳಮನಡಂಗಿಸುತ್ತೊಡನೆ ತನ್ನಯ ದೇಹದೊಳಾತ್ಮನಲ್ಲಿ ನಿಂ
ದಳಲದಿರ್ದವಂ ತವಕೃಪಾತ್ಮನಲಾ ಅಪರಾಜಿತೇಶ್ವರಾ

(ಅಪರಾಜಿತ ಶತಕ ಪದ್ಯ೪)

ಮನಸ್ಸಿನ ಏಕಾಗ್ರತೆ ಕೈಗೂಡಿದ ಮೇಲೆ ಅನಿತ್ಯ, ಅಶರಣ ಮುಂತಾದ ದ್ವಾದಶಾನುಪ್ರೇಕ್ಷೆಗಳನ್ನು ಪರಿಭಾವಿಸಿ ನಾಲ್ಕು ತೆರನಾದ ಧರ್ಮಧ್ಯಾನಗಳಲ್ಲಿ ಮನಸ್ಸನ್ನು ಲೀನಗೊಳಿಸಬೇಕು. ಪಂಚಪರಮೇಷ್ಠಿಗಳ ಚಿಂತನೆಯನ್ನು ಮಾಡಬೇಕು. ಮನಸ್ಸಿನ ಚಂಚಲತೆಯನ್ನು ಹೋಗಲಾಡಿಸಿ ತನ್ನಾತ್ಮನೊಡನೆ ತನ್ಮಯನಾಗಿ ಸಂಸಾರದ ದುಃಖವನ್ನು ಮರೆಯಬೇಕು'' ಎಂದು ಕವಿ ಇಲ್ಲಿ ತಿಳಿಸುತ್ತಾನೆ. ಈ ಕೃತಿಯಲ್ಲಿ ಭೇದ ವಿಜ್ಞಾನದ ಸ್ವರೂಪ, ಎಂಟು ಕರ್ಮಗಳು, ಕಾಯ ನಶ್ವರ, ಆತ್ಮಶಾಶ್ವತ - ದೇಹವೇ ಜಿನಾಲಯ, ತನ್ನ ಆತ್ಮನೇ ದೇವರು ಆತ್ಮ ಸಾಕ್ಷಾತ್ಕಾರಕ್ಕೆ ಆಚರಿಸಬೇಕಾದ ಆರು ತಪಸ್ಸುಗಳು, ಪಾರಲೌಕಿಕ ಸುಖಕ್ಕೆ ಐಹಿಕ ವ್ಯಾಪಾರದಿಂದ ದೂರವಾಗಬೇಕು. ಪಾರಮಾರ್ಥಿಕ ಪ್ರಗತಿಯನ್ನು ಸಾಧಿಸಿಕೊಳ್ಳುವ ರೀತಿ ಮುಂತಾದ ಅಧ್ಯಾತ್ಮ ತತ್ವಕ್ಕೆ ಸಂಬಂಧಿಸಿದ ಅನೇಕ ವಿಚಾರಗಳ ವರ್ಣನೆಯಿದೆ. ಕವಿ ತನ್ನ ಭವ ಪರಂಪರೆಯ ಬಗ್ಗೆ ಪರಿತಪಿಸುತ್ತಾನೆ. ಜ್ಞಾನ ಮಾರ್ಗಕ್ಕಿಂತ ಭಕ್ತಿ

ಮಾರ್ಗ ಸಾಮಾನ್ಯ ಚೇತನಕ್ಕೆ ಸುಲಭ, ಪರಿಗ್ರಹವೆಂಬುದು ಪಿಶಾಚಿ, ಎಂದು ಹೇಳಿದ ರತ್ನಾಕರನು ಮುಕ್ತಿ ಮಾರ್ಗದ ನಾನಾ ಹಂತಗಳನ್ನು ತಿಳಿಸಿದ್ದಾನೆ. ಧರ್ಮಾನುರಾಗ ಅಂತರಂಗದಿಂದುಕ್ಕಿ ಬರಬೇಕೇ ವಿನಾ ಜಾತಿ ಮದದಿಂದ ಬರಲಾರದು; ಪರನಿಂದೆ ಮಾಡಬಾರದು; ವಿಷಯ ಲಂಪಟತನವನ್ನು ಬಿಡಬೇಕು, ಆಧ್ಯಾತ್ಮಿಕ ಸಂಜೀವಿನಿಯೇ ಸಕಲ ರೋಗಗಳಿಗೂ ದಿವ್ಯೌಪಧ. ಆತ್ಮ ತತ್ವವನ್ನು ತಿಳಿದವನು ಎಲ್ಲವನ್ನೂ ತಿಳಿದಂತೆ ಚಿತ್ತಶುದ್ಧಿಯೇ ಅಧ್ಯಾತ್ಮ ಏಳಿಗೆಗೆ ದಾರಿ. ಪಾಪ ಪುಣ್ಯಗಳಿಂದ ಬಿಡುಗಡೆ ಪಡೆದ ಶುದ್ಧ ಮನಸ್ಸು ತನ್ನಾತ್ಮನಲ್ಲಿ ಒಂದಾಗಿ ಹೋದಾಗ ಮೋಕ್ಷ ಪ್ರಾಪ್ತಿಯಾಗುತ್ತದೆ; ಪರಮಾತ್ಮ ದರ್ಶನದ ಸಾಧನೆಗಳಲ್ಲಿ ಯೋಗ ಮಾರ್ಗವೂ ಒಂದು; ಸಂಸಾರಾನುಪ್ರೇಕ್ಷೆ ಆತ್ಮೋನ್ನತಿಗೆ ದಾರಿ.

ಮೂರು ಶರೀರದೊಳ್ತಡೆಯದಂತರಾತ್ಮನೊಳೈಕ್ಯಮಾಗಿ ಬಂ
ದೇರುವ ದುಷ್ಪರೀಷಹವದಂಗಕೆನುತ್ತುಪಶಾಂತನಪ್ಪುದುಂ
ಜಾರುಗುಮೊಯ್ಯನೊಯ್ಯನೆ ಚಿದಾವರಣಾದಿಗಳಾತ್ಮಸಿದ್ಧಿಮೆ
ಯ್ದೇರುಗುಮೊಯ್ಯನೊಯ್ಯನಿದೆ ಯುಕ್ತಿಯಲಾ ಅಪರಾಜಿತೇಶ್ವರಾ

(ಅಪರಾಜಿತ ಶತಕ ಪದ್ಯ ೧೧೦)

ಆತ್ಮಸಿದ್ಧಿ ಹೇಗಾಗುತ್ತದೆಂಬುದನ್ನು ಇಲ್ಲಿ ವಿವರಿಸಲಾಗಿದೆ. ಜೈನದರ್ಶನದಲ್ಲಿ ರೇಖಾಚಿತ್ರವಾಗಿ ಮೂಡಿರುವ ಭೇದವಿಜ್ಞಾನ ರತ್ನಾಕರನ ಕೈಯಲ್ಲಿ ವರ್ಣಮಯ ಚಿತ್ರವಾಗಿ, ಸಜೀವವಾಗಿ, ದಿವ್ಯಕಲೆಯಾಗಿ ರೂಪುಗೊಂಡಿದೆ. ಈತನ ತತ್ವಗಳು ವಿಶ್ವತತ್ವಗಳಾಗಿ ವಿಶ್ವಕ್ಕೆಲ್ಲ ಬೇಕಾದವುಗಳಾಗಿರುವುದರಿಂದ ಈತ ವಿಶ್ವ ಕವಿಯೆನಿಸಿರುವನು ಎಂದು ಜಿ. ಬ್ರಹ್ಮಪ್ಪ ಹೇಳಿದ್ದಾರೆ. (ರತ್ನಾಕರನ ಶತಕ ಸಾಹಿತ್ಯ ೧೯೬೨. ಪು. ೨೧೯, ೨೧೧) 'ಅಪರಾಜಿತ ಶತಕದಲ್ಲಿ ಅಧ್ಯಾತ್ಮ ವೇದಾಂತದ ವಿಚಾರಗಳಿದ್ದರೂ ಅವು ಆನುಷಂಗಿಕವಾಗಿ ಪರಿಣಮಿಸಿ ಕಾವ್ಯ ಗುಣಕ್ಕೆ ಪಟ್ಟಕಟ್ಟವೆ. ಇಲ್ಲಿನ ಲಲಿತವಾದ ಪದಗುಂಫನ ಶ್ರುತಿಮಧುರವಾಗಿದೆ. ವಿಷಯ ನಿರೂಪಣೆ ಸ್ಫುಟವಾಗಿದ್ದು ಅರ್ಥಪೂರ್ಣವಾಗಿದೆ. ಹೀಗೆ ಪಗಲ್ಗಣದಾಟವೆಂದು ಜಗಮಂ ಸಲೆ ನೋಡುವ ಸ್ಥಿತ ಪ್ರಜ್ಞತ್ವ ಪಡೆದ ಮೇಲೆ ಹೆದರಿಕೆಯಿಲ್ಲ. ರವಿ ನಡೆದತ್ತಲ್ಲ ಬೆಳಗಲ್ಲದೆ ಕತ್ತಲೆಯಿಲ್ಲ. ಆತ್ಮ ತತ್ವ ಮನದಲ್ಲಿ ನಟ್ಟುನುಡಿವಾತನ ಮಾತುಗಳೆಲ್ಲ ಮೋಕ್ಷದ ಮಾರ್ಗವೆ. ನೋಡುವ ನೋಡಿ ಲಾಲಿಸುವ ಅವನ ಬರ್ದುಂಕೆ ಚೆಲುವರ ಚೆಲ್ವ - ಮುಂತಾಗಿ ಆರಂಭವಾಗುವ ಪದ್ಯಗಳು ಕಾವ್ಯದ ಸ್ಪರ್ಶದಿಂದ ಮನಸೆಳೆಯುತ್ತವೆ; ನಿನ್ನ ಪದಾಬ್ಜ ಭಕ್ತಿ. ಮೊನ್ನೆ ಬರುತ್ತೆ ಕಂಡೆನವನಂ ಪೇಳವ ವೇಳೆ ವೇಳೆ ಗಿಳಿವಾಯು - ಎಂಬ ಪದ್ಯಗಳು ಮನೋಹರವಾದ ಶೈಲಿಗೂ ಪರಿಭಾವನಾರ್ಹ ವಿಚಾರಕ್ಕೂ ಉತ್ತಮ ನಿದರ್ಶನವಾಗಿವೆ. (ಸಾಂಗತ್ಯ ಕವಿಗಳು : ಹಂಪನಾಗರಾಜಯ್ಯ ೧೯೭೫ಪು.೧೮೪-೧೮೫)

ಅಪರಾಜೀತೇಶ್ವರ ಶತಕದಲ್ಲಿ ರತ್ನಾಕರನ ಹಂಸಾನುಭವ ಎದ್ದು ಕಾಣುವುದು.

ನೋಡುವ ನೋಡಿ ಲಾಲಿಸುವ ಲಾಲಿಸುವಾತ್ಮಸುಖಕೆ ವಿಸ್ಮಯಂ
ಮಾಡುವ ಮಾಡಿ ಮೆಚ್ಚುವ ನಿಜಾತ್ಮನೊಳಾಗಲೆ ಮೆಚ್ಚುತೈಕ್ಯದಿಂದ
ಕೂಡುವ ಕೂಡಿ ಮೆಯ್ ಮರೆವ ತನ್ಮಯನಾಗುತೆ ತಾನೆ ತನ್ನೊಳೋ
ಲಾಡುವ ಜೋಗಿಯೇ ಅಮೃತಭಾಗಿಯಲಾ ಅಪರಾಜಿತೇಶ್ವರಾ

(ಅಪರಾಜಿತ ಶತಕ ಪದ್ಯ೧೧೭)

ಅನುಭಾವಿಯಾದ ರತ್ನಾಕರ ಇಲ್ಲಿ ಬ್ರಹ್ಮಾದ್ವೈತ ಸ್ಥಿತಿಯನ್ನು ವಿವರಿಸಿರುವನು.

ರತ್ನಾಕರ ಶತಕದ ಕೊನೆ ಕೊನೆಯ ಭಾಗ ಹಾಗೂ ಅಪರಾಜಿತೇಶ್ವರ ಶತಕದ ಉದ್ದಗಲಕ್ಕೂ ಇರುವ ಭಕಿಕ್ತಿಗೀಗಳಲ್ಲಿ ರಸಾವೇಶ ತುಂಬಿರುವುದು ಕಂಡುಬರುತ್ತದೆ. ರತ್ನಾಕರ ಶತಕ ಮತ್ತು ಅಪರಾಜಿತೇಶ್ವರ ಶತಕಗಳ ನಿರೂಪಣೆಯ ವಿನ್ಯಾಸ ಒಂದು ಜೀವಂತವಾದ ವ್ಯಕ್ತಿತ್ವ ಹಂತ ಹಂತವಾಗಿ ಬೆಳೆದ ಕ್ರಮವನ್ನು ಪರಿಚಯಿಸುತ್ತದೆ. ಕವಿಯ ಜೀವನಾನುಭವದಂತೆ ಸೂಕ್ಷ್ಮ ಸಂವೇದನೆಗಳು ಕೂಡ ಹಲವಾರು ಪದ್ಯಗಳಲ್ಲಿ ಸೊಗಸಾಗಿ ಹರಳುಗೊಂಡಿವೆ. ಮತೀಯ ಮಿತಿಗಳನ್ನು ಕತ್ತರಿಸಿ ಸರ್ವಜನ ಗ್ರಾಹ್ಯವಾಗುವ ಇಲ್ಲಿನ ಪದ್ಯಗಳ ಪ್ರಾಂಜಲ ನಿರೂಪಣೆ ಬೆಲೆಯುಳ್ಳದ್ದಾಗಿದೆ. ಆತ್ಮ ಕಥನದ ವೈಹಾಳಿ ಗತಿಯಲ್ಲಿ ಬಿಚ್ಚಿಕೊಳ್ಳುವ ಈ ಎರಡು ಶತಕಗಳು ಅತ್ಯಂತ ಆತ್ಮೀಯ ರೀತಿಯಲ್ಲಿ ಜೀವನದ ಸಮೀಕ್ಷೆಯನ್ನು ನಡೆಸಿದಂತಿವೆ. ಕವಿ ಸ್ವಭಾವದ ಸಂಕೀರ್ಣ ಪದರಗಳನ್ನು ತೆರೆದಿರಿಸಿರುವಂತಿವೆ. (ಸಾಂಗತ್ಯ ಕವಿಗಳು - ಹಂಪ ನಾಗರಾಜಯ್ಯ ೧೯೭೫ ಪು. ೧೮೬)

ತ್ರಿಲೋಕ ಶತಕ : ತ್ರಿಲೋಕ ಶತಕದಲ್ಲಿ ರತ್ನಾಕರವರ್ಣಿಯು ಪೂರ್ವಾಚಾರ್ಯಾನುಮತದ, ಲೋಕಸ್ಥಿತಿಯನ್ನು ೧೨೮ ಕಂದ ಪದ್ಯಗಳಲ್ಲಿ ನಿರೂಪಿಸಿದ್ದಾನೆ. ಇದರಲ್ಲಿ ಮೂರು ಲೋಕಗಳ ರೂಪರೇಖೆಯನ್ನು ಕೊಟ್ಟು, ಲೋಕಸ್ಥಿತಿ ಹಾಗೂ ಭೂಗೋಳವನ್ನು ಮಂದಮತಿಗಳು ತಿಳಿದುಕೊಳ್ಳಬೇಕೆಂದು ಹೇಳಿರುವನು. ಕವಿಯು ಇಲ್ಲಿ ಸ್ಥೂಲವಾಗಿ ಮೂರು ಲೋಕಗಳ ಆಕಾರ ವಿಸ್ತಾರಾದಿಗಳನ್ನು ನಿರೂಪಿಸಿದ್ದಾನೆ. ಪೂರ್ವಾಚಾರ್ಯರು ಹೇಳಿರುವ ಲೋಕಸ್ವರೂಪವನ್ನು ಕನ್ನಡದಲ್ಲಿ ತಾನು ವಿವರಿಸಿರುವುದಾಗಿ ರತ್ನಾಕರನೇ ಹೇಳಿದ್ದಾನೆ. ಲೋಕ, ಅಲೋಕ, ರಜ್ಜು, ತ್ರಿಸನಾಳಾದಿಗಳ ವರ್ಣನೆ, ನರಕ, ವ್ಯಂತರ, ಜ್ಯೋತಿರ್ಲೋಕ, ಸ್ವರ್ಗ ಲೋಕಾದಿಗಳ ವರ್ಣನೆ, ನಂದೀಶ್ವರ ದ್ವೀಪ ಕುಂಡಲಗಿರಿ, ರುಚಕಗಿರಿ, ಕುಭೋಗ ಭೂಮಿಗಳ ವಿವರಣೆ, ನಿಗೋಧ, ಸಿದ್ಧಲೋಕಗಳ ವರ್ಣನೆಗಳನ್ನೂ ಶಾಸ್ತ್ರೀಯವಾಗಿ ಮಾಡಿದ್ದಾನೆ. ಜೈನ ಮತ ತತ್ವವನ್ನಾಧರಿಸಿದ ಲೋಕಸ್ಥಿತಿಯ ವಿವರಣೆ ಈ ಶತಕದ ಉದ್ದೇಶವಾಗಿದೆಯೆಂದು ಹೇಳಬಹುದು. ಹದಿನೇಳು ಕಂದಗಳಲ್ಲಿ ನರಲೋಕವನ್ನು ವಿವರಿಸಿದ್ದಾನೆ. ಭೋಗ ಭೂಮಿಯಲ್ಲಿ ಜನಿಸಲು ಸತ್ಪಾತ್ರದಾನ ಅತ್ಯವಶ್ಯಕವೆಂದು ಹೇಳಿದ್ದಾನೆ.

ಭೋಗ ಮಹಿ ಲೇಸು ಮತ್ತಾ
ಭೋಗಿಗಳುಂ ಚೆಲ್ವರಹುದು ಧರ್ಮಮದಿಲ್ಲಿಂ
ಭೋಗಿಸುವರ್ಮುನ್ನಂ ಜಿನ
ಯೋಗಿಗೆ ಭಕ್ತಿಯೊಳೆ ಭುಕ್ತಿಯಿಕ್ಕಿದ ಫಲದಿಂ

(ತ್ರಿಲೋಕ ಶತಕ ಪದ್ಯ-೪೦)

ಸ್ವರ್ಗದ ಸೊಬಗನ್ನು ವರ್ಣಿಸತ್ತಾ ಕವಿ.
ಇರ್ಪುದು ರತ್ನ ವಿಮಾನಂ
ಕೂರ್ಪಂಗನೆಯರ್ಕಳಲ್ಲಿ ದೇವಾಂಗನೆಯರ್
ನೇರ್ಪಟ್ಟ ದಿವ್ಯದೇಹಮ
ನಾರ್ಪೊಗಳಲ್ಬಲ್ಲರಣ್ಣ ಸಗ್ಗದ ಸುಖಮಂ

(ತ್ರಿಲೋಕ ಶತಕ ಪದ್ಯ೪೩)

ಎಂದು ಹೇಳುತ್ತಾನೆ.

ಲೋಕತ್ರಯಮದನರಿಂಯ
ಲ್ಬೇಕಾದೊಡೆ ಲೋಕದಷ್ಟುತೆರಪೆನ್ನಾತ್ಮಂ
ಶ್ರೀಕರನೆಂದಾತ್ಮಧ್ಯಾ
ನೈಕಾಗ್ರಣಿಯಾಗಬೇಕುಮಲ್ಲದೊಡಫಲಂ

(ತ್ರಿಲೋಕ ಶತಕ ಪದ್ಯ೧೨೨)

ಲೋಕತ್ರಯವನ್ನು ತಿಳಿಯಲು ತನ್ನಾತ್ಮವು ಲೋಕದಷ್ಟೇ ವಿಶಾಲವಾಗಬೇಕು. ಆತ್ಮಧ್ಯಾನದಲ್ಲಿ ನಿಮಗ್ನನಾಗಿರಬೇಕು ಎನ್ನುತ್ತಾನೆ ಕವಿ. ಸಿದ್ಧಾಂತವನ್ನು ವಿವರಿಸುವ ಕಾರಣದಿಂದಲೋ ಏನೋ ತ್ರಿಲೋಕ ಶತಕವು ನೀರಸವಾಗಿದೆ.

''ತ್ರಿಲೋಕ ಶತಕದ ಶೈಲಿ ಸುಂದರವಾದುದಲ್ಲವಾದರೂ ಸರಳವಾಗಿದೆ. ಮೂರು ಲೋಕದ ಸ್ವರೂಪವನ್ನು ಅತ್ಯಂತ ಸ್ಥೂಲವಾಗಿ ನಿರೂಪಿಸಿದ್ದರೂ ಪ್ರಮುಖಾಂಶಗಳಿಗೆ ಇದರಲ್ಲಿ ಲೋಪಬಂದಿಲ್ಲ. ರತ್ನಾಕರನ ಉಳಿದ ಕೃತಿಗಳಿಗೆ ಹೋಲಿಸಿದಾಗ ತ್ರಿಲೋಕ ಶತಕ ಕಳಪೆಯಾಗಿ ಕಂಡರೂ ಕನ್ನಡ ಕಾವ್ಯಗಳಲ್ಲಿ ಇದುವರೆವಿಗೆ ಬಂದಿರುವ ತ್ರಿಲೋಕ ವಿವರಣೆಯ ದೃಷ್ಟಿಯಿಂದ ನೋಡಿದಾಗ ರತ್ನಾಕರನ ತ್ರಿಲೋಕ ಶತಕ ತುಂಬ ಉಪಯುಕ್ತವಾಗಿ ದೆ'' (ರತ್ನಾಕರ ಮಹಾಕವಿ - ಜಿ.ಬ್ರಹ್ಮಪ್ಪ ೧೯೭೩ ಪು. ೬೦-೬೧) ರತ್ನಾಕರವರ್ಣಿಯ ಮೂರು ಶತಕಗಳಲ್ಲಿ ಜೈನಧರ್ಮ ಮತಾನುಸಾರವಾದ ತತ್ವಗಳ ನಿರೂಪಣೆಯಿದೆ. ಆದಿನಾಥ ಶತಕ ಎಂಬ ಒಂದು ಜೈನಶತಕದ ಹೆಸರು ದೊರೆಯುವುದಾದರೂ ಹೆಚ್ಚಿನ ವಿವರ ತಿಳಿದಿಲ್ಲ. ಅದೇ ರೀತಿ ಜೈನ ತತ್ತ್ವ ಪ್ರತಿಪಾದಕವಾದ ಯೋಗಾಮೃತಶತಕದ ಕರ್ತೃ ಯಾರೆಂದು ತಿಳಿಯುವುದಿಲ್ಲ. ಇದನ್ನು ಶಾಂತಿರಾಜಶಾಸ್ತ್ರಿ ಎಚ್.ಆರ್. ಎಂಬವರು ಸಂಪಾದಿಸಿದ್ದಾರೆ. ಜೈನಕವಿಯಾದ ಕವಿಕಾಮನು ಕ್ರಿ.ಶ.ಸುಮಾರು ೧೨೦೦ ರಲ್ಲಿ ಸ್ತನಶತಕವನ್ನು ಬರೆದಿರುವನೆಂಬುದಾಗಿ ಪಾರ್ಶ್ವಪಂಡಿತನ ಪಾರ್ಶ್ವನಾಥ ಪುರಾಣದ (ಕ್ರಿ.ಶ ೧೨೦೫) ಒಂದು ಪದ್ಯದಿಂದ ತಿಳಿದು ಬರುತ್ತದೆ. ಆದರೆ ಈ ಸ್ತನಶತಕವು ದೊರೆತಿಲ್ಲ. ಇದು ಕೇವಲ ಶೃಂಗಾರಪ್ರಧಾನವಾದ ಕೃತಿಯಾಗಿರಬೇಕೆಂದು ಅಭಿಪ್ರಾಯಪಡಲಾಗಿದೆ.

ಕ್ರಿ.ಶ. ಸುಮಾರು ೧೭೭೦ ಹಾಗೂ ೧೮೪೧ ರ ಕಾಲದಲ್ಲಿದ್ದ ಜೈನ ಕವಿಯಾದ ದೇವಚಂದ್ರನು ಭಕ್ತಿಸಾರ ಶತಕತ್ರಯ ಹಾಗೂ ಸುಮೇರು ಶತಕಗಳನ್ನು ಬರೆದಿರುವನೆಂದು ಕವಿಚರಿತೆಕಾರರು ಹೇಳುತ್ತಾರೆ.( ಕರ್ನಾಟಕಟ ಕವಿಚರಿತೆ ಭಾಗ ೩ ೧೯೭೪ ಪು.೧೪೧) ಆದರೆ ಈ ಶತಕಗಳ ಬಗ್ಗೆಹೆಚ್ಚಿನ ವಿವರ ತಿಳಿದಿಲ್ಲ. ಇಪ್ಪತ್ತನೆಯ ಶತಮಾನದಲ್ಲಿ ಕೆಲವೊಂದು ಜೈನ ಶತಕಗಳು ರಚಿತವಾಗಿವೆ. ರವಿಕಿರಣ ಅವರಿಂದ ೧೯೬೯ ರಲ್ಲಿ ರಚಿತವಾದ ಮಹಾವೀರ ಜೀವನ ಶತಕವು ಮಹಾವೀರನ ಜೀವನವನ್ನು ಕುರಿತ ಶತಕವಾಗಿದೆ. ೧೯೬೫ರಲ್ಲಿ ಜೈನವೈರಾಗ್ಯ ಶತಕವೆಂದು ಒಂದು ಶತಕವು ಮಂಗಳೂರಿನ ವಿವೇಕಾಭ್ಯುದಯ ಗ್ರಂಥಮಾಲೆಯ ಮೂಲಕ ಪ್ರಕಟವಾಗಿದೆ. ಇದರಲ್ಲಿ ಜೈನಧರ್ಮಕ್ಕೆ ಸಂಬಂಧಪಟ್ಟ ನೀತಿ - ತತ್ವ ಹಾಗೂ ವೈರಾಗ್ಯ ವಿಚಾರಗಳನ್ನು ಗದ್ಯದಲ್ಲಿ ಕೊಡಲಾಗಿದೆ. ೧೯೭೩ ರಲ್ಲಿ ಕೆ.ಎಸ್. ಭಟ್ ಶಿರಾಡಿಪಾಲ್ ಅವರು ಶ್ರೀ ಧರ್ಮಸ್ಥಳ ಗೊಮ್ಮಟೇಶ್ವರ ಶತಕವನ್ನು ಪ್ರಕಟಿಸಿದ್ದಾರೆ. ಇದೊಂದು ವಿಶಿಷ್ಟ ಕೃತಿ. ಇದರಲ್ಲಿ ಧರ್ಮಸ್ಥಳದಲ್ಲಿ ಸ್ಥಾಪಿತವಾದ

ಬಾಹುಬಲಿ ಮೂರ್ತಿಯ ಪ್ರಮಾಣ ವೈಭವ ಬಾಹುಬಲಿಯ ಸಂಕ್ಷಿಪ್ತ ಜೀವನ ವೃತ್ತಾಂತ ಮತ್ತು ಭಕ್ತರಿಗೆ ಭಜನೆಮಾಡಲು ಅನುಕೂಲವಾಗುವಂತಹ ಶ್ರೀ ಬಾಹುಬಲೀ ಭಜನೆಗಳಿವೆ. ಈ ಶತಕ ಪದ್ಯಗಳು ವಿವಿಧ ವೃತ್ತಗಳಲ್ಲಿ, ಕಂದಪದ್ಯ, ಭಾಮಿನಿ ಷಟ್ಪದಿ, ಸಾಂಗತ್ಯ ಹಾಗೂ ಶಾಸ್ತ್ರೀಯ ಸಂಗೀತದ ಲಲಿತ ಬಂಧಗಳಲ್ಲಿ ರಚಿತವಾಗಿವೆ. ಈ ಶತಕವು ಎಲ್ಲರಿಗೂ ರುಚಿಸುವಂತಹ ಲಲಿತವೂ, ಅರ್ಥಗಾಂಭೀರ್ಯವೂ ಪಾರಮಾರ್ಥಿಕವೂ ಆದ ಶಬ್ದಚಿತ್ರಗಳಿಂದ ಕೂಡಿದೆ. ೧೯೭೪ ರಲ್ಲಿ ಪ್ರಕಟವಾದ ಎಸ್.ಪಿ. ಪದ್ಮಣ್ಣ ಅವರ ಭಶತಕಗಳು ಎಂಬ ಕೃತಿಯಲ್ಲಿಪರಂಜ್ಯೋತಿ ಶತಕ ಮತ್ತು ಪಾರ್ಶ್ವನಾಥ ಶಥಕ ಎಂಬ ಎರಡು ಜೈನ ಶತಕಗಳಿವೆ. ಸಾಂಗತ್ಯದಲ್ಲಿರುವ ಪರಂಜ್ಯೋತಿ ಶತಕದಲ್ಲಿ ವೈರಾಗ್ಯ ಮತ್ತು ನೀತಿ ವಿಚಾರಗಳು ನಿರೂಪಿತವಾಗಿದ್ದು ಇಲ್ಲಿನ ಪದ್ಯಗಳು ಪರಂಜ್ಯೋತಿ ಎಂದು ಕೊನೆಗೊಳ್ಳುತ್ತದೆ. ಆರಂಭದಲ್ಲಿ ಕೇವಲಿನಾಥನ ಸ್ತುತಿಯಿದೆ. ಸರಳ ಸುಂದರ ಶೈಲಿಯಲ್ಲಿರಚಿತವಾದ ಪಾರ್ಶ್ವನಾಥ ಶತಕವು ಮತ್ತೇಭ ವಿಕ್ರೀಡಿತ ವೃತ್ತದಲ್ಲಿದೆ. ಇದರಲ್ಲಿಯೂ ನೀತಿ ತತ್ವಗಳು ನಿರೂಪಿತವಾಗಿವೆ. "ಶತಕಮಂ ಭೂಲೋಕದಾ ಶಾಂತಿಗಂ ಪದಗೂಡುತ್ತಲೀ ಕಾವ್ಯಮಂ ರಚಿಸಿದಂ" ಎಂಬುದಾಗಿ ಕವಿಯೇ ಶತಕದ ಕೊನೆಯಲ್ಲಿ ಹೇಳಿದ್ದಾರೆ. ಇವಲ್ಲದೆ ಬ್ರಹ್ಮಯ್ಯನೆಂಬವನ ರಚಿಸಿದ ಅಪರಾಜಿತೇಶ್ವರ ಶತಕ, ನೂತ್ನನಾಗಚಂದ್ರನ ಜಿನಮುನಿ ತನಯ ಶತಕ ಮುಂತಾದವು ಜೈನ ಶತಕಗಳೇ ಆಗಿರಬೇಕು. ಆದರೆ ಈ ಶತಕಗಳ ಬಗ್ಗೆ ಹೆಚ್ಚಿನ ವಿಚಾರ ತಿಳಿದು ಬರುವುದಿಲ್ಲ. ಇವಲ್ಲದೆ ಇನ್ನೂ ಕೆಲವು ಜೈನ ಶತಕಗಳು ಇರುವ ಸಾಧ್ಯತೆಯಿದೆ. ಒಟ್ಟಿನಲ್ಲಿಕನ್ನಡ ಶತಕ ಸಾಹಿತ್ಯ ಕ್ಷೇತ್ರಕ್ಕೆ ಜೈನಶತಕಗಳ ಕೊಡುಗೆ ಕಡಿಮೆಯಾದರೂ ಮಹತ್ವಪೂರ್ಣವಾಗಿದೆ.

ರತ್ನಾಕರವರ್ಣಿಯಿಂದ ರಚಿತವಾದ ಶತಕಗಳು ಕನ್ನಡ ಸಾಹಿತ್ಯ ಸಾಗರದ ಅಮೂಲ್ಯ ರತ್ನಗಳಾಗಿವೆಯೆಂಬುದರಲ್ಲಿ ಸಂದೇಹವಿಲ್ಲ.

# ಪ್ರಾಕೃತ ಕಾವ್ಯ - ಅಗಡದತ್ತ ಚರಿಯಂ

ಡಾ। ಎನ್. ಸುರೇಶ್ ಕುಮಾರ್

ಪ್ರಾಚೀನ ಭಾರತೀಯ ವಾಙ್ಮಯದಲ್ಲಿ ಪ್ರಾಕೃತ ಕಥಾ ಸಾಹಿತ್ಯಕ್ಕೆ ವಿಶಿಷ್ಟ ಸ್ಥಾನವಿದೆ. ಈ ಕಥೆಗಳಲ್ಲಿ ನೈತಿಕತೆ ಹಾಗೂ ದಾರ್ಶನಿಕ ಅನುಭೂತಿಗಳ ವಿವರಗಳೂ ಇರುತ್ತವೆ. ವ್ಯಾವಹಾರಿಕ ಜೀವನದಲ್ಲಿ ಬರುವ ಸಮಸ್ಯೆಗಳನ್ನು ಮುಂದುಮಾಡಿ ಅವುಗಳಿಗೆ ಸಮಾಧಾನವನ್ನು ನೀಡುವ ಪ್ರಯತ್ನವನ್ನು ಪ್ರಾಕೃತ ಕಾವ್ಯಗಳಲ್ಲಿ ಮಾಡಲಾಗಿದೆ. ಈ ಕಥಾ ಕಾವ್ಯಗಳ ಲೇಖಕರು ತಮ್ಮ ಕಾವ್ಯಗಳ ಮಾಧ್ಯಮದ ಮೂಲಕ ಸಮಕಾಲೀನ ರಾಜನೈತಿಕ, ಆರ್ಥಿಕ, ಸಾಮಾಜಿಕ ಹಾಗೂ ಪಾರಿವಾರಿಕ ಪರಿಸ್ಥಿತಿಗಳನ್ನು ಹೃದಯಸ್ಪರ್ಶಿ ವಿವರಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಆ ಕಾರಣಗಳಿಂದ ಈ ಸಾಹಿತ್ಯಕ್ಕೆ ವಿಶೇಷ ಆದರ ದೊರಕುತ್ತಾ ಬಂದಿದೆ. ಡಾ॥ಕೆ.ಪಿ.ನಾಗ್ ಮುಂತಾದ ಇತಿಹಾಸಕಾರರು ಹೇಳಿರುವಂತೆ ಪ್ರಾಕೃತ ಕಥೆಗಳು ಮಧ್ಯಕಾಲೀನ ಪರ್ಶಿಯಾ, ಐರೋಪ್ಯ ಸಾಹಿತ್ಯಗಳ ಮೇಲೂ ಪ್ರಭಾವ ಬೀರಿವೆ. ಈ ಹೇಳಿಕೆ ತಥ್ಯವಿದೆ, ಏಕೆಂದರೆ ಪಶ್ಚಿಮ ಏಶಿಯಾ ಮತ್ತು ಅನ್ಯ ದೇಶಗಳೊಂದಿಗೆ, ಭಾರತದ ವ್ಯಾಪಾರ ಹಾಗೂ ಸಾಂಸ್ಕೃತಿಕ ಸಂಬಂಧಗಳಿತ್ತು. ವ್ಯಾಪಾರಿಗಳು ತಮ್ಮ ವ್ಯಾಪಾರ ಸಾಮಗ್ರಿಗಳೊಂದಿಗೆ, ತಮ್ಮ ಭಾಷೆ , ಸಾಹಿತ್ಯ, ಸಂಸ್ಕೃತಿಗಳನ್ನು ಭಾರತೀಯ ಆದರ್ಶಗಳನ್ನು ವಿದೇಶಗಳಲ್ಲಿ ಪ್ರತ್ಯಕ್ಷ ಇಲ್ಲವೆ ಪರೋಕ್ಷವಾಗಿ ಹರಡಿರುತ್ತಾರೆ. ಅವು ಅಲ್ಲಿನ ಉತ್ತರ ಕಾಲೀನ ವಿಚಾರಧಾರೆಗಳಲ್ಲಿ ಅವತರಿಸಿ ಸಾಹಿತ್ಯ ಮಾಧ್ಯಮಗಳಲ್ಲಿ ಬಿಂಬಿತವಾಗಿ ಮೂರ್ತರೂಪ ಪಡೆದಿರುವುದು ಕಂಡುಬರುತ್ತದೆ.

ಪ್ರಾಕೃತ ಸಾಹಿತ್ಯ ಸಂಸ್ಕೃತ ಸಾಹಿತ್ಯದಂತೆ ವಿಪುಲವಾಗಿದೆ. ಅದರಲ್ಲೂ ಪ್ರಾಕೃತ ಕಥಾ ಸಾಹಿತ್ಯ ಧಾರ್ಮಿಕ ವಿಚಾರಧಾರೆಗಳನ್ನು ಅವಲಂಬಿಸಿ ಪರಿವರ್ಧಿತಗೊಂಡಿದೆ. ಅಂತಹ ಕಥಾ ಸಾಹಿತ್ಯದಲ್ಲಿ 'ಅಗಡದತ್ತ ಚರಿಯಂ' ಹೆಚ್ಚು ರಮಣೀಯವಾದ ಲೌಕಿಕ ಕಥೆಯಾಗಿದೆ. ಪ್ರಾಚೀನಕಾಲದ ಲೌಕಿಕ ಕೃತಿಗಳಲ್ಲಿ ಚದುರಿಹೋಗಿದ್ದ ಈ ಅಗಡದತ್ತಚರಿತೆಯನ್ನುಸಂಗ್ರಹಿಸಿದವನು ಆಚಾರ್ಯ ಸಂಘದಾಸಗಣಿಯ ಕ್ರಿ.ಶ. ಸುಮಾರು 4ನೇ. ಶ.ದ. ಸಂಘದಾಸಗಣಿ. ತನ್ನ 'ವಸುದೇವಹಿಂಡೀ' ಎಂಬ ಕೃತಿಯಲ್ಲಿ ಈ ಕಥೆಗೆ ಒಂದು ವ್ಯವಸ್ಥಿತ ರೂಪವನ್ನು ನೀಡಿದನು. ಇದನ್ನು ಆಧರಿಸಿ ದೇವೇಂದ್ರಗಣಿ ಎಂಬ ಶ್ವೇತಾಂಬರಾಚಾರ್ಯ ಕಥೆಗೆ ವಿಸ್ತೃತರೂಪವನ್ನು ನೀಡಿದನು. ಈ ಕಥೆಯನ್ನು ದೇವೇಂದ್ರಗಣಿಯು 'ಉತ್ತರಾಧ್ಯಯನ ಸೂತ್ರ' ಎಂಬ ಮೂಲಸೂತ್ರಗಳಲ್ಲಿ ಒಂದಾದ ಸೂತ್ರಗ್ರಂಥದ ನಾಲ್ಕನೇ ಅಧ್ಯಾಯದ ಆರನೇ ಗಾಹೆಯ ಟೀಕೆಯ ಸಂದರ್ಭದಲ್ಲಿ ಪ್ರಸ್ತಾಪಿಸಿದ್ದಾನೆ. ಇವನ ಕಾಲ ಕ್ರಿ.ಶ೧೧ನೇ ಶತಮಾನ. ಕಾವ್ಯ ಮಹಾರಾಷ್ಟ್ರೀ ಪ್ರಾಕೃತ ಭಾಷೆಯಲ್ಲಿದೆ. ಕಾವ್ಯದಲ್ಲಿ ಒಟ್ಟು ೩೨೩

ಗಾಹೆಗಳಿವೆ. ಇದರ ಭಾಷೆ ಸೇತುಬಂಧ, ಗಉಡವಹೋ ಲೀಲಾವ ಈ ಮುಂತಾದ ಮಹಾಕಾವ್ಯಗಳ ಮಹಾರಾಷ್ಟ್ರೀ ಭಾಷೆಗಿಂತ ಸ್ವಲ್ಪ ಭಿನ್ನವಿದೆ. ಆದರೆ ಭಾಷೆ ಸರಳವಾಗಿದೆ. ಪ್ರಾಕೃತ ಭಾಷಾ ಅಧ್ಯಯನದ ದೃಷ್ಟಿಯಿಂದ ಗಮನಾರ್ಹವಾದ ಕೃತಿಯಾಗಿದೆ. ಕಾವ್ಯದಲ್ಲಿ ಬರುವ ಕಥಾನಕವು ಅತ್ಯಂತ ಸರಸ ಹಾಗೂ ಮಾರ್ಮಿಕತೆಯಿಂದ ಕೂಡಿದೆ.

**ಕಥಾವಸ್ತು :** ಶಂಖಪುರ ಎಂಬ ರಾಜ್ಯ, ಸುಂದರ ಎಂಬವನು ಅಲ್ಲಿಯ ರಾಜ, ಅವನ ಮಗ 'ಅಗಡದತ್ತ'. ಇವನು ಅವಿನೀತನೂ, ವ್ಯಭಿಚಾರಿಯೂ ಆಗಿ ಪ್ರಜೆಗಳನ್ನು ಪೀಡಿಸುವವನಾಗಿದ್ದನು. ಇದರಿಂದ ಪ್ರಜೆಗಳ ಹಾಗೂ ರಾಜನ ಕೋಪಕ್ಕೆ ಈಡಾಗಿ ರಾಜ್ಯ ಭ್ರಷ್ಟನಾಗುತ್ತಾನೆ. ರಾಜ್ಯಭ್ರಷ್ಟಗೊಂಡ ಅಗಡದತ್ತ ವಾರಾಣಸಿಗೆ ಹೋಗಿ ಪವನಚಂಡನೆಂಬ ಉತ್ತಮ ಗುರುವಿನ ಸಾನ್ನಿಧ್ಯಪಡೆದು ಸಕಲವಿದ್ಯೆಗಳನ್ನು ಕಲಿಯುತ್ತಾನೆ. ಅಲ್ಲಿಯೇ ಮದನ ಮಂಜರಿ ಎಂಬ ರಾಜಶ್ರೇಷ್ಠಿಯ ವಿವಾಹಿತ ಪುತ್ರಿಯು ಅವನಲ್ಲಿ ಅನುರಕ್ತಳಾಗಿ ಆತನನ್ನು ವಿವಾಹವಾಗುವಂತೆ ಬೇಡುತ್ತಾಳೆ.

ಒಮ್ಮೆ ಆ ವಾರಾಣಸೀ ನಗರದಲ್ಲಿ ಮದ್ದಾನೆಯೊಂದು ನಗರವನ್ನು ಹಾನಿಗೊಳಿಸುತ್ತಾ ಇರುವುದು ಅದೇ ವೇಳೆಗೇ ಅಗಡದತ್ತನು ಆ ಆನೆಯನ್ನು ನಿಯಂತ್ರಿಸಿ ರಾಜನಿಗೊಪ್ಪಿಸುತ್ತಾನೆ. ಮತ್ತೊಮ್ಮೆ ಅದೇ ನಗರದಲ್ಲಿ ಚೋರಹಾವಳಿಯು ತೀವ್ರವಾದಾಗ ಅಗಡದತ್ತ ಆ ಚೋರರನ್ನು ಏಳು ದಿನಗಳೊಳಗಾಗಿ ಹಿಡಿಯುವುದಾಗಿ ಪ್ರತಿಜ್ಞೆಗೈದು ಏಳನೆಯ ಚೋರನನ್ನು ವಧಿಸಿ ರಾಜನ ಮೆಚ್ಚುಗೆಗೆ ಪಾತ್ರನಾಗುತ್ತಾನೆ ಹಾಗೂ ರಾಜ ತನ್ನ ಮಗಳನ್ನು ವಿವಾಹಮಾಡಿ ಆತನಿಗೆ ಒಪ್ಪಿಸುತ್ತಾನೆ. ಒಮ್ಮೆ ತಂದೆಯು ಮಗನನ್ನು ನೋಡುವ ಆಶಯದಿಂದ ಅಲ್ಲಿಗೆ ಕರೆ ಕಳುಹಿಸುತ್ತಾನೆ. ಅಗಡದತ್ತ ರಾಜನ ಅಪ್ಪಣೆ ಪಡೆದು ತಂದೆಯನ್ನು ಕಾಣುವ ಸಲುವಾಗಿ ಶಂಖಪುರಕ್ಕೆ ಹೊರಡುತ್ತಾನೆ. ಜೊತೆಗೆ ಪ್ರೇಯಸಿ ಮದನಮಂಜರಿಯನ್ನು ಉಪಾಯವಾಗಿ ಅಪಹರಿಸಿ ಕರೆದೊಯ್ಯುತ್ತಾನೆ. ದಾರಿಯಲ್ಲಿ ಭಿಲ್ಲರಾಜ ಎದುರಾಗಿ ಯುದ್ಧ ಹೂಡುತ್ತಾನೆ. ಅಗಡದತ್ತನೂ ಯುದ್ಧಮಾಡುತ್ತಾನಾದರೂ ಭಿಲ್ಲರಾಜನನ್ನು ವಧಿಸಲು ಅಸಮರ್ಥನಾಗುತ್ತಾನೆ. ಕೊನೆಗೆ ಉಪಾಯದಿಂದ ರೂಪಸಿಯಾದ ತನ್ನ ಪತ್ನಿಯನ್ನೇ ರಥದ ಮುಂದೆ ಬರುವಂತೆ ಹೇಳುತ್ತಾನೆ. ಭಿಲ್ಲರಾಜ ಅವಳನ್ನು ಕಂಡೊಡನೆ ಯುದ್ಧವನ್ನೆ ಮರೆತು ಸುಮ್ಮನಾಗಲು ಅಗಡದತ್ತ ಭಿಲ್ಲರಾಜನನ್ನು ವಧಿಸುತ್ತಾನೆ. ಅನಂತರ ಪುನಃ ಪ್ರಯಾಣ ಮುಂದುವರಿಸುತ್ತಾನೆ. ಭಿಲ್ಲರಾಜ ಮೃತನಾದುದನ್ನು ಕಂಡ ಅವನ ಐವರು ಸೋದರರು ಅಗಡದತ್ತನನ್ನು ಕೊಲ್ಲಲು ಹೊಂಚುಹಾಕುತ್ತಾ ಅವನನ್ನು ಅನುಸರಿಸುತ್ತಾರೆ. ವನಾಂತರದಲ್ಲಿ ಪ್ರಯಾಣ ಮುಂದುವರೆಸುತ್ತಿದ್ದ ಅಗಡದತ್ತನಿಗೆ ಸಾಧುವೇಷದ ದುರ್ಯೋಧನ ಎಂಬ ಚೋರನು ಎದುರಾಗಿ, ತಾನು ಶಂಖಪುರಕ್ಕೆ ಬರುವುದಾಗಿ ಹೇಳಿ ತನ್ನಲ್ಲಿದ್ದ ಸಂಪತ್ತನ್ನು ಅಗಡದತ್ತನಿಗೊಪ್ಪಿಸಿ ಅವನನ್ನು ಜೊತೆಗೂಡುತ್ತಾನೆ. ಅವರು ಮುಂದೆ ಸಾಗುತ್ತಿದ್ದಂತೆ ಒಂದು ಗೋಕುಲವು ಕಾಣಿಸುವುದು. ಚೋರನು ಅವರೆಲ್ಲ ತನ್ನ ಪರಿಚಯವುಳ್ಳವರು ಎಂದು ಅಲ್ಲಿಗೆ ಅಗಡದತ್ತನನ್ನು ಕರೆದೊಯ್ದು ಅವನಿಗೆ ವಿಷಮಿಶ್ರಿತಾಹಾರವನ್ನು ನೀಡುತ್ತಾನೆ. ಆದರೆ ಸಾಧುವಿನ ಕಪಟವನ್ನು ಊಹಿಸಿದ ಅಗಡದತ್ತ ನಿರಾಕರಿಸುತ್ತಾನೆ. ಆಗ ಖಡ್ಗವನ್ನು ಹಿಡಿದು ವಧಿಸಲೆಂದು ಅಗಡದತ್ತನತ್ತ ಚೋರ ಧಾವಿಸುತ್ತಾನೆ. ಅಗಡದತ್ತನೂ ಶೌರ್ಯದಿಂದ ಹೋರಾಡಿ ಚೋರನನ್ನು ಕೆಳಗುರುಳಿಸುತ್ತಾನೆ. ಚೋರ ಸಾಯುವ ಮುನ್ನ ಅಗಡದತ್ತನಿಗೆ ತನ್ನ ಸಂಪತ್ತನ್ನು ಹಾಗೂ ಸ್ತ್ರೀಯನ್ನು ಪಡೆಯುವಂತೆ ಹೇಳುತ್ತಾನೆ. ಅದರಂತೆ ಸಂಪತ್ತು ಹಾಗೂ ಚೋರನ ಪತ್ನಿಯಿರುವೆಡೆಗೆ ಹೋಗುತ್ತಾನೆ. ಅಲ್ಲಿ

ಚೋರಪತ್ನಿಯನ್ನು ಅಗಡದತ್ತ ಆಸಕ್ತಿಯಿಂದ ನೋಡುತ್ತಿರಲು ಮದನಮಂಜರಿಯಿಂದ ತೀವ್ರವಾಗಿ ನಿಂದೆಗೊಳಗಾಗುತ್ತಾನೆ. ನಿಂದೆಗೊಂಡ ಅಗಡದತ್ತ ಮದನಮಂಜರಿಯೊಂದಿಗೆ ಪ್ರಯಾಣ ಮುಂದುವರಿಸುತ್ತಾನೆ. ದಾರಿಯಲ್ಲಿ ಆನೆ, ಹುಲಿ, ವಿಷಸರ್ಪ ಮುಂತಾದವುಗಳ ಬಾಧೆಗಳನ್ನು ಪರಾಕ್ರಮದಿಂದ ಎದುರಿಸಿ ನಿವಾರಿಸುತ್ತಾ ಶಂಖಪುರ ಸೇರುತ್ತಾನೆ. ಅಲ್ಲಿ ಮಾತಾ-ಪಿತರೊಂದಿಗೆ ಹಾಗೂ ಮದನಮಂಜರಿಯೊಂದಿಗೆ ಸುಖವಾಗಿ ಕಾಲಕಳೆಯುತ್ತಾನೆ.

ಒಮ್ಮೆ ವಸಂತಕಾಲ ಆಗಮಿಸಲು ರಾಜ ತನ್ನ ಪರಿವಾರದೊಂದಿಗೆ ವನವಿಹಾರಕ್ಕಾಗಿ ಹೋಗುತ್ತಾನೆ, ಅಗಡದತ್ತನೂ ಮದನಮಂಜರಿಯೊಂದಿಗೆ ಅವರನ್ನು ಜೊತೆಗೂಡುತ್ತಾನೆ. ವಿನೋದದಿಂದ ಕಾಲಕಳೆದು ರಾಜ ತನ್ನ ಪರಿವಾರದೊಂದಿಗೆ ಹೊರಡುತ್ತಾನೆ. ಅಗಡದತ್ತ ಅವರನ್ನು ಕಳುಹಿಸಿ ತನ್ನ ರಥದತ್ತ ಹೋಗುವಷ್ಟರಲ್ಲಿ ಹಾವೊಂದು ಮದನಮಂಜರಿಯನ್ನು ಕಚ್ಚುವುದು ಮದನಮಂಜರಿಯನ್ನು ಅಗಡದತ್ತ ಹಿಡಿದುಕೊಳ್ಳುತ್ತಿದ್ದಂತೆ ಆಕೆ ಮೂರ್ಛಿತಳಾಗುತ್ತಾಳೆ. ತನ್ನ ಪ್ರಿಯೆ ಮೃತಳಾದಳೆಂದೇ ತಿಳಿದು ದುಃಖಿತನಾಗಿ ಅವಳ ಅಂತ್ಯಕ್ರಿಯೆಗಾಗಿ ಚಿತೆ ಸಿದ್ಧಪಡಿಸಿ ತಾನೂ ಅದನ್ನೇರಿ ಮರಣಹೊಂದುವುದೇ ಲೇಸೆಂದು ನಿರ್ಧರಿಸುತ್ತಾನೆ. ಅದೇ ವೇಳೆಗೇಳಿಬ್ಬರು ವಿದ್ಯಾಧರರು ಬಂದು ಅಕಾರಣವಾಗಿ ಅವಳನ್ನು ಸುಡಬೇಡ, ನಿನ್ನ ಪ್ರಿಯೆಯನ್ನು ಸ್ವಸ್ಥಳನ್ನಾಗಿಸುವೆವೆಂದು ಅವಳ ಮೇಲೆ ಮಂತ್ರಜಲ ಸೇಚಿಸುವರು. ಅವಳು ಸ್ವಸ್ಥಳಾಗುತ್ತಿದ್ದಂತೆ ವಿದ್ಯಾಧರರು ಮುಂದೆ ಹೋಗುತ್ತಾರೆ. ಸುತ್ತ ಕತ್ತಲೆ ಆವರಿಸಿತ್ತು. ಅಗಡದತ್ತ ರಾತ್ರಿಕಳೆಯಲೆಂದು ಬಳಿಯಲ್ಲಿದ್ದ ಮಂದಿರಕ್ಕೆ ಪತ್ನಿಯೊಂದಿಗೆ ಹೋಗುತ್ತಾನೆ. ಭಿಲ್ಲರಾಜನ ಐವರು ಸೋದರರೂ ಭ್ರಾತೃಘಾತಕನ ವಧೆಗಾಗಿ ಅದೇ ದೇಗುಲದಲ್ಲಿ ಅವಿತು ಕುಳಿತಿದ್ದರು. ಅದನ್ನರಿಯದ ಅಗಡದತ್ತ ಕತ್ತಲನ್ನು ದೂರಗೊಳಿಸುವುದಕ್ಕಾಗಿ ಬೆಂಕಿ ತರುವೆನೆಂದು ಹೇಳಿ ಪತ್ನಿಯನ್ನು ಅಲ್ಲಿಯೇ ಬಿಟ್ಟು ಹೋಗುತ್ತಾನೆ. ಅದೇ ವೇಳೆಗೆ ಭಿಲ್ಲರಾಜನ ಸೋದರರಲ್ಲಿಕಿರಿಯವನು ತನ್ನಲ್ಲಿದ್ದ ದೀಪವನ್ನು ಬೆಳಗುತ್ತಾನೆ. ಬೆಳಕಿನಲ್ಲಿ ಅವನನ್ನು ಕಂಡು ಮದನಮಂಜರಿ ತನ್ನನ್ನು ವಿವಾಹವಾಗು ಎಂದು ಕೇಳುತ್ತಾಳೆ, ಅವನು ತಾನು ಸಿದ್ಧನಿರುವೆನಾದರೂ ನಿನ್ನ ಪತಿ ಈ ವಿಷಯ ತಿಳಿದ ಕೂಡಲೆ ನನ್ನನ್ನು ಜೀವಸಹಿತ ಬಿಡಲಾರ ಎನ್ನುತ್ತಾನೆ. ಅದಕ್ಕೆ ಅವಳು ನೀನು ನನ್ನನ್ನು ವಿವಾಹವಾಗುವುದಾದರೆ ಪತಿಯನ್ನೇ ವಧಿಸುವೆನೆನ್ನುತ್ತಾಳೆ. ಅಷ್ಟರಲ್ಲಿ ಅಗಡದತ್ತ ಬಂದುದನ್ನು ಕಂಡು ಕೂಡಲೇ ದೀಪವನ್ನಾರಿಸುತ್ತಾಳೆ. ಅಗಡದತ್ತ ದೇಗುಲದಲ್ಲಿ ಬೆಳಕು ಹೇಗೆ ಬಂತು ಎನ್ನುತ್ತಾನೆ, ಅದು ನೀನೇ ತಂದಿದ್ದ ಬೆಂಕಿಯ ಪ್ರತಿಬಿಂಬ ಎಂದು ಹೇಳುವಳು. ಬಳಿಕ ಅಗಡದತ್ತ ತನ್ನ ಖಡ್ಗವನ್ನು ಅವಳಿಗೊಪ್ಪಿಸಿ ಬೆಂಕಿಯುರಿ ಹೆಚ್ಚಿಸಲೆಂದು ಬಗ್ಗಿದಾಗ ಮದನಮಂಜರಿ ಖಡ್ಗ ತೆಗೆದು ಅವನನ್ನು ಕೊಲ್ಲಲೆಂದು ಕೈ ಎತ್ತುತ್ತಾಳೆ. ಭಿಲ್ಲಪತಿಯ ಕಿರಿಸೋದರ ಅವಳ ಕೈಕೊಡವಿ ಖಡ್ಗ ದೂರ ಬೀಳುವಂತೆ ಮಾಡುತ್ತಾನೆ. ಅರಿಯದ ಅಗಡದತ್ತ ಅವಳಲ್ಲಿ ಖಡ್ಗ ಹೇಗೆ ಬಿತ್ತೆಂದು ಕೇಳಿದಾಗ ಅವಲು ಬಿಚ್ಚಿದ ಖಡ್ಗ ಹೇಗಿರುವುದೆಂದು ನೋಡುವ ಆಸೆಯಾಯಿತು ಆ ಕಾರಣ ಖಡ್ಗವನ್ನು ಒರೆಯಿಂದ ಖಡ್ಗವನ್ನು ತೆಗೆದು ಝುಳಪಿಸಿದೆ, ಕೈಜಾರಿ ಖಡ್ಗ ಕೆಳಕ್ಕೆ ಬಿದ್ದಿತು ಎನ್ನುತ್ತಾಳೆ. ಅಗಡದತ್ತ ವಿಚಾರಮಾಡದೆ ಸುಮ್ಮನಾದ. ಬೆಳಗಾಗುತ್ತಲೆ, ತನ್ನ ಭವನದತ್ತ ಹೋಗುತ್ತಾನೆ. ಭಿಲ್ಲಪತಿಯ ಸೋದರರು ಸ್ತ್ರೀ ಸ್ವಭಾವವೇನೆಂಬುದನ್ನು ಪ್ರತ್ಯಕ್ಷದಲ್ಲಿ ಕಂಡು ಜೀವನದಲ್ಲಿ ಜುಗುಪ್ಸೆಗೊಂಡು ಮುನಿಯ ಬಳಿ ಬಂದು ಮುನಿದೀಕ್ಷೆ ಸ್ವೀಕರಿಸುತ್ತಾರೆ

ಕೆಲಕಾಲಾನಂತರ ಅಗಡದತ್ತ ಒಂದು ದುಷ್ಟಕುದುರೆಯ ಸವಾರಿ ಮಾಡುತ್ತಾನೆ. ಅದು ಕ್ಷಣಮಾತ್ರದಲ್ಲಿ ಅವನನ್ನು ದೂರದ ವನಪ್ರದೇಶಕ್ಕೆ ಒಯ್ಯುವುದು. ಕುದುರೆಯಿಂದ ಇಳಿದು

ಅಗಡದತ್ತ ಸುತ್ತಾಡುತ್ತಾ ಮುನಿಗಳಿದ್ದ ಸ್ಥಾನಕ್ಕೆ ಹೋಗುತ್ತಾನೆ. ಮುನಿಯನ್ನು ನಮಸ್ಕರಿಸಿ ಐವರು ತರುಣಮುನಿಗಳನ್ನು ಕಂಡು ಕುತೂಹಲದಿಂದ ಅವರ ಕುರಿತು ಕೇಳುತ್ತಾನೆ. ಮುನಿಯು ಆ ಯುವ ಮುನಿಗಳ ಸೋದರ ಭಿಲ್ಲಪತಿಯ ವಧೆಯೇ ಮೊದಲಾದ ಎಲ್ಲ ವೃತ್ತಾಂತಗಳನ್ನು ತಿಳಿಸುತ್ತಾನೆ. ಆ ಮುನಿ ಹೇಳಿದ ವೃತ್ತಾಂತ ತನಗೆ ಸಂಬಂಧಿಸಿದ್ದೇ ಆಗಿದೆ ಎಂದು ಮುನಿಯಲ್ಲಿ ನಿವೇದಿಸಿ ಸಂಸಾರದ ನಶ್ವರತೆ ಹಾಗೂ ಸ್ತ್ರೀಸ್ವಭಾವದಿಂದ ಉದ್ವಿಗ್ನನಾಗಿ ಯತಿ ದೀಕ್ಷೆ ಬೇಡಿ ಪಡೆದು ತಪೋನಿರತನಾಗುತ್ತಾನೆ.

**ಕಥಾನಾಯಕ :** 'ಅಗಡದತ್ತ-ಚರಿಯಂ' ಇದರ ಕಥಾನಯಕ 'ಅಗಡದತ್ತ' ಈತ ಶಂಖಪುರದ ರಾಜಾ ಸುಂದರನ ಮಗ. ಕಥೆಯ ಪ್ರಾರಂಭದಲ್ಲಿ ಇವನು ಅತಿದುಷ್ಟನಾಗಿ ಕಂಡುಬರುತ್ತಾನೆ. ಆದರೆ ಕ್ರಮೇಣ ಸಕಲ ವಿದ್ಯಾಪಾರಂಗತನಾಗಿ ಚಾರಿತ್ರವಂತನೂ, ವಿವೇಕಿಯೂ, ಜ್ಞಾನಿಯೂ, ಪರಾಕ್ರಮಿಯೂ,ಕೌಶಲಪೂರ್ಣನಾಗಿಯೂ ಬೆಳೆಯುತ್ತಾನೆ. ಕಥೆಯ ಪ್ರಾರಂಭದಲ್ಲಿ ಇವನ ದುಷ್ಟತನದ ಪರಾಕಾಷ್ಠೆಯನ್ನು ಕವಿ ಹೀಗೆ ಚಿತ್ರಿಸಿದ್ದಾನೆ.

ಧಮ್ಮತ್ಥದಯಾರಹಿಓ ಗುರುವಯಣ ವಿವಜ್ಜಿವೋ ಅಲಿಯವಾ ಈ
ಪರ ಮಣಿರಮಣಕಾಮೋ ನಿಸ್ಸಂಕೋ ಮಾಣಸೊಂಡೀರೋ''
ಮಜ್ಜಂ ಪಿಪಇ ಜೂಯಂ ರಮೇಇ ಪಿಸಿಯಂ ಮಹುಂ ಚ ಭಕ್ಖೇಇ'
ನಡ-ಚೇಡಯ-ವೇಸಾ-ವಿಂದ-ಪರಿಗಓ ಭಮಇ ಪುರಮಜ್ಝೇ''

- ಧರ್ಮ ಅರ್ಥ-ದಯಾ ಭಾವವಿಲ್ಲದವನೂ, ಗುರುವಚನವನ್ನು ತಿರಸ್ಕರಿಸುವವನೂ, ಸುಳ್ಳಾಡುವವನೂ, ಪರಸ್ತ್ರೀಯರಲ್ಲಿ ರಮಿಸುವ ಇಚ್ಛೆಯುಳ್ಳವನೂ, ಗರ್ವಿಯೂ, ನಿರ್ಭೀಕನೂ, ಮಧ್ಯ-ಮಾಂಸ-ಮಧುಗಳ ವ್ಯಸನಿಯೂ, ಜೂಜಾಡುವವನೂ ಆಗಿ ನಟ-ಚೇಟ-ವೇಶ್ಯೆಯರೊಂದಿಗೆ ನಗರದಲ್ಲಿ ಅಲೆದಾಡುತ್ತಿದ್ದನು.

ಅಗಡದತ್ತನ ಈ ರೀತಿಯ ದುಷ್ಟತನದಿಂದ ವ್ಯಾಕುಲರಾದ ಪ್ರಜೆಗಳು ರಾಜನ ಬಳಿ ದೂರುವರು. ರಾಜನು ತನ್ನ ಮಗನೆಂದೂ ಪುತ್ರಮೋಹಕ್ಕೊಳಗಾಗದೆ ಅವನನ್ನು ರಾಜ್ಯಭ್ರಷ್ಟನನ್ನಾಗಿ ಮಾಡುತ್ತಾನೆ. ಅಗಡದತ್ತನು ಚಿಂತೆಗೊಳಗಾಗದೆ ಅಲೆದಾಡುತ್ತಾ ವಾರಾಣಸಿಗೆ ಹೋಗಿ ಅಲ್ಲಿ ಪವನಚಂಡನೆಂಬ ಗುರುವಿನ ಸಾನ್ನಿಧ್ಯಪಡೆದು ಸಕಲವಿದ್ಯಾಪಾರಂಗತನಾಗುತ್ತಾನೆ. ತನ್ನನ್ನು ಮೋಹಿಸಿದ ಮದನಮಂಜರಿ ಎಂಬ ನಗರಶ್ರೇಷ್ಠಿಯ ವಿವಾಹಿತ ಪುತ್ರಿಯನ್ನೂ ವಿವಾಹವಾಗುವುದಾಗಿ ಭರವಸೆ ನೀಡುತ್ತಾನೆ. ಈ ನಡುವೆ ವಾರಾಣಸೀ ನಗರದಲ್ಲಿ ಮದದಾನೆಯು ಜನರನ್ನು ತ್ರಾಸಗೊಳಿಸುತ್ತಿರುವಾಗ ಅಗಡದತ್ತನು ತನ್ನ ಹಸ್ತಿ ವಿದ್ಯಾಕೌಶಲದಿಂದ ಅದನ್ನು ನಿಯಂತ್ರಿಸುತ್ತಾನೆ. ಆ ದೇಶದ ರಾಜನು ಸಂಪ್ರೀತನಾಗಿ ಅವನನ್ನು ಸನ್ಮಾನಿಸುತ್ತಾನೆ.

ಈ ರೀತಿ ತನ್ನ ಶೌರ್ಯ ಹಾಗೂ ವಿದ್ಯಾನೈಪುಣ್ಯತೆಯನ್ನು ಪ್ರದರ್ಶಿಸಿ ಸನ್ಮಾನಪಾತ್ರನಾದ ಕಥಾನಾಯಕ ಅಗಡದತ್ತನಿಗೆ ಭಯಂಕರನಾದ ನಗರದ ಚೋರ ಶಿಖಾಮಣಿಯನ್ನು ಹಿಡಿಯಬೇಕಾದ ಪ್ರಸಂಗವನ್ನು ಕವಿ ಕಾವ್ಯದಲ್ಲಿ ಸೃಷ್ಟಿಸಿದ್ದಾನೆ. ಅದರಿಂದ ಕಥಾನಾಯಕನ ಚರಿತೆಗೆ ಮತ್ತಷ್ಟು ಮೆರುಗು ನೀಡಿದಂತಾಗಿದೆ.

- ಪ್ರಜೆಗಳು ರಾಜನ ಬಳಿ ಬಂದು ನಗರದಲ್ಲಿ ನಡೆಯುತ್ತಿದ್ದ ಕಳ್ಳತನದ ವಿಷಯವನ್ನು ನಿವೇದಿಸುತ್ತಾರೆ. ರಾಜನು ಆರಕ್ಷಕರನ್ನು ಅದರ ಸಲುವಾಗಿ ನೇಮಿಸುತ್ತಾನೆ. ಆದರೆ ಅವರು ಕೆಲವೇ

ದಿನಗಳ ಬಳಿಕ ತಮ್ಮ ವೈಫಲ್ಯವನ್ನು ರಾಜನಲ್ಲಿ ತಿಳಿಸುತ್ತಾರೆ. ರಾಜ ಕ್ರೋಧಗೊಂಡು ಅವರನ್ನು ಜರೆಯುತ್ತಿರುವಾಗ (ಕಥಾನಾಯಕ) ಅಗಡದತ್ತ ಬಂದು ಸ್ವಾಮಿ' ಕೇವಲ ಏಳು ದಿನಗಳೊಳಗಾಗಿ ಕಳ್ಳನನ್ನು ಹಿಡಿದೊಪ್ಪಿಸದಿದ್ದಲ್ಲಿ ತನ್ನದೇಹವನ್ನು ಬೆಂಕಿಯಿಂದ ಸುಟ್ಟುಬಿಡುವೆನೆಂದು ರಾಜನ ಅಪ್ಪಣೆಯನ್ನು ಪಡೆಯುತ್ತಾನೆ.

ಪಹು ದೇಹಿ ಮಮಾಏಸಂ ಲಹೇಮಿ ಪುರತಕ್ಕರಂ ಸಿಗ್ಘಂ ॥
ಮಜ್ಝೇ ಸತ್ತದಿಣಾಣಂ ಪುರಚೋರಂ ನೋ ಲಹಾಮಿ ಜಇ ನಾಹ।
ತೋ ಜಲಿಯ ಜಲಣಜಾಲಾವಲೀಸು ಜಾಲೇಮಿ ನಿಯದೇಹಂ ॥

ಪ್ರತಿಜ್ಞೆಯನ್ನೇನೋ ಮಾಡಿದನು ಆದರೆ, ಏಳನೆಯ ದಿನ ಸಮಾಪ್ತಿಯಾಗುವ ಕಾಲ ಸಮೀಪಿಸುತ್ತಿದ್ದಂತೆ ಕರ್ತವ್ಯಪಾಲನೆಯಲ್ಲಿ ಅಸಮರ್ಥನಾಗುವೆನೋ ಎಂಬ ಶಂಕೆಯಿಂದ ಖಿನ್ನವಾಗಿ ಹೀಗೆ ಹೇಳಿಕೊಳ್ಳುತ್ತಾನೆ-

ಕಿಂ ವಚ್ಚಾಮಿ ವಿಏಸಂ ಕಿಂ ವಾ ತಾಯಸ್ಸ ಅಂತಿಯಂ ಜಾಮಿ ।
ಹರಿಊಣ ತಂ ಮಯಚ್ಛಿಂ ಕಿಂ ವಾ ರಣ್ಣಮ್ಮಿ ಗಚ್ಛಾಮಿ ॥

ಹೀಗೆ ಕರ್ತವ್ಯಪಾಲನೆಯಲ್ಲಿ ಅಸಮರ್ಥನಾಗುತ್ತೇನೋ ಎಂಬು ಭಯದಿಂದ ಅಗಡದತ್ತನು ಕಿಂ ಕರ್ತವ್ಯ ಮೂಢನಾಗಿ ವಿದೇಶಕ್ಕೆ (ಓಡಿ) ಹೋಗಲೇ, ತಂದೆಯ ಬಳಿಹೋಗಲೇ ಅಥವಾ ಮೃಗಲೋಚನೆಯಾದ ಮದನಮಂಜರಿಯನ್ನು ಅಪಹರಿಸಿ ಅರಣ್ಯಕ್ಕೆ ಹೋಗಲೇ ಎಂದು ಚಿಂತಿಸುತ್ತಾನೆ. ಇಲ್ಲಿ ಕವಿಯು ಅಗಡದತ್ತನ ಪಾತ್ರದ ಮೂಲಕ ಅಸಹಾಯ ಸ್ಥಿತಿಯಲ್ಲಿರುವ ಒಬ್ಬ ವ್ಯಕ್ತಿಯ ಮನೋಭಾವನೆಯ ತುಮುಲವನ್ನು ಬಹಿರಂಗಪಡಿಸಿದ್ದಾನೆ.

ಸತ್ಯವಾಕ್ಯ ಪರಿಪಾಲನಾಪರರೂ, ಉತ್ತಮ ಕುಲದಲ್ಲಿ ಜನಿಸಿದವರೂ ಆದ ಸತ್ಪುರುಷರಿಗೆ ಕೈಗೊಂಡ ಪ್ರತಿಜ್ಞೆಯನ್ನು ಸಾಧಿಸದೆ ಪಲಾಯನಮಾಡುವುದು ಯುಕ್ತವಲ್ಲ; ಎಂದು ತನ್ನ ಕರ್ತವ್ಯಪಾಲನೆಯ ವಿವೇಕದೊಂದಿಗೆ ದೃಢಪೂರ್ವಕವಾಗಿ ಹೀಗೆ ಹೇಳಿಕೊಳ್ಳುತ್ತಾನೆ.

ಕಿಂತು ನ ಜುತ್ತಂ ಏಯಂ ನಿಮ್ಮಲಕುಲಸಂಭವಾಣ ಪುರಿಸಾಣಂ।
ಜಂ ಕಿರ ನಿಯಜೀಹಾಏ ಪಡಿವನ್ನಂ ಅನ್ನಹಾ ಹೋ ಇ ॥
ಛಿಜ್ಜಉ ಸೀಸಂ ಅಹ ಹೋಉ ಬಂಧಣಂ ವಯಉ ಸವ್ವಹಾ ಲಚ್ಛೀ ।
ಪಡಿವನ್ನಪಾಲಣೇ ಸುಪುರಿಸಾಣ ಜಂ ಹೋಇ ತಂ ಹೋಉ ॥
ನೇಯಂ ಮಹವ್ವಯಂ ಖಲು ನರಟ್ಠಿಮುದ್ದಾಏ ಜಂ ಸಮುವ್ವಹಣಂ।
ಪಡಿವನ್ನಪಾಲಣೇ ಚಿಯ ಮಹವ್ವಯಂ ಧೀರಪುರಿಸಾಣಂ ॥

ಸ್ವಯಂ ತಾನೇ ಮಾಡಿರುವ ಪ್ರತಿಜ್ಞೆಯು ಸುಳ್ಳಾಗುವುದು ನಿರ್ಮಲಕುಲದಲ್ಲಿ ಜನಿಸಿದ ಪುರುಷರಿಗೆ ಯೋಗ್ಯವಲ್ಲ; ಬೇಕಾದರೆ, ಶಿರಚ್ಛೇದವೇ ಆಗಲಿ ಬಂಧನವೇ ಆಗಲಿ, ಸಂಪತ್ತೆಲ್ಲವೂ ಹೋಗಲಿ ಅಥವಾ ಏನೇ ಆಗಲಿ ಪ್ರತಿಜ್ಞಾಪಾಲಕರಾದ ಸಜ್ಜನರು ಪ್ರತಿಜ್ಞಾಪಾಲಕರಾಗಿಯೇ ಇರುತ್ತಾರೆ. ಮನುಷ್ಯ ಶರೀರರದಲ್ಲಿ ಕೇವಲ ಅಸ್ಥಿಪಂಜರ ಧಾರಣೆ ಮಾಡುವುದರಿಂದ ಮಹಾವ್ರತ ಪಾಲಿಸಿದಂತಾಗುವುದಿಲ್ಲ. ಕೈಕೊಂಡ ಪ್ರತಿಜ್ಞೆಯನ್ನು ಪಾಲಿಸುವುದೇ ಧೀರಪುರುಷರಿಗೆ ಮಹಾವ್ರತವೆ ಸಿಸುತ್ತದೆ. ಇಲ್ಲಿ ಕವಿಯು ಸತ್ಪುರುಷನಲ್ಲಿರಬೇಕಾದ ಪ್ರತಿಜ್ಞಾಪಾಲನೆ ಎಂಬ ಸದ್ಗುಣವನ್ನು ಹೇಳಿದ್ದಾನೆ ಅಲ್ಲದೆ ತನ್ನ ಕಥಾನಾಯಕನ ಗುಣವಿಶೇಷವನ್ನು ತೋರಿದ್ದಾನೆ.

ಈ ನಡುವೆ ಕಥಾನಾಯಕ ಚಿಂತಾಕ್ರಾಂತನಾಗಿ ಕುಳಿತಿರುವಾಗ ಮಾರುವೇಷದಿಂದ ಬಂದ ಕಳ್ಳನನ್ನು ಗುರುತಿಸಿ, ಅವನನ್ನು ಉಪಾಯದಿಂದ ಅನುಸರಿಸಿ ಸಕಾಲದಲ್ಲಿ ಹೊಡೆದು ಬೀಳಿಸುತ್ತಾನೆ. ಆ ಕಳ್ಳನು ಸ್ಮಶಾನದ ನೆಲಮನೆಯಲ್ಲಿ ತನ್ನ ತಂಗಿ ಹಾಗೂ ಅಪಾರಧನವೂ ಇರುವುದು ಅದನ್ನು ಸ್ವೀಕರಿಸುವಂತೆ ಕೋರಿ ಆ ಚೋರ ಅಲ್ಲಿಯೇ ಮರಣ ಹೊಂದುತ್ತಾನೆ. ಅಗಡದತ್ತ ಚೋರನ ನಿರ್ದೇಶನದಂತೆ ನೆಲಮನೆಗೆ ಹೋಗಲು ಅಲ್ಲಿ ಅವಳು ಆದರ ಪೂರ್ವಕ ಅಗಡದತ್ತನನ್ನು ಬರಮಾಡಿ ಶಯ್ಯೆಯನ್ನು ನೀಡುತ್ತಾಳೆ. ಆಗ ಪಟುಮತಿಯಾದ ಅಗಡದತ್ತ ನೀತಿಶಾಸ್ತ್ರ ವನ್ನು ಸ್ಮರಿಸಿ ಹೀಗೆ ಮನದಲ್ಲಿ ಹೇಳುತ್ತಾನೆ.

ಮಾಯಾ ಅಲಿಯಂ ಲೋಹೋ ಮೂಢತ್ತಂ ಸಾಹಸಂ ಅಸೋಯತ್ತಂ।
ನಿಸ್ಸಂಸಯಾ ತಹ ಚ್ಚಿಯ ಮಹಿಲಾಣ ಸಹಾವಯಾ ದೋಸಾ ॥
ನಘೇಪ್ಪಇ ಸುಸಿಣೇಹಿಂ ನ ವಿಜ್ಜಾಇ ನ ಗುಣೇಹಿಂ।
ನ ಯ ಲಜ್ಜಾಇ ನ ಯ ಮಾಣೇಣ ನ ಯ ಚಾಡುಯ ಸಯ - ಸಹಸ್ಸೇಹಿಂ ॥
ನ ಯ ಖರಕೋಮಲವಯಣೆ ನ ವಿಹ ವಿ ನ ಜೋವ್ವಣೇಣ ।
ದುಗ್ಗೇಜ್ಝಂ ಮಣು ಮಹಿಲಹಂ ಚಿಂತಹಿ ಆಯರೇಣ ॥
ಜೋ ಜಾಇ ಜುವಇವಗ್ಗೇ ಸಬ್ಭಾವ ಮಯಣಮೋಹಿಓ ಪುರಿಸೋ।
ದುತ್ತರದುಕ್ಖಸಮುದ್ದೇ ನಿವಡಇ ಸೋ ನತ್ಥಿ ಸಂದೇಹೋ ॥

ಸುಳ್ಳು, ಕಪಟ, ಲೋಭ, ಮೂರ್ಖತ್ವ, ಹಠ, ಅಪವಿತ್ರತೆ, ಕ್ರೂರತೆ ಇವು ನಿಶ್ಚಯವಾಗಿಯೂ ಸ್ತ್ರೀಯರಲ್ಲಿರುವ ಸ್ವಾಭಾವಿಕ ದೋಷವು ಸ್ತ್ರೀಯರ ಮನಸ್ಸನ್ನು ಸ್ನೇಹಪೂರ್ವಕವಾಗಿ, ವಿದ್ಯೆಯ ಮೂಲಕವಾಗಿ, ಗುಣಗಳ ಮೂಲಕವಾಗಿ, ಲಜ್ಜಾಪೂರ್ವಕವಾಗಿ, ಚಮತ್ಕಾರಪೂರ್ಣವಾದ ನೂರಾರು, ಸಾವಿರಾರು ವಚನಗಳಿಂದ ಮತ್ತು ಅತಕೋಮಲವಾದ ಮಾತುಗಳಿಂದ, ವೈಭವದಿಂದ, ಯೌವನದಿಂದ, ಅಥವಾ ಆದರದಿಂದಲೂ ವಶಪಡಿಸಲು ಸಾಧ್ಯವಿಲ್ಲ.

ಆದುದರಿಂದ ಪುರುಷರು ಕಾಮನಿಗೆ ವಶವರ್ತಿಯಾಗಿ ಯುವತಿಯರತ್ತ ಸದ್ಭಾವವನ್ನು ಪ್ರಕಟಿಸಿದಲ್ಲಿ ನಿಸ್ಸಂದೇಹವಾಗಿಯೂ ಅವರು ದಾಟಲಸಾಧ್ಯವಾದ ಸಮುದ್ರದಲ್ಲಿ ಮುಳುಗುತ್ತಾರೆ, ಎಂಬುದಾಗಿ ಅಪರಿಚಿತ ಸ್ತ್ರೀಯ ಬಗ್ಗೆ ಎಚ್ಚರವಹಿಸಿ ಮುಂದೆ ಸಂಭವಿಸಬಹುದಾದ ಗಂಡಾಂತರವನ್ನು ಊಹಿಸಿ ಅದನ್ನು ಎದುರಿಸಲು ಸಿದ್ಧನಾಗುತ್ತಾನೆ. ಅಷ್ಟರಲ್ಲಿ ವಂಚಕಿ ಕಳ್ಳನ ಸೋದರಿ ಅಗಡದತ್ತ ಕುಳಿತುಕೊಳ್ಳಬೇಕಿದ್ದ ಶಯ್ಯೆಯ ಮೇಲೆ ಚಪ್ಪಡಿಕಲ್ಲನ್ನು ಮೇಲಿಂದ ಬೀಳಿಸುತ್ತಾಳೆ. ಮತ್ತು ಅಗಡದತ್ತ ಸತ್ತು ಹೋಗಿರುತ್ತಾನೆಂದು ಭಾವಿಸಿ ಶಯ್ಯಾಗೃಹದತ್ತ ಬರುತ್ತಾಳೆ. ಅಪಾಯವನ್ನು ಊಹಿಸಿ ಉಪಾಯದಿಂದ ಪಾರಾದ ಅಗಡದತ್ತನು ಅವಳನ್ನು ಹಿಡಿದು ರಾಜನಿಗೊಪ್ಪಿಸಿ ನಡೆದ ಘಟನೆಗಳನ್ನು ರಾಜನಿಗೆ ನಿವೇದಿಸುತ್ತಾನೆ. ಪ್ರಕೃತ ಸಂದರ್ಭದಲ್ಲಿ ಕವಿ ಸ್ತ್ರೀ ವರ್ಗದ ಸ್ವಾಭಾವಿಕ ಗುಣಗಳೆಂದು ಮಾಡಿರುವ ಕಥನವು ತೀವ್ರಸ್ವರೂಪದ್ದು ಹಾಗೂ ಅನಗತ್ಯವೆಂದು ಕಂಡುಬಂದರೂ ಇಲ್ಲಿ ಕಥಾನಾಯಕನ ಪಾತ್ರದ ಘನತೆಯನ್ನು ಹೆಚ್ಚಿಸುವ ಸಲುವಾಗಿ ಕವಿ ಅನಿವಾರ್ಯವಾಗಿ ಸ್ತ್ರೀ ವರ್ಗವನ್ನು ದೂಷಿಸಿದ್ದಾನೆ ಎನ್ನಬೇಕಾಗಿದೆ ಮಾತ್ರ. ಇದರಿಂದ ನಾಯಕನ ನೀತಿಶಾಸ್ತ್ರಜ್ಞತೆಯ ಪರಿಚಯವಾಗುವುದು.

ಈ ಪ್ರಕಾರ ಕಳ್ಳನನ್ನು ವಧಿಸಿದ ಕಾರಣ ರಾಜನು ಅಗಡದತ್ತನ ಬಗ್ಗೆ ಸಂಪ್ರೀತನಾಗಿ ಪುರಸ್ಕರಿಸಿ ಅವನಿಗೆ ತನ್ನ ಮಗಳನ್ನು ಧಾರೆಯೆರೆದು, ಹಲವು ಗ್ರಾಮ ಸೈನ್ಯಬಲವನ್ನು ನೀಡುತ್ತಾನೆ. ಹೀಗೆ ಸ್ವಸಾಮರ್ಥ್ಯದಿಂದ ಮಹತ್ಸಾಧನೆಗಳನ್ನು ಸಾಧಿಸುವಷ್ಟರಲ್ಲಿ ಮಾತಾ-ಪಿತರ ಕರೆಬಂದಾಗ ಅಗಡದತ್ತ ದೇಶದಿಂದ ತನ್ನನ್ನು ಹೊರಹಾಕಿದ್ದ ತಂದೆಯನ್ನು ದ್ವೇಷಿಸದೆ ಪ್ರೀತಿಯಿಂದ ತಂದೆ-ತಾಯಿಯರನ್ನು ನೋಡಲು ಹೊರಡುತ್ತಾನೆ. ಹೋಗುತ್ತಾ ಪ್ರಿಯೆಯಾದ ಮದನಮಂಜರಿಯನ್ನೂ ಕರೆಯೊಯ್ಯುತ್ತಾನೆ. ದಾರಿಯಲ್ಲಿ ಹಲವು ಗಂಡಾಂತರಗಳು ಸಂಭವಿಸುವವು. ಅವುಗಳಲ್ಲಿ ಮೊದಲನೆಯದು ವನಾಂತರದಲ್ಲಿ ಭಿಲ್ಲರಾಜನು ಸೈನ್ಯದೊಂದಿಗೆ ಬಂದು ಅಗಡದತ್ತನನ್ನು ಮುತ್ತುತ್ತಾನೆ; ಅಗಡದತ್ತ ಭೀತನಾಗದೆ ಎದುರಿಸುತ್ತಾನಾದರೂ ಭೀಕರ ಕಾಳಗದಲ್ಲಿ ಇಬ್ಬರ ಸೈನ್ಯವೂ ಚದುರಿ ಹೋಗುವುವು. ಅಗಡದತ್ತ ಮತ್ತು ಭಿಲ್ಲರಾಜರ ನಡುವೆ ಸಮಬಲ ಹೋರಾಟ ನಡೆಯುತ್ತಲೇ ಇರುತ್ತದೆ. ಆಗ ಅಗಡದತ್ತ ಹೀಗೆ ಯೋಚಿಸುತ್ತಾನೆ.

ಬುದ್ಧೀಏ ಪವಂಚೇಣ ಯ ಛಲೇಣ ತಹ ಮಂತತಂತಜೋಏಣ
ಪಹಣಿಜ್ಜಇ ಪಡಿವಕ್ಖೋ ಜಸ್ಸನ ನೀಈಏ ಸಕ್ಕೇಜ್ಜ ॥

ಯಾವ ಎದುರಾಳಿಯನ್ನು ನ್ಯಾಯಮಾರ್ಗದಿಂದ ಯುದ್ಧದಲ್ಲಿ ಕೊಲ್ಲಲು ಸಾಧ್ಯ ವಾಗುವುದಿಲ್ಲವೋ ಆಗ ವಿವೇಕದಿಂದ, ಮಾಯಾಜಾಲದಿಂದ, ಛಲದಿಂದ ಹಾಗೂ ಮಂತ್ರ - ತಂತ್ರ ಯೋಗದಿಂದ ಎದುರಾಳಿಯನ್ನು ಕೊಲ್ಲತಕ್ಕದ್ದು. ಈ ರೀತಿ ವಿಚಾರ ಮಾಡಿ ತನ್ನ ಪ್ರೇಯಸಿಯನ್ನೇ ಕರೆದು, ಸಿಂಗರಿಸಿಬಂದು ರಥದ ಮುಂಭಾಗದಲ್ಲಿ ಕುಳಿತುಕೊಳ್ಳಲು ಹೇಳುತ್ತಾನೆ. ಮದನಮಂಜರಿ ಸಿಂಗರಿಸಿಕೊಂಡು ರಥದ ಮುಂಭಾಗದಲ್ಲಿ ಕುಳಿತುಕೊಳ್ಳಲು ಅವಳ ರೂಪಾತಿಶಯವನ್ನು ಕಂಡೊಡನೆಯೇ ಭಿಲ್ಲರಾಜ ಮಂತ್ರಮುಗ್ಧನಾಗಿ ಬಾಣಹೂಡುವುದನ್ನೂ ಮರೆತು ಸುಮ್ಮನಾಗುತ್ತಾನೆ. ಅದೇ ಸಕಾಲವೆಂದು ಬಗೆದ ಅಗಡದತ್ತ ಹರಿತವಾದ ಬಾಣದಿಂದ ಭಿಲ್ಲರಾಜನ ಎದೆಗೆ ಹೊಡೆಯುತ್ತಾನೆ. ಭಿಲ್ಲಪತಿ ಕುಸಿದು ಬೀಳುತ್ತಾ -

ನಾಹಂ ತುಹ ಸರಪಹಓ ಪಹಓ ಕುಸುಮಉಹಸ್ಸಬಾಣೇಣ।
ಅಹವಾ ಕಿಮೆತ್ಥ ಚೋಜ್ಜಂ ಮಯಣೇಣಂ ಕೋ ವಿ ನ ಹು ಛಲಿಓ ॥

ಎಲೈ! ನಾನು ನಿನ್ನ ಬಾಣಕ್ಕೆ ತುತ್ತಾಗಿ ಹತನಾಗಿಲ್ಲ, ಮದನನ ಬಾಣದಿಂದ ಹತನಾಗಿದ್ದೇನೆ. ಇದರಲ್ಲಿ ಏನಾಶ್ಚರ್ಯ! ಮದನನಿಂದ ವಂಚನೆಗೆ ಒಳಗಾಗದವರು ಯಾರು ? ಎಂದು ಹೇಳುತ್ತಾ ಕೊನೆಯುಸಿರೆಳೆಯುತ್ತಾನೆ. ಇಲ್ಲಿ ಕವಿಯು ನಾಯಕನ ಪಾತ್ರಕ್ಕೆಕುಂದು ತರುವಂತಹ ಸನ್ನಿವೇಶವನ್ನು ಸೃಷ್ಟಿಸಿದ್ದಾನೆ. ಏಕೆಂದರೆ, ಸಂದರ್ಭಾನುಸಾರ ರಾಜನೀತಿಯನ್ನೇ ತಿರುಚಿ ಮಾಯಾ, ಛಲ, ಮಂತ್ರ - ತಂತ್ರಗಳ ನೀತಿಯನ್ನು ಅನುಸರಿಸಿ ಎದುರಾಳಿಯನ್ನು ಸೋಲಿಸಬಹುದು ಎಂದು ಸ್ವಯಂ ರಾಜನೇ ಘೋಷಿಸುವ ಅಥವಾ ನಿರ್ಧರಿಸುವುದು ರಾಜ ನೀತಿಗೆ ಅಪಚಾರವೆಸಗಿದಂತೆಯೇ ಸರಿ. ಮಾತ್ರವಲ್ಲ ನಾಯಕ ಛಲನೀತಿಯನ್ನನುಸರಿಸಿ ಎದುರಾಳಿಯನ್ನು ಕೊಲೆಗೈಯುತ್ತಾನೆ. ಆದರೂ ಅದು ಅನೀತಿ ಎಂಬುದನ್ನು ಕವಿಯು ಎದುರಾಳಿಯ ಕುರಿತು ಮರುಕ ತೋರಿ, ಎದುರಾಳಿಯ ಮೂಲಕವೇ'ನಾನು ನಿನ್ನ ಬಾಣದಿಂದ ಹತನಾಗಿಲ್ಲ' ಎಂಬ ಮಾತನ್ನು ಹೇಳಿಸುತ್ತಾನೆ. ಇದರಿಂದ ನಾಯಕ ಪಾತ್ರ ವಂಚಕ, ಹೇಡಿಯಾಗಿ ಚಿತ್ರಿತವಾದಂತೆ ತೋರುತ್ತದೆ.

ಕಥಾನಾಯಕ ಭಿಲ್ಲರಾಜನನ್ನು ವಧಿಸಿ ತಂದೆಯ ರಾಜ್ಯದತ್ತ ಪ್ರಯಾಣ ಮಾಡುತ್ತಾನೆ. ನಡುವೆ ಘೋರಾರಣ್ಯವನ್ನು ದಾಟಬೇಕಾದ ಪ್ರಸಂಗ ಒದಗುತ್ತದೆ. ಅರಣ್ಯದಲ್ಲಿ ಸಾಗುತ್ತಿರುವಾಗ ಸಾಧುವೇಷಧಾರಿಯಾದ ಭೀಷಣನಾದ ಚೋರ ಎದುರಾಗುತ್ತಾನೆ. ನಾಯಕ ಆತನ ಚರ್ಯೆಯಿಂದಲೇ ಆತ ಚೋರನೆಂದು ತಿಳಿದುಕೊಳ್ಳುತ್ತಾನೆ. ತಾನೂ ಶಂಖಪುರಕ್ಕೆ ಬರುವವನೆಂದು ಹೇಳಿ ತನ್ನಲ್ಲಿದ್ದ ಸ್ವರ್ಣ ಮುದ್ರೆಗಳನ್ನು ನಾಯಕನಿಗೆ ಒಪ್ಪಿಸುತ್ತಾನೆ. ದಾರಿ ಮಧ್ಯೆ ಗೋಕುಲದಲ್ಲಿ ವಿಷಮಿಶ್ರಿತ ಆಹಾರವನ್ನು ನಾಯಕನಿಗೂ, ಸಹಯಾತ್ರಿಗಳಿಗೂ ನೀಡುತ್ತಾನೆ. ಶಂಕಿತನಾದ ನಾಯಕ ಉಪಾಯದಿಂದ ಆ ಆಹಾರವನ್ನು ನಿರಾಕರಿಸುತ್ತಾನೆ. ಕ್ರೋಧಗೊಂಡ ಸಾಧುವೇಷಧಾರಿ (ಚೋರ) ಖಡ್ಗಹಿಡಿದು ನಾಯಕನತ್ತ ಧಾವಿಸುತ್ತಾನೆ. ನಾಯಕನು ಶೌರ್ಯದಿಂದ ಕಾದಾಡಿ ಸಾಧುವೇಷಧಾರಿ (ಚೋರ)ಯನ್ನು ಹೊಡೆದು ಬೀಳಿಸುತ್ತಾನೆ. ಆಗ ಚೋರ ತನ್ನ ಪರಿಚಯ ಮಾಡಿಕೊಡುತ್ತಾ ಸಮೀಪದ ದೇವಾಲಯದ ಬಳಿ ಅಪಾರ ಧನವಿದೆ ಹಾಗೂ ರೂಪಸಿಯಾದ ಪತ್ನಿ ಇದ್ದಾಳೆ ಅವುಗಳನ್ನು ಸ್ವೀಕರಿಸು ಎಂದು ನಾಯಕನಲ್ಲಿ ಕೋರಿಕೊಂಡು ಕೊನೆಯುಸಿರೆಳೆಯುತ್ತಾನೆ. ಚೋರನ ನಿರ್ದೇಶನದಂತೆ ನಾಯಕ ದೇವಾಲಯದ ಬಳಿ ಹೋಗುತ್ತಾನೆ. ಅವನನ್ನು ಚೋರನ ಪತ್ನಿ ಮಧುಕರ ನುಡಿಯಿಂದ ಕರೆಯಲು ಅವನು ಅವಳಲ್ಲಿ ಆಸಕ್ತನಾಗಿ ತದೇಕಚಿತ್ತದಿಂದ ಅವಳನ್ನೇ ನೋಡುತ್ತಾನೆ. ಆಗ ಅವನ ಬಳಿ ನಿಂತಿದ್ದ ಮದನಮಂಜರಿ ಕೋಪಗೊಂಡು ಅವನನ್ನುಎಚ್ಚರಿಸುತ್ತಾ ಹೀಗೆನ್ನುತ್ತಾಳೆ -

ಎಲೈ ಲಜ್ಜೆಯಿಲ್ಲದವನೇ ! ನಾನು ನಿನ್ನ ಸಲುವಾಗಿ ಮನೆ, ಬಂಧು, ಬಾಂಧವಾದಿಗಳೆಲ್ಲವನ್ನೂ ತೊರೆದು ಬಂದಿರುವಾಗ ನೀನು ಪರಸ್ತ್ರೀಯಲ್ಲಿ ಅನುರಕ್ತನಾಗುವೆಯಾ ? ಪತ್ನಿಯ ಬಿರುನುಡಿಯಿಂದ ಎಚ್ಚೆತ್ತವನಾದ ನಾಯಕನು ಮುಂದಕ್ಕೆ ಪ್ರಯಾಣಬೆಳೆಸುತ್ತಾನೆ.

ಈ ಸಂದರ್ಭದಲ್ಲಿ ಕಥಾನಾಯಕ ತನಗೆದುರಾದ ಆಪತ್ತನ್ನೇನೋ ಬುದ್ಧಿಮತ್ತೆ, ಉಪಾಯ, ಶೌರ್ಯಗಳಿಂದ ಎದುರಿಸಿ ಪಾರಾಗುತ್ತಾನಾದರೂ, ಒಂದೆಡೆ ನಾಯಕನಾದವನು ಪರಸ್ತ್ರೀ ಆಸಕ್ತಿ ಹೊಂದುವ ಮತ್ತು ಸ್ವಸ್ತ್ರೀಯಿಂದ ನಿಂದೆಗೆ ಗುರಿಯಾಗುವ ಸ್ವಸ್ತ್ರೀಗೆ ಹೆದರುವಂತಹ ಸನ್ನಿವೇಶಗಳ ಚಿತ್ರಣವು ಕಾವ್ಯಗುಣ ಹಾಗೂ ಕಥಾನಾಯಕನ ವರ್ಚಸ್ಸಿಗೆ ಕುಂದುತರುವಂತಹದಾಗಿದೆ.

ಪ್ರಯಾಣವನ್ನು ಮುಂದುವರೆಸಿದ ಅಗಡದತ್ತ ಅರಣ್ಯದಾರಿಯಲ್ಲಿ ಮದಗಜ, ಹುಲಿ, ಭಯಾನಕ ಸರ್ಪ ಮುಂತಾದವುಗಳ ಬಾಧೆಗಳನ್ನು ಪರಾಕ್ರಮದಿಂದ ತಡೆದು ಶಂಖಪುರಕ್ಕೆ ತಲುಪುತ್ತಾನೆ. ಅಲ್ಲಿ ಕೆಲವು ಕಾಲ ಸುಖದಿಂದಿರುತ್ತಾನೆ. ಹೀಗಿರಲು ಒಮ್ಮೆ ವಸಂತಕಾಲ ಆಗಮಿಸಿತು. ರಾಜ ತನ್ನ ಪರಿವಾರದೊಂದಿಗೂ ಅಗಡದತ್ತ ತನ್ನ ಪ್ರಿಯೆ ಮದನ ಮಂಜರಿಯೊಂದಿಗೂ ವನವಿಹಾರಕ್ಕಾಗಿ ಹೋಗುತ್ತಾರೆ. ವನದಲ್ಲಿ ವಿನೋದದಿಂದ ಕಾಲಕಳೆದು ರಾಜನು ತನ್ನ ಪರಿವಾರದೊಂದಿಗೆ ಅರಮನೆಯತ್ತ ಹೊರಡುತ್ತಾನೆ. ಅಗಡದತ್ತ ತಂದೆಯನ್ನು ಬೀಳ್ಕೊಟ್ಟು ತನ್ನ ರಥದತ್ತ ಹೋಗುವಷ್ಟರಲ್ಲಿ ವಿಷಸರ್ಪವೊಂದು ಮದನಮಂಜರಿಯ ಕಾಲನ್ನು ಕಚ್ಚುವುದು. ಅಗಡದತ್ತ ಹೋಗಿ ಅವಳನ್ನು ಹಿಡಿದುಕೊಳ್ಳುತ್ತಿದ್ದಂತೆ ಮೂರ್ಛಿತಳಾಗುತ್ತಾಳೆ. ದುಃಖಗೊಂಡು ತನ್ನ ಪ್ರಿಯೆ ಮೃತಳಾದಳೆಂದು ಅವಳ ಸಲುವಾಗಿ ಚಿತೆ ಸಿದ್ಧಪಡಿಸಿ ತಾನೂ ಸಾಯುವುದಾಗಿ ನಿರ್ಧರಿಸುತ್ತಾನೆ. ಅದೇ ವೇಳೆಗೆ ವಿದ್ಯಾಧರರಿಬ್ಬರು ಬಂದು ಅಕಾರಣವಾಗಿ ಬೆಂಕಿಯಲ್ಲಿ ಬಿದ್ದು ಸಾಯಬೇಡ ನಿನ್ನ ಪತ್ನಿಯನ್ನು ಈ ಕ್ಷಣದಲ್ಲಿ ಸ್ವಸ್ಥಳನ್ನಾಗಿಸುತ್ತೇವೆ ಎಂದು ಅವಳ ಶರೀರದ ಮೇಲೆ ಮಂತ್ರಜಲವನ್ನು

ಚಿಮುಕಿಸಿ ಸ್ವಸ್ಥಳನ್ನಾಗಿ ಮಾಡಿ ಹೋಗುತ್ತಾರೆ. ಅಷ್ಟರಲ್ಲಿ ಸುತ್ತಲೂ ಕತ್ತಲಾವರಿಸಿತ್ತು. ಅಗಡದತ್ತ ಪತ್ನಿಯೊಂದಿಗೆ ರಾತ್ರಿಕಳೆಯುವ ಸಲುವಾಗಿ ಸಮೀಪದಲ್ಲಿದ್ದ ದೇವಾಲಯಕ್ಕೆ ಹೋಗುತ್ತಾನೆ. ಕತ್ತಲನ್ನು ದೂರ ಮಾಡುವ ಸಲುವಾಗಿ ಬೆಂಕಿ ತರುವೆನೆಂದು ಅವಳನ್ನು ಅಲ್ಲಿಯೇ ಇರುವಂತೆ ಹೇಳಿ ಹೋಗುತ್ತಾನೆ. ಅಗಡದತ್ತ ಬೆಂಕಿಯೊಂದಿಗೆ ದೇವಾಲಯ ಸಮೀಪಿಸುವಾಗ ದೇವಾಲಯದೊಳಗೆ ದೀಪದ ಬೆಳಕನ್ನುಕಾಣುತ್ತಾನೆ. ಮತ್ತು ಚಕಿತನಾಗಿ ಪ್ರಿಯೆಯಲ್ಲಿ ಕೇಳುತ್ತಾನೆ. ಅದು ನೀನೇ ತಂದಿದ್ದ ಬೆಂಕಿಯ ಪ್ರತಿಬಿಂಬ ಎನ್ನುತ್ತಾಳೆ. ತರುವಾಯ ಆತ ತನ್ನ ಖಡ್ಗವನ್ನು ಅವಳ ಕೈಗೊಪ್ಪಿಸಿ ಬೆಂಕಿಯನ್ನು ಉರಿಯುವಂತೆ ಮಾಡಲು ಬಗ್ಗುತ್ತಾನೆ. ಆಗ ಮದನಮಂಜರಿಯ ಕೈಯಲ್ಲಿದ್ದ ಖಡ್ಗ ನೆಲಕ್ಕೆ ಬೀಳುವುದು. ಅಗಡದತ್ತ ಖಡ್ಗ ಹೇಗೆ ಕೆಳಕ್ಕೆ ಬಿತ್ತೆಂದು ಪ್ರಶ್ನಿಸುತ್ತಾನೆ. ಬಿಚ್ಚಿದ ಕತ್ತಿ ಹೇಗಿರುವುದೆಂದು ನೋಡುವ ಆಸೆಯಾಯಿತು. ಅದಕ್ಕಾಗಿ ಒರೆಯಿಂದ ಖಡ್ಗ ತೆಗೆದು ಝಳಪಿಸುವಾಗ ಕೈಯಿಂದ ಜಾರಿ ಅದು ಕೆಳಕ್ಕೆ ಬಿತ್ತು ಎಂದು ಹೇಳುತ್ತಾಳೆ. ಅಗಡದತ್ತ ವಿಚಾರಮಾಡದೆ ಸುಮ್ಮನಾಗುತ್ತಾನೆ. ರಾತ್ರಿ ಕಳೆದು ಬೆಳಗಾಗುತ್ತಲೆ ಅವರಿಬ್ಬರೂ ಅರಮನೆಗೆ ಹೋಗುತ್ತಾರೆ.

ಒಮ್ಮೆ ಅಗಡದತ್ತ ಒಂದು ದುಷ್ಟಕುದುರೆಯಲ್ಲಿ ಸವಾರಿ ನಡೆಸುತ್ತಾನೆ. ಕೂಡಲೆ ಆ ಕುದುರೆ ಅವನನ್ನು ದೂರ ವನದಲ್ಲಿದ್ದ ಆಶ್ರಮವೊಂದಕ್ಕೆ ಕರೆದೊಯ್ಯುವುದು. ಅಗಡದತ್ತ ಕುದುರೆಯಿಂದಿಳಿದು ಅಲೆದಾಡುತ್ತ ಒಂದು ಜಿನಾಲಯಕ್ಕೆ ಬಂದು ಸೇರುತ್ತಾನೆ. ಅಲ್ಲಿ ಕೆಲವಾರು ಮುನಿಗಳಿಂದ ಸುತ್ತುವರಿದಿದ್ದ ಶ್ರಮಣಮಹಾಮುನಿಯನ್ನು ಕಾಣುತ್ತಾನೆ. ಅವರನ್ನು ನಮಸ್ಕರಿಸಿ ಅವರ ಬಳಿ ಕುಳಿತಿದ್ದ ಐವರು ಯುವಮುನಿಗಳು ವೈರಾಗ್ಯತಳೆದ ಕಾರಣವೇನು ಎಂದು ಕುತೂಹಲದಿಂದ ಕೇಳುತ್ತಾನೆ. ಆಗ ಮುನಿಯು ಇಲ್ಲಿಯ ಒಂದು ಜನವಸತಿಯಲ್ಲಿ ಧರಣೀಧರನೆಂಬ ಭಿಲ್ಲರಾಜನಿದ್ದನು. ಅಲ್ಲಿಗೆ ಒಮ್ಮೆ ರಾಜಕುಮಾರನು ತನ್ನ ಬಲದೊಂದಿಗೆ ಬಂದನು. ಅದನ್ನು ಕಂಡ ಭಿಲ್ಲರಾಜ ಅವನ ಮೇಲೆ ಯುದ್ಧಸಾರಿದನು. ಸಮಬಲರಾದ ಅವರಲ್ಲಿ ಯಾರೂ ಸೋಲಲಿಲ್ಲ. ಕೊನೆಗೆ ರಾಜಕುಮಾರ ತನ್ನ ಪತ್ನಿಯನ್ನು ರಥದ ಮುಂಭಾಗದಲ್ಲಿ ನಿಲ್ಲಿಸಿದನು. ಅವಳ ರೂಪಕ್ಕೆ ವಶನಾದ ಭಿಲ್ಲಪತಿ ಯುದ್ಧವನ್ನೇ ಮರೆತು ನಿಂತನು. ಆಗ ಆ ಕುಮಾರ ಬಾಣದಿಂದ ಹೊಡೆದು ಭಿಲ್ಲಪತಿಯನ್ನು ವಧಿಸಿದನು. ತರುವಾಯ ರಾಜಕುಮಾರ ಪ್ರಯಾಣವನ್ನು ಮುಂದುವರಿಸಿದನು. ಆ ಭಿಲ್ಲರಾಜನ ಐವರು ಸೋದರರು ಇವರಾಗಿರುವರು. ಇವರು ಆ ರಾಜಕುಮಾರನನ್ನು ಕೊಲ್ಲುವ ಪ್ರತಿಜ್ಞೆ ಮಾಡಿ ಅವನನ್ನು ಹಿಂಬಾಲಿಸುತ್ತಾ ಶಂಖಪುರಕ್ಕೆ ಹೋದರು. ಒಮ್ಮೆ ರಾಜಕುಮಾರ ವನವಿಹಾರಕ್ಕಾಗಿ ಹೋದಾಗ ವನದಲ್ಲಿದ್ದ ದೇವಾಲಯದಲ್ಲಿ ಇವರು ರಾಜಕುಮಾರನನ್ನು ಕೊಲ್ಲಲು ಹೊಂಚು ಹಾಕುತ್ತಾ ಮರೆಯಾಗಿ ಕುಳಿತಿದ್ದರು. ರಾಜಕುಮಾರ ಪತ್ನಿಯೊಂದಿಗೆ ರಾತ್ರಿವೇಳೆಗೆ ದೇಗುಲಕ್ಕೆ ಹೋದನು. ರಾತ್ರಿಯಲ್ಲಿ ಬೆಳಕುಂಟುಮಾಡಲು ಬೆಂಕಿತರುವೆನೆಂದು ಕುಮಾರನು ಪತ್ನಿಯನ್ನು ಅಲ್ಲಿಯೇ ಬಿಟ್ಟು ಹೋದನು. ಅಷ್ಟರಲ್ಲಿ ಈ ಐವರು ಸೋದರರು ತಾವು ತಂದಿದ್ದ ದೀಪವನ್ನು ಬೆಳಗಿದರು. ಆ ಬೆಳಕಿನಲ್ಲಿ ಐವರು ಸೋದರರಲ್ಲಿ ಕಿರಿಯವನನ್ನು ನೋಡಿದ ಪತ್ನಿಯು ತನ್ನನ್ನು ವರಿಸು ಎಂದು ಕೋರಿದಳು. ಆದರೆ ಅವನು.- ನಿನ್ನನ್ನು ನಾನು ಬಯಸುತ್ತೇನಾದರೂ ನಿನ್ನ ಪತಿ ಇದನ್ನು ತಿಳಿದರೆ ನನ್ನನ್ನು ಜೀವಸಹಿತ ಇರಗೊಡಲಾರ ಎಂದನು. ಆಗ ಅವಳು, ನಿನ್ನ ಎದುರಿಗೆ ನನ್ನ ಪತಿಯನ್ನು ವಧಿಸುವೆ ಎನ್ನುತ್ತಾ ದೀಪವನ್ನು ಆರಿಸಿದಳು. ಅದೇ ವೇಳೆಗೆ ಅವಳ ಪತಿ ಬಂದು ದೇಗುಲದಲ್ಲಿ ದೀಪವೆಲ್ಲಿಂದ ಬಂತು ಎಂದು ಕೇಳಲು ಅವಳು - ಅದು ನೀನೇ ತಂದಿದ್ದ ಬೆಳಕಿನ

ಪ್ರತಿಬಿಂಬ ಎಂದು ಹೇಳಿದಳು. ಬಳಿಕ ರಾಜಕುಮಾರ ಖಡ್ಗವನ್ನು ಪತ್ನಿಗೊಪ್ಪಿಸಿ ಬಗ್ಗಿ ಬೆಂಕಿಯ ಉರಿ ಹೆಚ್ಚಿಸುವ ಪ್ರಯತ್ನದಲ್ಲಿದ್ದಾಗ, ಅವನ ಪತ್ನಿ ಖಡ್ಗವನ್ನು ತೆಗೆದು ಅವನನ್ನು ವಧಿಸಲೆಂದು ಕೈ ಎತ್ತಿದಾಗ, ಭಿಲ್ಲಪತಿಯ ಕಿರಿಯ ಸೋದರನು ಅವಳ ಕೈಮೇಲೆ ಹೊಡೆದು ಖಡ್ಗವು ದೂರಬೀಳುವಂತೆ ಮಾಡಿದನು. ಖಡ್ಗ ಬಿದ್ದುದೇಕೆ ಎಂದು ಆ ಕುಮಾರ ಅವಳನ್ನುಕೇಳಲು, ಅವಳು - ಖಡ್ಗ ಹೇಗಿರುವುದೆಂದು ನೋಡಲು ತೆಗೆದು ಝಳಪಿಸುತ್ತಿರುವಾಗ ಕೈಯಿಂದ ಜಾರಿಬಿತ್ತು ಎಂದಳು. ಏನೂ ತಿಳಿಯದ ಕುಮಾರ ಮರುದಿನ ತನ್ನ ಅರಮನೆಯತ್ತ ಪತ್ನಿಯೊಂದಿಗೆ ಹೋದನು. ಆದರೆ ಸ್ತ್ರೀಯ ಮಾಯಾಪೂರಿತವಾದ ನಡೆಯನ್ನು ಪ್ರತ್ಯಕ್ಷಕಂಡ ಈ ಐವರು ಸೋದರರು ಸಂಸಾರದ ಕುರಿತು ಜುಗುಪ್ಸೆಗೊಂಡು ನನ್ನ ಬಳಿ ಬಂದು ಮುನಿದೀಕ್ಷೆ ಪಡೆದರು. ಆಗ ಈ ಘಟನಾವಳಿ ಎಲ್ಲವೂ ತನಗೆ ಸಂಬಂಧಿಸಿದವು ಎಂದರಿತು -

'ಪೆಚ್ಚ ಅಹೋ ಮಹಿಲಾಣಂ ದಾರುಣಂ ಚರಿಯಂ।
ಗಂಗಾಏ ವಾಲುಯಂ ಸಾಯರೇ ಜಲಂ ಹಿಮವನವೋ ಯಾ ಪರಿಮಾಣಂ।
ಜಾಣಂತಿ ಬುದ್ಧಿಮಂತಾ ಮಹಿಲಾಹಿಯಯಂ ನ ಯಾಣಂತಿ॥
ತಾ ಧಿರತ್ಥು ಸಂಸಾರಸ್ಸ । ನತ್ಥಿ ಎತ್ಥ ಕಿಂ ಪಿ ಸುಹಕಾರಣಂ।

ಅಯ್ಯೋ ನೋಡಿರಿ! ಸ್ತ್ರೀಯರ ನಡತೆ ಎಷ್ಟು ಭಯಾನಕವಿರುತ್ತದೆ! ಗಂಗೆಯ (ದಡದ) ಮರಳನ್ನೂ, ಸಾಗರದ ನೀರನ್ನು, ಹಿಮಾಲಯ ಪರ್ವತದ ಅಳತೆಯನ್ನು ಬುದ್ಧಿವಂತರು ಚೆನ್ನಾಗಿ, ಸುಲಭವಾಗಿ ತಿಳಿದುಕೊಳ್ಳುತ್ತಾರೆ. ಆದರೆ ಸ್ತ್ರೀ ಸ್ವಭಾವವನ್ನು ತಿಳಿದುಕೊಳ್ಳಲು ಅವರೂ ಅಸಮರ್ಥರು. ಆದುದರಿಂದ ಈ ಸಂಸಾರಕ್ಕೆ ಧಿಕ್ಕಾರ, ಇಲ್ಲಿ ಸುಖಕ್ಕೆ ಕಾರಣವಾದದ್ದು ಯಾವುದೂ ಇಲ್ಲ', ಎಂಬಿತ್ಯಾದಿಯಾಗಿ ಮನಸ್ಸಿನಲ್ಲಿ ನಿರ್ಧರಿಸಿ ಸಂವೇಗಗೊಂಡು, ಮುನಿಗಳ ಬಳಿ ಇದು ತನಗೆ ಸಂಬಂಧಿಸಿರುವ ಚರಿತೆ ಎಂದು ತಿಳಿಸಿ, ಅವರ ಬಳಿ ದೀಕ್ಷೆಗೊಂಡು ತಪಾಚರಣೆಯಲ್ಲಿ ನಿರತನಾಗುತ್ತಾನೆ.

ಕಥಾಭಾಗದ ಅಂತಿಮಘಟ್ಟದ ಮೇಲಿನ ಘಟನಾವಳಿಗಳು ಕಥೆಯ ಬೆಳವಣಿಗೆಗೆ ಹಾಗೂ ವೈವಿಧ್ಯತೆಗೆ ಪುಷ್ಟಿಯನ್ನು ನೀಡಿದೆ. ಕಥಾನಾಯಕ ತನ್ನ ಪತ್ನಿ ಮೂರ್ಛಿತಳಾಗಲು ಮೃತಳೆಂದೇ ತಿಳಿದು ಚಿತೆ ಸಿದ್ಧಪಡಿಸಿ ತಾನೂ ಅದನ್ನೇರಿ ಸಾಯಲು ಸಿದ್ಧನಾಗುವ ಕರುಣಾಜನಕ ಸನ್ನಿವೇಶ ನಾಯಕನ ಪಾತ್ರಗೌರವವನ್ನು ಹೆಚ್ಚಿಸಿದೆ. ನಾಯಕಿ ಮತ್ತೊಬ್ಬ ಸುಂದರ (ಭಿಲ್ಲ) ಯುವಕನಲ್ಲಿ ಆಸಕ್ತಳಾಗಿ ಪತಿಯನ್ನೇ ಕೊಲ್ಲಲು ಹವಣಿಸುವ ಚಿತ್ರಣ ಸ್ತ್ರೀಯ ಅತಿಕಪಟ ಸ್ವಭಾವವನ್ನು ಸ್ಪಷ್ಟಪಡಿಸುವುದು. ಆದರೆ, ನಾಯಕಿಯ ಪಾತ್ರಗೌರವಕ್ಕೆ ಆ ಸನ್ನಿವೇಶವು ಧಕ್ಕೆ ತಂದಿದೆ. ಸ್ತ್ರೀ ಸ್ವಭಾವವನ್ನರಿತ ಭಿಲ್ಲ ಯುವಕರು ಸ್ತ್ರೀ ಸ್ವಭಾವವನ್ನರಿತು ಉದ್ವಿಗ್ನಗೊಂಡು ಜಿನದೀಕ್ಷೆಗೊಳ್ಳುವ ಚಿತ್ರಣ ಅದೇ ರೀತಿ ಕಥಾನಾಯಕನೂ ಸ್ತ್ರೀಯ ಹೇಯ-ಅನುಚಿತ ಸ್ವಭಾವವನ್ನರಿತು ಮನಃ ಪರಿವರ್ತನೆ ಹೊಂದಿ ಮುನಿಯ ಬಳಿ ದೀಕ್ಷೆಗೊಂಡು ತಪೋಜೀವನ ಕೈಗೊಳ್ಳುವ ಸನ್ನಿವೇಶಗಳು ಜೈನಕಥಾಸಾಹಿತ್ಯಗಳಲ್ಲಿ ಕಂಡು ಬರುವ ಸಹಜ ಚಿತ್ರಣವೇ ಆಗಿದೆ. ಆದರೂ ಅಂತಹ ಸನ್ನಿವೇಶಗಳಲ್ಲಿ ವಿವೇಕಿಯಾದ ಜೀವ ಸಂಸಾರ ದುಃಖ, ಐಹಿಕ ಸುಖದ ನಶ್ವರತೆಯರಿತು ಶಾಶ್ವತ ಸುಖ ವನ್ನರಸುತ್ತಾಹೋಗುವುದು. ಯುವಾವಸ್ಥೆಯಲ್ಲಿದ್ದ ನಾಯಕ ಮುನಿಯು ಹೇಳಿದ ಸ್ವ-ಚರಿತೆಯಿಂದ ತಪೋಜೀವನಕ್ಕಡಿಯಿಡುವ ಸಂದರ್ಭ ಆಶ್ಚರ್ಯವನ್ನುಂಟುಮಾಡುವುದಾದರೂ ನಾಯಕ ತನ್ನ ಪತ್ನಿಯೇ ತನ್ನನ್ನು ವಂಚಿಸಿ ಪರಪುರುಷನಲ್ಲಿ ಆಸಕ್ತಳಾಗುವಂತಹ ಪ್ರಸಂಗದಿಂದ ಆತ್ಮಜಾಗೃತಿ

ಹೊಂದುತ್ತಾನೆ. ಪತ್ನಿಯಿಂದ ಐಹಿಕ-ಸುಖಕ್ಕಾಗಿ ಹಾತೊರೆದಿದ್ದ ಕಾರಣ ತನ್ನ ಪ್ರೇಯಸಿ ಮೂರ್ಛಿತಳಾದ ಮಾತ್ರಕ್ಕೆ ವಿವೇಕಹೀನನಾಗಿ ಚಿತೆಯನ್ನು ಅಣಿಗೊಳಿಸಿ ಅದನ್ನೇರಿ ಮಡಿಯಲು ಸಿದ್ದನಾಗುವ ನಾಯಕನೆಲ್ಲಿ ! ಪತ್ನಿಯೇ ವಂಚನೆಯಿಂದ ತನ್ನನ್ನು ಕೊಲ್ಲಲು ಹವಣಿಸಿದ ವಿಚಾರವರಿತು ಸ್ತ್ರೀ ಹಾಗೂ ಸಂಸಾರದ ವೈಚಿತ್ರ್ಯತೆಯಿಂದ ಪ್ರಬುದ್ಧತೆಯನ್ನು ಪಡೆದ ನಾಯಕನೆಲ್ಲಿ ! ಇದು ಆತ್ಮಜಾಗೃತಿ ಪಡೆದು ಆತ್ಮೋನ್ನತಿ ಅಥವಾ ಶಾಶ್ವತ ಸುಖವನ್ನರಸಿ ಅದರ ಸಾಧನೆಗಾಗಿ ಅಡಿಯಿಟ್ಟ ಜೀವವಾಗಿದೆ. ಈ ಹಂತಕ್ಕೆ ಕವಿ ತನ್ನ ಕಥಾಭಾಗಕ್ಕೆ ನಾಂದಿ ಹಾಡಿದ್ದಾನೆ. ಆದರೆ, ಕಥಾಭಾಗದಲ್ಲಿ ತಪೋವೃತ್ತಿಯಲ್ಲಿ ತೊಡಗಿದ ನಾಯಕ ತನ್ನ ಸಾಧನಾಪಥದ ಆಚಾರ ವಿಶೇಷ, ತಪೋಜೀವನ ಅಥವಾ ಸಾಧನಾಪಥದಲ್ಲಿ ಸಿದ್ಧಿಯನ್ನು ಪಡೆದನೇ ಎಂಬ ಯಾವ ವರ್ಣನಾಂಶಗಳಿಗೂ ಕೈ ಹಾಕದೆ ಕೇವಲ ನಾಯಕ ತಪೋಜೀವನವನ್ನನುಸರಿಸಿದನು ಎಂದು ಕವಿ ವಿರಮಿಸಿರುವುದರಿಂದ ಕಾವ್ಯವು ಅಪೂರ್ಣವೆಂದೇ ಭಾಸವಾಗುವುದು.

**ಇತರ ಪಾತ್ರಗಳು :** ನಾಯಕಿ ಸ್ಥಾನವನ್ನು ಅತಿಕ್ರಮಿಸಿರುವ ಮದನಮಂಜರಿ ಅತಿ ರೂಪವತಿ ಅವಳ ಸೌಂದರ್ಯವನ್ನು ಕಂಡಾಕ್ಷಣ ನಾಯಕ ಮಾತ್ರವಲ್ಲ ಭಿಲ್ಲರಾಜ ಹಾಗೂ ಆತನ ಸೋದರನೂ ಮರುಳಾಗುತ್ತಾರೆ. ಆದರೆ, ಅವಳ ಸೌಂದರ್ಯಕ್ಕೆ ತಕ್ಕಂತೆ ಬುದ್ಧಿಯು ವಕ್ರ, ತನ್ನ ಪತಿ ಪರಸ್ತ್ರೀಯಲ್ಲಿ ಆಸಕ್ತನಾಗುವ ಎಂದು ತಿಳಿದಾಗ ಆತನನ್ನು ನಿಂದಿಸಲೂ ಹಿಂಜರಿಯದ ಕ್ರೋಧಸ್ವಭಾವುಳ್ಳವಳು. ತನ್ನ ಪತಿಗಿಂತ ಸುಂದರ ಯುವಕನನ್ನು ಕಂಡಾಗ ಪತಿಯ ತ್ಯಾಗ ಹಾಗೂ ಪತಿಯ ಕೊಲೆಗೂ ಹೇಸದ, ಪರಪುರುಷಾಸಕ್ತೆ, ವಂಚಕಿ, ಕೊಲೆಪಾತಕಿ ಹಾಗೂ ಉದ್ಧತಳಾಗಿ ಕಂಡುಬರುತ್ತಾಳೆ.

ಕಾವ್ಯದಲ್ಲಿ ಬರುವ ಅನ್ಯಪಾತ್ರಗಳಲ್ಲಿ ಭುಜಂಗಮಚೋರ, ದುರ್ಯೋಧನ ಚೋರ, ಭಿಲ್ಲರಾಜ ಹಾಗೂ ಭಿಲ್ಲರಾಜನ ಐವರು ಸೋದರರು – ಪ್ರಮುಖಪಾತ್ರಗಳಾಗಿರುವರು. ಭುಜಂಗಮ ಹಾಗೂ ದುರ್ಯೋಧನ ಚೋರರು ಮಾರುವೇಷದಲ್ಲಿ ಹಗಲಲ್ಲಿ ಜನರೊಡನೆ ವ್ಯವಹರಿಸುತ್ತಾ ಸಾಧುಗಳಾಗಿ ಕಾಣಿಸಿಕೊಂಡರೆ ರಾತ್ರಿಯಲ್ಲಿ ಧನಿಕರ ಮನೆಗೆ ಕನ್ನಹಾಕಿ ಧನಹರಣ ಮಾಡುವ ಹಾಗೂ ತಮಗೆದುರಾಗುವ ಯಾವ ಪುರುಷನನ್ನು ನಿರ್ದಾಕ್ಷಿಣ್ಯವಾಗಿ ವಧಿಸುವ ಭಯಾನಕ ಸ್ವರೂಪದ ಚೋರರಾಗಿ ಕಂಡುಬರುತ್ತಾರೆ. ಕಥಾನಾಯಕನಿಂದ ಹತರಾಗುವ ಇವರ ಪಾತ್ರಗಳಿಂದ ನಾಯಕ ಅಗಡದತ್ತನ ಪಾತ್ರವು ಹೆಚ್ಚಿನ ಪ್ರಶಂಸೆಗೆ, ಘನತೆಗೆ ಪಾತ್ರವಾಗುವುದು. ಆದರೆ ಭಿಲ್ಲರಾಜನಾದರೋ ಕಥಾನಾಯಕನಷ್ಟೇ ಶೂರ. ಸ್ತ್ರೀಯ ಮೇಲಿನ ಮೋಹಕ್ಕೀಡಾಗಿ ಯುದ್ಧರಂಗದಲ್ಲಿ ಯುದ್ಧವನ್ನೇ ಮರೆತು ತನ್ನ ಪ್ರಾಣಕಳೆದುಕೊಳ್ಳುತ್ತಾನೆ. ಭಿಲ್ಲರಾಜನ ಐವರು ಸೋದರರು ತಮ್ಮ ಅಣ್ಣನ ವಧೆಯಿಂದ ದುಃಖಿತರಾಗಿ ಅಣ್ಣನನ್ನು ವಧೆಗೈದ ಯುವರಾಜನನ್ನು ಕೊಂದು ಸೇಡುತೀರಿಸಿಕೊಳ್ಳುವ ಛಲವುಳ್ಳವರಾಗಿದ್ದರೂ, ವೈರಿಯನ್ನು ಪ್ರತ್ಯಕ್ಷ ಎದುರಿಸಲಾಗದ ಹೇಡಿಗಳಾಗಿ ಕಂಡು ಬರುತ್ತಾರೆ. ಇಷ್ಟಾದರೂ ವೈರಿಯ ಪತ್ನಿಯ ಅಥವಾ ಸ್ತ್ರೀಯ ಮಾಯಾ ಸ್ವಭಾವದಿಂದ ಎಚ್ಚತ್ತುಗೊಂಡು ಮುನಿದೀಕ್ಷೆಗೊಳ್ಳುವ ಹಾಗೂ, ಶತ್ರುವಾದರೂ ಅಕಾರಣವಾಗಿ ವಧೆಗೊಳ್ಳುವುದನ್ನು ಸಹಿಸದ ಇವರು ವಿವೇಕಯುತರೂ ದಯಾಸ್ವಭಾವದವರಾಗಿಯೂ ಚಿತ್ರಿತರಾಗಿದ್ದಾರೆ.

ವಿದ್ಯಾಸಿದ್ಧಿಯ ಕಾರಣದಿಂದ ವಿಶ್ವದ ಸಮಸ್ತ ವ್ಯವಹಾರವನ್ನು ಕಾಣುವ ಹಾಗೂ ನಿರ್ಮಲ ಧರ್ಮೋಪದೇಶದಿಂದ ಭವ್ಯಜನರಲ್ಲಿ ಪ್ರತಿಭೋದವುಂಟುಮಾಡುವ ಸಹಸ್ರಗತಿ ಎಂಬ ಚಾರಣ

ಮುನಿಯು ಈ ಕಥೆಯಲ್ಲಿರುವ ಮತ್ತೊಂದು ಶ್ರೇಷ್ಠ ಪಾತ್ರ. ಈತ ಗ್ರಹ ನಕ್ಷತ್ರಗಳ ನಡುವಿನ ಚಂದ್ರನಂತೆ, ಸೌಮ್ಯತೆಯಿಂದ ಚಂದ್ರನಂತೆ, ಕ್ಷಮೆಯಲ್ಲಿ ಪೃಥ್ವಿಯಂತೆ, ಮತಿ-ಶ್ರುತ-ಅವಧಿ-ಮನಃ ಪರ್ಯಯಗಳೆಂಬ ನಾಲ್ಕು ಜ್ಞಾನಗಳಿಂದ ಸಂಪನ್ನನಾದವನು. ಈ ಪಾತ್ರದ ಸೃಷ್ಟಿಯಿಂದ ಕಥೆಯು ಮಹತ್ವಪೂರ್ಣವಾದ ಅಂತಿಮ ಘಟ್ಟವನ್ನು ಹೊಂದಲು ಸಹಾಯಕವಾಗಿದೆ. ಇನ್ನು ನಾಯಕನ ತಂದೆ - ತಾಯಿ ಹಾಗೂ ವಿದ್ಯಾಗುರುಗಳ ಪಾತ್ರಗಳಿದ್ದು ಅವು ಕಥಾಭಾಗದಲ್ಲಿ ಕೇವಲ ಸಾಂದರ್ಭಿಕ ಪಾತ್ರಗಳಾಗಿ ಕಾಣಿಸುವವು.

# ಕರ್ನಾಟಕದ ಸಾಮಾಜಿಕ ಇತಿಹಾಸಕಾರ ದೇವಚಂದ್ರ ಕವಿ (೧೭೭೦-೧೮೪೧)

ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರೀ

ಕವಿ ದೇವಚಂದ್ರ ಮೈಸೂರು ಜಿಲ್ಲೆಯ ಚಾಮರಾಜನಗರ ತಾಲ್ಲೂಕಿನ ಮಲೆಯೂರು (ಕನಕಗಿರಿ) ಗ್ರಾಮದಲ್ಲಿ ಈಗ್ಗೆ ಸುಮಾರು ೨೦೦ ವರ್ಷಗಳ ಹಿಂದೆ ಜೀವಿಸಿದ್ದ ಪ್ರಸಿದ್ಧ ಜೈನಕವಿ (೧೭೭೦-೧೮೪೧). ಇವನು 'ಪೂಜ್ಯಪಾದ ಚರಿತೆ' (೧೭೯೨), 'ರಾಮಕಥಾವತಾರ', 'ಭಕ್ತಿಸಾರ ಶತಕತ್ರಯ', 'ರಾಜಾವಳೀ ಕಥಾಸಾರ' (೧೮೩೮) ಮೊದಲಾದ ಗ್ರಂಥಗಳ ಕರ್ತೃ. ಇವುಗಳಲ್ಲಿ ಇವನ ವಿಶೇಷ ಖ್ಯಾತಿಗೆ ಕಾರಣವಾಗಿರುವುದು 'ರಾಜಾವಳೀ ಕಥಾಸಾರ'ವೇ. ಇದು ಹೊಸಗನ್ನಡ ಅರುಣೋದಯ ಕಾಲದ ಒಂದು ಮಹತ್ತ್ವದ ಗ್ರಂಥ; ಒಂದು ಕಾಲದ ಸಾಮಾಜಿಕ ಸ್ಥಿತಿಗತಿಗಳ ಹಾಗೂ ಭಾಷೆ ಸಾಹಿತ್ಯಗಳ ದೃಷ್ಟಿಯಿಂದ ಒಂದು ಅಪರೂಪ ಗದ್ಯಸಾಹಿತ್ಯಕೃತಿ.

ದೇವಚಂದ್ರ - ಮೈಸೂರು ದೊರೆ ಮುಮ್ಮಡಿ ಕೃಷ್ಣರಾಜ (೧೭೯೪-೧೮೬೮)ರ ಆಶ್ರಿತವರ್ಗದ ಸೂರಿ ಪಂಡಿತನೆಂಬ ವೈದ್ಯನ ಪ್ರೋತ್ಸಾಹದಿಂದ 'ರಾಜಾವಳೀ ಕಥಾಸಾರ'ವನ್ನು ರಚಿಸಿದನು. ಅಲ್ಲದೆ ರಚನೆಗೆ ಬೇರೊಂದು ಪ್ರೇರಣೆಯೂ ಆತನಿಗೆ ಒದಗಿತು. ಆತನೇ ಆ ಸಂದರ್ಭವನ್ನು ಹೀಗೆ ವಿವರಿಸಿದ್ದಾನೆ:

''ರಕ್ತಾಕ್ಷಿ ಸಂವತ್ಸರಾಶ್ವಯುಜದೊಳು (೧೮೦೪) ಸೀಮೆ ಪೈಮಾಸಿಯಂ ಮಾಡಲ್ ಮಕಂಜಿ ಸರದಾರಂ (ಕರ್ನಲ್ ಕಾಲಿನ್ ಮೆಕಂಜಿ : ೧೭೫೪-೧೮೨೧) ಲಕ್ಷ್ಮಣರಾಯಂ ವೆರಸು ಬಂದಲ್ಲಿ ಕನಕಗಿರಿಗೆ ಬಂದೆನ್ನಂ 'ಸ್ಥಳ ಪುರಾಣಮುಂಟೇ ?' ಎಂದು ಕೇಳ್ವುದುಂ, ನಾನು ಮಾಡಿದ ಪೂಜ್ಯಪಾದ ಚರಿತ್ರೆಯನ್ನೋದಿ ಪೇಳ್ವುದು(೦), ಎನ್ನಂ ಬಿಡದೆ ಕಮರಹಳ್ಳಿ ಬಳಿಯ ಒಡ್ಡಿರ್ದ ಗುಡಾರದ ಬಳಿಗೆ ಕರೆದುಕೊಂಡು ಪೋಗಿ, ಪೂರ್ವದ ಕೆಲವು ಪ್ರಪಂಚುಗಳಂ ಮೂರು ರಾತ್ರಿ ಚೆನ್ನಾಗಿ ಲಾಲಿಸಿ, ಕಳಲೆ ಮಹಿಸೂರ ಪಟ್ಟಣ ಇಲವಾರ ನಾಗವಾಲದವರಿಗೂ ಎರಡು ತಿಂಗಳ ಪರ್ಯಂತರಂ ಬಿಡದೆ ದಿನ ಒಂದಕ್ಕೆ ಗ್ರಾಸಕ್ಕೆ ಒಂದು ಹಣಮಂ ಕೊಡುತ್ತ, ರಾತ್ರಿಕಾಲದೊಳು ಪೂರ್ವದ ಪ್ರಪಂಚುಗಳಂ ಜಾತಿಭೇದಂಗಳ ಮೊದಲಾದ ವಿವರಗಳನೆಲ್ಲವಂ ಕೇಳುತ, ರಾಜ್ಯ ಸೀಮೆಗಳ ಚಕ್ರದಿಂದಳೆದು ವಿಂಗಡಿಸುತ್ತ, ಗ್ರಾಮಾಧಿಗ್ರಾಮಂಗಳಿಗೆ ನಕ್ಷೆಯಂ ಬರೆಯಿಸಿ ಜಾತಿ ಕೋಮುವಾರು ಕುಳ ಮನೆ ಜನಜೀವನ ಮೊದಲಾದವಂ ಜಮಾಬಂದಿ ಮುಂತಾದವಂ ಬರೆಯಿಸಿಕೊಂಡು ನನ್ನನ್ನು ಬಿಡದೆ ಬಂಗಾಳಿಗೊಯ್ಯಲೆಂದು ಇಪ್ಪಿಸ, ನಾನಾ ಪ್ರಕಾರದಿಂ ಹೇಳಿಕೊಂಡದ್ದರಿಂದಲೂ ನಮ್ಮ ಧರ್ಮೋಪಾಧ್ಯಾಯರು ಬಂದದ್ದರಿಂದಲೂ ಪೂಜ್ಯಪಾದ ಚರಿತ್ರೆಯನ್ನು ತೆಗೆದುಕೊಂಡು, ನಾನು

ಪೂರ್ವದ ವೃತ್ತಾಂತಗಳನ್ನು ಪೇಳಿದುದಂ ಕಾಗದದ ವೈಯೊಳು (=ವಹಿಯೊಳು) ಬರೆಯಿಸಿಕೊಂಡು, ಈ ಕರ್ನಾಟಕದೇಶದೊಳು ನಡೆವ ಪ್ರಪಂಚುಗಳನೆಲ್ಲಾ ಕ್ರೋಢೀಕರಿಸಿ ಬರೆದು ನಾವು ಇದ್ದಲ್ಲಿಗೆ ತೆಗೆದುಕೊಂಡು ತಿಂಗಳು ಒಳಗೆ ಬಂದರೆ ಭಾರೀ ಸಂಬಳ ಕೊಡುತ್ತೇವೆ, ಎಂದು ಹೇಳಿ ಲಕ್ಷ್ಮಣರಾಯನ ಮಾರಿಫತ್ತು ಇಪ್ಪತ್ತೈದು ಕುಂಪಣಿ ರೂಪಾಯನ್ನು ಕೊಡಿಸಿ ಅಪ್ಪಣೆಕೊಟ್ಟು ಕಳುಹಿಸಿಕೊಟ್ಟನೆಂದು ಮೊದಲಾಗಿ ಈ ಕಥಾ ಸಂಗ್ರಹಮಂ ಮಾಡುತ್ತಿಪ್ಪಿನ ಸರದಾರಂ ಬಹುದೂರಂ ಪೋದುದನಿಂ ಒಪ್ಪಿಸುವುದಕ್ಕಿಲ್ಲವಾಯಿತು.''

ಹನ್ನೊಂದು ಅಧಿಕಾರಗಳ 'ರಾಜಾವಳೀ ಕಥಾಸಾರ'ವೇನೋ ಬರೆದು ಸಿದ್ಧವಾಯಿತು; ಇಂಥ ಒಂದು ಕೃತಿಯನ್ನು ತಿಂಗಳಲ್ಲಿ ಸಿದ್ಧಪಡಿಸುವಂತೆ ಮೆಕೆಂಜಿ ಸೂಚಿಸಿದ್ದನಾದರೂ, ಅದು ಸಿದ್ಧವಾದುದು ೩೩ ವರ್ಷಗಳು ಉರುಳುವಹೊತ್ತಿಗೆ ಎನ್ನುವುದು ಗಮನಿಸಬೇಕಾದ್ದು. ಮೆಕೆಂಜಿಯ ಸೂಚನೆ ಒಂದು ನಿಮಿತ್ತ; ವಿಶೇಷವಾಗಿ ಸೂರಿಪಂಡಿತನ ಪ್ರೋತ್ಸಾಹ ಒತ್ತಾಸೆಗಳೇ ರಚನೆಯ ಸಂಪೂರ್ತಿಗೆ ಪ್ರೇರಕಶಕ್ತಿ (ಪು.೩೧೪). ಬರೆದ ಕೃತಿಯನ್ನು ಮುಮ್ಮಡಿಯವರಿಗೆ ಒಪ್ಪಿಸಿ ಜೀವನಕ್ಕೆ ಅನುಕೂಲ ಮಾಡಿಕೊಳ್ಳಬೇಕೆಂಬ ಕವಿಯ ಆಸೆ ದಿಟವಾಗಿ ಫಲಿಸಲಿಲ್ಲ; ೩ ವರ್ಷ ಕಾದರೂ ಪ್ರಯೋಜನವಾಗಲಿಲ್ಲ. ಶ್ರೀರಂಗಪಟ್ಟಣ, ನಂಜನಗೂಡು ಚಾಮರಾಜನಗರದ ವಿದ್ವಾಂಸರು ಕವಿಯುನ್ನತಿಯನ್ನೂ ಮೆಚ್ಚಿ ಹೊಗಳಿದರು. ಮಂಜೂರಾಗಿದ್ದ ತಿಂಗಳ ೩೦ ಹಣ ಸಂಬಳದ ಏರ್ಪಾಡು ಕೂಡ ಕಾರಣಾಂತರದಿಂದ ಕೈತಪ್ಪಿತು. ಆದರೆ ಕೃಷ್ಣರಾಜರ ತಾಯಿ ದೇವೀರಾಂಬೆ ಕೃತಿಯನ್ನು ಸಾದ್ಯಂತ ಪರಾಂಬರಿಸಿ ಸತ್ಕರಿಸಿದ್ದಲ್ಲದೆ, ಮೈಸೂರೊಡೆಯರ ವಂಶ ಪರಂಪರೆಯನ್ನು ವಿಸ್ತರಿಸಿ ಬರೆಯುವಂತೆ ನಿರೂಪಕೊಟ್ಟರು.೧೧ ಅಧಿಕಾರಗಳ ಕೃತಿಗೆ ಇನ್ನೊಂದು ಅಧಿಕಾರ ಸೇರಲು ಇವರಿಂದ ಅವಕಾಶವಾಗಿ, 'ಶ್ರೀಮತ್ ಕೃಷ್ಣರಾಜವಂಶಾಭ್ಯುದಯ ವರ್ಣನ' ವೆಂಬ ಈ ಹೊಸ ಅಧಿಕಾರದಲ್ಲಿ ಅಮೂಲ್ಯವಾದ ಐತಿಹಾಸಿಕ ಸಾಂಸ್ಕೃತಿಕ ವಿವರಗಳು ದಟ್ಟೈಸಿದುವು. ಜೈನಧರ್ಮದ ಹಿನ್ನೆಲೆಯಲ್ಲಿ 'ಜಾತಿ ನಿರ್ಣಯ'ವೆಂಬ ಮತ್ತೊಂದು ಅಧ್ಯಾಯವು ಕೂಡಿ, ಕೃತಿ ಪೂರೈಸಿತು.

## ವಸ್ತುವಿಚಾರ

'ರಾಜಾವಳೀ ಕಥಾಸಾರ' ದ ವೈಶಿಷ್ಟ್ಯ, ಸ್ವಾರಸ್ಯ ಮತ್ತು ಉಪಯುಕ್ತತೆಗಳು ಈಗ ಗ್ರಂಥ ಅಚ್ಚಾಗಿ ಬೆಳಕಿಗೆ ಬಂದಿರುವುದರಿಂದ ಸಕಲರಿಗೂ ತಿಳಿಯುವಂತಾಗಿದೆ (ಸಂ. ಬಿ.ಎಸ್. ಸಣ್ಣಯ್ಯ, 'ದೇವಚಂದ್ರ ವಿರಚಿತ ರಾಜಾವಳೀ 'ಕಥಾಸಾರ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೮). ಸು. ೨೦೦ ವರ್ಷಗಳ ಹಿಂದೆ ಕನ್ನಡ ನಾಡಿನ ಒಂದು ಭಾಗದಲ್ಲಿ ಪ್ರಚಲಿತವಿದ್ದ ಐತಿಹಾಸಿಕ ಧಾರ್ಮಿಕ ಸಂಗತಿಗಳನ್ನು ಸಮಾಜ ಸಂಸ್ಕೃತಿಗಳ ಸ್ವರೂಪವನ್ನೂ ತಿಳಿಯಬೇಕಾದರೆ, ಈ ಗ್ರಂಥ ಒಂದು ಸಮಕಾಲೀನ ಆಕರವಾಗಿದೆ, ಉಪಯುಕ್ತ ದಾಖಲೆಯಾಗಿದೆ. ''ಇದ್ದುದನಿದ್ದಂತೊರೆದೆನು।ಸದ್ಧರ್ಮದ ಮಾರ್ಗವಿಡಿದು ಬುಧಜನರರಿಯಲ್ ॥'' ಎಂದೂ ''ಇಲ್ಲದ ಸಂಗತಿಯಂ ತಾ । ಬಲ್ಲಂದದಿ ಕವಿತೆಯಿಂದಮದ್ಭುತಮಾಗಿಯು ॥ ಸೊಲ್ಲಿಸಿದುದಲ್ಲ'' ಎಂದೂ (ಪು.೩೪೬) ದೇವಚಂದ್ರ ಒತ್ತಿ ಹೇಳಿರುವುದನ್ನು ನೋಡಿದರೆ, ಆತನು ವಸ್ತು ಸ್ಥಿತಿ ಕಥನವನ್ನು ತನ್ನ ಉದ್ದೇಶವಾಗಿ ಗ್ರಹಿಸಿದ್ದನೆಂದು ತಿಳಿಯಬೇಕಾಗುತ್ತದೆ. ಬೇಕಾದ ಹಾಗೆ ಉಲ್ಲಂಘನೆಗಳಿದ್ದರೂ ಸಾಕುಬೇಕಾಗುವಷ್ಟು ಸತ್ಯಸಂಗತಿಗಳಿಗೂ ಕೊರತೆಯಿಲ್ಲ.'ರಾಜಾವಳೀ ಕಥಾಸಾರ' ಒಂದು ಶುದ್ಧಸಾಹಿತ್ಯಕೃತಿಯಲ್ಲ,

ಶುದ್ಧ ಇತಿಹಾಸಗ್ರಂಥವಲ್ಲ, ಪುರಾಣವೋ ಶಾಸ್ತ್ರವೋ ಅಲ್ಲ, ಒಂದು ಧರ್ಮಗ್ರಂಥವೂ ಅಲ್ಲ. 'ಕರ್ನಾಟಕ ದೇಶಾಧಿಪ ವೃತ್ತಕ' ವೆಂದಿರುವ ಈ ಕೃತಿ ಈವರೆಗೆ ನಮ್ಮ ಸಾಹಿತ್ಯ ಪರಂಪರೆಯಲ್ಲಿ ನಮಗೆ ಪರಿಚಿತವಾಗಿರುವ ದಾಟಿಯಲ್ಲಿರದೆ, ಇತಿಹಾಸ, ಧರ್ಮಶಾಸ್ತ್ರ, ಸಮಾಜ, ಸಂಸ್ಕೃತಿ, ಕಥೆ ಹೀಗೆ ವಿವಿಧ ಮೂಲಗಳಿಗೆ ಆಸಕ್ತಿಗಳಿಗೆ ಒಂದೇ ಕಡೆ ಅವಕಾಶ ಕಲ್ಪಿತವಾಗಿರುವ ಒಂದು ತೆರನ ಸಮ್ಮಿಶ್ರ ಸಾಹಿತ್ಯ ಕೃತಿಯಾಗಿದೆ; ಇತಿಹಾಸ ಕಾಲೀನ ಕರ್ನಾಟಕದ ಅರಸುಮನೆತನಗಳ ಚರಿತ್ರೆಯನ್ನು ಹೀಗೆ ಕಾಲಾನುಕ್ರಮವಾಗಿ ನಿರೂಪಿಸಿದ್ದು ಇದಕ್ಕೆ ಮೊದಲು ಕಂಡುಬಂದುದಲ್ಲ; ಆ ಮನೆತನಗಳ ಕಾಲದಲ್ಲಿ ನಡೆದ ಸಾಮಾಜಿಕ ಧಾರ್ಮಿಕ ಸ್ಥಿತ್ಯಂತರಗಳನ್ನು - ತತ್ಕಾಲೀನ ವಿದ್ಯಮಾನಗಳೂ ಸೇರಿದಹಾಗೆ - ಒಂದು ಕ್ರಮದಲ್ಲಿ ವಿವರಿಸಿದ್ದು ಕೂಡ ಈ ಹಿಂದೆ ಕಂಡು ಬಂದಿಲ್ಲ. ಈ ದೃಷ್ಟಿಯಿಂದ ಈ ಕೃತಿಗೆ ಒಂದು ಅನನ್ಯತೆಯಿದೆ, ಮಹತ್ತ್ವವಿದೆ. ಇಷ್ಟು ಮಾತ್ರವಲ್ಲ ಆ ಮೇಲೆ ಸಹ ಇಂತಹ ಕೃತಿಯೊಂದು ರಚಿತವಾಯಿತೇ, ನನಗೆ ತಿಳಿಯದು. ಇತಿಹಾಸ, ಧರ್ಮ, ಸಮಾಜ, ಸಂಸ್ಕೃತಿ, ಐತಿಹ್ಯ, ಕಥೆ ಇವು ಒಂದರೊಡನೊಂದು ಮಿಳಿತವಾಗಿ, ಬಹುವರ್ಣರಂಜಿತವಾದ ಚಿತ್ರವೊಂದರ ವೈಖರಿಯಿಂದ ಕೃತಿ ಸೊಗಯಿಸುತ್ತಿದೆ.

ಕವಿಯ ಒಲವು ಅಭಿನಿವೇಶಗಳು ಆತನ ಪ್ರಾಚೀನ ಸಂಸ್ಕೃತ ಕನ್ನಡ ಕಾವ್ಯ ಶಾಸ್ತ್ರಗಳ ಅಭ್ಯಾಸದಿಂದ ಸಂಸ್ಕಾರಗೊಂಡವಾದರೂ, ಪ್ರಕಟಿತ ವಿಧಾನವೂ ಭಾಷಾಶೈಲಿಗಳ ವಿನ್ಯಾಸವೂ ಜಾನಪದೀಯವಾಗಿರುವುದು ಸ್ವಾರಸ್ಯಕರವಾಗಿದೆ. ಹಳ್ಳಿಯ ವಾತಾವರಣದಲ್ಲಿಹುಟ್ಟಿ ಬೆಳೆದು ಸಂಪಾದಿಸಿದ ಲೋಕಾನುಭಾವ, ಸಾಮಾನ್ಯರ ಒಡನಾಟ - ಇವು ಒಂದೆರಡು ಕಾರಣಗಳಾದರೆ, ಅವನು ತನ್ನ ಕೃತಿಯಲ್ಲಿ ಅಳವಡಿಸಿರುವ ಜನಪದರ ಕತೆಗಳೂ ಗಾದೆಗಳೂ ದೃಷ್ಟಾಂತಗಳೂ ಒಗಟುಗಳೂ ಐತಿಹ್ಯಗಳೂ ಅನ್ಯಕಾರಣಗಳಾಗಿವೆ. ಇವುಗಳ ಆಯ್ಕೆಯಲ್ಲಿ, ಅವನ ಜೈನಮತ ಪಕ್ಷಪಾತವೂ ಅನ್ಯಮತಗಳಗರ್ಹಣೆಯ ಅಪೇಕ್ಷೆಯೂ ಪ್ರಬಲವಾಗಿ ಕೆಲಸಮಾಡಿರುವುದರಿಂದ ಹಲವೆಡೆ ಅವನು ಅಗತ್ಯ ಪ್ರಮಾಣದಲ್ಲಿ ಸಂಯಮ ಗಾಂಭೀರ್ಯಗಳನ್ನೂ, ವಸ್ತು ನಿಷ್ಠೆಯ ಎಚ್ಚರವನ್ನೂ ತೋರಿಸುವುದಿಲ್ಲ. ಆಗಾಗ ಕೀಳು ಮಟ್ಟದ ಅಭಿರುಚಿಯನ್ನು ಪ್ರಕಟಿಸಿ ಮಾತು ಹೊಲಗೆಡುವಂತೆ ಮಾಡಿದ್ದಾನೆ. ಆದರೆ ಆ ಮಾತಿನ ಹಿಂದೆ ಅದನ್ನು ಆಡುತ್ತಿದ್ದ ಸಮಾಜವಿದೆಯಲ್ಲದೆ, ಸಮುದಾಯವಿದೆಯಲ್ಲದೆ, ಕವಿಯಿಲ್ಲ ಎನ್ನುವುದನ್ನು ಗಮನಿಸಿದರೆ, ಶಿಷ್ಟಸಾಹಿತ್ಯವು ಸಾಮಾನ್ಯವಾಗಿ ದೂರವಿಡುತ್ತಿದ್ದ, ಮುಚ್ಚಿ ಮರೆಮಾಡುತಿದ್ದ, ಅವಿದ್ಯಾವಂತ, ಅಲ್ಪ ವಿದ್ಯಾವಂತ ಜನಸಾಮಾನ್ಯರ ಮಾತುಕತೆಗಳನ್ನೂ, ನಂಬಿಕೆ ಆಚರಣೆಗಳನ್ನೂ ಯಾವ ಎಗ್ಗೂ ಸಿಗ್ಗೂ ಇಲ್ಲದೆ ದಾಖಲಿಸಿದ ದೇವಚಂದ್ರನ ಸಾಹಿತ್ಯಿಕ ಧೈರ್ಯವನ್ನು ನಾವು ಮೆಚ್ಚಲೇ ಬೇಕು. ವಿದ್ಯಾನಿಧಿಗಳ ಮುಖವಾಡವಿಟ್ಟು ಮಾಡಬಾರದ್ದು ಮಾಡುವ, ಆಡಬಾರದ್ದು ಆಡುವ ಜನರನ್ನೂ ಅವನ ಕೃತಿ ಬಯಲಿಗಿಡುತ್ತದೆ. ಇವುಗಳಿಂದಾಗಿ ಅವನ ಕೃತಿಗೆ ನೈಜತೆಯ ಕಳೆಯೇರಿದೆ.

### ಆಕರ

ದೇವಚಂದ್ರ ಹಲವು ಪೀಳಿಗೆಗಳಿಂದ ವಿದ್ಯಾವಂತರೂ ಕರ್ಮನಿಷ್ಠರೂ ಆಗಿ ಪ್ರಸಿದ್ಧರಾಗಿ ಜೈನ ಬ್ರಾಹ್ಮಣ ವಿದ್ವಾಂಸರ ಮನೆತನದಲ್ಲಿ ಹುಟ್ಟಿ ಬಂದವನಾದ ಕಾರಣ, ಅವನ ಹುಟ್ಟೂರು, ಸುತ್ತಮುತ್ತಣ ಸ್ಥಳಗಳು ಅಂತಹ ಕುಟುಂಬಗಳೇ ಹೆಚ್ಚಾಗಿದ್ದ ಪರಿಸರವೆಂಬ ಕಾರಣ, ಅವನು ಸಂಸ್ಕೃತ ಕನ್ನಡ ಭಾಷೆಗಳಲ್ಲಿ ರಚಿತವಾಗಿರುತ್ತಿದ್ದ ಬಹುಬಗೆಯ ಗ್ರಂಥರಾಶಿಯ ನಡುವೆಯೇ ಬೆಳೆದ

ನೆನ್ನಬೇಕು. ಮನೆಯವರು ''ಅನೇಕ ಶಾಸ್ತ್ರಾವಲೋಕನದಿಂ ಲೌಕಿಕ ಪಾರಮಾರ್ಥಿಕಮಂ, ತತ್ವ ನೀತಿ ವೈದ್ಯ ಜ್ಯೋತಿಷ ಮಂತ್ರವಾದಾದಿ ವಿದ್ಯಂಗಳಂ ಕಲ್ತು'' ಬೆಳೆದವರೆಂದು ಅವನೇ ತಿಳಿಸಿದ್ದಾನೆ (ಪು.೩೧೪)

'ರಾಜಾವಳೀ ಕಥಾಸಾರ'ದ ವಿಪುಲವಾದ ಆಕರಗಳ ಮೂಲವನ್ನು ಶೋಧಿಸಿ ನಿರೂಪಿಸುವುದು ಶ್ರಮಸಾಧ್ಯವಾದ ಕೆಲಸ. ಈ ಆಕರಗಳ ಮೂಲವನ್ನು ಕವಿ ತಾನೇ ತಿಳಿಸಿಲ್ಲ. ಆಕರಗಳ ವ್ಯಾಪ್ತಿ ಸರಸ ಸುಂದರವಾದ ಲೋಕೋಕ್ತಿಗಳಿಂದ ಹಿಡಿದು ಸಂಸ್ಕೃತ ಕನ್ನಡ ಭಾಷೆಗಳ ಪುರಾಣಗಳು ಇತಿಹಾಸಗಳು ಶಾಸ್ತ್ರಗಳು ಹಾಗೂ ಕಾವ್ಯಗಳವರೆಗೆ ಇದೆ. ಮುಖ್ಯವಾಗಿ ಶೈವ ವೈಷ್ಣವ ಪುರಾಣಗಳು, ಜೈನ ಪುರಾಣಗಳು ಆಗಮಗಳು ಮತ್ತು ಕಾವ್ಯಗಳು, ಶಾಸ್ತ್ರಗ್ರಂಥಗಳು, ಸ್ಮೃತಿಗಳು, ದರ್ಶನಗಳು, ನೀತಿ ಗ್ರಂಥಗಳು, ರಾಜ ನೀತಿಗ್ರಂಥಗಳು ಈ ಮೊದಲಾದವುಗಳಿಂದ ಉಚಿತಕ್ಕೆ ತಕ್ಕಷ್ಟು ವಿಷಯಗಳನ್ನು ಸಂಗ್ರಹಿಸಿದ್ದಾನೆ. ಸುಮಾರು ೧೦೦-೧೫೦ ಗ್ರಂಥಗಳ ನೇರವಾದ ಉಲ್ಲೇಖಗಳೇ ಕೃತಿಯಲ್ಲಿ ಕಂಡುಬಂದಿದೆ. ಹೀಗಾಗಿ ದೇವಚಂದ್ರನ ವ್ಯಾಸಂಗ ವ್ಯಾಪಕವಾದುದು, ಬಹುಮುಖವಾದುದು ಎನ್ನಬಹುದು. ಜ್ಯೋತಿಷ್ಯ ಅವನಿಗೆ ಬಹುಆಪ್ತವಾದ ವಿಷಯ. ಸಂಸ್ಕೃತ ಸಾಹಿತ್ಯದ ವಿಚಾರವಿರಲಿ, ಕನ್ನಡದಲ್ಲಿಯೇ, ದೇವಚಂದ್ರನು 'ಆದಿಪುರಾಣ', 'ಕರ್ಣಾಟಕ ಪಂಚತಂತ್ರ', 'ವಡ್ಡಾರಾಧನೆ', 'ವರ್ಧಮಾನಪುರಾಣ' 'ಅರ್ಧನೇಮಿಪುರಾಣ', 'ಧರ್ಮಾಮೃತ', 'ಚಾವುಂಡರಾಯ ಪುರಾಣ', 'ಬಿಜ್ಜಳರಾಯ ಪುರಾಣ', 'ವರನಂದೀ ಚರಿತೆ', 'ಸಾರಂಗಧರನ ಕಥೆ', 'ಜೀವಂಧರ ಚರಿತೆ', 'ಬತ್ತೀಸ ಪುತ್ತಳಿಕಥೆ', 'ಕುಮಾರರಾಮನ ಸಾಂಗತ್ಯ,', 'ಜಿನದತ್ತರಾಯ ಚರಿತೆ', ಹರಿಹರನ ರಗಳೆಗಳು, 'ಸಾನಂದ ಗಣೇಶ ಚರಿತ್ರೆ', 'ಚಿತ್ರಶೇಖರ - ಸೋಮಶೇಖರ ಕಥೆ' ಈ ಮೊದಲಾದ ಕೃತಿಗಳಲ್ಲಿ ಹಲವನ್ನು ನೇರವಾಗಿ ಲಕ್ಷಿಸಿ ವಸ್ತು ಸಂಗ್ರಹ ಮಾಡಿರುವಂತೆ ತೋರುತ್ತದೆ. ಅಲ್ಲದೆ 'ಖಗೇಂದ್ರ ಮಣಿದರ್ಪಣ', 'ಶಬ್ದಮಣಿದರ್ಪಣ' ಇಂತಹ ಶಾಸ್ತ್ರಗ್ರಂಥಗಳನ್ನೂ ಅವನು ಪರಾಮರ್ಶಿಸಿರುವಂತಿದೆ; ಮಾತ್ರವಲ್ಲ, ಶಾಸನಗಳ ಸಾಕ್ಷ್ಯಗಳನ್ನೂ ಉದ್ಧರಿಸಿರುವುದುಂಟು. ಉದಾಹರಣೆಗೆ , ಬುಕ್ಕರಾಯನ ಶ್ರವಣಬೆಳ್ಗೊಳದ ಮತಸಾಮರಸ್ಯದ ಶಾಸನವನ್ನು ಕವಿ ತಾನೇ ಸ್ವತಃ ಓದಿ ಪ್ರತಿಮಾಡಿಕೊಂಡಿರಬೇಕು (ಪು.೧೯೮-೯೯). ಸಮಕಾಲೀನನಾದ ಚಂದ್ರಸಾಗರ ವರ್ಣಿಯ (೧೮೧೦) ಹಲವು ಕೃತಿಗಳು, ಮುಖ್ಯವಾಗಿ 'ಕದಂಬಪೂರ್ಣ', 'ಬೆಟ್ಟ ವರ್ಧನರಾಯ ಚರಿತ್ರೆ', 'ಮುಲ್ಲಾಶಾಸ್ತ್ರ', 'ಹೇಮಸೀತಳ ರಾಯನ ಕಥೆ', 'ದಿಳ್ಳಿ ಸುರಿತಾಳನ ಗೆದ್ದದ್ದು', ಇಂಥವು ದೇವಚಂದ್ರನ ಕೃತಿಗೆ ಆಯಾ ವಿಷಯಕ್ಕೆ ಸಂಬಂಧಿಸಿದ ವಿವರಗಳನ್ನು ಒದಗಿಸಿರುವುದು ಬಲುಮಟ್ಟಿಗೆ ಸಂಭಾವ್ಯವಾದುದು.

ಬಹುಸಂಖ್ಯೆಯ ಜೈನಕವಿಗಳನ್ನೂ, ಅವರಲ್ಲಿ ಕೆಲವರ ಕೃತಿಗಳನ್ನೂ ಹೊಯ್ಸಳರ ಮನೆತನವನ್ನೂ ಕುರಿತಾಗಿ ಅವನು ಪ್ರಸ್ತಾಪಿಸಿದ್ದು (ಪು. ೧೭೭-೭೮), ಅವನ ಕಾಲಾನುಕ್ರಮದ ಪ್ರಜ್ಞೆ, ಇಲ್ಲಿ ವ್ಯತ್ಯಸ್ತಗೊಂಡಿದೆ. ಆದರೆ ಹಲವರು ನಿಶ್ಚಯವಾಗಿ ಈ ಕಾಲದವರೇ ಆಗಿರುವುದರಿಂದ ಅವರ ವಿಚಾರದ ತಿಳಿವಳಿಕೆಗೆ ದೇವಚಂದ್ರನಿಂದ ಕೆಲಮಟ್ಟಿಗೆ ಸಹಾಯವಾಗಿದೆ ಎನ್ನಬಹುದು. ಕವಿಕಥೆಗಳಿಗೆ ಸಂಬಂಧಿಸಿದ ಐತಿಹ್ಯಗಳನ್ನು ಅವನು ದಾಖಲಿಸುವುದೂ ಗಮನಾರ್ಹವಾಗಿದೆ. ವೈಯಾಕರಣ ಭಟ್ಟಾಕಳಂಕನ ವಿಚಾರವಾಗಿ ಅವನು ಕೊಡುವ ವಿವರಗಳು ಆ ಕವಿಯ ಚರಿತೆಗೆ ಪೋಷಕಾಂಶಗಳಾಗಿವೆ.

ಇಂತಹ ಕೆಲವರು ಕವಿಗಳನ್ನೂ ಕೃತಿಗಳನ್ನೂ ಇವನು ಉಲ್ಲೇಖಿಸುವಲ್ಲಿ, ಒಂದು ಸಮುದಾಯದ ವಿದ್ಯಾವಂತ ಜನ ವಿಶೇಷವಾಗಿ ತಮ್ಮ ಸಮುದಾಯದ ಕೃತಿಗಳನ್ನೇ ಆತ್ಮೀಯವಾಗಿ ಕಾಣುತ್ತಿದ್ದರೆಂದು ಭಾವಿಸುವಂತಾಗುತ್ತದೆ.

ಸಂಸ್ಕೃತ ಕನ್ನಡ ಸುಭಾಷಿತಗಳ ಒಂದು ದೊಡ್ಡ ಭಂಡಾರವೆಂದು ಹೇಳುವ ಮಟ್ಟಿಗೆ 'ರಾಜಾವಳೀ ಕಥಾಸಾರ'ದಲ್ಲಿ ಅವು ಗದ್ಯಖಂಡಗಳ ನಡುನುಡುವೆ ಉದ್ಧೃತವಾಗಿವೆ. ಸಂಸ್ಕೃತ ಸುಭಾಷಿತಗಳು ಸಂಖ್ಯೆಯಲ್ಲಿ ಹೆಚ್ಚು. ಜೊತೆಗೆ ಅವುಗಳಲ್ಲಿ ಹಲವು ತುಂಬ ಮನೋಜ್ಞವಾದವು. ಅವುಗಳಲ್ಲಿ ಪ್ರಕಟವಾಗಿರುವ ಲೌಕಿಕ ಜ್ಞಾನದ ವಿವರಣೆಗಾಗಿಯೇ ಎನ್ನುವಂತೆ, ಇಲ್ಲಿ ಹಲವು ಪುಟಿಗತೆಗಳೂ ಸಿಡುಗತೆಗಳೂ ಕಥನಗೊಂಡಿವೆ. ವಾಸ್ತವವಾಗಿ ಅಂಥ ಸುಭಾಷಿತಗಳು ಅರ್ಥಗರ್ಭಿತಗಳಾಗಿ ತೋರುವುದು ಇಂತಹ ಕಥೆಗಳ ಮೂಲಕವೇ. ಈ ಕತೆಗಳ ಮೂಲವಾಗಲಿ ಸುಭಾಷಿತಗಳ ಆಕರಗಳಾಗಲಿ ಅನಿರ್ದಿಷ್ಟ. ಜನಪದರ ಹಾಗೂ ವಿದ್ಯಾವಂತರ ನಡುವೆ ಸೂಸಿ ಸುಳಿದಾಡುತ್ತಿದ್ದ ವಾಙ್ಮೂಲದ ಕಥೆಗಳನ್ನು ತನ್ನ ಹುಟ್ಟೂರು, ಸುತ್ತಮುತ್ತಣ ಪ್ರದೇಶಗಳಲ್ಲಿ ಸಂಚರಿಸಿ ದೇವಚಂದ್ರ ಸಂಗ್ರಹಿಸಿ ಬಳಸಿರುವಂತೆ ತೋರುವುದು; ಸುಭಾಷಿತಗಳು ಕೆಲಮಟ್ಟಿಗೆ ಲಿಖಿತ ಮೂಲಗಳಿಂದ, ಇನ್ನು ಕೆಲಮಟ್ಟಿಗೆ ವಾಙ್ಮೂಲದಿಂದ ದೊರೆತಿರಬೇಕು. ಕಥೆ ಸುಭಾಷಿತಗಳ ನಡುವೆ ಸೊಗಸಾಗಿ ಸಂಬಂಧಕಲ್ಪಿಸುವುದರಲ್ಲಿ ಕವಿ ತನ್ನ ಕೌಶಲವನ್ನು ಮೆರೆದಿದ್ದಾನೆ. ಇಂದು ಬಹುಪರಿಚಿತಗಳಾಗಿರುವ 'ಧೈರ್ಯಂ ಸರ್ವತ್ರಂ ಸಾಧನಂ', 'ಸ್ತ್ರೀ ಬುದ್ಧಿಃ ಪ್ರಳಯಾಂತಕಃ, 'ಅಹಿಂಸಾ ಪರಮೋ ಧರ್ಮಃ', 'ಆತ್ಮವತ್ ಸರ್ವಭೂತಾನಿ', 'ಪಾಲೀ ಚಿರಾಯುಃ' 'ಅಪುತ್ರಸ್ಯ ಗತಿರ್ನಾಸ್ತಿ', 'ಬುದ್ಧಿಃ ಕರ್ಮಾನುಸಾರಿಣೀ' ಮುಂತಾದ ಸುಭಾ, ಷಿತಗಳ ಪೂರ್ಣಪಾಠ ಇಲ್ಲಿ ದೊರೆಯುತ್ತವೆ. ತನ್ನ ಕಾಲದ, ತಾನು ಕೇಳಿ ಬಲ್ಲ ಜನಪದರ ಹಾಗೂ ವಿದ್ಯಾವಂತರ ನಡುವೆ ಖಾಸಗಿ ಸಂಭಾಷಣೆಗಳಲ್ಲಿ ಕೇಳ ಬರುತ್ತಿದ್ದ ಚಾಟೂಕ್ತಿಗಳನ್ನು, ಅನುಭವಗಳ ಸಾರೋಕ್ತಿಗಳನ್ನು ಅಲ್ಲಲ್ಲಿ ದೇವಚಂದ್ರ ಚೆನ್ನಾಗಿ ಬಳಸಿದ್ದಾನೆ. ಇವು ಆ ಕಾಲದ ರಾಜಕೀಯ ಸಾಂಸ್ಕೃತಿಕ ವಿದ್ಯಮಾನಗಳಿಗೆ ಗುರುತಾಗಿ ಇಟ್ಟ ಮೈಲಿಗಲ್ಲುಗಳಂತಿವೆಯೆನ್ನಬಹುದು.

ಸಂಗ್ರಹಿಸಿರುವ ಕಥೆಗಳಲ್ಲಿ ಗ್ರಾಮೀಣ ಸಂಸ್ಕೃತಿಯ ಹಲವಾರು ಮುಖಗಳನ್ನು ಗುರುತಿಸ ಬಹುದು. ವ್ಯಕ್ತಿಗಳ ಸಾಂಸಾರಿಕ ಅನುಭವಗಳು, ಶೀಲ ಸ್ವಭಾವಗಳ ವೈಚಿತ್ರ್ಯಗಳು, ಜೀವನ ವಿಧಾನಗಳು, ಆಯಾ ವ್ಯಕ್ತಿಗಳು ಹುಟ್ಟಿಬಂದ ಸಮಾಜದ, ಜಾತಿ ಪಂಗಡಗಳ ಹಿನ್ನೆಲೆಯಲ್ಲಿ ರಬ್ಬುರಬ್ಬಾಗಿ ಇಲ್ಲಿ ಚಿತ್ರಿತವಾಗಿವೆ. ಚಿತ್ರಣ ಎನ್ನುವುದಕ್ಕಿಂತ ಕಥನವೆನ್ನುವುದೇ ಮೇಲು. ಹೀಗಾಗಿ ಈ ಕಥನಗಳಲ್ಲಿ ಬಂದ ಅನುಭವಗಳ ಹರವು ವಿಶಾಲವಾದುದು, ಬಲುಮಟ್ಟಿಗೆ ವಾಸ್ತವಿಕವಾದುದು. ಸಾಮಾಜಿಕವಾಗಿ ಮೇಲುಸ್ತರದ ಜನವರ್ಗದ ಚರ್ಯೆ ಸ್ವಭಾವಗಳನ್ನು ಕುರಿತಾದ ಅಸಹನೆ ವಿಡಂಬನೆಗಳು ಕಂಡುಬರುತ್ತವೆ; ಕೆಳಸ್ತರದ ವಿಚಾರ ಕುರಿತಾಗಿ ಕುತೂಹಲ ಸಹಾನುಭೂತಿಗಳು ಕಂಡುಬರುತ್ತವೆ. ಹೆಚ್ಚಿನ ಗಮನ ಕೆಳಸ್ತರದ ಜನವರ್ಗದ, ಜಾತಿಪಂಗಡಗಳ ನಡೆ ನುಡಿಗಳಿಗೆ ಸಂದಿದ್ದು, ಅವರಿಗೆ ಮೇಲುಸ್ತರದ ಜನವರ್ಗದೊಂದಿಗೆ ಇದ್ದ ನೇರ ಹಾಗೂ ಸಂಶಯಾಸ್ಪದ ಸಂಬಂಧಗಳು, ಉಭಯ ನಂಬಿಕೆಗಳು, ಆಚರಣೆಗಳು, ಪರಸ್ಪರ ಸ್ಪರ್ಧೆಗಳು, ಸಂಘರ್ಷಗಳು ಸಜ್ಜನತ್ವಗಳು ಇತ್ಯಾದಿಗಳ ಕಥನ ಮೇಲಿಂದ ಮೇಲೆ ಬರುವುದು ಕಾಣುತ್ತದೆ. ಇದಕ್ಕೆ ಅನುಗುಣವಾಗಿ ಭಾಷೆ ಶೈಲಿಗಳು ಶೀಲಾಶ್ಲೀಲದ ವಿವೇಚನೆಯಿಲ್ಲದೆ ವಾಸ್ತವಿಕತೆಯ ನೆಲೆಗಟ್ಟಿನಲ್ಲಿ ರೂಪಗೊಳ್ಳುವುವು.

ಹಲವೆಡೆ ದೇವಚಂದ್ರನ ಅಭಿರುಚಿ ಉತ್ತಮವಲ್ಲ ಎಂಬುದು ನಿಜವಾದರೂ, ಅವನು ನಮ್ಮ ಕಾಲದ ವಾಸ್ತವತಾವಾದಿ ಕವಿ ಕತೆಗಾರರ ಹಾಗೆ ಎಂದು ಕೊಂಡರೆ, ಅವನನ್ನು ಅರ್ಥಮಾಡಿಕೊಳ್ಳಬಹುದು. ಇಲ್ಲಿಯೂ ಅವನು ಹೊಸತನವನ್ನು ಕಲ್ಪಿಸುವವನಲ್ಲ, ಕಂಡದ್ದು ಕೇಳಿದ್ದನ್ನು ಕಥಿಸುವವನು ಎಂಬುದನ್ನು ನೆನಪಿಡಬೇಕು.

## ರಾಜಕೀಯ ದಾಖಲೆ

'ರಾಜಾವಳೀ ಕಥಾಸಾರ'ದ ಮೂಲೋದ್ದೇಶ ಕರ್ನಾಟಕದ ರಾಜಮನೆತನಗಳ ಚರಿತ್ರೆಯನ್ನು ಸಂಗ್ರಹಿಸಿ ಬರೆಯುವುದು. ಇಲ್ಲಿ ಗಂಗರು, ಹೊಯ್ಸಳರು, ವಿಜಯನಗರದ ಅರಸರು ಹಾಗೂ ಮೈಸೂರೊಡೆಯರ ಇತಿಹಾಸದ ಕೆಲಕೆಲವಂಶಗಳು ಬಂದಿವೆ; ಜೊತೆಗೆ - ಪೌರಾಣಿಕ ಮೂಲದ ರಾವಂಶಗಳ ಹಾಗೂ ಚೋಳ, ಪಾಂಡ್ಯ, ದೆಹಲಿಯ ಸುಲ್ತಾನರು ಮೊದಲಾದ ಅನ್ಯ ರಾಜವಂಶಗಳ ವೃತ್ತಕವೂ ಬಂದಿದೆ. ಇವುಗಳ ಸಂಯೋಜನೆಯಲ್ಲಿ, ವಿವರಗಳಲ್ಲಿ ಹಲವು ಕುಂದು ಕೊರತೆಗಳನ್ನು ಎತ್ತಿ ತೋರಿಸಿ, ಐತಿಹಾಸಿಕ ಪ್ರಾಮಾಣ್ಯವನ್ನು ಶಂಕಿಸಿ, ಕೃತಿಯ ಮೌಲ್ಯವನ್ನು ಅಲ್ಲಗಳೆಯುವುದು ಸುಲಭ. ಆದರೆ ಮೈಸೂರು ಒಡೆಯರ ಹಾಗೂ ಈ ಅವಧಿಯ ಹಲಕೆಲವು ತುಂಡರಸರ, ಸಂಬಂಧವಾಗಿ ಇಲ್ಲಿ ಬಂದಿರುವ ವಿವರಗಳು ಕುತೂಹಲಕರವಾಗಿವೆ; ತಕ್ಕಮಟ್ಟಿಗೆ ಪ್ರಮಾಣಭೂತವಾಗಿಯೂ ಇವೆ. ಉದಾಹರಣೆಗೆ, ಒಂದು ಕಾಲದ ರಾಯಭಾರದ ಸ್ವರೂಪವನ್ನು ಕಣ್ಣಿಗೆ ಕಟ್ಟಿಸುವ ಬೊಮ್ಮರಸಯ್ಯನ ವೃತ್ತಾಂತ (ಪು. ೨೨೬-೨೯) ವನ್ನೂ ಹೈದರ್ ಟಿಪ್ಪುಗಳ ಕಾಲದ ಸರ್ವಾಧಿಕಾರದ ವೈಖರಿ (ಪು. ೩೦೫-೦೭) ಇತ್ಯಾದಿ. ಇತಿಹಾಸ ಐತಿಹ್ಯಗಳು, ಇತಿಹಾಸ ಜಾನಪದಗಳು ಬೆರೆತು ಸಿದ್ಧವಾದ ಈ ಕೃತಿಗೆ ಇಲ್ಲಿ ವಾಸ್ತವವಾಗಿ ವಿಪುಲಸಾಮಗ್ರಿಯಿದೆ. ಇದು ಭಾರತೀಯ ದೃಷ್ಟಿಯ ಒಂದು ಅಭಿವ್ಯಕ್ತಿ ವಿಧಾನವೇ ಆಗಿದೆ.

ಮೈಸೂರಿನ ಇತಿಹಾಸದ ರಚನೆಯ ಒಂದು ಗೌಣ ಹಾಗೂ ಅತಿ-ಐತಿಹಾಸಿಕ ಆಕರವಾಗಿ ದೇವಚಂದ್ರನ' ರಾಜಾವಳೀ ಕಥಾಸಾರ' ಸ್ಥಾನ ಪಡೆದಿದೆ. ಇದಕ್ಕೆ ಮೊದಲಿನ ಆಕರಗಳಿಗಿಂತ (ಸು. ೧೮೭೦-೧೮೦೦) ಇದು ವಿಭಿನ್ನವಾದದ್ದು. ಏಕೆಂದರೆ, ಇದರಲ್ಲಿ ಅನ್ಯ ಪ್ರಾಚೀನ ಅರಸು ಮನೆತನಗಳ ಇತಿಹಾಸಕ್ಕೆ ಕೂಡ ಎಡೆ ದೊರೆತಿದೆ. ಕವಿ ದಾಖಲಿಸುವ ಸಂಗತಿಗಳನ್ನು ಇತರ ಆಕರಗಳ ಸಂಗತಿಗಳೊಂದಿಗೆ ತುಲನೆ ಮಾಡಿ ನೋಡಿ ಸವಿಮರ್ಶ ನಿರ್ಣಯಗಳಿಗೆ ಬರುವುದು ಸಾಧ್ಯವಿದೆ. ಸಿ.ಹಯವದನರಾಯರು ತಮ್ಮ ಮೈಸೂರು ಇತಿಹಾಸದ ಸಂಪುಟಗಳಲ್ಲಿ ಆ ಕೆಲಸವನ್ನು ಆಗಾಗ ಮಾಡಿದ್ದಾರೆ. ಸೋಸಿ ತೆಗೆದರೆ, ಉಪಾದೇಯವಾದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಐತಿಹಾಸಿಕ ಸಂಗತಿಗಳನ್ನು ಇಲ್ಲಿ ಗುರುತಿಸಬಹುದು.

"He writes however, not as a critical historian but as a gatherer and chronicler of current tradition. Added to it, he was a full-blooded jain and wrote with all the fervour of a good partisan who believed in the greatness of his own religion"

ಎಂದು ಹಯವದನರಾಯರು ಅವನ ಬಗ್ಗೆ ತಿಳಿಸಿದ್ದಾರೆ. ರಾಜನೈತಿಕವಾಗಿ ಮೈಸೂರು ಮೊದಲುಗೊಂಡು ಅನ್ಯ ಪ್ರದೇಶಗಳಲ್ಲಿ ಪ್ರಬಲ ಸಾಮಾಜಿಕ ವರ್ಗವನ್ನು ಅನುಸರಿಸಿ, ವಿದ್ಯಮಾನಗಳು ಜರುಗುತ್ತಿದ್ದುವೆಂದು ತಿಳಿಯಲು ಹೊಯ್ಸಳ ರಾಜರ ಹಾಗೂ ಮೈಸೂರೊಡೆಯರ ಸಂಬಂಧವಾದ

ಕಥನ ಭಾಗಗಳು ಕೆಲಮಟ್ಟಿಗೆ ಅವಕಾಶ ಮಾಡಿ ಕೊಡುತ್ತವೆ.. ಮುಖ್ಯವಾಗಿ ಹೊಯ್ಸಳರ ಕಾಲದಲ್ಲಿ ವಿಷ್ಣುವರ್ಧನನ ರಾಜ್ಯಾವಧಿಯಲ್ಲಿ ಶ್ರೀವೈಷ್ಣವ ಪ್ರಾಬಲ್ಯ ಮೈಸೂರು ಒಡೆಯರ ಕಾಲದಲ್ಲಿ ಪ್ರಖ್ಯಾತನಾದ ಚಿಕ್ಕದೇವರಾಜ ಒಡೆಯರ ರಾಜ್ಯಾವಧಿಯಲ್ಲಿ ಶ್ರೀ ವೈಷ್ಣವದ ಮತ್ತು ವೀರಶೈವದ ಪ್ರಾಬಲ್ಯ, ಇವು ಮನವರಿಕೆಯಾಗುವಂತೆ ರಾಜಾವಳೀ ಕಥಾಸಾರದಲ್ಲಿ ನಿರೂಪಣೆಯಿದೆ. ಚಿಕ್ಕದೇವರಾಜನ ರಾಜ್ಯದಲ್ಲಿ ಸಾಮಾಜಿಕ ಸುಸ್ಥಿತಿಗಾಗಿ ದೊರೆ - ಜೈನನಾದ ವಿಶಾಲಾಕ್ಷಪಂಡಿತ, ಶ್ರೀ ವೈಷ್ಣವನಾದ ತಿರುಮಲಾರ್ಯ, ವೀರಶೈವನಾದ ಷಡಕ್ಷರಿ, ಇವರೊಂದಿಗೆ ಮಂತ್ರಾಲೋಚನೆ ನಡೆಸುತ್ತಿದ್ದನೆಂದೂ ಸೇನಾವ್ಯವಸ್ಥೆಯಲ್ಲಿ ಮಹಮದೀಯರನ್ನು ವಿಶ್ವಾಸಕ್ಕೆ ತೆಗೆದುಕೊಂಡಿದ್ದನೆಂದೂ ಕಥನಭಾಗದಿಂದ ವಿದಿತವಾಗುವಂತಿವೆ. ಆಗ್ಗೆ ಬಹುಶಃ ಕೃಷಿ ಆಧಾರಿತ ಸಮಾಜವರ್ಗ ಆದ ಒಕ್ಕಲಿಗರು ರಾಜಕೀಯವಾಗಿ ಪ್ರಬಲ ಶಕ್ತಿಯಾಗಿ ಇರಲಿಲ್ಲ; ಆದರೆ ಮೈಸೂರೊಡೆಯರ ವಂಶದ ಹಿನ್ನೆಲೆಯನ್ನು ಗುರುತಿಸಿದರೆ, ದೊರೆಗಳೇ - ಒಕ್ಕಲಿಗರು ಮೊದಲಾದ ಅನ್ಯ ಹಿಂದುಳಿದ ವರ್ಗದ ಜನರನ್ನು ಪ್ರತಿನಿಧಿಸುತ್ತಿದ್ದಂತೆ ತೋರುತ್ತದೆ. ರಾಜತ್ವದ ಮೂಲ - ಕುಂಬಾರ, ಕುರುಬ, ಉಪ್ಪಾರ ಹೀಗೆ ಯಾವುದಾದರೊಂದು ಕೆಳ ಸಾಮಾಜಿಕ ವರ್ಗದ ಕಡೆಗೆ ಶೋಧಕರನ್ನು ಕೊಂಡೊಯ್ಯುವುದು ಸಾಮಾನ್ಯ.

ದೇವಚಂದ್ರನ ಕಾಲದಲ್ಲಿ, ಮೈಸೂರು ಸಂಸ್ಥಾನದಲ್ಲಿ ಗಡಿಯಳತೆ ಉದ್ದ ೨೫೦ ಮೈಲಿ, ಅಗಲ ೧೪೦ ಮೈಲಿ ಎಂಬ ಪ್ರಮಾಣದಲ್ಲಿದ್ದುದಾಗಿಯೂ ಆಗಿನ ಹಳ್ಳಿ ಪಟ್ಟಣಗಳ ಸಂಖ್ಯೆ೩೩ ಸಾವಿರ ಮತ್ತು ಜನಸಂಖ್ಯೆ ೩೦ ಲಕ್ಷ ಎಂಬ ಪ್ರಮಾಣದಲ್ಲಿದ್ದುದಾಗಿಯೂ ಅವನ ಕೃತಿಯಿಂದಲೇ ಧಾತುವೆಂದೂ ತಿಳಿಯುತ್ತದೆ. ಹವೆ ಸಮ ರಾಜ್ಯದ ಮುಖ್ಯ ನದಿ ಕಾವೇರಿಯೆಂದೂ ನಮ್ಮ ಕಾಲದ ಹವಾಮಾನ ಶಾಸ್ತ್ರಜ್ಞರಂತೆ, ಭೂಗೋಳ ಶಾಸ್ತ್ರಜ್ಞರಂತೆ ಅವನು ದಾಖಲಿಸುತ್ತಾನೆ. ಬ್ರಿಟಿಷರು ಮುಮ್ಮಡಿ ಕೃಷ್ಣರಾಜರ ವೆಚ್ಚಕ್ಕೆ ಹಣವನ್ನು ಕೊಟ್ಟು ತಾವೇ ರಾಜಕೀಯ ವ್ಯವಹಾರವನ್ನು ನಿರ್ವಹಿಸುತ್ತಿದ್ದ ವಿಷಯವನ್ನು ತಿಳಿಸಿದ್ದಾನೆ. ಇಲ್ಲಿ ಒಂದು ಗಮನಾರ್ಹ ಸಂಗತಿಯುಂಟು. ಮುಮ್ಮಡಿಯವರಿಗೆ ರಾಜ್ಯ ನಿರ್ವಹಣೆಯನ್ನು ಬ್ರಿಟಿಷರು ಕೈತಪ್ಪುವಂತೆ ಮಾಡಿದ ಸಂದರ್ಭವನ್ನು, ದೇವಚಂದ್ರನು ರಾಜಭಕ್ತಿಯುಳ್ಳವನಾಗಿಯೂ, ಸಂಕೋಚಪಡದೆ ವಿಶದಪಡಿಸಿರುವ ಸಂಗತಿಯೇ ಅದು, ಅದು. ಹೇಗೆಂದರೆ -

''ಸರಜಪ್ಪ ನಾಯಕನೆಂಬಂ' ಅಪರಬುದ್ಧಿಯಿಂದಂ ದೊಡ್ಡನಗರದ ಸೀಮೆಯೊಳ್ ಅವಾಂತರಂಗಳಂ ಪಿರಿದಾಗಿ ಮಾಡುತ್ತಲಿರೆ, ಆ ಕಳ್ಳನನ್ನು ಪಿಡಿಯಲ್ ಮೈಸೂರ ಸಾಮಾಜಿಕರಿಂ ನಾಗದೆ, ಕೆಲರ್ ಸಂಬಳಗಾರರಿಗೆ ಜೀವಿತಮಂ ಕೊಡದೆ ಮಂತ್ರಿ ಸೇನಾನಿಗಳ್ ನಡಪುತ್ತಿರೆ, ಇಂಗರೀಜು ಸರದಾರರ್ ಕೇಳಿ ಮಹಾಸ್ವಾಮಿಯ ಸನ್ನಿಧಿಯೊಳ್ ಅಧಿಕಾರದೊಳಾರೂ ಸಮರ್ಥರಿಲ್ಲೆಂದು ಸರಜಪ್ಪನಾಯಕನಂ ಪರಿಹರಿಸಿ ರಾಜಸೇವೆಯೊಳ್ ತಾವೇ ನಿಂತು ಕಮೀಸನ್ ಸೂಪ್ರೆಂಟ ಕಛೇರಿಗಳನಿಟ್ಟು ರಾಜ್ಯದ ವಿಚಾರಣೆಯಂ ಮಾಡುತ್ತ ಹಿಂದೆ ಉಳಿದಿರ್ದ ಸಂಬಳಗಾರರಿಗೆ ಉಳಿದಿರ್ದ ಸಂಬಳಮಂ ಕೊಟ್ಟು ತಿಂಗತಿಂಗಳಿಗೆ ದೊರೆಗಳಿಗೆ ಹಣಮಂ ಸರಿಸುತ್ತಿಮಿಪ್ಪರ.''

ಇದೊಂದು ಸಮಕಾಲೀನ ದಾಖಲೆಯ ವಿವರವೆಂಬುದನ್ನು ನೆನಪಿಡಬೇಕು. ಪಾಳೆಯಗಾರರು ಹಾಗೂ ದೊಂಬಿಕೋರರು ಮೈಸೂರು ರಾಜಶಾಸನವನ್ನು ಮಾನ್ಯಮಾಡದೆ ಅತಿ

ವರ್ತನೆಯಿಂದಿರುತ್ತಿದ್ದುದು ಹಾಗೂ ಬೊಕ್ಕಸದಲ್ಲಿ ಹಣವಿಲ್ಲದೆ ಉದ್ಯೋಗಿಗಳಿಗೆ ಸಂಬಳಸಾರಿಗೆ ಸಲ್ಲದ ಕಾರಣ ಆಡಳಿತಯಂತ್ರ ಕುಸಿಯತೊಡಗಿದ್ದುದು ಮುಮ್ಮಡಿಯವರ ರಾಜಕೀಯ ವಿಚಕ್ಷಣೆಯ ದೌರ್ಬಲ್ಯವನ್ನು ಸೂಚಿಸುತ್ತದೆ ಎನ್ನಬೇಕು.

## ಜಾನಪದೀಯ ಕಥೆಗಳು

'ರಾಜಾವಳೀ ಕಥಾಸಾರ'ದ ಅನನ್ಯತೆ ಆಕರ್ಷಣೆಗಳನ್ನು ಹೆಚ್ಚಿಸಿರುವ ಸಂಗತಿಗಳಲ್ಲಿ ಜನಪದ ಕಥೆಗಳಿಗೆ ಹೆಚ್ಚಿನ ಮೌಲ್ಯ ಸಲ್ಲುತ್ತದೆ. ಇವುಗಳ ಸಂಖ್ಯೆ ದೊಡ್ಡದು. ಇವುಗಳಲ್ಲಿ ಪ್ರಾಣಿಕಥೆಗಳು, ನೀತಿಕಥೆಗಳು, ಬುದ್ಧಿ ಚಮತ್ಕಾರ ಪ್ರದರ್ಶಕ ಕಥೆಗಳು, ಅತಿಮಾನುಷ ಕಥೆಗಳು, ವಿನೋದಕಥೆಗಳು ಇವು ಸ್ಥಾನಪಡೆದಿವೆ. ಬಿಡಿಕಥೆಗಳಿವೆ; ಬಿಡಿ ಕಥೆಗಳು ಅನುಸ್ಯೂತವಾಗಿ ಬರುವ ಕತಾಗುಚ್ಛಗಳಿವೆ; ಸಾಮಾನ್ಯವಾಗಿ ಪ್ರಧಾನಕಥೆ ಒಂದು ಘಟ್ಟದಲ್ಲಿ ನಿಂತು ಬೇರೆ ಸಣ್ಣ ಪುಟ್ಟ ಸಾಂದರ್ಭಿಕ ಕಥೆಗಳು ಮಾಲೆಯಾಗಿ ಬಂದು ಕೊನೆಯಲ್ಲಿ ಪ್ರಧಾನ ಕಥೆಯ ಅವಶಿಷ್ಟ ಕಥಾಂಶಕ್ಕೆ ಬಂದು ಸೇರುವ ಸಂವಿಧಾನ ರಚನೆ ಕಾಣುತ್ತದೆ ಇಲ್ಲಿ. ಸಹಜವಾಗಿ ಪ್ರಧಾನ ಕಥೆಗಳಿಗಿಂತ ಉಪಕಥೆಗಳ ರಂಜನೆಯೇ ಹೆಚ್ಚು. ಪ್ರಾಚೀನ ಕಾವ್ಯಮಾರ್ಗದ ಕಾಲ್ಪನಿಕ ಕಥಾಕಾವ್ಯಗಳಲ್ಲಿ, ನೀತಿ ಕಾವ್ಯಗಳಲ್ಲಿ ಧರ್ಮಕಥೆಗಳಲ್ಲಿ ಕಂಡುಬರುವ ಸಂವಿಧಾನವೇ ಇಲ್ಲಿ ಮುನ್ನಡೆದಂತೆ ತೋರುತ್ತದೆ. ಈ ಕಥೆಗಳು ಕವಿಯೇ ಹೇಳಿದ್ದಾಗಿರಬಹುದು, ಇಲ್ಲವೆ ಪಾತ್ರಗಳ ಕಥನವಾಗಿರಬಹುದು. ೧-೨ ಅಧಿಕಾರಗಳು ಹೊರತು, ಉಳಿದ ಎಲ್ಲ ಅಧಿಕಾರಗಳಲ್ಲಿಯೂ ಕಥೆಗಳು ಗಿಜಿಗುಟ್ಟುತ್ತಿವೆ. ಇವನ್ನು ದೃಷ್ಟ, ಶ್ರುತ ಹಾಗೂ ಅನುಭವದ ಕಥೆಗಳೆನ್ನಬಹುದು.

ಪ್ರಾಣಿಕಥೆಗಳಲ್ಲಿ ಪಂಚತಂತ್ರದ ಕಥೆಗಳನ್ನು ಹೋಲುವ ಹುಲಿ, ಕೃಷ್ಣಸರ್ಪ, ಗಿಳಿ, ಆನೆ, ಕೋತಿ, ಗೂಳಿ, ಮುಂಗಸಿ ಈ ಪ್ರಾಣಿಗಳಿಗೆ ಸಂಬಂಧಿಸಿದಂತೆ ಬರುವ ಕೆಲವು ಕಥೆಗಳಿವೆ (ಪು. ೬೬-೬೮). ಇವು ಒಂದು ರೀತಿಯಲ್ಲಿ ನೀತಿಕಥೆಗಳು. ಮಾಡಿದ ಉಪಕಾರವನ್ನು ಅವಿಚಾರಿಗಳೂ ದುಷ್ಟರೂ ಸ್ಮರಿಸುವುದಿಲ್ಲ ಎಂಬ ಆಶನಯದ ಈ ಕಥೆಗಳು ಗುಚ್ಛದ ಹೂಗಳು. ಹಾಗೆಯೇ ಜಮದಗ್ನಿ-ಗೀಜಗನ ಹಕ್ಕಿ, ಕಥೆ (ಪು. ೩೯-೫೦) ಮಿಥ್ಯಾತಪದ ದೃಷ್ಟಾಂತ ಕಥೆ.

ನೀತಿಕಥೆಗಳ ನಿದರ್ಶನಗಳಾಗಿ, ಶಾಂತಿಗುಣ ನಿದರ್ಶಕವಾದ ಬ್ರಾಹ್ಮಣಸ್ತ್ರೀ ತೂಂಕಾರಿಯ ಕಥೆ (ಪು. ೬೪), ದ್ರೋಹಿಗಳನ್ನು ನಂಬಿದವರಿಗೆ ಕೇಡು ತಪ್ಪದು ಎಂಬುದನ್ನು ಸೂಚಿಸುವ ಹಣ ಬಚ್ಚಿಟ್ಟ ಕೋಲನ್ನು ಮೋಸಗಾರನ ಕೈಗೆ ಒಪ್ಪಿಸಿ ವಂಚಿತನಾದ ಲೋಭಿಯಾದ ವೃದ್ಧ ಬ್ರಾಹ್ಮಣನ ಕಥೆ (ಪು. ೬೯-೭೦), ಅಜ್ಞಾನಿಗಳು ಹಿಡಿದ ಧರ್ಮ ಫಲ ನೀಡದು ಎಂಬುದನ್ನು ತಿಳಿಸುವ ಬಧಿರ ಬ್ರಾಹ್ಮಣನ ಕಥೆ (ಪು. ೮೪-೮೫), ಕೊಲ್ಲದ ವ್ರತವನ್ನು ನಿದರ್ಶಿಸಿರುವ ಸೊಸೆಯ ಪಕ್ಕದಲ್ಲಿ ಮಲಗಿದ ಪುರುಷವೇಷದ ಅತ್ತೆಯ ಕಥೆ (ಪು. ೮೭), ಶ್ರೀಮಂತಿಕೆಯ ಸೊಕ್ಕಿನಿಂದ ತನ್ನ ಪೂರ್ವಸ್ಥಿತಿ ಮರೆಯಬಾರದೆಂಬುದನ್ನು ದೃಷ್ಟಾಂತಿಸುವ ಗೊಲ್ಲರ ಹೆಣ್ಣಿನಕಥೆ (ಪು. ೨೩೯), ಧೈರ್ಯವಿಲ್ಲದವನಿಂದ ಯಾವ ಕಾರ್ಯವೂ ಆಗದು ಎನ್ನುವುದಕ್ಕೆ ಕೃಷೀವಲನ ಕಥೆ (ಪು. ೨೩೮) ಇಂತಹವನ್ನು ಹೇಳಬಹುದು. ಹಾಗೆಯೇ, ಕಷ್ಟಪಟ್ಟು ದುಷ್ಟವಿದ್ಯೆ ಕಲಿಯುವುದು ಅಪಾಯಕಾರಿಯೆಂಬುದನ್ನು ದೃಷ್ಟಾಂತಿಸುವ ಹುಲಿಕುಂಟೆ ತಮ್ಮಣ್ಣಗೌಡನ ಕಥೆ (ಪು. ೩೦೦) ರಮ್ಯಕತೆಯಂತಿದ್ದರೂ ಒಂದು ನೀತಿ ಕಥೆಯೇ. ವಿನೋದ ಕಥೆಗಳು ತಿಳಿಹಾಸ್ಯದ ಕಾರಂಜಿಗಳೆನ್ನಬಹುದಾದವು. ಹಳ್ಳಿಯ ಜನರಲ್ಲಿ ಪ್ರಚಲಿತವಿರುವ

ಸಾಮಾನ್ಯ ಲೋಕಜ್ಞಾನದ, ಬುದ್ಧಿ ಚಮತ್ಕಾರದ ಪರೀಕ್ಷೆಯ ಕಥೆಗಳು ಈ ತೆರನಾದವು.
ಚತುರ್ಥಾಧಿಕಾರದ ಶ್ರೇಣಿಕನ ಮತ್ತು ಅವನ ಮಂತ್ರಿಯ ಕಥೆ ಒಂದು ಒಳ್ಳೆಯ ನಿದರ್ಶನ (ಪು. ೨೮-
೩೩). ಇಲ್ಲಿ ಹಳ್ಳಿಗರ ಚಮತ್ಕಾರಿಕ ಕಲ್ಪನೆ, ಭಾಷಾ ವೈಖರಿ ಎರಡೂ ಉಂಟು. ದರಿದ್ರ ಬ್ರಾಹ್ಮಣನ,
ಅತ್ತೆಸೊಸೆಯರ ಊಟದ ಕಥೆಗಳು (ಪು. ೨೩೭), ಅಂಜುಕುಳಿಗೆ ಯಾವುದೂ ಶಕ್ಯವಿಲ್ಲ
ವೆಂಬುದನ್ನುದೃಷ್ಟಾಂತಿಸುವ ಕೃಷೀವಲನ ಕಥೆ (ಪು. ೨೩೮-೩೯), ಆಭರಣದ ಹೆಮ್ಮೆಯನ್ನು
ವಿಡಂಬಿಸುವ ಬಡಬ್ರಾಹ್ಮಣನ ಕಥೆ (ಪು. ೨೩೮), ದಡ್ಡತನದ ಕೆಲಸಗಳನ್ನು ಮಾಡಿ ಬೋಳನಾಗಿ
ಮನೆಗೆ ಬಂದ ಗೌಡನ ಮಗನ ಕಥೆ(ಪು. ೨೩೮), ಆಸ್ಥಾನದಲ್ಲಿ ಅಪಾನವಾಯು ಬಿಟ್ಟು ಸನ್ಮಾನವನ್ನು
ಆಶಿಸಿದ ಮೂರ್ಖಬ್ರಾಹ್ಮಣನ ಕಥೆ (ಪು. ೨೩೯-೪೦), ಇಲ್ಲದ ಜ್ಯೋತಿಷ್ಯಜ್ಞಾನವನ್ನು ನಟಿಸಿದ
ಚುಂಚುಂಭಟ್ಟನ ಕಥೆ (ಪು. ೨೪೦), ಹೆರರ ಏಳಿಗೆ ಸಹಿಸದ ಮಂಡಲಿಯೆಂಬ ಅಗ್ರಹಾರದ
ಬ್ರಾಹ್ಮಣನ ಕಥೆ (ಪು. ೨೪೦-೪೧), ಪರರ ಕಷ್ಟವನ್ನು ಸುಖಿ ತಿಳಿಯಲಾರನೆಂಬುದನ್ನು ದೃಷ್ಟಾಂತಿಸುವ
ವಿಟಪುರುಷನ ಹಾಗೂ ದಾಸನ ಕಥೆಗಳು (ಪು. ೨೪೧), ತಿಳಿವಳಿಕೆಯ ಸೋಗು ದಿಟರ ತಿಳಿವಳಿಕೆಯನ್ನು
ಹೇಗೆ ಬಾಧಿಸಬಲ್ಲುದು ಎಂಬುದಕ್ಕೆಕುರುಬ ಗುರುಶಿಷ್ಯರು - ವಿದ್ಯಾವಂತ ಬ್ರಾಹ್ಮಣ ಇವರ ಕತೆ
(ಪು. ೨೪೧-೨೪೨), ಸಂಗೀತಜ್ಞಾನದ ಜಮಾದಾರನಿಂದ ಸಂಗೀತಗಾರನಿಗೆ ಉಂಟಾದ ಅಪಮಾನದ
ಕಥೆ (ಪು. ೧೯೫), ಜಗಳಗಂಟಿಯಾದ ಬ್ರಾಹ್ಮಣ ಪತ್ನಿಯ ಕಥೆ (ಪು. ೨೪೮), ಈ ಕೆಲವು ಕಥೆಗಳನ್ನು
ಉದಾಹರಿಸಿದೆ. ಈ ಕಥೆಗಳನ್ನು ಕೆಲಮಟ್ಟಿಗೆ ವಿಶ್ಲೇಷಿಸಿದರೆ, ಬ್ರಾಹ್ಮಣರ ದಾರಿದ್ರ್ಯ, ಲೋಭ,
ಒಣಜಂಭ ವಂಚನೆಯ ಬುದ್ಧಿ, ಇವೂ, ಬ್ರಾಹ್ಮಣೇತರರ ಅಜ್ಞಾನ, ಅನಕ್ಷರತೆ, ಮೊದಲಾದವೂ
ಎದ್ದು ತೋರುವಂತೆ ಕಾಣುತ್ತದೆ.

ಪುಣ್ಯ ದೊಡ್ಡದೋ ಮನುಷ್ಯ ಪ್ರಯತ್ನ ದೊಡ್ಡದೋ ಎಂಬ ಪ್ರಶ್ನೆಯ ಪರೀಕ್ಷೆಗೆ ಬಂದಿರುವ
ದೃಷ್ಟಾಂತ ಕಥೆಯಲ್ಲಿ ಒಂದು ಘನವಾದ ಆಧ್ಯಾತ್ಮಿಕ ಪ್ರಶ್ನೆಯನ್ನು ಎತ್ತಿಕೊಂಡರೂ ಕಥೆಯ ತಿರುಳು
ಒಟ್ಟಿನಲ್ಲಿ ವೈನೋದಿಕವೇ (ಪು. ೨೪). ಗಾದೆಯ ಮಾತುಗಳಿಗೆ ಹಿನ್ನೆಲೆಯಾಗಿ ಹುಟ್ಟಿರಬಹುದಾದ
ಕಥೆಗಳನ್ನೂ ಪ್ರಸ್ತುತ ಕೃತಿಯಲ್ಲಿ ಕಾಣಬಹುದಾಗಿವೆ. ಉದಾಹರಣೆಗೆ, ''ಎತ್ತು ಈಯಿತು ಎಂದರೆ
ಕೊಟ್ಟಿಗೆಗೆ ಕಟ್ಟು'' ಎಂಬ ಗಾದೆಯ ಕಥೆ (ಪು. ೬೮), ''ನಾಮ ಹಾಕಿದರು'' ಎಂಬ ನುಡಿಗಟ್ಟಿನ
ಕಥನ ಭಾಗ (ಪು. ೨೪೫-೪೬), ಮೈಸೂರರಸನೊಬ್ಬನ ಸೇವೆಯ ಶಾನುಭೋಗನೊಬ್ಬನು
ಶ್ರೀರಂಗಪಟ್ಟಣದ, ಅರಮನೆಯಲ್ಲಿ ಶ್ರೀರಂಗರಾಯನ ಜೊತೆಗೆ ನಡಸಿದ ಸಂವಾದ ಸಂದರ್ಭ
(ಪು. ೨೧೨-೧೫), ವಿನೋದದ ವೈಖರಿಯೊಂದಿಗೆ ವಿಡಂಬನೆಯನ್ನು ಬೆರಸಿದ ಮನೋಜ್ಞ ಕಥನದಿಂದ
ಕೂಡಿದೆ. ಹಾಗೆಯೇ ಕವಿ ಸೂರಿಯೆಂಬವನ ಬುದ್ಧಿ ಚಮತ್ಕಾರದ ಸಂವಾದ ಸಂದರ್ಭ ಸಹ
(ಪು. ೨೮೦). ಶಬ್ದ ಚಮತ್ಕಾರ ಮೂಲವಾದ ಕಥೆಯ ವಿನ್ಯಾಸವನ್ನು ಇನ್ನೂ ಕೆಲವು ದೃಷ್ಟಾಂತ
ಕಥೆಗಳಲ್ಲಿ ಕಾಣಬಹುದು : ಉದಾಹರಣೆಗೆ, ವ್ಯಕ್ತಿ ಮತ್ತು ಪ್ರಾಣಿಗಳ ಹೆಸರನ್ನು ಗಂಟಿಕ್ಕಿ ಹೆಣೆದ
ಕುಂಟ ಕುರುಡರ ಕಥೆ (ಪು. ೨೨೨), ಗೂಢಾರ್ಥದ ಸರಪಳಿಯಲ್ಲಿ ಕಥೆಯನ್ನು ಬೆಳಸಿರುವ ವರ್ತಕ
ಕುಮಾರನ ಜಲಸ್ಥಲಯಾತ್ರೆಯ ಕಥೆ (ಪು. ೨೩೪-೨೩೬), ಕೃಪಣರಾದ ಎಡಶ್ರುತಿ - ಬಂಧಕಿ ಎಂಬ
ದಂಪತಿಗಳ ಕಥೆ (ಪು. ೨೩೬), ಇವನ್ನು ಗಮನಿಸಬಹುದು. ಇವನ್ನು ದೇವಚಂದ್ರ 'ಅಪ್ರೌಢವಾಕ್ಯ'
ವೆಂದೂ ''ಇಂತಪ್ಪ ಶಬ್ದ, ಕನ್ನಡದೊಳನೇಕಮಿಪ್ಪವವರೊಳೌ ಚಿತ್ಯದರ್ಥಮೆಂಬುದರಿಂ ಆಯಾಯಾ
ಕಾರ್ಯವರಿತು ಗ್ರಹಿಸಬೇಕೆಂದೂ'' ಪಾತ್ರದ ಮೂಲಕ ಇಂಗಿತಗೊಳಿಸಿದ್ದಾನೆ.

ದೇವಚಂದ್ರನ ಕಥೆಗಳಲ್ಲಿ ಕೆಲವು 'ವಡ್ಡಾರಾಧನೆ', 'ಧರ್ಮಾಮೃತ' ಮೊದಲಾದ ಕೃತಿಗಳ ಮೂಲಕ ಬಂದಿರುವುದು ನಿಜ. ಕಾರ್ತಿಕ ಋಷಿಯ ಕಥೆ, ದಯಾಮಿತ್ರ ಸೆಟ್ಟಿಯ ಕಥೆ ಇಂಥವು ಆ ರೀತಿಯವು (ಪು. ೬೨-೨೨೯). ಜೈನ ಪಕ್ಷಪಾತಿಯಾದ ಆತನು ಅವಕಾಶ ಸಿಕ್ಕಿದ ಹಾಗೆಲ್ಲ, ಬ್ರಾಹ್ಮಣರ, ವೀರಶೈವರ ಮತ್ತು ವೈಶ್ಯರ ಶೀಲಸ್ವಭಾವಾದಿಗಳನ್ನು ಕಥೆಗಳ ಭಿತ್ತಿಯನ್ನಿಟ್ಟುಕೊಂಡು ಉತ್ಸಾಹದಿಂದ ಲೇವಡಿ ಮಾಡುತ್ತಾನೆ. ಅವನಿಗೆ ಜೈನರ ವಿಷಯದಲ್ಲಿ ಸಾಮಾನ್ಯವಾಗಿ ಕುಂದು ಕೊರತೆಗಳು ಕಂಡು ಬರುವುದೇ ಇಲ್ಲ. ಅಂದಂದಿನ ರಾಜಕೀಯ ಸಾಮಾಜಿಕ ಒತ್ತಡಗಳಿಗೆ ಸಿಕ್ಕಿ ಜೈನರು ಮತಾಂತರಗೊಳ್ಳುವುದನ್ನು ಪ್ರಸ್ತಾಪಿಸಿದರೂ, ಅವರನ್ನು ಅಷ್ಟಾಗಿ ಆಕ್ಷೇಪಿಸಲು ಹೋಗುವುದಿಲ್ಲ. ಇದರಿಂದ ಅವನ ಮನಸ್ಸಿನ ಲಹರಿ ಹೇಗೆ ಕೆಲಸ ಮಾಡುತ್ತದೆ ಎಂಬುದು ತಿಳಿಯುತ್ತದೆ.

ಈಗಾಗಲೇ ಕುರಿತವಲ್ಲದ, ಬೇರೆ ಕೆಲವು ದೊಡ್ಡ ಪ್ರಮಾಣದ ಕಥೆಗಳೂ 'ರಾಜಾವಳೀಕಥಾಸಾರ, ದಲ್ಲಿವೆ. ಭೂತಮತಿ-ಯಜ್ಞ ಯಜ್ಞೆಯರ ಕಥೆ,(ಪು. ೨೪೯) ಕೋಟಗ್ರಾಮದ ಗಾರ್ಗ್ಯೋಪಾಧ್ಯಾಯರು ಮತ್ತು ಅವರ ಪತ್ನಿಯ ಕಥೆ (ಪು. ೨೫೦-೫೬) - ಇವರೆಡನ್ನು ನೋಡಿದರೂ ಸಾಕು, ಇವುಗಳ ಸ್ವರೂಪ ತಿಳಿಯುತ್ತದೆ. ಇವುಗಳೊಂದಿಗೆ, ಏಕಾದಶಾಧಿಕಾರದಲ್ಲಿ ಸರಣಿಯಾಗಿ ಬರುವ ಹತ್ತು- ಹನ್ನೆರಡು ಹಾದರದ ಕಥೆಗಳಿಗೆ (ಪು. ೩೪೧-೦೪) ವಿಷಯವಾದವರೆಂದರೆ ಬ್ರಾಹ್ಮಣವರ್ಗದ ಸ್ತ್ರೀ ಪುರುಷರೇ. ಈ ಸಂಗತಿ ದೇವಚಂದ್ರನಿಗೆ ಆ ವರ್ಗದ ವಿಷಯದಲ್ಲಿದ್ದ ಅಸೂಯೆ ಅಸಹನೆಗಳನ್ನು ಇಂಗಿತಗೊಳಿಸುವುದರ ಜೊತೆಗೆ, ಬಲವಾದ ಕಟ್ಟುಪಾಡುಗಳ ಸಂಪ್ರದಾಯನಿಷ್ಠ, ಆಚಾರನಿಷ್ಠ ಸಾಮಾಜಿಕ ವರ್ಗದಲ್ಲಿ ಆಗಾಗ ತಲೆದೋರುತ್ತಿದ್ದ ಅಸಹಾಯಕ ಪರಿಸ್ಥಿತಿಗಳನ್ನೂ ಅತಿಚಾರಗಳನ್ನೂ ಉತ್ಪ್ರೇಕ್ಷಿಸುವಲ್ಲಿ ಬ್ರಾಹ್ಮಣನಲ್ಲದ ಕವಿಯೊಬ್ಬನ ಅತ್ಯುತ್ಸಾಹವನ್ನೂ ಕೆಟ್ಟ ಅಭಿರುಚಿಯನ್ನೂ ಸಹ ಇಂಗಿತಗೊಳಿಸುತ್ತದೆ ಎನ್ನಬೇಕು.

## ನಂಬಿಕೆಗಳು, ಆಚರಣೆಗಳು

ಜನಪದರ ಕೆಲವು ನಂಬಿಕೆಗಳನ್ನೂ ಆಚರಣೆಗಳನ್ನೂ 'ರಾಜಾವಳೀ ಕಥಾಸಾರ' ಗುರುತಿಸಿದೆ.

ಶಾಂತಿಗುಣದ ಹಿರಿಮೆಯನ್ನು ಎತ್ತಿಹಿಡಿಯುವ ತೂಂಕಾರಿಯ ಕಥೆಯಲ್ಲಿ (ಪು.೬೫) ವ್ಯಾಪಾರಿಗೆ ಹೆಣ್ಣುಮಾರುವ ಪದ್ಧತಿ ಇದ್ದಿತೆಂದೂ ಅಂತಹ ಹೆಣ್ಣುಗಳನ್ನು ಸ್ವಾರ್ಥಕ್ಕಾಗಿ ಶೋಷಿಸಲಾಗುತ್ತಿದ್ದಿತೆಂದೂ ತಿಳಿದು ಬರುವುದು. ನೂಲಿಗೆ ಬಣ್ಣಕೊಡಲು ಹೆಣ್ಣಿನ ಮೈಯಿಂದ ರಕ್ತವನ್ನು ತೆಗೆಯುತ್ತಿದ್ದರೆಂದು ಇಲ್ಲಿ ಹೇಳಿದೆ. ಹುಣ್ಣಿನ ಚಿಕಿತ್ಸೆಗೆ ಲಾಕ್ಷಾಮೂಲ ತೈಲ ಬಳಸುತ್ತಿದ್ದರು. ಭೇತಾಳವಿದ್ಯೆ ಸಾಧಿಸಲು ಕಾಪಾಲಿಕರು ಕೃಷ್ಣಪಕ್ಷದ ಅಮಾವಾಸ್ಯೆಯಲ್ಲಿ ಶ್ಮಶಾನಕ್ಕೆ ಹೋಗಿ, ಅಲ್ಲಿ ಪುರುಷ ತಲೆ ಬುರುಡೆಯಲ್ಲಿ ಹಾಲುತುಂಬಿ, ಅದರಲ್ಲಿ ಅಕ್ಕಿಹಾಕಿ, ಅಂಕೋಲೆ ಬೇರನ್ನು ಹುದುಗಿಸಿ ಬೇಯಿಸುತ್ತಿದ್ದರಂತೆ.

ಮಕ್ಕಳ ವಿದ್ಯಾಭ್ಯಾಸದ ವಿವರಗಳು ಗಮನಾರ್ಹವಾದವು. ಮಕ್ಕಳಿಗೆ ಐದನೆಯ ವರ್ಷದಲ್ಲಿ ಅಕ್ಷರಾಭ್ಯಾಸವಾಗುತ್ತಿತ್ತು. ಧಿಳಿನ ಮೇಲೆ ಅಕ್ಷರ ತಿದ್ದಿಸುತ್ತಿದ್ದರು. ಒತ್ತುಕೊಟ್ಟು ಓದಬೇಕಾದಲ್ಲಿ ಹಾಗೆಂದು ತಿಳಿಸಿ, ಅಕ್ಷರಗಳು ಕಲಸಿ ಹೋಗದ ಹಾಗೆ ಕಲ್ಲು ಮೊದಲಾದವುಗಳನ್ನು ಬಳಸಿ ಒತ್ತು ಕೊಡುವುದೆಂದು ವಿಧಿಸುತ್ತಿದ್ದರು. ಮಕ್ಕಳು ಸ್ವರ ವ್ಯಂಜನಗಳ ಕೂಟವನ್ನು (ಕಾಗುಣಿತವನ್ನು) ಲ

ದಿನಗಳಲ್ಲಿಯೇ ಕಲಿತು ಬಿಡುತ್ತಿದ್ದರು, ಹೇರಳೆ ಚೆಂಡಿನಾಟ, ಬುಗುರಿ ಗೋಲಿಗಳ ಆಟದಲ್ಲಿ ತೊಡಗಿ, ತಂದೆ ಹೇಳಿದಂತೆ ಕೇಳದೆ ಇದ್ದರೆ ಅಂಥ ಮಕ್ಕಳನ್ನು ದಂಡಿಸುತ್ತಿದ್ದರು. ಅಕ್ಷರಜ್ಞಾನ ಬಂದ ಮೇಲೆ ಅಮರ ಕೋಶವನ್ನು ಪಾಠಮಾಡಿಸುತ್ತಿದ್ದರು. ಶ್ಲೋಕ ಪದ ಅರ್ಥ ಲಿಂಗ ಸಾಹಚರ್ಯ ರೂಪ ಭೇದ ವಿಶೇಷಣ (ವಿಶೇಷ್ಯ) ವಿಧಿ ಎಂಬ ಹತ್ತು ಮಜಲುಗಳಲ್ಲಿ ಅದರ ಪಾಠವಾಗುತ್ತಿತ್ತು. ಆಟಕ್ಕೆ ಹೋಗುವ ಮುನ್ನು ಪುಸ್ತಕವನ್ನ ಕಟ್ಟಿರಿಸುತ್ತಿದ್ದರು. ಅಭ್ಯಾಸದಲ್ಲಿ ಆಲಸ್ಯವನ್ನು ತೋರಿಸಿದರೆ, ''ಓದು ಬರಹವನ್ನು ಬಿಟ್ಟು ಅಪ್ರಬುದ್ಧನಾಗಿ ಕೆಟ್ಟ'' ಎಂದು ಗದರಿಸುತ್ತಿದ್ದರು. ಇನ್ನು ರಾತ್ರಿಯ ವೇಳೆ ಕಂಬದ ಮೇಲೆ ದೀಪವನ್ನು ಹಚ್ಚಿಟ್ಟು ಮತ್ತೆ ಪುಸ್ತಕವನ್ನು ಆದ್ಯಂತ ಓದಿಸಲಾಗುತ್ತಿತ್ತು. ಓದು ಮುಗಿದ ಮೇಲೆ ದೀಪವನ್ನು ತೆಗೆದ ಕಂಬವನ್ನು ನೋಡಬಾರದೆಂದು ಅದನ್ನು ಬಾಗಿಸಿಡುತ್ತಿದ್ದರು. ತಿಂಗಳೊಂದರೊಳಗೆ ಅಮರಕೋಶವನ್ನು ಬಾಯಿಗೆ ಗಟ್ಟಿಮಾಡಿರದಿದ್ದರೆ ಮಕ್ಕಳನ್ನು ಮಂದಮತಿಗಳೆಂದು ಹಂಗಿಸುತ್ತಿದ್ದರು. ತಂದೆಯ ಕೈಗೆ ಪುಸ್ತಕ ಒಪ್ಪಿಸಿ, ಮಕ್ಕಳು ಕಂಠಸ್ಥ ತ್ರಿಕಾಂಡ ಅಮರಕೋಶವನ್ನು ಒಪ್ಪಿಸುತ್ತಿದ್ದರು. ಆ ಬಳಿಕ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಅನುಕೂಲವಿದ್ದೆಡೆಗೆ ತೆರಳಿ ಅಲ್ಲಿ ವೈದ್ಯಶಾಸ್ತ್ರ ಮೊದಲಾದ ಶಾಸ್ತ್ರಗಳಲ್ಲಿ ತಜ್ಞತೆ ಪಡೆಯುತ್ತಿದ್ದರು. ಅಭ್ಯಾಸದವಿಶೇಷವಾಗಿ ಶರ್ವವರ್ಮ, ಶಾಕಟಾಯನ ಮೊದಲಾದವರ ವ್ಯಾಕರಣ ಗ್ರಂಥಗಳೂ ರತ್ನಮಂಜೂಷ, ವೃತ್ತರತ್ನಾಕರ ಮೊದಲಾದ ಛಂದೋದಗ್ರಂಥಗಲೂ ಗದ್ಯಪದ್ಯ ಚಂಪೂರಚನೆಗಳೂ ಭರತ ನಾಟ್ಯಶಾಸ್ತ್ರ ಮೊದಲಾದವೂ ಅಳವಟ್ಟಿದ್ದವು (ಪು. ೨೭೪-೨೮೦). ಈ ವಿವರಗಳು ದೇವಚಂದ್ರನೇ ತಿಳಿಸುವಂತೆ ಮೈಸೂರಿನ ದೊಡ್ಡ ದೇವರಾಜ ಒಡೆಯರ ಕಾಲಾವಧಿಗೆ (೧೬೫೯-೭೩) ಸೇರಿದವು. ಹೀಗೆಯೇ ಮಠಗಳಲ್ಲಿ ಶಬ್ದಾಗಮ ಕಲಿಸುವ ವ್ಯವಸ್ಥೆಇತ್ತು. ಹೊರಗಿನ ಅರಸ ಮಕ್ಕಳು ಸಹಾ ಕಲಿಕೆಗೆ ಬರುವುದೂ ಹೇಳಿದೆ (ಪು. ೨೫೦)

ಗ್ರಾಮವಾಸಿಗಳಿಗೆ ಬನದಬ್ಬೆ, ಮಹಾಲಕ್ಷ್ಮಿ, ಹುರಕಾತಿ, ಕಂಚಿಯ ಕಾಮಕೋಟಿ, ಕೊಲ್ಲಿಪಾಕೆಯ ಭೂತಕೋಟಿ, ಕಾಳದೇವರು, ಮಾರಿ, ಏಕನಾತಿ, ಎಲ್ಲಮ್ಮ ಮೈಲಾರ, ಮೊದಲಾದವರು ಆರಾಧ್ಯದೈವಗಳು. ಕೆಲವು ಕಥೆಗಳು ಗ್ರಾಮದೇವತೆಗಳ ಪ್ರತಿಷ್ಠೆಗೆ ಹಿನ್ನೆಲೆಯಾಗಿ ಹೇಳಿರುವುದು (ಪು. ೨೦೭-೨೧೧) ಸ್ವಾರಸ್ಯಕರವಾಗಿದ್ದು, ಅಲ್ಲಿಯೇ ಪೂಜೆಗೊಂಡ ಜಾತ್ರೆಗಳ ವಿಷಯವೂ ಬಂದಿವೆ. ಇವೆಲ್ಲ ಸ್ಥಳ ಪುರಾಣಾದಿಗಳನ್ನು ಆಧರಿಸಿದ್ದರೂ, ಇವುಗಳ ಮೂರ್ತಿ ಕಲ್ಪನೆಗೆ ಉಕ್ತವಾದ ಕಥಾಂಶಗಳು ಗಂಭೀರವಾಗಿಲ್ಲ; ಇವು ಸಮಾಜ ಶಾಸ್ತ್ರಜ್ಞರಿಗೆ ಅಧ್ಯಯನ ಯೋಗ್ಯ ವಿಷಯಗಳು. ಇನ್ನು ಪ್ರಸಿದ್ಧ ಕ್ಷೇತ್ರ ಹಾಗೂ ದೇವತೆಗಳ ವಿಚಾರದಲ್ಲಿಯೂ ಗಮನಾರ್ಹ ಸಂಗತಿಗಳಿವೆ. ಮನುಷ್ಯ, ಪ್ರಾಣಿ, ಸಸ್ಯಗಳಿಗೆ ಬರುವ ರೋಗರುಜಿನಗಳನ್ನು ಹಿಡಿದು ನರಮಾರಿ, ಗೋಮಹಿಷ ಮೇಷಮಾರಿ, ಗಜಾಶ್ವವೃಕ್ಷಮಾರಿ ಮುಂತಾಗಿ ಸಂಕೇತಿಸಿದೆ (ಪು. ೧೮೮) ದೈವಗಳಲ್ಲಿ ಕೆಲವು ಶಾಕಾಹಾರದಿಂದ ತೃಪ್ತಿಗೊಂಡರೆ, ಇನ್ನು ಕೆಲವು ನೀಚಾಹಾರವನ್ನು ಬೇಡುತ್ತವೆ. (ಪು. ೧೪೫,೧೮೮). ಹಳ್ಳಿಗರು ಗ್ರಾಮದೇವತೆಗಳಿಗೆ ಹರಕೆಹೊತ್ತು ಗಂಡುಮಕ್ಕಳನ್ನುಬೇಡುತ್ತಿದ್ದರು (ಕೃಷ್ಣ, ಜಿನದತ್ತರಾಯರ ಕಥೆಗಳು); ವರ್ಷಕ್ಕೊಮ್ಮೆ ದೇವತೆಗಳಿಗಾಗಿ ಹಬ್ಬ ನಡೆಯುತ್ತಿತ್ತು (ಪು.೧೮೮), ಭವಾಂತರದ ಕಾಟ (ಪು. ೩೧೫) ಸತ್ಯಸ್ಥಾಪನೆಗೆ ಕಾದಲೋಹದ ಗುಂಡು ಕೈಯಲ್ಲಿ ಹಿಡಿಯುವುದು (ಪು. ೧೯೮), ಮಂತ್ರವಾದದ ಬಲದಿಂದ ಮದ್ದುಪವಾಡ ಮಾಡುವುದು ( ಪು. ೧೪೦) - ಇವನ್ನು ಜನ ನಂಬುತ್ತಿದ್ದರು.

ಗಂಡ ತೀರಿಕೊಂಡರೆ, ಜೀವನ ನಿರ್ವಾಹಕ್ಕೆ ವಿಧವೆ ತನ್ನ ಮಕ್ಕಳನ್ನು ಬ್ರಾಹ್ಮಣರ ಮನೆಯ ದನಕರುಗಳನ್ನು ಮೇಯಿಸಲು ಕಳಿಸುತ್ತಿದ್ದು ಕೆಳಸ್ತರದ ಸಮಾಜದಲ್ಲಿ ಸಾಮಾನ್ಯವಾಗಿತ್ತು (ಪೂಜ್ಯಪಾದ ಚರಿತೆ ); 'ಉಪ್ಪಿಗೆ ಗತಿಯಿಲ್ಲದೆ ಸಪ್ಪೆಯುಣ್ಣುವ' ಆ ಸ್ಥಿತಿಯಲ್ಲಿ ರಸವಾದದ ವಿದ್ಯೆ ಕಲಿಯುವುದು ಒಂದು ಆಕರ್ಷಣೆಯಾಗಿತ್ತು (ಪು. ೧೨೧). ವಿದ್ಯಾವಂತರಿಗೆ ಅಸೂಯಾಪರರು ಮತಿಭ್ರಂಶವನ್ನುಂಟು ಮಾಡುವ ಮದ್ದನ್ನು ಇಕ್ಕುತ್ತಿದ್ದರು (ಪು. ೧೨೧), ಅಮೇಧ್ಯದ ಮೇಲೆ ಉಗುಳಿದರೆ ಗಂಟಲು ನೋಯುವುದೆಂದು ನಂಬಿಕೆಯಿತ್ತು (ಪು.೧೪೫).

ಹೆಂಡತಿಯನ್ನು ವಂಚಿಸಿ ಸೂಳೆಯರ ಸಹವಾಸ ಮಾಡುವುದೂ, ಪತಿಯನ್ನು ವಂಚಿಸಿ ಮಿಂಡಗಾರರ ಸಹವಾಸ ಮಾಡುವುದೂ, ಇದಕ್ಕಾಗಿ ಪಂಚಾಯಿತಿಗಳಲ್ಲಿ ವಿಚಾರಣೆ ತೀರ್ಪುಗಳು ನಡೆಯುವುದೂ ವರ್ಗಭೇದವಿಲ್ಲದೆ ಸಮಾಜದಲ್ಲಿ ಕಂಡು ಬರುತ್ತಿತ್ತು. ಮಡಿಮೈಲಿಗೆ ಪಾಲಿಸುವ ಮೇಲ್ವರ್ಗದ ಜನದಲ್ಲಿಯೇ ಇದು ಸಾಮಾನ್ಯವೆಂದೂ ಅಂಥವರು ತೆರೆಮರೆಯ ವ್ಯವಹಾರಗಳನ್ನು ನಡಸಿ ಸಾಂಸಾರಿಕ ಕ್ಷೋಭೆಗಳನ್ನುಂಟುಮಾಡುತ್ತಿದ್ದರೆಂದೂ (ಯಜ್ಞ - ಯಜ್ಞೆಯರ ಕಥೆ) ತಿಳಿಯುವುದು. ದೇವಚಂದ್ರ ಇಂಥ ಸಂದರ್ಭಗಳನ್ನು ಬಣ್ಣ ಕಟ್ಟಿಹೇಳುವಂತೆ ತೋರುತ್ತದೆ. ಏಕೆಂದರೆ, ಕಾಣಿಕಾಜಿನ ಹಳ್ಳಿ ಎಂಬ ಪ್ರಾಚೀನ ಶಾಸನೋಕ್ತ ಗ್ರಾಮ ಭಾವಿಕವಾಗಿ ಪರಿವರ್ತಿಸಿ ಕಾನಕಾನ ಹಳ್ಳಿಯಾದುದು ವಸ್ತುಸ್ಥಿತಿಯಾದರೆ, ದೇವಚಂದ್ರ ಅದಕ್ಕೆ ಕೊಡುವುದು ಒಂದು ಹೊಲಸುಕಾರಣ (ಪು. ೩೦೨).

ಸೂಳೆಯರು ತಮ್ಮ ವ್ಯವಹಾರವನ್ನು ಒಂದು ವೃತ್ತಿಯೆಂಬಂತೆ ನಡಸುತ್ತಿದ್ದರು. ಅವರ ಮನೆಗಳ ಮುಂದೆ ಒತ್ತೆಗಾರರಿಗಾಗಿ ಗಂಟೆಗಳನ್ನು ಕಟ್ಟಿರುತ್ತಿದ್ದಿತು. ಅಂತಹ ಒತ್ತೆಗಾರರು ತಾವು ಕೊಡುವ ಒತ್ತೆಯ ಪ್ರಮಾಣಕ್ಕೆ ಅನುಸಾರವಾಗಿ ಕಟ್ಟಿದ ಗಂಟೆಗಳಲ್ಲಿ ನಿರ್ದಿಷ್ಟವಾದ ಒಂದನ್ನು ಬಾರಿಸಿ ಪ್ರವೇಶ ಪಡೆಯಬೇಕಾಗಿತ್ತು. ಹಾಗೆ ಪ್ರವೇಶ ಪಡೆದವನ ಋಣವನ್ನು ಆ ಸೂಳೆ ಯಾವುದೇ ಕಾರಣಕ್ಕೆ ಉಳಿಸಿಕೊಳ್ಳಲು ಇಚ್ಛಿಸುತ್ತಿರಲಿಲ್ಲ (ಜೀವಂಧರನ ಕಥೆ). ಸೂಳೆಯರ ಸಂಬಂಧವಾದ 'ರಾಜಾವಳೀ ಕಥಾಸಾರ'ದ ಯಾವುದೇ ಕಥೆಯನ್ನು ಗಮನಿಸಿದರೂ, ಸಾಮಾಜಿಕವಾಗಿ ಅವರಿಗೆ ಮರ್ಯಾದೆಯ ಸ್ಥಾನ ಎಲ್ಲಿಯೂ ಕಾಣಿಸುವುದಿಲ್ಲ. ಪ್ರತಿಯಾಗಿ ಅವರ ಸಹವಾಸಕ್ಕೆ ರಾಜಕುಮಾರರು ಮೊದಲಾದವರು ಸಿಕ್ಕಿಕೊಳ್ಳದಂತೆ ಕಟ್ಟುಪಾಡುಗಳನ್ನು ವಿಧಿಸಲಾಗುತ್ತಿತ್ತು (ಪು. ೨೦೮) ಎಂದು ತಿಳಿಯುವುದು.

ಮನೆಯ ಹೆಂಗಸರು ತಮಗೆ ಬಗೆಹರಿಯದ ಸಮಸ್ಯೆಗಳನ್ನು ಕಣಿ ಹೇಳುವ ಕೊರವಿ (ಕಣಿತಿ) ಯರನ್ನು ಪ್ರಶ್ನಿಸಿ ಪರಿಹರಿಸಿಕೊಳ್ಳಲು ಯತ್ನಿಸುತ್ತಿದ್ದರು. ಆ ಕೊರವಿಯರಾದರೂ ಪ್ರಶ್ನಿಸುವವರನ್ನು ''ಉಂಡ ಊಟಮಂ ಕಂಡ ಕನಸಂ ಕಾಮಕಾಂಡಂ ಮೊದಲಾದವಂ ನಿನ್ನ ಮನೋಭಾವವೆಲ್ಲಮಂ ಕಡಲನಿತುಸುರ್ವೆ, ಮೊರತುಂಬಾ ಬೀಯವನಿಕ್ಕು ತಾಯೆ'' ಎಂದು ಹುರಿದುಂಬಿಸುತ್ತಿದ್ದರು (ಪು. ೨೫೪), ಶಕುನ ಉತ್ಪಾತಗಳಲ್ಲಿಜನರಿಗೆ ನಂಬಿಕೆ ಪ್ರಬಲವಾಗಿತ್ತು. ಅವುಗಳಲ್ಲಿ ಉತ್ಪಾತಗಳನ್ನು ರಾಜ್ಯಕ್ಷೋಭಕಾರಕಗಳೆಂದು ಅವರು ತಿಳಿಯುತ್ತಿದ್ದರು.

### ಕೆಲವು ಸಾಂಸ್ಕೃತಿಕ ಮಹತ್ವದ ಸಂಗತಿಗಳು

ಸುಮಾರು ೨೦೦ ವರ್ಷಗಳ ಹಿಂದೆ ಹಳೆಯ ಮೈಸೂರು ಸಂಸ್ಥಾನದ ಗ್ರಾಮ ಮತ್ತು ನಗರಗಳಲ್ಲಿ ಪ್ರಚಲಿತವಾಗಿದ್ದ ಜನಪದರ ಆಚಾರ ವಿಚಾರಗಳು, ಜಾತಿ ಪಂಗಡಗಳು, ಆಟ

ಪಾಟಗಳು, ಹಬ್ಬಹುಣ್ಣಿಮೆಗಳು, ಗಿಡಮರಗಳು, ದವಸಧಾನ್ಯಗಳು, ನಗನಾಣ್ಯಗಳು, ತೆರಿಗೆ ಸುಂಕಗಳು, ಮೃಗಪಕ್ಷಿಗಳು, ರೋಗ ರುಜಿನಗಳು, ಕಲೆ ವಿದ್ಯೆಗಳು, ಪೂಜೆ ಪುರಸ್ಕಾರಗಳು ಇಂತಹವುಗಳ ಪರಿಚಯ ತಕ್ಕಮಟ್ಟಿಗೆ ರಾಜಾವಳೀ ಕಥಾಸಾರದಿಂದ ತಿಳಿಯುತ್ತದೆ. ಈ ವಿವರಗಳಿಗೆ ಜನಸಾಮಾನ್ಯದಲ್ಲಿ ಪ್ರಚಾರದಲ್ಲಿದ್ದ ಆಯಾಕಾಲದ ಕಥೆಗಳು, ಸ್ಥಳೀಯ ಪುರಾಣಗಳು, ಐತಿಹ್ಯಗಳು, ಗಾದೆ ಒಗಟುಗಳು, ಚಾಟೂಕ್ತಿಗಳು, ಚೆಲ್ಲುಮಾತುಗಳು, ದೃಷ್ಟಾಂತಗಳು ಇವನ್ನು ಮೂಲವೆನ್ನಬಹುದು.

ಶ್ರವಣಬೆಳ್ಗೊಳ, ಚಾಮರಾಜನಗರ, ನೀಲಗಿರಿ, ಕೊಳ್ಳೇಗಾಲ, ಮೈಸೂರು, ನಂಜನಗೂಡು ಶ್ರೀರಂಗಪಟ್ಟಣ, ಈ ಮೊದಲಾದ ಸ್ಥಳಗಳ ವಿದ್ಯಮಾನಗಳು, ಮಲ್ಲಿಕಾರ್ಜುನ, ಗಣೇಶ, ಶಿವಲಿಂಗ, ತುಳಸಿ, ಕೂಷ್ಮಾಂಡಿನಿ ಯಕ್ಷಿ, ಪದ್ಮಾವತಿ, ಚಾಮುಂಡಿ, ಗೊಮ್ಮಟೇಶ್ವರ, ನಂಜುಂಡೇಶ್ವರ ಮೊದಲಾದ ದೇವತಾ ವಿಶೇಷಗಳು, ಧರ್ಮಸ್ಥಳ ಶ್ರೀಶೈಲ ಹಿಮವದ್ಗೋಪಾಲಸ್ವಾಮಿ ಬೆಟ್ಟ, ತಲಕಾಡು, ಹೊಂಬುಜ, ಚಂದ್ರದ್ರೋಣ ಪರ್ವತ, (ಬಾಬಾಬುಡನ್‌ಗಿರಿ), ಕಂಚಿ, ದ್ವಾರಸಮುದ್ರ, ತಿರುನಾರಾಯಣಪುರ, ಶೃಂಗೇರಿ ಮೊದಲಾದ ಕ್ಷೇತ್ರಗಳ ಸ್ಥಾನಿಕ ವಿಶೇಷಗಳು, ಕುತೂಹಲಕ್ಕೆ ಗಮನಿಸಬೇಕು; ಕೆಲವಂತೂ ವಿಮರ್ಶನಯೋಗ್ಯವಾದವು. ಇಲ್ಲಿ ದೇವತಾ ಕ್ಷೇತ್ರಗಳನ್ನು ಕುರಿತು ತಿಳಿಸುವಾಗ ಕವಿಯ ಜೈನ ಪಕ್ಷಪಾತ ಕಾರಣವಾಗಿ, ಹಲವು ದೇವಾಲಯಗಳು ಮೂಲತಃ ಜೈನಬಸದಿಗಳಾಗಿದ್ದು, ದೇವತಾಮೂರ್ತಿಗಳು ಅರ್ಹಂತರ ಯಕ್ಷಿಯರ ಮೂರ್ತಿಗಳಾಗಿದ್ದು ಕಾಲಾನಂತರದಲ್ಲಿ ಪರಿವರ್ತನೆಗೊಂಡವೆಂದು ಸಾಮಾನ್ಯವಾಗಿ ಬರೆಯುತ್ತ ಹೋಗಿದ್ದಾನೆ. ಕೆಲವರು ಮಹಾಪುರುಷರು ಮೂಲತಃ ಜೈನವಂಶಸ್ಥರೆಂದೂ ಇಲ್ಲವೆ ಅವರ ವಿದ್ಯಾಗುರುಗಳು ಜೈನಾಚಾರ್ಯರೆಂದೂ ತಿಳಿಸಿರುವುದುಂಟು. ಕೆಲವು ಜಾತಿಪಂಗಡಗಳು ಮೊದಲು ಜೈನ ಧರ್ಮೀಯವಾಗಿದ್ದು ಬಳಿಕ ಮತಾಂತರಗೊಂಡುವೆಂದೂ ಗ್ರಹಿಸಿದೆ. ಇವುಗಳಲ್ಲಿ ಸ್ವಲ್ಪ ಸತ್ಯಾಂಶವಿದ್ದರೆ, ಹೆಚ್ಚುಭಾಗ ಸಾಧಾರಣೀಕರಣದ ಫಲ ಎನ್ನಬೇಕು.

ಗ್ರಂಥ ಕರ್ತೃವಿನ ಉದ್ದೇಶಕ್ಕೆ ಅನುಗುಣವಾಗಿ ಗ್ರಂಥ ಶರೀರದಲ್ಲಿ ಕಣ್ಣಿಟ್ಟ ಕಡೆ ಒಂದಲ್ಲ ಒಂದು ಸಾಂಸ್ಕೃತಿಕ ಉದ್ದೇಶದ ಶಬ್ದ ಪುಂಜಗಳೂ ಚತುರೋಕ್ತಿಗಳೂ ಗೋಚರಿಸುತ್ತವೆ. ಸಮಾಜ ಶಾಸ್ತ್ರಜ್ಞರಿಗೆ ಜಾನಪದ ಸಂಶೋಧಕರಿಗೆ ಇವುಗಳಿಂದ ಆಗುವ ಪ್ರಯೋಜನ ಅನನ್ಯವಾದುದು. ಆಳರಸರು - ಪ್ರಜೆಗಳ ನಡುವಣ ಸಂಘರ್ಷದ ಚಿತ್ರಗಳಿವೆ (ಪು. ೧೮೫-೮೬). ಚಿಕ್ಕದೇವರಾಯನ ಕಾಲದಿಂದ ಈಚೆಗೆ ತೆರಿಗೆ ಹೆಚ್ಚಿದುವು ಎಂಬುದಾಗಿ ತಿಳಿಸಿ, ಆ ತೆರಿಗೆಗಳನ್ನು ಎರೆಹೊಲದ ಕಂದಾಯ, ಕೆಪ್ಪೆ, ಮುಂತಾಗಿ ಸಾಲುಸಾಲಾಗಿ ಹೇಳಿಕೊಂಡು ಹೋಗಿದ್ದಾನೆ. ಇವು ಏನನ್ನು ಹೇಳುತ್ತವೆ ಎಂಬುದು ಸಂಶೋಧಕರಿಗೆ ಒಳ್ಳೆಯ ಗ್ರಾಸ (ಪು. ೩೦೮). ಅಳಿಯ ಸಂತಾನ, ಅರೆಯ ಕಟ್ಟು, ನೀಲಿಸಂತತಿ, ವ್ಯಾಸನ ಬಾಹು, ಪದಿನೆಂಟು ಬಣ್ಣ; ಬಡಿಕೆ, ಕೈಕೋಳಜಾತಿ, ಶಾಸನ ಚಪ್ಪೋಡು, ಚೇಲೀಮಾಡು, ಜಮಂಜಾಡೆ, ತಮ್ಮಡಿ, ತಾಮ್ರದ ಚಪ್ಪೋಡು, ತುಂಟಭಂಟಿಕೆ, ದಾಸ ತಿರುಕುಲ, ಸದ್ದುಪಾವಾಡ, ಪನ್ನಿಹಸಸು, ಕೂಗಿ ಮಾರಿ, ಪೈಮಾಸಿ, ಹಳೆಪೈಕದ ಜನ, ಮನೆಗುರೆ - ಆಯುಧಪಾಣಿ, ಸುಡುಗಾಡ ಸಿದ್ಧ, ಬಾವಿರಲಿಂಗ, ಫಕೀರ, ದೊಡ್ಡಿ, ಭಂಗಾರದವರು, ಬಿಡುಮಣೆಯರ ದಾಸರು, ಹದಿಮೂರು ಮಂತನ - ಹದನೆಂಟು ಮಂತನ, ಮುಗುವಳಿ, ಮುಟ್ಟುಗೋಲು, ಕೋರಿಮನೆತನ - ಹೀಗೆ ಎಷ್ಟೋ ಸಾಮಾಜಿಕ ಪ್ರಾಮುಖ್ಯದ ಪದಗಳನ್ನು ಪಟ್ಟಿ ಮಾಡುತ್ತ ಹೋಗಬಹುದು.

ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡ ಕವಿಗಳಲ್ಲಿ ಹಲವರು ಕವಿಗಳ, ಕೆಲವು ಕಾವ್ಯಗಳ ವಿಚಾರದ ತಿಳಿವಳಿಕೆಗೆ ದೇವಚಂದ್ರನೂ ಸಹಾಯವಾಗಿದ್ದಾನೆ (ಪು. ೧೭೬, ೧೭೮-೭೯). ಅವನು ಕೊಡುವ ಮಾಹಿತಿ ಎಲ್ಲ ಸಂದರ್ಭಗಳಿಗೂ ತೃಪ್ತಿಕರ, ಸಮರ್ಪಕ ಎನ್ನುವಂತಿಲ್ಲ (ಮ. ೧೫೪-೫೫) ಕರ್ಣಾಟಕ ಕವಿಚರಿತೆಕಾರರು ಅವನ ಕೃತಿಯನ್ನು ಒಂದು ಆಕರವಾಗಿ ಆಗಾಗ ಲಕ್ಷಿಸಿದ್ದರೂ ಪೂರ್ತಿಯಾಗಿ ಅದನ್ನೇ ಅವಲಂಬಿಸುವುದು ಕಷ್ಟ. ಕ್ರೀಡೆ ಮನೋರಂಜನೆಗಳಿಗೆ ಸಂಬಂಧಿಸಿದ ಸಂಗ್ರಹಯೋಗ್ಯ ಮಾಹಿತಿ ಇಲ್ಲಿ ಉಂಟು : ಕೋಲೆ ಬಸವನ ಆಟದ ಹಿನ್ನೆಲೆಗೆ ಇಲ್ಲಿ ಒಂದು ಪೌರಾಣಿಕ ಶಿವಕಥೆಯಿದ್ದು, ಇದರ ಮೂಲ ತಿಳಿಯದು. ಶಿವಭಕ್ತನಾದ ಗಜಾಸುರನು ಶಿವನನ್ನು ತನ್ನ ಕೊರಳದಾರದಲ್ಲಿ ಕವಡೆಯ ರೂಪಾಗಿ ಮಾಡಿಕೊಂಡು ಧರಿಸಿದನಂತೆ. ಆಗ ವಿಷ್ಣು ನಂದಿಯನ್ನು ಕೌಲೆಬಸವನನ್ನಾಗಿ ಮಾಡಿ ''ಅನೇಕ ಸುವರ್ಣರತ್ನಾಭರಣ ದುಕೂಲಾದಿಗಳಂ ಪೊದೆಯಿಸಿ, ಅನೇಕ ಆಟಂಗಳಂ ಕಲಿಸಿ, ತಾನುಂ ಹೆಳವ ಮಲ್ಲನೆಂದಾ(ಗಿ), ಆ ಬಸವನಾಟಕ ಜನರಲ್ಲಿ ಮರುಳಾಗಲು'' ಮುಂತಾಗಿ ಶಿವನಿಗೆ ಬಿಡುಗಡೆ ಮಾಡಿಸಿದನೆಂದು ಇಲ್ಲಿ ನಿರೂಪಿಸಿದೆ (ಪು. ೨೬೦).

ದೊಂಬಕುಲದ ದೊಡ್ಡಿತೆ ಹೇಳುವ ಪ್ರಸ್ತಾವದಲ್ಲಿ, ಲಾಗು ಲಂಘನ ಗಣೆಯೇರುವುದು ಮೊದಲಾದ ವಿದ್ಯೆಗಳನ್ನು ಕಲಿತದೊಂಬರನ್ನೂ ದೊಂಬರ ಚೆನ್ನಿಯನ್ನೂ ನೋಡಿ ಪಟ್ಟಣದ ರಾಜಗುರುವಾದ ಜಂಗಮನೊಬ್ಬ ಮರುಳಾದನೆಂದಿದೆ (ಪು. ೨೯೯).

ಹೊಯ್ಸಳರ ಅರಸರ ಕತೆ ಕುರಿತು ಬರೆಯುವಾಗ, ಕಾಳಿಂಗನೆಂಬ ಉಪ್ಪಾರ ಹುಡುಗನು ಮಂತ್ರಿಯಾದ ಕತೆ ಬರುತ್ತದೆ. ಆಗ ಪಂಚಾಳದವರು ಮಾದಿಗರನ್ನೂ ಬೆಸ್ತರನ್ನೂ ಕೂಡಿಕೊಂಡು 'ಬೊಮ್ಮಲಾಟ'ವನ್ನು ನಿರ್ಮಿಸಿ, ಭಾರತ ರಾಮಾಯಣವನ್ನು ಆಟದಲ್ಲಿ ಸಾಧಿಸುತ್ತ, ಆ ರಾಜ್ಯದಲ್ಲೆಲ್ಲ ಸಂಚರಿಸಿದರೆಂದೂ ತಮ್ಮ ಆಟಪಾಟಗಳಿಗೆ ಬಹುಮಾನಗಳನ್ನು ಗಳಿಸಿದರೆಂದೂ ವಿವರಿಸಿದೆ (ಪು. ೧೫೭-೫೯) ಅಲ್ಲಿಯೇ ಈ ಬೊಮ್ಮಲಾಟದಲ್ಲಿ ತ್ರಿಮೂರ್ತಿಗಳ ಕಥೆಗಳನ್ನು ಶೃಂಗಾರಾದಿ ರಸಗಳನ್ನು ತಂದು ಅಭಿನಯಿಸುತ್ತಿದ್ದರೆಂದೂ ಬೇರೆ ಬೇರೆ ಜಾತಿಯ ಜನರ ವೇಷಗಳನ್ನು ತೊಟ್ಟು ಹಾಸ್ಯಕ್ಕೆ ಹೆಚ್ಚು ಅವಕಾಶ ಕೊಟ್ಟು ಆಟವಾಡುತ್ತಿದ್ದರೆಂದೂ ತಿಳಿಸಿದೆ (ಪು. ೧೫೯). ಬೊಮ್ಮಲಾಟದಂತೆ 'ಭಾಗವತರಾಟ'ವನ್ನು ಸಹ ರಾತ್ರಿಯ ವೇಳೆ ಅಭಿನಯಿಸುವುದೂ, ಅದು ಒಂದಾಟ ಇನ್ನೊಂದಾಟ ಎನ್ನುವಂತೆ ಸಾಗುತ್ತ ಇದ್ದುದೂ, ಗಾರ್ಗ್ಯೋಪಾಧ್ಯಾಯನ ಕಥೆಯಿಂದ ವಿದಿತವಾಗುತ್ತದೆ (ಪು. ೨೫೦-೫೧).

ಮೈಸೂರರಸರ ಕಾಲದಲ್ಲಿ ತಿರುಮಲಾರ್ಯ ಮಂತ್ರಿಯಾಗಿದ್ದಾಗ ಶುಕ್ರವಾರ ಪೇಟೆಯೆಂಬಲ್ಲಿ ಆಟಗಾರ ಬಸವನೆಂಬವನು ಇಂದ್ರಜಾಲವಿದ್ಯೆ ತೋರಿಸಿದನಂತೆ : ಕೃತಕ ಆಸ್ಥಾನ ಮಂಟಪ ರಚಿಸಿತು; ಹೆಂಡತಿ ಮದ್ದಳೆ ಬಾರಿಸುತ್ತಿದ್ದಳು. ಆ ಲಯಕ್ಕೆ ಸಮನಾಗಿ, ಬಸವ ತಾನೊಂದು ಬೆಳ್ಳಿಯ ಬಸವನಾಗಿ ಮಾರ್ಪಟ್ಟು ೩೨ ಧಾರಣೆ ವಿದ್ಯೆಗಳನ್ನಾಡಿ ತೋರಿಸಿದನು. ಅವನ್ನು ನೋಡಿ ಮೆಚ್ಚಿಕೊಂಡ ಅರಸ ಮಂತ್ರಿ ಮೊದಲಾದವರು ಶಾಗೂ ಸಕಲಾತಿ ಪಾಗು ಹಚ್ಚಡ ಮುಂತಾದವನ್ನು ನೀಡಿದರು. ಅವುಗಳನ್ನು ಬಳಸಿಯೂ ಕೆಲವು ಚಮತ್ಕಾರಗಳನ್ನು ಬಸವ ತೋರಿಸಿದನು. ಬಳಿಕ ಸಿಪಾಯಿವೇಷ ಧರಿಸಿ ಖಡ್ಗ ಹಿಡಿದು ಸ್ವರ್ಗಕ್ಕೆ ಹೋಗಿ ಇಂದ್ರನ ಖಾಂಡವವನವನ್ನು ಕತ್ತರಿಸಿ ಹಾಕುವೆನೆಂದು, ನೂಲಿನ ಉಂಡೆಯ ಕೊನೆ ಹಿಡಿದು ಮೇಲಕ್ಕೆ ಸೆಳೆಯಲು ನೂಲು ನೆಟ್ಟಗೆ ನಿಂತಿತು;

ಆಗ ಬಸವ ಅದರ ಮೇಲೆ ಹತ್ತಿಹೋಗಿ ಅಂತರಿಕ್ಷದಲ್ಲಿ ಅದೃಶ್ಯನಾದನು. ಹೆಂಡತಿ ಅತ್ತಳು. ಆಗ ಮೇಲಿಂದ ಬಗೆ ಬಗೆ ಹೂವುಗಳು ಉದುರಿದುವು, ಹಣ್ಣುಗಳು ಉದುರಿದುವು. ಬಳಿಕ ಕೊನೆಗೆ ರಕ್ತ ಪ್ರವಾಹದೊಂದಿಗೆ ಬಸವನ ತಲೆ ದೇಹಗಳು ಕೆಳಗೆ ಬಿದ್ದು ಉರುಳಿದುವು. ದೇಹ ಸಂಸ್ಕಾರಕ್ಕೆ ಪುಳ್ಳಿ ಒಟ್ಟಲಾಯಿತು. ತಲೆ ದೇಹಗಳನ್ನು ಅದರಲ್ಲಿ ಇಟ್ಟು ಅಗ್ನಿಯನ್ನೂ ಕೊಡಲಾಯಿತು. ಆಗಲೇ ಅವು ಸುಟ್ಟು ಭಸ್ಮವಾದುವು. ದೊರೆಬಿನ್ನನಾಗಿ ನೋಡುತ್ತಿದ್ದಂತೆ, ಇಂದ್ರಜಾಲದ ಆಸ್ಥಾನಮಂಟಪ ಅದೃಶ್ಯವಾಗಿ ಬಸವನೂ ಅವನ ಹೆಂಡತಿಯೂ ನಗುತ್ತ ಕಾಣಿಸಿಕೊಂಡು ಅಟ್ಟಹಾಸ ಮಾಡಿದರು. ಅಲ್ಲಿಂದೀಚೆಗೆ ಅನೇಕ ವೇಷಧಾರಿಗಳು ತಂತಮ್ಮ ಆಟ ತೋರಿಸುತ್ತಾರೆ.

ಈ ಘಟನೆ ಈಚೆಗೆ ಅತ್ಯಂತ ವಿರಳವಾಗಿರುವ Rope trick ಎಂಬ ಇಂದ್ರಜಾಲದ ಒಂದು ರೋಚಕ ಪ್ರಸಂಗ (ಪು. ೩೪೯-೫೧).

ರಾಜಾವಳೀ ಕಥಾಸಾರದ ಕೆಲವು ವಾಕ್ಯಗಳು ಸಾಮಾಜಿಕವಾಗಿಯೂ ಸಾಂಸ್ಕೃತಿಕವಾಗಿಯೂ ಮನನೀಯವಾದುವು. ಕೆಲವು ಉದ್ಧೃತಿಗಳು :

೧. ''ಮನುಷ್ಯಜಾತಿಯೊಂದೆಯಾದೊಡಮವರವರ ವೃತ್ತಿಭೇದದಿಂ ಬ್ರಾಹ್ಮಣಾದಿಗಳಾಗೆ ಹದಿನೆಂಟು ಜಾತಿಗಳುಮವರವರ ವೃತ್ತಿಯಿಂದಲೇ ಭೇದಂಗಳಾಗಿಪ್ಪುವು'' (ಪು.೭)

೨.''ಲುಬ್ಧರಿಗರ್ಥಂ ಸ್ತಬ್ಧರಿಗಂಜಲಿ ಮೂರ್ಖರ್ಗೆ ವರಿಚ್ಛೆಯದರಿಂ ಪಂಡಿತರಪ್ಪುದು ದುರ್ಲಭಂ'' (ಪು.೪೪)

೩.''(ಭಾಗೀರಥಿ) ಬಾಹ್ಯಶರೀರಮಂ ಪ್ರಕ್ಷಾಲಿಸಿ ಪೊರಗಣ ಮಲಮಂ ಕಳೆವುದಲ್ಲದೆ ಕರ್ಮ ಮಲಮಂ ಕಳೆಯಲಾರದು''(ಪು.೬೦).

೪. ''ನೀಚಜಾತಿಯವನಾದೊಡಂ ಮದ್ಯಮಾಂಸಮಂ ಬಿಟ್ಟು ಜ್ಞಾನಿಯಾ ದೊಡಾತನೆ ಬ್ರಾಹ್ಮಣನಪ್ಪನ್'' (ಪು. ೬೧).

೫. ''ವೇದದೊಳ್ ನಿಶ್ಚಯ ತತ್ವಮಿಪ್ಪುದಂ ತಿಳಿಯದೆ, ತೆಂಗಿನ ಫಲದೊಳಿಪ್ಪ ಕಾಯಂ ಕಾಣದೆ ಮೇಗಣ ಮಟ್ಟೆಯನಗಿವಂತೆ ವೇದವಿಚಾರವಿಲ್ಲದವರೆ ವೇದಬಾಹ್ಯರಪ್ಪರ್'' (ಪು.೮೬)

೬. ''ಧಾನ್ಯದೊಳಕ್ಕಿ ಶ್ರೇಷ್ಠಮಾದುದರಿಂ ವಸ್ತುಗಳೊಳ್ ನಿರ್ಗ್ರಂಥಮಪ್ಪುದೆ ದೊಡ್ಡಿತ್ತು'' (ಪು. ೪೫).

೭. ''ಲೋಕದೊಳು ಜಾತಿಯೆಷ್ಟು, ಮನುಷ್ಯಂ ಬದುಕುವುದೆಷ್ಟು ದಿನಂ, ಸುಮಾನುಷನೆಂತು ಕುಮಾನುಷನೆಂತು... ಪ್ರಪಂಚದೊಳು ಹೆಣ್ಣೊಂದು ಗಂಡೊಂದು ಜಾತಿಯೆರಡು, ಪುಟ್ಟಿ ಸಾಯ್ವುವೆರಡು ದಿನಂ ಪೋಗಲುಳಿದೈದು ದಿನಂ ಬದುಕುವುದು. ಸುಮಾನುಷಂ ಸೂಚಿಸುವಾ(ಸ) ದಂತೆ ಸಂಧಿಯಂ ಕೂಡಿಸುವಂ, ಕುಮಾನುಷಂ ಕರ್ತರಿಕುತಾರದಂತೆ ಸಂಧಿಯನಗಲಿಸುವಂ...'' (ಪು.೨೪೨)

೮.''ನಾಲ್ವರನ್ಯಾಯಮಂ ಪಿಡಿದೊಡೊರ್ವನ ನ್ಯಾಯಂ ನಿಲಲರಿಯದಿದುಕಾಲ ದೋಷಮದಲ್ಲದೆ ಬಲ್ಲಿದಂ ಪೇಲಂ ತಿಂದೊಡೆ ಅವುಷಧಿಯಂ ಕೊಂಡನೆಂಬರು, ಬಡವಂ ತಿಂದೊಡೆ ಹೊಟ್ಟೆಗಿಲ್ಲದೆ ತಿಂದನೆಂ(ಬರು)'' (ಪು. ೨೭೦)

೯. ''ನ್ಯಾಯವೆಂಬುದು ಬಲಿಷ್ಠಕ್ಕಿದಿರಾಗದದರಿಂ ಜನಬಲ ಧನಬಲ ಅಧಿಕಾರ ಬಲಮುಳ್ಳವರು ಸಿಡಿದ ಅನ್ಯಾಯವೆ ಕಾಲದೋಷದಿಂ ನ್ಯಾಯಮಪ್ಪುದು. ಸತ್ಯವಾದಿಯ ಮಾತು ಬೋಡ ಔಡುಗಚ್ಚಿದಂತೆ ನಿಲ್ಲದು'' (ಪು. ೨೭೦).

೧೦.''ತಮ್ಮ ಬಡತನಕ್ಕೋಸ್ಕರ ಧನಿಕರೊಳಿಲ್ಲದದ್ಭುತಂಗಳಂ ಪೇಳಿ 'ಲಾಭಮಂ ಪಡೆವರ್'' (ಪು. ೨೮೯).

೧೧. ''ತಾನು ಧರ್ಮಮಂ ಮಾಳ್ಪಲ್ಲಿ ಪರರಂ ನೋಯಿಸದೆ ಮಾಳ್ಪುದೆ ಧರ್ಮಂ ಪರರಂ ನೋಯಿಸಿ ಮಾಳ್ಪುದು ಅಧರ್ಮಂ''(ಪು.೩೦೩)

೧೨. ''ಜಂಗಮರ ಕಾಟ, ಗೌಡಗಳ ಕೂಟ, ಬೇಲಿವಿಡಿದೋಟ; ಮುಂದೆ ಪ್ರಜೆಗಳ್ಗೆ ಗುದದ ಗೂಟ'' (ಪು. ೩೪೮)

೧೩. '' ಧರ್ಮಪ್ರಭುವಾ(ಗೆ) ಈ ಧರೆಗಿಂದಿನ ಅರಸು ಸ್ವರ್ಗಕ್ಕೆ ನಾಳಿನರಸು, ಮುಕ್ತಿಗೆ ಮುಂದಣರಸು'' (ಪು.೩೫೬).

## ಜಾತಿ ಪಂಗಡಗಳ ವಿಚಾರ

'ರಾಜಾವಳೀ ಕಥಾಸಾರ'ದ ಕರ್ತೃ ದೇವಚಂದ್ರ ಸಂಪ್ರದಾಯಸ್ಥನಾದ ಜೈನ. ಆದ್ದರಿಂದ ಜಾತಿ ಪಂಗಡಗಳ ವಿಚಾರವನ್ನು ಕುರಿತು ಮಾಹಿತಿಗಳನ್ನು ನೀಡುವಾಗ, ವಿಮರ್ಶಿಸುವಾಗ ಅವನ ಜೈನ ಪಕ್ಷಪಾತ ಕೃತಿಯ ಉದ್ದಕ್ಕೆ ಕೆಲಸಮಾಡಿದೆ. ಆ ಪಕ್ಷಪಾತದಿಂದಾಗಿ ಜೈನಧರ್ಮದ ತತ್ತ್ವಗಳನ್ನೂ ಆಚಾರ್ಯರನ್ನೂ ಅತಿಶಯಿಸಿ ಬರೆದಿದ್ದಾನೆ. ಜೈನೇತರ ಧರ್ಮಗಳ ತತ್ತ್ವಗಳನ್ನೂ ಆಚಾರ್ಯರನ್ನೂ ಅವಗಣನೆ ಮಾಡಿ ಬರೆದಿದ್ದಾನೆ. ಆಯಾ ಧರ್ಮಗಳ ಅನುಯಾಯಿಗಳ ವಿಷಯದಲ್ಲಿಯೂ ಅವನ ದೃಷ್ಟಿ ಹೀಗೆಯೇ ಇದೆ. ''ಜಿನ ಮತ ಶಾಸ್ತ್ರಮೆ ಶಾಸ್ತ್ರಂ, ಜಿನೇಶ್ವರನೆ ಪ್ರಾಣಿಗಳ್ಗೆ ಪರಮಾಪ್ತಂ, ಜಿನತಪಸ್ವಿಗಳೆ ತಪಸ್ವಿಗಳ್'' ಎಂಬ ನಿಲವಿಂದ (ಪು. ೧೧೪) ಹೊರಟವನು ಅವನು. ಅವನ ಜೀವಿತಕಾಲದಲ್ಲಿ ಮತ ಮತಗಳ ನಡುವೆ ಮೇಲಾಟ ಸಾಮಾನ್ಯವಾಗಿತ್ತು; ಸಂವಾದ ಸಂಘರ್ಷಗಳು ಆಗಿಂದಾಗ್ಗೆ ಘಟಿಸುತ್ತಿದ್ದುವು. ಇವುಗಳಲ್ಲಿ ಬ್ರಾಹ್ಮಣ, ವೀರಶೈವ, ಬೌದ್ಧ ಮತ್ತು ಜೈನ ಧರ್ಮಗಳ ನಡುವೆ ತಾತ್ವಿಕ ಹೋರಾಟಗಳೂ ಅನ್ಯ ಮತೀಯ ಪಂಗಡಗಳ ನಡುವೆ ಉಳಿವಿಗಾಗಿ ಹೆಚ್ಚುಗಾರಿಕೆಗಾಗಿ ತಿಕ್ಕಾಟಗಳೂ ನಡೆಯುತ್ತಿದ್ದಂತೆ ತಿಳಿಯಲು ಈ ಗ್ರಂಥದಲ್ಲಿ ಸಾಕ್ಷ್ಯಾಧಾರಗಳುಂಟು, ಇಸ್ಲಾಂ ಮತ್ತು ಈಸಾಯಿ ಧರ್ಮಗಳು ಸಹ ಕನ್ನಡ ಜನದ ಮೇಲೆ ತಮ್ಮ ಪ್ರಭಾವವನ್ನು ಪ್ರಕಟಿಸಿದ್ದು, ಇವುಗಳಲ್ಲಿ ಮುಗಲಾಯಿ ಮತ್ತು ಬಹಮನಿ ಅರಸರ ಕಾಲದಿಂದ ಮತ್ತು ಈಚೆಗೆ ಹೈದರ್ ಟಿಪ್ಪುಗಳ ಕಾಲದಿಂದ ಕನ್ನಡನಾಡಿನಲ್ಲಿ ಇಸ್ಲಾಂ ಧರ್ಮದ ಪ್ರಭಾವ ತುಂಬ ಪ್ರಬಲವಾಗಿ ಆಘಾತಕಾರಿಯಾಗಿ ಕಂಡುಬರುವುದೆಂಬುದನ್ನು ದೇವಚಂದ್ರನ ಕಥನದಿಂದ ವಿದಿತವಾಗುತ್ತದೆ (ಪು. ೧೮೮-೯೫ ; ೩೦೫-೩೦೭).

ಸ್ವಮತೋತ್ಕರ್ಷವನ್ನು ಉದ್ಘಾಟಿಸುವುದು ದೇವಚಂದ್ರನ ಮುಖ್ಯಲಕ್ಷ್ಯ. ಜೈನ ಗಣ ಗಚ್ಛಗಳ ಉತ್ಪತ್ತಿ, ಪ್ರಮುಖ ಪಂಥಭೇದಗಳು, ಸಂಘಗಳು ಇವನ್ನು ಕೃತಿಯ ಆರಂಭದಲ್ಲಿಯೇ, ಜೈನ ಪುರಾಣ ಪದ್ಧತಿಗೆ ಅನುಸಾರವಾಗಿ ಲೋಕಾಕಾರ ಕಥನ ಮುಂತಾದವುಗಳನ್ನು ದಾಟುತ್ತಿದ್ದ ಹಾಗೆಯೇ

ನಿರೂಪಿಸಿದ್ದಾನೆ. ವಡ್ಡಾರಾಧನದ ಭದ್ರಬಾಹುಭಟಾರರ ಕಥೆಯಲ್ಲಿ ದೊರೆಯುವದಕ್ಕಿಂತ ಹೆಚ್ಚಿನ ಸಾಮಗ್ರಿ ಇಲ್ಲಿ ಬಂದಿದೆ. ತನ್ನ ಕಾಲದ ಸ್ಥಾನಿಕಭೇದಗಳು ಸಾಂಪ್ರದಾಯಿಕ ವಿವರಗಳ ಜೊತೆಗೆ ಸೇರುವಂತೆ ಕವಿ ಮಾಡಿದ್ದಾನೆ. ಅಲ್ಲದೆ ಒಂದು ಅನುಬಂಧ ರೂಪದ ಹೆಚ್ಚಿನ ಅಧಿಕಾರದಲ್ಲಿ ಚಾತುರ್ವರ್ಣ್ಯದ ಕಲ್ಪನೆ, ವಿವಾಹದಲ್ಲಿಅಂತರ್ಜಾತೀಯ ಪದ್ಧತಿಗಳು, ಜೈನರಲ್ಲಿ ವರ್ಣಾಶ್ರಮ ವ್ಯವಸ್ಥೆಯ ವಿಚಾರ, ದಾಕ್ಷಿಣಾತ್ಯಜೈನರ ವಿಶೇಷತೆ, ಜೈನ ವರ್ಣವ್ಯವಸ್ಥೆಯಲ್ಲಿಪಂಚಮರನ್ನು ಸಡಿಸಿಕೊಳ್ಳುವ ವಿಚಾರ, ಇತ್ಯಾದಿ ಆಚಾರಕಾಂಡದ ವಿವರಗಳನ್ನು ವಿಸ್ತರಿಸಿ ಬರೆದಿರುವುದು ಗಮನಾರ್ಹ. ಜೈನಾಚಾರ್ಯರಲ್ಲಿ ಪೂಜ್ಯಪಾದ, ಸಮಂತಭದ್ರ, ಹಸ್ತಿಮಲ್ಲ. ಜೀನಸೇನ ಮುಂತಾದವರ ಹಾಗೂ ವಿಭಿನ್ನ ರಾಜಮನೆತನಗಳ ಕಾಲದಜೈನ ಕವಿಗಳ, ಅಧಿಕಾರವರ್ಗದವರ ವಿಚಾರಗಳನ್ನು ಒಗ್ಗೂಡಿಸಲು ಯತ್ನಿಸಿದೆ.

ಕವಿ ದೇವಚಂದ್ರನ ದೃಷ್ಟಿಗೆ ಜೈನ ಧರ್ಮದಲ್ಲಿ, ಧಾರ್ಮಿಕರಲ್ಲಿ ಯಾವ ಕುಂದು ಕೊರತೆಗಳೂ ಕಾಣದ ಪರಿಪೂರ್ಣತೆಯುಂಟು. ಹೊರಗಿನ ಒತ್ತಡಗಳಿಗೆ ಸಿಕ್ಕ, ಬೇರೆ ಧರ್ಮಗಳ ಅರಸರ, ಅನುಯಾಯಿಗಳ ಅಸಹನೆ ದ್ವೇಷಗಳು ಕಾರಣವಾಗಿ, ಜೈನಧರ್ಮವೂ ಧಾರ್ಮಿಕರೂ ಅಪಾಯದ ಸುಳಿಗಳಲ್ಲಿ ಸುತ್ತುವಂತಾಗಿದೆಯೆಂದು ಅವನು ದೃಢವಾಗಿ ನಂಬಿದ್ದಾನೆ. ಹೀಗೆ ಜೈನಧರ್ಮ ಘಾಸಿಗೊಂಡುದು ಕಾರಣವಾಗಿ, ಜೈನ ಧಾರ್ಮಿಕರಿಗೆ ತಮ್ಮ ಧರ್ಮದಲ್ಲಿದ್ದ ಶ್ರದ್ಧೆ ಉತ್ಸಾಹಗಳು ಕುಗ್ಗಿವೆಯೆಂದೂ ಮತಾಂತರಗಳಾಗಿವೆಯೆಂದೂ ಅಸಹಾಯಕ ಪರಿಸ್ಥಿತಿ ಒದಗಿದೆಯೆಂದೂ ಅಲ್ಲಲ್ಲಿ ಸೂಚಿಸಿದ್ದಾನೆ. ಬ್ರಾಹ್ಮಣ(ವೇದಾಂತಿಬ್ರಾಹ್ಮಣ), ವೀರಶೈವ,ಮತ್ತು ಬೌದ್ಧ ಧರ್ಮಗಳೊಂದಿಗೆ ಜೈನಧರ್ಮಕ್ಕೆ ಸಂವಾದ ಭೂಮಿಕೆಗಳನ್ನು ಕಲ್ಪಿಸಿ ಆ ಧರ್ಮ ಇತರ ಧರ್ಮಗಳಿಗಿಂತ ತಾತ್ವಿಕವಾಗಿ ಘನವಾದುದು ಎಂದು ಸ್ಥಾಪಿಸಲು ಅವನು ಒಂದಕ್ಕಿಂತ ಹೆಚ್ಚು ಸಲ ಪ್ರಯತ್ನಿಸಿದ್ದಾನೆ. ವಾಸ್ತವವಾಗಿ ಅವನು ಜಾತಿಯಿಂದ ತಮ್ಮನ್ನು ಉತ್ತಮರೆಂದು ತಿಳಿದಿದ್ದ ಬ್ರಾಹ್ಮಣರೊಂದಿಗೆ, ವಾಣಿಜ್ಯ ವ್ಯವಹಾರಗಳಲ್ಲಿ ತಾವು ಬಲಿಷ್ಠರೆಂದು ತಿಳಿದಿದ್ದ ವೀರಶೈವರೊಂದಿಗೆ ಹಾಗೂ ಅವರಿಗೆ ಗುರುಸ್ಥಾನದಲ್ಲಿದ್ದ ಜಗಮರೊಂದಿಗೆ ಒಂದು ಬಗೆಯಲ್ಲಿ ಧರ್ಮಯುದ್ಧವನ್ನೇ ಸಾರಿರುವಂತೆ ತೋರುತ್ತದೆ. ಬೇರೆ ಮತತತ್ತ್ವಗಳನ್ನೂ ಮತಾಚಾರ್ಯರನ್ನೂ ಕುರಿತಾಗಿ ಅವಹೇಳನಕರವಾಗಿ ಬರೆದು ಜುಗುಪ್ಸೆ ಉಂಟುಮಾಡುವುದು ಅವನು ಅನುಸರಿಸಿರುವ ಯುದ್ಧ ತಂತ್ರಗಳಲ್ಲಿ ಒಂದು; ಹೀಗೆ ಬರೆಯಲು ಅವನಿಗೆ ಕೆಲವೊಮ್ಮೆ ಒಂದೆರಡು ಜೈನ ಪುರಾಣಗಳು ಆಕರವಾದರೆ, ಇನ್ನು ಕೆಲವೊಮ್ಮೆ ಸ್ವಂತ ಕಲ್ಪನೆ ಇರಬಹುದೇ ಎಂದು ಶಂಕಿಸುವಂತೆ ಆಗುತ್ತದೆ. ಅನ್ಯಧರ್ಮಗಳ ದೇವತೆಗಳನ್ನೂ ಪುಣ್ಯಕ್ಷೇತ್ರಗಳನ್ನು ಕುರಿತೂ ಸಹ ಮೂಢತ್ರಯದ ನಿರಾಕರಣೆಯ ಲಕ್ಷ್ಯವನಿಟ್ಟುಕೊಂಡು ಹೀಗೆಯೇ ಆಕ್ಷೇಪಕವಾಗಿ ಬರೆದಿದ್ದಾನೆ. ಇಂತಹ ಮತವಿಡಂಬನದ ದೃಷ್ಟಿಪ್ರಾಚೀನ ಜೈನಕವಿಗಳಲ್ಲಿ ಅಷ್ಟಾಗಿ ಕಾಣಸದು. ಈಚೆಗೆ ಬ್ರಹ್ಮಶಿವ ವೃತ್ತವಿಲಾಸ ಇಂಥವರಲ್ಲಿ ಸ್ವಲ್ಪ ಕಾಣುವಂಥದು. ಇಳಿಮುಖವಾಗಿರುವ, ಅಲ್ಪ ಸಂಖ್ಯಾಕವಾಗಿರುವ ಜೈನ ಧರ್ಮದ ಸ್ವರೂಪವನ್ನು ಈ ನಿರೂಪಣೆ ಎತ್ತಿತೋರಿಸುವಂತಿದೆ.

ಶ್ರೀಶೈಲ ಒಂದು ಕಾಲದಲ್ಲಿ ಜೈನ ಕ್ಷೇತ್ರವಾಗಿತ್ತು ಎಂದು ಗ್ರಹಿಸಿ, ಅಲ್ಲಿಯ ಆರಾಧನ ದೈವದ ಹೆಸರನ್ನು ವ್ಯಾಖ್ಯಾನಿಸಿದ್ದಾನೆ. ಬಸವಣ್ಣನವರು ಮೂಲತಃ ಜೈನ ವಿಪ್ರ ಮನೆತನದವರಾಗಿದ್ದರೆಂದೂ ಶಂಕರಾಚಾರ್ಯರು ಜೈನೋಪಾಧ್ಯಾಯರಲ್ಲಿ ಶಿಷ್ಯತ್ವ ವಹಿಸಿದವರೆಂದೂ ತಿಳಿಸಿದ್ದಾನೆ. ಬಹುಪಾಲು

ಶೈವ ವೈಷ್ಣವ ದೇವಾಲಯಗಳು ಬಸದಿಗಳನ್ನು ಹಾಳುಗೆಡವಿ ಕಟ್ಟಿದವೆಂದು ಅವನು ಮೇಲಿಂದ ಮೇಲೆ ಹೇಳಿರುವುದರಲ್ಲಿ ಕೆಲಮಟ್ಟಿಗೆ ಸತ್ಯಾಂಶವಿದ್ದರೂ ಮೇಲುಕೋಟೆಯ ಜಿನಾಲಯವನ್ನು ಮರಸಿ ಚಲುವರಾಯನೆಂದು ಸ್ಥಾಪಿಸಲಾಯಿತು (ಪ. ೧೮೦), ಶೃಂಗೇರಿಯ ಜಿನಬಸದಿಯಲ್ಲಿದ್ದ ಜಿನಪ್ರತಿಮೆಯೇ ಮುಂದೆ ಸರಸ್ವತಿಯಾಗಿ ತಿಳಿಯಲ್ಪಟ್ಟಿತು ಎಂದು ಮುಂತಾಗಿ ಬರೆದಿರುವುದಕ್ಕೆ ಅವನಿಗೆ ಇದ್ದ ಆಧಾರಗಳು  ಯಾವುವು ಎನ್ನುವುದು ತಿಳಿಯುವುದಿಲ್ಲ.  ವಿಷ್ಣುವರ್ಧನನು ವೈಷ್ಣವನಾದುದಕ್ಕೆ ಅವನು ಕೊಡುವ ಚರ್ಯಾಂತರಾಯದ ಕಾರಣ (ಪು. ೧೮೦) ಎಷ್ಟು ನಿಜವೋ ತಿಳಿಯದು.

ಪ್ರತ್ಯೇಕವಾಗಿ ಹಲವು ಜಾತಿಗಳ, ಉಪಜಾತಿಗಳ  ಸಾಂಪ್ರದಾಯಿಕ ಪೌರಾಣಿಕ ಹಿನ್ನೆಲೆ, ಆಚಾರವಿಚಾರಗಳು, ಹೆಚ್ಚುಗಾರಿಕೆ, ಶೋಷಣೆಯ ಸಂದರ್ಭಗಳು, ಇತರ ಜಾತಿ ಉಪಜಾತಿಗಳೊಂದಿಗೆ ಅವುಗಳ ಸಂಬಂಧ ಸಂವಾದ ಸಂಘರ್ಷಗಳು, ಇವನ್ನೆಲ್ಲ ದೇವಚಂದ್ರ ತನ್ನಿಂದಾದಂತೆ ದಾಖಲಿಸಿದ್ದಾನೆ. ಬ್ರಾಹ್ಮಣರನ್ನು ಜೈನ ಬ್ರಾಹ್ಮಣರಿಂದ ಬೇರೆಯಾಗಿ ತಿಳಿಯಲು ದೇವಚಂದ್ರ ವೇದಾಂತಿ ಬ್ರಾಹ್ಮಣನೆಂದು ಕರಿದಿದ್ದಾನೆ.  ಅವರಿಲ್ಲಿ ಗೌಡ ಮತ್ತು ದ್ರಾವಿಡ ಬ್ರಾಹ್ಮಣ ಭೇದಗಳು ಸಹವಾಗಿ ಇತರ ಸ್ಥಾನಿಕ ಭೇದಗಳನ್ನೂ, ಹಳಗನ್ನಡಿಗರು ತಪ್ಪರು ಮಾರಕರು (ಮಾರ್ಕರು) ಮೊದಲಾದವನ್ನೂ, ಅವರ ಮುಖ್ಯನೆಲೆಗಳನ್ನೂ ಪ್ರಸ್ತಾಪಿಸಿದ್ದಾನೆ.  ಪರಿಚಿತ ತ್ರಿಮತಸ್ಥಭೇದಗಳನ್ನು ಕುರಿತಿರುವುದರ ಜೊತೆಗೆ, ಚಿಕ್ಕದೇವರಾಜರ ಕಾಲದಲ್ಲಿ, ಅದಕ್ಕೆ ಹಿಂದೆ ಹೊಯ್ಸಳರ ಕಾಲದಲ್ಲಿ, ಶ್ರೀವೈಷ್ಣವ ಪಂಥದ ಪ್ರಾಬಲ್ಯ ಪರಿಣಾಮಗಳನ್ನು ದಟ್ಟವಿವರಗಳೊಂದಿಗೆ ಸ್ವಾರಸ್ಯವಾಗಿ ನಿರೂಪಿಸಿದ್ದಾನೆ.  ಸಾಂದರ್ಭಿಕವಾಗಿ ಬುಕ್ಕರಾಯನ ಜೈನ - ವೈಷ್ಣವ ಮತಸಾಮರಸ್ಯದ ಶಾಸನವನ್ನು ಉದ್ಧರಿಸಿದ್ದಾನೆ.  ರಾಮಾನುಜರ ವಿಚಾರದಲ್ಲಿ ಅವನು ಕೊಡುವ ಮಾಹಿತಿಗಳಿಗೆ ಎಷ್ಟರ ಮಟ್ಟಿಗೆ ಇತಿಹಾಸದ ಆಧಾರವಿದೆಯೋ ಹೇಳುವುದು ಕಷ್ಟ; ಆದರೆ ಚಿಕ್ಕ ದೇವರಾಜರ ಕಾಲದಲ್ಲಿ ಅವರ ಪಂಥದ ಪ್ರಾಬಲ್ಯದಿಂದಾಗಿ ಸಾಮಾನ್ಯ ಜನಕ್ಕೆ ಉಂಟಾದ  ಉಪಟಳದ ಹಿಂದೆ ಸತ್ಯಾಂಶದ ಬೀಜಗಳು ಇರುವಂತಿವೆ. ಚಿಕ್ಕದೇವರಾಜನ ಕಾಲದಲ್ಲಿ ಸಮಾನಾಂತರವನಾಗಿ  ವೀರಶೈವ  ಧರ್ಮದ ಪ್ರಾಬಲ್ಯ ಹೇಗೆ ಜಂಗಮರ ಹಾವಳಿಯಲ್ಲಿ ಪರಿಣಮಿಸಿತೆನ್ನುವುದರ ಚಿತ್ರಣಗಳೂ ಇಲ್ಲಿ ಬಂದಿವೆ.  ಜೈನ ವಿಶಾಲಾಕ್ಷ ಪಂಡಿತನ ಕೊಲೆಯ ಹಿನ್ನೆಲೆಯಾಗಿ ಬರುವ ಈ ವಿವರಗಳು ಷಡಕ್ಷರಿ ತಿರುಮಲಾರ್ಯರ ಮೂಲಕ ಶೈವ ವೈಷ್ಣವ ಪ್ರಭಾವ ಆಳರಸರ - ಪ್ರಜೆಗಳ ವಲಯದಲ್ಲಿ ಬೆಳೆದುವು,  ಫಲವಾಗಿ - ಕೆಲವು ಮತಾಂತರಗಳಾದುದು, ಬಸದಿಗಳು ಹಾಳಾದುದು, ಮುಂತಾದ ಕುತೂಹಲಕರ ಅಂಶಗಳನ್ನು ಒಳಗೊಂಡಿವೆ.  ಬಲುಮಟ್ಟಿಗೆ ಇಂಥ ವಾತಾವರಣದಲ್ಲಿಯೇ ಹುಟ್ಟಿರಬೇಕು, ''ಆನೆಯಟ್ಟಿದೊಡಂ ಜಿನಾಲಯಮಮಂ ಪುಗಲಾಗದು, ಜೈನರೊಳ್ ಸಂಭಾಷಣಮಂ ಮಾಡಲಾಗದು (ಪು. ೨೮), '' ಆನೆಯಟ್ಟಿಬಂದರೂ ಶಿವಾಲಯಮಮಂ ಪುಗಲಾಗದು'' (ಪು.೧೭೭) ಎಂಬಂತಹ ಅಸಹನೆಯ ಮಾತುಗಳು.

ಶೈವಪುರಾತನರನ್ನೂ ಬಸವಾದಿ ನೂತನರನ್ನೂಕುರಿತು ಬರೆದ ಪುರಾಣಗಳನ್ನೂ ಭಕ್ತಿಕಾವ್ಯಗಳನ್ನೂ ದೇವಚಂದ್ರ ಹೆಚ್ಚಿನ ಅಸಹನೆ ಆಕ್ರೋಶಗಳಿಂದ ಟೀಕಿಸಿದ್ದಾನೆ.  ವಿಡಂಬನೆಯನ್ನು ಶಸ್ತ್ರವಾಗಿ ಝಳಪಿಸಿದ್ದಾನೆ.(ಪು. ೧೨೭-೧೪೦, ೨೪೪-೨೯೨) ಬಸವಣ್ಣನವರ ಜೀವನ ಚರಿತ್ರೆ ಕುರಿತು ಬರೆಯುವಾಗ ಅವನು ಅವರ ಸ್ವಭಾವ ಆಚರಣೆಗಳನ್ನು ತನಗೆ ಬೇಕಾದಂತೆ ವ್ಯಾಖ್ಯಾನಿಸಿದ್ದಾನೆ.

ಶೈವ ಪುರಾಣ ಕಥೆಗಳನ್ನು "ಜನಂಗಳ್ಗದ್ಭುತಮಂ ತೋರಿಸಿ ಮೃಢವಿಡಿಯಿಸಲೆಂದು ಕಲ್ಪಿಸಿದ ಕಥೆ'ಗಳೆಂದು ಮೇಲಿಂದ ಮೇಲೆ ಹೇಳಿದ್ದಾನೆ.

ಬ್ರಾಹ್ಮಣೇತರ ಜಾತಿ ಉಪಜಾತಿಗಳಲ್ಲಿ ಪಂಚಾಳರು, ತೊರೆಯರು, ಹಂಡೆ ಕುರುಬರು, ಮಾದಿಗರು, ಹೊಲೆಯರು ಮುಂತಾದವುಗಳ ವಿಷಯದಲ್ಲಿ ಬಂದಿರುವ ವಿವರಗಳು ಸಮಾಜಶಾಸ್ತ್ರಜ್ಞರಿಗೆ, ಉಪಯುಕ್ತ ಮಾಹಿತಿಗಳಾಗಿವೆ. ಮೇಲು ವರ್ಗದ ಜಾತಿಗಳಿಗೆ ಕೆಳವರ್ಗದ ಜಾತಿಗಳ ವಿಷಯವಾಗಿ ಇದ್ದ ತಿರಸ್ಕಾರ, ಹಾಗೂ ಕೆಳವರ್ಗದ ಜಾತಿಗಳ ಜನ ಕೀಳರಿಮೆಯಿಂದ ತಮ್ಮ ಅಸ್ತಿತ್ವ ಮಹತ್ವಗಳಿಗಾಗಿ ನಡಿಸಿದ ಹೋರಾಟದ ಸಂದರ್ಭಗಳು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಇಲ್ಲಿ ಗೋಚರಿಸುತ್ತವೆ." ಜಾತಿಗಳ ವಿಚಾರಿಸಲೆಂದು ಸಕಲ ಜಾತಿಯೊಳು ಶ್ರೇಷ್ಠರಂ ಬರಿಸಿ ಉತ್ಕೃಷ್ಟ ನಿಕೃಷ್ಟಮರಿಯಲೆಂದು" ಚಿಕದೇವರಾಜ ಒಂದು ಗೋಷ್ಠಿಯನ್ನೇ ನಡಸಿದನಂತೆ (ಪು.೨೯೨). ಒಂದೊಂದು ಜಾತಿಯವರು ಪುರಾಣಾಧಾರಗಳಿಂದ 'ಸ್ವಕುಲ ಶ್ರೇಷ್ಠ ಪುರಾಣ'ವನ್ನು ಉಗ್ಗಡಿಸಿದರಂತೆ. ಇವೆಲ್ಲ ಕಲ್ಪಿಸಿದ ಶಾಸ್ತ್ರಗಳೆಂದು ಕವಿ ತನ್ನ ಟಿಪ್ಪಣಿ ಬರೆದಿದ್ದಾನೆ. ತೋಟದ ದೇವರಾಜ ಅರಸ ಆಡಿದ ಮಾತೆಂದು ಹೇಳಿದ್ದರೂ ಅದು ಅವನ ಟಿಪ್ಪಣಿಯೇ. ಜಾತಿಗಳ ಹೆಚ್ಚು ಕಡಿಮೆಗಳನ್ನು ಶಿವ ತೂಗಿ ನೋಡಿದನೆಂಬ ಕುಚೋದ್ಯದ ವರ್ಣನೆಯಂತೂ (ಪು. ೧೯೧) ಹಾಸ್ಯಾಸ್ಪದವಾಗಿದ್ದು, ಈ ಭಾಗವಲ್ಲಿ ಚಂದ್ರದ್ರೋಣಪರ್ವತ ಮೊದಲಾದೆಡೆ ಕಂಡುಬಂದ ತುರುಕರ ಪ್ರಾಬಲ್ಯ ಹಾಗೂ ಉಪಟಳದ ಚಿತ್ರ ನಾನಾ ದೃಷ್ಟಿಗಳಿಂದ ವಿಮರ್ಶನ ಯೋಗ್ಯವಾಗಿದೆ. ಈ ತುರುಕರ ಪ್ರಾಬಲ್ಯ ಹಾಗೂ ಕಾಲದಲ್ಲಿಯೂ ಜೈನಧರ್ಮದ ಪ್ರಾಚೀನತೆ, ಪ್ರಭಾವಗಳು ಮನವರಿಕೆಯಾದಂತಹ ಸನ್ನಿವೇಶವೊಂದನ್ನು ಕವಿ ಹೃದಯಂಗಮವಾಗಿ ಚಿತ್ರಿಸಿದ್ದಾನೆ (ಪು. ೧೯೨-೯೩). ಇದಕ್ಕಿಂತ ಮುಖ್ಯವಾದುದು ಎಂದರೆ, ಇಸ್ಲಾಂ ಮತ್ತು ಹಿಂದೂ ಧರ್ಮಗಳ ನಡುವೆ ವೈಷಮ್ಯವಿರದೆ ಸಹಬಾಳ್ವೆ ನಡೆಸಬೇಕಾದ ಸಾಧ್ಯತೆಯನ್ನು ಕವಿ ಮನಗಂಡು, ಇವು ಮುತ್ತುಚಿಪ್ಪಿನ ಒಳಗೆ ಮುತ್ತಿನಂತೆ ಹೊಂದಿ ಇರಬೇಕೆಂದು ಇಂಗಿತಗೊಳಿಸಿರುವುದು. ಇಸ್ಲಾಂ ಧರ್ಮೀಯರು ತಾವು ಹಿಂದೂ ಧರ್ಮೀಯರಿಗಿಂತ ಮೇಲೆಂದು ತಿಳಿದು ಪ್ರವರ್ತಿಸುತ್ತಿದ್ದರು. ಅದಕ್ಕೆಂದು ಹಿಂದುಗಳಿಗೆ, ಜೈನರಿಗೆ ಸವಾಲುಗಳನ್ನು ಒಡ್ಡುತ್ತಿದ್ದುದು ಸ್ಫುಟವಾಗಿ ತಿಳಿಯುವಂತಿದೆ (ಪು. ೧೮೮-೯೦, ೨೪೨-೪೩).

ಹೊಲೆಯರು ಮಾದಿಗರೆಂಬವರ ವಿಷಯದಲ್ಲಿ ಇದ್ದ ಅತ್ಯಂತ ತಿರಸ್ಕಾರದ ಭಾವನೆಗಳು ಬಂದಿರುವುದರ ಜೊತೆಜೊತೆಗೆ (ಪು.೩೭೮) ಅವರು ಯುದ್ಧ, ವಿದ್ಯೆ, ಅಧಿಕಾರ ಮೊದಲಾದವುಗಳಲ್ಲಿ ಪಾಲುಗೊಂಡು ಮೇಲು ವರ್ಗದ ಜನರೊಂದಿಗೆ ಹೇಗೆ ಸ್ಪರ್ಧಿಸುತ್ತಿದ್ದರೆಂಬ ಘಟನೆಗಳೂ ಅಲ್ಲಲ್ಲಿ ಉಕ್ತವಾಗಿವೆ (ಸ್ವ೧೯೪,೨೦೩, ೨೦೭). ಜೈನ ಪಂಚಮನಾದ(?) ಕಾಳಯ್ಯ ಶೆಟ್ಟಿ ಸ್ವಂತವಾಗಿ ಚೈತ್ಯಾಲಯ ಕಟ್ಟಿಸುವಷ್ಟು ಶ್ರೀಮಂತನಿದ್ದನು; ಆದರೆ ಆ ಶ್ರೀಮಂತಿಕೆ ದೊರೆಯ ಪ್ರಸಾದದಿಂದಾದುದು ಎಂಬುವನ್ನು ಮರೆತು ದೊರೆಯನ್ನೇ ವಂಚಿಸಿದ ಘಟನೆ ಪ್ರಜಾ-ಪ್ರಭು ಸಂಬಂಧದ ಒಂದು ವಿಲಕ್ಷಣ ಸಂಬಂಧವನ್ನು ಸೂಚಿಸುತ್ತದೆ (ಪು. ೨೮೧೨-೮೨).

ಹೀಗೆ - ದೇವಚಂದ್ರ ತನಗೆ ಸಮೀಪ ಕಾಲದ ಜನಜೀವನದ ನಾನಾ ಮುಖಗಳನ್ನು ವಿಶಿಷ್ಟ ರೀತಿಯಿಂದ ರಾಜಾವಳೀ ಕಥಾಸಾರದಲ್ಲಿ ದಾಖಲಿಸಿದ್ದಾನೆ. ಈ ಪುಸ್ತಕವನ್ನು ಓದುವುದರಿಂದ ನಮಗೆ ಸಮೃದ್ಧವಾದ ಮನೋರಂಜನೆಯ ಜೊತೆಗೆ ವಸ್ತುಜ್ಞಾನದ ಸಂಪಾದನೆಯೂ ಆಗುತ್ತದೆ. ಈ ಕೃತಿಯನ್ನು ಹೋಲುವ ಇನ್ನೊಂದು ಸಾಹಿತ್ಯಕೃತಿ ಕನ್ನಡದಲ್ಲಿ ಬಹುಶಃ ಇಲ್ಲ.

8290

# ಬಂಧುವರ್ಮ : ಕವಿ ಮತ್ತು ಕೃತಿಗಳು

ಡಾ. ರಾಗೌ

ಮೊದಲಿಗೆ ಬಂಧುವರ್ಮನಿಗಿದ್ದ ಸಾಹಿತ್ಯಕ್ಕೆ ಪರಿಸರ ಮತ್ತು ಧಾರ್ಮಿಕ ಪರಿಸ್ಥಿತಿಗಳನ್ನು ಕುರಿತು ಅವಲೋಕಿಸುವುದು ಆವಶ್ಯಕ. ಸಹಜವಾಗಿಯೇ ಇವು ಬಂಧುವರ್ಮನ ಕೃತಿರಚನೆಗಿದ್ದ ಹಿನ್ನೆಲೆಯನ್ನು ತಂದುಕೊಡುತ್ತವೆ. ಹಳಗನ್ನಡ ಸಾಹಿತ್ಯದ ನಿರ್ಮಾಪಕರು ಬಹುತೇಕ ಜೈನ ಕವಿಗಳೆಂಬುದು ಸ್ಪಷ್ಟವೇ ಇದೆ. ಚಂಪೂಪ್ರಕಾರದ ಸಾಧನೆ ಸಿದ್ಧಿಗಳೆಲ್ಲ ಹೆಚ್ಚಿನ ಮಟ್ಟಿಗೆ ಅವರದೇ. ಪಂಪ, ಪೊನ್ನ, ರನ್ನ, ನಾಗಚಂದ್ರರು ಈ ಅವಧಿಯ ಪ್ರಮುಖ ಕವಿಗಳಾಗಿ ಕಾಣಿಸಿಕೊಂಡರು. ರಾಮಾಯಣ, ಮಹಾಭಾರತ, ಜೊತೆಗೆ ಜೈನ ತೀರ್ಥಂಕರ ಪುರಾಣಕಥೆಗಳ ಸಮಾವೇಶವಾಗಿತ್ತು. ವೈದಿಕ ಕವಿಗಳು ಕಾಣಿಸಿಕೊಂಡರೂ ವಿರಳವೆನ್ನಬೇಕು. ಒಂದನೇ ನಾಗವರ್ಮ ಮತ್ತು ದುರ್ಗಸಿಂಹನಂಥವರು ಮುಖ್ಯರಾಗಿದ್ದರು. ಇವರೆಲ್ಲರೂ ಅನುವಾದಕ್ಕೆ ಹೆಚ್ಚು ಒಲಿದವರು. ಕಾಲ್ಪನಿಕ ಅಥವಾ ಮನರಂಜನೆಯಂತಹ ವಿಷಯ ಇಲ್ಲಿ ಪ್ರಧಾನವಾಯಿತು. ಅಭಿವ್ಯಕ್ತಿಯಲ್ಲಿ ಚಂಪೂ ಪ್ರೌಢರೀತಿಯೇ ಮುಂದುವರಿಯಿತು. ಈ ಹೊತ್ತಿಗೆ ಶಿವಶರಣ ವಚನಕಾರರ ಸಾಮಾಜಿಕ ಆಂದೋಲನ ಕಾಣಿಸಿಕೊಂಡಿದ್ದರೂ, ಅದರ ಪ್ರಭಾವ ಜೈನ ಕವಿಗಳ ಮೇಲೆ ಗಾಢವಾಗಿ ಆದಂತೆ ತೋರುವುದಿಲ್ಲ. ಆದರೆ ಈ ಕವಿಗಳು ದೇಸಿಯತ್ತ ಒಲವು ತೋರುವುದಕ್ಕೆ ಸ್ವಲ್ಪ ಮಟ್ಟಿಗೆ ಇದರ ಪ್ರಭಾವ ಆಗಿದ್ದಿರಬಹುದು.

ಪ್ರಾಚೀನ ಕನ್ನಡ ಸಾಹಿತ್ಯವೆಲ್ಲ ಹೆಚ್ಚು ಕಡಿಮೆ ಧರ್ಮದ ಮೂಲಕವೇ ವ್ಯಕ್ತವಾಗಿರುವಂಥದು. ಫಲವಾಗಿ ಧರ್ಮದ ನಿಯಂತ್ರಣದಲ್ಲಿ ಸೃಜನಶೀಲತೆ ಇರುವಂತಾಯಿತು. ಧರ್ಮ ಮತ್ತು ಸಾಹಿತ್ಯವನ್ನು ಈ ಬಗೆಯ ಸಂಬಂಧದ ಹಿನ್ನೆಲೆಯಲ್ಲಿ ನೋಡಿದಾಗ, ಹತ್ತನೆಯ ಶತಮಾನ ಮತ್ತು ತರುವಾಯದ ಪರಿಸ್ಥಿತಿ ಸ್ಪಷ್ಟವಾಗುತ್ತದೆ. ಹತ್ತನೆಯ ಶತಮಾನದಲ್ಲಿ ಸಂಘರ್ಷದೂರವಾದ ಧಾರ್ಮಿಕ ಪರಿಸ್ಥಿತಿ ಇತ್ತು. ಪಂಪಾದಿ ಕವಿಗಳ ಲೌಕಿಕ-ಆಗಮಿಕ ಕಾವ್ಯಮಾರ್ಗ ಹೆಚ್ಚು ಪ್ರಾಚುರ್ಯಕ್ಕೆ ಬಂದಿತು. ಪುರಾಣ ಕಥಾನಾಯಕನೊಡನೆ ಸಮಕಾಲೀನ ಆಶ್ರಯದಾತನ ಸಮೀಕರಣದತ್ತ ಒಲವು ಬೆಳೆಯಿತು. ಪರಿಣಾಮವಾಗಿ, ಧಾರ್ಮಿಕ ಹಿಡಿತದಿಂದ ಸೃಜನಶೀಲತೆಯನ್ನು ಪಾರುಮಾಡಿದ ದೃಶ್ಯವನ್ನು ಕಾಣುತ್ತೇವೆ. ಆದರೆ ಪರಿಸ್ಥಿತಿ ಹೀಗೆಯೇ ಮುಂದುವರಿಯಲಿಲ್ಲ. ಹತ್ತನೆಯ ಶತಮಾನದ ನಂತರ ಜೈನಧರ್ಮದ ಪ್ರಭಾವ ಇಳಿಮುಖವಾಯಿತು. ಜೈನ,ವೈದಿಕ, ಶೈವ, ವೀರಶೈವ ಧರ್ಮಗಳ ಪರಸ್ಪರ

ಮೇಲಾಟದಿಂದ ಸಂಘರ್ಷಸಹಿತವಾದ ಧಾರ್ಮಿಕ ಪರಿಸ್ಥಿತಿಯೊಂದು ಉದ್ಭವವಾಯಿತು. ಫಲವಾಗಿ ಲೌಕಿಕ-ಆಗಮಿಕ ಮಾರ್ಗವನ್ನು ಬಿಟ್ಟುಕೊಟ್ಟ ಕವಿಗಳು ತಮ್ಮ ಎರಡೂ ಕಾವ್ಯಗಳನ್ನು ಧಾರ್ಮಿಕ ಕೃತಿಗಳನ್ನಾಗಿ ಮಾಡಬೇಕಾದ ಒಂದು ಅನಿವಾರ್ಯ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಜೈನಧರ್ಮದ ಏಳಿಗೆಗಾಗಿ, ಅದರ ಪ್ರಸಾರಕ್ಕಾಗಿ ಕೃತಿ ರಚನೆಯ ಉದ್ದೇಶವನ್ನೇ ಅತ್ಯತಿರುಗಿಸಲು ಒಲವು ತೋರಿದ್ದು ವಿಶೇಷ. ನಾಗಚಂದ್ರ, ಬಂಧುವರ್ಮರಂಥವರು ಇದಕ್ಕೆ ಬದ್ಧರಾದರು. ಕವಿ ಮನೋಧರ್ಮ ಕಾಲಧರ್ಮದಲ್ಲಿ ತನ್ನ ಧರ್ಮವನ್ನೆ ಕಂಡುದು ಮಾತ್ರ ವಿಪರ್ಯಾಸದ ಸಂಗತಿ. ನಾಗಚಂದ್ರ ಮತ್ತು ಬಂಧುವರ್ಮರು ಸಾಮಾಜಿಕ ಬದ್ಧತೆಗಿಂತ ಧಾರ್ಮಿಕ ಬದ್ಧತೆಯನ್ನೇ ತಮ್ಮ ಕಾವ್ಯೋದ್ದೇಶವಾಗಿ ಸ್ವೀಕರಿಸಿದ್ದು ಒಂದು ಮಹತ್ವದ ಬದಲಾವಣೆಯೇ. ಆದರೆ ಇದರಿಂದ ಸೃಜನಶೀಲತೆಗೆ ಒಂದು ಮಿತಿ ಪ್ರಾಪ್ತವಾಯಿತೆಂದೇ ಹೇಳಬೇಕು. ಬಂಧುವರ್ಮ ಸ್ವಲ್ಪಮಟ್ಟಿಗೆ ಲೌಕಿಕದತ್ತ ಚಲಿಸಿದಂತೆ ಕಂಡರೂ ಚೌಕಟ್ಟು ಮಾತ್ರ ಅದೇ ಎಂಬುದು ಸ್ಪಷ್ಟವಿದೆ.

ಈ ಪರಿಶೀಲನೆಯಿಂದ ನಾಗಚಂದ್ರ ಮತ್ತು ಬಂಧುವರ್ಮರನ್ನು ಒಟ್ಟಿಗೆ ಗಮನಿಸುವುದು ಉಚಿತವೆಂದಂತಾಯಿತು. ಇಬ್ಬರದೂ ಧಾರ್ಮಿಕ ದೃಷ್ಟಿ ಕೇಂದ್ರ. ಇಬ್ಬರೂ ರಾಮಾಯಣ ಮಹಾಭಾರತಗಳ ವಸ್ತುವನ್ನು ಆಯ್ಕೆ ಮಾಡಿಕೊಂಡದ್ದಕ್ಕೆ,ಜನಪ್ರಿಯ ಕಥೆಗಳ ಮೂಲಕ ಧರ್ಮ ಪ್ರಸಾರ ಸುಲಭ ಎಂಬ ಕಲ್ಪನೆ ಕಾರಣವಾಗಿತ್ತು. ಈ ವಿಷಯದಲ್ಲಿ ಜೈನಪರಂಪರೆಯ ಕಥಾನುಸರಣೆಯನ್ನೆ ಇಬ್ಬರೂ ಅನುಸರಿಸಿದರು. ನಾಗಚಂದ್ರ ರಾಮನನ್ನು ಜಿನಸಮರ್ಥನಾಗಿ ನಿರ್ವಹಿಸಿ ಕಾರ್ಯ ಸಾಧನೆಮಾಡಿದರೆ, ಬಂಧುವರ್ಮ ಶ್ರೀಕೃಷ್ಣ ಮತ್ತು ನೇಮಿನಾಥರನ್ನು ಹೋಲಿಸುವುದರ ಮೂಲಕ ಅದೇ ಪರಿಣಾಮವನ್ನು ಉಂಟುಮಾಡಿದನು. ಧಾರ್ಮಿಕ ಶ್ರದ್ಧೆ ಮತ್ತು ಕಲಾತ್ಮಕ ಅಭಿವ್ಯಕ್ತಿಗಳು ಒಟ್ಟಿಗೆ ದುಡಿಯುವುದನ್ನು ನೋಡುತ್ತೇವೆ. ಆದರೆ ಕಲಾತ್ಮಕತೆ ಅಂತಿಮವಾಗಿ ಅದರ ಧಾರ್ಮಿಕತೆಗೆ ಶರಣಾಗಿದೆಯೆಂದೇ ಹೇಳಬೇಕು. ಹೀಗಾಗಿ, ಈ ಇಬ್ಬರು ಕವಿಗಳ ಸೃಜನಶೀಲತೆ ಪೂರ್ಣಪ್ರಮಾಣದಲ್ಲಿ ಅಭಿವ್ಯಕ್ತಿಪಡೆಯದೆ ಹೋಗಿದೆ.

೨

ಬಂಧುವರ್ಮನ ವ್ಯಕ್ತಿತ್ವ ಮತ್ತು ಸಾಹಿತ್ಯಕ್ಕೆ ಈಗ ಬರೋಣ. ಬಂಧುವರ್ಮ ಹರಿವಂಶಾಭ್ಯುದಯ, ಜೀವಸಂಬೋಧನೆ ಮತ್ತು ಸತಿ ಧರ್ಮಸಾರ ಎಂಬ ಮೂರು ಕೃತಿಗಳನ್ನು ರಚಿಸಿದ್ದಾನೆ. ಮೊದಲ ಎರಡು ಕೃತಿಗಳು ಚಂಪೂಕೃತಿಗಳಾಗಿವೆ; ಕಡೆಯದು ಕಂದಪದ್ಯದಲ್ಲಿದೆ. ಹರಿವಂಶಾಭ್ಯುದಯ ಇಪ್ಪತ್ತೆರಡನೇ ತೀರ್ಥಂಕರ ನೇಮಿನಾಥನ ಮೇಲೆ ಕೇಂದ್ರೀಕೃತವಾದುದು; ಜೈನ ತತ್ತ್ವದ ಹನ್ನೆರಡು ಅನುಪ್ರೇಕ್ಷೆಗಳನ್ನು ಹೇಳಲು ಹೊರಟದ್ದು ಜೀವ ಸಂಬೋಧನೆ, ಶ್ರಾವಕಿಯರ ಆಚಾರ ವಿಚಾರವನ್ನು ಆಧರಿಸಿದ್ದು ಸತಿಧರ್ಮಸಾರ. ಬಂಧುವರ್ಮನ ಸಹಜಪ್ರತಿಭೆಯ ವಿಕಾಸಕ್ಕೆ ಮೊದಲ ಎರಡು ಕೃತಿಗಳು ಸ್ಪಷ್ಟ ಸಾಕ್ಷಿಯಾಗಿವೆ.

ಬಂಧುವರ್ಮ ಸಾಮಾನ್ಯರ ಕವಿಯೆಂದೂ, ಅವನದು ಆದರ್ಶಗಳಿಗೆ ಅಂಟಿಕೊಂಡ ವ್ಯಕ್ತಿತ್ವ

ಎಂದೂ ಕೀರ್ತಿಸಲಾಗಿದೆ. ಬಂಧುವರ್ಮನ ವೈಯಕ್ತಿಕ ಮತ್ತು ಸಾಹಿತ್ಯಿಕ ಸಾಧನೆಗಳನ್ನು ಕುರಿತು ವಿದ್ವಾಂಸರು ಶ್ಲಾಘಿಸಿದ್ದಾರೆ. ಬಂಧುವರ್ಮ ಮೊದಲು ಕವಿ, ಅನಂತರ ಸೈದ್ಧಾಂತಿಕ ಎಂಬುದು ಹಂಪನಾ ಅವರ ಅಭಿಪ್ರಾಯ.[1] ಬಂಧುವರ್ಮ ಉತ್ತಮ ಕವಿ ಎಂಬುದಕ್ಕೆ ಅವನ ಕಾವ್ಯಗಳಲ್ಲಿ ಸಾಕಷ್ಟು ಪುರಾವೆಗಳಿವೆ. ಹಾಗೆಯೇ ಜೈನಧರ್ಮ ಮತ್ತು ಸಿದ್ಧಾಂತಗಳಿಗೆ ಸಂಬಂಧಿಸಿದ ವಿಚಾರಗಳೂ ಬೀಡುಬಿಟ್ಟಿವೆ. ಎಷ್ಟೋ ಸಂದರ್ಭಗಳಲ್ಲಿ ಅವನ ಕಾವ್ಯಗುಣವನ್ನು ಇವು ಮುಸುಕಿವೆ. ಕಾವ್ಯದಲ್ಲಿನ ಧರ್ಮಪರವಾದ ವಿಷಯಗಳನ್ನು ನೋಡಿದರೆ, ಕವಿಯ ಎತ್ತರವಾದ ಬದುಕನ್ನು ಸ್ಪರ್ಶಿಸಿದಂತಾಗುತ್ತದೆ. 'ಬಂಧುವರ್ಮ ಭಾವ ಜೀವಿ ಹೇಗೋ ಹಾಗೆಯೇ ಭವ್ಯ ಜೀವಿಯೂ ಅಹುದು. ಈತನ ಮನಸ್ಸು ಸಂಸಾರದ ಅಸಾರತೆಯನ್ನು ಅರಿತಿದೆ; ಧರ್ಮ ಮಾರ್ಗದಿಂದ ಮುಕ್ತವಾಗುವ ಮಾರ್ಗವನ್ನು ಅರಸಿದೆ.'[2] ಸಣ್ಣಯ್ಯನವರ ಈ ಹೇಳಿಕೆ ಬಂಧುವರ್ಮನ ವ್ಯಕ್ತಿತ್ವವನ್ನು ಸರಿಯಾಗಿಯೇ ಗ್ರಹಿಸಿದೆ.

ಬಂಧುವರ್ಮ ವರ್ಣನೆಗಳಿಗೆ ಪ್ರಸಿದ್ಧನೇ ಆಗಿದ್ದಾನೆ. ಈ ವರ್ಣನೆಗಳಲ್ಲಿ ನಮ್ಮ ಗಮನ ಸೆಳೆವ ಮುಖ್ಯ ವಿಚಾರವೆಂದರೆ, ಒಕ್ಕಲುತನದ ವರ್ಣನೆ. ಹೊಲ, ಬೆಳೆಗಳಿಗೆ ಸಂಬಂಧಿಸಿದ ಅನೇಕ ವರ್ಣನೆಗಳೂ ಉಪಮಾನಗಳೂ ಬಂದಿವೆ. ಕವಿಯ ಆ ಬಗೆಗಿನ ಅನುಭವಕ್ಕೆ ಇವು ನಿದರ್ಶನವಾಗಬಲ್ಲವು. ಅವನ ವ್ಯಕ್ತಿತ್ವದ ಸ್ವಲ್ಪಭಾಗ ಇಂತಹ ಅನುಭವದಿಂದ ಪುಷ್ಟಿಗೊಂಡಿರಲು ಸಾಧ್ಯ. ಇದರಿಂದಲೇ ಈ ಕವಿಯ ಒಕ್ಕಲುಮನೆತನದಿಂದ ಬಂದವ ನಿರಬೇಕೆಂದು[3] ಅಭಿಪ್ರಾಯಪಡುವುದು ಸಾಧ್ಯವಾಗುತ್ತದೆಯೆ? ಹಾಗೆಯೇ ಅವನ ಕಾವ್ಯಗಳಲ್ಲಿ ವೈದ್ಯಕುರಿತ ನಿದರ್ಶನಗಳೂ ಉಪಮಾನರೂಪಗಳಲ್ಲಿ ಕಂಡುಬಂದಿವೆ. ಇಷ್ಟರಿಂದಲೇ ಬಂಧುವರ್ಮನು ಅಲ್ಪಸ್ವಲ್ಪ ವೈದ್ಯವೃತ್ತಿಯನ್ನು ಮಾಡುತ್ತಿದ್ದಿರಬೇಕು, ಇಲ್ಲವೆ ವೈದ್ಯ ಮನೆತನದವನಾಗಿದ್ದು ಅದರಲ್ಲಿ ಕೆಲವು ವಿಷಯಗಳನ್ನು ತಿಳಿದವನಾಗಿರಬೇಕು[4] ಎಂದು ಹೇಳುವುದು ಕಷ್ಟವೆನಿಸುತ್ತದೆ. ಏಕೆಂದರೆ, ಇಂತಹ ಅನುಭವ ಅವನ ಸಾಮಾನ್ಯ ಜ್ಞಾನಕ್ಕೆ ಸಂಬಂಧಿಸಿರಬೇಕು. ಆದರೂ ಇಂತಹ ಪರಿಶೀಲನೆಗಳು ಕವಿಯ ವ್ಯಕ್ತಿತ್ವದ ವಿಭಿನ್ನಮುಖಗಳನ್ನು ಅರ್ಥಮಾಡಿಕೊಡುವಲ್ಲಿ ನೆರವಾಗುತ್ತವೆ.

ಬಂಧುವರ್ಮನ ವೈಯಕ್ತಿಕ ವಿಚಾರಗಳ ಬಗೆಗೆ ಆಂತರಿಕ ಆಧಾರಗಳು ದೊರೆಯುವುದು ಬಹಳ ಕಡಿಮೆ. ಜೀವ ಸಂಬೋಧನೆ ಕೃತಿಯ ಅಂತ್ಯದಲ್ಲಿ ನುತ ವೈಶ್ಯೋತ್ತಮ ಬಂಧುವರ್ಮ ರಚಿತಂ' ಎಂಬ ಮಾತು ಬಂದಿದೆ. 'ವೈಶ್ಯೋತ್ತಮ' ಎಂಬುದಕ್ಕೆ 'ನುತ ವಂಶೋತ್ತಮ' ಮತ್ತು 'ಮನುವಂಶೋತ್ತಮ' ಎಂಬ ಪಾಠಗಳಿವೆ. ಕವಿ ವೈಶ್ಯಕುಲದವನು ಎಂಬುದು ಸ್ಪಷ್ಟ; ಮನುವಂಶೋತ್ತಮ ಎಂಬ ಪಾಠ ಸರಿಯಲ್ಲ. ಕವಿಯ ಕಾಲವನ್ನು ಬಾಹ್ಯಾಧಾರದ

---

1. ಡಾ. ಹಂಪ. ನಾಗರಾಜಯ್ಯ, ಕವಿ ಬಂಧುವರ್ಮ : ಜಿಜ್ಞಾಸೆ, ಪು ೧೦೭
2. ಬಿ.ಎಸ್. ಸಣ್ಣಯ್ಯ, ಬಂಧುವರ್ಮ ಪು.೯
3. ಅದೇ. ಪು. ೬೦
4. ಅದೇ, ಪು. ೬೧

ಮೂಲಕವೇ ನಿರ್ಧರಿಸಬೇಕಾಗುತ್ತದೆ. ಬಂಧುವರ್ಮನನ್ನು ಆ ಮೇಲಿನ ಹಲವು ಕವಿಗಳು ನೆನೆದಿದ್ದಾರೆ. ಕ್ರಿ.ಶ. ೧೧೫೫ರ ಬ್ರಹ್ಮಶಿವ 'ಜೀವಸಂಬೋಧನೆ' ಕುರಿತಂತೆ ಪ್ರಶಂಸಾತ್ಮಕ ಮಾತುಗಳನ್ನು ಆಡಿದ್ದಾನೆ. ಮಾನವ ಸಮುದಾಯವನ್ನು ಮುಕ್ತಿ ಮಾರ್ಗದಲ್ಲಿ ನಿಲ್ಲಿಸುವ ಹಿರಿಮೆ ಬಂಧುವರ್ಮನದಂತೆ; ಸಮಸ್ತ ದುಃಖಕ್ಕೂ ಆಗರವಾದ ರೋಗಕ್ಕೆ ಜೀವಸಂಬೋಧನೆ ಸದ್ವೈದ್ಯವಂತೆ. ಬ್ರಹ್ಮಶಿವನ ಈ ಪ್ರಶಸ್ತಿ ವಾಚನದಲ್ಲಿ ಬಂಧುವರ್ಮನ ಮಹತ್ವವನ್ನು ಗುರುತಿಸಲು ಯತ್ನಿಸಲಾಗಿದೆ. ಕ್ರಿ.ಶ. ೧೨೩೫ ರಲ್ಲಿದ್ದ ಕಮಲಭವ ತನ್ನ ಶಾಂತೀಶ್ವರ ಪುರಾಣದಲ್ಲಿ 'ಸಂದ ಬಂಧುವರ್ಮನ' ಎಂದು ಹೇಳುವುದರ ಮೂಲಕ ಕವಿಯನ್ನು ಉಲ್ಲೇಖಿಸಿದ್ದಾನೆ. ಕ್ರಿ.ಶ. ೧೩೩೧ರ ನಾಗರಾಜನೆಂಬ ಕವಿ 'ಪುಣ್ಯಾಸ್ರವ ಚಂಪೂ' ಎಂಬ ಕೃತಿಯಲ್ಲಿ ಬಂಧುವರ್ಮನ ಜಾಣ್ನುಡಿಯನ್ನು ಕುರಿತು ಪ್ರಸ್ತಾಪಿಸಿದ್ದಾನೆ. ಮೂರನೆಯ ಮಂಗರಸ (೧೫೦೮) ಶ್ರೀಪಾಲ ಚರಿತೆಯಲ್ಲಿ ಬಂಧುವರ್ಮನನ್ನು ನೆನೆದವನು; 'ನೇಮಿಜಿನೇಶಸಂಗತಿ'ಯಲ್ಲಿ ಮಾತ್ರ ಕವಿಯನ್ನೂ ಅವನ ಹರಿವಂಶಾಭ್ಯುದಯವನ್ನೂ ಕುರಿತು 'ಬಂಧುರ ಭರತಯಾದವ ವಂಶವನು ಕೃತಿ ಬಂಧದೊಳಗೆ ಸೇರಿಸಿದ ಬಂಧುವರ್ಮನನು ನೆನೆದು' ಎಂದಿದ್ದಾನೆ. ದೊಡ್ಡಯ್ಯನ (೧೬೦೦) 'ಚಂದ್ರ ಪ್ರಭಚರಿತೆ'ಯಲ್ಲಿ 'ಭರತಯಾದವ ವಂಶಾಳಿಯ ಕೃತಿಯೊಳು ವಿರಚಿಸಿ ಬಲುಕೀರ್ತಿಪಡೆದ ವರಕವಿ ಬಂಧುವರ್ಮನ ನೆನೆದು' ಎಂಬ ಹೇಳಿಕೆಯಿದೆ.

ಹೀಗೆ ನೆನೆದಿರುವ ಕವಿಗಳಲ್ಲಿ ಬ್ರಹ್ಮಶಿವನೇ ಮೊದಲಿಗನಾದುದರಿಂದ ಅವನ ಕಾಲವನ್ನು ಈಚಿನ ಗಡಿಯೆಂದೂ, ಹಾಗೆಯೇ 'ಹರಿವಂಶಾಭ್ಯುದಯದ' ಮೇಲೆ ಕರ್ಣಪಾರ್ಯನ ಪ್ರಭಾವವಿರುವುದರಿಂದ ಅವನ ಕಾಲ (೧೧೬೦)ವನ್ನು ಆಚಿನಗಡಿಯೆಂದೂ ಗುರುತಿಸಬಹುದು. ಇದೆಲ್ಲವನ್ನೂ ಪರಿಶೀಲಿಸಿದ ಹಂಪನಾರವರು, ಬಂಧುವರ್ಮ ೧೧೬೦ ರಿಂದ ೧೧೭೫ರ ನಡುವೆ ಇದ್ದಿರಬೇಕೆಂಬ ಅಭಿಪ್ರಾಯಕ್ಕೆ ಬರುತ್ತಾರೆ.[5] ಅವರೇ ಹರಿವಂಶಾಭ್ಯುದಯದಲ್ಲಿನ ಕೊಲ್ಲಾಪುರದೊಳ್ ಚಂದ್ರಾವತಿಯುಂ. ಎಂಬ ಮಾತಿನ ಕಡೆಗೆ ಗಮನ ಸೆಳೆದಿದ್ದಾರೆ. ಇವರ ಆಧಾರದ ಮೇಲೆ ನಿಂಬದೇವಸಾಮಂತನ ಕಿರಿಯ ಸಮಕಾಲೀನನಾಗಿ ಕೊಲ್ಲಾಪುರದ ಪರಿಸರದಲ್ಲಿ ಜೀವಿಸಿರಬೇಕೆಂಬ ನಿರ್ಧಾರಕ್ಕೆ ಅವರು ಬರುತ್ತಾರೆ. ಇದು ವಿಚಾರಣೀಯ ಅಂಶವೇ ಸರಿ. ಇವರ ಮೇಲೆ ಬಂಧುವರ್ಮನ ಕಾಲವನ್ನು ೧೧೩೦ ರಿಂದ ೧೧೭೫ರ ನಡುವೆ ನಿಲ್ಲಿಸಲು ಅವರು ಪ್ರಯತ್ನಿಸುತ್ತಾರೆ.[6] ಅವರೇ ಸೂಚಿಸಿದ ಮೊದಲಿನ ಕಾಲಕ್ಕೂ ಇದಕ್ಕೂ ಅಂತಹ ವ್ಯತ್ಯಾಸವೇನೂ ಕಂಡುಬರುವುದಿಲ್ಲ.

ಬಂಧುವರ್ಮನ ಕಾವ್ಯಾಭಿವ್ಯಕ್ತಿ ಮಾರ್ಗ ಮತ್ತು ದೇಸಿಗಳ ಸಮಾವೇಶದಿಂದಾದುದು ಎಂಬುದರಲ್ಲಿ ಸಂಶಯವಿಲ್ಲ. ಕನ್ನಡ ಭಾಷೆಯ ಬದಲಾದ ಸ್ಥಿತಿಯನ್ನು ಅವನ ಕಾವ್ಯಗಳು ತಕ್ಕಮಟ್ಟಿಗಾದರೂ ನೀಡುತ್ತವೆ. ಈ ಕಾಲದ (೧೨ನೇ ಶ.ದ) ಚಂಪೂಕಾರರ ಶೈಲಿಯೆಲ್ಲವೂ

---

5. ಕವಿ ಬಂಧುವರ್ಮ : ಜಿಜ್ಞಾಸೆ, ಪು. ೭

6. ಅದೇ ಪು. ೧೦

ಬಹುಶಃ ಒಂದೇ ಅಚ್ಚಿನಿಂದ ಹೊರಬಂದವು. ಇದಕ್ಕೆ ಬಂಧುವರ್ಮನ ಕಾವ್ಯಗಳು ಹೊರತು ಎಂದು ಹೇಳಬಹುದು[7] ಎಂಬ ಶಾಮರಾಯರ ಹೇಳಿಕೆ ಅತಿಶಯೋಕ್ತಿಯಲ್ಲ. ಅಂದಮಾತ್ರಕ್ಕೆ ಬಂಧುವರ್ಮನ ಭಾಷಾ ಶೈಲಿಯನ್ನು ಸರಳ ಸುಲಭ ಎಂದು ಭಾವಿಸಬೇಕಾದ್ದಿಲ್ಲ. ಪ್ರಗಲ್ಭಪಾಂಡಿತ್ಯಕ್ಕೆ ತೆಕ್ಕೆ ಹಾಕಿಕೊಂಡ ಪಾರದರ್ಶಕ ಪ್ರತಿಭೆ[8] ಬಂಧುವರ್ಮನದು ಎಂಬುದು ಹಂಪನಾ ಅವರ ಒಂದು ಅಭಿಪ್ರಾಯ. ಅವನ ಪಾಂಡಿತ್ಯದ ವಿಷಯದಲ್ಲಿ ಎರಡುಮಾತಿಲ್ಲ; ಆದರೆ ಪಾರದರ್ಶಕ ಪ್ರತಿಭೆ ಎನ್ನುವುದು ಹೆಚ್ಚಾಯಿತೇನೊ ಎಂದೆನಿಸುತ್ತದೆ. ಬಂಧುವರ್ಮ ಸಮರ್ಥಕವಿಯಾದರೂ, ಅವನ ಕಾವ್ಯಗಳು ಮಹಾಕಾವ್ಯದ ಸೃಜನಶೀಲತೆಯ ಮಟ್ಟದವುಗಳಲ್ಲ ಎಂಬುದನ್ನು ಒಪ್ಪಬೇಕು. ಈ ಎರಡು ಚಂಪೂಕಾವ್ಯ ರಚನೆಯಲ್ಲಿ ವ್ಯಕ್ತವಾಗುವ ಒಟ್ಟು ಸತ್ವ, ಸಾಧನೆ ಮತ್ತು ವ್ಯಕ್ತಿತ್ವದ ಔನ್ನತ್ಯ ದೃಷ್ಟಿಯಿಂದ ಬಂಧುವರ್ಮಕವಿ ನಿಶ್ಚಯವಾಗಿಯೂ ಪಂಪನಿಗೆ ದ್ವಿತೀಯನಾಗಿ ತೋರುತ್ತಾನೆ''- ಈ ಮಾತು ಹಂಪನಾ ಅವರದು.[9] ಆದರೆ ಪಂಪಸಮಾನ ಪ್ರತಿಭೆ ಬಂಧುವರ್ಮನದಲ್ಲ. ಕಥನ ಸಾಮರ್ಥ್ಯ ಬಂಧುವರ್ಮನಿಗೆ ನಿಶ್ಚಯವಾಗಿಯೂ ಇದೆ, ಅದು ದೊಡ್ಡದು ಕೂಡ; ಆದರೆ ಕಲಾಸಾಮರ್ಥ್ಯ ಪಂಪನೊಡನೆ ಹೋಲಿಸುವಂಥದಲ್ಲ. ಇಷ್ಟಾದರೂ, ತನ್ನ ಸೃಜನ ಸಾಮರ್ಥ್ಯದ ಮೇಲ್ಮೆಯನ್ನು ಬಂಧುವರ್ಮ ಕವಿ ಹಲವು ಕಡೆಗಳಲ್ಲಿ ಸ್ಥಿರವಾಗಿ ಸ್ಥಾಪಿಸಿದ್ದಾನೆ[10] ಎಂಬ ಅವರ ಮಾತಿನಲ್ಲಿ ಸತ್ಯವಿದೆ.

## ೩

ಹರಿವಂಶಾಭ್ಯುದಯ ಒಂದು ವಿಲಕ್ಷಣದ, ಸಂಕೀರ್ಣಸ್ವರೂಪದ ಕೃತಿ. ಹರಿವಂಶ, ಕುರುವಂಶ ಮತ್ತು ನೇಮಿನಾಥನ ಕಥೆಯನ್ನು ಸೇರಿಸಿ ಹೇಳಿರುವುದರಿಂದಲೇ ಸಾಕಷ್ಟು ಗೊಂದಲಕ್ಕೆ ಕಾರಣವಾಗಿದೆ. ಜೊತೆಗೆ, ಅನೇಕ ಭವಾವಳಿಗಳು ಮತ್ತು ಜೈನಧರ್ಮದ ಅಭಿನಿವೇಶದಿಂದ ಜಟಿಲವಾಗಿದೆ ಕೂಡ. ಪ್ರಧಾನ ಪಾತ್ರಗಳಿಗೆ ಭವಾವಳಿ ಇಲ್ಲವೆಂದು ಹೇಳಬೇಕು. ಹಾಗೆ ನೋಡಿದರೆ ಉಪಪಾತ್ರಗಳಲ್ಲಿಯೇ ಇದು ಹೆಚ್ಚು. ಕಾವ್ಯದ ಕೆಲವು ಮುಖ್ಯ ಸಮಸ್ಯೆಗಳ ಕಡೆಗೆ ಬರಬಹುದು.

ಹರಿವಂಶದ ಕಥೆ ಹೇಳಲು ಹೊರಟ ಕವಿ ಕಾವ್ಯದ ಆರಂಭದಲ್ಲಿಯೇ ಕೃಷ್ಣನನ್ನು ಅರ್ಧ ಚಕ್ರವರ್ತಿ ಎಂದು ಕರೆಯುವುದರಲ್ಲಿ ಔಚಿತ್ಯವೇನು ? ಹೀಗೆಯೇ ವಿಷ್ಣುವಂ ಸರ್ವಜ್ಞಂ ಸರ್ವವ್ಯಾಪಿ ಭುವನಕ್ರಮ ಪತಿಯೆಂದು ಲೋಕಂ ತಾಮೆ ಕೊಂಡಾಡುವುದೆತ್ತ? ಆತಂ ಅರ್ಜುನಂಗೆ ರಥಮನೆಸಗಿದನೆಂಬುದೆತ್ತ ಎಂದು ಕೇಳುವುದು ವಿಪರ್ಯಾಸ. ಕೃಷ್ಣನನ್ನು

---

7. ತ.ಸು. ಶಾಮರಾಯ, ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ, ಪು. ೨೫೫

8. ಕವಿ ಬಂಧುವರ್ಮ : ಜಿಜ್ಞಾಸೆ, ಪು. ೨೦

9. ಅದೇ, ಪು. ೧೨

10. ಅದೇ ಪು. ೧೨

ಮಾನವಸ್ವರೂಪದಲ್ಲಿ ಕಾಣಲು ಪ್ರಯತ್ನಿಸುವ ಕವಿಯು ದೃಷ್ಟಿಯ ಅರ್ಥವಾಗುವಂಥದು. ಆದರೆ ತನ್ನ ಕಾವ್ಯದ ಮುಖ್ಯವಸ್ತುವಿನ ಕೇಂದ್ರವಾದ ಕೃಷ್ಣನ ಪಾತ್ರಕ್ಕೆ ಉತ್ತಮ ದೃಷ್ಟಿಯನ್ನು ಕೊಡುವುದಲ್ಲವೆನಿಸುತ್ತದೆ.

ಕಾವ್ಯದ ಆರಂಭದ ಆಶ್ವಾಸಗಳಲ್ಲಿ ವರ್ಣಿತವಾಗಿರುವ ವಸುದೇವನ ಪ್ರಕರಣ ಅಷ್ಟೊಂದು ದೀರ್ಘವಾಗಿರಬೇಕಿತ್ತೆ? ಕಾವ್ಯದ ಮುಂದಿನ ಉದ್ದೇಶವನ್ನು ನೋಡಿದರೆ ಈ ಹಿನ್ನೆಲೆಯ ಅಗತ್ಯವಾದರೂ ಏನು? ವಸುದೇವನ ಪ್ರಕರಣವೆಂದರೆ ಮನ್ಮಥ ವಿಜಯವೆಂದೇ ಅರ್ಥ. ಪರ್ಯಟನೆಯ ಕಾಲದಲ್ಲಿ ಅನೇಕ ಸ್ತ್ರೀಯರನ್ನು ಮದುವೆಯಾಗುವುದು ಅವರೊಡನೆ ಕಳೆದ ಕಾಲದ ಶೃಂಗಾರವನ್ನು ವರ್ಣಿಸುವುದು ಇದರ ವಸ್ತು. ಹರಿವಂಶದ ಮೂಲಪುರುಷ ಎಂಬ ಎಳೆಯನ್ನು ಬಿಟ್ಟರೆ, ಉಳಿದುದನ್ನು ಆಕಾರಣಕ್ಕಾಗಿಯೇ ಸಹಿಸಿಕೊಳ್ಳಬೇಕೆ? ಯೋಚಿಸುವುದು ಅನಿವಾರ್ಯ

ಇದಕ್ಕೆ ಒತ್ತಿಕೊಂಡೇ ಬರುವ ಚಾರುದತ್ತನ ಪ್ರಸಂಗ ಔಚಿತ್ಯದ ಪ್ರಶ್ನೆಯನ್ನು ಮತ್ತಷ್ಟು ಎತ್ತುವುದು-ಮಾನವ ಸ್ವಭಾವದ ವಿಚಿತ್ರ ಪ್ರವೃತ್ತಿಯ ಮೇಲೆ ಬೆಳಕು ಚೆಲ್ಲುವ ರಮ್ಯ ಪ್ರಸಂಗ ಇದಾಗಿದ್ದರೂ ಕೂಡ. ಪೂರ್ವಾರ್ಧ ಅವನ ವಿಲಾಸೀ ಜೀವನದ ಕಥೆ, ಉತ್ತರಾರ್ಧ ಉದ್ಧಾರ ಜೀವನದ ಕಥೆ. ಪ್ರತ್ಯೇಕ ಅಸ್ತಿತ್ವವಿರುವ ಇದು ಒಂದು ಪುಟ್ಟಕಾವ್ಯದ ಸ್ವರೂಪವನ್ನೆ ಪಡೆದುಕೊಂಡಬಿಡುವುದು. ಆದರೆ ಇಡೀಕಾವ್ಯದ ಕಥಾಪ್ರವಾಹಕ್ಕೆ, ಕ್ರಿಯೆಗೆ ಅಡ್ಡಿಪಡಿಸುವುದಲ್ಲದೆ, ಕಾವ್ಯದಿಂದ ಹೊರಚಾಚಿಕೊಳ್ಳುತ್ತದೆ. ಕಥೆಯೊಡನೆ ಅದು ಉಂಟು ಮಾಡುವ ಒಂದೇ ಒಂದು ಎಳೆಯೆಂದರೆ, ಚಾರುದತ್ತನ ಮಗಳನ್ನು ವಸುದೇವ ಮದುವೆಯಾದ ಎಂಬುದು ಕಥಾಸಂವಿಧಾನದಲ್ಲಿ ಬಿರುಕುಂಟುಮಾಡಿದರೂ, ಉತ್ತಮ ಸನ್ನಿವೇಶವಾಗಿ ಮುಖ್ಯವಾಗುತ್ತದೆ.

ಕಾವ್ಯದಲ್ಲಿ ಕಂಸನ ಭವಾಂತರ ಮತ್ತು ಕಂಸವಿಧ್ವಂಸನ ಪ್ರಕರಣಗಳು ವಿಶೇಷ ಉಲ್ಲೇಖಕ್ಕೆ ಅರ್ಹವಾದವು. ಇದರ ವಿವರಗಳು ಹೆಚ್ಚು ಕಡಿಮೆ ವೈದಿಕ ಮೂಲದಂತೆಯೇ ಇವೆ. ಆದರೆ ಕಂಸ ಮತ್ತು ಉಗ್ರಸೇನರ ನಡುವೆ ಇರುವ ವೈಮನಸ್ಸಿಗೆ ಕೊಡಲಾಗಿರುವ ಪೂರ್ವ ಭವದ ಕಾರಣ ಎದೆ ನಡುಗಿಸುವಂಥದು. ಇದೇ ರೀತಿಯಲ್ಲಿಯೇ ವೈದಿಕ ಮೂಲದ ರೋಚಕ ಕಥೆಯೊಂದಿದೆ. ಕಂಸ ಮತ್ತು ವಸುದೇವರ, ಕಂಸ ಮತ್ತು ಕೃಷ್ಣರ ಸಂಬಂಧಗಳ ಚಿತ್ರಣ ಚೆನ್ನಾಗಿ ನಿರೂಪಿತವಾಗಿವೆ. ಕೃಷ್ಣನ ಬಾಲಲೀಲೆಯ ಪ್ರಸಂಗಗಳು ನೋಡುವಂಥವು. ಕಂಸನ ಹೆಂಡತಿ ಜೀವಂಜಸೆಯ ಸೇಡುತೀರಿಸಿಕೊಳ್ಳುವ ಕಾರಣವಾಗಿ ನಡೆಯುವ ಜರಾಸಂಧ ಮತ್ತು ಕೃಷ್ಣರ ನಡುವಣ ಯುದ್ಧ ಒಂದು ಆಸಕ್ತ ವಿಷಯ. ಹರಿವಂಶವನ್ನು ರಕ್ಷಿಸುವ ನೆಪದಲ್ಲಿ ಕುಲದೇವತೆಯ ಪ್ರವೇಶ ಮತ್ತು ಹರಿವಂಶಜರೆಲ್ಲ ಸತ್ತರೆಂಬ ಸುದ್ದಿಯ ಸೃಷ್ಟಿಗಳು ಕ್ರಿಯೆಯನ್ನು ಮುಂದೂಡುವ ತಂತ್ರ ಮಾತ್ರ.

ಕೃಷ್ಣ-ಸತ್ಯಭಾಮೆ ಮತ್ತು ಕೃಷ್ಣ-ರುಕ್ಮಿಣಿಯರ ಪ್ರಸಂಗಗಳು ಕಾವ್ಯದ ಸೊಗಸನ್ನು ಮತ್ತಷ್ಟು ಹೆಚ್ಚಿಸಿವೆ. ರುಕ್ಮಿಣಿಯ ದೀರ್ಘವರ್ಣನೆ ಅವಳ ಪಾತ್ರವನ್ನು ಅಧಿಕಗೊಳಿಸಿದೆ. ರುಕ್ಮಿಣಿಯ ಕಾರಣಕ್ಕಾಗಿ ಶಿಶುಪಾಲನ ವಿರುದ್ಧ ಯುದ್ಧ ಹೂಡಬೇಕಾಗಿ ಬರುವುದು,

ಶಿಶುಪಾಲ ಕೃಷ್ಣನನ್ನು ಹೀಯಾಳಿಸುವುದು ಮತ್ತು ಶಿಶುಪಾಲನ ವಧೆ-ಎಲ್ಲವೂ ನಾಟಕೀಯ ತಿರುವು ಪಡೆಯುತ್ತಾ ಹಂತಹಂತ ಬೆಳೆಯುತ್ತವೆ. ಸತ್ಯಭಾಮೆ ಮೊದಲ ಹೆಂಡತಿಯಾದರೂ ರುಕ್ಮಿಣಿಗೆ ಮಹಾದೇವಿಪಟ್ಟ ದೊರೆಯುವಂತಾದುದು, ಸತ್ಯಭಾಮೆ ಮತ್ತು ರುಕ್ಮಿಣಿಯರ ಘರ್ಷಣೆ, ಅವರ ಮಕ್ಕಳಿಗೂ ಮುಂದುವರಿಯುವಂತಾದುದು ವಿಸ್ತೃತ ಹಾಗೂ ವಿಶಿಷ್ಟ ನಿರೂಪಣೆಯಾಗಿ ಕಾಣಿಸಿಕೊಂಡಿದೆ. ಈ ಎಲ್ಲ ಅಂಶಗಳೂ ವೈದಿಕ ಮೂಲದ ಸಾಮ್ಯವನ್ನು ಹೊಂದಿರುವಂಥವೇ, ಸಂದರ್ಭ ಅಥವಾ ಸನ್ನಿವೇಶಗಳು ಬೇರೆಯಾಗಬಹುದಷ್ಟೇ.

ಪ್ರದ್ಯುಮ್ನನ ಪ್ರಕರಣ ಪ್ರತ್ಯೇಕವಾಗಿ ಗಮನಿಸಬೇಕಾದ ಭಾಗ. ಪ್ರದ್ಯುಮ್ನ ಹುಟ್ಟಿದ ಕೂಡಲೆ ಅಪಹರಣಕ್ಕೆ ಒಳಗಾಗುವ ವಿಚಾರ ನಾಗಚಂದ್ರನ 'ಪ್ರಭಾಮಂಡಲ'ನ ಪ್ರಕರಣಕ್ಕೆ ಹೋಲಿಕೆಯಾಗಿದೆ. ಹಾಗೆಯೇ ಪ್ರದ್ಯುಮ್ನನ ಸಾಕುತಾಯಿ ಕಾಂಚನ ಮಾಲೆಯ ಪ್ರಸಂಗವೂ ಕಾವ್ಯದ ಮುಖ್ಯಭಾಗವಾಗಿದೆ. ಕಾಂಚನಮಾಲೆಯ ವಿರಹ ಮತ್ತು ಸಮಾಗಮ ಕಾತರ, ಪ್ರದ್ಯುಮ್ನಕಾಂಚನ ಮಾಲೆಯರ ನಡುವಣ ವಾದ ವಿವಾದ, ನಿರಾಶಳಾದ ಕಾಂಚನಮಾಲೆ ಪ್ರದ್ಯುಮ್ನನನ್ನು ಕೊಲ್ಲಿಸಲು ಯತ್ನಿಸುವುದು ಎಲ್ಲವೂ ವಿವರವಾಗಿ ವರ್ಣಿತವಾಗಿವೆ. ಈ ಪ್ರಸಂಗ ರತ್ನಾಜಿ ಮತ್ತು ಕುಮಾರರಾಮರ ಇಂಥದೇ ಪ್ರಸಂಗವನ್ನು ಹೋಲುವುದು. ನಂಜುಂಡಕವಿ ಬಂಧುವರ್ಮನಿಗಿಂತ ಈಚಿನವನು. ಇವರಿಬ್ಬರಿಗೂ ಮೂಲವಾದ ಕಥೆಯೊಂದಿರಬೇಕು. ಇಡೀ ಪ್ರಕರಣ ಕಾವ್ಯದ ಕಥನ ಪ್ರಕ್ರಿಯೆಯನ್ನು ಬೇರೆಡೆಗೆ ತಿರುಗಿಸಿದಂತೆ ಕಾಣುತ್ತದೆ.

ಸುಮಾರು ಮೂರು ಆಶ್ವಾಸಗಳಲ್ಲಿ (೧೦, ೧೧, ೧೨) ವರ್ಣಿತವಾಗಿರುವ ಕುರುವಂಶದ ಕಥೆ ಕಾವ್ಯದಲ್ಲಿ ಮಹತ್ವದ ಭಾಗ. ಮಹಾಭಾರತ ಕಥೆಯ ಸಂಕ್ಷಿಪ್ತಾವತಾರ ಇದು. ಮುಖ್ಯ ಘಟನೆಗಳೆಲ್ಲಾ, ಕುರುಕ್ಷೇತ್ರ ಯುದ್ಧವೂ ಸೇರಿದಂತೆ, ಇಲ್ಲಿ ಸಮಾವೇಶಗೊಂಡಿವೆ ಮತ್ತು ವಿಸ್ತೃತವಾಗಿ ಚಿತ್ರಿತವಾಗಿವೆ. ಆದರೆ ಅಂಬೆ-ಭೀಷ್ಮರ ಸಮಸ್ಯೆ, ವಿದುರ ದಾಸಿಪುತ್ರನಲ್ಲ ಎನ್ನುವುದು, ಪಾಂಡು ಶಾಪದಿಂದ ಸಾಯಲಿಲ್ಲ ಎನ್ನುವುದು, ದ್ರೌಪದಿಗೆ ಪಂಚಪತಿತ್ವ ಇಲ್ಲದಿರುವುದು ಇಲ್ಲಿನ ಮಾರ್ಪಾಡುಗಳಾಗಿವೆ. ಇವುಗಳ ಬಗ್ಗೆ ಕವಿ ನಿರಾಕರಣ ಧೋರಣೆಯನ್ನು ಅನುಸರಿಸಿದ್ದಾನೆ. ಇಲ್ಲಿ ಕುರುಕ್ಷೇತ್ರ ಯುದ್ಧ ನಡೆಯುವುದು ಕೌರವ ಪಾಂಡವರಿಗಲ್ಲ, ಯಾದವರು ಮತ್ತು ಜರಾಸಂಧನಿಗೆ. ಕೌರವ ಪಾಂಡವರು ಎರಡು ಕಡೆ ನಿಂತು ಕಾದುವುದರಿಂದ ಪರಿಣಾಮ ಭಾರತದ್ದೇ ಆಗಿದೆ. ಹೀಗಾಗಿ ಕುರುವಂಶದ ಕಥೆ ಒಂದು ಪೂರಕ ಕ್ರಿಯೆಯೇ ಹೊರತು, ಪ್ರಧಾನ ಪ್ರಕ್ರಿಯೆಅಲ್ಲ. ಆದ್ದರಿಂದ ಕುರುವಂಶಕ್ಕೆ ಇಲ್ಲಿ ಸ್ವತಂತ್ರವಾದ ವ್ಯಕ್ತಿತ್ವ ಎನ್ನುವುದು ಇಲ್ಲ. ಇದು ಒಂದು ಕಥೆಯಾಗಿ ಬಂದಿರುವುದೇ ಹೊರತು, ಅದರಿಂದ ವಿಶಿಷ್ಟ ಉದ್ದೇಶವನ್ನು ಹೊರಡಿಸಿದಂತೆ ಕಾಣುವುದಿಲ್ಲ.

'ಹರಿವಂಶಾಭ್ಯುದಯ'ದ ಮುಖ್ಯವಾಹಿನಿಗಳಲ್ಲಿ ನೇಮಿನಾಥನ ಚರಿತೆಯೂ ಒಂದು ಇದನ್ನು ಒಂಬತ್ತನೆಯ ಆಶ್ವಾಸದಲ್ಲಿ ಆರಂಭಿಸಿ, ಹದಿಮೂರು ಮತ್ತು ಹದಿನಾಲ್ಕನೇ ಆಶ್ವಾಸಗಳಲ್ಲಿ ಇತರ ಕಥೆಗಳೊಡನೆ ನಿರೂಪಿಸಿದ್ದಾನೆ. ಇತರ ಕಥೆಗಳ ಕೊಬ್ಬಿದ ವಿವರಗಳೊಡನೆ ಹೋಲಿಸಿದಾಗ ನೇಮಿನಾಥನ ಚರಿತೆ ಸೊರಗಿದಂತೆ ಕಾಣುತ್ತದೆ. ಆದರೆ ಪರಿಣಾಮದ ದೃಷ್ಟಿಯಿಂದ ನೋಡಿದರೆ ಬೇರೆಯ ಚಿತ್ರ ಲಭ್ಯ. ಇಲ್ಲಿ ಶ್ರೀಕೃಷ್ಣ ಮತ್ತು

ನೇಮಿನಾಥರನ್ನು ಮುಖಾಮುಖಿಯಾಗಿ ನಿಲ್ಲಿಸಿ, ನೇಮಿನಾಥನನ್ನು ಕೃಷ್ಣನಿಗಿಂತ ಮೇಲೆಂದು ಸಾಧಿಸುವ ಉದ್ದೇಶವನ್ನು ಕವಿ ಹೊಂದಿರುವಂತೆ ತೋರುತ್ತದೆ. ನೇಮಿನಾಥನನ್ನು ವಿರಕ್ತನನ್ನಾಗಿಸಲು ಕೃಷ್ಣ ಬಲರಾಮರು ಹೂಡಿದ ಉಪಾಯ ಹೀನಾಯ (ಮದುವೆ ಮಂಟಪಕ್ಕೆ ಪ್ರಾಣಿಗಳನ್ನು ಭೋಜನಕ್ಕೆಂದು ಕೂಡಿಡುವುದು)ವನ್ನು ಇದಕ್ಕಾಗಿಯೇ ತಂದಿರಬಹುದು. ಲೌಕಿಕ ಮತ್ತು ಅಲೌಕಿಕವನ್ನು ಎದುರುಬದರು ನಿಲ್ಲಿಸಿ ಅಲೌಕಿಕಕ್ಕೆ ಲೌಕಿಕ ಮಣಿಯುವಂತೆ ಮಾಡುವುದು ಕವಿಯ ನಿರ್ದಿಷ್ಟ ಉದ್ದೇಶ. ದ್ವಾರಾವತಿನಾಶ ಮತ್ತು ಕೃಷ್ಣ ನಿರ್ಯಾಣ ಕುರಿತ ನೇಮಿತೀರ್ಥಂಕರನ ಭವಿಷ್ಯ ಸೂಚನೆಯಲ್ಲೂ ಇದೇ ಧ್ವನಿಸುವುದು. ಯಾದವರು ಹೊಡೆದಾಡಿ ಸಾಯುವುದು ಹಾಗೂ ಕೃಷ್ಣ ಬಾಣಾಘಾತದಿಂದ ಮರಣ ಹೊಂದುವ ಸನ್ನಿವೇಶಗಳು ಮಹಾಭಾರತದ ಕಡೆಯ ಪರ್ವಗಳಲ್ಲಿ ವರ್ಣಿತವಾಗಿವೆ. ಕವಿ ಇವನ್ನು ಹೇಳಲು ಧೈರ್ಯ ಮಾಡಿದ್ದು ಸರಿಯೇ. ಮೂಲಭಾರತದ ಅಹಂಕಾರ ಒಡೆಯುವ ಕೃಷ್ಣನ ಪಾತ್ರವನ್ನು ಇಲ್ಲಿ ಸರಿಯಾಗಿ ನಿರ್ವಹಿಸಲಿಲ್ಲವೆಂದೇ ಹೇಳಬೇಕು. ಕೃಷ್ಣಪಾತ್ರದ ಉದ್ದೇಶಿತ ಕುಸಿತಕ್ಕೆ ಕವಿ ಸ್ಪಷ್ಟವಾಗಿ ಕಾರಣನಾಗಿದ್ದಾನೆ, ಅಥವಾ ಈ ಕಥಾ ಪರಂಪರೆ ಕಾರಣವಾಗಿದೆ. ವಾಸ್ತವವಾಗಿ ಕೃಷ್ಣ ಮತ್ತು ನೇಮಿನಾಥರನ್ನು ವಿರುದ್ಧ ಕಲ್ಪಿಸುವ ಅಗತ್ಯವೇ ಇರಲಿಲ್ಲ. ಕೃಷ್ಣನ ಶವಹೊತ್ತು ಬಲರಾಮ ಅಲೆಯುವ ಪ್ರಸಂಗದ ಮೇಲೆ ನಾಗಚಂದ್ರನ ಲಕ್ಷ್ಮಣನ ಶವಹೊತ್ತು ಅಲೆಯುವ ರಾಮನ ಪ್ರಭಾವವನ್ನು ಕಾಣುತ್ತೇವೆ.

ಬಂಧುವರ್ಮ 'ಹರಿವಂಶಾಭ್ಯುದಯ' ಎಂದು ಹೆಸರಿಟ್ಟಿರುವುದು ವಿಶೇಷ ಹೀಗೆಯೇ ಹೆಸರಿಟ್ಟ ಇನ್ನೊಬ್ಬ ಕವಿ ಒಂದನೆಯ ಗುಣವರ್ಮ. ಉಳಿದವರೆಲ್ಲ ಇದೇ ವಸ್ತುವನ್ನು ಕುರಿತ ಕೃತಿಗಳಿಗೆ 'ನೇಮಿನಾಥ ಪುರಾಣ', 'ನೇಮಿಚರಿತ' ಎಂದು ಹೆಸರಿಟ್ಟಿರುವುದನ್ನು ಗಮನಿಸಬೇಕು. 'ಹರಿವಂಶಾಭ್ಯುದಯ' ಹರಿವಂಶದ ಅಭ್ಯುದಯವನ್ನಲ್ಲದೆ ಪತನವನ್ನೂ ಹೇಳುವ ಕೃತಿ. ಹಾಗೆ ನೋಡಿದಾಗ ಶೀರ್ಷಿಕೆಯಲ್ಲೇ ಒಂದು ದುರಂತ ಧ್ವನಿಯಿದೆ.

ಜೈನಪುರಾಣಗಳ ಮುಖ್ಯ ಪ್ರಕ್ರಿಯೆಯಾದ ಭವಾವಳಿಯನ್ನು ನೇಮಿನಾಥನ ಸಂದರ್ಭದಲ್ಲಿ ತರದಿರುವುದು ಉಲ್ಲೇಖನಾರ್ಹ. ಇದಕ್ಕೆ ಮುಖ್ಯವಾಗಿ ನೇಮಿಚಂದ್ರನ ಪ್ರಭಾವ ಕಾರಣವಿರಬೇಕು; ಏಕೆಂದರೆ, ನೇಮಿಚಂದ್ರನಲ್ಲಿ ಪೂರ್ವ ಭವವಿಲ್ಲ. ಬಂಧುವರ್ಮ ತನ್ನ ನೇಮಿನಾಥನ ಕಥೆಗೆ ಕರ್ಣಪಾರ್ಯನನ್ನು ಅನುಸರಿಸಿರುವುದು ಸ್ಪಷ್ಟ. ಪಂಪನ ಪ್ರಭಾವ ರನ್ನನ ಮೇಲಾದಂತೆ ಕರ್ಣಪಾರ್ಯನ ಪ್ರಭಾವ ಬಂಧುವರ್ಮನ ಮೇಲಾಗಿದೆ. ಆದರೆ ಬರವಣಿಗೆ ವಿಚಾರಕ್ಕೆ ಬರುವುದಾದರೆ, ಕರ್ಣಪಾರ್ಯನ ಸಂಸ್ಕೃತ ಪ್ರಾಚುರ್ಯವನ್ನು ಬಂಧುವರ್ಮನ ದೇಸಿ ಪಲ್ಲಟಿಸಿದೆ. ವಿಡಂಬನೆ ಮತ್ತು ಉಪಮಾನಗಳ ದೃಷ್ಟಿಯಿಂದ ಬಂಧುವರ್ಮನ ಮೇಲೆ ನಯಸೇನನ ಪ್ರಭಾವವೂ ಆಗಿರುವುದನ್ನು ನೋಡುತ್ತೇವೆ. ಬಂಧುವರ್ಮನಿಗಿಂತ ಹಿಂದೆ ನೇಮಿನಾಥನ ಕಥೆಯನ್ನು ಬರೆದವರು-೧ನೆಯ ಗುಣವರ್ಮ, ಚಾವುಂಡರಾಯ, ಕರ್ಣಪಾರ್ಯ ಮತ್ತು ನೇಮಿಚಂದ್ರ; ಬಂಧುವರ್ಮನ ನಂತರ ನೇಮಿನಾಥನ ಚರಿತ್ರೆಯನ್ನು ಬರೆದವರು ಮಹಾಬಲ, ಮೂರನೆಯ ಮಂಗರಸ ಮತ್ತು ಸಾಳ್ವ ಕನ್ನಡ, ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳಲ್ಲಿ ನೇಮಿನಾಥನನ್ನು ಕುರಿತು ಹಲವಾರು ಕೃತಿಗಳು ದೊರೆಯುತ್ತವೆ. ಇದರ ಜನ ಪ್ರಿಯತೆಗೆ ಇದರೊಡನೆ ಹರಿವಂಶ ಮತ್ತು ಕುರುವಂಶಗಳ ಕಥೆಗಳೂ ಸೇರಿರುವುದು

ಮುಖ್ಯಕಾರಣ. ಭಾರತ ಮತ್ತು ಭಾಗವತದ ಕಥೆಗಳು ಜೈನ ಸಂಪ್ರಾದಯದಲ್ಲಿ ಅಭಿವ್ಯಕ್ತ ಗೊಂಡಿವೆ. ಜೈನಪುರಾಣಗಳ ಪ್ರಕಾರ ಕ್ಷತ್ರಿಯವಂಶಗಳು ಐದು : ಪುರು, ನಾಥ, ಉಗ್ರ, ಹರಿ ಮತ್ತು ಕುರು. ೨೪ತೀರ್ಥಂಕರರೂ ಈ ಐದು ವಂಶಗಳಲ್ಲೇ ಜನಿಸಿದವರು. ಆ ಪ್ರಕಾರ ನೇಮಿನಾಥ ಹರಿವಂಶಕ್ಕೆ ಸೇರಿದವನು. ಇದರಿಂದಾಗಿ 'ಹರಿವಂಶಪುರಾಣ' ಎಂಬ ಹೆಸರು ಚಾಲ್ತಿಗೆ ಬಂದಿತು. 'ಹರಿವಂಶಾಭ್ಯುದಯ' ಎಂದು ಬಂಧುವರ್ಮ ಹೆಸರಿಡಲು ಈ ಹಿನ್ನೆಲೆಯೇ ಕಾರಣ.

'ಹರಿವಂಶಾಭ್ಯುದಯ' ಒಂದು ದೀರ್ಘಕಾವ್ಯ; ಮಹತ್ತ್ವದ ಕಾವ್ಯ ಕೂಡ. ಆಕರ ಸಂಸ್ಕೃತದ ಗ್ರಂಥಗಳು; ಮುಖ್ಯವಾಗಿ ಗುಣಭದ್ರನ 'ಉತ್ತರಪುರಾಣ' ಸಹಜವಾಗಿಯೇ ಮಾರ್ಪಾಡುಗಳು ಕಾಣಿಸಿಕೊಂಡಿವೆ. ಉದಾಹರಣೆಗೆ 'ಉತ್ತರ ಪುರಾಣ'ದಲ್ಲಿ ಚಾರುದತ್ತನ ಪ್ರಕರಣ ಇಲ್ಲ; ಇದರಲ್ಲಿದೆ ವಿಸ್ತಾರವಾಗಿದೆ. ಇದನ್ನು ಜಿನಸೇನಾಚಾರ್ಯರ 'ಹರಿವಂಶ'ದಿಂದಲೂ, ಕರ್ಣಪಾರ್ಯನಿಂದಲೂ ಪಡೆದಿರಬಹುದು. ಬಂಧುವರ್ಮನ ಕಾವ್ಯದಲ್ಲಿ ನೇಮಿನಾಥನ ಪಾತ್ರಪ್ರಧಾನವಾಗಿಲ್ಲ. ನೇಮಿನಾಥ ಪುರಾಣಗಳನ್ನು ಗಮನದಲ್ಲಿರಿಸಿಕೊಂಡು ಹೇಳುವುದಾದರೆ, ಪ್ರಧಾನವಾಗಬೇಕಿತ್ತು ಎಂದು ಅಭಿಪ್ರಾಯಪಡುವುದು ಸಹಜ. ಧಾರ್ಮಿಕ ವ್ಯಕ್ತಿಯ ಚಿತ್ರ ಕೆಲವು ಕಟ್ಟುಪಾಡುಗಳಿಂದ ಸೀಮಿತಗೊಂಡಿರುವುದರಿಂದಲೊ ಏನೊ ಇಲ್ಲಿ ಬರುವ ಇತರ ಕೆಲವು ಪಾತ್ರಗಳೇ ಪ್ರಧಾನ ಸ್ಥಾನವನ್ನು ಪಡೆದುಕೊಂಡಿವೆ.[11] ಇದೊಂದು ವಿಚಾರಣೀಯ ಅಂಶ. ವಾಸ್ತವವಾಗಿ ಧಾರ್ಮಿಕವ್ಯಕ್ತಿಯ ಚಿತ್ರ ಕಟ್ಟುಪಾಡುಗಳಿಗೆ ಒಳಗಾಗಿ ಹೀಗೆ ಆಗಿದೆ ಎಂದಲ್ಲ. ಕವಿಯ ಉದ್ದೇಶ ಅವನ ಶೀರ್ಷಿಕೆಯಲ್ಲಿಯೇ ಸ್ಪಷ್ಟವಾಗುತ್ತದೆ. ಜೊತೆಗೆ ಕಾವ್ಯದ ಕೊನೆ ಕೊನೆಗೆ ಹೋದಂತೆ, ಕಾವ್ಯ ನೇಮಿನಾಥನ ಪಾತ್ರದ ಪ್ರಭಾವದಿಂದ ತಪ್ಪಿಸಿಕೊಳ್ಳುವುದಿಲ್ಲ ಎನಿಸುತ್ತದೆ. ಹರಿವಂಶದ ಕಥೆಯನ್ನು ಹೇಳುತ್ತಲೇ ನೇಮಿನಾಥನ ಪ್ರಾಮುಖ್ಯವನ್ನು ಪ್ರತಿಪಾದಿಸುವುದು ಕವಿಯ ಉದ್ದೇಶವಿರುವಂತೆ ತೋರುವುದು.

ಸಮಾಕಾಲೀನ ಸಮಾಜದ ಸ್ಥಿತಿಗತಿಗಳ ಕೆಲವು ವಿವರಗಳು ಕಾವ್ಯದಲ್ಲಿ ದೊರೆಯುತ್ತವೆ. ವಿವಿಧ ಜಾತಿಗಳ ವಿಚಾರ, ಸ್ಪೃಶ್ಯ ಅಸ್ಪೃಶ್ಯ ಸಮಸ್ಯೆ, ಕುಲದ ಬಗೆಗಿನ ತಾರತಮ್ಯಗಳು, ಚಾತುರ್ವಣ್ಯ ವ್ಯವಸ್ಥೆ ('ಚಾತುರ್ವರ್ಣಮೆಲ್ಲಂ ನೆರೆದು ಋಷ್ಯಾಂಗಮಂ ಸಂಸ್ಕರಿಸಿ')-ಇಂತಹ ಹಲವಾರು ಚಿತ್ರಗಳು ವಸುದೇವನ ಪರ್ಯಟನೆಯ ಕಾಲದಲ್ಲಿ ನಮ್ಮಗಮನಕ್ಕೆ ಬರುತ್ತವೆ. ಪುರಾಣ ಕಥೆಗಳ ಬಗೆಗೆ ಬಂಧುವರ್ಮ ಕೆಲವೊಮ್ಮೆ ವಿಡಂಬನೆಯ ಧೋರಣೆಯನ್ನು ವ್ಯಕ್ತಪಡಿಸುತ್ತಾನೆ. ಇದಕ್ಕೆ ಕುಂತಿಸೂರ್ಯಮಂತ್ರವನ್ನು ಜಪಿಸಿ ಕರ್ಣನನ್ನು ಪಡೆದ ವಿಷಯವನ್ನು ಅಲ್ಲಗಳೆಯುವುದು ನಿದರ್ಶನ. ಇಂತಹ ಕಥೆಗಳನ್ನು ನಂಬುವವರು ಕ್ರಿಯಾಶೂನ್ಯ ರೆಂದು ಅವನ ಅಭಿಪ್ರಾಯ. ಅನೇಕ ಅತಿಮಾನವ ಸನ್ನಿವೇಶದ ಕಥೆಗಳನ್ನು ಒಪ್ಪಿಕೊಂಡು ಚಿತ್ರಿಸುತ್ತಲೇ ಹೀಗೆಂದಿರುವುದು ಪುರಾಣಗಳ ಬಗೆಗಿನ ಅವನ ನಿರ್ಧಾರವನ್ನು ಪ್ರಕಟಿಸಿದಂತೆ ಆಗುವುದಿಲ್ಲ.

ಕೃತಿಯಲ್ಲಿ ಕಾವ್ಯ ಮೌಲ್ಯಕ್ಕಿಂತ ಕಥಾಮೌಲ್ಯ ವಿಜೃಂಭಿಸುವುದು. ಭವಾವಳಿಗಳು ಇಲ್ಲಿ

---

11. ಬಿ.ಎಸ್.ಸಣ್ಣಯ್ಯ. ಬಂಧುವರ್ಮ, ಪು ೧೨

ಬರುವ ಅನೇಕ ಕಥೆಗಳೂ ತಮ್ಮ ತಮ್ಮ ದಿಕ್ಕಿಗೆ ಎಳೆದಾಡಿದಂತೆ ತೋರುವುದು. ಪ್ರಮುಖ ಕಥಾವಾಹಿನಿಗಳೂ ವಿವರಗಳಲ್ಲಿ ಜಗ್ಗಿದಂತೆ ಕಂಡರೂ, ಐಕ್ಯವನ್ನು ಸಾಧಿಸಲು ವಿಫಲವಾಗುವುದಿಲ್ಲ.

೪

ಬಂಧುವರ್ಮನ 'ಜೀವಸಂಬೋಧನೆ' ಒಂದು ವಿಶಿಷ್ಟವಾದ ಗ್ರಂಥ. ಇಂತಹ ಕೃತಿಗಳು ಇನ್ನೂ ಕೆಲವು ಕನ್ನಡದಲ್ಲಿವೆ. ಆದರೆ ಅವಕ್ಕೆ ಹೋಲಿಸಿಕೊಂಡರೆ, ಸತ್ವದ ದೃಷ್ಟಿಯಿಂದ ಇದಕ್ಕೆ ಮೇಲಾದ ಸ್ಥಾನವಿದೆ. ಆ ಕೆಲವು ಕೃತಿಕಾರರು ತಮ್ಮ ಕೃತಿಗಳಿಗೆ 'ಅನುಪ್ರೇಕ್ಷೆ'ಗಳೆಂದೇ ಹೆಸರು ಕೊಟ್ಟಿದ್ದಾರೆ. ಬಂಧುವರ್ಮ ಹಾಗೆಮಾಡದೆ, 'ಜೀವ ಸಂಬೋಧನ' ಎಂದು ಕರೆದಿರುವುದು ಮಹತ್ತ್ವದ ವಿಚಾರ. ಇಲ್ಲಿ ಜೀವವನ್ನು ಸಂಬೋಧಿಸಿ ಹೇಳಲಾಗಿದೆ. ಕೃತಿಯುದ್ದಕ್ಕೂ ಜೀವಾ, ಕೇಳಾ, ಎಲೆಜೀವನೇ ಎಂಬಂತಹ ಮಾತುಗಳು ಕೇಳಿ ಬರುತ್ತವೆ. ಜೀವ ತನ್ನೆಲ್ಲ ಲೋಕಬಂಧನಗಳನ್ನು ಕಳಚಿಕೊಂಡು ಮೋಕ್ಷದತ್ತ ಚಲಿಸುವಾಗ ಕೈಗೊಳ್ಳಬೇಕಾದ ತಾತ್ತ್ವಿಕ ಅನುಚಿಂತನೆಗಳೇ ಅನುಪ್ರೇಕ್ಷೆಗಳು. ಕಾವ್ಯದ ಆರಂಭದಲ್ಲಿ ಕವಿ ಹೇಳುವ, ಸಮಾಧಾನ ಪ್ರಾಪ್ತಿ (೧-೧)ಗೆ, ಆತ್ಮೋದಯ ಪ್ರಾಪ್ತಿ (೧-೨) ದುರಿತ ಪ್ರಧ್ವಂಸನ (೧-೩)ಕ್ಕೆ, ಒಳ್ಪಿನೋಳಿ (೧-೪)ಗೆ ಇವು ಸಹಾಯಕ್ಕೆ ಬರುತ್ತವೆ. ಹಾಗೆ ನೋಡಿದರೆ, ಸಂಸಾರಿಜೀವ ಮುಕ್ತ ಜೀವವಾಗಿ ಪರಿಣಮಿಸುವುದೇ ಇದು. ಇದಾಗಬೇಕಾದರೆ ಸಂಬೋಧನಾ ಕ್ರಿಯೆ ಗಳಾದ ಆರಾಧನೆಗಳು ದರ್ಶನಾರಾಧನೆ, ಜ್ಞಾನಾರಾಧನೆ, ಚಾರಿತ್ರಾರಾಧನೆ ಮತ್ತು ತಪ ಆರಾಧನೆ) ಆಗತ್ಯವಾಗಬೇಕಾಗುತ್ತವೆ. ಆಗ ಅನಂತಸುಖಾಸ್ಪದಮನೆಯ್ದಿ ಶಾಶ್ವತನಪ್ಪೆ'' ಎಂದು ಕವಿ ಹೇಳುತ್ತಾನೆ.

ಪ್ರಸ್ತುತ ಕೃತಿಯನ್ನು ಮೇಲುನೋಟಕ್ಕೆ ಒಂದು ಧಾರ್ಮಿಕ ಕೃತಿ ಎನ್ನುವುದು ಸಹಜ. ಜೈನ ಧರ್ಮೀಯರಿಗೆ ಇದೊಂದು 'Religious Text' ಎನ್ನುವುದು ಸತ್ಯ. ಆದರೆ ಜೈನಾವರಣವನ್ನನುಸರಿಸಿ ನೋಡಿದರೆ ಇದೊಂದು 'Metaphysical poetry' ಯಂತೆ ಕಾಣುವುದು. ಹಾಗೆ ನೋಡಿದರೆ ಜೈನ ಪಾರಿಭಾಷಿಕ ವಿಷಯಗಳ ಪ್ರಸ್ತಾಪ ಬಿಟ್ಟರೆ, ಜೈನಧರ್ಮದ ಅಭಿನಿವೇಶ ಕಡಿಮೆಯೆಂದೇ ಹೇಳಬೇಕು. ಸಾರ್ವತ್ರಿಕ ಆಧ್ಯಾತ್ಮಿಕ ಭಾವನೆಗಳು (Spiritual Ideas) ಕಾವ್ಯಾತ್ಮಕ ಅಭಿವ್ಯಕ್ತಿಯೇ ಜೀವ ಸಂಬೋಧನೆ; ಅಂದರೆ ಹೊದಿಕೆ ಧಾರ್ಮಿಕ, ಹೂರಣ ಅಧ್ಯಾತ್ಮ. ಕಾವ್ಯವಾಗಿ ಕೂಡ ಈ ಕಾವ್ಯದ ಮಹತ್ವ ಕಡಿಮೆಯಾಗುವುದಿಲ್ಲ. ಪ್ರತಿ ತತ್ತ್ವದ ಚಿಂತನೆಗೆ ಜೋಡಿಸಿರುವ ದೃಷ್ಟಾಂತ ಕಥೆ ಕೃತಿಯ ಲವಲವಿಕೆಗೆ ಮತ್ತು ಜೀವಂತಿಕೆಗೆ ಕಾರಣವಾಗಿದೆ. ಹಾಗೆಯೇ ತತ್ತ್ವದ ನಿರೂಪಣೆಯನ್ನು ಜಡವಾಗಿಸದೆ ನೋಡಿಕೊಂಡಿದೆ. ಅವುಗಳಲ್ಲಿ ಬಳಕೆಯಾಗುವ ಅಪಾರ ಉಪಮೆಗಳು, ಈ ಹೋಲಿಕೆಗಳಿಂದಾಗಿ ತತ್ತ್ವ ಒಂದು ಮುಷ್ಟಿಗ್ರಾಹ್ಯ ಅನುಭವವಾಗಿ ಪರಿವರ್ತಿತವಾಗಲು ಸಾಧ್ಯವಾಗಿದೆ. ಹೀಗೆ ಕೃತಿ ಎರಡು ಮಜಲುಗಳಲ್ಲಿ ಕೆಲಸಮಾಡುತ್ತದೆ : ಒಂದು : ಸೈದ್ಧಾಂತಿಕ; ಇನ್ನೊಂದು : ಪ್ರಾಯೋಗಿಕ. ಹೀಗೆ ಕಾವ್ಯ ಬೇಸರಿಸದೆ ಓದಿಸಿಕೊಳ್ಳುವ ಗುಣವಿಶೇಷವನ್ನು

ಹೊಂದಿರುವುದು ಕೃತಿಯ ಪ್ರಾಮುಖ್ಯವೆನಿಸಿದೆ. ಕೃತಿಯಲ್ಲಿ ತತ್ತ್ವಗಳು ಮತ್ತು ಕಥೆಗಳು ಬೇರೆಯಾಗುತ್ತಾ ಹೋಗುವುದಾದರೂ, ಅವುಗಳನ್ನೆಲ್ಲ ಜೀವ ತಂತುವಾಗಿ ಸೇರಿಸಿರುವ ಫಲವಾಗಿ ಕೃತಿ ಏಕಕಥೆಯ ಸ್ವರೂಪವನ್ನು ಪಡೆಯಲು ಸಾಧ್ಯವಾಗಿದೆ.

ತಾತ್ತ್ವಿಕ ಮುಖದಲ್ಲಿ ಹನ್ನೆರಡು ಅನುಪ್ರೇಕ್ಷೆಗಳು-ಅಧ್ರುವ, ಅಶರಣ, ಏಕತ್ವ, ಅನ್ಯತ್ವ, ಸಂಸಾರ, ಲೋಕ, ಅಶುಚಿತ್ವ, ಆಸ್ರವ, ಸಂವರ, ನಿರ್ಜರ, ಬೋಧಿದುರ್ಲಭ ಧರ್ಮ ಬಂದಿವೆ. ಪ್ರತಿಯೊಂದು ಅಧಿಕಾರದಲ್ಲೂ ಕೆಲಭಾಗ, ಕೆಲವೊಮ್ಮೆ ಅರ್ಧಭಾಗ ಇವುಗಳ ವಿವರಣೆಗಾಗಿ ಮೀಸಲು. ತರ್ಕಕ್ಕೆ ಮತ್ತು ಜಟಿಲತೆಗೆ ಆಸ್ಪದವಿಲ್ಲದಂತೆ, ಗ್ರಹಿಕೆಯಾಗುವ ಸರಳತೆಯಲ್ಲಿ ಇವುಗಳನ್ನು ನಿರ್ವಹಿಸಲಾಗಿದೆ. ಈ ತತ್ತ್ವಗಳ ಸುಲಭ ಸಂವಹನ ಸಾಧ್ಯತೆಗೆ ದೃಷ್ಟಾಂತ ಕಥೆಗಳು ಬಂದಿವೆ. ಇದೊಂದು ಜನಪ್ರಿಯ ಮಾರ್ಗ. ಹನ್ನೆರಡು ಅನುಪ್ರೇಕ್ಷೆಗಳಿಗೆ ಹದಿನೆಂಟು ಕಥೆಗಳಿವೆ. ಆಸ್ರವ ಮತ್ತು ಧರ್ಮಾನುಪ್ರೇಕ್ಷೆಗಳಲ್ಲಿ ತಲಾ ಮೂರು ಕಥೆಗಳು ಹೆಚ್ಚಾಗಿವೆ. ಈ ಕಥೆಗಳೆಲ್ಲ ಚಿಕ್ಕವಾಗಿದ್ದು, ಒಂದಕ್ಕಿಂತ ಹೆಚ್ಚಿನ ಕಥೆಗಳು ಅಗತ್ಯವೆನಿಸಿದಾಗ ಹೀಗೆ ಮಾಡಿರಲು ಸಾಕು. ಈ ಒಟ್ಟು ಕಥೆಗಳಲ್ಲಿ ದೀರ್ಘವಾದುದು ಮತ್ತು ಮಹತ್ತ್ವದವು ಎಂದರೆ ಸಗರನ ಕಥೆ ಮತ್ತು ಧನ್ಯಕುಮಾರನ ಕಥೆಗಳು. ಸಂಕೀರ್ಣ ಎಳೆಗಳಿಂದ ಆಗಿರುವ ಈ ಕಥೆಗಳು ಖಂಡಕಾವ್ಯದ ವ್ಯಾಪ್ತಿಯ ಸಾಮಗ್ರಿಯನ್ನು ಹೊಂದಿವೆ. ಸಗರನಕಥೆ ವೈದಿಕ ಮೂಲದಲ್ಲೂ ಪ್ರಚುರದಲ್ಲಿದೆ. ಕಥೆಯ ಹೆಣಿಗೆಯಲ್ಲಿ ನಾಟಕೀಯ ಸನ್ನಿವೇಶಗಳಿವೆ. ಉದಾಹರಣೆಗೆ, ಸುಪ್ರಭವದೇವ ಬ್ರಾಹ್ಮಣನಾಗಿ ಬಂದು ಸತ್ತ ಮಗನನ್ನು ಬದುಕಿಸಿಕೊಡೆಂದು ಸಗರನಲ್ಲಿ ಕೇಳುವ ಪ್ರಸಂಗ ಮನಶ್ಶಾಸ್ತ್ರೀಯ ಒಳನೋಟಗಳಿಂದ ತುಂಬಿಕೊಂಡಿದೆ. ಸಾಯದರ ಮನೆಯ ಹುಲ್ಲು ಮತ್ತು ಕಿಚ್ಚು ತರುವಂತೆ ಹೇಳುವಲ್ಲಿ ಸುಪ್ರಸಿದ್ಧ ಕಿಸಾಗೌತಮಿಯ ಕಥೆ ನೆನಪಾಗುತ್ತದೆ. ಧನ್ಯಕುಮಾರನ ಕಥೆ ಇನ್ನೂ ದೊಡ್ಡದು. ಹಂತಹಂತವಾಗಿ ಬೆಳೆಯುವ ಸಂಪೂರ್ಣ ಕಥೆ. ಸಗರನ ಕಥೆ ಸನ್ನಿವೇಶ ಪ್ರಧಾನವಾದರೆ, ಧನ್ಯಕುಮಾರನ ಕಥೆ ಪಾತ್ರಪ್ರಧಾನವಾದುದು. ಕೆಲವು ಕಥೆಗಳಲ್ಲಿ ಸಮಸ್ಯೆಗಳೂ ತಲೆದೋರಬಹುದು. ಇದಕ್ಕೆ 'ಅಶರಣಾನುಪ್ರೇಕ್ಷೆ'ಗೆ ದೃಷ್ಟಾಂತವಾಗಿ ಬರುವ ಮುಂಡಕೌಶಿಕನ ಕಥೆಯನ್ನೇ ತೆಗೆದುಕೊಳ್ಳೋಣ. ಇದರಲ್ಲಿ ಮಕ್ಕಳಿಲ್ಲದ ತಂದೆತಾಯಿಗಳು ದೇವತೆಯನ್ನು ಬೇಡಿ ಮಗನನ್ನು ಪಡೆವರು. ಮದುವೆಗೆ ಸಿದ್ಧತೆ ಮಾಡಿಕೊಂಡಾಗ ರಕ್ಕಸನೊಬ್ಬನ ಸರದಿ ಬಲಿ 'ಕನ್ನೆಗಂಡಸ' ರಾಗಿರಬೇಕಾಗುತ್ತದೆ; ಸರದಿ ಬ್ರಾಹ್ಮಣನ ಈ ಮಗನಿಗೆ ಬರುತ್ತದೆ. ಆಗ ಇದು ದೇವತೆ ಯಿಂದ ನಿವಾರಣೆಯಾದರೂ, ಮತ್ತೆ ಹಾವು ನುಂಗಿ ಸಾಯುತ್ತಾನೆ. ಜಿನೇಶ್ವರನಿಗೆ ಶರಣಾಗುವುದೊಂದೇ ಮಾರ್ಗ ಎನ್ನುವುದಕ್ಕೆ ಈ ಕಥೆ. ಆದರೆ 'ವರ' ಕೊಟ್ಟ ದೇವತೆಯಿಂದ ರಕ್ಕಸನನ್ನು ನಿವಾರಿಸಲು ಸಾಧ್ಯವಾದುದು, ಸರ್ಪವನ್ನು ನಿವಾರಿಸಲು ಸಾಧ್ಯವಾಗಲಿಲ್ಲವೇಕೆ? ದೇವತೆಗೆ ಶರಣಾದುದು 'ಜಿನ'ನಿಗೆ ಶರಣಾದುದಕ್ಕೆ ಸಮಾನವಲ್ಲವೆ? ಈ ಪ್ರಶ್ನೆಗಳು ಸಹಜವಾಗಿ ನಮ್ಮನ್ನು ಕಾಡುತ್ತವೆ. ಇಲ್ಲಿನ ಸರದಿ ಪ್ರಕಾರ ಆಹಾರವಾಗುವ ಆಶಯ ಬಕಾಸುರನ ಕಥೆಗೆ ಹೋಲಿಕೆಯಾಗುತ್ತದೆ. ತೀರ ಸಂಕ್ಷಿಪ್ತವಾಗಿ ಪ್ರಸಿದ್ಧ ರಾವಣನ ಕಥೆಯೂ (ಅನ್ಯತ್ವ) ಇಲ್ಲಿದೆ. 'ಸಂಸಾರಾನುಪ್ರೇಕ್ಷೆ'ಗೆ ಬರುವ ವಸಂತ ತಿಲಕೆ ವೇಶ್ಯೆಯ ಕಥೆ ಗಮನಾರ್ಹ. ಸಂಕೀರ್ಣವೂ ಮನಶ್ಶಾಸ್ತ್ರೀಯವೂ ಆದ ಸ್ವರೂಪದ್ದು ಈ ಕಥೆ. ಆಕೆಯ ಅವಳಿ ಗಂಡು ಹೆಣ್ಣುಗಳನ್ನು

ಬಿಸಾಡುವುದು, ಅವರನ್ನು ಬೇರೆ ಬೇರೆಯವರು ಸಾಕುವುದು, ಅಣ್ಣ-ತಂಗಿಯರಲ್ಲಿ ವಿವಾಹಘಟಿಸುವುದು. ಆಮೇಲೆ ಆ ಅಣ್ಣನೇ ಅವನ ತಾಯಿಯಲ್ಲಿ ಸೇರುವುದು ಮತ್ತು ಅವರಿಗೆ ಮಕ್ಕಳಾಗುವುದು. ಅದನ್ನು ತಂಗಿ ನೋಡುವುದು-ಇವೆಲ್ಲ ಇದರ ವಸ್ತುವನ್ನು ರೂಪಿಸಿವೆ. ಈ ಕಥೆ ಮೂಲ ಆಶಯದಲ್ಲಿ 'ಈಡಿಪಸ್' ಕಥೆಯನ್ನು ಹೋಲುತ್ತದೆ.

'ಜೀವ ಸಂಬೋಧನೆ'ಗೆ ಆಕರಗಳು ಹಲವು. ಅನುಪ್ರೇಕ್ಷೆಗಳ ಸ್ವರೂಪವನ್ನು ವಿವರಿಸುವಾಗ ಬೇರೆ ಗ್ರಂಥಗಳೂ, ಕಥೆಗಳನ್ನು ಹೇಳುವಾಗ ಬೇರೆ ಗ್ರಂಥಗಳೂ ಆಕರವಾಗಿರಬಹುದು. ಅನುಪ್ರೇಕ್ಷೆಗಳ ವಿವರಣೆಗಳಿಗೆ ಸಂಬಂಧಿಸಿದಂತೆ ಕುಂದಕುಂದಾಚಾರ್ಯರ 'ಬಾರಸ (ಹ) ಅಣುವೆಕ್ಖಾ,' ಸ್ವಾಮಿಕುಮಾರನ 'ಕಾರ್ತಿಕೇ ಯಾನುಪ್ರೇಕ್ಷೆ' ಮೂಲದಲ್ಲಿರಲು ಸಾಧ್ಯ. ಹಾಗೆಯೇ ಪ್ರಾಚೀನ ಕಾವ್ಯ ಹಾಗೂ ಆಗಮಗ್ರಂಥಗಳಲ್ಲಿನ ಅನುಪ್ರೇಕ್ಷೆವಿಚಾರಗಳೂ ಕವಿಗೆ ಆಧಾರವಾಗಿರಬಹುದು. ಕಥೆಗಳನ್ನು ವಿವಿಧ ಮೂಲಗಳಿಂದ ಆಯ್ಕೆಮಾಡಿಕೊಂಡಿರುವುದನ್ನು ತಳ್ಳಿಹಾಕುವಂತಿಲ್ಲ. ಜಟಾಸಿಂಹನ 'ವರಾಂಗ ಚರಿತೆ' ರಾಮಚಂದ್ರಮುಮುಕ್ಷುವಿನ, 'ಪುಣ್ಯಾಸ್ರವ ಕಥಾಕೋಶ,' ರನ್ನನ 'ಅಜಿತಪುರಾಣ', ಶಾಂತಿನಾಥನ 'ಸುಕುಮಾರ ಚರಿತೆ' ಮುಂತಾದ ಗ್ರಂಥಗಳನ್ನು ಇದಕ್ಕೆ ಹೆಸರಿಸಬಹುದು. ತಮಿಳಿನಲ್ಲಿ ಒಂದು 'ಜೀವಸಂಬೋಧನೆ' ಇದ್ದು, ಬಂಧುವರ್ಮನಿಗೆ ಇದು ಆಕರವಾಗಿರಬಹುದೆ? ಇವುಗಳಲ್ಲಿ ತಲೆದೋರುವ ಸಾಮ್ಯವನ್ನು ಅವಲಂಬಿಸಿ ಹೀಗೆ ಹೇಳಬಹುದು. ಆದರೆ ಇವೆರಡಕ್ಕೂ ಮೂಲವಾಗಿ ಸಂಸ್ಕೃತ ಅಥವಾ ಪ್ರಾಕೃತದ ಜೀವ ಸಂಬೋಧನೆ ಇದ್ದಿರಬಹುದೆಂದು ಕೆಲವರು ಶಂಕಿಸಿದ್ದಾರೆ.

ಬಂಧುವರ್ಮನಿಗೆ ಮೊದಲು ಈ ಬಗೆಯ ಕೃತಿ ಇದ್ದಿರಲಿಲ್ಲ. ನಯಸೇನನ ಧರ್ಮಾಮೃತದಲ್ಲಿ ಈ ಬಗೆಯ ಚಿತ್ರ ದೊರೆತರೂ, ಅನುಪ್ರೇಕ್ಷೆಗಳನ್ನು ಕ್ರಮವಾಗಿ ಹೇಳುವುದಿಲ್ಲ. ಕನ್ನಡದಲ್ಲಿ ಅನುಪ್ರೇಕ್ಷೆಗಳನ್ನು ಕುರಿತು ಬರೆದ ಇತರ ಕೃತಿಕಾರರೆಂದರೆ, ವಿಜಯಣ್ಣ ಮತ್ತು ದೇವಚಂದ್ರ. ಇವರ ಮೇಲೆ ಬಂಧುವರ್ಮನ ಪ್ರಭಾವ ಇದ್ದಿರಬಹುದು.

'ಜೀವ ಸಂಬೋಧನೆ' ಒಂದು ಚಂಪೂ ಗ್ರಂಥ. ಆದರೆ ಉಳಿದ ಚಂಪೂಗ್ರಂಥಗಳಿಗಿಂತ ಇದರ ಸ್ವರೂಪ ಸ್ವಲ್ಪ ಭಿನ್ನ ಮತ್ತು ವಿಶೇಷ. ಪಂಪ, ರನ್ನ ಮೊದಲಾದವರ ಚಂಪೂವಿನಲ್ಲಿ ಪದ್ಯಗಳು ಹೆಚ್ಚು, ಗದ್ಯ ಕಡಿಮೆ. ಆದರೆ ಬಂಧುವರ್ಮನಲ್ಲಿ ಒಂದು ಪದ್ಯ, ಒಂದು ಗದ್ಯ, ಹೀಗೆ ಸಮನಾಗಿ ವ್ಯವಸ್ಥೆಯಿದೆ. ಪ್ರತಿಯೊಂದು ಪದ್ಯಕ್ಕೂ ಒಂದು ಗದ್ಯವಿರಲು ಕಾರಣವಾದುದು ಪದ್ಯಗಳ ವಿವರಣೆಯಾಗಿ ಗದ್ಯಬರಬೇಕೆಂಬ ಕವಿಯ ನಿರ್ಧಾರ. ತದ್ವತ್ತಾದ ವ್ಯಾಖ್ಯಾನವೆನ್ನುವುದಕ್ಕಿಂತ ಅದನ್ನು ಹೀಗೆ ಹೇಳಬಹುದು : ೧ ಪದ್ಯಗಳ ಸಾರ ಸಂಗ್ರಹ ತಾತ್ಪರ್ಯರೂಪ; ೨. ಭಿನ್ನದೃಷ್ಟಾಂತ, ಹೋಲಿಕೆಗಳಿಂದ ಪದ್ಯದ ಅರ್ಥವಿಸ್ತರಣೆ; ೩. ಅಧಿಕ ವಿಷಯ ಸೇರ್ಪಡೆ. ಈ ಪದ್ಯಗದ್ಯ ಸಮಾನತೆಗೆ ತಮಿಳಿನ ಜೀವ ಸಂಬೋಧನೆಯಲ್ಲೂ ಇದೇ ತಂತ್ರವಿರುವುದು ಕಾರಣವೆನ್ನುತ್ತಾರೆ ಎಚ್.ಶೇಷಅಯ್ಯಂಗಾರ್ ಅವರು.[12] ಎರಡಕ್ಕೂ

---

12 ಜೀವ ಸಂಬೋಧನಂ. ಪೀಠಿಕೆ, ಪು.7

ಇನ್ನೂ ಅನೇಕ ಸಾಮ್ಯಗಳಿವೆ. ತಮಿಳು ಮತ್ತು ಕನ್ನಡದ ಈ ಕೃತಿಗಳಲ್ಲಿ ಯಾವುದು ಯಾವುದಕ್ಕೆ ಆಧಾರವೆಂಬ ವಿಷಯದಲ್ಲಿ, ಸಂದೇಹ ವ್ಯಕ್ತಪಡಿಸಿದ ಶೇಷ ಅಯ್ಯಂಗಾರ್, ಆಮೇಲೆ, ತಮಿಳು ಗ್ರಂಥವೇ ಆಧಾರವಿರಬೇಕೆಂದು ಹೇಳುತ್ತಾರೆ.[13] ಅಲ್ಲದೆ ದ್ರಾವಿಡ ಭಾಷೆಗಳ ಸಾಹಿತ್ಯ ಮತ್ತು ಶಾಸ್ತ್ರ ಕೃತಿಗಳಿಗೆ ಸಾಮಾನ್ಯವಾಗಿ ಸಂಸ್ಕೃತ ಮತ್ತು ಪ್ರಾಕೃತ ಗ್ರಂಥಗಳೇ ಆಧಾರವಾಗಿರುವುದರಿಂದ, ಇವೆರಡಕ್ಕೂ ಮೂಲವನ್ನು ಇಲ್ಲಿಯೇ ಹುಡುಕಲು ಪ್ರಯತ್ನಿಸುತ್ತಾರೆ ಕೂಡ. [14]

ಗ್ರಂಥದ ಛಂದೋವೈವಿಧ್ಯದ ಬಗ್ಗೆ ಲಕ್ಷ್ಯವಹಿಸಬೇಕು. ವೃತ್ತ ಮತ್ತು ಕಂದ ಚಂಪೂವಿನಲ್ಲಿರುವುದು ಸರಿಯೇ. ಆದರೆ, ಇದರ ಜೊತೆಗೆ ರಗಳೆ, ತ್ರಿಪದಿಗಳು ಸೇರಿರುವುದು ವಿಶೇಷ. ಕೃತಿಯಲ್ಲಿ ಒಟ್ಟು ೧೨ ರಗಳೆಗಳೂ ೧೪ ತ್ರಿಪದಿಗಳೂ ಬಂದಿವೆ. ಲಕ್ಷಣಕಾರರಿದಿಂದಲೂ ಪ್ರಮಾಣೀಭೂತವೆಂದು ಕೃತಿ ಸ್ವೀಕಾರಗೊಂಡಿರುವುದು ಒಂದು ಹೆಚ್ಚುಗಾರಿಕೆ. ಸಾಳ್ವ ಲಕ್ಷಣಕಾರರಿಂದಲೂ ಮತ್ತು ಭಟ್ಟಾಕಳಂಕರು ಇದನ್ನು ಉಲ್ಲೇಖಿಸಿದ್ದಾರೆ. ಹೊಸ ಹೊಸ ಶಬ್ದರೂಪಗಳನ್ನು ಬಳಸಿದ ಕೀರ್ತಿ ಕೂಡ ಬಂಧುವರ್ಮನದು. 'ಜೀವ ಸಂಬೋಧನೆ'ಯಲ್ಲಿ ೧೨ ವಿಷಯಗಳಿಗೆ ಅನುಗುಣವಾಗಿ ೧೨ ವಿಭಾಗಗಳಿವೆ. ಈ ವಿಭಾಗಗಳಿಗೆ ಸಂಬಂಧಿಸಿದಂತೆ ಅಧಿಕಾರ, ಅವಕಾಶ ಎಂಬ ಹೆಸರುಗಳು ಬಳಕೆಯಾಗಿವೆ. ಗ್ರಂಥಕ್ಕೆ 'ಅವತಾರ', 'ಜೀವಸಂಬೋಧನಾ ಗ್ರಂಥಾವತಾರದೊಳ್' ಎಂದೂ ಕರೆಯಲಾಗಿದೆ; ವಿಭಾಗಕ್ಕೆ ಕೆಲವೊಮ್ಮೆ ಆಶ್ವಾಸ ಪಾಠವಿದೆ.[15]

'ಜೀವ ಸಂಬೋಧನೆ' ಶಾಸ್ತ್ರವೂ ಹೌದು ಕಾವ್ಯವೂ ಹೌದು. ಈ ಕಾವ್ಯವು ಶಾಸ್ತ್ರಗ್ರಂಥವಾದರೂ ಪಂಪಾದಿ ಕವಿಗಳ ಮಹಾಕಾವ್ಯಗಳ ದರ್ಜೆಗೆ ಸೇರಿದುದೆಂಬುದರಲ್ಲಿ ಶಬ್ದವೂ ಸಂದೇಹವಿಲ್ಲ ಎನ್ನುತ್ತಾರೆ ಶೇಷ ಅಯ್ಯಂಗಾರ್ ಅವರು.[16] 'ದರ್ಜೆಗೆ' ಎನ್ನುವುದಕ್ಕಿಂತ 'ಸಾಲಿಗೆ' ಎನ್ನುವುದು ಉಚಿತವಾಗುತ್ತದೆ. 'ಜೀವ ಸಂಬೋಧನೆ' ಮಹಾಕಾವ್ಯವಲ್ಲ. ಮಹಾಕಾವ್ಯದ ಸತ್ವಕ್ಕಿಂತ ಭಾವಗೀತೆಯ ಗುಣವನ್ನು ಪ್ರದರ್ಶಿಸುವ ಜೀವಸಂಬೋಧನೆಯನ್ನು 'ಮಹತ್‌ಕಾವ್ಯ'ವೆಂದೂ ಬಂಧುವರ್ಮನನ್ನು 'ಮಹತ್ ಕವಿ'ಯೆಂದೂ ಕರೆಯಬಹುದು[17]. ಹಂಪನಾ ಅವರ ಈ ಅಭಿಪ್ರಾಯವು ಆಲೋಚನೆಗೆ ವಸ್ತು. ಬಂಧುವರ್ಮನನ್ನು 'ಮಹತ್ ಕವಿ' ಎಂದು ಸ್ವಲ್ಪ ಮಟ್ಟಿಗೆ ಕರೆಯಬಹುದಾದರೂ, 'ಜೀವಸಂಬೋಧನೆ' ಭಾವಗೀತೆಯ ಗುಣವುಳ್ಳದ್ದು ಎಂದು ಹೇಳುವುದು ಕಷ್ಟ. ಅದರಲ್ಲಿ ಸಮಾವೇಶಗೊಂಡಿರುವುದು ತತ್ತ್ವ ಮತ್ತು ಕಥೆ-ಆದ್ದರಿಂದ,

---

13. ಅದೇ ಪು.8
14. ಅದೇ ಪು. 8-9
15. 'ಆಶ್ವಾಸ' ಚಂಪೂಕಾವ್ಯಗಳಲ್ಲಿ ಪ್ರಚುರ, 'ಅಧಿಕಾರ' ಶಾಸ್ತ್ರಗ್ರಂಥಗಳಲ್ಲಿ ರೂಢಿ, 'ಅವತಾರ' ಯಶೋಧರ ಚರಿತೆಯಲ್ಲಿ ಬಳಕೆ
16. ಜೀವಸಂಬೋಧನಂ. ಪೀಠಿಕೆ. ಪು 9
17. ಕವಿ ಬಂಧುವರ್ಮ : ಜಿಜ್ಞಾಸೆ, ಪು 52

ಅವನ್ನು ತತ್ತ್ವಗರ್ಭಿತ ಕಾವ್ಯ ಅಥವಾ ಕಥಾತ್ಮಕ ಗುಣದಕಾವ್ಯ ಎಂದು ಹೇಳುವುದೇ ಉಚಿತ. ಈ ಗುಣಗಳು ಕೃತಿಯ ವೈಶಿಷ್ಟ್ಯಕ್ಕೆ ಧಕ್ಕೆ ತರುವಂತಹ ವಿಷಯಗಳೇನೂ ಅಲ್ಲ.

ಜೀವಸಂಬೋಧನೆ ಗ್ರಂಥವನ್ನು ಓದಿದಾಗ ಕೆಲವು ಪ್ರಶ್ನೆಗಳು ಅಥವಾ ಸಮಸ್ಯೆಗಳು ಉಳಿಯುತ್ತವೆ :

೧. ಕೃತಿಯ ಸ್ವರೂಪ ತಾತ್ತ್ವಿಕ ಅಥವಾ ಧಾರ್ಮಿಕ. ದೇಹದ ಅನಿತ್ಯ ಮತ್ತು ಸಂಸಾರದ ಅಸಾರತೆಗಳನ್ನು ಬೋಧಿಸಿದರೂ, ಜೀವ ನಿರಾಕರಣ ತತ್ತ್ವವನ್ನು ಬೋಧಿಸುವುದಿಲ್ಲ. ಅನೇಕ ಸರ್ತಿ ಸರ್ವಸಂಗ ಪರಿತ್ಯಾಗ ಮಾಡಿದವರು ಜೀವನದ ವೈಭವದಲ್ಲಿದ್ದವರೆ!

೨. ಕೃತಿಯಲ್ಲಿ ಜೀವನವನ್ನು ಸಾವಿನ ದೃಷ್ಟಿಕೇಂದ್ರದಿಂದ (point of view) ನೋಡಿದ ಹಾಗಿದೆ. ಜೀವನದ ನಿಜವಾದ ಸ್ವರೂಪ ತಿಳಿಯಲು ಇದು ಸಹಾಯಕ. ಭೂಮಿಗುಂಡಗಿದೆ ಎಂದು ತಿಳಿಯಲು ಭೂಮಿಯ ಸಂಪರ್ಕದಿಂದ ಮೇಲೆ ಹೋದಂತೆ.

೩. ಅನೇಕ ಸಂದರ್ಭಗಳಲ್ಲಿ ನಿವೃತ್ತಿಯ ವೈಭವೀಕರಣ ಇರುವಂತೆ ತೋರುವುದು. ಜೀವನದ ಅನಿತ್ಯತೆಯನ್ನು ಒಂದು ಘೋಷಣೆ (manifesto) ಮಾಡಿಕೊಂಡಾಗ ಇದರ ಅಗತ್ಯವಿರಬಹುದು.

೪. ಎಲ್ಲ ಸಂದರ್ಭಗಳಲ್ಲೂ ಪುರುಷನ ದೃಷ್ಟಿಕೋನದಿಂದ ನೋಡಲಾಗಿದೆ. ಪುರುಷನ ಆತ್ಮ ವಿಶ್ವಾಸಕ್ಕೆ ಸ್ತ್ರೀ ಅಡ್ಡಿ ಎಂಬ ಕಲ್ಪನೆ. ಆದರೆ ಸ್ತ್ರೀಯ ಆತ್ಮ ಅಥವಾ ಜೀವ ವಿಕಾಸವನ್ನು ಹೇಳುವುದಿಲ್ಲವಲ್ಲ ಏಕೆ? ಜೀವ ಎಂಬುದು ಪುರುಷನೂ ಅಲ್ಲ, ಸ್ತ್ರೀಯೂ ಅಲ್ಲವಾದ್ದರಿಂದ, ಈ ತಾರತಮ್ಯ ಏಕೆ ?

೫. 'ಜೀವ ಸಂಬೋಧನೆ'ಯ ಪ್ರಸ್ತುತತೆ-ಅದರ ವಾಸ್ತವಿಕ ಮತ್ತು ಮಾನಸಿಕ ನೆಲೆಗಳಲ್ಲಿ.

೫

ಬಂಧುವರ್ಮ 'ಸತಿಧರ್ಮಸಾರ' ಎಂಬ ಮೂರನೆಯ ಕೃತಿಯೊಂದನ್ನು ರಚಿಸಿದ್ದಾನೆಂಬ ನಿರ್ಧಾರಕ್ಕೆ ಜಿ.ಎಸ್. ಸಣ್ಣಯ್ಯನವರು ಬಂದಿದ್ದಾರೆ. ಅವರೇ ಈ ಕೃತಿಯನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಈ ಕೃತಿ ಬಂಧುವರ್ಮನದೆಂಬುದಕ್ಕೆ ಮುಖ್ಯವಾಗಿ ಅವರು ಎರಡು ಕಾರಣಗಳನ್ನು ಕೊಡುತ್ತಾರೆ. 'ಸತಿಧರ್ಮಸಾರ' ಆರಂಭದಲ್ಲಿ ಬಂದಿರುವ ಸ್ತುತಿಯ ರೀತಿ ಬಂಧುವರ್ಮನ ಉಳಿದೆರಡು ಕೃತಿಗಳ ರೀತಿಯಲ್ಲಿಯೇ ಇದೆ ಎಂಬುದು ಇವುಗಳಲ್ಲಿ ಒಂದು. ಈ ಬಗ್ಗೆ ಸಣ್ಣಯ್ಯನವರ ಅಭಿಪ್ರಾಯ ಹೀಗಿದೆ. ಈ ಕವಿಯು 'ಹರಿವಂಶಾಭ್ಯುದಯ' ಮತ್ತು 'ಜೀವ ಸಂಬೋಧನೆ'ಗಳ ಮೊದಲಲ್ಲಿ ಜಿನರು, ಸಿದ್ಧರು, ಆಚಾರ್ಯರು, ಉಪದೇಶಕರು, ಸಾಧುಗಳನ್ನು ಕ್ರಮವಾಗಿ ಸ್ತುತಿಸುವಂತೆಯೇ 'ಸತಿಧರ್ಮಸಾರ'ದಲ್ಲಿಯೂ ಮಾಡಿದ್ದಾನೆ.[18]

---

18. ಸತಿ ಧರ್ಮಸಾರ, ಪೀಠಿಕೆ, ಪು. iv

ಸಣ್ಣಯ್ಯನವರ ಈ ಅಭಿಪ್ರಾಯಕ್ಕೆ ವಿರೋಧ ವ್ಯಕ್ತಪಡಿಸುವುದು ಸಾಧ್ಯವಿಲ್ಲ. ಅವರು ಕೊಡುವ ಇನ್ನೊಂದು ಕಾರಣ ಕೃತಿಯ ಅಂತ್ಯದಲ್ಲಿ ಬಂದಿರುವ ಪದ್ಯ; ಅದು ಈ ರೀತಿ ಇದೆ.

ಎನಿತನು ಪ್ರೇಕ್ಷೆಯವೆಲ್ಲಮ
ನನುವಾಗಿಯೆ ಪೇಳ್ದ ಬಂಧುವರ್ಮ ಕವೀಂದ್ರಂ
ಮನವೊಲಿದು ಕೇಳ್ದುದೆಲ್ಲರು
ಘನಸಾರ ಸುಬೋಧೆ ಜೀವಸಂಬೋಧನೆಯಂ

ಈ ಪದ್ಯದ ಪ್ರಕಾರ ಕವಿ ಬಂಧುವರ್ಮನೆಂದೂ, ಕೃತಿ ಜೀವ ಸಂಬೋಧನೆ ಎಂದೂ ಅರ್ಥವಾಗುವುದು. ಆದರೆ ಇದು ಪ್ರಸ್ತುತ ಕೃತಿಗೆ ಸಂಬಂಧಿಸಿರದೆ, ಕವಿಯ ಇನ್ನೊಂದು ಕಾವ್ಯವಾದ 'ಜೀವಸಂಬೋಧನೆ'ಗೆ ಸಂಬಂಧಿಸಿರುವುದು ಸ್ಪಷ್ಟವೇ ಇದೆ. ಸತಿಧರ್ಮಸಾರದಲ್ಲಿ ಈ ಪದ್ಯ ಇದ್ದಕ್ಕಿದಂತೆ ಬಂದಂತೆ ತೋರುವುದು. ಈ ಕೃತಿಯೂ ಬಂಧುವರ್ಮನದೆ ಎಂದು ನಂಬಿದ ಯಾರೋ ಮುಂದಿನವರು ಬರೆದು ಸೇರಿಸಿರುವ ಸಾಧ್ಯತೆಯನ್ನು ನಿರಾಕರಿಸುವಂತಿಲ್ಲ ಒಂದೇ ಒಂದು ಹಸ್ತಪ್ರತಿ ಮಾತ್ರ ದೊರೆತಿರುವುದರಿಂದ ಏನನ್ನು ಹೇಳುವುದೂ ಕಷ್ಟವಾಗಿದೆ. ಈ ಉಲ್ಲೇಖವನ್ನು ಬಿಟ್ಟರೆ ಬೇರೆಲ್ಲಿಯೂ ಇದು ಬಂಧುವರ್ಮನದೆಂಬುದಕ್ಕೆ ಆಧಾರವಿಲ್ಲ. ಆದರೆ ಕೃತಿಯ ಹೆಸರನ್ನು ಮಾತ್ರ ಸೂಚಿಸಲಾಗಿದೆ. 'ಜೈನರೆನಿಸುವ ಸತಿಯರಿಗೆ' ಧರ್ಮಾಧರ್ಮ ಸ್ಥಿತಿಯನ್ನೂ ಜಿನಪತಿಯ ನುಡಿಯನ್ನೂ ಹಿತವಾದ ರೀತಿಯಲ್ಲಿ ಹೇಳಲು ಸತಿಧರ್ಮಸಾರವಂ ವಿರಚಿಸುವೆ (ಪ.೮) ಎಂದು ಕವಿ ಹೇಳಿಕೊಂಡಿದ್ದಾನೆ. ಇದರಿಂದ ಕೃತಿಯ ಹೆಸರು 'ಸತಿಧರ್ಮಸಾರ' ಎಂದು ಅಭಿಪ್ರಾಯಪಡುವುದು ಸಹಜ. ಕಾವ್ಯದ ಉದ್ದೇಶಿತ ನಿಲುವು ಶ್ರಾವಕ ಧರ್ಮವನ್ನು ತಿಳಿದಂತಹ ಶ್ರಾವಕಿಯರಿಗೆ ಹೇಳುವಂಥದು; 'ಶ್ರಾವಕ ವಧುಗಳಿಗೆ ಆರ್ಜಿದವರಿಗೇ ಪೇಳ್ವೆಂ' (ಪ.೯) ಕವಿಯ ಮಾತೇ ಇದನ್ನು ಸ್ಪಷ್ಟಪಡಿಸುವುದು. ಕುಟುಂಬದ ಚೌಕಟ್ಟಿನಲ್ಲಿ ಗೃಹಿಣಿಯರು ಅರ್ಥಾತ್ ಶ್ರಾವತಿಯರು ಅನುಸರಿಸಬೇಕಾದ ಕಟ್ಟುಕಟ್ಟಳೆ ಮತ್ತು ರೀತಿ ನೀತಿಗಳ ಆಚರಣೆ ಸಂಬಂಧವಾದ ಬೋಧನೆಯೇ ಇದರ ವಸ್ತು. ಒಂದು ಪ್ರಾಕೃತಗಾಹೆಯನ್ನೂ ಸೇರಿಸಿಕೊಂಡಂತೆ ಒಟ್ಟು ೧೯೦ ಪದ್ಯಗಳಿವೆ. ಇಡಿಯಾಗಿ ಕಂದಪದ್ಯಗಳಲ್ಲಿ ರಚಿತವಾಗಿರುವ ಒಂದು ನೀತಿ ಕಾವ್ಯವಿದು. ತುಂಬ ಮಿತಿಗಳಿರುವ 'ಸತಿಧರ್ಮಸಾರ' ಬಂಧುವರ್ಮನದೆಂದೇ ನಂಬುವುದಾದರೆ, ಅವನವೇ ಆದ ಉಳಿದೆರಡು ಕಾವ್ಯಗಳ ಮಟ್ಟಕ್ಕೆ ಯಾವ ಕಾರಣಕ್ಕೂ ಬರಲಾರದೆಂದೇ ತೋರುತ್ತದೆ.

೬

ಒಂದು ಕಾಲಕ್ಕೆ ಉಪೇಕ್ಷೆಗೆ ಗುರಿಯಾಗಿದ್ದ ಕವಿ ಬಂಧುವರ್ಮ. ನಮ್ಮ ಸಾಹಿತ್ಯ ಚರಿತ್ರಕಾರರು ಮತ್ತು ಸಂಶೋಧಕ ವಿದ್ವಾಂಸರು ವಿದ್ವತ್ತಿನ ವಲಯದಲ್ಲಿ ಕವಿಯನ್ನು ಸರಿಯಾದ ರೀತಿಯಲ್ಲಿ ಗುರುತಿಸದೇ ಹೋದರು. ಈ ಕಾರಣದಿಂದ ಸಾಹಿತ್ಯ ಚರಿತ್ರೆಯಲ್ಲಿ ಬಂಧುವರ್ಮ ಅರ್ಹಸ್ಥಾನದಿಂದ ವಂಚಿತನಾದುದು ಒಂದು ವಿಷಾದದ ಸಂಗತಿ. ಪರಿಸ್ಥಿತಿ ಹೀಗಿದ್ದಾಗ, ಅವನ ಕಾವ್ಯಕಲೆಯನ್ನು ಗುರುತಿಸಿ, ಸಾಹಿತ್ಯ ಕ್ಷೇತ್ರಕ್ಕೆ ಅವನನ್ನು ಸಮರ್ಥವಾಗಿ ಪ್ರವೇಶಿಸಿದ ಕೀರ್ತಿ

ಬಿ.ಎಸ್. ಸಣ್ಣಯ್ಯನವರಿಗೆ ಮತ್ತು ಹಂಪ. ನಾಗರಾಜಯ್ಯನವರಿಗೆ ಸಲ್ಲಬೇಕು. ಸಣ್ಣಯ್ಯನವರು ಬಂಧುವರ್ಮನ ಕೃತಿಗಳನ್ನು ಸಮರ್ಪಕವಾಗಿ ಸಂಪಾದಿಸಿರುವುದಲ್ಲದೆ[19] ವಿಮರ್ಶೆಯನ್ನೂ ಬರೆದು ಕವಿಯನ್ನು ಪ್ರಸಿದ್ಧಗೊಳಿಸಿದರು. ಹಾಗೆಯೇ ತಮ್ಮ ಸಂಶೋಧನ-ವಿಮರ್ಶನ ಲೇಖನ, ಪುಸ್ತಕಗಳ ಮೂಲಕ ಹಂಪನಾ ಅವರು ಬಂಧುವರ್ಮನನ್ನು ಜನಪ್ರಿಯಗೊಳಿಸಿದರು. ಇಷ್ಟಾದರೂ ಬಂಧುವರ್ಮನನ್ನು ಕುರಿತ ವ್ಯಾಪಕ-ಸಂಶೋಧಕ ಅಧ್ಯಯನವೊಂದು ಅಗತ್ಯವಿದೆಯೆಂದು ಹೇಳಬೇಕು.[20]

19. ಬಂಧುವರ್ಮನ ಜೀವಸಂಬೋಧನಂ ಕೃತಿಯನ್ನು ಎಚ್.ಶೇಷ ಅಯ್ಯಂಗಾರ್ ಅವರು ಬಹಳ ಹಿಂದೆಯೇ ಸಂಪಾದಿಸಿ ಪ್ರಕಟಿಸಿದ್ದಾರೆ.

20. ಬಂಧುವರ್ಮ ಮತ್ತು ಅವನ ಕೃತಿಗಳನ್ನು ಕುರಿತು ಬಿ.ಎಸ್. ಸಣ್ಣಯ್ಯನವರು ಒಂದು ನಿಬಂಧವನ್ನು ಸಿದ್ಧಪಡಿಸಿದ್ದರು; ಆದರೆ ಅದು ಅಚ್ಚಾದಂತಿಲ್ಲ.

# ಕನ್ನಡ ಸಂಶೋಧನ ಸಾಹಿತ್ಯ

ಡಾ|| ಬಿ. ಆರ್. ಹಿರೇಮಠ

ಪಾಶ್ಚಿಮಾತ್ಯರ ಆಗಮನದಿಂದ ಭಾರತದಲ್ಲಿಯ ಹಳೆಯ ಜ್ಞಾನಶಾಖೆಗಳು ಹೊಸ ಆವಿಷ್ಕಾರ ಪಡೆದವು. ಜೊತೆಗೆ ಹೊಸಜ್ಞಾನಶಾಖೆಗಳು ಹುಟ್ಟಿಕೊಂಡವು. ಭಾರತದಲ್ಲಿ ಹೊಸಜ್ಞಾನಶಾಖೆಗಳು ಅಸ್ತಿತ್ವಕ್ಕೆ ಬರಲು ಪಾಶ್ಚಿಮಾತ್ಯರ ಆಗಮನ ಕಾರಣವಾಯಿತೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಹೀಗೆ ಹದಿನೆಂಟನೆಯ ಶತಮಾನದಲ್ಲಿ ಭಾರತದಲ್ಲಿ ಅಸ್ತಿತ್ವವನ್ನು ಹೊಂದಿದ ಹೊಸಜ್ಞಾನ ಶಾಖೆಗಳಲ್ಲಿ 'ಸಂಶೋಧನೆ' ಅತ್ಯಂತ ಪ್ರಮುಖ ಜ್ಞಾನಶಾಖೆಯಾಗಿದೆ.

ಭಾರತದಲ್ಲಿ ಹಾಗೂ ಕರ್ನಾಟಕದಲ್ಲಿ ಈ ಹೊಸ ಜ್ಞಾನಶಾಖೆಯನ್ನು ಆರಂಭಿಸಿದ ಅಗ್ರಶ್ರೇಯಸ್ಸು ವಿದೇಶಿ ವಿದ್ವಾಂಸರಿಗೆ ಸಲ್ಲುತ್ತದೆ. ವಿದೇಶಿ ವಿದ್ವಾಂಸರೇ ಕನ್ನಡ ಸಂಶೋಧನೆಯ ಆದ್ಯ ಪ್ರವರ್ತಕರು. ಹೀಗೆ ಕರ್ನಾಟದಲ್ಲಿ ಕನ್ನಡ ಸಂಶೋಧನೆ ವಿದೇಶಿ ವಿದ್ವಾಂಸರಿಂದಲೇ ಅನಾವರಣಗೊಂಡಿರುವುದು ಚರಿತ್ರೆಯಿಂದ ತಿಳಿದುಬರುತ್ತದೆ.

೧೭೮೩ರಲ್ಲಿ ಕರ್ನಲ್ ಮೆಕೆಂಝಿ ಶಾಸನಗಳ ಕ್ಷೇತ್ರಕಾರ್ಯ, ಸಂಗ್ರಹ ಮಾಡುವುದರ ಮೂಲಕ ಸಂಶೋಧನ ಕ್ರಿಯೆಯನ್ನು ಚಾಲನೆಗೊಳಿಸಿದ. ಇದರಂತೆ ಸರ್ ವಿಲಿಯಂ ಜೋನ್ಸ್ ೧೭೮೪ರಲ್ಲಿ ಕಲಕತ್ತೆಯಲ್ಲಿ 'ಏಸಿಯಾಟಿಕ್ ಸೊಸೈಟಿ ಆಫ್ ಬೆಂಗಾಲ್' ಹೆಸರಿನ ಸಂಸ್ಥೆಯನ್ನೂ ೧೭೮೮ರಲ್ಲಿ 'ಏಸಿಯಾಟಿಕ್ ರಿಸರ್ಚಸ್' ಪತ್ರಿಕೆಯನ್ನೂ ಪ್ರಾರಂಭಿಸುವುದರ ಮೂಲಕ ಭಾರತಶಾಸ್ತ್ರ ಅಧ್ಯಯನ, ಸಂಶೋಧನೆಗಳಿಗೆ ಪ್ರಮುಖ ಅವಕಾಶವನ್ನು, ಕರ್ನಾಟಕಶಾಸ್ತ್ರ ಸಂಶೋಧನೆಗೆ ಪಾಕ್ಷಿಕ ಪ್ರವೇಶವನ್ನು ಕಲ್ಪಿಸಿಕೊಟ್ಟ. ಹೀಗೆ 'ಸಂಶೋಧನೆ' ಭಾರತ ಮತ್ತು ಕರ್ನಾಟಕಗಳಲ್ಲಿ ಕುಡಿಬಿಟ್ಟು ಹಬ್ಬಲು ಕರ್ನಲ್ ಮೆಕೆಂಝಿ, ಸರ್ ವಿಲಿಯಂ ಜೋನ್ಸ್ ಕಾರಣೀಭೂತರೆನಿಸಿದರು. 'ಏಸಿಯಾಟಿಕ್ ರಿಸರ್ಚಸ್' ಪತ್ರಿಕೆಯ ಮೂರನೆಯ ಸಂಪುಟ (೧೭೯೩)ದಲ್ಲಿ ಪ್ರಕಟವಾದ ವಿಜಯನಗರ ಅರಸರ ಶಾಸನವೇ ಕನ್ನಡ ಸಂಶೋಧನೆಯ ಪ್ರಪ್ರಥಮ ಪ್ರಕಟನೆಯಾಗಿದೆ. ಹೀಗೆ ಕನ್ನಡ ಸಂಶೋಧನೆ ಏಕಕಾಲಕ್ಕೆ ಕ್ಷೇತ್ರಕಾರ್ಯ, ಸಂಗ್ರಹ ಹಾಗೂ ಪ್ರಕಟನೆಗಳ ರೂಪದಲ್ಲಿ ಆರಂಭಗೊಂಡುದು ವ್ಯಕ್ತವಾಗುತ್ತದೆ. ಇದಲ್ಲದೆ ಕನ್ನಡ ಸಂಶೋಧನೆ ಶಾಸನಗಳಿಂದಲೇ ಪ್ರಾರಂಭವಾದುದು ಒಂದು ವೈಶಿಷ್ಟ್ಯವೆಂದೇ ಹೇಳಬೇಕು.

ಕನ್ನಡ ಸಾಹಿತ್ಯ ಪ್ರಕಾರಗಳಾದ ಕಾವ್ಯ, ಕಾದಂಬರಿ, ಸಣ್ಣಕತೆ, ನಾಟಕ, ವಿಮರ್ಶೆಗಳಂತೆ 'ಸಂಶೋಧನೆ'ಯೂ ಒಂದು ಸ್ವತಂತ್ರ ಅಧ್ಯಯನ ಕ್ಷೇತ್ರವಾಗಿ, ಶೈಕ್ಷಣಿಕಶಿಸ್ತು ಆಗಿ ಇಂದು ಪರಿಣಮಿಸಿದೆ. ಇದು ತುಂಬ ನೀರಸವಾದ, ಸಾರ್ವಜನಿಕ ಆಕರ್ಷಣೆಯಿಂದ ವಿದೂರವಾದ

ಕ್ಷೇತ್ರ. ನಾಡಿನ ಪ್ರಮುಖ ಸಾಹಿತ್ಯಿಕ ಸಂಸ್ಥೆಗಳ ಉಪೇಕ್ಷೆಗೆ ಗುರಿಯಾದ, ಆ ಸಂಸ್ಥೆಗಳ ಸೌಲಭ್ಯ, ಪ್ರೋತ್ಸಾಹಗಳಿಂದ ವಂಚಿತವಾದ ಜ್ಞಾನಶಾಖೆಯಿದಾಗಿದೆ. ಇಂಥ ನೀರಸವಾದ ಕ್ಷೇತ್ರಗಳಲ್ಲಿ ಕಾರ್ಯ ಮಾಡಿದವರ, ಮಾಡುವವರ ಸಂಖ್ಯೆಯೂ ತೀರ ವಿರಳ.

ಕನ್ನಡ ಸಂಶೋಧನೆ ಕ್ಷೇತ್ರಕಾರ್ಯ, ಸ್ವತಂತ್ರಲೇಖನ, ಗ್ರಂಥ, ಟಿಪ್ಪಣಿ (ಸಂಪಾದಿತ ಕೃತಿಗಳ) ಪ್ರಸ್ತಾವನೆ, ಸಂಗ್ರಹ-ಸಂಕಲನ, ವಿಶ್ಲೇಷಣೆ, ವಿವೇಚನೆಗಳ ರೂಪದಲ್ಲಿ ಹೊರ ಬಂದಿದೆ. ಇದು ಶಾಸನ, ಹಸ್ತಪ್ರತಿ, ಪ್ರಾಚೀನ ಕೃತಿಗಳ ಪರಿಷ್ಕರಣ, ಜಾನಪದ, ಭಾಷೆ, ಛಂದಸ್ಸು, ವ್ಯಾಕರಣ, ಸಂಸ್ಕೃತಿ, ಚರಿತ್ರೆ ಮೊದಲಾದ ಕ್ಷೇತ್ರಗಳಿಗೆ ಸಂಬಂಧಿಸಿದುದಾಗಿರುತ್ತದೆ. ವಿದೇಶಿಯರಿಂದ ಆರಂಭಗೊಂಡು ಇಂದಿನವರೆಗೆ ನಿರಂತರವಾಗಿ ಮುನ್ನಡೆಯುತ್ತ ಬಂದ ಕನ್ನಡ ಸಂಶೋಧನೆಯಲ್ಲಿ ಪ್ರಮುಖವಾಗಿ ೧. ಆಕರಶೋಧ ೨. ಆಕರಗಳ ರೂಪನಿಷ್ಕರ್ಶೋಧ ೩. ಆಕರಗಳ ಗುಣನಿಷ್ಕರ್ಶೋಧ ಎಂಬ ಮೂರು ಘಟ್ಟಗಳನ್ನು ಮಾಡಿಕೊಳ್ಳಬಹುದಾಗಿದೆ. (ಡಾ. ಎಂ.ಎಂ. ಕಲಬುರ್ಗಿ: ಕನ್ನಡ ಸಂಶೋಧನ ಶಾಸ್ತ್ರ. ಪುಟ ೧೦೨) ಈ ಮೂಲಕ ಕನ್ನಡ ಸಂಶೋಧನ ಸಾಹಿತ್ಯ ಬೆಳೆದುಬಂದ ಬಗೆಯನ್ನು ಅರಿತುಕೊಳ್ಳಬಹುದಾಗಿದೆ. ಈ ಘಟ್ಟಗಳ ಮೂಲಕ ಅಲ್ಲಿ ಕಂಡುಬರುವ ಸಂಶೋಧನೆಯ ಒಲವು, ನ್ಯೂನತೆ ಹಾಗೂ ಮೌಲಿಕತೆಗಳನ್ನು ಗುರುತಿಸಬಹುದಾಗಿದೆ.

ಪ್ರಾಚೀನ ಕರ್ನಾಟಕದ ಭವ್ಯ ಪರಂಪರೆ ಹಾಗೂ ಸಾಂಸ್ಕೃತಿಕ ಚಾರಿತ್ರಿಕ ಸ್ವರೂಪಗಳು ಬಹಳ ಕಾಲದವರೆಗೆ ಅಜ್ಞಾತವಾಗಿಯೇ ಉಳಿದಿದ್ದವು. ಇಷ್ಟೇ ಅಲ್ಲ, ಮುಂದೆ ಇವುಗಳನ್ನು ತಪ್ಪಾಗಿ ಅರ್ಥೈಸುವ, ವಿವರಿಸುವ-ವಿವೇಚಿಸುವ ಕಾರ್ಯವೂ ನಡೆಯಿತು. ಇದರಿಂದ ಕರ್ನಾಟಕ, ಕರ್ನಾಟಕತ್ವಗಳ ಬಗೆಗೆ ತಪ್ಪು ಕಲ್ಪನೆ ಮೂಡುವಂತಾಯಿತು. ಇದನ್ನು ಹೋಗಲಾಡಿಸಲು ಪ್ರಾಚೀನ ಕರ್ನಾಟಕದ ಕ್ರಮಬದ್ಧ ವಿಕಾಸವನ್ನು ಸರಿಯಾಗಿ ಜೋಡಿಸುವುದು, ಅರ್ಥ ಮಾಡಿಕೊಳ್ಳುವುದು, ವಿವರಿಸುವುದು, ವಿಶ್ಲೇಷಿಸುವುದು ಅಂದಿನ ವಿದ್ವಾಂಸರಿಗೆ ಅನಿವಾರ್ಯವಾಗಿ ಪರಿಣಮಿಸಿತು. ಹೀಗೆ ಪ್ರಾಚೀನ ಕರ್ನಾಟಕದ ಸಾಂಸ್ಕೃತಿಕ ಪರಂಪರೆ, ಚಾರಿತ್ರಿಕ ಮಹತ್ವಗಳ ವ್ಯವಸ್ಥಿತವಾದ ಅಧ್ಯಯನ, ವಿವೇಚನೆಗಳು ನಡೆದಿರುವುದನ್ನು ಅನುಲಕ್ಷಿಸಿ, ವಿದ್ವಾಂಸರು ಕರ್ನಾಟಕಕ್ಕೆ ಸಂಬಂಧಿಸಿದ ಆಕರಗಳ ಶೋಧಕಾರ್ಯ ಕೈಕೊಂಡರು.

ಕರ್ನಾಟಕಕ್ಕೆ ಸಂಬಂಧಿಸಿದ ಆಕರಗಳು ಅಪಾರರಾಗಿದ್ದು, ವೈವಿಧ್ಯಪೂರ್ಣವೆನಿಸಿವೆ. ವಿದೇಶಿ ಹಾಗೂ ದೇಶೀಯ ವಿದ್ವಾಂಸರು ಈ ಆಕರಗಳ ಶೋಧಕಾರ್ಯಕ್ಕೆ ತಮ್ಮನ್ನು ತೊಡಗಿಸಿಕೊಂಡುದು ಕನ್ನಡ ಸಂಶೋಧನೆಯ ಇತಿಹಾಸದಲ್ಲಿ ಅಪೂರ್ವ ಮತ್ತು ಪುಣ್ಯ ಪ್ರಸಂಗವೆನಿಸಿದೆ. ಶಾಸನ, ಹಸ್ತಪ್ರತಿ, ಜಾನಪದ, ವಿಗ್ರಹ, ನಾಣ್ಯ, ಕೈಫಿಯತ್ತು, ದಾಖಲೆ ಹಾಗೂ ವಿವಿಧ ವಸ್ತುಗಳನ್ನು ವೈಯಕ್ತಿಕವಾಗಿ, ಸಾಂಘಿಕವಾಗಿ ಸಂಗ್ರಹಿಸಲಾಯಿತು. ಈ ಕಾರ್ಯ ಆರಂಭದಲ್ಲಿ ನಿಧಾನಗತಿಯಲ್ಲಿದ್ದರೂ ಕ್ರಮೇಣ ವೇಗವಾಗಿ ಸಾಗುವಂತಾಯಿತು.

ಸಂಶೋಧನೆಯ ಮೂಲದ್ರವ್ಯ, ಆಕರಗಳು. ಈ ಆಕರಗಳನ್ನು ಅವಲಂಬಿಸಿ ಸಂಶೋಧನೆ ಆರಂಭಗೊಳ್ಳುತ್ತದೆ. ಆಕರಗಳಲ್ಲಿದಿದ್ದರೆ ಸಂಶೋಧನಕಾರ್ಯ ನಡೆಯುವುದಿಲ್ಲ. ಆದುದರಿಂದ ಸಂಶೋಧನೆಯಲ್ಲಿ ಆಕರಗಳಿಗೆ ಅಗ್ರಸ್ಥಾನವಿದೆ. ಇಂಥ ಆಕರಗಳ ಒಲವಿಂದ ಸಂಶೋಧಕ 'ವಸ್ತುನಿಷ್ಠ ಸತ್ಯ'ವನ್ನು ಪ್ರಕಟಿಸುತ್ತಾನೆ. 'ವಸ್ತುನಿಷ್ಠನ ಸತ್ಯ'ದ ಪ್ರಕಟಸಿಯೇ ಸಂಶೋಧನೆಯ ಪ್ರಮುಖ ಉದ್ದೇಶ. ಈ ಉದ್ದೇಶ ಸಾಧನೆಗಾಗಿ ಸಂಶೋಧನೆ 'ಆಕರ'ಗಳನ್ನು ಬಯಸುತ್ತದೆ. ಹೀಗಾಗಿ ವಿದೇಶಿ ಮತ್ತು ದೇಶಿಯ ವಿದ್ವಾಂಸರು ಆರಂಭದಲ್ಲಿ ಆಕರಗಳ ಶೋಧಕಾರ್ಯಕ್ಕೆ ಕೈಹಾಕಿದರು. ಕನ್ನಡ ಸಂಶೋಧನ ಸಾಹಿತ್ಯ ಆರಂಭದಲ್ಲಿ 'ಆಕರಗಳ ಶೋಧ' ರೂಪದಲ್ಲಿ

ಕಾಣಿಸಿಕೊಂಡಿತು.

ಈ ಆಕರಗಳ ಶೋಧ ಕಾರ್ಯ ಮಾಡಿದವರಲ್ಲಿ ಕರ್ನಲ್ ಮೆಕೆಂಝಿ, ವಾಲ್ಟರ್ ಇಲಿಯಟ್, ಬಿ.ಎಲ್. ರೈಸ್, ಜೆ.ಎಫ್. ಫ್ಲೀಟ್, ಹರ್ಮನ್ ಮೊಗ್ಲಿಂಗ್, ಎಫ್. ಕಿಟಲ್ ಮೊದಲಾದವರು ಪ್ರಮುಖರಾಗಿದ್ದಾರೆ. ಈ ವಿದೇಶಿ ವಿದ್ವಾಂಸರು ಕರ್ನಾಟಕಕ್ಕೆ ಸಂಬಂಧಿಸಿದ ವೈವಿಧ್ಯಮಯವಾದ ಆಕರ ಸಾಮಗ್ರಿಯನ್ನು ರಾಶಿರಾಶಿಯಾಗಿ ಸಂಗ್ರಹಿಸಿ, ಆಕರಗಳ ಶೋಧ ಕಾರ್ಯಕ್ಕೆ ಶ್ರೀಕಾರ ಹಾಕಿದರು. ವಿದೇಶಿ ವಿದ್ವಾಂಸರ ಈ ಆಕರ ಶೋಧಕಾರ್ಯಕ್ಕೆ ಪುಲಿಗಡ್ಡ ಮಲ್ಲಯ್ಯ, ವೆಂಕಟರಾವ್, ನಾರಾಯಣರಾವ್, ವಿಠ್ಠಲರಾವ್, ಬಾಬುರಾವ್, ಆನಂದರಾವ್, ವೆಂಕಟಲಕ್ಷ್ಮಯ್ಯ, ವೆಂಕಟರಾಮಸ್ವಾಮಿ, ಕವೆಲ್ಲಿ ವೆಂಕಟಬೋರಯ್ಯ, ಬಾಲಗಂಗಾಧರ ಶಾಸ್ತ್ರಿ, ಹುಬ್ಬಳ್ಳಿಯ ಶಿವಲಿಂಗಯ್ಯ ವಸ್ತ್ರದ ಮೊದಲಾದ ದೇಶೀಯ ವಿದ್ವಾಂಸರು ಅಮೂಲ್ಯವಾದ ನೆರವು ನೀಡಿದರು. ಆಕರಗಳ ಶೋಧ ಕಾರ್ಯದಲ್ಲಿ ಈ ವಿದೇಶಿ ಹಾಗೂ ದೇಶೀಯ ವಿದ್ವಾಂಸರು ಪಟ್ಟ ಪರಿಶ್ರಮ, ಮಾಡಿದ ಪ್ರಯತ್ನ, ತೋರಿದ ಆಸಕ್ತಿ, ವಹಿಸಿದ ಕಾಳಜಿ, ದುಡಿದ ರೀತಿಗಳು ಬೆರಗುಗೊಳಿಸುವಂಥವುಗಳಾಗಿವೆ. ಈ ಉಭಯ ವಿದ್ವಾಂಸರ ಆಕರ ಶೋಧ ಕಾರ್ಯ ಅನನ್ಯ, ಅನುಪಮ, ಅಪಾರ ಹಾಗೂ ವೈವಿಧ್ಯಮಯವಾದುದಾಗಿರುತ್ತದೆ. ಈ ವಿದ್ವಾಂಸರ ಆಕರಶೋಧಕಾರ್ಯ ಉತ್ತಮ ಮಾದರಿಯದೆನಿಸಿದ್ದು, ಇಂದಿಗೂ ಅನುಕರಣ ಯೋಗ್ಯವಾಗಿದೆ.

ಕರ್ನಾಟಕಕ್ಕೆ ಸಂಬಂಧಪಟ್ಟ ಆಕರಗಳ ಸಂಗ್ರಹಕಾರ್ಯ ಆರಂಭಿಸಿದ ಪ್ರಪ್ರಥಮ ವ್ಯಕ್ತಿ ಕರ್ನಲ್ ಮೆಕೆಂಝಿ, ಭಾರತದ ವಿವಿಧ ಪ್ರಾಂತಗಳಲ್ಲಿ ಬೇರೆ ಬೇರೆ ಹುದ್ದೆಗಳನ್ನು ವಹಿಸಿಕೊಂಡು ಬ್ರಿಟಿಷರ ಅಧಿಕಾರಿಯಾಗಿ ಕೆಲಸ ಮಾಡಿದ. ಈತ ಹದಿನಾಲ್ಕು ಭಾಷೆ, ಹದಿನೇಳು ಲಿಪಿಗಳಲ್ಲಿರುವ ಹಸ್ತಪ್ರತಿ (೧೫೬೮), ಕೈಫಿಯತ್ತು (೨೦೭೦), ಶಾಸನ (೮೦೭೦), ಅರ್ವಾಚೀನ ಗ್ರಂಥ, ನಾಣ್ಯ, ವಿಗ್ರಹ, ಭೂಪಟ, ದಾಖಲೆಗಳನ್ನು ಸಂಗ್ರಹಿಸಿದ. ಹೀಗೆ ಈತನ ಆಕರಗಳ ಸಂಗ್ರಹ ಸಂಪತ್ತು ವಿಪುಲವಾಗಿದ್ದು, ಬಹುವಿಧವೆನಿಸಿದ್ದಿತು. ಈ ಆಕರಗಳ ಬಹುಭಾಗ ಮೂರುಸಲ ಇಂಗ್ಲೆಂಡಿಗೆ ಹೋದರೂ ಅಳಿದುಳಿದ ಸಂಗ್ರಹವೇ ಸಾಕಷ್ಟಿದ್ದಿತು. ಅಳಿದುಳಿದ ಸಂಗ್ರಹವನ್ನು ಮದ್ರಾಸ ಗವರ್ನಮೆಂಟ್ ಓರಿಯಂಟಲ್ ಮ್ಯಾನಸ್ಕ್ರಿಪ್ಟ್ ಲೈಬ್ರರಿಗೆ ವರ್ಗಾಯಿಸಲಾಯಿತು. ಇವುಗಳಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದ ಆಕರ ಸಾಮಗ್ರಿ ಅಧಿಕ ಪ್ರಮಾಣದ್ದೂ, ಅಮೂಲ್ಯವೂ ಆದುದಾಗಿದ್ದಿತು. ಹೀಗೆ ಕರ್ನಲ್ ಮೆಕೆಂಝಿ ಕ್ಷೇತ್ರಕಾರ್ಯದ ಮೂಲಕ ಆಕರ ಸಾಮಗ್ರಿ ಸಂಗ್ರಹದಂಥ ಪುಣ್ಯಕಾರ್ಯವನ್ನು ಪೂರೈಸಿದ ಪುಣ್ಯ ಚೇತನವೆನಿಸಿದ್ದಾನೆ.

ಸರ್ ವಾಲ್ಟರ್ ಇಲಿಯಟ್ ಮುಂಬಯಿ ಕರ್ನಾಟಕ ಪ್ರದೇಶ, ನಿಜಾಂ ಕರ್ನಾಟಕದ ಪಶ್ಚಿಮ ಪ್ರದೇಶ, ಹಳೆಯ ಮೈಸೂರು ಪ್ರಾಂತದ ಉತ್ತರ ಭಾಗಗಳಲ್ಲಿ ಸಂಚರಿಸಿ, ೧೩೦೦ ಶಾಸನಗಳನ್ನು ಸಂಗ್ರಹಿಸಿದ. ಇವುಗಳಲ್ಲಿ ೫೯೫ ಶಾಸನಗಳನ್ನು ಆರಿಸಿಕೊಂಡು "Karnatak Desh Inscription" ಹೆಸರಿನ ಕೈ ಬರಹದ ಪ್ರತಿಗಳನ್ನು ತಯಾರಿಸಿದ. ತನ್ನ ಅಧಿಕಾರಾವಧಿಯಲ್ಲಿ ಮಾಡಿದ ಶಾಸನಗಳ ಸಮಗ್ರ ಅಧ್ಯಯನವನ್ನು ಈತ 'ಜರ್ನಲ್ ಆಫ್ ರಾಯಲ್ ಏಸಿಯಾಟಿಕ್ ಸೊಸೈಟಿ' ಪತ್ರಿಕೆಯ ನಾಲ್ಕನೆಯ ಸಂಪುಟದಲ್ಲಿ "Hindu Inscriptions" ಹೆಸರಿನ ಲೇಖನದ ಮೂಲಕ ಪ್ರಕಟಿಸಿದ.

ಮೈಸೂರು ಪುರಾತತ್ವ ಇಲಾಖೆಯ ಡೈರೆಕ್ಟರ್ ಆಗಿದ್ದ ಬಿ.ಎಲ್. ರೈಸ್ ಹತ್ತು ವರ್ಷಗಳ ನಿರಂತರ ಪರಿಶ್ರಮ, ಪ್ರಯತ್ನಗಳಿಂದ 'ಮೈಸೂರು ಗೆಜೆಟಿಯರ್' ಪ್ರಕಟಿಸಿದ. ಇದಲ್ಲದೆ ಹಳೆಯ ಮೈಸೂರು ಪ್ರದೇಶದ ಒಂಬತ್ತು ಜಿಲ್ಲೆಗಳಲ್ಲಿ ದಣಿವಿಲ್ಲದೆ ಸಂಚರಿಸಿ, ೮೮೬೯ ಶಾಸನಗಳನ್ನು

ಸಂಗ್ರಹಿಸಿ, 'ಎಪಿಗ್ರಾಫಿಯಾ ಕರ್ನಾಟಿಕಾ' ಹೆಸರಿನಲ್ಲಿ ೧೨ ಸಂಪುಟಗಳನ್ನು ಹೊರತಂದ. ಕನ್ನಡ ಸಂಶೋಧನೆಯಲ್ಲಿ ಇದೊಂದು ಭೀಮಸಾಹಸ, ಭಗೀರಥ ಪ್ರಯತ್ನ. ಇದರೊಂದಿಗೆ ಬಿ.ಎಲ್. ರೈಸ್ 'ಬಿಬ್ಲಿಯೊಥಿಕಾ ಕರ್ನಾಟಿಕಾ' ಹೆಸರಿನ ಮಾಲಿಕೆಯಲ್ಲಿ ಪಂಪಭಾರತ, ಆದಿಪುರಾಣ, ಪಂಪರಾಮಾಯಣ, ಕಾವ್ಯಾವಲೋಕನ, ಕರ್ನಾಟಕ ಭಾಷಾಭೂಷಣ, ಕವಿರಾಜಮಾರ್ಗ (ಸಂ.ಕೆ.ಬಿ. ಪಾಠಕ) ಮೊದಲಾದ ಪ್ರಾಚೀನ ಕನ್ನಡ ಗ್ರಂಥಗಳನ್ನೂ ಪ್ರಕಟಿಸಿದ. ಹೀಗೆ ಬಿ.ಎಲ್. ರೈಸ್ ಶಾಸನ, ಹಸ್ತಪ್ರತಿ, ದಾಖಲೆ, ವಿಗ್ರಹ, ನಾಣ್ಯ ಮೊದಲಾದವುಗಳ ಸಂಗ್ರಹ ಕಾರ್ಯವನ್ನೂ ಶಾಸನ, ಸಾಹಿತ್ಯಗಳ ಪ್ರಕಟನೆಯನ್ನೂ ಪೂರೈಸಿದ.

ಜೆ.ಎಫ್. ಫ್ಲೀಟ್ ಅವರು ಉತ್ತರ ಕರ್ನಾಟಕ, ಹೈದರಾಬಾದ ಕರ್ನಾಟಕ ಹಾಗೂ ದಕ್ಷಿಣ ಮಹಾರಾಷ್ಟ್ರ ಪ್ರದೇಶಗಳಲ್ಲಿಯ ಶಾಸನಗಳನ್ನು ಸಂಗ್ರಹಿಸಿ "ಇಂಡಿಯನ್ ಆಂಟ್ಯಿಕ್ವರಿ" ಪತ್ರಿಕೆಯಲ್ಲಿ ಪ್ರಕಟಿಸಿದರು. ಇವರು ಶಾಸನ, ಶಿಷ್ಟಪದ ಸಾಹಿತ್ಯ, ಜನಪದ ಸಾಹಿತ್ಯ ಮೊದಲಾದ ವಿಷಯಗಳನ್ನು ಕುರಿತು ೪೫೦ಕ್ಕೂ ಮಿಕ್ಕಿದ ಲೇಖನಗಳನ್ನು ಬರೆದಿದ್ದಾರೆ. "Samskrit, Pali and Halkannada Inscriptions", "Dyanasties of Canarese Districts", "Canarese and Marathi Ballads", "A Selection of Kannada Ballads" - ಇವು ಫ್ಲೀಟರು ಹೊರತಂದ ಉಪಯುಕ್ತ ಕೃತಿಗಳು. ಶಾಸನ, ಚರಿತ್ರೆ, ಜನಪದ ಅಧ್ಯಯನಗಳಿಗೆ ಇವು ಬೆಲೆಯುಳ್ಳ ಆಕರಸಾಮಗ್ರಿಗಳಾಗಿರುತ್ತವೆ.

ಮಂಗಳೂರಿನ ಬಾಸೆಲ್ ಮಿಶನ್ ಸಂಸ್ಥೆಯ ಮೂಲಕ ಬಸವಪುರಾಣ, ಚೆನ್ನ ಬಸವಪುರಾಣ, ಕುಮಾರವ್ಯಾಸ ಭಾರತ, ಜೈಮಿನಿ ಭಾರತ (ಕೆಲವು ಸಂಧಿ), ಕನಕದಾಸರ ಹರಿಭಕ್ತಿಸಾರ, ರಾಜೇಂದ್ರನಾಮೆ, ರಾವಣ ದಿಗ್ವಿಜಯ, ತೊರವೆ ರಾಮಾಯಣ (ಅರಣ್ಯ ಕಾಂಡದ ೬ ಸಂಧಿಗಳು) ಮೊದಲಾದ ಪ್ರಾಚೀನ ಕೃತಿಗಳನ್ನು ಪ್ರಕಟಿಸುವುದರ ಮೂಲಕ ಹರ್ಮನ್ ಮೊಗ್ಲಿಂಗ್ ಅವರೂ ಸಾಹಿತ್ಯದ ನೆಲೆಯಿಂದ ಆಕರ ಸಾಮಗ್ರಿಯನ್ನು ಹೆಚ್ಚಿಸಿಕೊಟ್ಟರು. ಇದಲ್ಲದೆ ಇವರು "ಕನ್ನಡ ಗಾದೆಗಳು" (೩೫೪೭ ಗಾದೆ), 'ಕೋಟಿ ಚೆನ್ನಯ್ಯ' (ತುಳು) ಕೃತಿಗಳನ್ನು ಪ್ರಕಟಿಸಿ, ಜನಪದ ಸಾಹಿತ್ಯದ ಆಕರಗಳನ್ನೂ ಒದಗಿಸಿಕೊಟ್ಟ ಕೀರ್ತಿಗೆ ಪಾತ್ರರಾಗಿದ್ದಾರೆ.

ಫರ್ಡಿನಾಂಡ್ ಕಿಟೆಲ್ ಅವರು 'ಕನ್ನಡ-ಕನ್ನಡ-ಇಂಗ್ಲೀಷ ನಿಘಂಟು', "A Grammar of Kanarese Language"ದಂಥ ಸ್ವತಂತ್ರ ಗ್ರಂಥಗಳನ್ನೂ ಶಬ್ದಮಣಿದರ್ಪಣ, ಛಂದೋಂಬುಧಿಯಂಥ ಪರಿಷ್ಕರಣ ಗ್ರಂಥಗಳನ್ನೂ ಹೊರತಂದು, ಆಕರ ಸಾಮಗ್ರಿಯ ಸಂಪತ್ತನ್ನು ಹೆಚ್ಚಿಸಿದರು. ಇದಲ್ಲದೆ ಇವರು ಛಂದೋಂಬುಧಿಗೆ ಬರೆದ "An Essay on Kanarese Literature" ಪ್ರಪ್ರಥಮ ಕನ್ನಡ ಸಾಹಿತ್ಯ ಚರಿತ್ರೆಯಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಇದು ಉಪಯುಕ್ತ ಆಕರ ಸಾಮಗ್ರಿಯೆನಿಸಿದೆ. ಗೆರೆಟ್, ಝಿಗ್ಲರ್, ರೀವ್ ... ವ್ಯಾಕರಣ, ನಿಘಂಟುಗಳನ್ನು ರಚಿಸಿ ಆಕರ ಸಾಮಗ್ರಿಯ ಪ್ರಮಾಣವನ್ನು ಅಧಿಕಗೊ... ದರು.

ಹೀಗೆ ಕನ್ನಡ ಸಂಶೋಧನೆಯ ಆರಂಭದ ಘಟ್ಟದಲ್ಲಿ ಶಾಸನ, ಶಿಷ್ಟಪದ ಸಾ... ಜನಪದ ಸಾಹಿತ್ಯಗಳಿಗೆ ಸಂಬಂಧಿಸಿದ ಆಕರ ಸಾಮಗ್ರಿಯ ಸಂಗ್ರಹ ಹಾಗೂ ಪ್ರಕಟ... ಕಾರ್ಯಗಳೇ ಪ್ರಮುಖವಾಗಿ ನಡೆದುದು ಗೊತ್ತಾಗುತ್ತದೆ.

ಈ 'ಆಕರ ಶೋಧ' ಮತ್ತು ಪ್ರಕಟನೆ ಕ್ಷೇತ್ರಕಾರ್ಯ, ಲೇಖನ, ಗ್ರಂಥ ಪರಿ... ..., ಸ್ವತಂತ್ರ ಗ್ರಂಥ ರಚನೆಗಳ ರೂಪದಲ್ಲಿರುತ್ತದೆ. ಮೈಸೂರು ಓರಿಯಂಟಲ್ ರೀಸರ್ಚ್ ಇನ್... ...ಟ್

ಮತ್ತು ಮದ್ರಾಸ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿಗಳು ಈ ಆಕರ ಸಾಮಗ್ರಿ ಸಂಗ್ರಹದ ಮೂಲಕೇಂದ್ರಗಳಾಗಿರುತ್ತವೆ. ಏಸಿಯಾಟಿಕ್ ರೀಸರ್ಚಸ್, ಇಂಡಿಯನ್ ಅಂಟ್ಟಿಕ್ವರಿ, ಎಪಿಗ್ರಾಫಿಯಾ ಇಂಡಿಕಾ, ರಾಯಲ್ ಏಸಿಯಾಟಿಕ್ ಸೊಸೈಟಿ ಜರ್ನಲ್‌ಗಳು ಈ ಆಕರ ಸಾಮಗ್ರಿಯನ್ನೂ ಆ ಕುರಿತು ಲೇಖನಗಳನ್ನೂ ಪ್ರಕಟಿಸುವ ಮಹಾಕಾರ್ಯ ಮಾಡಿದವು. ಹೀಗೆ ಕರ್ನಾಟಕಕ್ಕೆ ಸಂಬಂಧಿಸಿದ ಆಕರ ಸಾಮಗ್ರಿಯ ಸಂಗ್ರಹ, ಪ್ರಕಟನ ಕಾರ್ಯ ಇಂಗ್ಲೆಂಡ, ಜರ್ಮನಿ ಮೊದಲಾದ ದೇಶಗಳ ವಿದೇಶಿ ವಿದ್ವಾಂಸರು, ದೇಶೀಯ ಮತ್ತು ವಿದೇಶೀಯ ಸಂಸ್ಥೆಗಳು, ವಿದ್ವತ್ ಪತ್ರಿಕೆಗಳಿಂದ ನೆರವೇರುವಂತಾಯಿತು. ಈ ಆಕರಶೋಧ ಕಾರ್ಯದಿಂದ ಶಾಸನ, ಹಸ್ತಪ್ರತಿ, ದಾಖಲೆ, ಕೈಫಿಯತ್ತು, ಜನಪದ ಹಾಡು, ಐತಿಹ್ಯ, ಪುರಾಣ, ಆಚರಣೆ, ನಂಬಿಕೆ, ನಾಣ್ಯ, ವಿಗ್ರಹ, ಶಿಷ್ಟಪದ ಸಾಹಿತ್ಯ ಮೊದಲಾದವುಗಳನ್ನು ಆಕರ ಸಾಮಗ್ರಿಗಳನ್ನಾಗಿ ಪರಿಭಾವಿಸುವುದು ಇನ್ನಷ್ಟು ಅಧಿಕವಾಗತೊಡಗಿತು. ಈ ರೀತಿಯಾಗಿ ಕನ್ನಡ ಆಕರ ಸಾಮಗ್ರಿಗಳ ಸ್ವರೂಪ ಮತ್ತು ವ್ಯಾಪ್ತಿ ವಿಸ್ತೃತಗೊಂಡಿತು. ಇದು ಕನ್ನಡ ಸಂಶೋಧನ ಸಾಹಿತ್ಯದ ಪ್ರಥಮ ಘಟ್ಟ.

ಆಂಗ್ಲ ಹಾಗೂ ಜರ್ಮನಿಯ ವಿದ್ವಾಂಸರು ಆಕರ ಶೋಧದೊಂದಿಗೆ ಲೇಖನ ಪ್ರಕಟನೆಗಳ ಮೂಲಕ ಕನ್ನಡ ಸಂಶೋಧನ ಕಾರ್ಯವನ್ನು ಪ್ರಾರಂಭಿಸಿದ್ದರು. ದೇಶೀಯ ವಿದ್ವಾಂಸರು ಈ ಸಂಶೋಧನ ಕಾರ್ಯವನ್ನು ಈಗ ಮುಂದುವರಿಸಿದರು. ಆಕರ ಸಾಮಗ್ರಿಯನ್ನು ಉಪಯೋಗಿಸಿಕೊಂಡು ಲೇಖನ ಮತ್ತು ಗ್ರಂಥರೂಪದಲ್ಲಿ ಸಂಶೋಧನ ಸಾಹಿತ್ಯ ಪ್ರಕಟಿಸಿದರು. ಈಗ ದೇಶೀಯ ವಿದ್ವಾಂಸರಿಂದ ಸಂಶೋಧನ ಕಾರ್ಯ ಚುರುಕುಗೊಂಡು ವ್ಯಾಪಕವಾಗಿ, ವೈವಿಧ್ಯಮಯವಾಗಿ, ವೇಗವಾಗಿ ಹೆಜ್ಜೆ ಹಾಕತೊಡಗಿತು.

ಹಯವದನರಾವ್, ಎ.ಎಸ್. ಅಳ್ತೇಕರ್, ಡೆರೆಟ್, ಮೊರೇಸ್ ಮೊದಲಾದವರು ಶಾಸನಾಧಾರಗಳಿಂದ ಕರ್ನಾಟಕದ ರಾಜಕೀಯ ಚರಿತ್ರೆಯನ್ನೂ ಹಸ್ತಪ್ರತಿ, ಪರಿಷ್ಕರಣಗೊಂಡ ಗ್ರಂಥಗಳಿಂದ ಎಂ. ಗೋವಿಂದ ಪೈ, ಎ. ವೆಂಕಟಸುಬ್ಬಯ್ಯ, ಆರ್. ನರಸಿಂಹಾಚಾರ್, ಕೆ. ಜಿ. ಕುಂದಣಗಾರ ಮುಂತಾದವರು ಸಾಹಿತ್ಯ ಚರಿತ್ರೆಯನ್ನೂ, ಎ.ಎನ್. ನರಸಿಂಹಯ್ಯ, ಜಿ. ಎಸ್. ಗಾಯಿ ಅವರು ಶಾಸನಗಳ ಮೂಲಕ ಭಾಷಾ ಚರಿತ್ರೆಯನ್ನೂ, ಎಸ್. ಸಿ. ನಂದೀಮಠರು ಧಾರ್ಮಿಕ ಚರಿತ್ರೆಯನ್ನೂ, ಶಂ. ಬಾ. ಜೋಶಿ ಮುಂತಾದವರು ಸಾಂಸ್ಕೃತಿಕ ಚರಿತ್ರೆಯನ್ನೂ ಎಂ. ಎಚ್. ಕೃಷ್ಣ, ಶಿವರಾಮ ಕಾರಂತರು ಕಲೆಗಳ ಚರಿತ್ರೆಯನ್ನೂ, ಎಂ. ಎ. ರಾಮಾನುಜಯ್ಯಂಗಾರ್, ಎಸ್. ಜಿ. ನರಸಿಂಹಾಚಾರ್, ಎ. ಆರ್. ಕೃಷ್ಣಶಾಸ್ತ್ರಿ, ಟಿ. ಎಸ್. ವೆಂಕಟಣ್ಣಯ್ಯ, ಎ. ಶಾಂತಿರಾಜ ಶಾಸ್ತ್ರಿ, ಶಿ.ಶಿ. ಬಸವನಾಳ, ಉತ್ತಂಗಿ ಚನ್ನಪ್ಪ, ಡಿ.ಎಲ್.ಎನ್., ತೀನಂಶ್ರೀ, ಎಚ್. ದೇವೀರಪ್ಪ, ಎನ್. ಬಸವಾರಾಧ್ಯ ಮೊದಲಾದವರು ಪ್ರಾಚೀನ ಗ್ರಂಥಗಳ ಪರಿಷ್ಕರಣ ಕಾರ್ಯವನ್ನೂ, ಫ.ಗು. ಹಳಕಟ್ಟಿ, ಚೆನ್ನಮಲ್ಲಿಕಾರ್ಜುನರು, ಶಿ.ಶಿ. ಬಸವನಾಳರು, ಎಲ್. ಬಸವರಾಜು, ಆರ್. ಸಿ. ಹಿರೇಮಠ, ಸಂ. ಶಿ. ಭೂಸನೂರಮಠರು ವಚನ ಸಾಹಿತ್ಯ ಪರಿಷ್ಕರಣವನ್ನೂ ನೆರವೇರಿಸಿದರು. ಇದರೊಂದಿಗೆ "South Indian Inscriptions", "Karnatak Inscritions" ಹೆಸರಿನ ಸಂಪುಟಗಳಲ್ಲಿ ಶಾಸನಗಳು ಪ್ರಕಟಗೊಂಡವು. ಹಲಸಂಗಿ ಗೆಳೆಯರ ಮೂಲಕ ಜನಪದ ಸಾಹಿತ್ಯ ಸಂಗ್ರಹಣೆ, ಪ್ರಕಟನೆ, ವಿವೇಚನೆ ಕಾರ್ಯ ನಡೆಯಿತು. ಹೀಗೆ ಲಭ್ಯವಿದ್ದ ಆಕರ ಸಾಮಗ್ರಿಯನ್ನು ಬಳಸಿಕೊಂಡು ನಾಡಿನ ಸಾಹಿತ್ಯ, ಧರ್ಮ, ರಾಜಕೀಯ, ಕಲೆ, ಸಂಸ್ಕೃತಿ, ಭಾಷೆಗಳ ಚರಿತ್ರೆಯ ಕ್ರಮಬದ್ಧ ವಿಕಾಸವನ್ನು ವಿನ್ಯಾಸಗೊಳಿಸುವ, ವಿವೇಚಿಸುವ ಕಾರ್ಯ ಪೂರೈಸಲ್ಪಟ್ಟಿತು. ಹೀಗೆ ಕನ್ನಡ ಸಂಶೋಧನೆಯ ಎರಡನೆಯ ಘಟ್ಟದಲ್ಲಿ ಸಂಶೋಧನ ಲೇಖನ, ಗ್ರಂಥಗಳು ಪ್ರಕಟಗೊಳ್ಳುವುದರೊಂದಿಗೆ ಈ ಘಟ್ಟದಲ್ಲಿ ಕನ್ನಡ ಸಂಶೋಧನೆ

ಬಹುಮುಖವಾಗಿ ನೆರವೇರಿದುದು ವ್ಯಕ್ತವಾಗುತ್ತದೆ. ಈ ಸಮಯದ ಕನ್ನಡ ಸಂಶೋಧನೆ ಹೆಚ್ಚಾಗಿ ಆಕರ ಕೇಂದ್ರಿತ ಸಂಶೋಧನೆ ಆಗಿರುತ್ತದೆ. ಎಂ. ಗೋವಿಂದ ಪೈ, ಎ. ವೆಂಕಟಸುಬ್ಬಯ್ಯ, ಮುಳಿಯ ತಿಮ್ಮಪ್ಪಯ್ಯ, ಶಂ.ಬಾ. ಜೋಶಿ ಅವರ ಲೇಖನ, ಕೃತಿಗಳೂ ಆರ್. ನರಸಿಂಹಾಚಾರ್‌ರ ಕವಿಚರಿತೆಯ ಸಂಪುಟಗಳೂ ಫ.ಗು. ಹಳಕಟ್ಟಿ, ಚೆನ್ನಮಲ್ಲಿಕಾರ್ಜುನರ ಲೇಖನ - ಗ್ರಂಥಗಳೂ 'ಆಕರ ಕೇಂದ್ರಿತ ಸಂಶೋಧನೆ'ಗೆ ಉತ್ತಮ ಉದಾಹರಣೆಗಳಾಗಿರುತ್ತವೆ.

ಡಿ.ಎಲ್. ನರಸಿಂಹಾಚಾರ್, ಶಿ.ಶಿ. ಬಸವನಾಳ, ಎಸ್.ಸಿ. ನಂದೀಮಠ, ಶಂ.ಬಾ.ಜೋಶಿ, ತೀನಂಶ್ರೀ, ಆರ್.ಸಿ. ಹಿರೇಮಠ, ಎಲ್. ಬಸವರಾಜು ಮೊದಲಾದ ವಿದ್ವಾಂಸರು ತಮ್ಮ ಲೇಖನ ಗ್ರಂಥಗಳ ಮೂಲಕ ಸಂಶೋಧನೆಗೆ ಹೊಸ ಆಯಾಮ ನೀಡಿದರು. ಆದರೂ ಈ ಕಾಲದ ಸಂಶೋಧನೆ ಕವಿಯ ಕಾಲ, ದೇಶ, ಮತ, ಮನೆತನ ಮತ್ತು ಕೃತಿ ವಿಮರ್ಶೆಗಳಿಗೆ ಮಾತ್ರ ಸೀಮಿತವಾಗಿದ್ದಿತು. ಇವರು 'ರೂಪನಿಷ್ಠ ಸಂಶೋಧನೆ'ಯನ್ನೂ ಕೆಲವು ಸಲ 'ಗುಣನಿಷ್ಠ ಸಂಶೋಧನೆ'ಯನ್ನೂ ಕೈಕೊಂಡರು. ಹೀಗೆ ಕನ್ನಡ ಸಂಶೋಧನೆ ಎರಡನೆಯ ಘಟ್ಟದಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿದ ಘಟನಾಶೋಧ, ಅಂದರೆ ರೂಪನಿಷ್ಠ ಶೋಧ ಕಾರ್ಯ ಅಧಿಕ ಪ್ರಮಾಣದಲ್ಲಿ ಬೆಳೆದುಬರುವಂತಾಯಿತು.

ಇಲ್ಲಿಯ ಕೆಲವು ವಿದ್ವಾಂಸರ ಸಂಶೋಧನ ಲೇಖನ, ಗ್ರಂಥಗಳು ಆಕರಗಳ ಜಟಿಲತೆ, ವಿಪುಲತೆಗಳಿಂದ, ವಿದ್ವತ್ತಿನ ಭಾರದಿಂದ, ಓದುಗರಿಗೆ ಕಗ್ಗಂಟಾಗಿ ಪರಿಣಮಿಸಿದವು. ಕೆಲವರ ಬರಹದಲ್ಲಿ ಬರುವ ಆಲಂಕಾರಿಕ ಭಾಷೆ, ಆಡಂಬರದ ಶೈಲಿ, ಕ್ಲಿಷ್ಟವಾದ ನಿರೂಪಣೆಗಳು ಸಂಶೋಧನೆಯನ್ನು ಮಸುಕುಗೊಳಿಸಿಬಿಟ್ಟಿವೆ. ಇನ್ನೂ ಕೆಲವರ ಪ್ರತಿಪಾದನ ವಿಚಾರ, ನಿರೂಪಣ ವಿಧಾನಗಳು ಸುಲಭವಾಗಿ ಅರ್ಥವಾಗುವುದಿಲ್ಲ. ಅವ್ಯವಸ್ಥಿತವಾದ ಆಲೋಚನೆ, ಶಿಥಿಲ ಶೈಲಿಗಳ ಮೂಲಕ ಸಂಶೋಧನ ಕೃತಿಗಳು ಓದುಗರಿಂದ ದೂರ ಉಳಿಯುವ ಸ್ಥಿತಿಯನ್ನು ಪಡೆದುಕೊಳ್ಳುವಂತಾಯಿತು. ಆದರೆ ಈ ವಿದ್ವಾಂಸರು ವಿವಿಧ ಮೂಲಗಳಿಂದ ಆಕರಗಳನ್ನು ಸಂಗ್ರಹಿಸಿದ ರೀತಿ, ಪಟ್ಟ ಪರಿಶ್ರಮ, ರೂಪಿಸಿದ ಸಂಯೋಜನ ಕ್ರಮ, ಮಾಡಿದ ತರ್ಕ, ಎತ್ತಿದ ಸಮಸ್ಯೆಗಳು ನಿಬ್ಬೆರಗುಗೊಳಿಸುವಂತಿವೆ. ಮುಂದಿನ ಸಂಶೋಧನೆಗೆ ಇವು ಪ್ರೇರಣೆಯನ್ನೂ ದಿಕ್ಸೂಚಿಯನ್ನೂ ಒದಗಿಸುವಂಥವುಗಳಾಗಿರುತ್ತವೆ. ಈ ಘಟ್ಟದ ವಿದ್ವಾಂಸರ ದಣಿವರಿಯದ ದುಡಿಮೆ, ಪ್ರಾಮಾಣಿಕ ಪ್ರಯತ್ನ, ಸಾಗರ ಸದೃಶ ಸಾಹಸ, ಆಳವಾದ ಅಧ್ಯಯನ, ಸಂಶೋಧನ ಪ್ರಯೋಗ ದೃಷ್ಟಿ, ಉತ್ತುಂಗ ವಿದ್ವತ್ತು, ಸಾತ್ವಿಕ ಧೈರ್ಯಗಳು ನೆನೆಯುವಂಥವುಗಳಾಗಿವೆ.

ಕನ್ನಡ ಸಂಶೋಧನೆಯ ಮೂರನೆಯ ಘಟ್ಟದಲ್ಲಿ ಆಕರ ಶೋಧ, ಆಕರಗಳ ರೂಪನಿಷ್ಠ ಶೋಧಗಳೊಂದಿಗೆ 'ಆಕರಗಳ ಗುಣನಿಷ್ಠ ಶೋಧ' ವಿಶೇಷವಾಗಿ ಬೆಳೆದು ಬರುವಂತಾಯಿತು. ಈಗ ರಾಜಕೀಯ ಚರಿತ್ರೆಗೆ ಮಾತ್ರ ಮೀಸಲಾಗಿದ್ದ ಶಾಸನಗಳನ್ನು ಸಾಂಸ್ಕೃತಿಕ ಚರಿತ್ರೆಯ ರಚನೆಗಾಗಿಯೂ ಆಕರ ಸಾಮಗ್ರಿಗಳನ್ನಾಗಿ ಬಳಸಿಕೊಳ್ಳುವ ಉಪಕ್ರಮ ಆರಂಭಗೊಂಡಿತು. ಈಗ ಇತಿಹಾಸದ ಅಧ್ಯಾಪಕರಿಗೆ ಮಾತ್ರ ಸೀಮಿತಗೊಂಡಿದ್ದ ಶಾಸನಗಳ ಅಧ್ಯಯನ, ಕನ್ನಡ ಅಧ್ಯಾಪಕರ ತೀವ್ರ ಹಾಗೂ ಸೂಕ್ಷ್ಮ ಚಿಂತನೆಗಳಿಂದ ಹೊಸ ಹೊಸ ಆಯಾಮಗಳನ್ನು ಪಡೆದುಕೊಳ್ಳುವಂತಾಯಿತು. ಆ ಮೂಲಕ ಸಾಂಸ್ಕೃತಿಕ ಚರಿತ್ರೆಯ ಹಲವಾರು ಹೊಸ ಬಾಗಿಲುಗಳು ತೆರೆದುಕೊಂಡವು. ಈ ನಿಟ್ಟಿನಲ್ಲಿ ಡಾ.ಎಂ. ಚಿದಾನಂದ ಮೂರ್ತಿ ಅವರ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಪ್ರಥಮ ಹಾಗೂ ಮೌಲಿಕ ಪ್ರಯತ್ನವೆನಿಸಿದೆ. ಆಮೇಲೆ ಕನ್ನಡ ಅಧ್ಯಾಪಕರು ಶಾಸನಗಳ ನೆಲೆಯಿಂದ ನಾಡಿನ ಸಾಂಸ್ಕೃತಿಕ ಚರಿತ್ರೆಗೆ ಅಪೂರ್ವ ಕೊಡುಗೆ

ನೀಡಿದರು. ನಾಡಿನ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನಕ್ಕೆ ಮಾದರಿಯೆನಿಸಿದರು. ಶಾಸನಗಳಲ್ಲಿ ಕರ್ನಾಟಕದ ವರ್ತಕರು, ತರ್ದವಾಡಿ ನಾಡು, ಕರ್ನಾಟಕದಲ್ಲಿ ಸತಿ ಪದ್ಧತಿ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಆರನೆಯ ವಿಕ್ರಮಾದಿತ್ಯನ ಶಾಸನಗಳು - ಒಂದು ಅಧ್ಯಯನ, ನಾಗರಖಂಡ-ಎಪ್ಪತ್ತು, ಕರ್ನಾಟಕದ ವೀರಗಲ್ಲುಗಳು, ವಿಜಯನಗರ ಕಾಲದ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಶಾಸನಗಳು ಮತ್ತು ಸಂಸ್ಕೃತಿ, ಕೆಳದಿ ಶಾಸನಗಳು - ಸಾಂಸ್ಕೃತಿಕ ಅಧ್ಯಯನ ಮತ್ತು ಸಂಪಾದನೆ, ಮೊದಲಾದವು ಕರ್ನಾಟಕ ಸಂಸ್ಕೃತಿಯ ವಿವಿಧ ಮುಖಗಳನ್ನು ಪರಿಚಯಿಸುವ ಮಹತ್ವದ ಸಂಶೋಧನ ಗ್ರಂಥಗಳಾಗಿರುತ್ತವೆ.

ಇದೇ ಸಮಯದಲ್ಲಿ ಕವಿ ಕೃತಿಗಳ ಸಾಮಾಜಿಕ-ಸಾಂಸ್ಕೃತಿಕ ಅಧ್ಯಯನವೂ ಆಕಾರ ಪಡೆಯಿತು. ವಿದ್ವಾಂಸರ ಶ್ರದ್ಧೆಯ ಅಧ್ಯಯನದಿಂದ ಕವಿ-ಕೃತಿಗಳ ಸಾಂಸ್ಕೃತಿಕ ಅಧ್ಯಯನದ ಮೌಲಿಕ ಗ್ರಂಥಗಳು ಹೊರಬಂದವು. ಕವಿ-ಕೃತಿ ಮತ್ತು ಶಾಸನಗಳ ಸಾಂಸ್ಕೃತಿಕ ಅಧ್ಯಯನ ಈ ಘಟ್ಟದ ಪ್ರಮುಖ ಒಲವು ಎನಿಸಿಕೊಂಡಿತು. ಇದರಿಂದ ಕನ್ನಡ ಸಾಹಿತ್ಯದ ಅಧ್ಯಯನದಲ್ಲಿ ಹೊಸತಿರುವು, ನೂತನ ಅಧ್ಯಾಯ ಆರಂಭಗೊಂಡಿತು. ವಚನ ಸಾಹಿತ್ಯ-ಒಂದು ಸಾಂಸ್ಕೃತಿಕ ಅಧ್ಯಯನ, ನಯಸೇನ ಮತ್ತು ಅವನ ಕೃತಿಗಳು, ಪಂಪಭಾರತ ಒಂದು ಸಾಂಸ್ಕೃತಿಕ ಅಧ್ಯಯನ, ಭರತೇಶ ವೈಭವ - ಸಾಂಸ್ಕೃತಿಕ ಅಧ್ಯಯನ, ಕೊಡೇಕಲ್ಲ ಬಸವಣ್ಣ - ಒಂದು ಅಧ್ಯಯನ, ಮುದನೂರ ದಾಸಿಮಯ್ಯ - ಒಂದು ಅಧ್ಯಯನ, ಬ್ರಹ್ಮಶಿವ - ಒಂದು ಅಧ್ಯಯನ, ಪುರಂದರ ದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳ ಸಾಂಸ್ಕೃತಿಕ ಅಧ್ಯಯನ, ಮಲೆಯ ಮಾದೇಶ್ವರ - ಒಂದು ಅಧ್ಯಯನ, ಚನ್ನಬಸವ ಪುರಾಣ - ಒಂದು ಅಧ್ಯಯನ, ತುರಂಗ ಭಾರತ - ಒಂದು ಅಧ್ಯಯನ, ಬ್ರಹ್ಮಶಿವ-ಒಂದು ಅಧ್ಯಯನ, ರಾಘವಾಂಕ ಒಂದು ಅಧ್ಯಯನ ಮುಂತಾದವು ಕವಿ-ಕೃತಿಗಳ ಸಾಮಾಜಿಕ-ಸಾಂಸ್ಕೃತಿಕ ಅಧ್ಯಯನದ ಉಪಯುಕ್ತ ಸಂಶೋಧನ ಕೃತಿಗಳಾಗಿರುತ್ತವೆ.

ಕವಿ ಹಾಗೂ ಅವನ ಕೃತಿಗಳನ್ನೂ ಸಂಸ್ಕೃತ, ಪ್ರಾಕೃತ ಮುಂತಾದ ಭಾಷೆಗಳಲ್ಲಿರುವ ಮೂಲಕವಿ-ಕೃತಿಗಳೊಂದಿಗೆ ತೂಗಿ ನೋಡಿ, ಬೆಲೆ ಕಟ್ಟುವ ತೌಲನಿಕ ಸಂಶೋಧನ ಕಾರ್ಯವೂ ಕವಿಸಾಹಿತ್ಯ, ಶಾಸನಸಾಹಿತ್ಯ, ಜನಪದ ಸಾಹಿತ್ಯಗಳ ತೌಲನಿಕ ಅಧ್ಯಯನವೂ ಪ್ರಾರಂಭಗೊಂಡಿತು. ಕನ್ನಡ ನೇಮಿಪುರಾಣಗಳ ತೌಲನಿಕ ಅಧ್ಯಯನ, ಕನ್ನಡದಲ್ಲಿ ನಂಬಿಯಣ್ಣ ಸಾಹಿತ್ಯ- ಒಂದು ಅಧ್ಯಯನ, ಮಹಾದೇವಿಯಕ್ಕ ಮತ್ತು ಕಾರಿಕಾಲಮ್ಮೆ - ತೌಲನಿಕ ಅಧ್ಯಯನ, ವೃತ್ತವಿಲಾಸನ ಧರ್ಮಪರೀಕ್ಷೆ: ತೌಲನಿಕ ಅಧ್ಯಯನ, ಶಬ್ದಮಣಿದರ್ಪಣ - ಲೀಲಾತಿಲಕಂ - ತೌಲನಿಕ ಅಧ್ಯಯನ, ಮಹಾಭಾರತ ಸಮೀಕ್ಷೆ (ವ್ಯಾಸ-ಪಂಪ-ನಾರಣಪ್ಪರ ಕೃತಿಗಳ ತೌಲನಿಕ ಅಧ್ಯಯನ), A comparative study of Tiruvalluvar, Veman and Sarvajna, Tolkappiyam and Sabdamanidarpan : A comparative study. ಕರ್ನಾಟಕ ಕಾದಂಬರಿ - ಒಂದು ವಿಮರ್ಶಾತ್ಮಕ ಮತ್ತು ತೌಲನಿಕ ಅಧ್ಯಯನ, ನನ್ನೂಲ್ ಮತ್ತು ಶಬ್ದಮಣಿ ದರ್ಪಣ ಒಂದು - ತೌಲನಿಕ ಅಧ್ಯಯನ, ಕರ್ಣಾಟಕ ಶಬ್ದಾನುಶಾಸನ ಶಬ್ದಮಣಿದರ್ಪಣ- ಒಂದು ತೌಲನಿಕ ಅಧ್ಯಯನ, ಕನ್ನಡದಲ್ಲಿ ರಾಮಾಯಣ ಮಹಾಕಾವ್ಯಗಳು - ಶ್ರೀರಾಮಾಯಣದರ್ಶನಂ ಮತ್ತು ಕಂಬರಾಮಾಯಣ, ಕನ್ನಡ ಜೀವಂಧರ ಚರಿತ್ರೆಗಳ ತೌಲನಿಕ ಅಧ್ಯಯನ, ಕನ್ನಡ ಆದಿತೀರ್ಥಂಕರ ಚರಿತ್ರೆಗಳು, ಹರಿಶ್ಚಂದ್ರನ ಕಥೆ - ಭಾರತೀಯ ಸಾಹಿತ್ಯ ಪರಂಪರೆಯಲ್ಲಿ, ಚೌಂಡರಸ - ತೌಲನಿಕ, ವಿಮರ್ಶಾತ್ಮಕ ಅಧ್ಯಯನ, ಸೂಫಿಪಥ ಮತ್ತು ಶರಣಪಥ - ಒಂದು ತೌಲನಿಕ ಅಧ್ಯಯನ, ನಂಬಿಯಣ್ಣ - ಒಂದು ಅಧ್ಯಯನ, ಬಸವೇಶ್ವರ ಮತ್ತು ಪುರಂದರದಾಸರು -

ಒಂದು ಅಧ್ಯಯನ, ಪಂಪ - ನನ್ನಯ ತೌಲನಿಕ ಅಧ್ಯಯನ, ಅಂಡಾಳ - ಮಹಾದೇವಿ - ಮೀರಾ, ಕನ್ನಡದಲ್ಲಿ ನಳ ಚರಿತ್ರೆಗಳು ಮೊದಲಾದವು ಈ ದಿಶೆಯಲ್ಲಿ ಕೈಕೊಂಡ ತೌಲನಿಕ ಅಧ್ಯಯನದ ಪ್ರಯತ್ನಗಳಾಗಿರುತ್ತವೆ.

ಒಂದು ಅರಸುಮನೆತನ ಮತ್ತು ಅರಸುಮನೆತನದ ಒಬ್ಬ ಅರಸನ ಕಾಲಾವಧಿಯಲ್ಲಿ ರಚಿತವಾದ ಸಾಹಿತ್ಯದ ಬಗ್ಗೆಯೂ ಸಂಶೋಧಕರು ಗಮನಹರಿಸಿದರು.

ಕೆಳದಿ ಅರಸರ ಕಾಲದ ಕನ್ನಡ ಸಾಹಿತ್ಯ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಶಿರಸಂಗಿ ಸಂಸ್ಥಾನ - ಒಂದು ಅಧ್ಯಯನ, ಹೊಯ್ಸಳರ ಕಾಲದ ಕನ್ನಡ ಸಾಹಿತ್ಯ ಮುಂತಾದವು ಈ ಮಾದರಿಯಲ್ಲಿ ರಚಿತವಾದ ಸಂಶೋಧನ ಗ್ರಂಥಗಳಾಗಿರುತ್ತವೆ. ಸಾಂಸ್ಕೃತಿಕ ಹಾಗೂ ಐತಿಹಾಸಿಕ ಕೇಂದ್ರವೊಂದನ್ನು ವಸ್ತುವಾಗಿರಿಸಿಕೊಂಡು ಅಭ್ಯಸಿಸುವ, ಪ್ರಾಚೀನ ರಾಜಕೀಯ ವಿಭಾಗಗಳನ್ನು ಕುರಿತು ವಿವೇಚಿಸುವ ಪ್ರವೃತ್ತಿಗೂ ಸ್ಥಾನ ಲಭಿಸಿತು. ಉದಾ: ಶ್ರವಣಬೆಳ್ಗೊಳ - ರಾಜಕೀಯ, ಸಾಹಿತ್ಯ ಹಾಗೂ ಸಾಂಸ್ಕೃತಿಕ ಮಹತ್ವ, ಪುಲಿಗೆರೆ - ಐತಿಹಾಸಿಕ ಮತ್ತು ಸಾಂಸ್ಕೃತಿಕ ಮಹತ್ವ, ತರ್ದವಾಡಿ ನಾಡು - ಒಂದು ಅಧ್ಯಯನ, ನಾಗರಖಂಡ - ಎಪ್ಪತ್ತು, ಪುಲಿಗೆರೆ ಮುನ್ನೂರು ಇತ್ಯಾದಿ.

ಕನ್ನಡದ ಶಿಷ್ಟಪದ - ಜನಪದ ಸಾಹಿತ್ಯಗಳ ಸಾಮಗ್ರಿಯನ್ನು ಸಮಾಜೋ-ಧಾರ್ಮಿಕ, ಸಾಂಸ್ಕೃತಿಕ ದೃಷ್ಟಿಕೋನಗಳಿಂದ ವಿಶ್ಲೇಷಿಸುವುದೂ (ಸೂರ್ಯ ಗ್ರಹಣ: ಸಮಾಜೋ - ಧಾರ್ಮಿಕ ಅಧ್ಯಯನ, ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಜಾನಪದ: ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ, ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ, ಹೈದರಾಬಾದ ಕರ್ನಾಟಕದ ಜನಪದ ಸಾಹಿತ್ಯ: ಒಂದು ಸಾಂಸ್ಕೃತಿಕ ಅಧ್ಯಯನ, ಕೈಫಿಯತ್ತು, ಪ್ರಾದೇಶಿಕ ಅರಸುಮನೆತನಗಳು, ಪ್ರಾದೇಶಿಕ ಜನಪದ ಸಾಹಿತ್ಯ ಮೊದಲಾದ ಹೊಸ ಕ್ಷೇತ್ರಗಳನ್ನು ಕುರಿತು ವಿವೇಚಿಸಿರುವುದೂ (ಮೆಕೆಂಜಿ ಕೈಫಿಯತ್ತುಗಳು, ದಕ್ಷಿಣ ಕನ್ನಡ ಜಿಲ್ಲೆಯ ಕೈಫಿಯತ್ತುಗಳು, ತುಳುನಾಡಿನ ಅರಸುಮನೆತನಗಳು, ತುಳು ಜಾನಪದ) ಕಂಡಬರುತ್ತದೆ. ಸಂಶೋಧನೆಯ ಈ ಬಹುಮುಖಿ ಒಲವುಗಳೊಂದಿಗೆ ಕವಿಕೃತಿಗಳ ಪಾತ್ರ ಚಿತ್ರಣ, ಸಾಹಿತ್ಯ ಪ್ರಕಾರಗಳ ಅಧ್ಯಯನವೂ (ಕನ್ನಡ ಸಾಹಿತ್ಯದಲ್ಲಿ ಕರ್ಣ, ಚಿತ್ರಾಂಗದೆ - ಒಂದು ಅಧ್ಯಯನ, ಏಕಲವ್ಯ - ಒಂದು ಅಧ್ಯಯನ, ಕನ್ನಡ ಮಹಾಕಾವ್ಯಗಳಲ್ಲಿ ಸೀತೆಯ ಪಾತ್ರ, ಪ್ರಾಚೀನ ಕನ್ನಡ ಕೃತಿಗಳಲ್ಲಿ ದ್ರೌಪದಿಯ ಪಾತ್ರಚಿತ್ರಣ, ಕನ್ನಡ ಸಾಂಗತ್ಯ ಸಾಹಿತ್ಯ) ಕಾಲಿಟ್ಟಿತು. ಕನ್ನಡ ಹಸ್ತಪ್ರತಿಗಳು - ಒಂದು ಅಧ್ಯಯನದಂಥ ವಿಶಿಷ್ಟ ಸಂಶೋಧನ ಕೃತಿಯೂ ರಚಿತವಾಯಿತು.

ಇವರೊಂದಿಗೆ ಜನಪದ ಸಾಹಿತ್ಯದ ವಿವಿಧ ಪ್ರಕಾರ, ಜಾನಾಂಗಿಕ, ಸಾಂಸ್ಕೃತಿಕ ಅಧ್ಯಯನ, ಆಚರಣೆ, ನಂಬಿಕೆ, ಸಂಪ್ರದಾಯ, ಜನಪರ ರಂಗಭೂಮಿ, ವೃತ್ತಿರಂಗಭೂಮಿ, ಜನಪದ ಚಿತ್ರಕಲೆ ಮೊದಲಾದ ವಿಷಯಗಳ ಸಂಶೋಧನೆಗೂ ಸೂಕ್ತ ಅವಕಾಶ ದೊರಕಿತು. ಉತ್ತರ ಕರ್ನಾಟಕದ ಬಯಲಾಟಗಳು, ಉತ್ತರ ಕರ್ನಾಟಕದ ಜನಪದ ಕಲೆ ಮತ್ತು ವಿಧಿ ಕ್ರಿಯೆಗಳು, ಜನಪದ ಒಗಟುಗಳು, ಕರ್ನಾಟಕದ ಗೊಂದಲಿಗರು ಹಾಗೂ ಅವರ ಸಾಹಿತ್ಯ, ಹಾಲಕ್ಕಿ ಜನಪದ ಜೀವನ ಮತ್ತು ಸಾಹಿತ್ಯ, ಕರ್ನಾಟಕದ ಲಂಬಾಣಿಗಳು - ಒಂದು ಸಾಂಸ್ಕೃತಿಕ ಅಧ್ಯಯನ, ಉತ್ತರ ಕರ್ನಾಟಕದ ಜನಪದ ಆಟಗಳು, ಕರ್ನಾಟಕದ ಜನಪದ ಚಿತ್ರಕಲೆ, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ದಕ್ಷಿಣ ಕರ್ನಾಟಕದ ಜನಪದ ರಂಗಭೂಮಿ, ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿ, ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು,

ದಕ್ಷಿಣ ಕರ್ನಾಟಕದ ಜನಪದ ಪುರಾಣಗಳು, ಮಲೆನಾಡಿನ ಒಕ್ಕಲಿಗರು ಮತ್ತು ಅವರ ಜಾನಪದ, ಕನ್ನಡ ಲಾವಣಿಗಳು, ಗೊಂಡರು - ಒಂದು ಸಾಂಸ್ಕೃತಿಕ ಅಧ್ಯಯನ, ಚಿತ್ರದುರ್ಗ ಜಿಲ್ಲೆಯ ಕೃಷಿ ಜಾನಪದ, ಜೈನ ಜಾನಪದ ಸಾಹಿತ್ಯ-ಸಂಪಾದನೆ ಮತ್ತು ಅಧ್ಯಯನ, ಕರ್ನಾಟಕದ ಜನಪದ ವಾದ್ಯಗಳು, ಕಾಡುಗೊಲ್ಲರು, ಗ್ರಾಮದೇವತೆಗಳು - ಒಂದು ಜಾನಪದ ಅಧ್ಯಯನ, ಹಾಲಕ್ಕಿ ಸಮಾಜ - ಒಂದು ಅಧ್ಯಯನ, ಬೇಡ ನಾಯಕರು - ಒಂದು ಸಾಂಸ್ಕೃತಿಕ ಅಧ್ಯಯನ, ಹೈದರಾಬಾದ ಕರ್ನಾಟಕದ ಜನಪದ ಸಾಹಿತ್ಯ - ಒಂದು ಸಾಂಸ್ಕೃತಿಕ ಅಧ್ಯಯನ, ಉತ್ತರ ಕರ್ನಾಟಕದ ಲಂಬಾಣಿ ಜನಪದ ಸಾಹಿತ್ಯ - ಒಂದು ಅಧ್ಯಯನ, ಭೂತಾರಾಧನೆ - ಒಂದು ಅಧ್ಯಯನ, ದಕ್ಷಿಣ ಕನ್ನಡ ಜಿಲ್ಲೆಯ ಭೈರರು ಮುಂತಾದವು ಜನಪದ ಸಂಶೋಧನೆಯ ಕ್ಷೇತ್ರದಲ್ಲಿ ಹೊರಬಂದ ಸಂಶೋಧನ ಮಹಾಪ್ರಬಂಧ ಗ್ರಂಥಗಳಾಗಿರುತ್ತವೆ. ಇದರಿಂದ ಜನಪದವನ್ನು ಹೊಸ ಹೊಸ ನೆಲೆಗಳಿಂದ ಅಭ್ಯಸಿಸಿ, ಜನಪದ ಸಾಹಿತ್ಯ ಸಂಶೋಧನೆಗೆ ಶಾಸ್ತ್ರೀಯ ಆವಿಷ್ಕಾರ ನೀಡುವ ದೃಷ್ಟಿಕೋನ ಪ್ರಬಲಗೊಳ್ಳುವಂತಾಯಿತು.

ನಾಡಿನ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನದಲ್ಲಿ ಮಹತ್ವದ ಘಟಕಗಳೆನಿಸಿದ ವ್ಯಕ್ತಿನಾಮ, ಸ್ಥಳನಾಮಗಳ ಕಡೆಗೆ ಸಂಶೋಧಕರು ವಿಶೇಷ ಗಮನ ಹರಿಸಿದರು. ತುಳುನಾಡಿನ ಸ್ಥಳನಾಮಗಳು, ಸ್ಥಳನಾಮ ಅಧ್ಯಯನ, ಬೀದರ ಜಿಲ್ಲೆಯ ಸ್ಥಳನಾಮಗಳು, ಕೆಲವು ದೇಶನಾಮಗಳು, ಶಾಸನಗಳಲ್ಲಿ ವ್ಯಕ್ತಿನಾಮಗಳು, ಶಾಸನಗಳಲ್ಲಿ ಸ್ಥಳನಾಮಗಳು - ಇವು ಈ ಕ್ಷೇತ್ರದಲ್ಲಿ ಕೈಕೊಂಡ ಮಹತ್ವದ ಅಧ್ಯಯನಗಳಾಗಿರುತ್ತವೆ. ಆದರೆ ಈ ಕ್ಷೇತ್ರದಲ್ಲಿ ಇನ್ನೂ ಆಗಬೇಕಾದ ಕೆಲಸ ಅಪಾರವಿದೆಯೆಂಬುದನ್ನು ಮರೆಯಬಾರದು. ಕನ್ನಡ ಭಾಷೆಯ ಚಾರಿತ್ರಿಕ ಮತ್ತು ತೌಲನಿಕ ಸಂಶೋಧನ ಕಾರ್ಯವೂ ಉಪಭಾಷೆಗಳ ಅಧ್ಯಯನ ಕಾರ್ಯವೂ ಈ ಸಮಯದಲ್ಲಿ ಆರಂಭವಾಯಿತು. ಎಂ.ಎಂ. ಕಲಬುರ್ಗಿ, ಎಸ್. ಶಿವಣ್ಣ, ಪಿ.ಎಂ. ಗಿರಿರಾಜ, ಜಿ.ಎ. ಶಿವಲಿಂಗಯ್ಯ, ಎಸ್. ವಿದ್ಯಾಶಂಕರ, ಬಿ.ಆರ್. ಹಿರೇಮಠ, ವಿ.ಬಿ. ರಾಜೂರ ಮೊದಲಾದವರಿಂದ 'ಆಕರಶೋಧ' ಕಾರ್ಯ ಅವ್ಯಾಹತವಾಗಿ ನಡೆದುಕೊಂಡು ಬಂದಿತು. ಇದಲ್ಲದೆ ಸಾಹಿತ್ಯಿಕ ಘಟ್ಟಗಳನ್ನು ಆಯಾ ಕಾಲದ ಪ್ರೇರಣೆಯ ಹಿನ್ನೆಲೆಯಲ್ಲಿ ಅಭ್ಯಸಿಸಿದುದಲ್ಲದೆ (ಕನ್ನಡ ನವೋದಯ ಮತ್ತು ಬಿ.ಎಂ. ಶ್ರೀ: ಕರ್ನಾಟಕದ ಏಕೀಕರಣ) ಸಾಹಿತ್ಯ ಮತ್ತು ಸಂಸ್ಕೃತಿಗಳಿಗಿರುವ ಸಂಬಂಧದ ಅಧ್ಯಯನ (ಭಾರತೀಯತೆ ಮತ್ತು ಕನ್ನಡ ಲೇಖಕ) ಸಾಹಿತ್ಯ ಪರಿಕಲ್ಪನೆಗಳ ಸಮಾಲೋಚನೆ (ಶಾಂತಿನಾಥ ದೇಸಾಯಿಯವರ ಅಸ್ತಿತ್ವವಾದಿ ಕಾದಂಬರಿಗಳು) ನಡೆಸಲಾಗಿದೆ.

ಕನ್ನಡ ಕಾವ್ಯ, ಶಾಸ್ತ್ರ, ಛಂದಸ್ಸು, ವ್ಯಾಕರಣ, ಭಾಷೆಗಳಿಗೆ ಸಂಬಂಧಿಸಿದ ಅಂತರ್ ಶಿಸ್ತೀಯ ಅಧ್ಯಯನ ಹಾಗೂ ಒಂದು ವಿಷಯವನ್ನು ವಿವಿಧ ಮೂಲದ ಆಕರ ಸಾಮಗ್ರಿಗಳಿಂದ ಸಮಗ್ರವಾಗಿ ಅಭ್ಯಸಿಸುವ ಬಹುಶಿಸ್ತೀಯ ಅಧ್ಯಯನಗಳು ಕನ್ನಡ ಸಂಶೋಧನೆಯ ಇತ್ತೀಚಿನ ವಿಶಿಷ್ಟ ಧೋರಣೆಗಳಾಗಿರುತ್ತವೆ. ಈ ಉಭಯ ರೀತಿಯ ಅಧ್ಯಯನಗಳಿಂದ ಕನ್ನಡ ಸಂಶೋಧನೆ ವಿನೂತನ ಆಯಾಮಗಳನ್ನು ಪಡೆದುಕೊಂಡಂತಾಗಿದೆ. ಆರಿಸಿಕೊಂಡ ವಿಷಯಕ್ಕೆ ಸಂಬಂಧಿಸಿದ ಸರ್ವಮೂಲದ ಆಕರಗಳನ್ನು ಬಳಸಿಕೊಂಡು ಮಾಡುವ ಈ ಬಹುಶಿಸ್ತೀಯ ಸಂಶೋಧನೆ 'ಸಮಗ್ರ ಸಂಶೋಧನೆ' ಎನಿಸಿಕೊಳ್ಳುತ್ತದೆ. ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆಯ ಪರಿಕಲ್ಪನೆ, ಸೂರ್ಯಗ್ರಹಣ ಸಮಾಜೋ-ಧಾರ್ಮಿಕ ಅಧ್ಯಯನ, ಕರ್ನಾಟಕದಲ್ಲಿ ಸತಿ ಪದ್ಧತಿ, ಏಳುಕೊಳ್ಳದ ಎಲ್ಲಮ್ಮ ಮೊದಲಾದವು ಈ ಮಾದರಿಯ ಸಂಶೋಧನೆಯ ಮೌಲಿಕ ಕೃತಿಗಳಾಗಿರುತ್ತವೆ. ಈ ರೀತಿಯ ಸಂಶೋಧನೆ ವಿಧಾನದಿಂದ ಕನ್ನಡ ಸಂಶೋಧನೆಗೆ ಸಮಗ್ರತೆ ಸಂಪ್ರಾಪ್ತವಾಗುತ್ತಲಿದೆ. ಇಂಥ 'ಸಮಗ್ರ ಸಂಶೋಧನೆ'ಗಳು ಮಾತ್ರ ಸಂಶೋಧನ ಕ್ಷೇತ್ರವನ್ನು, ಸಂಶೋಧಕರನ್ನು

ಬೆಳೆಸುತ್ತವೆ, ಬೆಳಕಾಗಿಸುತ್ತವೆ. ಶಂ.ಬಾ. ಜೋಶಿ, ಎಂ. ಚಿದಾನಂದಮೂರ್ತಿ, ಎಂ.ಎಂ. ಕಲಬುರ್ಗಿ ಮೊದಲಾದ ಸಂಶೋಧಕರು ಹೊಸ ವ್ಯಾಖ್ಯಾನದ, ಹೊಸವಿಧಾನದ ತಮ್ಮ ಲೇಖನ-ಗ್ರಂಥಗಳ ಮೂಲಕ ಈ ಮಾದರಿಯ ಸಂಶೋಧನೆಗಳನ್ನು ಉದ್ದೀಪನಗೊಳಿಸಿದ್ದಾರೆ. ಇದಲ್ಲದೆ ಜನಪದ, ಭಾಷಾವಿಜ್ಞಾನ, ಇತಿಹಾಸ, ಸಮಾಜಶಾಸ್ತ್ರ ಪುರಾತತ್ವಶಾಸ್ತ್ರ ಮನೋವಿಜ್ಞಾನದ ನೆಲೆಗಳಿಂದಲೂ ಸಾಕಷ್ಟು ಸಂಖ್ಯೆಯ ವಿದ್ವಾಂಸರು ಕೈಕೊಂಡ ಬಹುಶಿಸ್ತೀಯ ಅಧ್ಯಯನದಿಂದ ಕನ್ನಡ ಸಂಶೋಧನೆ ವ್ಯಾಪಕತೆಯನ್ನು ಗಳಿಸಿಕೊಂಡಿದೆ. ಕನ್ನಡ ಸಂಶೋಧನ ಕ್ಷೇತ್ರದ ವಿವಿಧ ಆಯಾಮಗಳಲ್ಲಿ ಕಾರ್ಯ ಮಾಡಿದೆ, ಮಾಡುತ್ತಲಿರುವ ಯುವ ಸಂಶೋಧಕರು ತಮ್ಮ ಅಮೂಲ್ಯ ಲೇಖನ-ಗ್ರಂಥಗಳಿಂದ ಕನ್ನಡ ಸಂಶೋಧನ ಕ್ಷೇತ್ರವನ್ನು ಬಹುರೂಪಿಯಾಗಿಸಿದ್ದಾರೆ. ಹೀಗೆ ಕನ್ನಡ ಸಂಶೋಧನ ಸಾಹಿತ್ಯ ಹಲವು ಹದ, ಹಲವು ವಿಧಗಳಲ್ಲಿ ಹೊರಬರಲು ಸಾಧ್ಯವಾಯಿತು. ಅಷ್ಟೇ ಅಲ್ಲ, ವಿವಿಧ ಒಲವುಗಳನ್ನು ಮೈಗೂಡಿಸಿಕೊಂಡು ಮುನ್ನಡೆದುದರಿಂದ ಸಂಶೋಧನೆ ವ್ಯಾಪಕವಾಗಿ, ವೈವಿಧ್ಯಮಯವಾಗಿ ಬೆಳೆಯಲು ಅನುಕೂಲವಾಯಿತು. ಇದರಿಂದ ಕನ್ನಡ ಸಂಶೋಧನ ಸಾಹಿತ್ಯದ ವಿಸ್ತಾರ, ವೈಶಿಷ್ಟ್ಯಗಳು ಪ್ರಕಟಗೊಳ್ಳುವಂತಾಯಿತು.

ಶಿವಾನುಭವ, ಸದ್ಧರ್ಮದೀಪಿಕೆ, ಶರಣ ಸಾಹಿತ್ಯ, ಕರ್ನಾಟಕ ಭಾರತಿ, ಪ್ರಬುದ್ಧ ಕರ್ನಾಟಕ, ಸಾಧನೆ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಬಸವಪಥ, ಲೋಚನ, ಅಂಕಣ, ಸಂಶೋಧನ ವ್ಯಾಸಂಗ - ಮೊದಲಾದ ವಿದ್ವತ್ ಪತ್ರಿಕೆಗಳೂ ಕರ್ನಾಟಕ, ಬೆಂಗಳೂರು, ಮೈಸೂರು, ಗುಲಬರ್ಗಾ, ಮಂಗಳೂರು, ಕುವೆಂಪು, ಕನ್ನಡ ವಿಶ್ವವಿದ್ಯಾಲಯಗಳೂ ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ವಿದ್ಯಾವರ್ಧಕ ಸಂಘ, ಬಸವಸಮಿತಿ, ಬಿ.ಎಂ. ಶ್ರೀ. ಪ್ರತಿಷ್ಠಾನ, ಮೈಸೂರಿನ ಕುವೆಂಪು ಪರಿಷತ್ತು, ಉಡುಪಿಯ ಗೋವಿಂದ ಪೈ ಸ್ಮಾರಕ ಸಂಶೋಧನ ಕೇಂದ್ರ, ಕರ್ನಾಟಕ ಜಾನಪದ ಪರಿಷತ್ತು, ಉಡುಪಿಯ ಪ್ರಾದೇಶಿಕ ರಂಗಕಲೆಗಳ ಸಂಶೋಧನ ಕೇಂದ್ರ, ಮೊದಲಾದ ಸಂಸ್ಥೆಗಳೂ ಸಂಭಾವನ - ಸಂಸ್ಮರಣ ಗ್ರಂಥಗಳೂ ವಿವಿಧ ಸಮ್ಮೇಳನ, ವಿಚಾರ ಸಂಕಿರಣ, ಶಿಬಿರ, ಕಮ್ಮಟಗಳೂ, ಕನ್ನಡ ಸಂಶೋಧನ ಸಾಹಿತ್ಯವನ್ನು ಸಮೃದ್ಧವಾಗಿ ಬೆಳೆಸುವಲ್ಲಿ ಉತ್ತೇಜಕ ಪಾತ್ರ ವಹಿಸಿರುತ್ತವೆ. ಇವುಗಳ ಕ್ರಿಯಾತ್ಮಕ ಪ್ರೋತ್ಸಾಹದಿಂದ ಕನ್ನಡ ಸಂಶೋಧನ ಸಾಹಿತ್ಯ ಸತ್ವಯುತವಾಗಿಯೂ ಬಹುಮುಖಿವಾಗಿಯೂ ಬೆಳೆಯಲು ಸಾಧ್ಯವಾಗಿದೆ. ಹೀಗೆ ಕನ್ನಡ ಸಂಶೋಧನ ಸಾಹಿತ್ಯ ವ್ಯಕ್ತಿ, ಸಂಸ್ಥೆ, ಪತ್ರಿಕೆ, ವೇದಿಕೆಗಳ ಮೂಲಕ ಅಧಿಕ ಪ್ರಮಾಣದಲ್ಲಿ ಪ್ರಕಟವಾಗಿರುವುದು ವಿದಿತವಾಗುತ್ತದೆ.

ಸಂಶೋಧನೆಯ ವಸ್ತು, ಭಾಷೆ, ಶೈಲಿ, ಪ್ರತಿಪಾದನೆಗಳಿಂದ ಓದುಗರಿಗೆ ಬಹಳಷ್ಟು ಗಂಟುಗಳಾಗಿ ಪರಿಣಮಿಸಿದ ಹಳೆಯ ಸಂಶೋಧಕರ ಮಾದರಿಯ ಸಂಶೋಧನ ಪದ್ಧತಿ ಈಗ ಕಡಿಮೆಯಾಗುತ್ತ ಬಂದಿತು. ಬರಹದ ವಸ್ತು, ರೀತಿಯಲ್ಲಿ ಓದುಗರಿಗೆ ಅರ್ಥವಾಗುವಂತೆ ಸಂಶೋಧನ ಲೇಖನ, ಗ್ರಂಥಗಳು ರಚಿತಗೊಂಡವು. ಇದರಿಂದ ಸಂಶೋಧಕ-ಸಂಶೋಧನೆ-ಓದುಗರ ನಡುವಿನ ಅಂತರ ಮಾಯವಾಗತೊಡಗಿತು. ಸಂಶೋಧನೆಯ ಬಗೆಗೆ ವಿದ್ವಾಂಸರಲ್ಲಿ ಆಸಕ್ತಿ, ಕುತೂಹಲ, ಕಳಕಳಿ ಉಂಟಾಗತೊಡಗಿದವು. ಓದುಗರಿಂದ ಪ್ರೋತ್ಸಾಹದಾಯಕ ಪ್ರತಿಕ್ರಿಯೆಗಳು ಬರಲಾರಂಭಿಸಿ, ಸಂಶೋಧನ ಸಾಹಿತ್ಯ ಹುಲುಸಾಗಿ ಬೆಳೆಯುವಂತಾಯಿತು. ಹೀಗಿದ್ದರೂ ಹಿರಿಯ ತಲೆಮಾರಿನ ಕೆಲವು ಜನ ಸಂಶೋಧಕರು ಹಳೆಯ ಜಾಡಿನಲ್ಲಿಯೇ ತಮ್ಮ ಸಂಶೋಧನೆ ಮುಂದುವರಿಸಿರುವುದು ತಿಳಿದುಬರುತ್ತದೆ.

ಸಂಶೋಧನೆಯ ಸಾಮಗ್ರಿ ಸಂಕಲನ, ಸಂಕಲನವಾದ ಸಾಮಗ್ರಿಯ ವಿಶ್ಲೇಷಣೆ-ವ್ಯಾಖ್ಯಾನಗಳಲ್ಲಿ ಕೆಲವು ಸಂಶೋಧಕರು ವ್ಯವಸ್ಥೆ, ವ್ಯವಧಾನಾದಿಗಳನ್ನು ಹೊಂದದಿರುವುದು ಗೋಚರಿಸುತ್ತದೆ.

ತಾವು ಸಂಶೋಧನೆಗಾಗಿ ಆರಿಸಿಕೊಂಡ ವಸ್ತುವಿನ ಬಗೆಗೆ ಕೆಲವರಿಗೆ ಖಚಿತ ಜ್ಞಾನವಿಲ್ಲದಿರುವುದೂ ಗೊತ್ತಾಗುತ್ತದೆ. ತಾನು ಮಾಡುವ ಸಂಶೋಧನೆಯ ವಿಷಯದಲ್ಲಿ ಇಲ್ಲಿಯವರೆಗೆ ನಡೆದ ಸಂಶೋಧನೆ ಎಷ್ಟು? ಯಾವ ರೀತಿಯದು? ವಿದ್ವಾಂಸರು ಅಲ್ಲಿ ಯಾವ ಸಮಸ್ಯೆಗಳನ್ನು ಎತ್ತಿದ್ದಾರೆ? ಅವುಗಳಲ್ಲಿ ಯಾವವು ಇನ್ನೂ ಚರ್ಚಾಸ್ಪದವೆನಿಸಿವೆ? ಮುಂತಾದ ಅಂಶಗಳ ಸ್ಪಷ್ಟ ಪರಿಜ್ಞಾನವಿಲ್ಲದೆ ತಮಗೆ ತಿಳಿದ ಸಂಗತಿಗಳೆಲ್ಲವೂ ಹೊಸವೆಂದು ಭಾವಿಸಿಕೊಂಡು ಕೇವಲ ಪುಟಗಳನ್ನು ತುಂಬಿಸಿ, (ಸಂಶೋಧನೆ ಅಲ್ಲದಿದ್ದರೂ) ಅದು ಸಂಶೋಧನೆಯೆಂದು ಕೆಲವು ಜನ ಸಂಶೋಧಕರು ತೃಪ್ತಿಪಟ್ಟುಕೊಂಡಿರುವುದು ವ್ಯಕ್ತವಾಗುತ್ತದೆ. ಇಂಥ ಸಂಶೋಧನ ಸಾಹಿತ್ಯ, ಸಂಶೋಧಕರು, ಇದ್ದರೂ ಅಷ್ಟೇ ಇರದಿದ್ದರೂ ಅಷ್ಟೇ. ಇದರಿಂದ ಕನ್ನಡ ಸಂಶೋಧನ ಸಾಹಿತ್ಯ ಸತ್ವಶಾಲಿಯಾಗುವುದಿಲ್ಲ.

ಶ್ರದ್ಧೆಯ ಕೊರತೆಯಿಂದಾಗಿ ಬರವಣಿಗೆಯನ್ನು ಲಘುವಾಗಿ ಪರಿಭಾವಿಸಿದ ಪ್ರವೃತ್ತಿ ಅಲ್ಲಲ್ಲಿ ಪ್ರವೇಶ ಪಡೆದಿರುತ್ತದೆ. ಅಧ್ಯಯನ ಹಾಗೂ ಪರಿಶ್ರಮಗಳಲ್ಲಿ ಆಗಾಗ ಅಭಾವವೂ ಅನಾಸ್ಥೆಯೂ ಕಾಣಿಸಿಕೊಂಡಿದೆ. ಹೀಗಾಗಿ ಸಂಶೋಧನ ಲೇಖನ, ಗ್ರಂಥಗಳ ಒಡಲಲ್ಲಿ ಸಂಶೋಧಕರು ಅವಸರದ ನಿರ್ಣಯಗಳನ್ನು ಬಿತ್ತುತ್ತ ನಡೆದಿರುವುದು ಗೊತ್ತಾಗುತ್ತದೆ. ಇದಲ್ಲದೆ ಸಂಶೋಧಕರಿಗೆ ವಿರೋಧವಾದ ಭಾವಾವೇಶ, ಭಾವೋದ್ರೇಕಗಳು ಕನ್ನಡ ಸಂಶೋಧನ ಸಾಹಿತ್ಯದಲ್ಲಿ ಆಗಾಗ ಕಾಣಿಸಿಕೊಂಡಿವೆ. ಇದಲ್ಲದೆ ಕೆಲವು ಜನ ಸಂಶೋಧಕರು ತಮ್ಮ ಸಂಶೋಧನ ಲೇಖನ- ಗ್ರಂಥಗಳಲ್ಲಿ ವೈಯಕ್ತಿಕ ದೋಷಾರೋಪಣೆಗೆ ತೊಡಗಿರುವುದು ಅತ್ಯಂತ ವ್ಯಸನದ ಸಂಗತಿಯೆನಿಸಿದೆ. ಇಂಥವರಿಂದ ಸಂಶೋಧನೆಗೆ ಕೆಟ್ಟ ಹೆಸರು ಬರುವುದರಲ್ಲಿ ಸಂದೇಹವಿಲ್ಲ. ಸಂಶೋಧನೆ ವ್ಯಕ್ತಿನಿಷ್ಠವಾದುದಲ್ಲ, ವಸ್ತುನಿಷ್ಠವಾದುದು. ವಸ್ತುನಿಷ್ಠ ಸತ್ಯವನ್ನು ಪ್ರಕಟಿಸುವುದು ಸಂಶೋಧಕನ ಗುರಿ. ವಸ್ತುನಿಷ್ಠ ಸತ್ಯದ ಆರಾಧಕನಾದ ಸಂಶೋಧಕನನ್ನು ಸಂಶೋಧನೆಯನ್ನು, ವ್ಯಕ್ತಿನಿಷ್ಠ ಪಾತಳಿಯಿಂದ ನೋಡಿ, ತಪ್ಪಾಗಿ ಅರ್ಥೈಸುವ ಕಾರ್ಯವನ್ನು ಕೈಬಿಡುವಂತಾಗಬೇಕು.

ಕನ್ನಡ ಸಂಶೋಧನ ಸಾಹಿತ್ಯದಲ್ಲಿ ಸಂಶೋಧಕರ ವಿಶಾಲವಾದ ಆಳವಾದ ವ್ಯಾಸಂಗ, ಖಚಿತವಾದ ವಿಷಯ ಪರಿಜ್ಞಾನ, ಸಂಶೋಧನ ತತ್ವಗಳ ತಿಳುವಳಿಕೆ, ಹೊಸದನ್ನು ಹೇಳಬೇಕೆನ್ನುವ ಆಕಾಂಕ್ಷೆಗಳು ಎದ್ದುಕಾಣುತ್ತವೆ. ಇದರೊಂದಿಗೆ ಸಂಶೋಧನ ಲೇಖನ ಗ್ರಂಥಗಳಲ್ಲಿ ಅಪಾರವಾದ ಶ್ರದ್ಧೆ, ಪರಿಶ್ರಮ ಹಾಗೂ ತಲಸ್ಪರ್ಶಿಯಾದ ಆಕರಗಳ ಪರಿಶೋಧನೆ ಇರುವುದು ವಿದಿತವಾಗುತ್ತದೆ. ಕೆಲವು ಜನ ಸಂಶೋಧಕರು ತಮ್ಮ ಸಂಶೋಧನ ಲೇಖನ-ಗ್ರಂಥಗಳನ್ನು ಪ್ರಕಟಿಸುವಲ್ಲಿ, ವಸ್ತುನಿಷ್ಠ ಅಭಿಪ್ರಾಯಗಳನ್ನು ವ್ಯಕ್ತಪಡಿಸುವಲ್ಲಿ ತೋರಿದ ಧೈರ್ಯ ಮೆಚ್ಚುವಂಥದಾಗಿರುತ್ತದೆ. ಇಂಥ ಪ್ರಾಮಾಣಿಕ ಧೈರ್ಯ, ವಸ್ತುನಿಷ್ಠತೆಗಳು ಮಾತ್ರ ಸಂಶೋಧನೆಯನ್ನು ಬದುಕಿಸುತ್ತವೆ, ಬೆಳೆಸುತ್ತವೆ.

ಸಂಶೋಧನೆಯ ತತ್ವಗಳನ್ನು ಸಮರ್ಪಕವಾಗಿ - ಸಮರ್ಥವಾಗಿ ಗ್ರಹಿಸದೆ, ಸಂಶೋಧನೆಯ ಗುಣಮಟ್ಟವನ್ನು ಕಾಯ್ದುಕೊಳ್ಳದೆ, ತೀರ ಕಳಪೆಯಾದ ಕೆಲವು ಕನ್ನಡ ಸಂಶೋಧನ ಲೇಖನ - ಗ್ರಂಥ - ಮಹಾಪ್ರಬಂಧಗಳು ಹೊರಬಂದಿರುವುದು, ಹೊರ ಬರುತ್ತಲಿರುವುದು ಕನ್ನಡ ಸಂಶೋಧನ ಕ್ಷೇತ್ರದ ಅನಾರೋಗ್ಯಕರ ಹಾಗೂ ಅಪಾಯಕಾರಿ ಬೆಳವಣಿಗೆಯಾಗಿದೆ. ಈ ರೀತಿಯ ಸಂಶೋಧನ ಸಾಹಿತ್ಯ ಸೃಷ್ಟಿಯಾಗುವುದನ್ನು ತಡೆಗಟ್ಟದಿದ್ದರೆ ಕನ್ನಡ ಸಂಶೋಧನ ಸಾಹಿತ್ಯ ತನ್ನ ಬಲವಾದ ಭವಿಷ್ಯವನ್ನು ಕಳೆದುಕೊಳ್ಳುವಂತಾಗುತ್ತದೆ. ಯುವ ಸಂಶೋಧಕರು ಅವಸರ ಪ್ರವೃತ್ತಿ, ಭ್ರಷ್ಟವ್ಯಕ್ತಿ-ವ್ಯವಸ್ಥೆ, ಆಶೆ-ಆಮಿಷಗಳಿಗೆ ಅಮಾಯಕವಾಗಿ ಬಲಿಯಾಗದೆ

ತಮ್ಮ ಪಾರದರ್ಶಕ ಮನಸ್ಸಿನಿಂದ ಸಂಶೋಧನ ಕ್ಷೇತ್ರದ ಪಾವಿತ್ರ್ಯ, ಘನತೆಗಳನ್ನು ಜವಾಬ್ದಾರಿಯಿಂದ ಎತ್ತಿ ಹಿಡಿಯುವುದು ಇಂದು ತೀರ ಅವಶ್ಯವಿದೆ. ಯುವ ಸಂಶೋಧಕರು ತಮ್ಮ ನಿರಂತರ ಪರಿಶ್ರಮ, ಸತತಾಧ್ಯಯನ, ಶ್ರದ್ಧೆ - ನಿಷ್ಠೆ, ಪ್ರಾಮಾಣಿಕತೆ, ಗಟ್ಟಿಯಾದ ಬರವಣಿಗೆಗಳಿಂದ ಸಂಶೋಧನೆಯ ಮೂಲಭೂತ ತತ್ತ್ವ - ವಿಧಾನಗಳನ್ನು ಸ್ವಸಾಮರ್ಥ್ಯದಿಂದ ಅರ್ಥಪೂರ್ಣವಾಗಿ, ಪರಿಣಾಮಕಾರಿಯಾಗಿ ಅನುಷ್ಠಾನ ಗೊಳಿಸುವಂತಾಗಬೇಕು. ಅಂದಾಗ ಮಾತ್ರ ಕನ್ನಡ ಸಂಶೋಧನ ಸಾಹಿತ್ಯ ಸತ್ವಯುತವಾಗಿ ಬೆಳೆಯಲು ಸಾಧ್ಯವಾಗುತ್ತದೆ.

ಒಟ್ಟಿನಲ್ಲಿ ಕನ್ನಡ ಸಂಶೋಧನ ಸಾಹಿತ್ಯ ಆಕರಗಳ ಶೋಧ, ಆಕರಗಳ ರೂಪನಿಷ್ಠ ಶೋಧ, ಆಕರಗಳ ಗುಣನಿಷ್ಠ ಶೋಧಗಳ ರೂಪದಲ್ಲಿ ಹೊರಬಂದಿರುವುದು ಮೇಲಿನ ವಿವೇಚನೆಯಿಂದ ಗೊತ್ತಾಗುತ್ತದೆ. ಹಲವು ಗುಂಜುಗಳು ಅಲ್ಲಲ್ಲಿ ಗೋಚರಿಸಿದರೂ ಕನ್ನಡ ಸಂಶೋಧನ ಸಾಹಿತ್ಯ ಹಲವಾರು ಹೊಸ ಒಲವು ಕಾರಣವಾಗಿ ಹತ್ತುಮುಖದಲ್ಲಿ ಪ್ರವಹಿಸಿತು. ಸತ್ವ, ಗುಣಮಟ್ಟಗಳಲ್ಲಿ ತನ್ನದೇ ಆದ ಎತ್ತರವನ್ನು ಕಾಯ್ದುಕೊಂಡು ಬಂದಿತು. ಕನ್ನಡ ಸಂಶೋಧನೆಯ ಸ್ವರೂಪ, ಪ್ರಕಾರ, ವಿಧಾನಗಳನ್ನು ಕುರಿತು ಸಂಶೋಧನೆ (ಎಂ. ಚಿದಾನಂದಮೂರ್ತಿ), ಕನ್ನಡ ಸಂಶೋಧನ ಶಾಸ್ತ್ರ (ಎಂ.ಎಂ. ಕಲಬುರ್ಗಿ), ಸಂಶೋಧನೆಯ ವಿಧಾನ (ವಿ. ಕುಲಕರ್ಣಿ, ಹರಿಕೃಷ್ಣ ಭರಣ್ಯ), ಸಂಶೋಧನ ಶಾಸ್ತ್ರ (ಹೊಸ್ಕೆರೆ ಶಿವಸ್ವಾಮಿ), ಸಂಶೋಧನೆಯ ಸ್ವರೂಪ (ಬಿ.ವಿ. ಶಿರೂರ) ಮೊದಲಾದ ಕೃತಿಗಳು ರಚಿತವಾಗಿರುತ್ತವೆ. ಇದರಿಂದ ಕನ್ನಡ ಸಂಶೋಧನ ಸಾಹಿತ್ಯ ಹೊಂದಿದ ಪ್ರಬುದ್ಧತೆ, ಬೆಳವಣಿಗೆಗಳನ್ನು ತಿಳಿದುಕೊಳ್ಳಬಹುದಾಗಿದೆ.

ಕನ್ನಡ ಸಂಶೋಧನ ಕ್ಷೇತ್ರದಲ್ಲಿ ಇಲ್ಲಿಯವರೆಗೆ ವಿವಿಧ ನಿಟ್ಟಿನಿಂದ ಸಾಕಷ್ಟು ಕೆಲಸ ನಡೆದಿದ್ದರೂ ಅದು ಅಲ್ಪ ಪ್ರಮಾಣದ್ದೆಂದೇ ಹೇಳಬೇಕು. ಸಂಶೋಧನೆ ನಡೆಸಬೇಕಾದ ಕ್ಷೇತ್ರಗಳು, ಮಾಡಬೇಕಾದ ಕಾರ್ಯಗಳು ಬೆಟ್ಟದಷ್ಟು ಎತ್ತರವಾಗಿಯೂ ಸಾಗರದಷ್ಟು ವಿಶಾಲವಾಗಿಯೂ ಆಳವಾಗಿಯೂ ಇರುತ್ತವೆ. ಕರ್ನಾಟಕಕ್ಕೆ ಸಂಬಂಧಿಸಿದ ಸಮಗ್ರ ಆಕರಗಳ ಶೋಧ ಹಾಗೂ ಸಂಗ್ರಹ ಮೊಟ್ಟಮೊದಲು ನೆರವೇರಬೇಕಾಗಿದೆ. ಇದರಂತೆ ತೀರ ಉಪೇಕ್ಷಿತ ವಿಷಯಗಳ ಅಧ್ಯಯನವನ್ನೂ ಕೈಗೆತ್ತಿಕೊಳ್ಳಬೇಕಾಗಿದೆ. ಸಂಶೋಧನೆಯ ವಿಧಾನದಲ್ಲಿಯೂ ಹೊಸ ದೃಷ್ಟಿಕೋನಗಳನ್ನು ರೂಢಿಸಿಕೊಳ್ಳುವುದು ಅಗತ್ಯವಿದೆ. ಕನ್ನಡ ಸಂಶೋಧನೆ ಜನಪರವಾಗುವಂತೆ ಬೆಳೆಸಬೇಕಾಗಿದೆ. ಯಾಕೆಂದರೆ ಸಂಶೋಧನೆಯ ಫಲಿತಾಂಶಗಳು ಸಂಬಂಧಿಸಿದ ಜನರಿಗೆ, ಪ್ರದೇಶಗಳಿಗೆ ತಲುಪದೇ ಹೋದರೆ ಅಂಥ ಸಂಶೋಧನೆ ಅರ್ಥವನ್ನು ಕಳೆದುಕೊಂಡು ಜನರಿಂದ ದೂರವಾಗಿ ಉಳಿದುಬಿಡುತ್ತದೆ. ಇದರಿಂದ ಸಂಶೋಧನೆಯ ನಿಜವಾದ ಉದ್ದೇಶ ಈಡೇರದೆ ಹೋಗುತ್ತದೆ. ಆದುದರಿಂದ ವಿವಿಧ ಮಾಧ್ಯಮಗಳ ಮೂಲಕ ಸಂಶೋಧನೆಯ ಫಲಿತಾಂಶಗಳನ್ನು ಜನತೆಗೆ ತಲುಪಿಸುವುದು ತಮ್ಮ ಪರಮ ಹಾಗೂ ಆದ್ಯಕರ್ತವ್ಯವೆಂಬುದನ್ನು ಸಂಶೋಧಕರು ಪ್ರಾಂಜಲ ಮನಸ್ಸಿನಿಂದ ಪರಿಭಾವಿಸಬೇಕಾಗಿದೆ, ಪರಿಗ್ರಹಿಸಬೇಕಾಗಿದೆ. ಹೀಗಾದಾಗ ಮಾತ್ರ ಕನ್ನಡ ಸಂಶೋಧನೆ, ಸಂಶೋಧಕ ಬೆಳೆಯುವಂತಾಗುತ್ತದೆ. ಇನ್ನೂ ಅಸ್ಪೃಶ್ಯವಾಗಿ ಉಳಿದಿರುವ, ಉಪೇಕ್ಷೆಗೆ ಗುರಿಯಾಗಿರುವ ಅನೇಕ ಹೊಸ ಕ್ಷೇತ್ರಗಳತ್ತ ಸಂಶೋಧಕರು ಗಮನಹರಿಸುವುದು ಇಂದು ತೀರ ಅವಶ್ಯವಿದೆ. ಈ ಕಾರ್ಯವನ್ನು ಪೂರೈಸಿದಾಗ ಮಾತ್ರ ಕನ್ನಡ ಸಂಶೋಧನ ಸಾಹಿತ್ಯ ಪರಿಪೂರ್ಣತೆಯನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತದೆ. ಈ ಲೇಖನದಲ್ಲಿ ಎಲ್ಲ ಸಂಶೋಧನ ಲೇಖನ, ಗ್ರಂಥಗಳ ಹೆಸರನ್ನು ಹೇಳಿರುವುದಿಲ್ಲ. ಇದು ಸಾಧ್ಯವೂ ಇಲ್ಲ. ಸಾಂದರ್ಭಿಕವಾಗಿ ಮಾತ್ರ ಕೆಲವು ಸಂಶೋಧಕರ ಹಾಗೂ ಸಂಶೋಧನ ಲೇಖನ, ಗ್ರಂಥಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

# ಶಾಸನಗಳ ಹಿನ್ನೆಲೆಯಲ್ಲಿ ಚಾಮರಾಜನಗರ ಹಾಗೂ ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಜೈನಧರ್ಮ

**ಕೆಂಗೇರಿ ಚಕ್ರಪಾಣಿ**

ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮವು ಒಂದು ಪ್ರಮುಖವಾದ ಧರ್ಮವಾಗಿತ್ತು. ದಕ್ಷಿಣ ಭಾರತದ ಜೈನ ಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನಧರ್ಮದ ಇತಿಹಾಸ ಎನ್ನುವಷ್ಟರ ಮಟ್ಟಿಗೆ ಪ್ರಸಿದ್ಧಿಯಾಗಿತ್ತು. ಇದಕ್ಕೆ ಕರ್ನಾಟಕದ ಹಲವಾರು ಕಡೆ ಜೈನ ಬಸದಿಗಳು, ಶಾಸನಗಳು ದೊರೆತಿರುವುದು ಸಾಕ್ಷಿಯಾಗಿದೆ. ಮೈಸೂರು ಜಿಲ್ಲೆಯೂ ಸಹ ಇದಕ್ಕೆ ಹೊರತಾಗಿಲ್ಲ. ಇಲ್ಲಿನ ಚಾಮರಾಜನಗರ ಮತ್ತು ಗುಂಡ್ಲುಪೇಟೆ ತಾಲ್ಲೂಕಿನಲ್ಲಿನ ಜೈನ ಧರ್ಮದ ಬಗ್ಗೆ ಸಮಗ್ರವಾಗಿ ಅಧ್ಯಯನ ನಡೆಸಿ ಈ ಲೇಖನವನ್ನು ರಚಿಸಲಾಗಿದೆ.

ಪ್ರಸ್ತುತ ಸಂಪ್ರಬಂಧಕ್ಕೆ ಈ ಪ್ರದೇಶದ ಶಾಸನಗಳು ಹಾಗೂ ಕಾವ್ಯಗಳನ್ನು ಪ್ರಮುಖ ಆಕರವಾಗಿ ಬಳಸಿಕೊಂಡಿದ್ದೇನೆ.

## ಪ್ರಾಚೀನತೆ

ಭದ್ರಬಾಹು ಮುನಿಯ ಪ್ರವೇಶದೊಂದಿಗೆ ಜೈನ ಧರ್ಮವು ಕರ್ನಾಟಕದಲ್ಲಿ ಹರಡಿತು ಎಂದು ಎಲ್ಲ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ತಾಲ್ಲೂಕುಗಳಲ್ಲಿಯ ಪ್ರಾಚೀನ ಜೈನ ಉಲ್ಲೇಖವೆಂದರೆ ಎರಡನೆಯ ಶಿವಮಾರನ ಕುಲಗಾಣದ ಕ್ರಿ.ಶ. ೭ನೆಯ ಶತಮಾನದ ತಾಮ್ರ ಶಾಸನ[೧]. ಈ ಶಾಸನದಲ್ಲಿ ಕೆಲಸೂರಿನ ಬಸದಿಗೆ ದಾನವಿತ್ತುದರ ಪ್ರಸ್ತಾಪವಿದೆ. ಅಂದರೆ ಕ್ರಿ.ಶ. ೭ನೆಯ ಶತಮಾನಕ್ಕಾಗಲೇ ಈ ತಾಲ್ಲೂಕುಗಳಲ್ಲಿ ಜೈನಧರ್ಮವು ಅಸ್ತಿತ್ವದಲ್ಲಿತ್ತು ಎಂದು ಖಚಿತವಾಗಿ ಹೇಳಬಹುದು.

## ಈ ಭಾಗದ ಜೈನಧರ್ಮಕ್ಕೆ ರಾಜವಂಶಗಳ ಕೊಡುಗೆ

### ೧. ಗಂಗರು

ಗಂಗರ ವಂಶವು ಆಚಾರ್ಯ ಮುನಿಶ್ರೇಷ್ಠರಾದ ಸಿಂಹನಂದಿಯ ಪ್ರೇರಣೆಯಿಂದ ಉದಯವಾಯಿತು ಎಂದು ನಮಗೆ ಶಾಸನಗಳಿಂದ ತಿಳಿದು ಬರುತ್ತದೆ. ಚಾಮರಾಜನಗರ ತಾಲ್ಲೂಕು ಕುಲಗಾಣದಲ್ಲಿ ದೊರೆತಿರುವ ಗಂಗದೊರೆ ಶಿವಮಾರನ ಕ್ರಿ.ಶ. ೭ನೆಯ ಶತಮಾನದ ತಾಮ್ರ ಶಾಸನವು ಈ ಎರಡೂ ತಾಲ್ಲೂಕಿನಲ್ಲಿನ ಜೈನಧರ್ಮದ ಅತಿ ಪ್ರಾಚೀನ ದಾಖಲೆಯಾಗಿದೆ.

---

೧. ಎ.ಕ.-4 ಚಾ.ಮ.-347 ಪು. 220



ಚಾಮರಾಜನಗರ - ಅನಂತಕೀರ್ತಿದೇವರ ಗುಡ್ಡ ಬೊಪ್ಪಯ್ಯನ ನಿಷಧಿ



ಮಲೆಯೂರು ಪಾರ್ಶ್ವನಾಥ



ಮಲೆಯೂರು, ಬಾಹುಬಲಿಪಂಡಿತನ ಶಾಸನ



ಕೆಲಸೂರು, ಜ್ವಾಲಾಮಾಲಿನಿ



ಕೆಲಸೂರು, ಶ್ಯಾಮಯಕ್ಷ



ಹಾರಣಗೇರಿಯ ಗೌತಮೀಪುತ್ರ ಶಾತಕರ್ಣಿಯ ನಾಣ್ಯಗಳು



ಕೆಲಸೂರು, ಪಾರ್ಶ್ವನಾಥ



ಕೆಲಸೂರಿನ ನಿಷಧಿಗಳು



ಹೊಯ್ಸಳ ನರಸಿಂಹನ ಹಾರೋಕೊಪ್ಪನ ಶಾಸನ



ಹಾರೋಕೊಪ್ಪದ ಶಾಸನ



ತೀರ್ಥಹಳ್ಳಿಯ ಜೋಗಿಗುಡ್ಡದ ಜೈನ ಅವಶೇಷಗಳು



ತೀರ್ಥಹಳ್ಳಿ ಜೋಗಿಗುಡ್ಡದ ಜೈನ ಅವಶೇಷಗಳು



ಹರವೆ, ಆದಿನಾಥ ತೀರ್ಥಂಕರ

ಹರವೆಯ ನಿಷಧಿ ಶಾಸನ



ಬಂದಳಿಕೆಯ ಇಕ್ಕೈ ಮಾಸ್ತಿ



ಬನ್ನೇರುಘಟ್ಟದ ಆತ್ಮಾಹುತಿ ಸ್ಮಾರಕಗಳ ಬಳಿಯ ಶಿರಗಳು

ಬನ್ನೇರುಘಟ್ಟದ ಆತ್ಮಾಹುತಿ ಸ್ಮಾರಕಗಳು



ಕಂಬದಹಳ್ಳಿ ಪಂಚಬಸದಿಯಲ್ಲಿನ ಅಂಬಿಕಾ



ಹೊಂಬುಜ ಕಮಠೋಪಸರ್ಗ ಪಾರ್ಶ್ವನಾಥ
ಬಸದಿಯ ಅಂಬಿಕಾ



ಬೋಗಾರ ಬಸದಿಯ ಮುಂದಿರುವ
ಅಂಬಿಕಾ (ಹೊಂಬುಜ)



ಮಲೆಯೂರು ವಿಜಯಪಾರ್ಶ್ವನಾಥ ಬಸದಿಯ ಅಂಬಿಕಾ ಮೂರ್ತಿ



ಶ್ರವಣಬೆಳಗೊಳ ಶಾಸನಬಸದಿಯಲ್ಲಿನ
ಅಂಬಿಕಾ ಯಕ್ಷಿ



ಶ್ರವಣಬೆಳಗೊಳ ಎರಡುಕಟ್ಟೆ ಬಸದಿಯಲ್ಲಿನ
ಅಂಬಿಕಾ ಯಕ್ಷಿ

ಜೈನ ಆಚಾರ್ಯ ಚಂದ್ರಸೇನಾಚಾರ್ಯರಿಗೆ "ಕೊಡಗುನಾಡ ಕಿಲ್ಲಿಪುಸೂರು"[೨] ಗ್ರಾಮದ ಜಿನಾಲಯಕ್ಕಾಗಿ ಅರಸನ ಅಪ್ಪಣೆಪಡೆದು ಪಲ್ಲವ ವೇಳಾರಸ ಮತ್ತು ಗಂಗೈನಾಡ ಕಣ್ಣಮ್ಮನ್ ಅವರು ಭೂಮಿಯನ್ನು ದಾನ ಕೊಟ್ಟಿರುವುದಾಗಿ ತಾಮ್ರಶಾಸನ ತಿಳಿಸುತ್ತದೆ.

ಗುಂಡ್ಲುಪೇಟೆ ತಾಲ್ಲೂಕು ಕೆಲಸೂರೇ ಪ್ರಸ್ತುತ ಶಾಸನೋಕ್ತ "ಕಿಲ್ಲಿಪುಸೂರು". ಕುಲಗಾಣದ ಈ ತಾಮ್ರಶಾಸನದಿಂದ ಕೆಲಸೂರಿನಲ್ಲಿ ಕ್ರಿ.ಶ. ೭ನೆಯ ಶತಮಾನಕ್ಕೆ ಮೊದಲೇ ಜೈನ ಬಸದಿಗಳಿದ್ದವೆಂದು ಖಚಿತವಾಗಿ ಹೇಳಬಹುದು. ಮಲೆಯೂರಿನ ಪಾರ್ಶ್ವನಾಥ ಬಸದಿಯ ಅಂಬಿಕಾಯಕ್ಷಿ, ಜ್ವಾಲಾಮಾಲಿನಿ ಮತ್ತು ಅದೇ ಬಸದಿಯ ನವರಂಗದಲ್ಲಿರುವ ಕಂಬಗಳು ಗಂಗರಕಾಲದಲ್ಲಿ ನಿರ್ಮಿತವಾಗಿದೆ. ಕೆಲಸೂರಿನ ಚಂದ್ರಪ್ರಭ ಬಸದಿಯ ಹೊರಭಾಗದಲ್ಲಿರುವ ಪಾರ್ಶ್ವನಾಥನ ಮೂರ್ತಿ ಮುಕ್ಕೊಡೆಹಳ್ಳಿಯ ಬಸದಿಯ ಅವಶೇಷಗಳು ಗಂಗರ ಕಾಲದವುಗಳಾಗಿವೆ.

## ೨. ಹೊಯ್ಸಳರು

ಕನ್ನಡ ನಾಡನ್ನು ಆಳಿದ ಅರಸುಮನೆತನಗಳಲ್ಲಿ ಹೊಯ್ಸಳರು ಸಹ ಪ್ರಮುಖರು. ಹೊಯ್ಸಳ ವಂಶದ ಉಗಮವು ಸಹ ಜೈನಮುನಿಯಾದ ಆಚಾರ್ಯ ಸುದತ್ತಾಚಾರ್ಯರ ಪ್ರೇರಣೆಯಿಂದ ಸ್ಥಾಪಿಸಲ್ಪಟ್ಟಿತು ಎನ್ನಲಾಗಿದೆ. ಹೊಯ್ಸಳರು ಜೈನಧರ್ಮಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಚಾಮರಾಜನಗರ ಮತ್ತು ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ಹೊಯ್ಸಳರು ನಿರ್ಮಿಸಿದ ಬಸದಿಗಳಲ್ಲಿ ಅತೀ ಪ್ರಾಚೀನವಾದುದು ಚಾಮರಾಜನಗರದ ಪಾರ್ಶ್ವನಾಥ ಬಸದಿ. ವಿಷ್ಣುವರ್ಧನನ ದಂಡನಾಯಕ ಪುಣೀಸನಾಯಕನು ಕ್ರಿ.ಶ. ೧೧೧೬ರಲ್ಲಿ ಈ ಬಸದಿಯನ್ನು ನಿರ್ಮಿಸಿ ಭೂಮಿಯನ್ನು ದಾನ ಕೊಟ್ಟಿರುತ್ತಾನೆ. ಇವನನ್ನು ಶಾಸನದಲ್ಲಿ "ಗಂಗವಾಡಿ ತೊಂಬತ್ತಾರು ಸಾಸಿರದ ಬಸದಿಗಳನಲಂಕರಿಸಿದಂ ಪುಣೀಸದಂಡಾದಿಪ್ಪ"[೩] ಎಂದು ಪ್ರಶಂಸಿಸಿದೆ. ಹೊಯ್ಸಳ ವೀರ ಬಲ್ಲಾಳನ ಕಾಲದ ಕುಲಗಾಣದ ಕ್ರಿ.ಶ. ೧೧೭೩ರ ಶಾಸನವು ೬೦ ಜನ ಪ್ರಭುಗಾವುಂಡರು ವಾದಿರಾಜಮುನಿಯ ಶಿಷ್ಯನಾದ ಸಿಂಗಣ್ಣ ದೇವರಿಗೆ ಕುಲಗಾಣದ ಬಸದಿಗಾಗಿ ದಾನ ನೀಡಿರುವುದನ್ನು ನಿರೂಪಿಸುತ್ತದೆ.[೪] ವೀರಬಲ್ಲಾಳನ ಕಾಲದ ಮತ್ತೊಂದು ಶಾಸನದಿಂದ ಹರದಗಾವುಂಡನ ಮಗ ಬಿಟ್ಟಿಗಾವುಂಡನು ಕ್ರಿ.ಶ. ೧೧೯೬ರಲ್ಲಿ ಗುಂಡ್ಲುಪೇಟೆಯಲ್ಲಿ ತುಪ್ಪೂರು ಜಿನಾಲಯವನ್ನು ನಿರ್ಮಿಸಿರುತ್ತಾನೆಂದು ತಿಳಿದು ಬರುತ್ತದೆ.[೫] ಈ ಶಾಸನದಲ್ಲಿ ಮಹಾಪ್ರಧಾನಿ ಲಕ್ಷ್ಮಣ ದಂಡನಾಯಕನು ಗುಂಡ್ಲುಪೇಟೆ ಪ್ರದೇಶವನ್ನು ಆಳುತಿದ್ದನೆಂತಲೂ, ಕೊಡಗುನಾಡು-೩೦೦ರ ಪ್ರಭುಗಾವುಂಡರು ಮಾದಹಳ್ಳಿ ಎಂಬ ಗ್ರಾಮವನ್ನು ಬಸದಿಯ ಪೂಜಾಕಾರ್ಯಕ್ಕಾಗಿ "ವಜ್ರನಂದಿಸಿದ್ಧಾಂತ ದೇವರ ಶಿಷ್ಯ ನಾಗಪಂಡಿತನ ಕಾಲಕರ್ಚಿ" ಧಾರಾಪೂರ್ವಕವಾಗಿ ನೀಡಿರುವನೆಂತಲೂ ತಿಳಿದುಬರುತ್ತದೆ. ಹೊಯ್ಸಳ ವೀರ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ. ೧೨೨೯ರಲ್ಲಿ ಕೆಲಸೂರಿನ ಚಂದ್ರಪ್ರಭ ಬಸದಿಯ ಪೂಜಾಕಾರ್ಯಕ್ಕಾಗಿ ಈತನ ಸಾಮಂತನಾದ ಹಿರಿಯನಾಡ ಮಹಾಪ್ರಭು ಗೋಪಯ್ಯನೂ, ರಂಗಯ್ಯನೂ ದಾನವನ್ನು ನೀಡಿರುತ್ತಾರೆ.[೬] ಇದೇ ರಾಜನ ಆಳ್ವಿಕೆಯ ಕಾಲದ ಮತ್ತೊಂದು

---

೨. ಅದೇ - ಚಾ.ಮ. - 347. ಪು. 222
೩. ಎ.ಕ. ಚಾ.ನ.-2 ಪು. 5
೪. ಅದೇ ಚಾ.ನ.-343 ಪು. 217
೫. ಎ.ಕ. ಗು.ಪೇ-3 ಪು. 11
೬. ಎ.ಕ. III ಗುಪೇ-101 ಪು. 75

ಶಾಸನದಲ್ಲಿ ಚಾಮರಾಜನಗರದ ಪಾರ್ಶ್ವನಾಥ ಬಸದಿಗಾಗಿ ಕೆಲವು ತೆರಿಗೆಗಳನ್ನು ಮಾನ್ಯ ಮಾಡಿರುವುದು ತಿಳಿದು ಬರುತ್ತದೆ.[೭] ಹೀಗೆ ಹೊಯ್ಸಳ ದೊರೆಗಳು ಜೈನ ಧರ್ಮದ ಏಳಿಗೆಗಾಗಿ ಹಾಗೂ ಸಂರಕ್ಷಣೆಗಾಗಿ ಶ್ರಮಿಸಿರುತ್ತಾರೆ.

## ೩. ವಿಜಯನಗರದ ಅರಸರು

ಹಿಂದೂಧರ್ಮ ಪ್ರತಿಷ್ಠಾಪನಾಚಾರ್ಯ ಎಂಬ ಬಿರುದನ್ನು ವಿಜಯನಗರದ ಅರಸರು ಪಡೆದಿದ್ದರೂ ಸರ್ವಧರ್ಮ ಸಮನ್ವಯಿಗಳಾಗಿದ್ದರು ಎಂಬುದು ಸರ್ವವೇದ್ಯವಾದ ಸಂಗತಿಯಾಗಿದೆ.

ಚಾಮರಾಜನಗರ ತಾಲ್ಲೂಕು ಮಲೆಯೂರಿನಲ್ಲಿರುವ ಶಿಲಾಶಾಸನವು ವಿಜಯನಗರದ ವೀರದೇವರಾಯನ ಕುಮಾರ ವೀರಹರಿಹರರಾಯನು ಕ್ರಿ.ಶ. ೧೪೨೨ರಲ್ಲಿ ಮಲೆಯೂರಿನ ವಿಜಯ ಪಾರ್ಶ್ವನಾಥ ದೇವರ ಪೂಜಾಕಾರ್ಯಕ್ಕಾಗಿ ಮಲೆಯೂರು ಗ್ರಾಮವನ್ನು ಸರ್ವಮಾನ್ಯವಾಗಿ ಬಿಟ್ಟಿರುವುದನ್ನು ತಿಳಿಸುತ್ತದೆ.[೮] ಮಲೆಯೂರಿನ ಊರಮಧ್ಯದಲ್ಲಿರುವ ಆದಿನಾಥ ಬಸದಿ ವಿಜಯನಗರ ಕಾಲದಲ್ಲಿ ನಿರ್ಮಿತವಾಗಿದೆ. ಅದಲ್ಲದೆ ಕನಕಗಿರಿಯಲ್ಲಿರುವ ಪಾರ್ಶ್ವನಾಥ ಬಸದಿ ವಿಜಯನಗರ ಕಾಲದಲ್ಲಿ ದುರಸ್ತಿಯನ್ನು ಕಂಡಿದೆ. ವಿಜಯನಗರದ ಅರಸುಗಳ ರೀತಿಯಲ್ಲಿಯೇ ಅವರ ಸಾಮಂತರು ಹಾಗೂ ಸೇನಾಪತಿಗಳು ಜೈನಧರ್ಮದ ಅಭಿವೃದ್ಧಿಗಾಗಿ ತಮ್ಮ ಕಾಣಿಕೆಯನ್ನು ಸಲ್ಲಿಸಿರುತ್ತಾರೆ. ಉಮ್ಮತ್ತೂರಿನ ದೊರೆ ವೀರಸೋಮೇಶ್ವರ ಒಡೆಯನ ಕರಣಿಕ ದೇವರಸನು ಹರವೆಯಲ್ಲಿ ಆದಿಪರಮೇಶ್ವರ ಚೈತ್ಯಾಲಯವನ್ನು ಕ್ರಿ.ಶ. ೧೪೮೨ರಲ್ಲಿ ನಿರ್ಮಿಸಿರುತ್ತಾನೆ.[೯] ಈ ಬಸದಿಗೆ ವೀರಸೋಮೇಶ್ವರ ಒಡೆಯ ಮತ್ತು ಆತನ ಕುಮಾರ ನಂಜರಾಜ ಒಡೆಯ ಇಬ್ಬರೂ ಭೂಮಿಯನ್ನು ದಾನ ನೀಡಿದ್ದಾರೆ. ಅಲ್ಲದೆ ದೇವರಸನ ತಂದೆ ಚಂದಪ್ಪನು ತಗಡೂರಿನ ಪ್ರಭುಗಳಿಂದ ತನಗೆ ಬಂದ ಅಡಿಕೆ ತೆಂಗಿನತೋಟ ಮತ್ತು ಎಂಟಂಕಣ ಮನೆಯನ್ನು ಬಸದಿಗಾಗಿ ದಾನ ನೀಡಿರುತ್ತಾನೆ. ದೇವರಸನ ಪತ್ನಿ ಗುಮಾಯಿಯು ಸಲ್ಲೇಖನ ವ್ರತದಿಂದ ಸಮಾಧಿಮರಣವನ್ನು ಪಡೆದಿರುತ್ತಾಳೆ. ಕ್ರಿ.ಶ. ೧೫೧೮ರಲ್ಲಿ ಅರಿಕುಠಾರದ (ಚಾಮರಾಜನಗರ) ಮಹಾಪ್ರಭು ಕಾಮೆಯನಾಯಕನ ಮಗ ವೀರಯನಾಯಕನು ಚಾಮರಾಜನಗರದ ವಿಜಯ ಪಾರ್ಶ್ವನಾಥ ಬಸದಿಯ ಪೂಜಾಕಾರ್ಯಕ್ಕಾಗಿ ಮಣಚನಹಳ್ಳಿಯನ್ನು ದಾನವಾಗಿ ನೀಡಿರುತ್ತಾನೆ.[೧೦] ಉಮ್ಮತ್ತೂರಿನ ವರ್ಧಮಾನ ತೀರ್ಥಂಕರ ಬಸದಿಯೂ ಸಹ ವಿಜಯನಗರದ ಅರಸರ ಕೊಡುಗೆಯಾಗಿದೆ.

## ೪. ಮೈಸೂರು ಒಡೆಯರು

ಮೈಸೂರು ಅರಸು ಮನೆತನವು ಕ್ಷೀಣಗೊಳ್ಳುತ್ತಿದ್ದ ಜೈನಧರ್ಮಕ್ಕೆ ಆಸರೆಯನ್ನೊದಗಿಸಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಜೈನ ಧರ್ಮಕ್ಕೆ ಮೈಸೂರು ಒಡೆಯರ ಕೊಡುಗೆಯ ಬಗ್ಗೆ ನಮಗೆ ಅತ್ಯಂತ ಖಚಿತವಾದ ಮಾಹಿತಿಗಳು ರಾಜಾವಳೀ ಕಥೆಯಿಂದ ತಿಳಿದುಬರುತ್ತದೆ. ಮೈಸೂರು ಅರಸರಾದ ರಾಜ ಒಡೆಯರಿಗೆ ಗುಣಪಡಿಸಲಾಗದ ಕಾಯಿಲೆ ಬಂದಿದ್ದಾಗ ಮಲೆಯೂರಿನ ದೊಡ್ಡ ಶಾಂತಯ್ಯನು ಅವರಿಗೆ ಚಿಕಿತ್ಸೆನೀಡಿ ಗುಣಪಡಿಸುತ್ತಾನೆ. ಅದರಿಂದ ತೃಪ್ತರಾದ ರಾಜ ಒಡೆಯರು ಅವನ ಕೋರಿಕೆಯಂತೆ ಮಲೆಯೂರಿನ ಪಾರ್ಶ್ವನಾಥ ಮಂದಿರದ ಬೇಲಿಯನ್ನು

---

೭. ಎ.ಕ. IV ಚಾ.ನ. - 3 ಪು. 7
೮. ಎ.ಕ. IV ಚಾ.ನ. - 355 ಪು. 237
೯. ಎ.ಕ. IV ಚಾ.ನ. - 390 ಪು. 257
೧೦. ಎ.ಕ. IV ಚಾ.ನ. - 60 ಪು. 38

ತೀರ್ಥಂಕರ ಬಸದಿಯ ಸುತ್ತಲೂ ಕೋಟೆಯನ್ನು ನಿರ್ಮಿಸಿಕೊಟ್ಟಿರುತ್ತಾರೆ[೧೧] ಮತ್ತು ಅದೇ ಮಲೆಯೂರಿನ ಅಣ್ಣಾಯ್ಯಶೆಟ್ಟಿಯ ಕೋರಿಕೆಯಂತೆ ಕಂಠೀರವ ನರಸಿಂಹರಾಜ ಒಡೆಯರು ಮಲೆಯೂರು, ಕೆಲಸೂರು, ಬಿಚಗಾನಹಳ್ಳಿಯ ಜಿನಾಲಯಗಳನ್ನು ದುರಸ್ತಿ ಮಾಡಿಸಿರುತ್ತಾರೆ.[೧೨] ರಾಜಾವಳೀ ಕಥೆಯನ್ನು ಬರೆದ ದೇವಚಂದ್ರನ ಕೋರಿಕೆಯಂತೆ ಶ್ರವಣಬೆಳಗೊಳದ ಸನ್ನದಿಗೆ ತಿದ್ದುಪಡಿಮಾಡಿ ಕನಕಗಿರಿಗೆ ಸುಂಕ ೫೦ ವರಹಗಳನ್ನು ನೀಡಬೇಕೆಂದು ತಾಜಾಸನ್ನದನ್ನು ಮಾಡಿಕೊಟ್ಟಿರುತ್ತಾರೆ.[೧೩] ಈ ಸನ್ನದು ಶ್ರವಣಬೆಳಗೊಳದ ಮಠದಲ್ಲಿ ಈಗಲೂ ಇದೆ.[೧೪] ದೇವಚಂದ್ರನು ಉಲ್ಲೇಖಿಸಿರುವ ಶಾಂತಪಂಡಿತನ ಕೋರಿಕೆಯ ಮೇಲೆ ಕೆಲಸೂರಿನ ಪಾರ್ಶ್ವನಾಥ ಬಸದಿಯನ್ನು ದುರಸ್ತಿಮಾಡಿ ಅಲ್ಲಿರುವ ಚಂದ್ರಪ್ರಭ ಮತ್ತು ಜ್ವಾಲಾಮಾಲಿನಿಯ ಲೆಪ್ಪದ ಬಿಂಬಗಳನ್ನು ಮಾಡಿಸಿಕೊಟ್ಟಿರುವುದು ಕೆಲಸೂರಿನ ಚಂದ್ರಪ್ರಭ ಬಸದಿಯ ಭಿತ್ತಿಯ ಮೇಲಿರುವ ಶಾಸನವು ತಿಳಿಯಪಡಿಸುತ್ತದೆ[೧೫] ಇದನ್ನು ರಾಜಾವಳಿಕಥೆಯೂ ಸಹಾಸಮರ್ಥಿಸುತ್ತದೆ.[೧೬]

## ವಾಸ್ತು ಶಿಲ್ಪ ಹಾಗೂ ಮೂರ್ತಿ ಶಿಲ್ಪ

### ಜೈನ ಬಸದಿಗಳು

ಈ ಎರಡು ತಾಲ್ಲೂಕುಗಳಲ್ಲಿ ಅತೀ ಪ್ರಾಚೀನವಾದ ಜೈನ ಬಸದಿ ಕೆಲಸೂರಿನಲ್ಲಿದ್ದಿರಬೇಕು. ಎರಡನೆಯ ಶಿವಮಾರನ ಕುಲಗಾಣದ ಶಾಸನವು ಕೆಲಸೂರಿನ ಬಸದಿಗೆ ದಾನ ನೀಡಿರುವುದನ್ನು ನಿರೂಪಿಸುತ್ತದೆ. ಅಂದರೆ ಏಳನೆಯ ಶತಮಾನಕ್ಕಾಗಲೇ ಕೆಲಸೂರಿನಲ್ಲಿ ಬಸದಿಯ ನಿರ್ಮಾಣವಾಗಿದೆ. ಕೆಲಸೂರಿನಲ್ಲಿ ಈಗ ಚಂದ್ರಪ್ರಭ ಬಸದಿ ಇದೆ. ಆದರೆ ವಾಸ್ತುಶಿಲ್ಪದ ಆಧಾರದಿಂದ ಕ್ರಿ.ಶ. ೯-೧೦ನೆಯ ಶತಮಾನದ್ದೆಂದು ಹೇಳಬಹುದು. ಕೆಲಸೂರಿನ ಹೊಲವೊಂದರಲ್ಲಿ ದೊರೆತ ಪಾರ್ಶ್ವನಾಥನ ಮೂರ್ತಿಯನ್ನು ಇತ್ತೀಚೆಗೆ ತಂದು ಚಂದ್ರಪ್ರಭ ಬಸದಿಯ ಸಮೀಪದಲ್ಲಿ ಸ್ಥಳೀಕರು ಇರಿಸಿದ್ದಾರೆ. ಈ ಮೂರ್ತಿಯು ದೊರೆತ ಸ್ಥಳದಲ್ಲಿ ಬಸದಿಯ ಅವಶೇಷಗಳೂ ಸಹಾ ದೊರೆತಿವೆ. ಪ್ರಾಚೀನ ಮೂರ್ತಿಯ ಲಕ್ಷಣವನ್ನು ಸಹ ಈ ಮೂರ್ತಿಯು ಹೋಲುತ್ತದೆ. ಬಹುಶಃ ಇದೇ ಶಿವಮಾರನ ಶಾಸನೋಕ್ತ ಬಸದಿಯ ಮೂರ್ತಿಯಾಗಿರಬಹುದು. ಚಂದ್ರಪ್ರಭ ಬಸದಿಯು ಗರ್ಭಗೃಹ ನವರಂಗ ಮತ್ತು ಮುಖ ಮಂಟಪವನ್ನು ಹೊಂದಿದೆ. ನವರಂಗದಲ್ಲಿ ಚಂದ್ರಪ್ರಭ ತೀರ್ಥಂಕರನ ಯಕ್ಷಿ ಜ್ವಾಲಾಮಾಲಿನಿ ಮತ್ತು ವಿಜಯ ಯಕ್ಷರ ಸುಂದರವಾದ ಲೆಪ್ಪದ ಬಿಂಬಗಳಿವೆ.

ಮಲೆಯೂರಿನಲ್ಲಿ ಆದಿನಾಥ ಬಸದಿ ಮತ್ತು ಕನಕಗಿರಿ ಪರ್ವತದ ಮೇಲೆ ಪಾರ್ಶ್ವನಾಥ ಬಸದಿ ಇದೆ. ಆದಿನಾಥ ಬಸದಿಯು ವಿಜಯನಗರ ಕಾಲದ ರಚನೆಯಾದರೆ ಪಾರ್ಶ್ವನಾಥ ಬಸದಿಯು ಗಂಗರ ಕಾಲದ್ದು. ಆದಿನಾಥ ಬಸದಿಯು ಗರ್ಭಗೃಹ, ಅಂತರಾಳ ನವರಂಗ ಹಾಗೂ ವಿಶಾಲವಾದ ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿನ ಆದಿನಾಥನ ವಿಗ್ರಹವು

---

೧೧. ರಾಜಾವಳೀಕಥಾಸಾ ರಾ. ಪು - 335 ಮೈ.ವಿ.ವಿ. ಸಂ. ಬಿ.ಎಸ್. ಸಣ್ಣಯ್ಯ
೧೨. ಅದೇ - " - ಪು. 287 - " -
೧೩. ಅದೇ - " - ಪು. 360 - " -
೧೪. ಶ್ರವಣಬೆಳಗೊಳದ ಶಾಸನಗಳು, ಜಿ. ಬ್ರಹ್ಮಪ್ಪ ಪು. 140
೧೫. ಎ.ಕ. III ಗುಪೇ - 102 ಪು. 76
೧೬. ರಾಜಾವಳಿ ಕಥಾಸಾರ ಪು. 312 ಮೈ.ವಿ.ವಿ ಸಂ. ಬಿ.ಎಸ್. ಸಣ್ಣಯ್ಯ

ಮೂರೂವರೆ ಅಡಿ ಎತ್ತರವಿದೆ. ನವರಂಗದಲ್ಲಿ ವಿಜಯನಗರ ಕಾಲದ ಕಂಚಿನ ಸರ್ವಾಹ್ಣ ಯಕ್ಷನ ವಿಗ್ರಹವಿದೆ. ಕನಕಗಿರಿ ಬೆಟ್ಟದ ಮೇಲಿರುವ ಪಾರ್ಶ್ವನಾಥನ ಬಸದಿಯು ಗರ್ಭಗೃಹ, ಅಂತರಾಳ, ನವರಂಗ ಅದರ ಮುಂದೆ ವಿಶಾಲವಾದ ಎರಡು ಹಂತಗಳ ಸಭಾಮಂಟಪ ಮತ್ತು ತೆರೆದ ಮುಖಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಪದ್ಮಾವತಿ, ಜ್ವಾಲಾಮಾಲಿನಿ, ಅಂಬಿಕಾಯಕ್ಷಿ, ಹಾಗೂ ಬ್ರಹ್ಮಯಕ್ಷನ ಗಂಗರ ಕಾಲದ ಮೂರ್ತಿಗಳಿವೆ. ಇವು ಒಂದಕ್ಕಿಂತ ಒಂದು ಸುಂದರವಾಗಿವೆ. ಚಾಮರಾಜನಗರದ ಪಾರ್ಶ್ವನಾಥಮಂದಿರವು ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ಕ್ರಿ.ಶ. ೧೧೧೬ರಲ್ಲಿ ನಿರ್ಮಿತವಾಗಿದೆ. ಗರ್ಭಗೃಹದ ಮೂಲವಿಗ್ರಹ ಮತ್ತು ಪದ್ಮಾವತಿ ಯಕ್ಷಿಯ ವಿಗ್ರಹಗಳನ್ನು ಹರಳು ಕೋಟೆ ಮತ್ತು ತೆರಕಣಾಂಬಿಯಿಂದ ತಂದಿರಿಸಿದುದಾಗಿ ಸ್ಥಳೀಕರು ತಿಳಿಸಿರುತ್ತಾರೆ. ಹರವೆಯ ಆದಿನಾಥ ಬಸದಿಯು ದ್ವಿಕೂಟಾಚಲವುಳ್ಳದ್ದಾಗಿದೆ. ಇಲ್ಲಿ ಆದಿನಾಥನಲ್ಲದೆ ನೇಮಿನಾಥನ ಮೂರ್ತಿಯೂ ಇದೆ. ಈ ದೇವಾಲಯದ ಅಂತರಾಳದಲ್ಲಿ ವಿಜಯನಗರ ಕಾಲದ ಪದ್ಮಾವತಿ ಮತ್ತು ಬ್ರಹ್ಮದೇವರ ವಿಗ್ರಹಗಳಿವೆ. ಇದು ವಿಜಯನಗರ ಕಾಲದ ರಚನೆ. ಈ ಎರಡೂ ತಾಲ್ಲೂಕಿನಲ್ಲಿ ಕುಲಗಾಣ, ಮುಕ್ಕೊಡಳ್ಳಿ, ಹಂಗಳ, ತೆರಕಣಾಂಬಿ, ಬಾಚಹಳ್ಳಿ, ಕಿರುಗುಂದ, ಗುಂಡ್ಲುಪೇಟೆ, ಬೇರುಂಬಾಡಿ, ಮಂಗಲಗಳಲ್ಲಿ ಜೈನ ಬಸದಿಗಳಿದ್ದು ನಂತರದ ಕಾಲದಲ್ಲಿ ನಾಶವಾಗಿರುತ್ತವೆ.

### ಯಕ್ಷಯಕ್ಷಿಯರ ಆರಾಧನೆ

ಈ ಎರಡು ತಾಲ್ಲೂಕುಗಳಲ್ಲಿ ಹಲವಾರು ಯಕ್ಷಯಕ್ಷಿಯರ ವಿಗ್ರಹಗಳು ದೊರೆತಿವೆ. ಮಲೆಯೂರಿನಲ್ಲಿ ಬ್ರಹ್ಮ ಯಕ್ಷ, ಸರ್ವಾಹ್ಣ ಯಕ್ಷ, ಪದ್ಮಾವತಿ ಯಕ್ಷಿ, ಜ್ವಾಲಾಮಾಲಿನಿ ಯಕ್ಷಿಯರ ಶಿಲಾಪ್ರತಿಮೆಗಳಿವೆ. ಕೆಲಸೂರಿನಲ್ಲಿ ಶ್ಯಾಮಯಕ್ಷ, ಜ್ವಾಲಾಮಾಲಿನಿಯರ ಲೆಪ್ಪದ ವಿಗ್ರಹಗಳಿವೆ. ಹರವೆಯಲ್ಲಿ ಬ್ರಹ್ಮಯಕ್ಷ ಹಾಗೂ ಪದ್ಮಾವತಿಯರ ಶಿಲಾವಿಗ್ರಹಗಳಿವೆ. ಚಾಮರಾಜನಗರದಲ್ಲಿಯೂ ಶಿಲೆಯಿಂದ ನಿರ್ಮಿಸಿದ ಪದ್ಮಾವತಿಯರ ಶಿಲಾವಿಗ್ರಹಗಳಿವೆ. ಜಿನಶಾಸನ ದೇವತೆಗಳಾದ ಯಕ್ಷಯಕ್ಷಿಯರ ಆರಾಧನೆ ಈ ಪ್ರದೇಶದಲ್ಲಿ ಹೆಚ್ಚಿನ ಮಹತ್ವ ಪಡೆದಿದ್ದು ಈ ವಿಗ್ರಹಗಳಿಂದ ತಿಳಿಯುತ್ತದೆ. ಕ್ರಿ.ಶ. ೮ನೆಯ ಶತಮಾನದಲ್ಲಿದ್ದ ಏಲಾಚಾರ್ಯರು ದಕ್ಷಿಣದೇಶದ ಹೇಮಗ್ರಾಮದ ಹತ್ತಿರದಲ್ಲಿನ ಪರ್ವತದ ಮೇಲೆ ಜ್ವಾಲಾಮಾಲಿನಿಯನ್ನು ಆರಾಧಿಸಿ ಸಾಕ್ಷಾತ್ಕರಿಸಿಕೊಂಡರೆಂದು ಮಲ್ಲಿಷೇಣ ಸೂರಿಯ 'ಜ್ವಾಲನೀಕಲ್ಪ'ದಿಂದ ತಿಳಿದುಬರುತ್ತದೆ. ಈ ಹೇಮಗ್ರಾಮವು ಮಲೆಯೂರು ಎಂದು ಡಾ॥ ನಾಥೂರಾಮ ಪ್ರೇಮಿಯವರು ಅಭಿಪ್ರಾಯಪಟ್ಟಿದ್ದಾರೆ. ಈ ಹೇಳಿಕೆಯ ಹಿನ್ನೆಯಲ್ಲಿ ಜೈನ ಧರ್ಮದಲ್ಲಿ ತಾಂತ್ರಿಕ ಆರಾಧನೆಯು ಪ್ರಪ್ರಥಮವಾಗಿ ಉಗಮವಾದ ಸ್ಥಳ ಮಲೆಯೂರು ಎಂದು ಹೇಳಬಹುದು.

### ಶಾಸನೋಕ್ತ ಮುನಿಗಳು

ಈ ಎರಡೂ ತಾಲ್ಲೂಕುಗಳಲ್ಲಿ ದೊರೆಯುವ ಮುನಿಗಳಲ್ಲಿ ಪ್ರಾಚೀನರಾದ ಜೈನಮುನಿವರ್ಯರು ಪೂಜ್ಯಪಾದರಾಗಿದ್ದಾರೆ. ಪೂಜ್ಯಪಾದರ ಕಾಲವನ್ನು ಕ್ರಿ.ಶ ೫ನೆಯ ಶತಮಾನವೆಂದು ವಿದ್ವಾಂಸರು ನಿರ್ಧರಿಸಿರುತ್ತಾರೆ. ಜೈನೇಂದ್ರವ್ಯಾಕರಣ, ಸಮಾಧಿಶತಕ, ಸರ್ವಾರ್ಥಸಿದ್ಧಿ ಮುಂತಾದ ಕೃತಿಗಳ ಕರ್ತೃವಾದ ಪೂಜ್ಯಪಾದರು ಮಲೆಯೂರಿನ ಸಮೀಪದ ಕನಕಗಿರಿಯಲ್ಲಿ ಸಮಾಧಿ ಮರಣ ಹೊಂದಿರುವುದು ದೇವಚಂದ್ರನ ಪೂಜ್ಯಪಾದ ಚರಿತೆಯಿಂದ ತಿಳಿದುಬರುತ್ತದೆ.[೧೭] ಆದರೆ ಈ ಹೇಳಿಕೆಗೆ ಪೂರಕವಾದ ಶಾಸನಾಧಾರವು ದೊರೆಯುವುದಿಲ್ಲ.

---

೧೭. ಪೂಜ್ಯಪಾದ ಚರಿತೆ, ದೇವಚಂದ್ರ, ಸಂ - ಕೆ.ಆರ್. ಶೇಷಗಿರಿ

## ಲಲಿತಕೀರ್ತಿ ಭಟ್ಟಾರಕರು

ಮೂಲಸಂಘ ದೇಸಿಗಣ ಪುಸ್ತಕಗಚ್ಛದ, ಹನಸೋಗೆ ಬಳಿಯ ಲಲಿತಕೀರ್ತಿ ಭಟ್ಟಾರಕರು ತೆರಕಣಾಂಬಿಯಲ್ಲಿ ಪಾರ್ಶ್ವನಾಥನ ಮೂರ್ತಿಯನ್ನು ಪ್ರತಿಷ್ಠಾಪಿಸಿದರ ಬಗ್ಗೆ ಶಾಸನವೊಂದರಲ್ಲಿ ತಿಳಿದುಬರುತ್ತದೆ.[೧೮] ಇದೇ ಲಲಿತಕೀರ್ತಿ ಭಟ್ಟಾರಕರು ಮಲೆಯೂರಿನಲ್ಲಿ ಸಮಾಧಿಮರಣವನ್ನು ಹೊಂದಿರುತ್ತಾರೆ.[೧೯] ಕಾರ್ಕಳ ಪೀಠದ ಮುನಿಪರಂಪರೆಯೂ ಸಹ ಮೂಲಸಂಘ ದೇಸಿಗಣ ಪುಸ್ತಕಗಚ್ಛದ ಹನಸೋಗೆ ಬಳಿಯ ಲಲಿತಕೀರ್ತಿ ಭಟ್ಟಾರಕ ಎಂದಿರುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಹಾಗಾದರೆ ಕಾರ್ಕಳ ಮೂಲದ ಮುನಿಯೋರ್ವರು ಮಲೆಯೂರಿನಲ್ಲಿ ಸಮಾಧಿಮರಣ ಹೊಂದಿದ್ದಾರೆಂದು ಹೇಳಬಹುದು.

ಕುಲಗಾಣದ ಗಂಗರ ಶಾಸನದಲ್ಲಿ ಉಲ್ಲೇಖಿತ ಚಂದ್ರಸೇನಚಾರ್ಯ[೨೦] ಮಲೆಯೂರಿನ ಶಾಸನಗಳಲ್ಲಿ ಬರುವ ಬಾಹುಬಲಿ ಪಂಡಿತದೇವ[೨೧] ಚಂದ್ರಕೀರ್ತಿ ಮುನಿ[೨೨], ಲಕ್ಕಿಸೇನಮುನಿ[೨೩], ವಿದ್ಯಾನಂದ ಮುನಿಗಳು[೨೪], ಮುನಿಚಂದ್ರದೇವರು[೨೫], ಕನಕಗಿರಿಪೀಠದ ಭಟ್ಟಾಕಳಂಕಮುನಿ[೨೬], ಮಂಗಲಶಾಸನದಲ್ಲಿ ಉಲ್ಲೇಖಿಸಿರುವ ಗುಣನಂದಿ ಕರ್ಮಪ್ರಕೃತಿ ಭಟಾರರು[೨೭] ಗುಂಡ್ಲುಪೇಟೆ ಶಾಸನೋಕ್ತ ವಜ್ರನಂದಿ ಸಿದ್ಧಾಂತ ದೇವರು[೨೮] ಕುಲಗಾಣ ಶಾಸನದಲ್ಲಿ ಹೇಳಿರುವ ವಾದಿರಾಜ ಮುನಿಗಳು[೨೯], ಪುಣೀಸದಂಡನಾಯಕನ ಗುರು ಅಜಿತಮುನಿಪತಿ[೩೦], ಹಂಗಳದ ಶಾಸನದಲ್ಲಿ ದೊರೆತಿರುವ ಶ್ರೀಮದ್ವಾಮನಂದಿ ಭಟಾರಕರು[೩೧], ಹರವೆಯ ಶಾಸನದಲ್ಲಿ ಉಲ್ಲೇಖಿಸಿರುವ ಪ್ರಭೇಂದು ಪ್ರಭಾಚಂದ್ರರು[೩೨], ಚಾಮರಾಜನಗರ ಶಾಸನದಲ್ಲಿ ಸಿಗುವ ಅನಂತಕೀರ್ತಿ ಮುನಿಗಳು[೩೩] ಮುಂತಾದವರು ಶಾಸನೋಕ್ತ ಮುನಿಗಳಾಗಿರುತ್ತಾರೆ.

---

೧೮. ಎ.ಕ. III ಗುಪೇ - 123 ಪು. 91
೧೯. ಎ.ಕ. IV ಚಾ.ನ. - 365 ಪು. 243
೨೦. ಎ.ಕ. IV ಚಾ.ನ. - 347 ಪು. 220
೨೧. ಎ.ಕ. IV ಚಾ.ನ. - 369 ಪು. 244
೨೨. ಎ.ಕ. IV ಚಾ.ನ. - 362 ಪು. 241
೨೩. ಎ.ಕ. IV ಚಾ.ನ. - 360 ಪು. 240
೨೪. ಎ.ಕ. IV ಚಾ.ನ. - 371 ಪು. 245
೨೫. ಎ.ಕ. IV ಚಾ.ನ. - 359 ಪು. 239
೨೬. ಎ.ಕ. IV ಚಾ.ನ. - 357 ಪು. 238
೨೭. ಎ.ಕ. IV ಚಾ.ನ. - 137 ಪು. 82
೨೮. ಎ.ಕ. III ಚಾ.ನ. - 3 ಪು. 11
೨೯. ಎ.ಕ. IV ಚಾ.ನ. - 343 ಪು. 217
೩೦. ಎ.ಕ. IV ಚಾ.ನ. - 2 ಪು. 4
೩೧. ಎ.ಕ. III ಚಾ.ನ. - 203 ಪು. 150
೩೨. ಎ.ಕ. IV ಚಾ.ನ. - 389 ಪು. 257
೩೩. ಎ.ಕ. III ಚಾ.ನ. - 61 ಪು. 38

## ಚಂದ್ರಸಾಗರ ಮುನಿಗಳು

ಈ ಎರಡೂ ತಾಲ್ಲೂಕುಗಳಲ್ಲಿ ದೊರೆಯುವ ಕಟ್ಟಕಡೆಯ ಮುನಿಗಳು ಚಂದ್ರಸಾಗರರಾಗಿರುತ್ತಾರೆ. ಪುತ್ತೂರಿನ ಮೂಲದವರಾದ ಇವರು ಮಲೆಯೂರಿನ ಜೈನಧರ್ಮದ ಏಳಿಗೆಗಾಗಿ ಶ್ರಮಿಸಿದ್ದು ಕ್ರಿ.ಶ. ೧೯೮೬ರಲ್ಲಿ ಸಲ್ಲೇಖನ ವಿಧಿಯಿಂದ ಸಮಾಧಿ ಮರಣವನ್ನು ಹೊಂದಿರುತ್ತಾರೆ.

## ನಿಷಧಿ ಶಾಸನಗಳು

ಜೈನಧರ್ಮದಲ್ಲಿ ಮೋಕ್ಷಸಾಧನೆಗಾಗಿ ಅನ್ನ ಆಹಾರಾದಿಗಳನ್ನು ತ್ಯಜಿಸಿ ಧ್ಯಾನಸ್ಥಿತರಾಗಿ ಮರಣವನ್ನಪ್ಪುವ ವಿಧಾನಕ್ಕೆ 'ಸಮಾಧಿ ಮರಣ' ಎಂದು ಕರೆಯಲಾಗಿದೆ. ಸಲ್ಲೇಖನದಿಂದ ಸಮಾಧಿಮರಣ ಹೊಂದಿದವರಿಗೆ ನಿರ್ಮಿಸುವ ಸ್ಮಾರಕಗಳೇ ನಿಷಧಿಗಳು.

ಚಾಮರಾಜನಗರ ಮತ್ತು ಗುಂಡ್ಲುಪೇಟೆ ತಾಲ್ಲೂಕುಗಳಲ್ಲಿ ನಮಗೆ ಸುಮಾರು ೧೮ ಶಾಸನ ಸಹಿತ ನಿಷಧಿಗಳು ದೊರೆಯುತ್ತವೆ. ಇವುಗಳಲ್ಲದೆ ಶಾಸನರಹಿತ ನಿಷದಿ ಶಿಲ್ಪಗಳು ಮತ್ತು ಸಮಾಧಿ ಮರಣವನ್ನು ಹೊಂದಿರುವವರ ಪಾದಗಳು ಸಹಾ ಹಲವಾರು ದೊರೆಯುತ್ತದೆ.

ಇಲ್ಲಿ ಸಮಾಧಿ ಮರಣವನ್ನು ಹೊಂದಿದ ಪ್ರಥಮವ್ಯಕ್ತಿ, ಆಚಾರ್ಯ ಪೂಜ್ಯಪಾದರಾಗಿರುತ್ತಾರೆ. ಇವರ ಕಾಲ ಕ್ರಿ.ಶ. ೫ನೆಯ ಶತಮಾನವೆಂದು ಬಹುತೇಕ ವಿದ್ವಾಂಸರ ಅಭಿಪ್ರಾಯ. ಇವರು ಮಲೆಯೂರಿನಲ್ಲಿ ಸಮಾಧಿ ಮರಣವನ್ನು ಹೊಂದಿದರೆಂದು ದೇವಚಂದ್ರನು ರಾಜವಳೀ ಕಥೆಯಲ್ಲಿ ತಿಳಿಸಿರುತ್ತಾನೆ. ಮಲೆಯೂರಿನ ಕನಕಗಿರಿ ಮೇಲೆ ಪೂಜ್ಯಪಾದರದೆಂದು ಹೇಳಲಾದ ಪಾದಗಳಿದ್ದು ಇತ್ತೀಚೆಗೆ ಸುಮಾರು ಹತ್ತು ವರ್ಷಗಳ ಹಿಂದೆ ಅಮೃತಶಿಲೆಯ ಪಾದಗಳನ್ನಿರಿಸಿ ಸುತ್ತಲೂ ಮಂಟಪವನ್ನು ಕಟ್ಟಿ ನವೀಕರಿಸಿರುತ್ತಾರೆ. ಪೂಜ್ಯಪಾದರು ಮಲೆಯೂರಿನಲ್ಲಿ ಸಮಾಧಿ ಮರಣವನ್ನು ಪಡೆದರೆಂದು ದೇವಚಂದ್ರನಿಗಿಂತ ಸುಮಾರು ೧೫೦ ವರ್ಷಗಳ ಹಿಂದೆಯೇ ದೇವರಸನ ಪುತ್ರನೆಂಬ ಅಜ್ಞಾತಕವಿ ತಿಳಿಸಿರುತ್ತಾನೆ.[೩೪] ಆದರೆ ಈ ಹೇಳಿಕೆಗಳಿಗೆ ನಮಗೆ ಬೇರೆಯಾವ ಶಾಸನಾಧಾರವು ಸಿಗುವುದಿಲ್ಲ.

ಚಾಮರಾಜನಗರ ತಾಲ್ಲೂಕಿನ ಮಂಗಳದಲ್ಲಿ ದೊರೆತಿರುವ ನಿಷಧಿ ಶಾಸನವು ಈ ಎರಡೂ ತಾಲ್ಲೂಕಿನಲ್ಲಿ ದೊರೆತಿರುವ ಪ್ರಾಚೀನವಾದ ನಿಷಧಿ ಶಾಸನವಾಗಿದೆ. ಇದರ ಕಾಲ ಸು ೧೦ ನೆಯ ಶತಮಾನ.[೩೫] ಈ ಶಾಸನವು ಗುಣನನ್ದಿ ಕರ್ಮಪ್ರಕೃತಿ ಭಟ್ಟರು ಎಂಬ ಮುನಿಯೋರ್ವರು ಮೂವತ್ತೊಂದು ದಿನ ಸಲ್ಲೇಖನ ವ್ರತಹಿಡಿದು ಸಮಾಧಿ ಮರಣ ಪಡೆದಿದ್ದಾನೆಂದು ತಿಳಿಸುತ್ತದೆ.

ಉಮ್ಮತ್ತೂರಿನ ನಿಷಧಿಶಿಲ್ಪಗಳು ೧೧ನೆಯ ಶತಮಾನಕ್ಕೆ ಸೇರಿದವುಗಳಾಗಿವೆ. ಅವುಗಳಲ್ಲಿ ಒಂದು - ನಾಗಯ್ಯ ಎಂಬ ಒಬ್ಬ ಶ್ರಾವಕನ ನಿಷಧಿಮರಣವನ್ನು ಉಲ್ಲೇಖಿಸುವ ಶಾಸನವಾಗಿದೆ.[೩೬] ತ್ರುಟಿತವಾದ ಮತ್ತೊಂದು ಶಾಸನದಲ್ಲಿ "ಸ್ವಸ್ತಿ ಶ್ರೀ...ಮತ್... ಪ್ಪಿ ಭಟಾರರು ಮೂಱುನೋನ್ತು

೩೪. ಗುರುದತ್ತ ಚರಿತೆ ಪು. 83 ಸಂ. ಎಂ.ಪಿ. ಮಂಜಪ್ಪಶೆಟ್ಟಿ
೩೫. ಎ.ಕ. IV ಚಾ.ನ. - 137 ಪು. 82
೩೬. ಎ.ಕ. IV ಚಾ.ನ. - 98 ಪು. 55

ಸನ್ಯಸನಗೈದು ಮುಡುಪಿದರು"[೩೭] ಎಂದುತಿಳಿಸುತ್ತದೆ. ಮತ್ತೊಂದು ಶಾಸನವು ರಾಜಭಟಾರರು ಎಂಬ ಮುನಿಯೋರ್ವನ ಮರಣವನ್ನು ದಾಖಲಿಸುತ್ತದೆ. ಅವರ ಶಿಷ್ಯನಾದ ಜ್ಞಾನಚಂದ್ರ ಪಂಡಿತದೇವನು ನಿಷದಿಯನ್ನು ನಿರ್ಮಿಸಿದ್ದಾನೆ.[೩೮] ಉಮ್ಮತ್ತೂರಿನಲ್ಲಿ ಇತ್ತೀಚೆಗೆ ದೊರೆತ ನಿಷಧಿ ಶಾಸನವು ಸಿರಿಪಾಳ ಜಯಮಾರನ ಮಗ ಸಿನ್ನಯ್ಯನ ಸಮಾಧಿ ಮರಣವನ್ನು ನಿರೂಪಿಸುತ್ತದೆ. ಪಿಮಚಂದ್ರ ದೇವರ ಶಿಷ್ಯನಾದ ಈತ ಮೂರು ದಿನ ನೋಂತು ಸಮಾಧಿಮರಣವನ್ನು ಹೊಂದಿರುತ್ತಾನೆ.[೩೯]

ಹೇಮಚಂದ್ರ ಭಟಾರಕರ ಶಿಷ್ಯ ಆದಿದೇವ ಮತ್ತು ಲಲಿತಕೀರ್ತಿ ಭಟಾರಕರ ಶಿಷ್ಯ ಲಲಿತ ಕೀರ್ತಿ ಭಟ್ಟಾರಕರು ಕ್ರಿ.ಶ. ೧೩೫೫ರಲ್ಲಿ ಕನಕಗಿರಿಯ ಮೇಲೆ ಸಮಾಧಿಮರಣವನ್ನು ಪೊಂದಿರುತ್ತಾರೆ.[೪೦] ಶ್ರುತಮುನಿಯ ಶಿಷ್ಯರಾದ ಶುಭಚಂದ್ರದೇವರು ಅವರ ಶಿಷ್ಯರಾದ ಕೊಪಣದ ಚಂದ್ರಕೀರ್ತಿಯತಿಯು ಸಹಾ ಸಮಾಧಿ ಮರಣವನ್ನೂ ಕನಕಗಿರಿಯಲ್ಲಿ ಪಡೆದಿರುತ್ತಾರೆ.[೪೧] ಕಾಲೋಗ್ರಣದ ಮುನಿಚಂದ್ರದೇವರು ಕ್ರಿ.ಶ. ೧೬೭೪ ಕನಕಗಿರಿಯಲ್ಲಿ ಸಮಾಧಿಮರಣ ಹೊಂದಿದರೆ ಅವರ ಶಿಷ್ಯನಾದ ಆದಿದಾಸನು ಪಾದಬರೆಯಿಸಿರುತ್ತಾನೆ.[೪೨] ಭಟ್ಟಾಕಳಂಕ ಗುರುಪೀಠದ ಪೀಠಾಧೀಶರಾದ ಶ್ರೀ ಭಟ್ಟಾಕಳಂಕರು ಕ್ರಿ.ಶ. ೧೮೧೪ರಲ್ಲಿ ಅದೇ ಕನಕಗಿರಿಯಲ್ಲಿ ಸಮಾಧಿಮರಣ ಹೊಂದಿರುತ್ತಾರೆ.[೪೩] ಚಾಮರಾಜನಗರ ತಾ|| ಹರವೆಯ ಆದಿನಾಥ ಬಸದಿಯ ಪ್ರಾಕಾರದಲ್ಲಿರುವ ಶಾಸನವು ಕರಣಿಕ ದೇವರಸನ ಹಿರಿಯ ಪತ್ನಿ ಸೋಮಾಯಿಯ ಸಮಾಧಿ ಮರಣವನ್ನು ನಿರೂಪಿಸುತ್ತದೆ.[೪೪] ಇದು ಸಮಾಧಿ ಮರಣವನ್ನು ಪಡೆದ ಶ್ರಾವಕಿಯೊಬ್ಬಳ ನಿದರ್ಶನವಾಗಿರುತ್ತದೆ. ಬಾಹುಬಲಿ ಪಂಡಿತದೇವನನ್ನು ಹೆಸರಿಸುವ ಮಲೆಯೂರಿನ ಪಾರ್ಶ್ವನಾಥ ಬಸದಿಯ ಶಾಸನದಲ್ಲಿಯೂ ಸಹಾ ಮುನಿಯೋರ್ವನು ಸ್ತ್ರೀಯೊಬ್ಬಳಿಗೆ ಸಲ್ಲೇಖನವನ್ನು ಬೋಧಿಸುತ್ತಿರುವಂತೆ ಶಿಲ್ಪವನ್ನು ಚಿತ್ರಿಸಲಾಗಿದೆ. ಇದು ಸಹಾ ಸಲ್ಲೇಖನವನ್ನು ಪಡೆದು ಸಮಾಧಿ ಮರಣವನ್ನು ಪಡೆದ ಸ್ತ್ರೀಯ ನಿಷಧಿ ಇರಬಹುದೆಂದು ಊಹಿಸಬಹುದಾದರೂ ಆಕೆಯ ಹೆಸರಿನ ಉಲ್ಲೇಖ ಬರುವುದಿಲ್ಲ.[೪೫] ಚಾಮರಾಜನಗರದ ಒಂದು ಶಾಸನದಲ್ಲಿ ಅನನ್ತಕೀರ್ತಿದೇವರ ಗುಡ್ಡ ಬೊಮ್ಮಯ್ಯ ಸನ್ಯಸನ ವಿಧಿಯಿಂದ ಮುಡಿಪಿದ ವಿಷಯ ಉಲ್ಲೇಖಿತವಾಗಿದೆ.[೪೬] ಕೆಲಸೂರಿನ ಚಂದ್ರನಾಥ ಬಸದಿಯ ಸಮೀಪ ೮ ಶಾಸನರಹಿತ ನಿಷಧಿ ಶಿಲ್ಪಗಳಿವೆ; ಅವುಗಳಲ್ಲಿ ಐದು ಸ್ತ್ರೀಯರು ಸಮಾಧಿ ಮರಣವನ್ನು ಪಡೆದ ಶಿಲ್ಪಗಳು. ಹಾಗೆಯೇ ಮಲೆಯೂರಿನಲ್ಲಿಯೂ ಸಹಾ ೨ ಶಾಸನರಹಿತ ನಿಷಧಿಶಿಲ್ಪಗಳಿವೆ. ಅಲ್ಲದೆ ಮಲೆಯೂರಿನ ಬೆಟ್ಟದ ಮೇಲೆ ಹಲವಾರು ಕಡೆ ಪಾದಗಳನ್ನು ಬಿಡಿಸಲಾಗಿದ್ದು ಇವುಗಳೆಲ್ಲ ಅಲ್ಲಿ ಸಮಾಧಿ ಮರಣಹೊಂದಿದವರ ಪಾದಗಳಾಗಿವೆ. ಮಲೆಯೂರಿನ

---

೩೭. ಎ.ಕ. IV ಚಾ.ನ. - 99 ಪು. 55
೩೮. ಎ.ಕ. IV ಚಾ.ನ. - 101 ಪು. 56
೩೯. ಸಾಧನೆ ಸಂ. 24 ಸಂ.1 ಪು. 40 ಎಂ.ಜಿ. ಮಂಜುನಾಥ್
೪೦. ಎ.ಕ. IV ಚಾ.ನ. - 365 ಪು. 242
೪೧. ಅದೇ - " - 362 ಪು. 241
೪೨. ಅದೇ - " - 374 ಪು. 248
೪೩. ಅದೇ - " - 361 ಪು. 240
೪೪. ಅದೇ - " - 389 ಪು. 257
೪೫. ಅದೇ - " - 369 ಪು. 244
೪೬. ಅದೇ - " - 62 ಪು. 38

ಏಳಿಗೆಗಾಗಿ ಶ್ರಮಿಸಿದ ಶ್ರೀ ಆಚಾರ್ಯ ಚಂದ್ರಸಾಗರರು ಕ್ರಿ.ಶ. ೧೯೮೭ರಲ್ಲಿ ಕನಕಗಿರಿ ಬೆಟ್ಟದ ಮೇಲೆ ಸಲ್ಲೇಖನವನ್ನು ಸ್ವೀಕರಿಸಿ ಸಮಾಧಿ ಮರಣವನ್ನು ಹೊಂದಿರುತ್ತಾರೆ. ಇದು ಈ ಎರಡೂ ತಾಲ್ಲೂಕುಗಳಲ್ಲಿ ಸಲ್ಲೇಖನವನ್ನು ಪಡೆದು ಸಮಾಧಿ ಮರಣವನ್ನು ಪಡೆದ ಇತ್ತೀಚಿನ ನಿದರ್ಶನವಾಗಿದೆ.

**ಇಲ್ಲಿನ ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಸಂಘ/ ಗಣ/ ಗಚ್ಛ/ ಅನ್ವಯ/ ಬಳಿಗಳು**

ಜೈನಧರ್ಮದಲ್ಲಿ ಜೈನ ಮುನಿಗಳ ಹೆಸರನ್ನು ಹೇಳುವಾಗ ಸಂಘ, ಗಣ, ಗಚ್ಛ ಅನ್ವಯಗಳು ಹಾಗೂ ಬಳಿಗಳನ್ನು ಹೇಳುವ ಪದ್ಧತಿ ಇದೆ.

ಪ್ರಾಚೀನ ಕರ್ನಾಟಕದಲ್ಲಿ ಮೂಲಸಂಘವೇ ಅತಿ ಪ್ರಧಾನವಾದ ಸಂಘವಾಗಿದ್ದುದು ಶಾಸನಗಳಿಂದ ತಿಳಿದುಬರುತ್ತದೆ.

ಚಾಮರಾಜನಗರ ಮತ್ತು ಗುಂಡ್ಲುಪೇಟೆ ತಾಲ್ಲೂಕುಗಳಲ್ಲಿ ಮೂಲ ಸಂಘವನ್ನು ಉಲ್ಲೇಖಿಸುವ ಶಾಸನಗಳೇ ದೊರೆಯುತ್ತವೆ. ಮೂಲಸಂಘದ ಉಲ್ಲೇಖವು ನಮಗೆ ಚಾಮರಾಜನಗರ ತಾಲ್ಲೂಕು ಮಂಗಳದ ಒಂದು ಶಾಸನದಲ್ಲಿಯೂ ಮತ್ತು ಮಲೆಯೂರಿನ ೪ ಶಾಸನಗಳಲ್ಲಿಯೂ, ತೆರಕಣಾಂಬಿಯ ಒಂದು ಶಾಸನದಲ್ಲಿಯೂ ದೊರೆಯುತ್ತದೆ. ಮೂಲಸಂಘಕ್ಕೆ ಸೇರಿದ ದೇಸಿಗಣದ ಉಲ್ಲೇಖವು ನಮಗೆ ಮಲೆಯೂರಿನ ನಾಲ್ಕು ಶಾಸನಗಳಲ್ಲಿ ಸಿಗುತ್ತದೆ ಮತ್ತು ಕಾಲರ್ಗಣದ ಏಕೈಕ ಉಲ್ಲೇಖ ನಮಗೆ ಚಾಮರಾಜನಗರ ಪಾರ್ಶ್ವನಾಥ ಬಸದಿಯಲ್ಲಿರುವ ಶಾಸನದಲ್ಲಿ ದೊರೆಯುತ್ತದೆ.

ದೇಶಿಯಗಣದ ಪ್ರಮುಖಗುಚ್ಛಗಳಲ್ಲಿ ಒಂದಾದ ಪುಸ್ತಕ ಗಚ್ಛದ ಉಲ್ಲೇಖವು ಮಲೆಯೂರಿನ ನಾಲ್ಕು ಶಾಸನಗಳಲ್ಲಿ ದೊರೆಯುತ್ತದೆ.

ಗಣದ ಶಾಖೆಗಳಲ್ಲಿ ಒಂದಾದ ಕುಂದಕುಂದಾನ್ವಯವು ಬಹುಪ್ರಸಿದ್ಧವಾದುದು. ಆಚಾರ್ಯ ಕುಂದಕುಂದಾಚಾರ್ಯರಿಂದ ಸ್ಥಾಪಿತವಾದ ಈ ಅನ್ವಯವು ಮಂಗಳದ ಶಾಸನದಲ್ಲಿ ಮತ್ತು ಮಲೆಯೂರಿನ ೩ ಶಾಸನಗಳಲ್ಲಿ ದೊರೆಯುತ್ತದೆ. ದ್ರಾವಿಡಾನ್ವಯದ ಏಕೈಕ ಉಲ್ಲೇಖ ಚಾಮರಾಜನಗರದ ಶಾಸನದಲ್ಲಿ ದೊರೆಯುತ್ತದೆ. ಹನಸೋಗೆ ಬಳಿ ಮತ್ತು ಇಂಗಳೇಶ್ವರ ಬಳಿಗಳ ಪ್ರಸ್ತಾಪವೂ ಮಲೆಯೂರಿನ ಒಂದೊಂದು ಶಾಸನಗಳಲ್ಲಿ ದೊರೆಯುತ್ತದೆ. ಹನಸೋಗೆ ಮೈಸೂರು ಜಿಲ್ಲೆ ಹುಣಸೂರು ತಾ॥ನಲ್ಲಿದ್ದು ಇದು ಒಂದು ಪ್ರಾಚೀನ ಜೈನ ಕ್ಷೇತ್ರ. ಇಲ್ಲಿಂದ ಆರಂಭವಾದ ಒಂದು ಬಳಿಗೆ ಹನಸೋಗೆ ಬಳಿ ಎಂದು ಕರೆಯಲಾಗಿದ್ದು ಆ ಉಲ್ಲೇಖ ಕನ್ನಡನಾಡಿನ ಹಲವಾರು ಶಾಸನಗಳಲ್ಲಿ ದೊರೆತಿರುವುದನ್ನು ನಾವು ಗಮನಿಸಬಹುದು. ಅದೇ ರೀತಿ ಉತ್ತರ ಕರ್ನಾಟಕದ ಇಂಗಳೇಶ್ವರವು ಒಂದು ಜೈನ ಕೇಂದ್ರ. ಈ ಕ್ಷೇತ್ರದಲ್ಲಿ ಹುಟ್ಟಿದ ಒಂದು ಮುನಿಗಳ ಶಾಖೆ ಇಂಗಳೇಶ್ವರ ಬಳಿ ಎಂದು ಪ್ರಸಿದ್ಧಿ ಪಡೆದಿದೆ.

**ಜೈನ ಸಾಹಿತ್ಯ**

ಕನ್ನಡ ಸಾರಸ್ವತ ಲೋಕಕ್ಕೆ ಜೈನಧರ್ಮದ ಕೊಡುಗೆ ಅಪಾರವಾದುದು. ಪಂಪ ರನ್ನ ಜನ್ನ ನಾಗಚಂದ್ರ ಮುಂತಾದ ಜೈನ ಕವಿಗಳು ತಮ್ಮ ಅಮೂಲ್ಯ ಕೃತಿಗಳಿಂದ ಕನ್ನಡ ಸಾಹಿತ್ಯವನ್ನು ಸಮೃದ್ಧಿಗೊಳಿಸಿದ್ದಾರೆ. ಅದೇ ರೀತಿ ಚಾಮರಾಜನಗರ ಮತ್ತು ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ನಮಗೆ ಹಲವಾರು ಜೈನಕವಿಗಳು ದೊರೆಯುತ್ತಾರೆ. ಅವರನ್ನು ಸಂಕ್ಷಿಪ್ತವಾಗಿ ಇಲ್ಲಿ ಪರಿಚಯಿಸಲಾಗಿದೆ.

೧. **ಹಸ್ತಿಮಲ್ಲ** (ಕಾಲ. ಸು. ೧೨೦೦-೧೩೦೦). ಹಸ್ತಿಮಲ್ಲನು 'ಪೂರ್ವಪುರಾಣ'

ಎಂಬ ಕನ್ನಡ ಕೃತಿಯನ್ನು ಬರೆದಿದ್ದಾನೆ. ಇದಲ್ಲದೆ ಆದಿಪುರಾಣ, ಪುರುಷಚರಿತ, ವಿಕ್ರಾಂತಕೌರವ, ಮೈಥಿಲಿಕಲ್ಯಾಣ ಮುಂತಾದ ಸಂಸ್ಕೃತ ಕೃತಿಗಳನ್ನು ರಚಿಸಿದ್ದಾನೆ.[೪೭] ಈತನು ಗುಣಭದ್ರರ ಶಿಷ್ಯನಾದ ಗೋವಿಂದ ಭಟ್ಟನ ಮಗ. ಹಸ್ತಿಮಲ್ಲನು ಪಾಂಡ್ಯದೇಶದ ಅರಸರಿಂದ ಸನ್ಮಾನಿತನಾದ ನಂತರ ಸತ್ಯಮಂಗಲದಿಂದ ಛತ್ರತ್ರಯಪುರದಲ್ಲಿ ನೆಲಸಿದನು. ಅವನ ಶಿಷ್ಯನಾದ ಶ್ರೀವತ್ಸಗೋತ್ರದ ಪಾರ್ಶ್ವಪಂಡಿತನು ಹಲವಾರು ಗ್ರಂಥಗಳನ್ನು ರಚಿಸಿದ್ದಾನೆ.[೪೮] ಮಲೆಯೂರಿನಿಂದ ಕೇವಲ ೩ ಕಿ.ಮೀ. ದೂರದಲ್ಲಿ ಮುಕ್ಕೊಡಹಳ್ಳಿ ಎಂಬ ಗ್ರಾಮವಿದ್ದು, ಅಲ್ಲಿ ಗಂಗರ ಕಾಲದ ಜೈನ ಬಸದಿಯ ಅವಶೇಷಗಳು ನನ್ನ ಇತ್ತೀಚಿನ ಕ್ಷೇತ್ರಕಾರ್ಯದಲ್ಲಿ ಗಮನಕ್ಕೆ ಬಂದಿದೆ. ಈ ಪ್ರದೇಶದ ಜೈನ ಕವಿಗಳು ತಮ್ಮ ಸ್ಥಳಗಳನ್ನು ಸಂಸ್ಕೃತೀಕರಿಸಿ ಹೇಳುವುದು ವಾಡಿಕೆಯಾಗಿ ಕಂಡು ಬರುತ್ತದೆ. ಉದಾಹರಣೆಗೆ ಮಲೆಯೂರು-ಗಿರಿಪುರ, ಕೆಲಸೂರು-ಉದ್ಯೋಗಪುರ, ಅರಿಕೊಠಾರ-ಶತ್ರುಮರ್ದನಪುರ, ಮೂಗೂರು-ನಾಸಿಕಾಪುರ, ತೆರಕಣಾಂಬಿ-ತ್ರಿಕದಂಬಪುರ. ಹೀಗೆಯೆ ಮೂಕ್ಕೊಡಹಳ್ಳಿ ಛತ್ರತ್ರಯಪುರವಾಗಿದೆ. ಹಸ್ತಿಮಲ್ಲನ ವಂಶಜನಾದ ಬ್ರಹ್ಮಸೂರಿ ಎಂಬ ಕವಿಯೊಬ್ಬನು ತ್ರೈವರ್ಣಿಕಾಸಾರವನ್ನು ಬರೆದಿರುತ್ತಾನೆ.

೨. **ನೇಮಿಚಂದ್ರ** (ಕಾಲ ಸು. ೧೩೦೦). ಈತನು ಗುಂಡ್ಲುಪೇಟೆ ತಾಲ್ಲೂಕು ತೆರಕಣಾಂಬಿಯವನು. ಈತನ ತಂದೆ ದೇವಪ್ಪ. ಅಭಯಸೂರಿಗಳಲ್ಲಿ ಸಕಲಾಗಮಗಳನ್ನು ಕಲಿತು ಪ್ರತಿಷ್ಠಾಧಿ ಶಾಸ್ತ್ರವೆಂಬ ಗ್ರಂಥವನ್ನು ಬರೆದನು ಮತ್ತು ಕೇರಳ ದೇಶದ ಜಿನಾಲಯಗಳ ಪ್ರತಿಷ್ಠಾ ಮಹೋತ್ಸವಕ್ಕೆ ಇವನನ್ನು ಆಹ್ವಾನಿಸುತ್ತಿದ್ದುದಾಗಿ ತಿಳಿದುಬರುತ್ತದೆ.[೪೯] ಮಲೆಯೂರಿನ ಕವಿ ದೇವಚಂದ್ರನ ಮನೆಯಲ್ಲಿ "ನೇಮಿಚಂದ್ರ ದೇವವಿರಚಿತ ವಾಸ್ತುಪೂಜಾವಿಧಿ" ಮತ್ತು 'ಪ್ರತಿಷ್ಠಾತಿಲಕ ಸಂಗ್ರಹ' ಎಂಬ ಗ್ರಂಥಗಳು ಹಾಗೂ ಮಲೆಯೂರಿನ ಪಾರ್ಶ್ವನಾಥ ಬಸದಿಯಲ್ಲಿ 'ಪೂಜಾವಸ್ತು' ಎಂಬ ಗ್ರಂಥವು ನನ್ನ ಗಮನಕ್ಕೆ ಬಂದಿದೆ. ದೇವಚಂದ್ರನು ಬಹುಶಃ ಇವುಗಳನ್ನು ನೋಡಿಯೇ ನೇಮಿಚಂದ್ರನ ಬಗ್ಗೆ ತನ್ನ ಕೃತಿಯಲ್ಲಿ ಮಾಹಿತಿ ನೀಡಿರಬೇಕು.

೩. **ಬಾಹುಬಲಿ ಪಂಡಿತದೇವ:** 'ಧರ್ಮನಾಥ ಪುರಾಣ'ವನ್ನು ಬಾಹುಬಲಿ ಪಂಡಿತದೇವನು ಬರೆದಿದ್ದಾನೆ. ನಯಕೀರ್ತಿ ಮುನಿಯ ಶಿಷ್ಯನಾದ ಬಾಹುಬಲಿಪಂಡಿತದೇವನು ಮೂಲಸಂಘ, ದೇಶಿಗಣ, ಪುಸ್ತಕ ಗಚ್ಛದವನು. ಮಲೆಯೂರಿನ ಪಾರ್ಶ್ವನಾಥನ ಬಸದಿಯ ದಕ್ಷಿಣ ಭಿತ್ತಿಗೆ ಒರಗಿಸಿದಂತೆ ಒಂದು ನಿಷಧಿ ಶಾಸನವಿದೆ. ಶಾಸನದ ಶಿಲ್ಪವು ಸ್ತ್ರೀಯೊಬ್ಬಳಿಗೆ ಮುನಿಯೋರ್ವನು ಸಲ್ಲೇಖನ ವ್ರತವನ್ನು ಬೋಧಿಸುವಂತಿದೆ. ಅಲ್ಲದೆ ಶಾಸನದ ಪಾಠದಲ್ಲಿ ಬಾಹುಬಲಿ ಪಂಡಿತದೇವನನ್ನು ಸ್ತುತಿಸುವ ಪದ್ಯವಿದೆ.[೫೦] ಈ ಪದ್ಯವು ಬಾಹುಬಲಿ ಪಂಡಿತದೇವನ ಧರ್ಮನಾಥ ಪುರಾಣದ ಪ್ರಥಮಾಶ್ವಾಸದ ಹತ್ತನೆಯ ಪದ್ಯವಾಗಿದೆ. ಅದೇ ರೀತಿ ಐಚಗಾನ ಹಳ್ಳಿಯ ಶಾಸನದಲ್ಲಿಯೂ ಬಾಹುಬಲಿ ಪಂಡಿತದೇವನ ಧರ್ಮನಾಥ ಪುರಾಣದ ೩ ಪದ್ಯಗಳು ದೊರೆಯುತ್ತದೆ.[೫೧] ಹುಲ್ಲಹಳ್ಳಿ (ನಂಜನಗೂಡು ತಾಲ್ಲೂಕು) ಒಂದು ಶಾಸನ ಬಾಹುಬಲಿಪಂಡಿತನ ಸಲ್ಲೇಖನ ಮರಣವನ್ನು ಸೂಚಿಸುತ್ತದೆ. ಈ ಎಲ್ಲಾ ಅಂಶಗಳಿಂದ ಬಾಹುಬಲಿ ಪಂಡಿತದೇವನು ತನ್ನ

---

೪೭. ಕನ್ನಡಸಾಹಿತ್ಯ ಚರಿತ್ರೆ ಸಂ. 4 ಪು. 1695 ಮೈ.ವಿ.ವಿ

೪೮. ರಾಜಾವಳೀ ಕಥಾಸಾರ ಪು. 162 ಸಂ. ಬಿ.ಎಸ್. ಸಣ್ಣಯ್ಯ

೪೯. ಅದೇ ಪು. 179 ಸಂ. ಬಿ.ಎಸ್. ಸಣ್ಣಯ್ಯ

೫೦. ಎ.ಕ. IV ಚಾ.ನ. - 369 ಪು. 244

೫೧. ಎ.ಕ. III ನಂಜನಗೂಡು - 171 ಪು. 277

ಜೀವಿತದ ಅವಧಿಯಲ್ಲಿ ಚಾಮರಾಜನಗರ, ಗುಂಡ್ಲುಪೇಟೆ ಮತ್ತು ನಂಜನಗೂಡು ತಾಲ್ಲೂಕುಗಳಲ್ಲಿ ಸಂಚರಿಸುತ್ತಾ ಜೈನ ಧರ್ಮಬೋಧಕನಾಗಿದ್ದನೆಂದು ತಿಳಿದುಬರುತ್ತದೆ.

**೪. ಮಹಾಬಲ:** ಈತನು ನೇಮಿನಾಥ ಪುರಾಣವನ್ನು ರಚಿಸಿದ್ದಾನೆ. ತಾನು ಈ ಕೃತಿಯನ್ನು ಕ್ರಿ.ಶ. ೧೨೫೪ರಲ್ಲಿ ರಚಿಸಿರುವುದಾಗಿ ತಿಳಿಸಿದ್ದಾನೆ. ತನ್ನ ರಾಜನಾದ ಕೇತೆಯನಾಯ್ಕನ ಆಶ್ರಯದಲ್ಲಿ ಈ ಕೃತಿಯನ್ನು ರಚಿಸಿದುದಾಗಿ, ಈ ಕೇತೆಯ ನಾಯ್ಕನಿಗೆ ಕ್ಷೇಮಂಕರ ಎಂದು ಇನ್ನೊಂದು ಹೆಸರು ಇದ್ದುದಾಗಿ ತಿಳಿಸಿರುತ್ತಾನೆ. ದೇವಚಂದ್ರನು ತನ್ನ ರಾಜಾವಳೀ ಕಥೆಯಲ್ಲಿ "ಬಲ್ಲಾಳ ರಾಯನ ಸಾಮಂತರ್ ಕ್ಷೇಮಂಕರ ನಾಯಕ, ಪದ್ಮನಾಭ ದಮೋದರರಾದಿಗಳ್ ಪುರಾಣಗಳಂ ಮಾಡಿಸಿದರ್" ಎಂದು ತಿಳಿಸಿರುವ ಕ್ಷೇಮಂಕರನು ಮಹಾಬಲನ ಆಶ್ರಯದಾತನೇ ಇರಬಹುದು.[೫೨] ಚಾಮರಾಜನಗರ ತಾಲ್ಲೂಕು ಕುಲಗಾಣದ ಒಂದು ಜೈನಶಾಸನದಲ್ಲಿ ಕ್ರಿ.ಶ. ೧೨೪೧ರಲ್ಲಿ ಮಹಾಪ್ರಧಾನ ಸೇನಾಪತಿ, ಸರ್ವಾಧಿಕಾರಿ ಕೇತೆಯನಾಯ್ಕನು ಕುಲಗಾಣದ ಬಸದಿಗೆ ದಾನವಿತ್ತಿರುತ್ತಾನೆ[೫೩] ಈತನು ಹೊಯ್ಸಳ ದೊರೆ ಬಲ್ಲಾಳ ರಾಯನ ಸಾಮಂತನಾಗಿದ್ದನೆಂದು ಶಾಸನವು ತಿಳಿಯಪಡಿಸುತ್ತದೆ. ಮಹಾಬಲನ ಕೃತಿರಚನೆಯ ಕಾಲಕ್ಕೂ ಈ ಶಾಸನದ ಕಾಲಕ್ಕೂ ಸರಿಹೊಂದುತ್ತದೆ. ಮಹಾಬಲನ ಆಶ್ರಯದಾತನು ಕುಲಗಾಣದ ಶಾಸನೋಕ್ತ ಕೇತೆಯ ನಾಯಕನೇ ಆಗಿರಬೇಕು. ಆದ್ದರಿಂದ ಮಹಾಬಲನು ಸಹ ಈ ಪ್ರದೇಶದವನೇ ಆಗಿರಬೇಕು. ಮಹಾಬಲ ವಿರಚಿತ 'ನೇಮಿನಾಥ ಪುರಾಣ'ವನ್ನು ಮಲೆಯೂರಿನ ಪದ್ಮರಾಜನು ಹೇಳಿ ನೇಮಿಚಂದ್ರನ ಕೈಯಲ್ಲಿ ಬರೆಸಿರುತ್ತಾನೆ ಎಂದು ಹಸ್ತಪ್ರತಿಯೊಂದರಿಂದ ತಿಳಿದುಬರುತ್ತದೆ.

**೫. ಪದ್ಮರಸ** (೧೫೯೯): 'ಶೃಂಗಾರ ಚರಿತೆ'ಯನ್ನು ಬರೆದ ಪದ್ಮರಸನು ಕೆಲಸೂರಿನವನು. ತನ್ನ ಕೃತಿಯಲ್ಲಿ ತಾನು ಶ್ರೀವತ್ಸಗೋತ್ರದ ಬಹ್ಮಸೂರಿಯ ವಂಶಜನೆಂದು, ತನ್ನ ತಂದೆ ವೈದ್ಯಶಾಸ್ತ್ರ ಪಾರಂಗತನಾದ ಪದ್ಮಣೋಪಾಧ್ಯಾಯನೆಂದೂ, ತಾನು ಕೆಲಸೂರಿನ ಬಸದಿಯಲ್ಲಿ ಈ ಕೃತಿಯನ್ನು ೧೫೯೭ರಲ್ಲಿ ರಚಿಸಿರುವುದಾಗಿ ತಿಳಿಸಿರುವನು.[೫೪] ದೇವಚಂದ್ರನು ತನ್ನ ಪೂರ್ವಿಕರೆಂದು ಹೇಳುವ ಬ್ರಹ್ಮಸೂರಿ ಹಾಗೂ ಪದ್ಮರಸನು ತಿಳಿಸಿರುವ ಬಹ್ಮಸೂರಿ ಇಬ್ಬರು ಒಬ್ಬರೇ ಆಗಿರುತ್ತಾರೆ.

**೬. ವಿದ್ಯಾನಂದ** (೧೪೫೦): ವಿದ್ಯಾನಂದನು 'ಪ್ರಾಯಶ್ಚಿತ್ತ'ವೆಂಬ ಸ್ವರಚಿತ ಗ್ರಂಥಕ್ಕೆ ಟೀಕೆಯನ್ನು ಬರೆದಿದ್ದಾನೆ.[೫೫] ಈತನು ಬ್ರಹ್ಮಸೂರಿಯ ಮಗ, ಅಕಳಂಕ ಚಂದ್ರಪ್ರಭ ವಿದ್ಯಾನಂದರು ತನ್ನವ್ರತ ಗುರುಗಳೆಂದು ಹೇಳಿದ್ದಾನೆ. ಈ ಮುನಿಗಳು ಮಲೆಯೂರಿನ ಮುನಿಪರಂಪರೆಯಲ್ಲಿ ಬರುವ ಮುನಿಗಳಾಗಿರುತ್ತಾರೆ. ಅಲ್ಲದೆ, ಕೃತಿಯ ಆರಂಭದಲ್ಲಿ ಕನಕಗಿರಿಯ ವಿಜಯ ಜಿನನನ್ನು ಸ್ತುತಿಸುವ ಪದ್ಯವಿದೆ. ಆದ್ದರಿಂದ ಈತ ಮಲೆಯೂರಿನವನೇ ಎಂದು ಖಚಿತವಾಗುತ್ತದೆ.

**೭. ತೆರಕಣಾಂಬಿಬೊಮ್ಮರಸ** (೧೪೭೫): ಈತನು 'ಸುನತ್ಕುಮಾರ ಚರಿತೆ', 'ಜೀವಂಧರ ಸಾಂಗತ್ಯ'ಗಳನ್ನು ಬರೆದಿರುತ್ತಾನೆ[೫೬] ಈತ ವಾದೀಭಸಿಂಹ ನೇಮಿಚಂದ್ರನ ಪ್ರಪೌತ್ರನು. ಬೊಮ್ಮರ ಸೋಪಾಧ್ಯಾಯನ ಮಗನು. ಈತ ತೆರಕಣಾಂಬಿಯ ಪಾರ್ಶ್ವಜಿನನ ಆರಾಧಕನಾಗಿದ್ದಾನೆ. ತನ್ನ

---

೫೨. ಕನ್ನಡಸಾಹಿತ್ಯ ಚರಿತೆ ಸಂ. 4 ಪು. 1619
೫೩. ಎ.ಕ. IV ಚಾ.ನ. - 344 ಪು. 219
೫೪. ಕರ್ನಾಟಕ ಕವಿಚರಿತೆ ಪು. 266
೫೫. ಅದೇ ಪು. 56
೫೬. ಅದೇ ಪು. 67

ಕೃತಿಯನ್ನು ತೆರಕಣಾಂಬಿಯ ಪಾರ್ಶ್ವನಾಥ ಬಸದಿಯಲ್ಲಿ ರಚಿಸಿದುದಾಗಿ ಹೇಳಿದ್ದಾನೆ. ಈಗ ತೆರಕಣಾಂಬಿಯ ಪಾರ್ಶ್ವನಾಥ ಬಸದಿ ಸಂಪೂರ್ಣ ನಾಶವಾಗಿದೆ. ತೆರಕಣಾಂಬಿಯಲ್ಲಿ ಆಂಜನೇಯ ದೇವಾಲಯದ ಮುಂದೆ ಲಲಿತಕೀರ್ತಿಗಳಿಂದ ಸ್ಥಾಪಿಸಲ್ಪಟ್ಟಂತಹ ಪಾರ್ಶ್ವನಾಥ ಮೂರ್ತಿ ಇದೆ. ಇದು ತೆರಕಣಾಂಬಿ ಬೊಮ್ಮರಸನು ಸ್ತುತಿಸಿರುವ ಪಾರ್ಶ್ವನಾಥನ ಮೂರ್ತಿಯಾಗಿರಬೇಕು.

೮. **ಶ್ರುತಕೀರ್ತಿ** (೧೫೭೮): 'ವಿಜಯಕುಮಾರಿ ಚರಿತೆ'ಯ ಕರ್ತೃವಾದ ಶ್ರುತಕೀರ್ತಿಯು ತಾನು ರಚಿಸಿರುವ ವಿಜಯಕುಮಾರಿ ಚರಿತ್ರೆಯಲ್ಲಿ ತನ್ನ ವೈಯಕ್ತಿಕ ವಿಷಯವನ್ನು ಹೇಳಿಕೊಂಡಿದ್ದಾನೆ. ತನ್ನ ಕೃತಿಯಲ್ಲಿ ತನ್ನ ತಾತ ಕನಕಗಿರಿಯ ವಿಜಯಕೀರ್ತನಾಚಾರ್ಯನೆಂತಲೂ ತಂದೆ ಅಕಳಂಕ ಮುನಿಯೆಂತಲೂ ತಿಳಿಸಿರುತ್ತಾನೆ. ಆದ್ದರಿಂದ ಈ ಕವಿಯೂ ಸಹಾ ಮಲೆಯೂರಿನವನು ಎಂದು ಹೇಳುವುದರಲ್ಲಿ ಯಾವ ಅಡ್ಡಿಯೂ ಇಲ್ಲ.

೯. **ದೇವಚಂದ್ರ** (೧೭೭೦-೧೮೩೩): ಈ ತಾಲ್ಲೂಕುಗಳಲ್ಲಿ ದೊರೆತಿರುವ ಜೈನ ಕವಿಗಳಲ್ಲಿ ದೇವಚಂದ್ರನು ಅತ್ಯಂತ ಪ್ರಮುಖನಾಗಿರುತ್ತಾನೆ. ಈತನ ಸ್ಥಳ ಮಲೆಯೂರು. ಈತನ ಕೃತಿಗಳು 'ಪೂಜ್ಯಪಾದ ಚರಿತೆ', 'ರಾಜಾವಳೀ ಕಥಾಸಾರ', 'ಸುಮೇರುಶತಕ', 'ಭಕ್ತಿಸಾರ', 'ಶತಕತ್ರಯ', 'ರಾಮಾವತಾರ' ಮುಂತಾದವು. ದೇವಚಂದ್ರನು ಬಹುಮುಖ ಪ್ರತಿಭೆಯ ವ್ಯಕ್ತಿ. ಈತ ತನ್ನ ಕೃತಿಯಾದ 'ರಾಜಾವಳೀ ಕಥಾಸಾರ'ದಲ್ಲಿ ಹಲವಾರು ಐತಿಹಾಸಿಕ ಸಂಗತಿಗಳನ್ನು ನೀಡಿದ್ದಾನೆ. ಆದ್ದರಿಂದ ಈತನನ್ನು ಕನ್ನಡದ ಪ್ರಥಮ ಕವಿಚರಿತಕಾರ ಎಂದು ಹೇಳಬಹುದು.

ದೇವಚಂದ್ರನ 'ರಾಜಾವಳೀ ಕಥಾಸಾರ'ವು ಕನ್ನಡನಾಡಿನ ಹಲವಾರು ಶಾಸನಗಳನ್ನು ಆಧಾರವಾಗಿಟ್ಟುಕೊಂಡು ರಚಿತವಾದ ಕೃತಿಯಾಗಿದೆ. ಈ ಕೃತಿಯಲ್ಲಿ ಬುಕ್ಕನ ಸಮನ್ವಯ ಶಾಸನದ ಪೂರ್ಣ ಪಾಠ ದೊರೆಯುತ್ತದೆ[೫೭] ಅಲ್ಲದೆ ರಾಜಾವಳೀ ಕಥಾಸಾರದಲ್ಲಿ ಉಲ್ಲೇಖಿತವಾಗಿರುವ ಶಾಸನಗಳ ದೊಡ್ಡ ಪಟ್ಟಿಯನ್ನೇ ನೀಡಬಹುದು. ಇವುಗಳನ್ನು ಗಮನಿಸಿದರೆ ಆತನಿಗೆ ಕನ್ನಡ ಶಾಸನಗಳನ್ನು ಓದಲು ಚೆನ್ನಾಗಿ ಬಂದಿರಲೇಬೇಕು. ಶಾಸನಗಳನ್ನೊಳಗೊಂಡ ರಾಜಾವಳಿಯ ರಚನೆಯ ಕಾಲ ಕ್ರಿ.ಶ. ೧೮೦೪. ಕ್ರಿ.ಶ. ೧೮೦೭ರಲ್ಲಿ ಏಷ್ಯಾಟಿಕ್ ರಿಸರ್ಚ್ ಪತ್ರಿಕೆಯಲ್ಲಿ ಕಾವೆಲ್ಲಿ ವೆಂಕಟಬೋರಯ್ಯನು ಬುಕ್ಕನ ಸಮನ್ವಯ ಶಾಸನವನ್ನು ಪ್ರಕಟಿಸಿರುತ್ತಾನೆ. ಆದ್ದರಿಂದ ಕನ್ನಡ ವಿದ್ವಾಂಸರು ಕಾವೆಲ್ಲಿ ವೆಂಕಟಬೋರಯ್ಯನೇ ಕನ್ನಡದ ಪ್ರಥಮ ದೇಶಿ ಶಾಸನತಜ್ಞ ಎಂದು ಗುರುತಿಸಿದ್ದರು. ಆದರೆ ಕವಿದೇವಚಂದ್ರನು ಇನ್ನೂ ಮೂರು ವರ್ಷ ಮೊದಲೇ ಶಾಸನಗಳನ್ನು ಅಭ್ಯಸಿಸಿ ಕೃತಿರಚಿಸಿರುವುದರಿಂದ ಈತನೇ ಕನ್ನಡದ ಪ್ರಪ್ರಥಮ ದೇಶಿ ಶಾಸನ ತಜ್ಞ ಎಂದು ಖಚಿತವಾಗಿ ಹೇಳಬಹುದು. ಹೀಗೆ ಕನ್ನಡದ ಪ್ರಪ್ರಥಮ ಕವಿಚರಿತೆಕಾರ, ಇತಿಹಾಸತಜ್ಞ, ಶಾಸನತಜ್ಞ, ಕವಿ ದೇವಚಂದ್ರನೆನ್ನುವುದು ಅತ್ಯಂತ ಗಮನಾರ್ಹ ಸಂಗತಿಯಾಗಿದೆ.

೧೦. **ಪದ್ಮರಾಜ** (ಕಾಲ ೧೭೭೦): ಕವಿ ದೇವಚಂದ್ರನ ಅಣ್ಣನೇ ಪದ್ಮರಾಜ. ಈತನು ದೇವಚಂದ್ರನ ಪೂಜ್ಯಪಾದ ಚರಿತೆಯನ್ನು ರಚಿಸಲು ಸಹಕರಿಸಿರುತ್ತಾನೆ. ಅಲ್ಲದೆ ತೀರ್ಥಂಕರ ಚರಿತೆಗಳನ್ನು ಪುರಾಣರೂಪದಲ್ಲಿ ಹೇಳುತ್ತಿದ್ದುದು ಹಸ್ತಪ್ರತಿಗಳನ್ನು ಗಮನಿಸಿದಾಗ ತಿಳಿದುಬರುತ್ತದೆ. ಈತ ಸಕಲಶಾಸ್ತ್ರಗಳನ್ನು ಬಲ್ಲ ವಿದ್ವಾಂಸನೆಂದು ಕವಿ ದೇವಚಂದ್ರನು ತಿಳಿಸಿರುತ್ತಾನೆ. ಈತನ ಸ್ವತಂತ್ರ ಕೃತಿ ಯಾವುದೂ ಇದುವರೆವಿಗೂ ದೊರೆತಿರುವುದಿಲ್ಲ.

---

೫೭. ರಾ.ಕ.ಸಾರ - ಪು. 198 ಸಂ. ಬಿ.ಎಸ್. ಸಣ್ಣಯ್ಯ

೧೧. **ದೇವರಸಪುತ್ರ** (ಸು. ೧೬೦೦): ಈ ಅಜ್ಞಾತ ಕವಿಯ ಹೆಸರು ಸಹ ತಿಳಿದಿಲ್ಲ. ತಾನು ದೇವರಸಪುತ್ರ ಎಂದು ಮಾತ್ರ ಆತನೇ ಹೇಳಿಕೊಂಡಿದ್ದಾನೆ. ಈತನ ಕೃತಿ 'ಗುರುದತ್ತ ಚರಿತೆ'. ಈತ ಕರ್ನಾಟಕ ದೇಶದ ಪೂಗತಟಾಕವೆಂಬ ಪಟ್ಟಣದಲ್ಲಿ ಪ್ರಸಿದ್ಧನಾದ ದೇವರಸನ ಮಗ. ಈ ಪಟ್ಟಣದ ಸಮೀಪದಲ್ಲಿರುವ ಪಟ್ಟಣದಲ್ಲಿ ಪಾರ್ಶ್ವಜಿನಾಲಯವಿದೆಯೆಂದೂ, ಆ ಪರ್ವತದಲ್ಲಿ ಪೂಜ್ಯಪಾದರು ಸಿದ್ಧರಸ ವಿದ್ಯೆಯನ್ನು ರಚಿಸಿ ಕೀರ್ತಿಪಡೆದು ಮುಕ್ತಿಯನ್ನು ಹೊಂದಿದರೆಂದೂ ತನ್ನ ಕೃತಿಯಲ್ಲಿ ತಿಳಿಸಿರುತ್ತಾನೆ.[೫೮] ಪೂಜ್ಯಪಾದರು ಸಿದ್ಧರಸವನ್ನು ರಚಿಸಿ ಕೀರ್ತಿಯನ್ನು ಪಡೆದು ಮುಕ್ತಿ ಹೊಂದಿದರು ಎಂದು ಪ್ರಸಿದ್ಧವಾಗಿರುವ ಸ್ಥಳ ಮಲೆಯೂರು ಅಲ್ಲದೆ ಬೇರಾವುದೂ ಅಲ್ಲ. ಆದ್ದರಿಂದ ದೇವರಸಪುತ್ರನೆಂಬ ಅಜ್ಞಾತಕವಿಯ ಸ್ಥಳವೂ ಸಹ ಮಲೆಯೂರು ಎಂದು ಹೇಳಬಹುದು. ಪೂರ್ವ ಕವಿಗಳ ಸ್ಮರಣೆಯಲ್ಲಿ ಭಟ್ಟಾಕಳಂಕನನ್ನು ಕಡೆಯದಾಗಿ ಹೇಳಿರುವುದರಿಂದ ಇವನ ಕಾಲವನ್ನು ಕ್ರಿ.ಶ. ಸು. ೧೬೦೦ ಇರಬಹುದೆಂದು ಕವಿ ಚರಿತೆಕಾರರು ಅಭಿಪ್ರಾಯಪಟ್ಟಿರುತ್ತಾರೆ.

## ಜೈನಧರ್ಮದ ಇಳಿಮುಖ

ವಿಜೃಂಭಣೆಯಿಂದ ಬಾಳಿ ಬದುಕಿದ ಜೈನಧರ್ಮ ಅನ್ಯಧರ್ಮಗಳ ಆಕ್ರಮಣದಿಂದ ಹಾಗೂ ರಾಜಾಶ್ರಯ ವಂಚಿತವಾದುದರಿಂದ ಕ್ರಿ.ಶ. ೧೨ನೆಯ ಶತಮಾನದ ನಂತರ ಅವನತಿಯ ಹಾದಿಯನ್ನು ಹಿಡಿಯಿತು. ೧೨ನೆಯ ಶತಮಾನದಲ್ಲಿ ಕೆಲವು ವೀರಶೈವರು ಜೈನಧರ್ಮಕ್ಕೆ ಭಾರೀ ಹೊಡೆತವನ್ನೇ ಕೊಟ್ಟರು. ಏಕಾಂತರಾಮಯ್ಯನೆಂಬ ಶೈವಭಕ್ತನು ಕರ್ನಾಟಕದಲ್ಲಿ ಸುಮಾರು ೮೦೦ ಬಸದಿಗಳನ್ನು ನಾಶಪಡಿಸಿರುವುದಾಗಿ ನಮಗೆ ಅಬ್ಬಲೂರಿನ ಏಕಾಂತ ರಾಮಯ್ಯನ ಶಾಸನ ಮತ್ತು ಹಲವಾರು ಕಾವ್ಯಗಳಿಂದ ತಿಳಿದು ಬರುತ್ತದೆ. ಅದೇ ಪ್ರಕಾರ ಮೈಸೂರು ಪ್ರಾಂತ್ಯದಲ್ಲಿಯೂ ಜೈನಧರ್ಮದ ಮೇಲೆ ಭಾರೀ ಆಕ್ರಮಣ ನಡೆದಿರುವುದನ್ನು ನಾವು ಗಮನಿಸಬಹುದು. ಈ ಸಾಂಸ್ಕೃತಿಕ ಮತ್ತು ಧಾರ್ಮಿಕ ದುರಂತಕ್ಕೆ ಚಾಮರಾಜನಗರ ತಾಲ್ಲೂಕಿನ ಕ್ರಿ.ಶ. ೧೫೩೦ರ ಒಂದು ಶಾಸನ ಸಾಕ್ಷಿಯಾಗಿದೆ. ಚಾಮರಾಜನಗರ ತಾಲ್ಲೂಕು ಕೆಂಚನಪುರದ ಒಂದು ಶಾಸನದಲ್ಲಿ ಏಕಾಂತ ಬಸವೇಶ್ವರ ಎಂಬ ವೀರಶೈವನು ಮೂಲಸ್ಥಾನ ದೇವರಿಗೆ ದಾನಕೊಟ್ಟಿರುವ ವಿವರ ಬರುತ್ತದೆ.[೫೯] ಅದರಲ್ಲಿ ಏಕಾಂತದ ಬಸವೇಶ್ವರನನ್ನು "ಅನೇಕಾಂತಾದಿ ವಿರುದ್ಧವಾಗ್ವಿಘಟನ ಪೌಢಪ್ರತಾಪೋಜ್ವಲ" ಎಂಬುದಾಗಿ ಸ್ತುತಿಸಿರುವುದನ್ನು ಗಮನಿಸಬಹುದು ಅಂದರೆ ಆತ ಅನೇಕಾಂತವನ್ನು ಖಂಡಿಸುವವನು ಅಥವಾ ಜೈನಧರ್ಮವನ್ನು ಖಂಡಿಸುವವನು ಎಂದು ತಿಳಿಸಿದೆ. ಅಲ್ಲದೆ ಈ ಏಕಾಂತದ ಬಸವೇಶ್ವರನನ್ನು ಶಾಸನ ಏಕಾಂತದ ರಾಮಯ್ಯನ ನಿಜಸ್ವರೂಪ ಎಂದು ಪ್ರಶಂಶಿಸಿದೆ.[೬೦] ಈತನೂ ಸಹಿತ ಏಕಾಂತದ ರಾಮಯ್ಯನ ತರಹವೇ ಜೈನ ಧರ್ಮದ ನಾಶದ ಕಾರ್ಯದಲ್ಲಿ ಭಾಗಿಯಾಗಿರಬೇಕು.

ದೇವಚಂದ್ರನ 'ರಾಜಾವಳೀ ಕಥೆ'ಯಲ್ಲಿ ಇನ್ನೊಂದು ಮಹತ್ತರ ವಿಷಯ ಬೆಳಕಿಗೆ ಬರುತ್ತದೆ. ಅದರಲ್ಲಿ ಚಿಕ್ಕದೇವರಾಜ ಅರಸರು ರಾಜ್ಯಕಾರ್ಯಕ್ಕೆ ಹೊರಗೆ ಹೋಗಿದ್ದಾಗ ದೊಡ್ಡ ದೇವಯ್ಯನೆಂಬುವನು ಸರ್ವಾಧಿಕಾರಿಯಂತೆಯೇ ವರ್ತಿಸಿ ಜೈನಧರ್ಮದ ಹೆಸರಿಲ್ಲದಂತೆ

---

೫೮. ಗುರುದತ್ತಚರಿತೆ ಪು. 83 ಸಂ. ಎಂ.ಪಿ. ಮಂಜಪ್ಪಶೆಟ್ಟಿ
೫೯. ಎ.ಕ - ಚಾ.ನ. - 144 ಪು. 86
೬೦. ಎ.ಕ. IV, ಚಾ.ನ. - 144, ಪು. 87

ಮಾಡುವೆನೆಂದು ಮೂರು, ನಾಲ್ಕು ದಿನಗಳಲ್ಲಿ ಅನೇಕ ಬಸದಿಗಳನ್ನು ನಾಶಪಡಿಸಿದನೆಂಬ ಸಂಗತಿ ತಿಳಿದುಬರುತ್ತದೆ. ಹೀಗೆ ದೊಡ್ಡದೇವಯ್ಯನ ಅನುಚರರು ಮತ್ತು ಏಕಾಂತದ ಬಸವೇಶ್ವರನ ಶಿಷ್ಯರು ಜೈನ ಬಸದಿಗಳನ್ನು ಹಳೇ ಮೈಸೂರು ಪ್ರಾಂತ್ಯದಲ್ಲಿ ನಾಶಪಡಿಸಿದ್ದಾರೆ.

ಪರಳಕೋಟೆಯ ಜೈನ ಬಸದಿಯು ನಾಶವಾಗಿದೆ. ಈಗಲೂ ಅಲ್ಲಿ ಜೈನ ಬಸದಿಯ ಅವಶೇಷಗಳು ದೊರೆಯುತ್ತವೆ. ಅದೇ ಬಸದಿಯಲ್ಲಿರುವ ಪಾರ್ಶ್ವನಾಥನ ಮೂರ್ತಿಯ ಬಿಂಬವನ್ನು ಚಾಮರಾಜನಗರದಲ್ಲಿ ತಂದಿಡಲಾಗಿದೆ ಎಂದು ಕ್ಷೇತ್ರಕಾರ್ಯದಲ್ಲಿ ತಿಳಿಯಿತು. ತೆರಕಣಾಂಬಿಯ ಬೊಮ್ಮರಸನು ಸನತ್ಕುಮಾರ ಚರಿತ್ರೆಯನ್ನು ತೆರಕಣಾಂಬಿಯ ಪಾರ್ಶ್ವನಾಥ ಬಸದಿಯಲ್ಲಿ ಬರೆದೆನೆಂದು ಹೇಳಿಕೊಂಡಿದ್ದಾನೆ. ಈಗ ತೆರಕಣಾಂಬಿಯಲ್ಲಿ ಯಾವ ಬಸದಿಯೂ ಇಲ್ಲ. ಬಸದಿ ನಾಶವಾಗಿ ಪಾರ್ಶ್ವನಾಥರ ಮೂರ್ತಿ ಮಾತ್ರ ತೆರಕಣಾಂಬಿಯ ಬಸ್ ನಿಲ್ದಾಣದ ಬಳಿ ಆಂಜನೇಯ ದೇವಾಲಯದ ಮುಂದಿದೆ. ಮಲೆಯೂರಿನ ಪಾರ್ಶ್ವನಾಥ ಹಾಗೂ ಆದಿನಾಥ ಬಸದಿಗಳ ಮೂಲ ವಿಗ್ರಹಗಳು ಭಿನ್ನವಾದಾಗ ಕ್ರಿ.ಶ. ೧೭೦೭ರಲ್ಲಿ ಬಾಚಹಳ್ಳಿ ಮತ್ತು ಕಿರುಗುಂದದಿಂದ ಮೂಲ ಪ್ರತಿಮೆಗಳನ್ನು ತಂದು ಪ್ರತಿಷ್ಠಾಪಿಸಲಾಯಿತು[೬೧] ಎಂದು ದೇವಚಂದ್ರನು ತಿಳಿಸಿರುತ್ತಾನೆ. ಹಾಗಾದರೆ ಬಾಚಹಳ್ಳಿ, ಕಿರುಗುಂದದಲ್ಲಿ ಜೈನ ಬಸದಿ ಇದ್ದು ಅದು ನಾಶವಾಗಿರಬೇಕು. ಬಾಚಹಳ್ಳಿಗೆ "ಅಕಳಂಕ ಜಯ" ಎಂಬ ಇನ್ನೊಂದು ಹೆಸರು ಇದ್ದುದಾಗಿ ಊರಿನ ಶಾಸನ ತಿಳಿಸುತ್ತದೆ.[೬೨] ಕವಿ ದೇವಚಂದ್ರನ ತಾಯಿ ಬಾಚಹಳ್ಳಿಯವಳು. ಹಾಗಾಗಿ ಅಲ್ಲಿ ಜೈನರು ಇದ್ದರೆಂಬುದು ಖಚಿತ. ಕೆಲಸೂರಿನ ಚಂದ್ರಪ್ರಭ ಬಸದಿಯ ಪಕ್ಕದಲ್ಲಿ ಪಾರ್ಶ್ವನಾಥನ ಮೂರ್ತಿಯನ್ನು ಇತ್ತೀಚೆಗೆ ಸ್ಥಳೀಕರು ತಂದಿರಿಸಿರುತ್ತಾರೆ. ಅದು ಕೆಲಸೂರಿನ ಭಗ್ನಬಸದಿಯಿಂದ ತಂದಿರಿಸಿರುವ ಮೂರ್ತಿಯಾಗಿದೆ. ಗುಂಡ್ಲುಪೇಟೆ ತಾಲ್ಲೂಕು ಹಂಗಳದಲ್ಲಿ ೧೦ನೆಯ ಶತಮಾನದ ಬಸದಿ ಭೂಗತವಾಗಿದೆ. ಇತ್ತೀಚೆಗೆ ಅಲ್ಲಿ ಕೆಲವು ಜಿನ ಬಿಂಬಗಳು ದೊರೆತಿವೆ.[೬೩] ಹಂಗಳದಲ್ಲಿ ಶ್ರೀ ವರ್ಧಮಾನ, ಆದಿನಾಥನ ಬಸದಿಗಳಿತ್ತೆಂದೂ, ದೇವರಾಜನ ಪ್ರಧಾನಿ ವಿಶಾಲಾಕ್ಷಪಂಡಿತನು ಚವ್ವೀಸ ತೀರ್ಥಂಕರನ ಲೋಹದ ಪ್ರತಿಮೆಯನ್ನು ಮಾಡಿಸಿಕೊಟ್ಟನೆಂದೂ ಲೋಹದ ಪ್ರತಿಮೆಯ ಪೀಠದ ಮೇಲಿರುವ ಶಾಸನದ ಸಮೇತ ದೇವಚಂದ್ರನು ವಿವರಿಸಿದ್ದಾನೆ.[೬೪] ಈ ಶಾಸನ EC-IV ರಲ್ಲಿ ಪ್ರಕಟವಾಗಿಲ್ಲ. EC ಪ್ರಕಟವಾಗುವ ಹೊತ್ತಿಗೆ ಈ ಶಾಸನ ನಾಶವಾಗಿದೆ. ಮಲೆಯೂರಿನ ಸಮೀಪ ಮುಕ್ಕೊಡಹಳ್ಳಿಯಲ್ಲಿ ಗಂಗರ ಕಾಲದ ಬಸದಿಯ ಅವಶೇಷಗಳು ಕಂಡುಬರುತ್ತವೆ. ಬಸದಿಯ ಯಕ್ಷಿಯು ಊರಿನ ಗ್ರಾಮದೇವತೆಯಾಗಿ ಪೂಜೆಗೊಳ್ಳುತ್ತಿದ್ದಾಳೆ. ಗುಂಡ್ಲುಪೇಟೆ ತಾಲ್ಲೂಕಿನ ಬೇರುಂಬಾಡಿಯಲ್ಲಿ ಪಾರ್ಶ್ವನಾಥ ಸ್ತುತಿಯಿರುವ ಜೈನ ಶಾಸನವಿದೆ[೬೫] ಹಾಗೂ ಬಸ್ತಿಹಳ್ಳಿಯಲ್ಲಿ ಭಗ್ನ ಜಿನಬಿಂಬ ಕಂಡುಬರುತ್ತದೆ. ಈ ಎರಡೂ ತಾಲ್ಲೂಕಿನಲ್ಲಿ ಜೈನ ಸಂಬಂಧಿ ಹೆಸರುಗಳು ಕಂಡುಬರುತ್ತವೆ. ಇನ್ನೂ ಹಲವಾರು ಕಡೆ ಜೈನ ಅವಶೇಷಗಳನ್ನು ಗುರ್ತಿಸಬಹುದು.

ಈ ಅಧ್ಯಯನದ ಫಲಿತವಾಗಿ ನಾವು - ಚಾಮರಾಜನಗರ ಗುಂಡ್ಲುಪೇಟೆ ತಾಲ್ಲೂಕುಗಳ ಪ್ರದೇಶವು ಕ್ರಿ.ಶ. ೭ನೆಯ ಶತಮಾನದಿಂದಲೂ ಅತ್ಯಂತ ಪ್ರಮುಖ ಜೈನ ಕೇಂದ್ರವಾಗಿತ್ತೆಂದು

---

೧೬. ರಾಜಾವಳೀ ಕಥಾಸಾರ ಪು - 286 ಸಂ. ಬಿ.ಎಸ್. ಸಣ್ಣಯ್ಯ

೬೨. ಎ.ಕ. III ಗು.ಪೇ - 184 ಪು. 142

೬೩. ಎ.ಕ. III ಗು.ಪೇ. 203 ಪು. 150

೬೪. ರಾಜವಳೀ ಕಥಾಸಾರ ಪು. 281 ಸಂ. ಬಿ.ಎಸ್. ಸಣ್ಣಯ್ಯ

೬೫. ಎ.ಕ. III ಗು.ಪೇ. 218 ಪು. 157

ಗುರ್ತಿಸಬಹುದು. ಅಂದಿನ ಅರಸರು, ಸೇನಾಪತಿಗಳು ಮಂತ್ರಿ, ಪಾಳೆಯಗಾರರು ಹಾಗೂ ಮತ್ತಿತರ ಉನ್ನತ ಅಧಿಕಾರಿ ವರ್ಗದವರ ಆಶ್ರಯದಿಂದ ಜೈನಧರ್ಮ ಊರ್ಜಿತಗೊಂಡಿತ್ತು ಮತ್ತು ಹಲವಾರು ಬಸದಿಗಳು ನಿರ್ಮಾಣವಾದವು. ಅವುಗಳ ಆದಾಯಕ್ಕೋಸ್ಕರ ಹಲವಾರು ಶ್ರಾವಕರು ದಾನ ದತ್ತಿಗಳನ್ನು ನೀಡಿದ್ದರು. ಹತ್ತಾರು ಜೈನಕವಿಗಳು ಈ ಕಾಲಘಟ್ಟದಲ್ಲಿ ಇಲ್ಲಿದ್ದು ಹಲವಾರು ಶ್ರೇಷ್ಠಕೃತಿಗಳನ್ನು ರಚಿಸಿ ತನ್ಮೂಲಕ ಜೈನಧರ್ಮದ ಅಭಿವೃದ್ಧಿಗೆ ಚಿರಕಾಣಿಕೆಯನ್ನಿತ್ತಿದ್ದಾರೆಂದು ಹೇಳಬಹುದು.

## ಆಕರ ಗ್ರಂಥಗಳು


1. ಎಪಿಗ್ರಾಫಿಯಾ ಕರ್ನಾಟಕ ಸಂಪುಟಗಳು III, IV, ಸಂ. ಬಿ.ಆರ್. ಗೋಪಾಲ್
2. ಕನ್ನಡ ಸಾಹಿತ್ಯ ಚರಿತ್ರೆ ಸಂ. 4, ಮೈ.ವಿ.ವಿ. ಪ್ರಸಾರಾಂಗ
3. ಕರ್ನಾಟಕ ಕವಿಚರಿತೆ : ಆರ್. ನರಸಿಂಹಾಚಾರ್
4. ಗುರುದತ್ತಚರಿತೆ : ಸಂ. ಎಂ.ಪಿ. ಮಂಜಪ್ಪಶೆಟ್ಟಿ ಮೈ.ವಿ.ವಿ.
5. ಪೂಜ್ಯಪಾದ ಚರಿತೆ : ಸಂ. ಕೆ.ಆರ್. ಶೇಷಗಿರಿ. ಮೈ.ವಿ.ವಿ.
6. ಯಕ್ಷಯಕ್ಷಿಯರು : ಡಾ|| ಹಂಪ ನಾಗರಾಜಯ್ಯ
7. ರಿಲಿಜಿಯಸ್ ಇನ್ಸ್‌ಟಿಟ್ಯೂಷನ್ಸ್ ಅಂಡ್ ಕಲ್ಟ್ ಇನ್ ಡೆಕ್ಕನ್: ಆರ್.ಎಸ್. ನಂದಿ
8. ರಾಜಾವಳೀ ಕಥಾಸಾರ : ಸಂ. ಬಿ.ಎಸ್. ಸಣ್ಣಯ್ಯ, ಮೈ.ವಿ.ವಿ.
9. ಶ್ರವಣಬೆಳಗೊಳದ ಶಾಸನಗಳು : ಜಿ. ಬ್ರಹ್ಮಪ್ಪ (ಹೊಸಗನ್ನಡ ಗದ್ಯಾನುವಾದ)
10. ಸಾಧನೆ ಸಂ.24 ಸಂಚಿಕೆ - 1 : ಬೆಂ.ವಿ.ವಿ. ಪ್ರಸಾರಾಂಗ

# ತೀರ್ಥಹಳ್ಳಿಯ ಜೋಗಿ ಗುಡ್ಡದ ಜೈನ ಅವಶೇಷಗಳು

**ಬಿ. ಕೆ. ದೇವರಾಜ ಸ್ವಾಮಿ, ರಘುವೀರ ಹೆಗಡೆ**

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯು ಒಂದು ತಾಲ್ಲೂಕು ಕೇಂದ್ರವಾಗಿದೆ. ತನ್ನ ರಮಣೀಯವಾದ ನಿಸರ್ಗ ಸೌಂದರ್ಯದಿಂದ ಪ್ರಸಿದ್ಧವಾಗಿರುವಂತೆಯೇ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಮಹತ್ವವನ್ನು ಪಡೆದಿರುವ ಹಲವಾರು ಸ್ಥಳಗಳಿಗೆ ಪ್ರಸಿದ್ಧವಾಗಿದೆ.

ತೀರ್ಥಹಳ್ಳಿ ಪಟ್ಟಣದ ಆಗ್ನೇಯ ದಿಕ್ಕಿನಲ್ಲಿರುವ ಶ್ರೀ ರಾಮೇಶ್ವರ ದೇವಾಲಯದ ಹಿಂಭಾಗದಲ್ಲಿ ಒಂದು ಸಣ್ಣ ಗುಡ್ಡವಿದೆ. ಜೋಗಿ ಕುತ್ರ (ಜೋಗಿ ಗುಡ್ಡ)ವೆಂದು ಸ್ಥಳೀಯರಿಂದ ಕರೆಯಲ್ಪಡುವ ಆ ಗುಡ್ಡವು ತುಂಗಾ ನದಿಯು ಹರಿಯುವ ಪಾತ್ರದೊಳಗೆ ಒಂದು ಸಣ್ಣ ದ್ವೀಪದಂತೆ ಕಂಡು ಬರುತ್ತದೆ. ಆ ಗುಡ್ಡದಲ್ಲಿನ ಹಲವಾರು ಬಂಡೆಗಳು ಹೊರಗೆ ಚಾಚಿಕೊಂಡಿದ್ದು, ಸುಮಾರು ಅರ್ಧ ಕಿಲೋಮೀಟರ್‌ವರೆಗೆ ನದಿಯ ಪಾತ್ರದಲ್ಲೆಲ್ಲಾ ಹರಡಿಕೊಂಡಿದೆ. ಆ ಬಂಡೆಗಳು ಅನಾದಿಕಾಲದಿಂದಲೂ ಹರಿಯುತ್ತಿರುವ ತುಂಗೆಯ ಪ್ರವಾಹದ ಹೊಡೆತಕ್ಕೆ ಸಿಕ್ಕಿ, ಸವೆದು ನೈಸರ್ಗಿಕ ಕಲ್ಲಾಸರೆ ಅಥವಾ ಗುಹೆಗಳಂತೆ ಕಲ್ಲಿನ ಪೊಟರೆಗಳು ಸೃಷ್ಟಿಯಾಗಿವೆ.

ಇತ್ತೀಚಿನ ನಮ್ಮ ಕ್ಷೇತ್ರಕಾರ್ಯದ ವೇಳೆಯಲ್ಲಿ ಈ ಕಲ್ಲಿನ ಪೊಟರೆಕುಳಿಗಳಲ್ಲಿ ಜೈನ ತೀರ್ಥಂಕರರ ಕೆಲವು ಚಿತ್ರಗಳು ಹಾಗೂ ಮೂರು ಶಾಸನಗಳು ಪತ್ತೆಯಾದವು. ಅವುಗಳ ಬಗೆಗೆ ನಾವು ನಡೆಸಿದ ಅಧ್ಯಯನ ಫಲಿತವಾಗಿ ಈ ಸಂಶೋಧನಾ ಪ್ರಬಂಧವು ರೂಪುಗೊಂಡಿದೆ. ಮೊದಲನೆಯದಾಗಿ ಶಾಸನ ಪಾಠಗಳನ್ನು ಗಮನಿಸೋಣ.

೧. ೧. ಶ್ರೀಮ(ತು)* ಚಲ್ಲದೇವಿ ಮಾಡಿಸಿದ ದೇವರು
೨. ಮಗಳು ಲಕುಮ್ಮಾ ದೇವಿ ಮಾಡಿಸಿದ ದೇವರು
೩. ವಿಜೆ ಪಟ್ಟಾಚಾರಿ ಮಡಿದ ದೇವರು

ಮೂರು ಸಾಲುಗಳುಳ್ಳ ಈ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಲಿಪಿ ಸ್ವರೂಪದ ಆಧಾರದಿಂದ ಇದು ಸುಮಾರು ಕ್ರಿ.ಶ. ೧೧ನೇಯ ಶತಮಾನದ್ದೆಂದು ನಿರ್ಧರಿಸಬಹುದು. ಚಲ್ಲದೇವಿ ಮತ್ತು ಆಕೆಯ ಮಗಳು ಲಕುಮ್ಮಾ ದೇವಿಯರು ತೀರ್ಥಂಕರರ ಚಿತ್ರಗಳನ್ನು ಮಾಡಿಸಿದ ಬಗ್ಗೆ ಈ ಶಾಸನವು ವಿವರಿಸುತ್ತದೆ. ಅವರು ಈ ಶಾಸನದ ಪಕ್ಕದಲ್ಲಿಯೇ ಎರಡು ತೀರ್ಥಂಕರರ ಚಿತ್ರಗಳನ್ನು ಮಾಡಿಸಿದ್ದಾರೆ. ಅವುಗಳಲ್ಲಿ ಒಂದು ಪಾರ್ಶ್ವನಾಥರ ಚಿತ್ರ ಮತ್ತೊಂದು

* ಶಾಸನ ಕೆತ್ತಿದವನು 'ಖು' ಎಂದು ತಪ್ಪಾಗಿ ಬರೆದಿದ್ದಾನೆ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಕೆ.ಎಸ್. ವಿಠೋಬನಾಯಕ್‌ರವರಿಗೆ ಕೃತಜ್ಞತೆಗಳು.

ಖಚಿತವಾಗಿ ಗುರ್ತಿಸಲು ಸಾಧ್ಯವಿಲ್ಲದಂತಹ ಜಿನಮೂರ್ತಿ. ಈ ತೀರ್ಥಂಕರರ ಚಿತ್ರಗಳನ್ನು ವಿಜಯಪಟ್ಟಾಚಾರಿ (ವಿಜೆಪಟ್ಟಾಚಾರಿ) ಎಂಬ ಶಿಲ್ಪಿಯು ಕೆತ್ತಿದುದಾಗಿ ಶಾಸನದಿಂದ ತಿಳಿದು ಬರುತ್ತದೆ.

೨. ೧. ಪಟ್ಟಸಹಣಿ ಕಲೆಯನ

೨. ಮಡದಿ ಧಾಗಿ... ಮಾಡಿಸಿದ (ಳು)

ಎರಡು ಸಾಲುಗಳುಳ್ಳ ಈ ಶಾಸನದಲ್ಲಿಯೂ ಸಹ ಕಾಲದ ನಿರ್ದೇಶವಿಲ್ಲ. ಲಿಪಿ ಸ್ವರೂಪದ ಆಧಾರದಿಂದ ಇದೂ ಸಹ ಸುಮಾರು ಕ್ರಿ.ಶ. ೧೧ನೇಯ ಶತಮಾನಕ್ಕೆ ಸೇರಿದ್ದೆಂದು ಹೇಳಬಹುದು. ಪಟ್ಟಸಹಣಿಯಾದ ಕಲೆಯನ ಪತ್ನಿಯಾದ ಧಾಗಿ (ಆಕೆಯ ಹೆಸರಿನ ಪೂರ್ಣ ಪಾಠ ದೊರೆತಿಲ್ಲ)ಯು, ಈ ಶಾಸನದ ಪಕ್ಕದಲ್ಲಿರುವ ತೀರ್ಥಂಕರರ ಚಿತ್ರವನ್ನು ಮಾಡಿಸಿದಳೆಂದು ಶಾಸನವು ಉಲ್ಲೇಖಿಸುತ್ತದೆ.

೩. ೧. ನಿಕರಸನ ಧರ್ಮ

ಒಂದೇ ಸಾಲಿನ ಈ ಶಾಸನವು, ನಿಕರಸ ಎಂಬುವನು ಈ ಶಾಸನದ ಪಕ್ಕದಲ್ಲಿರುವ ಪಾರ್ಶ್ವನಾಥ ತೀರ್ಥಂಕರರ ಚಿತ್ರವನ್ನು ನಿರ್ಮಿಸಿದ್ದಾಗಿ ತಿಳಿಸುತ್ತದೆ. ಕಾಲದ ಉಲ್ಲೇಖವಿಲ್ಲದಿರುವುದರಿಂದ ಲಿಪಿಯ ಆಧಾರದಿಂದ ಇದು ೧೧ನೇ ಶತಮಾನದ ಅಂತ್ಯಕಾಲದ್ದೆಂದು ನಿರ್ಧರಿಸಬಹುದಾಗಿದೆ.

ಪ್ರಸ್ತುತ ಶಾಸನೋಕ್ತ ಚಲ್ಲದೇವಿ, ಲಕುಮ್ಮಾದೇವಿ, ಪಟ್ಟಸಹಣಿ ಕಲೆಯ ಹಾಗೂ ನಿರಕರಸರ ಬಗ್ಗೆ ತೀರ್ಥಹಳ್ಳಿಯ ಆಸುಪಾಸಿನಲ್ಲಾಗಲೀ ಅಥವಾ ಮತ್ತಾವುದೇ ಸ್ಥಳದಲ್ಲಿನ ಸಮಕಾಲೀನ ಶಾಸನಗಳಲ್ಲಿ ಯಾವುದೇ ವಿವರಗಳು ದೊರೆಯುವುದಿಲ್ಲ.

ಅಲ್ಲಿಯ ಚಿತ್ರಗಳ ಬಗ್ಗೆ ಗಮನಿಸೋಣ:

ಜೋಗಿ ಗುಡ್ಡದ ಶಿಲಾಪೊಟರೆ / ಹೊಂಡಗಳಲ್ಲಿ ಒಟ್ಟು ಐದು ಕಡೆಗಳಲ್ಲಿ ತೀರ್ಥಂಕರರ ರೇಖಾ ಚಿತ್ರಗಳಿವೆ. ಮೂರು ಅಡಿ ಅಗಲ ಹಾಗೂ ಸುಮಾರು ಎಂಟು ಅಡಿ ಎತ್ತರದ ಒಂದನೇ ಶಾಸನವಿರುವ ಹೊಂಡ (ಕುಳಿ)ದಲ್ಲಿ ಎರಡು ಚಿತ್ರಗಳಿವೆ. ಅವುಗಳಲ್ಲಿ ಮೊದಲನೆಯದು ಪಾರ್ಶ್ವನಾಥ ತೀರ್ಥಂಕರರ ಚಿತ್ರವಾಗಿದೆ. ಎರಡನೆಯದು ಯಾವುದೇ ಲಾಂಛನಗಳಿಲ್ಲದ್ದರಿಂದ ಯಾವ ತೀರ್ಥಂಕರದ್ದೆಂದು ನಿರ್ದಿಷ್ಟವಾಗಿ ಗುರ್ತಿಸಲು ಅಸಾಧ್ಯವಾಗಿದೆ. ಈ ಚಿತ್ರಗಳು ಸುಮಾರು ಎರಡು ಅಡಿ ಎತ್ತರವಾಗಿದ್ದು ಖಡ್ಗಾಸನದಲ್ಲಿವೆ. (ಸ್ಥಾನಿಕಭಂಗಿ, ಕಾಯೋತ್ಸರ್ಗ) ಪಾರ್ಶ್ವನಾಥ ತೀರ್ಥಂಕರನ ಶಿರಸ್ಸಿನ ಮೇಲೆ ಏಳು ಹೆಡೆಗೆಗಳುಳ್ಳ ಸರ್ಪವು ನೆರಳನ್ನುಂಟು ಮಾಡುತ್ತಿವೆ. ಆ ಸರ್ಪದ ಬಾಲವು ಸುರುಳಿಯಂತೆ ಸುತ್ತಿ ಪಾರ್ಶ್ವನಾಥರ ಹಿಂಭಾಗದಲ್ಲಿ ಪಾದದವರೆಗೆ ಇದೆ. ಇಕ್ಕೆಲಗಳಲ್ಲಿ ಧರಣೇಂದ್ರ ಯಕ್ಷ ಹಾಗೂ ಪದ್ಮಾವತಿ ಯಕ್ಷಿಯರ ಚಿತ್ರಗಳಿವೆ. ಪಾರ್ಶ್ವನಾಥರ ಮಗ್ಗುಲಿನಲ್ಲಿರುವ ಚಿತ್ರವು ಯಾವ ತೀರ್ಥಂಕರದ್ದೆಂದು ನಿರ್ದಿಷ್ಟವಾಗಿ ಹೇಳಲು ಅಸಾಧ್ಯವಾಗಿದೆ.

ಎರಡನೆಯ ಹೊಂಡ (ಪೊಟರೆ)ದಲ್ಲಿ ಒಟ್ಟು ನಾಲ್ಕು ಚಿತ್ರಗಳಿವೆ. ಅವುಗಳಲ್ಲಿ ಮೂರು ಖಡ್ಗಾಸನದಲ್ಲಿದ್ದು ಒಂದು ಪದ್ಮಾಸನದಲ್ಲಿ ಕುಳಿತ ತೀರ್ಥಂಕರರ ಚಿತ್ರಗಳಿವೆ. ಈ ತೀರ್ಥಂಕರರ ತಲೆಯ ಮೇಲೆ ಮುಕ್ಕೊಡೆಗಳಿವೆ. ಈ ಚಿತ್ರಗಳು ಯಾವ ತೀರ್ಥಂಕರರಿಗೆ ಸಂಬಂಧಿಸಿದ್ದೆಂದು

ಖಚಿತವಾಗಿ ಗುರ್ತಿಸಲು ಸಾಧ್ಯವಿಲ್ಲವಂತಾಗಿದೆ. ಈ ಚಿತ್ರಗಳ ಬಳಿಯಲ್ಲಿ ಎರಡು ಸಾಲಿನ ಒಂದು ಶಾಸನವಿದ್ದು ಅದು ನೀರಿನ ಹೊಡೆತಕ್ಕೆ ಸಿಕ್ಕಿ ತೀರಾ ಸವೆದಿರುವುದರಿಂದ ಓದಲು ಅಸಾಧ್ಯವಾಗಿದೆ.

ಮೇಲೆ ತಿಳಿಸಿರುವ ನಾಲ್ಕು ಚಿತ್ರಗಳುಳ್ಳ ಬಂಡೆಯ ಬಲಭಾಗದಲ್ಲಿನ ಮತ್ತೊಂದು ದೊಡ್ಡ ಬಂಡೆಯ ಮೇಲೆ ತೀರ್ಥಂಕರರ ಒಂದು ರೇಖಾ ಚಿತ್ರವಿದೆ. ಈ ತೀರ್ಥಂಕರ ಚಿತ್ರವು ಎರಡೂವರೆ ಅಡಿ ಎತ್ತರವಿದ್ದು ಅಸಮಗ್ರವಾಗಿದೆ. ಶಿಲ್ಪಿಯು ಚಿತ್ರವನ್ನು ಸಂಪೂರ್ಣವಾಗಿ ಕೊರೆದಿಲ್ಲ ಹಾಗೂ ಈ ಚಿತ್ರವು ಯಾವ ತೀರ್ಥಂಕರದ್ದೆಂದು ಖಚಿತವಾಗಿ ಹೇಳಲು ಬರುವುದಿಲ್ಲ.

ಈ ಹಿಂದೆ ತಿಳಿಸಿದ ಒಂದನೇ ಕಲ್ಲಾಸರೆಯ ಎದುರಿನಲ್ಲಿ ಬಂಡೆಯ ಮೇಲೆ ಸುಮಾರು ಐದು ಅಡಿ ಎತ್ತರದ ಪಾರ್ಶ್ವನಾಥ ತೀರ್ಥಂಕರರ ಚಿತ್ರವಿದೆ. ಪಾರ್ಶ್ವನಾಥನ ತಲೆಯ ಮೇಲ್ಭಾಗದಲ್ಲಿ ಏಳು ಹೆಡೆಯುಳ್ಳ ಸರ್ಪವು ನೆರಳನ್ನು ನೀಡುತ್ತಿರುವ ಭಂಗಿಯಲ್ಲಿದೆ ಹಾಗೂ ತೀರ್ಥಂಕರರ ಹಿಂಭಾಗದಲ್ಲಿ ಸುರುಳಿ ಆಕಾರದಲ್ಲಿ ಸುತ್ತಿದ ಬಾಲವು ಪಾರ್ಶ್ವನಾಥ ತೀರ್ಥಂಕರರ ಪಾದದವರೆವಿಗೂ ಇದೆ. ಈ ಚಿತ್ರವನ್ನು ಪಟ್ಟಸಹಣಿ ಕಲಿಯನ ಮಡದಿಯು ಮಾಡಿಸಿದಳೆಂಬುದು ಪಕ್ಕದಲ್ಲಿರುವ ಶಾಸನದಿಂದ ತಿಳಿಯುತ್ತದೆ. ಈ ಶಾಸನವನ್ನು ಹಾಗೂ ತೀರ್ಥಂಕರರ ಚಿತ್ರವನ್ನು ತೀರಾ ಕಡಿದಾದ ಸ್ಥಳದಲ್ಲಿ ಕೊರೆಯಲಾಗಿದೆ. ಈ ಸ್ಥಳವು ಹತ್ತಿರದಲ್ಲೇ ಹರಿಯುವ ತುಂಗಾ ನದಿಯ ಪಾತ್ರದೊಳಗೆ ಇದ್ದು, ಅತಿ ಸಾಹಸದಿಂದಲ್ಲದೆ ಸುಲಭ ಸಾಧ್ಯವಾಗಿ ಗಮನಿಸಲು ಸಾಧ್ಯವಿಲ್ಲ. ಈ ಬಂಡೆಯನ್ನು ಅನುಸರಿಸಿಯೇ ಆಳವಾದ ತುಂಗಾ ನದಿಯು ರಭಸವಾಗಿ ಹರಿಯುತ್ತಿರುವುದರಿಂದ, ಇಲ್ಲಿಯ ಶಾಸನವನ್ನು ಹಿಂಭಾಗದಿಂದ ಬಂಡೆಯ ಮೇಲೆ ಹತ್ತಿ ಮುಂದಕ್ಕೆ ಬಾಗಿ ಮಲಗಿಕೊಂಡು ಪ್ರಯತ್ನಿಸಿದರೆ ಮಾತ್ರ ಪಡಿಯಚ್ಚು ತೆಗೆಯಬಹುದು. ಇಲ್ಲಿಯ ಶಾಸನ ಮತ್ತು ಚಿತ್ರವನ್ನು ಕೆತ್ತಿದ ಶಿಲ್ಪಿಯ ಚಾತುರ್ಯವು ಶ್ಲಾಘ್ಯವಾಗಿದೆ.

ಜೋಗಿ ಗುಡ್ಡಕ್ಕೆ ಅಂಟಿಕೊಂಡಂತೆಯೇ ಹಿಂಭಾಗದಲ್ಲಿರುವ ಒಂದು ದೊಡ್ಡ ಬಂಡೆಯ ಒಂದು ಪಾರ್ಶ್ವದಲ್ಲಿ ಪಾರ್ಶ್ವನಾಥ ತೀರ್ಥಂಕರರ ಚಿತ್ರವಿದೆ. ಖಡ್ಗಾಸನದಲ್ಲಿರುವ ಈ ಪಾರ್ಶ್ವನಾಥ ತೀರ್ಥಂಕರರ ಇಕ್ಕೆಲಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿಯ ಚಿತ್ರಗಳಿವೆ. ಪಾರ್ಶ್ವನಾಥರ ತಲೆಯ ಮೇಲೆ ಏಳು ಹೆಡೆಯ ಸರ್ಪವಿದೆ. ಈ ಸರ್ಪದ ಬಾಲವು ಸುರುಳಿ ಆಕಾರದಲ್ಲಿದ್ದು ತೀರ್ಥಂಕರರ ಪಾದದವರೆವಿಗೂ ಹಬ್ಬಿದೆ. ಪಾರ್ಶ್ವನಾಥ ಚಿತ್ರವನ್ನು 'ನಿಕರಸ' ಎಂಬ ವ್ಯಕ್ತಿ ಮಾಡಿಸಿದನೆಂದು ಸನಿಹದಲ್ಲಿರುವ ಶಾಸನದಿಂದ ತಿಳಿದು ಬರುತ್ತದೆ.

ಈ ತೀರ್ಥಂಕರರ ಚಿತ್ರಗಳುಳ್ಳ ಈ ಕಲ್ಲಾಸರ / ಹೊಂಡಗಳ ಹಿಂಭಾಗದ ಜೋಗಿ ಗುಡ್ಡದ ಪಾರ್ಶ್ವದಲ್ಲಿ, ಐದು ಅಡಿ ಎತ್ತರ ಮೂರು ಅಡಿ ಅಗಲ ಹಾಗೂ ಸುಮಾರು ಹತ್ತು ಅಡಿಗಳಷ್ಟು ಉದ್ದವಿರುವ ಒಂದು ಗುಹೆಯಿದೆ. ಈ ಗುಹೆಯಲ್ಲಿ ಹತ್ತು ಅಡಿಗಳಷ್ಟು ದೂರ ಒಳಗೆ ಹೋಗಬಹುದಾಗಿದೆ. ಅಲ್ಲಿಂದ ಮುಂದೆ ಮಣ್ಣು, ಮರಳು, ತುಂಬಿರುವುದರಿಂದ ದಾರಿ ಕಾಣಿಸಿದರೂ ಹೋಗಲು ಆಗುವುದಿಲ್ಲ. ಈ ಗುಹೆಯಲ್ಲಿ ಯಾವುದೇ ರೀತಿಯ ತೀರ್ಥಂಕರರ ಚಿತ್ರಗಳಾಗಲೀ ಅಥವಾ ಮತ್ತಾವುದೇ ರೀತಿಯ ಜೈನ ಅವಶೇಷಗಳಾಗಲೀ ಕಂಡು ಬರುವುದಿಲ್ಲ.

ಜೋಗಿ ಗುಡ್ಡದ ಮೇಲ್ಭಾಗದಲ್ಲಿ ಸಮತಟ್ಟಾದ ಜಾಗವಿದೆ. ಸುಮಾರು ಐವತ್ತು ಅಡಿ ಉದ್ದ ಹಾಗೂ ಮೂವತ್ತು ಅಡಿ ಅಗಲದ ಈ ಸ್ಥಳದಲ್ಲಿ ಒಂದು ಪ್ರಾಚೀನ ದೇವಾಲಯ ಒಂದರ ಕುರುಹುಗಳುಳ್ಳ ಅವಶೇಷಗಳು ಕಂಡು ಬರುತ್ತದೆ. ಪ್ರಾಯಃ ಇದು ಒಂದು ಪ್ರಾಚೀನ

ಜಿನಾಲಯದ ಅವಶೇಷಗಳು ಎಂದು ಊಹಿಸಬಹುದು. ಇಲ್ಲಿ ದೊರೆತಿರುವ ತೀರ್ಥಂಕರರ ಶಿಲ್ಪ, ಚಿತ್ರಗಳು, ಹಾಗೂ ಶಾಸನಗಳಿಂದ ಈ ಮೇಲಿನ ಊಹೆಗಳಿಗೆ ಅವಕಾಶವುಂಟಾಗಿದೆ.

ನಮ್ಮ ಊಹೆಯ ಪ್ರಕಾರ ಈ ಜೋಗಿ ಗುಡ್ಡದ ಮೇಲಿನ ಬಸದಿಗೆ ದರ್ಶನಕ್ಕಾಗಿ ಬರುತ್ತಿದ್ದ ಜಿನಮುನಿಗಳು ತಮ್ಮ ಏಕಾಂತ ಧ್ಯಾನಕ್ಕೋಸ್ಕರ ಅಥವಾ ಚಾತುರ್ಮಾಸದ ಅವಧಿಯಲ್ಲಿ ಇಲ್ಲಿನ ಗುಹೆಗಳು ಹಾಗೂ ಕಲ್ಲಾಸರೆಗಳನ್ನು ವಾಸಕ್ಕಾಗಿ ಬಳಸುತ್ತಿರಬಹುದು. ಆ ಜಿನಮುನಿಗಳ ಧ್ಯಾನಕ್ಕೋಸ್ಕರ ಭಕ್ತಾದಿಗಳಾದ ಶ್ರಾವಕರು ಅಲ್ಲಿನ ತೀರ್ಥಂಕರರ ಚಿತ್ರಗಳನ್ನು ಕೊರೆಸಿಕೊಟ್ಟಿರಬಹುದೆಂದು ಊಹಿಸಬಹುದು. ಇಲ್ಲಿನ ಕಲ್ಲಾಸರೆ / ಹೊಂಡಗಳು ಸಾವಿರಾರು ವರ್ಷಗಳ ಹಿಂದೆ ನೀರಿನ ಕೊರತೆಯಿಂದ ನೈಸರ್ಗಿಕವಾಗಿ ನಿರ್ಮಿತವಾದವು. ಕಾಲಾಂತರದಲ್ಲಿ ನದಿಯು ಪಾತ್ರ ಬದಲಿಸಿ ಈ ಗುಹೆಗಳು ಹಾಗೂ ಕಲ್ಲಾಸರೆ / ಹೊಂಡಗಳೊಳಗೇ ನೀರು ಹರಿಯುವಂತಾದಾಗ, ಈ ಗುಹಾಲಯಗಳು ಹಾಗೂ ಬಸದಿಯು, ಜಿನಮುನಿಗಳ ಪ್ರವೇಶಕ್ಕೆ ಅಸಾಧ್ಯವಾದ ಸ್ಥಳಗಳಾದವು. ಏಕೆಂದರೆ ಜಿನಮುನಿಗಳು ನೀರುಹರಿಯುವ ಸ್ಥಳದಲ್ಲಿ ಸಂಚರಿಸುವುದಿಲ್ಲ. ಅಲ್ಲಿ ಜೀವ ಹಿಂಸೆಗೆ ಅವಕಾಶವಿರುವುದರಿಂದ ಅವರು ಸದಾ ನೀರುಹರಿಯುವ ಇಂತಹ ಸ್ಥಳಗಳಲ್ಲಿ ಸಂಚರಿಸುವುದಿಲ್ಲ. ಆದ್ದರಿಂದ ಇದು ಕ್ರಮೇಣ ನಿರ್ಲಕ್ಷಿತ ಪ್ರದೇಶವಾಗಿದೆ. ಇಲ್ಲಿ ಹರಿಯುವ ನೀರಿನ ಪ್ರವಾಹದಿಂದಲೇ ಜೋಗಿ ಗುಡ್ಡದ ಮೇಲಿನ ಬಸದಿ ಹಾಗೂ ಗುಹೆ ಕಾಲಾಂತರದಲ್ಲಿ ಶಿಥಿಲವಾಗಿ ನೆಲಸಮವಾಗಿರಬಹುದು. ಆ ಸಮಯದಲ್ಲಿ ಬಹುಶಃ ಇಲ್ಲಿನ ಬಸದಿಯಲ್ಲಿದ್ದ ತೀರ್ಥಂಕರರ ವಿಗ್ರಹವನ್ನು ಭಕ್ತಾದಿಗಳು ಬೇರೆ ಪ್ರದೇಶಕ್ಕೆ ಸಾಗಿಸಿರಬಹುದಾದ ಸಾಧ್ಯತೆ ಇದೆ.

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕು, ಪ್ರಖ್ಯಾತ ಜೈನ ಕ್ಷೇತ್ರವಾದ ಹುಂಚ (ಹೊಂಬುಜ)ಕ್ಕೆ ಸುಮಾರು ಮೂವತ್ತು ಕಿಲೋಮಿಟರ್‌ಗಳಷ್ಟು ದೂರದಲ್ಲಿದೆ. ಸಾಂತಳಿಗೆ ಸಹಸ್ರವನ್ನು ಆಳುತ್ತಿದ್ದ ಸಾಂತರರ ರಾಜಧಾನಿಯಾದ ಹೊಂಬುಜ (ಹುಂಚ)ವು ಕ್ರಿ.ಶ. ೭ನೇಯ ಶತಮಾನದಿಂದಲೂ ಒಂದು ಮುಖ್ಯ ಜೈನ ಕ್ಷೇತ್ರವಾಗಿದ್ದುದರಿಂದ ಸುತ್ತಮುತ್ತಲಿನ ಪ್ರದೇಶವೆಲ್ಲಾ ಹೊಂಬುಜದ ಪ್ರಭಾವಲಯದಿಂದ ಬೆಳಗಿ ಜೈನ ಧರ್ಮವನ್ನು ಪ್ರಸರಿಸಿತು.

'ಸಾಂತಳಿಗೆ ಸಾವಿರ' ಪ್ರದೇಶಕ್ಕೆ ಸೇರಿಕೊಂಡಿದ್ದ ತೀರ್ಥಹಳ್ಳಿ ಮತ್ತು ಇತರ ಪ್ರದೇಶಗಳಲ್ಲಿನ ಜನರ ಬಹು ಸಂಖ್ಯಾತರು ತಮ್ಮನ್ನು ಆಳುತ್ತಿದ್ದ ಸಾಂತರ ರಾಜಧರ್ಮವಾದ ಜೈನ ಧರ್ಮವನ್ನೇ ಅವಲಂಬಿಸಿದ್ದರು. ಆದ್ದರಿಂದ ಆ ಪ್ರದೇಶದಲ್ಲಿ ಇಂದಿಗೂ ಹಲವಾರು ಜೈನ ಬಸದಿಗಳು, ಹಾಗೂ ಜೈನರಿಗೆ ಸಂಬಂಧಿಸಿದ ಶಾಸನಗಳು ಕಂಡು ಬರುತ್ತವೆ. ಉದಾಹರಣೆಗೆ, ತೀರ್ಥಹಳ್ಳಿ ಸನಿಹದಲ್ಲಿರುವ ಮೇಳಿಗೆ, ದಾನಶಾಲೆ, ಕುಂದಾದ್ರಿ, ಕಣಿವೆ, ಅರಗ, ಮುಂತಾದ ಪ್ರದೇಶದಲ್ಲಿ ಈಗೂ ಜೈನ ಬಸದಿಗಳು, ಶಾಸನಗಳು ಕಂಡು ಬರುತ್ತವೆ.

ಪ್ರಸ್ತುತ ತೀರ್ಥಹಳ್ಳಿ ಜೋಗಿ ಗುಡ್ಡದಲ್ಲಿ ದೊರೆತಿರುವ ಶಾಸನಗಳು ಹಾಗೂ ತೀರ್ಥಂಕರರ ಚಿತ್ರಗಳು ಕ್ರಿ.ಶ. ೧೦ - ೧೧ನೇ ಶತಮಾನಕ್ಕೆ ಸೇರಿದವುಗಳೆಂದು ಅಲ್ಲಿಯ ಶಾಸನ ಲಿಪಿಯ ಆಧಾರದಿಂದ ಹೇಳಬಹುದು. ಈ ಕಾಲಘಟ್ಟದಲ್ಲಿಯೇ ಸಾಂತರಸರು ಹೊಂಬುಜವನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದರು. ಆದ್ದರಿಂದ ಜೋಗಿ ಗುಡ್ಡದ ಶಾಸನಗಳು ಮತ್ತು ಚಿತ್ರಗಳು ಸಾಂತರ ಅರಸರ ಕಾಲಕ್ಕೆ ಸೇರಿದವುಗಳೆಂದು ಹೇಳಬಹುದು.

ಕರ್ನಾಟಕದ ಬೇರೆ ಯಾವುದೇ ಸ್ಥಳದಲ್ಲಿ ಈ ರೀತಿಯ ನೀರಿನ ಕೊರೆತದಿಂದ ಉಂಟಾದ ಕುಳಿ(ಹೊಂಡ)ಗಳಲ್ಲಿ ಜೈನ ತೀರ್ಥಂಕರರ ಚಿತ್ರಗಳಾಗಲೀ ಶಾಸನಗಳಾಗಲೀ ಇದುವರೆವಿಗೂ ಪತ್ತೆಯಾಗಿರಲಿಲ್ಲವೆಂಬುದು ಗಮನಾರ್ಹ ಅಂಶವಾಗಿದೆ.

# ಪ್ರಾಚೀನ ಜೈನಕೇಂದ್ರ ಅರೆತಿಪ್ಪೂರು -ಒಂದು ವಿಶ್ಲೇಷಣೆ

ತಮಿಳ್ ಸೆಲ್ವಿ

ತನ್ನೊಡಲಿನಲ್ಲಿ ಇತಿಹಾಸವನ್ನು ಅಡಗಿಸಿಕೊಂಡಿರುವ ಕರ್ನಾಟಕದ ಅನೇಕ ಹಳ್ಳಿಗಳಲ್ಲಿ ಮಂಡ್ಯ ಜಿಲ್ಲೆ, ಮದ್ದೂರು ತಾಲೂಕಿಗೆ ಸೇರಿದ ಅರೆತಿಪ್ಪೂರು ಸಹ ಒಂದು. ಗಂಗರ 'ಗಂಗವಾಡಿ ೯೬೦೦೦ ದೊಳಗಿನ ಒಂದು ಸ್ಥಳ ಈ ತಿಪ್ಪೂರು. ತಿಪ್ಪೂರಿನಲ್ಲಿ ಶಾಸನಗಳಲ್ಲಿ ಸಂಖ್ಯಾ ಬಾಹುಳ್ಯ ವಿಷಯ ವೈವಿಧ್ಯಗಳ ವೈಪುಲ್ಯವಿಲ್ಲದಿದ್ದರೂ ಜೈನ ಅವಶೇಷಗಳ ಸಮೃದ್ಧತೆಯಿದೆ. ಇವುಗಳ ಆಧಾರದಿಂದ 'ತಿಪ್ಪೂರಿನ ಗತ ಜೀವನವೂ ಒಂದು ಕಾಲದಲ್ಲಿ ಮಹತ್ವಪೂರ್ಣವಾಗಿತ್ತು,'[1] ಎಂದೆನ್ನುವುದರಲ್ಲಿ ಅತಿಶಯೋಕ್ತಿಯೇನಿಲ್ಲ.

ಅರೆತಿಪ್ಪೂರು ಶ್ರವಣಬೆಳಗೊಳದಂತೆ ವೈಭವ ಪೂರ್ಣವಾಗಿಲ್ಲದಿದ್ದರೂ, ಅದೇ ಮಾದರಿಯಲ್ಲಿದೆ. ಅಂದರೆ, ಚಿಕ್ಕ ಬೆಟ್ಟ ಮತ್ತು ದೊಡ್ಡಬೆಟ್ಟಗಳಿದ್ದು, ದೊಡ್ಡ ಬೆಟ್ಟದ ಮೇಲೆ ಸುಮಾರು ೧೦ ಅಡಿ ಎತ್ತರದ ಗೊಮ್ಮಟೇಶ್ವರನ ಮೂರ್ತಿ ರಾರಾಜಿಸುತ್ತಿದೆ. ಚಿಕ್ಕಬೆಟ್ಟದ ಮೇಲೆ ಬಸದಿ - ಜಿನಮೂರ್ತಿಗಳ ಅವಶೇಷಗಳು, ಇಟ್ಟಿಗೆಗಳು, ಕಂಬ ಬೋದಿಗೆ, ಪೀಠಗಳು, ಚಿತ್ರಕಲೆಯಿಂದ ಕೂಡಿದ ಕಲ್ಲಿನ ತುಂಡುಗಳೂ ಇವೆ. ಒಂದು ದೊಣೆ ಹಾಗೂ ಕೆಲವು ಶಾಸನಗಳೂ ಉಂಟು. ಈ ಎಲ್ಲ ಆಧಾರಗಳಿಂದ ತಿಪ್ಪೂರು ಒಂದು ಕಾಲದಲ್ಲಿ ಒಂದು ಪ್ರಮುಖ ಜೈನ ಧಾರ್ಮಿಕ ಕೇಂದ್ರವಾಗಿದ್ದಿರಬೇಕೆಂದು ಸುಲಭವಾಗಿಯೇ ಗ್ರಹಿಸಬಹುದು.

ಕರ್ನಾಟಕದ ಜೀವನದಲ್ಲಿ ಹೀಗೊಂದು ಅವಶೇಷವಾಗಿ ಉಳಿದಿರುವ 'ಅರೆತಿಪ್ಪೂರು' ಅಥವಾ 'ಬಸ್ತಿ ತಿಪ್ಪೂರು' ಕರ್ನಾಟಕದ ಸಂಸ್ಕೃತಿ ಸಂವರ್ಧನೆಯಲ್ಲಿ ತನ್ನದೇ ಆದ ರೀತಿಯಲ್ಲಿ ಪಾಲ್ಗೊಂಡಿದೆ. ಗಂಗರ ಕಾಲದಲ್ಲಿ ಅಂದರೆ, ಕ್ರಿ.ಶ. 8-9ನೇ ಶತಮಾನದಲ್ಲೇ ಒಂದು ಪ್ರಸಿದ್ಧ ಜೈನ ಕೇಂದ್ರವಾಗಿದ್ದ ಈ ಸ್ಥಳ ಅವರಿಗಿಂತಲೂ ಮೊದಲಿನಿಂದಲೂ ಪ್ರಖ್ಯಾತಿ ಹೊಂದಿದ್ದ ಸ್ಥಳವಾಗಿತ್ತು. ನಮ್ಮ ನಾಡಿನ ಕೆಲವು ಅರಸರ, ಕವಿಗಳ, ಮುನಿಗಳ ಬಗ್ಗೆ ಮಾಹಿತಿ ಇಲ್ಲಿನ ಶಾಸನಗಳಲ್ಲಿ ಕಂಡು ಬರುತ್ತದೆ. ನಮ್ಮ ಸಂಸ್ಕೃತಿಯ ಕುರುಹುಗಳನ್ನು ಮಡಿಲಿನಲ್ಲಿ ಹುದುಗಿಸಿಕೊಂಡಿರುವ ಈ ಸ್ಥಳದ ಬಗ್ಗೆ ಇತಿಹಾಸಜ್ಞರು ಹೆಚ್ಚಿನ ಗಮನವನ್ನೇನೂ ಹರಿಸಿಲ್ಲ.

ಜೈನ ಮೂರ್ತಿಗಳಲ್ಲಿ ಎರಡು ರೀತಿಯ ಭಂಗಿಗಳನ್ನು ಪ್ರಧಾನವಾಗಿ ಗುರುತಿಸಬಹುದು. ೧. ಪದ್ಮಾಸನದ ಭಂಗಿ ೨. ಖಡ್ಗಾಸನ ಭಂಗಿಯಲ್ಲಿ ನಿಂತ ಮೂರ್ತಿ. ಕಲೆಯ ದೃಷ್ಟಿಯಿಂದ ಅತ್ಯಂತ

ಶ್ರೇಷ್ಠವಾದ ಕೃತಿಗಳನ್ನು ನಿರ್ಮಿಸಿರುವ ಗಂಗರಿಗೆ ಮೂರ್ತಿ ಶಿಲ್ಪದ ಪರಂಪರೆಯಲ್ಲಿ ಅಗ್ರಗಣ್ಯ ಸ್ಥಾನವಿದೆ. ತಿಪ್ಪೂರಿನಲ್ಲಿರುವ ಜಿನ ಮೂರ್ತಿಗಳು ಕಲಾಕೃತಿಯ ದೃಷ್ಟಿಯಿಂದ ಭವ್ಯತೆಯನ್ನು ಪಡೆಯದಿದ್ದರೂ ರಮ್ಯತೆಯನ್ನು ಹೊಂದಿವೆ. ಕರಿಕಲ್ಲಿನ ಹಾಗೂ ಬೆಣಚು ಕಲ್ಲಿನ ಮೂರ್ತಿಗಳು ಅಂದಿನ ಜೈನಧರ್ಮದ ಶಾಶ್ವತ ಸ್ಮಾರಕಗಳಾಗಿವೆ. ದೊಡ್ಡ ಬೆಟ್ಟದ ಮೇಲಿರುವ ಸು. 10 ಅಡಿ ಎತ್ತರದ ಏಕಶಿಲಾ ಗೊಮ್ಮಟ ಮೂರ್ತಿಯು ಶಿಲ್ಪಕಲೆಯ ಅದ್ಭುತ ಚಾತುರ್ಯವನ್ನೊಳಗೊಳ್ಳದಿದ್ದರೂ ಮನಮೋಹಿಸುವಂತಿದೆ. ಖಡ್ಗಾಸನ ಭಂಗಿಯಲ್ಲಿ ಶಾಂತ, ಸ್ನಿಗ್ಧ, ಪ್ರಸನ್ನ ಭಾವದಲ್ಲಿ ನಿಂತಿರುವ ಈ ಮೂರ್ತಿ ಗಂಗರ ಶೈಲಿಯನ್ನೊಳಗೊಂಡಿದೆ.

ಚಿಕ್ಕಬೆಟ್ಟದಲ್ಲಿಯೇ ಇರುವ ಒಂದು ದೊಣೆಯಲ್ಲಿ 3 ತೀರ್ಥಂಕರ ಪ್ರತಿಮೆಗಳು ದೊರೆತಿವೆ. ನೀರಿನಲ್ಲಿ ಬಿದ್ದಿದ್ದ ಇವುಗಳನ್ನು ನೀರು ಬತ್ತಿದಾಗ ಕಂಡದ್ದರಿಂದ ಅಲ್ಲಿನ ಜನರೇ ಸೇರಿ ಹೊರತೆಗೆದು ದೊಣೆಯ ಒಂದು ಪಾರ್ಶ್ವದಲ್ಲಿ ನಿಲ್ಲಿಸಿದ್ದಾರೆ. ನೀರು ಪೂರ್ತಿ ತುಂಬಿದಾಗ ಅವು ಮುಚ್ಚಿ ಹೋಗುತ್ತವೆ. ಇವುಗಳಲ್ಲಿ 2 ಮೂರ್ತಿಗಳು ಖಡ್ಗಾಸನ ಭಂಗಿಯಲ್ಲಿರುವ ಪಾರ್ಶ್ವನಾಥನ ಮೂರ್ತಿಗಳಾದರೆ, ಮತ್ತೊಂದನ್ನು ಯಾವ ತೀರ್ಥಂಕರನದ್ದೆಂದು ಗುರುತಿಸಲಾಗದು. ಕಾರಣ, ಅದಕ್ಕೆ ಶಿರಸ್ಸನ್ನು ಛೇದಿಸಲಾಗಿದೆ. ಸುಂದರ ಕುಸುರಿ ಕೆಲಸಗಳಿಂದ ಕೂಡಿರುವ ಈ ವಿಗ್ರಹಗಳು ಆಕರ್ಷಕವಾಗಿವೆ.

ದೊಣೆಯ ಮತ್ತೊಂದು ಪಾರ್ಶ್ವದಲ್ಲಿ ೨೪ ತೀರ್ಥಂಕರರನ್ನು ಕಂಡರಿಸುವ ಪ್ರಯತ್ನ ಅಪೂರ್ಣವಾಗಿಯೇ ಉಳಿದಿದೆ. ಸುಮಾರು ೩ ರಿಂದ ೪ ಅಡಿ ಎತ್ತರವಿರುವ ಈ ಕೆತ್ತನೆಯಲ್ಲಿ ಕೇವಲ ೧೧ ಮೂರ್ತಿಗಳ ಉಬ್ಬು ಶಿಲ್ಪ ಕೆತ್ತನೆ ಮಾತ್ರ ಪೂರ್ಣವಾಗಿದ್ದು, ಉಳಿದವುಗಳ ಕೆತ್ತನೆಗೆ ಹಾಕಿಕೊಂಡಿರುವ ನಕ್ಷೆಯ ಕುರುಹುಗಳಿವೆ.

ದೊಣೆಯ ಅರೆಯ ಮೇಲೆ ಸು.೩.೫ ಅಡಿ ಎತ್ತರದ ಸುಪಾರ್ಶ್ವನಾಥನ ವಿಗ್ರಹವೊಂದಿದೆ. ತಲೆಯ ಮೇಲೆ ೫ ಹೆಡೆಗಳ ಸರ್ಪವಿದ್ದು ಧ್ಯಾನ ಮುದ್ರೆಯಲ್ಲಿ, ಪದ್ಮಾಸನ ಭಂಗಿಯಲ್ಲಿ ವಿರಾಜಮಾನವಾಗಿರುವ ಮೂರ್ತಿಯ ಎರಡೂ ಕೈಗಳು ಮಡಿಲಲ್ಲಿ ಸರಳವಾಗಿ ಇಟ್ಟಿವೆ. ಯೋಗಿಯ ಧ್ಯಾನ ಹಾಗೂ ಶಾಂತಮುಖ ಮುದ್ರೆಯನ್ನು ಒಳಗೊಂಡಿದೆ.

ಯಾವ ತೀರ್ಥಂಕರರದ್ದೆಂದು ಗುರುತಿಸಲಾಗದ ಶಿರ ಛೇದನವಾಗಿರುವ ಖಡ್ಗಾಸನ ಭಂಗಿಯ ಮತ್ತೆರಡು ವಿಗ್ರಹಗಳು ಚಿಕ್ಕಬೆಟ್ಟದ ಮೇಲಿವೆ. ಜೊತೆಗೆ ಯಕ್ಷ - ಯಕ್ಷಿಯರ ಸುಂದರ ಭಗ್ನ ಪ್ರತಿಮೆಗಳು, ಬಸದಿಗಳ ಕಂಬ, ಬೋದಿಗೆ, ಭುವನೇಶ್ವರಿಗಳು ಇವೆ. ಚಾಮರಧಾರಿಗಳ ಸುಂದರ ಮೂರ್ತಿಗಳೂ ಇವೆ. ಇಟ್ಟಿಗೆಗಳಂತೂ ಇಟ್ಟಾಡುತ್ತಿವೆ.

ತಿಪ್ಪೂರಿನ ಅವಶೇಷಗಳನ್ನು, ಭಗ್ನ ತೀರ್ಥಂಕರರ ಪ್ರತಿಮೆಗಳನ್ನು ಕಂಡಾಗ ಇವು ಪ್ರಕೃತಿ ವಿಕೋಪದಿಂದ ಹಾಳಾಗಿರಬಹುದು ಎಂದು ಮಾಡುವ ಊಹೆ ಅನುಚಿತವೆನಿಸುತ್ತದೆ. ಧಾರ್ಮಿಕ ಸಂಘರ್ಷದ ಕಾಲದಲ್ಲಿಯೇ ಈ ಊರು ನಾಶಗೊಂಡಿದೆ.

ಚಿಕ್ಕಬೆಟ್ಟದ ಮೇಲೆ ಹಾಗೂ ಊರಿನ ಸುತ್ತಮುತ್ತ ಒಡೆದು ಬಿದ್ದಿರುವ ವಿಗ್ರಹಗಳಲ್ಲಿ ಹೆಚ್ಚಿನವು ಪಾರ್ಶ್ವನಾಥನ ಪ್ರತಿಮೆಗಳೇ ಆಗಿವೆ. ೪ ಪಾರ್ಶ್ವನಾಥನ ಪ್ರತಿಮೆಗಳು, ಒಂದು ಸಿಂಹಪೀಠ, ಯಾವ

ತೀರ್ಥಂಕರರದ್ದೆಂದು ಗುರುತಿಸಲಾಗದ ರುಂಡವಿಲ್ಲದ ೪ ಮೂರ್ತಿಗಳಿವೆ. ದೋಣೆಯ ಮೇಲ್ಭಾಗದಲ್ಲಿ ಸುಂದರವಾದ ಪದ್ಮಾಸನ ಭಂಗಿಯಲ್ಲಿರುವ ಸುಪಾರ್ಶ್ವನಾಥನ ಮೂರ್ತಿಯಿರುವುದರಿಂದ, ಇವುಗಳಲ್ಲಿ ಒಂದು ಬಸದಿ ಸುಪಾರ್ಶ್ವನಾಥನದ್ದೆನ್ನಬಹುದು. ಚಿಕ್ಕಬೆಟ್ಟದ ಮೇಲೆ ಕಾಣ ಸಿಗುವ 4 ಚಾಮರಧಾರಿಗಳ ಭಗ್ನ ಪ್ರತಿಮೆಗಳೂ ಭಿನ್ನ ರೀತಿಯಲ್ಲಿರುವುದರಿಂದ ಇವು ನಾಲ್ಕೂ ಬೇರೆ ಬೇರೆ ಬಸದಿಗಳ ಬಳಿಯಿದ್ದ ಮೂರ್ತಿಗಳಿರಬೇಕು.

ಈ ಯಕ್ಷನಿಗೆ ಸಂಬಂಧಿಸಿದ ತೀರ್ಥಂಕರನ ರುಂಡರಹಿತವಾದ ಗೋಮೇಧಯಕ್ಷನ ಶಿಲ್ಪವೊಂದು ಇಲ್ಲಿರುವುದರಿಂದ ನೇಮಿನಾಥನ ಬಸದಿಯೊಂದು ಇದ್ದಿರಬೇಕು ಎಂಬುದನ್ನು ಸುಲಭವಾಗಿಯೇ ಗ್ರಹಿಸಬಹುದು. ಜೊತೆಗೆ ಇಲ್ಲಿ ಗೋಮುಖ ಯಕ್ಷನ ಮೂರ್ತಿಯೂ ಉಂಟು.

ತಿಪ್ಪೂರಿನ ಶಿಲ್ಪಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದುದು 'ಗಣೇಶ'ನ ಶಿಲ್ಪ. ಚಿಕ್ಕಬೆಟ್ಟದ ಎಡಭಾಗಕ್ಕೆ ಕೊಂಚ ದೂರದಲ್ಲಿರುವ ಅರಳಿ ಕಟ್ಟೆಯ ಕೆಳಗೆ ಈ ಶಿಲ್ಪವಿದ್ದು ಪ್ರಾಚೀನ ಗಣಪತಿಯ ಪ್ರಧಾನ ಲಕ್ಷಣಗಳನ್ನೊಳಗೊಂಡಿರುವ ಈ ಶಿಲ್ಪವು ಗೋಕರ್ಣ ಹಾಗೂ ಇಡಗುಂಜಿಯ ಪ್ರಾಚೀನ ಗಣೇಶನನ್ನು ನೆನಪಿಗೆ ತರುತ್ತದೆ.

ತಿಪ್ಪೂರಿನ ಬಸದಿಗಳ 'ವಾಸ್ತು', ಗಂಗರ ವಾಸ್ತುಶೈಲಿಯನ್ನೇ ಒಳಗೊಂಡು ಗಂಗರ ಕಾಲದ ಪ್ರಸಿದ್ಧ ಜೈನ ಕೇಂದ್ರಗಳಲ್ಲೊಂದಾಗಿತ್ತು. 'ತಲಕಾಡಿನ ಗಂಗರ ದೇವಾಲಯಗಳು : ಒಂದು ಅಧ್ಯಯನ'[1] ಕೃತಿಯಲ್ಲಿ ಲೇಖಕರು ' ಇಲ್ಲಿ ೨ ಬಸದಿಗಳಿದ್ದಿಬೇಕು, ಎನ್ನುತ್ತಾ ಬಸದಿಗಳಿದ್ದ ಸ್ಥಳದಲ್ಲಿ ೨ ದಿಬ್ಬಗಳಿವೆ ' ಎಂದು ಹೇಳುತ್ತಾರಾದರೂ ದೊರೆಯುವ ಅವಶೇಷಗಳು ಕನಿಷ್ಠ ೬ ರಿಂದ ೪ ಬಸದಿಗಳಿದ್ದಿರಬೇಕೆಂಬುದನ್ನು ತಿಳಿಸುತ್ತವೆ.

ತಿಪ್ಪೂರಿನ ಹಿಂಭಾಗದಲ್ಲಿ ಆದರೆ, ಊರಿಗೇ ಸೇರಿದಂತಿರುವ 'ಚಿಕ್ಕಬೆಟ್ಟ' ಎಂದು ನಾವು ಗುರುತಿಸುವ 'ಅರೆ' (=ಬಂಡೆ) ಒಂದು ಕಾಲದಲ್ಲಿ ಪರಕೀಯರ ಆಕ್ರಮಣದಿಂದ ರಕ್ಷಣೆಯನ್ನೂ ನೀಡಿರಬಹುದು. ಈ ಅರೆ (ಬಂಡೆ)ಯಿಂದಾಗಿಯೇ ಈ ಊರಿಗೆ 'ಅರೆತಿಪ್ಪೂರು' ಎಂಬ ಹೆಸರು ಬಂದಿದೆ. 'ಅರೆತಿಪ್ಪೂರನ್ನು 'ಬಸ್ತಿ ತಿಪ್ಪೂರು' ಎಂದೂ ಕರೆಯುತ್ತಾರೆ. 'ವಸತಿ' ಶಬ್ದದ ತದ್ಭವೀಕರಣ 'ಬಸದಿ'. ಬಸದಿಯೇ 'ಬಸ್ತಿ' ಎಂಬ ಸಂಕ್ಷಿಪ್ತ ರೂಪ ಪಡೆದಿದೆ. ಚಿಕ್ಕಬೆಟ್ಟದ ಮೇಲಿದ್ದ ಬಸದಿಗಳಿಂದಾಗಿಯೇ ಈ ಊರಿಗೆ 'ಬಸ್ತಿ ತಿಪ್ಪೂರು' ಎಂಬ ಹೆಸರು ಬಂದಿದೆ.

'ಗೊಮ್ಮಟ ಮೂರ್ತಿ ಪ್ರತಿಷ್ಠಾಪನೆಯಾಗಿರುವ ದೊಡ್ಡಬೆಟ್ಟವನ್ನು ಊರಿನ ಜನರು 'ಸವಣಪ್ಪನ ಗುಡ್ಡ' ಎಂದೂ ಕರೆಯುತ್ತಾರೆ. 'ಶ್ರವಣ' ಶಬ್ದದ ತದ್ಭವೀಕರಣ 'ಸವಣ'. ಜೈನ ಸಂನ್ಯಾಸಿಗಳನ್ನು ಸವಣರು ಎಂದು ಕರೆಯುತ್ತಾರಾದರೂ ಪ್ರಸ್ತುತ ದೊಡ್ಡ ಬೆಟ್ಟದಲ್ಲಿರುವ ಗೊಮ್ಮಟ ಮೂರ್ತಿಯಿಂದಾಗಿಯೇ ಅದಕ್ಕೆ ಈ ಹೆಸರು ಪ್ರಾಪ್ತವಾಗಿದೆ. ( ಈ ಹಿನ್ನೆಲೆಯಲ್ಲಿ 'ಶ್ರವಣಬೆಳಗೊಳ'ವನ್ನೂ ಗಮನಿಸಬಹುದು)

---

೧. ಡಾ। ದೇವರಕೊಂಡಾರೆಡ್ಡಿ

8290



ತಿಪ್ಪೂರಿನ ಪ್ರಾಚೀನ ಉಲ್ಲೇಖ ಕ್ರಿ.ಶ. 916-17ಕ್ಕೆ ಸೇರಿದ ಶಾಸನವೊಂದರಲ್ಲಿ ದೊರಕುತ್ತದೆ. ತಿಪ್ಪೂರಿನ ನೆರೆಯೂರಾದ ಕೂಲಿಗೆರೆಯ ಏರಿಯ ಮೇಲೆ. ಇರುವ ಗಂಗದೊರೆ 'ನೀತಿ ಮಾರ್ಗ ಪೆರ್ಮಾನಡಿ'ಯ ಕಾಲಕ್ಕೆಸೇರಿದ ಈ ಶಾಸನವು ತಿಪ್ಪೂರನ್ನು 'ಕನಕಗಿರಿ ತೀರ್ಥ' ಎಂದು ಹೆಸರಿಸುತ್ತದೆ.

'...ಮಣಲೆಯಾರಂ ಕನಕಗಿರಿಯ ತೀರ್ತ್ಥದಮೇಗೆ ಬಸದಿಯಮ್ಮಡಿಸಿ ಅರಸರಧ್ಯಕ್ಷದೊಳ್ ಕನಕಸೇನ ಭಟರರ್ಗ್ಗೆ ತಿಪ್ಪೆಯೂರೊಳಾದ ಅಟ್ಟದೆಜೆಯುಂ, ಕುಜುದೆಜೆಯುಂಮುಳ್ಳ ಸಾಮನ್ತದೆಜೆಯೆಲ್ಲವಮ್ಬಿಟ್ಟನ್.'

ನೀತಿಮಾರ್ಗ ಪೆರ್ಮಾನಡಿಯ ಸೇನಾನಿಯಾಗಿದ್ದ ಮಣಲೆಯಾರನು ಕನಕಗಿರಿಯ ತೀರ್ಥದಲ್ಲಿ ಬಸದಿಯನ್ನು ನಿರ್ಮಿಸಿ ಅದರ ಮೇಲ್ವಿಚಾರಣೆಯನ್ನು (ಅಧಿಕಾರವನ್ನು) ಕನಕಸೇನ ಭಟಾರರಿಗೆ ನೀಡಿ ಅದರ ನಿರ್ವಹಣೆಗಾಗಿ 'ತಿಪ್ಪೆಯೂರಿನಿಂದ ರಾಜ್ಯಾದಾಯಕ್ಕೆ ದೊರಕುವ ಕೆಲವು ತೆರಿಗೆಗಳನ್ನು ಬಿಟ್ಟುಕೊಟ್ಟಿದ್ದಾನೆ - ಎಂಬುದು ಶಾಸನದ ವಿಷಯ.

ಈ ಶಾಸನ ತಿಪ್ಪೆಯೂರನ್ನೇ ಕನಕಗಿರಿತೀರ್ಥ ಎಂದು ಸ್ಪಷ್ಟವಾಗಿಯೇ ತಿಳಿಸುತ್ತದೆಯಾದರೂ 'ಎಪಿಗ್ರಾಫಿಯಾ ಕರ್ನಾಟಿಕ - 7 * ಸಂಪುಟದ ಪೀಠಿಕೆಯಲ್ಲಿ : 'ಮೈಸೂರಿನ ಚಾಮರಾಜನಗರದ ಬಳಿಯಿರುವ ಮಲೆಯೂರನ್ನೇ ಕನಕಗಿರಿ ತೀರ್ಥ' ಎಂದು ಗುರುತಿಸುತ್ತಾರೆ.

ಜೈನ ಸಂಪ್ರದಾಯದಲ್ಲಿ ಎಲ್ಲ ಜೈನ ಪವಿತ್ರ ಕ್ಷೇತ್ರಗಳನ್ನೂ 'ಕನಕಗಿರಿತೀರ್ಥ' ವೆಂದೇ ಗುರುತಿಸುವ ಪರಿಪಾಠವಿತ್ತು. ೨೦೦ ಕನಕಗಿರಿ ತೀರ್ಥಗಳಿದ್ದುವು ಎಂದು ಪಂಪ ತನ್ನ 'ಆದಿ ಪುರಾಣ'ದಲ್ಲಿ ಒಂದೆಡೆ ತಿಳಿಸುತ್ತಾನೆ. ತೀರ್ಥಸ್ಥಳದ ಗಿರಿಗಳನ್ನು 'ಕನಕಗಿರಿ' ಎಂದೇ ಕರೆಯುವ ಪರಿಪಾಠ ಜೈನರಲ್ಲಿತ್ತೆಂದು ಇದರಿಂದ ತಿಳಿಯಬಹುದು.

ಗೊಮ್ಮಟನ ಪ್ರತಿಷ್ಠಾಪನೆಯಿಂದಾಗಿ ಆ ವೇಳೆಗಾಗಲೇ ತಿಪ್ಪೂರು ಒಂದು ಪ್ರಸಿದ್ಧ ಜೈನ ಕ್ಷೇತ್ರವಾಗಿ ಖ್ಯಾತಿ ಹೊಂದಿದ್ದು; ಕನಕಗಿರಿ ತೀರ್ಥವೆಂದು ಕರೆಸಿಕೊಂಡಿತ್ತು.

ಈ ಕಾರಣದಿಂದಾಗಿ 'ಕೂಲಿಗೆರೆಯ ಶಾಸನ'ವು ತಿಳಿಸುವ 'ಕನಕಗಿರಿತೀರ್ಥ' ಮಲೆಯೂರಲ್ಲ, ತಿಪ್ಪೂರೇ ಹೌದು. ಶಾಸನವೂ ಸಹ 'ತಿಪ್ಪೆಯೂರು' ಎಂಬುದನ್ನು ಸ್ಪಷ್ಟವಾಗಿಯೇ ತಿಳಿಸುತ್ತದೆ. ಚಾಮರಾಜನಗರದ ಮಲೆಯೂರು ಸಹ ತನ್ನ ಜೈನಧರ್ಮದ ಪ್ರಖ್ಯಾತಿಯಿಂದ ಕನಕಗಿರಿ ಎಂದೆನಿಸಿಕೊಂಡಿದ್ದು ನಿಜವಾದರೂ, ಎ.ಕ. 7 ರ ಪೀಠಿಕೆಯಲ್ಲಿ ತಿಳಿಸಿರುವಂತೆ ಕೂಲಿಗೆರೆ ಶಾಸನ ಪ್ರಸ್ತಾಪಿಸುವ ಕನಕಗಿರಿ ತೀರ್ಥ ಮಲೆಯೂರಲ್ಲ.

ಕ್ರಿ.ಶ. ೯೧೬-೧೯ರ ವೇಳೆಗಾಗಲೇ ಜೈನರ ಪವಿತ್ರ ಕ್ಷೇತ್ರವಾಗಿ 'ಕನಕ ಗಿರಿತೀರ್ಥ'ವೆಂದು ತಿಪ್ಪೂರು ಹೆಸರು ಪಡೆದಿದೆಯೆಂದರೆ, ಅಲ್ಲಿ ಗೊಮ್ಮಟಮೂರ್ತಿಯ ಪ್ರತಿಷ್ಠಾಪನೆಯಾಗಿ ಬಹಳ ವರ್ಷಗಳೇ ಕಳೆದಿರಬೇಕು. ಕಾರಣ, ಯಾವೊಂದು ಸ್ಥಳವೂ ತೀರ್ಥಸ್ಥಳವೆಂದು ಪ್ರಖ್ಯಾತಿ ಪಡೆಯಲು ಕೇವಲ ಹತ್ತಿಪ್ಪತ್ತುವರ್ಷಗಳಲ್ಲಿ ಸಾಧ್ಯವಿಲ್ಲ. ಹೀಗಾಗಿ ತಿಪ್ಪೂರಿನ ಪ್ರಾಚೀನ ಉಲ್ಲೇಖ ನಮಗೆ

---

* ಎ.ಕ. ೭ - ಪು.೩೧೩

ಕ್ರಿ.ಶ.೯೧೬-೧೭ರಲ್ಲಿ ಕಂಡು ಬಂದರೂ ಅದಕ್ಕಿಂತ ಕನಿಷ್ಠ ೧೦೦-೧೫೦ ವರ್ಷಗಳ ಮೊದಲಿನಿಂದಲೂ ಈ ಕ್ಷೇತ್ರ ಜನಮನ್ನಣೆ ಗಳಿಸಿರಬೇಕು.

ಶ್ರೀಯುತ ಶುಭಚಂದ್ರರವರು 'ಶ್ರವಣಬೆಳಗೊಳದಲ್ಲಿ ಚಾಮುಂಡರಾಯನಿಂದ ಗೊಮ್ಮಟೇಶ್ವರ ಮಹಾನ್ ಮೂರ್ತಿಯ ನಿರ್ಮಾಣವಾದದ್ದೇ ಮುಂದಿನವರಿಗೆ ಸ್ಫೂರ್ತಿಯಾಗಿ ಅನೇಕ ಮೂರ್ತಿಗಳು ನಿರ್ಮಾಣವಾಗಿವೆ. ಅಂಥ ಸ್ಫೂರ್ತಿಯ ನೆಲೆಯಲ್ಲಿ ಇಲ್ಲಿಯೂ ೧೧-೧೨ನೇ ಶತಮಾನಗಳ ಅವಧಿಯಲ್ಲಿ ಈ ಗೊಮ್ಮಟೇಶ್ವರನ ಮೂರ್ತಿ ನಿರ್ಮಾಣವಾಗಿರಬಹುದು,* ಎಂದು ಹೇಳುತ್ತಾರೆ.

ಶ್ರವಣಬೆಳಗೊಳದ ಗೊಮ್ಮಟ ಮೂರ್ತಿ ನಿರ್ಮಾಣವಾದುದು ಕ್ರಿ.ಶ.983ರಲ್ಲಿ. ಕ್ರಿ.ಶ. ೯೧೬-೧೭ರ ವೇಳೆಗಾಗಲೇ ತಿಪ್ಪೂರು ಕನಕಗಿರಿ ತೀರ್ಥವೆಂದು ಹೆಸರಿಸಲ್ಪಟ್ಟಿರುವುದರಿಂದ ಅಷ್ಟು ಹೊತ್ತಿಗಾಗಲೇ ಇದು ಪವಿತ್ರ ಕ್ಷೇತ್ರವಾಗಿ ಖ್ಯಾತಿ ಹೊಂದಿರಬೇಕು. ಆ ಸ್ಥಳ ಪವಿತ್ರಕ್ಷೇತ್ರವೆಂದು ಹೆಸರು ಪಡೆಯಬೇಕಾದರೆ ಅಲ್ಲಿನ ಗೊಮ್ಮಟಮೂರ್ತಿಯೇ ಕಾರಣವೆಂದು ನಿಸ್ಸಂಶಯವಾಗಿ ಹೇಳಬಹುದು. ತಿಪ್ಪೂರು ಪ್ರಸಿದ್ಧಿಯಾಗುತ್ತಾ ಹೋದಂತೆ ಜನರ ಗಮನವನ್ನು ಸೆಳೆಯತೊಡಗಿತ್ತು. ಅದರಿಂದಲೇ ಇಲ್ಲಿ ಬಸದಿಗಳೂ ನಿರ್ಮಾಣಗೊಳ್ಳತೊಡಗಿದ್ದವು. ಹೀಗಾಗಿ ತಿಪ್ಪೂರಿನ ಗೊಮ್ಮಟಮೂರ್ತಿ ಶುಭಚಂದ್ರರವರು ಹೇಳುವಂತೆ ಶ್ರವಣಬೆಳಗೊಳದ ಮೂರ್ತಿಯ ನಿರ್ಮಾಣವಾದ ನಂತರ ಸ್ಥಾಪಿತವಾದುದಲ್ಲ. ಅದಕ್ಕಿಂತ ಮೊದಲೇ ಇಲ್ಲಿ ಗೊಮ್ಮಟ ಮೂರ್ತಿ ಪ್ರತಿಷ್ಠಾಪನೆಯಾಗಿತ್ತು. ಒಟ್ಟಾರೆ ತಿಪ್ಪೂರು 9ನೇ ಶತಮಾನಕ್ಕಿಂತಲೂ ಮೊದಲೇ ಜನಪ್ರಿಯ ಜೈನಕ್ಷೇತ್ರವಾಗಿತ್ತೆಂಬುದು ನಿರ್ವಿವಾದ. ಅಲ್ಲದೆ, ಏಳನೆ ಶತಮಾನದಲ್ಲಿ ನಿರ್ಮಾಣವಾದ ಬಾದಾಮಿ ಗುಹಾದೇವಾಲಯದ ಗೊಮ್ಮಟ ಶಿಲ್ಪವೂ ಈ ಮೊದಲೇ ಇತ್ತು.

೧೪ನೇ ಶತಮಾನದ ವೇಳೆಗಾಗಲೇ ತಿಪ್ಪೂರು ನಾಶಗೊಂಡಿದ್ದರೂ ಸಹ ೧೭-೧೮ನೇ ಶತಮಾನದವರೆಗೂ ಈ ಸ್ಥಳ ತನ್ನ ಕೀರ್ತಿಯನ್ನು ಕಳೆದುಕೊಂಡಿರಲಿಲ್ಲ. ಕ್ರಿ.ಶ. ೧೬೯೮ರ ಜನವರಿ ೧೪ರ ಶುಕ್ರವಾರದಂದು ನೆಟ್ಟಿರುವ ಮದ್ದೂರು ತಾ||ನ ಹಾಗಲಹಳ್ಳಿ ಗ್ರಾಮದ ಶಾಸನವು -

'ತಿಪ್ಪೂರ ತೀರ್ಥದ ಆಚಾರ್ಯ್ಯರಾದ ಕುಮುದಚಂದ್ರ ಪಂಣ್ಡಿತ ದೇವರ ಸಾಧರ್ಮಿಗಳು ಶ್ರುತಕೀರ್ತಿ ಪಣ್ಡಿತ ದೇವರ ಗುಡ್ಡಂ ಚಾಮಗಾಉಂಡಂ... ತಿಪ್ಪೂರು ತೀರ್ಥದ ಹಳ್ಳಿ ಹಾದರಿವಾಗಿಲ ಭೂಮಿಕಾಱಂ ಕಲ್ಲಗಾಣಮಂ ಮಾಡಿಸಿದಂ.'*1

- ಎಂದು ತಿಳಿಸುತ್ತದೆ. ಚಾಮಗಾವುಂಡ ಎಂಬುವವನು ತೀರ್ಥದ ತಿಪ್ಪೂರಿಗಾಗಿ ಒಂದು ಕಲ್ಲಿನ ಗಾಣವನ್ನು ಮಾಡಿಸಿದ ಎಂದು ಈ ಶಾಸನ ಹೇಳಹೊರಟಿದೆ. ಚಿಕ್ಕಬೆಟ್ಟದ ಕೆಳಭಾಗದಲ್ಲಿರುವ ದೊಣೆಯ ಮುಂದೆ ಈಗಲೂ ಒಂದು ಕಲ್ಲಿನ ಗಾಣ ಮುರಿದು ಬಿದ್ದಿದೆ. ಪ್ರಸ್ತುತ ಶಾಸನ ಹೇಳುತ್ತಿರುವ ಗಾಣ ಇದೇ ಆಗಿರಬೇಕು. ಆ ಗಾಣವು ಸುಮಾರು 4 ಅಡಿ ಎತ್ತರ 3 ಅಡಿ ಅಗಲವಾಗಿದೆ.

---

* ಜೈನ ಸಾಹಿತ್ಯ ಮತ್ತು ಸಂಸ್ಕೃತಿ : ಕೆಲವು ಅಧ್ಯಯನಗಳು, ಶುಭಚಂದ್ರ, ಪು. ೧೦೫ ೧೦೬

* ೧ ಎ.ಕ ೭ - ಪು. ೩೧೯

ಕೃಷ್ಣರಾಜ ಸಾಗರ ತಾ। ನ ಹನಸೋಗೆಯಲ್ಲಿರುವ ಒಂದು ಶಾಸನವು ಕ್ರಿ.ಶ.೧೭೬೧ರಲ್ಲಿ ಹಾಕಿಸಿದ್ದು.* ಈ ಶಾಸನದಲ್ಲಿ ಕೃಷ್ಣರಾಜ ಒಡೆಯರು ೧೨ ಹಳ್ಳಿಗಳನ್ನು ಅಗ್ರಹಾರವಾಗಿ ಪರಿವರ್ತಿಸಿ ಅವುಗಳಿಗೆ ತನ್ನ ತಾಯಿಯ ಜ್ಞಾಪಕಾರ್ಥವಾಗಿ 'ದೇವಾಂಬ ಸಮುದ್ರ'ವೆಂಬ ಹೆಸರಿನಲ್ಲಿ ಬ್ರಾಹ್ಮಣರಿಗೆ ದಾನ ನೀಡಿದ ವಿಷಯವಿದೆ. ಆ ಹಳ್ಳಿಗಳಲ್ಲಿ ತಿಪ್ಪೂರು ಕೂಡ ಒಂದು.

ಕ್ರಿ.ಶ.೯೦೭ರಲ್ಲಿ ಹಾಕಿಸಿರುವ ಚಾಮರಾಜನಗರದ ಕೆರೆಹಳ್ಳಿಯಲ್ಲಿರುವ ತಾಮ್ರಶಾಸನ[1] ಮತ್ತು ನಂಜನಗೂಡು ತಾಲೂಕಿನ ಇಗ್ಗಲಿಯ ಶಾಸನ[2]ಗಳು 'ತಿಪ್ಪೇಜು ದುರ್ಗ' ಎಂಬ ಒಂದು ದುರ್ಗವನ್ನು ಹೆಸರಿಸುತ್ತವೆ. ಆ ದುರ್ಗ ಯಾವ ಸ್ಥಳಕ್ಕೆ ಸೇರಿದ್ದು ಎಂಬುದನ್ನು ಈ ಶಾಸನಗಳು ಸುಸ್ಪಷ್ಟವಾಗಿ ದಾಖಲಿಸುವುದಿಲ್ಲವಾದರೂ, 'ನೀತಿಮಾರ್ಗ ಪೆರ್ಮಾನಡಿ'ಯ ಆಳಿಕೆಯ ಅವಧಿಯದ್ದಾದ್ದರಿಂದ (ಕೂಲಿಗೆರೆ ಶಾಸನವೂ ಈತನ ಕಾಲದ್ದೇ) ಈ ದುರ್ಗ ತಿಪ್ಪೂರಿಗೆ ಸಂಬಂಧಿಸಿದ್ದೆ ಎಂಬ ಅನುಮಾನ ಬರುತ್ತದೆ. ಅದೇ ಕೂಲಿಗೆರೆಯ ಶಾಸನದಲ್ಲಿ 'ಸಾಮನ್ತದೆಜೆ'ಯ ಪ್ರಸ್ತಾಪವಿರುವುದರಿಂದಲೂ ತಿಪ್ಪೂರು ಸಾಮಂತರ ಆಳಿಕೆಗೆ ಒಳಪಟ್ಟಿತ್ತು ಎಂದು ಪರಿಭಾವಿಸಬಹುದಾಗಿದೆ. ಈ ಆಧಾರದಿಂದ ಮೇಲಿನ ಶಾಸನಗಳು ಹೇಳುವ 'ತಿಪ್ಪೇಜು ದುರ್ಗ'ವೂ ಕೂಲಿಗೆರೆ ಶಾಸನ ಹೇಳುವ 'ತಿಪ್ಪೆಯೂರು' ಎರಡೂ ಒಂದೇ ಆಗಿರಬೇಕು. ಈ ಮೂರು ಶಾಸನಗಳೂ ಗಂಗ 'ನೀತಿಮಾರ್ಗ ಪೆರ್ಮಾನಡಿಯ' ಆಡಳಿತಾವಧಿಗೆ ಸೇರಿದ್ದೆಂಬುದೇ ಈ ಅಭಿಪ್ರಾಯಕ್ಕೆ ಆಧಾರ.

ತಿಪ್ಪೂರಿನಲ್ಲಿರುವ ಒಂದು ಶಾಸನ ಹೊಯ್ಸಳರ ದೊರೆ ವಿಷ್ಣುವರ್ಧನನ ಕಾಲಕ್ಕೆಸೇರಿದ್ದು. ಇದರಕಾಲ ಶಕವರ್ಷ ೧೦೩೯ (ಕ್ರಿ.ಶ.೧೧೧೭) ವಿಷ್ಣುವರ್ಧನನ ಪ್ರಮುಖ ಸೇನಾನಿ 'ಗಂಗರಾಜ'ನು ತಲಕಾಡಿನಿಂದ ಚೋಳರನ್ನು ಹೊಡೆದಟ್ಟಿದ ಪ್ರತಿಫಲವಾಗಿ ಅರಸನಿಂದ ತಿಪ್ಪೂರನ್ನುಕೊಡುಗೆಯಾಗಿ ಪಡೆದು ಅನಂತರ ಅದನ್ನು ತನ್ನ ಗುರು ಮೂಲಸಂಘ, ಕಾಣೂರ್ಗಣದ, ತಿಂತ್ರಿಣಿಕ ಗಚ್ಛದ ಮೇಘಚಂದ್ರ ಸಿದ್ಧಾಂತ ದೇವರಿಗೆ ದಾನ ನೀಡಿದ್ದನ್ನು ಈ ಶಾಸನ ತಿಳಿಸುತ್ತದೆ.

ವಿಷ್ಣುವರ್ಧನನು ಕೈಗೊಂಡ ದಂಡಯಾತ್ರೆಗಳಲ್ಲಿ ಅವನ ಸೇನಾಪತಿಗಳು ಮಹತ್ವದ ಪಾತ್ರ ವಹಿಸಿದ್ದಾರೆ. ಹೊಯ್ಸಳ ಸಾಮ್ರಾಜ್ಯದ ರೂವಾರಿಗಳಲ್ಲಿ ಪ್ರಸಿದ್ಧರಾದವರಲ್ಲಿ ಗಂಗರಾಜನೇ ಪ್ರಮುಖ ವ್ಯಕ್ತಿ. ಈತ ತಲಕಾಡಿನಿಂದ ಚೋಳರ ಅದಿಯಮನನ್ನು ಹಿಮ್ಮೆಟ್ಟಿಸಿದ್ದು ಅಸಾಧಾರಣವಾದ್ದು. ಹೊಯ್ಸಳರು ಪುರಾತನ ಗಂಗ ರಾಜಧಾನಿಯಿಂದ ಚೋಳರನ್ನು ಹಿಮ್ಮೆಟಿಸುವವರೆಗೂ ತಾವು ಅಧಿರಾಜರೆಂದು ಹೇಳಿಕೊಳ್ಳಲಾಗುತ್ತಿರಲಿಲ್ಲ. ಈ ಗೆಲುವಿನ ನಂತರವೇ ವಿಷ್ಣುವರ್ಧನನ ಕೀರ್ತಿ ಹರಡಲು ಕಾರಣವಾಯಿತು ಮತ್ತು ಮುಂದಿನ ಹಲವಾರು ಮಹತ್ವದ ವಿಜಯಗಳಿಗೆ ನಾಂದಿಯಾಯಿತು. ಈ ವಿಜಯದಿಂದ ಸಂತೋಷಗೊಂಡ ವಿಷ್ಣುವರ್ಧನನು ಗಂಗರಾಜನಿಗೆ-

''ಮೆಚ್ಚಿದೆಂ ಬೇಡಿಕೊಳ್ಳಿಮೆನೆ ಅವನಿಪನ್ ಎನಗಿತ್ತಪನೆಂದು ಅವರಿವರವೊಲ್ ಉಳಿದ ವಸ್ತುವಂ ಬೇಡದೆ ತಿಪ್ಪೂರ ವೃತ್ತಿಯಂ ಬೇಡಿ' ಅದನ್ನು 'ಕಾಣೂರ್ಗಣದ ತಿಂತ್ರಿಣಿಕ ಗಚ್ಛದ

---

* ಎ.ಕ. ೫ - ಪು. ೩೯

೧. ಎ.ಕ. ೪ - ಪು. ೨೨೭

೨. ಎ.ಕ. ೩-ಪು. ೨೪೫೭

ಶ್ರೀಮನ್ಮೇಘಚಂದ್ರ ಸಿದ್ಧಾಂತ ದೇವರ ಕಾಲಂ ಕರ್ಚಿ ಧಾರಾಪೂರ್ವಕಂ' ನೀಡುತ್ತಾನೆ. ಅರಸನಿಂದ ಏನನ್ನು ಬೇಕಾದರೂ ಕೇಳಿ ಪಡೆಯಬಹುದಾಗಿದ್ದರೂ, ತಾನು ಭಕ್ತಿಯಿಂದ ಪೂಜಿಸುವ ಜಿನೇಂದ್ರನ ಸೇವೆ ಮಾಡಲು 'ತಿಪ್ಪೂರ ವೃತ್ತಿ' ಯನ್ನು ಬೇಡುತ್ತಾನೆ. ಗಂಗರಾಜನು ಜೈನಧರ್ಮದ ನಿಷ್ಠಾವಂತ ಅನುಯಾಯಿಯಾಗಿದ್ದು ಹಲವಾರು ಜಿನಮಂದಿರಗಳನ್ನು ಬಸದಿಗಳನ್ನೂ ನಿರ್ಮಿಸಿದ್ದಾನೆ. ಅವುಗಳಿಗೆ ದಾನ ನೀಡಿದ್ದಾನೆ.

(ವಿಷ್ಣುವರ್ಧನನ ಮೊಮ್ಮಗನಾದ ಇಮ್ಮಡಿ ಬಲ್ಲಾಳನ ಆಡಳಿತಾವಧಿಗೆ ಸೇರಿದ ಮತ್ತೊಂದು ಶಾಸನವು ಇಲ್ಲಿನ ಹೊಲವೊಂದರಲ್ಲಿದೆ.)

'ಮೇಘಚಂದ್ರ' ಎಂಬ ಹೆಸರಿನ ಇಬ್ಬರು ಮುನಿಗಳು ಇದ್ದಾರೆ. ಒಬ್ಬ ಮೇಘಚಂದ್ರ ಗಂಗರಾಜನ ಪತ್ನಿಯಾದ ಲಕ್ಷ್ಮಿಯ ಗುರು. ಈತನು ಕ್ರಿ.ಶ.೧೧೧೫ ರಲ್ಲಿ ಗತಿಸಿದ ನಂತರ ಲಕ್ಷ್ಮಿ ತನ್ನ ಗುರುವಿನ ಸ್ಮರಣಾರ್ಥ ಶ್ರವಣಬೆಳಗೊಳದಲ್ಲಿ ನಿಸಿಧಿಯೊಂದನ್ನು ನಿರ್ಮಿಸಿದ್ದಾಳೆ.[1] ಪ್ರಸ್ತುತ ಶಾಸನದ ಕಾಲ ೧೧೧೭. ಪ್ರಸ್ತುತ ಶಾಸನ ತಿಳಿಸುವ ಮೇಘಚಂದ್ರನೂ ಲಕ್ಷ್ಮಿಯ ಗುರು ಮೇಘಚಂದ್ರನೂ ಬೇರೆ ಬೇರೆ. ತಿಪ್ಪೂರು ಶಾಸನೋಕ್ತ ಮೇಘಚಂದ್ರನು 'ಪೂಜ್ಯಪಾದ'ನ 'ಸಮಾಧಿ ಶತಕ'ಕ್ಕೆ ವ್ಯಾಖ್ಯಾನವನ್ನು ರಚಿಸಿದವನು.

ಇಲ್ಲಿನ ಮತ್ತೊಂದು ಶಾಸನ ಕವಿಕಂದರ್ಪ ಮತ್ತು ಬಾಳಚಂದ್ರ ಮುನಿಯ ಹೆಸರನ್ನು ಉಲ್ಲೇಖಿಸುತ್ತದೆ.

'ಸ್ವಸ್ತಿ. ವುಭಯ ಭಾಷಾ ಕವಿ ಚಕ್ರವರ್ತಿ ಕಂದರ್ಪದೇವರ ಮದವಳಿಗೆ ಸೊಂನ್ನಾದೇವಿಯರ ಮಗ ಕಾಣೂರ್ಗಣ ತಿಳಕನುಮಪ್ಪ ಬಾಳಚಂದ್ರ ದೇವರುಂ ತಂಮ ಗುರುಗಳಿಗೆ ಪರೋಕ್ಷವಾಗಿ ಮಾಡಿದ ಪ್ರತಿಷ್ಠೆ.[2]

'ಉಭಯ ಭಾಷಾ ಕವಿಚಕ್ರವರ್ತಿಯಾದ ಕಂದರ್ಪದೇವ ಮತ್ತು ಆತನ ಪತ್ನಿ ಸೊಂನ್ನಾದೇವಿಯರ ಪುತ್ರ ಬಾಳಚಂದ್ರಮುನಿ. ಕಾಣೂರ್ಗಣಕ್ಕೆ ತಿಳಕ ಪ್ರಾಯನಾಗಿದ್ದ ಬಾಳಚಂದ್ರ ಮುನಿ ತಮ್ಮ ಗುರುಗಳಿಗೆ ಪರೋಕ್ಷವಾಗಿ ಈ ಶಾಸನವನ್ನು ಪ್ರತಿಷ್ಠಾಪಿಸಿದ್ದಾನೆ'. 'ಸುತ' ಎಂದರೆ ಮಗ, ಶಿಷ್ಯ ಎಂಬ ಎರಡು ಅರ್ಥಗಳಿವೆ. ಕವಿಕಂದರ್ಪ ಬಾಳಚಂದ್ರನ ತಂದೆ ಮತ್ತು ಗುರು ಎರಡೂ ಆಗಿದ್ದನು. ಇಲ್ಲಿನ ಮತ್ತೊಂದು ಶಾಸನವು. -

'ತಿಪ್ಪೂರ ಕವಿಕಂದರ್ಪ್ಪರ ಸಿಷ್ಯ ಬಾಳಚಂದ್ರ ದೇವರ ಮಕ್ಕಳು ಗುಂಮ...ನು...ಕಂದರ್ಪ... ನ ಮಕ್ಕಳು...

ಎಂದಿದೆ. ತಿಪ್ಪೂರ ಕವಿಕಂದರ್ಪ್ಪ ಎಂದಿರುವುದರಿಂದ ಕವಿ-ಕಂದರ್ಪ್ಪನು ತಿಪ್ಪೂರಿನವನೇ ಆಗಿರಬೇಕು. ಈ ಶಾಸನವು ತಿಪ್ಪೂರಿನ ಜಿನಗುಡ್ಡದ ಮೇಲೆ ಹೊಂಡದ ಹತ್ತಿರ ಬಿದ್ದಿರುವ ಜಿನಬಿಂಬದ ಪೀಠದ ಮೇಲಿದೆ. ಶಾಸನದಲ್ಲಿ 'ಬಾಳಚಂದ್ರದೇವರು ತಂಮ ಗುರುಗಳಿಗೆ ಪರೋಕ್ಷವಾಗಿ

೧. ಎ.ಕ ೨ - ಪು. ೧೫೭

೨. ಎ.ಕ.೭ - ಪು. ೨೮೨

೩. ಎ.ಕ. ೭ ಪು. ೨೮೧

ಮಾಡಿದ ಪ್ರತಿಷ್ಠೆ' ಎಂದಿದ್ದರೂ ಆತ ಏನನ್ನು ಪ್ರತಿಷ್ಠಾಪಿಸಿದ ಎಂಬ ಪ್ರಸ್ತಾಪವಿಲ್ಲ. ಕವಿಕಂದರ್ಪ್ಪ ನಿಧನ ಹೊಂದಿದ ಮೇಲೆ ಆತನ ಸ್ಮರಣಾರ್ಥ ಬಾಳಚಂದ್ರ ಒಂದು ಜಿನಾಲಯವನ್ನು ನಿರ್ಮಿಸಿ, ಜಿನ ಮೂರ್ತಿಯೊಂದನ್ನು ಪ್ರತಿಷ್ಠಾಪಿಸಿದ್ದಾನೆ. ಜಿನ ಮೂರ್ತಿಯನ್ನೇ ಪ್ರತಿಷ್ಠಾಪಿಸಿದ್ದು ಎಂದು ಖಚಿತವಾಗಿ ಹೇಳಬಹುದು. ಅದನ್ನು ತಿಪ್ಪೂರಿನಲ್ಲಿಯೇ ಪ್ರತಿಷ್ಠಾಪಿಸಿದ್ದರ ಉದ್ದೇಶ ಅವನ ಸ್ಥಳ 'ತಿಪ್ಪೂರು' ಆದ್ದರಿಂದಲೇ! ಈ ವಿಷಯದ ಬಗ್ಗೆ ವಿದ್ವಾಂಸರು ಗಮನ ಹರಿಸಬೇಕು. ಈ ಅಂಶ ನಿಜವಾದಲ್ಲಿ ಆಗ ಕಾಣೂರ್ಗಣದ ಪ್ರಖ್ಯಾತನಾದ ಬಾಲಚಂದ್ರ ಮುನಿಯ ಮೂಲಸ್ಥಾನ ತಿಪ್ಪೂರು ಎಂಬುದು ನಿಶ್ಚಿತವಾಗುತ್ತದೆ.

ಕವಿಕಂದರ್ಪ್ಪ ಕನ್ನಡ - ಸಂಸ್ಕೃತ ಎರಡೂ ಭಾಷೆಗಳಲ್ಲೂ ಪ್ರಾವೀಣ್ಯ ಪಡೆದಿದ್ದವನು. ಆದರೆ, ಈತನ ಯಾವ ಕೃತಿಯೂ ದೊರೆತಿಲ್ಲ. 'ಕವಿಚಕ್ರವರ್ತಿ' ಎನಿಸಿದ ಇವನಿಗೆ ಆ ಬಿರುದಿತ್ತ ರಾಜನಾರು ಎಂಬುದೂ ಕೂಡ ಅಸ್ಪಷ್ಟವಾಗಿದೆ.

'ಬಾಳಚಂದ್ರ' ಎಂಬ ಹೆಸರಿನ ಮೂರು ಜನರನ್ನು 'ಕವಿಚರಿತೆ'ಯಲ್ಲಿ ಹೆಸರಿಸಲಾಗಿದೆ. ತಿಪ್ಪೂರು ಶಾಸನೋಕ್ತ ಬಾಲಚಂದ್ರನು ಮೊದಲನೆಯ ಬಾಲಚಂದ್ರ. ಬಾಲಚಂದ್ರನಿಗೆ ಮಗನೊಬ್ಬನಿದ್ದ ಅಂಶವೂ ಈ ಶಾಸನದಿಂದ ವೇದ್ಯವಾಗುತ್ತದೆ.

ತಿಪ್ಪೂರಿನಲ್ಲಿ ನಿಷಧಿಗಳಿರುವುದು ಗಮನಕ್ಕೆ ಬಂದಿದ್ದರೂ ಅವು ಎಷ್ಟಿವೆ ಎಂಬುದನ್ನು ಖಚಿತವಾಗಿ ಗುರುತಿಸಿರಲಿಲ್ಲ. ಇಲ್ಲಿ ಒಟ್ಟು ೬ ನಿಷಧಿಗಳಿವೆ. ಅವುಗಳಲ್ಲಿ ಒಂದು ಶ್ರಾವಕಿಯ ನಿಷಧಿಗಲ್ಲು. ಇವು ಯಾವುವೂ ಶಾಸನೋಕ್ತವಲ್ಲ ಎಂಬುದು ಗಮನಾರ್ಹ.

ಊರೊಳಗೆ ಈಗಿರುವ ಜೈನೇಶ್ವರಿ ಗುಡಿಯು ಹಿಂದೆ ಜೈನ ಬಸದಿಯಾಗಿದ್ದುದಕ್ಕೆ ಆಧಾರಗಳಿವೆ. ಈ ಊಹೆಗೆ ಆಧಾರವಾಗಿ 'ಜೈನೇಶ್ವರಿಗುಡಿ' ಎಂಬ ಹೆಸರು ಈಗಲೂ ಉಳಿದು ಬಂದಿರುವುದರೊಂದಿಗೆ, ಆ ಗುಡಿಯ ಮುಂದೆ ಹಿಂದಿದ್ದ ಕಟ್ಟಡದ ಅವಶೇಷಗಳಾದ ಕಂಭಗಳು, ಬೋದಿಗೆಗಳು... ಇತ್ಯಾದಿಗಳಿವೆ. ಹಿಂದೆ ಇದ್ದ ಬಸದಿಯನ್ನು ನೆಲಸಮ ಮಾಡಿ ಅದೇ ಸ್ಥಳದಲ್ಲಿ ಹಿಂದಿನ ಅಧಿಷ್ಠಾನದ ಮೇಲೆಯೇ ಹೊಸ ಗುಡಿಯನ್ನು ಕಟ್ಟಿರುವ ಕುರುಹುಗಳು ಕಂಡು ಬರುತ್ತವೆ. ಬಹುಶಃ ಆಗ ಆ ಬಸದಿಯಲ್ಲಿದ್ದಿರಬಹುದಾದ ಯಕ್ಷಿಯ ವಿಗ್ರಹವನ್ನು ಹೊಸ ಗುಡಿಯಲ್ಲಿಟ್ಟು ಪೂಜಿಸುತ್ತಿದ್ದರೆಂದು ಕಾಣುತ್ತದೆ. ಕೆಲವು ವರ್ಷಗಳ ಹಿಂದೆ ಇಲ್ಲಿದ್ದ ವಿಗ್ರಹವನ್ನು ಮಂಡ್ಯದ ಕಡೆಯವರು ಕೊಂಡೊಯ್ದರೆಂದು ಸ್ಥಳೀಯರು ಈ ಕ್ಷೇತ್ರ ಕಾರ್ಯದ ವೇಳೆಯಲ್ಲಿ ತಿಳಿಸಿದರು. ಅವರು ಹೇಳುವ ಲಕ್ಷಣದ ಆಧಾರದಿಂದ ಅದು ಪದ್ಮಾವತಿ ಯಕ್ಷಿಯ ಮೂರ್ತಿಯೆಂದು ಗ್ರಹಿಸಬಹುದು. ಪದ್ಮಾವತಿ ಯಕ್ಷಿ ಪಾರ್ಶ್ವನಾಥನ ಯಕ್ಷಿಯಾದ್ದರಿಂದ ಇಲ್ಲಿ ಮೊದಲು ಇದ್ದ ಬಸದಿ ಪಾರ್ಶ್ವನಾಥನದ್ದೇ ಆಗಿರಬೇಕು. ಈಗ ಈ ಗುಡಿಯಿಲ್ಲ. ಹೊನ್ನೆ ಮರದಿಂದ ಮಾಡಿದ ಶಿವಲಿಂಗದಾಕಾರದ ಒಂದು ಮೂರ್ತಿಯಿದೆ. ಅದನ್ನು ಜೈನೇಶ್ವರಿ ಎನ್ನುತ್ತಾರೆ. ಈ ಗುಡಿಯ ಮುಂದಿರುವ ದುಂಡನೆಯ ದೀಪಸ್ತಂಭ ಗಂಗಶೈಲಿಯಲ್ಲಿದೆ. ಆದ ಕಾರಣ ಆ ಬಸದಿಯನ್ನು ಗಂಗರ ಕಾಲದಲ್ಲೇ ಕಟ್ಟಿರಬೇಕು.

ಅರೆತಿಪ್ಪೂರಿನ ಹೊಲವೊಂದರಲ್ಲಿ ಶಾಸನ ರಹಿತ ವೀರಗಲ್ಲೊಂದಿದ್ದು ಅದು ಮೂರು ಹಂತಗಳನ್ನೊಳಗೊಂಡಿದೆ. ಬರಹವಿಲ್ಲದೆಯೇ ಹೋರಾಟದ ದೃಶ್ಯವನ್ನು ಮನಮೋಹಕವಾಗಿ ಚಿತ್ರಿಸಿರುವ ಈ ಶಿಲ್ಪ ಚಾತುರ್ಯದ ಬೆಡಗು, ಅಚ್ಚರಿದಾಯಕ. ಗ್ರಾನೈಟ್ ಶಿಲೆಯ ಉಬ್ಬುಕೆತ್ತನೆಯ

ಈ ವೀರಗಲ್ಲು ಗಂಗರ ಕಾಲದ ಜೈನ ವೀರನೊಬ್ಬ ಯುದ್ಧದಲ್ಲಿ ಮಡಿದು ಜಿನಪಾದ ಸೇರಿದ್ದನೆಂದು ಹೇಳುವರೆ, ಮತ್ತೊಂದು ವೀರಗಲ್ಲು ಬಸ್ತಿಯ ತಿಪ್ಪೂರಿನ ಒಡೆಯನಾದ ದಾಸ ಎಂಬುವವನ ಮಗ ಸಿರಿಂಗನು ಪೆಂಗೊಳೆಯಲ್ಲಿ (ಪೆಣ್ಣುಯಿಲ್) ಹೋರಾಡಿ ಮಡಿದಾಗ ಅವನ ಸ್ಮರಣಾರ್ಥ ಆತನ ಮಗ ತಿಂಮ್ಮಣ್ಣ ಪ್ರತಿಷ್ಠಾಪಿಸಿದ್ದು.

ಒಟ್ಟಾರೆ, ತಿಪ್ಪೂರಿನಲ್ಲಿರುವ ಬಹುಪಾಲು ಅವಶೇಷಗಳು ಜೈನಧರ್ಮದ ಕುರುಹುಗಳೇ ಆಗಿವೆ. ಜೈನ ಧರ್ಮದ ನಂತರ ಕಾಳಾಮುಖ ಶೈವ ಪಂಥ ಹಾಗೂ ವೈಷ್ಣವ ಪಂಥಗಳೂ ಇಲ್ಲಿದ್ದವು. ಇವಕ್ಕೆ ಸಾಕ್ಷಿಯಾಗಿ ಊರಿನಲ್ಲಿ ಜೈನೇಶ್ವರಿ ಗುಡಿಗೆ ಹೋಗುವ ದಾರಿಯಲ್ಲಿರುವ ೨ ಶಾಸನರಹಿತ ಶಿಲ್ಪಗಳಿವೆ. ಅದರಲ್ಲಿ ಒಂದು ವಾಮನ ಮದ್ರೆಕಲ್ಲು. ಇದು ವೈಷ್ಣವ ಧರ್ಮದ ಪ್ರತೀಕವಾದರೆ, ಮತ್ತೊಂದರಲ್ಲಿ ಕಾಳಾಮುಖ ಶೈವ ಪಂಥದ ಜಡೆಮುನಿಯ ಶಿಲ್ಪವಿದೆ. ಅನಂತರ ಹೆಚ್ಚು ಪ್ರಚಾರಗೊಂಡ ವೀರಶೈವ ಧರ್ಮ ಇಂದಿಗೂ ಈ ಊರಿನಲ್ಲಿ ನೆಲೆನಿಂತಿದೆ. ಕ್ರಿ.ಶ. ೮-೯ನೇ ಶತಮಾನದಲ್ಲಿ ಪರಾಕಾಷ್ಠೆಗೇರಿದ್ದ ಜೈನಧರ್ಮ ನಂತರ ಇಲ್ಲಿ ನಶಿಸಿತು.

ಸು. ೧೩ನೇ ಶತಮಾನದ್ದೆಂದು ಗುರುತಿಸುವ ತಿಪ್ಪೂರಿನ ಶಾಸನವೊಂದು 'ಮದ್ದೂರ ಶ್ರೀ ರಾಮಚಂದ್ರ ದೇವರಿಗೆ ಯೀ ತಿಪ್ಪೂರ ಗ್ರಾಮ' ಎಂದು ತಿಳಿಸುತ್ತದೆ. ಜೈನ ಕೇಂದ್ರವಾಗಿದ್ದ ತಿಪ್ಪೂರನ್ನು ಮದ್ದೂರಿನ ವೈಷ್ಣವ ದೇವಾಲಯಕ್ಕೆ ದಾನ ನೀಡಿರುವುದನ್ನು ಗಮನಿಸಿದರೆ ಈ ವೇಳೆಗಾಗಲೇ ಇಲ್ಲಿ ಜೈನ ಸಂಸ್ಕೃತಿ ನಾಶಗೊಂಡು ವೈಷ್ಣವ ಧರ್ಮದ ಪ್ರಾಬಲ್ಯ ಹೆಚ್ಚಾಗಿರಬೇಕು. ಈ ಅಭಿಪ್ರಾಯವನ್ನು ಪುಷ್ಟೀಕರಿಸಲು ಇರುವ ಮತ್ತೊದು ಆಧಾರ ''ಹೊಯ್ಸಳರ ವೀರನಾರಸಿಂಹನ ದಂಡನಾಯಕನಾಗಿದ್ದ ಪೆರುಮಾಳೆ ದಂಣಾಯಕನು ತಿಪ್ಪೂರಿಗೆ ಸುಮಾರು ೨ ಮೈಲಿ ದೂರದಲ್ಲಿರುವ ಬೆಳ್ಳೂರಿನ (ಪ್ರಸಿದ್ಧ ಪಕ್ಷಿಧಾಮ) ಮಾಧವ ದೇವಾಲಯಕ್ಕೆ ಅಲ್ಲಿನ ಕೆಲಸ ಕಾರ್ಯಗಳಿಗಾಗಿ ದಾನ ನೀಡಿದ ೩ ಹಳ್ಳಿಗಳಲ್ಲಿ ತಿಪ್ಪೂರು ಸೇರಿದೆ. ಇದರ ಕಾಲ ಕ್ರಿ.ಶ. ೧೨೮೮ರ ಜೂನ್ ೨೫. ಬೆಳ್ಳೂರಿನ ಮಾಧವ ದೇವಾಲಯಕ್ಕಾಗಿ ತಿಪ್ಪೂರನ್ನು ದಾನ ನೀಡಿದೆಯೆಂದರೆ, ಇಲ್ಲಿ ಜೈನಧರ್ಮ ತನ್ನ ಪ್ರಭಾವವನ್ನು ಕಳೆದುಕೊಂಡಿರಬೇಕು. ವಿಷ್ಣುವರ್ಧನನು ವೈಷ್ಣವ ಧರ್ಮಾವಲಂಬಿಯಾದ ನಂತರ, ರಾಜ್ಯದ ಬಹುಪಾಲು ಜನರೂ ಅದನ್ನು ಅವಲಂಬಿಸಿದ ಸಂದರ್ಭದಲ್ಲಿ ಈ ಬದಲಾವಣೆಯಾಗಿರಬೇಕು. ಆಗ ರಾಮಾನುಜಾಚಾರ್ಯರು ಮೇಲುಕೋಟೆಗೇ ಬಂದು ನೆಲೆನಿಂತರು. ಅದು ತಿಪ್ಪೂರಿಗೆ ಸಮೀಪವೇ ಇರುವುದರಿಂದ ಇಲ್ಲಿ ಆ ಧರ್ಮ ತನ್ನ ಪ್ರಭಾವ ಬೀರಿರಬಹುದು.

೧೨-೧೩ನೇ ಶತಮಾನದ ನಂತರ ಜೈನ-ವೀರಶೈವ ಧರ್ಮಗಳ ನಡುವೆ ಸಂಘರ್ಷದ ಕಾಲದಲ್ಲಿಯೂ ಇಲ್ಲಿನ ಸಂಸ್ಕೃತಿ ನಾಶಗೊಂಡಿರುವ ಸಾಧ್ಯತೆಗಳೂ ಇಲ್ಲದಿಲ್ಲ.

ಚಿಕ್ಕಬೆಟ್ಟದ ಮೇಲಿನ ಗಂಗರ ಕಾಲದ ಬಸದಿಗಳು ಇಟ್ಟಿಗೆ ಮತ್ತು ಗಾರೆಗಳಿಂದ ನಿರ್ಮಿಸಿದವುಗಳಾಗಿದ್ದು ಇವು ತಳಪಾಯವಿಲ್ಲದ ಕಟ್ಟಡಗಳಾಗಿರುವುದರಿಂದ ಪ್ರಕೃತಿ ವಿಕೋಪದಿಂದ ನಾಶಗೊಂಡಿರಬಹುದೆಂದು ವಿದ್ವಾಂಸರು ಊಹಿಸುತ್ತಾರಾದರೂ, ಅಲ್ಲಿನ ಭಗ್ನ ಪ್ರತಿಮೆಗಳು ಈ ಊಹೆ ಅನುಚಿತವೆಂದು ಸಾರುತ್ತವೆ. ಬಹುಶಃ ಸಂಘರ್ಷದಿಂದಲೇ ಅವು ನಾಶವಾಗಿರಬೇಕು.

ಯಾವ ಕಾರಣದಿಂದಲೇ ಆಗಲಿ, ಜೈನಧರ್ಮದ ಉತ್ಕೃಷ್ಟ ಜೀವನದ ಒಂದಂಶವಾಗಿದ್ದ ತಿಪ್ಪೂರು ಇಂದು ಅವನತಿ ಹೊಂದಿರುವುದು ವಾಸ್ತವ ಕಠೋರ ಸತ್ಯ.

ಇಂದು ತಿಪ್ಪೂರು ಕೂಡ ಸಾಮಾನ್ಯವಾದ ಒಂದು ಹಳ್ಳಿಯಂತೆಯೇ ಜೀವನ ಸಾಗಿಸುತ್ತಿದೆ. ಒಂದು ಕಾಲದಲ್ಲಿ ಪುಣ್ಯಕ್ಷೇತ್ರವಾಗಿದ್ದ ಸ್ಥಳವಿಂದು ಅವಜ್ಞೆಗೊಳಗಾಗಿರುವುದು ಸಾಂಸ್ಕೃತಿಕ ನಷ್ಟ. ನೆಲದ ಮರೆಯ ನಿಧಾನದಂತಿರುವ ತಿಪ್ಪೂರಿನ ಜೈನಧರ್ಮದ ಸಂಸ್ಕೃತಿಯ ಪ್ರಾಚೀನ ಅಂಶಗಳನ್ನು ಪ್ರಕಾಶಗೊಳಿಸುವ ಪ್ರಯತ್ನವೇ ಈ ಪ್ರಬಂಧ.

# ಜಿನಶಾಸನ ದೇವತೆ ಅಂಬಿಕಾಯಕ್ಷಿಯ ಕೆಲವು ಶಿಲ್ಪಗಳು

ಎಂ. ಜಿ. ಮಂಜುನಾಥ

ಮಾನವ ತನಗಿಂತಲೂ ಮಿಗಿಲಾದ ಮತ್ತೊಂದು ಅಲೌಕಿಕವಾದ ಶಕ್ತಿ ಈ ಜಗತ್ತಿನ ಲ್ಲಿದೆಯೆಂದು ತಿಳಿದಂದಿನಿಂದಲೇ ತನ್ನ ಆಸೆಗಳ ಪೂರೈಕೆಗಾಗಿ, ಹಾಗೂ ತನ್ನ ಕಷ್ಟನಷ್ಟಗಳ ಪರಿಹಾರಕ್ಕೋಸ್ಕರ ಆ 'ಶಕ್ತಿ'ಯನ್ನು ಆರಾಧಿಸತೊಡಗಿದ. ಈ ರೀತಿ ಮಾನವನ ಆರಾಧನೆಗೆ ಮೊತ್ತಮೊದಲು ಗುರಿಯಾದ ದೈವವೆಂದರೆ ಪ್ರಕೃತಿ. ಆ ಪ್ರಕೃತಿಯನ್ನೇ ದೈವವನ್ನಾಗಿ ಕಲ್ಪಿಸಿಕೊಂಡ ಮಾನವರು ನಂತರದ ಕಾಲದಲ್ಲಿ ದೇವರುಗಳಿಗೆ ಒಂದೊಂದು ರೂಪವನ್ನು ಹಾಗೂ ಹೆಸರನ್ನು ಕಲ್ಪಿಸಿಕೊಂಡು ಅವುಗಳಿಗೆ ಒಂದು ಆಕಾರವನ್ನು ಕೊಟ್ಟು ಮಣ್ಣು, ಮರ, ಹಾಗೂ ಶಿಲೆಯ ಮೂರ್ತಿಗಳನ್ನಾಗಿ ನಿರ್ಮಿಸಿ ಪೂಜಿಸುವ ಪದ್ಧತಿಯನ್ನು ರೂಢಿಸಿಕೊಂಡರು.

ತದನಂತರದ ಕಾಲದಲ್ಲಿ ತಾಯ್ತನದ ಹಿರಿಮೆ ಮಾತೃದೇವತೆಯ ಆರಾಧನೆ ಹೆಚ್ಚಿನ ಮಹತ್ವ ಪಡೆದುಕೊಳ್ಳಲು ಕಾರಣವಾಯಿತು. ತನ್ಮೂಲಕ ಭಾರತದಾದ್ಯಂತ ಮಾತೃದೇವತೆಗಳ ವಿವಿಧ ರೂಪಗಳ ಹಾಗೂ ವಿವಿಧ ಹೆಸರಿನ ಸ್ತ್ರೀಮೂರ್ತಿಗಳ ಆರಾಧನೆಯೂ ಅಸ್ತಿತ್ವಕ್ಕೆ ಬಂದಿತು. ಹೀಗೆ ಭಾರತದಲ್ಲಿನ ಎಲ್ಲ ಧರ್ಮಗಳಲ್ಲಿಯೂ ಮಾತೃದೇವತೆಗಳ ಆರಾಧನೆ ಸ್ಥಾನಪಡೆದುಕೊಂಡಿರುವುದನ್ನು ಗಮನಿಸಬಹುದು.

ಅದೇ ರೀತಿಯಲ್ಲಿ ಜೈನಧರ್ಮದಲ್ಲಿಯೂ ಸಹ ಮಾತೃದೇವತಾರಾಧನೆಯು ಯಕ್ಷಿಯರ (ಜಿನಶಾಸನ ದೇವತೆಗಳ) ರೂಪದಲ್ಲಿ ಸ್ಥಾನಪಡೆದುಕೊಂಡಿರುವುದನ್ನು ಗುರ್ತಿಸಬಹುದು.

ಜೈನ ತೀರ್ಥಂಕರರು ವೀತರಾಗರು, ಮೋಕ್ಷಾಭಿಲಾಷಿಗಳಿಗೆ, ಕೇವಲಜ್ಞಾನಾಭಿಲಾಷಿಗಳಿಗೆ ಮಾರ್ಗದರ್ಶಕರಾಗಿರುವಂತಹವರು. ಲೌಕಿಕಾಸಕ್ತಿಗಳಿಂದ ತೀರ್ಥಂಕರರನ್ನು ಯಾರೂ ಪೂಜಿಸುವಂತಿಲ್ಲ. ಏಕೆಂದರೆ ಅವರು ಯಾವುದೇ ರೀತಿಯ ವರಗಳನ್ನಾಗಲೀ, ಭೋಗಭಾಗ್ಯಗಳನ್ನಾಗಲೀ ನೀಡುವಂತಹವರಲ್ಲವಾದ್ದರಿಂದ ಜನಸಾಮಾನ್ಯರು (ಶ್ರಾವಕರು) ತಮ್ಮ ಆಸೆ ಆಮಿಷಗಳನ್ನು ಪೂರೈಸಿಕೊಳ್ಳಲು ವರಗಳನ್ನು ನೀಡುವಂತಹ ಜಿನ ಶಾಸನದೇವತೆಗಳ ಮೊರೆಹೋಗುವುದು ನಡೆಯಲಾರಂಭಿಸಿತು. ಹೀಗಾಗಿ ಯಕ್ಷಯಕ್ಷಿಯರು ಜೈನಧರ್ಮದಲ್ಲಿ ಅತ್ಯಂತ ಮಹತ್ವವನ್ನು ಪಡೆದುಕೊಂಡರು ಎನ್ನಬಹುದು.

'ಜನಸಾಮಾನ್ಯರು ಅನುಗ್ರಹ ತೋರಿಸುವ ಅನ್ಯದೇವತೆಗಳ ಕಡೆ ಮೊರೆಯಿಟ್ಟಾಗ ಜೈನಧರ್ಮವನ್ನು ಉಳಿಸಿಕೊಳ್ಳಲು ಆಚಾರ್ಯರು ಉಪಸರ್ಗನಿವಾರಕರಾದ ಯಕ್ಷಯಕ್ಷಿಯರನ್ನು ಜನಸಾಮಾನ್ಯರ ಮುಂದೆ ಪ್ರತಿಷ್ಠಾಪಿಸಬೇಕಾಯಿತು'.[೧]

---

೧. Dr. T.G. Kalghatagi, Jaina View of life. 177

ಇಪ್ಪತ್ತನಾಲ್ಕು ಮಂದಿ ತೀರ್ಥಂಕರರಲ್ಲಿ ಒಬ್ಬೊಬ್ಬ ತೀರ್ಥಂಕರರಿಗೂ ಪ್ರತ್ಯೇಕವಾಗಿ ಒಬ್ಬೊಬ್ಬರು ಯಕ್ಷಯಕ್ಷಿಯರು ಇರುತ್ತಾರೆ. ತೀರ್ಥಂಕರರ ಬಲಭಾಗದಲ್ಲಿ ಯಕ್ಷ ಹಾಗೂ ಎಡಭಾಗದಲ್ಲಿ ಯಕ್ಷಿಯರಿರುತ್ತಾರೆ. "ಇವರನ್ನು ತೀರ್ಥಂಕರರ ರಕ್ಷಕರೆಂದೂ ಹೇಳುತ್ತಾರೆ. ಅಂದರೆ ತೀರ್ಥಂಕರರಿಗೆ ತಪಸ್ಸಿನ ಕಾಲದಲ್ಲಿ ಉಂಟಾಗುವ ಉಪಸರ್ಗಾದಿಗಳನ್ನು ಅವರು ನಿವಾರಿಸಿಕೊಳ್ಳುವುದಿಲ್ಲ. ತೀರ್ಥಂಕರರು ತಮ್ಮ ಪಾಡಿಗೆ ತಾವು ತಟಸ್ಥರಾಗಿ, ನಿರ್ಲಿಪ್ತರಾಗಿ, ಸ್ಥಿತಪ್ರಜ್ಞರಾಗಿ, ಅಂತರ್ಮುಖಿಗಳಾಗಿರುತ್ತಾರೆ. ಅವರು ತಮಗುಂಟಾದ ತೊಂದರೆಗಳನ್ನು ಕಳೆಯುವಂತೆ ಕೂಡ ಕೇಳಿಕೊಳ್ಳುವುದಿಲ್ಲ, ಮನಸ್ಸಿನಲ್ಲೂ ಅಂಥ ಪರಿಹಾರದ ಆಲೋಚನೆ ಮಾಡುವುದಿಲ್ಲ. ಆದರೆ ಯಕ್ಷ ಯಕ್ಷಿಯರೇ ಆತ್ಮ ಪ್ರೇರಣೆಯಿಂದ ತಾವಾಗಿ ಮುಂದಾಗುತ್ತಾರೆ. ಅನಂತರದ ಕಾಲದಲ್ಲಿ ಯಕ್ಷ ಯಕ್ಷಿಯರಿಗೆ ಸ್ವತಂತ್ರವಾದ ಅಸ್ತಿತ್ವ ಲಭಿಸಿತು."[೨] ಈ ಹಿನ್ನೆಲೆಯಲ್ಲಿ ಯಕ್ಷಯಕ್ಷಿಯರು ತೀರ್ಥಂಕರರಿಗೆ ಒದಗಿದ ಉಪಸರ್ಗಗಳನ್ನೂ (ಕಷ್ಟ, ಕೋಟಲೆ) ಸಹ ಪರಿಹರಿಸಿದವರು ಎಂಬ ಭಾವನೆ ಜನಸಾಮಾನ್ಯರ ಮನದಲ್ಲಿ, ನಮ್ಮ ಕಷ್ಟಗಳನ್ನೂ ಸಹ ಪರಿಹರಿಸುತ್ತಾರೆ'ಂಬ ಭಾವನೆ ಆಳವಾಗಿ ಬೇರೂರುವುದರೊಂದಿಗೆ ಯಕ್ಷಯಕ್ಷಿಯರ ಆರಾಧನೆ ಅತ್ಯಂತ ಪ್ರಬಲವಾಯಿತು.

ತಿಲೋಯ ಪಣ್ಣತ್ತಿ, ಪ್ರವಚನ ಸಾರೋದ್ಧಾರ, ಅಭಿದಾನ ಚಿಂತಾಮಣಿ, ಪ್ರತಿಷ್ಠಾರ ಸಂಗ್ರಹ, ಪ್ರತಿಷ್ಠಾ ಸಾರೋದ್ಧಾರ, ಪ್ರತಿಷ್ಠಾ ತಿಲಕ, ನಿರ್ವಾಣ ಕಲಿಕಾ, ಆಚಾರ ದಿನಕರ, ಅಪರಾಜಿತ ಪೃಚ್ಛಾ, ರೂಪಮಂಡನ ಮುಂತಾದ ಶಾಸ್ತ್ರಗ್ರಂಥಗಳಲ್ಲಿ ಈ ಜಿನಶಾಸನ ದೇವತೆಗಳ, ರೂಪ, ಬಣ್ಣ, ಲಾಂಛನ, ಆಯುಧಗಳು, ಹಾಗೂ ವಾಹನಗಳು ಮುಂತಾದವುಗಳ ಬಗ್ಗೆ ವಿವರಗಳು ದೊರೆಯುತ್ತವೆ.

"ಈ ಯಕ್ಷಯಕ್ಷಿಯರು ದೇಗುಲಗಳಲ್ಲಿ ಪ್ರತಿಷ್ಠೆಯನ್ನು ಪಡೆದುದು ಕ್ರಿ.ಪೂ. ೧ನೆಯ ಶತಮಾನದಿಂದ ಎಂದು ಡಾ. ಎ.ವಿ. ನರಸಿಂಹಮೂರ್ತಿಯವರು ಅಭಿಪ್ರಾಯಪಡುತ್ತಾರೆ"[೩]

"ಇಪ್ಪತ್ತೆರಡನೆಯ ತೀರ್ಥಂಕರರಾದ ನೇಮಿನಾಥರ ಯಕ್ಷಿಯ ಹೆಸರು ಆಮ್ರಾ ಅಥವಾ ಅಂಬಿಕಾ. ಈ ಎರಡು ಹೆಸರುಗಳಲ್ಲದೆ ಈಕೆಗೆ ಇನ್ನೂ ಹಲವಾರು ಹೆಸರುಗಳಿವೆ. ಅವು ಯಾವುವೆಂದರೆ - ಅಂಬಾ, ಅಂಬಿಲಾ, ತಾರಾ, ಗೌರೀ, ವಜ್ರಾ, ಆಮ್ರಾ, ಕೂಷ್ಮಾಂಡೀ. ಈ ಹೆಸರುಗಳಿಂದ ಶುಭಚಂದ್ರ ಆಚಾರ್ಯನು ಈಕೆಯನ್ನು ವರ್ಣಿಸಿದ್ದಾನೆ. ತಿಲೋಯ ಪಣ್ಣತ್ತಿಯಲ್ಲಿ ಕೂಷ್ಮಾಂಡೀ ಎಂದೂ, ಪ್ರವಚನ ಸಾರೋದ್ಧಾರದಲ್ಲಿ ಅಂಬಾ ಎಂದೂ, ಅಪರಾಜಿತ ಪೃಚ್ಛದಲ್ಲಿ ಚಾಮುಂಡಾ ಹಾಗೂ ಅಂಬಿಕಾ ಎಂದೂ, ಅಭಿದಾನ ಚಿಂತಾಮಣಿಯಲ್ಲಿ ಅಂಬಾ ಎಂದೂ ತ್ರಿಷಷ್ಠಿ ಶಲಾಕಾಪುರುಷ ಚರಿತ್ರೆಯಲ್ಲಿ ಕೂಷ್ಮಾಂಡೀ ಎಂದೂ ಹೇಳಲಾಗಿದೆ. ಅಂಬಿಕಾಯಕ್ಷಿಗೆ ಇರುವ ಇನ್ನೊಂದು ಹೆಸರು 'ಧರ್ಮಾದೇವೀ'. ಆಚಾರ ದಿನಕರದಲ್ಲಿ ಈ ಯಕ್ಷಿಗೆ ಅಂಬಾ ಎಂದೂ, ನಿರ್ವಾಣಕಲಿಕಾದಲ್ಲಿ ಕೂಷ್ಮಾಂಡೀ ಎಂದೂ, ಅಮರ ಕಾವ್ಯದಲ್ಲಿ ಅಂಬಿಕಾ ಎಂದೂ ನಮೂದಿತವಾಗಿದೆ. ಈಕೆಯು ಹರಿದ್ವರ್ಣೆ, ಸಿಂಹವಾಹನೆ, ದ್ವಿಭುಜೆ, ಎಂದು ದಿಗಂಬರ ಪರಂಪರೆಯು ಬಣ್ಣಿಸಿದರೆ ಶ್ವೇತಾಂಬರ ಪರಂಪರೆಯ ಪ್ರಕಾರ ಈಕೆಯು ಸುವರ್ಣ ಸಮಾನವಾದ ಪೀತವರ್ಣೆ, ಚತುರ್ಭುಜೆ. ಶುಭಚಂದ್ರ ಆಚಾರ್ಯರು ಅಂಬಿಕಾ ಕಲ್ಪದಲ್ಲಿ ಈಕೆಯ ಭುಜಗಳ

---

೨. ಡಾ. ಹಂಪನಾ. ಯಕ್ಷಯಕ್ಷಿಯರು, ಪುಟ. 27

೩. ತೀರ್ಥಂಕರ, ಪಾರ್ಶ್ವನಾಥ, ಒಂದು ಅಧ್ಯಯನ. ಸಂ. ಡಾ. ಟಿ.ಜಿ. ಕಲಘಾಟಗಿ ಪುಟ. 170

ಸಂಖ್ಯೆಯನ್ನು ಮೂರು ಸ್ಥಿತಿಗಳಲ್ಲಿ ಮೂರು ಬಗೆಯಾಗಿ ಹೇಳಿದ್ದಾರೆ. ಈಕೆಯು ಅರಿಷ್ಟನೇಮಿಯ ಪಾದಮೂಲದಲ್ಲಿ ಸ್ಥಿತಳಾದಾಗ ಅಷ್ಟಭುಜೆ, ಸಿಂಹಾಸನಸ್ಥಳಾದಾಗ ಚತುರ್ಭುಜೆ, ಜಿನಬಿಂಬದ ಬಳಿಯಲ್ಲಿದ್ದಾಗ ದ್ವಿಭುಜೆಯೆಂದು ವಿವರಿಸಲಾಗಿದೆ. ಈಕೆಯು ಮಾವಿನಮರದ ನೆರಳನಲ್ಲಿರುತ್ತಾಳೆ. ತನ್ನ ವಾಮಕಟಿಯಲ್ಲಿ ತನ್ನ ಮಗ ಪ್ರಿಯಂಕರನನ್ನು ಕೂಡಿಸಿಕೊಂಡಿರುತ್ತಾಳೆ. ಅಪರಾಜಿತ ಪೃಚ್ಛದ ಪ್ರಕಾರ ಈಕೆಯು ಬಲಗೈಯಲ್ಲಿ ವರದ ಮುದ್ರೆಯನ್ನು ಎಡದ ಕೈಯಲ್ಲಿ ಫಲವನ್ನೂ ಹಿಡಿದಿರುತ್ತಾಳೆ. ಆಶಾಧರನ ಪ್ರತಿಷ್ಠಾ ಸಾರೋದ್ಧಾರದ ಪ್ರಕಾರ ಈಕೆಯ ಬಲಗೈ ಬೆರಳುಗಳು ಆಕೆಯ ಮಗ ಶುಭಂಕರನ ಕೈಯನ್ನು, ಎಡಗೈಯಲ್ಲಿ ಒಂದು ಮಾವಿನ ಚಿಗುರಿನ ಗೊಂಚಲನ್ನು, ತೊಡೆಯ ಮೇಲೆ ಕುಳಿತ ಇನ್ನೊಬ್ಬ ಮಗ ಪ್ರಿಯಂಕರನ ಸಲುವಾಗಿ ಹಿಡಿದಿರುವುದಾಗಿ ವಿವರಿಸಿದ್ದಾರೆ. ಕೆಲವು ವರ್ಣನೆಗಳ ಪ್ರಕಾರ ಈಕೆಯ ಮಕ್ಕಳ ಹೆಸರು ಸಿದ್ಧ ಮತ್ತು ಬುದ್ಧ ಎಂದಿದೆ”.[೪]

ಕರ್ನಾಟಕಕ್ಕೆ ಜೈನಧರ್ಮವು ಕ್ರಿ.ಪೂ.ದ ಶತಮಾನಗಳಲ್ಲಿಯೇ ಬಂದರೂ ಸಹ ಇಲ್ಲಿ ಜೈನ ಬಸದಿಗಳು ನಿರ್ಮಾಣವಾಗುವುದಕ್ಕೆ ಸಿಗುವ ಪ್ರಾಚೀನ ಉಲ್ಲೇಖಗಳು ಕ್ರಿ.ಶ. ಆರನೆಯ ಶತಮಾನದಿಂದ ಈಚಿನವುಗಳಾಗಿವೆ. ಕ್ರಿ.ಶ. ೬ನೆಯ ಶತಮಾನಕ್ಕಿಂತಲೂ ಹಿಂದಿನ ಕಾಲದಲ್ಲಿಯೂ ಸಹ ಬಸದಿಗಳು ನಿರ್ಮಿತವಾಗಿದ್ದರೂ ಸಹ ನಮಗೆ ಅವುಗಳ ಬಗೆಗೆ ಖಚಿತವಾದ ದಾಖಲೆಗಳು (ಆಧಾರ) ಸಿಗುವುದಿಲ್ಲ. ಕರ್ನಾಟಕದಲ್ಲಿ ನಮಗೆ ಪ್ರಸ್ತುತ ದೊರೆಯುವ ಅತ್ಯಂತ ಪ್ರಾಚೀನವಾದ ಬಸದಿಯೆಂದರೆ ಕ್ರಿ.ಶ. ೬೩೪ರ ಐಹೊಳೆಯ ಮೇಗುತಿ ಜಿನಾಲಯ. ಇಮ್ಮಡಿ ಪುಲಿಕೇಶಿಯ ಆಶ್ರಿತನಾದ ರವಿಕೀರ್ತಿಯಿಂದ ನಿರ್ಮಿತವಾದ ಈ ಜಿನಾಲಯ ಇಂದಿಗೂ ತನ್ನ ಮೂಲ ಸ್ವರೂಪವನ್ನುಳಿಸಿಕೊಂಡಿದೆ.

“ಮೇಗುತಿ ಜಿನಾಲಯದ ಗರ್ಭಗುಡಿಯಲ್ಲಿ ಭಗ್ನ ತೀರ್ಥಂಕರ (ಬಹುಶಃ ಮಹಾವೀರ)ನ ಮೂರ್ತಿ ಇದೆ. ಅಂತರಾಳದಲ್ಲಿ ಅತ್ಯಂತ ಚೆಲುವಾಗಿ ಕೆತ್ತಿದ ಸಿಂಹ ಲಾಂಛನವುಳ್ಳ ಅಂಬಿಕೆಯ ಉಬ್ಬು ಶಿಲ್ಪವಿತ್ತು. (ಇತ್ತೀಚೆಗೆ ಇದನ್ನು ಇದೇ ಊರಿನ ವಸ್ತು ಸಂಗ್ರಹಾಲಯಕ್ಕೆ ಸಾಗಿಸಲಾಗಿದೆ). ಅಂಬಿಕೆ ಮಹಾವೀರ ತೀರ್ಥಂಕರನ ಯಕ್ಷಿ” ಎಂದು ಡಾ.ಅ. ಸುಂದರ ತಪ್ಪಾಗಿ ವ್ಯಾಖ್ಯಾನಿಸಿದ್ದಾರೆ.[೫] ವಾಸ್ತವವಾಗಿ ಇದು ನೇಮಿನಾಥ ತೀರ್ಥಂಕರರ ಬಸದಿ. ಅಲ್ಲಿರುವ ತೀರ್ಥಂಕರರು ನೇಮಿನಾಥರು, ಹಾಗೂ ಯಕ್ಷಿ ಅಂಬಿಕೆ. ಅಂಬಿಕಾ ಯಕ್ಷಿಯು ಮಹಾವೀರರ ಯಕ್ಷಿಯಲ್ಲ, ನೇಮಿನಾಥ ತೀರ್ಥಂಕರರ ಯಕ್ಷಿ.

ಕರ್ನಾಟಕದಲ್ಲಿ ನಮಗೆ ಉಪಲಬ್ದವಾಗಿರುವ ಅತ್ಯಂತ ಪ್ರಾಚೀನ ಅಂಬಿಕಾ ಶಿಲ್ಪವೆಂದರೆ ಇದೇ ಎಂದು ಹೇಳಬಹುದು. ನಸುಗೆಂಪು ಅಥವಾ ತಿಳಿಹಳದಿ ಬಣ್ಣದ ಮರಳು ಕಲ್ಲಿನಲ್ಲಿ (Sand Stone) ನಿರ್ಮಿಸಲಾಗಿರುವ ಈ ಮೂರ್ತಿಯು ಉಬ್ಬುಶಿಲ್ಪದಂತೆ ಕಂಡರಿಸಲಾಗಿದೆ.[೬] ಪ್ರಸ್ತುತ ಲೇಖನದಲ್ಲಿ ಆರು ಬೇರೆಬೇರೆ ಶತಮಾನಗಳಿಗೆ ಸೇರಿದ ಅಂಬಿಕೆಯ ಆರು ಶಿಲ್ಪಗಳನ್ನು ಕುರಿತು ಪರಾಮರ್ಶಿಸಲಾಗಿದೆ.

---

೪. ಡಾ. ಹಂಪನಾ. ಯಕ್ಷಯಕ್ಷಿಯರು ಪುಟ. 137

೫. ಕರ್ನಾಟಕ ಮತ್ತು ಜೈನ ಸಂಸ್ಕೃತಿ, ಪುಟ. 140

೬. ಇದರ ಚಿತ್ರ ನನ್ನ ಬಳಿ ಇಲ್ಲದಿರುವುದರಿಂದ ಈ ಶಿಲ್ಪದ ಬಗ್ಗೆ ಪ್ರಸ್ತುತ ಲೇಖನದಲ್ಲಿ ಹೆಚ್ಚಿನ ಚರ್ಚೆ ನಡೆಸುವುದಿಲ್ಲ.

**೧. ಹೊಂಬುಜ (ಹುಂಚ)ದ ಬೋಗಾರ ಬಸದಿಯ ಹೊರಗಡೆಯಿರುವ ಅಂಬಿಕೆ**

ಎರಡು ಅಡಿ ಎತ್ತರದ ಈ ಮೂರ್ತಿಯು ಮರಳುಗಲ್ಲಿನಿಂದ (Sand Stone) ನಿರ್ಮಿತವಾಗಿದೆ. ಸುಮಾರು ಮೂರು ಅಂಗುಲ ಎತ್ತರದ ಪೀಠದ ಮೇಲೆ ಲಲಿತಾಸನದಲ್ಲಿ ಕುಳಿತಿರುವ ಅಂಬಿಕೆಯು ದ್ವಿಭುಜವನ್ನು ಹೊಂದಿದ್ದು, ತನ್ನ ಬಲಗೈಯ್ಯಲ್ಲಿ ಮಾವಿನ ಗೊಂಚಲನ್ನು ಹಿಡಿದಿದ್ದಾಳೆ. ಎಡಗೈಯ್ಯನ್ನು ತನ್ನ ಎಡ ತೊಡೆಯ ಮೇಲೆ ಕೂಡಿಸಿಕೊಂಡಿರುವ ತನ್ನ ಮಗ ಪ್ರಿಯಂಕರನ ಬೆನ್ನಮೇಲೆ ಇಟ್ಟಿದ್ದಾಳೆ. ಆಕೆಯ ಕೊರಳಿನಲ್ಲಿ ಸರಗಳು, ಕೈಗಳಲ್ಲಿ ಬಳೆಗಳು, ಕಾಲುಗಳಲ್ಲಿ ಕಡಗ ಹಾಗೂ ಗೆಜ್ಜೆಗಳನ್ನೂ ಧರಿಸಿದ್ದಾಳೆ. ಆಕೆಯ ಉದರವನ್ನು ಉದರ ಬಂಧವು ಆವರಿಸಿದೆ. ಕಿವಿಗಳಲ್ಲಿ ಮಕರ ಕುಂಡಲ, ಹಾಗೂ ತಲೆಯಮೇಲೆ ಸುಂದರವಾದ ಕರಂಡ ಮುಕುಟವೂ ಇದೆ. ಕಿರೀಟದ ಹಿಂದೆ ಸಣ್ಣದಾದ ದುಂಡನೆಯ ಪ್ರಭಾವಳಿಯಿದೆ. ಅಂಬಿಕೆಯ ಹಿಂದೆ ಆಕೆಯ ಪೀಠಕ್ಕೆ ಅಂಟಿಕೊಂಡಂತೆ ಅರೆಗಂಭಗಳೂ, ಅವುಗಳ ಮೇಲ್ಭಾಗದಲ್ಲಿ ಮಕರ ತೋರಣವೂ ಇರುವ ಭಗ್ನವಾದ ಪ್ರಭಾವಳಿಯಿದೆ. ಆಕೆಯ ಸಿಂಹಕಟಿಯಿಂದ ಮುಂಗಾಲಿನವರೆಗೆ ಇರುವ ವಸ್ತ್ರವು ನೆರಿಗೆಗಳಿಂದ ಕೂಡಿದ್ದು ಸ್ಪಷ್ಟವಾಗಿ ಕಾಣುವಂತೆ ಕೆತ್ತುವಲ್ಲಿ ಶಿಲ್ಪಿಯು ಸಫಲನಾಗಿದ್ದಾನೆ. ಆಸುಪಾಸಿನಲ್ಲಿ ಎಲ್ಲಿಯೂ ದೊರೆಯದ ಮರಳುಗಲ್ಲನ್ನು ಈ ಉದ್ದೇಶಕ್ಕಾಗಿಯೇ ತರಿಸಿ ಈ ಮೂರ್ತಿಯನ್ನು ನಿರ್ಮಿಸಲಾಗಿದೆ. ಈ ಶಿಲ್ಪದ ಲಕ್ಷಣಗಳನ್ನು ಗಮನಿಸಿದರೆ ಇದು ನಿಸ್ಸಂಶಯವಾಗಿ ೭ನೆಯ ಶತಮಾನದ ಮೂರ್ತಿಯೆಂದು ಹೇಳಬಹುದು.

**೨. ಮಲೆಯೂರು ಗ್ರಾಮದ ವಿಜಯ ಪಾರ್ಶ್ವನಾಥಸ್ವಾಮಿ ಬಸದಿಯಲ್ಲಿರುವ ಅಂಬಿಕಾ ಯಕ್ಷಿ**

ಮೂರು ಅಡಿ ಎತ್ತರದ ಈ ಮೂರ್ತಿಯು ಅತ್ಯಂತ ಕಠಿಣವಾದ ಕಣಶಿಲೆಯಲ್ಲಿ (ಗ್ರಾನೈಟ್) ನಿರ್ಮಿತವಾಗಿದೆ. ಒಂದೂವರೆ ಅಡಿ ಎತ್ತರದ ಪೀಠದ ಮೇಲೆ ಸುಖಾಸೀನ ಭಂಗಿಯಲ್ಲಿರುವ ಈಕೆಯು ದ್ವಿಭುಜೆ. ಈಕೆಯ ಬಲಗೈಯ್ಯಲ್ಲಿ ಮೂರು ಮಾವಿನ ಕಾಯಿಗಳ ಗೊಂಚಲೊಂದನ್ನು ಹಾಗೂ ಎಡಗೈಯ್ಯಲ್ಲಿ ಫಲವೊಂದನ್ನು (ಕೂಷ್ಮಾಂಡ?) ಹಿಡಿದಿದ್ದಾಳೆ. ಯಜ್ಞೋಪವೀತ, ಕೊರಳಲ್ಲಿ ಸರ, ಚಿಂತಾಕ ಹಾಗೂ ಕಟ್ಟಾಣಿಯನ್ನು, ಕೈಗಳಲ್ಲಿ ಕಡಗ, ತೋಳುಗಳಲ್ಲಿ ತೋಳಬಂದಿ, ವಂಕಿ, ಕಾಲುಗಳಲ್ಲಿ ಕಾಲಂದುಗೆ, ಗೆಜ್ಜೆಯಸರ, ಕಿವಿಗಳಲ್ಲಿ ದೊಡ್ಡದಾದ ಕರ್ಣಕುಂಡಲ, ತಲೆಯಮೇಲೆ ಪರ್ವತಾಕಾರದ ಕರಂಡ ಮುಕುಟವನ್ನು ಧರಿಸಿದ್ದಾಳೆ. ಆ ಕಿರೀಟದಲ್ಲಿ ಸಣ್ಣದಾದ ಜಿನಬಿಂಬವಿದೆ. ಕಿರೀಟದಿಂದ ಹೊರ ಬಂದ ಕೂದಲು ಗುಂಗರು ಗುಂಗುರಾಗಿದ್ದು ಭುಜದವರೆಗೆ ಇಳಿಬಿದ್ದಿದೆ. ಆಕೆಯ ಎಡಬಲಗಳಲ್ಲಿ ಇಬ್ಬರು ಬಾಲಕರ ಉಬ್ಬು ಶಿಲ್ಪವಿದೆ. ಇವರು ಆಕೆಯ ಇಬ್ಬರು ಪುತ್ರರಾದ ಶುಭಂಕರ, ಹಾಗೂ ಪ್ರಿಯಂಕರರೆಂದು ಗುರ್ತಿಸಬಹುದು. ಕೆಲವು ವರ್ಣನೆಗಳ ಪ್ರಕಾರ ಈಕೆಯ ಪುತ್ರರ ಹೆಸರು ಸಿದ್ಧ ಮತ್ತು ಬುದ್ಧ ಎಂದು ತಿಳಿಯುತ್ತದೆ. ಈಕೆಯ ಪೀಠದ ಮುಂಭಾಗದಲ್ಲಿ ವಾಹನವಾದ ಸಿಂಹದ ಸಣ್ಣ ಉಬ್ಬು ಶಿಲ್ಪವಿದೆ. ಗಂಗರ ಅತ್ಯಂತ ಶ್ರೇಷ್ಠ ಮೂರ್ತಿ ಶಿಲ್ಪಗಳಲ್ಲಿ ಒಂದೆಂದು ಈ ಅಂಬಿಕೆಯ ಶಿಲ್ಪವನ್ನು ಹೇಳಬಹುದು. ಇದು ಸುಮಾರು ೮ನೆಯ ಶತಮಾನದ ಶಿಲ್ಪವೆಂದು ಇದರ ಲಕ್ಷಣಗಳ ಆಧಾರದ ಮೇಲೆ ಗುರ್ತಿಸಬಹುದು.

**೩. ಕಂಭದಹಳ್ಳಿಯ ಪಂಚಕೂಟ ಬಸದಿಯ ಕೂಷ್ಮಾಂಡಿನೀ ಯಕ್ಷಿ**

ಮೂರು ಅಡಿ ಎತ್ತರದ ಈ ಶಿಲ್ಪವು ಸ್ವಲ್ಪ ಮೃದುವಾದ ಕಪ್ಪುಬಣ್ಣದ ಕಣಶಿಲೆಯದಾಗಿದ್ದು

(ಗ್ರಾನೈಟ್) ಒಂದೂವರೆ ಅಡಿ ಎತ್ತರದ ಪೀಠದ ಮೇಲೆ ಸುಖಾಸನದಲ್ಲಿ ಕುಳಿತ ಭಂಗಿಯಲ್ಲಿದೆ. ದ್ವಿಭುಜೆಯಾದ ಈಕೆಯು ಬಲಗೈಯ್ಯಲ್ಲಿ ಮಾವಿನ ಕಾಯಿಯ ಗೊಂಚಲನ್ನು ಹಾಗೂ ಎಡಗೈಯ್ಯಲ್ಲಿ ಬೀಜಪೂರವನ್ನು (ಕೂಷ್ಮಾಂಡ?) ಹಿಡಿದಿದ್ದಾಳೆ. ಕೈಗಳಲ್ಲಿ ಕಡಗ, ತೋಳುಗಳಲ್ಲಿ ವಂಕಿ, ಭುಜಕೀರ್ತಿ, ಕೊರಳಲ್ಲಿ ಹಲವು ರೀತಿಯ ಸರಗಳು, ಕರ್ಣಗಳಲ್ಲಿ ಕುಂಡಲ, ಕಾಲುಗಳಲ್ಲಿ ಕಾಲುಂದುಗೆ, ಬೆರಳುಗಳಲ್ಲಿ ಉಂಗುರಗಳನ್ನು ಧರಿಸಿದ್ದಾಳೆ. ಈಕೆಯ ಕೊರಳಿನಿಂದ ಸ್ತನಗಳ ಮಧ್ಯೆ ಇಳಿಬಿದ್ದಿರುವ ಹಾರಗಳು ಉದರವನ್ನು ಸಹ ಆವರಿಸಿ ಕೊಂಡಂತಿದೆ. ಈಕೆಯ ಕಿರೀಟವು ಕರಂಡ ಮುಕುಟವಾಗಿದ್ದು ಕುಸುರಿಕೆಲಸದಿಂದ ಕೂಡಿದೆ. ಕಿರೀಟದ ಹಿಂಭಾಗದಲ್ಲಿ ಪ್ರಭಾವಳಿಯಿದೆ. ಈಕೆಯು ಧರಿಸಿರುವ ಸೀರೆಯ ನೆರಿಗೆಗಳು ಸಹ ಸ್ಪಷ್ಟವಾಗಿ ಕಾಣುವಂತೆ ಶಿಲ್ಪಿಯು ಕಲಾತ್ಮಕವಾಗಿ ಕಂಡರಿಸಿದ್ದಾನೆ. ಈಕೆಯ ಪಾದಮೂಲದಲ್ಲಿ, ಪೀಠದ ಬಲಭಾಗದಲ್ಲಿ ಈಕೆಯ ವಾಹನವಾದ ಸಿಂಹವು ಇದೆ. ಆ ಸಿಂಹದ ಮೇಲೆ ಸವಾರಿಮಾಡುತ್ತಿರುವ ಇಬ್ಬರು ಬಾಲಕರ ಶಿಲ್ಪಗಳೂ ಸಣ್ಣ ಕಿರೀಟದಿಂದ ಕೂಡಿದ್ದು ಆಕರ್ಷಕವಾಗಿವೆ. ಅಂಬಿಕೆಯ ಶಿರಸ್ಸಿನ ಹಿಂಭಾಗದಿಂದ ಹೊರಬಿದ್ದ ಗುಂಗುರು ಕೂದಲು ಭುಜಗಳನ್ನು ಆವರಿಸಿಕೊಂಡಿದೆ. ಈ ಶಿಲ್ಪವೂ ಸಹ ಗಂಗರ ಕಾಲದ ಶಿಲ್ಪವಾಗಿದ್ದು, ಸುಮಾರು ೯ನೆಯ ಶತಮಾನದ್ದೆಂದು ಗುರ್ತಿಸಬಹುದಾಗಿದೆ.

**೪. ಹೊಂಬುಜದ (ಹುಂಚ) ಕಮಠೋಪಸರ್ಗ ಪಾರ್ಶ್ವನಾಥ ಬಸದಿಯ ಅಂಬಿಕಾ ಯಕ್ಷಿ**

ಮೂರು ಅಡಿ ೪ ಅಂಗುಲ ಎತ್ತರದ ತಿಳಿಹಸಿರು ಬಣ್ಣದ (ನಸುಬಿಳುಪು) ಬಳಪದ ಕಲ್ಲಿನ (Soap Stone) ಈ ವಿಗ್ರಹವು ೯ ಅಂಗುಲದಷ್ಟು ಎತ್ತರದ ಕಮಲದ ಆಕಾರದ ಪೀಠದ ಮೇಲೆ ಸುಖಾಸೀನ ಮುದ್ರೆಯಲ್ಲಿ ಕುಳಿತ ಭಂಗಿಯಲ್ಲಿದೆ. ದ್ವಿಭುಜೆಯಾದ ಈ ಅಂಬಿಕೆಯು ತನ್ನ ಬಲಗೈಯ್ಯಲ್ಲಿ ೩ ಮಾವಿನ ಕಾಯಿಗಳ ಗುತ್ತಿಯೊಂದನ್ನು ಹಿಡಿದಿದ್ದಾಳೆ. ಈಕೆಯ ಎಡಗೈ ತನ್ನ ಎಡತೊಡೆಯ ಮೇಲೆ ಕೂರಿಸಿಕೊಂಡಿರುವ ತನ್ನ ಪ್ರಿಯ ಪುತ್ರನಾದ ಪ್ರಿಯಂಕರನನ್ನು ಹಿಡಿದುಕೊಂಡಿದೆ. ಕೈಗಳಲ್ಲಿ ಬಳೆಗಳು, ಕಾಲುಗಳಲ್ಲಿ ಗೆಜ್ಜೆಯ ಸರ, ಕೊರಳಲ್ಲಿ ಪದಕಗಳಿಂದ ಕೂಡಿರುವ ಹಲವಾರು ಸರಗಳನ್ನು ಧರಿಸಿದ್ದಾಳೆ. ಒಂದು ದೊಡ್ಡ ಸರದಿಂದ ಹೊರಬಂದ ಪದಕವು ಉದರದವರೆಗೂ ಇದೆ. ಆಕೆಯ ಕಿವಿಗಳಲ್ಲಿ ಕುಂಡಲಗಳು, ಹಾಗೂ ತಲೆಯ ಮೇಲಿನ ಕಿರೀಟ, ಸಣ್ಣ ಸಣ್ಣ ಕುಸುರಿ ಕೆಲಸದಿಂದ ಕೂಡಿದೆ. ತಲೆಯ ಹಿಂಭಾಗದಲ್ಲಿ ಜಡೆಯು ಗಂಟುಹಾಕಿದಂತಿದ್ದು ದೇವಿಯ ಎಡದಿಂದ ಬಲದಿಕ್ಕಿನ ಕಡೆಗೆ ತಿರುಗಿದ್ದು ಭುಜದವರೆಗೆ ಇಳಿಬಿದ್ದಿವೆ. ಸಿಂಹ ಕಟಿಯುಳ್ಳ ಈಕೆಯ ಅಂಗಸೌಷ್ಟವವು ಅತ್ಯಂತ ಪ್ರಮಾಣ ಬದ್ಧವಾಗಿದ್ದು ಶಿಲ್ಪಿಯ ಕಲಾನಿಪುಣತೆಗೆ ಸಾಕ್ಷಿಯೆನ್ನುವಂತಿದೆ. ಕಲ್ಯಾಣ ಚಾಲುಕ್ಯರ ಕಾಲದ ಈ ಮೂರ್ತಿಯು ಸುಮಾರು ಹತ್ತನೆಯ ಶತಮಾನದ್ದೆಂದು ಗುರ್ತಿಸಬಹುದು.

**೫. ಶ್ರವಣಬೆಳ್ಗೊಳದ ಶಾಸನ ಬಸದಿಯ ಕೂಷ್ಮಾಂಡಿನೀ ಯಕ್ಷಿ**

ಮೂರು ಅಡಿ ಎತ್ತರದ ನಸುಗಪ್ಪು ಬಣ್ಣದ ಬಳಪದ ಕಲ್ಲಿನಲ್ಲಿ (ಕ್ಲೋರೈಟಿಕ್ ಸಿಸ್ಟ್) ನಿರ್ಮಿಸಿದ ಈ ಶಿಲ್ಪವು ಎರಡು ಅಡಿ ಎತ್ತರದ ಪೀಠದ ಮೇಲೆ ಸುಖಾಸೀನ ಭಂಗಿಯಲ್ಲಿ ಕುಳಿತಂತೆ ನಿರ್ಮಾಣವಾಗಿದೆ. ದ್ವಿಬಾಹುಗಳನ್ನುಳ್ಳ ಅಂಬಿಕೆಯ ಬಲಗೈಯಲ್ಲಿ ಮಾವಿನ ಕಾಯಿಯು ತೊಟ್ಟು ಸಮೇತ ಇದೆ. ಎಡಗೈಯ್ಯಲ್ಲಿ ಫಲವನ್ನು (ಕೂಷ್ಮಾಂಡ) ಹೊಂದಿರುವ ಈಕೆಯು ಕಿವಿಗಳಲ್ಲಿ ಮಕರಕುಂಡಲ, ಕೊರಳಲ್ಲಿ ಹಾರಗಳು, ಎರಡೂ ಕೈಗಳಲ್ಲಿ ಎಂಟೆಂಟು ಬಳೆಗಳು, ಕಾಲುಗಳಲ್ಲಿ ಕಾಲುಂದುಗೆ ಹಾಗೂ ಗೆಜ್ಜೆಸರಗಳು, ಸೊಂಟದಲ್ಲಿ ಮೇಖಲೆ, ಮುಂತಾದ ಒಡವೆಗಳನ್ನು

ಧರಿಸಿದ್ದಾಳೆ. ಈಕೆಯ ತಲೆಯ ಮೇಲಿರುವ ಕಿರೀಟವು ದೇವಾಲಯದ ಶಿಖರದ ಆಕೃತಿಯಲ್ಲಿದೆ. ಈಕೆಯು ಧರಿಸಿರುವ ಸೀರೆಯ ನೆರಿಗೆಗಳು ಸಹ ಸ್ಪಷ್ಟವಾಗಿ ಕಾಣುತ್ತವೆ. ಕಿರೀಟದಿಂದ ಹೊರ ಬಂದಿರುವ ಕೂದಲುಗಳು ಗುಂಗುರು ಗುಂಗುರಾಗಿವೆ. ಕಿರೀಟದ ಹಿಂಭಾಗದಲ್ಲಿನ ಪ್ರಭಾವಳಿಯು ಅರ್ಧ ಚಂದ್ರಾಕೃತಿಯಲ್ಲಿದೆ. ಪೀಠದ ಮುಂಭಾಗದಲ್ಲಿ ಈಕೆಯ ವಾಹನವಾದ ಸಿಂಹವು ತನ್ನ ಬಾಯಿಯನ್ನು ತೆರೆದು ಗರ್ಜಿಸುವಂತಿದೆ. ಆ ಸಿಂಹದ ಮೇಲೆ ಅಂಬಿಕೆಯ ಇಬ್ಬರು ಪುತ್ರರಾದ ಪ್ರಿಯಂಕರ ಹಾಗೂ ಶುಭಂಕರರು ಸವಾರಿ ಮಾಡುವಂತೆ ಚಿತ್ರಿತರಾಗಿದ್ದಾರೆ. ಪೀಠದ ಮೇಲಿನ ಈ ಶಿಲ್ಪಗಳು ಉಬ್ಬುಶಿಲ್ಪದಂತೆ (ಕ್ಯಾಲಿಗ್ರಫಿ) ಇದೆ. ಈ ಶಿಲ್ಪದ ಲಕ್ಷಣಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಇದು ಕಲ್ಯಾಣ ಚಾಲುಕ್ಯರ ಕಾಲದ ಅಂದರೆ ಸುಮಾರು ೧೧ನೆಯ ಶತಮಾನದ ಶಿಲ್ಪವೆಂದು ಗುರ್ತಿಸಬಹುದು.

### ೬. ಶ್ರವಣಬೆಳ್ಗೊಳದ ಎರಡುಕಟ್ಟೆ ಬಸದಿ(ಆದಿನಾಥ)ಯ ಆಮ್ರಾ

ಕಡುಗಪ್ಪು ಬಣ್ಣದ ಬಳಪದ ಕಲ್ಲಿನಲ್ಲಿ ಕೆತ್ತಲಾಗಿರುವ ಅಂಬಿಕೆಯ ಈ ಶಿಲ್ಪವು ಪೀಠದಿಂದ ಹಿಡಿದು ದೇವಿಯ ಶಿರಸ್ಸಿನ ಮೇಲ್ಭಾಗದಲ್ಲಿರುವ ಮಾವಿನ ಮರದವರೆಗೆ ಒಟ್ಟು ನಾಲ್ಕು ಅಡಿ ಎತ್ತರವಾಗಿದೆ. ಪ್ರಮಾಣಬದ್ಧವಾದ ಅಂಗಸೌಷ್ಟವವನ್ನು ಹೊಂದಿದ್ದು ಅತ್ಯಂತ ಆಕರ್ಷಕವಾಗಿರುವ ಈ ಮೂರ್ತಿಯು ಲಲಿತಾಸನದಲ್ಲಿ ಅರ್ಧ ಅಡಿ ಎತ್ತರದ ಪೀಠದಲ್ಲಿ ಮಂಡಿತವಾಗಿದೆ. ದ್ವಿಭುಜಗಳನ್ನು ಹೊಂದಿರುವ ಈಕೆಯು ಧರಿಸಿರುವ ಆಭರಣಗಳು ಅತೀ ಸೂಕ್ಷ್ಮವಾದ ಕುಸುರಿ ಕೆಲಸದಿಂದ ಕೂಡಿದ್ದು ನಯನ ಮನೋಹರವಾಗಿದೆ. ಈಕೆಯು ಬಲಗೈಯ್ಯಲ್ಲಿ ಹತ್ತಾರು ಮಾವಿನ ಕಾಯಿಗಳ ಗೊಂಚಲನ್ನು, ಹಾಗೂ ಎಡಗೈಯ್ಯಲ್ಲಿ ಬೀಜಪೂರವನ್ನು ಹಿಡಿದಿದ್ದಾಳೆ. ಕೈಗಳಲ್ಲಿ ಕಂಕಣ, ತೋಳುಗಳಲ್ಲಿ ವಂಕಿ, ಕಾಲುಗಳಲ್ಲಿ ಕಾಲುಂದುಗೆ, ಗೆಜ್ಜೆಯ ಸರ, ಬೆರಳುಗಳಲ್ಲಿ ಉಂಗುರಗಳು, ಕೊರಳಲ್ಲಿ ಹಲವು ಬಗೆಯ ಹಾರಗಳು, ಸ್ತನಹಾರ, ಯಜ್ಞೋಪವೀತ, ಹಾಗೂ ದೊಡ್ಡದಾದ ಹಾಗೂ ಅಗಲವಾದ ಉಪವೀತವನ್ನು ಧರಿಸಿರುವ ಈಕೆಯ ಕಟಿಯನ್ನು ಕಟೀವಸ್ತ್ರವು ಅಲಂಕರಿಸಿದೆ. ಕಿವಿಗಳಲ್ಲಿ ಕುಂಡಲ, ತಲೆಯ ಮೇಲೆ ಅತ್ಯಂತ ಸುಂದರವಾದ ಕುಸುರಿಕೆಲಸದಿಂದ ಕೂಡಿರುವ ಕಿರೀಟವನ್ನು ಧರಿಸಿದ್ದಾಳೆ. ಈಕೆಯ ಹಸನ್ಮುಖದಲ್ಲಿ ತಿದ್ದಿತೀಡಿದಂತಿರುವ ಕಣ್ಣು, ಮೂಗು, ಬಾಯಿಗಳು, ಹಾಗೂ ಹುಬ್ಬು ಎಲ್ಲವೂ ಒಂದಕ್ಕಿಂತ ಒಂದು ಆಕರ್ಷಕವಾಗಿವೆ. ಈಕೆಯು ಧರಿಸಿರುವ ಸೀರೆ ಮಂಡಿಯವರೆಗೂ ಇರುವುದು ಸ್ಪಷ್ಟವಾಗಿ ಕಾಣುವಂತಿದೆ. ಈಕೆಯ ಎಡಭಾಗದಲ್ಲಿ ಒಬ್ಬ ಪುತ್ರ ನಿಂತಿದ್ದಾನೆ. ಬಲಭಾಗದಲ್ಲಿ ಮತ್ತೊಬ್ಬ ಪುತ್ರ ಕಿರೀಟದಿಂದ ಅಲಂಕರಿಸಿಕೊಂಡ ತನ್ನ ತಾಯಿಯ ವಾಹನವಾದ ಸಿಂಹದ ಮೇಲೆ ಸವಾರಿ ಮಾಡುವಂತೆ ಕುಳಿತಿದ್ದಾನೆ. ಅಂಬಿಕೆಯ ಎಡಭಾಗದಲ್ಲಿರುವ ಮಾವಿನ ವೃಕ್ಷವು ದೇವಿಯ ತಲೆಯಮೇಲೆ ಕೊಡೆಯಂತೆ ಆವರಿಸಿಕೊಂಡಿದೆ. ಆ ಮಾವಿನ ಮರದಲ್ಲಿ ರೆಂಬೆ, ಕೊಂಬೆಗಳು, ಎಲೆಗಳು ಹಾಗೂ ಹತ್ತಾರು ಮಾವಿನ ಕಾಯಿಗಳ ಗೊಂಚಲುಗಳು ಅತ್ಯಂತ ನೈಜವಾಗಿ ಚಿತ್ರಿತವಾಗಿವೆ. ಆ ಮರ, ಕೊಂಬೆಯ ಮೇಲೆ ಕಪಿಗಳು, ಶುಕಗಳು, ಪಿಕಗಳು, ಹಾಗೂ ಮಯೂರಗಳು ಸಹ ಶಿಲ್ಪಿತವಾಗಿವೆ. ಈ ವಿಗ್ರಹವನ್ನು ಕೆತ್ತಿರುವ ಆ ಅನಾಮಧೇಯ ಶಿಲ್ಪಿಯ ಕಲಾಚಾತುರ್ಯವನ್ನು ಎಷ್ಟು ಕೊಂಡಾಡಿದರೂ ಅದು ಕಡಿಮೆಯೇ. ನಾನು ಇದುವರೆಗೆ ನೋಡಿರುವ ಯಕ್ಷಿಯರ ಶಿಲ್ಪಗಳೆಲ್ಲವುಗಳಿಗಿಂತಲೂ ಈ ಶಿಲ್ಪವೇ ಅತ್ಯಂತ ಶ್ರೇಷ್ಠಮಟ್ಟದೆಂದು ಹೇಳಬಹುದು. ಹೊಯ್ಸಳ ಶೈಲಿಯ ಈ ಶಿಲ್ಪವು ಅತ್ಯಂತ ಉತ್ಕೃಷ್ಟ ಕಲಾಕೃತಿಯಾಗಿದ್ದು ಕ್ರಿ.ಶ. ಸುಮಾರು ೧೨ನೆಯ ಶತಮಾನದ್ದೆಂದು ಗುರ್ತಿಸಬಹುದು.

ಕೂಷ್ಮಾಂಡಿನಿಯು ಶ್ರವಣಬೆಳ್ಗೊಳದ ಅಧಿದೇವತೆಯಾದ್ದರಿಂದ ಈಕೆಯ ಹಲವಾರು ಶಿಲ್ಪಗಳು ಶ್ರವಣಬೆಳ್ಗೊಳ ಕ್ಷೇತ್ರದಲ್ಲಿ ದೊರೆಯುತ್ತದೆ. ಪ್ರಸ್ತುತ ಲೇಖನದಲ್ಲಿ ೬ ಶತಮಾನಗಳ ಕಾಲಾವಧಿಯಲ್ಲಿ ನಿರ್ಮಿತವಾದ ಅಂಬಿಕ/ಆಮ್ರ/ಕೂಷ್ಮಾಂಡಿನಿಯ ೬ ಶಿಲ್ಪಗಳನ್ನು ಪ್ರಾತಿನಿಧಿಕವಾಗಿ ಆಯ್ದುಕೊಂಡು ಆ ವಿಗ್ರಹಗಳ ಬಗ್ಗೆ ಕೂಲಂಕಷವಾಗಿ ಅಧ್ಯಯನ ಮಾಡಲಾಗಿದೆ. ಕರ್ನಾಟಕದಾದ್ಯಂತ ಅಂಬಿಕಾ ಯಕ್ಷಿಯ ವಿಗ್ರಹಗಳು ಬೇಕಾದಷ್ಟು ದೊರೆಯುತ್ತವೆ. ಇವುಗಳಲ್ಲಿ ನನ್ನ ಅಧ್ಯಯನಕ್ಕೆ ಈ ಆರು ವಿಗ್ರಹಗಳನ್ನು ಮಾತ್ರ ಆಯ್ದುಕೊಂಡು ಪರಿಶೀಲಿಸಲಾಗಿದೆ.

ಹೊಯ್ಸಳರ ನಂತರದ ಕಾಲದಲ್ಲಿ ವಿಜಯನಗರ, ಮೈಸೂರಿನ ಒಡೆಯರು, ಹಾಗೂ ಪಾಳೆಯಗಾರರ ಕಾಲದಲ್ಲಿ ಕರ್ನಾಟಕದಲ್ಲಿ ಜೈನಧರ್ಮವು ಕ್ಷೀಣದೆಶೆಗೆ ಇಳಿದುದರಿಂದ ಈ ಕಾಲಘಟ್ಟದಲ್ಲಿ ಅತ್ಯುತ್ತಮವೆನ್ನಬಹುದಾದ ಯಕ್ಷಿಯರ ವಿಗ್ರಹಗಳ ನಿರ್ಮಾಣ (ಹೆಚ್ಚಿನ ಸಂಖ್ಯೆಯಲ್ಲಿ) ಆಗಲಿಲ್ಲವೆಂದೇ ಹೇಳಬೇಕು. ಆದ್ದರಿಂದ ನಾನು ಪ್ರಸ್ತುತ ಲೇಖನದಲ್ಲಿ ಹೊಯ್ಸಳೋತ್ತರ ಕಾಲಘಟ್ಟದ ಯಕ್ಷಿಯರ ಶಿಲ್ಪವನ್ನು ಸೇರಿಸಿಕೊಂಡಿಲ್ಲ.

ಈ ಸಂದರ್ಭದಲ್ಲಿ ಹೇಳಬಹುದಾದ ಮತ್ತೊಂದು ಪ್ರಮುಖ ವಿಷಯವೆಂದರೆ ಶ್ರೀ ಟಿ.ಜಿ. ಕಲಘಟಗಿಯವರು ಹೇಳುವಂತೆ 'ಜನಸಾಮಾನ್ಯರು ಅನುಗ್ರಹ ತೋರಿಸುವ ಅನ್ಯದೇವತೆಗಳ ಕಡೆ ಮೊರೆಯಿಟ್ಟಾಗ ಜೈನಧರ್ಮವನ್ನು ಉಳಿಸಿಕೊಳ್ಳಲು ಆಚಾರ್ಯರು ಉಪಸರ್ಗ ನಿವಾರಕರಾದ ಯಕ್ಷಯಕ್ಷಿಯರನ್ನು ಶ್ರೀ ಸಾಮಾನ್ಯರ ಮುಂದೆ ಪ್ರತಿಷ್ಠಾಪಿಸ ಬೇಕಾಯಿತು' ಎಂಬ ಹೇಳಿಕೆಯನ್ನು ಇಡಿಯಾಗಿ ಒಪ್ಪುವಂತಿಲ್ಲ. ("Yaksi form worship must have been introduced in order to attract the common men towards Jainism, by appealing to the popular forms of worship)[7] ಏಕೆಂದರೆ ಜೈನ ಯಕ್ಷಯಕ್ಷಿಯರನ್ನು ಜೈನ ಆಚಾರ್ಯರು ಹೊಸದಾಗಿ ಸೃಷ್ಟಿಸಲಿಲ್ಲ. ಹೊಸದಾಗಿ ಇಂಟ್ರಡ್ಯೂಸ್ ಮಾಡಲಿಲ್ಲ. ಜಿನಬಿಂಬಗಳನ್ನು ಮಾಡುವ ಪರಿಪಾಠ ಎಂದು ಆರಂಭವಾಯಿತೋ ಅಂದೇ ಯಕ್ಷಯಕ್ಷಿಯರನ್ನು ಸಹ ನಿರ್ಮಿಸುವ ಪದ್ಧತಿಯು ಉಗಮವಾಯಿತೆಂದು ಹೇಳಬಹುದು. ಏಕೆಂದರೆ ತೀರ್ಥಂಕರ ವಿಗ್ರಹಗಳ ಜೊತೆಜೊತೆಯಲ್ಲಿಯೇ ಯಕ್ಷಯಕ್ಷಿಯರನ್ನೂ ಕೆತ್ತಿರಲೇಬೇಕೆಂದು ಪ್ರಾಚೀನವಾದ ಜೈನ ಮೂರ್ತಿ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ನಿಯಮಗಳನ್ನು ವಿಧಿಸಿದ್ದಾರೆ. ವಸುನಂದ್ಯಾಚಾರ್ಯ, ಹಾಗೂ ಜಯಸೇನ ಮುಂತಾದವರು ರಚಿಸಿರುವ ಪ್ರತಿಷ್ಠಾಪಾಠಗಳ ಪ್ರಕಾರ 'ಜಿನಪ್ರತಿಮೆಯು ಅಷ್ಟಮಹಾಪ್ರಾತಿಹಾರ್ಯಗಳಿಂದ ಕೂಡಿದ್ದು ತಂತಮ್ಮ ಆಯುಧ ಹಾಗೂ ವಾಹನಗಳಿಂದ ಭೂಷಿತರಾಗಿರುವ ಯಕ್ಷ-ಯಕ್ಷಿಯರಿಂದ ಕೂಡಿರುವಂತೆ ನಿರ್ಮಿಸಬೇಕು. ಇವುಗಳಿಂದ ಕೂಡಿಲ್ಲದಿರುವ ಬಿಂಬವನ್ನು ಸಿದ್ಧ ಪರಮೇಷ್ಠಿಗಳ ಪ್ರತಿಮೆಯೆಂದು ತಿಳಿಯಬೇಕು'[೭] ಆದ್ದರಿಂದ ಜಿನಶಾಸನದೇವತೆಗಳಾದ ಯಕ್ಷ-ಯಕ್ಷಿಯರು ತೀರ್ಥಂಕರರ ಆರಾಧನೆಯ ಹಾಗೂ ತೀರ್ಥಂಕರ ಶಿಲ್ಪ ನಿರ್ಮಾಣದ ಉಗಮದ ಕಾಲಕ್ಕೆ ಅಸ್ತಿತ್ವದಲ್ಲಿದ್ದರೆಂದು ಹೇಳಬಹುದು. ಈ ಮೇಲಿನ ಎಲ್ಲ ಅಂಶಗಳಿಂದ ಯಕ್ಷಯಕ್ಷಿಯರ ಆರಾಧನೆಯು ಹಿಂದೂ ಧರ್ಮದ ಪ್ರಭಾವದಿಂದ ಉಗಮವಾದುದಲ್ಲವೆಂದು ಖಚಿತವಾಗಿ ಹೇಳಬಹುದು.

ಪ್ರಾಯಃ ೬-೭ನೆಯ ಶತಮಾನಗಳ ಕಾಲದಲ್ಲಿ ಹಿಂದೂ ಧರ್ಮದಲ್ಲಿನ ದೇವತೆಗಳು ವಿಜೃಂಭಿಸುವುದನ್ನು ಗಮನಿಸಿ ಜೈನ ಧರ್ಮೀಯರು ತಮ್ಮ ತೀರ್ಥಂಕರರ ಅಕ್ಕ ಪಕ್ಕದಲ್ಲಿ ಪರಿವಾರ ದೇವತೆಗಳಂತೆ, ಆಪ್ತಸೇವಕರಂತಿರುವ ಯಕ್ಷ ಯಕ್ಷಿಯರನ್ನು ತಮ್ಮ ಧರ್ಮ ರಕ್ಷಕರನ್ನಾಗಿ,

---

೭ Dr T.G. Kalgnatagi, Jaina View of life. Page No. 177

ಶಾಸನ ದೇವತೆಗಳನ್ನಾಗಿ, ತಮ್ಮೆಲ್ಲರ ಆಶೋತ್ತರಗಳನ್ನು ಈಡೇರಿಸುವವರನ್ನಾಗಿಸಿ ಜಿನರ ಪಾದಮೂಲದಲ್ಲಿ, ಸಣ್ಣದಾಗಿದ್ದವರನ್ನು ದೊಡ್ಡದಾಗಿ ಪ್ರತ್ಯೇಕವಾಗಿ ನಿರ್ಮಿಸಿ ಪೂಜಿಸುವ ಪರಿಪಾಠ ಬೆಳೆಸಿಕೊಂಡಿರಬಹುದೆಂದು ಹೇಳಬಹುದು.

ಪ್ರಸ್ತುತ ಲೇಖನದಲ್ಲಿ ಚರ್ಚಿತಳಾಗಿರುವ ಅಂಬಿಕೆಯು ಹಿಂದೂ ಧರ್ಮದ ಸಂತಾನಲಕ್ಷ್ಮಿ ಹಾಗೂ ಧಾನ್ಯ ಲಕ್ಷ್ಮಿಗೆ ಸಮಾನೆಯೆಂದು ಹೇಳಬಹುದು. ಏಕೆಂದರೆ ಅಂಬೆ, ಅಂಬಿಕೆ, ಅಂಬಾ, ಎನ್ನುವ ಶಬ್ದವೇ ಅಮ್ಮಾ ಎನ್ನುವ ಶಬ್ದ ಮೂಲದ್ದೆಂದು ಹೇಳಬಹುದು. ಅಂಬಿಕಾ ಯಕ್ಷಿಯ ಅಕ್ಕಪಕ್ಕಗಳಲ್ಲಿರುವ ಬಾಲಕರಂತೆಯೇ ಹಿಂದೂ ದೇವತೆಯಾದ ಸಂತಾನ ಲಕ್ಷ್ಮಿಯ ಅಕ್ಕ ಪಕ್ಕಗಳಲ್ಲಿಯೂ ಮಕ್ಕಳಿರುತ್ತಾರೆ. ಹಾಗೆಯೇ ಅಂಬಿಕೆಯ / ಕುಷ್ಮಾಂಡಿನಿ / ಆಮ್ರಾ, ಕೈಯ್ಯಲ್ಲಿರುವ ಮಾವಿನ ಕಾಯಿಗೊಂಚಲು, ಹಾಗೂ ಬೀಜಪೂರ / ಫಲ / ಕೂಷ್ಮಾಂಡವು ಧಾನ್ಯದ / ಫಲದ ಸಮೃದ್ಧಿಯ ಸಂಕೇತವಾಗಿರುತ್ತದೆ. ಆಕೆಯು ಕುಳಿತುಕೊಂಡಿರುವುದು ಸಹ ಆಮ್ರ ವೃಕ್ಷದ ಕೆಳಗೆ. ಈ ಎಲ್ಲ ಅಂಶಗಳು ಆಕೆಯು ಧಾನ್ಯಲಕ್ಷ್ಮಿಯನ್ನು ಸಂಕೇತಿಸುತ್ತಿದ್ದಾಳೆನ್ನುವುದನ್ನು ಸಾಬೀತುಪಡಿಸುತ್ತವೆ.

ಈ ಅಂಶಗಳಿಂದಲೇ ಅಂಬಿಕಾ ಯಕ್ಷಿಯ ಆರಾಧನೆಯು ಕರ್ನಾಟಕದಾದ್ಯಂತ ಹೆಚ್ಚಿನ ಪ್ರಮಾಣದಲ್ಲಿ ನಡೆಯಲು ಮೂಲ ಕಾರಣವಾಗಿದೆಯೆಂದು ಹೇಳಬಹುದು.

# ಹೊಯ್ಸಳ ನರಸಿಂಹನ ಹಾರೋಕೊಪ್ಪದ ಅಪ್ರಕಟಿತ ಶಾಸನ

ಜಿ. ಎನ್. ಭೀಮೇಶ್

ಬೆಂಗಳೂರು ಗ್ರಾಮಾಂತರ ಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನ ವಿರೂಪಾಕ್ಷಪುರ ಹೋಬಳಿಗೆ ಸೇರಿದ ಹಾರೋಕೊಪ್ಪ ಗ್ರಾಮದ ಭೈರವೇಶ್ವರ ದೇವಾಲಯದ ಮುಂದೆ ಒಂದು ಶಿಲಾ ಶಾಸನವಿದೆ. ಈ ಶಾಸನವು ಇದುವರೆಗೆ ಎಲ್ಲಿಯೂ ಪ್ರಕಟವಾಗಿಲ್ಲ. ಇದು ಅಪ್ರಕಟಿತ ಶಾಸನವೆಂದು ಕರ್ನಾಟಕ ರಾಜ್ಯ ಗ್ಯಾಸೆಟಿಯರ್‌ನ ಬೆಂಗಳೂರು ಜಿಲ್ಲೆಯ ಸಂಪುಟದಲ್ಲಿಯೂ ಉಲ್ಲೇಖಿಸಲಾಗಿದೆ. ಈ ಶಾಸನವು ೫೮ ಅಂಗುಲ ಎತ್ತರ ಹಾಗೂ ೩೮ ಅಂಗುಲ ಅಗಲದ ಗ್ರಾನೈಟ್ ಕಲ್ಲು ಚಪ್ಪಡಿಯ ಮೇಲೆ ಕೊರೆಯಲ್ಪಟ್ಟಿದೆ. ಈ ಶಾಸನದ ಭಾಷೆ ಹಾಗೂ ಲಿಪಿಯು ಕನ್ನಡವಾಗಿದೆ. ಈ ಲಿಪಿಯು ಹೊಯ್ಸಳರ ಕಾಲದ್ದಾಗಿದ್ದು ತುಂಬಾ ಸುಂದರವಾಗಿ ಗುಂಡಾಗಿ ಕೊರೆಯಲ್ಪಟ್ಟಿದೆ. ಕಣಶಿಲೆಯಂತಹ ಗಡಸು ಕಲ್ಲಿನ ಮೇಲೆಯೂ ಗುಂಡಾಗಿ ಆಕರ್ಷಕವಾಗಿ ಈ ಶಾಸನವನ್ನು ಕೊರೆಯಲಾಗಿದೆ.

## ಶಾಸನ ಶಿಲ್ಪ

ಶಾಸನ ಪಾತದ ಮೇಲ್ಭಾಗದಲ್ಲಿ ಸುಮಾರು ೧೨ ಅಂಗುಲಗಳಷ್ಟು ಜಾಗದಲ್ಲಿ ಶಾಸನ ಶಿಲ್ಪವನ್ನು ಕೆತ್ತಲಾಗಿದೆ. ಶಾಸನಫಲಕದ ತೀರಾ ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಮಧ್ಯೆ ನಿಂತಿರುವ ಗಂಡಭೇರುಂಡದ ಶಿಲ್ಪವಿದೆ. ಈ ಗಂಡಭೇರುಂಡವೂ ಸಹ ವೈಶಿಷ್ಟ್ಯಪೂರ್ಣವಾಗಿದೆ. ಮಾನವನ ದೇಹ (ಮುಂಡ) ಹಾಗೂ ಪಕ್ಷಿಯ ತಲೆ (ರುಂಡ)ಗಳನ್ನುಳ್ಳ ಗಂಡಭೇರುಂಡವು ತನ್ನ ಎರಡೂ ಕೈಗಳನ್ನು ಅಕ್ಕಪಕ್ಕಕ್ಕೆ ಚಾಚಿಕೊಂಡು ತನ್ನಬದಿಯಲ್ಲಿ ಪದ್ಮಾಸೀನರಾಗಿ ಕುಳಿತಿರುವ ಇಬ್ಬರು ವ್ಯಕ್ತಿಗಳ ತಲೆಯ ಮೇಲೆ ತನ್ನ ಕೈಯನ್ನು ಇಟ್ಟಿರುವ ಭಂಗಿಯಲ್ಲಿದೆ. ಶಾಸನ ಫಲಕದ ಬಲಭಾಗದಲ್ಲಿ ಒಂದು ಹುಲಿಯೊಂದು ತನ್ನ ಎಡಗಾಲನ್ನು ಮೇಲೆತ್ತಿ ತನ್ನ ಕಾಲಿನ ಪಂಜವನ್ನು ಕುಳಿತ ವ್ಯಕ್ತಿಯ ಭುಜದ ಮೇಲಿಟ್ಟಿದೆ. ಈ ರೀತಿಯ ಅಪರೂಪದ ದೃಶ್ಯ ಇದುವರೆಗೂ ಬೇರೆ ಯಾವುದೇ ಶಾಸನಶಿಲ್ಪದಲ್ಲಿ ಕಂಡುಬಂದಿಲ್ಲದಿರುವುದು ಗಮನಾರ್ಹ ಅಂಶ. ಸಾಧಾರಣವಾಗಿ ಯಾವುದೇ ಶಾಸನಗಳಲ್ಲಿ ಆ ಶಾಸನ ಹಾಕಿಸಿದ ವ್ಯಕ್ತಿಯ ಧರ್ಮದ, ಅಥವಾ ಆತನ ಇಷ್ಟದೈವದ, ಅಥವಾ ಆ ವ್ಯಕ್ತಿಯ ಶಿಲ್ಪಗಳು ಕಂಡು ಬರುವುದು ಸಾಮಾನ್ಯ. ಆದರೆ ಪ್ರಸ್ತುತ ಶಾಸನ ಶಿಲ್ಪದಲ್ಲಿ ಈ ಯಾವ ಅಂಶಗಳೂ ಇಲ್ಲ. ಅದರ ಬದಲು ಗಂಡಭೇರುಂಡದ ವಿಚಿತ್ರರೀತಿಯ ಶಿಲ್ಪವಿದೆ. ಆ ಶಿಲ್ಪದ ಮೂಲಕ ಯಾವ ವಿಷಯವನ್ನು ತಿಳಿಸಲು ಆ ಶಾಸನಕಾರ ಯೋಚಿಸಿದ್ದನೋ ಅದು ಅರ್ಥವಾಗುವುದಿಲ್ಲ. ಒಟ್ಟಾರೆ ಪ್ರಸ್ತುತ ಶಾಸನದ ಶಿಲ್ಪ ಅಭೂತಪೂರ್ವವಾದದ್ದು ಎಂದು ಹೇಳಬಹುದು. ನಿಪುಣಶಿಲ್ಪಿಯೊಬ್ಬನ ಕೈ ಚಳಕದ ಫಲಿತವಾದ ಈ ಶಿಲ್ಪವು ಆಕರ್ಷಕವಾಗಿಯೂ ಇದೆ.

ಈಗ ಈ ಶಾಸನ ಪಾಠವನ್ನು ಗಮನಿಸೋಣ.

೧. ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಿಥ್ವೀವಲ್ಲಭ
೨. ಮಹಾರಾಜಾಧಿ ರಾಜ ಪರಮೇಶ್ವರ ಯಾದವ ಕು
೩. ಲಾಂಬರದ್ಯುಮಣಿ ಮಲರಾಜ ಮಲೆಪ
೪. ರೊಳ್ಗಂಡ ಗಂಡಭೇರುಂಡ ಕದನ ಪ್ರಚಂ
೫. ಡ ಶನಿವಾರಸಿದ್ಧಿ ಗಿರಿದುರ್ಗಮಲ್ಲ ಚಲದಂಕರಾ
೬. ಮ ಚಾಳುಕ್ಯ ಸ್ಥಾಪನಾಚಾರಿಯ ಪಾಂಡ್ಯ
೭. ರಾಯ ಪ್ರತಿಷ್ಠಾಚಾರಿಯ ನಿಸ್ಸಂಕಪ್ರತಾ
೮. ಪ ಶ್ರೀ ಪೊಯಿಸಳ ಭುಜಬಳ ವೀರನಾರಸಿಂ
೯. ಹ ದೇವರವರು ಶ್ರೀಮತು ಕವಿಕುಮುದ ಚಂ
೧೦. ದ್ರ ವೀರ ನರೇಂದ್ರದೇವ ಉಭಯರಾಯ ವಿಗ್ರಹವಿ
೧೧. ಭಾಡ ಲೋಕೈಕನಾಥ ...... ಜಗ
೧೨. ದ್ದಳ ತ್ರಿಭುವನ ಪಂಡಿತ ಚಕ್ರವರ್ತಿಗಳು ಕಲಿದೇವ
೧೩. ರಿಗೆ ರಿಗೆ[1] ಕೆಳಲೆನಾಡ ಆರೋಕೊಪ್ಪವನು ಅ
೧೪. ಷ್ಟಭೋಗಕಿಟಿಕುಳ ಕಾಣಿಕೆ ಮಳೆ ಬೀಯ ಮುಂತಾ
೧೫. ದುವನು ಸರ್ಬ್ಬನಮಸ್ಯವಾಗಿ ಆ ಕೀರ್ತಿದೇವರು
೧೬. ದೇವರಿಗೆಧಾರೆಯನೆಱೆದು ಕೊಟ್ಟರು
೧೭. ದಾನದ ತ್ತನವಱೆದವಂಗೆ ಅಳಿಹಿದವ
೧೮. ತಾಯ ತಂದೆಯ ಗಂಗೆಯ ತಡಿಯಲು
೧೯. ಕವಿಲೆಯ ಕೊಂದ ಪಾಪದಲು ಹೋಹಂ

ಈ ಶಾಸನದಲ್ಲಿ ಒಟ್ಟು ೧೯ ಸಾಲುಗಳಿವೆ. ಇದರಲ್ಲಿ ಕಾಲದ ಉಲ್ಲೇಖವಿಲ್ಲದಿದ್ದರೂ ಆಂತರಿಕ ಹಾಗೂ ಬಾಹ್ಯಪ್ರಮಾಣಗಳ ಆಧಾರದಿಂದ ಇದರ ಕಾಲವನ್ನು ನಿರ್ಧರಿಸಬಹುದಾಗಿದೆ. ಈ ಶಾಸನದಲ್ಲಿ ಹೊಯ್ಸಳ ನಾರಸಿಂಹನ ಉಲ್ಲೇಖವಿರುವುದರಿಂದ ಶಾಸನವು ಹೊಯ್ಸಳರ ನರಸಿಂಹನ ಕಾಲದ್ದೆಂದು ಗುರ್ತಿಸಬಹುದಾಗಿದೆ. ಹೊಯ್ಸಳ ವಂಶದ ವಿಖ್ಯಾತ ದೊರೆಯಾದ ವಿಷ್ಣುವರ್ಧನನ ಮಗನಾದ ನರಸಿಂಹನು ಕ್ರಿ.ಶ. ೧೧೪೧ರಿಂದ ೧೧೭೩ರವರೆಗೆ ಆಳ್ವಿಕೆ ನಡೆಸುತ್ತಿದ್ದನು. ಆದ್ದರಿಂದ ಈ ಮೇಲಿನ ಶಾಸನವು ಕ್ರಿ.ಶ. ೧೧೪೧ರಿಂದ ೧೧೭೩ರ ನಡುವಿನ ಅವಧಿಯಲ್ಲಿ ರಚಿತವಾಗಿದೆಯೆಂದು ನಿರ್ಧರಿಸಬಹುದು.

ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿಯೇ ಗಂಗವಾಡಿ ೯೬೦೦೦ವನ್ನು ಚೋಳರನ್ನು ಸೋಲಿಸಿ ವಶಪಡಿಸಿಕೊಳ್ಳಲಾಯಿತು. ತನ್ಮೂಲಕ ಗಂಗವಾಡಿ (೯೬೦೦೦) ತೊಂಬತ್ತಾರು ಸಾವಿರದ ಒಂದು ಭಾಗವಾಗಿದ್ದ ಕೆಳಲೆನಾಡು ಸಹ ಹೊಯ್ಸಳರ ಅಧೀನವಾಯಿತು. ಇಂದಿನ ಚನ್ನಪಟ್ಟಣ, ಮದ್ದೂರು ಹಾಗೂ ರಾಮನಗರವನ್ನೊಳಗೊಂಡಿದ್ದ ಪ್ರದೇಶವನ್ನು ಆ ಕಾಲದಲ್ಲಿ ಕೆಳಲೆನಾಡು ಎಂದು ಕರೆಯಲಾಗುತ್ತಿತ್ತು. ವಿಷ್ಣುವರ್ಧನನ ಮರಣಾನಂತರ ಅರಸನಾದ ನರಸಿಂಹನು ಕೆಳಲೆನಾಡಿನ ಆರೋಕೊಪ್ಪವನ್ನು (ಇಂದಿನ ಹಾರೊಕೊಪ್ಪ) ಕಲಿದೇವರಿಗೆ ಸರ್ವನಮಸ್ಯವಾಗಿ

---

1. 'ರಿಗೆ' ಎನ್ನುವುದನ್ನು ಎರಡುಬಾರಿ ಬರೆಯಲಾಗಿದೆ.

ಅಂದರೆ ಯಾವುದೇ ರೀತಿಯ ತೆರಿಗೆಗಳಿಲ್ಲದಂತೆ ಮಾಡಿ ಧಾರಾಪೂರ್ವಕವಾಗಿ ದಾನವನ್ನು ಕೊಟ್ಟನು ಎಂದು ಈ ಶಾಸನವು ಉಲ್ಲೇಖಿಸುತ್ತದೆ. ಶಾಸನದಲ್ಲಿ ಉಲ್ಲೇಖಿತವಾಗಿರುವ ಕಲಿದೇವರು ಈಗ ಶಾಸನವಿರುವ ಸ್ಥಳದ ಹತ್ತಿರದಲ್ಲಿಯೇ ಇರುವ ಭೈರವೇಶ್ವರ ದೇವಾಲವೇ ಆಗಿರಬಹುದೆಂದು ಊಹಿಸಬಹುದಾಗಿದೆ.

# ಬಂದಳಿಕೆಯ ವೈಶಿಷ್ಟ್ಯಪೂರ್ಣ ಇಕ್ಕೈಮಾಸ್ತಿ : ಪರಿಶೀಲನೆ

ಆರ್. ಜಗದೀಶ್, ಎಂ. ಜಿ. ಮಂಜುನಾಥ

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕು ಶಿರಾಳಕೊಪ್ಪ ಹೋಬಳಿಗೆ ಸೇರಿದ ಬಂದಳಿಕೆಯು ಶಿರಾಳಕೊಪ್ಪದಿಂದ ಸುಮಾರು ಹತ್ತು ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಇಂದು ತೀರಾಪುಟ್ಟ ಕುಗ್ರಾಮವಾಗಿದ್ದರೂ ಸಹ ಹಿಂದೊಂದು ಕಾಲದಲ್ಲಿ ವೈಭವದಿಂದ ಮೆರೆದಂತಹ ಪಟ್ಟಣವಾಗಿತ್ತು. ಇಲ್ಲಿ ಕಲ್ಯಾಣಚಾಲುಕ್ಯರ ಕಾಲದ ಹಲವಾರು ಪ್ರಾಚೀನ ದೇವಾಲಯಗಳಿವೆ. ಅವುಗಳಲ್ಲಿ ಬನಶಂಕರಿ ದೇವಾಲಯವೂ ಒಂದು. ಆ ದೇವಾಲಯದ ಮುಂದೆ ಹಲವಾರು ಮಾಸ್ತಿ ಕಲ್ಲುಗಳಿವೆ. ಅವುಗಳಲ್ಲಿ ಅತ್ಯಂತ ವೈಶಿಷ್ಟ್ಯಪೂರ್ಣವಾದ ಒಂದು ಇಕ್ಕೈ ಮಾಸ್ತಿ ಕಲ್ಲಿನ ಬಗ್ಗೆ ಪ್ರಸ್ತುತ ಸಂಪ್ರಬಂಧವನ್ನು ಬರೆಯಲಾಗಿದೆ.

ಈ ಇಕ್ಕೈಮಾಸ್ತಿಕಲ್ಲಿನ ಮೇಲೆ ಹದಿನೆಂಟು ಸಾಲುಗಳ ಶಾಸನವಿದೆ. ಆ ಶಾಸನದಿಂದ ತಿಳಿದು ಬರುವ ಅಂಶಗಳೆಂದರೆ, ಶ್ರೀಮತು ರಾಜಾಧಿರಾಜ ಪರಮೇಶ್ವರ ವೀರಪ್ರತಾಪ ಮಲ್ಲಿಕಾರ್ಜುನ ಮಹಾರಾಯರು ರಾಜ್ಯಭಾರಮಾಡುವ ಕಾಲದಲ್ಲಿ ಶಕವರುಶ ೧೩೬೯ನೆಯ ಪ್ರಭವ ಸಂವತ್ಸರದ ಭಾದ್ರಪದ ಶುದ್ಧ ೫ ಗುರುವಾರದಲ್ಲಿ ಕಠಾರಿಯ್ಯನಾರಿಯಪ್ಪ ನಾಯಕರ ಮಗ ಮಧುವರಸನಾಯಕರು ಸ್ವರ್ಗಸ್ಥರಾದಾಗ ಅವರ ಸತಿಯರಾದ ಬುಳ್ಳರಸಿ ಮತ್ತು ಕಂನಾಯಿ ಗಂಡನ ಕೂಡೆ ಸುರಲೋಕ ಪ್ರಾಪ್ತರಾದರು' ಎಂದು ಶಾಸನ ಉಲ್ಲೇಖಿಸುತ್ತದೆ.[೧]

## ಶಾಸನ ಶಿಲ್ಪ

ನಸುಗಪ್ಪು ಬಣ್ಣದ ಬಳಪದ ಕಲ್ಲಿನ ಚಪ್ಪಡಿಯ ಮೇಲೆ ಈ ಮಾಸ್ತಿ ಸ್ಮಾರಕವನ್ನು ನಿರ್ಮಿಸಲಾಗಿದೆ. ಇದು ಒಂದು ಇಕ್ಕೈ ಮಾಸ್ತಿ. ಅಂದರೆ 'ಒಬ್ಬ ವ್ಯಕ್ತಿ ಮರಣಿಸಿದಾಗ ಆತನ ಇಬ್ಬರು ಪತ್ನಿಯರು ತಮ್ಮ ಪತಿಯೊಡನೆ ಸಹಗಮನ ಮಾಡಿದಾಗ ಎರಡು ಕೈಗಳ ಶಿಲ್ಪವನ್ನುಳ್ಳ ಸ್ಮಾರಕವನ್ನು ನಿರ್ಮಿಸುತ್ತಾರೆ. ಇಂತಹ ಸ್ಮಾರಕಕ್ಕೆ ಇಕ್ಕೈ ಮಾಸ್ತಿ ಎಂದು ಹೆಸರು. ಪ್ರಸ್ತುತ ಬಂದಳಿಕೆಯ ಮಾಸ್ತಿಕಲ್ಲಿನ ಫಲಕದಲ್ಲಿ ಒಂದು ಸ್ತಂಭವಿದ್ದು ಅದರಿಂದ ಒಂದು ಕೈ ಹೊರಚಾಚಿ ಅಭಯ ಹಸ್ತವನ್ನು ತೋರುತ್ತಿದೆ. ಆ ಸ್ತಂಭಕ್ಕೆ ಅಂಟಿಕೊಂಡಂತೆಯೇ ಮತ್ತೊಂದು ಸಣ್ಣ ಸ್ತಂಭವಿದ್ದು ಮೊದಲಿನ ಕೈಯ ಕೆಳಭಾಗದಲ್ಲಿ ಮತ್ತೊಂದು ಅದೇ ರೀತಿಯ ಕೈಯನ್ನೂ ಕೆತ್ತಲಾಗಿದೆ. ಈ ಎರಡೂ ಕೈಗಳಲ್ಲಿ ತೋರುಬೆರಳು ಹಾಗೂ ಹೆಬ್ಬೆರಳುಗಳ ಮಧ್ಯದಲ್ಲಿ

---

೧. ಎ.ಕ.VII-1 ಬಂದಳಿಕೆ. 239 ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. ಕ್ರಿ.ಶ. 1447

ಸಿಂಬೆಪಟ್ಟಿಗಳಿವೆ. ಈ ಎರಡೂ ತೋಳುಗಳ ಮೇಲ್ಭಾಗದಲ್ಲಿ ಮೂವರು ವ್ಯಕ್ತಿಗಳ ಶಿಲ್ಪಗಳಿವೆ. ಅವುಗಳಲ್ಲಿ ಮಧ್ಯದ ಶಿಲ್ಪವು ಪುರುಷನದ್ದಾಗಿದೆ. ಈ ಶಿಲ್ಪವು ನಾರಿಯಪ್ಪನಾಯಕನ ಮಗನಾದ ಮಧುವರಸ ನಾಯಕನನ್ನು ಪ್ರತಿನಿಧಿಸುತ್ತದೆ. ಆತನ ಇಕ್ಕೆಲಗಳಲ್ಲಿ ಇಬ್ಬರು ಸ್ತ್ರೀಯರ ಶಿಲ್ಪಗಳಿವೆ. ಅವು ಮಧುವರಸನಾಯಕನ ಪತ್ನಿಯರಾದ ಬುಳ್ಳರಸಿ ಹಾಗೂ ಕಂನಾಯಿರನ್ನು ಪ್ರತಿನಿಧಿಸುತ್ತವೆ. ಅವರೂ ಸಹ ತಮ್ಮ ಪತಿಯಂತೆಯೇ ಪದ್ಮಾಸನದಲ್ಲಿ ಕುಳಿತು ತಮ್ಮ ಕೈಗಳನ್ನು ಮುಗಿದುಕುಳಿತಿದ್ದಾರೆ. ಈ ಮೂವರ ಮೇಲ್ಭಾಗದಲ್ಲಿ ಒಂದು ಖಡ್ಗದ ಶಿಲ್ಪವಿದೆ. ಅದರ ಮೇಲ್ಭಾಗದಲ್ಲಿ ಸೂರ್ಯಚಂದ್ರರ ಶಿಲ್ಪಗಳಿವೆ. ಹಾಗೂ ಬದಿಯಲ್ಲಿರುವ ಸ್ತಂಭದ ಮೇಲೆ ಶಾಸನ ಪಾಠವಿದೆ.

ಈ ಮಾಸ್ತಿಕಲ್ಲಿನಲ್ಲಿ ಅತ್ಯಂತ ಪ್ರಮುಖವಾದ ಗಮನಾರ್ಹ ಅಂಶವೆಂದರೆ ಆ ಇಕ್ಕೈ ಶಿಲ್ಪಗಳ ಕೆಳಭಾಗದಲ್ಲಿ, ಸ್ತಂಭದ ಪಕ್ಕದಲ್ಲಿ ಒಂದು ಸಮಾಧಿಯ ಶಿಲ್ಪವಿದೆ. ಆ ಸಮಾಧಿಯ ಮೇಲ್ಭಾಗದಲ್ಲಿ ಒಂದರ ಪಕ್ಕದಲ್ಲಿ ಒಂದರಂತೆ ಮೂರು ಶಿವಲಿಂಗಗಳಿವೆ. ಸಮಾಧಿಗಳ ಮೇಲೆ ಶಿವಲಿಂಗ ಪ್ರತಿಷ್ಠಾಪಿಸಿ ಗದ್ದಿಗೆಗಳನ್ನು ನಿರ್ಮಿಸುವುದು ಶೈವಧರ್ಮೀಯರಲ್ಲಿ ಪರಿಪಾಠವಿದೆ. ಬಹುಶಃ ಪ್ರಸ್ತುತ ಶಾಸನೋಕ್ತರಾದ ಮಧುವರಸ ಹಾಗೂ ಆತನ ಪತ್ನಿಯರಾದ ಬುಳ್ಳರಸಿ ಹಾಗೂ ಕಂನಾಯಿಯರು ಶೈವಧರ್ಮೀಯರೆಂದು ತೋರುತ್ತದೆ. ಪತಿಯು ಮರಣಿಸಿದಾಗ ಆತನ ಪತ್ನಿಯು ಅಗ್ನಿಪ್ರವೇಶ ಮಾಡಿ ಸಹಗಮನ ಮಾಡುತ್ತಿದ್ದುದು ಪ್ರಾಚೀನ ಕರ್ನಾಟಕದಲ್ಲಿ ತೀರಾ ಸಾಮಾನ್ಯವಾಗಿತ್ತು. ಆದರೆ ಪತಿಯು ಮರಣಿಸಿದಾಗ ಪತಿಯೊಡನೆ ಸಜೀವವಾಗಿ ಸಮಾಧಿಯಾಗುತ್ತಿದ್ದುದು ತೀರಾ ಅಪರೂಪದ ಸಂಗತಿ. ಪ್ರಾಯಃ ಪ್ರಸ್ತುತ ಮಾಸ್ತಿಕಲ್ಲಿನ ಶಾಸನೋಲ್ಲೇಖಿತರಾದ ಬುಳ್ಳರಸಿ ಹಾಗೂ ಕಂನಾಯಿಯರು ತಮ್ಮ ಪತಿಯಾದ ಮಧುವರಸ ನಾಯ್ಕನ ಶವದೊಡನೆ ಸಜೀವವಾಗಿ ಸಮಾಧಿಹೊಂದಿರಬಹುದು. ಅದನ್ನು ತಿಳಿಸುವುದಕ್ಕೋಸ್ಕರವೇ ಈ ರೀತಿಯ ಸಮಾಧಿಯ (ಗದ್ದುಗೆ ಹಾಗೂ ಅದರ ಮೇಲೆ ೩ ಶಿವಲಿಂಗಗಳನ್ನು ಪ್ರತಿಷ್ಠಾಪಿಸಿರುವ) ಶಿಲ್ಪವನ್ನು ಪ್ರಸ್ತುತ ಮಾಸ್ತಿಕಲ್ಲಿನ ಶಿಲ್ಪದಲ್ಲಿ ಕಂಡರಿಸಿದ್ದಾರೆಂದು ತೋರುತ್ತದೆ.

ಈ ರೀತಿ ತಮ್ಮ ಪತಿಯರೊಡನೆ ಸಜೀವವಾಗಿ ಸಮಾಧಿಯಾಗಿರುವ ಬಗ್ಗೆ ಇನ್ನೂ ಕೆಲವು ಶಾಸನೋಲ್ಲೇಖಿತ ಉದಾಹರಣೆಗಳಿವೆ.

ಧಾರವಾಡ ಜಿಲ್ಲೆ ರಾಣಿಬೆನ್ನೂರು ತಾಲ್ಲೂಕಿನ ಹೆಡಿಯಾಲಗ್ರಾಮದ ಒಂದು ಶಾಸನ ರಾಮೆಯ ನಾಯಕ ಎಂಬುವನು ಮರಣಿಸಿದಾಗ ಆತನ ಪತ್ನಿ ಮಲ್ಲಿದೇವಿಯ ಸಮಾಧಿ ಹೊಕ್ಕು ಮಾಸ್ತಿಯಾದ ಬಗ್ಗೆ ಉಲ್ಲೇಖಿಸುತ್ತದೆ.[೨]

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಕುಂಬತಿ ಗ್ರಾಮದಲ್ಲಿನ ಒಂದು ಶಾಸನ ಮಸಣಗೌಡ ಎಂಬ ವ್ಯಕ್ತಿ ಸ್ವರ್ಗಸ್ಥನಾದಾಗ ಆತನ ಪತ್ನಿ ಸಮಾಧಿಕುಳಿಯಲ್ಲಿ ಕುಳಿತು ಮಾಸ್ತಿಯಾದಳೆಂದು ಉಲ್ಲೇಖಿಸುತ್ತದೆ.[೩]

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಗುಂಜುನೂರು ಗ್ರಾಮದಲ್ಲಿನ ಒಂದು ಶಾಸನ ಒಬ್ಬ ವ್ಯಕ್ತಿ ಮರಣಿಸಿದಾಗ (ಆತನ ಹೆಸರಿನ ಭಾಗ ತ್ರುಟಿತವಾಗಿದೆ) ಆತನ ಪತ್ನಿ ಚಿಕ್ಕಗೌಡಿ ಕೂಡ ತ್ನ್ನ ಪತಿಯೊಡನೆ ಸಮಾಧಿಯನ್ನು ಹೊಕ್ಕು ಸ್ವರ್ಗಸ್ಥಳಾದ ವಿಷಯವನ್ನು ಈ ಉಲ್ಲೇಖಿಸುತ್ತದೆ.[೪]

---

೨. ಸೌತ್ ಇಂಡಿಯನ್ ಇನ್ಸ್‌ಕ್ರಿಪ್‌ಷನ್ಸ್. Vol. XVIII - ಶಾ.ಸಂ. 413 ಕ್ರಿ.ಶ. 1404
೩. ಎ.ಕ. VIII - ಸೊರಬ. 499 ಕುಂಬತಿ ಕಾಲ ಕ್ರಿ.ಶ. ಸು. 15ನೆಯ ಶತಮಾನ
೪. ಎ.ಕ. VIII - ಸೊರಬ. 36 ಗುಂಜನೂರು ಕಾಲ ಕ್ರಿ.ಶ. ಸು. 15ನೆಯ ಶತಮಾನ

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಕುಪ್ಪೆ ಗ್ರಾಮದಲ್ಲಿನ ಒಂದು ಶಾಸನ ಬಮ್ಮಪ್ಪಗೌಡರ ಮಗ ಸಿರಿಯಗೌಡ (ಬೊಮ್ಮಗೌಡ) ಮರಣಿಸಿದಾಗ ಆತನ ಪತ್ನಿ ತಂಗಣಗೌಡಿಯು ಸಮಾಧಿಯಾದದ್ದನ್ನು ವಿವರಿಸುತ್ತದೆ.[೫]

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವೆ ಗ್ರಾಮದ ಒಂದು ಶಾಸನ ಬುಳ್ಳಿದೇವ ಎಂಬ ಒಬ್ಬ ವ್ಯಕ್ತಿ ಮರಣಿಸಿದಾಗ ಆತನ ಮೂವರು ಪತ್ನಿಯರು ತಮ್ಮ ಪತಿಯೊಡನೆಯೇ ಸಜೀವ ಸಮಾಧಿಯಾದುದನ್ನು ಉಲ್ಲೇಖಿಸುತ್ತದೆ.[೬]

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಹರೂರ ಗ್ರಾಮದಲ್ಲಿನ ಒಂದು ಶಾಸನದ ಪ್ರಕಾರ, ಬೊಮ್ಮಗೌಡ ಎಂಬ ವ್ಯಕ್ತಿಮರಣಿಸಿದಾಗ ಆತನ ಪತ್ನಿ 'ಬೊಮ್ಮಿಗೌಡಿಯು ಸಮದಿಕುಳಿತು ಸ್ವರ್ಗಕ್ಕೆ ಸಂದಳು'.[೭]

ಈ ಮೇಲಿನ ಶಾಸನಗಳು ಪತ್ನಿಯರು ತಮ್ಮ ಪತಿಯರೊಡನೆ ಸಮಾಧಿಯಾದ ನಿದರ್ಶನಗಳಾಗಿವೆ. ಈ ಎಲ್ಲಾ ಶಾಸನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಕೆಲವು ಸಾಮಾನ್ಯ ಅಂಶಗಳನ್ನು ಗುರ್ತಿಸಬಹುದು.

೧. ಈ ಎಲ್ಲ ಶಾಸನಗಳೂ ಶೈವಧರ್ಮೀಯರ ಮಾಸ್ತಿ ಶಾಸನಗಳಾಗಿರುವುದನ್ನು ಆ ಶಾಸನ ಶಿಲ್ಪಗಳ ಮೇಲಿರುವ ಶಿವಲಿಂಗದ ಶಿಲ್ಪಗಳಿಂದ ತಿಳಿಯಬಹುದು.

೨. ಇವುಗಳಲ್ಲಿ ಹೆಚ್ಚಿನ ಶಾಸನಗಳು ೧೫ನೆಯ ಶತಮಾನದವು. ಕೇವಲ ಒಂದೇ ಒಂದು ಶಾಸನ ಮಾತ್ರ ೧೬ನೆಯ ಶತಮಾನದ ಪ್ರಾರಂಭ ಕಾಲದ್ದು (ಕ್ರಿ.ಶ. ೧೫೦೯)

೩. ಇವುಗಳಲ್ಲಿ ಒಂದರ ವಿನಹ ಉಳಿದ ಎಲ್ಲ ಶಾಸನಗಳು ಶಿವಮೊಗ್ಗ ಜಿಲ್ಲೆಯವು. ಉಳಿದ ಒಂದು ಶಾಸನ ಶಿವಮೊಗ್ಗ ಜಿಲ್ಲೆಯ ಅಂಚಿನಲ್ಲಿಯೇ ಇದೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದರೆ ಶೈವ ಧರ್ಮೀಯರಲ್ಲಿ ಶವವನ್ನು ದಹಿಸದೆ ಸಮಾಧಿ ಮಾಡುವ ಪದ್ಧತಿಯಿದೆ. ಆದ್ದರಿಂದ ಆ ಧರ್ಮಕ್ಕೆ ಸೇರಿದ ಸ್ತ್ರೀಯರು ತಮ್ಮ ಪತಿಯರ ಶವದೊಡನೆ ಸಜೀವ ಸಮಾಧಿಯಾಗಿರುವುದನ್ನು ಗುರ್ತಿಸಬಹುದು. ೧೫ನೆಯ ಶತಮಾನಕ್ಕಿಂತ ಹಿಂದಿನ ಮಾಸ್ತಿ ಶಾಸನಗಳಲ್ಲಿ ಈ ರೀತಿಯ ಸಜೀವ ಸಮಾಧಿ ಹೊಂದಿದ ಮಾಸ್ತಿ ಉಲ್ಲೇಖಗಳಲ್ಲಿರುವುದರಿಂದ ಹದಿನೈದನೆಯ ಶತಮಾನದಲ್ಲಿ ಈ ಪದ್ಧತಿಯು ಶಿವಮೊಗ್ಗ ಜಿಲ್ಲೆಯ ಶೈವರಲ್ಲಿ ಅಸ್ತಿತ್ವದಲ್ಲಿತ್ತೆಂದು ಹೇಳಬಹುದು.

ಬಂದಳಿಕೆಯ ಇಕ್ಕೈ ಮಾಸ್ತಿಯ ಶಿಲ್ಪದಲ್ಲಿ ಬಿಟ್ಟರೆ ಮೇಲೆ ಉಲ್ಲೇಖಿಸಿರುವ ಉಳಿದ ಯಾವ ಶಾಸನ ಶಿಲ್ಪದಲ್ಲಿಯೂ ಈ ರೀತಿಯ ಸಜೀವ ಸಮಾಧಿಯನ್ನು ಶಿಲ್ಪದಲ್ಲಿ ತೋರಿಸಿಲ್ಲ. ಬಂದಳಿಕೆಯ ಮಾಸ್ತಿಕಲ್ಲಿನಲ್ಲಿ ಶಿಲ್ಪದ ಮೂಲಕ ಇದನ್ನು ತೋರಿಸಿರುವುದು ಗಮನಾರ್ಹ ಅಂಶ. ಈ ಶಿಲ್ಪದ ಮಹತ್ವವನ್ನು ಇದುವರೆಗೂ ಯಾರೂ ಗಮನಿಸಿರಲಿಲ್ಲವೆಂದು ತೋರುತ್ತದೆ. ಕರ್ನಾಟಕದಲ್ಲಿ ಸತಿಪದ್ಧತಿಯ ಬಗ್ಗೆ ಪಿ.ಎಚ್.ಡಿ. ಮಹಾ ಪ್ರಬಂಧವನ್ನು ರಚಿಸಿರುವ ಶ್ರೀ ಬಿ.ಎಸ್. ಶೇಟೆಯವರು ಈ ಶಾಸನವನ್ನು ಗಮನಿಸಿ ತಮ್ಮ ಕೃತಿಯಲ್ಲಿ ಈ ಶಾಸನವನ್ನು

೫. ಎ.ಕ. VIII - ಸೊರಬ. 496 ಕುಪ್ಪೆ ಕಾಲ ಕ್ರಿ.ಶ. 1457

೬. ಎ.ಕ. VII-I. ಶಿಕಾರಿಪುರ 93. ಬಳ್ಳಿಗಾವೆ ಕಾಲ ಕ್ರಿ.ಶ. 1422

೭. ಎ.ಕ. VIII, ಸೊರಬ 165 ಹರೂರು ಕಾಲ. ಕ್ರಿ.ಶ. 1509

ಉಲ್ಲೇಖಿಸಿದ್ದಾರೆ.[೨] ಆದರೆ ಅವರು ಈ ಶಿಲ್ಪದ ಮಹತ್ವವನ್ನು ಗಮನಿಸಿಲ್ಲ. ಹಾಗೂ ಇದು ಸಜೀವ ಸಮಾಧಿಯ ಶಾಸನ ಎಂಬುದನ್ನು ಗ್ರಹಿಸಿಲ್ಲ. ಈ ರೀತಿಯ ಪ್ರಮುಖ ವಿಷಯವೊಂದನ್ನು (ಸಜೀವ ಸಮಾಧಿಯ) ಶಿಲ್ಪದ ಮೂಲಕ ಅಭಿವ್ಯಕ್ತಿಸಿರುವ ಅಪರೂಪದ ಮಾಸ್ತಿಕಲ್ಲೆಂದು ಪ್ರಸ್ತುತ ಬಂದಳಿಕೆಯ ಮಾಸ್ತಿ ಶಾಸನವನ್ನು ಗುರ್ತಿಸಬಹುದು.

---

೨. ಡಾ. ಬಿ.ಎಸ್. ಶೇತೆ: ಕರ್ನಾಟಕದಲ್ಲಿ ಸತಿ ಪದ್ಧತಿ ಪು. 270

# ಹಾರಣಗೇರಿಯ ನವಶೋಧಿತ ಶಾತವಾಹನರ ನಾಣ್ಯಗಳು

ಡಿ. ಎನ್. ಅಕ್ಕಿ ಗೋಗಿ

ಗುಲ್ಬರ್ಗ ಜಿಲ್ಲೆಯ ಶಹಾಪುರ ತಾಲ್ಲೂಕಿಗೆ ಸೇರಿದ ಹಾರಣಗೇರಿಯು ತಾಲ್ಲೂಕು ಕೇಂದ್ರವಾದ ಶಹಪುರದಿಂದ ೧೬ ಕಿಲೋಮಿಟರ್ ದೂರದಲ್ಲಿದೆ. ಈ ಪುಟ್ಟ ಗ್ರಾಮವು ಈಗ ಭಾರತದ ಚರಿತ್ರೆಯಲ್ಲಿ ಒಂದು ಗಣ್ಯಸ್ಥಾನ ಪಡೆದುಕೊಳ್ಳಲು ಅರ್ಹವಾಗಿರುವುದು ಇತ್ತೀಚಿನ ಸಂಶೋಧನೆಗಳಿಂದ ದೃಢಪಟ್ಟಿದೆ.

ಹಾರಣಗೇರಿ ಇಂದು ಅತ್ಯಂತ ಸಣ್ಣದಾದ ಕುಗ್ರಾಮವಾಗಿದ್ದರೂ ಹಿಂದೊಂದು ಕಾಲಕ್ಕೆ ಅದೊಂದು ಅತ್ಯಂತ ಪ್ರಮುಖ ನಗರವಾಗಿದ್ದುದು ಅಲ್ಲಿಯ ಪುರಾತನ ನಿವೇಶನಗಳಲ್ಲಿ ದೊರೆಯುವ ಅವಶೇಷಗಳಿಂದ ತಿಳಿದುಬರುತ್ತದೆ. ಆ ಪ್ರಾಚೀನ ನಿವೇಶನಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಅಂದರೆ ನವಶಿಲಾಯುಗಕ್ಕೆ ಸೇರಿದ ಮಡಿಕೆ ಕುಡಿಕೆಗಳು, ಹಾಗೂ ಮೌರ್ಯರ ಮತ್ತು ಶಾತವಾಹನರ ಕಾಲದ ಹಲವಾರು ಅವಶೇಷಗಳಿಂದ.

ಈ ಹಾರಣಗೇರಿ ಗ್ರಾಮವು ಶಾತವಾಹನರ ಹಲವಾರು ಅಮೂಲ್ಯವಾದ ದಾಖಲೆಗಳು ದೊರೆತಿರುವ ಸನ್ನತಿ, ಶಿರವಾಳ, ಅಣಬಿ, ಹುರುಸಗುಂಡಗಿ ಗ್ರಾಮಗಳ ಆಸುಪಾಸಿನಲ್ಲಿದೆ. ಈ ಪ್ರದೇಶವು ಶಾತವಾಹನರ ಪ್ರಮುಖ ಕೇಂದ್ರವಾಗಿದ್ದುದು ಈಗಾಗಲೇ ಅಲ್ಲಿ ನಡೆದಿರುವ ಶೋಧನೆಗಳಿಂದ ರುಜುವಾತಾಗಿರುವುದು ಗಮನಾರ್ಹ ಅಂಶ.

ಹಾರಣಗೇರಿ ಗ್ರಾಮದ ಹೊರವಲಯದಲ್ಲಿರುವ 'ಇಂಗನಾಳು' ಎಂಬ ಬೇಚಿರಾಕ್ ಗ್ರಾಮದ ವ್ಯಾಪ್ತಿಯಲ್ಲಿ ಒಂದು ಸಣ್ಣ ಹೊಳೆ ಹರಿಯುತ್ತದೆ. ಆ ಹೊಳೆಯ ದಡದಲ್ಲಿ ಪ್ರಾಚೀನ ಜನವಸತಿಯ ಕುರುಹುಗಳು ಕಂಡುಬರುತ್ತವೆ. ಆ ಪ್ರಾಚೀನ ನಿವೇಶನದಲ್ಲಿ ಇತ್ತೀಚೆಗೆ ಕೆಲವು ಬಾಲಕರು ಆಟವಾಡುತ್ತಿದ್ದಾಗ ಹತ್ತಾರು ಸೀಸದ ನಾಣ್ಯಗಳು ಅವರಿಗೆ ದೊರೆತವು. ಅವರು ಅವುಗಳನ್ನು ಬೆಳ್ಳಿಯ ನಾಣ್ಯಗಳೆಂದು ತಿಳಿದು ಒಬ್ಬ ಆಚಾರಿಯ ಬಳಿ ಪರೀಕ್ಷೆಗೊಳಪಡಿಸಿ ಅವು ಸೀಸದ ನಾಣ್ಯಗಳೆಂದು ಖಚಿತಪಡಿಸಿಕೊಂಡು ನಿರಾಶರಾಗಿದ್ದರು. ಆ ವೇಳೆಗೆ ಈ ಸುದ್ದಿ ತಿಳಿದು ನಾನು ಅವುಗಳನ್ನು 'ಶಿವಪ್ಪಸಾಲಿ' ಎಂಬುವರ ಸಹಾಯದಿಂದ ನನ್ನ ವಶಕ್ಕೆ ತೆಗೆದುಕೊಂಡೆನು. ಆ ನಾಣ್ಯಗಳನ್ನು ನಾನು ಸಮಗ್ರವಾಗಿ ಅಧ್ಯಯನ ಮಾಡಿದುದರ ಫಲಿತವಾಗಿ ಈ ಸಂಶೋಧನ ಪ್ರಬಂಧ ರಚಿತವಾಗಿದೆ.

ನನಗೆ ದೊರೆತ ಆ ನಾಣ್ಯಗಳು ಎಲ್ಲವೂ ಸೀಸದ ನಾಣ್ಯಗಳಾಗಿವೆ. ಆ ನಾಣ್ಯಗಳು ಸುಮಾರು ೧೦ ಗ್ರಾಮ್‌ಗಳಿಂದ ಹಿಡಿದು ೧೯ ಗ್ರಾಮ್‌ಗಳವರೆಗೆ ತೂಕವುಳ್ಳವುಗಳಾಗಿವೆ.

ಸುಮಾರು ಮೂರು ಸೆಂಟೀಮೀಟರ್ ಅಗಲ ಹಾಗೂ ಮೂರು ಸೆಂಟೀಮೀಟರ್ ಎತ್ತರ ೦.೨ ಸೆಂಟೀಮೀಟರ್ ಮಂದವಾಗಿವೆ.

ಈ ನಾಣ್ಯಗಳ ಬಗೆಗಿನ ವಿವರಗಳು

| ಕ್ರಮ ಸಂಖ್ಯೆ | ಅಗಲ ಸೆಂ.ಮೀ | ಎತ್ತರ ಸೆಂ.ಮೀ | ಮಂದ ಸೆಂ.ಮೀ | ತೂಕ ಗ್ರಾಂ | ನಾಣ್ಯದ ಮೇಲಿನ ಬರಹ |
|---|---|---|---|---|---|
| ೧ | ೩.೧ | ೩.೨ | ೦.೧೫ | ೧೪.೭೦ | ರಾಞೋಗೋತಮಿ ಪುತನ ಸಿರಿ... ಕಣಿಸ |
| ೨ | ೩.೧ | ೩.೧ | ೦.೨ | ೧೪.೭೦ | ರಾಞೋಗೋತಮಿ ಪುತಸ ಸಿರಿ ಸಾತಕಣಿಸ |
| ೩ | ೩.೧ | ೩.೦ | ೦.೨ | ೧೭.೫೦ | .ಞೋಗೋತಮಿಪುತಸಸಿರಿ ಸಾತಕಣಿಸ |
| ೪ | ೩.೦ | ೩.೦ | ೦.೨ | ೧೯.೩೫ | ರಾಞೋಗೋತಮಿ ಪುತಸ ಸಿರಿ ಸಾತಕಣಿಸ |
| ೫ | ೨.೫ | ೩.೦ | ೦.೧೫ | ೯.೩೫ | .. ಗೋತಮಿ ಪುತಸ ಸಿರಿ ಸಾತಕಣಿಸ |
| ೬ | ೨.೯ | ೨.೬ | ೦.೨ | ೧೧.೮೫ | ರಾಞೋಗೋ........ ಕಣಿಸ |
| ೭ | ೨.೫ | ೨.೪ | ೦.೨ | ೧೧.೩೦ | ರಾಞೋಗೋತಮಿ ...... ಸಾತಕಣಿಸ |
| ೮ | ೨.೩ | ೨.೫ | ೦.೨ | ೯.೦೫ | ರಾಞೋಗೋತ .... ಕಣಿಸ |
| ೯. | ೨.೪ | ೨.೪ | ೦.೪ | ೧೦.೬೭ | ಗೋತಮಿಪುತಸ ...... |

## ನಾಣ್ಯಗಳ ಮೇಲಿನ ಶಿಲ್ಪ

ಈ ಎಲ್ಲ ನಾಣ್ಯಗಳ ಒಂದು ಬದಿಯಲ್ಲಿ ಶಾತವಾಹನರ ಕಾಲದ ದಾಕ್ಷಿಣಾತ್ಯ ಬ್ರಾಹ್ಮಿಲಿಪಿಯಲ್ಲಿ 'ಗೋತಮೀ ಪುತಸ ಸಿರಿಸಾತಕಣಿಸ' ಎಂಬ ಬರಹವನ್ನು ನಾಣ್ಯದ ಸುತ್ತಲೂ ವೃತ್ತಾಕಾರವಾಗಿ ಉಬ್ಬುಶಿಲ್ಪದಂತೆ (ಕ್ಯಾಲಿಗ್ರಫಿ) ಅಚ್ಚುಹಾಕಲಾಗಿದೆ. ಹಾಗೂ ಶಾತವಾಹನರ ನಾಣ್ಯಗಳಲ್ಲಿ ಸರ್ವೇ ಸಾಧಾರಣವಾಗಿ ಕಂಡುಬರುವ ಸ್ತೂಪ ಹಾಗೂ ಉಜ್ಜೈನಿ ಚಿಹ್ನೆ ಇದೆ.

ಈ ನಾಣ್ಯಗಳ ಮೇಲಿನ ಬರಹದಿಂದ ಇವು ಗೌತಮೀಪುತ್ರ ಶಾತಕರ್ಣಿಯ ನಾಣ್ಯಗಳೆಂಬುದನ್ನು ಗುರ್ತಿಸಬಹುದು. ಶಾತವಾಹನ ವಂಶದ ಹಾಲರಾಜನ ನಂತರ ಕ್ರಿ.ಶ. ೧೦೬ರಲ್ಲಿ ಪಟ್ಟಾಭಿಷಿಕ್ತನಾದ ಗೌತಮೀಪುತ್ರ ಶಾತಕರ್ಣಿಯು ಕ್ರಿ.ಶ. ೧೩೦ರವರೆಗೆ ಅಧಿಕಾರದಲ್ಲಿದ್ದನು. ಈತನು ಶಾತವಾಹನ ವಂಶದ ಪ್ರತಿಷ್ಠೆಯನ್ನು ಉತ್ತುಂಗಕ್ಕೇರಿಸಿದಂತಹ ಅರಸ. ತ್ರಿಸಮುದ್ರತೋಯಪೀತವಾಹನ ಎಂಬ ಬಿರುದನ್ನು ಹೊಂದಿದ್ದ ಗೌತಮೀ ಪುತ್ರ ಶಾತಕರ್ಣಿಯು ಕೊಂಕಣ, ಸೌರಾಷ್ಟ್ರ, ಮಾಳವ, ಬಿರಾರ್, ಕೃಷ್ಣಾನದಿಯ ಮುಖಜ ಭೂಮಿ ಮುಂತಾದ ಪ್ರದೇಶಗಳ ಮೇಲೆ ತನ್ನ ಒಡೆತನವನ್ನು ಹೊಂದಿದ್ದನು. ನಂತರ ಕ್ರಿ.ಶ. ೧೨೪ರಲ್ಲಿ ನಹಪಾನನನ್ನು ಸೋಲಿಸಿ ಅಪರಾಂತ, ಅನೂಪ, ಸೌರಾಷ್ಟ್ರ, ಕುಕುರ, ಆಕರ ಮತ್ತು ಅವಂತಿಗಳನ್ನು ಗೆದ್ದು ವಿಜೃಂಭಣೆಯಿಂದ ಕ್ರಿ.ಶ. ೧೩೦ರವರೆಗೆ ರಾಜ್ಯಭಾರ ನಡೆಸಿದನು.

ಶಾತವಾಹನರ ನಾಣ್ಯಗಳು ಈಗ ದೊರೆತ ಪ್ರದೇಶದಲ್ಲಿ ಪ್ರಾಚ್ಯ ವಸ್ತು ಇಲಾಖೆಯವರು (ಪುರಾತತ್ವ ಇಲಾಖೆ) ಉತ್ಖನನ ನಡೆಸಿದರೆ ಮತ್ತಷ್ಟು ಅಮೂಲ್ಯವಾದ ವಿಷಯಗಳು ಹೊರಬೀಳಬಹುದು.

# ಬನ್ನೇರುಘಟ್ಟದ ಆತ್ಮಾಹುತಿ ಸ್ಮಾರಕಗಳು

ಡಿ. ಸೀತಾರೆಡ್ಡಿ

ಬೆಂಗಳೂರು ನಗರಜಿಲ್ಲೆಯ ಆನೇಕಲ್ ತಾಲ್ಲೂಕಿಗೆ ಸೇರಿದ ಬನ್ನೇರುಘಟ್ಟವು ಬೆಂಗಳೂರು ನಗರದಿಂದ ಸುಮಾರು ೧೬ ಕಿಲೋಮೀಟರ್ ದೂರದಲ್ಲಿದೆ. ಈ ಸಣ್ಣಗ್ರಾಮವು ಅಲ್ಲಿರುವ ವಿಜಯನಗರದ ಆರಂಭಕಾಲಕ್ಕೆ ಸೇರಿದ ಚಂಪಕಧಾಮ ಸ್ವಾಮಿ ದೇವಾಲಯ ಹಾಗೂ ನ್ಯಾಷನಲ್ ಪಾರ್ಕ್‌ಗಳಿಂದ ನಾಡಿನಾದ್ಯಂತ ಪ್ರಸಿದ್ಧವಾಗಿದೆ.

ಮೇಲೆ ತಿಳಿಸಿರುವ ಎರಡೂ ವಿಷಯಗಳಿಗಿಂತಲೂ ಪ್ರಮುಖವಾದ ಬನ್ನೇರುಘಟ್ಟದ ಅತ್ಯಂತ ಗಮನಾರ್ಹ ಅಂಶವೆಂದರೆ ಅಲ್ಲಿನ ಆತ್ಮಾಹುತಿ ಸ್ಮಾರಕ ಶಿಲೆಗಳು ಎಂದು ಹೇಳಬಹುದು.

ಬನ್ನೇರುಘಟ್ಟದ ಚಂಪಕಧಾಮಸ್ವಾಮಿ ದೇವಾಲಯದಿಂದ ಸುಮಾರು ಇನ್ನೂರು ಅಡಿಗಳಷ್ಟು ದೂರದಲ್ಲಿ, ದೇವಾಲಯದ ಪೂರ್ವ ದಿಕ್ಕಿನಲ್ಲಿರುವ ಒಂದು ಅರಳೀಮರದ ಸನಿಹದಲ್ಲಿ ಏಳು ಆತ್ಮಬಲಿಸ್ಮಾರಕ ಶಿಲೆಗಳನ್ನು ಒಂದರ ಪಕ್ಕದಲ್ಲಿ ಒಂದರಂತೆ ಸಾಲಾಗಿ ನಿಲ್ಲಿಸಲಾಗಿದೆ.

## ಶಿಲ್ಪ

ಈ ಆತ್ಮಾಹುತಿ ಸ್ಮಾರಕ ಶಿಲೆಗಳು ಕಣಶಿಲೆಯ (ಗ್ರಾನೈಟ್) ಚಪ್ಪಡಿಗಳಿಂದ ನಿರ್ಮಿತವಾಗಿವೆ. ವೀರಗಲ್ಲುಗಳ ಶಿಲ್ಪಗಳನ್ನು ಹೋಲುವಂತೆ ಚಪ್ಪಡಿಗಳ ಮೇಲೆ ಉಬ್ಬುಶಿಲ್ಪದ ರೀತಿಯಲ್ಲಿ ಈ ಶಿಲಾಸ್ಮಾರಕಗಳನ್ನು ನಿರ್ಮಿಸಲಾಗಿದೆ. ಇವು ಎಲ್ಲವೂ ನಾಲ್ಕು ಅಡಿ ಎತ್ತರವಾಗಿವೆ. ಇವುಗಳನ್ನು ಕೆತ್ತುವುದಕ್ಕೆಂದೇ ವಿಶೇಷವಾಗಿ ಸಿದ್ಧಪಡಿಸಿಕೊಂಡು ತಂದ ಚಪ್ಪಡಿಗಳನ್ನು ಆಯತಾಕಾರವಾಗಿ ತಯಾರಿಸಿಕೊಂಡು ಆ ಚಪ್ಪಡಿಗಳ ಅಂಚಿನಲ್ಲಿ ಸುಮಾರು ಮೂರು ಅಂಗುಲಗಳಷ್ಟು (ಫ್ರೇಂ) ಚೌಕಟ್ಟು ನಿರ್ಮಿಸಿಕೊಂಡು ಅದರ ಮಧ್ಯಭಾಗದಲ್ಲಿ ಆತ್ಮಾಹುತಿ ಮಾಡಿಕೊಂಡ ವೀರನ ಶಿಲ್ಪವನ್ನು ಕೆತ್ತಲಾಗಿದೆ. ಸಮಪಾದ ಭಂಗಿಯಲ್ಲಿ (ಸ್ಥಾನಕ, ಖಡ್ಗಾಸನ) ನಿಂತಿರುವ ಹಾಗೂ ವೀರಗಚ್ಚೆಯನ್ನು ಧರಿಸಿರುವ ಈ ವೀರರು ತಮ್ಮ ಕೈಗಳಲ್ಲಿ ಕಂಕಣ, ಕಾಲಲ್ಲಿ ಅಂದುಗೆ, ಕೊರಳಲ್ಲಿ ಸರಗಳನ್ನು ಧರಿಸಿಕೊಂಡಿದ್ದಾರೆ. ಅವರ ವೀರ ಮುಡಿಗಳು ಪರಾಕ್ರಮಿಯಾದ ಸೈನಿಕರಿಗೆ ತಕ್ಕದ್ದೆನ್ನುವಂತೆ ಶೋಭಾಯಮಾನವಾಗಿದೆ. ತಮ್ಮ ಎರಡೂ ಕೈಗಳನ್ನು ಮೇಲಕ್ಕೆತ್ತಿ ತಮ್ಮ ತಲೆಯನ್ನು ತಾವೇ ತುಂಡರಿಸಿಕೊಳ್ಳುತ್ತಿರುವಂತೆ ಇಲ್ಲಿಯ ಪ್ರತಿಯೊಂದು ಶಿಲ್ಪಗಳೂ ಚಿತ್ರಿತವಾಗಿವೆ. ಹಾಗೆ ತಮ್ಮ ತಲೆಯನ್ನು ತಾವೇ ತುಂಡರಿಸಿಕೊಳ್ಳುವಾಗಲೂ ಸಹ ಆ ವೀರರು ತಮ್ಮ ಮುಖದಲ್ಲಿ ಸಾವಿನ ಅಂಜಿಕೆಯನ್ನಾಗಲೀ, ಆತಂಕವನ್ನಾಗಲೀ ತೋರ್ಪಡಿಸದೆ ಮರಣವೇ ಮಹಾನವಮಿ ಎನ್ನುವಂತೆ ಸಂತಸದಿಂದಲೇ ಸಾವಿಗೆ ಎದೆಯೊಡ್ಡಿ ನಿಂತಿರುವುದು ಕಂಡುಬರುತ್ತದೆ.

ಈ ವೀರರ ಆತ್ಮಸ್ಥೈರ್ಯ, ಸಾವಿಗಂಜದ ಕಲಿತನ, ಕೆಚ್ಚೆದೆಗಳು ಅವರ ಹಸನ್ಮುಖದಲ್ಲಿ ಪ್ರತಿಫಲಿಸುವಂತೆ ಮಾಡುವಲ್ಲಿ ಶಿಲ್ಪಿಯು ಯಶಸ್ವಿಯಾಗಿದ್ದಾನೆನ್ನಬಹುದು.

ಯುದ್ಧರಂಗದಲ್ಲಿ ಹೋರಾಡುವ ಸೈನಿಕರೂ ಸಹ ಸಾವಿಗಂಜದೆ ಹೋರಾಡುತ್ತಾರೆ. ಆದರೆ ಅವರಿಗೆ ಯುದ್ಧರಂಗದಿಂದ ಬದುಕಿ ಬರುವ ಸಾಧ್ಯತೆಗಳಿರುತ್ತವೆ. ಆ ರೀತಿಯ ಆಶಾಭಾವನೆಯಿಂದಲೇ ಅವರು ಹೋರಾಡುತ್ತಾರೆಂದು ಹೇಳಬಹುದು. ಆದರೆ ತಮ್ಮ ಮರಣವನ್ನು ತಾವೇ ಸ್ವತಃ ಆಹ್ವಾನಿಸಿ ತಮ್ಮ ಕೈಯಾರೆ ತಾವೇ ತಮ್ಮ ಸಾವನ್ನು ತಂದುಕೊಳ್ಳುವುದು ಅತ್ಯಂತ ಧೈರ್ಯಶಾಲಿಗಳಿಗೆ ಮಾತ್ರ ಸಾಧ್ಯವೆಂದು ಹೇಳಬಹುದು. ಈ ರೀತಿ ಆತ್ಮಾಹುತಿ ಮಾಡಿಕೊಂಡ ಏಳುಮಂದಿ ಬನ್ನೇರುಘಟ್ಟದಲ್ಲಿದ್ದರೆಂದು ಈ ಶಿಲ್ಪಗಳಿಂದ ತಿಳಿಯುತ್ತದೆ. ಈ ರೀತಿ ಆತ್ಮಾಹುತಿ ಮಾಡಿಕೊಳ್ಳಲು ಕಾರಣವೇನಿರಬಹುದೆಂದು ಪರಾಮರ್ಶಿಸಿದಾಗ ಎರಡು ರೀತಿಯ ಆತ್ಮಬಲಿ ಪದ್ಧತಿಗಳು ಪ್ರಾಚೀನ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದುದು ಕಂಡು ಬರುತ್ತದೆ. ಅವು ಯಾವುವೆಂದರೆ ೧. ಧಾರ್ಮಿಕ ಆತ್ಮಬಲಿ ೨. ಲೌಕಿಕ ಆತ್ಮಬಲಿ.

ಲೌಕಿಕ ಆತ್ಮಬಲಿಯಲ್ಲಿ ತಮ್ಮ ಒಡೆಯನಿಗೆ ಒಳಿತಾಗಲೆಂದು ಹಾರೈಸಿ ಆತ್ಮಬಲಿ ಮಾಡಿಕೊಳ್ಳುತ್ತಿದ್ದ ಹಾಗೂ ತಮ್ಮ ಒಡೆಯರಿಗೆ ಒಳ್ಳೆಯದಾದರೆ ತಾವು ಆತ್ಮಾಹುತಿ ಮಾಡಿಕೊಳ್ಳುತ್ತೇವೆಂದು ಪ್ರತಿಜ್ಞೆ ಮಾಡಿ ಅದರಂತೆ ನಡೆಯುತ್ತಿದ್ದರು. ಮತ್ತು ತಮ್ಮ ಒಡೆಯರೇನಾದರೂ ಸತ್ತರೆ ಆ ಕೂಡಲೇ ತಾವೂ ಮರಣಿಸುತ್ತೇವೆಂದು ಪ್ರತಿಜ್ಞೆಗೈಯುವರೂ ಸಹ ಆತ್ಮಾಹುತಿ ಮಾಡಿಕೊಳ್ಳುತ್ತಿದ್ದರು. ಅದೇ ರೀತಿ ತಮ್ಮ ಪತಿ ಮರಣಿಸಿದಾಗ ಅವರೊಡನೆ ತಾವೂ ಸಹಗಮನ ಮಾಡುತ್ತಿದ್ದ ಸ್ತ್ರೀಯರಿದ್ದರು.

ಅದೇ ರೀತಿ ಧಾರ್ಮಿಕ ಆತ್ಮಾಹುತಿಗಳಲ್ಲಿ ತಮ್ಮ ಇಷ್ಟದೇವರ ಪ್ರೀತ್ಯರ್ಥವಾಗಿ, ಮೋಕ್ಷ ಸಂಪಾದನೆಗಾಗಿ, ಕೆಲವು ಪರ್ವದಿನಗಳಲ್ಲಿ ತಮ್ಮ ಇಷ್ಟದೈವದ ಮುಂದೆ ಆತ್ಮಾಹುತಿ ಮಾಡಿಕೊಳ್ಳುತ್ತಿದ್ದರು.

ಪ್ರಸ್ತುತ ಬನ್ನೇರುಘಟ್ಟದಲ್ಲಿ ದೊರೆತಿರುವ ಆತ್ಮಾಹುತಿ ಕಲ್ಲುಗಳು ಯಾವ ಬಗೆಯದೆಂದು ಪರಾಮರ್ಶಿಸೋಣ. ಈ ಆತ್ಮಾಹುತಿ ಸ್ಮಾರಕಗಳು ದೊರೆತಿರುವ ಪರಿಸರವನ್ನು ಗಮನಿಸಿದಾಗ ತಿಳಿಯುವ ಅಂಶವೆಂದರೆ ಈ ಸ್ಮಾರಕಗಳು ಇಲ್ಲಿನ ಚಂಪಕಧಾಮಸ್ವಾಮಿ ದೇವಾಲಯದಿಂದ ಸುಮಾರು ೧೫೦ ಅಡಿದೂರದಲ್ಲಿರುವ ಸುಮಾರು ೩೦ ಅಡಿ ಎತ್ತರದ ಗರುಡಗಂಭದ ಬಳಿ ಇರುವುದನ್ನು ಗಮನಿಸಬಹುದು. ಪ್ರಾಯಃ ಆ ಗರುಡ ಗಂಭದ ಬಳಿಯಲ್ಲಿ ಭಕ್ತಾದಿಗಳು ಆತ್ಮಾಹುತಿ ಮಾಡಿಕೊಳ್ಳುತ್ತಿದ್ದರೆಂದು ಕಾಣುತ್ತದೆ. ಈ ಹೇಳಿಕೆಗೆ ಆಧಾರವಾಗಿ ಆ ಸ್ತಂಭದ ಬುಡದಲ್ಲಿಯೇ ಎರಡು ಶಿರಸ್ಸುಗಳ ಶಿಲ್ಪಗಳು ನೆಲದಲ್ಲಿ ಪ್ರತಿಷ್ಠಿತವಾಗಿರುವುದನ್ನು ಕಾಣಬಹುದು. ಆ ಶಿರಸ್ಸುಗಳಲ್ಲಿ ಒಂದು ಪುರುಷನದು, ಮತ್ತೊಂದು ಸ್ತ್ರೀಯದು. ಬಹುಶಃ ದಂಪತಿಗಳಿಬ್ಬರು ತಮ್ಮ ಶಿರವನ್ನು ತಾವೇ ಕತ್ತರಿಸಿಕೊಂಡು ಆತ್ಮಾಹುತಿ ಮಾಡಿಕೊಂಡಿದ್ದರ ಸ್ಮಾರಕವಾಗಿ ಆ ಶಿರಗಳನ್ನು ಅಲ್ಲಿ ಸ್ಥಾಪಿಸಿರಬಹುದು.

ಈ ಗರುಡಗಂಭವು ಮೇಲ್ನೋಟಕ್ಕೆ ಚಂಪಕಧಾಮಸ್ವಾಮಿ ದೇವಾಲಯಕ್ಕೆ ಎದುರಾಗಿ ನಿಲ್ಲಿಸಿರುವಂತೆ ಕಂಡು ಬಂದರೂ ಸಹ ಕೂಲಂಕಷ ಪರಿಶೀಲನೆಯಿಂದ ಆ ಸ್ತಂಭವು ಚಂಪಕಧಾಮ ಸ್ವಾಮಿದೇವಾಲಯಕ್ಕಿಂತ ಪ್ರಾಚೀನವಾದದ್ದೆಂದು ತಿಳಿದು ಬರುತ್ತದೆ. ಚಂಪಕಧಾಮ ಸ್ವಾಮಿ ದೇವಾಲಯವು ಹೊಯ್ಸಳರ ಅಂತಿಮಕಾಲ ಹಾಗೂ ವಿಜಯನಗರದ ಆರಂಭ ಕಾಲದ್ದೆಂದು

ಸ್ಪಷ್ಟವಾಗಿ ಅರಿವಾಗುತ್ತದೆ. ಆದರೆ ಈ ಗರುಡಗಂಭವು ಶಿಲ್ಪದ ದೃಷ್ಟಿಯಿಂದ ಸುಮಾರು ಕ್ರಿ.ಶ. ೧೦ನೆಯ ಶತಮಾನದ್ದೆನ್ನಬಹುದು. ಹನ್ನೊಂದನೆಯ ಶತಮಾನದ ವೀರಗಲ್ಲುಗಳ ಶಿಲ್ಪಗಳನ್ನು ಹೋಲುವುದರಿಂದ ಇಲ್ಲಿರುವ ಆತ್ಮಾಹುತಿ ಶಿಲ್ಪಗಳು ಸುಮಾರು ೧೧ನೆಯ ಶತಮಾನದ್ದೆಂದು ಗುರುತಿಸಬಹುದು.

# ಕೇರಳದಲ್ಲಿ ಜೈನ ಶಾಸನಗಳು ಮತ್ತು ಬಸದಿಗಳು

---

ಡಾ. ವಸಂತಕುಮಾರಿ

ದ್ರಾವಿಡ ದೇಶದ ಜೈನ ಧರ್ಮದ ಇತಿಹಾಸವೆಂದರೆ ತಮಿಳುನಾಡು ಮತ್ತು ಕೇರಳ ರಾಜ್ಯಗಳ ಜೈನ ಧರ್ಮದ ಇತಿಹಾಸವೇ ಆಗಿದೆ. ಅರಬ್ಬೀ ಸಮುದ್ರಕ್ಕೂ, ಪಶ್ಚಿಮ ಘಟ್ಟಕ್ಕೂ ಮಧ್ಯೆ ಇರುವ ಕೇರಳ ರಾಜ್ಯವು ಮಲಬಾರ, ಕೊಚ್ಚಿನ ಮತ್ತು ತಿರುವಾಂಕೂರು ಎಂಬ ಮೂರು ಭಾಗಗಳನ್ನೊಳಗೊಂಡಿದೆ. ರಾಜ್ಯದ ಈ ಭಾಗಗಳಿಗೆ ಒಟ್ಟು ಕೇರಳ ಎಂಬ ಹೆಸರು ರೂಢಿಗೆ ಬಂದದ್ದು ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆಯೇ. ಆದರೂ ಮಹಾ ಕಾವ್ಯಗಳಲ್ಲಿ, ಮೌರ್ಯ ಚಕ್ರಾಧಿಪತಿ ಚಂದ್ರಗುಪ್ತನ ಆಸ್ಥಾನದ ಗ್ರೀಕ್ ರಾಯಭಾರಿ ಆಗಿದ್ದ ಮೆಗಾಸ್ತನೀಸ್‌ನ ಬರವಣಿಗೆಯಲ್ಲಿ 'ಕೇರಳಾಪುರ' 'ಚೇರ ರಾಜ್ಯ' ಮತ್ತು 'ಮಲಬಾರಿನ ನಾಯರ್' ಈ ಹೆಸರುಗಳು ಉಲ್ಲೇಖಿತವಾಗಿವೆ. ಅಲ್ಲದೆ, ಅಶೋಕನ ಕಾಲದಲ್ಲಿ ಮೌರ್ಯ ಸಾಮ್ರಾಜ್ಯವು ಚೋಳ, ಪಾಂಡ್ಯ, ಸತ್ಯಪುರ ಮತ್ತು ಕೇರಳಾಪುರಗಳನ್ನೂ ಒಳಗೊಂಡಿತ್ತು, ಈ ಬಗ್ಗೆ ಆ ಚಕ್ರವರ್ತಿಯ ಶಾಸನಗಳಲ್ಲಿ ಮಾಹಿತಿ ಇದೆ.

ಕೇರಳ ರಾಜ್ಯವು ಚೇರ, ಪಾಂಡ್ಯ ಮತ್ತು ಚೋಳರ ಅಧಿಪತ್ಯಕ್ಕೆ ಒಳಪಟ್ಟಿತ್ತು. ಜೈನ ಧರ್ಮಕ್ಕೆ ಸಂಬಂಧಿಸಿದಂತೆ ಇಲ್ಲಿ ದೊರಕಿರುವ ಶಾಸನಗಳು ಸಂಸ್ಕೃತ, ತಮಿಳು ಮತ್ತು ಮಲೆಯಾಳಂ ಭಾಷೆಯಲ್ಲಿವೆ; ಅಲ್ಲದೆ, ವೈನಾಡು ವಿಭಾಗದಲ್ಲಿ ಕೆಲವು ಕನ್ನಡ ಭಾಷೆ ಮತ್ತು ಲಿಪಿಯ ಶಾಸನಗಳೂ ದೊರಕಿವೆ. ಶಾಸನಗಳ ಜೊತೆಗೆ ಶಿಥಿಲವಾಗಿರುವ ಮಂದಿರಗಳು, ಅವುಗಳ ಭಗ್ನಾವಶೇಷಗಳು ತಪೋಧರರ ನೆಲೆಯ ನೈಸರ್ಗಿಕ ಗಿರಿಧಾಮಗಳಲ್ಲಿರುವ ಗುಹೆಗಳು, ಗುಹಾಂತರ್ದೇವಾಲಯಗಳು ಮತ್ತು ಸಾಹಿತ್ಯ ಕೃತಿಗಳು ಈ ರಾಜ್ಯದಲ್ಲಿ ಜೈನ ಧರ್ಮದ ಪ್ರಭಾವ ಮತ್ತು ಇಳಿಮುಖ ದರ್ಶನವನ್ನು ಪದರುಪದರಾಗಿ ಮೂಡಿಸುತ್ತವೆ.

ಉತ್ತರ ಭಾರತದಿಂದ ದಕ್ಷಿಣದತ್ತ ಸಂಘಗಳು ವಲಸೆ ಬಂದದ್ದು ದಕ್ಷಿಣ ಭಾರತದ ಜೈನ ಧರ್ಮದ ಬೆಳವಣಿಗೆಯ ದೃಷ್ಟಿಯಲ್ಲಿ ಅದ್ಭುತ ಘಟನೆಯೇ ಆಗಿದೆ. ಸಾಮಾನ್ಯ ನಂಬಿಕೆಯ ಪ್ರಕಾರ ಕ್ರಿ.ಪೂ. ಮೂರನೇ ಶತಮಾನದಲ್ಲಿ ಸಂಭವಿಸಿದ ಜೈನ ಮುನಿ ಸಂಘಗಳ ವಲಸೆ ಮುಂದೆ ಅನೇಕ ಶತಮಾನಗಳವರೆಗೆ ಮುಂದುವರಿಯಿತು, ಅಶೋಕನ ಗಿರಿನಾರ ಶಾಸನ ಒಂದರಲ್ಲಿ ಜೈನ ಯತಿಗಳು ದಕ್ಷಿಣದೆಡೆಗೆ ವಲಸೆ ಬಂದು ದ್ರಾವಿಡ ದೇಶದ ಕೇರಳದ ಅನೇಕ ಪ್ರದೇಶಗಳಲ್ಲಿ ನೆಲೆ ನಿಂತ ಉಲ್ಲೇಖವಿದೆ. 'ಕೇರಳದಲ್ಲಿ ಮಲಬಾರ ಪ್ರದೇಶವನ್ನು ಮೊಟ್ಟಮೊದಲು ಆರ್ಯೀಕರಣಗೊಳಿಸಿದವರು ಜೈನ ಧರ್ಮ ಪ್ರಚಾರ ಸಂಘದವರೇ ಆಗಿದ್ದರು. ಕ್ರಿ.ಪೂ. ಮೂರನೇ ಶತಮಾನದಲ್ಲಿ, ಅಂದರೆ ಅಶೋಕ ಚಕ್ರವರ್ತಿಯ ಕಾಲದಲ್ಲಿ ಈ ಕಾರ್ಯಾಚರಣೆ

ಸಂಭವಿಸಿತು' ಎಂಬೀ ಅಭಿಪ್ರಾಯವನ್ನು ಸುಪ್ರಸಿದ್ಧ ವಿದ್ವಾಂಸ ಫರ್ಗೂಸನ್ ಅವರು ವ್ಯಕ್ತಪಡಿಸಿದ್ದಾರೆ.

ಕೇರಳದ ಪ್ರಾಚೀನ ಇತಿಹಾಸದಲ್ಲಿ ಪ್ರಮುಖವಾಗಿ ಕಾಣಿಸಿಕೊಳ್ಳುವ ರಾಜಮನೆತನ ಚೇರವಂಶವಾಗಿದೆ. 'ಚೇರ' ಶಬ್ದದ ಅರ್ಥವೇನೂ ತಿಳಿದುಬರುವುದಿಲ್ಲ. ಅಶೋಕನ ಶಾಸನದಲ್ಲಿ ಇವರನ್ನು ಕೇರಳ ಪುತ್ರರೆಂದು ಸಂಬೋಧಿಸಲಾಗಿದೆ. ದ್ರಾವಿಡ ದೇಶದ ಪ್ರಾಚೀನ ಇತಿಹಾಸದ ಸೇತುಬಂಧವಾಗಿರುವ ಸಂಗಂ ಯುಗದಿಂದಲೇ ಚೇರರ ಇತಿಹಾಸವನ್ನು ಗುರುತಿಸುವ ಪ್ರಯತ್ನ ನಡೆದಿದೆ. ಆದಾಗ್ಯೂ, ಈ ರಾಜ್ಯದ ಜೈನ ಧರ್ಮದ ಪ್ರಾಚೀನತೆ ಮತ್ತು ರಾಜಪೋಷಣೆ ಈ ಅಂಶಗಳನ್ನು ಐತಿಹಾಸಿಕ ಸಾಧನಗಳ ಪದರಿನಲ್ಲಿ ಅನ್ವೇಷಣೆ ಮಾಡಿದಾಗ, ಪ್ರಮುಖವಾಗಿ ಕಾಣಿಸಿಕೊಳ್ಳುವ ರಾಜ 'ಸೇಂಗುಟ್ಟವನ್' ಆಗಿದ್ದಾನೆ. ಈ ರಾಜನ ಬಗ್ಗೆ ಶಿಲಪ್ಪದಿಕಾರಂ, ಪದಿರುಪಟ್ಟು ಮುಂತಾದ ಗ್ರಂಥಗಳಲ್ಲಿ ವಿವರಣೆ ಇದೆ. 'ಸೇಂಗುಟ್ಟವನ್' ರಾಜನು ಕ್ರಿ.ಶ. ಸುಮಾರು ಎರಡನೇ ಶತಮಾನದ ಉತ್ತರಾರ್ಧದಲ್ಲಿ ಆಳುತ್ತಿದ್ದನು. ಇವನು ಸರ್ವಧರ್ಮ ಸಹಿಷ್ಣುವೆಂದು ಖ್ಯಾತಿಗಳಿಸಿದ್ದನು. ಜೈನ ಧರ್ಮದಲ್ಲಿ ಈ ರಾಜನಿಗೆ ವಿಶೇಷ ಅಭಿಮಾನವಿತ್ತು. ಶೈವ ಧರ್ಮಾನುಯಾಯಿ ಆದ 'ಸೇಂಗುಟ್ಟವನ್' ಜೈನ ಧರ್ಮದ ಬಗ್ಗೆ ಉದಾತ್ತ ಭಾವನೆ ಉಳ್ಳವನಾಗಿದ್ದನು.

ಚೇರರ ಆಡಳಿತ ಸುಮಾರು ಕ್ರಿ.ಶ. ೮ನೇ ಶತಮಾನದ ಸಮಯಕ್ಕೆ ಕೊನೆಗೊಂಡಿತು. ನಂತರ ಈ ವಂಶದ ವಿವಿಧ ಶಾಖೆಗಳು ಅಲ್ಲಲ್ಲಿ ತಮ್ಮ ಆಧಿಪತ್ಯವನ್ನು ಸ್ಥಾಪಿಸಿಕೊಂಡು ಪಲ್ಲವ, ಮತ್ತು ಚೋಳ ದೊರೆಗಳ ಸಾಮಂತ ನಾಯಕರಾಗಿ ಅಧಿಕಾರ ನಿರ್ವಹಿಸುತ್ತಿದ್ದರು. ಇವರಲ್ಲಿ 'ಆರ್ಯ' ಮತ್ತು 'ಪೆರುಮಾಳ' ನಾಯಕರು ಪ್ರಮುಖರು. ಕೇರಳದಲ್ಲಿ ಇರುವ ಶ್ರಮಣರ ಗುಹೆಗಳು ಮತ್ತು ಶಿಲಾನ್ಯಾಸ ಬಸದಿಗಳ ಸಮೀಕ್ಷೆಯನ್ನು ಮತ್ತು ಈ ರಾಜ್ಯದ ಜೈನ ಐತಿಹಾಸಿಕ ಘಟನಾವಳಿಯನ್ನು ಇಲ್ಲಿ ಸಂಕ್ಷಿಪ್ತವಾಗಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

## ತಿರುಕಾರನ್ನತ್ತು ಮಲೈ (Tirucchanattu-malai)

'ತಿರುಕಾರನ್ನತ್ತು ಮಲೈ' ಎಂಬೀ ನೈಸರ್ಗಿಕ ಗಿರಿಧಾಮಕ್ಕೆ ಪೂರ್ವದಲ್ಲಿ 'ತಿರುಚಾರಣತ್ತು ಮಲೈ' ಎಂಬ ಹೆಸರಿತ್ತು.[೧] ತಿರುಚಾರಣತ್ತು ಮಲೈ ಎಂದರೆ, ಜೈನ ಶ್ರಮಣರು ನೆಲೆಸಿದ್ದ ಪವಿತ್ರವಾದ ಗುಡ್ಡ ಎಂದರ್ಥ, ತಮಿಳು ಕೃತಿ ಚೂಡಾಮಣಿ ನಿಘಂಟುವಿನಲ್ಲಿ ಎಂಟು ವಿವಿಧ 'ಋದ್ಧಿ ಚಾರಣ'ರ ಉಲ್ಲೇಖವಿದೆ. ಸ್ಥಳ ಚಾರಣರು, ಜಲ ಚಾರಣರು, ಪುಷ್ಪ ಚಾರಣರು, ತಂತು ಚಾರಣರು, ಫಲ ಚಾರಣರು, ಚತುರ ಅಂಗುಲ ಚಾರಣರು, ಶಂಖ ಚಾರಣರು ಮತ್ತು ಆಕಾಶ ಚಾರಣರು.[೨] ತಪಸಿದ್ಧಿ ಪಡೆದವರಿಗೆ ಲಭ್ಯವಾಗುವ ಮಹಿಮೆಯೇ 'ಋದ್ಧಿ'. ಚಾರಣ ಮುನಿಗಳ ತಪಸ್ಸಿನ ನಿಧಿಯಿಂದ ಬೆಳಗಿದ ಈ ನೈಸರ್ಗಿಕ ತಪೋಗಿರಿಧಾಮ ಕೇರಳದ ಜೈನ ಧರ್ಮಾನುಯಾಯಿಗಳ ಪವಿತ್ರ ಕ್ಷೇತ್ರವಾಗಿಯೇ ಅನೇಕ ಶತಮಾನದವರೆಗೂ ಸುರಕ್ಷಿತವಾಗಿತ್ತು.

---

೧. ದಕ್ಷಿಣ ತಿರುವಾಂಕೂರು

೨. ಋದ್ಧಿ ಐದು ಬಗೆ ಎಂದು ಜಿನಸೇನಾಚಾರ್ಯರು ಮಹಾಪುರಾಣದಲ್ಲಿ ಹೇಳಿದೆ. 1) ಔಷಧರ್ಧಿ 2) ರಸರ್ಧಿ 3) ಬಲರ್ಧಿ 4) ಅಕ್ಷೀಣಾವಸಥರ್ಧಿ 5) ಅಕ್ಷೀಣಮಹಾನಸಋದ್ಧಿ ಇವು ಎಂಟು ಎಂದು ಮಾಘಣಂದ್ಯಾಚಾರ್ಯರು ಶಾಸ್ತ್ರಸಾರ ಸಮುಚ್ಚಯ ಹೇಳಿದೆ. 1) ಬುದ್ಧಿಋದ್ಧಿ 2) ಕ್ರಿಯಾ ಋದ್ಧಿ 3) ವಿಕ್ರಿಯಾ ಋದ್ಧಿ 4) ತಪೋಋದ್ಧಿ 5) ಬಲಋದ್ಧಿ 6) ಔಷಧರ್ಧಿ 7) ರಸರ್ಧಿ 8) ಅಕ್ಷೀಣಋದ್ಧಿ

ಕ್ರಿ.ಶ. ಹದಿಮೂರನೇ ಶತಮಾನದವರೆಗೂ ಈ ಗಿರಿಧಾಮಕ್ಕೆ ದ್ರಾವಿಡ ದೇಶದ ನಾನಾ ಭಾಗಗಳಿಂದ ಧರ್ಮನಿಷ್ಠಾವಂತ ಭಕ್ತಾದಿಗಳು ಸಂದರ್ಶಿಸುತ್ತಿದ್ದರು. ದಕ್ಷಿಣ ಅರ್ಕಾಟ್ ಜಿಲ್ಲೆಯ ತಿರುನಾರುಂಗೊಂಡೈ ಮತ್ತು ತಂಜಾವೂರಿನ ಕುಡವಾಸಲ್ ಇಲ್ಲಿಯ ಭಕ್ತಾದಿಗಳು ಈ ಕ್ಷೇತ್ರ ದರ್ಶನ ಮಾಡಿದ ವಿವರ ಶಾಸನಗಳಲ್ಲಿದೆ.

ತಿರುಚಾರಣತ್ತು ಮಲೈಗೆ ಸೇರಿದಂತೆ ಚಿತ್ತರಾಲ್ ಭಗವತಿ ದೇವಾಲಯವಿದೆ. ಇಲ್ಲಿಯ ಮೂರು ಚಾರಣ ಗುಹೆಗಳು ಒಂದಕ್ಕೊಂದು ಆತುಕೊಂಡಿದ್ದು ಮಧ್ಯದ ಗುಹಾಂತರ್ದೇವಾಲಯವು ಇಂದು ಭಗವತಿ ಮಂದಿರವೆಂದೇ ಪ್ರಸಿದ್ಧಿ ಪಡೆದಿದೆ. ಇನ್ನೆರಡು ಗುಹೆಗಳಲ್ಲಿ ಪಾರ್ಶ್ವನಾಥ, ಮಹಾವೀರ ತೀರ್ಥಂಕರರ ವಿಗ್ರಹಗಳಿವೆ. ಚಾರಣ ನೆಲೆಯಾಗಿದ್ದ ಈ ನೈಸರ್ಗಿಕ ಗಿರಿಧಾಮವು ಕ್ರಿ.ಶ. ಸುಮಾರು ಹದಿಮೂರನೇ ಶತಮಾನದವರೆಗೂ ಜೈನ ತೀರ್ಥಕ್ಷೇತ್ರವಾಗಿಯೇ ಇತ್ತು. ಇಲ್ಲಿಯ ಶಾಸನಗಳು ಈ ವಿಚಾರವನ್ನು ದೃಢೀಕರಿಸುತ್ತವೆ. ಈ ಕ್ಷೇತ್ರ ಸಂದರ್ಶನ ಮಾಡಿದ ಭಕ್ತಾದಿಗಳು ಭಗವತಿ ಗುಹಾಂತರ್ದೇವಾಲಯಕ್ಕೆ ಚಾಚಿಕೊಂಡಿರುವ ಬಂಡೆಗಳ ಮೇಲೆ ತೀರ್ಥಂಕರರ, ಯಕ್ಷ, ಯಕ್ಷಿಯರ ವಿಗ್ರಹಗಳನ್ನು ಕಡೆಯಿಸಿ, ನೆನಪಿನ ಕುರುಹಾಗಿ ತಮ್ಮ ಹೆಸರು, ಗುರು ಪರಂಪರೆ ಹಾಗೂ ತಾವು ನೀಡಿದ ದಾನದ ವಿವರಣೆಯನ್ನು ಕೆತ್ತಿಸಿದ್ದಾರೆ. ಈ ಶಾಸನಗಳು ಪ್ರಾಚೀನ ಮಲೆಯಾಳಂ ವಟ್ಟೆಲುಟ್ಟು ಲಿಪಿಯಲ್ಲಿವೆ. ಈ ನೈಸರ್ಗಿಕ ಗಿರಿಧಾಮವು ಕ್ರಿ.ಶ. ಒಂಬತ್ತನೇ ಶತಮಾನದವರೆಗೂ ಶ್ರಮಣರ ನೆಲೆಯೇ ಆಗಿದ್ದಿತು. ಕ್ರಿ.ಶ. ೮೭೯ ಮತ್ತು ಕ್ರಿ.ಶ. ೮೯೯ರ ಎರಡು ಶಾಸನಗಳಲ್ಲಿ 'ಆಯ್ಯ' ದೊರೆ ವರಗುಣ ವಿಕ್ರಮಾದಿತ್ಯನ ಕಾಲದಲ್ಲಿ ಜೈನ ಸನ್ಯಾಸಿನಿ ಗುಣಾದಂಗಿ ಕುರ್‍ರಟ್ಟಿಯರು ಈ ಗಿರಿಧಾಮವನ್ನು ಸಂದರ್ಶಿಸಿದ ಸಂದರ್ಭದಲ್ಲಿ ಇಲ್ಲಿಯ ಭಾತಾರಿಗೆ ಹದಿನೈದು ಕಾಳಂಜು ಚಿನ್ನದ ಆಭರಣವನ್ನು ಅರ್ಪಿಸಿದ ಉಲ್ಲೇಖವಿದೆ. ಅಂದರೆ, ಈ ಕಾಲಕ್ಕಾಗಲೇ ಇಲ್ಲಿಯ ಗುಹೆ ಒಂದರಲ್ಲಿ ಯಕ್ಷೀ ಪದ್ಮಾವತಿಯ ವಿಗ್ರಹ ಪ್ರತಿಷ್ಠಾಪಿಸಲಾಗಿದ್ದು ಇದು ಯಕ್ಷೀ ಕ್ಷೇತ್ರವಾಗಿ ಜೈನ ಸನ್ಯಾಸಿನಿಯರನ್ನೊಳಗೊಂಡಂತೆ ಅನೇಕ ಭಕ್ತಾದಿಗಳನ್ನು ಆಕರ್ಷಿಸಿತ್ತು ಎಂಬುದು ಈ ಶಾಸನಗಳಿಂದ ಖಚಿತವಾಗುತ್ತದೆ. ಸುಮಾರು ಹದಿಮೂರನೇ ಶತಮಾನದಲ್ಲಿ ಯಕ್ಷಿ ಪದ್ಮಾವತಿಯ ಗುಹಾಂತರ್ದೇವಾಲಯವು ಭಗವತೀ ಮಂದಿರವಾಗಿ ಪರಿವರ್ತನೆ ಹೊಂದಿರಬಹುದು. ಕ್ರಿ.ಶ. ೧೨೫೦ರ ಮತ್ತೊಂದು ಶಾಸನದಲ್ಲಿ ತಮಿಳುನಾಡಿನ ಭಕ್ತನೊಬ್ಬನು ತಿರುಚಾರಣ ಕ್ಷೇತ್ರದ ಭಗವತಿಗೆ ಧನವನ್ನು ನೀಡಿದ ವಿವರಣೆ ಇದೆ. ಅಂದರೆ ತಿರುಚಾರಣತ್ತು ಮಲೈಯಲ್ಲಿ ಜೈನ ಪರಿಸರ ಈ ಕಾಲಕ್ಕೆ ಬದಲಾವಣೆ ಆಗಿರಬೇಕು.

## ಶಾಸನಗಳಲ್ಲಿ ಸೂಚಿತವಾಗಿರುವ ಭಕ್ತಾದಿಗಳ ಹೆಸರು

ಇಲ್ಲಿ ದೊರಕಿರುವ ಶಾಸನಗಳಲ್ಲಿ ಈ ಕ್ಷೇತ್ರವನ್ನು ಸಂದರ್ಶಿಸಿದ ಜೈನ ಶ್ರಮಣರು ಮತ್ತು ಸನ್ಯಾಸಿನಿಯರ ಹೆಸರುಗಳ ದಾಖಲಾತಿ ಇದೆ. ಶ್ರಮಣರನ್ನು 'ಕುರುವಾರ್' ಎಂದೂ, ಸನ್ಯಾಸಿನಿಯರನ್ನು 'ಕುರ್‍ರಾಟ್ಟಿಯಾರ್' ಎಂದೂ ಸಂಬೋಧಿಸಲಾಗಿದೆ. 'ಗುಣಾದಂಗಿ ಕುರ್‍ರಟ್ಟಿಯಾರ್' ಎಂಬ ಜೈನ ಸನ್ಯಾಸಿನಿಯು ಪೆರಿಯುಕ್ಕುಂಡಿಯ ಅರಿಷ್ಟನೇಮಿ ಭಾತಾರರ ಶಿಷ್ಯೆ ಎಂದು ಶಾಸನದಿಂದ ತಿಳಿದುಬರುತ್ತದೆ. ಬಹುಶಃ ಗುಣಾದಂಗಿ ಕುರ್‍ರಟ್ಟಿಯಾರರ ಅನುಯಾಯಿಗಳಾದ ಶ್ರಾವಕರು ತಮ್ಮ ಗುರುವಿನ ಹೆಸರಿನಲ್ಲಿ ಭಾತಾರಿಗೆ ಚಿನ್ನದ ಆಭರಣವನ್ನು ಅರ್ಪಿಸಿರಬಹುದು. ಅರ್ಹನಂದಿ, ಅರಿಷ್ಟನೇಮಿ, ಕಟ್ಟಂಪಲ್ಲಿಯ ಉತ್ತನಂದೀ ಅಡಿಗಾಳ್, ಪಟ್ಟನಂದೀ ಭಟ್ಟಾರರ ಶಿಷ್ಯೆ ವರಗುಣ, ವೀರನಂದಿ ಅಡಿಗಾಳ್, ಮುಂತಾದವರ ಹೆಸರುಗಳು ಇಲ್ಲಿಯ ಶಾಸನಗಳಲ್ಲಿ ಸೂಚಿತವಾಗಿವೆ.

ಚಿತ್ತರಾಲ್ ಮಂದಿರಕ್ಕೆ ಆತುಕೊಂಡಂತೆ ಇರುವ ಬಂಡೆಯ ಮೇಲೆ ಕೆತ್ತಲ್ಪಟ್ಟಿರುವ ಭಿತ್ತಿ ಚಿತ್ರಗಳು ಶಿಲ್ಪಕಲಾ ಪ್ರತಿಭೆಗೆ ಇದ್ದ ಪ್ರಶಸ್ತಿಯನ್ನು ಸಾರುವಂತಿವೆ. ಭಿತ್ತಿ ಶಿಲ್ಪರಚನೆಯು ಬಂಡೆಯ ಎರಡು ಸಾಲನ್ನು ಆವರಿಸಿದೆ. ಪದ್ಮಾಸನ, ಸುಖಾಸನ ಮತ್ತು ಕಾಯೋತ್ಸರ್ಗಾಸನದಲ್ಲಿ ತೀರ್ಥಂಕರ ವಿಗ್ರಹಗಳನ್ನು ಜೈನ ಶಿಲ್ಪ ರಚನೆಯ ನಿಯಮಕ್ಕನುಸಾರವಾಗಿ ಕೆತ್ತಲಾಗಿದೆ. ಯಕ್ಷ-ಯಕ್ಷೀ, ಚೌರೀ ವಿಗ್ರಹಗಳು, ವಿದ್ಯಾಧರರು ಮತ್ತು ಕ್ಷೇತ್ರಪಾಲರ ವಿಗ್ರಹಗಳನ್ನು ಬಂಡೆಯ ಎರಡು ಸಾಲಿನಲ್ಲಿ ಪ್ರಧಾನವಾಗಿಯೂ ಮತ್ತು ಸಣ್ಣ ಆಕಾರದಲ್ಲಿಯೂ ಕೆತ್ತಲಾಗಿದೆ.

ದೊಡ್ಡ ದೊಡ್ಡ ಕಗ್ಗಲ್ಲು ಬಂಡೆಗಳನ್ನು ಮೈಕೊರೆದು ಗುಹೆಗಳನ್ನಾಗಿ, ಗುಹಾಂತರ್ದೇವಾಲಯ ಗಳನ್ನಾಗಿ ನಿರ್ಮಿಸುವ ಶಿಲ್ಪಕಲೆಯಲ್ಲಿ ದಕ್ಷಿಣ ಭಾರತದ ಶಿಲ್ಪಿಗಳನ್ನು ಮೀರಿಸುವವರಿಲ್ಲ. ದಕ್ಷಿಣ ಭಾರತದಾದ್ಯಂತ ಪ್ರಾಚೀನ ನೈಸರ್ಗಿಕ ಗಿರಿಧಾಮಗಳಲ್ಲಿ ಇರುವ ಜೈನ ಮತ್ತು ಬೌದ್ಧ ಗುಹಾಂತರ್ದೇವಾಲಯಗಳೇ ಇದಕ್ಕೆ ಸಾಕ್ಷಿ.

## ಪುಗಲೂರು (Pugalur)

ತಿರುಚಿರಾಪಲ್ಲಿಯ ಕೇಶೂರು ಸಮೀಪ ಪುಗಲೂರು ನೈಸರ್ಗಿಕ ಗಿರಿಧಾಮ ಇದೆ. ಇಲ್ಲಿರುವ ಗುಹೆಗಳ ಬಂಡೆಯ ಮೇಲೆ ಕ್ರಿ.ಶ. ಎರಡನೇ ಶತಮಾನಕ್ಕೆ ಸೇರಿದ ಎರಡು ಚೇರ ಕಾಲದ ಶಾಸನಗಳಿವೆ. ಈ ಶಾಸನಗಳಲ್ಲಿ ಜೈನ ಶ್ರಮಣ ಚಿಂಕಾಯಪಣಿ (Cenkayapan) ಅವರಿಗೆ ಚೇರ ದೊರೆ ಇರಂಪಾರೈನ ಮೊಮ್ಮಗನು ಈ ಗುಹೆಗಳನ್ನು ಕೆತ್ತಿಸಿದುದಾಗಿ ವಿವರಣೆ ಇದೆ. ಪುಗಲೂರು ಪ್ರಾಚೀನ ಶ್ರಮಣ ನೆಲೆ ಆಗಿತ್ತು. ಇಲ್ಲಿ ನಾಲ್ಕು ಗುಹೆಗಳಿದ್ದು ಈ ಗುಹೆಗಳಲ್ಲಿ ಸುಮಾರು ೩೦ ಜೈನ ಶ್ರಮಣರು ನೆಲೆಸಿದ್ದ ವಿವರ, ಅವರ ಹೆಸರಿನ ಪಟ್ಟಿ ಮತ್ತು ಆ ಶ್ರಮಣರು ಈ ಪ್ರದೇಶದ ಸುತ್ತಮುತ್ತಲಿನ ಗ್ರಾಮವಾಸಿಗಳೇ ಆಗಿದ್ದರು ಎಂಬ ಮುಂತಾದ ವಿವರಣೆಗಳು ಇಲ್ಲಿಯ ಶಾಸನಗಳಿಂದ ತಿಳಿದುಬರುತ್ತದೆ. ಅಂದರೆ ಪುಗಲೂರು ಶ್ರಮಣ ದೀಕ್ಷಾ, ಮತ್ತು ಶ್ರಮಣ ಶಿಕ್ಷಣ ಕೇಂದ್ರವೂ ಆಗಿದ್ದಿರಬೇಕು.

## ಕಲ್ಲಿಲ್ ಅಥವಾ ಕಿಲಾಲೀ ಗುಹಾಂತರ್ದೇವಾಲಯ (Kallil)

ಪೆರಂಬಾವೂರಿಗೆ (ಉತ್ತರ ತಿರುವಾಂಕೂರು) ಸುಮಾರು ಎಂಟು ಮೈಲಿ ದೂರದಲ್ಲಿ ಕಲ್ಲಿಲ್ ನೈಸರ್ಗಿಕ ಗಿರಿಧಾಮದಲ್ಲಿ ಶ್ರಮಣರ ಗುಹೆಗಳಿದ್ದು, ಈ ಗುಹೆಗಳಿಗೆ ಆತುಕೊಂಡಿರುವ ಬಂಡೆಗಳ ಮೇಲೆ ತೀರ್ಥಂಕರ ಪಾರ್ಶ್ವನಾಥ, ಮಹಾವೀರ ಮತ್ತು ಪದ್ಮಾವತಿ ಯಕ್ಷಿಯ ಭಿತ್ತಿ ಶಿಲ್ಪ ಕೆತ್ತನೆಗಳಿವೆ. ಮತ್ತೊಂದು ಬಂಡೆಯ ಮೇಲೆ ಅಪೂರ್ಣವಾಗಿರುವ ಮಹಾವೀರ ತೀರ್ಥಂಕರ ಕೆತ್ತನೆಯೂ ಇದ್ದು, ಮಧ್ಯದ ಒಂದು ಗುಹೆಯ ಒಳಭಾಗದ ಹಿಂಬದಿಯ ಗೋಡೆಯಲ್ಲಿ ಮಹಾವೀರ ತೀರ್ಥಂಕರರ ಶಿಲ್ಪ ಕೆತ್ತನೆ ಇದೆ. ಈ ಶಿಲ್ಪ ಕೆತ್ತನೆಯ ಸಮೀಪದಲ್ಲಿ ಯಕ್ಷೀ ಸಿದ್ಧಾಯಿಕ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಈ ಗುಹಾಂತರ್ದೇವಾಲಯದಲ್ಲಿ ನಿತ್ಯ ಪೂಜೆಯನ್ನು ನಂಬೂದರಿ ಬ್ರಾಹ್ಮಣರು ನಿರ್ವಹಿಸುತ್ತಾರೆ. ತೀರ್ಥಂಕರ ಮಹಾವೀರನ ಬಲಭಾಗದಲ್ಲಿ ಸಿದ್ಧಾಯಿಕ ಯಕ್ಷೀ ವಿಗ್ರಹವನ್ನು ಲೋಹದ ಮುಸಿಕಿನಿಂದ ಅಲಂಕರಿಸಲಾಗಿದೆ. ಸಿದ್ಧಾಯಿಕ ಯಕ್ಷೀ ವಿಗ್ರಹವನ್ನು ಭಕ್ತಾದಿಗಳು ಭಗವತೀ ಹೆಸರಿನಿಂದ ಆರಾಧಿಸುತ್ತಾರೆ. ಅಲ್ಲದೆ, ಕೊಚ್ಚಿನ ಮತ್ತು ಆಲಪಿಯ ಶ್ವೇತಾಂಬರ ಜೈನ ವರ್ತಕರು ಅದರಲ್ಲಿಯೂ ವಿಶೇಷವಾಗಿ ಬನಿಯಾ ಪಂಗಡಕ್ಕೆ ಸೇರಿದ ಜೈನ ವರ್ತಕರು ಈ ಮಂದಿರದ ಭಗವತೀ ಆರಾಧಕರೂ ಆಗಿದ್ದಾರೆ. ಈ ಸಂಪ್ರದಾಯ ಇಂದಿಗೂ ಆಚರಣೆಯಲ್ಲಿದೆ.

## ತ್ರಿಮೂರ್ತಿ ಬೆಟ್ಟ (Trimurti Hill)

ಉತ್ತರ ತಿರುವಾಂಕೂರು ಮನ್ನಾರ್ ಬೆಟ್ಟದ ಸಾಲಿನಲ್ಲಿರುವ ತ್ರಿಮೂರ್ತಿ ಬೆಟ್ಟದ ಬಂಡೆಯ ಮೇಲಿರುವ ಉಬ್ಬು ಶಿಲ್ಪ ಕೆತ್ತನೆಯನ್ನು ತ್ರಿಮೂರ್ತಿಯ ಹೆಸರಿನಲ್ಲಿ ಭಕ್ತಾದಿಗಳು ಆರಾಧಿಸುತ್ತಾರೆ. ಆದರೆ ಇದು ಮೂಲತಃ ಮೂರು ತೀರ್ಥಂಕರರ ಶಿಲ್ಪವೇ ಆಗಿದೆ. ಬೆಟ್ಟದ ಪೂರ್ವ ಮುಖದ ಬಂಡೆಯಲ್ಲಿ ತೀರ್ಥಂಕರರ ಈ ಉಬ್ಬು ಶಿಲ್ಪ ಕೆತ್ತನೆಗಳಿವೆ.

## ಗೋದಾಪುರಂ (Godapuram)

ನೈಸರ್ಗಿಕ ಗಿರಿಧಾಮಗಳಲ್ಲಿ ಶ್ರಮಣ ನೆಲೆಗಳಿಗೆ ಹೊಂದಿಕೊಂಡಂತೆ ಕೆಲವು ಶಿಲಾನ್ಯಾಸ ಬಸದಿಗಳ ಅವಶೇಷಗಳೂ ಕೇರಳದ ಅನೇಕ ಭಾಗಗಳಲ್ಲಿ ದೊರಕಿವೆ. ಇಂತಹ ಬಸದಿಗಳಲ್ಲಿ ಪಾಲ್ಘಾಟ್ ಜಿಲ್ಲೆ ಆಲತ್ತೂರಿನ ಸಮೀಪ ಇರುವ ಗೋದಾಪುರಂ ಮಂದಿರವು ಮುಖ್ಯವಾದುದು. ಪ್ರಾಚೀನ ಈ ಜೈನ ಬಸದಿ ಇಂದು 'ಶಕ್ಕಿಯಾರ್ ಭಗವತೀ' ಮಂದಿರವೆಂದು ಚಿರಪರಿಚಿತವಾಗಿದೆ. ಈ ಬಸದಿಗೆ ಸೇರಿದ ಲೋಹದ ಜಿನವಿಗ್ರಹಗಳನ್ನು ತ್ರಿಚೂರಿನ ಮ್ಯೂಸಿಯಂನಲ್ಲಿ ಇಡಲಾಗಿದೆ. ಈ ಬಸದಿಯಲ್ಲಿ ಪ್ರತಿಷ್ಠಾಪಿಸಲಾಗಿದ್ದ ಪದ್ಮಾವತೀ ಯಕ್ಷಿ ವಿಗ್ರಹವನ್ನು ಭಗವತೀ ಹೆಸರಿನಿಂದ ಧರ್ಮನಿಷ್ಠರು ಆರಾಧಿಸುತ್ತಾರೆ. 'ಶಕ್ಕಿಯಾರ್ ಭಗವತೀ' ಮಂದಿರದ ಆವರಣದ ಎಲ್ಲೆಡೆಯೂ ಪ್ರಾಚೀನ ಬಸದಿಯ ಭಗ್ನಾವಶೇಷಗಳು ಹರಡಿವೆ. ಹೊರನೋಟಕ್ಕೆ ಕಾಣಿಸಿಕೊಳ್ಳುವ ಅಧಿಷ್ಠಾನದ ವಿನ್ಯಾಸದ ಆಧಾರದ ಮೇಲೆ ಈ ಬಸದಿಯ ಕಾಲಮಾನ ಒಂಬತ್ತು ಮತ್ತು ಹತ್ತನೇ ಶತಮಾನವೆಂದು ಪರಿಗಣಿಸಲಾಗಿದೆ.

## ಪೆರುವಾಸೆಯಿರಿ (Paravasseri)

ಪಾಲ್ಘಾಟ್ ಜಿಲ್ಲೆಯ ಪೆರುವಾಸೆಯಿರಿಯ ಚಂದ್ರಪ್ರಭ ತೀರ್ಥಂಕರರ ಬಸದಿ ಇಂದು ಭಗವತೀ ದೇವಾಲಯವಾಗಿ ಪರಿವರ್ತನೆಗೊಂಡಿದೆ. ಚಂದ್ರಪ್ರಭ ತೀರ್ಥಂಕರ ವಿಗ್ರಹವನ್ನು ಈ ಮಂದಿರದ ಹೊರಭಾಗದಲ್ಲಿ ಇಡಲಾಗಿದೆ. ಈ ವಿಗ್ರಹವನ್ನು ಭಕ್ತಾದಿಗಳು ಶಸ್ತ ಅಥವಾ 'ಅಯ್ಯಪ್ಪ'ನೆಂದು ಆರಾಧಿಸುತ್ತಾರೆ. ಚಂದ್ರಪ್ರಭ ತೀರ್ಥಂಕರರ ಯಕ್ಷೀ ಜ್ವಾಲಾಮಾಲಿನಿ ದೇವಿಯ ವಿಗ್ರಹವನ್ನು ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸಲಾಗಿದೆ. ಭಕ್ತಾದಿಗಳು ಈ ವಿಗ್ರಹವನ್ನು ಭಗವತೀ ಎಂದು ಆರಾಧಿಸುತ್ತಾರೆ.

## ಪಾಲ್ಘಾಟ್ (Palghat)

ಪಾಲ್ಘಾಟ್‌ನಲ್ಲಿ ಚಂದ್ರಪ್ರಭ ತೀರ್ಥಂಕರರ ಬಸದಿ ಇದೆ. ಈ ಬಸದಿಯ ಮುಂಭಾಗದಲ್ಲಿ ಬಲಿ ಪೀಠವಿದೆ. ಈ ಬಸದಿಯ ಆವರಣದಲ್ಲಿ ಮತ್ತೊಂದು ಬಸದಿಯ ಭಗ್ನಾವಶೇಷವಿದೆ. ವಜ್ರಪರ್ಯಂಕಾಸನದ ಶಿರಭಾಗ ಮುರಿದಿರುವ ಜಿನಬಿಂಬ ಹೊರಭಾಗದಲ್ಲಿದೆ.

## ನೈಲಂಪೇರೂರು (Nilamperur)

ಕೊಟ್ಟಾಯಂ ಜಿಲ್ಲೆಯ ನೈಲಂಪೇರೂರಿನ ದೇವಾಲಯಕ್ಕೆ 'ಪಲ್ಲಿಭಗವತಿ' ದೇವಾಲಯವೆಂಬ ಹೆಸರಿದೆ. ಈ ದೇವಿಯ ಆರಾಧನಾ ಸ್ತೋತ್ರವು ಯಕ್ಷೀ ಪದ್ಮಾವತಿಯ ಸ್ತೋತ್ರವಾಗಿದ್ದು ಮೂಲತಃ ಈ ಮಂದಿರ ಜೈನ ಯಕ್ಷೀ ಮಂದಿರವಾಗಿತ್ತು ಎಂಬುದನ್ನು ದೃಢೀಕರಿಸುತ್ತದೆ.

**ಗಣಪತೀ ವಟ್ಟಂ (Ganapati Vattam)**

ಸುಲ್ತಾನ ಬತೇರಿ ಸಮೀಪವಿರುವ ಗಣಪತೀ ವಟ್ಟಂನಲ್ಲಿ ಶಿಥಿಲವಾಗಿರುದ ಬಸದಿ ಇದೆ. ಆ ಬಸದಿ ಸುಮಾರು ಕ್ರಿ.ಶ. ಹದಿಮೂರನೇ ಶತಮಾನಕ್ಕೆ ಸೇರಿದುದಾಗಿದೆ. ಅಭ್ರಕ ಶಿಲೆಯಲ್ಲಿ ನಿರ್ಮಿತವಾಗಿರುವ ಈ ಬಸದಿಯು, ಗರ್ಭಗೃಹ, ಅರ್ಧಮಂಟಪ ಮತ್ತು ಮಹಾಮಂಟಪಗಳನ್ನೊಳಗೊಂಡಿದೆ. ಮಹಾಮಂಟಪದ ಅಂಕಣದಲ್ಲಿ ಪ್ರತ್ಯೇಕವಾಗಿ ನಮೋಕಾರ ಮಂಟಪವನ್ನು ನಿರ್ಮಿಸಲಾಗಿದೆ. ಣಮೋಕಾರ ಮಂಟಪ ಕೇರಳದ ಜೈನ ವಾಸ್ತುಶಿಲ್ಪ ಶೈಲಿಯ ವಿಶೇಷವೇ ಆಗಿದೆ. ಮಹಾಮಂಟಪದಲ್ಲಿರುವ ಕಂಭಗಳ ರಚನಾ ಶೈಲಿ ಮತ್ತು ಶಿಲ್ಪ ಕೆತ್ತನೆ, ಇವುಗಳು ಬಹುಮಟ್ಟಿಗೆ ವಿಜನಯಗರ ಶೈಲಿಯನ್ನೇ ಹೋಲುತ್ತವೆ. ಗರ್ಭಗುಡಿಯಲ್ಲಿ ಮೂಲ ಪ್ರತಿಮೆ ಇಲ್ಲ. ಆದರೆ ಗರ್ಭಗುಡಿಯ ಪ್ರವೇಶದ್ವಾರದ ತೋರಣ ಪಟ್ಟಿಯಲ್ಲಿ ತೀರ್ಥಂಕರರ ಸುಂದರ ಶಿಲ್ಪ ಕೆತ್ತನೆ ಇದೆ.

**ನಾಗರಕೋಯಿಲ್ (Nagar Coil)**

ಇಂದಿನ ತಮಿಳುನಾಡಿನ ಕನ್ಯಾಕುಮಾರಿ ಜಿಲ್ಲೆಯ ರಾಜಧಾನಿ ನಾಗರಕೋಯಿಲ್ ಹಿಂದೆ ತಿರುವಾಂಕೂರು ರಾಜ್ಯದ ಆಡಳಿತಕ್ಕೆ ಒಳಪಟ್ಟಿದ್ದು ಮೊದಲು ಕೇರಳದ ವ್ಯಾಪ್ತಿಯಲ್ಲಿಯೇ ಇತ್ತು. ಸುಚೀಂದ್ರ ಮತ್ತು ಕನ್ಯಾಕುಮಾರಿ ದೇವಸ್ಥಾನದ ಶಾಸನಗಳಿಂದ ನಾಗರಕೋಯಿಲ್‌ನ ಸುತ್ತಮುತ್ತಲಿನ ಪ್ರದೇಶಕ್ಕೆ ಕೊಟ್ಟೂರು ಎಂಬ ಹೆಸರಿದ್ದು, ಕೊಟ್ಟೂರು ಕ್ರಿ.ಶ. ಎಂಟನೆಯ ಶತಮಾನದಲ್ಲಿಯೂ ಜೈನರ ಪ್ರಮುಖ ನೆಲೆಯಾಗಿತ್ತು ಎಂದು ತಿಳಿದುಬರುತ್ತದೆ. ಕ್ರಿ.ಶ. ೧೧೧೨ರ ಮೊದಲನೆಯ ರಾಜರಾಜನ ಶಾಸನ ಒಂದರಲ್ಲಿ 'ಪಲ್ಲಿಯ ಚಂದಂ' ಎಂಬ ದೇವದಾಯ ಗ್ರಾಮದ ಬಗ್ಗೆ ಉಲ್ಲೇಖವಿದೆ. ಆದರೆ ಈ ಶಾಸನ ತ್ರುಟಿತವಾಗಿರುವುದರಿಂದ ಹೆಚ್ಚಿನ ವಿವರಣೆಗಳು ತಿಳಿದುಬರುವುದಿಲ್ಲ.

ಕ್ರಿ.ಶ. ೧೧೯೬ರ ಮತ್ತೊಂದು ಶಾಸನದಿಂದ ಪೂರ್ವಾಸರಿಯ ವಿಷ್ಣು ದೇವಾಲಯದ ದೇವದಾಯ ದತ್ತೀ ಗ್ರಾಮವು ಪೂರ್ವದಲ್ಲಿ ಕೊಟ್ಟೂರಿನ ಜೈನ ಬಸದಿಯ 'ಪಲ್ಲಿಚಂದಂ' ಗ್ರಾಮ ದತ್ತಿ ಆಗಿತ್ತು ಎಂಬ ವಿವರಣೆ ತಿಳಿದುಬರುತ್ತದೆ. ಪರಾಂತಕ ಪಾಂಡ್ಯನ ಹನ್ನೆರಡನೇ ಶತಮಾನದ ಕನ್ಯಾಕುಮಾರಿಯ ಶಾಸನದಲ್ಲಿ ಕನ್ಯಾಕುಮಾರಿ ದೇವಸ್ಥಾನದ ದೇವದಾಯ ದತ್ತಿ ಗ್ರಾಮಗಳಲ್ಲಿ 'ಪಲ್ಲಿಚಂದಂ' ಗ್ರಾಮವೂ ಒಳಗೊಂಡಿತ್ತು ಎಂಬ ವಿವರಣೆ ಇದೆ. 'ಪಲ್ಲಿಚಂದಂ' ಇದು ಜೈನ ಬಸದಿಗಳ ದೇವದಾಯ ದತ್ತಿಯ ಭೂಮಿ ಅಥವಾ ದತ್ತಿ ಗ್ರಾಮಕ್ಕೆ ಅನ್ವಯಿಸುತ್ತದೆ. ಈ ವಿಚಾರದಲ್ಲಿ ಭಿನ್ನಾಭಿಪ್ರಾಯವೇನೂ ಇಲ್ಲ. ಅಂದರೆ, ಕೊಟ್ಟೂರಿನಲ್ಲಿ ಅನೇಕ ಜೈನ ಬಸದಿಗಳು ಇದ್ದಿರಬೇಕು. ನಾಗರಕೋಯಿಲ್‌ನ ದೇವಾಲಯವೂ ಅವುಗಳಲ್ಲಿ ಒಂದಾಗಿದ್ದು, ಈ ಬಸದಿಗೆ ಸೇರಿದ ದೇವದಾಯ ಗ್ರಾಮಗಳನ್ನು ಈ ಪ್ರದೇಶದಲ್ಲಿ ಜೈನರ ಪ್ರಭಾವ ತಗ್ಗಿದಂತೆ ಜೈನೇತರ ಮಂದಿರಗಳಿಗೆ ವರ್ಗಾಯಿಸಿರುವುದು ಸ್ಪಷ್ಟವಾಗುತ್ತದೆ. ದೇವದಾಯ ಜೈನ ಬಸದಿಗಳ ಗ್ರಾಮಗಳನ್ನು ಜೈನೇತರ ಧರ್ಮ ಸಂಸ್ಥೆಗಳಿಗೆ ವರ್ಗಾಯಿಸುವ ಹಕ್ಕನ್ನು ರಾಜರು, ರಾಜಾಧಿಕಾರಿಗಳು ಪಡೆದಿದ್ದರು ಎಂಬುದು ಇದರಿಂದ ಖಚಿತವಾಗುತ್ತದೆ. ನಾಗರಕೋಯಿಲ್‌ನಲ್ಲಿ ಜೈನ ಬಸದಿ ಇದ್ದ ಬಗ್ಗೆ ನೇರವಾಗಿ ಯಾವ ಶಾಸನ ಆಧಾರವಿಲ್ಲದಿದ್ದರೂ ನಾಗರಕೋಯಿಲ್ ಕ್ರಿ.ಶ. ಎಂಟರಿಂದ ಹನ್ನೆರಡನೆಯ ಶತಮಾನದವರೆಗೂ ಜೈನರ ನೆಲೆಯಾಗಿತ್ತು ಅಥವಾ ಇಲ್ಲಿ ಜೈನರ ಪ್ರಭಾವವಿತ್ತು ಎಂಬ ವಿಚಾರ ಕನ್ಯಾಕುಮಾರಿ, ಕಡಿಯಾ ಪಟ್ಟಿನಂ, ಪೂರ್ವಾಸಿರಿ ಮತ್ತು ಕಲುಗುಮಲೈ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಹಿಂದಿನ ಕೊಟ್ಟೂರು ಇಂದಿನ ನಾಗರಕೋಯಿಲ್

ಆಗಿರಬಹುದು; ಈ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. 'ಕಲಗು ಮಲೈ'ಯಲ್ಲಿರುವ ಶಾಸನವೊಂದರಲ್ಲಿ ಕೊಟ್ಟಾರಿನ ಜೈನ ಶ್ರಮಣರು ಕಲಗುಮಲೈಯಲ್ಲಿ ತೀರ್ಥಂಕರ ವಿಗ್ರಹವನ್ನು ಕೆತ್ತಿಸಿ, ಪ್ರತಿಷ್ಠಾಪಿಸಿ, ನಿತ್ಯಪೂಜೆಗೆ ವ್ಯವಸ್ಥೆ ಮಾಡಿಸಿದ ಉಲ್ಲೇಖವಿದೆ.

ಇಂದು ನಾಗರಕೋಯಿಲ್‌ನ ನಾಗರಾಜ ದೇವಾಲಯ ಕನ್ಯಾಕುಮಾರಿ ಜಿಲ್ಲೆಯಲ್ಲಿಯೇ ಸುಪ್ರಸಿದ್ಧ ದ್ರಾವಿಡ ಶೈಲಿಯ ಬೃಹದಾಕಾರದ ದೇವಾಲಯವಾಗಿದೆ. ಈ ಆದಿಶೇಷನ ಮಂದಿರದ ನವರಂಗ ಮಂಟಪದಲ್ಲಿ ಜೈನ ತೀರ್ಥಂಕರರ, ಯಕ್ಷ, ಯಕ್ಷಿ, ವಿದ್ಯಾಧರರ ಮತ್ತು ಕ್ಷೇತ್ರಪಾಲರ ಕೆತ್ತನೆಯನ್ನೊಳಗೊಂಡ ಕಂಭಗಳು ಸುರಕ್ಷಿತವಾಗಿವೆ. ನೂರಾರು ವರ್ಷಗಳಿಂದಲೂ ಜೈನ ಶಿಲ್ಪ ರಚನೆಯನ್ನು ಹಿಂದೂ ದೇವಾಲಯದಲ್ಲಿ ಸಂರಕ್ಷಿಸಿ, ಹಿಂದೂ ಧರ್ಮದ ಪ್ರಭುತ್ವದ ಸಂಕೇತವಾಗಿ, ಹಿಂದೂ ಜೈನ ಧರ್ಮದ ಸಾಮರಸ್ಯದ ಸಂಕೇತವಾಗಿ ಉಳಿಸಿಕೊಳ್ಳಲಾಗಿದೆ ಎಂದೇ ಭಾವಿಸಬಹುದು. ನಾಗರಾಜ ದೇವಾಲಯಕ್ಕೆ ನಾಗರಕೋಯಿಲ್ ಸಂಬಂಧಪಟ್ಟಂತೆ ದೊರಕಿರುವ ಅನೇಕ ಶಾಸನ ವಿವರಣೆಗಳಿಂದ ಇದು ಖಚಿತವಾಗುತ್ತದೆ. ಕ್ರಿ.ಶ. ೧೫೨೨ರ ಶಾಸನ ಒಂದರಲ್ಲಿ ತಿರುವಾಂಕೂರಿನ ರಾಜ ಭೂತಲ ವೀರ ಉದಯ ಮಾರ್ತಾಂಡವರ್ಮನು ನಾಗರಾಜ ದೇವಾಲಯಕ್ಕೆ ಗ್ರಾಮದತ್ತಿಯನ್ನು ನೀಡಿದ ವಿವರಣೆ ಇದೆ. ಈ ದತ್ತಿಗ್ರಾಮದ ಮೇಲ್ವಿಚಾರಣೆಯನ್ನು ಈ ದೇವಸ್ಥಾನದ ಅಂದಿನ ಧರ್ಮಾಧಿಕಾರಿಗಳಾಗಿದ್ದ ಗುಣವೀರ ಪಂಡಿತ ಮತ್ತು ಕಮಲವಾಹನ ಪಂಡಿತರಿಗೆ ವಹಿಸಿ ದೀಪಾರಾಧನೆ, ಉತ್ಸವ ಮತ್ತು ಪೂಜಾವಿಧಿಗಳನ್ನು ನಿರಂತರವಾಗಿ ಆಚರಿಸಲು ಆದೇಶವಿತ್ತನು. ಈ ದತ್ತಿಗ್ರಾಮವನ್ನು 'ಪಲ್ಲಿಚಂದಂ' ಗ್ರಾಮವೆಂದು ಶಾಸನದಲ್ಲಿ ಹೆಸರಿಸಲಾಗಿದೆ. ಈ ಮೊದಲೇ ಹೇಳಿರುವಂತೆ 'ಪಲ್ಲಿ' ಎಂಬ ದ್ರಾವಿಡ ಭಾಷೆಯ ಈ ಪದವು ಕನ್ನಡ ಭಾಷೆಯ ಬಸದಿಯ ಪರ್ಯಾಯ ರೂಪವಾಗಿದೆ. ಭೂತಲ ವೀರ ಉದಯ ಮಾರ್ತಾಂಡನ ಶಾಸನದಲ್ಲಿ ಮತ್ತೆ ಮತ್ತೇ ಬಳಸಲಾಗಿರುವ 'ಪಲ್ಲಿಚಂದಂ' ಎಂಬ ಪದವು ಜೈನ ಬಸದಿಯ ದೇವದಾಯ ಭೂಮಿ ಅಥವಾ ಗ್ರಾಮದತ್ತಿಯಾಗಿತ್ತು ಎಂಬುದು ನಿಖರವಾಗುತ್ತದೆ. ಈ ಶಾಸನದಲ್ಲಿ ಉಲ್ಲೇಖಿತವಾಗಿರುವ ಗುಣವೀರ ಪಂಡಿತ ಮತ್ತು ಕಮಲವಾಹನ ಪಂಡಿತ, ಇವರು ಜೈನ ಧರ್ಮಾನುಯಾಯಿಗಳು, ಹದಿನಾರನೇ ಶತಮಾನದವರೆಗೂ ಕೊಟ್ಟಾರು ಅಥವಾ ನಾಗರಕೋಯಿಲ್‌ನ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಜೈನರ ಪ್ರಭಾವ ಅಧಿಕವಾಗಿಯೇ ಇದ್ದಿರಬೇಕು. ಆ ಕಾರಣದಿಂದಲೇ ಪರಂಪರಾನುಗತವಾಗಿ ಪೂರ್ವದಿಂದಲೂ ಈ ದೇವಸ್ಥಾನದ ಧರ್ಮಾಧಿಕಾರಿಗಳಾಗಿಯೇ ಕರ್ತವ್ಯ ನಿರ್ವಹಿಸುತ್ತಿದ್ದ ಈ ಪಂಡಿತ ಮನೆತನದವರು ಹದಿನಾರನೇ ಶತಮಾನದವರೆಗೂ ಈ ದೇವಸ್ಥಾನದ ಧರ್ಮಾಧಿಕಾರಿಗಳಾಗಿ ಅಥವಾ ಸ್ಥಾನಿಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಿರಬೇಕು. ನಾಗರಕೋಯಿಲ್‌ನ ನಾಗರಾಜ ದೇವಾಲಯದ ಆವರಣದಲ್ಲಿ ಪಾರ್ಶ್ವನಾಥ ಬಸದಿ ಇತ್ತು. ಮೇಲೆ ಹೇಳಿರುವಂತೆ ಈ ದೇವಾಲಯಕ್ಕೆ ಹೊಂದಿಕೊಂಡಂತೆ ಇರುವ ನವರಂಗ ಮಂಟಪದ ಕಂಭದ ಇಕ್ಕೆಡೆಗಳಲ್ಲಿ ಒಟ್ಟಾರೆ ಆರು ಜೈನ ವಿಗ್ರಹಗಳ ಕೆತ್ತನೆ ಇದ್ದು ಇವುಗಳನ್ನು ಉತ್ತಮ ಶಿಲ್ಪ ಕೃತಿಗಳೆಂದು ಪರಿಗಣಿಸಲಾಗಿದೆ. ಇವುಗಳಲ್ಲಿ ಐದು ಹೆಡೆಯ ಕಾಯೋತ್ಸರ್ಗ ಆಸನದ ಪಾರ್ಶ್ವನಾಥ ತೀರ್ಥಂಕರ, ಪದ್ಮಾಸನದಲ್ಲಿರುವ ಮಹಾವೀರ ತೀರ್ಥಂಕರ, ಪದ್ಮಾವತೀ ಯಕ್ಷೀ ಮತ್ತು ತೀರ್ಥಂಕರರ ಇಕ್ಕೆಲಗಳಲ್ಲಿ ಚಾಮರಧಾರಿಗಳ ಶಿಲ್ಪ ರಚನೆ ಸುಂದರವಾಗಿವೆ. ಮೂಲತಃ ಈ ನವರಂಗ ಮಂಟಪವು ಪಾರ್ಶ್ವನಾಥ ಬಸದಿಯ ಒಳ ರಚನೆಯ ಪ್ರಮುಖ ಭಾಗವಾಗಿದ್ದಿರಬೇಕು. ಈ ಭಾಗವನ್ನು ಹಾಗೆಯೇ ಉಳಿಸಿಕೊಂಡು ಕಾಲಾಂತರದಲ್ಲಿ ಇಂದಿನ ನಾಗರಾಜ ದೇವಾಲಯವನ್ನು ದ್ರಾವಿಡ ಶೈಲಿಯಲ್ಲಿ ನಿರ್ಮಿಸಿ ವಿಸ್ತರಿಸಿರುವುದು ಸ್ಪಷ್ಟವಾಗುತ್ತದೆ. ತೀರ್ಥಂಕರ ಪಾರ್ಶ್ವನಾಥರ ಐದು ಹೆಡೆಯ ಸರ್ಪ ಭಾಗವನ್ನು ನಂತರ ಆದಿಶೇಷನ ಹೆಸರಿನಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುವುದನ್ನು

ಇಲ್ಲಿಯ ವಿದ್ವಾಂಸರು ಊಹಿಸಿದ್ದಾರೆ. ಈ ಸತ್ಯಾಂಶದ ಬಗ್ಗೆ ಇಲ್ಲಿಯ ಪ್ರಾದೇಶಿಕ ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯವಿಲ್ಲದಿರುವುದು ಗಮನಾರ್ಹ ಸಂಗತಿಯಾಗಿದೆ.

ಭೂತಲ ವೀರ ಉದಯ ಮಾರ್ತಾಂಡನ ಶಾಸನದಲ್ಲಿ ಉಲ್ಲೇಖಿತವಾಗಿರುವ ನಾಗರಕೋಯಲಿನ ದೇವಾಲಯದ ಧರ್ಮಾಧಿಕಾರಿ ಅಥವಾ ಸ್ಥಾನಪತಿ ಗುಣವೀರ ಪಂಡಿತ 'ನೇಮಿನಾಥಂ' ಎಂಬ ತಮಿಳು ಕೃತಿಯ ಕರ್ತೃ. ಈ ಕೃತಿಯನ್ನು ಕ್ರಿ.ಶ. ೧೫೫೦ರಲ್ಲಿ ರಚಿಸಿದ ಉಲ್ಲೇಖವಿದೆ. ಇವನ ಗುರು ಆಚಾರ್ಯ ವಜ್ರನಂದಿ. 'ಚೂಡಾಮಣಿ ನಿಘಂಟು'ವಿನ ಕರ್ತೃವಾದ ಮಂಡಲ ಪುರುಷ ಗುಣವೀರ ಪಂಡಿತನ ಶಿಷ್ಯ. 'ನೇಮಿನಾಥಂ' ಇದು ಮೈಲಾಪುರದ ನೇಮಿನಾಥ ತೀರ್ಥಂಕರರ 'ಸ್ತುತಿ' ಗ್ರಂಥವಾಗಿದೆ. ಮದರಾಸಿನ ಓರಿಯಂಟಲ್ ಲೈಬ್ರರಿಯಲ್ಲಿರುವ ತಮಿಳು ತಾಳೇಗರಿ ಗ್ರಂಥ ಒಂದರಲ್ಲಿ ವಿಜಯನಗರ ಸಾಮ್ರಾಜ್ಯದ ದೊರೆ ಕೃಷ್ಣದೇವರಾಯನ ಸಮಕಾಲೀನ, ಒಬ್ಬ ಗುಣಭದ್ರ ಪಂಡಿತನ ಹೆಸರಿದೆ. ಈತ ತಮಿಳು ಪ್ರಾಂತ್ಯದಲ್ಲಿದ್ದ ಜಿನ ಬಸದಿಗಳ ವಾಸ್ತುಶಿಲ್ಪ ರಚನೆಯ ದೋಷವನ್ನು ಸರಿಪಡಿಸಲು ವಾಸ್ತು ಶಿಲ್ಪಾಗಾರರನ್ನು ತಮಿಳುನಾಡಿಗೆ ಕಳುಹಿಸಿದುದಾಗಿ ಹೇಳಿದೆ. ಈ ಗುಣಭದ್ರನು 'ಚೂಡಾಮಣಿ ನಿಘಂಟು'ವಿನ ಕರ್ತೃ. ಮಂಡಲ ಪುರುಷನ ಗುರುವೆಂದು ಈ ಕೃತಿಯಿಂದ ತಿಳಿದುಬರುತ್ತದೆ. ಮಂಡಲ ಪುರುಷನ ಗುರು ಗುಣಭದ್ರ, ನಾಗರಕೋಯಿಲಿನ ದೇವಸ್ಥಾನದ ಧರ್ಮಾಧಿಕಾರಿ ಅಥವಾ ಸ್ಥಾನಿಕಪತಿ ಗುಣವೀರ ಪಂಡಿತ, 'ನೇಮಿನಾಥಂ' ಕರ್ತೃ ಗುಣವೀರ ಪಂಡಿತ ಇವರೆಲ್ಲರೂ ಒಬ್ಬನೇ ವ್ಯಕ್ತಿಯೇ? ಹಾಗೆಂದು ಗುರುತಿಸುವ ಪ್ರಯತ್ನ ನಡೆದಿರುವುದಾದರೂ, ಕಾಲಗಣನೆಯ ಹೊಂದಾಣಿಕೆ ಇದ್ದರೂ, ಪ್ರಾದೇಶಿಕ ಮತ್ತು ನಾಮ ಸೂಚನೆಯಲ್ಲಿ ಹೊಂದಾಣಿಕೆಯ ಸಮಸ್ಯೆ ಇರುವುದರಿಂದ ಪ್ರಸ್ತುತ ಈ ವಿಚಾರವನ್ನು ಕೈಬಿಡಲಾಗಿದೆ.

**ತಿರುಕ್ಕುನ್ನಾವೆ (Tirakkunavy)**

ತಿರುಕ್ಕುನ್ನಾವೆ ಚೇರ ರಾಜ್ಯದ ಮತ್ತೊಂದು ಪ್ರಮುಖ ಜೈನ ನೆಲೆ ಆಗಿತ್ತು. ಕಣ್ಣಾನೂರು ಜಿಲ್ಲೆಯ ತಲಕ್ಕಾವು ಬಸದಿಯ ಶಾಸನ ಒಂದರಲ್ಲಿ ತಿರುಕ್ಕುನ್ನಾವೆಯಲ್ಲಿದ್ದ ಬಸದಿ ಮತ್ತು ಆ ಬಸದಿಯ ಪ್ರತಿಷ್ಠಾ ಮಹೋತ್ಸವದ ವಿವರಣೆ ಇದೆ.

ಕಣ್ಣಾನೂರಿನ ಜೈನ ಬಸದಿಯ ಪ್ರತಿಷ್ಠಾಪನೆಯನ್ನೂ ತಿರುಕ್ಕುನ್ನಾವೇ ಬಸದಿಯ ಪ್ರತಿಷ್ಠಾ ಮುಹೂರ್ತದಲ್ಲಿಯೇ ಆಚರಿಸಲಾಯಿತೆಂಬ ಪ್ರಸ್ತಾಪ ಮತ್ತೊಂದು ಶಾಸನದಿಂದ ತಿಳಿದುಬರುತ್ತದೆ. ತಿರುಕ್ಕುನ್ನಾವೆ ಬಸದಿ ಸುಮಾರು ಕ್ರಿ.ಶ. ಎಂಟನೇ ಶತಮಾನದಲ್ಲಿ ನಿರ್ಮಿಸಿದ ಶಿಲಾನ್ಯಾಸ ರಚನೆ ಎಂದು ಪರಿಗಣಿಸಲಾಗಿದೆ. ಈ ಬಸದಿಯ ಪ್ರತಿಷ್ಠಾ ಮೂಹೂರ್ತ ಅತ್ಯಂತ ಪವಿತ್ರ ದಿನವೆಂದು ಇಲ್ಲಿಯ ಜೈನ ಸಮುದಾಯ ಬಹುಕಾಲದವರೆಗೂ ಪರಿಗಣಿಸಿದ್ದಲ್ಲದೆ, ಆ ಮೂಹೂರ್ತದಲ್ಲಿಯೇ ಹೊಸದಾಗಿ ನಿರ್ಮಿತ ಬಸದಿಯ ಪ್ರತಿಷ್ಠಾ ಮಹೋತ್ಸವವನ್ನು ಆಚರಿಸುವುದು ಶ್ರೇಷ್ಠವೆಂದು ಭಾವಿಸಿದ್ದರು. ಹಾಗೆ ಆಚರಿಸುವುದು ರೂಢಿಯಲ್ಲಿತ್ತು ಎಂಬುದು ಇಲ್ಲಿಯ ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಎಂ.ಜಿ.ಎಸ್. ನಾರಾಯಣ ಅವರು 'ಕಣ್ಣವಾಯೂರು ಕೊಟ್ಟಂ ಮತ್ತು ಶಿಲಪ್ಪದಿಕಾರಂ ಕಾಲನಿರ್ಣಯ-ಒಂದು ಹೊಸ ಬೆಳಕು' ಎಂಬ ಲೇಖನ ಒಂದರಲ್ಲಿ ಕಣ್ಣವಾಯೂರು ಬಸದಿಯ ಆವರಣದಲ್ಲಿ ಅನೇಕ ಜಿನ ಬಸದಿಗಳಿದ್ದವು; ಈ ಜಿನ ಬಸದಿಗಳನ್ನು ತಿರುಕ್ಕುನ್ನಾವೆ ಜಿನ

ಮಂದಿರದ ಶಿಲಾನ್ಯಾಸದ ಶೈಲಿಯಲ್ಲಿಯೇ ನಿರ್ಮಿಸಲಾಗಿತ್ತು ಎಂದು ಸ್ಪಷ್ಟಪಡಿಸಿದ್ದಾರೆ.* ಶಿಲಪ್ಪದಿಕ್ಕಾರಂನ ಕರ್ತೃ ಇಳ್ಳಂಗೋ ಅಡಿಗಾರ್ ಅವರು ತಮ್ಮ ದೀಕ್ಷೆಯ ನಂತರ ತಿರುಕುನ್ನಾವೆ ಜಿನಮಂದಿರದಲ್ಲಿಯೇ ನೆಲೆಸಿದ್ದರು ಎಂಬ ಐತಿಹ್ಯವೂ ಇದೆ.

ಹದಿನೈದನೇ ಶತಮಾನದ ಕೃತಿ 'ಕೊಕ ಸಂದೇಶ' ಎಂಬ ಮಣಿಪ್ರವಳ ಕಾವ್ಯ ಕೃತಿಯಲ್ಲಿ ತಿರುಕ್ಕುನ್ನಾವೆ ಅತ್ಯಂತ ಸುಪ್ರಸಿದ್ಧ ಜೈನ ಬಸದಿ ಆಗಿದ್ದಿತೆಂಬ ವರ್ಣನೆ ಇದ್ದು, ಈ ಬಸದಿಯನ್ನು ಕಾಲಾನಂತರ ಶಿವಾಲಯವಾಗಿ ಪರಿವರ್ತಿಸಿದುದರ ಕಾರಣ, ಕೇರಳದ ನಂಬೂದಿರಿ ಬ್ರಾಹ್ಮಣರು ಬಹುಕಾಲದವರೆಗೂ ಈ ಶಿವಾಲಯವನ್ನು ಪ್ರವೇಶಿಸಲು ಇಚ್ಛಿಸುತ್ತಿರಲಿಲ್ಲವೆಂದೂ, ಈ ಶಿವ ದೇವಾಲಯ ಪೂರ್ವದಲ್ಲಿ ಜಿನಮಂದಿರವಾಗಿದ್ದುದರ ವಿವರಣೆ ಅವರಿಗೆ ತಿಳಿದಿದ್ದುದೇ ಇದಕ್ಕೆ ಕಾರಣವಾಗಿದ್ದಿತೆಂಬ ಮಾಹಿತಿಯೂ ಇದೆ.

## ವೈನಾಡಿನ ಜೈನ ಬಸದಿಗಳು ಮತ್ತು ಶಾಸನಗಳು

### ಕರ್ನಾಟಕ ಮತ್ತು ವೈನಾಡಿನ ಜೈನರ ಬಾಂಧವ್ಯ

ವೈನಾಡು ಕೇರಳ ರಾಜ್ಯದ ಈಶಾನ್ಯ ಭಾಗದಲ್ಲಿದೆ. ಈ ಭಾಗವು ಕರ್ನಾಟಕ ರಾಜ್ಯ ಸೀಮೆಗೆ ಹೊಂದಿಕೊಂಡಿದ್ದು ಇಂದೂ ಇಲ್ಲಿಯ ಜೈನರ ಮೇಲೆ ಕನ್ನಡ ಜೈನ ಸಂಸ್ಕೃತಿಯ ಪ್ರಭಾವ ಅಧಿಕವಾಗಿಯೇ ಇದೆ. ಇಲ್ಲಿ ನೆಲೆಸಿರುವ ಜೈನರು ದಿನನಿತ್ಯ ವ್ಯವಹಾರದಲ್ಲಿ ಪರಸ್ಪರ ಕನ್ನಡವನ್ನೇ ಬಳಸುತ್ತಾರೆ ಕೇರಳ ರಾಜ್ಯದಲ್ಲಿ ಇಂದು ಸ್ವಲ್ಪಮಟ್ಟಿಗೆ ಜೈನರಿರುವುದು ವೈನಾಡಿನಲ್ಲಿಯೇ; ಜೈನ ಬಸದಿಗಳ ಭಗ್ನಾವಶೇಷಗಳೂ ಇಲ್ಲಿಯೇ ಹೆಚ್ಚಾಗಿ ದೊರಕಿವೆ.

ವೈನಾಡಿನ ವರದೂರಿನಲ್ಲಿ (Varadur) ಜೈನ ಬಸದಿ ಇದೆ. ಈ ಬಸದಿಯಲ್ಲಿರುವ ಜಲಧಾರಾ ಪೀಠದ ಆಯತಾಗ್ರದಲ್ಲಿ ಕನ್ನಡ ಭಾಷೆ ಮತ್ತು ಲಿಪಿಯ ಶಾಸನವಿದೆ. ದಕ್ಷಿಣ ಕನ್ನಡ ಜಿಲ್ಲೆ, ಅದರಲ್ಲಿಯೂ ಕಾರ್ಕಳ, ಉಪ್ಪಿನಂಗಡಿ, ಇಲ್ಲಿಯ ಜೈನರಿಗೂ, ವೈನಾಡಿನ ಜೈನರಿಗೂ ಇದ್ದ ನಿಕಟ ಸಂಬಂಧ ಮತ್ತು ವೈನಾಡಿನಲ್ಲಿದ್ದ ಜೈನ ಬಸದಿಗಳ ಬಗ್ಗೆ ಈ ಶಾಸನದಲ್ಲಿ ವಿವರಣೆ ದೊರಕುತ್ತದೆ. ಕಲ್ಲಿಕೋಟೆ ವಿಶ್ವವಿದ್ಯಾನಿಲಯದ ಇತಿಹಾಸ ಪ್ರಾಚಾರ್ಯ ಎಂ.ಆರ್. ವಾರಿಯರ್ ಅವರು ಕೇರಳದ ಜೈನ ಸಮಾಜದ ಅಂದಿನ ಅಧ್ಯಕ್ಷರಾಗಿದ್ದ ಶ್ರೀ ಶಾಂತಿವರ್ಮ ಜೈನ ಅವರ ಸಹಾಯದಿಂದ ಈ ಶಾಸನವನ್ನು ೧೯೭೬ರಲ್ಲಿ ಪ್ರಕಟಿಸಿದ್ದಾರೆ. ಇದು ಹದಿನೇಳನೇ ಶತಮಾನ, ಅಂದರೆ ಕ್ರಿ.ಶ. ೧೬೮೪-೮೫ರ ಶಾಸನವಾಗಿದೆ.

ಕಾರ್ಕಳದ ಅರಮನೆ ಬಸದಿಯ ಬೊಮ್ಮರಸನ ಮೊಮ್ಮಗ ಲಲಿತಪ್ಪನು ವೈನಾಡಿನ ಅರೆಪಟ್ಟಿ (Arepatti)ಯ ಆದಿನಾಥ ಚೈತ್ಯಾಲಯಕ್ಕೆ ಮತ್ತು ಹನ್ನೆರಡು ಬೀದಿ, ಬೆಣ್ಣೆಗೋಡು (Bennegodu), ಪುಟ್ಟಂಗಡಿ (Puttangadi), ಹೊಸಂಗಡಿ (Hosangadi), ಮತ್ತು ಪಾಲಗುಂಡು (Palagundu) ಇಲ್ಲಿಯ ಜೈನ ಬಸದಿಗಳಿಗೆ ಚಿನ್ನ, ಬೆಳ್ಳಿ, ತಾಮ್ರ ಮತ್ತು ಕಂಚಿನ ಪೂಜಾ ಉಪಕರಣಗಳನ್ನು ನೀಡಿದ ವಿವರಣೆ ಈ ಶಾಸನದಲ್ಲಿದೆ. ಶಾಸನದಲ್ಲಿ ಲಿಖಿತವಾಗಿರುವ ಬಸದಿಗಳು ಇಂದು ಉಳಿದಿಲ್ಲ; ಉಳಿದಿದ್ದರೂ ಅವುಗಳು ಶಿಥಿಲವಾಗಿವೆ, ಅಥವಾ ಭಗ್ನಾವಶೇಷಗಳು

---

* ಈ ಬಗ್ಗೆ ಪ್ರೊ. ನಾರಾಯಣ ಅವರ ಮೂಲ ಲೇಖನ ದೊರಕದೇ ಇದ್ದ ಕಾರಣ ಅವರ ಲೇಖನದ ಸಂಕ್ಷಿಪ್ತ ಅಭಿಪ್ರಾಯವನ್ನು ಇಲ್ಲಿ ಸೂಚಿಸುತ್ತಿದ್ದೇನೆ, ವಿವರಣೆಗಳನ್ನು ಇಲ್ಲಿ ಬರೆಯಲು ಸಾಧ್ಯವಾಗದಿದ್ದುದಕ್ಕೆ ವಿಷಾದಿಸುತ್ತೇನೆ.

ಮಾತ್ರ ನೆನಪಿನ ಚಿಹ್ನೆಯಾಗಿ ಕಾಣಸುತ್ತವೆ.

ವೈನಾಡಿನ ಪನಾಮರಂ ನದಿಯ ಪೂರ್ವದಡದ ಅರೆಪಟ್ಟಿಯಲ್ಲಿ ಆದಿನಾಥ ಚೈತ್ಯಾಲಯವಿತ್ತು. ಇಂದು ಈ ಚೈತ್ಯಾಲಯ ಉಳಿದಿಲ್ಲ; ಆದರೆ ಈ ಚೈತ್ಯಾಲಯದ ಗತವೈಭವದ ನೆನಪು ವೈನಾಡಿನ ಪ್ರದೇಶದ ವಯೋವೃದ್ಧರಲ್ಲಿ ಹಚ್ಚಹಸುರಾಗಿಯೇ ಉಳಿದಿದೆ. ಅರೆಪಟ್ಟಿಗೆಯಿಂದ ಸುಮಾರು ಎರಡು ಮೈಲಿ ದೂರದಲ್ಲಿ ವಾರದೂರ್ ಇದೆ. ಇಲ್ಲಿ ಹತ್ತೊಂಬತ್ತನೇ ಶತಮಾನದಲ್ಲಿ ನಿರ್ಮಿಸಿದ ಬಸದಿ ಇದೆ. ಇಂದಿಗೆ ಸುಮಾರು ಎಪ್ಪತ್ತು ವರ್ಷಗಳ ಹಿಂದೆ ಈ ಬಸದಿಯ ಜೀರ್ಣೋದ್ಧಾರ ನಡೆದಿದೆ. ಅರೆಪಟ್ಟಿ ಆದಿನಾಥ ಬಸದಿಗೆ ಲಲಿತಪ್ಪನು ಜಲಧಾರಾ ಪೀಠ-೧, ಅನಂತನಾಥಸ್ವಾಮಿ ತೀರ್ಥಂಕರರ ಲೋಹದ ವಿಗ್ರಹ-೧, ಷೋಡಶ ಭಾವನಾಯಂತ್ರ-೧, ಪೀತ ಯಂತ್ರ-೧, ಮೂಲಸ್ವಾಮಿಗೆ ಬೆಳ್ಳಿಯ ಮುಕ್ಕೊಡೆ-೧ ಸ್ಪಟಿಕ ಬಿಂಬಕ್ಕೆ ಪ್ರಭಾವಳಿ-೧, ತಟ್ಟೆ-೫, ಅರ್ಘ್ಯದ ಬಟ್ಟಲು-೨, ನೀಲ ಆರತಿ-೧, ಘಂಟೆ-೧, ಕಲಸಗದಿಗೆ-೪೦, ಯಕ್ಷಯಕ್ಷಿಯರಿಗೆ ಬೆಳ್ಳಿಯ ಕಾಶೀ-೧೨, ಬೆಳ್ಳಿಯ ಸರ-೧, ಬೆಳ್ಳಿಯ ಕಿರೀಟ, ಸಟ್ಟಿಗೆ, ತಾಮ್ರದ ಹಾಲುಧಾರೆ, ಪೀಠ-೧, ನೈವೇದ್ಯಕ್ಕೆ ತಪ್ಪಲೆ-೧, ತಾಮ್ರದ ತಟ್ಟೆ ಮತ್ತು ಕನ್ನಡಿ, ಇವುಗಳನ್ನು ನೀಡಿದುದರ ವಿವರಣೆ ಶಾಸನದಲ್ಲಿದೆ.

ಹನ್ನೆರಡು ಬೀದಿ ಬಸದಿಗೆ ಲಲಿತಣ್ಣನು ಷೋಡಶ ಭಾವನಾ ಯಂತ್ರವನ್ನು ನೀಡಿದ ದಾಖಲಾತಿ ಮೇಲಿನ ಶಾಸನದಲ್ಲಿದೆ. ಹನ್ನೆರಡು ಬೀದಿ ಸುಲ್ತಾನ್ ಬತೇರಿಯ ಹತ್ತಿರವಿರುವ ಕೆಂದಣ್ಣನಾಡ್ ಎಂದು ಗುರುತಿಸಲಾಗಿದೆ. ಸ್ಥಳ ಐತಿಹ್ಯದ ಪ್ರಕಾರ ಇಲ್ಲಿ ಹನ್ನೆರಡು ಜೈನ ಬೀದಿಗಳಿದ್ದವೆಂದು ತಿಳಿದು ಬರುತ್ತದೆ. ಹನ್ನೆರಡು ಬೀದಿ ವೈನಾಡಿನ ಏಳು ಪ್ರಮುಖ ಜೈನ ನೆಲೆಗಳಲ್ಲಿ ಒಂದಾಗಿತ್ತು. ಉಳಿದು ಆರು ನೆಲೆಗಳು, ಮಾಣಿಕ್ಯಪುರಿ, ಕ್ಷೀರಾಪುರ, ಕಲ್ಪಟ್ಟ, ವಣ್ಣಿಯೊಟ್ಟು, ಅರೆಪಟ್ಟಿ ಮತ್ತು ಹೊಸಂಗಡಿ. ಮಧ್ಯಯುಗೀನ ಕಾಲದಿಂದಲೂ ಹನ್ನೆರಡು ಬೀದಿ ಮತ್ತು ಸುಲ್ತಾನ್ ಬತೇರಿಯಲ್ಲಿದ್ದ ಜೈನ ಬಸದಿ ಹೆಚ್ಚು ಮನ್ನಣೆಗಳಿಸಿದ್ದವು. ಸುಲ್ತಾನ ಬತೇರಿಗೆ ಸುಮಾರು ಇಪ್ಪತ್ತು ಮೈಲಿ ದೂರದಲ್ಲಿ ಮತ್ತೊಂದು ಪ್ರಾಚೀನ ಪ್ರಮುಖ ಜೈನ ನೆಲೆಯಾಗಿದ್ದ ತಲಕ್ಕಾವು ಇದೆ. ಇಲ್ಲಿ ಜೈನ ಶಾಸನ ದೊರೆತಿದ್ದು ಈ ಬಗ್ಗೆ ಈಗಾಗಲೇ ವಿವರವಾಗಿ ಪ್ರಸ್ತಾಪನೆ ಮಾಡಲಾಗಿದೆ. ಸುಲ್ತಾನ್ ಬತೇರಿಯ ಜೈನ ಬಸದಿಯ ಐತಿಹ್ಯ ಇಲ್ಲಿಯ ವಯೋವೃದ್ಧರಿಗೆ ಚಿರಪರಿಚಿತವಿದೆ. ಇಂದು ಸುಲ್ತಾನ್ ಬತೇರಿಯ ಬಸದಿ ಶಿಥಿಲವಾಗಿದೆ. ಈ ಶಿಲಾನ್ಯಾಸ ಬಸದಿಯ ನವರಂಗದ ಕಂಬಗಳು, ಸುಂದರ ಜೈನ ಶಿಲ್ಪ ಕೃತಿಗಳಿಂದ ಅಲಂಕೃತವಾಗಿದೆ. ಈ ಬಸದಿ ಇಂದು ಕೇರಳದ ಪ್ರಾಕ್ತನ ಇಲಾಖೆಗೆ ಸೇರಿದೆ.

ಪನಾಮರಂ ನದಿಯ ಪೂರ್ವಕ್ಕೆ ಎರಡು ಮೈಲಿ ದೂರದಲ್ಲಿ ಪುಟ್ಟಂಗಡಿ ಇದೆ. ಇಲ್ಲಿ ಈಗಲೂ ಕೆಲವು ಜೈನರ ಮನೆಗಳಿವೆ. ಪುಟ್ಟಂಗಡಿಯಲ್ಲಿ ಎರಡು ಶಿಥಿಲವಾಗಿರುವ ಜನಾರ್ಧನ ಮತ್ತು ವಿಷ್ಣು ದೇವಾಲಯಗಳಿವೆ. ವಿಷ್ಣು ದೇವಾಲಯದ ಬಲಭಾಗದ ಕಂಬಗಳ ಮೇಲೆ ಮುಖದ್ವಾರ, ಬೋಧಿಗೆ ಮತ್ತು ಗೋಡೆಯ ಅನೇಕ ಭಾಗಗಳಲ್ಲಿ ಜೈನ ದಂತಕಥೆಗಳನ್ನಾಧರಿಸಿದ ಘಟನಾವಳಿಗಳು, ವಾಹನಾರೂಢರಾದ ಯಕ್ಷ ಯಕ್ಷಿಯರ ಕುದುರೆ, ಬ್ರಹ್ಮದೇವ ಮುಂತಾದ ಸುಂದರ ಉಬ್ಬು ಶಿಲ್ಪ ಕೆತ್ತನೆಗಳು ಸುರಕ್ಷಿತವಾಗಿವೆ. ಈ ಎರಡೂ ದೇವಾಲಯಗಳಲ್ಲಿ ಈಗಿನ ವಿಷ್ಣು ದೇವಾಲಯವೇ ವಾರದೂರು ಶಾಸನದಲ್ಲಿ ಸೂಚಿತವಾಗಿರುವ ಜೈನ ಬಸದಿ ಎಂದು

ಗುರುತಿಸಲಾಗಿದೆ.*

ಬೆಣ್ಣೆಗೋಡು, ಮಲೆಯಾಳಂ ಭಾಷೆಯ ವೆಣ್ಣೆಯೋಟು ಪದದ ಪರ್ಯಾಯ ರೂಪ. ಹಾಗೆಯೇ ಪಾಲಗುಂಡು, ಮಲೆಯಾಳಂ ಭಾಷೆಯ ಪಾಲಕ್ಕುನ್ನು ಪದದ ಪರ್ಯಾಯ ರೂಪದ ಪದವೇ ಆಗಿದೆ. ಇಂದು ಈ ಊರುಗಳಲ್ಲಿ ಹೊಸದಾಗಿ ನಿರ್ಮಿತವಾದ ಬಸದಿಗಳಿವೆ. ಪ್ರಾಚೀನ ಬಸದಿಯ ಭಗ್ನಾವಶೇಷಗಳಲ್ಲಿ ತೀರ್ಥಂಕರರ ಭಗ್ನ ವಿಗ್ರಹಗಳು ಅಲ್ಲಲ್ಲಿ ಹರಡಿದ್ದು, ಇವುಗಳು ಇಲ್ಲಿ ಇದ್ದಂತಹ ಪ್ರಾಚೀನ ಬಸದಿಯ ಹೆಗ್ಗುರುತುಗಳಾಗಿವೆ.

ಹೊಸಂಗಡಿ ಬಸದಿ ಇಂದು ಮಾನಂತವಾಡಿ ಬಸದಿ ಎಂದು ಪ್ರಚಲಿತವಾಗಿದೆ. ಮೊದಲು ಈ ಊರಿನಲ್ಲಿ ಒಂದೇ ಅಂಗಡಿ ಇದ್ದುದರಿಂದ ಒಂದಂಗಡಿ ಎಂಬ ಹೆಸರಿತ್ತು. ಕಾಲಕ್ರಮದಲ್ಲಿ ಇಲ್ಲಿ ವಾರದ ಸಂತೆ ನಡೆಯುತ್ತಿದ್ದ ಕಾರಣ ಹೊಸ ಮಾರುಕಟ್ಟೆ ಆರಂಭವಾಗಿ ಹೊಸ ಅಂಗಡಿ ಎಂಬ ಹೆಸರು ಪ್ರಚಲಿತವಾಯಿತು. (ಇದು ಮಾನಂತೋಡಿ ನದಿಯ ಪಶ್ಚಿಮ ಭಾಗದಲ್ಲಿದೆ).

ಹೊಸಂಗಡಿಯಲ್ಲಿ ಪ್ರಾಚೀನ ಬಸದಿಯ ಭಗ್ನಾವಶೇಷಗಳು - ಮುರಿದು ಬಿದ್ದಿರುವ ಕಂಬಗಳು, ಜಿನ ವಿಗ್ರಹಗಳು ವಿಸ್ತಾರವಾಗಿ ಹರಡಿದ್ದು, ಇದೇ ಸ್ಥಳದಲ್ಲಿ ಹೊಸ ಬಸದಿಯನ್ನು ನಿರ್ಮಿಸಲಾಗಿದೆ. ಕ್ರಿ.ಶ. ೧೭೦೧ರ ತಾಮ್ರಪಟ ಶಾಸನ ಒಂದರಲ್ಲಿ ಇಲ್ಲಿಯ ಪ್ರಾದೇಶಿಕ ಅಧಿಕಾರಿಯು ದತ್ತಿ ನೀಡಿದ ವಿವರಣೆ ಇದೆ. ವಾರದೂರ್ ಜಲಧಾರಾ ಪೀಠದ ಶಾಸನದಲ್ಲಿ ಹೊಸಂಗಡಿ ಬಸದಿಗೆ ಲಲಿತಪ್ಪನು ಎಂಟು ಕಲಸಗದ್ದಿಗೆಗಳನ್ನು ನೀಡಿದ ವಿವರಣೆ ಇದೆ.

ಶಾಸನದಲ್ಲಿ ಉಲ್ಲೇಖಿತವಾಗಿರುವ ಊರುಗಳು ಮತ್ತು ಆಯಾ ಊರುಗಳಲ್ಲಿ ಇದ್ದಂತಹ ಬಸದಿಗಳು ಮತ್ತು ಇಂದು ಅವುಗಳ ಸ್ಥಿತಿಗತಿ, ಇವುಗಳನ್ನು ಗಮನಿಸಿ ನೋಡಿದಾಗ, ಸುಮಾರು ಹದಿನೇಳು-ಹದಿನೆಂಟನೆಯ ಶತಮಾನದವರೆಗೂ ಈ ಬಸದಿಗಳು ಅಸ್ತಿತ್ವದಲ್ಲಿದ್ದುದಲ್ಲದೆ, ವೈನಾಡಿನ ಜೈನರು ದಕ್ಷಿಣ ಕನ್ನಡ ಜಿಲ್ಲೆಯ ಜೈನರೊಂದಿಗೆ ನಿಕಟ ಸಂಬಂಧ ಹೊಂದಿದ್ದರು ಎಂಬುದು ವಿದಿತವಾಗುತ್ತದೆ. ಕರ್ನಾಟಕ ಮತ್ತು ಕೇರಳದ ಜೈನರ ಬಾಂಧವ್ಯದ ಬಗ್ಗೆ ದೇವಚಂದ್ರನು ರಾಜಾವಳೀ ಕಥಾಸಾರದಲ್ಲಿ - ವಿಷ್ಣುವರ್ಧನನ ಸಂತತಿಯ ಅರಸುಗಳಲ್ಲಿ ಕೆಲವರು ಕೇರಳ ದೇಶಕ್ಕೆ ವಲಸೆ ಹೋದರು ಎಂದು ಉಲ್ಲೇಖಿಸಿದ್ದಾನೆ. ಅಂದರೆ ಹನ್ನೆರಡನೇ ಶತಮಾನದಲ್ಲಿ ಕರ್ನಾಟಕದಲ್ಲಿ ಸಂಭವಿಸಿದ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಜೈನರ ಧರ್ಮದ ರಾಜಕೀಯ ಪ್ರಭಾವ ಕ್ರಮೇಣವಾಗಿ ಬಲಹೀನಗೊಂಡು ನಂತರ ಪಶ್ಚಿಮ ಕರಾವಳೀ ಪ್ರದೇಶದಲ್ಲಿ ತಲೆಯೆತ್ತಿತು. ಈ ಸಂದರ್ಭದಲ್ಲಿ ಹೊಯ್ಸಳ ನಾಡಿನ ಅನೇಕ ಜೈನರು ದಕ್ಷಿಣ ಕರ್ನಾಟಕದ ಜೈನ ರಾಜಮನೆತನಗಳ

---

* ಡಾ. ಎಂ.ಡಿ. ವಸಂತರಾಜ್, ಜೈನಾಲಜಿ ಮತ್ತು ಪ್ರಾಕೃತ ವಿಭಾಗದ ನಿವೃತ್ತ ಪ್ರಾಚಾರ್ಯರು. ಇವರ ಬಳಿ ಕೆಲವು ಓಲೆಗರಿ ಗ್ರಂಥಗಳಿದ್ದು, ಅವುಗಳಲ್ಲಿ ಕೆಲವು ಶ್ರುತಕೀರ್ತಿ ಮುನಿಯ ಅಪೂರ್ಣ ರಚನೆಗಳೂ ಇವೆ. ಈ ಓಲೆಗರಿ ಕಟ್ಟಿನ ಒಂದು ಬಿಡಿ ಗರಿಯಲ್ಲಿ ಪುಟ್ಟಂಗಡಿಯಲ್ಲಿ ಚಂದ್ರಪ್ರಭ ತೀರ್ಥಂಕರರ ಬಸದಿ ಇದ್ದುದರ ಮಾಹಿತಿ ಇದೆ. ಈ ಭಾಗದ ರಚನೆ ಈ ರೀತಿ ಇದೆ -

ಪೃಥಿವಿಯೆಂದೆಂಬ ಪೆಣ್ಣಿನ ಮುಖದೊಳಗಿಟ್ಟುತ್ತದು ತಿಲಕದಂದದಲಿ ।
ಪುತ್ತ್ರಂಗಡಿಯ ಮಧ್ಯದೊಳು ಶಶಿಪ್ರಭರ ಚೆಲ್ವೆತ್ತ ಭವನ ವೊಪ್ಪುತಿಹುದೂ ॥
ಅಂತಾ ಜನರ ಗುಣವೆಲ್ಲವನು ಪ್ರಶಾಂತ ಮಾನಸನು ತಾನಾಗಿ ।
ಅಂತರಂಗದೊಳಿಟ್ಟು ಪಾಲಿಸುತ್ತಿಹನತಿ ಶಾಂತಿಕೀರಿತಿ ಯತಿವರನೂ ॥
ಮುಖಿಪ್ಪುಶದಲ್ಲಿ ವೀತರಾಗನಮಃ ಶ್ರೀ ಚಂದ್ರನಾಥಾಯ ನಮಃ ಎಂದಿದೆ,
ಶ್ರುತಕೀರ್ತಿ ಮುನಿವರ ಪೇಳ್ವನಿದನೊಲ್ದು - ಎಂದಿದೆ.

ರಕ್ಷಣೆ ಪಡೆದರು. ಜೀವನ ನಿರ್ವಹಣೆಯ ಹಿನ್ನೆಲೆಯಲ್ಲಿ ಪಶ್ಚಿಮ ಕರಾವಳೀ ಪ್ರದೇಶ ಮತ್ತು ವೈನಾಡಿನ ವಿವಿಧ ಭಾಗಗಳಿಗೆ ವಲಸೆ ಹೋದ ಸಂಗತಿ ಅಸಂಭವವೇನೂ ಅಲ್ಲ. ವೈನಾಡಿನಲ್ಲಿ ಶಿಥಿಲಗೊಂಡಿರುವ ಜೈನ ಬಸದಿಗಳ ಶೈಲಿಯೂ ಕರ್ನಾಟಕ ವಾಸ್ತುಶಿಲ್ಪ ಶೈಲಿಯನ್ನೇ ಹೋಲುತ್ತವಲ್ಲದೆ, ಹೊಯ್ಸಳ ಮತ್ತು ವಿಜಯನಗರ ಶೈಲಿಯಂತೆ ದೇವಸ್ಥಾನಗಳ ಅಧಿಷ್ಠಾನ, ಕಂಬ, ಗೋಡೆ ಮತ್ತು ನವರಂಗಗಳಲ್ಲಿ ಸುಂದರವಾದ ಜೈನಪುರಾಣ ಕಥೆಗಳನ್ನಾಧರಿಸಿದ ಶಿಲ್ಪ ಕೆತ್ತನೆಗಳೂ ಇವೆ. ಈ ಬಗ್ಗೆ ಸೂಕ್ಷ್ಮ ಅಧ್ಯಯನ ನಡೆದಲ್ಲಿ ಹೆಚ್ಚಿನ ಮಾಹಿತಿಗಳು ದೊರಕುವುದಲ್ಲದೆ ನಿಖರ ಐತಿಹಾಸಿಕ ವಿವರಣೆಗಳೂ ಲಭ್ಯವಾಗುವುದು ಸಾಧ್ಯವಿದೆ. ಮೇಲೆ ಹೇಳಿದಂತೆ, ಹೊಯ್ಸಳ ಸಾಮ್ರಾಜ್ಯದಲ್ಲಿ ಜೈನರ ರಾಜಕೀಯ ಪ್ರಭಾವ ಕುಸಿದಂತೆ ಹೊಯ್ಸಳ ಪ್ರಾಂತ್ಯದ ಪಾಂಚಾಲ ವರ್ಗ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆ ಕಂಡರು. ಮುಂದೆ ವೈನಾಡಿನಲ್ಲಿ ನೆಲೆಸಿ, ಅಲ್ಲಿಯ ಜೈನ ಸಜ್ಜನ ವರ್ಗದವರ ಪೋಷಣೆಗೆ ಒಳಗಾಗಿ ಬಸದಿಗಳನ್ನು ಕರ್ನಾಟಕ ಶೈಲಿಯಲ್ಲಿಯೇ ನಿರ್ಮಿಸಿರುವ ಸಾಧ್ಯತೆಯ ಅಂಶವನ್ನು ಪ್ರೊ. ವಾರಿಯರ್ ಅವರು ಗಮನಿಸಿದ್ದಾರೆ. ಅಲ್ಲದೆ, ಹದಿನಾಲ್ಕನೆಯ ಶತಮಾನದ 'ಉನ್ನಿಯಾಚ್ಚ ಚರಿತ' (Unniyacci Carita) ಎಂಬ ಕೃತಿಯಲ್ಲಿ ದ್ವಾರಸಮುದ್ರ ಮಹಾನಗರದ ಉಲ್ಲೇಖವಿದ್ದು ಕೇರಳದ ಜೈನ ನಿವಾಸಿಗಳಿಗೆ ಕರ್ನಾಟಕದ ಜೈನ ಬಲ್ಲಾಳ ಮನೆತನ ಮತ್ತು ಅವರ ಖ್ಯಾತ ರಾಜಧಾನಿಯ ಚಿರಪರಿಚಯವಿದ್ದ ವಿಚಾರವೂ ಸ್ಪಷ್ಟವಾಗುತ್ತದೆ. ವೈನಾಡಿಗೂ ಮತ್ತು ಕರ್ನಾಟಕ್ಕೂ ಇದ್ದಂತಹ ಅಂತರ ರಾಜ್ಯ ವಾಣಿಜ್ಯ ವ್ಯವಹಾರದ ಬಗ್ಗೆಯೂ ಈ ಕೃತಿಯಲ್ಲಿ ಪರೋಕ್ಷವಾಗಿ ವಿವರಣೆ ಇದೆ. ಈ ಕೃತಿ ಕರ್ನಾಟಕ ಮತ್ತು ಕೇರಳದ ಜೈನ ಬಾಂಧವರ ನಿಕಟ ಸಂಪರ್ಕವನ್ನು ದೃಢೀಕರಿಸುತ್ತದೆ ಎಂಬ ಅಭಿಪ್ರಾಯವನ್ನು ಪ್ರೊ. ವಾರಿಯರ್ ವ್ಯಕ್ತಪಡಿಸಿದ್ದಾರೆ. ಮೇಲಿನ ಶಾಸನದಲ್ಲಿ ಹೇಳಿರುವ ಎಲ್ಲಾ ಊರುಗಳೂ ಸುಮಾರು ಹತ್ತು-ಹದಿನೈದು ಮೈಲಿ ಅಂತರದಲ್ಲಿಯೇ ಇದ್ದು, ಇಲ್ಲಿ ಜೈನರು ಅಧಿಕ ಸಂಖ್ಯೆಯಲ್ಲಿಯೇ ನೆಲೆಸಿದ್ದರೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಹದಿನೆಂಟನೆಯ ಶತಮಾನದಲ್ಲಿ ವೈನಾಡಿನ ಪ್ರಾದೇಶಿಕ ಅಧಿಕಾರಿಗಳಿಗೂ ಮತ್ತು ಮೈಸೂರಿನ ಸುಲ್ತಾನನಿಗೂ ಸಂಭವಿಸಿದ ಘರ್ಷಣೆಯಿಂದಾಗಿ ವೈನಾಡಿನ ಜೈನರು ತಮ್ಮ ಊರುಗಳನ್ನು ತೊರೆದು ಸುರಕ್ಷಿತ ಪ್ರದೇಶಗಳಲ್ಲಿ ನೆಲೆಸುವುದು ಅನಿವಾರ್ಯವಾಯಿತು. ಹೀಗಾಗಿ, ಇಂದು ಈ ಬಸದಿಗಳ ಮತ್ತು ಜೈನ ನೆಲೆಗಳ ಭಗ್ನಾವಶೇಷಗಳು ಮಾತ್ರ ಹೆಗ್ಗುರುತಾಗಿ ಉಳಿದುಕೊಂಡಿವೆ.

## ಯಕ್ಷೀ ಆರಾಧನೆ

ಕೇರಳದಲ್ಲಿ ಜೈನ ಯಕ್ಷ-ಯಕ್ಷಿಯರಿಗೆ ವಿಶೇಷ ಗೌರವ ಸಂದಿದೆ. ಈ ಬಗ್ಗೆ ವಿವರಣೆಗಳು ಶಾಸನಗಳಲ್ಲಿ ಉತ್ಕೀರ್ಣವಾಗಿವೆ. ತೀರ್ಥಂಕರರಿಗೆ ಸಲ್ಲಬೇಕಾದ ಅಂಗ-ರಂಗ ಪೂಜೆಯ ಜೊತೆಯಲ್ಲಿ ಶಾಸನದೇವತೆಗಳನ್ನೂ ಆರಾಧಿಸುವ ಪದ್ಧತಿ ದ್ರಾವಿಡ ದೇಶದ ಜೈನ ಧಾರ್ಮಿಕ ಆಚರಣೆಯಲ್ಲಿ ವಿಶೇಷ ಪ್ರಾಮುಖ್ಯತೆಯನ್ನು ಗಳಿಸಿತ್ತು. ಇಲ್ಲಿ ಯಕ್ಷಿಯರಿಗೆ ಗುಹಾಂತರ್ದೇವಾಲಯಗಳನ್ನು ನಿರ್ಮಿಸಿ, ಪ್ರತ್ಯೇಕವಾಗಿಯೇ ಯಕ್ಷೀ ವಿಗ್ರಹಗಳನ್ನು ಪ್ರತಿಷ್ಠಾಪಿಸುವ ಕ್ರಮ ಇದ್ದಿತು. ಕ್ರಿ.ಶ. ಎಂಟನೆಯ ಶತಮಾನ ಅಥವಾ ಇನ್ನೂ ಪೂರ್ವದಲ್ಲಿಯೇ ದ್ರಾವಿಡ ದೇಶದಲ್ಲಿ ಯಕ್ಷೀ ಆರಾಧನೆ ವ್ಯಾಪಕಗೊಂಡಿರಬೇಕು. ಕರ್ನಾಟಕದಲ್ಲಿಯೂ ಇದೇ ಸಮಯಕ್ಕೆ ಯಕ್ಷೀ ಆರಾಧನೆ ಹೆಚ್ಚು ಪ್ರಚಾರಗೊಂಡಿತು. ಕ್ರಿ.ಶ. ಏಳನೇ ಶತಮಾನದಿಂದ ಹದಿಮೂರನೇ ಶತಮಾನದವರೆಗೆ ಹುಂಚದಿಂದ ಆಳ್ವಿಕೆ ನಡೆಸುತ್ತಿದ್ದ ಕರ್ನಾಟಕದ 'ಸಂತಾರ' ಜೈನ ರಾಜಮನೆತನ ಯಕ್ಷೀ ಉಪಾಸಕ ಮನೆತನದವರೇ ಆಗಿರಬೇಕು. ಆ ಕಾರಣದಿಂದಲೇ ಇವರ ಆಳ್ವಿಕೆಯ ಕಾಲದಲ್ಲಿ

ಕರ್ನಾಟಕದಲ್ಲಿ ಯಕ್ಷೀ ಆರಾಧನೆ ಹೆಚ್ಚು ವ್ಯಾಪಕಗೊಂಡಿತು. 'ಸಂತಾರ' ಸಂತತಿಯ ಸ್ಥಾಪಕ ಜಿನದತ್ತರಾಯನ ಕುಲದೇವತೆಯೇ ಯಕ್ಷೀ ಪದ್ಮಾವತಿ ಆಗಿದ್ದುದರಿಂದ ಸಂತಾರ ಶಾಸನಗಳು ಬಹುಮಟ್ಟಿಗೆ ಪದ್ಮಾವತಿ ಸ್ತುತಿಯೊಂದಿಗೆ ಆರಂಭವಾಗುತ್ತವೆ-

"....... ಪಟ್ಟಿ ಪೊಂ
ಬುರ್ಚ್ಚ ಪುರವರೇಶ್ವರಂ ಮಹೋಗ್ರವಂಶ ಲ
ಲಾಮಂ ಪದ್ಮಾವತಿ ಲಬ್ಧವರಪ್ರಸಾದಾಸಾ
ದಿತ ವಿಪುಳ ತುಳಾಪುರುಷಮಹಾದಾನಹಿ
ರಣ್ಯಗರ್ಭ.........."

ಬನವಾಸೀ ಕದಂಬರ ದೊರೆ ರವಿವರ್ಮನ (ಕ್ರಿ.ಶ. ೪೯೫-೫೪೯) ಗುಡ್ನಾಪುರ ಶಾಸನದಲ್ಲಿ ಪದ್ಮಾವತಿ ಯಕ್ಷಿಯ ಪ್ರತ್ಯೇಕ ಮಂದಿರವಿದ್ದುದರ ಬಗ್ಗೆ ಮಾಹಿತಿ ಇದ್ದು ಈ ಮಂದಿರಕ್ಕೆ ಪ್ರತ್ಯೇಕ ದತ್ತಿ ನೀಡಿದ ಉಲ್ಲೇಖವೂ ಇದೆ. ಅಂದರೆ, ಕ್ರಿ.ಶ. ಐದನೇ ಶತಮಾನದಲ್ಲಿಯೇ ಯಕ್ಷೀ ಆರಾಧನೆ ಕರ್ನಾಟಕದಲ್ಲಿಯೂ ಪ್ರಚಾರದಲ್ಲಿತ್ತು ಎಂಬುದು ಈ ಶಾಸನದಿಂದ ಸ್ಪಷ್ಟವಾಗುತ್ತದೆ. ಕ್ರಿ.ಶ. ಐದನೇ ಶತಮಾನಕ್ಕಿಂತಲೂ ಪೂರ್ವದಲ್ಲಿಯೇ ಯಕ್ಷೀ ಆರಾಧನೆಯು ದ್ರಾವಿಡ ದೇಶ ಮತ್ತು ಕರ್ನಾಟಕಗಳಲ್ಲಿ ವಿಕಾಸಗೊಂಡು ಕ್ರಿ.ಶ. ಎಂಟನೇ ಶತಮಾನದ ನಂತರ ವ್ಯಾಪಕಗೊಂಡಿರಬೇಕು. ಯಕ್ಷಿಯು ವರಪ್ರಸಾದ ದೇವತೆಯಾಗಿ, ಕುಲದೇವತೆಯಾಗಿ, ಆರಾಧ್ಯದೇವತೆಯಾಗಿ ಮತ್ತು ಮನೆದೇವತೆಯಾಗಿ ಜನಸಾಮಾನ್ಯರ ನಿತ್ಯ ಜೀವನದಲ್ಲಿ ವಿಜೃಂಭಿಸಿರುವ ನಿದರ್ಶನಗಳು ಹೇರಳವಾಗಿವೆ.

ಕೇರಳದಲ್ಲಿ ನೈಸರ್ಗಿಕ ಗಿರಿಧಾಮಗಳಲ್ಲಿರುವ ಶ್ರಮಣ ಗುಹೆಗಳ ಹೊರ ಬಂಡೆಗಳ ಮೇಲೆ ಯಕ್ಷಯಕ್ಷಿಯರನ್ನೊಳಗೊಂಡ ಭಿತ್ತಿಚಿತ್ರ ಕೆತ್ತನೆಗಳು ಇದುವರೆಗೂ ಅನ್ವೇಶಿಸಿರುವ ಎಲ್ಲಾ ಶ್ರಮಣ ಗುಹೆಗಳಲ್ಲಿಯೂ ಕಂಡು ಬಂದಿವೆ. ಮಾತೃದೇವತಾ ಆರಾಧನೆ ಧರ್ಮದಲ್ಲಿಯೂ ಪ್ರಾಶಸ್ತ್ಯಗಳಿಸಿದಂತೆ ಪೂಜಾ ಸಂಪ್ರದಾಯ, ತಾಂತ್ರಿಕ ಸಂಪ್ರದಾಯದ ಆರಾಧನೆಯಾಗಿ ಪರಿಣಮಿಸಿತು. ಜೈನ ಶ್ರಮಣರು ಈ ಪೂಜಾ ಪದ್ಧತಿಗೆ ಉತ್ತೇಜನ ನೀಡಿದರು. ಅವರೇ ಸ್ವತಃ ಮಂತ್ರತಂತ್ರ ವಿದ್ಯೆಯಲ್ಲಿ ನೈಪುಣ್ಯ ಗಳಿಸಿದರು. ಕೇರಳ ರಾಜ್ಯದಲ್ಲಿ ಧಾರ್ಮಿಕ ಬೆಳವಣಿಗೆಯಲ್ಲಿ ಸಮತೋಲನ ತಪ್ಪಿದ ಕಾರಣ, ಜೈನ ಧರ್ಮಾನುಯಾಯಿಗಳು ರಾಜ ಪೋಷಣೆ ರಕ್ಷಣೆಯಿಂದ ವಂಚಿತರಾದಾಗ ಶ್ರಮಣರು ಜೈನ ಧರ್ಮದ ಧರ್ಮನಿಷ್ಠರಿಗೆ ಸಾಂತ್ವನ ನೀಡುವ ದೃಷ್ಟಿಯಿಂದ ಉಪಸರ್ಗ ನಿಗ್ರಹ ಶಕ್ತಿ ದೇವತೆಯಾಗಿ ಪದ್ಮಾವತಿ ಆರಾಧನೆಯನ್ನು ಪ್ರಚಾರಗೊಳಿಸಿ, ಈ ಮೂಲಕ ಜನ ಸಾಮಾನ್ಯರಲ್ಲಿ ಧಾರ್ಮಿಕ ದೃಢತೆ ಮತ್ತು ಚೈತನ್ಯವನ್ನು ಮೂಡಿಸುವ ಪ್ರಯತ್ನ ನಡೆದಂತೆ ಕಾಣುತ್ತದೆ. ನಂತರ ಈ ರಾಜ್ಯದಲ್ಲಿ ಶ್ರಮಣರ ಪ್ರಭಾವ ಕಡಿಮೆಯಾದಂತೆ, ಎಲ್ಲೆಲ್ಲಿ ಶ್ರಾವಕ ನೆಲೆಗಳಿದ್ದವೋ ಆಯಾ ಪ್ರದೇಶಗಳಲ್ಲಿ ಶ್ರಮಣರ ಗುಹೆಗಳನ್ನು ಯಕ್ಷೀ ಗುಹಾಂತರ್ದೇವಾಲಯಗಳಾಗಿ ಪರಿವರ್ತಿಸಿರುವುದೂ ಸ್ಪಷ್ಟವಾಗುತ್ತದೆ. ಆರಂಭದಲ್ಲಿ ಯಕ್ಷೀ ಆರಾಧನೆ ಜನಬೀಡಿನ ಹೊರ ಭಾಗಗಳಲ್ಲಿ ಪ್ರಚಾರಗೊಂಡು, ನಂತರ ಜನಭರಿತ ಗ್ರಾಮ, ಊರು ಮತ್ತು ನಗರಗಳಲ್ಲಿ ವ್ಯಾಪಕವಾಗಿ ಹರಡಿರಬೇಕು. ತಿರುಚಾರಣತ್ತು ಮಲೈ ಮತ್ತು ಕಲ್ಲಿಲ್ ಕೇರಳದ ಅತ್ಯಂತ ಪ್ರಾಚೀನ ಯಕ್ಷೀ ಆರಾಧನಾ ಕೇಂದ್ರಗಳೆಂದು ಗುರುತಿಸಲಾಗಿವೆ.

ಈ ರಾಜ್ಯದ ಯಕ್ಷೀ ಗುಹಾಂತರ್ದೇವಾಲಯಗಳು ಬಹುಸಂಖ್ಯೆಯಲ್ಲಿ ಭಗವತೀ ಮಂದಿರಗಳಾಗಿ ಪರಿವರ್ತನೆಗೊಂಡಿವೆ. ಇದು ಕೇರಳ ರಾಜ್ಯದ ಧಾರ್ಮಿಕ ಬೆಳವಣಿಗೆಯ ವೈಶಿಷ್ಟ್ಯವೇ ಆಗಿದೆ. ಶೈವ, ವೈಷ್ಣವ ಧರ್ಮದ ಪರಿಸರದ ಚೌಕಟ್ಟಿನಲ್ಲಿ ಅಲ್ಪಸಂಖ್ಯಾತರಾಗಿ

ಉಳಿದ ಮತ್ತು ಶ್ರಮಣರ ನೈತಿಕ ಶಕ್ತಿಯ ರಕ್ಷಣೆಯಿಂದ ವಂಚಿತರಾದ ಜೈನಧರ್ಮಾನುಯಾಯಿಗಳು ಪರಿಸ್ಥಿತಿಯ ವಿಪರ್ಯಾಸಕ್ಕೆ ಒಳಗಾಗಿ, ಸ್ಥಾನಮಾನ, ಜೀವ ರಕ್ಷಣೆಯ ಹಿನ್ನೆಲೆಯಲ್ಲಿ ಜೈನಧರ್ಮವನ್ನು ಬಿಟ್ಟು ಅನ್ಯ ಧರ್ಮವನ್ನು ಸ್ವೀಕರಿಸುವುದು ಅನಿವಾರ್ಯವೂ ಆಯಿತು. ದೇವಚಂದ್ರನು ರಾಜಾವಳೀ ಕಥಾಸಾರದಲ್ಲಿ ಕೇರಳದ ಜೈನ ಸ್ಥಿತಿಗಳ ಬಗ್ಗೆ ಉಲ್ಲೇಖಿಸುತ್ತಾ; ಚೋಳದೇಶ; ಕೇರಳ ದೇಶದ ಜೈನ ಮತದೊಳು ಕೆಲವು ಭೇದವಾಯಿತು. ಕೆಲವರು ಈಶ್ವರ ಭಕ್ತರಾದರು, ಕೆಲವರು ವಿಷ್ಣು ಭಕ್ತರಾದರು ಎಂದು ಉಲ್ಲೇಖಿಸಿದ್ದಾನೆ. (ಪು-೧೬೨) ಹೀಗಾಗಿ ಜೈನರಿಲ್ಲದ ನೆಲೆಗಳಲ್ಲಿ ಜಿನಮಂದಿರಗಳ ಅವಶ್ಯಕತೆ ಅನುಚಿತ ಎನಿಸಿದ್ದರಿಂದ ಕೇರಳದ ಬಹುಸಂಖ್ಯಾತರ ಆರಾಧ್ಯ ದೇವತೆ ಭಗವತಿಯು ತೀರ್ಥಂಕರರ ಯಕ್ಷೀಯರ ಸ್ಥಾನವನ್ನು ಅಲಂಕರಿಸಿರುವುದನ್ನು ಕಾಣುತ್ತೇವೆ. ಆದರೂ, ಈ ಸ್ಮಾರಕಗಳಲ್ಲಿ ಇದ್ದಂತಹ ಜೈನ ಹೆಗ್ಗುರುತುಗಳು ಅಳಿಸಿಲ್ಲ. ಇವುಗಳು ಜೈನ ಧರ್ಮದ ಅಸ್ತಿತ್ವದ ಕುರುಹಾಗಿ ಸುರಕ್ಷಿತವಾಗಿ ಉಳಿದುಕೊಂಡಿವೆ. ಈ ದೃಷ್ಟಿಯಲ್ಲಿ ಕೇರಳ ರಾಜ್ಯದಲ್ಲಿ ಜೈನ ಸ್ಮಾರಕಗಳ ವಿಧ್ವಂಸಕ ಅಮಾನುಷ ಕೃತ್ಯಕ್ಕಿಂತ ಹೆಚ್ಚಾಗಿ ಸಂರಕ್ಷಣೆ ಮತ್ತು ಪರಿವರ್ತನೆಯ ಬೆಳವಣಿಗೆಯನ್ನು ಗಮನಿಸಬಹುದಾಗಿದೆ. 'ಭಗವತೀ' ಆರಾಧನೆ ಕೇರಳ ರಾಜ್ಯದ ಧಾರ್ಮಿಕ ಆಚರಣೆಯ ವೈಶಿಷ್ಟ್ಯವೇ ಆಗಿದೆ. ತಿರುವಾಂಕೂರಿನ ರಾಜವಂಶದ ಮನೆದೇವತೆ ಭಗವತಿಯೇ ಆಗಿದ್ದು ಭಗವತೀ ಆರಾಧನೆಯನ್ನು ಈ ವಂಶದವರು ಇಂದೂ ನಿರ್ವಹಿಸಿಕೊಂಡು ಹೋಗುತ್ತಿದ್ದಾರೆ.

### ದಾನ ಉಲ್ಲಂಘನೆಯ ಭೀತಿ

ಜೈನ ಬಸದಿಗಳಿಗೆ ನೀಡಿದ ದಾನ ದತ್ತಿಗಳನ್ನು ಸಂರಕ್ಷಿಸಿ, ದಾನದ ನಿಯಮವನ್ನು ಎಲ್ಲರೂ ನಿರಂತರವಾಗಿ ಪಾಲಿಸಬೇಕೆಂಬ ಧರ್ಮ ನಿರ್ಬಂಧನೆಯನ್ನು ವಿಧಿಸುವುದು ಕಾಲ ಧರ್ಮದ ನೀತಿಯೇ ಆಗಿತ್ತು. ಇಂತಹ ನಿಯಮ ನಿರ್ಬಂಧನೆಯ ವಿವರಣೆಗಳನ್ನೊಳಗೊಂಡ ಕೆಲವು ಜೈನ ಶಾಸನಗಳು ಈ ರಾಜ್ಯದಲ್ಲಿಯೂ ದೊರಕಿವೆ. ದಾನ ನಿಯಮವನ್ನು ಉಲ್ಲಂಘಿಸುವವರು ಪಂಚಮುನಿಗಳನ್ನು ಕೊಂದ ಪಾಪಕ್ಕೆ ಹೋಗುವರು. ತಿರುಕ್ಕುನ್ನಾವೆಯ ಬಸದಿಯನ್ನು ನಿರ್ಮೂಲ ಮಾಡಿದ ಪಾಪವನ್ನು ಮಾಡುವರು - ಇಂತಹ ಅನೇಕ ಭೀತಿಯ ಪ್ರಸ್ತಾಪಗಳು ಶಾಸನಗಳಲ್ಲಿವೆ. ದಾನದ ಸಫಲತೆಯನ್ನು ಅಪೇಕ್ಷಿಸುತ್ತಿದ್ದ ದಾನಿಗಳ ಅಭಿಲಾಷೆ ಈ ರೀತಿ ಅಭಿವ್ಯಕ್ತವಾಗಿರುವುದನ್ನು ಕಾಣಬಹುದು.

### ಬಸದಿಗಳು ಮತ್ತು ಆರ್ಥಿಕ ವ್ಯವಹಾರ

ತಲಕ್ಕಾವು ಶಾಸನದಲ್ಲಿ ಕೇರಳ ರಾಜ್ಯದಲ್ಲಿನ ಜೈನ ಬಸದಿಗಳ ಸಂರಕ್ಷಣೆ ಮತ್ತು ಸಾಮಾಜಿಕ-ಧಾರ್ಮಿಕ ಕರ್ತವ್ಯ ನಿರ್ವಹಣೆಯ ಜವಾಬ್ದಾರಿಯನ್ನು ವರ್ತಕ ಸಂಸ್ಥೆಗಳು ನಿರ್ವಹಿಸುತ್ತಿದ್ದುದರ ವಿವರಣೆ ಇದೆ. ಕರ್ನಾಟಕದ ಜೈನ ಶಾಸನಗಳಲ್ಲಿ ಉಲ್ಲೇಖಿತವಾಗಿರುವ 'ಹಲರು' 'ನಖರರು' ಇಂತಹ ವರ್ತಕ ಸಂಘಗಳಿಗೆ ಸರಿಸಮನಾದ ಅಧಿಕಾರ ಹೊಂದಿದ್ದ ಮತ್ತು ಜವಾಬ್ದಾರಿ ನಿರ್ವಹಿಸುತ್ತಿದ್ದ 'ನಾರಪಟ್ಟಿನ ಇರವಾರ್' (Narapattenna Yiravar) ಸಂಘದ ಉಲ್ಲೇಖವಿದೆ. ಆಲತ್ತೂರಿನ ಶಾಸನದಲ್ಲಿಯೂ 'ನಾರಪಟ್ಟಿನ ಇರವಾರ್' ಸಂಘದ ಉಲ್ಲೇಖವಿದೆ. ಈ ಕ್ಷೇತ್ರದ ಬಸದಿಗಳ ವಿವಾದವನ್ನು ಬಗೆಹರಿಸುವುದರ ಸಂದರ್ಭದಲ್ಲಿ ಈ ಸಂಘದ ಉನ್ನತ ಅಧಿಕಾರಿಗಳು ಉಪಸ್ಥಿತರಿದ್ದ ವಿವರಣೆ ಇದೆ. ಬಸದಿಯ 'ದೇವದಾಯ' ಅಥವಾ 'ದೇವಸ್ವಂ' ದತ್ತಿ ಭೂಮಿಗಳನ್ನು ಗುತ್ತಿಗೆಗೆ ನೀಡಿ ಅದರಿಂದ ಬಂದ ಉತ್ಪತ್ತಿಯನ್ನು ಧಾರ್ಮಿಕ ಉತ್ಸವ, ನಿತ್ಯಪೂಜೆ ಮತ್ತಿತರ ಕಾರ್ಯನಿರ್ವಹಣೆಗಾಗಿ ಉಪಯೋಗಿಸಲಾಗುತ್ತಿತ್ತು. ಗುತ್ತಿಗೆದಾರ ಓರ್ವ ವ್ಯಕ್ತಿ ಇಲ್ಲವೆ ಸಂಸ್ಥೆಯೂ ಆಗಬಹುದಿತ್ತು. ಗುತ್ತಿಗೆದಾರರು ಕರಾರಿಗೆ

ತಕ್ಕಂತೆ ನಿಗದಿತ ರೀತಿಯಲ್ಲಿ ಉತ್ಪತ್ತಿಯನ್ನು ಬಸದಿಗಳಿಗೆ ನೀಡಬೇಕಿತ್ತು. ಅಲ್ಲದೆ 'ಆರು ಮೂರುವಾರ್' 'ಐಜುನೂರುವಾರ್' ಇಂತಹ ಪ್ರಾದೇಶಿಕ ಸಂಘಗಳ ಉಲ್ಲೇಖ ಶಾಸನಗಳಲ್ಲಿದ್ದು, ಬಹುಶಃ ಈ ಸಂಘದ ಅಧಿಕಾರಿಗಳು ದೇವದಾಯ ಭೂಮಿಯ ಗುತ್ತಿಗೆದಾರರೊಂದಿಗೆ ಸಂಪರ್ಕ ಹೊಂದಿದ್ದರೆಂದು ತೋರುತ್ತದೆ.

'ಪೊದುವಾಳ' (Poduval), 'ಉಲ್‌ಪಾಡು' (Ulpadu), 'ಚೇಯಂಮಾವನ್' (Cheyyumavan), 'ಪಣಿಯುತ್ತೈಯಾವಗಲ್' (Paniyutaiyavagal), 'ಅಟ್ಟಿಕೋಸಂ' (Atti Kosam), 'ಪಟ್ಟಮೂಲಂ' (Pattamulam), 'ಶಿರತ್ರಾಣಿ' (Siratrani), 'ಅಟ್ಟಿಕಾನ್‌ಮಾರ್' (Attikanmar) - ಮುಂತಾದ ಬಸದಿಯ ಅಧಿಕಾರಿಗಳ ಹೆಸರುಗಳು ಶಾಸನಗಳಲ್ಲಿದ್ದರೂ ಅವರ ಅಧಿಕಾರ ವ್ಯಾಪ್ತಿಯ ಬಗ್ಗೆ ಮಾಹಿತಿ ಪ್ರತ್ಯೇಕವಾಗಿ ದೊರಕುವುದಿಲ್ಲ. ಒಟ್ಟಾಗಿ ಇವರು ಬಸದಿಯ ಆಡಳಿತವನ್ನು ಸಮರ್ಪಕವಾಗಿ ನಿರ್ವಹಿಸುತ್ತಿದ್ದುದರ ವಿವರಣೆಗಳಿವೆ. ಈ ಆಡಳಿತ ಅಧಿಕಾರಿಗಳಿಗೆ ಸಂಭಾವನೆಯನ್ನು ಬಸದಿಯ ಆದಾಯದಿಂದ ನೀಡಲಾಗುತ್ತಿತ್ತು. ಈ ರೀತಿಯಲ್ಲಿ ಬಸದಿಗಳ ಚರ, ಸ್ಥಿರ ಆಸ್ತಿಯು ಸಮಾಜದ ವಿವಿಧ ವರ್ಗದವರ ಉದ್ದಿಮೆ, ಉದ್ಯೋಗ ನಿರ್ವಹಣೆಗೆ ಉಪಯುಕ್ತವಾಗುತ್ತಿತ್ತು. ಈ ದೃಷ್ಟಿಯಲ್ಲಿ ಈ ರಾಜ್ಯದ ಜೈನ ಬಸದಿಗಳು ಆರ್ಥಿಕ ವ್ಯವಹಾರ ನಿರ್ವಹಣೆಯಲ್ಲಿ ಸಕ್ರಿಯ ಪಾತ್ರ ವಹಿಸಿದ್ದವು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಜೈನ ಬಸದಿಗಳಿಗೆ ನೀಡಿದ ಭೂದಾನದ ವಿವರಣೆಗಳು ಶಾಸನಗಳಲ್ಲಿ ಕಂಡುಬಂದರೂ ಅಂತಹ ನಿದರ್ಶನಗಳು ಅತ್ಯಂತ ಕಡಿಮೆಯೇ ಎಂದೆನ್ನಬಹುದು. ಜೈನ ಪ್ರಭಾವ ಕ್ಷೀಣಿಸಿದಂತೆ ಜೈನ ಬಸದಿಗಳ 'ಪಲ್ಲಿಚಂದಂ' ದತ್ತಿ ಗ್ರಾಮಗಳನ್ನು ಶೈವ ಮತ್ತು ವಿಷ್ಣು ದೇವಾಲಯಗಳಿಗೆ ವರ್ಗಾಯಿಸಿದ ಕಾರಣ ಜೈನ ಬಸದಿಗಳ ಆರ್ಥಿಕ ಭದ್ರತೆ ಕಳಚಿಬಿದ್ದು ಅವುಗಳ ಅಸ್ತಿತ್ವದ ಗುರುತುಗಳು ಅಳಿಸಿ ಹೋಗಿರುವುದು ಸ್ಪಷ್ಟವಾಗುತ್ತದೆ.

## ಉಪಸಂಹಾರ

ಕೇರಳ ಮತ್ತು ತಮಿಳುನಾಡಿನ ಜೈನಧರ್ಮದ ಬೆಳವಣಿಗೆಯ ಇತಿಹಾಸದಲ್ಲಿ ನಿಕಟ ಹೊಂದಾಣಿಕೆ ಇದೆ. ಈ ಎರಡೂ ರಾಜ್ಯಗಳಲ್ಲಿ ವಿಸ್ತಾರವಾಗಿ ಹರಡಿರುವ ಜೈನ ಶಿಥಿಲ ಸ್ಮಾರಕಗಳು, ಭಗ್ನಾವಶೇಷಗಳು, ಈ ರಾಜ್ಯಗಳಲ್ಲಿ ಜೈನ ಯತಿಗಳ ಧರ್ಮ ಪ್ರಭಾವನೆಯ ನಿದರ್ಶನದ ಮಾಹಿತಿಗಳೇ ಆಗಿವೆ.

ಕೇರಳದಲ್ಲಿ ಜೈನ ಧರ್ಮದ ಪ್ರಭಾವ ಅಳಿಸಿ ಹೋಗಿದೆ ಎಂಬುದು ಗಮನಾರ್ಹ ಸಂಗತಿಯೇ ಆಗಿದೆ. ವೈನಾಡ ಪ್ರದೇಶದಲ್ಲಿ ಉಳಿದು ಇತರ ಭಾಗಗಳಲ್ಲಿ ರಾಜಸ್ಥಾನ, ಗುಜರಾತಿನ ಜೈನರನ್ನು ಬಿಟ್ಟರೆ, ಪ್ರಾದೇಶಿಕ ಜೈನರ ಸಂಖ್ಯೆ ಇಲ್ಲವೆಂದೇ ಹೇಳಬಹುದು.

ಭಗವತಿ ಆರಾಧನೆ ಕೇರಳದಲ್ಲಿ ಹೆಚ್ಚು ಪ್ರಚಲಿತವಾಗಿರುವ ಧಾರ್ಮಿಕ ಆಚರಣೆಯೇ ಆಗಿದೆ. ರಾಜಮನೆತನದ ಕುಲದೇವತೆಯಾಗಿ, ಜನಸಾಮಾನ್ಯರ ಮೇಲೆ ಅಗಣಿತ ಪ್ರಭಾವ ಬೀರಿರುವ ಶಕ್ತಿದೇವತೆ ಭಗವತೀ ಜೈನ ಯಕ್ಷಿಯರ ಆಲಯಗಳಲ್ಲಿ ನೆಲೆಸಿದ್ದು ಯಾವಾಗ? ಏಕೆ? ಈ ಪ್ರಶ್ನೆಗಳಿಗೆ ಸಮಂಜಸ ಉತ್ತರವೇನೂ ಐತಿಹಾಸಿಕ ದಾಖಲೆಗಳಿಂದ ದೊರಕುವುದಿಲ್ಲ. ಭಗವತೀ ಶೈವ ಮತ್ತು ವೈಷ್ಣವ ಧರ್ಮದ ಶಕ್ತಿದೇವತೆ. ಈಶ್ವರನ ಅರ್ಧಾಂಗಿಣಿ. ಕೈಲಾಸವಾಸಿ ಪಾರ್ವತಿಯ ಸಂಕೇತ ಮತ್ತು ವೈಕುಂಠ ಅಧಿಪತಿ ವಿಷ್ಣುವಿನ ರಾಣಿ ಲಕ್ಷ್ಮಿಯ ಸಂಕೇತ. ಅಂದರೆ ಶೈವ, ವೈಷ್ಣವ ಧರ್ಮದಲ್ಲಿ ಸಮಾನ ಭಾವನೆಯನ್ನು ಪ್ರಚೋದಿಸಿರುವ ಸ್ತ್ರೀ ಶಕ್ತಿ.

ಹಿಂದೂ ಧರ್ಮದ ಧಾರ್ಮಿಕ ಐಕ್ಯತೆಯ ಸಂಘಟನಾಶಕ್ತಿಯ ಸಂಕೇತ ದೇವತೆ.

ದ್ರಾವಿಡ ದೇಶದಲ್ಲಿ ಶೈವ-ವೈಷ್ಣವ ಸಂತರ, ಅಂದರೆ ಅಳ್ವ ಮತ್ತು ನಾಯನರ ಪ್ರಭಾವ ರಾಜಕೀಯ ಕ್ಷೇತ್ರ ಮತ್ತು ಜನಸಾಮಾನ್ಯರ ಮೇಲೆ ಸ್ಥಾಪಿತಗೊಂಡಂತೆ ಜೈನಧರ್ಮದ ಪ್ರಭಾವ ಕ್ಷೀಣಿಸುತ್ತಾ ಹೋಯಿತು. ಜೈನ ಯತಿಗಳ ಸಾಮೂಹಿಕ ಹತ್ಯಾಕಾಂಡ ನಡೆಯಿತು. ಈ ಹತ್ಯಾಕಾಂಡದ ಘಟನೆಯನ್ನು ಇಲ್ಲಿಯ ದೇವಾಲಯಗಳಲ್ಲಿ 'ತೇವಾರಂ' ಹಬ್ಬ ರೂಪದಲ್ಲಿ ಆಚರಿಸುವ ಪದ್ಧತಿ ವ್ಯಾಪಕವಾಯಿತು.* ಜೈನ ಯತಿಗಳ ಸಂಖ್ಯೆ ಕ್ಷೀಣಿಸಿದಂತೆ ಜೈನ ಧರ್ಮಾನುಯಾಯಿಗಳ ಸಂಖ್ಯೆಯೂ ಕ್ರಮೇಣವಾಗಿ ನಶಿಸಿ ಹೋಯಿತು. ಕೆಲವರು ಶೈವ-ವೈಷ್ಣವ ಧರ್ಮಕ್ಕೆ ಪರಿವರ್ತನೆಗೊಂಡರು. ಮತ್ತೆ ಕೆಲವರು ವಲಸೆ ಹೋದರು. ಜೈನ ಧರ್ಮಾನುಯಾಯಿಗಳ ಸಂಖ್ಯೆ ಕಡಿಮೆ ಆದಂತೆ, ಜೈನ ಧಾರ್ಮಿಕ ಕ್ಷೇತ್ರಗಳೂ ಬಹುಸಂಖ್ಯಾತ ಶೈವ-ವೈಷ್ಣವರ ಸ್ವತ್ತಾದವು. ಜೈನ ಯಕ್ಷಿ ಗುಹಾಂತರ್ದೇವಾಲಯಗಳು ಭಗವತೀ ದೇವಾಲಯಗಳಾಗಿ ಮಾರ್ಪಾಡು ಹೊಂದಿದವು.

ರಾಜಾವಳೀ ಕಥಾಸಾರದಲ್ಲಿ ದೇವಚಂದ್ರನು ಶ್ರಮಣಶೂಲದ ಹಬ್ಬದ ಬಗ್ಗೆ ಈ ರೀತಿ ಉಲ್ಲೇಖಿಸಿದ್ದಾನೆ. "ಮಧುರಾಪುರದ ಕೂಷ್ಮಾಂಡಿನೀದೇವಿ ಪ್ರತಿಮೆಗೆ ಮೀನಾಕ್ಷಿ ಎಂಬ ಹೆಸರನ್ನು ಪ್ರಕಟಿಸಿ, ಅಲ್ಲಿದ್ದ ಜಿನ ಮುನಿಗಳನ್ನು ವಧಿಸಿದ ನಂತರ ಆ ದೇಶದ ಶೈವ ಸನ್ಯಾಸಿಗಳು ಜೈನ ದ್ವೇಷಿಗಳಾಗಿ ಕ್ರೋಧದಿಂದ ಶ್ರಮಣಶೂಲದ ಹಬ್ಬವೆಂದು ಮರೆಯಿಸಿ ವರುಷಪ್ರತಿ ನಡೆಸುತ್ತಿದರ್ ...." ಇದೇ ರೀತಿ ಕೇರಳ ರಾಜ್ಯದಲ್ಲಿಯೂ ಕೂಡ ಯಕ್ಷೀ ಪದ್ಮಾವತಿ, ಜ್ವಾಲಾಮಾಲಿನೀ, ಸಿದ್ಧಾಯಿಕ ಕೂಷ್ಮಾಂಡಿನೀಯರ ಬಸದಿಗಳು ಭಗವತೀ ಮಂದಿರಗಳಾಗಿ ಮಾರ್ಪಾಡು ಹೊಂದಿರುವ ವಾಸ್ತವಾಂಶವನ್ನು ಊಹಿಸಬಹುದು. ಆದರೆ ಇಲ್ಲಿ ಮೂಲ ಜೈನ ಶಿಲ್ಪ ರಚನೆಯನ್ನು ಅಳಿಸಿಹಾಕದೆ, ಅವುಗಳನ್ನು ಹಾಗೆಯೇ ಉಳಿಸಿಕೊಂಡು ಜೈನ ಪರಿಸರದ ಮಧ್ಯೆ ಭಗವತೀ ವಿಗ್ರಹವನ್ನು ಸ್ಥಾಪಿಸಿರುವುದು ಗಮನಾರ್ಹ ಸಂಗತಿಯೇ ಆಗಿದೆ. ಇದು ಶೈವ-ವೈಷ್ಣವ ಧರ್ಮಾನುಯಾಯಿಗಳ ಸಹೃದಯತೆಯ ಪ್ರತೀಕವೆಂದೇ ತಿಳಿಯಬಹುದಾಗಿದೆ. ಅಂತೆಯೇ ತೀರ್ಥಂಕರ ವಿಗ್ರಹವನ್ನು ಅಯ್ಯಪ್ಪನ ಹೆಸರಿನಲ್ಲಿ, ಪಾರ್ಶ್ವನಾಥನ ಸರ್ಪ ಹೆಡೆಯನ್ನು ಆದಿಶೇಷ, ನಾಗರಾಜನ ಹೆಸರಿನಲ್ಲಿ ಆರಾಧಿಸುತ್ತಿರುವ ಈ ರಾಜ್ಯದ ಧಾರ್ಮಿಕ ಬೆಳವಣಿಗೆಯನ್ನು ಗಹನವಾಗಿ ವಿಚಾರ ಮಾಡಿದಾಗ, ಜೈನಧರ್ಮದ ಸಾರ ಹಿಂದೂ ಧರ್ಮದಲ್ಲಿ ವಿಲೀನಗೊಂಡಿರುವ ವಿಚಾರವನ್ನು ಗುರುತಿಸಬಹುದಾಗಿದೆ. ಈ ರಾಜ್ಯದಲ್ಲಿ ಜೈನ ಸ್ಮಾರಕಗಳು ಬಹು ಸಂಖ್ಯೆಯಲ್ಲಿ ವಿನಾಶ ಹೊಂದಿರಬಹುದಾದರೂ ಉಳಿದಿರುವ ಸ್ಮಾರಕಗಳು ಧಾರ್ಮಿಕ ಹೋರಾಟ ಮತ್ತು ಸಾಮರಸ್ಯದ ಘಟನಾವಳಿಯನ್ನು ನಿರೂಪಿಸುತ್ತವೆ.

---

* ತಮಿಳುನಾಡಿನ ಮೀನಾಕ್ಷೀ ದೇವಾಲಯ ಮತ್ತು ಇತರ ಪ್ರಮುಖ ಶೈವ ದೇವಾಲಯಗಳಲ್ಲಿ ತೇವಾರಂ ಉತ್ಸವದ ದಿನಗಳಲ್ಲಿ ಜೈನ ಶ್ರಮಣರ ಹಿಟ್ಟು ಅಥವಾ ಮಣ್ಣಿನ ಬೊಂಬೆಗಳನ್ನು ಮಾಡಿ ತಿರುಗಣ ಸಂಬಂಧರ್ ಪಾತ್ರಧಾರಿ ಅವರ ನೇತೃತ್ವದಲ್ಲಿ ಶೂಲಕ್ಕೇರಿಸುವ ಪದ್ಧತಿ ೧೯೬೭ರವರೆಗೂ ನಡೆಯುತ್ತಿತ್ತು ಈ ವಿಚಾರವನ್ನು 'ಪರಮಪೂಜ್ಯ ಶಿವಗುರು ಶ್ರೀ ತಿರುಕುಂನ್ರಕುಂಡಿ ಅಡಿಗಾಲರ್ ಅವರು ತಮಿಳುನಾಡಿನ ವಿಧಾನಸಭೆಯ ಗಮನಕ್ಕೆ ತಂದು ಜಾತ್ಯಾತೀತ ರಾಷ್ಟ್ರದಲ್ಲಿ ಈ ಧಾರ್ಮಿಕ ಧೋರಣೆ ಸಲ್ಲದು ಎಂಬ ವಿಚಾರವನ್ನು ತಿಳಿ ಹೇಳುವುದರ ಮೂಲಕ ತೇವಾರಂ ಉತ್ಸವದಂದು ಶ್ರಮಣಶೂಲದ ಆಚರಣೆಯು ತಪ್ಪುವಂತೆ ತಮಿಳುನಾಡಿನ ಸರ್ಕಾರ ಶೈವ ದೇವಾಲಯಗಳಿಗೆ ಆದೇಶ ನೀಡುವಂತೆ ಮಾಡಿದರು. ಜೈನ ಸಮುದಾಯದ ಪರವಾಗಿ ನಾನು ಪೂಜ್ಯನೀಯ ಶ್ರೀ ತಿರುಕುಂನ್ರಾಕುಂಡಿಯವರಿಗೆ ಈ ಮೂಲಕ ನನ್ನ ಗೌರವಪೂರ್ವಕ ನಮನವನ್ನು ಸಲ್ಲಿಸುತ್ತೇನೆ.

"ಕೇರಳ ಬಹುಧರ್ಮ ಭೂಮಿ. ಆದರೆ ರಾಜ ಪ್ರಭುತ್ವದ ಕಾಲದಲ್ಲಿ ಸರ್ವಧರ್ಮ ಸಮನ್ವಯ ನೆಲೆ ಆಗಿತ್ತು" ಎಂಬ ಉದಾರ ಹೇಳಿಕೆಯನ್ನು ಸುಲಭವಾಗಿ ಪ್ರಯೋಗಿಸುವಂತಿಲ್ಲ. ವಿಶೇಷತಃವಾಗಿ ಜೈನಧರ್ಮದ ಆದರತೆಯ ಬಗ್ಗೆ ಈ ಸತ್ವಪೂರ್ಣ ಸಿದ್ಧಾಂತ ಅನ್ವಯವಾಗುವುದಿಲ್ಲ. ಮಾನವ ಸಹಜವಾದ ಧಾರ್ಮಿಕ ಅಂಧತ್ವದ ದೌರ್ಬಲ್ಯವನ್ನು ಮೆಟ್ಟಿ ನಿಲ್ಲುವ ಸಹೃದಯತೆಯ ವಿಚಾರವಾಗಿ ಇಲ್ಲಿ ಸ್ವಲ್ಪಮಟ್ಟಿಗೆ ಕೊರತೆಯನ್ನು ಕಾಣಬಹುದಾದರೂ, ಧಾರ್ಮಿಕ ಪರಿಸರ ಪೂರ್ಣವಾಗಿ ಅಂಧಮಯವಾಗಿರಲಿಲ್ಲ. ಈ ಕಾರಣದಿಂದಲೇ ಮಧ್ಯಯುಗೀನ ಆರಂಭ ವರ್ಷಗಳಲ್ಲೂ ಜೈನಧರ್ಮ ಅಲ್ಲಲ್ಲಿ ಜೀವಂತ ಧರ್ಮವಾಗಿತ್ತು.

ಜೈನ ಆಚಾರ್ಯರ ಉಲ್ಲೇಖ ಈ ರಾಜ್ಯದ ಶಾಸನಗಳಲ್ಲಿ ಇದ್ದರೂ ಮುನಿಗಳ ಸಂಘ, ಗಚ್ಛ ಇವುಗಳ ಹೆಸರಿನ ಉಲ್ಲೇಖಗಳೇನೂ ಸೂಚಿತವಾಗಿಲ್ಲ. ಕರ್ನಾಟಕ ಶಾಸನಗಳಲ್ಲಿ ಬನವಾಸೀ ಕದಂಬರ ಕಾಲದಲ್ಲಿಯೇ ಈ ಭಾಗದಲ್ಲಿ ನೆಲೆಸಿದ್ದ ಕೂರ್ಚಕ (ಯಾಪನೀಯ ದಿಗಂಬರ) ಸಂಘ, ಶ್ವೇತಪಟ ಮಹಾಸಂಘ ಮತ್ತು ನಿರ್ಗ್ರಂಥ ಮಹಾ ಶ್ರಮಣ ಸಂಘ, ಇಂತಹ ಜೈನ ಮುನಿ ಸಂಘಗಳ ಉಲ್ಲೇಖಗಳಿವೆ. ಕ್ರಿ.ಶ. ಒಂದನೇ ಶತಮಾನದಲ್ಲಿಯೇ ಮಾನ್ಯಖೇಟದ ಸುತ್ತಮುತ್ತ ಶ್ವೇತಾಂಬರ ಸಂಘಗಳಿದ್ದ ಉಲ್ಲೇಖವೂ ಇದೆ. ಅಂದರೆ ಕ್ರಿ.ಶ. ಒಂದು ಅಥವಾ ಮೂರನೇ ಶತಮಾನಕ್ಕಾಗಲೇ ಕರ್ನಾಟಕದಲ್ಲಿ ಮುನಿಸಂಘಗಳು ಧರ್ಮ ಕಾರ್ಯಾಚರಣೆಯನ್ನು ಹಮ್ಮಿಕೊಂಡಿದ್ದವು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಕೇರಳದಲ್ಲಿ ಜೈನಧರ್ಮ ಪ್ರಭಾವಶಾಲೀ ಧರ್ಮವಾಗಿ ಏನೂ ಪ್ರಗತಿ ಹೊಂದಲಿಲ್ಲ. ಇಲ್ಲಿಯ ರಾಜಕೀಯ ಕ್ಷೇತ್ರದಲ್ಲಿ ಜೈನ ಧರ್ಮಾನುಯಾಯಿಗಳ ಪ್ರಭಾವದ ನಿದರ್ಶನಗಳು ಏನೂ ಇಲ್ಲವೆಂದೇ ಹೇಳಬಹುದು. ಅಂತೆಯೇ ಈ ರಾಜ್ಯದ ರಾಜಕೀಯ ಇತಿಹಾಸದಲ್ಲಿ ಜೈನ ದಂಡನಾಯಕನ ಮನೆತನ, ಅಂತಹ ಮನೆತನಗಳು ರಾಜವಂಶಗಳೊಂದಿಗೆ ಹೊಂದಿದ್ದ ನಿಕಟ ಸಂಬಂಧ, ಈ ಅಧಿಕಾರಿಗಳ ಮತ್ತು ಅವರ ಪರಿವಾರ ವರ್ಗದವರ ಧರ್ಮ ಪ್ರಭಾವನೆ, ಮುನಿ ಸಂಘಗಳ ಪೋಷಣೆ, ಈ ಬಗ್ಗೆ ಯಾವ ಸೂಚನೆಯೂ ಇಲ್ಲಿಯ ಶಾಸನಗಳಲ್ಲಿ ಇಲ್ಲವೆಂದೇ ಹೇಳಬಹುದು. ಸುಮಾರು ಕ್ರಿ.ಶ. ಏಳನೇ ಶತಮಾನದಲ್ಲಿಯೇ, ಅಂದರೆ ಪಲ್ಲವ ಚಕ್ರವರ್ತಿ ಮಹೇಂದ್ರವರ್ಮನ ಕಾಲಕ್ಕೆ ಅಥವಾ ಇನ್ನೂ ಮುಂಚಿತವಾಗಿಯೇ, ದ್ರಾವಿಡ ದೇಶದಲ್ಲಿ ನೆಲೆಸಿದ್ದ, ಜೈನ ಯತಿಗಳು ಪ್ರಬಲ ವಿರೋಧವನ್ನು ಎದುರಿಸಬೇಕಾದುದರಿಂದ, ಆ ಪ್ರಭಾವ ಕೇರಳ ಭಾಗದಲ್ಲಿಯೂ ಉಂಟಾಗಿ, ಈ ರಾಜ್ಯದಲ್ಲಿ ಜೈನಧರ್ಮದ ಸರ್ವತೋಮುಖ ಪ್ರಗತಿಗೆ ಅಡ್ಡಿವುಂಟಾಯಿತು.

## REFERENCES

1. Kerala District Gazetteers - Trivandrum
2. Gazetteer of India - Kerala
3. Travancore State Mannual
4. Cochin State Mannual
5. Gazetteer of Kerala - Ernakulam
6. Gazetter of Kerala - Malabar District, Vol. I
7. Indian Antiquary, Vol. V.

8. Travancore Archaelogical Survey Reports:
   Vol. I, No. IX
   Vol. II, Part - II
   Vol. III, Part - I
   Vol. VI, Part - II
   Vol. VI, Part - I
9. Jaina Art and Architecture(Ed.) U.P. Shah, Vol. I.
10. 'Svasti Sri' - Dr. Chhabra Felicitation Volume. Article of Dr. M.R. Raghava Varier, Socio-Economic Function of the Jain Temples in Kerala.
11. Journal of Kerala Studies, Vol. III
12. Devachandra, Rajavali, Kathasara, Ed. B.S. Sanniah, Kannada Adhyayana Samste, University of Mysore.
13. Dr. Hampa Nagarajaiah, Yaksha-Yakshi, -Chandrasagara Varni Grantha Male, Bangalore
14. Dr. M. Chidananda Murthy, Kannada Sasanagala Samskritika Adhyayana, Prasaranga, University of Mysore, Mysore.
15. P.B. Desai, South Indian Jainism.
16. B.R. Gopal, Kadamba's Inscriptions.
17. South Indian Inscriptions, Vol. VII
18. QJ.M.S. Vol X, II, April 1923, (Article entitled: 'Periyapurana or the Lives of the great Saiva Devotees' by P.V. Jagadisa Ayyar)
19. Proceedings Volume of the Twelfth Annual Session of South Indian History Congress.
20. Dr. Ekambaranathan, Jainism in Art and Archaelogy (unpublished).

# ಕರ್ನಾಟಕದ ಮೂರ್ತಿಶಿಲ್ಪದಲ್ಲಿ ದಶಾವತಾರಗಳು

ಡಾ. ಅ. ಸುಂದರ

ಇದುವರೆಗೂ ತಿಳಿದ ಮಟ್ಟಿಗೆ ಕರ್ನಾಟಕದಲ್ಲಿ ಅವತಾರಧಾರಿ ವಿಷ್ಣುವಿನ ಅತಿ ಪ್ರಾಚೀನ ಉಲ್ಲೇಖವೆಂದರೆ ಬನವಾಸಿ ಕದಂಬ ಮೃಗೇಶವರ್ಮ (ಸು. ೪. ೫ನೇ ಶತಕ)ನ ಬನವಾಸಿ ಸ್ತಂಭ. ಶಾಸನದಲ್ಲಿ ಇದರ ಆರಂಭದ ಮಂಗಳ ಶ್ಲೋಕ ವಿಷ್ಣು ಸ್ತುತಿಯಾಗಿದೆ.

"ಸ್ವಸ್ತಿಚಿತಂ ಭಗವತಾಂ ಜ್ಯೋತಿರ್ಮಯಂ ಬ್ರಹ್ಮ ವಿದಾಂಶರಣ್ಯಂ
ವಿಶ್ವಸ್ಯ ಕರ್ತಾರಮನೇಕ ರೂಪಂ ವಿಭುಂಪತಿಂ ಸ್ಥಾವರಜಗಮಾನಾಂ
ವಿಷ್ಣುರ್ನ್ನಮನಾಮಿತದೇಕ ಚಿತ್ತಂ"

ಇದರಲ್ಲಿ ವಿಷ್ಣುವನ್ನು "ಅನೇಕರೂಪಂ" ಎಂದು ವರ್ಣಿಸಲಾಗಿದೆ. ಪರೋಕ್ಷವಾಗಿ ಇಲ್ಲಿ ಬಹುಶಃ ವಿಷ್ಣುವಿನ ಅವತಾರಗಳಿಗೆ ಸೂಚನೆಯಿದೆಯೆಂದು ಹೇಳಬಹುದು. ಆದರೆ ಈ ಕದಂಬರ ಕಾಲದ ಮೂರ್ತಿ ಶಿಲ್ಪಗಳು - ದೇವಾಲಯಗಳು ಹೆಚ್ಚಾಗಿ ದೊರೆಯದಿದ್ದರೂ ಸುಮಾರು ೫ನೇ ಶತಮಾನದ ವಿವಿಧ ನರಸಿಂಹ ಶಿಲ್ಪಗಳು ತಕ್ಕಮಟ್ಟಿನ ಸಂಖ್ಯೆಯಲ್ಲಿ ನನ್ನ ಪ್ರಾದೇಶಿಕ ಅನ್ವೇಷಣೆಗಳಲ್ಲಿ ದೊರೆತಿವೆ. ಪ್ರತಿಮಾ ಲಕ್ಷಣಗಳನ್ನು ಕುರಿತು ಪ್ರಾಚೀನ ಕಾಲದ ವೈಖಾನಸಾಗಮ, ಬೃಹತ್‌ಸಂಹಿತಾ, ಮಧ್ಯಯುಗೀನ ಕಾಲದ ಶಿಲ್ಪರತ್ನ, ರೂಪಮಂಡನ ಇವಲ್ಲದೆ ವಿಷ್ಣು ಧರ್ಮೋತ್ತರ, ಅಗ್ನಿಪುರಾಣಗಳು ಮೊದಲಾದ ಸಂಸ್ಕೃತ ಗ್ರಂಥಗಳಿವೆ. ಪ್ರಾಚೀನ ಕರ್ನಾಟಕದ ಮೂರ್ತಿಶಿಲ್ಪಗಳು ಹೆಚ್ಚಾಗಿ ವೈಖಾನಸಾಗಮದಲ್ಲಿಯ ನಿಯಮಗಳಂತಿವೆ.

## ದಶಾವತಾರದ ಬಿಡಿ ಶಿಲ್ಪಗಳು

೧೧-೧೨ನೇ ಶತಮಾನದ ಇಟಗಿ (ಬೆಳಗಾವ ಜಿಲ್ಲೆ) ಯಲ್ಲಿಯ ಗೋವಾ ಕದಂಬರ ಕಾಲದ ಒಂದು ಭವ್ಯ ವಿಷ್ಣು ಮೂರ್ತಿಯ ಪ್ರಭಾವಳಿಯಲ್ಲಿ ದ್ವಾದಶಾವತಾರಗಳಿವೆ. ಗೋವಾ ಕದಂಬ ಕಾಲದ ಹಲಶಿ (ಖಾನಾಪುರ ತಾಲೂಕು, ಬೆಳಗಾಂವ ಜಿಲ್ಲೆ) ನರಸಿಂಹ ದೇವಾಲಯದ ಗರ್ಭಗೃಹದಲ್ಲಿರುವ ವರಾಹ ಮೂರ್ತಿ ಅತ್ಯಂತ ಅಪರೂಪದ್ದು. ನನಗೆ ತಿಳಿದ ಮಟ್ಟಿಗೆ ಕರ್ನಾಟಕದಲ್ಲಿ ಈ ದೇವಾಲಯ, ಕಲಹಳ್ಳಿ (ಮೈಸೂರು ಜಿಲ್ಲೆ)ಯ ಲಕ್ಷ್ಮಿ ವರಾಹ ಮತ್ತು ಉತ್ತರ ಕನ್ನಡ ಜಿಲ್ಲೆಯ ವರಾಹ ದೇವಾಲಯಗಳು ಅಪರೂಪದ್ದಾಗಿವೆ. ಹಲಶಿಯಲ್ಲಿ ಪೂಜೆಗೊಳ್ಳುತ್ತಿರುವ ಮೂರ್ತಿಯು ಅಪರೂಪದ್ದು. ಇಲ್ಲಿಯ ವರಾಹಮೂರ್ತಿಯು ಭೂದೇವಿಯನ್ನು ತನ್ನ ತೋಳಿನ ಮೇಲಿಟ್ಟು ಮುಖದವರೆಗೂ ಮೇಲೆತ್ತಿದ್ದಾನೆ. ಈ ಮೂರ್ತಿಯಲ್ಲಿ ಒಂದು ಅಪರೂಪದ ಲಕ್ಷಣವೆಂದರೆ ಅವನ ಪಾದದಡಿಗಳಲ್ಲಿ ಸರ್ಪ ಮತ್ತು ಆಮೆಯನ್ನು ತೋರಿಸಿರುವುದು.

ಬಾದಾಮಿ ಚಾಲುಕ್ಯ ಶಿಲ್ಪದಲ್ಲಿ ಭೂವರಾಹ ತನ್ನ ಒಂದು ಪಾದವನ್ನು ಅನಂತ (ಆದಿಶೇಷನ) ತಲೆಯ ಮೇಲಿಟ್ಟಿರುತ್ತಾನೆ. ವಿಷ್ಣು ಪುರಾಣದಲ್ಲಿ ಹೇಳಿರುವಂತೆ ಅನಂತನು ಪಾತಾಳಲೋಕದಲ್ಲಿದ್ದು ಭೂಮಿಯನ್ನು ತನ್ನ ತಲೆಯಮೇಲೆ ಹೊತ್ತಿರುತ್ತಾನೆ. ವಾಸುಕಿಯನ್ನು ತೋರಿಸಿರುವುದು ಮಹಾವಿಷ್ಣುವು ವರಾಹರೂಪದಲ್ಲಿ ಪಾತಾಳಲೋಕಕ್ಕೆ ಹೋಗಿ ಭೂಮಿಯನ್ನು ಮೇಲೆತ್ತಿ ತಂದುದರ ಸೂಚನೆಯಿರಬಹುದು. ಆದರೆ ಹಲಶಿಯ ಶಿಲ್ಪದಲ್ಲಿ ಅನಂತ ಮತ್ತು ಕೂರ್ಮವನ್ನು ಚಿತ್ರಿಸಿರುವುದು ಬಹುಶಃ ಅಗ್ನಿ ಪುರಾಣದಲ್ಲಿ ಬರುವ ವಿಷ್ಣು ಪೂಜೆಯ ವರ್ಣನೆಯಲ್ಲಿ ವಿಷ್ಣುವನ್ನು ಅವನ ಪರಿವಾರದವರಾದ ಲಕ್ಷ್ಮಿ, ಗಂಗಾಧಾತ, ವಿಧಾತ, ನವನಿಧಿಗಳು, ವಾಸ್ತುಪುರುಷ, ಶಕ್ತಿ, ಕೂರ್ಮ, ಅನಂತ ಮತ್ತು ಪ್ರಥ್ವಿ ಇವರೊಡನೆ ಸೂಚಿಸಬೇಕೆಂಬ ವಿಧಿಯಿದೆ. ಅನಂತರ ಕಾಲದ ಶಿಲ್ಪರತ್ನದಲ್ಲಿ ಕೂರ್ಮ ಮತ್ತು ಅನಂತನನ್ನು ವರಾಹದ ಪಾದದ ಬಳಿ ತೋರಿಸಬೇಕೆಂಬ ನಿಯಮವಿದೆ. ಪ್ರಾಯಶಃ ಇದಕ್ಕನುಗುಣವಾಗಿ ಮೇಲೆ ಹೇಳಿದ ಮೂರ್ತಿಯನ್ನು ಮಾಡಿರಬಹುದು.

ಕರ್ವಾ (ಹೊನ್ನಾವರ ತಾ. ಉತ್ತರ ಕನ್ನಡ, ಕರ್ನಾಟಕ)ದಲ್ಲಿ ಆಧುನಿಕ ಕಾಲದ ಕಟ್ಟಡವೊಂದರಲ್ಲಿ ಸುಮಾರು ೧೪-೧೫ನೇ ಶತಮಾನದ ಸಮಭಂಗದಲ್ಲಿರುವ ವರಾಹ ಮೂರ್ತಿಯಿದೆ. ಇದು ದ್ವಿಭುಜನ ಬಲಗೈಯಲ್ಲಿ ಫಲವು ಮತ್ತು ಎಡಗೈಯಲ್ಲಿ ಗದೆಯು ಇದೆ. ಕರ್ನಾಟಕದ ಎಲ್ಲೆಡೆಗಳಲ್ಲಿ ಭೂದೇವಿಯನ್ನು ತನ್ನ ಮೇಲೆತ್ತಿದ ಎಡತೋಳಿನ ಮೇಲೆ ಕುಳ್ಳಿರಿಸಿಕೊಂಡು ನಿಂತಿರುವ ಭೂವರಾಹ ಮೂರ್ತಿಯಿದೆ. ಆದರೆ ಕರ್ವಾದಲ್ಲಿಯ ವಿಶಿಷ್ಟ ಲಕ್ಷಣವುಳ್ಳ ಕೇವಲ ವರಾಹ ಮೂರ್ತಿ ಇದೊಂದೆ. ಬಹುಶಃ ಮೊದಲು ಇದ್ದ ವರಾಹ ಮೂರ್ತಿಯು ಕಾರಣಾಂತರದಿಂದ ಭಗ್ನವಾಗಿರಬಹುದು. ಬಹುಶಃ ಮೂಲ ಮೂರ್ತಿಯಂತೆ ಈಗಿನ ಮೂರ್ತಿ ಇರಬೇಕು. ಹೀಗಿದ್ದಲ್ಲಿ ಇದು ಒಂದು ಅಪರೂಪದ ಪ್ರಾಚೀನ ಶಿಲ್ಪದ ಮಾದರಿ. ಬನವಾಸಿ ಕದಂಬ ಕಾಲದ ನರಸಿಂಹ ಶಿಲ್ಪವನ್ನು ಕಟ್ಟುನಿಟ್ಟಾಗಿ ಯಾವುದೇ ಒಂದು ನಿರ್ದಿಷ್ಟ ಗ್ರಂಥವನ್ನು ಅನುಸರಿಸಿ ಮಾಡಿದಂತಿಲ್ಲ. ಇಂಥ ನರಸಿಂಹ ಮೂರ್ತಿಗಳು ಹಲಶಿ (ಖಾನಾಪುರ ತಾಲೂಕ) ಬೆಂಗಣಿ ಕಾರಗಲ್ ಕುಪ್ಪಟೂರು, ಕುಪ್ಪಗದ್ದೆ, ಹೊಸ ಮಹಾಕೂಟ, ತಾಳಗುಂದ ಮೊದಲಾದೆಡೆಗಳಲ್ಲಿವೆ. ತಾಳಗುಂದದ ಶಿಲ್ಪವನ್ನು ಬಿಟ್ಟು ಉಳಿದೆಲ್ಲವೂ ಸುಖಾಸನದಲ್ಲಿ ಕುಳಿತ ದ್ವಿಭುಜ ನರಸಿಂಹ ತಾಳಗುಂದದ ನರಸಿಂಹ ಚತುರ್ಭುಜ. ಅತ್ಯಂತ ಚೆಲುವಾದ ಮೂರ್ತಿ, ದುರದೃಷ್ಟವಶಾತ್ ಒಡೆದುಹೋಗಿದೆ. ಕುತ್ತಿಗೆಯ ಸುತ್ತಲಿನ ಕೇಸರಿ ಹಾಗೂ ಅಭರಣ ಕೆತ್ತನೆ ಸೂಕ್ಷ್ಮ ಹಾಗೂ ಮನೋಹರ. ತೀರ್ಥಹಳ್ಳಿ ತಾಲೂಕಿನ ಕೋಡ್ಲು ಗ್ರಾಮದಲ್ಲಿಯ ಕುಳಿತ ಸಿಂಹದ ಭವ್ಯ ಮೂರ್ತಿಯ ಮತ್ತು ಹಾಗೆಯೇ ಸೋರ್ವಾ(ಗೋವಾ) ಬಂಡೆಗಲ್ಲಿನ ಗುಹಾ ದೇವಾಲಯದಲ್ಲಿಯ ಕುಳಿತ ಸಿಂಹಮೂರ್ತಿಯ ಮತ್ತು (ಸಾಂಗಮ ತಾಲೂಕ, ಗೋವಾ) ಮಲಗಿದ ಭಂಗಿಯಲ್ಲಿಯ ಸಿಂಹಮೂರ್ತಿಯೂ ನರಸಿಂಹ ಅವತಾರವನ್ನು ಸೂಚಿಸುತ್ತದೆಯೆಂದು ನನ್ನ ಅಭಿಪ್ರಾಯ. ಪ್ರಾಚೀನ ನರಸಿಂಹ ಶಿಲ್ಪ ವಿಕಾಸದ ಬಗ್ಗೆ ನಾನು ಬೇರೆಡೆಯಲ್ಲಿ ವಿಶದವಾಗಿ ಚರ್ಚಿಸಿದ್ದೇನೆ.

ಪ್ರಾಚೀನ ಕದಂಬರ ತರುವಾಯ ಬಂದ ಬಾದಾಮಿ ಚಾಲುಕ್ಯರ ಮೂರ್ತಿ ಶಿಲ್ಪಗಳ ಬಗ್ಗೆ ಈಗಾಗಲೇ ಮೇಲೆ ಹೇಳಿದೆ. ಬಾದಾಮಿಯಲ್ಲಿಯ ಚಾಲುಕ್ಯ ಮಂಗಳೇಶನಿಂದ ನಿರ್ಮಿಸಲ್ಪಟ್ಟ ಮೂರನೇ ವಿಷ್ಣು ಗುಹಾಲಯದಲ್ಲಿಯ ೬ನೇ ಶತಮಾನದ ಅಂತ್ಯಭಾಗದ ಚತುರ್ಭುಜ ನರಸಿಂಹನ ಭವ್ಯ ಮೂರ್ತಿಯು ಒಂದು ಅತ್ಯಂತ ಅಪರೂಪದ ಮಾದರಿ. ತನ್ನ ಮುಂದಿನ ಎಡಗೈಯನ್ನು ಗದೆಯ ತುದಿಯ ಮೇಲಿಟ್ಟು ಸಹಜವಾಗಿ ನಿಂತ ಭಂಗಿ ಅದೆಷ್ಟು ಮನಮೋಹಕ! ಹಿಂದಿನ ಬಲಗೈಯಲ್ಲಿ ಚಕ್ರವಿದೆ. ಅಪರೂಪವಾಗಿ ಹಿಂದಿನ ಎಡಗೈ ಕಟಕ ಅಥವ ಸಿಂಹಕರ್ಣ ಮುದ್ರೆಯಲ್ಲಿದೆ.

ಐದನೇ ಅವತಾರವಾದ ವಾಮನನನ್ನು ಬಿಡಿ ಶಿಲ್ಪಗಳಲ್ಲಿ ತೋರಿಸದೆ ಇವನ ತ್ರಿವಿಕ್ರಮ ಸ್ವರೂಪವನ್ನೇ ಮೂಡಿಸಿರುವುದು ಸಾಮಾನ್ಯ. ಬಾದಾಮಿ ಚಾಲುಕ್ಯ-ರಾಷ್ಟ್ರಕೂಟ ಮೊದಲಾದ ಎಲ್ಲ ದಶಾವತಾರಗಳಲ್ಲಿ ಇದು ಹೀಗೆಯೆ. ಆದರೆ ದಶಾವತಾರ ಪಟ್ಟಿಕೆಗಳಲ್ಲಿ ತ್ರಿವಿಕ್ರಮನ ಬದಲು ಕೊಡೆ ಹಿಡಿದುಕೊಂಡ ಕುಬ್ಜ ಬಾಲಕನ ಮೂರ್ತಿಯನ್ನು ಬಿಡಿಸುವುದು ಸರ್ವೇ ಸಾಮಾನ್ಯ. ಪಟ್ಟದಕಲ್ಲಿನಲ್ಲಿಯ ಉತ್ಖನನಗಳಲ್ಲಿ ದೇವಾಲಯದ ಶಿಖರದ ಒಂದು ಭಾಗವಾದ ಶುಕನಾಸಿಯ ಮುಖ ಪಟ್ಟಿಯು ದೊರೆತಿದೆ. ಈ ಮುಖಪಟ್ಟಿಯಲ್ಲಿ ಕುಳಿತ ಚತುರ್ಭುಜ ನರಸಿಂಹನ ಮೂರ್ತಿ ಇದೆ. ಗರ್ಭಗುಡಿಯಲ್ಲಿ ದೇವರ ಮೂರ್ತಿಗನುಗುಣವಾಗಿ ಮುಖ ಪಟ್ಟಿಯಲ್ಲಿ ದೇವರ ಚಿತ್ರವನ್ನು ತೋರಿಸುವುದು ಸಂಪ್ರದಾಯ, ಆದ್ದರಿಂದ ಇಲ್ಲಿ ಒಂದು ಪ್ರತ್ಯೇಕ ನರಸಿಂಹ ದೇವಾಲಯವಿದ್ದಿರಬೇಕು.

ಸೊಗಲ (ಸೌಂದತ್ತಿ ತಾ. ಬೆಳಗಾಂವ್ ಜಿಲ್ಲೆ)ದಲ್ಲಿಯ ಕಲ್ಲೇಶ್ವರ ದೇವಾಲಯದ ಸಭಾಮಂಟಪದ ಒಂದು ಮಧ್ಯಗಂಬದ ಮೇಲೆ ಒಂದು ಅಪರೂಪದ ನರಸಿಂಹ-ಹಿರಣ್ಯಕಶಿಪುವಿನ ಉಬ್ಬು ಶಿಲ್ಪವಿದೆ. ಇದರಲ್ಲಿ ಖಡ್ಗಗಳಿಂದ ಪರಸ್ಪರ ಹೊಡೆದಾಡುತ್ತಿದ್ದು ನರಸಿಂಹನು ಹಿರಣ್ಯಕಶಿಪುವನ್ನು ಖಡ್ಗದಿಂದ ಇರಿದಿದ್ದಾನೆ. ಕರ್ನಾಟಕದಲ್ಲಿ ಈ ತರಹದ ಶಿಲ್ಪವು ಇದೊಂದೆ. ಇದು ಬಹುಶಃ ಕೂರ್ಮ ಪುರಾಣದಲ್ಲಿಯ ಕಥೆಯಂತಿದೆ. ಆದರೆ ಈ ಪುರಾಣದ ಕಥೆಯಲ್ಲಿ ವಿಷ್ಣುವು ನರಸಿಂಹ ರೂಪ ಧರಿಸಿದ್ದನೆಂದು ಹೇಳಿಲ್ಲ. ಆದರೆ ಸೊಗಲ ಶಿಲ್ಪದಲ್ಲಿ ನರಸಿಂಹನನ್ನು ತೋರಿಸಲಾಗಿದೆ.

ಐಹೊಳೆಯಲ್ಲಿ ಪರಶುರಾಮ ಅವತಾರವನ್ನು ಸೂಚಿಸುವ ಒಂದು ಅಪರೂಪದ ಬಿಡಿ ಶಿಲ್ಪವಿದೆ. ಪ್ರಾಯಶಃ ವಿಷ್ಣು ದೇವಾಲಯದ ಒಂದು ದೇವಕೋಷ್ಠದಲ್ಲಿದ್ದ ಮೂರ್ತಿಯಾಗಿದ್ದಿರಬೇಕು. ಚತುರ್ಭುಜ ವಿಷ್ಣುವು ಪದ್ಮಾಸನದಲ್ಲಿದ್ದು ಹಿಂದಿನ ಹಸ್ತಗಳಲ್ಲಿ ಶಂಖ ಚಕ್ರಗಳೊಡನೆ ಪರಶು ಮತ್ತು ಬಿಲ್ಲುಗಳನ್ನು ಹಿಡಿದಿದ್ದಾನೆ. ಇದನ್ನು ಹೊರತುಪಡಿಸಿ, ಪರಶುರಾಮನಿಗೆ ಪ್ರತ್ಯೇಕ ದೇವಾಲಯವಿದ್ದಲ್ಲಿ ಅಂಥಹುದು ಬೆಳಕಿಗೆ ಬಂದಿಲ್ಲ. ವಿಷ್ಣು ಶಿಲ್ಪ ಪ್ರಭಾವಳಿಯಲ್ಲಿ ಸಾಮಾನ್ಯವಾಗಿ ತೋರಿಸಲ್ಪಡುವ ದಶಾವತಾರ ಪಟ್ಟಿಕೆಯಲ್ಲಿ ಪರಶುವನ್ನು ಹಿಡಿದ ಒಬ್ಬ ಋಷಿಯ ಶಿಲ್ಪವನ್ನು ಬಿಡಿಸಲಾಗಿರುತ್ತದೆ.

ರಾಮಾವತಾರವನ್ನು ನಿರ್ದೇಶಿಸುವ ಶಿಲ್ಪವು ಸುಮಾರು ೧೨ನೇ ಶತಮಾನದವರೆಗೆ ದೇವಾಲಯದ ಭಿತ್ತಿ ಸ್ತಂಭಗಳಲ್ಲಾಗಲಿ ಇದುವರೆಗೆ ಕಂಡುಬಂದಿಲ್ಲ. ರಾಮಾಯಣ ೫-೭ನೇ ಶತಮಾನದಿಂದಲೇ ದೇಶದಾದ್ಯಂತ ಜನಪ್ರಿಯವಾಗಿದ್ದರೂ ನರಸಿಂಹ, ವರಾಹ ಮೊದಲಾದ ದೇವರುಗಳಿದ್ದಂತೆ ೧೩ನೇ ಶತಮಾನದವರೆಗೂ ಶ್ರೀ ರಾಮನಿಗೆ ಪ್ರತ್ಯೇಕ ದೇವಾಲಯವಿದ್ದ ಗುರುತುಗಳಿಲ್ಲ. ಅತೀ ಪ್ರಾಚೀನ ಶ್ರೀರಾಮನ ದೇವಾಲಯ ಚಿಕ್ಕಮಗಳೂರು ಜಿಲ್ಲೆಯ ಹಿರೆ ಮಗಳೂರಿನ ಸೀತಾ ಲಕ್ಷ್ಮಣ ಸಹಿತ ಕೋದಂಡರಾಮ ದೇವಾಲಯ. ಆದರೆ ಎರಡು ವರ್ಷಗಳ ಹಿಂದೆ ಬನ್ನಿಕೊಪ್ಪದಲ್ಲಿ ಸುಮಾರು ೯ನೇ ಶತಮಾನದ ೨ ಮೀ ಎತ್ತರದ ದ್ವಿಭುಜ ಶ್ರೀ ರಾಮನ ಮೂರ್ತಿ ಶೋಧವಾಗಿದೆ. ವಿಷ್ಣುವಿನ ಅವತಾರವೆಂದು ಸೂಚಿಸಲು ಎಡ ಬಲ ಭುಜಗಳ ಮೇಲೆ ಚಕ್ರ ಮತ್ತು ಶಂಖಗಳನ್ನು ಬಿಡಿಸಲಾಗಿದೆ. ಕರ್ನಾಟಕದಲ್ಲಿಯೇ ಇದೊಂದೇ ಶ್ರೀ ರಾಮನ ಅತ್ಯಂತ ಪ್ರಾಚೀನ ಮೂರ್ತಿ. ೧೨ನೇ ಶತಮಾನದ ವಿಜಯನಗರ ಕಾಲದಲ್ಲಿ ಮತ್ತು ತರುವಾಯ ಶ್ರೀ ರಾಮದೇವಾಲಯಗಳು ಹೆಚ್ಚಾದವು. ಹಂಪಿಯ ೧೫ನೇ ಶತಮಾನದ ಆದಿಭಾಗದ ಹಜಾರರಾಮ ದೇವಾಲಯದ ಗರ್ಭಗುಡಿಯಲ್ಲಿ ಈಗ ಮೂಲ ಮೂರ್ತಿಗಳಿಲ್ಲದಿದ್ದರೂ

ಅವು ಸೀತಾ ಲಕ್ಷ್ಮಣ ಸಮೇತ ಶ್ರೀ ರಾಮನ ಮೂರ್ತಿಗಳಿಲ್ಲದ್ದು ಗರ್ಭಗುಡಿಯ ಪೀಠದ ಲಕ್ಷಣಗಳಿಂದ ಸ್ಪಷ್ಟ. ಇತ್ತೀಚೆಗೆ ಸುಪ್ರಸಿದ್ಧ ಶೈವಕ್ಷೇತ್ರ ಗೋಕರ್ಣದಲ್ಲಿ ವಿಷ್ಣುವಿನ ಅವತಾರವೆಂದು ಸೂಚಿಸುವ ೫-೬ನೇ ಶತಮಾನದ ಒಂದು ಶ್ರೀರಾಮನ ಮೂರ್ತಿಯು ಬೆಳಕಿಗೆ ಬಂದಿದೆ.

ಬಾದಾಮಿಯಲ್ಲಿ ಮೇಗಣ ದೇವಾಲಯ (ಮೂಲತಃ ವಿಷ್ಣುದೇವಾಲಯ)ದಲ್ಲಿ ರಾಮಾಯಣ ಮತ್ತು ಭಾಗವತ ಕಥೆಗಳಲ್ಲಿಯ ಕೆಲವೊಂದು ಸನ್ನಿವೇಶಗಳ ಕಥಾನಕ ಪಟ್ಟಿಕೆಗಳು, ಗೋವರ್ಧನ ಗಿರಿಧಾರಿ ಕೃಷ್ಣನ ಪಟ್ಟದಕಲ್ಲಿನ ಪಾಪನಾಥ ದೇವಾಲಯದಲ್ಲಿ ರಾಮಾಯಣದ, ಮಹಾಭಾರತದ ದೃಶ್ಯಗಳ ಹಾಗೂ ಕಾಳಿಂಗಮರ್ದನ ಕೃಷ್ಣನ ಚಿತ್ರಗಳಿದ್ದರೂ ಇವೂ ಕಥಾನಕ ಚಿತ್ರಗಳೇ ಹೊರತು ಬಾದಾಮಿಯ ಭೂವರಾಹ ಮೊದಲಾದ ಅವತಾರ ನಿರೂಪಣೆಯ ಚಿತ್ರಗಳಂತೆ ಇವು ಅಲ್ಲ.

ವಿಷ್ಣು ಶಿಲ್ಪದ ಪ್ರಭಾವಳಿಯ ಮೇಲಿನ ದಶಾವತಾರ ಸೂಕ್ಷ್ಮ ಶಿಲ್ಪಗಳುಳ್ಳ ಬನವಾಸಿ ಮಧುಕೇಶ್ವರ ದೇವಾಲಯದಲ್ಲಿ ಒಂದು ಅಪರೂಪದ ಪ್ರಾಚೀನ ವಿಷ್ಣುಮೂರ್ತಿಯಿದೆ. ಇದರ ಕಾಲಮಾನ ಪ್ರಾಯಶಃ ೮ನೇ ಶತಮಾನ ಕೊನೆಯ ಭಾಗ ಅಥವಾ ಬಹುಶಃ ೯ನೇ ಶತಮಾನದ ಆದಿಭಾಗ, ಅರ್ಧಗರ್ಭಿತವಾದ ಎಲೆಯಾಕಾರದ ಕಲ್ಲಿನ ಮೇಲೆ ಕೆತ್ತಿದ ಸಮಭಂಗದಲ್ಲಿ ಶಂಖ, ಚಕ್ರ ಗದಾಧಾರಿ ಚತುರ್ಭುಜ ಮಹಾವಿಷ್ಣುವಿನ ಉಬ್ಬು ಶಿಲ್ಪವಿದೆ. ಪಾದಗಳ ಹತ್ತಿರ ಕಮಲಧಾರಿ ಲಕ್ಷ್ಮೀ, ಪುಸ್ತಕ ಸಹಿತ ಸರಸ್ವತಿ ಮತ್ತು ಕಲಶ ಹಿಡಿದ ಗಂಗಾದೇವಿ ಸಹಿತನಾಗಿದ್ದಾನೆ. ಉಪ ಪುರಾಣವಾದ ದೇವಿ ಭಾಗವತದ ೫ನೇ ಸ್ಕಂದದಲ್ಲಿ ಸರಸ್ವತೀ ಗಂಗಾ ವಿಷ್ಣುವಿನ ಪತ್ನಿಯರು ಎಂದಿದೆ. ಜೊತೆಗೆ ಗರುಡ, ಸನಕ ಸನಕಾದಿ ಋಷಿಗಳ ಚಿತ್ರಗಳೂ ಇವೆ. ಮೇಲ್ಭಾಗದಲ್ಲಿ ವಿಷ್ಣುವಿನ ಸುತ್ತಲೂ ದಶಾವತಾರಗಳ ಚಿತ್ರಗಳಿವೆ. ಆದರೆ ಇವುಗಳಲ್ಲಿ ಮೊದಲನೆ ನಾಲ್ಕು ಮಾತ್ರ ಸ್ಪಷ್ಟವಾಗಿ ಗುರುತಿಸಬಹುದು. ಅಂದರೆ ಮತ್ಸ್ಯ, ಕೂರ್ಮ, ವರಾಹ ಮತ್ತು ನರಸಿಂಹ. ಉಳಿದವು ಅಸ್ಪಷ್ಟ. ಆದಿ ಕದಂಬ ಚಾಲುಕ್ಯ ಶಿಲ್ಪದಲ್ಲಿ ವರಾಹ, ನರಸಿಂಹ, ವಾಮನ - ತ್ರಿವಿಕ್ರಮ ಮೂರ್ತಿಗಳೇನೋ ಇವೆ. ಆದರೆ ಇವುಗಳ ಸೃಷ್ಟಿಗೆ ಕಾರಣರಾದವರ ತಮ್ಮ ತಮ್ಮ ಪ್ರತ್ಯೇಕ ಮೂರ್ತಿಗಳನ್ನು ಮಾಡಿಸಿದರು. ಒಂದೆಡೆಯಲ್ಲಿಯೆ ದಶಾವತಾರದ ಮೂರ್ತಿಗಳಲ್ಲಿ ಪ್ರಾಯಶಃ ಬನವಾಸಿಯ ವಿಷ್ಣು ಶಿಲ್ಪದಲ್ಲಿಯ ದಶಾವತಾರದ ಚಿತ್ರಮೇ ಕರ್ನಾಟಕದಲ್ಲಿ ಪ್ರಾಚೀನವೆಂದು ಹೇಳಬಹುದು.

ರಾಷ್ಟ್ರಕೂಟ ಗಂಗರ ಕಾಲದ ಅಂದರೆ ೯-೧೦ನೇ ಶತಮಾನದ ದೇವಾಲಯಗಳು ಕಡಿಮೆ. ಆದ್ದರಿಂದ ಆ ಕಾಲದ ಶಿಲ್ಪಗಳೂ ವಿರಳ. ಚಿತ್ರದುರ್ಗ ಜಿಲ್ಲೆಯ ಹಳೆ ದ್ಯಾಮವ್ವನ ಹಳ್ಳಿಯ ಮತ್ತು ರಾಯಚೂರು ಜಿಲ್ಲೆಯ ಮುಧೋಳ ಗ್ರಾಮದ (ಸು. ೯ನೇ ಶತಮಾನದ) ಸಮಭಾಗದಲ್ಲಿಯ ಮಹಾವಿಷ್ಣುವಿನ ಮೂರ್ತಿಗಳ ಪ್ರಭಾವಳಿಯಲ್ಲಿ ದಶಾವತಾರ ಚಿತ್ರಗಳಿವೆ. ಎರಡರಲ್ಲೂ ಬುದ್ಧನ ಚಿತ್ರವಿದೆ. ಆದರೆ ಮೊದಲನೆಯದರಲ್ಲಿ ಕೃಷ್ಣನ ಬದಲು ಬಲರಾಮನನ್ನು ಕಲ್ಕ್ಯಾವತಾರವನ್ನು ಒಂದು ವೃತ್ತದಿಂದ ತೋರಿಸಿರುವುದು ಗಮನಾರ್ಹ. ಸುಮಾರು ೯ನೇ ಶತಮಾನದ ಕೊನೆ ಅಥವಾ ೧೦ನೇ ಶತಮಾನದ ಆದಿಯ ಸೂಡಿ (ರೋಣ ತಾಲೂಕ ಧಾರವಾಡ ಜಿಲ್ಲೆ)ಯಲ್ಲಿ ಮಲ್ಲಿಕಾರ್ಜುನ ದೇವಾಲಯವಿದೆ. ಇದು ತ್ರಿಕೂಟಾಚಲ. ಗರ್ಭಗೃಹದಲ್ಲಿ ೯ನೇ ಶತಮಾನದ ಅನಂತಶಯನ ಮೂರ್ತಿ ಇದೆ. ಪ್ರಾಚೀನ ಇದರ ಪ್ರಭಾವಳಿಯಲ್ಲಿ ಮೇಲ್ಭಾಗದ ಅಂಚಿನಲ್ಲಿ ಮೊದಲನೆಯ ಆರು ಅವತಾರಗಳನ್ನು ಮಾತ್ರ ಮೂಡಿಸಲಾಗಿದೆ. ಹೀಗೆ ವಿಷ್ಣು ಮೂರ್ತಿಯು ಪ್ರಭಾವಳಿಯಲ್ಲಿ ದಶಾವತಾರಗಳನ್ನು ಮೂಡಿಸುವುದು ಸುಮಾರು

೧೦ನೇ ಶತಮಾದಿಂದ ಸರ್ವೇಸಾಮಾನ್ಯವಾಯಿತು.

ಹೊಯ್ಸಳ ಕಾಲದ ದಶಾವತಾರ ಶಿಲ್ಪದಲ್ಲಿ ಒಂದು ವಿಶಿಷ್ಟ ಬದಲಾವಣೆ ಇದೆ. ಪ್ರತಿಮಾ ಲಕ್ಷಣ ಗ್ರಂಥಗಳಲ್ಲಿ ಮತ್ಸ್ಯ, ಕೂರ್ಮ, ಅವತಾರಗಳನ್ನು ಮೂಡಿಸುವುದರಲ್ಲಿ ಮೇಲ್ಭಾಗ ಮನುಷ್ಯರೂಪದಲ್ಲಿಯೂ ಕೆಳಭಾಗವು ಮತ್ಸ್ಯ ಕೂರ್ಮ ಇಲ್ಲವೆ ಪೂರ್ತಿಯಾಗಿ ಮತ್ಸ್ಯ, ಕೂರ್ಮ ರೂಪದಲ್ಲಿ ತೋರಿಸಬೇಕೆಂದು ನಿರ್ದೇಶನವಿದೆ. ಹೊಯ್ಸಳ ಕಾಲದವರೆಗೂ ದಶಾವತಾರ ಸಮೂಹದಲ್ಲಿ ಮತ್ಸ್ಯ, ಕೂರ್ಮ ಅವತಾರಗಳು ಪೂರ್ತಿಯಾಗಿ ಆಯಾಯ ಪ್ರಾಣಿಗಳ ರೂಪದಲ್ಲಿವೆ. ಹೊಯ್ಸಳ ಕಾಲದ ಉತ್ತರಾರ್ಧದಿಂದ ಗ್ರಂಥಗಳ ನಿರ್ದೇಶನಕ್ಕಿಂತ ಸ್ವಲ್ಪ ಭಿನ್ನವಾಗಿ ಅಂದರೆ ಮೇಲ್ಭಾಗವು ಮತ್ಸ್ಯ ಕೂರ್ಮ ರೂಪಗಳ ಕೆಳಭಾಗವು ಮನುಷ್ಯ ರೂಪದಲ್ಲಿವೆ. ಸೋಮನಾಥಪುರದ ಕೇಶವ ದೇವಾಲಯದಲ್ಲಿ ಈ ರೀತಿ ಶಿಲ್ಪಗಳಿವೆ. ಅಂದರೆ ವಿಜಯನಗರ ಕಾಲದ ದಶಾವತಾರ ಶಿಲ್ಪಗಳಲ್ಲಿ ಈ ಕ್ರಮಕ್ಕೆ ವಿರುದ್ಧವಾಗಿ ಆದರೆ ಗ್ರಂಥದ ನಿರ್ದೇಶನದಂತೆ ಮೇಲ್ಭಾಗ ಮನುಷ್ಯ ಕೆಳಭಾಗ ಮತ್ಸ್ಯ - ಕೂರ್ಮ ರೂಪದಲ್ಲಿವೆ. ಈ ಪ್ರಕಾರದಲ್ಲಿ ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲೂಕಿನ ಭೀಮನಕಟ್ಟೆ ದೂರ್ವಾಸಪುರದ ವಿಜಯನಗರ ಕಾಲದ ದೇವಾಲಯದ ಗೋಡೆಯ ಮೇಲೆ ಸುತ್ತಲೂ ಚೆಲುವಾದ ದಶಾವತಾರ ಶಿಲ್ಪಗಳಿವೆ. ಹಂಪೆಯಲ್ಲಿಯ ಒಂದು ಗುಡ್ಡದ ಬಂಡೆಯ ಮೇಲೆ ದಶಾವತಾರದ ಶಿಲ್ಪ ಪಟ್ಟಿಕೆಯಿದೆ.

ವಿಜಯನಗರ ಕಾಲದ ನರಸಿಂಹ ಅವತಾರದ ಶಿಲ್ಪದಲ್ಲಿ ಒಂದು ವಿಶೇಷವಿದೆ. ನರಸಿಂಹ ಶಿಲ್ಪಗಳಲ್ಲಿ ಮುಖ್ಯವಾಗಿ ಮೂರು ಪ್ರಕಾರಗಳು - ಯಾನಕ, ಗಿರಿಜ ಮತ್ತು ಸ್ಥಾನಕ ಅಥವಾ ಉಗ್ರನರಸಿಂಹ. ಉಗ್ರನರಸಿಂಹದಲ್ಲಿ ಸಾಮಾನ್ಯವಾಗಿ ಹಿರಣ್ಯಕಶಿಪುವನ್ನು ತೊಡೆಯಮೇಲೆ ಮಲಗಿಸಿಕೊಂಡು ಹೊಟ್ಟೆ ಬಗೆಯುತ್ತಿರುವ ಚಿತ್ರವು ಇರುತ್ತದೆ. ವಿಜಯನಗರ ಶಿಲ್ಪದಲ್ಲಿ ಸ್ತಂಭದಿಂದ ಉದ್ಭವಿಸಿದ ಉಗ್ರ ನರಸಿಂಹನು ರಾಕ್ಷಸ ಸಂಹಾರ ಮಾಡುತ್ತಿರುವುದನ್ನು ಚಿತ್ರಿಸಲಾಗಿದೆ.

ಈ ಕಾಲದ ದಶಾವತಾರ ಮತ್ತೊಂದು ವೈಶಿಷ್ಟ್ಯವೆಂದರೆ ಬುದ್ಧನ ಬದಲು ನಗ್ನ ಜಿನನನ್ನು ಚಿತ್ರಿಸುವುದು. ಮುಖ್ಯವಾಗಿ ವಿಷ್ಣುಪುರಾಣದ ಬೌದ್ಧಾವತಾರದ ವರ್ಣನೆಯಲ್ಲಿ ವಿಷ್ಣುವಿನಿಂದ ಒಬ್ಬ ನಗ್ನ ವ್ಯಕ್ತಿ ಹೊರಟಿದ್ದು ನರ್ಮದಾ ತೀರ ಪ್ರದೇಶಕ್ಕೆ ಹೋಗಿ ಅಲ್ಲಿ ರಾಕ್ಷಸರಿಗೆ ಅವೈದಿಕ ಮಾರ್ಗವನ್ನು ಬೋಧಿಸಿದನು. ಅವನ ಉಪದೇಶದಂತೆ ನಡೆದವರಿಗೆ ಬೌದ್ಧರು, ಅರ್ಹಂತರು ಎಂದು ಕರೆಯಲ್ಪಟ್ಟರೆಂದಿದೆ. ಇನ್ನು ಬೌದ್ಧಾವತಾರವನ್ನು ಬುದ್ಧನು ಪದ್ಮಾಸನದಲ್ಲಿ ಕುಳಿತಿದ್ದು ಉತ್ತರೀಯವನ್ನು ಧರಿಸಬೇಕೆಂದು ಪ್ರತಿಮಾ ವಿಧಾನದಲ್ಲಿ ಹೇಳಿದೆ ಮತ್ತು ಬಲಗೈಯು ಭೂಮಿಸ್ಪರ್ಶ ಮುದ್ರೆಯಲ್ಲಿರುತ್ತದೆ. ವೈದಿಕರಿಗೆ ಬೌದ್ಧರು, ಜೈನರು ಒಟ್ಟಿನಲ್ಲಿ ಅವೈದಿಕರು, ಜೈನ ಬೌದ್ಧ ಎಂಬ ಸ್ಪಷ್ಟ ವ್ಯತ್ಯಾಸ ಅವರ ವಾಡಿಕೆಯಲ್ಲಿಲ್ಲ. ನಗ್ನ ಜೈನರೂ ಬೌದ್ಧರೇ. ಜೈನ ಮತವು ಕರ್ನಾಟಕದಲ್ಲಿ ಸಾವಿರಾರು ವರ್ಷಗಳಿಂದ ಚೆನ್ನಾಗಿ ಬೆಳೆದು ಗಣನೀಯ ಪ್ರಮಾಣದಲ್ಲಿ ಉಳಿದಿದ್ದರೂ ಕೂಡಾ, ಜೈನ ಬಸದಿಗಳೂ ಹೆಚ್ಚಿನ ಸಂಖ್ಯೆಯಲ್ಲಿದ್ದರೂ ಕೂಡ ಹಳ್ಳಿಗಳಲ್ಲಿ ಜನರು ನಗ್ನ ತೀರ್ಥಂಕರನ ಮೂರ್ತಿಯನ್ನೇ ಬುದ್ಧನ ಮೂರ್ತಿ ಎಂದು ಹೇಳುತ್ತಾರೆ.

ಇನ್ನು ಶಿಲ್ಪದಲ್ಲಿ ಹೊಯ್ಸಳ ಕಾಲದ ಕೊನೆಯವರೆಗೂ ಪ್ರತಿಮಾಲಕ್ಷಣ ಗ್ರಂಥಗಳ ಪ್ರಕಾರ ಬುದ್ಧನ ಮೂರ್ತಿಯನ್ನು ಚಿತ್ರಿಸಲಾಗುತ್ತಿತ್ತು. ಆದರೆ ವಿಜಯನಗರ ಕಾಲದಲ್ಲಿ ನಗ್ನ ಜಿನನ ಮೂರ್ತಿಯನ್ನು ಪುರಾಣದ ಕಥೆಯ ಪ್ರಕಾರ ರೂಪಿಸುವುದು ವೈಶಿಷ್ಟ್ಯ. ಆ ಕಾಲದಲ್ಲಿ ಬೌದ್ಧ ಧರ್ಮ ಕಥಾನಕದಲ್ಲಿ ವ್ಯಾವಹಾರಿಕವಾಗಿವೆ ಎಂದು ಹೇಳಬಹುದು. ಬೌದ್ಧ ಶಿಲ್ಪ

ಮಾದರಿಗಳಂತೂ ಇರಲಿಲ್ಲ. ನಗ್ನ ತೀರ್ಥಂಕರ ಮೂರ್ತಿಗಳು ಗಣನೀಯ ಪ್ರಮಾಣದಲ್ಲಿದ್ದವು. ಆದರೆ ಅವು ಬುದ್ಧನೆಂದೇ ವಾಡಿಕೆಯಲ್ಲಿದ್ದವು. ಆದ್ದರಿಂದ ಪುರಾಣ ಕಥೆಯಂತೆ ಇಂಥ ನಗ್ನ ಮೂರ್ತಿಯೇ ಬುದ್ಧನೆಂದು ಅಂಥ ಮೂರ್ತಿಯನ್ನು ದಶಾವತಾರದಲ್ಲಿ ಕೆತ್ತಲಾಯಿತೆಂದು ತೋರುತ್ತದೆ. ಮಧ್ವ ಸಂಪ್ರದಾಯದಲ್ಲಿ ಪುರಾಣ ಕಥೆಗಳಿಗೆ ಹೆಚ್ಚು ಪ್ರಾಶಸ್ತ್ಯವಿದೆ. ಶ್ರೀ ಮಧ್ವಾಚಾರ್ಯರ ತಂತ್ರಸಾರ ಪ್ರತಿಮಾ ಲಕ್ಷಣಕ್ಕೆ ಮತ್ತು ವಿಧಾನಗಳಿಗೆ ಸಂಬಂಧಿಸಿದ್ದು ಅದರಲ್ಲಿ ಬುದ್ಧ ಇಲ್ಲದೆ ತೀರ್ಥಂಕರನೆಂದು ಸ್ಪಷ್ಟದಿಂದ ಪೌರಾಣಿಕ ಕಥೆಯ ನಗ್ನ ಜಿನಮೂರ್ತಿಯನ್ನು ತೋರಿಸುವ ವಿಷಯ ಪ್ರಸ್ತಾಪವಿದೆಯೇ ಎಂಬುದನ್ನು ಪರಿಶೀಲಿಸಬೇಕು. ಆದರೆ ವಿಜಯನಗರ ಕಾಲದಲ್ಲಿ ಮಧ್ವ ಸಂಪ್ರದಾಯ ಗಮನಾರ್ಹವಾಗಿಯೇ. ತನ್ನ ಪ್ರಭಾವವನ್ನು ಸಮಾಜದ ಮೇಲೆ ಬೀರಿತ್ತು. ಆದ್ದರಿಂದ ಬುದ್ಧನ ಇಲ್ಲವೆ ತೀರ್ಥಂಕರನ ಯಾವುದೇ ವಿಶಿಷ್ಟ ಲಕ್ಷಣಗಳಿಲ್ಲದೆ ಒಂದು ನಗ್ನ ಜಿನ ಮೂರ್ತಿಯನ್ನು ದಶಾವತಾರ ಪಟ್ಟಿಕೆಯಲ್ಲಿ ತೋರಿಸುವ ಕ್ರಮ ಶುರುವಾಯಿತೆಂದು ಹೇಳಬಹುದು.

ಕೊನೆಯದಾಗಿ, ಸಾತಾರ ಬಳಿ ಇರುವ ದೇವಗಾಂವ್‌ನಲ್ಲಿಯ ಒಂದು ದೇವಾಲಯದಲ್ಲಿ ಒಂದು ಮಧ್ಯಯುಗೀನ ಕಾಲದವರಾದ ಅಪರೂಪದ ದಶಾವತಾರದ ಉಬ್ಬು ಶಿಲ್ಪ ಪಟ್ಟಿಕೆಯಿದೆ. ಇದರಲ್ಲಿ ಮೊದಲನೆ ಮೂರು ಅವತಾರಗಳು ಪೂರ್ಣ ಆಯಾಯ ಪ್ರಾಣಿಗಳ ಸ್ವರೂಪದಲ್ಲಿವೆ. ವಿಶಿಷ್ಟವಾದ ಸಂಗತಿಯೆಂದರೆ ಬುದ್ಧನ ಜೊತೆಗೆ ಜಿನಮೂರ್ತಿಯನ್ನು ತೋರಿಸಿರುವುದು.

## ಪುರಾಣಗಳು ಮತ್ತು ದಶಾವತಾರ ಶಿಲ್ಪ

ಪುರಾಣ ಕಥೆಗಳಲ್ಲಿ ಸುಮಾರು ೫ನೇ ಶತಮಾನದ ಹೊತ್ತಿಗೆ ದಶಾವತಾರಗಳು ಪ್ರಸಿದ್ಧವಾಗಿದ್ದರೂ ಕೂಡಾ, ಆರಾಧನೆಗೋಸ್ಕರ ಶಿಲ್ಪದಲ್ಲಿ ಅಥವಾ ವಿಷ್ಣುವಿನ ಮಹಾತ್ಮ್ಯೆಯನ್ನು ಸಾರಲು ಬಿಡಿ ಬಿಡಿಯಾಗಿ ಅಥವಾ ಒಟ್ಟಿಗೆ ಎಲ್ಲಾ ಅವತಾರಗಳನ್ನು ರೂಪಿಸುವ ಸಂಪ್ರದಾಯ ೭ನೇ ಶತಮಾನದ ನಂತರ ಪ್ರಾರಂಭವಾಯಿತು. ಆದರೂ ೮-೧೦ನೇ ಶತಮಾನದ ಸಮಯದಲ್ಲಿ ದಶಾವತಾರಗಳು ಸಂಖ್ಯೆಯಲ್ಲಿ ನಿರ್ದಿಷ್ಟವಾಗಿರಲಿಲ್ಲ. ಕೃಷ್ಣ ಬೌದ್ಧಾವತಾರಗಳು ದಶಾವತಾರಗಳಲ್ಲಿ ಇರಲೇಬೇಕೆಂಬ ದೃಢ ನಿಲುವಿನ ಸಂಪ್ರದಾಯವಿರಲಿಲ್ಲ. ಹಾಗೆಯೇ ರಾಮಾಯಣವು ದೇಶದಾದ್ಯಂತ ೫ನೇ ಶತಮಾನದ ಹೊತ್ತಿಗೆ ಜನಪ್ರಿಯವಾಗಿದ್ದರೂ ರಾಮನ 'ಮರ್ಯಾದಾ ಪುರುಷೋತ್ತಮ' ಎಂಬ ಭಾವನೆಯೇ ೯ನೇ ಶತಮಾನದಿಂದ ಪ್ರಬಲವಾಗಿದ್ದು ಬಹುಶಃ ಶ್ರೀ ರಾಮಾನುಜರ ಕಾಲದಿಂದ ಅವರ ತತ್ವ-ಭಕ್ತಿ ಸಂಪ್ರದಾಯದ ಪ್ರಭಾವದಿಂದ, ಆ ನಂತರ ಅವನು ಪರಮಾತ್ಮನೆಂಬ ತತ್ವವು ಬಲವಾಗಿ ಬೆಳೆಯುತ್ತಾ ಹೋಯಿತು. ಪುರಾಣಗಳಲ್ಲಿಯೂ ಕೂಡ ರಾಮನ ಆರಾಧನೆಯ ವಿಷಯವು ಸುಮಾರು ೯ನೇ ಶತಮಾನದ ಪದ್ಮ ಪುರಾಣದಲ್ಲಿ ಕಾಣಿಸಿಕೊಳ್ಳುತ್ತದೆ. ದಶಾವತಾರದ ದೇವಾಲಯ ಅಪರೂಪವಾಗಿ ೯ನೇ ಶತಮಾನದಿಂದ ಕಾಣಿಸಿಕೊಳ್ಳುತ್ತದೆ.

ಒಟ್ಟಿನಲ್ಲಿ ಪುರಾಣಗಳಲ್ಲಿ ದಶಾವತಾರಗಳ ತತ್ವ ಬೆಳವಣಿಗೆ ಮತ್ತು ಆರಾಧನೆಯ ವಿಮರ್ಶೆಯನ್ನು ನಿಸ್ಸಂದೇಹವಾಗಿ ದಶಾವತಾರ ಶಿಲ್ಪ ಚರಿತ್ರೆಯೂ ಪುಷ್ಟೀಕರಿಸುತ್ತದೆ.



# ಹಲ್ಮಿಡಿ ಶಾಸನದ ಅರ್ಥ ವಿವೇಚನೆ

---

ಡಾ|| ಎಂ. ಬಿ. ನೇಗಿನಹಾಳ

ಡಾ|| ಎಂ.ಎಚ್. ಕೃಷ್ಣರು ೧೯೩೬ರಲ್ಲಿ ಹಲ್ಮಿಡಿ ಶಾಸನವನ್ನು ಸಂಶೋಧಿಸಿ ಅದರ ಐತಿಹಾಸಿಕ ಮಹತ್ವದೊಂದಿಗೆ ಅರ್ಥವಿವೇಚನೆ ಮಾಡಿ ಪ್ರಕಟಿಸಿದರು. ಆ ತರುವಾಯ ಬಹುದಿನಗಳವರೆಗೆ ಅದರ ಆಮೂಲಾಗ್ರವಾದ ಚರ್ಚೆ ನಡೆದಿರಲಿಲ್ಲ. ಇತ್ತೀಚೆಗೆ ೧೯೭೯ರಲ್ಲಿ ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರಿ ಅವರು ತಮ್ಮ 'ಶಬ್ದಾರ್ಥ ವಿಹಾರ'ದಲ್ಲಿ ಶಾಸನದ ಸಮಗ್ರವಾದ ಅರ್ಥವಿವೇಚನೆ ಮಾಡಿದ್ದಾರೆ. ಅದನ್ನು ಓದಿದಾಗ ಆ ಶಾಸನವನ್ನು ಕುರಿತಂತೆ, ನನ್ನ ಕೆಲವು ವಿಚಾರಗಳನ್ನು ವ್ಯಕ್ತಪಡಿಸುವುದು ಆವಶ್ಯಕವೆಂದು ತೋರಿತು. ಆದ್ದರಿಂದ ಹಲ್ಮಿಡಿ ಶಾಸನವನ್ನು ಇಲ್ಲಿ ಪುನಃ ಪರಿಶೀಲನೆಗೆ ಒಳಪಡಿಸಿದೆ.

ಈ ಶಾಸನದ ಲಿಪಿ ಕ್ರಿ.ಶ. ಅಯ್ದನೆಯ ಶತಮಾನಕ್ಕೆ ಸಂಗತವಾಗಿದೆ ಎಂದು ಸಾಮಾನ್ಯವಾಗಿ ಒಪ್ಪಲಾಗಿದೆ. ಆದರೆ ಡಿ.ಸಿ. ಸರ್ಕಾರರಂಥ ಒಬ್ಬಿಬ್ಬರು ವಿದ್ವಾಂಸರು ಲಿಪಿಸ್ವರೂಪದ ಮೇಲಿಂದ ಇದನ್ನು ಬಾದಾಮಿ ಚಾಲುಕ್ಯ ಮಂಗಲೇಶನ ಕನ್ನಡ ಶಾಸನದ ತರುವಾಯದ್ದೆಂದು ಹೇಳಿದ್ದಾರೆ. ಶಾಸನವು ಕದಂಬಪನೂ ತ್ಯಾಗಸಂಪನ್ನನೂ ಕಲಭೋರನ ವೈರಿಯೂ ಆದ ಕ(ಕಾ) ಕುಸ್ಥದೊರೆಯ ಆಳ್ವಿಕೆಯನ್ನು ಸ್ಪಷ್ಟವಾಗಿ ನಿರ್ದೇಶಿಸಿದೆ. ಈ ಕದಂಬಪನಾದ ಕಾಕುಸ್ಥನೆಂದರೆ ಭಗೀರಥನ ಮಗನೂ ರಘುವರ್ಮನ ತಮ್ಮನೂ ಶಾಂತಿವರ್ಮನಿಗೆ ತಂದೆಯೂ ಆದ ಪ್ರಸಿದ್ಧ ದೊರೆ ಕಾಕುಸ್ಥವರ್ಮನೇ ಹೊರತು ಬೇರೆ ಯಾರೂ ಅಲ್ಲ. ಕದಂಬರಲ್ಲಿ ಈ ಹೆಸರಿನ ಬೇರೊಬ್ಬ ರಾಜನು ಈ ಕಾಲಾವಧಿಯ ಸುಮಾರಿನಲ್ಲಿ ಇದ್ದನೆಂದು ತಿಳಿದು ಬರುವವರೆಗೆ ಇದರ ಕಾಲವನ್ನು ಮುಂದೆ ಹಾಕಲು ಸಾಧ್ಯವಿಲ್ಲ. ಈ ಕಾರಣದಿಂದ ಇದು ಕ್ರಿ.ಶ. ಅಯ್ದನೆಯ ಶತಮಾನದ ಪೂರ್ವಾರ್ಧದ ಶಾಸನವೆಂದು ಗ್ರಹಿಸಬೇಕು. ತಾಮ್ರ ಶಾಸನಗಳ ಹೋಲಿಕೆಯಲ್ಲಿ ಇದರ ಲಿಪಿ ಅಷ್ಟೊಂದು ಪರಿಶುದ್ಧವಾಗಿಯಾಗಲೀ ಅಚ್ಚುಕಟ್ಟಾಗಿಯಾಗಲೀ ಇಲ್ಲ. ಜತೆಗೆ ಅ ಮತ್ತು ಆ ಸ್ವರಗಳ ಕಾಗುಣಿತ-ಸಂಜ್ಞೆಯಲ್ಲಿ ವಿಶೇಷ ತಪ್ಪುಗಳಾಗಿರುವುದು ಕಂಡುಬರುತ್ತದೆ. ಉದಾಹರಣೆಗೆ ಕಕುಸ್ಥ, ಬಟರಿಕುಲ, ಅಳಪಗಣ, ಭಟರಿ, ಬಣೋಭಯ, ವೀರಾಪುರುಷ ಮುಂತಾದವನ್ನು ನೋಡಬಹುದು. ಇದು ಹಲ್ಮಿಡಿ ಶಾಸನದ ಕಾಲಕ್ಕಿಂತ ಸ್ವಲ್ಪ ಮುಂಚಿನ ಪ್ರಾಕೃತ ಶಾಸನಗಳಲ್ಲಿಯೂ ಇದ್ದ ಪ್ರವೃತ್ತಿ.[೧] ಈ ಶಾಸನದ ಲಿಪಿಕಾರನಿಗೆ ಲಿಪಿಯು

---

೧. ನೋಡಿ: ಎಂ.ಎ. ಮೆಹುಂದಳೆ, Historical Grammar of Inscriptional Prakrits - Introduction, xvii

ಸುಂದರವಾಗಿರಬೇಕೆಂಬ ಅಪೇಕ್ಷೆ ಇದ್ದಂತೆ ತೋರುವುದಿಲ್ಲ. ಶಾಸನದಲ್ಲಿಯ ಅಕ್ಷರಗಳ ತಳ, ತಲೆಕಟ್ಟು ಮತ್ತು ಆಕಾರಗಳು ಅಷ್ಟೊಂದು ವ್ಯವಸ್ಥಿತವಾಗಿಲ್ಲದಿರುವುದು ಕಂಡುಬರುತ್ತದೆ. ಅದರಿಂದಾಗಿ ಲಿಪಿಕಾರ ಅಥವಾ ಕಂಡರಣೆಕಾರನ ಕೆಲವೊಂದು ತಪ್ಪುಗಳು ಇದರಲ್ಲಿ ನುಸುಳಿರುವುದು ತೀರ ಸಂಭವನೀಯವೆನ್ನಿಸುತ್ತದೆ. ಶಾಸನ ಸಂಪಾದಕರಾದ ಡಾ॥ ಎಂ.ಎಚ್. ಕೃಷ್ಣರು ಗದ್ಯ ಭಾಗಕ್ಕೆ ಸಂಬಂಧಿಸಿದಂತೆ ನಾಲ್ಕು ಓಡೆಗೆ ಊಹಾಪಾಠ ಬೇರೆ ಕೊಟ್ಟಿದ್ದಾರೆ. ಅಷ್ಟಲ್ಲದೆ, ಮೈ.ಆ.ರಿ. ೧೯೩೬ರಲ್ಲಿ ಮತ್ತು ಪ್ರಬುದ್ಧ ಕರ್ನಾಟಕ ೨೦-೩ರಲ್ಲಿ ಅವರಿತ್ತ ಪಾಠಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳೂ ಇವೆ. ಆರನೆಯ ಸಾಲಿನಲ್ಲಿ 'ಪಶುಪತಿ ಮಾದಕ್ಷಿಣಾಪಥ' ಎಂದು ಮೈ.ಆ.ರಿ.[೨]ಯಲ್ಲಿದ್ದರೆ 'ಪಶುಪತಿಯಾ ದಕ್ಷಿಣಾಪಥ'ವೆಂದು ಪ್ರ.ಕ.[೩] ದಲ್ಲಿದೆ. ಮುಂದೆ ಹದಿನೈದನೆಯ ಸಾಲಿನಲ್ಲಿ 'ಅದಾನಳಿವೊನ್ಗೆ' ಎಂದು ಎರಡೂ ಕಡೆ ಪಾಠ ಇದೆ. ಆದರೆ ಶಾಸನದ ಪಡಿಯಚ್ಚುಗಳನ್ನು ಪರೀಕ್ಷಿಸಿದರೆ ಅಲ್ಲಿ 'ಅದಾನಜಿವೊನ್ಗೆ' ಎಂದು ಜಟಿಯುಕ್ತವಾಗಿರುವುದನ್ನು ಕಾಣಬಹುದು.

ಈ ಎಲ್ಲ ಕಾರಣಗಳಿಂದಾಗಿ ಶಾಸನದ ಅರ್ಥ ಹೇಳುವಲ್ಲಿ ಕೆಲವು ತೊಂದರೆಗಳಿವೆ ಎಂಬುದನ್ನು ಮನಗಾಣಬಹುದು. ಈ ಮತ್ತು ಇಂಥ ಬೇರೆ ಕೆಲವು ಪರಿಮಿತಿಗಳನ್ನು ಗಮನದಲ್ಲಿಟ್ಟು ಕೊಂಡು ಈ ಶಾಸನದ ಅರ್ಥವಿವೇಚನೆಗೆ ತೊಡಗಬಹುದು.

**ಶಾಸನ ಪಾಠ**

೧. ಜಯತಿ ಶ್ರೀಪರಿಷ್ವಙ್ಗಶ್ಶಾರ್ಙ್ಗ (ವ್ಯಾನತಿ)ರಚ್ಯುತಃ ದಾನವಾಕ್ಷ್ಣೋ ರ್ಯುಗಾನ್ತಾಗ್ನಿಃ (ಶಿಷ್ಟಾನಾನ್ತು) ಸುದರ್ಶನಃ
೨. ನಮಃ ಶ್ರೀಮತ್ಕದಂಬಪನ್ತ್ಯಾಗ ಸಂಪನ್ನನ್ಕಲಭೋರ(ನಾ) ಅರಿಕ -
೩. ಕುಸ್ಥಭಟ್ಟೋರನಾಳೆ ನರಿದಾವಿ(ಳೆ)ನಾಡುಳ್ ಮೃಗೇಶನಾ -
೪. ಗೇನ್ದ್ರಾಭೀಳರ್ಭ್ಬಟರಪ್ಪೋರ್ ಶ್ರೀ ಮೃಗೇಶನಾಗಾಹ್ವಯ -
೫. ರಿರ್ವ್ವರಾ ಬಟರಿಕುಲಾಮಲವ್ಯೋಮತಾರಾಧಿನಾಥನ್ನಳಪ
೬. ಗಣಪಶುಪತಿ ಮಾದಕ್ಷಿಣಾಪಥಬಹುಶತಹವನಾ -
೭. ಹವದು(ಳ್) ಪಶುಪ್ರದಾನ ಶೌರ್ಯ್ಯೋದ್ಯಮಭರಿತೋ(ನ್ದಾಸ) ಪ -
೮. ಶುಪತಿಯೆನ್ದು ಪೊಗೞೆಪ್ಪೊಟ್ಟಣ ಪಶುಪತಿ
೯. ನಾಮಧೇಯನಾಸರಕ್ಕೆಲ್ಲಭಟರಿಯಾ ಪ್ರೇಮಾಲಯ
೧೦. ಸುತನ್ಗೆ ಸೇನ್ದ್ರಕಬಣೋಭಯದೇಶದಾ ವೀರಾಪುರುಷ ಸಮಕ್ಷ -
೧೧. ದೆ ಕೇಕಯಪಲ್ಲವರಂ ಕಾದೆಱೆದು ಪೆತ್ತಜಯನಾ ವಿಜ
೧೨. ಅರಸನ್ಗೆ ಬಾಳ್ಗಚ್ಚು ಪಲ್ಮಡಿಉಂ ಮೂೞವಳ್ಳಿಉಂ ಕೊ -
೧೩. ಟ್ಟಾರ್ ಬಟಾರಿಕುಲದೊನಳುಕದಮ್ಬನ್ಕಳ್ದೋನ್ ಮಹಾಪಾತಕನ್
೧೪. ಇರ್ವ್ವರುಂ ಸಟ್ಬಿಙ್ಗದರ್ ವಿಜಾರಸರುಂ ಪಲ್ಮಡಿಗೆ ಕುಱು -
೧೫. ಮ್ಬಿಡಿವಿಟ್ಟಾರ್ ಅದಾನಳಿ(ಜಿ)ವೊನ್ಗೆ ಮಹಾಪಾತಕಮ್ ಸ್ವಸ್ತಿ
(ಇದೇ ಕಲ್ಲಿನ ಎಡಪಕ್ಕದಲ್ಲಿ ಬರೆದಿರುವುದು)
೧೬. ಭಟ್ಟರ್ಗ್ಗೀಗಲ್ದೊ ಒಡ್ಡಲಿ ಆ ಪತ್ತೊನ್ದಿವಿಟ್ಟಾರಕರ

೨. MAR, 1936, ಪು. 72-73
೩. ಪ್ರಬುದ್ಧ ಕರ್ನಾಟಕ - 20-3 ಪು. 38

ಈ ಶಾಸನವನ್ನು ಕೆಳಗಿನಂತೆ ಬಿಡಿಸಿಡಬಹುದು:

೧. ಶ್ರೀಮತ್ ಕದಂಬಪನ್-ತ್ಯಾಗ ಸಂಪನ್ನನ್-ಕಲಭೋರನಾ ಅರಿ, ಕಕುಸ್ಥ ಭಟ್ಟೋರನ್-ಆಳೆ, ನರಿದಾವಿಳೆ ನಾಡುಳ್ ಮೃಗೇಶ ನಾಗೇನ್ದ್ರಾಭೀಳರ್-ಭಟಹರ್-ಆಪ್ಪೋರ್

೨. ಅ) । ಶ್ರೀ ಮೃಗೇಶ-ನಾಗಾಹ್ವಯರಿರ್ವ್ವರಾ, ॥ ಬಟರಿ ಕುಲಾಮಲವ್ಯೋಮ ತಾರಾಧಿನಾಥನ್-, ನ್-ಅಳಪಗಣ ಪಶುಪತಿಯಾ(ಮಾ) ದಕ್ಷಿಣಾಪಥ ಬಹುಶತಹವನಾಹವದುಳ್ ಪಶುಪ್ರದಾನ ಶೌರ್ಯ್ಯೋದ್ಯಮ ಭರಿತೋನ್-, ದಾನಪಶುಪತಿಯೆನ್ದು ಪೊಗಟೆಪ್ಪೊಟ್ಟಣ, ಪಶುಪತಿ ನಾಮಧೇಯನಾ (ನ್-ಅ)

ಬ) ಸರಕ್ಕೆಲ್ಲ ಭಟರಿಯಾ ಪ್ರೇಮಾಲಯ ಸುತನ್ಗೆ-, ಸೇನ್ದ್ರಕ-ಬಣೋಭಯ ದೇಶದಾ ವೀರಾಪುರುಷ ಸಮಕ್ಷದೆ ಕೇಕಯ ಪಲ್ಲವರಂ ಕಾದೆಜೆದು ಪೆತ್ತಜಯನ್-ಆ ವಿಜ ಅರಸನ್ಗೆ,

ಕ) ಬಾಳ್ಗಚ್ಚು ಪಲ್ಮಡಿಉಂ ಮೂಟೆವಳ್ಳಿಉಂ ಕೊಟ್ಟಾರ್

೩. ಬಟಾರಿಕುಲದೋನ್-ಅಳುಕದಮ್ಬನ್

೪. ಕಳ್ದೋನ್-ಮಹಾಪಾತಕನ್

೫. ಇರ್ವ್ವರುಂ ಸಬ್ಬಿಜ್ಜಿದರ್ ವಿಜಾರಸರುಂ ಪಲ್ಮಡಿಗೆ ಕುಱುಮ್ಬಿಡಿವಿಟ್ಟಾರ್. ಸ್ವಸ್ತಿ.

೬. ಭಟ್ಟರ್ಗ್ಗೀಗಟ್ಟೆ ಒಡ್ಡಲಿ ಆ ಪತ್ತೊನ್ದಿ ವಿಟ್ಟಾರ್-ಅಕರ.

ಈ ರೀತಿ ಇದರಲ್ಲಿ ಒಟ್ಟು ಆರು ವಾಕ್ಯಗಳಿವೆ. ಮೊದಲ ವಾಕ್ಯವು ಕದಂಬಪನಾದ ಕಾಕುಸ್ಥನನ್ನು ಮತ್ತು ನರಿದಾವಿಳೆನಾಡಿನ ಅಧಿಕಾರಿಗಳಾದ ಮೃಗೇಶನಾಗರನ್ನು ಹೆಸರಿಸಿದೆ.

ಎರಡನೆಯ ವಾಕ್ಯವು ಶಾಸನದ ಪ್ರಧಾನ ಭಾಗವಾಗಿದ್ದು ಬಹು ದೀರ್ಘವಾಗಿದೆ. (ನರಿದಾವಿಳೆನಾಡಿನ) ಮೃಗೇಶ-ನಾಗರೂ ಭಟಾರಿ ಮತ್ತು ಅಳಪ ವಂಶದವನಾದ ಪಶುಪತಿಯೂ ಕೂಡಿ ವಿಜಅರಸನಿಗೆ ಪಲ್ಮಡಿ ಮತ್ತು ಮೂಟೆವಳ್ಳಿಗಳನ್ನು ಬಾಳ್ಗಚ್ಚಾಗಿ ಕೊಟ್ಟರೆಂದು ತಿಳಿಸುತ್ತದೆ.

ಮೂರನೆಯ ವಾಕ್ಯವು (ಭಟಾರಿ-) ಅಳುಪ-ಕದಂಬ ವಂಶದ ಪಶುಪತಿಯ ಅಂಕಿತವಾಗಿದೆ.

ನಾಲ್ಕನೆಯದು ಶಾಸನಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಫಲಶ್ರುತಿಯಾಗಿದೆ.

ಅಯ್ದನೆಯದು ಮೃಗೇಶ-ನಾಗರು ಮತ್ತು ವಿಜ ಅರಸ ಕೂಡಿ ಪಲ್ಮಡಿಗೆ ಕುಱುಮ್ಬಿಡಿ (ಎಂಬ ಕರ ವಿಶೇಷವನ್ನು) ಬಿಟ್ಟರೆಂದು ತಿಳಿಸುತ್ತದೆ.

ಆರನೆಯ ಮತ್ತು ಕೊನೆಯ ವಾಕ್ಯವು ಶಾಸನದ ಮುಖ್ಯ ವಿಷಯಕ್ಕೆ ಯಾವ ರೀತಿಯಿಂದಲೂ ಸಂಬಂಧಿಸಿಲ್ಲ. ಭಟ್ಟರಿಗೆ ಈ ಗದ್ದೆಯ ಒಡ್ಡಿನಲ್ಲಿ (=ಒಟ್ಟು ಉತ್ಪತ್ತಿಯಲ್ಲಿ) ಪತ್ತೊನ್ದಿ ಎಂಬ ತೆರಿಗೆಯನ್ನು ಬಿಟ್ಟರೆಂದು ಅದು ತಿಳಿಸುತ್ತದೆ.

ಹೀಗೆ ಈ ಆರು ವಾಕ್ಯಗಳನ್ನು ವಿಭಜಿಸಿ ಅವುಗಳ ಮುಖ್ಯ ಆಶಯವನ್ನು ಗ್ರಹಿಸಿದ ಮೇಲೆ ಇದರ ಅರ್ಥ ವಿವೇಚನೆ ಸುಲಭವಾಗುತ್ತದೆ.

ಈ ಶಾಸನದ ಕದಂಬ ಕಾಕುಸ್ಥನು ಅಧಿರಾಜನಾಗಿದ್ದು ಆತನ ಕೈಕೆಳಗೆ ಅಧಿಕಾರಿಗಳಾಗಿ ಮೃಗೇಶ ಮತ್ತು ನಾಗರು 'ನರಿದಾವಿಳೆ' ಎಂಬ ನಾಡನ್ನು ಆಳುತ್ತಿದ್ದರು. ಆದ್ದರಿಂದ ಈ ನರಿದಾವಿಳೆನಾಡಿನಲ್ಲಿಯೇ ಪ್ರಸ್ತುತ ಶಾಸನವಿರುವ ಹಲ್ಮಿಡಿ ಊರು ಇದ್ದದ್ದು ಸ್ಪಷ್ಟ. ಈ ಇಬ್ಬರೂ ಅಧಿಕಾರಿಗಳು ಬಾಳ್ಗಚ್ಚುದಾನದ ಕಾರ್ಯದಲ್ಲಿ ಭಾಗವಹಿಸಿರುವುದರಿಂದ ಅವರಿಬ್ಬರೂ

ನೇರವಾಗಿ ಅದರ ಆಡಳಿತಕ್ಕೆ ಸಂಬಂಧಪಟ್ಟವರೆಂಬುದು ತಿಳಿದುಬರುತ್ತದೆ. ಒಂದೇ ನಾಡಿಗೆ ಇಬ್ಬರು ಅಧಿಕಾರಿಗಳು ಏಕೋ ತಿಳಿಯದು. ಮತ್ತು ಇವರಿಬ್ಬರ ಅಧಿಕಾರ ಕಕ್ಷೆಯ ಮಿತಿ ಏನು ಎಂಬ ಪ್ರಶ್ನೆ ಏಳುತ್ತದೆ. ಶಾಸನದಿಂದ ಇಂಥ ಪ್ರಶ್ನೆಗಳಿಗೆ ಉತ್ತರ ತಿಳಿದುಬರುವುದಿಲ್ಲ.

ಮುಂದಿನ ಎರಡನೆಯ ವಾಕ್ಯದಲ್ಲಿ ಪಶುಪತಿಯ ವರ್ಣನೆ ಬಂದಿದೆ. ವರ್ಣನೆಯ ಧಾಟಿಯನ್ನು ನೋಡಿದರೆ ಮೃಗೇಶ-ನಾಗರಿಗಿಂತಲೂ ಈತ ಉಚ್ಚಾಧಿಕಾರಿಯಾಗಿದ್ದನೆಂಬುದು ಸ್ಪಷ್ಟವಿದೆ. ಆತನ ಅಧಿಕಾರದ ಸ್ವರೂಪವೂ ಶಾಸನದಿಂದ ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ತಾಳಗುಂದದ ಪ್ರಣವೇಶ್ವರ ದೇವಾಲಯದಲ್ಲಿರುವ ಸಂಸ್ಕೃತ ಶಾಸನದಲ್ಲಿ[೪] ಈತನನ್ನು ಕುರಿತಂತೆ "ದಶಮಣ್ಡಲಿಕೇಷು ನಾಯಕತ್ವಂ" ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಈತ ಹತ್ತು ಮಾಂಡಲಿಕರ ಮೇಲೆ ಮಹಾಮಂಡಳೇಶ್ವರನಾಗಿ ಕದಂಬ ರಾಜ್ಯದಲ್ಲಿ ಆಧ್ಯತೆಯಿಂದ ಮೆರೆಯುತ್ತಿದ್ದನೆಂದು ತಿಳಿದುಬರುತ್ತದೆ. ಕಾರಣ ಪಶುಪತಿ, ಮೃಗೇಶ-ನಾಗರ ಮೇಲಿನ ಅಧಿಕಾರಿಯಾಗಿ ಕಾಕುಸ್ಥವರ್ಮನ ರಾಜ್ಯದ ಆಗು ಹೋಗುಗಳಲ್ಲಿ ಪ್ರಧಾನ ಪಾತ್ರವಹಿಸುತ್ತಿದ್ದನೆಂದು ತಿಳಿಯಬಹುದು. ಆದ್ದರಿಂದ ಮೂರನೆಯ ವಾಕ್ಯದಲ್ಲಿ ಬರುವ ಬಟಾರಿ ಕುಲದೊನ್-ಅಳುಕದಂಬನ್ ಎಂಬುದು ಈತನದೇ ಅಂಕಿತವೆಂಬುದು ಸ್ಪಷ್ಟಪಡುತ್ತದೆ.

ಇನ್ನು ಶಾಸನದ ಪ್ರಮುಖ ಭಾಗವಾದ ಎರಡನೆಯ ವಾಕ್ಯವನ್ನು ವಿಶ್ಲೇಷಿಸಬಹುದು.

"ನರಿದಾವಿಳೆ ನಾಡುಳ್ ಮೃಗೇಶ್ ನಾಗೇನ್ದ್ರಾಭೀಳರ್ ಭಟಹರ್ ಅಪ್ಪೊರ್ ಶ್ರೀ ಮೃಗೇಶ-ನಾಗಾಹ್ವಯರ್" ಎಂಬ ಶಾಸನಭಾಗವನ್ನು ಎತ್ತಿಕೊಂಡು ಅದಕ್ಕೆ "who were terrible as the lord of beasts (the lion or Shiva) and the lord of elephants or serpents (Airavata or Ananta)" ಎಂದಾಗಲೀ 'ಮೃಗೇಶ ನಾಗೇನ್ದ್ರರಂತೆ (ಸಿಂಹ ಅಥವಾ ಶಿವ, ಆನೆ ಅಥವಾ ಸರ್ಪ) ಭಯಂಕರವಾದ' ಎಂದಾಗಲೀ ಅರ್ಥ ಹೇಳುವುದು ಅಷ್ಟು ಸಮಂಜಸವೆಂದು ತೋರುವುದಿಲ್ಲ.[೫] "ಮೃಗೇಶ-ನಾಗೇನ್ದ್ರಾಭೀಳರ್ ಭಟಹರ್-ಅಪ್ಪೊರ್" ಎಂಬಲ್ಲಿಗೆ ಮೊದಲ ವಾಕ್ಯವು ನಿಂತಿರುವುದು ಸ್ಪಷ್ಟವಿದೆ. ಹಾಗೂ 'ಶ್ರೀ ಮೃಗೇಶ-ನಾಗಾಹ್ವಯರಿರ್ವ್ವರಾ' ಎಂಬುದು ಮುಂದಿನ ವಾಕ್ಯಕ್ಕೆ ಸಂಬಂಧಿಸಿರುವುದೂ ಅಷ್ಟೇ ಸ್ಪಷ್ಟವಿದೆ. ಆದ್ದರಿಂದ 'ಮೃಗೇಶ-ನಾಗೇನ್ದ್ರರಂತೆ' ಎಂದು ಉಪಮೆಯನ್ನು ಕಲ್ಪಿಸಲು ಇಲ್ಲಿ ಅವಕಾಶವಿಲ್ಲ. ಶಾಸನ ರಚಕನ ಮನಸ್ಸಿನಲ್ಲಿ ಮೃಗೇಶ ಮತ್ತು ನಾಗೇಂದ್ರ ಶಬ್ದಗಳಿಂದ ಹೊರಡುವ ಧ್ವನಿಯ ಪ್ರಜ್ಞೆ ಇದೆಯೆಂದು ಒಪ್ಪಬಹುದು. ಆದರೆ ಶಬ್ದಾನ್ವಯದ ದೃಷ್ಟಿಯಿಂದ ಈ ಭಾಗಕ್ಕೆ 'ಮೃಗೇಶ (ಮತ್ತು) ನಾಗರೆಂಬ (ಹೆಸರಿನ) ಅಭೀಳರು (=ಭಯಂಕರು) ಭಟಹರಾಗಿದ್ದಾರೆ (=ಅಧಿಕಾರಿಗಳಾಗಿದ್ದಾರೆ)' ಎಂಬುದಷ್ಟೆ ನೇರವಾದ ಅರ್ಥ.

ಮುಂದಿನ ವಾಕ್ಯ ಭಾಗ:

೨ (ಅ) I ಶ್ರೀ ಮೃಗೇಶ ನಾಗಾಹ್ವಯರಿರ್ವ್ವರಾ (-ಇರ್ವ್ವರ್-ಆ)
II ೧ ಬಟರಿಕುಲಾಮಲ ವ್ಯೋಮತಾರಾಧಿನಾಥನ್ - (-ನ್-)
೨ ಅಳಪಗಣಪಶುಪತಿಯಾ
೩ (ಮಾ) ದಕ್ಷಿಣಾಪಥ ಬಹುಶತಹವನಾಹವದುಳ್-

---

೪. MAR, 1911, ಪು. 33

೫. ಶಬ್ದಾರ್ಥ ವಿಹಾರ, ಪು. 3-4

ಪಶುಪ್ರದಾನ ಶೌರ್ಯೋದ್ಯಮ ಭರಿತೋನ್
೪ ದಾನ ಪಶುಪತಿಯೆನ್ನು ಪೊಗಜೆಪ್ಪೊಟ್ಟಣ
೫ ಪಶುಪತಿ ನಾಮಧೇಯನಾ
(ಬ)-ಸರಕ್ಕೆಲ್ಲ ಭಟರಿಯಾ ಪ್ರೇಮಾಲಯ ಸುತನ್ಗೆ - ಸೇನ್ದ್ರಕ ಬಣೋಭಯ ದೇಶದಾ ವೀರಾಪುರುಷ - ಸಮಕ್ಷದೆ ಕೇಕಯ ಪಲ್ಲವರಂ ಕಾದೆಜೆದು ಪೆತ್ತಜಯನ್-ಆ ವಿಜ ಅರಸನ್ಗೆ -
(ಕ) ಬಾಳ್ಗಟ್ಟು ಪಲ್ಮಡಿಲುಂ ಮೂಜಿವಳ್ಳಿಲುಂ
(ಡ) ಕೊಟ್ಟಾರ್

ಈ ವಾಕ್ಯದ (ಅ) I ಉ ನ್ನು ಶ್ರೀ ಮೃಗೇಶ ನಾಗಾಹ್ವಯರ್-ಇರ್ವ್ವರ್-ಆ ಎಂದು ಬಿಡಿಸಬಹುದು. ಅಥವಾ ಶ್ರೀಮೃಗೇಶ ನಾಗಾಹ್ವಯರ್-ಇರ್ವ್ವರಾ- ಎಂದೂ ಬಿಡಿಸಬಹುದು. ಮೊದಲಿನ ವಿಗ್ರಹದಿಂದ 'ಆ' ಎಂಬುದು 'ಬಟರಿ ಕುಲಾಮಲ ವ್ಯೋಮತಾರಾಧಿನಾಥನ್' '....ಪಶುಪತಿ ನಾಮಧೇಯನಾ' ಎಂಬುದಕ್ಕೆ ಸರ್ವನಾಮದಿಗ್ವಾಚಿಯಾಗುತ್ತದೆ. ಎರಡನೆಯ ರೀತಿಯ ವಿಗ್ರಹದಿಂದ 'ಇರ್ವ್ವರಾ' ಎಂಬ ಷಷ್ಠ್ಯಂತವು ಸಿದ್ಧಿಸುತ್ತದೆ. ಸದ್ಯಕ್ಕೆ ಇದನ್ನು ಬದಿಗಿಟ್ಟು ಪಶುಪತಿಗೆ ಸಂಬಂಧಿಸಿದ ಮುಂದಿನ ವಿಶೇಷಣಗಳನ್ನು ನೋಡೋಣ.

ಇಲ್ಲಿ ಒಟ್ಟು ನಾಲ್ಕು ವಿಶೇಷಣಗಳು ಪ್ರಯುಕ್ತವಾಗಿವೆ. ಮೊದಲನೆಯ 'ಬಟರಿಕುಲಾಮಲ ವ್ಯೋಮತಾರಾಧಿನಾಥನ್' ಎಂಬುದು ಪ್ರಥಮಾ ವಿಭಕ್ತಿಯಲ್ಲಿರುವುದು ಸ್ಪಷ್ಟ. ಎರಡನೆಯ 'ಅಳಪಗಣಪಶುಪತಿಯಾ' ಎಂಬುದು ಷಷ್ಠ್ಯಂತವಾಗಿದೆ. ಡಾ॥ ಕೃಷ್ಣರ ಮೈ.ಆ.ರಿ.ಯ ಪಾಠದಂತೆ 'ಮಾ' ಎಂದಿಟ್ಟುಕೊಂಡರೆ ಅರ್ಥದ ದೃಷ್ಟಿಯಿಂದ ಅದು ಸರಿಯಾಗಿರದು. ಕಾರಣ, ಪ್ರ.ಕ.ದಲ್ಲಿಯ ಪಾಠದಂತೆ 'ಅಳಪಗಣಪಶುಪತಿಯಾ' ಎಂದಿಟ್ಟುಕೊಳ್ಳುವುದೇ ಮೇಲು. ಮೂರನೆಯದು 'ದಕ್ಷಿಣಾಪಥ ಬಹುಶತಹವನಾಹವದುಳ್ ಪಶುಪ್ರದಾನ ಶೌರ್ಯೋದ್ಯಮ ಭರಿತೋನ್' ಎಂಬುದು ಪ್ರಥಮಾ ವಿಭಕ್ತಿಯಲ್ಲಿರುವುದು ಸ್ಪಷ್ಟವಾಗಿದೆ. ನಾಲ್ಕನೆಯದಾದ '... ಪೊಗಟಿಪ್ಪೊಟ್ಟಣ' ಎಂಬುದು ಮತ್ತೆ ಷಷ್ಠೀವಿಭಕ್ತಿಯಿಂದ ಕೂಡಿದೆ. ಹೀಗೆ ಒಂದು ಮತ್ತು ಮೂರನೆಯದು ಪ್ರಥಮೆಯಲ್ಲಿದ್ದು ಎರಡನೆಯದು ಸ್ಪಷ್ಟವಿಲ್ಲವಾದರೂ ಷಷ್ಠಿಯಲ್ಲಿದೆಯೆಂದು ಹೇಳಬಹುದು. ನಾಲ್ಕನೆಯದು ಷಷ್ಠೀವಿಭಕ್ತಿಯಲ್ಲಿರುವುದು ಖಚಿತ. ಈ ರೀತಿ ಎರಡು ಪ್ರಥಮಾಂತ ಮತ್ತು ಎರಡು ಷಟ್ಯಂತ ವಿಶೇಷಣಗಳ ತರುವಾಯ 'ಪಶುಪತಿ ನಾಮಧೇಯನಾ' ಎಂಬ ವಿಶೇಷ್ಯವು ಇಷ್ಟವಾದ ವಿಭಕ್ತಿಯಿಂದ ಕೂಡಿರುವುದು ಸಾಧ್ಯ. ಹಾಗಿಲ್ಲದೆ ಎರಡು ಹಾಗೆ ಎರಡು ಹೀಗೆ ಬಂದಿರುವುದು ಗೊಂದಲದಾಯಕವೆನ್ನಿಸುತ್ತದೆ. ವಿಶೇಷ್ಯವನ್ನು ಪಶುಪತಿ-ನಾಮಧೇಯನ್-ಆ ಎಂದು ಮಾಡಿಕೊಂಡರೆ ಅದು ಪ್ರಥಮಾ ವಿಭಕ್ತ್ಯಂತವಾಗಿ ಆ ಎಂಬುದು ಮುಂದಿನ 'ಸರಕ್ಕೆಲ್ಲ ಭಟರಿಯಾ' ಎಂಬುದಕ್ಕೆ ಸಂಬಂಧಪಡುತ್ತದೆ. ಡಾ॥ ಕೃಷ್ಣರು ಇಲ್ಲಿ ಎಲ್ಲ ವಿಶೇಷಣಗಳನ್ನು ಷಟ್ಯಂತವೆಂದು ತಿಳಿದುಕೊಂಡಿದ್ದರೆ ಡಾ. ಶಾಸ್ತ್ರಿಗಳು ಮೂರನ್ನು ಪ್ರಥಮೆಯಲ್ಲಿಟ್ಟು ಕೊನೆಯ ಪೊಗಟಿಪ್ಪೊಟ್ಟಣ ಎಂಬುದನ್ನು ಮಾತ್ರ ಷಟ್ಯಂತವೆಂದು ತಿಳಿಯಬೇಕೆಂದು ಹೇಳಿದ್ದಾರೆ. ಡಾ॥ ಕೃಷ್ಣರವರ ಅನ್ವಯವು ಮೇಲುನೋಟಕ್ಕೆ ಅಸ್ಪಷ್ಟವಾಗಿ ತೋರುವುದರಿಂದ ಅಗ್ರಾಹ್ಯವೆನಿಸಬಹುದು. ಡಾ॥ ಕೃಷ್ಣರವರ ಅನ್ವಯವೇ ಹೆಚ್ಚು ಸಮಂಜಸವಾಗಿದೆ. ಶಾಸನವನ್ನು ಸೂಕ್ಷ್ಮವಾಗಿ ಪರಾಮರ್ಶಿಸಿದರೆ... ಪಶುಪತಿಯಾ, ... ಪೊಗಟಿಪ್ಪೊಟ್ಟಣ, ಪಶುಪತಿ ನಾಮಧೇಯನಾ ಎಂದು ಇರುವಲ್ಲಿ ಷಷ್ಠೀವಿಭಕ್ತಿ ಸ್ಪಷ್ಟವಾಗಿದ್ದರೂ ಅವು ಪ್ರಥಮಾರ್ಥದಲ್ಲಿಯೇ ಪ್ರಯೋಗವಾಗಿರುವುದು ಕಂಡುಬರುತ್ತದೆ. ಕನ್ನಡದಲ್ಲಿ ವಿಭಕ್ತಿ ಪಲ್ಲಟವು ಪ್ರಸಿದ್ಧವಾದ ಪ್ರಕ್ರಿಯೆ. ಪೂರ್ವದ ಹಳಗನ್ನಡದ ಶಾಸನಗಳಲ್ಲಿ ಕಂಡುಬರುತ್ತದೆ.

ಹಳಗನ್ನಡದಲ್ಲಿ ತೋರುವ ಈ ಪಲ್ಲಟದ ಉದಾಹರಣೆಗಳಿಗೂ ಪೂರ್ವದ ಹಳಗನ್ನಡದ ಶಾಸನಗಳಲ್ಲಿ ತೋರುವ ಉದಾಹರಣೆಗಳಿಗೂ ಅಂತರವಿದೆ.[೬]

ಉದಾ:

ನನ್ದಿಯಾಲರಾ ವಿಟ್ಟದು, ಕ್ರಿ.ಶ. ಆರನೆಯ ಶ. E.C. XI, Cd. 43
ಮಂಗಲೀಸನಾ ಕಲ್ಮನೆಗೆ ಇತ್ತೊದು ಲಂಜಿಗೇಸರಂ " I.A. X, p. 60
ಶ್ರೀವಾಣಸತ್ತಿ ಅರಸರಾ ಮೂಳುಬ್ಬುಸ್ವಾಳಿ " S.I.I. XVIII, No. 7
ಅನ್ತವರ್ಮ್ಮಕ್ಕಳಾ ಸಿರಿಗುಪ್ಪೆ ಆಳೆ --- " --- "
ಅಡಿಗಳಾ ಪ್ರಸಾದಂಗೆಯ್ದನ್ತೆ ಸಲ್ಗೆನ್ದರ್, ಏಳನೆಯ ಶ.ತ.ದ S.I.I. IX-I, No. 4

ಈ ರೀತಿ ಪ್ರಥಮಾರ್ಥದ ಷಷ್ಠಿಪೂರ್ವದ ಹಳಗನ್ನಡದ ವೈಶಿಷ್ಟ್ಯವಾದುದರಿಂದ ಡಾ ಕೃಷ್ಣರು ಇಲ್ಲಿ ಎಲ್ಲವನ್ನೂ ಷಷ್ಠೀ ವಿಭಕ್ತಿಯಾಗಿ ತೆಗೆದುಕೊಂಡದ್ದು ಸರಿ ಎನ್ನಿಸುತ್ತದೆ. ಎರಡು ವಿಶೇಷಣಗಳು ಪ್ರಥಮೆಯಲ್ಲಿದ್ದು ಇನ್ನೆರಡು ಷಷ್ಠಿಯಲ್ಲಿದ್ದರೂ ಅವೆಲ್ಲ ಪ್ರಥಮಾರ್ಥಕಗಳೇ ಎಂದು ತಿಳಿಯಬೇಕು. ಇದೇ ರೀತಿ 'ಪಶುಪತಿ ನಾಮಧೇಯನಾ' ಎಂಬಲ್ಲಿ ಪ್ರಥಮಾರ್ಥದ ಷಷ್ಠಿಯನ್ನು ಗ್ರಹಿಸಿದರೆ 'ಬಾಳ್ಗಳು... ಕೊಟ್ಟಾರ್' ಎಂಬಲ್ಲಿಯ ಕ್ರಿಯಾಪದಕ್ಕೆ ಅದು ಸರಿಯಾದ ಕರ್ತೃಪದ ಆಗುತ್ತದೆ. ಮತ್ತು ಇದೇ ಕಾರಣಕ್ಕಾಗಿ ಆರಂಭದ ೨(ಅ) I 'ಶ್ರೀ ಮೃಗೇಶ ನಾಗಾಹ್ವಯರಿರ್ವ್ವರಾ' ಎಂದಿರುವುದನ್ನು ಪ್ರಥಮಾ ವಿಭಕ್ತ್ಯರ್ಥದ ಷಷ್ಠಿಯನ್ನಾಗಿ ಭಾವಿಸಬೇಕು. ಇದರಿಂದ 'ಶ್ರೀ ಮೃಗೇಶ ನಾಗಾಹ್ವಯರಿರ್ವ್ವರಾ' ಮತ್ತು 'ಪಶುಪತಿ ನಾಮಧೇಯನಾ' ಎಂಬ ಎರಡೂ ಪದಗಳು ಕೊನೆಯ 'ಕೊಟ್ಟಾರ್' ಎಂಬ ಕ್ರಿಯಾಪದಕ್ಕೆ ಸಂಯುಕ್ತದಲ್ಲಿ ಕರ್ತೃಗಳಾಗುತ್ತವೆ. ಎಂದರೆ ವಿಜ ಅರಸನಿಗೆ ಬಾಳ್ಗಟಿ ಕೊಟ್ಟವರು ಮಹಾಮಂಡಲಾಧಿಪತಿಯಾದ ಪಶುಪತಿ ಮತ್ತು ಅವನ ಅಧೀನದಲ್ಲಿದ್ದ ನರಿದಾವಿಳೆನಾಡಿನ ಮೃಗೇಶ ಮತ್ತು ನಾಗರು ಎಂಬುದು ನಿರ್ದುಷ್ಟವಾಗಿ ಸಿದ್ಧಿಸುತ್ತದೆ.

ಇದೇ ವಾಕ್ಯದ 'ತಾರಾಧಿನಾಥನ್ನಳಪಗಣ ಪಶುಪತಿ' ಎಂಬ ಭಾಗ ವಿಚಾರಣೀಯವಾಗಿದೆ ಎಂದು ಡಾ॥ ಶಾಸ್ತ್ರಿಗಳು ಹೇಳಿದ್ದಾರೆ. ಡಾ॥ ಎಂ.ಎಚ್. ಕೃಷ್ಣರು ಇದನ್ನು 'ತಾರಾಧಿನಾಥನ್ + ಅಳಪಗಣ ಪಶುಪತಿ' ಎಂದು ವಿಭಾಗಿಸಿಕೊಳ್ಳಲು ಪಶುಪತಿಯ ಐತಿಹಾಸಿಕತೆಯು ಕಾರಣ ಎಂದು ಅವರು ಭಾವಿಸಿದ್ದಾರೆ. ನಕಾರವು ತಪ್ಪಾಗಿ ಲಿಖಿತವಾಗಿರಬೇಕೆಂದು ಹೇಳಿ "ನಳರೆಂಬ ರಾಜಮನೆತನದವರಿಗೂ ಪ್ರಸ್ತುತ ಶಾಸನಕ್ಕೂ ಸಂಬಂಧವಿರಲಾರದಷ್ಟೆ" ಎಂದು ಡಾ॥ ಶಾಸ್ತ್ರಿಗಳು ಶಂಕೆ ವ್ಯಕ್ತಪಡಿಸಿದ್ದಾರೆ. ಆದರೆ ಡಾ॥ ಶಾಸ್ತ್ರಿಗಳು ಊಹಿಸುವಂತೆ ಇದು ತಪ್ಪಾಗಲೀ ನಳರಿಗೆ ಸಂಬಂಧಿಸಿದ್ದಾಗಲೀ ಅಲ್ಲ. ಡಾ॥ ಕೃಷ್ಣ ಅವರು ಹೇಳುವಂತೆ ತಾರಾಧಿನಾಥನ್ + ಅಳಪಗಣ ಪಶುಪತಿ ಎಂಬ ಅನ್ವಯವೇ ಇಲ್ಲಿ ಸರಿಯಾದದ್ದು. ಪೂರ್ವದ ಹಳಗನ್ನಡದ ತಿಳಿವಳಿಕೆಗೆ ಸರಿಯಾದ ಸಾಮಗ್ರಿ ಸಹ್ಯ ಇಲ್ಲದಿರುವುದೇ ಇದಕ್ಕೆಲ್ಲ ಕಾರಣ. ಹಳಗನ್ನಡದಲ್ಲಿ ಹ್ರಸ್ವಸ್ವರದ ಏಕಾಕ್ಷರಿಗಳ ಅಂತ್ಯದಲ್ಲಿ ನ್, ಣ್, ಳ್, ಲ್, ಯಾಗಳು ಇದ್ದಾಗ ಸ್ವರ ಪರವಾದರೆ ಅವು ದ್ವಿತ್ವವಾಗುವುದು ಪ್ರಸಿದ್ಧ ವಿಷಯ. ಕೇಶಿರಾಜನು ಇದನ್ನು ವಿವರಿಸಿದ್ದಾನೆ. ಅವನ ಅಭಿಪ್ರಾಯದಲ್ಲಿ ಇಂಥ ದ್ವಿತ್ವವು ಅವ್ಯಯಗಳಲ್ಲಿ ಸಿದ್ಧಿಸುವುದಿಲ್ಲ. ಅದರ ವಿವರವಾದ ಚರ್ಚೆ ಇಲ್ಲಿ ಅಪ್ರಸ್ತುತ.

---

೬. ದರ್ಪಣಸೂತ್ರ, 145, ಪು. 1 "ನಿಶ್ಶಂಕೆಯಿಂ ನೃಪನ ಪೇಟಿ" ಎಂದಿರುವುದನ್ನು ಶಾಸನದ ಉದಾಹರಣೆಗಳೊಂದಿಗೆ ಹೋಲಿಸಿ ನೋಡಬಹುದು.

ಅವ್ಯಯಗಳಲ್ಲಿಯೂ ಇದು ಸಿದ್ಧಿಸಬಹುದು ಎಂಬುದಕ್ಕೆ ಅವನಲ್ಲಿಯೇ ಆಧಾರವಿದೆ.[೭] ಪ್ರಸ್ತುತದಲ್ಲಿ, ಪ್ರಥಮಾ, ದ್ವಿತೀಯಾ ವಿಭಕ್ತಿಗಳ ಪ್ರತ್ಯಯಾಂತವಾದ ನಕಾರ ಮತ್ತು ಅವ್ಯಯಾಂತ್ಯ ನಕಾರದ ಮುಂದೆ ಸ್ವರಪರವಾದಾಗ ದ್ವಿತ್ವವಾಗುವುದು ಪೂರ್ವದ ಹಳಗನ್ನಡ ಶಾಸನಗಳಲ್ಲಿ ಕಂಡುಬರುತ್ತದೆ. ಅಷ್ಟೇ ಅಲ್ಲ, ಅಂಥ ನಕಾರದ ಹಿಂದೆ ಹ್ರಸ್ವಸ್ವರ ಮಾತ್ರವೇ ಇರದೆ ದೀರ್ಘಸ್ವರ ಕೂಡ ಇರಬಹುದಾಗಿದೆ. ಇಂಥ ಉದಾಹರಣೆಗಳು ಶಾಸನಗಳಲ್ಲಿ ಕಂಡುಬರುತ್ತವೆ. ಆದರೆ ಇದು ವಿಕಲ್ಪವಾಗಿತ್ತೆಂಬುದನ್ನು ನೆನಪಿಡಬೇಕು.

ಉದಾ:

(ತಪದಿನ್ + ಅಧಿಕನ್ >) ತಪಧಿನ್ನಧಿಕನ್ E.C.II, ೮೪, ೭ನೆಯ ಶ.
(ನಿರವದ್ಯನ್ + ಏಱೆ >) ನಿರವದ್ಯನ್ನೇಱೆ E.C.II, ೮೪, ೨ನೆಯ ಶ.
(ಇನ್ + ಎನಗೆನ್ನು >) ಇನ್ನೆನಗೆನ್ನು E.C.II, ೯೩, ಸು. ೭ನೆಯ ಶ.
(ರಣವಿಕ್ರಮನಾನ್ + ಏಱೆಯತಿಯಡಿಗಾಳ್ >)
ರಣವಿಕ್ರಮನಾನ್ನೆಱೆಯತಿಯಡಿಗಾಳ್ S.I.I. IX, -I.-೪೬, ೭ನೆಯ ಶ.
(ಈ ಧರ್ಮಮಾನ್ + ಅಟಿದೋನ್ >) ಧರ್ಮ್ಮಮಾನ್ನಟಿದೋನ್
E.C.X, ಕೋಲಾರ-೬, ೮ನೆಯ ಶ.
(ಇ ದತ್ತಿಯಾನ್=ಅಟಿದೋನ್ >) ಇದತ್ತಿಯನ್ನಟಿದೋನ್
S.I.I. XVIII-೩, ೮ನೆಯ ಶ.

ಆದ್ದರಿಂದ ಇದು ತಪ್ಪು ಅಥವಾ ನಳರಿಗೆ ಸಂಬಂಧಿಸಿದ್ದಲ್ಲ. ಡಾ॥ ಕೃಷ್ಣರ ಅನ್ವಯವು ಇಲ್ಲಿ ಸರಿಯಾಗಿಯೇ ಇದೆ.

ಇನ್ನು ವಿಜಅರಸನಿಗೆ ಸಂಬಂಧಿಸಿದ ಭಾಗ. ಪಶುಪತಿನಾಮಧೇಯನ + ಆ + ಸರಕ್ಕೆ, ಪಶುಪತಿನಾಮಧೇಯನಾ + ಸರಕ್ಕೆ, ಪಶುಪತಿನಾಮಧೇಯನ + ಆಸರಕ್ಕೆ ಎಂದು ಮುಂತಾಗಿ ಬಿಡಿಸಬಹುದೆಂದು ಹೇಳಿ, ಇದರಲ್ಲಿ 'ಸರ' ಅಥವಾ 'ಆಸರ' ಎಂಬ ಶಬ್ದ ಕಲ್ಪಿಸಲಾಗಿದೆ. ಸರಕ್ಕೆ ಎಂದರೆ ಆಹ್ವಾನಕ್ಕೆ (ಅರ್ಥಾತ್ ಪಶುಪತಿ ಎಂಬ ಹೆಸರಿನವನ ಆಹ್ವಾನಕ್ಕೆ) ಎಂದು ಮುಂತಾಗಿ ಅರ್ಥವಿವೇಚನೆ ಮಾಡಲಾಗಿದೆ. ಆ ಕಾರಣ ಮುಂದಿನ ಭಾಗವನ್ನು ಎಲ್ಲ ಭಟರಿಯಾ ಎಂದು ವಿಘಟಿಸಿ 'ಎಲ್ಲ' ಎಂಬ ಭಟಾರಿವಂಶದ ವ್ಯಕ್ತಿನಾಮವನ್ನು ನಿರ್ಮಿಸಿಕೊಂಡಿದೆ. ಇದರಲ್ಲಿಯೇ 'ಆ ಸಾರಃ' ಎಂಬ ಪದವಿರಬಹುದೆಂದು ಡಾ॥ ಶಾಸ್ತ್ರಿಗಳು ಊಹಿಸಿದ್ದಾರೆ. "ಅದಕ್ಕೆ ಧಾರಾವೃಷ್ಟಿ, ಎಂಬುದರ ಜತೆಗೆ ಶತ್ರುಪಕ್ಷವನ್ನು ಸುತ್ತುಗಟ್ಟುವುದು, ಮಿತ್ರ ಪಕ್ಷಕ್ಕೆ ಸೇರಿದ ರಾಜನ ಅಥವಾ ರಾಜ್ಯದ ಸೈನ್ಯ, ದಾಳಿ, ಮುತ್ತಿಗೆ ಎಂಬ ಅರ್ಥಗಳನ್ನೂ ಸಂಸ್ಕೃತ ನಿಘಂಟುಗಳಲ್ಲಿ ಕೊಟ್ಟಿವೆ" ಎಂದು ಹೇಳಿದ್ದಾರೆ. ಆದ್ದರಿಂದ " 'ಆಸಾರಃ'ದ ಅಪಭ್ರಂಶವೋ ಲಿಪಿಸ್ಖಾಲಿತ್ಯವೋ ಆಗಿ 'ಅಸರ' ಶಬ್ದವು ಪ್ರಸ್ತುತ ಸಂದರ್ಭಗಳಲ್ಲಿ ಏಕೆ ಬಂದಿರಬಾರದು?" ಎಂಬ ಪ್ರಶ್ನೆ ಎತ್ತಿದ್ದಾರೆ. ಹಾಗೂ "ಪಶುಪತಿಯು ಕೈಕೊಂಡ ಶತ್ರುಪಕ್ಷದ ಮೇಲಿನ ದಾಳಿಗಾಗಿ (ದಾಳಿಗೆ ಒದಗಿದ್ದಕ್ಕಾಗಿ) ಎಂದು 'ಪಶುಪತಿ ನಾಮಧೇಯನಾಸರಕ್ಕೆ' ಎಂಬ ಮಾತಿಗೆ ಅರ್ಥಮಾಡಬಹುದು" ಎಂದು ಮುಂತಾಗಿ ವಾದ ಮುಂದೆ ಮಾಡಿದ್ದಾರೆ. ಡಾ॥ ಕೃಷ್ಣ ಅವರಾಗಲೀ, ಡಾ॥ ಶಾಸ್ತ್ರಿಗಳಾಗಲೀ ಇಷ್ಟೆಲ್ಲ ಸುತ್ತಿಬಳಸಿ ಅರ್ಥ ಹೇಳುತ್ತಿರುವುದು ಈ ಭಾಗಕ್ಕೆ ಸರಿಯಾದ ಹಾಗೂ

---

೭. ದರ್ಪಣಸೂತ್ರ, 79, ಪು. 25ರಲ್ಲಿ 'ಇನ್ನಾವುದು ಕಜ್ಜಂ' ಎಂಬ ಉದಾಹರಣೆ ಇದೆ

ಸಮಾಧಾನಕರವಾದ ಅರ್ಥ ಹೇಳುವುದು ಸಾಧ್ಯವಿಲ್ಲ ಎಂಬ ಕಾರಣದಿಂದಲೇ. ನಿಜವಾಗಿ ಇಲ್ಲಿ 'ಸರ' 'ಅಸರ' 'ಎಲ್ಲ' ಎಂಬ ಯಾವ ಶಬ್ದಗಳೂ ಇಲ್ಲ. ಇಲ್ಲಿರುವುದು 'ಸರಕ್ಕೆಲ್ಲ' ಎಂಬ ಸಮಾಸರೂಪದ ವಂಶವಾಚಕ ಮಾತ್ರ. ಕರ್ನಾಟಕದ ಶಾಸನಗಳಲ್ಲಿ ಕೆಲ್ಲ, ಮಹಾಕೆಲ್ಲ, ಮುರಸಕೆಲ್ಲ ಎಂಬ ವಂಶನಾಮಗಳು ಕಂಡುಬರುತ್ತವೆ.[೮]

ಉದಾ:

ಮುರಸಕೆಲ್ಲ M.A.R. ೧೯೧೫, ಪು-೩೯, ಸಾಲು-೨೫.೬, ೫ನೆಯ ಶ.
ಮಹಾಕೆಲ್ಲ E.I. XXVII, ಪು. ೩೭
ಕೆಲ್ಲ ಚಿತ್ರಸೇನ E.I. XXXVII, ಪು. ೩೭
ಸಿಯಗೆಲ್ಲರ್ ಮಱುಗಱೆ ನಾಡು ಮುನೂಱುಮಾಳೆ
E.C. XVI, ತುಮಕೂರು, ೮೬, ೮ನೆಯ ಶ.
ಸಿಯಕೆಲ್ಲ ಕೆಸುಮಣ್ಣು ನಾಡಾಳೆ
E.C. XVI, ತುಮಕೂರು, ೯೫, ೮ನೆಯ ಶ.

ಈ ಮೇಲಿನ ಉದಾಹರಣೆಗಳಲ್ಲಿ ಕೆಲ್ಲವೆಂಬುದು ವಂಶನಾಮವಾಗಿ ಬಂದಿದೆ. ಮತ್ತು ೫-೬ನೆಯ ಶತಮಾನಕ್ಕಾಗಲೇ ಅದರಲ್ಲಿ ಒಳಭೇದಗಳಾಗಿದ್ದವೆಂದು ತಿಳಿದುಬರುತ್ತದೆ. ಆದ್ದರಿಂದ ಈ ಶಾಸನದ 'ಸರಕ್ಕೆಲ್ಲ' ಎಂಬುದೂ ವಂಶನಾಮವಾಗಿದೆ ಎಂದು ಹೇಳಬಹುದು. ಪೊಗಱ್ಪೊಟ್ಟಣ, ತಲೆಪ್ಪೞಿ, ಮನೆತ್ತನ ಕೞಿಕ್ಕಾಲು ಮುಂತಾದ ಉದಾಹರಣೆಗಳಂತೆ ಇಲ್ಲಿ 'ಸರ + ಕೆಲ್ಲ' ಎಂದು ಸಂಧಿಯಾಗಿರುವುದರಿಂದ 'ಸರಕ್ಕೆಲ್ಲ' ಎಂದು ದ್ವಿತ್ವಸಹಿತವಾದ ರೂಪ ಸಿದ್ಧಿಸಿದೆ. ಉತ್ತರ ಪದಾದಿಯ ಕತಪಗಳು ದ್ವಿತ್ವಗೊಳ್ಳುತ್ತಿದ್ದುದು ಪೂರ್ವದ ಹಳಗನ್ನಡದ ಒಂದು ಸಂಧಿ ನಿಯಮ. ಆದ್ದರಿಂದ ಇಲ್ಲಿ ಪಶುಪತಿ 'ನಾಮಧೇಯನಾ ಸರಕ್ಕೆ-ಎಲ್ಲಭಟರಿಯಾ' ಎಂಬ ವಿಗ್ರಹ ಸಲ್ಲದು. ಪಶುಪತಿ ನಾಮಧೇಯನಾ + ಸರಕ್ಕೆಲ್ಲಭಟರಿಯಾ-ಪ್ರೇಮಾಲಯ ಸುತನ್ಗೆ ಎಂದು ಇಲ್ಲಿ ಅನ್ವಯ ಸುಲಭವಾದುದು. ಪಶುಪತಿಯು ಭಟಾರಿ ಕುಲದವನೂ ಅಳುಪ (ಆಳುಪ)ನೂ ಕದಂಬನೂ ಆಗಿರುವಂತೆ ವಿಜ ಅರಸನು ಸರಕ್ಕೆಲ್ಲ ಭಟಾರಿಯ ಪ್ರೀತಿಯ ಮಗ ಎಂದಿರುವುದರಿಂದ, 'ಸರಕ್ಕೆಲ್ಲ ಭಟರಿಯಾ' ಎಂಬುದರಲ್ಲಿ ಆತನ ವಂಶ ಸೂಚನೆಯ ಜತೆಗೆ ಅವನ ತಂದೆ ಅಥವಾ ತಾಯಿಯ ಸೂಚನೆಯೂ ಇದೆ.

ಇಷ್ಟಾದರೆ ಶಾಸನದ ಉಳಿದ ಭಾಗಕ್ಕೆ ಅರ್ಥ ಹೇಳಲು ಹೆಚ್ಚು ಶ್ರಮಪಡಬೇಕಾಗಿಲ್ಲ. "... ಭಟರಿಯಾ ಪ್ರೇಮಾಲಯ ಸುತನ್ಗೆ ಕೇಕಯ ಪಲ್ಲವರಂ ಕಾದೆಱೆದು ಪೆತ್ತಜಯನಾ ವಿಜಅರಸನ್ಗೆ ಸೇನ್ದ್ರಕ ಬಣೋಭಯ ದೇಶದಾ ವೀರಾ ಪುರುಷ ಸಮಕ್ಷದೆ ಬಾಳ್ಗಟ್ಟು ಪಲ್ಮಡಿಉಂ ಮೂಱುವಳ್ಳಿಉಂ ಕೊಟ್ಟಾರ್" ಎಂಬುದಕ್ಕೆ ಡಾ॥ ಕೃಷ್ಣರು ಹೇಳಿರುವ 'ಸೇಂದ್ರಕ ಮತ್ತು ಬಾಣ ಎಂಬ ದೇಶಗಳ ವೀರಪುರುಷರ ಎದುರಿಗೆ ಪಲ್ಲವರನ್ನೂ ಕೇಕಯರನ್ನೂ ಯುದ್ಧದಲ್ಲಿ ಕೊಂದು

---

೮. ಇಲ್ಲಿಯ 'ಸರಕ್ಕೆಲ್ಲ' ಪದವು ಮುಂದಿನ ಕಾಲದ ಶಾಸನದಲ್ಲಿ 'ಅರಕೆಲ್ಲ' ಎಂದಾಗಿರುವ ವಿಷಯ, ಜತೆಗೆ ಕನ್ನಡದಲ್ಲಿಯ ಆದಿತಾಲವ್ಯಲೋಪ ಸಂಧಿಯಾಗುವಾಗ ಉತ್ತರ ಪದಾದಿಯ ಕತಪಗಳು ಕ್ಕ ತ್ತ ಪ್ಪ ಎಂದು ದ್ವಿತ್ವಗೊಳ್ಳುತ್ತಿದ್ದ ಸಂಧಿನಿಯಮ ಮೊದಲಾದ ವಿಷಯಗಳನ್ನು 1976 ಜುಲೈ ತಿಂಗಳಿನಲ್ಲಿ ಕರ್ನಾಟಕ ವಿ.ವಿ.ಗೆ ಒಪ್ಪಿಸಿದ ನನ್ನ ಪಿಎಚ್.ಡಿ. ಪ್ರಬಂಧದಲ್ಲಿ [illegible]ವಾಗಿ ಪ್ರತಿಪಾದಿಸಿದ್ದೇನೆ. ಆದ್ದರಿಂದ ಅವನ್ನಿಲ್ಲಿ ಮತ್ತೆ ವಿವರಿಸಿಲ್ಲ.

ಜಯವನ್ನು ಪಡೆದ' ಎಂದು ಅರ್ಥ ಹೇಳಿದ್ದಾರೆ. ಡಾ॥ ಶಾಸ್ತ್ರಿಗಳು ಅದನ್ನು ಒಪ್ಪದೆ "... ಭಟಾರಿಯ ಪ್ರೀತಿಯ ಪಾತ್ರನಾದ ಮಗನಿಗೆ ಕೇಕಯರನ್ನೂ ಪಲ್ಲವರನ್ನೂ ಕಾದಾಡಿ ಹೊಯ್ದು ಜಯಶಾಲಿಯಾದ ಆ ವಿಜಅರಸನಿಗೆ ಸೇಂದ್ರಕ ಮತ್ತು ಬಾಣ ಈ ಎರಡು ದೇಶಗಳ ವೀರಪುರುಷರ ಎದುರಿನಲ್ಲಿ ಪಲ್ಮಡಿಯನ್ನೂ ಮೂಟಿವಳ್ಳಿಯನ್ನೂ ಬಾಳ್ಗಟ್ಟುವಾಗಿ ಕೊಟ್ಟರು" ಎಂದು ಅರ್ಥವಿಟ್ಟುಕೊಳ್ಳಬೇಕೆಂದಿದ್ದಾರೆ. ಸೇಂದ್ರಕ-ಬಾಣರು ದಾನಕಾಲದ ಸಾಕ್ಷಿಗಳೇ ಹೊರತು ವಿಜ ಅರಸನ ಪರಾಕ್ರಮಕ್ಕೆ ಸಾಕ್ಷಿಗಳಲ್ಲ ಎಂದು ಡಾ॥ ಶಾಸ್ತ್ರಿಗಳ ಅಭಿಪ್ರಾಯ. 'ಸೇಂದ್ರಕ ಬಣೋಭಯ ದೇಶದ ವೀರಾಪುರುಷ ಸಮಕ್ಷದೆ' ಎಂದಿರುವಲ್ಲಿಯ 'ವೀರಾಪುರುಷ' ಎಂಬ ಮಾತನ್ನು ಗಮನಿಸಿದರೆ, ಅಂಥ ವೀರರಾದ ಸೇಂದ್ರಕ ಬಾಣರೇ ವಿಜಅರಸನ ಪರಾಕ್ರಮಕ್ಕೆ ಸಾಕ್ಷಿಗಳಾಗಿದ್ದರೆಂಬ ಸಂಗತಿ ಖಚಿತಪಡುತ್ತದೆ. ಇದರಿಂದ ಡಾ॥ ಕೃಷ್ಣರ ಅಭಿಪ್ರಾಯವೇ ಇಲ್ಲಿ ಮಾನ್ಯವೆನಿಸುತ್ತದೆ. ಬಾಳ್ಗಟ್ಟುದಾನಕ್ಕೆ ಅವರು ಸಾಕ್ಷಿಗಳಾಗಿ ಇರಬಹುದು ಅಥವಾ ಇಲ್ಲದೇ ಇರಬಹುದು; ಎರಡೂ ಸಾಧ್ಯ.

ಪಲ್ಮಡಿಗೆ ಕುಜುಮ್ಬಿಡಿ ದಾನವೀಯುವ ಸಂದರ್ಭದಲ್ಲಿ 'ಇರ್ವ್ವರುಂ, ಸಟ್ಬಿಜ್ಗದರ್ ವಿಜಾರಸರುಂ' ಎಂದು ಡಾ॥ ಶಾಸ್ತ್ರಿಗಳು ಮಾಡಿಕೊಳ್ಳಬಯಸುವ ಅನ್ವಯವು ಸಾಧಾರವಾಗಿಲ್ಲದಿದ್ದರೂ ಸಂಭಾವ್ಯವಾಗಿದೆ ಎಂದು ಹೇಳಬಹುದು. ಕುಜುಮ್ಬಿಡಿ ಎಂಬುದಕ್ಕೆ ಊಹಿಸಿದ ಅರ್ಥ ಸಾಂದರ್ಭಿಕವಾಗಿರುವುದು ಸರಿ. ಆದರೆ 'ಒಡ್ಡಲಿ' ಎಂಬುದು ಹಾಗಲ್ಲ. ಒಡ್ಡು ಎಂಬುದಕ್ಕೆ 'ಅಲಿ' ಎಂಬ ಸಪ್ತಮೀ ವಿಭಕ್ತಿ ಪ್ರತ್ಯಯ ಸೇರಿದೆ. ಒಡ್ಡು ಅಥವಾ ಒಟ್ಟು ಎಂದರೆ ಸೈನ್ಯ, ವ್ಯೂಹ ಎಂಬ ಅರ್ಥಗಳ ಜತೆಗೆ ಮೊತ್ತ, ಸಮುದಾಯ, ರಾಶಿ ಎಂಬ ಅರ್ಥಗಳು ಸಂಭಾವ್ಯವಾಗಿವೆ. ಆದ್ದರಿಂದ 'ಈ ಗಟ್ಟಿ ಒಡ್ಡಲಿ' ಎಂದರೆ 'ಈ ಗದ್ದೆಯ (ಧಾನ್ಯದ) ಉತ್ಪತ್ತಿಯಲ್ಲಿ ಅಥವಾ ರಾಶಿಯಲ್ಲಿ' ಎಂದು ಅರ್ಥ ಹೇಳಬಹುದು. ಕೊನೆಯ ಅಕರ ಪತ್ತೊಂದಿ[೯]ಯಷ್ಟೆಯಲ್ಲದೆ ಬೇರೆ ಯಾವ ಕರಗಳೂ ಅದಕ್ಕಿಲ್ಲ ಎಂಬ ಅಭಿಪ್ರಾಯ ಇರಬಹುದು.

ಇನ್ನು ಕಲಭೋರ, ನರಿದಾವಿಳೆ, ಕುಜುಮ್ಬಿಡಿ, ಸಟ್ಬಜ್ಗದರ್ ಇವು ಈ ಶಾಸನದ ಹೊರತು ಬೇರೆಡೆ ಎಲ್ಲಿಯೂ ಕಂಡುಬಂದಿಲ್ಲ. ಕಾರಣ ಇವುಗಳಲ್ಲಿ ನರಿದಾವಿಳೆ ಮತ್ತು ಕುಜುಮ್ಬಿಡಿ ಎಂಬೆರಡು ಶಬ್ದಗಳ ಹೊರತು ಉಳಿದವುಗಳಿಗೆ ಖಚಿತವಾದ ಅರ್ಥ ಹೇಳುವುದು ಸದ್ಯ ಸಾಧ್ಯವಿಲ್ಲ.

## ಶಾಸನದ ಅನ್ವಯ

ನಮಃ ಶ್ರೀಮತ್ ಕದಂಬಪನ್ ತ್ಯಾಗಸಂಪನ್ನನ್,
ಕಲಭೋರನಾ ಅರಿ, ಕಕುಸ್ಥ ಭಟ್ಟೋರನ್ - ಆಳೆ -
ನರಿದಾವಿಳೆನಾಡುಳ್ ಮೃಗೇಶ - ನಾಗೇನ್ದ್ರಾಭೀಳರ್ ಭಟಹರ್ - ಅಪ್ಪೊ(ೞ)ರ್
ಶ್ರೀ ಮೃಗೇಶನಾಗಾಹ್ವಯರಿರ್ವ್ವರಾ, -
ಬಟರಿಕುಲಾಮಲ ವ್ಯೋಮತಾರಾಧಿನಾಥನ್,
ಅಳಪಗಣ ಪಶಪತಿಯಾ
ದಕ್ಷಿಣಾಪಥ ಬಹುಶತಹವನಾಹವದುಳ್ ಪ್ರಶುಪ್ರದಾನ ಶೌರ್ಯೋದ್ಯಮ ಭರಿತೋನ್,

---

೯. 'ಪತ್ತೊಂದಿ' ಎಂಬುದು ಒಂದು ಕರ ವಿಶೇಷವೆಂಬ ಸಂಗತಿ ಈಗಾಗಲೇ ಮಾನ್ಯವಾಗಿದೆ. ನೋಡಿ: ಶಾಸನಸಂಪದ, ಕ.ವಿ.ವಿ., ಧಾರವಾಡ, 1974 ಪು. 139

ದಾನಪಶುಪತಿಯೆನ್ದು ಪೊಗೞೆಪ್ಪೊಟ್ಟಣ,
ಪಶುಪತಿ ನಾಮಧೇಯನಾ-
ಸರಕ್ಕೆಲ್ಲ ಭಟರಿಯಾ ಪ್ರೇಮಾಲಯ ಸುತನ್ಗೆ,
ಸೇನ್ದ್ರಕ ಬಣೋಭಯ ದೇಶದಾ ವೀರಾಪುರುಷ ಸಮಕ್ಷದೆ ಕೇಕಯ ಪಲ್ಲ
ವರಂ ಕಾದೆಱಿದು ಪೆತ್ತಜಯನ್-
ಆ ವಿಜ ಅರಸನ್ಗೆ,
ಬಾಳ್ಗಚ್ಚು ಪಲ್ಮಡಿಉಂ ಮೂೞಿವಳ್ಳಿಉಂ ಕೊಟ್ಟಾರ್.
ಬಟಾರಿ ಕುಲದೋನ್-ಅಳುಕದಂಬನ್
ಇರ್ವ್ವರುಂ ಸೞ್ಬಙ್ಗದರ್ ವಿಜಾರಸರುಂ
ಪಲ್ಮಡಿಗೆ ಕುೞುಮ್ಬಿಡಿ ವಿಟ್ಟಾರ್.
ಭಟ್ಟರ್ಗ್ಗೆ-ಈ ಗೞ್ದೆ ಒಡ್ಡಲಿ ಆ ಪತ್ತೊನ್ದಿ (ಅಕರ) ವಿಟ್ಟಾರ್.

**ಅರ್ಥ**

ನಮಸ್ಕಾರ. ಶ್ರೀಮತ್ ಕದಂಬರ ಆಧಿರಾಜನು ತ್ಯಾಗಸಂಪನ್ನನೂ ಕಲಭೋರನ ವೈರಿಯೂ (ಆದ) ಕಾಕುಸ್ಥ ಭಟ್ಟಾರಕನು ಆಳುತ್ತಿರಲು ನರಿದಾವಿಳೆ ನಾಡಿನಲ್ಲಿ ಮೃಗೇಶ ಮತ್ತು ನಾಗರೆಂಬ (ವೈರಿ) ಭಯಂಕರರು ಭಟಹರಾಗಿದ್ದಾರೆ (=ಅಧಿಕಾರಿಗಳಾಗಿದ್ದಾರೆ.) (ಆ) ಮೃಗೇಶ ಮತ್ತು ನಾಗರೆಂಬ ಹೆಸರಿನವರಿಬ್ಬರು (ಮತ್ತು) ಭಟಾರಿ ವಂಶವೆಂಬ ನಿರ್ಮಲವಾದ ಆಕಾಶಕ್ಕೆ ಚಂದ್ರನು, ಆಳುಪರೆಂಬ ಗಣಕ್ಕೆ ಶಿವನು (= ಅಳುಪರ ಒಡೆಯನು), ದಕ್ಷಿಣಾಪಥದಲ್ಲಿ ಪ್ರಸಿದ್ಧವಾದ ನೂರಾರು ಯುದ್ಧಗಳೆಂಬ ಯಜ್ಞಗಳಲ್ಲಿ (ವೈರಿಗಳೆಂಬ) ಪಶುಗಳನ್ನು ಬಲಿಗೊಡುವ ಸಾಹಸ ಕಾರ್ಯಗಳಿಂದ ತುಂಬಿರುವವನು, ದಾನ ಕೊಡುವಲ್ಲಿ (ವರವೀಯುವ) ಶಿವನೆಂದು ಹೊಗಳಲ್ಪಟ್ಟವನು (ಮತ್ತು) ಪಶುಪತಿಯೆಂದು ಹೆಸರುಳ್ಳವನು, ಸರಕ್ಕೆಲ್ಲಭಟರಿಯ ಪ್ರೀತಿಯ ಮಗನಿಗೆ ಸೇಂದ್ರಕ ಮತ್ತು ಬಾಣರೆಂಬ ಉಭಯ ದೇಶಗಳ ವೀರಪುರುಷರ ಸಮಕ್ಷಮದಲ್ಲಿ ಕೇಕಯ (ಮತ್ತು) ಪಲ್ಲವರನ್ನು ಹೋರಾಡಿ ಇರಿದು ಜಯ ಸಂಪಾದಿಸಿದ ವಿಜ ಅರಸನಿಗೆ, ಬಾಳ್ಗಚ್ಚು (ಎಂದು) ಪಲ್ಮಡಿ ಮತ್ತು ಮೂೞಿವಳ್ಳಿಗಳನ್ನು ಕೊಟ್ಟರು. ಭಟಾರಿ ಕುಲದವನಾದ ಅಳು ಕದಂಬನು (= ಪಶುಪತಿಯು). (ಈ ದಾನವನ್ನು) ಅಪಹರಿಸಿದವನು ಮಹಾಪಾತಕನು. (ಈ) ಇಬ್ಬರೂ ಸೞ್ಬಙ್ಗದವರೂ ವಿಜ ಅರಸರೂ ಪಲ್ಮಡಿಗೆ ಕುೞುಮ್ಬಿಡಿಯನ್ನು ಬಿಟ್ಟರು. ಅದನ್ನು ನಾಶಪಡಿಸುವವನಿಗೆ ಮಹಾಪಾತಕ (ತಟ್ಟುತ್ತದೆ). ಒಳಿತಾಗಲಿ. ಭಟ್ಟರಿಗೆ (ಬ್ರಾಹ್ಮಣರಿಗೆ) ಈ ಗದ್ದೆಯ ಉತ್ಪತ್ತಿಯ (ಮೇಲಿನ) ಪತ್ತೊಂದಿ ಎಂಬ ತೆರಿಗೆಯನ್ನು (ಮುಕ್ತಗೊಳಿಸಿ) ಬಿಟ್ಟರು.

# ರಾಯಚೂರು ಜಿಲ್ಲೆಯ ಶಾಸನಗಳು

ಡಾ. ಬಿ. ವಿ. ಶಿರೂರ

ಇತರ ಕ್ಷೇತ್ರಗಳಲ್ಲಿಯಂತೆ ಶಾಸನಗಳ ಅನ್ವೇಷಣೆ, ಅಧ್ಯಯನ ಮತ್ತು ಪ್ರಕಟನೆಗಳ ವಿಷಯದಲ್ಲಿಯೂ ಹೈದರಾಬಾದ ಕರ್ನಾಟಕ ಹಿಂದುಳಿದ ಪ್ರದೇಶವೆಂದೇ ಹೇಳಬೇಕು. ಇಲ್ಲಿ ಮೈಸೂರು ಭಾಗದ ಹಾಗೆ ಜಿಲ್ಲೆಗೊಂದರಂತೆ ಎಪಿಗ್ರಾಫಿಯಾ ಕರ್ನಾಟಕಾ ಸಂಪುಟ ಪ್ರಕಟಿಸಿದ ಬಿ.ಎಲ್. ರೈಸ್‌ರಂಥವರಾಗಲಿ, ಉತ್ತರಕರ್ನಾಟಕ ಭಾಗದಲ್ಲಿ ಶಾಸನಗಳು ದೊರೆತಂತೆ ಎಪಿಗ್ರಾಫಿಯಾ ಇಂಡಿಕಾ, ಇಂಡಿಯನ್ ಎಂಟಿಕ್ವೆರಿಯಲ್ಲಿ ಪ್ರಕಟಿಸಿದ ಫ್ಲೀಟ್‌ರಂಥವರಾಗಲಿ, ಸೌಥ್ ಇಂಡಿಯನ್ ಇನಸ್ಕ್ರಿಪ್ಷನ್ಸ್‌ದಂತಹ ಯೋಜನೆಯಾಗಲಿ ಹೈದರಾಬಾದ ಕರ್ನಾಟಕಕ್ಕೆ ಬರಲೇ ಇಲ್ಲ. ಇಲ್ಲಿ ಏನಾದರೂ ಕೆಲಸವಾಗಿದ್ದರೆ ಹೈದರಾಬಾದ ಆರ್ಕಾಲಾಜಿಕಲ್ ಸೀರೀಜ್ ಮೂಲಕ. ಬೇಡನ್ ಹಾಗೂ ಎಚ್. ಕೃಷ್ಣಶಾಸ್ತ್ರಿಗಳ ಪ್ರಯತ್ನದ ಫಲವಾಗಿ ಮಸ್ಕಿಯ ಅಶೋಕನ ಶಾಸನ ಹೊರಬಂದರೆ, ಆರ್. ಎಲ್. ಟರ್ನರ್‌ನ ಪ್ರಯತ್ನದಿಂದ ಕೊಪ್ಪಳದ ಅಶೋಕನ ಶಾಸನಗಳು ಬೆಳಕು ಕಂಡವು. ಸಿ.ಆರ್. ಕೃಷ್ಣಮಾಚಾರಿ, ಪಿ.ಬಿ. ದೇಸಾಯಿ ಮತ್ತು ಶ್ರೀನಿವಾಸ ರಿತ್ತಿಯವರು, ಇತ್ತೀಚೆಗೆ ಮೈಸೂರಿನ ಪ್ರಾಚ್ಯಸಂಶೋಧನಾ ಸಂಸ್ಥೆ, ರಾಯಚೂರಿನ ಕರ್ನಾಟಕ ಸಂಘ ಈ ಭಾಗದ ಶಾಸನ ಶೋಧದಲ್ಲಿ ತಕ್ಕಮಟ್ಟಿಗೆ ಕೆಲಸ ಮಾಡಿದ ವ್ಯಕ್ತಿಗಳು ಮತ್ತು ಸಂಸ್ಥೆಗಳು. ಡಾ. ಶ್ರೀನಿವಾಸ ರಿತ್ತಿಯವರ ಮಾತಿನಲ್ಲಿ ಹೇಳುವುದಾದರೆ: "ರಾಯಚೂರು ಜಿಲ್ಲೆ ಶಾಸನಗಳ ಆಗರ. ಈ ಜಿಲ್ಲೆಯಲ್ಲಿಯ ಹಳ್ಳಿಹಳ್ಳಿಗೂ ಹೋಗಿ ಶಾಸನಗಳನ್ನು ಸಂಗ್ರಹಿಸುವ ಕಾರ್ಯವನ್ನು ಭಾರತ ಸರಕಾರದವರು ಈಗಾಗಲೇ ಕೈಗೊಂಡಿದ್ದಾರೆ. ಈವರೆಗೆ ಲಿಂಗಸಗೂರು ತಾಲೂಕು ಪೂರ್ತಿಯಾಗಿ ಮಾನ್ವಿ ತಾಲೂಕಿನ ಸುಮಾರು ೫೦ ಹಳ್ಳಿಗಳು ಮತ್ತು ಯಲಬುರ್ಗಿ ಕೊಪ್ಪಳ ತಾಲೂಕಿನ ಕೆಲವು ಹಳ್ಳಿಗಳು ಮಾತ್ರ ಮುಗಿದಿವೆ. ಇಷ್ಟಕ್ಕಾಗಲೆ ಮುನ್ನೂರಕ್ಕೂ ಮಿಕ್ಕಿ ಶಾಸನಗಳು ದೊರೆತಿವೆ. ಮಾನ್ವಿಯ ಇನ್ನುಳಿದ ಭಾಗ, ಜಿಲ್ಲೆಯ ಇನ್ನೂ ೭ ತಾಲೂಕುಗಳು ಮುಗಿದಾಗ ಸಾವಿರಕ್ಕೂ ಎಷ್ಟೋ ಹೆಚ್ಚು ಶಾಸನಗಳು ಶೋಧಿತವಾಗುವುದರಲ್ಲಿ ಸಂದೇಹವಿಲ್ಲ. ಆದರೆ ಈ ಸಂಗ್ರಹ ಕಾರ್ಯ ತಿಂಗಳೊಪ್ಪತ್ತಿನಲ್ಲಿ ಮುಗಿಯುವುದಿಲ್ಲ. ವರ್ಷಗಟ್ಟಲೆ ಹಿಡಿಯುವ ಕಾರ್ಯ"[೧] ಈ ಮಾತು ಹೇಳಿ ಇಂದಿಗೆ ವರ್ಷ ಮೂವತ್ತು ಕಳೆದರೂ ಇನ್ನೂ ಅವುಗಳ ಪರಿವೀಕ್ಷಣೆಯ ಕಾರ್ಯ ಪೂರ್ತಿ ಆಗದೆ ಇರುವುದು, ಪರಿವೀಕ್ಷಣೆ ಆಗಿರುವ ಶಾಸನಗಳು ಪ್ರಕಟವಾಗದೆ ಇರುವುದು ದುರ್ದೈವದ ಸಂಗತಿ. ಅಲ್ಲದೆ ಈ ಪಂಡಿತರ ಕಣ್ಣಿಗೆ ಬೀಳದೆ ಹುದುಗಿಕೊಂಡಿರುವ ಕೊಪ್ಪಳದ ದಿಡ್ಡೀಕೇರಿಯಲ್ಲಿಯ ಕೋಟೆಯ ಭಾಗದಲ್ಲಿ ಮೊನ್ನೆ ದೊರೆತ ಶಾಸನಗಳಂಥ

೧. ಕರ್ನಾಟಕ ಸಂಘ, ರಾಯಚೂರು, ಬೆಳ್ಳಿಯಹಬ್ಬ - ಸವಿನೆನಪಿನ ವಿಶೇಷ ಸಂಚಿಕೆ 1962

ಶಾಸನಗಳು ಇನ್ನೂ ಎಷ್ಟು ಇವೆಯೋ! ಈಗ ಪ್ರಕಟವಾಗಿರುವ ಕೆಲವೇ ಕೆಲವು ಶಾಸನಗಳನ್ನು ಹಾಗೂ ಅಪ್ರಕಟಿತ ಕೆಲವು ಶಾಸನಗಳನ್ನು ಮುಂದಿಟ್ಟುಕೊಂಡು ಈ ಲೇಖನವನ್ನು ಸಿದ್ಧಪಡಿಸಲಾಗಿದೆ. ಈ ಶಾಸನಾಧ್ಯಯನವನ್ನು ಭೌಗೋಲಿಕ, ಐತಿಹಾಸಿಕ, ಸಾಹಿತ್ಯಿಕ, ಸಾಂಸ್ಕೃತಿಕ ಎಂದು ವಿಭಜನೆ ಮಾಡಲಾಗಿದೆ.

## ಭೌಗೋಲಿಕ

ಶಾಸನಗಳು ಹೇಳುವ ಹಾಗೆ ಈ ಜಿಲ್ಲೆಯ ಬಹಳಷ್ಟು ಪ್ರದೇಶ ಎಡೆದೊರೆ ೨೦೦೦ ನಾಡಿನಲ್ಲಿದ್ದಿತು. ಇದನ್ನು ಇಲ್ಲಿಯ ಮಾದಿನೂರು ಮತ್ತು ಅರಕೇರಿ ಶಾಸನಗಳೂ ಪುಷ್ಟೀಕರಿಸುತ್ತಿವೆ.

ಇವಲ್ಲದೆ ಕೊಪ್ಪಳ, ಯಲಬುರ್ಗಿ ಪ್ರದೇಶಗಳಲ್ಲಿ ಕೊಪ್ಪಳವನ್ನು ಎನ್.ಎಸ್. ರಾಜಪುರೋಹಿತ ಅವರು "ನಾಲ್ಕು ತಿರುಳ್ಗನ್ನಡ ನಾಡುಗಳಲ್ಲಿ ಕೊಪಣವು ಮಹಾನಗರವೆಂದು ವರ್ಣಿಸಲ್ಪಟ್ಟಿರುವುದರಿಂದ ೧೨೦೦ ಗ್ರಾಮಗಳುಳ್ಳ ಗ್ರಾಮಗಳುಳ್ಳ ಮಹಾಕೊಪಣನಗರ ನಾಡಿನಲ್ಲಿ ಮಳಖೇಡ, ಯಾತಗಿರಿ, ಕಂಪಿಲಿ ಇವು ಮೂರು ಚಾಳುಕ್ಯರ ರಾಜಧಾನಿಗಳು ಸಮಾವೇಶಗೊಳ್ಳುತ್ತವೆ"[೨] ಎಂದಿದ್ದಾರೆ. ಆದರೆ ಕೊಪ್ಪಳವು ೧೨೦೦ ಗ್ರಾಮಗಳುಳ್ಳ ನಾಡಾಗಿದ್ದಿತೆಂಬುದಕ್ಕಾಗಲಿ, ಮಳಖೇಡ, ಯಾತಗಿರಿ, ಕಂಪಿಲಿಗಳು ಈ ತಿರುಳ್ಗನ್ನಡ ನಾಡಿನಲ್ಲಿ ಸಮಾವೇಶವಾಗಿದ್ದವು ಎಂಬುದಕ್ಕಾಗಲಿ ಆಧಾರಗಳಿಲ್ಲ. ಡಾ. ಎಂ.ಎಂ. ಕಲಬುರ್ಗಿ ಅವರು: "ಶಂಕರಗಂಡನು ತಾನು ಕೊಪ್ಪಳದಲ್ಲಿ ಕಟ್ಟಿಸಿದ ಜಯಧೀರಜಿನಾಲಯಕ್ಕೆ ಕುಕ್ಕನೂರು ೩೦ರೊಳಗಣ ಭೂಮಿಯನ್ನು ನೀಡಿದನೆಂದು ಉಪ್ಪಿನಬೆಟಗೇರಿ ಶಾಸನವು ಹೇಳುವುದರಿಂದ ಕೊಪ್ಪಳವೂ ಕುಕ್ಕನೂರು ೩೦ರಲ್ಲಿರಬಹುದೆನ್ನಿಸುತ್ತದೆ" ಎಂದಿದ್ದಾರೆ.[೩] ಆದರೆ ಕೊಪ್ಪಳವು ಒಂದು ಸ್ವತಂತ್ರ ನಾಡಾಗಿದ್ದ ಬಗ್ಗೆ ಹಲವು ಶಾಸನಾಧಾರ ದೊರೆಯುತ್ತಿವೆ. ಹಂಪೆಯ ಶಾಸನ (S.I.I.IV 283 ರಲ್ಲಿ)ದಲ್ಲಿ ಕೊಪ್ಪಳ ಸೀಮೆಯೊಳಗಣ ಮುದುಬೆ(ಯ್ಯಹಳ್ಳಿ) ಕಮಲಾಪುರ ಶಾಸನ (S.T.I. IV-272)ದಲ್ಲಿ ಕೊಪ್ಪಣದ ಸೀಮೆಗೆ ಸಲುವ ಕಟುಕನಹಳ್ಳಿ, ಕೊಪ್ಪಳವೆಂಕಟೇಶ್ವರ ಗುಡಿ ಶಾಸನದಲ್ಲಿ ಕೊಪಣದ ಸೀಮೆಯ ಹಿರಿಯ ಸಿಂದೋಗಿ, ಕೊಪ್ಪಳ ರಾಮರಾಯನ ಕಾಲದ ಶಾಸನದಲ್ಲಿ ಕೊಪ್ಪಳದೇಶ ಲೇಪಗೇರಿ ಎಂಬ ಉಲ್ಲೇಖ ಬಂದಿವೆ. ಇವೆಲ್ಲವುಗಳಿಂದ ಈ ಹಲವು ಹಳ್ಳಿಗಳನ್ನೊಳಗೊಂಡು ಕೊಪ್ಪಳವು ಸ್ವತಂತ್ರ ಪ್ರದೇಶವಾಗಿದ್ದಿತು ಎಂಬುದು ಸ್ಪಷ್ಟವಾಗುತ್ತದೆ.

ಇನ್ನು ಈ ನಾಡ ಸುತ್ತಮುತ್ತ ಇದ್ದ ಇತರ ಪ್ರಮುಖ ವಿಭಾಗಗಳಲ್ಲಿ ಕೌರೂರು-ಮಾಸವಾಡಿ ನಾಡೊಳಗಣ ಮಹಾಗ್ರಹಾರವಾಗಿತ್ತು, ಅಳಿವಿಂಡಿ ಎಕ್ಕಲವಾಡದ ಸಕಳಾಗ್ರಹಾರವಾಗಿತ್ತು, ಮೊದೆನೂರು ಕೇಳವಾಡಿ ಮೂನೂರರಲ್ಲಿಯ ಅಗ್ರಹಾರವಾಗಿತ್ತು. ಬೆಳ್ವೊಲ ಮೂನೂರರಲ್ಲಿ ಕುಕ್ಕನೂರು ಮೂವತ್ತು, ನರೆಯಂಗಲ್ಲು ಪನ್ನೆರಡರಲ್ಲಿ ಯಲಬುರ್ಗಿ ತಾಲೂಕಿನ ಇಟ್ಟಿಗೆ, ಮುಧೋಳ, ಕರಮುಡಿ, ಕಲ್ಲೂರುಗಳು ಸೇರಿದ್ದವು. ಈಗ ಈ ಪ್ರದೇಶವನ್ನಾಳುತ್ತಿದ್ದ ಅರಸುಮನೆತನಗಳ ಸಮೀಕ್ಷೆ ಮಾಡಬಹುದು.

---

೨. ಕ.ಸಾ.ಪ.ಪ (14 ಪುಟ 129-136)

೩. ಕ.ರಾ.ಮೌ.ಪ.ಕ.ಸಾ. ಪುಟ 47

**ಐತಿಹಾಸಿಕ**

## ಮೌರ್ಯರು

ರಾಯಚೂರು ಜಿಲ್ಲೆಯಲ್ಲಿ ದೊರೆತ ಶಾಸನಗಳಲ್ಲಿ ಅತಿ ಪ್ರಾಚೀನವಾದವು ಮೌರ್ಯವಂಶದ ಅಶೋಕನ ಶಾಸನಗಳು. ಅವನು ಕೆತ್ತಿಸಿದ ೧೩ ಲಘುಪ್ರಸ್ತರ ಲೇಖಗಳಲ್ಲಿ ಎಂಟು ದಕ್ಷಿಣ ಭಾರತದಲ್ಲಿದ್ದು ಆರು ಕರ್ನಾಟಕದಲ್ಲಿಯೇ ದೊರೆತಿವೆ. ಅವುಗಳಲ್ಲಿ ಮೂರು ರಾಯಚೂರು ಜಿಲ್ಲೆಯ ಮಸ್ಕಿ, ಕೊಪ್ಪಳದ ಪಾಲ್ಕಿಗುಂಡು, ಗವಿಮಠಗಳಲ್ಲಿದ್ದು ಅವು ಆ ಚಕ್ರವರ್ತಿಯ ರಾಜ್ಯದ ಮೇರೆಯನ್ನು ಸೂಚಿಸುತ್ತಿವೆ. ಅವುಗಳಲ್ಲಿ ಮಸ್ಕಿಯ ಶಾಸನವು ಮೊಟ್ಟಮೊದಲಿಗೆ ಅಶೋಕನ ಹೆಸರನ್ನು ಉಲ್ಲೇಖಿಸಿ ಈ ಎಲ್ಲ ಶಾಸನಗಳ ಕರ್ತೃ ಮೌರ್ಯಕುಲದ ಅಶೋಕ ಎಂಬುದನ್ನು ಸ್ಪಷ್ಟಪಡಿಸಿತು. ಈ ಮೂರೂ ಧರ್ಮಲಿಪಿಗಳ ಮೂಲಕ 'ದೇವತೆಗಳ ಪ್ರೀತಿಗೆ ಪಾತ್ರನಾದ ಅಶೋಕ' ಪ್ರಯತ್ನದಿಂದ ಮಾನವನು ದೇವನಾಗಬಲ್ಲನು, 'ಕ್ಷುದ್ರ ಜನರೂ ಕೂಡ ತಮ್ಮ ಪರಿಶ್ರಮದಿಂದ ವಿಪುಲವಾದ ಸ್ವರ್ಗವನ್ನು ಪಡೆಯಬಹುದು' ಎಂಬ ಸಾಮಾನ್ಯರಿಗೂ ಸಂಜೀವಿನಿಯಾಗಬಲ್ಲ ಮಾತುಗಳನ್ನುಸುರಿದ್ದಾನೆ.

ಅಶೋಕನ ಶಾಸನಗಳ ತರುವಾಯ ಈ ಭಾಗದಲ್ಲಿ ದೊರೆಯುವ ಅತ್ಯಂತ ಪ್ರಾಚೀನ ಶಾಸನ ಕ್ರಿ.ಶ. ೬-೭ನೆಯ ಶತಮಾನದ ಲಿಂಗಸಗೂರು ತಾಲೂಕಿನ ಗೌಡೂರಿನದು. ಕ್ರಿ.ಶ. ೫ನೆಯ ಶತಮಾನದ ಕುಕನೂರಿನ ಶಾಸನದಲ್ಲಿ ಸಿಂದವಂಶದ ಪ್ರಸ್ತಾಪವಿದೆ. ಅಲ್ಲದೆ ಕೊಪ್ಪಳದ ಗುಡ್ಡದ ಗವಿಯಲ್ಲಿ ಸುರುಮದಲ್ಲಿ ಬರೆಯಲಾದ ೭-೮ನೆಯ ಶತಮಾನದ ಶಾಸನವೊಂದರಲ್ಲಿ ಶ್ರೀ ಅಣಗಾರನ್ ಸಾಸ್ತೆರೆಯನ್ ಮೊದಲಾದ ಹೆಸರುಗಳಿವೆ.

## ಗಂಗರು

ಕ್ರಿ.ಶ. ೯೬೮ರ ಕುಕನೂರ ತಾಮ್ರ ಶಾಸನವು ಸಂಸ್ಕೃತದಲ್ಲಿದ್ದು ಗಂಗ ಅರಸು ೩ನೆಯ ಮಾರಸಿಂಹನನ್ನು ಉಲ್ಲೇಖಿಸುತ್ತದೆ. ಕೋಲಪೂರ್ಯನೆಂಬ ವಿದ್ವಾಂಸನಿಗೆ ಅಡ್ಡವೂರಿಗೆ (ಇಂದಿನ ಆಡೂರು)ಯನ್ನು ದತ್ತಿಯಾಗಿ ಇತ್ತುದನ್ನು ಹೇಳುತ್ತದೆ. ಇದರಿಂದ ಈ ಭಾಗ ಈ ಕಾಲದಲ್ಲಿ ಗಂಗರ ಆಡಳಿತಕ್ಕೆ ಒಳಪಟ್ಟಿತ್ತೆಂದು ಹೇಳಬಹುದಾಗಿದೆ.

## ರಾಷ್ಟ್ರಕೂಟರು

ಮಾನ್ವಿ ತಾಲೂಕಿನ ಭೋಗಾವತಿಯ ಶಾಸನ ಅಕಾಲವರ್ಷನ ಆಳಿಕೆಯದಿದ್ದು ಆಗ ಜಗತ್ತುಂಗನೆಂಬುವನು ಅವನಿಗೆ ಅಧೀನನಾಗಿ ಎಡದೊರೆ ಎರಡು ಸಾವಿರವನ್ನು ಅಣುಗಜೀವಿತವಾಗಿ ಆಳುತ್ತಿದ್ದನೆಂದು ಹೇಳಿದೆ.

ಕ್ರಿ.ಶ. ಸು. ೮೯೮ರ ಮುಧೋಳದ ಒಂದು ವೀರಗಲ್ಲು ರಾಷ್ಟ್ರಕೂಟ ೨ನೆಯ ಕೃಷ್ಣನ ಅಧಿಕಾರಿ ಮಹಾಶ್ರೀಮಂತನ ಆಡಳಿತದಲ್ಲಿ ಹಳ್ಳಿಯ ಮೇಲೆ ನಡೆದ ಆಕ್ರಮಣದಲ್ಲಿ ಸಮ್ಮಗಾರ ಚನ್ನನು ಹೋರಾಡಿ ಸತ್ತನು ಎಂದಿದೆ.

ಕನ್ನಡ ಸಾಹಿತ್ಯೇತಿಹಾಸದಲ್ಲಿ ಪ್ರಖ್ಯಾತಿಯನ್ನು ಪಡೆದ ರಾಷ್ಟ್ರಕೂಟ ಅರಸು ನೃಪತುಂಗ ಅಮೋಘವರ್ಷ. ಅವನ ಕಾಲಕ್ಕೆ ಸಂಬಂಧಿಸಿದ ಒಂದು ಶಾಸನ ಕೊಪ್ಪಳದ ಮಣ್ಣುಕೋಟೆಯ ಪಕ್ಕದ ಪಾದರಲಿಂಗನ ಗೋರಿ ಬಳಿ ದೊರೆತಿದೆ. ಇದು ಒಂದು ವೀರಗಲ್ಲಾಗಿದ್ದು ಸದ್ಯ ಅದರ ಮೇಲಿನ ಪ್ರಶಸ್ತಿ ಭಾಗ ಮಾತ್ರ ಉಳಿದಿದೆ. ಅದರಲ್ಲಿ ನೃಪತುಂಗನ ನಾಮ ಮಾತ್ರ ಇದೆ.

ಕ್ರಿ.ಶ. ಸು. ೯೬೪ರ ಉಪ್ಪಿನಬೆಟಗೇರಿ ಶಾಸನವು ಬನವಾಸಿ ನಾಡನ್ನಾಳುತ್ತಿದ್ದ ಜೈನಮತದ ಪೋಷಕನೆಂದು ರನ್ನನಿಂದ ಕೀರ್ತಿತನಾದ ಮಹಾಸಾಮಂತಾಧಿಪತಿ ಶಂಕರಗಂಡನು ಕೊಪ್ಪಳದಲ್ಲಿ ಒಂದು ಜಿನಾಲಯ ಕಟ್ಟಿಸಿದನೆಂತಲೂ ಅದು ಅವನ 'ಜಯಧೀರ' ಎಂಬ ಬಿರುದಿನಿಂದ ಪ್ರಸಿದ್ಧಿ ಪಡೆಯಿತೆಂದೂ ಹೇಳಿದೆ. ಅವನು ಆ ಜಿನಾಲಯದ ತಳವೃತ್ತಿಗೆ ಚಕ್ರವರ್ತಿ ೩ನೆಯ ಕೃಷ್ಣನಿಂದ ಭೂಮಿ, ಪಡೆದು ನಾಗನಂದಿಪಂಡಿತ ಭಟಾರರಿಗೆ ಬಿಟ್ಟನಂತೆ. ಇಲ್ಲಿ ಚಾಲುಕ್ಯ ವಂಶದ ರಾಟ್ಟಯ್ಯನ ಪ್ರಸ್ತಾಪವೂ ಇದೆ.

### ಕಲ್ಯಾಣದ ಚಾಲುಕ್ಯರು

ಕರ್ನಾಟಕದ ಅರಸುಮನೆತನದ ವೈಭವವನ್ನು ಮುಂದುವರಿಸಿದವರು ಕಲ್ಯಾಣದ ಚಾಲುಕ್ಯರು. ಅವರಲ್ಲಿ ಕ್ರಿ.ಶ. ೯೭೩ರಿಂದ ೯೯೭ರವರೆಗೆ ಆಳಿದ ಇಮ್ಮಡಿ ತೈಲಪನ ಎರಡು ಶಾಸನಗಳು ಈ ಭಾಗದಲ್ಲಿ ದೊರೆಯುತ್ತವೆ. ಮೇಲಿನ ಬೆಟಗೇರಿ ಶಾಸನ ಮತ್ತು ಈ ಶಾಸನಗಳ ಪ್ರಕಾರ ಕುಕ್ಕನೂರು ಮೊದಲಾದ ಭಾಗಗಳು ಬನವಾಸಿ ನಾಡಿನ ಆಧಿಪತ್ಯಕ್ಕೆ ಒಳಪಟ್ಟಿದ್ದವು ಎಂದು ಹೇಳಬಹುದಾಗಿದೆ.

### ಕಳಚೂರ್ಯರು

ಚಾಲುಕ್ಯರು ವಾರಸುದಾರರಾಗಿ ಕಳಚೂರ್ಯರು ಈ ನಾಡನ್ನು ಅಳಹತ್ತಿದರು. ಕಳಚೂರ್ಯ ಬಿಜ್ಜಳನ ಶೌರ್ಯಸಾಹಸವನ್ನು ಮನಂಬುಗುವಂತೆ ಬಣ್ಣಿಸುತ್ತದೆ - ಕುಕನೂರ ಒಂದು ಶಾಸನ.

ಕಲ್ಯಾಣಿ ಚಾಲುಕ್ಯರ ಬಲಗೈಯಂತಿದ್ದು ಅವರ ಶ್ರೇಯೋಭಿವೃದ್ಧಿಗೆ ಕಾರಣರಾದವರು ಯಲಬುರ್ಗಿಯ ಸಿಂದರು. ಇವರ ಕಾಲಕ್ಕೆ ಸಂಬಂಧಿಸಿದ ಹಲವು ಹತ್ತು ಶಾಸನಗಳು ಕೊಪ್ಪಳ ನಾಡಿನ ಸುತ್ತಮುತ್ತ ದೊರೆಯುತ್ತಿವೆ. ಅದೇ ರೀತಿ ಲಿಂಗಸಗೂರು ತಾಲೂಕಿನ ಸುತ್ತಮುತ್ತಲ ಪ್ರದೇಶ ಕರಡಿಕಲ್ ೩೦೦ ಎಂದು ಹೆಸರಾಗಿದ್ದು ಕದಂಬವಂಶದ ಸಾಮಂತರ ಶಾಸನಗಳು ಕರಡಿಕಲ್, ಮುದಗಲ್, ನವಲಿ, ಹಲ್ಕಾವಟಗಿ ಮುಂತಾದ ಗ್ರಾಮಗಳಲ್ಲಿ ದೊರೆತಿವೆ. ಹಾಗೆಯೇ ಮಾನ್ವಿತಾಲ್ಲೂಕಿನ ಸುತ್ತಮುತ್ತಲ ಪ್ರದೇಶ ಮೊರಟಮುನ್ನೂರನ್ನು ಹೈಹಯ ಮನೆತನದ ಮಾಂಡಲಿಕರೂ ಸಿಂದನೂರು ತಾಲೂಕಿನ ಸಾಲಗುಂದಿ ಭಾಗವನ್ನು ಸಾಲಗುಂದಿಯ ಸಿಂದರೂ ಆಳುತ್ತಿದ್ದ ಬಗ್ಗೆ ಶಾಸನಗಳು ದೊರೆಯುತ್ತಿವೆ.

### ಕಾಕತೀಯರು

ಕ್ರಿ.ಶ. ೧೨೯೪ರ ರಾಯಚೂರು ಬಸ್‌ನಿಲ್ದಾಣದ ಬಳಿ ಕೋಟೆ ಗೋಡೆಯ ಮೇಲಿರುವ ಕಾಕತೀಯ ೨ನೆಯ ಪ್ರತಾಪರುದ್ರನ ಶಾಸನ, ಅವನ ದಂಡನಾಯಕ ಗೋನಗನ್ನುಯರಡ್ಡಿ ಎಂಬುವವನನ್ನು ಉಲ್ಲೇಖಿಸುತ್ತಿದ್ದೂ 'ಸರ್ವರಾಷ್ಟ್ರ ಪ್ರಜಾರಕ್ಷಣಾರ್ಥವಾಗಿ' ಈ ಕೋಟೆಯನ್ನು ಕಟ್ಟಿಸಿದನೆಂದು ಈ ಶಾಸನ ಹೇಳಿದೆ.

### ದೇವಗಿರಿಯ ಯಾದವರು

ಚಾಲುಕ್ಯರ ತರುವಾಯ ಈ ಭಾಗ ದೇವಗಿರಿಯ ಯಾದವರ ವಶವಾಯಿತು. ಈ ವಂಶದ ೫ನೆಯ ಭಿಲ್ಲಮನು ಚಾಲುಕ್ಯ ಸೋಮೇಶ್ವರನ ಅಸಹಾಯಕ ಪರಿಸ್ಥಿತಿಯ ಪ್ರಯೋಜನ ಪಡೆದು ಸ್ವತಂತ್ರನಾದನು. ಆಗ ಕೊಪ್ಪಳವನ್ನೊಳಗೊಂಡ ಬೆಳ್ವೊಲ ಸೀಮೆ ಇವನ ವಶವಾಯಿತು.

## ಹೊಯ್ಸಳರು

ಹೊಯ್ಸಳ ವಿಷ್ಣುವರ್ಧನನ ಒಂದು ಶಾಸನದಲ್ಲಿ ರಾಯಚೂರನ್ನು ಪೆರ್ಮನ ರಾಜಪುರ ಎಂದು ಕರೆಯಲಾಗಿದೆ. ವಿಷ್ಣುವರ್ಧನನ ಕಾಲದ ಜೈನಧರ್ಮದ ಎರಡು ಕಣ್ಣುಗಳಂತಿದ್ದ ಶಾಂತಲೆ-ಗಂಗರಾಜರಲ್ಲಿ ಶಾಂತಲೆ ಕೊಪ್ಪಳದಲ್ಲಿ ಒಂದು ಜಿನಾಲಯ ನಿರ್ಮಿಸಿದಂತೆ ಇಲ್ಲಿಯ ಒಂದು ಶಾಸನ ಹೇಳುತ್ತಿದೆ. ಅದೇ ರೀತಿ ಗಂಗರಾಜ ಇಡೀ ಗಂಗವಾಡಿ ೯೬೦೦೦ವನ್ನು ಕೊಪ್ಪಳದ ಹಾಗೆ ಆದರ್ಶಪ್ರಾಯವಾಗಿ ಮಾಡಲು ಪ್ರಯತ್ನಿಸಿದನಂತೆ. ಗಂಗರಾಜನ ಅಣ್ಣನ ಮಗನಾದ ಏಚಿರಾಜ, ಬೆಳಗವತ್ತಿ ನಾಡನಿರ್ಮಾಣದಲ್ಲಿ ಕೊಪ್ಪಳವನ್ನೇ ಆದರ್ಶವಾಗಿಟ್ಟುಕೊಂಡಿದ್ದನು. ವೀರನರಸಿಂಹನ ಮಂತ್ರಿ ಹುಳ್ಳ ಕೊಪ್ಪಳದಲ್ಲಿ ಮುನಿಸಂಘಕ್ಕೆ ಸುವರ್ಣದಾನವನ್ನಿತ್ತು ಪುಣ್ಯಪುಂಜೈಕ್ಯಧಾಮನಾದನಂತೆ.

## ವಿಜಯನಗರದರಸರು

ಕ್ರಿ.ಶ. ೧೩೪೭ರ ಕೊಪ್ಪಳದ ಒಂದು ಶಾಸನದಿಂದ ವಿಜಯನಗರದರಸು ಹರಿಹರನು ಮತ್ತು ಇತರ ಸಮೂಹವು ಸೇರಿ ಸಿಂಹನಂದ್ಯಾಚಾರ್ಯರ ನಿಷಿಧಿಗೆ ನಿಲ್ಲಿಸಿದುದಾಗಿ ತಿಳಿದುಬರುತ್ತದೆ.

ಕುಷ್ಟಗಿ ತಾಲೂಕಿನ ಪುರದ ಸೋಮೇಶ್ವರದೇವರ ಬಾಗಿಲಬಳಿ ಇರುವ ೧೫ನೆಯ ಶತಮಾನದ ಒಂದು ಶಾಸನ ವಿಜಯನಗರದರಸು ಶ್ರೀ ವೀರಪ್ರತಾಪದೇವರಾಯ ಮಹಾರಾಯನಿಗೆ ಧರ್ಮವಾಗಬೇಕೆಂದು ಆತನ ರಾಣೀವಾಸದ ಓರ್ವ ವ್ಯಕ್ತಿ (ಹೆಸರು ಅಳಿಸಿದೆ) ಸೋಮೇಶ್ವರ ದೇವರಿಗೆ ನಿತ್ಯಪೂಜೆ, ನೈವೇದ್ಯ ಹಾಗೂ ಇತರ ಕೈಂಕರ್ಯಾದಿಗಳಿಗೆ ಕೊಟ್ಟ ಭೂದಾನದ ವಿವರಣೆ ಹೊಂದಿದೆ. ಅಲ್ಲದೆ ಆ ಪುರಗ್ರಾಮಕ್ಕೆ ಒಂದು ಕೆರೆಯನ್ನೂ, ಆ ಕೆರೆಗೆ ತೂಬು ಮತ್ತು ಕಾಲುವೆಗಳನ್ನೂ ಮಾಡಿಸಿದ ಸೋಮಯಿದೇವನನ್ನು ಹೆಸರಿಸಿದೆ.

ಕೊಪ್ಪಳದ ವೆಂಕಟೇಶ್ವರ ಗುಡಿಯ ಬಂಡೆಯ ಮೇಲಿನ ಶಾಸನವು ಶ್ರೀಕೃಷ್ಣ ದೇವರಾಯನ ಕಾಲಕ್ಕೆ ಸಂಬಂಧಿಸಿದ್ದು ಇಲ್ಲಿ ಕೊಪ್ಪಣದ ಸೀಮೆಯಲ್ಲಿರುವ ಹಿರಿಯ ಸಿಂದೋಗಿಯನ್ನು ಉಲ್ಲೇಖಿಸುತ್ತದೆ.

## ವಿಜಾಪುರದ ಸುಲ್ತಾನರು ಮತ್ತಿತರರು

ಮುಂದೆ ಈ ಪ್ರದೇಶ ವಿಜಾಪುರದ ಆದಿಲ್‌ಷಾನ ಆಡಳಿತಕ್ಕೊಳಪಟ್ಟಿತು. ಕ್ರಿ.ಶ. ೧೬೦೯ರ ಕೊಪ್ಪಳದ ಒಂದು ಶಾಸನವು ೨ನೆಯ ಇಬ್ರಾಹೀಂ ಅದಿಲ್‌ಷಾನ ಆಡಳಿತದಲ್ಲಿ ಯಾಕೂತನೆಂಬುವನು ಅಧಿಕಾರಿಯಾಗಿದ್ದಾಗ ಘಾಜಿಖಾನ್ ಎಂಬುವನು ಇಲ್ಲಿ ಒಂದು ಮಸೀದಿ ಕಟ್ಟಿಸಿದನು ಎಂದಿದೆ.

ಟಿಪ್ಪು ಶ್ರೀರಂಗಪಟ್ಟಣಕ್ಕೆ ಮರಳಿ ಹೋಗುವಾಗ ತನ್ನ ಪ್ರತಿನಿಧಿಯಾಗಿ ಮಹ್ಮದಖಾನ್ ಬಹಲಿಮಿಯನ್ನು ಕಿಲ್ಲೇದಾರನನ್ನಾಗಿ ನೇಮಿಸಿದನು. ಇವನು ತನ್ನ ಒಡೆಯನ ಸ್ಮರಣಾರ್ಥ ಕೊಪ್ಪಳದಲ್ಲಿ ಸುಲ್ತಾನ ದರವಾಜಾ ಮತ್ತು ಚಾಂದ ಕುಂಟಾಗಳನ್ನು ಕಟ್ಟಿಸಿದುದಾಗಿ ಕೋಟೆಯ ಮೇಲಿನ ಮೂರು ಶಾಸನಗಳು ಹೇಳುತ್ತಿವೆ.

ಇತರ ಕಡೆಯ ಸುಮಾರು ಹತ್ತು ಶಾಸನಗಳು ಶಿಲಾಹಾರರು, ಅಲಿಂದವೆಡಂಗ, ವೀರರಾಮ ದೇವರಸ ಮೊದಲಾದವರನ್ನು "ಕೊಪಣಪುರವರಾಧೀಶ್ವರರು" ಎಂದು ಉಲ್ಲೇಖಿಸುತ್ತಿವೆ. ಇವರ ಮತ್ತು ಕೊಪ್ಪಳದ ಸಂಬಂಧ ಯಾವ ಶಾಸನಗಳಿಂದಲೂ ಸ್ಪಷ್ಟವಾಗುವುದಿಲ್ಲ.

ರಾಯಚೂರು ಜಿಲ್ಲೆಯ ಶಾಸನಗಳ ಒಟ್ಟಾರೆ ರಾಜಕೀಯ ಅಭ್ಯಾಸ ಇಡೀ ಕನ್ನಡ ನಾಡಿನ ಚರಿತ್ರೆಯನ್ನು ಕನ್ನಡಿಯಲ್ಲಿ ಕರಿಯನ್ನು ಹಿಡಿದು ತೋರುವಂತಿದೆ.

ಕನ್ನಡ ನಾಡಿನ ಚರಿತ್ರೆಯಲ್ಲಿ ಇತರೆಡೆಗಳಲ್ಲಿ ಬಾರದ, ಇಲ್ಲಿಯ ಶಾಸನಗಳು ಮಾತ್ರ ಉಲ್ಲೇಖಿಸುವ ಈ ಕೆಲವು ವಿಶೇಷ ಅಂಶಗಳನ್ನು ಈ ರೀತಿ ಗುರುತಿಸಬಹುದು:

೧. ಅಶೋಕನ ಮೂರು ಶಾಸನಗಳು ಈ ನಾಡಿನಲ್ಲಿ ದೊರೆತಿದ್ದು ಅವುಗಳಲ್ಲಿ ಮಸ್ಕಿಯ ಶಾಸನದಿಂದ ಇವು ಅಶೋಕನ ಶಾಸನಗಳೇ ಎಂಬುದನ್ನು ಗುರುತಿಸಲು ಸಾಧ್ಯವಾಯಿತು. ಈ ಶಾಸನಗಳಿಂದ ಈ ನಾಡು ಅಶೋಕನ ಅಡಳಿತಕ್ಕೊಳಪಟ್ಟಿತ್ತು, ಇವು ಅವನ ರಾಜ್ಯದ ಮೇರೆಯನ್ನು ತಿಳಿಸುತ್ತಿವೆ ಎಂಬುದೂ ಖಚಿತವಾಯಿತು.

೨. ಈ ನಾಡಿನ ಯಲಬುರ್ಗಿ, ಮಾದಿನೂರು, ಕರಡಿಕಲ್, ಮೊರಟ, ರಾಯಚೂರು ಮತ್ತು ಮಸ್ಕಿಗಳು ಬೇರೆ ಬೇರೆ ಕಾಲದಲ್ಲಿ ರಾಜಧಾನಿಗಳಾಗಿದ್ದವು. ಕಲ್ಯಾಣವು ರಾಜಧಾನಿಯಾದುದು ೧ನೆಯ ಸೋಮೇಶ್ವರನ ಕಾಲಕ್ಕೆ ಎಂಬುದೂ ಇಲ್ಲಿಯ ಶಾಸನಗಳಿಂದ ಸ್ಪಷ್ಟವಾಯಿತು.

೩. ಕಲ್ಯಾಣ ಚಾಲುಕ್ಯ ಅರಸು ಜಯಸಿಂಹನಿಗೆ ಮಹಾದೇವಿ ಮತ್ತು ಸೋಮಲದೇವಿಯರೆಂಬ ರಾಣಿಯರೂ, ೧ನೆಯ ಸೋಮೇಶ್ವರನಿಗೆ ಚಾಮಲದೇವಿಯೆಂಬ ರಾಣಿಯೂ, ನಾಲ್ವಡಿ ಸೋಮೇಶ್ವರನಿಗೆ ರೆಬ್ಬಲದೇವಿಯೆಂಬ ರಾಣಿಯೂ ಇದ್ದ ಬಗ್ಗೆ ಇಲ್ಲಿಯ ಶಾಸನಗಳು ಆಧಾರ ಒದಗಿಸುತ್ತಿವೆ.

೪. ೬ನೆಯ ವಿಕ್ರಮಾದಿತ್ಯನ ರಾಣಿ ಅಬ್ಬಲದೇವಿ ಈ ಪ್ರದೇಶದ ಕೆಲವು ಭಾಗಗಳನ್ನಾಳುತ್ತಿದ್ದಳು.

೫. ಸಿಂದರು ಈ ನಾಡಿನ ವಿಶೇಷ ಕೊಡುಗೆಯಾಗಿದ್ದಾರೆ.

## ಸಾಹಿತ್ಯಿಕ

ರಾಯಚೂರ ಜಿಲ್ಲೆಯ ಶಾಸನಗಳ ಸಾಹಿತ್ಯಿಕ ಅಭ್ಯಾಸವನ್ನು ೧. ಶಾಸನೋಕ್ತ ಕವಿಗಳು, ೨. ಶಾಸನಕವಿಗಳು ೩. ಶಾಸನದಲ್ಲಿಯ ಕಾವ್ಯಾಂಶಗಳು ಎಂಬ ಭಾಗಗಳಾಗಿ ವಿಂಗಡಿಸಿ ಅಭ್ಯಾಸಿಸಬಹುದು.

### ೧. ಶಾಸನೋಕ್ತ ಕವಿಗಳು

ಇಲ್ಲಿ ಶಾಸನಗಳು ಬಹಳಷ್ಟು ಜನ ಕವಿಗಳನ್ನು ಉಲ್ಲೇಖಿಸುವುದಿಲ್ಲವಾದರೂ ಉಲ್ಲೇಖಿತರಾದವರು ಮಾತ್ರ ಪ್ರಮುಖರು. ಕೊಪ್ಪಳದ ಪಾಲ್ಕೀಗುಂಡಿನ ಬಂಡೆಯ ಮೇಲೆ ಪಾದಗಳ ಬಳಿ ಇರುವ ಒಂದು ಶಾಸನ 'ಜಟಾಸಿಂಹನಂದಿ ಆಚಾರ್ಯರ ಪಾದವ ಚಾವಯ್ಯ ಮಾಡಿಸಿದ' ಎಂದಿದೆ. ಈ ಜಟಾಸಿಂಹನಂದಿ ಸಂಸ್ಕೃತದ "ವರಾಂಗಚರಿತೆ"ಯ ಕರ್ತೃವಾಗಿರಬೇಕೆಂದು ಡಾ. ಎ.ಎನ್. ಉಪಾಧ್ಯೆ ಮೊದಲಾದ ಪಂಡಿತರ ಅಭಿಪ್ರಾಯ.

ಕ್ರಿ.ಶ. ೮೭೯ರ ೨ನೆಯ ಕೃಷ್ಣನ ಕಾಲದ ಶಾಸನವೊಂದು ಅರಕೇರಿಯಲ್ಲಿ ದೊರೆತಿದ್ದು ಅಲ್ಲಿ ಬರುವ ಗುಣವರ್ಮ ಹರಿವಂಶ, ಶೂದ್ರಕಗಳ ಕರ್ತೃ ಗುಣವರ್ಮನೆ ಇರಬಹುದೆಂದು ಊಹೆ ಮಾಡಲಾಗಿದೆ.

೧೨ನೆಯ ಶತಮಾನದ ಶರಣರಲ್ಲಿ ಪ್ರಮುಖರಾದ ಶಂಕರ ದಾಸಿಮಯ್ಯ, ಜೇಡರ

ದಾಸಿಮಯ್ಯ ಮತ್ತು ಮಸಣಿಯಮೇಶ್ವರ ಚಿಕ್ಕಯ್ಯ ಇವರು "ಕ್ರಮವಾಗಿ ನವಿಲೆ (ಲಿಂಗಸಗೂರು ತಾಲೂಕು), ಗಬ್ಬೂರು (ದೇವದುರ್ಗ ತಾಲೂಕು), ದೇವರಗುಡಿ (ಸಿಂಧನೂರು ತಾಲೂಕು)ಯ ಶಾಸನಗಳಲ್ಲಿ ಉಲ್ಲೇಖಗೊಂಡಿದ್ದಾರೆ..."

### ೨. ಶಾಸನಕರ್ತೃಗಳು

ಕ್ರಿ.ಶ. ಸು. ೧೧೭೭ರ ಕೌಲೂರ ಶಾಸನ ಚತುರ್ಭಾಷಾ ಚಕ್ರವರ್ತಿ ಕವಿಕಂದರ್ಪನದಾಗಿದೆ. ಬೇವಿನಹಳ್ಳಿ ತಾಮ್ರ ಶಾಸನವನ್ನು (೧೫೪೩) ಸ್ವಯಂಭೂಸಭಾಪತಿ, ಇಟಗಿಯಲ್ಲಿಯ ತಾಮ್ರ ಶಾಸನವನ್ನು (೧೧೪೩) ಆದಿತ್ಯದೇವನೆಂಬುವರು ರಚಿಸಿದ್ದಾರೆ.

### ೩. ಶಾಸನ ಸಾಹಿತ್ಯ

ಇಲ್ಲಿಯ ಹಲವು ಶಾಸನಗಳು ಹಲವಾರು ಕಂದ, ವೃತ್ತಗಳನ್ನೊಳಗೊಂಡು ಚಿಕ್ಕ ಚಂಪೂಕಾವ್ಯಗಳ ಹಾಗೆ ತೋರುತ್ತವೆ. ಅವುಗಳಲ್ಲಿ ಕ್ರಿ.ಶ. ೧೨೭೦ರ ಅಳವಂಡಿ ಶಾಸನವು "ವಿಳಸಿತ ವೀರಕಾಮಿನಿಗೆ ನಲ್ಲ" ನೆನಿಸಿದ ಜಗದೇಕಮಲ್ಲನನ್ನು ಬಣ್ಣಿಸಿದೆ.

ಯಲಬುರ್ಗಿ ತಾಲೂಕಿನ ಮುಧೋಳ ಗ್ರಾಮದ ಒಂದು ಶಾಸನದಲ್ಲಿ ಯಲಬುರ್ಗಿಯ ಸಿಂದವಂಶ ಪೆರ್ಮಾಡಿ ರಾಜನ ಸೋಮನೆಂಬ ದಂಡನಾಯಕನ ವರ್ಣನೆ ಬರುತ್ತದೆ. ಅಲ್ಲಿ ಉತ್ಪ್ರೇಕ್ಷೆಗಳ ಮಾಲಿಕೆಯನ್ನು ಹೆಣೆದು ಆತನ ಖಡ್ಗದ ತೇಜಸ್ಸನ್ನು ಮನಂಬುಗುವಂತೆ ಚಿತ್ರಿಸಲಾಗಿದೆ.

ಈ ಭಾಗದ ಶಿಲ್ಪ ಕಲಾವೈಭವದ ಹೆಮ್ಮೆಯ ಪ್ರತೀಕದಂತಿರುವ ಇಟಗಿಯ ಮಹಾದೇವ ಮಂದಿರವನ್ನು ಕ್ರಿ.ಶ. ೧೧೧೨ರಲ್ಲಿ ೬ನೆಯ ವಿಕ್ರಮಾದಿತ್ಯನ ಅತ್ಯಂತ ನಂಬಿಗಸ್ಥನಾದ, ರಾಜ ವಿದ್ಯಾಗುರು ಎಂದು ಹೊಗಳಿಸಿಕೊಂಡ ಮಹಾದೇವದಂಡನಾಯಕ ಕಟ್ಟಿಸಿದ. ಮೈಸೂರಿನ ಹಳೇಬೀಡನ್ನು ಬಿಟ್ಟರೆ ಕನ್ನಡ ನಾಡಿನಲ್ಲಿ ಇದೇ ಅತ್ಯಂತ ಸುಂದರವಾದ ದೇವಾಲಯವೆಂದು ಕಸಿನ್ಸ್ ಹೊಗಳಿರುವ ಈ ದೇವಾಲಯವನ್ನು ಅಲ್ಲಿಯ ಒಂದು ಶಾಸನ 'ದೇವಾಲಯಗಳ ಚಕ್ರವರ್ತಿ' ಎಂದು ಕರೆದಿದೆ. 'ಬಹುಧರ್ಮಧೇನುನಿವಹಕಾಡುಂಬೊಲ'ವಾಗಿರುವ ಬೆಳ್ವೊಲದಲ್ಲಿಯ ಇಟಗಿಯ ಈ ದೇವಾಲಯವನ್ನು 'ಆದಿಶೇಷನ ಹೆಡೆಯವರೆಗೂ ಬುನಾದಿ ತೆಗೆದು, ಸಮುದ್ರವನ್ನೆ ತಿದ್ದಿ, ಕುಲಪರ್ವತಗಳನ್ನೆಲ್ಲಾ, ಗುಂಡುಗಲ್ಲಿಕ್ಕಿ, ದಿಗ್ದಂತಿಗಳನ್ನೇ ತಳಗಂಬಗಳಾಗಿ ಮಾಡಿ ಹಿಮಾಲಯವನ್ನೇ ನಿರ್ಮಿಸಿದಂತೆ ನಿರ್ಮಿಸಿದರಂತೆ. ಇಂಥದನ್ನು ಬ್ರಹ್ಮನೂ ನಿರ್ಮಿಸಲಾರನೆಂದೂ ಇದು ಶಿಲ್ಪಕರ್ಮನಿಗೆ ಇನ್ನು ಮುಂದೆ ಮಾದರಿಯಾಯಿತೆಂದೂ ಆ ಶಾಸನ ಬಣ್ಣಿಸಿರುವಲ್ಲಿ ಕಾವ್ಯಕಲ್ಪನೆ ಗರಿಗೆದರಿ ಹಾರಾಡಿದಂತಿದೆ.

### ಸಾಂಸ್ಕೃತಿಕ

ಇಲ್ಲಿಯ ಶಾಸನಗಳ ಸಾಂಸ್ಕೃತಿಕ ಅಭ್ಯಾಸವನ್ನು ಇಲ್ಲಿಯ (ಪುಣ್ಯಸ್ಥಳ, ಘಟಿಕಾ ಸ್ಥಾನಗಳು) ಪ್ರಮುಖ ವ್ಯಕ್ತಿಗಳು, ಪ್ರಮುಖ ಸ್ಥಳಗಳು ಇತರ ಎಂದು ವಿಭಜಿಸಿ ಅಭ್ಯಸಿಸಬಹುದು.

ಅಂದಿನ ಧರ್ಮಸಮನ್ವಯ ದೃಷ್ಟಿಗೆ ಒಳ್ಳೆಯ ನಿದರ್ಶನವೆನ್ನುವಂತಿದೆ ಜಗದೇಕಮಲ್ಲ ಜಯಸಿಂಹನ ಮನೆತನ. ಮೊಸಳಿಕಲ್ ೩೦೦ರ ಭತ್ತಗ್ರಾಮವಾಗಿದ್ದ ಮಾನ್ವಿ ತಾಲೂಕಿನ ಬಲ್ಲಟ್ಟಿಗಿಯಲ್ಲಿ ಜಗದೇಕಮಲ್ಲಜಯಸಿಂಹನರಸಿ ಮಹಾದೇವಿ ತ್ರೈಪುರುಷದೇವರನ್ನು ಪ್ರತಿಷ್ಠಾಪಿಸಿದಳೆಂದು ಅಲ್ಲಿಯ ಒಂದು ಶಾಸನ ಹೇಳುತ್ತಿದೆ. ಅವನ ಇನ್ನೊಬ್ಬ ಅರಸಿ ಸೋಮಲದೇವಿ ಅಲ್ಲಿಯ ಜೈನಬಸದಿಯೊಂದಕ್ಕೆ ಭೂದಾನವಿತ್ತುದನ್ನು ಇನ್ನೊಂದು ಶಾಸನ ಉಲ್ಲೇಖಿಸುತ್ತದೆ.

ಜಯಸಿಂಹ ಗುರು ಸದ್ಯೋಜಾತರ ಉಪದೇಶದ ಮೇರೆಗೆ ಚಂದೇಶ್ವರದೇವರಿಗೆ ಕೆಲವು ದತ್ತಿಗಳನ್ನು ಹಾಕಿಕೊಟ್ಟುದಾಗಿ ಮತ್ತೊಂದು ಶಾಸನ ಹೇಳುತ್ತಿದೆ.

ದೇವದುರ್ಗ ತಾಲೂಕಿನ ಗಬ್ಬೂರು ೧೨-೧೩ನೆಯ ಶತಮಾನದಲ್ಲಿ ಗೋಪುರಗ್ರಾಮವೆಂದು ಖ್ಯಾತಿ ಪಡೆದಿದ್ದಿತು; ಹಲವಾರು ದೇವಾಲಯಗಳ ಆಗರವಾಗಿದ್ದಿತು.

ಅಶೋಕನ ಕಾಲಕ್ಕೆ ಬೌದ್ಧರ ಕೇಂದ್ರವಾಗಿದ್ದ ಮಸ್ಕಿ ೧೧ನೆಯ ಶತಮಾನಕ್ಕಾಗಲೆ ಜೈನ ಧರ್ಮದ ಕೇಂದ್ರವಾಗಿತ್ತು ಎನ್ನುವುದಕ್ಕೆ ಅಲ್ಲಿ ದೊರೆಯುವ ಎರಡು ಶಾಸನಗಳೇ ಸಾಕ್ಷಿ.

ಕುಷ್ಟಗಿ ತಾಲೂಕಿನ ಪುರಗ್ರಾಮದ ಸೋಮೇಶ್ವರದೇವಾಲಯದ ಉಲ್ಲೇಖ ಹಲವು ಶಾಸನಗಳಲ್ಲಿ ಬಂದಿದೆ.

ಪ್ರಾಚೀನಕಾಲದಿಂದ ಜೈನರ ಆದಿತೀರ್ಥ, ಮಹಾತೀರ್ಥ, ಪುಣ್ಯಕ್ಷೇತ್ರವೆಂದು ಪ್ರಸಿದ್ಧಿ ಪಡೆದಿದ್ದ ಕೊಪ್ಪಳನಾಡಿಗೆ ಕರಹಾಡ, ಕೊಲ್ಲಾಪುರ, ತಂಗುಳಿ, ಮುಳಗುಂದ ಮೊದಲಾದ ಪ್ರದೇಶಗಳಿಂದ ಯಾತ್ರೆಗೆ ಬಂದವರನ್ನು ಕ್ರಿ.ಶ. ಸು. ೭ನೆಯ ಶತಮಾನದಿಂದ ಇತ್ತೀಚಿನವರೆಗಿನ ಹಲವು ಶಾಸನಗಳು ಉಲ್ಲೇಖಿಸುತ್ತಿವೆ. ಹಾಗೆಬಂದು ಇಲ್ಲಿ ಹಲವರು ಮರಣವಪ್ಪಿದರು. ಅವರಿಗಾಗಿ ನಿಷಿಧಿಗೆ ನಿಲ್ಲಿಸಿದ, ಪಾದ ಕೊರೆಯಿಸಿದ ವಿವರವನ್ನು ಇಲ್ಲಿಯ ಶಾಸನಗಳು ಕೊಡುತ್ತಿವೆ. ಮೊನ್ನೆ ದಿಡ್ಡೀಕೇರಿಯಲ್ಲಿ ದೊರೆತ ಸುಮಾರು ೩೫ ಶಾಸನಗಳಲ್ಲಿ ತ್ರಿಭುವನಚಂದ್ರ ಪಂಡಿತ, ಸೋಮದೇವ ಮುನಿ, ನೊಳಂಬಪೆಟ್ಟಿ, ಗಂಗ ಪೆರ್ಮಾಡಿಗನರಸಿ, ಬೂತುಗನರಸಿ ಮೊದಲಾದವರ ಉಲ್ಲೇಖ ಬರುತ್ತದೆ. ಇವುಗಳಲ್ಲಿ ಬಹಳಷ್ಟು ಸಮಾಧಿ ಮರಣಕ್ಕೆ ಸಂಬಂಧಿಸಿದ ಶಾಸನಗಳು. ಇಲ್ಲಿ ೭೭೦ ಜಿನಾಲಯಗಳಿದ್ದವೆಂದು ಒಂದು ಶಾಸನ ಹೇಳಿದರೆ, ಶಾಂತಲದೇವಿಯರ ಬಸದಿ, ಅರಸಿಯ ಬಸದಿ, ತೀರ್ಥದ ಬಸದಿ, ತಿಮ್ಮಬ್ಬರಸಿಯ ಬಸದಿ, ನಾಗದೇವನ ಜಿನಾಲಯ, ಕುಶಜಿನಾಲಯ, ಪುಷ್ಪದಂತ ಜಿನಾಲಯ, ಪಾರ್ಶ್ವನಾಥ ಬಸದಿ, ಜಯಧೀರ ಜಿನಾಲಯ, ಚಂದ್ರನಾಥ ಜಿನಾಲಯಗಳನ್ನು ಬೇರೆ ಬೇರೆ ಶಾಸನಗಳು ಕಾವ್ಯಗಳು ಉಲ್ಲೇಖಿಸುತ್ತಿವೆ. ಆದರೆ ಇಲ್ಲಿ ಈಗ ಉಳಿದಿರುವುದು ಪಾರ್ಶ್ವನಾಥ ಬಸದಿ ಒಂದೇ.

ಈ ಪ್ರದೇಶದ ವೀರಶೈವಧರ್ಮದ ರಕ್ಷಾಬಂಧನದಂತಿರುವ ಶ್ರೀ ಗವಿಮಠದಲ್ಲಿ ಕ್ರಿ.ಶ. ೧೦೮೭ರ ಹೊಳೆಹಂಪಯ್ಯನ ಶಾಸನವಿದೆ.

ಯಲಬುರ್ಗಿ ತಾಲೂಕಿನ ಕುಕನೂರು ನವಲಿಂಗಗಳಿಂದಲೂ, ಒಂಬತ್ತು ಶಕ್ತಿಪೀಠಗಳಿಂದಲೂ ಕೂಡಿ ಶಿವಶಕ್ತಿಸುರತ್ ಸಂಪುಟ ಕ್ಷೇತ್ರವಾಗಿತ್ತೆಂದು ಅಲ್ಲಿಯ ಒಂದು ಶಾಸನ ಬಣ್ಣಿಸಿದೆ. ಅಲ್ಲಿಯ ನವಲಿಂಗ, ಕಲ್ಲೇಶ್ವರ ಮತ್ತು ಮಲ್ಲಿಕಾರ್ಜುನ ಗುಡಿಗಳು ಚಾಲುಕ್ಯ ಶಿಲ್ಪಕಲೆಯ ದ್ಯೋತಕವಾಗಿವೆ. ಶಾಸನಗಳಲ್ಲಿ ವಿಶೇಷವಾಗಿ ಬಣ್ಣಿಸಲ್ಪಟ್ಟ ಜೇಷ್ಠಾದೇವಿ ಅಥವಾ ಮಹಾಮಾಯೆ ಇಲ್ಲಿಯ ಅಧಿದೇವತೆಯಾಗಿದ್ದಾಳೆ. ಅಲ್ಲಿದ್ದ ಮಹಾದೇವ ನಾಯಕನನ್ನು ಕ್ರಿ.ಶ. ೧೧೭೦ರ ಒಂದು ಶಾಸನ 'ವಿದ್ಯಾವಿನಯ ಗುಣಸಮೃದ್ಧ'ನೆಂದು ಕರೆದಿದೆ. ಕ್ರಿ.ಶ. ೧೨೩೧ರ ಸಿಂಘಣನ ಕುಕನೂರು ಶಾಸನ ಅಲ್ಲಿನ ೧೦೦೦ ಮಹಾಜನರಿಗೆ ಹಲವು ಶ್ರೀಮಂತರೂ ಅಧಿಕಾರಿಗಳೂ ನೀಡಿದ ದಾನವನ್ನು ತಿಳಿಸುತ್ತಿದೆ.

ಇಂದಿನ ಕೌಲೂರನ್ನು ಶಾಸನಗಳು ಕೌರವಪುರ ಅಥವಾ ಕೌರೂರು ಎಂದು ಕರೆದಿವೆ. ಅದನ್ನು ಅನಾದಿ ಅಗ್ರಹಾರವೆಂದೂ, ತೆಂಕಣ ಅಯ್ಯಾವೊಳೆಯೆಂದೂ ಒಂದು ಶಾಸನ ಬಣ್ಣಿಸುತ್ತಿದೆ. ಆ ಊರಿನ ೫೦೦ ಜನ ಮಹಾಜನರು "ತೋಳ್ಬಲದಿಂ ಸಮಗ್ರ ಜಸದಿಂ. ಗಾಂಭೀರ್ಯದಿಂ ಧೈರ್ಯದಿಂ" ಶೋಭಿಸಿದ್ದರಂತೆ.

ಸದಾಶಿವ, ವಿಷ್ಣು, ಅಗ್ನಿ ಮುಂತಾದ ದೇವತೆಗಳು ಮನುಷ್ಯರ ರೂಪದಲ್ಲಿ ಇಲ್ಲಿಗೆ ಬಂದರೇನೋ ಎಂಬ ಭಾವವನ್ನು ಕೊಡುತ್ತಿವೆ ಎಂದು ಅಲ್ಲಿಯ ಒಂದು ಶಾಸನ ಬಣ್ಣಿಸಿದೆ.

ಯಲಬುರ್ಗಿ ತಾಲೂಕಿನ ಕಲ್ಲೂರಿನ ಕಲ್ಲಿನಾಥ ದೇವಾಯವು ೧೨ನೆಯ ಶತಮಾನದಲ್ಲಿಯೇ ಜಾಗ್ರತಸ್ಥಳವಾಗಿದ್ದ ಬಗ್ಗೆ ಶಾಸನಾಧಾರಗಳು ದೊರೆಯುತ್ತಿವೆ. ಆ ಕಲ್ಲಿನಾಥನ ಆಶ್ರಯದಲ್ಲಿ ಬಿಜ್ಜಳನನ್ನು ಕೊಂದ ಮೊಲ್ಲೆಬೊಮ್ಮಯ್ಯ ಬೆಳೆದುಬಂದ ಎಂಬುದು ಇತ್ತೀಚೆಗೆ ಪ್ರಕಟವಾದ "ಮೊಲ್ಲೆಬೊಮ್ಮಯ್ಯಗಳ ಕಾವ್ಯ"ದಿಂದ ಸ್ಪಷ್ಟವಾಗಿದೆ.

ಮಾದಿನೂರಿನ ತ್ರೈಪುರುಷ ದೇವಾಲಯ, ಕೌಲೂರಿನ ಹರಿಹರದೇವಾಲಯ ಮೊದಲಾದವು ಈ ನಾಡಿನ ಪರಧರ್ಮಸಹಿಷ್ಣುತೆಗೆ ಸಾಕ್ಷಿಯಾಗಿವೆ.

ಇಲ್ಲಿಯ ಶಾಸನಗಳಲ್ಲಿ ಆ ಕಾಲದ ಹಲವಾರು ಅಧಿಕಾರಿಗಳು ಉಲ್ಲೇಖಗಳೂ ಬಂದಿವೆ. ಅದರಿಂದ ಅಂದಿನ ಆಡಳಿತ ವ್ಯವಸ್ಥೆ ಹೇಗಿತ್ತು ಎಂಬುದರ ವಿವರ ತಿಳಿಯುತ್ತದೆ. ಹಲವಾರು ನಾಣ್ಯ ಅಳತೆಗಳ ವಿವರವೂ ಇಲ್ಲಿಯ ಶಾಸನಗಳಲ್ಲಿವೆ.

ಕ್ರಿ.ಶ. ೧೦೮೮ರ ಮುನಿರಾಬಾದ ಶಾಸನ ತುಂಗಭದ್ರಾನದಿಗೆ ಕಾಲುವೆ ಮಾಡಿಸಿ, ಕೃಷಿಕರನ್ನು ತಣಿಸಿದುದನ್ನು ಹೇಳುತ್ತಿದೆ. ಕುಷ್ಟಗಿ ತಾಲೂಕಿನ ಪುರಗ್ರಾಮದ ೧೫ನೆಯ ಶತಮಾನದ ಒಂದು ಶಾಸನ ಆ ಗ್ರಾಮಕ್ಕೆ ಕೆರೆಯನ್ನೂ ಆ ಕೆರೆಗೆ ತೂಬು ಮತ್ತು ಕಾಲುವೆಗಳನ್ನೂ ಮಾಡಿಸಿದ ಸೋಮಾಯಿದೇವನನ್ನೂ ಹೆಸರಿಸಿದೆ.

ಹೀಗೆ ಈ ನಾಡಿನ ಇತಿಹಾಸ, ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಎಳೆ ಎಳೆಯಾಗಿ ತನ್ನ ಒಡಲಿನಲ್ಲಿ ಧರಿಸಿಕೊಂಡು ನಿಂತಿರುವ ಇಲ್ಲಿಯ ಎಲ್ಲ ಶಾಸನಗಳನ್ನು ಹುಡುಕಿ, ಪ್ರಕಟಿಸಿ ಆ ಎಳೆಗಳನ್ನೆಲ್ಲ ಜೋಡಿಸಿ ಸಮಗ್ರ ಅಧ್ಯಯನವನ್ನು ಮಾಡುವ ಕಾಲ ಬರಬೇಕಿದೆ. ಅದು ತೀವ್ರ ಬರಲೆಂದು ಹಾರೈಸುವೆ.

# ಯಳವಟ್ಟಿಯ ಶಾಸನಗಳು

ಹನುಮಾಕ್ಷಿ ಗೋಗಿ

ಧಾರವಾಡ ಜಿಲ್ಲೆಯ ಹಾನಗಲ್ ತಾಲೂಕಿನ ಒಂದು ಚಿಕ್ಕಹಳ್ಳಿ ಯಳವಟ್ಟಿ. ಹಿಂದೊಮ್ಮೆ ಅದು ಧರ್ಮ, ವಾಸ್ತುಶಿಲ್ಪ-ಶಿಲ್ಪಕಲೆಗಳ ಬೀಡಾಗಿತ್ತು ಎನ್ನುವುದನ್ನು ಅಲ್ಲಿಯ ಸುಂದರವಾದ ದೇಗುಲಗಳು, ಶಿಲ್ಪಗಳು, ಶಾಸನಗಳು ಇಂದಿಗೂ ಸಾರುತ್ತವೆ. ಅವುಗಳ ಅವಲೋಕನ ಮತ್ತು ಶಾಸನಗಳ ಪ್ರಕಟನೆ ಈ ಲೇಖನದ ಉದ್ದೇಶವಾಗಿದೆ.

ಎತ್ತರವಾದ ದಿಬ್ಬದ ಮೇಲೆ ಕಲ್ಯಾಣ ಚಾಲುಕ್ಯರ ಪ್ರಾರಂಭಕಾಲದ ಚಂದ್ರನಾಥ ಬಸದಿಯನ್ನು ಕಾಣುತ್ತೇವೆ. ಮುಖಮಂಟಪ, ನವರಂಗಗಳಿಂದ ಕೂಡಿದ ಈ ಬಸದಿಯನ್ನು ಈ ವರ್ಷ ಜೀರ್ಣೋದ್ಧಾರಗೊಳಿಸಿದ್ದು, ಗರ್ಭಗೃಹದಲ್ಲಿರುವ ಮೂರ್ತಿ ಇತ್ತೀಚಿನದು. ಆವರಣದಲ್ಲಿ ಲಿಪಿ ಸಹಿತ ನಾಲ್ಕು ನಿಷಧಿಗಲ್ಲುಗಳಿದ್ದು ಲಿಪಿರಹಿತ ಎರಡು ನಿಷಧಿಗಲ್ಲುಗಳು ಒಂದು ಮೂರಡಿ ಎತ್ತರದ ಪಾರ್ಶ್ವನಾಥ ವಿಗ್ರಹವಿದೆ. ಬಸದಿಯ ನಿರ್ಮಾಣ, ವಿಗ್ರಹ ಪ್ರತಿಷ್ಠಾಪನೆ ಕುರಿತ ಉಲ್ಲೇಖ ಇಲ್ಲಿಯ ಯಾವುದೇ ಶಾಸನಗಳಲ್ಲಿಲ್ಲ.

ಊರ ಮಧ್ಯದಲ್ಲಿರುವ ರಾಮಲಿಂಗೇಶ್ವರ ದೇವಸ್ಥಾನವೂ ಕಲ್ಯಾಣಚಾಲುಕ್ಯರ ಕಾಲದ್ದೇ ಆಗಿದೆ. ದೇವಸ್ಥಾನದ ಎದುರಲ್ಲಿ ಇರುವ ಶಾಸನದಲ್ಲಿ ಇದೇ ದೇವರಿಗೆ ಬಿಟ್ಟ ದತ್ತಿಯ ಉಲ್ಲೇಖ ಮಾತ್ರವಿದ್ದು ದೇಗುಲ ನಿರ್ಮಾಣ-ಲಿಂಗ ಪ್ರತಿಷ್ಠಾಪನೆಗಳ ವಿವರಗಳಿಲ್ಲ.

ರಾಮಲಿಂಗೇಶ್ವರ ದೇವಸ್ಥಾನದ ಎದುರಿಗೆ ಸುಂದರವಾದ ೬ ಗೋಸಾಸ ಕಲ್ಲುಗಳಿವೆ. ೫' × ೨ ೧/೨' ಗಾತ್ರದ ಈ ಕಂಬಗಳಲ್ಲಿ ಮೇಲೆ ಸ್ವಸ್ತಿತ ಸಹಿತವಾದ ಪೂರ್ಣಕುಂಭಗಳಿದ್ದು ಕೆಳಗೆ ನೇಗಿಲಿನ ಚಿತ್ರವಿದ್ದು ಪೂರ್ಣ ಕೆಳಗೆ ಮತ್ತೊಂದು ಕುಂಭದ ಚಿತ್ರಗಳಿವೆ.

ಗ್ರಾಮದೇವತೆ ಗುಡಿಯಲ್ಲಿ ವೀರಗಲ್ಲೊಂದಿದ್ದು ಲಿಪಿಯಿದ್ದರೂ ಪೇಂಟ್ ಬಳಿದಿರುವುದರಿಂದ 'ರಾ ಮಗ' ಎನ್ನುವ ಅಕ್ಷರಗಳು ಮಾತ್ರ ಕಾಣಿಸುತ್ತವೆ. ಜಿ.ಡಿ. ನಾಡಕರ್ಣಿ ಅವರ ಹಿತ್ತಲಿನಲ್ಲಿ ವೀರಗಲ್ಲೊಂದಿದ್ದು ಲಿಪಿಯಿಲ್ಲ. ಗುಡಿಯ ಹಿಂದಿನ ಬಯಲಲ್ಲಿ ಲಿಪಿರಹಿತ ಮಾಸ್ತಿಕಲ್ಲೊಂದು ನಿಂತಿದೆ.

ಮಾರುತಿ ಗುಡಿಯಲ್ಲಿ ನಿಷಧಿಗಲ್ಲೊಂದಿದ್ದು ಲಿಪಿಯಿಲ್ಲ. ಊರಮಧ್ಯದ ರಸ್ತೆ ಬದಿಯ ಗಟಾರದಲ್ಲೊಂದು ನಿಷಧಿಗಲ್ಲಿದ್ದು ಅದರಲ್ಲಿಯೂ ಲಿಪಿಯಿಲ್ಲ. ಚಂದ್ರನಾಥ ಬಸದಿಯಲ್ಲಿ ಲಿಪಿಯಿರದ ಎರಡು ನಿಷಧಿಗಲ್ಲುಗಳಿವೆ. ಇದರಲ್ಲಿ ಒಂದು ೩' × ೧ ೧/೨' ಗಾತ್ರದ ಕರಿಕಲ್ಲಿನದಾಗಿದೆ. ಮೇಲಿನ ೧ ಪಟ್ಟಿಕೆಯಲ್ಲಿ ಸೂರ್ಯ, ಮುಕ್ಕೊಡೆ, ಚಂದ್ರರ ಚಿತ್ರಗಳಿವೆ. ಮುಕ್ಕೊಡೆಯ ಕೆಳಗೆ

ಪದ್ಮಾಸನಸ್ಥ ಜಿನಬಿಂಬವಿದ್ದು ಎಡಬಲಗಳಲ್ಲಿ ತಲೆಯ ಹತ್ತಿರ ಚಾಮರಗಳಿವೆ. ಪಕ್ಕದಲ್ಲಿ ಕೈಮುಗಿದು ನಿಂತ ಭಕ್ತರಿದ್ದಾರೆ. ಕೆಳಗಿನ ಪಟ್ಟಿಕೆಯಲ್ಲಿ ಕೈಮುಗಿದು ಇಬ್ಬರು ಕುಳಿತಿದ್ದು ಒಬ್ಬನ ತೊಡೆಯ ಮೇಲೆ ಪಿಂಛ ಇರುವುದರಿಂದ ಗುರು ಮತ್ತು ಶಿಷ್ಯರೆಂದು ಗುರುತಿಸಬಹುದು. ಇನ್ನೊಂದು ಗಾತ್ರದ ಕರಿಕಲ್ಲಾಗಿದ್ದು ಮೇಲಿನ ಭಾಗದಲ್ಲಿ ಸೂರ್ಯ-ಚಂದ್ರರಿದ್ದು ಮಧ್ಯದಲ್ಲಿ ಮುಕ್ಕೊಡೆ ಇದ್ದು ಕೆಳಗೆ ಚಾಮರಗಳಿವೆ. ಚಾಮರಗಳ ಕೆಳಗೆ ಪೀಠದ ಮೇಲೆ ಕುಳಿತ ಪದ್ಮಾಸನಸ್ಥ ಪ್ರಭಾವಳಿ ಸಹಿತ ಜಿನಬಿಂಬವಿದೆ. ಅಕ್ಕಪಕ್ಕದಲ್ಲಿ ಭಕ್ತರಿಬ್ಬರು ಕುಳಿತಿದ್ದಾರೆ (ಬಹುಶಃ ಗುರು-ಶಿಷ್ಯರಾಗಿರಬಹುದು)

ಧಾರವಾಡ ಜಿಲ್ಲೆಯ ಶಾಸನಸೂಚಿಯಲ್ಲಿ ಈ ಊರಿನ ೨ ಶಾಸನಗಳನ್ನು ARSIEಯ ೧೯೪೪-೪೫ರ ವರದಿಗಳಲ್ಲಿ ಉಲ್ಲೇಖಿಸಿದ್ದಾರೆಂದು ತಿಳಿಸಿ ಈ ಶಾಸನಗಳಾವುವೂ ಪ್ರಕಟಗೊಂಡಿಲ್ಲವೆಂದು ತಿಳಿಸಲಾಗಿದೆ. ಈ ಶಾಸನಗಳ ವಿವರ ಮತ್ತು ಪಠ್ಯಗಳು ಕೆಳಗಿನಂತಿವೆ.

## ಶಾಸನ ಸಂಖ್ಯೆ ೧

ಭೂಪಾಲ ಓಂಕಾರಪ್ಪ ರಾಯಪ್ಪನವರ ಇವರ ಹೊಲದಲ್ಲಿ ಬಿದ್ದ ಈ ಶಾಸನ ಕಲ್ಲನ್ನು ತಂದು ಈಗ ಬಸದಿಯ ಆವರಣದಲ್ಲಿ ಇಡಲಾಗಿದೆ. ೩೧/೨' × ೧೧/೨' ಗಾತ್ರದ ಕರಿಕಲ್ಲು ಇದಾಗಿದ್ದು ಮೇಲಿನ ೧ ಭಾಗದಲ್ಲಿ ಮೇಲೆ ಸೂರ್ಯ, ಚಂದ್ರ ಮುಕ್ಕೊಡೆಗಳಿವೆ. ಮುಕ್ಕೊಡೆಯ ಕೆಳಗೆ ಪದ್ಮಾಸನಸ್ಥ ತೀರ್ಥಂಕರನಿದ್ದು ತಲೆಯ ಎಡ ಬಲಗಳಲ್ಲಿ ಚಾಮರಗಳಿವೆ. ತೀರ್ಥಂಕರನ ಅಕ್ಕಪಕ್ಕದಲ್ಲಿ ಎಡಗಡೆ ಕೈಮುಗಿದು ಕುಳಿತ ಭಕ್ತನ ಚಿತ್ರ, ಬಲಗಡೆ ಕುಳಿತ ಭಕ್ತನೊಬ್ಬನ ಚಿತ್ರವಿದೆ. ಮಿತಿಯಿರದ ಈ ಶಾಸನವನ್ನು ಲಿಪಿ ಸ್ವರೂಪದಿಂದ ಸು ೧೧ನೆಯ ಶತಮಾನದ್ದೆಂದು ಹೇಳಬಹುದು.

ಪಾಠ ಕೆಳಗಿನಂತಿದೆ :-

೧. ಶ್ರೀ ಮೂಲಸಂಗ ದೇಸಿಯಗಣ
೨. ಪೊಸ್ತಕ ಗಛ ಕೊಂಡಕುಂನ್ದಾನ್ವಯದ ದೇವಕೀರ್ತ್ತಿ
೩. ಭಟ್ಟಾರಕ ದೇವರ ಗುಡ್ಡಂ ಸಿವಿರೆಸೆಟ್ಟಿಯರು
೪. ಆನ್ದಂ (ಆನನ್ದ) ಸಂವತ್ಸರದ ಆಷಾಢ ಶು
೫. ದ್ಧ ಪಂಛಮಿಯಾದಿವಾರದ
೬. ಪೂರ್ವ್ವಾಹ್ಣದಲಿ ಸಮಾಧಿ
೭. ವಿಧಿಇಂ ಸ್ವರ್ಗಸ್ತನಾದನು ಮಂ
೮. ಗಳ ಮಹಾ ಶ್ರೀ ಶ್ರೀ

## ಶಾಸನ ಸಂಖ್ಯೆ ೨

ಬಸದಿಯ ಆವರಣದಲ್ಲಿರುವ ೩೬" × ೧೪" ಗಾತ್ರದ ಕರಿಕಲ್ಲಿನ ನಿಷಧಿಕಲ್ಲಿದು. ಶಾಸನದ ಮೇಲ್ಭಾಗದಲ್ಲಿ ಸೂರ್ಯ, ಮುಕ್ಕೊಡೆ, ಚಂದ್ರರ ಚಿತ್ರಗಳಿವೆ. ಕೆಳಗೆ ಮಧ್ಯದಲ್ಲಿ ಪದ್ಮಾಸನಸ್ಥ ತೀರ್ಥಂಕರನಿದ್ದು ಎಡಬಲಗಳಲ್ಲಿ ಗುರುಶಿಷ್ಯರಿದ್ದು, ಜಿನಬಿಂಬದ ಎಡಬಲಗಳಲ್ಲಿ ಜೋಡಿ ಚಾಮರಗಳಿವೆ. ಇವೆಲ್ಲವುಗಳ ಕೆಳಗೆ ೬ ಸಾಲುಗಳ ಶಾಸನವಿದ್ದು, ಲಿಪಿಸ್ವರೂಪದಿಂದ ಸುಮಾರು ೧೧ನೆಯ ಶತಮಾನದ್ದೆಂದು ಗುರುತಿಸಬಹುದಾಗಿದೆ.

೧. ಶ್ರೀ ಮೂಲಸಂಘದ ದೇಸಿಯಗಣದ
೨. ಚಂದ್ರದೇವರ ಪ್ರಿಯಗುಡ್ಡ ಸೇನಬೋವ
೩. ಕೇತಯ್ಯನು ಆನಂದ ಸಂವತ್ಸರದ ಮಾ
೪. - - - - ಸು ಸಮಾಧಿವಿಧಿ -
೫. ರ ಮುಡಿಪಿ ಸ್ವರ್ಗಲೋಕ (ಪ್ರಾಪ್ತ)ನಾದ ಮಂ
೬. ಗಳ ಮಹಾ ಶ್ರೀ ಶ್ರೀ ಶ್ರೀ

**ಶಾಸನ ಸಂಖ್ಯೆ ೩**

ಬಸದಿಯ ಆವರಣದಲ್ಲಿರುವ ೬೦" × ೨೧" ಗಾತ್ರದ ಕರಿಕಲ್ಲಿನ ಮೇಲಿರುವ ನಿಷಧಿ ಶಾಸನವಿದಾಗಿದೆ. ಮೊದಲ ಪಟ್ಟಿಕೆಯಲ್ಲಿ ಮೂರು ಪೂರ್ಣ ಕುಂಭಗಳು ಮತ್ತು ಆಮಲಕಾಕಾರದ ಗೋಪುರವಿದೆ. ಎರಡನೆಯ ಪಟ್ಟಿಕೆಯಲ್ಲಿ ಎಡಬಲದಲ್ಲಿ ಗುರುಶಿಷ್ಯೆಯರು ಕೈಮುಗಿದು ಆಸನದಲ್ಲಿ ಕುಳಿತಿದ್ದು, ಮಧ್ಯದಲ್ಲಿ ಪದ್ಮಾಸನಸ್ಥ ತೀರ್ಥಂಕರ ಬಿಂಬವಿದ್ದು ಮೇಲೆ ಮುಕ್ಕೊಡೆಯಿದೆ. ತೀರ್ಥಂಕರನ ಭೂಜದ ಹತ್ತಿರ ಎಡಬಲಗಳಲ್ಲಿ ಒಬ್ಬೊಬ್ಬ ಚಾಮರಧಾರಿ ಯಕ್ಷರಿದ್ದಾರೆ. ಮೂರನೆಯ ಪಟ್ಟಿಕೆಯ ೩೧/೨" ಭಾಗದಲ್ಲಿ ೪ ಸಾಲುಗಳ ಶಾಸನವಿದೆ. ನಾಲ್ಕನೆಯ ಪಟ್ಟಿಕೆಯಲ್ಲಿ ಪಿಂಛವನ್ನು ತೊಡೆಯ ಮೇಲಿಟ್ಟುಕೊಂಡು ಕುಳಿತ ಗುರುವಿದ್ದು, ಎದುರಿಗೆ ಆಸನದ ಮೇಲೆ ಸ್ತ್ರೀಯೊಬ್ಬಳು ಕೈಮುಗಿದು ತುರುಬು, ಕರ್ಣಕುಂಡಲ, ಕಡಗ, ಕಂಕಣ, ಹಾರ, ಕಂಠಾಭರಣಗಳು ಮನಮೋಹಕವಾಗಿದ್ದು ಅರಸು ಮನೆತನದವಳಂತೆ ಕಾಣುತ್ತಾಳೆ. ಇವರಿಬ್ಬರ ಮಧ್ಯೆ ಅಟ್ಟವಣೆ ಕೋಲಿದ್ದು ಕೆಳಗೆ ಕಮಂಡಲವಿದೆ ಸಂಪೂರ್ಣ ಕೆಳಭಾಗ ಖಾಲಿಯಿದೆ.

೧. ಗಿರಿಬಾಣೇಂದ್ವಿಂದು ಸಂಖ್ಯ ಶಕಶರದುದಿತ ಮನ್ಮಥ ಸಂವತ್ಸರದ
೨. .... ಮಾಸು ಶಕಸಮಜ ನಿತ್ಯೇಕಾದಶಿ ..... ಕಂ
೩. ... ತಮಿರುಳು ಜಿನಾಂಘ್ರಿ ದಯಾಂಭೋಜದೊಳ್ ತಳ್ತಿರೆ .....
೪. ...... ಮಾದಿಯಗತೆ ದಿವಮಂ ಪೊಕ್ಕಳಾ ಸೋಮಿಯಕ್ಕ ......

**ಶಾಸನ ಸಂಖ್ಯೆ ೪**

ಭೂಪಾಲಪ್ಪನವರ ಹೊಲದಲ್ಲಿ ನಿಂತ ಕರಿಕಲ್ಲು ೪' × ೧೧/೨' ಗಾತ್ರದ್ದಾಗಿದೆ. ಮೇಲಿನ ಭಾಗದಲ್ಲಿ ಕಮಂಡಲು ಮತ್ತು ಕೊಡೆ ಹಿಡಿದ ವ್ಯಕ್ತಿಯ ಚಿತ್ರವಿದ್ದು ಅವುಗಳಿಗೂ ಮೇಲೆ ಸೂರ್ಯ-ಚಂದ್ರರಿದ್ದಾರೆ. ಕೆಳಗಿನ ೬" ಭಾಗದಲ್ಲಿ ಅಕ್ಷರಗಳಿವೆ. ಲಿಪಿಸ್ವರೂಪದಿಂದ ಸುಮಾರು ೧೫-೧೬ನೆಯ ಶತಮಾನದ ಅಕ್ಷರಗಳೆಂದು ಗುರುತಿಸಬಹುದು.

೧. ಜೀವಣೆಗೆಯ ವಿಠ್ಠರಸರ ಮಗ
೨. ಮಂಗಯ್ಯಗಳ ಮಾಂನ್ಯ
೩. ದ ಗದ್ದೆ

**ಶಾಸನ ಸಂಖ್ಯೆ ೫**

ಕೆರೆಯ ತೂಬಿನ ಸುಂದರವಾದ ಗಜಲಕ್ಷ್ಮಿ ಬಿಂಬದ ಕೆಳಗಿರುವ ಶಾಸನ ಇದಾಗಿದೆ. ೧೧/೨' ಎತ್ತರ ೪೧/೨' ಅಗಲದ ಕರಿಕಲ್ಲಿನ ಪಟ್ಟಿಕೆಯನ್ನು ಎರಡು ಕಂಬಗಳ ಮೇಲೆ ನಿಲ್ಲಿಸಲಾಗಿದೆ. ಗಜಲಕ್ಷ್ಮಿ ಬಿಂಬದ ಎಡಬಲಗಳಲ್ಲಿ ಮೊಸಳೆಯ ಚಿತ್ರಗಳಿದ್ದು ಮೊಸಳೆಗಳ ಮೇಲೆ ಒಬ್ಬೊಬ್ಬರು

ಕುಳಿತಿದ್ದಾರೆ. ಮೊಸಳೆಯ ಬಾಯೊಳಗಿಂದ ಒಬ್ಬೊಬ್ಬರು ಆಯುಧದೊಂದಿಗೆ ಹೊರಬರುತ್ತಿದ್ದಾರೆ.

ಶಾಸನವು ಕಲ್ಯಾಣಚಾಲುಕ್ಯ ಚಕ್ರವರ್ತಿ ಇಮ್ಮಡಿ ಜಯಸಿಂಹನ ಕಾಲದ್ದಾಗಿದ್ದು, ಕ್ರಿ.ಶ. ೧೦೨೭ರಲ್ಲಿ ರಚಿತಗೊಂಡಿದೆ. ಬನವಸೆ ನಾಡನ್ನು ಕುಂದರಾಜನು ಆಳುತ್ತಿರುವಾಗ ಕೆರೆಯ ತೂಬನ್ನು ಕಟ್ಟಿಸಿದುದನ್ನು ಹೇಳುವಂತಿದೆ.

೧. ಸ್ವಸ್ತಿ ಶ್ರೀ ಜಯಸಿಂಘದೇವ ಪ್ರಿಥ್ವಿರಾಜ್ಯಂಗೆಯ್ಯೆ ಬನವಸೆ ನಾಡ ಕುನ್ದರಾಜನಾಳೆ ಕಲ್ಲಭೂಪ ನಾರ್ಗ್ಗವುಣ್ಡುಗೆಯ್ಯೆ ಸೈಗಾಲರ ಮಲ್ಲಯ್ಯನೂರ್ಗ್ಗವುಣ್ಡುಗೆಯ್ಯೆ ಸಕವರ್ಷ ೯೪೯ ಪ್ರಭವ ಸಂವತ್ಸರ

೨. ದ ವತ್ಸಬಿನಕ - - - - - - - - ಮಂಗಳ

**ಶಾಸನ ಸಂಖ್ಯೆ ೬**

ಎಲಿಗಾರ ಅವರ ಮನೆಯ ಹಿತ್ತಲಲ್ಲಿ ಹೂಳಿರುವ ವೀರಗಲ್ಲು ಇದಾಗಿದೆ. ಮೊದಲ ಪಟ್ಟಿಕೆಯಲ್ಲಿ ಸೂರ್ಯ-ಚಂದ್ರರಿದ್ದು, ಎರಡನೆಯ ಪಟ್ಟಿಕೆಯಲ್ಲಿ ಭಕ್ತ, ಪೂಜಾರಿ (ಜಡೆಬಿಟ್ಟಿದ್ದು, ಲಂಗೋಟಿ ತೊಟ್ಟಿದ್ದು ಗಂಟೆ ಹಿಡಿದಿದ್ದಾನೆ) ಶಿವಲಿಂಗ, ಬಸವಣ್ಣರ ಚಿತ್ರಗಳಿವೆ. ಮೂರನೆಯ ಪಟ್ಟಿಕೆಯಲ್ಲಿ ೫ ಸಾಲಿನ ಶಾಸನವಿದೆ. ನಾಲ್ಕನೆಯ ಪಟ್ಟಿಕೆಯಲ್ಲಿ ಇಬ್ಬರು ಅಪ್ಸರೆಯರ ಹೆಗಲ ಮೇಲೆ ಕೈಹಾಕಿ ಹೊರಟ ವೀರನ ಚಿತ್ರವಿದೆ. ಐದನೆಯ ಪಟ್ಟಿಕೆಯಲ್ಲಿ ಮತ್ತೆ ೫ ಸಾಲುಗಳ ಶಾಸನವಿದೆ. ಆರನೆಯ ಪಟ್ಟಿಕೆಯಲ್ಲಿ ವೀರನೊಬ್ಬ ಬಿಲ್ಲು ಬಾಣ ಹಿಡಿದು ಹೋರಾಡುತ್ತಿದ್ದು ಎದುರಾಳಿಗಳಿಬ್ಬರ ಕೈಯಲ್ಲಿ ಖಡ್ಗ-ಗುರಾಣಿಗಳಿವೆ. ಎದುರಾಳಿಯೊಬ್ಬ ಕುದುರೆಯ ಮೇಲೆ ಕುಳಿತಿದ್ದು ಕೈಯಲ್ಲಿ ಭಲ್ಲೆಯಿದೆ, ೭ನೆಯ ಪಟ್ಟಿಕೆಯ ಭಾಗ ನೆಲದಲ್ಲಿ ಹೂತಿದೆ.

ಶಾಸನವು ಕಲ್ಯಾಣಚಾಲುಕ್ಯ ಚಕ್ರವರ್ತಿ ಭೂಲೋಕಮಲ್ಲನ ಕಾಲದ್ದಾಗಿದ್ದು, ಸಾಹಣಿಕೇಶಿ ಎನ್ನುವ ಎಲವಟ್ಟಿಯನ್ನು ಮುತ್ತಿದಾಗ ಅಲಗುಲಿಯ ನಾಯಕ ಕಾದಿ ಮಡಿದುದನ್ನು ಶಾಸನ ತಿಳಿಸುತ್ತದೆ. ಜೊತೆಗೆ ಕ್ರಿ.ಶ. ೧೧೩೫ರಲ್ಲಿ ಅವನ ವಂಶಜರಿಗೆ ಬಿಟ್ಟ ಭೂದತ್ತಿಯನ್ನು ತಿಳಿಸುತ್ತದೆ.

**೩ನೆಯ ಪಟ್ಟಿಕೆ -**

೧. ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರಂ ಪರಮ ಭಟ್ಟಾರ

೨. ಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತು ಭೂಲೋಕ ಮಲ್ಲ ---

೩. ಗೆಯ್ಯುತ್ತಮಿರೆ॥ ಸ್ವಸ್ತಿ ಶ್ರೀಮತು ಪಾನುಂಗಲ್ಲೈನೂಱುಮಂ ಮಲ್ಲಿಕಾರ್ಜುನದೇವ ---

೪. ಗೆಯ್ಯುತ್ತಮಿರೆ॥ ಶ್ರೀಮತು ಹೊಯಿಸಳ ---ವರು ಪಾನುಂಗಲ್ಲ ಕೋಟೆಯಂ ಮು

೫. ತ್ತಿದಲ್ಲಿ ಸಾಹಣಿಕೇಶಿ ಎಲವಟ್ಟಿಯಂ ಮುತ್ತಿ ಕಾದುವಲ್ಲಿ ಹೆಂ ---

**೪ನೆಯ ಪಟ್ಟಿಕೆ -**

೬. ವಲ್ಲಿಜೀಯರಲಗುಲಿಯ ನಾಯಕಂ ಸುರಲೋಕ ಪ್ರಾಪ್ತಿಯಾದಂ॥

೭. ಶ್ರೀಮಚ್ಚಾಳುಕ್ಯ ಭೂಲೋಕಮಲ್ಲವರ್ಷದ ೧೦ನೆಯ ರಾಕ್ಷಸ ಸಂವತ್ಸರ ----

೮. ಸುದ್ಧ ಸೋಮವಾರದಲ್ಲು ಕೊಟ್ಟ ಭೂಮಿ॥ ಮತ್ತ॥ ಶ್ರೀಮತು ಸಿ ---

೯. ಮತ್ತಂ ಎಪ್ಪದಿಂಬರುಮಿರ್ದ್ದು ಮಲ್ಲಗೆಜ್ಜೆಯ ತೆಂಕಣ ಕೊ ---

೧೦. ಯಲು ಕೊಟ್ಟ ಭೂಮಿ ಕಮ್ಮ ೨೫॥ ಮತ್ತಂ ಮನೆ ಮಾನ್ಯ ಇನ್ತೀವಿ ---

## ಶಾಸನ ಸಂಖ್ಯೆ ೭

ರಾಮಲಿಂಗ ದೇವಸ್ಥಾನದ ಎದುರು ನಿಲ್ಲಿಸಿದ ೬' × ೩' ಗಾತ್ರದ ಕರಿಕಲ್ಲು ಇದಾಗಿದೆ. ಮೇಲ್ಭಾಗದ ೧' ಸ್ತರದಲ್ಲಿ ಸೂರ್ಯ-ಚಂದ್ರರ ಚಿತ್ರಗಳಿವೆ. ಅವುಗಳ ಕೆಳಗೆ ಶಿವಲಿಂಗ ಸಹಿತ ಮಂಟಪ ಮತ್ತು ಪೂಜಾರಿಗಳಿದ್ದಾರೆ. ಶಿವಲಿಂಗದ ಎದುರು ಬಸವಣ್ಣ ಮತ್ತು ಹಿಂದೆ ಆಕಳು ಕರುಗಳ ಚಿತ್ರಗಳಿವೆ. ಚಿತ್ರಗಳ ಕೆಳಗಿನ ೬" ಪಟ್ಟಿಕೆಯಲ್ಲಿ ೨ ಸಾಲುಗಳ ಶಾಸನವಿದ್ದು ಮುಂದಿನ ೨¹/₂' ಭಾಗದಲ್ಲಿ ಉಳಿದ ಶಾಸನವಿದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಜಗದೇಕಮಲ್ಲನ ಕಾಲದ (ಕ್ರಿ.ಶ. ೧೧೪೯) ಶಾಸನವಿದಾಗಿದ್ದು, ಎಲವಟ್ಟಿಯ ರಾಮೇಶ್ವರ ದೇವರ ಅಂಗಭೋಗ ರಂಗಭೋಗಗಳಿಗಾಗಿ ಭೂದತ್ತಿಯನ್ನು ಚಂದ್ರಭೂಷಣ ಪಂಡಿತರ ಕಾಲ್ತೊಳೆದು ಬಿಟ್ಟುದನ್ನು ವಿವರವಾಗಿ ತಿಳಿಸುತ್ತದೆ.

ಶಾಸನದ ೨೩-೨೪ನೆಯ ಸಾಲುಗಳಲ್ಲಿ ಬರುವ ಮಿತಿಯು ೧೧-೧-೧೧೪೯ರ ಮಂಗಳವಾರಕ್ಕೆ ಸರಿಹೊಂದುತ್ತದೆ.

೧. ನಮಸ್ತುಂಗ ಶಿರುಶ್ಚುಂಬಿ ಚನ್ದ್ರ ಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥ ಸ್ವಸ್ತಿ ಶ್ರೀ ಪೃಥ್ವಿವಲ್ಲಭ ಮ
೨. ಹಾರಾಜಾಧಿರಾಜ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ ಕುಲ ತಿಳಕಂ ಚಾಳುಕ್ಯಾಭರಣಂ ಶ್ರೀಮಜ್ಜಗದೇಕಮಲ್ಲದೇವರು
೩. ರಾಜಧಾನಿ ಕಲ್ಯಾಣದ ನೆಲೆವೀಡಿನೊಳು ಸುಖಸಂಕಥಾ ವಿನೋದದಿಂದ ರಾಜ್ಯಂಗೆಯ್ಯುತ್ತಮಿರೆ॥ ತತ್ಪಾದಪದ್ಮೋಪಜೀವಿ॥ ಅನ್ತು
೪. ಆನತ ರಾಗದುದ್ಧತ ಮಹೀಭುಜರಂ ಜಗದೇಕ ಮಲ್ಲದುದಾನತರಾಗೆ ಮಾಡಿ ನಿಜನಾಥ ಸಭಾವಳಿಯಾನ್ತರಾಳದೊಳು ತಾಮೆ
೫. ಮಹಾಪ್ರಧಾನ ಪರವಿಶದಂ ವಿಶ್ರುತನೆಂದೊಡಂ ನೈಸೆ ವಾಣಿ ಸಮಾನಮೆ·ಧರೆಯೊಳು ನಯಕೆಸೆವ ದಂಡನಾಥನೊಳು
೬. ಮ॥ ತತುಪ್ರಿಯ ಪುತ್ರನೆನಿಸಿರ್ದ್ದ ಪುಡಿಗೆಯ ಸೋವಿದೇವ ಚಮೂಪನಾಥನನ್ವಯ ಮೆನ್ತೆಂದಡೆ ॥ವ್ರಿ॥ ಜನಕನುದಾರ ಕಲ್ಪತರು ಕೊಪ್ಪ
೭. ರಸಂ ಪತಿಭಕ್ತೆ ತಾಯಿ ಜನನುತೆ ಚೆಂಗಳಬ್ಬೆ ತನಗಗ್ರಜರಾ ವಿಭು ವಿಷ್ಣುರಾಜನು ಘನತರ ಶೌರ್ಯ್ಯಕಾಚರತನೆಂದೊಡೆ ಜಾವಿತದಗೋ
೮. ತ್ರವಾರ್ಥಿವರ್ದ್ಧನ ವಿಮರತಿ ಕೇವಳನೆ ಸೋಮತಮೂಪನಿಳಾ ತಳಾಗ್ರದೊಳು॥ ಪರರಿಕ ಜೈವ ಉರ್ವಿಸ್ವರ ಭೂದಾಮನೊ ಮರಿವೀರಂ ಜಯಂ
೯. ಚರಣ್ಣರ್ಪ್ಪರಮಾರಾಧ್ಯರ್ತ್ತವಗೆ ಈಸ್ವರ ರೂಪ ವಾಮಶಕ್ತಿ ಪಂಣ್ಡಿತ ದೇವರು ॥ವ॥ ಮತ್ತೆ ಮತ್ತ ವಿರಾಟನಗರ ಮುಖಮಣ್ಡನ ಶ್ರೀ ಚಿಕ್ಕೇಸ್ವರ ದೇವ.
೧೦. ದಿವ್ಯಸ್ರೀ ಪಾದಪದ್ಮಾರಾಧಕರುಂ ತತ್ವಪ್ರಬೋಧಕರುಂ ಸಮಸ್ತ ಧರ್ಮ್ಮಾಧಾರೆಯರು ಎನಿಸಿದ ರಾಜಗುರು ವಾಮಶಕ್ತಿಪಣ್ಡಿತ ದೇವರ ಸ್ರೀ
೧೧. ಪಾದಪದ್ಮಾರಾಧಕನಾ ಸಾಧಿಕಾಭ್ಯುದಯ ನೆನ್ತೆಂದೊಡೆ॥ ಇದು ಗಂಭೀರಾಬ್ಧಿಯಂ ಒಳಳುರ್ದ್ದ ತಳರ್ದ್ದತ್ತರು ಬಾಡವ್ರೊ ರಾ --- ಗಿಯಾಮೆ ನೋಡು ಲೋಕಾನೀಕ ರಮಂ ಸ

೧೩. ಚರಿತಭೋಗದ ಕಾಳಾನಳ ಜ್ವಳಯೋಮನೊಳಂ ಭರ್ಗಾಭೀಳ ಭಾಳಾರುಕ ಫಲತವಹ ವಿಬ್ಯಾತಮೊಪ್ಪಿನಲು ಪರ್ವಿದುದತ್ತಂ ಸೋಮದಣ್ಣಾಧಿಪನ ಘ'ನ
೧೪. ಭುಜವಣ್ಣಾ ಚಣ್ಣಪ್ರತಾಪ ॥ವೃ॥ ಅದು ಮಿತ್ರಾಗಮನ ಕೇಸರಿ ಸುಸಾವೃದಲ್ಲಿಂ ದೇವರ ತತ್ಪ್ರಕಾಸ್ಪದ ಸೋಮೋದಯ ಭೂದುಷ್ಯಮಬ್ಬಮೆನಿತುಂ ಮಿತ್ರಾನ್ನಿ
೧೫. ತ ಸೋಮನಭ್ಯುದಯ ಕಳಲೆತಿವ್ವಕ್ಷಿ ಭೈರವಮಳ್ಳನವಕ್ಷ್ಮಿ ದರ್ವ್ವಕ್ಷಿ ಕೈರವಮುಂ ಮುಖಾಮ್ಭೋಜ ಸಲಕ್ಷ್ಮಿ ಸ್ಯೇಪಾಚಲ ದೇವಿಗೆ ಸೊಳೆದುದಾದೊ ವಿಳಾಸದ ನಿತ್ಯೋತ್ಸವ ಪ್ರೀತಿಯ॥ ಲ
೧೬. ಇಂತೆನಿಸಿ ನೆಗರ್ದ್ದ ಮಹಾಸತಿ ಕಳತ್ರಗೋತ್ರ ಪವಿತ್ರನುನೆಪನಾಮಾಳೆ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಪ್ರಚಣ್ಡದಣ್ಡನಾಯಕಂ
೧೭. ವೈರಿಭಯದಾಯಕನುಮೆನಿಸಿದ ಸೋವಿದೇವರಸರು ಪಾನುಂಗಲ್ ಯ್ಯೆನೂರುಂ ದುಷ್ಟನಿಗ್ರಹ ವಿಶಿಷ್ಟ ಪರಿಪಾಲನದಿಂದಾಳುತ್ತಂ ರಾ
೧೮. ಜಧಾನಿ ಹಾನುಂಗಲ್ಲ ಪಟ್ಟಣದೊಳು ಸುಖದಿಂ ರಾಜ್ಯಂಗೆಯ್ಯುತ್ತಮಿರೆ॥ ಸ್ವಸ್ತಿ ಶ್ರೀಮದೆಲವಟ್ಟಿಯ ರಾಮೇಸ್ವರದೇವರ ಅಂಗಭೋಗಕ್ಕಂ ರಂಗಭೋ
೧೯. ಗಕ್ಕಂ ಜೀರ್ಣ್ಣೋದ್ಧಾರಕ್ಕಂ ತಪೋಧನರ ಆಹಾರದಾನಕ್ಕಂ ಕೊಟ್ಟರ -- ಆರಿಯಬೋವನ ಹಳ್ಳಿಯನಾ ಹೊಲದ ತೆಂಕದ ಪಡುವಣ ಸೀಮೆ ಚಟ್ಟಬ್ಬೆಗೆ
೨೦. ಱೆಯ ಬಡಗಣ ಪೊಳಂಬು ತೆಂಕಣಸೀಮೆ ಕಡಬಿಗೆಱೆಯ ತೆಂಕಣ ಕೋಡಿ ಮೂಡಣ ತೆಂಕಣಕೊನಾ ಸೀಮೆ ಸಗರಕೆಱೆಯ ಬಡಗಣ
೨೧. ಕೋಡಿಯ ಮುಂತ್ತಣ ಮೊಱಡಿ ಮೂಡಣ ಬಡಗಣ ಕೋಣನಸೀಮೆ ಅಡ್ಡವೆಟ್ಟದ ತೆಂಕಣ ತಪ್ಪಲು ಬಡಗಣ ಸೀಮೆರ ಮೂಡಿಗೆಱೆಯ ಕೆಳ
೨೨. ಗೆ ನೊಜಱವಿನಭಾವಿ ಬಡಗಣ ಪಡುವಣ ಕೋಣನಸೀಮೆ ಕಡಬಗೆಱೆಯ ಕೆಳಗಣ ಸರಿವಿತಣ ದಡ ಇನ್ತೀ ಚತುಸ್ಸೀಮೆ
೨೩. ಯ ಹಳ್ಳಿಯುಮಂ ಮತ್ತಂ ರಾಮೇಸ್ವರದೇವರ ಮುನ್ದಣ ಪೊಕ್ಕರಣೆಯ ತೆಂಕಣ ಏರಿಯ ಬಳಿಯ ಇತ್ತರದ ಪುರದಕೇರಿಯುಂ। ಇನ್ತಿ
೨೪. ನಿತುಮಂ ಶ್ರೀಮನ್ಮಹಾಪ್ರಧಾನಂ ದಣ್ಡನಾಯಕಂ ಹಾನುಂಗಲ್ಲಯ್ನೂಱರಧಿಕಾರಿ ಸೋವಿದೇವರಸರು ಶ್ರೀಮಜ್ಜಗದೇಕಮಲ್ಲದೇವ ವರ್ಶದ ೧ ---
೧೪. ವಿಭವಸಂವತ್ಸರದ ಮಾಘಸುದ್ಧ ಪೌರ್ಣ್ನಮಾಸ್ಯೆ ಸೋಮವಾರ ವ್ಯತಿಪಾತ ಸಂಕ್ರಾನ್ತಿ ನಿಮಿತ್ತವಾಗಿ ಸ್ವಸ್ತಿಯಮನಿಯಮಸ್ವಾಧ್ಯಾಯಧ್ಯಾನಧಾ
೨೫. ರಣಮೌನಾನುಷ್ಠಾನ ಜಪಸಮಾಧಿ ಶೀಲಗುಣಸಂಪನ್ನರಪ್ಪ ಚಂದ್ರಭೂಷಣ ಪಣ್ಡಿತರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿಕೊಟ್ಟರು ॥ಸರಳಸ್ವ
೨೬. ರಮುನಿಪತಿಗಳು ಸಚರಾಚರದೊಳು ಪ್ರಸಿದ್ಧರಪ್ಪವರ್ಗಳ ಶಿಷ್ಯರುವಚಳಿತರನ್ವಯಸ್ಸುದ್ಧರ್ ಸುಚರಿತ್ರರ್ ಚಂದ್ರಭೂಷಣ ಮುನಿಪತಿರುದ್ರರು॥
೨೭. ಸ್ವದತ್ತಂ ಪರದತ್ತಂ ವಾಯೋಹರೇತಿ ವಸುನ್ಧರಾ ಷಷ್ಟಿರ್ವ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ॥ ಈ ಧರ್ಮವಂ ಪ್ರತಿಪಾಲಿಸಿದರ್ಗೆ ವಾರಣಾಸಿ ಕು
೨೮. ರುಕ್ಷೇತ್ರದಲು ಸಹಸ್ರ ಬ್ರಾಹ್ಮಣರ್ಗ್ಗಂ ತಪೋಧನರ್ಗ್ಗಂ ಸಹಸ್ರ ಉಭಯಮುಖಿ ಕಪಿಲೆಯುಂ ಕೊಟ್ಟ ಫಲಮಕ್ಕು॥ ಬರಪದ ಲೆಕ್ಕದ ಬಾಜಿಪ ಪರಿಣತಿಕೆಯ ಸೇನ
೨೯. ಬೋವನೆನೆ ಪ್ರದಿದಿನ ಬರಯಾಯ್ತೊ ಬ್ರಹ್ಮದೇವನ ಚರಿತಂ ಸಚ್ಚರಿತಂ ಏಕವಾಕ್ಯಂ ವಾಕ್ಯ॥ ಇಂತೆನಿಸಿ ನೆಗರ್ದ ಬರೆದ ಶ್ರೀ ಬ್ರಹ್ಮದೇವ ಚಂಗೋಜ ಕಣ್ಡರಿಸಿದನೆನಲು

೩೦. ವಜ್ಜೀಪುರದಿ ಶಾಸನಮಂ ಪಲಪೊರ್ಬ್ಬಗಳದರೊಳರೆ॥ ಮಂಗಳ ಮಹಾ॥ ಶ್ರೀ ಶ್ರೀ ಶ್ರೀ.

**ಶಾಸನ ಸಂಖ್ಯೆ ೮**

ಮಹಾಬಲೇಶ್ವರ ದೇವಸ್ಥಾನದ ಮುಂದಿರುವ ೧೦' × ೪' ಗಾತ್ರದ ಕರಿಕಲ್ಲಿನಲ್ಲಿ ಶಾಸನವನ್ನು ಕೆತ್ತಲಾಗಿದೆ. ಮೇಲ್ಭಾಗದ ಭಾಗದಲ್ಲಿ ಚಂದ್ರ, ಸೂರ್ಯರಿದ್ದು, ಮಧ್ಯದಲ್ಲಿ ಮಂಟಪದೊಳಗಡೆ ಶಿವಲಿಂಗವಿದ್ದು ಎಡಬಲಗಳಲ್ಲಿ ಪೂಜಾರಿ-ನಂದಿ ಚಿತ್ರಗಳಿವೆ. ಮಂಟಪದ ಎಡಭಾಗದಲ್ಲಿ ಆಕಳು-ಕರುಗಳಿವೆ. ಶಾಸನ ಮಧ್ಯ ಭಾಗದಲ್ಲಿ ಒಡೆದಿದ್ದು ಸುಮಾರು ೬ಸಪ್ಪು ಈಗ ನೆಲದಲ್ಲಿ ಹುಗಿದಿದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ೬ನೆಯ ವಿಕ್ರಮಾದಿತ್ಯನ ಕಾಲದ ಶಾಸನವಿದಾಗಿದ್ದು ಅವನ ಅರಸಿ ಮಲೆಯ ಮಾಳಲದೇವಿಯರು ಎಲವಟ್ಟಿಯಲ್ಲಿ ಮಾಳಬೇಶ್ವರ ದೇವಸ್ಥಾನ ಕಟ್ಟಿಸಿ, ಈಶಾನರಕ್ತಿ ಪಂಡಿತದೇವರ ಕಾಲ್ತೊಳೆದು ಬಿಟ್ಟ ಭೂದತ್ತಿಯನ್ನು ವಿವರಿಸುತ್ತದೆ.

ಶಾಸನದ ೬೨ನೆಯ ಸಾಲಿನಲ್ಲಿ ಬರುವ ಮಿತಿಯ ವಿವರವು ಅಕ್ಟೋಬರ್ ೧ ಕ್ರಿ.ಶ. ೧೧೧೧ಳಕ್ಕೆ ಸರಿಹೊಂದುತ್ತದೆ.

೧. ನಮಸ್ತುಂಗ ಶಿರಸ್ಚುಂಬಿ ಚಂದ್ರಚಾಮರಚಾರವೇ ತ್ರೈಳೋಕ್ಯ ನಗರಾರಂಭ ಮೂಳಸ್ತಂಭಾಯ ಸಂಭವೇ ಸ್ವಸ್ತಿ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಸ್ವರ ಪರಮಭ
೨. ಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬ
೩. ರಂ ಸಲುತ್ತಮಿರೆ ॥ವೃ॥ ಪುದುವೇಕಿನ್ನಾರ್ಗ್ಗಮಾನೊರ್ಬ್ಬನೆ ತಡೆಯಲಿ ಸೋಲ್ವನೆಂದಾ ಮಹಾಕೂರ್ಮ್ಮದ ಬೆನ್ನೆಂದಾ
೪. ದಿಸಾ ಭೂರ್ಬ್ಬಳ ನಿರ್ಮ್ಮಳದಿನವಿಳ ಧರಾಭಾರಮಂ ತನ್ನು ವಿಕ್ರಾಂತದ ಬಲ್ಪಿಂ ತನ್ನ ತೋಳೊಳ್ಪದುಳಮಿರಿಸಿದ ವಿಕ್ರಮಾದಿತ್ಯದೇವ॥ ಪರರಾಷ್ಟ್ರ ಸಿಂ
೫. ಹಂಬರಂ ತನಗೆ ರಿಪುಶಿರಂ ಪಾದಪೀಠಂ ಜಸಂ ಪಾಣ್ದುರಮೇಕಚ್ಛತ್ರ ಮೀ ಲೋಕವ ಪೊಗಳ್ವದೀ ಭೇರೀರವಂ ವಿಶ್ವಧಾತ್ರೀಶ್ವರರಿತ್ತುಂ ತೆತ್ತುಂ ಜಾಣ್ಬೋಕ್ಕಲನರ
೬. ವಿಳ ಭೂದೇವಿ ಮಾದೇವಿ ತಾನಾಗಿರೆ ರಾಜ್ಯಶ್ರೀಯಮೆಲರ್ಕ್ಕ ಜೊಯೊಳೆನಲೀದಪಂ ವಿಕ್ರಮಾದಿತ್ಯದೇವ ತತ್ಪಾದ ಪದ್ಮೋಪಜೀವಿ ಸಮಧಿಗತ ಪಂಚಮ
೭. ಹಾಶಬ್ದ ಮಹಾಮಣ್ಡಳೇಶ್ವರಂ ಬನವಾಸಿ ಪುರವರಾಧೀಶ್ವರಂ ಜಯಂತೀ ಮಧುಕೇಶ್ವರದೇವ ಲಬ್ಧವರಪ್ರಸಾದಂ ಮೃಗಮದಾಮೋದಂ ತ್ರ್ಯಕ್ಷ ಕ್ಷ್ಮಾಸಂಭವ
೮. ಚತುರಾಸೀತಿ ನಗರಾಧಿಷ್ಠಿತ ಲಲಾಟಲೋಚನ ಚತುರ್ಬ್ಭುಜಂ ಜಗದ್ವಿದಿತಾಷ್ಟಾದಶಾಶ್ವಮೇಧ ದೀಕ್ಷಿತ ಹಿಮವದ್ಗಿರೀಂದ್ರ ರುಂದ್ರ ಶಿಖಿರಶಕ್ತಿ ಸಂಸ್ಥಾಪಿತ
೯. ಸ್ಫಟಿಕ ಶಿಳಸ್ತಂಭಬದ್ಧ ಮದಗಜ ಮಹಾಮಹಿಮಾಭಿರಾಮಂ ಕಾಡಂಬ ವೃಕ್ಷ ಮಯೂರ ವರ್ಮ್ಮ ಮಹೀಪಾಳ ಕುಳಭೂಷಣಂ ಪೆರ್ಮ್ಮ
೧೦. ಟ್ಟಿ ತೂರ್ಯ್ಯನಿರ್ಗ್ಘೋಷಣಂ ಶಾಖಾಚರೇಂದ್ರ ಧ್ವಜವಿರಾಜಮಾನ ಮಾನೋತ್ತುಂಗ ಸಿಂಹಲಾಂಛನ ದತ್ತಾರ್ತ್ಥಿಕಾಂಚನಂ ಸಮರ ಜಯಕಾರಣ ಕಡಂಬ ರಾ.... ಣಂ
೧೧. ಮಾರ್ಕ್ಕೊಳ್ಪರಗಣ್ಡಂ ಪ್ರತಾಪಮಾರ್ತ್ತಣ್ಡ ನೀತಿ ನಾಮಾವಳಿ ವಿರಾಜಮಾನಂ ಶ್ರೀಮನ್ಮಹಾಮಣ್ಡಳೇಶ್ವರ ತೈಲಪದೇವರ್ ವೃ

೧೨. ಪದವಿ ಪದಮೂರ್ತ್ತಿ ಚಿತ್ತೋದ್ಭವಾಕಾರದ ತೇಜೋಮೂತ್ತಿ ಮಾರ್ಗ್ಗನಳನಭೂಪರ ಮಾರ್ಗ್ಗಕ್ರಮಂ ವಿಕ್ರಮಭೂಭುವನ
೧೩. ಸಮಾಯ್ತೆಂದಾರಿ ಭೂಪಾಧಿಪಂ ತೈಲನ ಬಣ್ಣಿಸಲಳವೆ ಫಣೀಂದ್ರಂಗಮಾ ..... ಧರಣೀಂದ್ರಪ್ರಸೂತನ ತರಣ ತರಣಿ ತೇಜೋವಿಳಾಸ ಸದಾಸಂಗ
೧೪. ರಂ ಧೀರಂ ವೀರಕ್ಷಿತಿಪತಿ ತರಕಕಂ. ಶಾದೃಶ್ಯರೂಪಂ. ಪರ ಪ್ರಾರಣಧಾಮನಳನಳ ಸಗರ ಕ್ಷ್ಮಾಪಭೂಪರ್ನ್ನರರಾಮಾಭರ ಮಾರ್ಗ್ಗ ತೈಲಭೂಪ ರಿಪುನ್ರಿ
೧೫. ಪಾಳ ಸಂತಾಪನುಗ್ರ ಪ್ರತಾಪ ॥ವೃ॥ ಆ ಮಹಾಮಣ್ಡಳೇಶ್ವರಂ ತೈಲಪದೇವ ಪಾನುಂಗಲ್ಲಿಯ್ಮೊ ಜಿಜುಭಯ ಸಾಮ್ಯಮಂ ದುಷ್ಟನಿಗ್ರಹ ವಿಶಿಷ್ಟ ಪ್ರತಿಪಾಳನೇಕ
೧೬. ಸಾರ್ದ್ದ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ॥ಕಂ॥ ಶ್ರೀಮತ್ತೈಲಪದೇವ ಮಹಾಮಹಿಮಾನ್ತ ಪಿರಿಯ ಪಡೆವಳಂ ಪಡೆವಳ ಚೂಡಾಮಣಿ ಪಡೆವಳಪ್ರು ...
೧೭. .ರನೆ ಲಲಾಮನ ಮದಗುಣ... ಯಮೆ॥ .... ದಿತನನುದಿಸದೆ ... ದೇವಬಗಿತಂಗಳಿಂದಡೆ ರೇವಣನಂ ದೇವಣ
೧೮. ನೆಂಬರ್ ॥ವ॥ ಅಂತಾ ಶ್ರೀಮನ್ಮಹಾಸಾಮನ್ತಂ ಪಿರಿಯ ಪಡೆವಳದೇವ. ... ಡೆವ್ವೊಳಲೆರ್ಪ್ಪತ್ತಜಿ ಮನ್ನೆಯಮುವಾ ಬೆಳ್ವಲೆಯೆಲವಟ್ಟಿಯ ಮನ್ನೆಯ
೧೯. ನಾರ್ದ್ದು ಸುಖದಿನಿರೆ॥ ಪಾನುಂಗಲ್ನಾಡ ಸದುಲಕ್ಷ್ಮಿನಿಧಿ ವಿಳಾಸನಿಧಿ ತೇಜೋನಿಧಿಯಲವಟ್ಟಿಯೆಂಬುದು
೨೦. ತ॥ ತೆಂಗಿನ ಕೌಂಗಿನ ಶಾಳಿವನಂಗಳಿನಲಲ್ಲಬ್ಬ ಷಣ್ಡದಿಂ ಕಬ್ಬಿನ ತೋಂಟಗಳೀ ನಗರ ತಿಳಕ ಧರ್ಮ್ಮರಿರ್ಪ್ಪುದೆಲವಟ್ಟಿಪುರ॥ ಅನ್ತು
೨೧. ಳಿಯಿಂ ಪಲವುಂ ಪೆರ್ಗ್ಗೆಜೆಯಿಂದ ಕೊಳದಿಂ ಲತಾಗ್ರಿಹಂಗಳಿನೆಳೆ ಮಾಮರಂಗಳೊಳಗಿರ್ದ್ದು ಪುಗಲು ಪುಗಲೆಂಬ ಕೋಕಿಳಾವಳಿಯ ನಗರದೊಳು
೨೨. ಗಣಿಕಾಜನದ ವಿಳಾಸಮಂ ತಳೆದೆಲವಟ್ಟಿಯೆಂಬೀಪುರ ಕಾಮನ ಕೂರ್ಗ್ಗಣೆಯನ್ತೆ ಲೋಕಮಂ॥ ಆ ಪುರ ಲಕ್ಷ್ಮೀಪತಿ ಶೋ ಶ್ರೀಪತಿ ವಿದ್ರಾ
೨೩. ನಪತಿ ಕೀರ್ತ್ತಿಶ್ರೀಪತಿ ಪರೋಪಕಾರ ಕಳಾವತಿಯೆನ್ತೆನಿಸಿದ ಗುಣಯ್ಯ ಧರ್ಮ್ಮಂ ಬರ್ಮ್ಮಂ॥ ಮ್ರಿಗವರಿ ವಿಕ್ರಮಲ. ನ.... ನತಿಸಯ ವೀರವಿದ್ಯಾ
೨೪. ವಲ್ಲಿಂ ಬಲನೊಳು ಪ್ರಜೆಗೆ ಪದೆಯಲಾರ್ಗ್ಗೆ ದಾರತನ್ತೆ ಪೆಂಪಂ ಮಿಗೆ ತೊಗೆದಿರ್ಪ್ಪಕಂ ಸಿಂಗಗಾಮುಣ್ಡನ ಕುಳತಿಳಕಂ ಶ್ರೀ ವಧೂವಲ್ಲಭಂ ಬರ್ಮ್ಮಂ॥
೨೫. ವಿದ್ಯಾನಿಧಿ ಸುಜನ ಜನೋದ್ಯಾನಕಥೀ ವಸನ್ತ ॥ವಚನ॥ ತದನಂತರಂ ಪರಹಿತಾರ್ತ್ಥಚರಿತರು ಧರ್ಮ್ಮವಾಚಾರ ಸರ್ವ್ವಸ್ವ ಚರಿತ
೨೬. ದ ಭಕ್ತರುಂ ದಾನಧರ್ಮೋದ್ಯುಕ್ತರುಂ ಶರಣಾಗತ ವಜ್ರಪಂಜರರುಂ ನಿಜಾನ್ವಯಧರಿತ್ರಿ ಭರದುರಿಣ ದಿಕ್ಕುಂಜರರುಂ ಪ್ರಜೆ ಬಾಂ ...
೨೭. ರುಂ ನುಡಿದು ಮತ್ತನ್ನರುಂ ಬನ್ಧುಜನ ಚಿನ್ತಾಮಣಿಗಳುಂ ಶಖಾ ದ್ರವ ... ವಕಾಗ್ರಣಿಗಳೇಂ। ನಯ ವಿನಯಸಮಂ ತಪಂ ಸಕಳ ಜೀಮ
೨೮. ..... ರಿಭೂತರುಮೆನಿಪ ಗುಣಗಳಂ ತಳೆದೆಲವಟ್ಟಿಯೆಂಬ ಪುರಾಂಗನೆಗೆ ಹಾರಾಳಂಕಾರಮಂ॥ ಬರ್ಮ್ಮಗಾಮುಣ್ಡನುಭಯ ಭುಜದಣ್ಡಕ್ಕೆ
೨೯. ... ಕಾಂಚನ ಕೇಯೂರಮುಮಿರ್ಪ್ಪನ್ತೆ ಶ್ರೀಮದೆರ್ಪ್ಪದಿಂಬರಿರ್ಪ್ಪರಂತುಮಲ್ಲದೆ॥ ಕೊಳದೊಳು ತಾವರೆ ಗಗನದೊಳು ರವಿ

೩೦. .... ನನ್ದನದೊಳು ಕೋಕಿಳಮಿರ್ಪ್ಪವೊಲಿರ್ಪ್ಪರ್ನ್ನೆಗರ್ದ್ದೆಲವಟ್ಟಿಯೊಳೆರ್ಪ್ಪದಿಂಬರಮಳಿನ ಚರಿತ್ರರು॥ ನಿರುತಂ ಸುದಿನದೆವಳಿ ಸರ್ವ್ವ
೩೧. ತ್ರಂ ನಿಃಕಪಟ ವ್ರಿತ್ತಿಧರ್ಮ್ಮದೊಳಂ ನಂದಿಕೊಳಮೆನಲುಳಿದವರ್ಪ್ಪೊರ್ಳ್ಲವರೆ ನೆಗರ್ದ್ದೆಲವಟ್ಟಿಯೆರ್ಪ್ಪದಿಂಬರ ಪೆಂಪ ॥ವಚನ॥ ಅನ್ತಾಯೆರ್ಪ್ಪದಿಂಬರ್ಗ್ಗೆ ಚಂದ್ರ
೩೨. ಬಲಮುಂ ತೋಳ್ವಲಮುಮಿರ್ಪ್ಪಂತಿರ್ಪ್ಪ ಗಂಭೀರದುದಾರದ ಮಹಿಮೆಯ ಮಾನ್ಯತೆಯ ನೆಗರ್ತ್ತೆಯ ಪೊಗರ್ತ್ತೆಯ[1] ಗುಣಂಗಳ್ಗಾಮ್ನಾಯಮಪ್ಪ ಸೇನಬೋವ
೩೩. ರಾಯಣ ಸತ್ಯಸೌಚಪರಾಯಣನೆನಿಸಿ ನೆಗರ್ದ್ದನದಲ್ಲದೆ ॥ಕ॥ ಪುರುಷಾರ್ತ್ಥದೊಳಂ ಸಲೆ ಸಚ್ಚರಿತದೊಳಂ ಸೇನಬೋವ ರಾಯಣನ
೩೪. ವಿಳೋರ್ವ್ವರೆಗೆಸೆದಿರ್ದ್ದೆಲವಟ್ಟಿಗೆ ನಿರಂತರಂ ಕನಕ ಕಳಸಮಿರ್ಪ್ಪಂತಿರ್ದ್ದ ॥ ವಿನಯಮೇ ರೂಪಾ ಸತ್ಯಮೆ ಕುಳಂ ಸುಚರಿತ್ರಮೆ ಭೂಷಣಂ
೩೫. ಯಶೋಧನಮೆ ಧನಂ ಕ್ಷಮೋನ್ನತಿಯೆ ಪೆಂಪು ಸಧರ್ಮ್ಮಮೆ ಬನ್ಧು ಪಾರ್ವ್ವತೀಶನೆ ತನಗಿಷ್ಟದೆಯ್ವಮೆನೆ ಬಣ್ನೆಪರಾರ್ಗ್ಗಳ ಸೇನಬೋವ ರಾಯನ
೩೬. ನಭಿಮಾನದುಂನತಿಯ ಕೀರ್ತ್ತಿಯ ಸದ್ಗುಣ ಪಂಕಟೆಯನ ॥ವ॥ ಆ ಸೇನಬೋವ ರಾಯನ ಕುಳಾಂಗನೆ ॥ಕ॥ ಚತುರವತಿ ರೂಪವತಿ ಗುಣವತಿ
೩೭. ಲಕ್ಷಣವತಿ ವಿವೇಕವತಿ ಸಕಳ ಕಳಾವತಿ ಪತಿಹಿತವತಿ ಸುಚರಿತವತಿಯೆನಿಪಳು ವೊಳಜಿಕಬ್ಬೆ ಕಾಂತಾರತ್ನ ॥ವ॥ ಆ ಸೇನಬೋ
೩೮. ವರಾಯನುಂ ವೊಳಜಿಕಬ್ಬೆಯುಂ ಹರಿಯುಂ ಸಿರಿಯುಂ ಕೂಡುವಂತೆ ಕೂಡಿ ಸುಖದಿನಿರಲವರ್ಗ್ಗೆ ದೇಬಿಕಟ್ಟೆಯಂ ಸೇನಬೋವನಾ
೩೯. ಗದೇವನು ಪುಟ್ಟಿದರವರೆಂತೆನೆ॥ ಪತಿಹಿತೆ ಸುಚರಿತೆ ಮಾನೊನ್ನತೆ ಗೋತ್ರಪವಿತ್ರೆ ರೂಪಲಕ್ಷಣಗುಣಸಂಯುತೆಯೆನಿಪಳೆನಲ್ಸ
೪೦. ಮನಾಸ್ಸ್ರತೀಜನಂ ದೇಬಿಕಬ್ಬೆಯೊರೆಗಂ ದೊರೆಗಂ॥ ಬರೆಪದ ಲೆಕ್ಕದ ಬಾಜಿಪ ಪರಿಣತಿಕೆಯ ಸೇನಬೋವನೆನಿಪನಿದೇನಚ್ಚರಿಯಾ
೪೧. ಯ್ತೊ ನಾಗದೇವನ ಚರಿತಂ ಸಚ್ಚರಿತವೇಕವಾಕ್ಯಂ ವಾಕ್ಯ ॥ವ॥ ಮತ್ತಮಾ ಮಹಾಪುರುಷನಪ್ಪ ಸೇನಬೋವ ರಾಯಗಂ ವೊಳಜಿಕಬ್ಬೆಗೆ ॥ಕ॥
೪೨. ಗಿರಿಪತಿಗೆ ಗಿರಿಜೆ ಗೋಮಿನಿ ಸರಸಿಜದೊಳು ಪುಟ್ಟುವಂತೆ ಪುಟ್ಟಿದಳೀ ಜೀವರದಳಲೋಚನೆ ನಿಜಕುಳಸಿರಿ ಮಾಳಲದೇವಿ ರಾಯ ರಾಣೆರತ್ನ ॥
೪೩. ಆ ರಮಣಿ ಮಾಳಿಕಾರಾಣಿ ರತ್ನಮಪೂರ್ವ್ವ ರೂಪರತ್ನ ಚತುರ ಸ್ತ್ರೀರತ್ನ ಚಾಳುಕ್ಯ ಮಹೀರಮಣೇಶಂಗೆ ಚಿತ್ತವಲ್ಲಭೆಯಾದಳ್॥ ಸ್ವಸ್ತ್ಯನ
೪೪. ವರತ ಪರಮಕಲ್ಯಾಣಾಭ್ಯುದಯ ಸಹಸ್ರ ಫಳಭೋಗಭಾಗಿನಿ ದ್ವಿತೀಯಲಕ್ಷ್ಮೀಸಮಾನೆ ಗೋತ್ರನಿಧಾನೆ ಮದನ ಮತ್ತೇಭಗಾ
೪೫. ಮಿನಿ ಪ್ರತ್ಯಕ್ಷಗೋಮಿನಿ ವಿಕಚ ವಿಚಕಿಳಾದ್ಯನೇಕ ಕುಸುಮ ದಾಮಾಳಂಕ್ರಿತ ಕಬರೀಭಾರೆ ಷೋಡಶಾಚರಣಾಳಂಕಾರೆ ಭ್ರಮದ ಭ್ರಮರಾಯಮಾನ
೪೬. ಸಹಸ್ರ ಕುಟಿಳ ಕುಂತಳೆ ಸಂಗೀತ ಕಳಾಕೋಶಳೆ ರಾಯಬಂಗಾಱ ಮನೋಮತ್ತೇಭ ಬನ್ಧ ಸಂಬನ್ಧ ಬನ್ಧುರ ಮನೋಜ ಮೃಗಬನ್ಧಿನಿ ನವಮಾಳಿಕಾ ದನ್ಧಗನ್ಧಿನಿ । ಅ

---

[1] ೧-೧ ಸಾಲಿನ ಕೆಳಗೆ ಬರೆದಿದೆ

೪೭. ಸಂಗಜಂಗಮಲತೆ ಗೋತ್ರ ಅಂತಃಪ್ಪುರ ಪವಿತ್ರೆ ಶೃಂಗಾರಸಾರ ಸರ್ಬ್ಬಸ್ವಚರಿತೆ
ನಿರ್ಮಳಾಚರಣಚರಿತೆ ಮೃದುಮಧುರ ಕೋಕಿಳಾಳಾಪೆ ಕಾತ್ರ್ಯಾಯನಿರೂ
೪೮. ಪೆ ಕರ್ನ್ನಾಟದೇಶ ದೇಶೀಯ ದೆಸೆಕಾರ್ತಿ ಚಾಳುಕ್ಯ ಚಕ್ರೇಶ್ವರ ವಶೀಕರಣಮೂರ್ತ್ತಿ
ಸಂಪೂರ್ಣ್ನಚಂದ್ರವದನೆ ಸೌಭಾಗ್ಯಸದನೆ ಬತ್ತೀಸ ಲಕ್ಷಣ ಲಕ್ಷ್ಮಿ
೪೯. ಪ ಲಕ್ಷಣೆ ಸಮಸ್ತ ವಿದ್ಯಾ ವಿಚಕ್ಷಣೆ ರಾಯನಾರಾಯಣನರ್ದ್ಧಾಂಗ ಲಕ್ಷ್ಮಿ ಯೌವನವನ
ವಸಂತಲಕ್ಷ್ಮಿ ದೀನಾನಾಥಯೂಥ ಚಿಂತಾಮಣಿ
೫೦. ಸುಜನಾರಾಣೆ ಶಿಖಾಮಣಿ ರಾಯದೇವೇಂದ್ರ ಮನಸ್ಸರೋವರ ರಾಜಹಂಶೆ
ವಿನಯಾವತಂಶೆ ಶ್ರೀಮತ್ರಿಭುವನಮಲ್ಲದೇವ ವಕ್ಷಸ್ಥಳ ನಿವಾಸಿ
೫೧. ನಿಯರಪ್ಪ ಶ್ರೀಮದಭಿನವ ಸರಸ್ವತಿ ಮಲೆಯ ಮಾಳಲದೇವಿಯರ॥ ಸರಸ ನವನೀತ
ವಿದ್ಯಾಧರಿ ನವಯೌವನ ವಿಳಾಸ ವಿಭ್ರಮ ವಿದ್ಯಾಧರಿ ರೂಪವಿಭವ ವಿ
೫೨. ದ್ಯಾಧರಿ ಮಾಳಲದೇವಿ ರಾಯರಾಣಿರತ್ನ॥ ನೆಲಸಿದುದಾ ಶ್ರೀಪರ್ಬ್ಬತ ಮೆಲವಟ್ಟಿಯೊಳೆಂಬ
ಭಂಗಿಯಿಂ ರಂಜಿಸೆ ಮಾಳಲದೇವಿ ಮಾಡಿಸಿದಳೀ ನೆಲಕೆಲ್ಲಂ ನೆಗಜ್ದಿ
೫೩. ಮಾಳಬೇಶ್ವರಗೃಹಮಂ॥ ವ॥ ಆ ಮಾಳಬೇಸ್ವರದಾಚಾರ್ಯ್ಯನಚಳಿತಧೈರ್ಯ್ಯಂ ಯಮ
ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾನ ಜಪಸಮಾಧಿಶೀಳ ಸಂಯೋ
೫೪. ಗಯೋನಿಯುಂ ಪರಹಿತೋದ್ಯೋಗಿಯುಂ ಮಹಾಪಟ್ಟಣಂ ಬೋಧನದ ತೆಂಗಿನಮಠದ
ವರೇಸ್ವರ ಪಣ್ಡಿತದೇವರಗ್ರ ಶಿಷ್ಯರಪ್ಪ ಸೂರ್ಯ್ಯಾಚರಣ ಪಣ್ಡಿತದೇವರ॥
೫೫. ಕ॥ ಹರಚರಣ ಸ್ಮರಣಾಂತಃ ಕರಣಿ ಪಾಪಾಪ ಹರಣನ ಕಳಂಕ ತಪಶ್ಚರಣಂ
ಗುರುಕುಳರತ್ನಾಭರಣಂ ಕೇವಳದ ಮುನಿಯೆ ಸೂರ್ಯ್ಯಾಚ
೫೬. ರಣ॥ ತದನಂತರಂ ॥ಕ॥ ಅನುಪಮ ತಪಃ ಪ್ರಭಾವದೊಳನವರತಂ ಬೆಳಗುತಿರ್ಪ್ಪ
ದುರಿತ ತಮೋಬನ್ಧನ ಮನುಷ ಸಮಿಸುವೆಂಬೀ ನವದಿನೇಶ ನೀಶಾನಶಕ್ತಿಪಣ್ಡಿ
೫೭. ತದೇವ ॥ವ॥ ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾನ
ಜಪಸಮಾಧಿ ಕ್ರಮ ಸಮಾಳಂಕ್ರಿತ ಮಹಾ ಮಹಿಮಾಭಿರಾಮಂ ಗುರುಕುಳ ಕುಮುದಿ
೫೮. ನಿ ಸೋಮಂ ಯೋಗಪಟ್ಟಿಕಾ ಬನ್ಧು ಬನ್ಧುರ ಸಹಸ್ರ ಜಟಾಕಳಾಪಂ ಶಿವಯೋಗ
ಯೋಗರೂಪಂ ತರ್ಕ್ಕವ್ಯಾಕರಣ ಪುರಾಣ ಪ್ರಮುಖ ಸಕಳಸಾಸ್ತ್ರಸದ್ಮಂ ಜಗಜ್ಜ
೫೯. ನಾನಮ್ಮ ಪಾದಪದ್ಮನಜೋರವಿರ ತಪೋವಿಳಾಸಿನಿಭುಜಂಗಂ ವಿಬುಧಜನ ಮನಃಪದ್ಮಿನಿ
ಪತಂಗಂ ದಿಗ್ವಳೆಯ ಧವಳಿತ ಕೀರ್ತ್ತ್ಯಾಂಗನಾಭರಣಂ ಶ್ರೀಮನ್ಮಹಾರಾಜ
೬೦. ಗುರು ಷಟ್ತರ್ಕ್ಕ ವಿದ್ಯಾನಿಧಿ ನಿರ್ವ್ವಾಣಸಕ್ತಿ ಪಣ್ಡಿತದೇವ ಗುರುಚರಣ ಸರಸಿರುಹ
ಷಟ್ಚರಣ ನೀತಿನಾಮಾವಳಿ ವಿರಾಜಮಾನರಪ್ಪ ಶ್ರೀಮದೀಸಾನಸಕ್ತಿ ಪಣ್ಡಿತ
೬೧. ದೇವರ್ಗ್ಗೆ ಶ್ರೀಮತ್ ಸೂರ್ಯ್ಯಾಚರಣ ಪಣ್ಡಿತ ದೇವರೆಲವಟ್ಟಿಯ ಮಾಳಬೇಸ್ವರ
ಮೊದಲಾಗೆ ತಮಗಾಳ್ವ ಸ್ಥಾನಂಗಳಂ ಕಾಲ್ಗರ್ಚ್ಚಿ ಧಾರಾಪೂರ್ಬ್ಬಕಂ ಮಾಡಿ ಕೊಟ್ಟರ್
೬೨. ಸ್ವಸ್ತಿ ಶ್ರೀಮತು ಚಾಳುಕ್ಯ ವಿಕ್ರಮವರ್ಷದ. ೮ನೆಯ ಜಯ ಸಂವತ್ಸರದ ಕಾರ್ತ್ತಿಕ
ಸುದ್ಧ ಬಿಜ (ದಿ)ಗೆ ಬೃಹಸ್ಪತಿವಾರದಂದು ಶ್ರೀಮನ್ಮಾಳಬೇ
೬೩. ಶ್ವರದೇವರ್ಗ್ಗೆ ಬಮ್ಮಗ್ರಾಮುಣ್ಣನುಂ ಎಪ್ಪದಿಂಬರುಂ ಮಾಳಲದೇವಿಯರ ಕಯ್ಯಲು
ನೂಱು ಗದ್ಯಾಣ ಪೊನ್ನಂ ಕೊಣ್ಡು ಕಗ್ಗೆಱೆಯ ಹರಿಯ
೬೪. ಲು ಕೊಟ್ಟ ಕಮ್ಮವಯ್ವತ್ತಾಱು ಇಂತೀ ಧರ್ಮ್ಮಮಂ ಪ್ರತಿಪಾಳಿಸಿದವರು ವಾರಣಾಸಿ
ಕುರುಕ್ಷೇತ್ರದೊಳೆ ಸಹಸ್ರ ಕವಿಲೆಯ ಕೋಡು ಕೊಳ್ಗಮಂ ಪೊನ್ನೊಳು

೬೫. ಕಟ್ಟಿಸಿ ವೇದಪಾರಗರಪ್ಪ ಸುಬ್ರಾಹ್ಮಣರ್ಗ್ಗೆಕೊಟ್ಟ ಫಲಮನೆಯ್ದುವರಿಂತೀ ಧರ್ಮ್ಮಮನಳಿದ ಮಹಾಪಾತಕಂ ವಾರಣಾಸಿ ಕುರುಕ್ಷೇತ್ರದೊಳೆ ಸಹಸ್ರ ಕವಿಲೆಯು

೬೬. ಮಂ ಸಹಸ್ರಬ್ರಾಹ್ಮಣರುಮಂ ಸಹಸ್ರ ತಪೋಧನರುಮನಳಿದ ಮಹಾ ಪಾತಕನಕು॥ ಸ್ವಸ್ತಿ ಸಮಸ್ತ ಪ್ರಸಸ್ತಿ ಸಹಿತಂ

೬೭. ಶ್ರೀಮನು ಮಹಾಮಣ್ಡಳೇಸ್ವರ ತೈಲಪದೇವರ ಪುತ್ರ ಮಲ್ಲಿಕಾರ್ಜುನ ದೇವರು

೬೮. ಸಿರಿಯಾದೇವಿಯರ ಪುತ್ರ ಮಾಚಿಗಾವುಣ್ಡನು ಮಾಳಿಬೇಶ್ವರ ದೇವರಿಗೆ ಮಾಡಿ ಕೊಟ್ಟರ್ಕ್ಕ ತಪೋಧನರ್ಗ್ಗೆ ಬಿಟ್ಟ ಗಟ್ದೆ ಮತ್ತ

---

ಕೊನೆಯ ಎರಡು ಸಾಲುಗಳನ್ನು ದೊಡ್ಡ ಅಕ್ಷರದಲ್ಲಿ ಬರೆಯಲಾಗಿದೆ. ಈ ಶಾಸನಗಳ ಪರಿವೀಕ್ಷಣೆಯ ಕಾಲದಲ್ಲಿ ನನ್ನೊಂದಿಗಿದ್ದು ಎಲ್ಲ ರೀತಿಯ ಸಹಾಯ-ಸಹಕಾರಗಳನ್ನು ನೀಡಿದವರು, ಕರ್ನಾಟಕ ವಿಶ್ವವಿದ್ಯಾಲಯದ ಜೈನಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ॥ ಎಸ್.ಪಿ. ಪಾಟೀಲ ಅವರು. ಶಾಸನಗಳಿರುವ ಸ್ಥಳಗಳನ್ನು ತೋರಿಸಿ, ಹೂಳಿರುವ ಶಾಸನಗಳನ್ನು ಅಗೆಯಿಸಿ ಅನುಕೂಲ ಕಲ್ಪಿಸಿದವರು ಯಳವಟ್ಟಿ ಗ್ರಾಮಸ್ಥರಾದ ಶ್ರೀಪಾದಪ್ಪ ಆದಪ್ಪ ಬೆನಕಪ್ಪನವರು, ಶಾಂತಿನಾಥ ಈಶ್ವರಪ್ಪ ಸುಂಕದ, ನಾಗಪ್ಪ ಮಲ್ಲಪ್ಪ ದಂಡಿನ, ದೇವೇಂದ್ರಪ್ಪ ದಣ್ಣಪ್ಪ ಬೆನಕಪ್ಪನವರ, ಭಗವಂತಪ್ಪ ಧರಣೇಂದ್ರಪ್ಪ ಉಪಾಧ್ಯಾಯ, ಛಾಯಪ್ಪ ಬೆನಕಪ್ಪನವರ ಶೇಕಪ್ಪ, ಚನ್ನಬಸಪ್ಪ ಮನ್ನಂಗಿ ಇವರೆಲ್ಲರಿಗೂ ಅನಂತ ಕೃತಜ್ಞತೆಗಳು.

# ಉತ್ಖನನ ಮತ್ತು ಶಾಸನ ಸಾಹಿತ್ಯಕ್ಕೆ ಪ್ರೊ. ಕುಂದಣಗಾರರ ಕೊಡುಗೆ

ಡಾ. ಕೆ. ಪಿ. ಈರಣ್ಣ

ಪ್ರೊ. ಕುಂದಣಗಾರರು ವೃತ್ತಿಯಿಂದ ಕನ್ನಡ ಪ್ರಾಧ್ಯಾಪಕರಾದರೂ ಪ್ರವೃತ್ತಿಯಿಂದ ಅವರು ಶಾಸನತಜ್ಞರೂ ಮತ್ತು ಪ್ರಾಚ್ಯಶಾಸ್ತ್ರ ತಜ್ಞರೂ ಆಗಿದ್ದರು.

“ಪುರಾತನ ನಿವೇಶನವನ್ನು ವ್ಯವಸ್ಥಿತವಾಗಿಯೂ ಶಾಸ್ತ್ರೀಯವಾಗಿಯೂ ಅಗೆಯುವ ಕಾರ್ಯಕ್ಕೆ ಉತ್ಖನನ (excavation) ಎಂದು ಕರೆಯಲಾಗುತ್ತದೆ. ಉತ್ಖನನವು ಪುರಾತತ್ವಶಾಸ್ತ್ರದಲ್ಲಿ ಬಳಸಲ್ಪಡುವ ವಿವಿಧ ತಂತ್ರಗಳಲ್ಲಿ ಅತಿ ಮುಖ್ಯವಾದುದು. ಪುರಾತತ್ವ ಸಂಶೋಧನೆಯ ಕಾರ್ಯದಲ್ಲಿ ಉತ್ಖನನವು ಹೊರಬೀಳುವ ವಸ್ತುಗಳು ಮತ್ತು ಅವುಗಳ ವಿಮರ್ಶೆಗಳ ನಡುವೆ ಸಂಪರ್ಕ ಕಟ್ಟಿಸುವ ಪ್ರಮುಖ ಸಾಧನವೆನಿಸಿದೆ. ಮುಂದಿನ ಅಧ್ಯಯನಕ್ಕಾಗಿ ಮೂಲ ಸಾಮಗ್ರಿಗಳನ್ನು ಅವುಗಳ ಖಚಿತ ಸಂದರ್ಭದಲ್ಲಿ ಪಡೆಯುವದಕ್ಕಾಗಿ ಪುರಾತತ್ವ ಶಾಸ್ತ್ರಜ್ಞನು ಉತ್ಖನನವನ್ನು ಜರುಗಿಸುತ್ತಾನೆ” (ಪುರಾತತ್ವಶಾಸ್ತ್ರ ಪರಿಚಯ ಡಾ. ಶ್ರೀನಿವಾಸ ಪಾಡಿಗಾರ, ಗಾಯತ್ರಿ ಪ್ರಕಾಶನ, ಧಾರವಾಡ ೧೯೮೭ ಪುಟ ೧೪೩-೪೪)

೧೯೨೭ರಲ್ಲಿ ಕೊಲ್ಹಾಪುರ ಸಂಸ್ಥಾನದ ಅಂದಿನ ದಿವಾನರಾಗಿದ್ದ ಅಣ್ಣಾಸಾಹೇಬ ಲಟ್ಟೆಯವರು ಪ್ರೊ. ಕುಂದಣಗಾರರನ್ನು ಕೊಲ್ಹಾಪುರಕ್ಕೆ ಕರೆಯಿಸಿಕೊಂಡು, ಅಲ್ಲಿಯ ರಾಜಾರಾಮ ಕಾಲೇಜಿನಲ್ಲಿ ಕನ್ನಡ ಪ್ರೊಫೆಸರರನ್ನಾಗಿ ನೇಮಿಸಿಕೊಂಡರು. ಜೊತೆಗೆ ಪ್ರಾಚ್ಯವಸ್ತು ವಿಭಾಗವನ್ನು ಅವರಿಗೆ ವಹಿಸಿಕೊಟ್ಟರು. ಈ ವಿಭಾಗವನ್ನು ಶ್ರೀಮಂತಗೊಳಿಸಬೇಕೆಂಬ ಉತ್ಕಟ ಇಚ್ಛೆಯಿಂದಾಗಿ ಕೊಲ್ಹಾಪುರ, ಬೆಳಗಾಂವ ಮತ್ತು ವಿಜಾಪುರ ಜಿಲ್ಲೆಗಳ ಹಳ್ಳಿಗಳಲ್ಲಿದ್ದ ಐತಿಹಾಸಿಕ ಸ್ಮಾರಕಗಳನ್ನು ಶಿಲಾಶಾಸನಗಳನ್ನು ಹುಡುಕುತ್ತ ತಿರುಗಿದರು. ಮನೆ-ಮಠಗಳಲ್ಲಿದ್ದ ಹಸ್ತಪ್ರತಿ, ತಾಮ್ರ ಶಾಸನಗಳನ್ನು ಸಂಗ್ರಹಿಸ ಹತ್ತಿದರು. ಎರಡು ವರ್ಷಗಳ ಅವಧಿಯಲ್ಲಿ ಪ್ರಾಚ್ಯವಸ್ತು ವಿಭಾಗಕ್ಕೆ ಹಲವಾರು ವಸ್ತುಗಳನ್ನು ತಮ್ಮ ಸ್ವಂತದ ಖರ್ಚಿನಿಂದ ಕೂಡಿಸಿದರು.

ಹೀಗೆ ಕೂಡಿಸಿದ ಸಾಮಗ್ರಿಗಳನ್ನು ವಿಜ್ಞಾನ ಓದಿದ ವಿದ್ಯಾರ್ಥಿಯಾದ ಪ್ರೊ. ಕುಂದಣಗಾರರು ಅವುಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವ ಸಲುವಾಗಿ ಪ್ರಾಕ್ತನ ಸಾಹಿತ್ಯ, ಸಂಶೋಧನೆಯ ತತ್ವಗಳನ್ನು ತಾವೇ ಅಭ್ಯಾಸ ಮಾಡಿದರು. ಶಾಸನಗಳ ಅಧ್ಯಯನಕ್ಕಾಗಿ ಲಿಪಿಶಾಸ್ತ್ರ ಕಲಿತರು, ‘ಯಾವುದೂ ನನಗೆ ಗೊತ್ತಿಲ್ಲ’ ಎಂದು ಹೇಳಿಕೊಳ್ಳದಂತೆ ಸಂಶೋಧನೆಗೆ ಬೇಕಾದುದೆಲ್ಲವನ್ನೂ ಸ್ವಾಧ್ಯಾಯದಿಂದ ಸಾಧಿಸಿದರು. ಅಂತೆಯೇ ಅವರ ದೃಷ್ಟಿಯು ಹತ್ತು-ಹಲವು ಕ್ಷೇತ್ರಗಳಲ್ಲಿ ಹರಿಯಿತು.

ಪ್ರಾಚ್ಯವಸ್ತು ವಿಭಾಗವನ್ನು ಇನ್ನಷ್ಟು ಶ್ರೀಮಂತಗೊಳಿಸಬೇಕೆಂಬ ಉತ್ಕಟ ಇಚ್ಛೆಯಿಂದಾಗಿ ಅವರು ಕೊಲ್ಹಾಪುರದ ಹತ್ತಿರದ ಬ್ರಹ್ಮಪುರಿ ಬೆಟ್ಟವನ್ನು ಯಾವುದೇ ಹಣಕಾಸಿನ ಸಹಾಯವನ್ನು ನಿರೀಕ್ಷಿಸದೇ ಸ್ವಂತ ಉತ್ಖನನ ಕಾರ್ಯವನ್ನು ಕೈಗೊಂಡರು. ಅದಕ್ಕಾಗಿ ಅವರು "ನಿತ್ಯ ನಸುಕಿನಲ್ಲೆದ್ದು ತಮ್ಮ ಹಳೆಯ ಸೈಕಲ್ಲಿಗೆ ಗುದ್ದಲಿ ಸಲಿಕೆಗಳನ್ನು ಹಾಕಿಕೊಂಡು ಬ್ರಹ್ಮಪುರಿ ಬೆಟ್ಟಕ್ಕೆ ಹೋಗುತ್ತಿದ್ದರು. ಮೂರು ತಾಸುಗಳ ಕಾಲ ಬೆಟ್ಟವನ್ನಗೆದು, ಸಂಸ್ಕೃತಿ ಇತಿಹಾಸಗಳ ಪಳೆಯುಳಿಕೆಗಳಾದ ಶಾಸನ, ಪಾತ್ರೆಗಳು, ಹಂಚುಗಳು, ನಾಣ್ಯಗಳು ಏನೆಲ್ಲ ವಸ್ತುಗಳನ್ನು ಸಂಗ್ರಹಿಸಿ ತರುವುದು. ಹತ್ತು ಗಂಟೆಗೆ ಕಾಲೇಜಿಗೆ ಹೋಗಿ ಸಂಜೆ ಕಂದೀಲದ ಮಂದ ಬೆಳಕಿನಲ್ಲಿ ಸಂಗ್ರಹಿಸಿ ತಂದ ವಸ್ತುಗಳ ಶಾಸ್ತ್ರೀಯ ಅಧ್ಯಯನ. ಇದು ಅವರ ನಿರಂತರ ಕ್ರಿಯೆ. ಎರಡು ವರ್ಷಗಳಲ್ಲಿ ಪ್ರಾಚ್ಯವಸ್ತು ವಿಭಾಗದಲ್ಲಿ ಹಿಡಿಸದಷ್ಟು ವಸ್ತುಗಳನ್ನು ಸಂಗ್ರಹಿಸಿದರು ಮತ್ತು ಕೊಲ್ಹಾಪುರದ ಪ್ರಾಚೀನ ಇತಿಹಾಸ ಮತ್ತು ಸಂಸ್ಕೃತಿ ಬಿಂಬಿಸುವ ಅಸಂಖ್ಯ ಪ್ರಾಚ್ಯವಸ್ತುಗಳನ್ನು ಸಂಗ್ರಹಿಸಿದರು. ಹೀಗೆ ೧೫ ವರ್ಷಗಳ ಕಾಲ ನಿರಂತರವಾಗಿ ಬ್ರಹ್ಮಪುರಿ ಬೆಟ್ಟವನ್ನೇರಿ ಅಗಿದು ತೆಗೆದು ವಿಶ್ಲೇಷಿಸಿ ಹಲವಾರು ಲೇಖನಗಳನ್ನು ಬರೆದು ಸಂಶೋಧಕರ ಕಣ್ಣು ತೆರೆಯಿಸಿದರು. ಪ್ರಾಚ್ಯಶಾಸ್ತ್ರ ವಿದ್ವಾಂಸರಾದ ಮಾರ್ಟಿಮರ ವೀಲರ ಅವರು ೧೯೪೬ರಲ್ಲಿ ಕೊಲ್ಹಾಪುರಕ್ಕೆ ಬಂದಾಗ ಪ್ರೊ. ಕುಂದಣಗಾರರ ಸಾಧನೆಯನ್ನು ಕಂಡು "ಇದು ಅದ್ಭುತ, ಆಶ್ಚರ್ಯ ಹುಟ್ಟಿಸುವಂಥದು" ಎಂದು ಪ್ರಶಂಸಿಸಿದ್ದಾರೆ. (ಮಗು . ಬಿರಾದಾರ)

ಪ್ರಾಚ್ಯವಿಷಯಗಳನ್ನು ಕುರಿತು ಪ್ರೊ॥ ಕುಂದಣಗಾರವರು ೧೯೨೯ರಲ್ಲಿ "Some notes on Shri Mahlakshmi Temple, Kolhapur" ಎಂಬ ಸಂಶೋಧನಾತ್ಮಕ ಕೃತಿಯನ್ನು ಹೊರತಂದರು. ಗಾತ್ರದಲ್ಲಿ ಚಿಕ್ಕದಾದರೂ ಅದ್ಭುತವಾದ ವಿಷಯಗಳನ್ನು ಒಳಗೊಂಡಿರುವ ಈ ಕೃತಿಯು ಇಡೀ ಮಹಾರಾಷ್ಟ್ರದ ಆರಾಧ್ಯ ದೇವತೆಯಾದ ಮಹಾಲಕ್ಷ್ಮಿಯ ಮಂದಿರವನ್ನು ಕುರಿತ ಈ ಸಂಶೋಧನಾ ಕೃತಿ, ಮಹಾರಾಷ್ಟ್ರದ ಮನೆ ಮನೆಯ ಮಾತಾಗುವುದರ ಜೊತೆಗೆ, ರಾಷ್ಟ್ರದ ವಿದ್ವಾಂಸರು ಪ್ರೊ. ಕುಂದಣಗಾರರನ್ನು ಒಬ್ಬ ಅರ್ಹ ಸಂಶೋಧಕನೆಂದು ಗುರುತಿಸುವಂತೆ ಮಾಡಿತು. ಅದಕ್ಕೆ ಮುನ್ನುಡಿ ಬರೆದ ಎಚ್. ಹೆರಾಸರು ".... Prof. Kundanagar will be in future associated with those of messrs. T.A. Gopinath Rao, H. Krishna Shastri, P.V. Jagadisha Ayyar, A.H. Lanhurst, Prof. Jouvean Dubbreuil and Rao Bahadur R Narasimhachar"ರಂತಹ ಹಿರಿಯ ಸಂಶೋಧಕರ ಸಾಲಿಗೆ ಸೇರಿಸಿದವು. ಹೀಗೆ ಮಹಾಲಕ್ಷ್ಮಿಯನ್ನು ಕುರಿತು ಇಂಗ್ಲಿಷಿನಲ್ಲಿ ಪುಸ್ತಕ ಬರೆದವರೆಂದು ಬಹಳಷ್ಟು ಮರಾಠಿಗರು ಪ್ರೊ ಕುಂದಣಗಾರರನ್ನು ಗೌರವದಿಂದ ಕಾಣಹತ್ತಿದರು.

ಪ್ರಾಚ್ಯವಿಷಯಗಳನ್ನು ಕುರಿತು ಪ್ರೊ. ಕುಂದಣಗಾರವರು ಬರೆದ "Archaeological Finds in Brahmapur Excavations, Kolhapur" ಲೇಖನವು ಮಹತ್ವಪೂರ್ಣವಾದುದು. ಈ ಲೇಖನದಲ್ಲಿ ಅವರು ತಾವು ಉತ್ಖನನದಲ್ಲಿ ಸಂಗ್ರಹಿಸಿದ ಅವಶೇಷಗಳನ್ನು ವಿಶ್ಲೇಷಣೆ ಮಾಡುತ್ತಾ ಅಲ್ಲಿ ದೊರೆತ ನಾಣ್ಯಗಳನ್ನು ಓದಿ ಶಾತವಾಹನರ ಕಾಲದ ಕನ್ನಡಿಗರ ಜನಜೀವನದ ಸ್ಪಷ್ಟವಾದ ಚಿತ್ರವನ್ನು ಜನತೆಯ ಮುಂದಿಟ್ಟರು. ಅದರಿಂದ ಪ್ರೊ. ಕುಂದಣಗಾರರ ಕೀರ್ತಿ ಸಂಶೋಧನೆಯ ಕ್ಷೇತ್ರದೊಳಗೆ ಸುತ್ತೆಲ್ಲ ಪಸರಿಸಿದಂತಾಯಿತು. ವಿದೇಶಿಯರ ಸ್ತುತಿಗೆ ಅವರು ಪಾತ್ರರಾಗುವಂತಾಯಿತು.

ಮೂರನೆಯದಾಗಿ 'ಕೊಲ್ಹಾಪುರದೊಳಗಿನ ಪ್ರಾಚೀನ ಕಾಲದ ನಾಣ್ಯಗಳು" ಎಂಬ ಲೇಖನದಲ್ಲಿ ಅವರು ಬ್ರಹ್ಮಪುರಿಯ ಉತ್ಖನನ ಸಂದರ್ಭದಲ್ಲಿ ಮತ್ತು ಪಂಚಗಂಗಾ ತೀರದಲ್ಲಿ

ದೊರೆತ ನಾಣ್ಯಗಳನ್ನು ವಿಶ್ಲೇಷಣೆ ಮಾಡಿದ್ದು ಅಲ್ಲದೆ ಅವುಗಳ ಮೇಲೆ ಇರುವ ಶಾಸನಗಳನ್ನು ಓದಿ ಅವು ಶಾತವಾಹನರ ರಾಜರುಗಳಾದ 'ಮಾಡರಿಪುತ್ರಸ ಸಿವಲಕುರಸ' 'ವಾಸಿಠೀಪುತ್ರಸ ವಿಲಿವಾಯಕುರಸ' ಗೋತಮಿಪುತ್ರಸ ವಿಲಿಯಾಮ ಕುರಸ' ಎಂಬ ಹೆಸರುಗಳು ಇವೆ ಎಂದು ಹೇಳಿ ಆ ಕುರಿತು ವಿಮರ್ಶಾತ್ಮಕವಾದ ಲೇಖನವನ್ನು ಬರೆದು ಪ್ರಕಟಿಸಿದರು. ವಿದೇಶಿಯರ ಗಮನ ಸೆಳೆಯಲು "Andra coins in the Lord Irwin Agricultural Museum, Kolhapur" ಎಂಬ ಆಂಗ್ಲ ಲೇಖನವನ್ನು ಬರೆದರು.

ನಾಲ್ಕನೆಯದಾಗಿ, 'ಪ್ರಾಚೀನ ಕನ್ನಡ ನಾಡಿನ ನಾಣ್ಯ ಪದ್ಧತಿ' ಕನ್ನಡದಲ್ಲಿ ತೀರ ಅಪರೂಪವಾದ ಲೇಖನ. ಈ ಲೇಖನದಲ್ಲಿ ಅವರು 'ಕನ್ನಡ ನಾಡಿನಲ್ಲಿ ತೀರ ಪ್ರಾಚೀನ ನಾಣ್ಯಗಳಾದ 'Punch Marked' ನಾಣ್ಯದಿಂದ ಪ್ರಾರಂಭಿಸಿ ಅವುಗಳು ಬೆಳೆದು ಬಂದ ಬಗೆಯನ್ನು ಚರ್ಚಿಸಿದ್ದಾರೆ.

ಐದನೆಯದಾಗಿ 'ಕೊಲ್ಹಾಪುರವು ಆಗ-ಈಗ' ಎಂಬ ಲೇಖನದಲ್ಲಿ 'ಕೊಲ್ಹಾಪುರವು ಪುರಾತನ ಕಾಲದಿಂದ ಹಿಂದುಸ್ತಾನದಲ್ಲಿ ಪ್ರಸಿದ್ಧವಾಗಿದೆ ಅದಕ್ಕೆ ಆಗ 'ಕರವೀರ' ಎಂಬ ಹೆಸರಿದ್ದಿತು. ಅದನ್ನು ಶ್ರೀಕೃಷ್ಣನ ಪೂರ್ವಜರು ಕಟ್ಟಿಸಿದರೆಂದೂ ಕೃಷ್ಣನ ಕಾಲಕ್ಕೆ ಅಲ್ಲಿ ಶೃಗಾಲ ವಾಸುದೇವ ಎಂಬ ಕ್ರೂರವಾದ ಅರಸನು ರಾಜ್ಯವಾಳುತ್ತಿದ್ದನೆಂದೂ ಕೃಷ್ಣನು ಅವನನ್ನು ಕೊಂದು ಆತನ ಮಗನಿಗೆ ಪಟ್ಟಗಟ್ಟಿದನೆಂದೂ ಮಹಾಭಾರತದೊಳಗಿನ ವಿಷ್ಣುಪರ್ವದ ೩೧ನೆಯ ಸರ್ಗದಲ್ಲಿ ಹೇಳಿದೆ ಎಂದಿದ್ದಾರೆ. ಕೊಲ್ಹಾಪುರದ ಇತಿಹಾಸವನ್ನು ಅಲ್ಲಿಂದ ಪ್ರಾರಂಭಿಸಿ ಆಧುನಿಕದವರೆಗಿನ ಅದರ ಬೆಳವಣಿಗೆಯನ್ನು ಚರ್ಚಿಸಿದ್ದಾರೆ.

ಇಂಗ್ಲೀಷಿನಲ್ಲಿ "Antiquities of Hukkeri" ಮತ್ತು Kopeshvar temple, Kidrapur ಎಂಬ ಲೇಖನಗಳನ್ನು ಅಲ್ಲಿಯ ಅವಶೇಷಗಳು ಮತ್ತು ಶಾಸನಗಳ ಆಧಾರದಿಂದ ಬರೆದು ಪ್ರಕಟಿಸಿದರು. ಪ್ರೊ. ಕುಂದಣಗಾರರು ಉತ್ಖನನದಲ್ಲಿ ಮಾಡಿದ ಮೂಲಭೂತವಾದ ಕೆಲಸ ಗಾತ್ರದಲ್ಲಿ ಕಿರಿದೆನಿಸಿದರೂ ಹಾಕಿಕೊಟ್ಟ ಉದಾಹರಣೆ ತೋರಿಕೊಟ್ಟ ಮಾರ್ಗ ಅದ್ವಿತೀಯವಾದುದಾಗಿದೆ.

ಪ್ರೊ. ಕುಂದಣಗಾರರು ಕರ್ನಾಟಕ ಇತಿಹಾಸ ರಚನೆಗೆ ಘನವಾದ ಸೇವೆಯನ್ನು ಸಲ್ಲಿಸಿರುವರು. ಭೂಸಂಶೋಧನೆಯಲ್ಲಿ ಭಾಗವಹಿಸಿದಂತೆ ಅಲ್ಲಿ ದೊರಕಿದ ನಾಣ್ಯಗಳನ್ನು ಓದಿ ಶಾಸನ ಮತ್ತು ತಾಮ್ರ ಪಟಗಳನ್ನು ಪ್ರಕಟಿಸಿ ಎಷ್ಟೊ ರಾಜಮನೆತನಗಳ ಚರಿತ್ರೆಯ ವಿಷಯವಾಗಿ ಸಂದಿಗ್ಧವಾದ ಸಮಸ್ಯೆಗಳ ಮೇಲೆ ಹೊಸ ಬೆಳಕನ್ನು ಬೀರಿದ್ದಾರೆ. ಅವರು ಈ ಕಾರ್ಯದಲ್ಲಿ ಮಾಡಿದ ಸೇವೆ ಅವರ್ಣನೀಯವಾಗಿದೆ.

ಪ್ರೊ. ಕುಂದಣಗಾರರು ಶಿಲಾಲಿಪಿಗಳ ಮಹತ್ವವನ್ನು ಕುರಿತು ಹೇಳುತ್ತಾ "ದಕ್ಷಿಣದಲ್ಲಿ ಅದರಲ್ಲಿಯೂ ಕರ್ನಾಟಕದಲ್ಲಿ ಶಿಲಾಲಿಪಿಗಳು ಊರೂರುಗಳಲ್ಲಿ ಕಾಣಸಿಗುತ್ತವೆ. ಅಲ್ಲಿ ಆಳಿದ ಪುರಾತನ ಅರಸು ಮನೆತನಗಳ ಹೆಗ್ಗುರುತುಗಳಿವು. ಆಂಧ್ರರು, ಕದಂಬರು, ಬಾದಾಮಿ ಚಾಲುಕ್ಯರು, ಗಂಗರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಪಲ್ಲವರು, ಪಾಂಡ್ಯರು, ವಿಜಯನಗರದ ರಾಯರು ಮುಂತಾದ ಅರಸುಮನೆತನದವರು ಅಲ್ಲಿ ಆಳಿರುವರು. ಅವರು ದೇವಸ್ಥಾನ, ಮಠ, ಅಗ್ರಹಾರ ಬ್ರಹ್ಮಪುರಿಗಳಿಗೆ ಮಾಡಿದ ದಾನಗಳು ಆಚಂದ್ರಾರ್ಕವಾಗಿ ನಡೆಯಬೇಕೆಂದು ಆ ದಾನಶಾಸನಗಳನ್ನು ಕಲ್ಲು ಹಲಗೆಗಳ ಮೇಲೆ ಕೆತ್ತಿಸಿಟ್ಟಿರುವರು. ಅವೇ ಈ ಶಿಲಾಲಿಪಿಗಳು. ಇವುಗಳಲ್ಲೆಲ್ಲ ಐತಿಹಾಸಿಕ ಸಾಧನ ಸಾಮಗ್ರಿ ತುಂಬಾ ತುಂಬಿರುತ್ತದೆ" ಎಂದಿದ್ದಾರೆ.

ಪ್ರೊ. ಕುಂದಣಗಾರರು ಸಹ ಶಾಸನಗಳನ್ನು ನಾಲ್ಕು ವಿಧವಾಗಿ ವಿಂಗಡಿಸಿ ವಿವರಿಸಿರುವುದುಂಟು. ಅವುಗಳಲ್ಲಿ ದಾನಶಾಸನಗಳನ್ನು ಕುರಿತು ಹೇಳುತ್ತಾ "ಅರಸನ ಸಮಕ್ಷಮದಲ್ಲಿ ಕೊರೆಯಿಸಲಾಗುತ್ತಿತ್ತು. ದಾನ ಮಾಡುವವರು ಅರಸನಿಂದ ಸಾಮಾನ್ಯ ಜನರವರೆಗೆ ಎಲ್ಲ ಜಾತಿಯ ಜನರು, ದಾನದ ವಸ್ತು ಭೂಮಿ, ಮನೆಯ ನಿವೇಶನ, ಕಾಳುಕಡಿ, ನಾಣ್ಯ, ನಗದು, ಎಣ್ಣೆ, ಎಲೆ, ಅಡಕೆ ಮುಂತಾದವು ಅಥವಾ ಸರಕುಗಳ ಮೇಲಿನ ಸುಂಕ ಮುಂತಾದವುಗಳನ್ನು ದಾನವಾಗಿ ನೀಡುತ್ತಿದ್ದರು. ಇದು ಪ್ರಾಚೀನ ಕಾಲದ ದಾನಶಾಸನ ಪದ್ಧತಿಯ ಅವಶೇಷ ಎಂದಿದ್ದಾರೆ. ಅವರು ತಮ್ಮ "Inscriptions in Northern Karnataka and the Kolhapur State" ಎಂಬ ಗ್ರಂಥದಲ್ಲಿ ೪೧ ಶಾಸನಗಳು ಈ ವರ್ಗಕ್ಕೆ ಸೇರಿದವುಗಳಾಗಿವೆ.

ಎರಡನೆಯ ವಿಧವಾದ ವೀರಗಲ್ಲುಗಳನ್ನು ಕುರಿತು ಹೇಳುತ್ತಾ "ಗಡಿಗಳಲ್ಲಿ ನೆರೆಯೂರಿನ ಪುಂಡರು ದನ ಕರುಗಳನ್ನು ಸೆರೆ ಹಿಡಿದುಕೊಂಡು ಹೋಗುತ್ತಿರುವ ಸಂದರ್ಭದಲ್ಲಿ ಅರಸನ ಅಥವಾ ಆತನ ಪ್ರತಿನಿಧಿಯ ಅಪ್ಪಣೆಯಿಂದ ವೀರನೊಬ್ಬನು ಅವಸರದಿಂದ ಹೋಗಿ ಅವರ ಮೇಲೆ ಎರಗಿ ಹೋರಾಡಿ ತುರುಗಳನ್ನು ಬಿಡಿಸಿ ಊರಕಡೆಗೆ ಅಟ್ಟುವನು. ಕೆಲವು ಸಲ ಒಬ್ಬಂಟಿಗನಾಗಿ ಕಾದಬೇಕಾಗಿ ಬಂದುದರಿಂದ ಗಾಯಗೊಂಡು ವೀರಸ್ವರ್ಗ ಪಡೆಯುವವನನ್ನು ಇಂತಹ ವೀರನ ಸ್ಮಾರಕವು ವೀರಗಲ್ಲು" ಎಂದಿದ್ದಾರೆ. ಮೇಲಿನ ತಮ್ಮ ಗ್ರಂಥದಲ್ಲಿ ಅಂತಹ ಒಂದು ವೀರಗಲ್ಲನ್ನು (ನಂ. ೩೫) ಸಂಗ್ರಹಿಸಿದ್ದಾರೆ.

ನಿಷಿದಿಗೆಗಳು, ಇನ್ನೊಂದು ಬಗೆಯ ಶಾಸನ ಪ್ರಕಾರವಾಗಿದ್ದು ಅವು ಜಿನಮುನಿಗಳ ಸ್ಮಾರಕಗಳಾಗಿದ್ದು ಅಂತಹ ಒಂದು ನಿಷದಿಕಲ್ಲನ್ನು ಇಂಗಳೇಶ್ವರ ಗ್ರಾಮದಿಂದ ಸಂಗ್ರಹಿಸಿದ್ದಾರೆ (ನಂ. ೩೮) ಇನ್ನೊಂದು ಬಗೆಯದೆಂದರೆ 'ಸತಿಗಲ್ಲು (ಮಾಸತಿಗಲ್ಲುಗಳು) ಅಂತಹ ಯಾವುದೇ ಶಾಸನವು ಮೇಲಿನ ಸಂಗ್ರಹದಲ್ಲಿ ಇರುವುದಿಲ್ಲ.

ಶಾಸನ ಸಾಹಿತ್ಯವನ್ನು ಕುರಿತು ಪ್ರೊ. ಕುಂದಣಗಾರರು ಬರೆದುದೆಲ್ಲ ಬಂಗಾರ. ಇತರ ಪ್ರಕಾರಗಳಲ್ಲಿಂತೊ (ಕಾವ್ಯ, ಸಂಪಾದನೆ, ನಾಟಕ, ಕಾದಂಬರಿ) ಅಂತೆ ಶಾಸನ ಪ್ರಕಾರದಲ್ಲೂ ಅವರ ಸಾಧನೆ ಗಣ್ಯವಾದುದು. ಅದುವೆ ಅವರು ಪ್ರಕಟಿಸಿದ "Inscriptions in Northern Karnataka and the Kolhapur State (5th May 1939)" ಈ ಗ್ರಂಥದಲ್ಲಿ ಅವರು ಉತ್ತರ ಕರ್ನಾಟಕ ಮತ್ತು ಕೊಲ್ಹಾಪುರ ಪ್ರದೇಶದ ಒಟ್ಟು ೪೩ ಶಾಸನಗಳನ್ನು ಸಂಗ್ರಹಿಸಿ, ಸಂಪಾದಿಸಿ ಪ್ರಕಟಿಸಿದ್ದಾರೆ. ಅವುಗಳಲ್ಲಿ ವಿಜಾಪುರ ಜಿಲ್ಲೆಯ ಬಸವನ-ಬಾಗೇವಾಡಿ ತಾಲೂಕಿನ ಇಂಗಳೇಶ್ವರದ ೫ ಶಾಸನಗಳು, ಮುತ್ತಗಿ ಗ್ರಾಮದ ೬ ಶಾಸನಗಳು, ವಿಜಾಪುರದ ಮೂಜಿಯಂನಲ್ಲಿರುವ ೪ ಶಾಸನಗಳು ಮತ್ತು ವಿಜಾಪುರದ ಅರೇಕಿಲ್ಲಾದಲ್ಲಿಯ ಒಂದು. ಬೆಳಗಾಂವಿ-ಬಾಗಲಕೋಟೆ ರಸ್ತೆಯಲ್ಲಿರುವ ಒಂದು ಮತ್ತು ನಿಡಗುಂದಿ ಗ್ರಾಮದಿಂದ ಒಂದು ಹೀಗೆ ಒಟ್ಟು ೧೮ ಶಾಸನಗಳನ್ನು ಸಂಗ್ರಹಿಸಿದರೆ, ಬೆಳಗಾಂವ ಜಿಲ್ಲೆಯ ೬ ಶಾಸನಗಳನ್ನು ಸಂಗ್ರಹಿಸಿದ್ದಾರೆ. ಅವುಗಳಲ್ಲಿ ರಾಯಬಾಗದ ಎರಡು ಶಾಸನಗಳು (ಈಗ ಕೊಲ್ಹಾಪುರದ ಇರ್ವಿನ್ ಅಗ್ರಿಕ್ಚರ್ ಮೂಜಿಯಂದಲ್ಲಿ ಇಡಲಾಗಿದೆ) ಶೇಡಬಾಳದ ಒಂದು, ಹನ್ನಿಕೇರಿಯ ಒಂದು ಕೊರಟನೂರಿನ ೧ ಶಿರಸಂಗಿಯ ೧.

ಕೊಲ್ಹಾಪುರ ಪ್ರದೇಶದಿಂದ ೧೯ ಶಾಸನಗಳನ್ನೂ ಸಂಗ್ರಹಿಸಿದ್ದಾರೆ. ಅವುಗಳಲ್ಲಿ ಹೆಚ್ಚಿನವು ಕ್ರಿದ್ರಾಪುರದಲ್ಲಿರುವ ಕೂಪೇಶ್ವರ ದೇವಾಲಯದಲ್ಲಿಯ (ಹತ್ತು) ಶಾಸನಗಳಾದರೆ ಮೂರು ಶಾಸನಗಳನ್ನು ಆಳತೆಗೆ ಗ್ರಾಮದಲ್ಲಿರುವ ರಾಮಲಿಂಗೇಶ್ವರ ದೇವಾಲಯದಿಂದ ಸಂಗ್ರಹಿಸಿದ್ದಾರೆ.

ವಡಗಾಂವಿಯ ಒಂದು ಜುಗಳ ಗ್ರಾಮದಲ್ಲಿ ಒಂದು ಕೊಲ್ಹಾಪುರದ ಇರ್ವಿನ್ ಅಗ್ರಿಕಲ್ಚರ್ ಮ್ಯೂಜಿಯಂದಲ್ಲಿಯ ಎರಡು, ನಗರಸಭೆಯ ಕಟ್ಟಡದಲ್ಲಿ ಒಂದು. ಅಲ್ಲಿಂದಲೆ (ಕೊಲ್ಹಾಪುರದಿಂದಲೆ) ಕ್ರಿ.ಶ. ೧೦೪೫ಕ್ಕೆ ಸೇರಿದ ತಾಮ್ರಪಟವನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ.

ಇವರು ಸಂಗ್ರಹಿಸಿದ ೪೩ ಶಾಸನಗಳನ್ನು ಕಾಲಾನುಕ್ರಮದಲ್ಲಿ ಹೇಳುವದಾದರೆ ಕ್ರಿ.ಶ. ೧೦೪೫ಕ್ಕೆ ಸೇರಿದ ಶಾಸನ ಪ್ರಾಚೀನವೆನಿಸಿದರೆ ಕ್ರಿ.ಶ. ೧೭೭೪ಕ್ಕೆ ಸೇರಿದ ಶಾಸನವು ಕೊನೆಯದಾಗಿದೆ.

ರಾಜಮನೆತನದ ದೃಷ್ಟಿಯಿಂದ ನೋಡಿದಾಗ -

| | | | |
|---|---|---|---|
| ೧. | ಕಲ್ಯಾಣಿ ಚಾಳುಕ್ಯರ | - | ೧೪ ಶಾಸನಗಳು |
| ೨. | ಕಲಚೂರಿಯರ | - | ೦೩ ಶಾಸನಗಳು |
| ೩. | ದೇವಗಿರಿಯಾದವರ | - | ೦೫ ಶಾಸನಗಳು |
| ೪. | ಸವದತ್ತಿಯ ರಟ್ಟರ | - | ೦೨ ಶಾಸನಗಳು |
| ೫. | ಕೊಲ್ಹಾಪುರದ ಶಿಲಾಹಾರರ | - | ೧೨ ಶಾಸನಗಳು |
| ೬. | ರಾಜರ ಹೆಸರಿಲ್ಲದ ತ್ರುಟಿತ | - | ೦೭ ಶಾಸನಗಳು |
| | ಒಟ್ಟು | - | ೪೩ ಶಾಸನಗಳು |

ಚಾಲುಕ್ಯ ಅರಸರಲ್ಲಿ ಆಹವಮಲ್ಲ ತೈಲಪ, ಸೋಮೇಶ್ವರ, ಎರಡನೆಯ ಸೋಮೇಶ್ವರ, ಮೂರನೆಯ ಸೋಮೇಶ್ವರ, ಆರನೆಯ ವಿಕ್ರಮಾದಿತ್ಯ, ಎರಡನೆಯ ಜಗದೇಕಮಲ್ಲ, ಮೂರನೆಯ ತೈಲಪನ ಕಾಲಕ್ಕೆ ಸಂಬಂಧಿಸಿದ ಶಾಸನಗಳಿದ್ದರೆ. ಕಲಚೂರಿ ಬಿಜ್ಜಳ ಮತ್ತು ಸೋವಿದೇವನ ಶಾಸನಗಳಿವೆ. ದೇವಗಿರಿ ಯಾದವರ ಬಿಲ್ಲಮ, ಜೈತುಗಿ, ಸಿಂಘನಾದೇವ ಮತ್ತು ಮಹಾದೇವರ ಶಾಸನಗಳಿವೆ, ಸವದತ್ತಿ ರಟ್ಟರ ಲಕ್ಷ್ಮಿದೇವ ಮತ್ತು ಎರಡನೆಯ ಕಾರ್ತಿವೀರ್ಯನ ಶಾಸನಗಳಿದ್ದರೆ, ಕೊಲ್ಹಾಪುರದ ಶಿಲಾಹಾರರ ವಿಜಯಾದಿತ್ಯ, ಭೋಜದೇವ ಮತ್ತು ಶಿರಿಯಣ್ಣರ ಶಾಸನಗಳು ಈ ಸಂಪುಟದಲ್ಲಿ ಇವೆ.

ಗ್ರಂಥದ ಪ್ರಾರಂಭದಲ್ಲಿ ೫೮ ಪುಟಗಳ ಸುದೀರ್ಘವಾದ, ವಿಶ್ಲೇಷಣಾತ್ಮಕವಾದ, ವಿದ್ವತ್ಪೂರ್ಣವಾದ ಪ್ರಸ್ತಾವನೆಯನ್ನು ಆಂಗ್ಲಭಾಷೆಯಲ್ಲಿ ಬರೆದಿದ್ದಾರೆ. ಪ್ರಸ್ತಾವನೆಯ ಪೂರ್ವದಲ್ಲಿಯೇ ಈ ಗ್ರಂಥವನ್ನು ಕೊಲ್ಹಾಪುರದ ಮಹಾರಾಜರಾಗಿದ್ದ ಸರ್, ಶ್ರೀ ರಾಜಾರಾಮ ಛತ್ರಪತಿ ಮಹಾರಾಜರಿಗೆ ಅರ್ಪಣೆ ಮಾಡಿದ್ದಾರೆ ಅಲ್ಲದೆ ಪ್ರಾರಂಭದಲ್ಲಿ ಶಾಸನಗಳ ದಿನಾಂಕ ಮತ್ತು ಸೈಜುಗಳು, ಶಾಸನಗಳ ಪರಿಸ್ಥಿತಿಯನ್ನು ಹೇಳಿ ಪ್ರಸ್ತಾವನೆಯನ್ನು ಪ್ರಾರಂಭಿಸಿದ್ದಾರೆ.

ಈ ಪ್ರಸ್ತಾವನೆಯ ಪ್ರಾರಂಭದಲ್ಲಿ ಶಾಸನಗಳ ಮಹತ್ವ ಮತ್ತು ಪ್ರಕಾರಗಳನ್ನು ಹೇಳಿದ್ದಾರೆ. ಈ ಸಂಗ್ರಹದಲ್ಲಿರುವ ಶಾಸನಗಳ ಐತಿಹಾಸಿಕ ಮಹತ್ವವನ್ನು ಹೇಳುತ್ತಾ "The first and foremost important thing is that they supply historical information and geneologies of the ruling dynasties" (INKKS page 4)

The next important historical information to be found in them is of the heroic deeds of the King and his generals. (ಅದೇ ಪುಟ ೫)

The third important thing noticed is the idea of feudal system adopted for the sake of smooth working of the government monchinery. The king emperor, mahapradhanas, mahamandalesvara, mandalesvara,

mahasamanta, samanta dandanatha, prabhu, nayaka, gouda and heggade etc. (ಅದೇ ಪುಟ ೫)

ಉದಾಹರಣೆಗೆ ಶಾಸನ ನಂ ೨೧ರಲ್ಲಿ "ಬಿಜ್ಜಲದೇವಂ ತತ್ಪಾದಪದ್ಮೋಪ ಜೀವಿತರುಂ ಮಹಾಮಾತ್ಯಪದವೀ ವಿರಾಜಿತರು ಮಪ್ಪ ಸೇನಾಧಿಪತಿ ಶ್ರೀಕರಣಂ ಹರಿದೇವಯ್ಯ ದಂಣ್ಣನಾಯಕರ ಮಗಂ, ರಾಜಾಧ್ಯಕ್ಷಂ, ಸುಂಕಪೆರ್ಗ್ಗಡೆ ದಾಸಿಮಯ್ಯನಾಯಕರು. ಇದಲ್ಲದೆ ವ್ಯಾಪಾರಿಗಳಾದ ಶೆಟ್ಟಿ, ಶೆಟ್ಟಿಗುಪ್ತರು ಗಾತ್ರಿಗರು, ಗೌರರು ಮುಂತಾದವರ ಉಲ್ಲೇಖಗಳಿವೆ ಮತ್ತು ಅವರು ನೀಡಿದ ದಾನಗಳನ್ನು ಕುರಿತು ಹೇಳಿದ್ದಾರೆ. ಅಲ್ಲದೆ ದೇವಾಲಯಗಳ ಕಟ್ಟಡ, ಸ್ಥಾನದ ಆಚಾರ್ಯರಿಗೆ ನೀಡಿದ ದಾನಗಳ ಉಲ್ಲೇಖಗಳನ್ನು ವಿವರಿಸಿದ್ದಾರೆ. ಧಾರ್ಮಿಕ ಸ್ಥಿತಿ, ಶೈವ ಆಚಾರ್ಯರ ಕುರಿತು ಚರ್ಚಿಸಿದ್ದಾರೆ. ಸಮಾಜ, ಭಾಷೆ ಮತ್ತು ಸಾಹಿತ್ಯಿಕ ಅಂಶಗಳನ್ನು ವಿಮರ್ಶಿಸಿದ್ದಾರೆ. ಅಲ್ಲದೆ ಯಾವ ಯಾವ ರಾಜರ ಶಾಸನಗಳಿವೆ ಅವುಗಳ ಐತಿಹಾಸಿಕ ಮಹತ್ವವನ್ನು ವಿಶ್ಲೇಷಿಸಿದ್ದಾರೆ. ಪ್ರೊ. ಕುಂದಣಗಾರವರದು ಶಾಸನವನ್ನು ಕುರಿತು ಇದೊಂದೇ ಗ್ರಂಥವಾದರೂ ಅತ್ಯಂತ ಮೌಲಿಕವಾದ ವಿಷಯವನ್ನು ನೀಡುವಂತಹದಾಗಿದೆ.

ಶಾಸನಗಳನ್ನು ಕುರಿತು ಪ್ರೊ. ಕುಂದಣಗಾರವರು ಏಳು ಲೇಖನಗಳನ್ನು ಬರೆದಿದ್ದಾರೆ (ಮೂರು ಕನ್ನಡದಲ್ಲಿ, ನಾಲ್ಕು ಇಂಗ್ಲೀಷಿನಲ್ಲಿ) ಅವುಗಳೆಂದರೆ -

1. ಕೊಕಟನೂರು ಚಂದ್ರೇಶ್ವರ ದೇವಾಲಯದೊಳಗಿನ ಶಿಲಾಶಾಸನ
2. ಸ್ವಾದಿಯ ತಾಮ್ರ ಶಾಸನಗಳು
3. ಗೋಕಾಕಿನ ತಾಮ್ರ ಶಾಸನಗಳು
4. Sirasangi Inscription of Grameshvar temple
5. Rayabhag Inscription of Dasimarasa
6. Marmuri Copper plate grant of the Western Chalukya Satyasraya
7. Vijayanagara Copper plate Inscription

**ಕೊಕಟನೂರ ಚಂದ್ರೇಶ್ವರ ದೇವಾಲಯದೊಳಗಿನ ಶಿಲಾಶಾಸನ**

ಈ ಶಾಸನವನ್ನು ಅವರು ತಮ್ಮ 'ಉತ್ತರ ಕರ್ನಾಟಕ ಮತ್ತು ಕೊಲ್ಹಾಪುರ ರಾಜ್ಯದೊಳಗಿನ ಶಾಸನಗಳು' ಎಂಬ ಪುಸ್ತಕದಲ್ಲಿಯ ೧೮ನೆಯ ನಂಬರಿನ ಶಾಸನವಾಗಿ ಸೇರಿಸಿದ್ದಾರೆ. ಇದು ಯಾದವ ಸಿಂಘಣದೇವನ ಕಾಲಕ್ಕೆ ಸಂಬಂಧಿಸಿದುದಾಗಿದೆ. ಇದರ ಕಾಲವು ೧೨೩೫ ಇದೊಂದು ಶೈವ ಶಾಸನವಾಗಿದ್ದು ಇದರಲ್ಲಿ 'ಶೈವ ಮಾರ್ಗ'ದ ಉಲ್ಲೇಖವಿದ್ದು ಶಿವಗಣದ ವರ್ಣನೆಯನ್ನು ಮಾಡಲಾಗಿದೆ, ಅಲ್ಲದೆ ಕೊಕಟನೂರ ಗ್ರಾಮವು ಹಿಂದೆ ಪ್ರಸಿದ್ಧ ಅಗ್ರಹಾರವಾಗಿತ್ತು ಎಂದು ಈ ಶಾಸನದಿಂದ ತಿಳಿದುಬರುತ್ತದೆ.

ಎರಡನೆಯದಾಗಿ 'ಸ್ವಾದಿಯ ತಾಮ್ರ ಶಾಸನಗಳು' ಎಂಬ ಲೇಖನದಲ್ಲಿ ಸ್ವಾದಿ ಜೈನಮಠದಲ್ಲಿ ದೊರೆತ ೮ ಶಾಸನಗಳಲ್ಲಿ ಆರು ಶಾಸನಗಳನ್ನು ಇಲ್ಲಿ ಸಂಗ್ರಹಿಸಿ ಅದರ ಪಾಠವನ್ನು ನೀಡುವದರೊಂದಿಗೆ ಸವಿಸ್ತಾರವಾದ ಪ್ರಸ್ತಾವನೆಯನ್ನು ಬರೆದಿದ್ದಾರೆ. ಈ ಶಾಸನಗಳು ಸಾಳ್ವದೇವರಾಯನು ಬಿಟ್ಟುಕೊಟ್ಟ ದತ್ತಿಗಳ ಸಂಗತಿ ಇದ್ದು ಅವರ ವಂಶಾವಳಿಯನ್ನು ಹೇಳುತ್ತಾ "ಕ್ಷೇಮಪುರದ ಅರಸಮನೆತನದಲ್ಲಿ ಸಾಳ್ವಮಲ್ಲನೂ ಅವನ ತಂಗಿಯೂ ಹುಟ್ಟಿದರು. ಅವರ ತಂಗಿಯು ಪಾಂಡ್ಯವಂಶದ ಅರಸು ಮಗನನ್ನು ಮದುವೆಯಾಗಿ ಸಾಳ್ವದೇವರಾಯನನ್ನು ಹೆತ್ತಳು. ಈ ಸಾಳ್ವದೇವರಾಯನು ಚಂದ್ರವಂಶಕ್ಕೆ ಸೇರಿದವನು. ಈ ಸಾಳ್ವದೇವರಾಯನು ವಿಜಯನಗರ ಕೃಷ್ಣದೇವರಾಯನ ಮಹಾಮಂಡಲೇಶ್ವರ

ನಾಗಿದ್ದನೆಂದು ವಿವರಿಸುತ್ತಾ ಅವನು ಹೈವ, ತೊಳವ, ಕೊಂಕಣಗಳಲ್ಲಿ ಆಡಳಿತ ಮಾಡುತ್ತಿದ್ದನು. ನಗರಿಯು ಈತನ ರಾಜಧಾನಿಯು. ಹೀಗೆ ವಿಸ್ತಾರವಾದ ವಿಷಯವನ್ನು ಚರ್ಚಿಸುತ್ತಾ ಶಾಸನಗಳನ್ನು ವಿಶ್ಲೇಷಿಸುತ್ತಾ" "ಈ ಶಾಸನಗಳಿಂದ ಹೊರಡಬಹುದಾದ ಮಹತ್ವದ ವಿಷಯಗಳನ್ನು ಪರಿಶೀಲಿಸಿ ನೋಡುವುದು ನನ್ನಂಥ ಅಲ್ಪಮತಿಗೆ ದುಸ್ತರವಾದರೂ ಯಥಾಮತಿ ಪ್ರಯತ್ನ ಪಟ್ಟಿದ್ದೇನೆ. ಜಾಣರು ಚೆನ್ನಾಗಿ ಪರಿಶೀಲಿಸಿ ಇದಕ್ಕಿಂತಲೂ ಮಹತ್ವದ ವಿಷಯಗಳು ಈ ಶಾಸನಗಳಲ್ಲಿ ದೊರೆತರೆ ಅದನ್ನು ಪ್ರಕಟಿಸಬೇಕೆಂದು ಬೇಡಿಕೊಳ್ಳುತ್ತೇನೆ" ಎಂದು ವಿನಮ್ರವಾಗಿ ಹೇಳಿದ್ದಾರೆ.

**'ಗೋಕಾಕದ ತಾಮ್ರಶಾಸನ'** ಗೋಕಾಕದ ಶ್ರೀ ಗೋವಿಂದರಾವ ಮುತಾಲಿಕ ದೇಸಾಯಿಯವರ ಮನೆಯೊಳಗಿದ್ದ ಈ ಶಾಸನವನ್ನು ಅಲ್ಲಿಯ ಶ್ರೀ ಬೆಟಗೇರಿಯವರ ಸಹಾಯದಿಂದ ಪಡೆದುಕೊಂಡು ಇದನ್ನು ಜಯಕರ್ನಾಟಕದ ಸಂಪುಟ ೫ ಸಂಚಿಕೆ ೨ರಲ್ಲಿ ಪ್ರಕಟಿಸಿದ್ದಾರೆ. ಇದೊಂದು ಜೈನ ಶಾಸನವಾಗಿದ್ದು ೨೦ ಸಾಲುಗಳನ್ನು ಒಳಗೊಂಡಿದೆ. ಕ್ರಿ.ಶ. ೯೨೫ರಲ್ಲಿ ಬರೆಯಲಾದ ಈ ಶಾಸನವು ರಾಷ್ಟ್ರಕೂಟದ ಸಾಮಂತನಾದ ಸೇಂದ್ರಕ ವಂಶದ ವಿಜಯಾನಂದ ರಾಜನ ಮಗನಾದ ಇಂದ್ರಣಂದ ರಾಜನು ಜಮಖಿಂಡಿಯ ಭಟ್ಟಾರಕರಾದ ಆರ್ಯಣಂಧ್ಯಾಚಾರ್ಯರಿಗೆ ದತ್ತಿ ಬಿಟ್ಟು ಕೊಟ್ಟದನ್ನು ಹೇಳಿದೆ. ಅಲ್ಲದೆ ಜಮಖಿಂಡಿಯಲ್ಲಿ ಒಂದು ಪ್ರಸಿದ್ಧ ಜೈನ ಮಠವಿತ್ತೆಂದು ಇದರಿಂದ ತಿಳಿದುಬರುತ್ತದೆ.

"Sirasangi Inscription of Grameshawar Temple" ಎಂಬ ಲೇಖನವನ್ನು ಬರೆದು ಪ್ರಕಟಿಸಿದ್ದಾರೆ. ಇದು ಆ ಗ್ರಾಮದಲ್ಲಿರುವ ಎರಡು ಶಾಸನಗಳಲ್ಲಿ ಮೊದಲನೆಯ ಶಾಸನ. ಎರಡನೆಯದನ್ನು ತಮ್ಮ (NKKS) ಗ್ರಂಥದಲ್ಲಿ ಶಾಸನ ನಂಬರ ಎರಡು ಎಂದು ಪ್ರಕಟಿಸಿದ್ದಾರೆ.

ಈ ಶಾಸನವು ಚಾಲುಕ್ಯ ಎರಡನೆಯ ಜಗದೇಕಮಲ್ಲನ ಶಾಸನವಾಗಿದ್ದು ಇದರ ಕಾಲ ಕ್ರಿ.ಶ. ೧೧೪೮ ಆಗಿದೆ. ೫೯ ಸಾಲುಗಳ ಸುದೀರ್ಘವಾದ ಶಾಸನ ಇದಾಗಿದ್ದು ಶಿರಸಂಗಿ ಗ್ರಾಮದ ಪ್ರಾಚೀನ ಹೆಸರು 'ರಿಶಿಶ್ರಿಂಗಪುರಂ' ಎಂದಿದ್ದು ಬೆಳ್ವಲ ನಾಡಿನ ಪ್ರಸಿದ್ಧ ಗ್ರಾಮವಾಗಿತ್ತು. ಇದರ ಇನ್ನೊಂದು ಹೆಸರು 'ಪಿರಿಸಿಂಗಿ' ಎಂದು ಶಾಸನದಲ್ಲಿ ಹೇಳಿದೆ. ಗ್ರಾಮೇಶ್ವರ ದೇವರಿಗೆ ಅಲ್ಲಿರುವ ಆಚಾರ್ಯರಾದ ರುದ್ರಶಕ್ತಿದೇವರ ಕಾಲನ್ನು ತೊಳೆದು ಕಾವಗೌಂಡನು ಎರಡು ಮತ್ತರ ಭೂಮಿಯನ್ನು ದಾನವಾಗಿ ನೀಡಿರುವುದನ್ನು ಉಲ್ಲೇಖಿಸಿದೆ. ಮುಂದುವರೆದು ಮೂಲಿಗ ಚೀಮಳಗೌಡನು ಅದೇ ದೇವಾಲಯದ ನಿತ್ಯಪೂಜೆ ನೈವೇದ್ಯಕ್ಕೆ ರುದ್ರಶಕ್ತಿದೇವರ ಕಾಲತೊಳೆದು ಭೂಮಿ ಮತ್ತು ಪಿರಿಯ ಮನೆಯನ್ನು ಬಿಟ್ಟಿರುವುದನ್ನು ಸಹ ಹೇಳಿದೆ.

ಇವುಗಳಲ್ಲದೆ ಅವರು Rayabhag Inscription of Dasimaras, Marmuri Copper Plate grant of the Western Chalukya Satyasraya & Vijayanagara Copper Plate Inscription ಎಂಬ ಲೇಖನಗಳನ್ನು ಸಹ ಬರೆದು ಪ್ರಕಟಿಸಿದ್ದಾರೆ.

ವಿಜ್ಞಾನದ ವಿದ್ಯಾರ್ಥಿಯಾದ ಪ್ರೊ. ಕುಂದಣಗಾರರು ಪ್ರತಿಯೊಂದನ್ನು ವೈಜ್ಞಾನಿಕ ದೃಷ್ಟಿಯಿಂದಲೇ ನೋಡಿ ವಿಶ್ಲೇಷಿಸಿದವರು. ಹೀಗಾಗಿ ಅವರು ಸಂಶೋಧನೆಯ ಎಲ್ಲ ಹಂತಗಳಲ್ಲಿಯು ಬಹಳ ಜಾಗರೂಕರಾಗಿದ್ದಾರೆ. ಒಮ್ಮೆಲೆ ಅಸಂಭವವಾದ ನಿರ್ಣಯಗಳನ್ನು ಕೊಡುವ ಕಾಲ್ಪನಿಕ ಸಂಶೋಧಕರಲ್ಲ. ಅವರು ಅಂತೆಯೇ ಪ್ರೊ. ಕುಂದಣಗಾರರಂತಹ ವಾಸ್ತವ ವಿಮರ್ಶಕರೂ ಸಂಶೋಧಕರು ವಿರಳ (ಡಾ.ಆರ್.ಸಿ. ಹಿರೇಮಠ, ಕುಂದಣ IX).

---

ಶಿವಮೊಗ್ಗಾದಲ್ಲಿ ದಿನಾಂಕ ೨೫-೮-೧೯೯೭ರಂದು ಜರುಗಿದ 'ಪ್ರೊ ಕುಂದಣಗಾರರ ನೂರೊಂದರ ನೆನಪು ಮತ್ತು ಬದುಕು ಬರಹ' ವಿಚಾರ ಸಂಕಿರಣದಲ್ಲಿ ಮಂಡಿಸಿದ ಲೇಖನ.

# ಕನ್ನಡ ಗ್ರಂಥ ಸಂಪಾದನೆ
# ಡಾ॥ ಹಂಪನಾ ಸಾಧನೆ

---

**ಡಾ. ಆರ್. ಶೇಷಶಾಸ್ತ್ರಿ**

ಗ್ರಂಥಸಂಪಾದನೆ ಸಿದ್ಧಾಂತ ಮತ್ತು ಅನ್ವಯಿಕವಾಗಿಯೂ ಕನ್ನಡ ಸಾಹಿತ್ಯ ಪರಿಸರದಲ್ಲಿ ಬೆಳೆದಂತೆ ಇತರೇ ದ್ರಾವಿಡ ಭಾಷಾ ಸಾಹಿತ್ಯವಲಯಗಳಲ್ಲಿ ಬೆಳೆದಿಲ್ಲವೆಂದು ಹೇಳಬಹುದು. ಈ ಕಾರಣದಿಂದಾಗಿಯೇ, ಕವಿಯ ಪಾಠಕ್ಕೆ ತುಂಬಾ ಹತ್ತಿರವಾದ ಹಲವಾರು ಪ್ರಾಚೀನ ಕೃತಿಗಳು ಇಂದು ನಮ್ಮ ಮುಂದಿವೆ. ಪ್ರಾಚೀನ ಕವಿಯ ಕಾವ್ಯವನ್ನು ವಿಮರ್ಶಿಸುವ ಮುನ್ನ ಆ ಕಾವ್ಯದ ಪ್ರಾಮಾಣಿಕ ಆವೃತ್ತಿಯ ಬಗ್ಗೆ ಕನ್ನಡ ವಿಮರ್ಶಕರ ಗಮನ ಮೊದಲು ಹರಿಯುತ್ತದೆ. ಈ ಒಂದು ಪರಿಸ್ಥಿತಿ ತೆಲುಗು ಪ್ರಾಚೀನ ಸಾಹಿತ್ಯ ಅಧ್ಯಯನ ಪರಿಸರದಲ್ಲಿಲ್ಲವೆಂದು ಹೇಳಬಹುದು. ಗ್ರಂಥ ಸಂಪಾದಕರೂ ಅಷ್ಟೇ ತಾವು ಸ್ವೀಕರಿಸಿರುವ ಪಾಠಕ್ಕೆ ಮೂಲ ಪ್ರತಿಗಳ, ಶಬ್ದಾರ್ಥಗಳ, ಛಂದಸ್ಸಿನ ಅಂಶಗಳನ್ನು ಆಧಾರವಾಗಿ ಸ್ವೀಕರಿಸುತ್ತಾರೆ. ಊಹಾತ್ಮಕ ಪರಿಷ್ಕಾರವನ್ನು ಮಾಡುವ ಸಂದರ್ಭದಲ್ಲಿ ಅದನ್ನು ಕಂಸದಲ್ಲಿ ಸೂಚಿಸುತ್ತಾರೆ. ಇಂತಹ ಸಂದರ್ಭಗಳಲ್ಲಿ ಅವರ ಅಭಿಪ್ರಾಯಗಳನ್ನು, ಪಾಠಗಳನ್ನು ನಾವು ಒಪ್ಪದೇ ಹೋಗಬಹುದು. ಆದರೆ, ಅವರ ಈ ನಿಜಾಯತಿಯನ್ನು ಮನ್ನಿಸಲೇಬೇಕು. ಈ ಒಂದು ಅಂಶವನ್ನು ನೆನೆದಾಗ ಇತರ ಭಾಷಾಸಾಹಿತ್ಯ ಕೃತಿಗಳ ಆವೃತ್ತಿಗಳನ್ನು ಗಮನಿಸಿದಾಗ ನಮ್ಮ 'ಸಂಪಾದಕ'ರ ಬಗ್ಗೆ ಹೆಮ್ಮೆ ಗೌರವಗಳು ಮೂಡುತ್ತವೆ.

ಗ್ರಂಥಸಂಪಾದನೆಯನ್ನು ಒಂದು ನಿಯಮಬದ್ಧ ಶಾಸ್ತ್ರವನ್ನಾಗಿ ಮಾಡುವಲ್ಲಿ ಡಾ॥ ಡಿ.ಎಲ್. ನರಸಿಂಹಾಚಾರ್ಯರು ಆದ್ಯರು. ಅವರ ಈ ಮಾರ್ಗವನ್ನು ಡಾ॥ ಎಂ.ಎಂ. ಕಲಬುರ್ಗಿಯವರು, ಶ್ರೀ ಸೀತಾರಾಮ ಜಾಗೀರ್‌ದಾರ್ ಅವರು ಶ್ರೀಮಂತಗೊಳಿಸಿದ್ದಾರೆ. ಈ ಶಾಸ್ತ್ರದ ನಿಯಮಗಳನ್ನು ಅನ್ವಯಿಸಿ ಹಲವಾರು ಉತ್ತಮ ಪರಿಷ್ಕೃತ ಪ್ರಾಚೀನ ಸಾಹಿತ್ಯ ಕೃತಿಗಳನ್ನು ಹೊರತಂದಿರುವ ಅನೇಕ ವಿದ್ವಾಂಸರು ಇದ್ದಾರೆ. ಈ ಮಹನೀಯರೆಲ್ಲರ ಇಡಿಯಾದ ಕೃಷಿ ಕನ್ನಡ ಗ್ರಂಥ ಸಂಪಾದನೆಯನ್ನು ಶ್ರೀಮಂತಗೊಳಿಸಿದೆ.

ಒಬ್ಬ ವ್ಯಕ್ತಿ ಗ್ರಂಥ ಸಂಪಾದನಾ ಕ್ಷೇತ್ರದಲ್ಲಿ ಯಾವ ರೀತಿಯಲ್ಲಿ ಕೃಷಿ ಮಾಡಿದ್ದಾನೆ ಎಂಬುದನ್ನು ವಿವೇಚಿಸುವಾಗ, ಆತನು ಎಷ್ಟು ಅಪ್ರಕಟಿತ ಕೃತಿಗಳನ್ನು ಹೊರತಂದಿದ್ದಾನೆ, ಎಷ್ಟು ಉತ್ತಮ ರೀತಿಯಲ್ಲಿ ಸಂಪಾದಿಸಿ ಕೃತಿಯನ್ನು ಪ್ರಕಟಿಸಿದ್ದಾನೆ ಎಂಬುದರಷ್ಟೇ ಮುಖ್ಯವಾದ ಅಂಶವೆಂದರೆ; ಇತರರು ಪ್ರಕಟಿಸಿರುವ ಸಂಪಾದನಾ ಕೃತಿಗಳನ್ನು, ಎಷ್ಟು ತಲಸ್ಪರ್ಶಿಯಾಗಿ ಅಧ್ಯಯನಮಾಡಿ, ಆ ಕೃತಿಗಳಲ್ಲಿ ಮಾನವ ಸಹಜವಾಗಿ ಆಗಿರಬಹುದಾದ ತಪ್ಪುಗಳನ್ನು ಸೌಜನ್ಯದಿಂದ ಸೂಚಿಸಿ ಪರಿಷ್ಕೃತ ಪಾಠವನ್ನು ಸೂಚಿಸಿದ್ದಾನೆಂಬುದು; ಹಿಂದಿನ ಸಂಪಾದಕನಿಗೆ ದೊರೆಯದಂತಹ ಉತ್ತಮ ಹಸ್ತಪ್ರತಿ ದೊರೆತಾಗ ಅದರ ಆಧಾರದ ಮೇಲೆ ಪರಿಷ್ಕೃತ

ಪಾಠವನ್ನು ಸೂಚಿಸಿದ್ದಾನೆಂಬುದು. ಇಂತಹ ಸಂದರ್ಭಗಳಲ್ಲಿ ವ್ಯಕ್ತಿಗತ ಪಾಂಡಿತ್ಯ ಪ್ರದರ್ಶನಕ್ಕಿಂತಲೂ ಕವಿಯ ಮೂಲ ಪಾಠದ ನಿರ್ಣಯದ ಬಗ್ಗೆ, ಪರಿಷ್ಕಾರ ಸೂಚಿಸುವವನಿಗೆ ಇರುವ ಕಳಕಳಿ ಮುಖ್ಯವಾಗಿ ಆತನ ಸೂಚನೆಗಳಿಗೆ ಬೆಲೆ ಬರುತ್ತದೆ. - ಈ ಒಂದು ಹಿನ್ನೆಲೆಯಲ್ಲಿ ಡಾ॥ ಹಂಪನಾಗರಾಜಯ್ಯನವರ ಕೃಷಿಯನ್ನು ಪರಿಚಯಿಸುವ ಪ್ರಯತ್ನವನ್ನು ಮಾಡಲಾಗಿದೆ.

ಡಾ॥ ಹಂಪನಾ ಅವರು ಜೈನ ಕುಟುಂಬದಿಂದ ಬಂದವರಾದ ಕಾರಣ ಅವರಿಗೆ ಆ ಧರ್ಮೀಯರ ಒಡನಾಟ, ಆತ್ಮೀಯತೆಗಳು ಇತರರಿಗಿಂತಲೂ ಹೆಚ್ಚಾಗಿ ಲಭಿಸಿದೆ. ಈ ಒಂದು ಅನುಕೂಲವನ್ನು ತಮ್ಮ ಸಾಹಿತ್ಯಾಸಕ್ತಿಗಾಗಿ ಬಳಸಿಕೊಂಡ ಕಾರಣದಿಂದಾಗಿಯೇ ಅವರು ಹಲವಾರು ಪ್ರಾಚೀನ ಕನ್ನಡ ಜೈನ ಸಾಹಿತ್ಯ ಕೃತಿಗಳನ್ನು ಹೊರತಂದಿದ್ದಾರೆ. ಇವುಗಳಲ್ಲಿ ಬಹು ಮುಖ್ಯವಾದುವೆಂದರೆ ಚಂದ್ರಸಾಗರವರ್ಣಿಯ ಕೃತಿಗಳು, ಸಾಳ್ವಭಾರತ ಮತ್ತು ನಾಗಕುಮಾರ ಚರಿತೆ. ವಡ್ಡಾರಾಧನೆಯನ್ನು ಕುರಿತು ಅವರು ನಡೆಸಿರುವ ಅಧ್ಯಯನವನ್ನು ಇಲ್ಲಿಯೇ ಪ್ರಸ್ತಾಪಿಸುವುದು ಸೂಕ್ತ.

ಏಕೈಕ ಹಸ್ತಪ್ರತಿಯ ಸಹಾಯದಿಂದ ಸಾಳ್ವ ಭಾರತವನ್ನು ಅವರು ಸಮರ್ಥವಾಗಿ ಸಂಪಾದಿಸಿದ್ದಾರೆ. ಅದಕ್ಕೆ ಬರೆದಿರುವ ಸುದೀರ್ಘ ಪ್ರಸ್ತಾವನೆ, ಸಾಳ್ವ ಭಾರತವನ್ನು ಕುರಿತು ಅವರು ಎಷ್ಟು ತಲಸ್ಪರ್ಶಿಯಾಗಿ, ತುಲನಾತ್ಮಕವಾಗಿ ಅಧ್ಯಯನ ಮಾಡಿದ್ದಾರೆಂಬುದನ್ನು ಸೂಚಿಸುತ್ತದೆ. ಅನುಬಂಧವಾಗಿ, ಪಾರಿಭಾಷಿಕ ಶಬ್ದಗಳಿಗೆ ಅರ್ಥ, ಜೈನಾಚಾರ್ಯರನ್ನು ಕುರಿತ ವಿವರಣೆಯನ್ನು ನೀಡಿದ್ದಾರೆ. ಇದು ಕೇವಲ ಸಾಳ್ವ ಭಾರತವನ್ನು ಮಾತ್ರವಲ್ಲ ಯಾವುದೇ ಜೈನ ಕೃತಿಯನ್ನು ಅಧ್ಯಯನ ಮಾಡುವಲ್ಲಿ ಅಭ್ಯಾಸಿಗಳಿಗೆ ನೆರವಾಗುತ್ತದೆ.

ಹಂಪನಾ ಭಾಷಾವಿಜ್ಞಾನದ ಆರಾಧಕರು. ಬಹುಶಃ ಈ ಕಾರಣದಿಂದಲೇ ಅವರು ಸಂಪಾದಿಸಿ ಪ್ರಕಟಿಸಿರುವ ಪ್ರತಿಯೊಂದು ಪ್ರಾಚೀನ ಕನ್ನಡ ಕಾವ್ಯಗಳಿಗೆ ಬರೆದ ಪ್ರಸ್ತಾವನೆಯಲ್ಲಿ ಆಯಾ ಕವಿಯ ವಿಶಿಷ್ಟ ಪದ ಪ್ರಯೋಗಗಳನ್ನು ಕುರಿತಂತೆ ಕನಿಷ್ಠ ಒಂದೆರಡು ಪುಟಗಳ ವಿವರಣೆಯಿರುತ್ತದೆ. ಅವರ ಈ ಆಸಕ್ತಿ ತಾವು ಸಂಪಾದಿಸಿ ಪ್ರಕಟಿಸಿರುವ ಕಾವ್ಯಗಳ ಬಗ್ಗೆ ಮಾತ್ರವಲ್ಲ ಇತರ ಕವಿಗಳ ಬಗ್ಗೆಯೂ ಇದೆ. 'ಪೊನ್ನ ಕವಿ ಮತ್ತು ಕನ್ನಡ ನಿಘಂಟು', 'ಕರ್ಣಪಾರ್ಯ ಮತ್ತು ಕನ್ನಡ ನಿಘಂಟು', 'ಕನ್ನಡ ಕೋಶಕ್ಕೆ ಕುವೆಂಪು ಕಾಣಿಕೆ' - ಮುಂತಾದ ಲೇಖನಗಳು ಅವರ ವ್ಯಾಪಕವಾದ ಅಧ್ಯಯನದ ಫಲಗಳಾಗಿವೆ.

ಹಂಪನಾ ಅವರು ಹಲವಾರು ಕನ್ನಡ ಪ್ರಾಚೀನ ಕೃತಿಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ಒಂದೊಂದೂ ಒಂದು ದೃಷ್ಟಿಯಿಂದ ಮಹತ್ವದ್ದೇ ಆಗಿವೆ. ಇವುಗಳಲ್ಲೆಲ್ಲಾ ತುಂಬ ಮೌಲಿಕವಾದುದು; ಸ್ವಾರಸ್ಯ ಪೂರ್ಣವಾದುದು ಎಂದರೆ 'ರತ್ನಾಕರನ ಹಾಡುಗಳು' ಭರತೇಶ ವೈಭವ ಮತ್ತು ಶತಕಗಳಿಂದ ಪರಿಚಿತನಾಗಿರುವ ರತ್ನಾಕರ ವರ್ಣಿಯ ಮತ್ತೊಂದು ವಿಶಿಷ್ಟವಾದ ಮುಖವನ್ನು ಈ ಕೃತಿ ಪರಿಚಯಿಸುತ್ತದೆ. ಈ ಸಂಕಲನಕ್ಕೆ "ಪ್ರತಿಕಾರನೇ ಅಂಣನ ಹಾಡುಗಳು, ರತ್ನಾಕರ ಅಂಣನ ಪದಗಳು" ಎಂಬುದಾಗಿ ಪ್ರತಿಕಾರನೇ ಬರೆದಿರುವುದಾಗಿ ತಿಳಿಸಿದ್ದಾರೆ. ಈ ಎರಡರಲ್ಲಿ 'ಹಾಡುಗಳು' ಎಂಬುದನ್ನೇ ಡಾ॥ ಹಂಪನಾ ಅವರು ಸ್ವೀಕರಿಸಿದ್ದಾರೆ. ವಾಸ್ತವವಾಗಿ ಇಲ್ಲಿ ಕೀರ್ತನೆಯ, ಪದಗಳ ಲಕ್ಷಣಗಳಿರುವ ಹಾಡುಗಳೇ ಬಹಳ ಇವೆ. ಕೆಲವು ಹಾಡುಗಳು ಜಾನಪದ ಗೀತೆಗಳ ರೂಪವನ್ನೂ ಹೊಂದಿವೆ. ಪದಸಾಹಿತ್ಯದ ಮುಖ್ಯ ಲಕ್ಷಣವೆಂದರೆ ಪಲ್ಲವಿಯಿದ್ದು ಹಾಡಿನ ಒಂದೊಂದು ಆವೃತ್ತವೂ ಮುಗಿದಾಗ ಪಲ್ಲವಿ ಪುನರಾವರ್ತನೆಯಾಗುತ್ತದೆ. ಈ ರೀತಿ ಪುನರಾವರ್ತನೆಯಾದ ಪಲ್ಲವಿ ಹಿಂದಿನ ಚರಣಗಳ ಮುಂದುವರಿಕೆಯೂ ಆಗುತ್ತದೆ. ಪ್ರಾರಂಭದ ಹಂತದಲ್ಲಿ ಕೇವಲ ಪಲ್ಲವಿ ಮಾತ್ರವಿದ್ದು ನಂತರ ಕಾಲದಲ್ಲಿ 'ಅನುಪಲ್ಲವಿ'ಯೂ ಸೃಷ್ಟಿಯಾಯಿತು.

ಇದು 'ಪದಸಾಹಿತ್ಯ'ದ ಮೇಲೆ ಸಂಗೀತ ತೋರಿದ ಪ್ರಭಾವ. ಸಂಗೀತವೇ ಪ್ರಧಾನವಾದಾಗ ಒಂದು ಹಾಡು 'ಕೃತಿ'ಯಾಗುತ್ತದೆ. ಸಾಹಿತ್ಯವೇ ಪ್ರಧಾನವಾದಾಗ ಅದು 'ಪದ'ವಾಗುತ್ತದೆ. ಈ ಒಂದು 'ಪದಸಾಹಿತ್ಯ'ವನ್ನು ಕೇವಲ ವೈಷ್ಣವ ಭಕ್ತರಾದ ದಾಸರು ಮಾತ್ರ ಶ್ರೀಮಂತಗೊಳಿಸಲಿಲ್ಲ. ಇತರ ಧರ್ಮದವರೂ ಈ ಪ್ರಕಾರವನ್ನು ಬಳಸಿಕೊಂಡರೆಂಬುದನ್ನು ಈ ಸಂಕಲನ ಸಾರುತ್ತದೆ.

ಇನ್ನೊಂದು ಬಹುಮುಖ್ಯವಾದ ಅಂಶವೆಂದರೆ, ತುಂಬಾ ಅಮೂರ್ತವಾದ ಭಾವಗಳನ್ನು, ತತ್ವಗಳನ್ನು, ಅನುಭವಗಳನ್ನು, ಮೂರ್ತರೂಪದಲ್ಲಿ ಸಾಂಕೇತಿಕ ಪದಗಳ, ಪರಿಕಲ್ಪನೆಗಳ ಮೂಲಕ ಹೇಳುವ ವಚನಕಾರರ ಬೆಡಗಿನ ವಚನಗಳು, ನಂತರದ ಕಾಲದಲ್ಲಿ 'ತತ್ವಪದ'ಗಳಾಗಿ ಪರಿಣಮಿಸುತ್ತಿರುವ ಸಂಕ್ರಮಣ ಸ್ಥಿತಿಯನ್ನು ಈ ಸಂಕಲನದ ಹಾಡುಗಳಲ್ಲಿ ನಾವು ಗುರುತಿಸಬಹುದು. ವಚನಕಾರರ ಬೆಡಗಿನ ವಚನಗಳ ಸ್ವರೂಪ, ದಾಸಸಾಹಿತ್ಯದ ಗೇಯತೆಯ ಉಡುಪಿನೊಂದಿಗೆ ಹೊರಬಂದು 'ತತ್ವಪದ'ಗಳಾದುವು. ಈ ಕಾರಣದಿಂದಲೇ ಬೆಡಗಿನ ವಚನಗಳಲ್ಲಿ ನಾವು ಕಾಣದಿರುವ 'ಪಲ್ಲವಿ' 'ಅನುಪಲ್ಲವಿ' ಮತ್ತು ಗೇಯಗುಣವನ್ನು ಈ 'ತತ್ವಪದ'ಗಳಲ್ಲಿ ಕಾಣುತ್ತೇವೆ. ಇಂತಹ ತತ್ವಪದಗಳಿಗೆ ರಾಗ ಮತ್ತು ತಾಳದ ನಿರ್ದೇಶನವೂ ಇರುತ್ತದೆ.

ಭರತೇಶ ವೈಭವದಿಂದ ರತ್ನಾಕರ ಸಂಗೀತ ಶಾಸ್ತ್ರದಲ್ಲಿ ಎಷ್ಟು ಪರಿಣತಿಯನ್ನು ಹೊಂದಿದ್ದನೆಂಬುದು ಸುವೇದ್ಯವಾದ ವಿಷಯ. ಅದರ ಅನ್ವಯ ಪರಿಜ್ಞಾನ ಆತನಿಗೆಷ್ಟರ ಮಟ್ಟಿಗಿತ್ತು ಎಂಬುದು ಈ ಹಾಡುಗಳ ಮೂಲಕ ತಿಳಿಯುತ್ತದೆ. ಇಲ್ಲಿನ ಹಾಡುಗಳು, ಅವುಗಳಲ್ಲಿ ವ್ಯಕ್ತವಾಗಿರುವ ತಾತ್ವಿಕ ಅಂಶಗಳಿಂದಾಗಿ ನೀರಸವೆಂದೆನ್ನಿಸಿದ್ದರೂ, ಅವುಗಳು 'ಪದ'ಗಳಾಗಿ ತುಂಬಾ ಯಶಸ್ವಿಯಾಗಿವೆ. ಲಯದ ವೈವಿಧ್ಯತೆಯಿಂದ ಕೂಡಿವೆ. ಇಂತಹ ಅಪೂರ್ವವಾದ ಈ ಸಂಕಲನ ನಮ್ಮ ಸಂಗೀತಗಾರರ ಗಮನ ಸೆಳೆಯದಿರುವುದು ದುರ್ದೈವ. ಕನ್ನಡ ಸಂಗೀತ ಶಾಸ್ತ್ರವನ್ನು ಅಧ್ಯಯನ ಮಾಡುವವರು, ಕನ್ನಡ ತತ್ವಪದಗಳನ್ನು, ಪದಸಾಹಿತ್ಯವನ್ನು ಕುರಿತು ಅಧ್ಯಯನ ಮಾಡಬಯಸುವವರು ತಪ್ಪದೇ ಗಮನಿಸಬೇಕಾದ ಕೃತಿ ಇದು.

ಡಾ॥ ಹಂಪನಾ ಅವರಿಗೆ ಗ್ರಂಥ ಸಂಪಾದನಾ ಶಾಸ್ತ್ರದ ಬಗ್ಗೆ ಇರುವ ಒಲವು, ಅದನ್ನು ಸಮರ್ಥವಾಗಿ ನಿರ್ವಹಿಸುವುದಕ್ಕೆ ಅಗತ್ಯವಾದ ವ್ಯಾಪಕ ಅಧ್ಯಯನ; ತನ್ಮೂಲಕ ಗಳಿಸಿದ ವಿದ್ವತ್ತು ವ್ಯಕ್ತವಾಗಿರುವುದು ಅವರು ಬರೆದಿರುವ ಚಿಕ್ಕಚಿಕ್ಕ ಟಿಪ್ಪಣಿಗಳು, ಲೇಖನಗಳ ಮೂಲಕ.

ಪಂಪ ಹಂಪನಾ ಅವರ ಮೆಚ್ಚುಗೆಯ ಕವಿ. ಈ ಕಾರಣದಿಂದಾಗಿಯೇ ಅವನನ್ನು ಕುರಿತು ಒಂದು ಕಾದಂಬರಿಯನ್ನು ಬರೆಯುವ ಸಾಹಸವನ್ನೂ ಮಾಡಿದ್ದಾರೆ. ಪಂಪನ ಹಲವಾರು ವಿದ್ಯೆಗಳ ಪಾಠಗಳ ಬಗ್ಗೆ, ಅವನು ಪ್ರಯೋಗಿಸಿರುವ ಪದಗಳ ಬಗ್ಗೆ ಹೆಚ್ಚಿನ ಸಂಖ್ಯೆಯಲ್ಲಿ ಅವರು ಉತ್ತಮವಾದ ಟಿಪ್ಪಣಿಗಳನ್ನು ಬರೆದಿದ್ದಾರೆ. ತಮಗೆ ದೊರೆತ ಉತ್ತಮ ಪ್ರತಿಗಳ ನೆರವಿನಿಂದ ಶಬ್ದಾರ್ಥಗಳ ವಿಶ್ಲೇಷಣೆಯ ಮೂಲಕ ಉತ್ತಮ ಪಾಠಗಳನ್ನು ಸೂಚಿಸಿದ್ದಾರೆ. ಪದಗಳನ್ನು ಕುರಿತು ಚರ್ಚಿಸುವಾಗ ಆ ಪದವನ್ನು ಪಂಪನೇ ಬೇರಾವ ಸಂದರ್ಭಗಳಲ್ಲಿ ಪ್ರಯೋಗಿಸಿದ್ದಾನೆ, ಇತರ ಕನ್ನಡ ಕಾವ್ಯಗಳಲ್ಲಿ ಎಲ್ಲೆಲ್ಲಿ ಪ್ರಯೋಗವಾಗಿದೆ ಎಂಬ ಎಲ್ಲಾ ಅಂಶಗಳನ್ನು ಗುರುತಿಸುತ್ತಾರೆ.

'ಕಾವ್ಯಾವಲೋಕನ' ಮತ್ತು 'ಸೂಕ್ತಿ ಸುಧಾರ್ಣವ'ಗಳಲ್ಲಿನ ಕೆಲವು ಪದ್ಯಗಳ ಆಕರವನ್ನು ಮತ್ತು ಪಾಠವನ್ನು ನಿರ್ಣಯಿಸುವ ಸಮರ್ಥ ಪ್ರಯತ್ನವನ್ನು ಮಾಡಿದ್ದಾರೆ.

ಕವಿಗಳ ಕಾಲನಿರ್ಣಯ ಮಾಡುವ ಪ್ರಯತ್ನವೂ ಗ್ರಂಥ ಸಂಪಾದನೆಯ ವ್ಯಾಪ್ತಿಗೆ

ಬರುತ್ತವೆ. ನಿರಂತರವಾದ ಅಭ್ಯಾಸಿಗೆ, ಯಾವುದೇ ಸಮಸ್ಯೆಯನ್ನು ಕುರಿತಂತೆ ಅಭ್ಯಾಸ ಮಾಡುವಾಗ, ಮತ್ತಾವುದೋ ಸಮಸ್ಯೆಗೆ ಪರಿಹಾರ ದೊರೆಯುವ ಸಾಧ್ಯತೆಯುಂಟು. ಈ ರೀತಿಯಲ್ಲಿ ಹಲವಾರು ಉಪ ಸಂಶೋಧನೆಗಳು ಹುಟ್ಟಿಕೊಳ್ಳುತ್ತವೆ. ಕವಿಚಿಂತೆಗೆ ಹಲವಾರು ತಿದ್ದುಪಡಿಗಳನ್ನು ಸೂಚಿಸಿ ಬರೆದಿರುವ ಲೇಖನಗಳು, ಶಿಶುಮಾಯಣ, ಮಂಗರಸ, ನಾಗವರ್ಮ, ಚಂದ್ರಸಾಗರ ವರ್ಣಿ, ಬೊಮ್ಮಣ್ಣ ಮುಂತಾದ ಕವಿಗಳನ್ನು ಕುರಿತು ಹಂಪನಾ ಬರೆದಿರುವ ಲೇಖನಗಳು ಈ ಗುಂಪಿಗೆ ಸೇರುತ್ತವೆ. ಈ ರೀತಿಯ ಉಪಸಂಶೋಧನಾ ಲೇಖನಗಳು ಕನ್ನಡದಲ್ಲಿ ಹಲವಾರು ಬಂದಿವೆಯಾದರೂ ಅವುಗಳನ್ನು ಬಹಳ ಜನ ಸಂಶೋಧಕರು ಸ್ವೀಕರಿಸಿ ತಿದ್ದಿಕೊಂಡಥ ನಿದರ್ಶನಗಳು ತೀರಾ ಕಡಿಮೆ. ಯಾರಾದರೂ ಸೂಕ್ತವಾದ ತಿದ್ದುಪಡಿಯನ್ನೋ, ಹೊಸ ಆಲೋಚನೆಯನ್ನೋ ಮಂಡಿಸಿದಾಗ, ಅದನ್ನು ಪರಿಶೀಲಿಸಿ ಸೂಕ್ತವೆನ್ನಿಸಿದರೆ ಸ್ವೀಕರಿಸಬೇಕು. ಸೂಕ್ತವಲ್ಲವೆಂದು ನಿರೂಪಿಸಲು ಸಾಧ್ಯವಾದಾಗ ಅದನ್ನು ಸೂಚಿಸಿ ಪರಿಷ್ಕೃತ ಆವೃತ್ತಿಯನ್ನು ಹೊರತರಬೇಕು. ಇಲ್ಲದೇ ಹೋದರೆ ಬಹುಪಾಲು ವಿದ್ವಾಂಸರ ಶ್ರಮ, ಆಲೋಚನೆಗಳು ಕಾಡಿನ ಬೆಳದಿಂಗಳಾದಾವು.

ಒಬ್ಬ ಕವಿಯ ಮನೋಧರ್ಮ ಹೇಗೆ ಅವನ ಕವಿತೆ, ಕಾವ್ಯಗಳಲ್ಲಿ ವ್ಯಕ್ತವಾಗುವುದೋ ಹಾಗೆಯೇ ಒಬ್ಬ ಸಂಶೋಧಕನ ಮನೋಧರ್ಮ ಅವನ ಸಂಶೋಧನಾ ಲೇಖನ, ಪ್ರತಿಕ್ರಿಯೆಗಳಲ್ಲಿ ವ್ಯಕ್ತವಾಗುವುದು. ಈ ದೃಷ್ಟಿಯಿಂದ ಡಾ॥ ಹಂಪನಾ ಅವರು, ಡಾ॥ ಎಂ.ಎಂ. ಕಲಬುರ್ಗಿಯವರು ಬರೆದ ಸಂಶೋಧನಾತ್ಮಕ ವಿಮರ್ಶೆಗೆ ಬರೆದ 'ದರ್ಪಣಾವಲೋಕನದ ಪ್ರತಿ ವಿಮರ್ಶೆ' ಎಂಬ ಲೇಖನ ನನ್ನ ದೃಷ್ಟಿಯಲ್ಲಿ ಬಹುಮುಖ್ಯವಾದುದು.

"ಯಾರು ಎಷ್ಟೇ ನೋಡಿದರೂ, ವಿಶೇಷತಃ ದೊಡ್ಡ ಪ್ರಮಾಣದ ಗ್ರಂಥಗಳಲ್ಲಿ ಅಲ್ಲಲ್ಲಿ ಅಚ್ಚಿನ ದೋಷಗಳು ಉಳಿದೇ ಇರುತ್ತವೆ. ಇದನ್ನು ಪುಸ್ತಕ ಬರೆದು ಪ್ರಕಟಿಸಿರುವ ಎಲ್ಲರೂ ಬಲ್ಲರು A. ಅವರೇ ಈ ವಿಚಾರವಾಗಿ 'ಅಚ್ಚಿನ ಕರಡುಗಳನ್ನು ಎರಡಲ್ಲ ನಾಲ್ಕು ಕಣ್ಣುಗಳು ನೋಡಿ ಎಚ್ಚರಿಕೆಯಿಂದ ತಿದ್ದಿದರೂ ತಪ್ಪುಗಳು ಉಳಿದಿರುವುದಕ್ಕಾಗಿ ವಿಷಾದಿಸಬೇಕಾಗಿದೆ' ಎಂದು ನೊಂದುಕೊಂಡು ನುಡಿದಿದ್ದಾರೆ. ಆದುದರಿಂದ ಅಚ್ಚಿನ ದೋಷವನ್ನೇ ಅದ್ಭುತಮಾಡಿ ಅನಾಹುತ ಆಗಿಹೋದಂತೆ ಆಪಾದಿಸುವುದು ಸರಿಯಲ್ಲ. B ಅವರು ತಮ್ಮ ವಿಮರ್ಶೆಯಲ್ಲಿ ಬಹುಭಾಗ ಈ ಮುದ್ರಣ ದೋಷವನ್ನೇ ತೋರಿಸಿದ್ದಾರೆ. ಅದು ಅಷ್ಟು ಪ್ರಧಾನವಾದ ಪರಿಗಣನೆಗೆ ಅರ್ಹವಲ್ಲವೆಂದು ವಿಧಿಯಿಲ್ಲದೆ ಹೇಳಬೇಕಾಗಿದೆ. ಇನ್ನು 'B' ಅವರ ಒಟ್ಟು ವಿಮರ್ಶೆಗೆ ತಕ್ಕ ಸಮಾಧಾನವನ್ನು, ಅಗತ್ಯವಾದ ಕಡೆಗಳಲ್ಲಿ ಹೇಳಲು ತೊಡಗಬಹುದು" ಎಂಬುದಾಗಿ ಡಾ॥ ಕಲಬುರ್ಗಿಯವರ ವಿಮರ್ಶನಾ ಧೋರಣೆಯನ್ನು ವಿಶ್ಲೇಷಿಸುತ್ತಾ ಸಮಾಧಾನವನ್ನು ನೀಡುತ್ತಾ ಹೋಗಿದ್ದಾರೆ. ಮೇಲಿನ ಹಂಪನಾ ಅವರ ಮಾತಿನ ಧೋರಣೆಯನ್ನು ಹಿಡಿದು 'A' ಅವರನ್ನು ಸಮರ್ಥಿಸುವುದರ ಬಗ್ಗೆ ಹೆಚ್ಚಿನ ಒಲವು ಇದ್ದಂತೆ ತೋರುವುದು. ವಿಮರ್ಶೆಯ ಕೊನೆಯ ಪ್ಯಾರಾ ಈ ರೀತಿ ಇದೆ. "Bಯವರ ವಿಮರ್ಶೆಯ ಈ ಪುನರ್ ವಿಮರ್ಶೆಯಲ್ಲಿ Bಯವರು ವಹಿಸಿರುವ ಶ್ರದ್ಧೆ, ಅವಧಾನ ಹಾಗೂ ಶುದ್ಧ ಪಾಠನಿರ್ಣಯಕ್ಕಾಗಿ ಮತ್ತು ದೋಷ ನಿವಾರಣೆಗಾಗಿ ತೋರಿರುವ ತಿಳಿದು ತವಕಗಳನ್ನು ಮನಸಾರೆ ಮೆಚ್ಚಲಾಗಿದೆ. 'ಇದರಿಂದ ಮುಂದಿನ ಮುದ್ರಣ ಇನ್ನಷ್ಟು ಶುದ್ಧವಾಗಿ ಓದುಗರ ಕೈ ಸೇರಿದರೆ ಈ ಲೇಖನಸಾರ್ಥಕ, ಲೇಖಕಕೃತಾರ್ಥ' ಎಂದು Bಯವರು ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ Aಯವರು ಈ ಅವಲೋಕನದಲ್ಲಿ ಸೂಕ್ತಾಂಶಗಳನ್ನು ಸ್ವೀಕರಿಸಿ ಇನ್ನು ಶುದ್ಧತಮ ಶಬ್ದಮಣಿದರ್ಪಣ ಮುದ್ರಣವೊಂದನ್ನು ಆದಷ್ಟು ಬೇಗ ಹೊರತರುವರೆಂದು ಆಶಿಸುತ್ತೇನೆ". ಡಾ॥ ಹಂಪನಾ ಅವರ ಈ ಮಾತುಗಳಲ್ಲಿ

ವಿಮರ್ಶೆಯನ್ನು ಕಟುವಾಗಿ ಮಾಡಿದ್ದರೂ ಆ ವಿಮರ್ಶೆಯ ಹಿಂದಿರುವ ಶ್ರದ್ಧಾಸಕ್ತಿಗಳನ್ನು ಗುರುತಿಸಬೇಕು. ಅದರಲ್ಲಿಯ ಒಳ್ಳೆಯ ಅಂಶಗಳನ್ನೇ ಮನಸಾರೆ ಮೆಚ್ಚಿ ಸ್ವೀಕರಿಸಬೇಕು - ವ್ಯಕ್ತಿಗಳಿಗಿಂತ ಕೆಲಸ ದೊಡ್ಡದು ಎಂಬ ಧೋರಣೆ ಇಲ್ಲಿ ವ್ಯಕ್ತವಾಗಿದೆ.

ಮೇಲಿನ ಈ ಸಂದರ್ಭವನ್ನು ವಿಶೇಷವಾಗಿ ಇಲ್ಲಿ ನಾನು ಉಲ್ಲೇಖಿಸುವುದಕ್ಕೆ ನನ್ನ ಒಂದು ಅನುಭವ ಪ್ರೇರಣೆಯನ್ನು ನೀಡಿದೆ. ಆ ಅನುಭವವನ್ನು ಒಂದೆರಡು ಮಾತುಗಳಲ್ಲಿ ಇಲ್ಲಿ ವಿವರಿಸಿದರೆ ಅಪ್ರಸ್ತುತವಾಗಲಾರದು.

ಸುಮಾರು ೧೯೮೮ರ ಸುಮಾರಿನಲ್ಲಿ ಡಾ॥ ಹಂಪನಾ ಅವರ 'ಕಮ್ಮಟ್ಟದ ಕಿಡಿಗಳು' ಎಂಬ ಸಂಪ್ರಬಂಧಗಳ ಸಂಕಲನವನ್ನು ಕುರಿತು ಮಾತಾಡುವ ಅವಕಾಶ ನನಗೆ ಒದಗಿತ್ತು. ತುಂಬಾ ಹುರುಪಿನಿಂದ ಆ ಪುಸ್ತಕವನ್ನು ಓದಿ ಆ ಪುಸ್ತಕದಲ್ಲಿನ ಲೋಪಗಳನ್ನೆಲ್ಲಾ ಪಟ್ಟಿ ಮಾಡಿದೆ. ಲೇಖನಗಳು ವ್ಯವಸ್ಥಿತವಾಗಿ ವರ್ಗೀಕರಿಸಿಲ್ಲ, ಅಚ್ಚಿನ ಲೋಪಗಳು ತುಂಬಾ ಇವೆ, ಅಡಿ ಟಿಪ್ಪಣಿಗಳನ್ನು ನೀಡುವ ಕ್ರಮ ಸರಿಯಿಲ್ಲ, ಮುಂತಾದ ಅಂಶಗಳನ್ನು ಕುರಿತು ತುಂಬಾ ಕಟುವಾಗಿಯೇ ಮಾತಾಡಿದೆ. ಮುಂದಿನ ಸಾಲಿನಲ್ಲಿಯೇ ಡಾ॥ ಹಂಪನಾ ಅವರು ಕುಳಿತು ತದೇಕ ಚಿತ್ತದಿಂದ ಆಲಿಸುತ್ತಿದ್ದರು. ನಾನೇ ಮೇಧಾವಿ, ನಾನು ಮಹಾ ಧೈರ್ಯಶಾಲಿ, ನನ್ನಂತಹ ಸಂಶೋಧಕ ಕರ್ನಾಟಕದಲ್ಲಿಯೇ ಇಲ್ಲ ಎಂಬ ಹುಂಬತನ ಆಗ ಇತ್ತು. ಆಗ ನನಗೆ ಎಲ್ಲಿಯೂ ಕೆಲಸವಿರಲಿಲ್ಲ. ಎರಡು ಮೂರು ದಿನಗಳ ಹಿಂದೆಯಷ್ಟೇ ಹಂಪನಾ ಅವರೇ ಕರೆದು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ 'ನನ್ನ ಯೋಗ್ಯತೆಗೆ ತಕ್ಕ ಕೆಲಸ'ವನ್ನು ಕೊಟ್ಟಿದ್ದರು. ಸಮಾರಂಭ ಮುಗಿದ ಮೇಲೆ ಎಂದಿನಂತೆ ನಗು ಮುಖದಿಂದ ಕೈ ಕುಲುಕಿ 'ಭೇಷ್' ಎಂದರು. ಮಾರನೆಯ ದಿನ ತಮ್ಮ ಛೇಂಬರಿಗೆ ಕರೆಸಿ ಹಿಂದಿನ ದಿನದ ನನ್ನ ಉಪನ್ಯಾಸದ ಬಗ್ಗೆ ಮೆಚ್ಚುಗೆಯನ್ನು ಸೂಚಿಸಿ "ನೀನು ಕೇವಲ ಇಂತಹ ಸಂಶೋಧನಾ ವಿಧಿವಿಧಾನಗಳ ಬಗ್ಗೆ ಮಾತಾಡುವುದಕ್ಕಿಂತಲೂ, ನನ್ನ ಅಭಿಪ್ರಾಯಗಳ ಬಗ್ಗೆ ಇನ್ನಷ್ಟು ಒತ್ತು ಕೊಟ್ಟು ಮಾತಾಡು. ಅಂದರೆ ವಿಧಿವಿಧಾನಗಳ ಬಗ್ಗೆ ಮಾತಾಡಿದ್ದು ತಪ್ಪು ಎನ್ನುತ್ತಿಲ್ಲ. ವಿಷಯದ ಬಗ್ಗೆ ಮಾತಾಡು. ಅದನ್ನು ನೀನು ಸಾಧಿಸಲು ಅಗತ್ಯವಾದ ವಿದ್ವತ್ತು ಬೆಳೆಸಿಕೋ, ವಿನಯವನ್ನು ಕಲಿಯಬೇಕು ಎಂದು ಹೇಳುವುದಿಲ್ಲ. ನಿನ್ನ ವಿದ್ವತ್ತು ಬೆಳೆದಂತೆ ವಿನಯ ತಾನೇತಾನಾಗಿ ಬೆಳೆಯುತ್ತದೆ" ಎಂದು ಹೇಳಿದರು. ನನಗೆ 'ಮಸ್ಕಾ ಹೊಡೆಯುತ್ತಿದ್ದಾರೆ' ಎಂದು ಆಗ ಅನ್ನಿಸಿತು. ಆ ಮಾತುಗಳು ಹದಿನಾರು ವರ್ಷಗಳಾದರೂ ಇಂದಿಗೂ ನನ್ನ ಕಿವಿಯಲ್ಲಿ ಸ್ಪಷ್ಟವಾಗಿ ನಿಂತಿದೆ. ಈಗ 'ಅಯ್ಯೋ ಅವರ ಮಾತನ್ನು ನಾನು ಪಾಲಿಸಿದ್ದರೆ ವಿದ್ವತ್ತು ವಿನಯಗಳೆರಡೂ ಬೆಳೆಯುತ್ತಿದ್ದುವಲ್ಲಾ' ಎಂದನ್ನಿಸುತ್ತದೆ.

## ಒಂದು ಅನಿಸಿಕೆ

ಇತ್ತೀಚಿನ ತಲೆಮಾರಿನ ಕನ್ನಡ ವಿದ್ವಾಂಸರು ಪ್ರಾಚೀನ ಕನ್ನಡ ಕೃತಿಗಳ ಸಂಪಾದನೆಯ ಕಡೆಗೆ ಅಷ್ಟಾಗಿ ಗಮನಹರಿಸದಿರುವುದು ಸಂಶೋಧನಾ ಲೋಕದಲ್ಲಿ ಎದ್ದು ಕಾಣುವ ಒಂದು ಕೊರತೆ. ಗ್ರಂಥ ಸಂಪಾದನೆ ಎಂದರೆ ಕೇವಲ ಅಪ್ರಕಟಿತ ಕೃತಿಗಳ ಪ್ರಕಟನೆಯಲ್ಲ ಎಂಬ ಅಂಶವನ್ನು ಈ ಹಿಂದೆಯೇ ವಿವರಿಸಿದ್ದೇನೆ. ಪಾಠ ನಿರ್ಣಯ, ಪದಗಳ ಪ್ರಯೋಗ, ಅವುಗಳ ನಿಷ್ಪತ್ತಿ, ಅರ್ಥ ಮುಂತಾದ ಅಂಶಗಳನ್ನು ಕುರಿತು ಇಂದು ನಡೆಯುತ್ತಿರುವ ಚರ್ಚೆ ಏನೇನೂ ಸಾಲದು. ಈ ರೀತಿಯ ವಾತಾವರಣದ ಸೃಷ್ಟಿಗೆ ಕಾರಣವೇನು? ಕಾರಣಗಳು ಸಾವಿರ ಇರಬಹುದು! ಆ ಕಾರಣಗಳಿಂದಾಗಿಯೇ ಈ ರೀತಿಯ ಸಾಹಿತ್ಯಿಕ ಅಧ್ಯಯನ ಸ್ಥಗಿತವಾಗಬೇಕೆ? ಇತ್ತೀಚೆಗೆ ನನ್ನ ಕಿವಿಗೆ ಬಿದ್ದ ಒಂದು ಅದ್ಭುತವಾದ ಆಲೋಚನೆ ಎಂದರೆ ಯಾವುದೇ ಒಂದು

ಕಾವ್ಯವನ್ನು ಸಂಪಾದಿಸುವುದು ಇಂದಿನ ಅಧ್ಯಯನ ವಿಧಾನ, ಧೋರಣೆಯಲ್ಲಿ ತೀರಾ ಅಪೇಕ್ಷಣೀಯವಾದುದು. ಕವಿ ಪಾಠ ಯಾವುದು ಎಂಬುದಕ್ಕಿಂತಲೂ ಜನ ಅಂಗೀಕರಿಸುವ ಪಾಠ ಯಾವುದು ಎಂಬುದು ಮುಖ್ಯವಂತೆ. ಇರಬಹುದು ಇದು ಸಂಶೋಧನೆಯ ಒಂದು ಪಾತಳಿಯೇ. ಆ ಪಾತಳಿಯನ್ನಾದರೂ ಗಟ್ಟಿ ಸಿದ್ಧಾಂತದ ಹಿನ್ನೆಲೆಯಲ್ಲಿ ಭದ್ರಪಡಿಸಬೇಕಲ್ಲವೆ?

ನಮ್ಮ ಪ್ರಾಚೀನ ಕಾವ್ಯಗಳು ಇಂದಿನ ನಮ್ಮ ಸಾಮಾಜಿಕ ಪರಿಸ್ಥಿತಿಗಳ, ಧೋರಣೆಗಳ, ಮೌಲ್ಯಗಳ ಹಿನ್ನೆಲೆಯಲ್ಲಿ ಪ್ರತಿಗಾಮಿಯಾಗಿ ಕಾಣಬಹುದು. ಆದರೆ ಅವು ರಚಿತವಾಗಿರುವುದು ನಮ್ಮ ಕನ್ನಡ ಭಾಷೆಯಲ್ಲಿ; ಅವು ತಮ್ಮ ಸಂವಹನಾ ಸಾಧನವಾಗಿ ಬಳಸಿಕೊಂಡಿರುವುದು ನಮ್ಮ ಕನ್ನಡವನ್ನು. ಆ ಪದಗಳು ಹೊರ ಹೊಮ್ಮಿಸುವ ಅರ್ಥ ಪರಂಪರೆಗಳು ಕನ್ನಡ ಜನರ ಪರಿಕಲ್ಪನೆ ಎಂಬುದನ್ನು ಗುರುತಿಸಬೇಕು.

ಕೇವಲ ಅನುಭವವೊಂದೇ ಯಾವುದೇ ಸಾಹಿತ್ಯ ಕೃತಿಯ ಮೌಲ್ಯವನ್ನು ಹೆಚ್ಚಿಸಲಾರದು. ಅದರ ಅಭಿವ್ಯಕ್ತಿಯು ಶ್ರೀಮಂತವಾಗಿರಬೇಕು. ಅಭಿವ್ಯಕ್ತಿ ಶ್ರೀಮಂತವಾಗಬೇಕಾದರೆ ಪದಸಾಮಗ್ರಿ ವಿಪುಲವಾಗಿರಬೇಕು. ಈ ಕಾರಣಕ್ಕಾಗಿಯೇ ನಾವು ನಮ್ಮ ಪ್ರಾಚೀನ ಕನ್ನಡ ಕಾವ್ಯಗಳನ್ನು ಅಧ್ಯಯನ ಮಾಡಬೇಕು. ಈ ರೀತಿಯ ಅಧ್ಯಯನದಿಂದ ನಾವು ಖಂಡಿತಾ ಹಿನ್ನಡೆಯಲಾರೆವು. ನಮ್ಮ ಬೆನ್ನೆಲುಬು ಮತ್ತಷ್ಟು ಭದ್ರವಾದೀತು.

ಈ ಅಂಶದ ಬಗ್ಗೆ ಚರ್ಚೆಯಾಗಬೇಕಾದ ಅಗತ್ಯವಿಲ್ಲ. ಕನ್ನಡವನ್ನು ಅಧ್ಯಯನ ಮಾಡುವ ಪ್ರತಿಯೊಬ್ಬ ವಿದ್ಯಾರ್ಥಿಯೂ ಈ ಬಗ್ಗೆ ಅಂತರ್ಮಥನ ನಡೆಸಬೇಕು. ಅದರ ಫಲವಾಗಿ ಮೂಡಿದ ಅಭಿಪ್ರಾಯವನ್ನು ಕಾರ್ಯಗತಗೊಳಿಸಬೇಕು. ಮೂಡುವ ಅಭಿಪ್ರಾಯ ನನ್ನ ಮೂಗಿನ ನೇರಕ್ಕೆ ಇರಬೇಕೆಂಬ ಹಠವೇನು ನನಗಿಲ್ಲ. ಆಲೋಚಿಸಿ ನಿಮ್ಮ ಮೂಗಿನ ನೇರಕ್ಕೇ ನಡೆಯಿರಿ.

# ಜನಪ್ರಿಯ ಪರಂಪರೆ ಮತ್ತು ಜನಪದ ಸಾಹಿತ್ಯ

ಡಾ. ಸೋಮಶೇಖರ ಇಮ್ರಾಪೂರ

"ಕೇಳಿದ್ದನ್ನು ನೆನಪಿಟ್ಟುಕೊಂಡು ನೋಡಿದ್ದನ್ನು ಅನುಕರಣೆ ಮಾಡುತ್ತ ಹೋಗುವ" ಜಾನಪದ ಪರಂಪರೆಯ ಮೂಲ ಪ್ರವೃತ್ತಿಯಲ್ಲಿ ಜನಪ್ರಿಯತೆ(popularity)ಯೂ ಒಂದು ವಿಶಿಷ್ಟ ಲಕ್ಷಣಗಳಲ್ಲೊಂದಾಗಿದೆ ಮತ್ತು ಅದು ಜಾನಪದ ಪರಂಪರೆಯ ಹುಟ್ಟಿಗೂ, ಬಳುವಗೂ, ಪ್ರಥಮ ಸೋಪಾನವಾಗಿದೆ. ಹಾಗೆಯೇ 'ಪರಂಪರೆ' (Tradition) ಎಂಬುದೂ ಕೂಡ 'ಪೂರ್ವಿಕರಿಂದ ಪರಂಪರೆಯಾಗಿ ಬಂದಿರುವ ಅಭಿಪ್ರಾಯ, ನಂಬಿಕೆ, ಆಚಾರ, ಸಂಪ್ರದಾಯ, ರೂಢಿ, ಪದ್ಧತಿ'ಯೇ ಆಗಿರುವುದರಿಂದ ಜಾನಪದ ವಿಜ್ಞಾನದಲ್ಲಿ ಅದಕ್ಕೂ ಅತ್ಯಂತ ಮಹತ್ವ ಲಭ್ಯವಾಗಿದೆ. ಆದ್ದರಿಂದ ಈ ಎರಡೂ ಪದಗಳು ಇಡೀ ಜಾನಪದ ಕುರಿತ ಲಕ್ಷಣ ಸ್ವರೂಪಗಳ ವ್ಯಾಪ್ತಿಯಲ್ಲಿಯೇ ಸೇರುತ್ತವೆ. ಹೀಗಾಗಿ ಪ್ರಸ್ತುತ ಲೇಖನದ ವಿಷಯ ವ್ಯಾಪ್ತಿ ಎಂದರೆ - ಜನಪ್ರಿಯವಾದ ಜಾನಪದ ಪರಂಪರೆಯಿಂದ (Folk Tradition) ಜನಪ್ರಿಯ ಪರಂಪರೆಯನ್ನು ಬೇರ್ಪಡಿಸಿ ಅವಲೋಕಿಸುವುದಾಗಿದೆ. ಪ್ರಥಮದಲ್ಲಿ ಯಾವುದೇ ವ್ಯಕ್ತಿಯ ನಂಬಿಕೆ, ಶ್ರದ್ಧೆಗಳು ಕ್ರಿಯಾತ್ಮಕವಾಗಿ ಆಚರಣೆಗಳಲ್ಲಿ ಸ್ಥಿರಗೊಂಡು, ಕಾಲಕ್ರಮೇಣ ಸಾಮೂಹಿಕ ಕ್ರಿಯೆಗಳಲ್ಲಿ ಗಟ್ಟಿಗೊಂಡು, ಸಂಪ್ರದಾಯವಾಗಿ ಸಾಗಿಬಂದಾಗ, ಪರಂಪರೆಗೆ ಬದ್ಧವಾಗುವುದು ಸಹಜ ಕ್ರಿಯೆ. ಹೀಗೆ ಪರಂಪರೆಗೆ ಬದ್ಧವಾಗಿ ಹರಿದು ಬಂದ ಸಾಮಾಜಿಕ ನಡಾವಳಿಕೆಗಳು ಮುಂದುವರೆಯಲಿಕ್ಕೆ ಜನಪ್ರಿಯತೆಯೇ ಮಹಾಮಾಧ್ಯಮವಾಗುತ್ತದೆ. ಜನಪ್ರಿಯವಲ್ಲದ ಯಾವ ನಂಬಿಕೆ - ಆಚರಣೆಗಳು ಪರಂಪರೆಯಲ್ಲಿ ಸ್ಥಿರವಾಗಿ ನಿಲ್ಲಲಾರದು. ಅಂತೆಯೇ ಜಾನಪದ ವ್ಯಾಪ್ತಿಯ ಬಗ್ಗೆ ಏನೊಂದೂ ನಿರ್ಧಾರವಾಗದ ಕಾಲದಲ್ಲಿ ಈ ಅಧ್ಯಯನಕ್ಕೆ ಜನಪ್ರಿಯ ಪ್ರಾಚೀನ ನಡಾವಳಿಕೆಗಳು (ಅವಶೇಷಗಳು) (Popular antiquities); ಜನಪ್ರಿಯ ಸಾಹಿತ್ಯ (popular literature) ಎಂದು ಹೆಸರಿಸಿದ್ದನ್ನಿಲ್ಲಿ ಸ್ಮರಿಸಬಹುದು. ಹೀಗೆ ಜಾನಪದ ಜನಪ್ರಿಯತೆಗೂ, ಜನಪ್ರಿಯ ಪರಂಪರೆಗೂ ಸಂಬಂಧವಿದೆ ಎಂದಾಗ ಜನಪ್ರಿಯತೆಯೇ ಜಾನಪದದ ಮುಖ್ಯ ಮಾನದಂಡವೆಂದೂ ಭಾವಿಸಲಾಗದು. ಸಕಲ ಸಾಮಾಜಿಕ ಶಾಸ್ತ್ರಗಳ ಹಿನ್ನೆಲೆಯಲ್ಲಿ ತನ್ನ ಅಧ್ಯಯನ ಕ್ಷೇತ್ರವನ್ನು ಹಿಗ್ಗಿಸಿಕೊಂಡ ಜಾನಪದದಲ್ಲಿ - ಸಾಮಾಜಿಕರ ಅದೆಷ್ಟೋ ಧಾರ್ಮಿಕ ವಿಧಿವಿಧಾನಗಳು, ಸಂಸ್ಕಾರ ಕ್ರಿಯೆಗಳು, ವಿಶಿಷ್ಟ ಹಬ್ಬಹರಿದಿನಗಳು, ದೈವಾರಾಧನೆ, ಬಲಿ, ಸಹಗಮನ, ಮಾಟ-ಮಂತ್ರ, ವೈದ್ಯ ಇತ್ಯಾದಿಗಳ ಆಚರಣೆಗಳಲ್ಲಿ ಜನಪ್ರಿಯತೇ ಕಾರಣವೆಂದು ಹೇಳುವಂತಿಲ್ಲ. ಅವೆಲ್ಲ ಜಾನಪದರು ನಂಬಿಕೊಂಡು ಬಂದ ಬದುಕಿನ ಮೌಲ್ಯಗಳ ಹಿನ್ನೆಲೆಯಲ್ಲಿ ಗಂಭೀರವಾದ ನಿಶ್ಚಿತ ಉದ್ದೇಶ ಸಾಫಲ್ಯಕ್ಕಾಗಿ,

---

೧. ಇಂಗ್ಲಿಷ್-ಕನ್ನಡ ನಿಘಂಟು, ಮೈಸೂರು ವಿಶ್ವವಿದ್ಯಾನಿಲಯ

ಪ್ರಯೋಜನ ದೃಷ್ಟಿಯಿಂದ ಆಚರಿಸುತ್ತ ಬಂದವುಗಳು. ಇನ್ನು ಮನರಂಜನೆಗಾಗಿ, ದಣಿದು ನಿವಾರಣೆಗಾಗಿ ಹುಟ್ಟಿಕೊಳ್ಳುವ ಕಲೆ, ನೃತ್ಯ, ಸಾಹಿತ್ಯ, ಸಂಗೀತ, ಆಟಪಾಟ, ವೇಷಭೂಷಣ ಮದುವೆ, ಜಾತ್ರೆ ಮುಂತಾದವುಗಳಲ್ಲಿ ಜನಪ್ರಿಯ ಅಂಶಗಳೇ ಹೆಚ್ಚು. ಒಟ್ಟಿನಲ್ಲಿ ಯಾವುದೇ ಸಮಾಜವು ತಾನು ರೂಢಿಸಿಕೊಂಡು ಬಂದ ನಂಬಿಕೆ ಶ್ರದ್ಧೆಗಳ ಮೇಲೆಯೇ ಸಂಪ್ರದಾಯವನ್ನು ರೂಢಿಸಿಕೊಳ್ಳುವುದರಿಂದ 'ಜನಪ್ರಿಯ' ಮಾನದಂಡದಿಂದ ಅವುಗಳನ್ನು ವಿಂಗಡಿಸುವುದೂ ದುಸ್ತರವಾಗುತ್ತದೆ.

ಸಾಮಾನ್ಯವಾಗಿ ಜಾನಪದ ಪರಂಪರೆಗಳನ್ನು ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕ ಎಂದು ವಿಂಗಡಿಸಿ ಅವಲೋಕಿಸುವುದುಂಟು. ರಾಜಕೀಯ ಪರಂಪರೆಯು ವ್ಯಕ್ತಿವ್ಯಕ್ತಿಗಳ ಹಾಗೂ ಸಮಾಜದೊಂದಿಗಿನ ಅವನ ನಡಾವಳಿಕೆಗಳನ್ನೂ ಆ ಮೂಲಕ ಇಡೀ ಸಮಾಜವನ್ನು ನಿಗ್ರಹಿಸುವ ಅಲಿಖಿತ ಕಾನೂನು ಶಾಸ್ತ್ರವಾದರೆ; ಸಾಮಾಜಿಕ ಹಾಗೂ ಧಾರ್ಮಿಕ ಪರಂಪರೆಗಳು ನೀತಿ ಶಾಸ್ತ್ರ ಬೋಧಿಸುವಲ್ಲಿ ಮಹತ್ತರವಾದವುಗಳಾಗಿವೆ. ಜಾನಪದ ಪರಂಪರೆಗಳಿಗೆ ದೃಢವಾದ ನಂಬಿಕೆ (conviction), ಶ್ರದ್ಧೆಗಳೇ ಮೂಲ. ನಂಬಿಕೆಯಿಂದ ಉಪಾಸನೆ, ಉಪಾಸನೆಗಳಿಗೆ ಅನುಗುಣವಾಗಿ ವಿಧಾನ-ವಿಧಿನಿಷೇಧಗಳು ನಿರ್ಧರಿತವಾಗುತ್ತವೆ. ತದನಂತರ ಪರಂಪರೆಯಾಗಿ ರೂಪುದಳೆಯುತ್ತವೆ. ಹೀಗೆ ಜಗತ್ತಿನ ಯಾವುದೇ ಅನಾಗರಿಕ, ಅರೆನಾಗರಿಕ, ಹಾಗೂ ನಾಗರಿಕ ಸಮಾಜದಲ್ಲಾದರೂ ರೂಪುಗೊಳ್ಳುವ ಈ ಜಾನಪದ ಪರಂಪರೆಗಳಲ್ಲಿ ಸಾಮಾನ್ಯವಾಗಿ ದೈವಾರಾಧನೆ, ಹಬ್ಬಹರಿದಿನಗಳು, ಜಾತ್ರೆ ಉತ್ಸವಾದಿಗಳು, ಮದುವೆ-ಮುಂಜಿ, ಜನನ-ಮರಣ, ವ್ಯವಸಾಯ-ಕಸಬು, ಹಾಗೂ ಇತಿಹಾಸ, ಚರಿತ್ರೆ ಪುರಾಣ-ಐತಿಹ್ಯ ಇತ್ಯಾದಿಗಳಿಗೆ ಸಂಬಂಧಿಸಿದ ವಿಶಿಷ್ಟ ಆಚರಣೆಗಳು ಪ್ರಮುಖವಾಗಿದ್ದು ಆಯಾ ಸಮಾಜದ ಒಟ್ಟಾರೆ ಸಂಸ್ಕೃತಿಯನ್ನು ನಿರ್ಧರಿಸುತ್ತದೆ. ಆದ್ದರಿಂದ ಅತ್ಯಂತ ಪ್ರಮುಖವಾದ ಜನಪ್ರಿಯ ಪರಂಪರೆಗಳ ನಿಲುವುಗಳನ್ನು ಮತ್ತು ಕಂಠಸ್ಥವಾಗಿ ಬಂದ ಅವೆಲ್ಲವುಗಳ ಒಲುಮೆಗಳನೆಲ್ಲ ವಾಸ್ತವಪೂರ್ಣವಾಗಿ ಸೆರೆಹಿಡಿದ ಜನಪದ ಸಾಹಿತ್ಯದ ಹಿರಿಮೆಯನ್ನು ಗುರುತಿಸಬಹುದು.

ಆದಿಮಾನವನು ನಿಸರ್ಗ ಶಕ್ತಿಯಲ್ಲಿಟ್ಟ ನಂಬಿಕೆಯಿಂದ ಪಂಚಭೂತಾರಾಧನೆಗೆ ಮೊದಲಾಯಿತು. ದುಷ್ಟಶಕ್ತಿಗಳಿಗೆ ಭಯಗ್ರಸ್ಥನಾಗಿ ತನ್ನನ್ನು ರಕ್ಷಿಸಿಕೊಳ್ಳಲು ಮಾರಿ, ಮಸಣಿ, ದೆವ್ವ ಭೂತ, ಪಿಶಾಚಿಗಳ ಸಂತೃಪ್ತಿಗಾಗಿ ಮಕ್ಕಳನ್ನೂ ದನಕರು, ಆಡು-ಕುರಿ ಕೋಣಗಳನ್ನೂ ಬಲಿ ಕೊಡುವಂತಾಯ್ತು. ಪಾಪಪುಣ್ಯಗಳ ಕಲ್ಪನೆಯಲ್ಲಿ ಸ್ವರ್ಗ ನರಕಗಳು ಸೃಷ್ಟಿಯಾದವು, ಪುನರ್ಜನ್ಮಕ್ಕಾಗಿ ದಾನ ಧರ್ಮ ಪುಣ್ಯ ಕರ್ಮ ಮಾಡುವ ನೀತಿಸಂಹಿತೆ ತಾನಾಗಿಯೇ ರೂಪುಗೊಂಡಿತು. ದೈವಾರಾಧನೆ ಬದುಕಿನ ಒಂದು ಅವಿಭಾಜ್ಯ ಅಂಗವೇ ಆಗಿ-ಶಿಷ್ಟ ದೇವತೆಗಳನ್ನು ಒಲಿಸಿಕೊಳ್ಳುವ, ದುಷ್ಟದೇವತೆಗಳನ್ನು ಸಂತೈಸುತ್ತ ಬಂದ ಮಾನವನ ಚಿತ್ತದಲ್ಲಿ ಅದ್ಭುತವಾದ ಕಲ್ಪನೆಗಳು ಲೋಲಾಡಿದವು. ಕಥೆ, ಗೀತೆಯಾಗಿ ಮೊಳಗಿದವು. ಒಬ್ಬೊಬ್ಬ ದೇವರುಗಳ ಕಾರ್ಯಭಾರವೇ ಬೇರೆಬೇರೆಯಾಗಿ ಭಕ್ತರಲ್ಲೂ ಪಂಗಡಗಳಾದವು. ಅವರವರಿಗೆ ಅವರವರು ನಂಬಿದ ದೈವವೇ ಆರಾಧನೆಗೆ ಒಳಪಟ್ಟಿತು. ಹೀಗಾಗಿ ದೈವಾರಾಧನಾ ಮೂಲವಾದ ಧಾರ್ಮಿಕ-ಪರಂಪರೆ ಸಾಮೂಹಿಕ ಕ್ರಿಯೆಯಾಗಿಯೇ ಪರಂಪರೆಯಲ್ಲಿ ಭದ್ರಗೊಂಡಿತು. ಅಂತೆಯೇ ಧಾರ್ಮಿಕ ಕಥೋಪಜೀವಿಗಳು, ಲೌಕಿಕ ಕಥೋಪಜೀವಿಗಳು ಮತ್ತು ಅರ್ಧಧಾರ್ಮಿಕ ಅರ್ಧ ಲೌಕಿಕ ಕಥೋಪಜೀವಿಗಳು ಹುಟ್ಟಿಕೊಂಡರು. ಆತ್ಮೋದ್ಧಾರ, ಹಾಗೂ ಜೀವನೋಪಾಯಕ್ಕಾಗಿ ತಾವು ನಂಬಿಕೊಂಡ ದೇವದೇವತೆಗಳನ್ನು ಕುರಿತು ಕಟ್ಟಿದ ಹಾಡು, ಕಥೆಗಳು ಅದ್ಭುತ ಕಲ್ಪನಾ ವೈಖರಿಯಿಂದ ಜನಪದ ಸಾಹಿತ್ಯ ಸಂಚಯವನ್ನು ಸಮೃದ್ಧಿಗೊಳಿಸಿದರು. ಊರೂರು ಸುತ್ತುತ್ತ ಕಥೆಗಳನ್ನು ಸೃಷ್ಟಿಸುತ್ತ, ದೈವಾರಾಧಕರನ್ನು ರಂಜಿಸುತ್ತ

ಒಂದು ಪರಂಪರೆಯಾಗಿಯೇ ಬೆಳೆದು ಬಂದ ಈ ವೃತ್ತಿಗಾಯಕರು ಕರ್ನಾಟಕದ ಜನಪದ ಪರಂಪರೆಯಲ್ಲಿ ಮಹತ್ವದ ಪಾತ್ರವಾಡುತ್ತಿದ್ದಾರೆ. ಇವರು ಹೇಳುವ ಕಥೆ, ಹಾಡುವ ಹಾಡುಗಳಲ್ಲಿ ಧಾರ್ಮಿಕ ಮೂಲ ಕೆಲವು, ಅರ್ಧಧಾರ್ಮಿಕ ಅರ್ಧ ಸಾಮಾಜಿಕ ಕೆಲವು ಹಾಗೂ ಮನರಂಜನೆಯನ್ನೇ ಮುಖ್ಯವಾಗಿಟ್ಟುಕೊಂಡವುಗಳು ಕೆಲವು, ಧಾರ್ಮಿಕತೆಯನ್ನೇ ಪ್ರಧಾನವುಳ್ಳ ವೃತ್ತಿಗಾಯಕರೆಂದರೆ ಗೊಂದಲಿಗರು, ಗೊರವರು, ದೇವದಾಸಿಯರು, ಚೌಡಕಿಯವರು, ಸಾರುವ ಅಯ್ಯನವರು, ಮುಖ್ಯಾವಿಗೆ ಅಯ್ಯನವರು, ಕರಪಲ್ಲವದವರು, ಕರಪಾಲದವರು, ದೊಂಬಿದಾಸರು, ತೆಲುಗು ಜಂಗಮರು, ತಂಬೂರಿಯವರು ಅಥವಾ ಜುಂಜಪ್ಪನವರು, ಕಂಸಾಳೆಯವರು, ಮಂಜೇದವರು, ನೀಲಗಾರರು ಇತ್ಯಾದಿ. ಇನ್ನು ಅರ್ಧಧಾರ್ಮಿಕ ಅರ್ಧ ಸಾಮಾಜಿಕತೆಯನ್ನೇ ಪ್ರಧಾನವಾಗಿಟ್ಟುಕೊಂಡ ವೃತ್ತಿಗಾಯಕರಲ್ಲಿ-ಬುಡುಬುಡಿಕೆ, ಹೆಳವರು, ಕೊರವಂಜಿ, ದುರುಗಮುರುಗಿಯದರು. ಮೋಡಿಕಾರರು, ದಾಸರು ಇತ್ಯಾದಿ ಕೇವಲ ಮನರಂಜನೆಯೇ ಪ್ರಧಾನವಾಗಿವುಳ್ಳ ವೃತ್ತಿಯವರೆಂದರೆ - ಲಾವಣಿಕಾರರು, ಗೀಗೀಯವರು, ಕಿಳ್ಳಿಕೇತರು, ಕವಲೆತ್ತಿನವರು, ವೇಷಗಾರರು, ದೊಂಬರು, ಸಿದ್ಧಿಕಸಿದ್ಧಿಯವರು ಇತ್ಯಾದಿ. ಈ ಎಲ್ಲರೂ ಜನಪದ ಕಲಾಕಾರರು. ಎಲ್ಲರೂ ಅಲೆಮಾರಿಗಳು. ಕೆಲವರು ಪದ್ಯಮಯವಾದ ಗದ್ಯದಲ್ಲಿಯೇ ಹಾಡಿನ ಸೌಂದರ್ಯವನ್ನು ಪ್ರದರ್ಶಿಸಿ ಜನಮನವನ್ನು ರಂಜಿಸಬಲ್ಲರು. ಕರ್ನಾಟಕದ ವೃತ್ತಿಗಾಯಕರು ಜಾನಪದ ವಿದ್ವಾಂಸರ ಆಸಕ್ತಿಯನ್ನು ಬಹುಮಟ್ಟಿಗೆ ಸೆಳೆದಿದ್ದಾರೆ. ಅದಕ್ಕೆ ಕಾರಣ ಅವರು ದೇವರ ಪವಾಡ ಇತ್ಯಾದಿಗಳನ್ನು ಕುರಿತು ಕಥೆ ಕಟ್ಟಿ ಹೇಳುವ ಅನುಪಮ ಕಲೆಗಾರಿಕೆ ಹಾಗೂ ಕಲ್ಪನಾರಮ್ಯತೆ. ಜನಪ್ರಿಯ ಪರಂಪರೆಯಾಗಿಯೇ ಬೆಳೆದುಬಂದಿರುವ ಈ ಗಾಯಕರ ಸಾಹಿತ್ಯದಲ್ಲಿ ಕಾವ್ಯ ಖಂಡಕಾವ್ಯ ಮಹಾಕಾವ್ಯಗಳೂ ಉದ್ಭವಿಸಿರುವುದು ಗಮನಾರ್ಹವಾಗಿದೆ. ಮಲೆಯ ಮಾದೇಶ್ವರದಂಥ ಯಾವ ಶಿಷ್ಟ ಸಾಹಿತ್ಯಕ್ಕೂ ಕಡಿಮೆಯಾಗದ ಜನಪದ ಮಹಾಕಾವ್ಯ ಸೃಷ್ಟಿಯನ್ನು ಅವಲೋಕಿಸಿದರೆ ಈ ಗಾಯಕರು ಜನಪದ ಸಾಹಿತ್ಯಕ್ಕೆ ನೀಡಿದ ಕಾಣಿಕೆ ಅಪಾರವೆನಿಸುತ್ತದೆ. ಈ ವೃತ್ತಿನಿರತ ಗಾಯಕರ ಸಾಹಿತ್ಯ ಸಂಗೀತ ವೃತ್ತಿಪರಂಪರೆಗಳನ್ನು ಕನ್ನಡದ ಜಾನಪದ ಕ್ಷೇತ್ರದಲ್ಲಿ ನೆಲೆಯೂರಿಸಿದ ಕೀರ್ತಿ ಡಾ. ಜೀ.ಶಂ.ಪ ಅವರಿಗೆ ಸಲ್ಲುತ್ತದೆ.

ಜನಪ್ರಿಯ ಪರಂಪರೆ ನಿರ್ಮಾಣದಲ್ಲಿ ವೇದ, ಪುರಾಣ, ರಾಮಾಯಣ, ಮಹಾಭಾರತಾದಿಗಳ ಪಾತ್ರ ಮಹತ್ತರವಾದುದು. ಇಂದಿನ ನಾಗರಿಕ ಜಗತ್ತಿನಲ್ಲಿ ತಮ್ಮ ಔಚಿತ್ಯವನ್ನು ಕಳೆದುಕೊಂಡರೂ ಜನಪದರ ನಂಬಿಕೆ, ಶ್ರದ್ಧೆ ಆ ಮೂಲಕ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಬರುವರಲ್ಲಿ ಅವೇ ಬಲವಾದ ಆಕರಗಳಾದವು. ಹಾಗೆಯೇ ಕಲ್ಲು, ಬಂಡೆ, ಕೋಟೆ, ಕೊತ್ತಳ, ಗಿಡಮರಗಳ ಬಗ್ಗೆ ಹುಟ್ಟಿಕೊಂಡ ಅದೆಷ್ಟೋ ಐತಿಹ್ಯ, ದಂತಕತೆಗಳು ಜನಪದ ಸಾಹಿತ್ಯದ ಸಿರಿಯನ್ನು ಹೆಚ್ಚಿಸಿದವು. ಭಾವುಕ ಸಮಾಜ ಜೀವಿಗಳಿಗೆ ತಮ್ಮ ಅರಿವಿಗೆ ನಿಲುಕಿದ್ದೆಲ್ಲವೂ ಅಗಮ್ಯ ಶಕ್ತಿಯ ಪ್ರತೀಕವಾಗಿ-ಸಹಸ್ರ ಸಹಸ್ರ ರೀತಿಯಲ್ಲಿ ಭಾವನೆಗಳು, ಕಲ್ಪನಾ ಲೋಕತೆರೆದವು. ಸಮಾಜ ಹಾಗೂ ವ್ಯಕ್ತಿವಿಕಾಸಕ್ಕಾಗಿಯೇ ನೀತಿ ಸಂಹಿತೆಯಾಗಿ ಹೊಮ್ಮಿದ ಕಾವ್ಯ, ಕಥೆ, ಗಾದೆ, ಒಗಟುಗಳು ಜನಮನ ತಿದ್ದುವ ಒರೆಗಲ್ಲಾದವು. ಪ್ರಾಣಿಗಳೂ ಕೂಡ ಮನುಷ್ಯರಂತೆ ನೀತಿ ಬೋಧಿಸುವ ಪಾತ್ರವಹಿಸಿದವು. ಬಡವಬಲ್ಲಿದ, ಸುಖದುಃಖ, ಸತ್ಯಾಸತ್ಯ, ಪಾಪಪುಣ್ಯ, ಹುಟ್ಟು-ಸಾವು, ದುಷ್ಟ-ಶಿಷ್ಟ ಮುಂತಾದ ವೈರುದ್ಯಗಳಿಗೆ ಸಿಗುವ ಫಲಾಫಲಗಳ ನಿರ್ಣಯವೇ ಜನಪದ ಸಾಹಿತ್ಯದಲ್ಲಿ ಸ್ಥಿರಗೊಂಡವು.

ಇನ್ನು ವ್ಯವಸಾಯ-ಕಸುಬುಗಳ ಜಾನಪದ ಜನಪ್ರಿಯ ಪರಂಪರೆಗಳಲ್ಲೂ ಪೂರಕವಾಗಿ ಹುಟ್ಟಿಬಂದ ಜನಪದ ಸಾಹಿತ್ಯ ಸಾಮಗ್ರಿ ಗಣನೀಯವಾಗಿದೆ. ಕೃಷಿ ಪ್ರಧಾನವಾದ ಭಾರತದಂಥ ದೇಶದಲ್ಲಿ ಒಕ್ಕಲಿಗನಿಗೆ - ತನ್ನ ವ್ಯವಸಾಯದಲ್ಲಿ ನೆರವಾಗುವುದೆಲ್ಲವೂ ದೈವಕ್ಕೆ ಸಮಾನವಾಗಿದೆ.

ತನ್ನ ಹುಲುಸಾದ ಬೆಳೆಗಾಗಿ ವರ್ಷವಿಡೀ ದುಡಿವ ರೈತನು ನಿಸರ್ಗದ ಪ್ರಕೋಪ ಶಮನಕ್ಕಾಗಿ ಅನೇಕ ವಿಧಿವಿಧಾನಗಳನ್ನು ರೂಪಿಸಿಕೊಂಡಿದ್ದಾನೆ. ಅವನ ಶ್ರಮದಲ್ಲಿ ಸಂತಸದಲ್ಲಿ ಎಲ್ಲ ದೇವತೆಗಳೂ ಭಾಗಿಗಳು. ಒಕ್ಕಲು ಸಮಾಜದಲ್ಲಿ ಋತುಮಾನಗಳ ಹಿನ್ನೆಲೆಯಲ್ಲಿ ಆಚರಿಸುವ ಹಬ್ಬಗಳಿಗೆ ವಿಶೇಷ ವೈಶಿಷ್ಟ್ಯವಿದೆ. ಅವುಗಳಲ್ಲಿ ಮಣ್ಣುಪೂಜೆಗೆ ಸಂಬಂಧಿಸಿದವುಗಳೇ ಹೆಚ್ಚು. ಅದು ಭೂಮಿತಾಯಿಯಲ್ಲಿಟ್ಟ ಆತನ ಅನನ್ಯ ಶ್ರದ್ಧೆಯ ಕುರುಹು. ಎತ್ತು ಆತನಿಗೆ ದನವಲ್ಲ ಸಾಕ್ಷಾತ್ ನಂದಿವಾಹನ. ಆತನ ಹತ್ತಿರದ ದೇವರೆಂದರೆ ಆ ಬಸವಣ್ಣನೇ. ತನ್ನ ಎತ್ತಿನ ಕಾಲಿಗೆ ಮುಳ್ಳುತಾಕಿದರೂ, ತನ್ನ ಕಣ್ಣಿಗೇ ಬಡಿಸಿಕೊಂಡಷ್ಟು ಆತನಿಗೆ ನೋವು, ಅಷ್ಟು ಶ್ರದ್ಧೆ, ಪ್ರೀತಿ, ಕಾಳಜಿ, ಕಾರಣ ಆತನ ಸರ್ವಸ್ವವೇ ಬಸವಣ್ಣ. ಸೋಮವಾರ ಬಸವಣ್ಣನ ವಾರ. ಎತ್ತಿಗೆ ನೊಗಕಟ್ಟಬಾರದೆಂಬುದು ನಂಬಿಕೆ, ವಿಶ್ವಾಸ ಅದರಿಂದ ಎತ್ತಿಗೂ ಆತನಿಗೆ ಕೂಡಿಯೇ ವಿಶ್ರಾಂತಿ. ತನ್ನ ವ್ಯವಸಾಯದ ಸಲಕರಣೆಗಳಾದ ಕೂರಿಗೆ, ಕುಂಟೆ, ರಂಟೆ, ಕುಡ, ಕುಡುಗೋಲು, ಮೇಟಿ, ಕಣ ಇತ್ಯಾದಿ ಎಲ್ಲವೂ ಆತನ ಪೂಜ್ಯನೀಯವಾದವುಗಳು. ದೈವಕ್ಕೆ ಸಮಾನ. ವರ್ಷದ ಫಸಲು ಬರುವಾಗ ಸುಗ್ಗಿಯ ಕಣದಲ್ಲಿ ನಿಂತು ಹಾಡುವ ಹಂತಿ ಹಾಡುಗಳಲ್ಲಿ ನಿಸರ್ಗ, ಸಾಧು ಸಂತರು ಶರಣರು, ದೇವದೇವತೆಗಳೇ ಕಾವ್ಯವಸ್ತುಗಳಾಗುತ್ತವೆ. ಕಾವ್ಯ ಬದುಕಿನಾನುಭವದ ಜೀವಂತ ಚಿತ್ರಣವಾಗಿರುವುದು ಇಂಥ ಹಾಡುಗಳಲ್ಲಿ. ಹಳ್ಳಿಯ ಹಬ್ಬಗಳಿಗೂ ಒಕ್ಕಲಿಗನ ವ್ಯವಸಾಯದ ಋತುಮಾನಗಳಿಗೂ ಸಾಕಷ್ಟು ಸಂಬಂಧವಿದೆ. ಗಂಡು, ಹೆಣ್ಣು ಕೂಡಿಯೇ ಸಂತೋಷಪಡುವ ಹಬ್ಬಗಳ ಸಂಪ್ರದಾಯ, ಹಾಗೂ ಆಯಾ ಸಂಪ್ರದಾಯಕ್ಕೆ ಹುಟ್ಟಿಕೊಂಡ ಗೀತಸಾಹಿತ್ಯ, ಪೌರಾಣಿಕ ಕಟ್ಟುಕಥೆಗಳು ಸಮೃದ್ಧವಾಗಿದೆ. ಜನಪದ ಗೀತ ಸಾಹಿತ್ಯದಲ್ಲಿ ಅವುಗಳದೇ ಮೇಲುಗೈಯಾಗಿದೆ. ಅರಳೆಲೆಬಸವ, ಗುಳ್ಳವ್ವ, ಸೀಗವ್ವ, ಗೌರವ್ವ, ನಾಗರಪಂಚಮಿ, ಸಿರಿಯಾಳ ಚೆಂಗಳೆ, ಜೋಕುಮಾರ, ಗುರ್ಜಿ, ಬನ್ನಿಹಬ್ಬ, ದೀವಳಿಗೆ, ಭಾರತಹುಣ್ಣಿಮೆ, ಶಿವರಾತ್ರಿ, ಹೋಳಿ, ಯುಗಾದಿ, ಕಾರಹುಣ್ಣಿಮೆ ಅತ್ಯಂತ ಪ್ರಮುಖವಾದವುಗಳು. ಈ ಹಬ್ಬಗಳಲ್ಲೆಲ್ಲ ಹೆಣ್ಣು ಮಕ್ಕಳು ಹಾಡುವ ಹಾಡುಗಳು ರಸಭರಿತವಾಗಿದ್ದು, ಸಂಪ್ರದಾಯದ ಸಕಲ ವಿವರಗಳನ್ನು ಒಳಗೊಂಡಿವೆ. ಕಾರಹುಣ್ಣಿಮೆಯೇ ಒಕ್ಕಲಿಗನಿಗೆ ಕೊನೆಯ ಹಬ್ಬ. ಅದು ಬಸವಣ್ಣನಿಗೇ ಮೀಸಲಾದ ವಿಶಿಷ್ಟ ಹಬ್ಬ. ಈ ಹಬ್ಬದ ನಂತರ ಒಕ್ಕಲಿಗ, ಮುಂದಿನ ವ್ಯವಸಾಯ ಸಿದ್ಧತೆಗೆ ತೊಡಗುತ್ತಾನೆ. ಆತನಿಗೆ ಬಿಡುವೇ ಇಲ್ಲದ ಸಮಯ ಪ್ರಾಪ್ತವಾಗುತ್ತದೆ. ಮದುವೆ ಮುಂತಾದ ಮಂಗಲ ಪ್ರಸಂಗಗಳೂ ಕಾರಹುಣ್ಣಿಮೆ ನಂತರ ನಡೆಯುವಂತಿಲ್ಲ. ಅಂತೆಯೇ "ಕಾರಹುಣ್ಣಿಮೆಯಾದ ಮೇಲೆ ಕತ್ತೆ ಸಹ ಬಾಸಿಂಗ ಕಟ್ಟುವುದಿಲ್ಲ" ಎಂಬ ಗಾದೆ ರೂಢಿಯಲ್ಲಿ ಬಂದಿದೆ.

ಹೀಗೆ ವ್ಯವಸಾಯ ಕ್ರಮಗಳು ಹಾಗೂ ಆ ಮಧ್ಯೆ ಆಚರಿಸುವ ಹಬ್ಬಹರಿದಿನಗಳ ಪರಂಪರೆಗಳಲ್ಲಿ ವ್ಯಕ್ತಗೊಂಡ ಹಾಡುಗಳು ಅಪೂರ್ವವಾಗಿವೆ. ಶರಣರನ್ನು ಕುರಿತ ಹಂತಿ ಹಾಡುಗಳು, ಶಕ್ತಿ ದೇವತೆಗಳು, ಪುರಾಣೋಕ್ತ ದೇವರುಗಳನ್ನು ಕುರಿತ ಕಥಾರೂಪದ ಹಾಡುಗಳು ಕಾವ್ಯ ಸಂಪತ್ತನ್ನು ಹೆಚ್ಚಿಸಿವೆ.

ಜನಪ್ರಿಯ ಸಾಮಾಜಿಕ ಪರಂಪರೆಗಳಲ್ಲಿ ಮದುವೆಯೂ ಒಂದು. ಯಾವುದೇ ಸಮಾಜದ ಮದುವೆಯ ವಿಧಿ ವಿಧಾನಗಳು ಬೇರೆಯಾದರೂ ಆಯಾ ಸಾಂಸ್ಕೃತಿಕ ಪರಂಪರೆಯಲ್ಲಿ ಮದುವೆಗೆ ಅವುಗಳದ್ದೇ ಆದ ವಿಶಿಷ್ಟ ಸ್ಥಾನಮಾನಗಳಿವೆ. ಮದುವೆಯಲ್ಲಿ ಹಾಡುವ ಹಾಡುಗಳಲ್ಲಿ ಮದುವೆಯ ಪದ್ಧತಿಗಳ ವಿವರಗಳಲ್ಲದೆ - ಪ್ರೇಮ, ಪ್ರೀತಿ, ವಾತ್ಸಲ್ಯ, ಸ್ನೇಹ, ಬಾಂಧವ್ಯ, ಇತ್ಯಾದಿಗಳ ಮಾನವೀಯ ಗುಣಗಳ ನಿಬಿರ ದಾಖಲೆಗಳಾಗಿ 'ಹತ್ತು ಸುಳ್ಳು ಹೇಳಿಯಾದರೂ ಒಂದು ಮದುವೆ ಮಾಡಬೇಕು' ಎನ್ನುವ ಮನೋಭಾವದಲ್ಲಿ-ಮದುವೆ ಮಾಡುವುದೊಂದು ಪುಣ್ಯದ

ಕೆಲಸವೆಂಬ ನಂಬಿಕೆಯೂ ಜನಮನದಲ್ಲಿ ಬೇರೂರಿದೆ. ಹುಟ್ಟಿನಿಂದ ಮರಣದವರೆಗೂ ವ್ಯಾಪಿಸಿದ ಬದುಕಿನಾನುಭವಗಳನ್ನು ತುಂಬಿನಿಂತ ಈ ಹಾಡುಗಳಲ್ಲಿ ಹೆಂಗಳೆಯರ ಕಾವ್ಯಸೃಷ್ಟಿಯ ಅನುಪಮ ಕಲೆಗಾರಿಕೆ ವ್ಯಕ್ತವಾಗಿದೆ. ಮದುವೆಯಾಗುವ ಗಂಡು-ಹೆಣ್ಣುಗಳು ಸಾಮಾನ್ಯರಲ್ಲ. ಅವರು ಸಾಕ್ಷಾತ್ ಶಿವ-ಪಾರ್ವತಿಯರೆಂದೇ ಭಾವಿಸಿದ ಜನಪದ ಪರಂಪರೆ ಆ ಮೂಲಕ ಪರೋಕ್ಷವಾಗಿ ದೇವಸ್ತುತಿಯನ್ನು ಮಾಡಿಕೊಂಡಿರುವುದು ಗಮನಾರ್ಹವಾದುದು. ಈ ಭಾವನೆಯಿಂದಲೇ ಅಲೌಕಿಕ ಸಂಗತಿಗಳು, ಲೌಕಿಕ ಸಾಮಗ್ರಿಗಳೆನಿಸುತ್ತವೆ. ಪೌರಾಣಿಕ ಸಂಗತಿಗಳು ಕಥನ ಕವನಗಳಿಗೆ ಜೀವದ್ರವ್ಯವಾಗಿವೆ. ಬೀಗರನ್ನು ಎದುರುಗೊಳ್ಳುವಾಗ ಹಾಡುವ ಹಾಡುಗಳಾಗಲಿ, ಗಂಗೆಗೌರಿ ಸಂವಾದ ಕುರಿತ ಹಾಡುಗಳಾಗಲಿ ಜಾನಪದರ ರಸಿಕತೆಗೆ ಕಳಸದಾಯವಾಗಿದೆ.

ಜಾನಪದರು ಸ್ವಭಾವತಃ, ರಸಿಕರು - ಈ ಗುಣ ಅವರ ಆಟ, ಪಾಟ, ಊಟದ, ನಿತ್ಯದ ವ್ಯವಹಾರಗಳಲ್ಲೆಲ್ಲ ಹಾಸುಹೊಕ್ಕಾಗಿದೆ. ತಾವು ತಮಗಾಗಿ ನಿರ್ಮಿಸಿಕೊಂಡ ಪರಂಪರೆಯಲ್ಲಿ ಆನಂದಪಡುತ್ತಾರೆ. ಎದೆಯುಕ್ಕಿ ಹಾಡುತ್ತಾರೆ. ವಿನೋದ, ಹಾಸ್ಯ, ವಿಡಂಬನೆ, ಧರ್ಮ, ನೀತಿ, ತತ್ವ ಹೀಗೆ ಬದುಕಿನಾನುಭವದ ಅನಂತ ಮುಖಗಳನ್ನು ಕಥೆ, ಗೀತೆ, ಗಾದೆ, ಒಗಟು, ಒಡಬು, ಒಡಕುಗಳ ಮುಖಾಂತರ ಗಟ್ಟಿಗೊಳಿಸಿದ್ದಾರೆ. ಮನರಂಜನೆಯನ್ನು ನೀತಿಯನ್ನು ಏಕಕಾಲಕ್ಕೆ ಪಡೆವ ಸಿದ್ಧಹಸ್ತರೆಂದರೆ ಅವರೇ.

ಹೀಗೆ ಕರ್ನಾಟಕದಲ್ಲಿ ಪ್ರಮುಖವಾದ ಅದೆಷ್ಟೋ ಜನಪದ ಕಾವ್ಯ ಪ್ರಕಾರಗಳು ವಿಶಿಷ್ಟ ಸಂಪ್ರದಾಯ ಪದ್ಧತಿಗಳ ಹಿನ್ನೆಲೆಯಲ್ಲಿಯೇ ಬಂದಿರುವುದನ್ನು ಗಮನಿಸಿದಾಗ ಜನಪದ ಗೀತೆಗಳ ವೈವಿಧ್ಯದೊಂದಿಗೆ ಜನಪ್ರಿಯವಾದ ಪರಂಪರೆಗಳಿಗಿರುವ ವೈಶಿಷ್ಟ್ಯವೂ ವಿದಿತವಾಗುತ್ತದೆ. ಗೀತದಲ್ಲಿ ಗಂಡಸರ ಹಾಡು, ಹೆಂಗಸರ ಹಾಡು, ಮಕ್ಕಳ ಹಾಡುಗಳೆಂದು ವಿಭಿಜಿಸುವುದು ದೇವಡು (೧೯೩೩) ಅವರ ಕಾಲದಿಂದಲೂ ಬಂದ ಸಾಮಾನ್ಯ ಸಂಗತಿ. ಒಟ್ಟಾರೆ ಹಾಡು ಬಳಕೆಯಾಗುವ ವಿಶಿಷ್ಟ ಸಂದರ್ಭಗಳನ್ನು ಅವಲೋಕಿಸಿ ಮದುವೆ ಮುಂಜಿ ಮುಂತಾದ ಮಂಗಲ ಪ್ರಸಂಗಗಳಲ್ಲಿ ಹಾಡುವ ಹಾಡು, ಹಬ್ಬಹರಿದಿನಗಳಿಗೆ ಸಂಬಂಧಿಸಿದ ಹಾಡುಗಳು, ವಿರಾಮದ ಹಾಡುಗಳು ಎಂದು ಸ್ಥೂಲವಾಗಿ ವಿಭಾಗಿಸಬಹುದು. ಹೀಗಾದಾಗ ಒಂದು ಸೋಬಾನದ ಹಾಡು, ಹಸೆಯ ಹಾಡು, ಹಂದರದ ಹಾಡು, ಮಂಗಳಾರತಿ ಪದ, ಜೋಕುಮಾರನ ಹಾಡು, ಪಂಚಮಿ ಹಾಡು, ಗುರ್ಜಿ ಹಾಡು, ಆಣೇಪೀಣೆ, ಜೋಗುಳ ಹಾಡು, ಸೀಗೆಗೌರಿ ಹಾಡು, ಹೋಳಿಹಾಡು, ಗುಳ್ಳವ್ವನ ಹಾಡು, ಅರಳೆಲೆಬಸವನ ಹಾಡು, ಬಿಂಗಿ ಪದಕರ್ಬಾಟ ಹಾಡು, ರಂಬಿ ಹಾಡು, ಕರಪಲ್ಲವ ಹಾಡು, ರಾಮಾಯಣ ಮಹಾಭಾರತದ ಹಾಡುಗಳು, ಬಯಲಾಟದ ಹಾಡುಗಳು, ಕುಟ್ಟುವ ಮತ್ತು ಬೀಸುವ ಹಾಡುಗಳು, ಹಂತಿ ಹಾಡು, ದುಂದುಮೆಪದ, ಬಲೋರಿ ಹಾಡು, ಏತದ ಹಾಡು, ನೇಗಿಲ ಹಾಡು, ಭಜನೆ ಹಾಡು, ಅಂಬಿಗರ ಹಾಡು, ಕೋಲಾಟದ ಹಾಡು, ಗೆಜ್ಜೆಕುಣಿತದ ಹಾಡು, ತಾರ್ಲೆ ಅಥವಾ ದುಮ್ಮಸಾಯ್ಲೆ, ಪುಗಡಿ, ಗುಮ್ಮಟಪದ, ಗೀಗೀಲಾವಣಿ ಮುಂತಾಗಿ ಅದೆಷ್ಟೋ ಪ್ರಕಾರಗಳು ತಮ್ಮದೇ ಆದ ವಿಶಿಷ್ಟ ಧಾಟಿ-ಧೋರಣೆಗಳಿಂದ ಜನಪದ ಗೀತ ಸಾಹಿತ್ಯದಲ್ಲಿ ತುಂಬಾ ಪ್ರಸಿದ್ಧವಾಗಿವೆ.

ಗಂಗೆಗೌರಿ, ವೀರ ಅಭಿಮನ್ಯು, ಭೀಷ್ಮಪರ್ವ, ಕೀಚಕವಧೆ, ಈರೋಬಿ, ಕೆರೆಗೆ ಹಾರ, ಗೋವಿನ ಹಾಡು, ಕಿತ್ತೂರು ಚೆನ್ನಮ್ಮ, ಹಲಗಲಿ ಕಾಳಗ ಮುಂತಾದ ಕಿರುಕಥನ ಕಾವ್ಯಗಳಲ್ಲಿ, ಗುಣಸಾಗರಿ, ಕೆಂಪೇಗೌಡ, ಉತ್ತರಾದೇವಿ, ಏಳುಕೊಳ್ಳದ ಎಲ್ಲಮ್ಮ ಇತ್ಯಾದಿ ಖಂಡ ಕಾವ್ಯಗಳಲ್ಲಿ ಮಲೆಯ ಮಾದೇಶ್ವರ, ಜನಪದ ರಾಮಾಯಣ, ಮಹಾಭಾರತ, ಪಿರಿಯಾ ಪಟ್ಟಣದ ಕಾಳಗಗಳಂಥ

ಮಹಾಕಾವ್ಯ ಹಾಗೂ ಸುದೀರ್ಘ ಕಥನ ಕಾವ್ಯಗಳಲ್ಲಿ - ನಮ್ಮ ಸಮಾಜ ಸಂಸ್ಕೃತಿಯ, ಜನಪ್ರಿಯ ಪರಂಪರೆಯ ಹೆದ್ದೊರೆಯನ್ನು ಕಾಣಬಹುದಾಗಿದೆ.

ಇಲ್ಲಿಯೇ ನಮೂದಿಸಬಹುದಾದ ವಿಶಿಷ್ಟವಾದ ಮತ್ತು ಜನಪ್ರಿಯ ಪರಂಪರೆಯಾಗಿ ಬಂದ ಹಾಡಿನ ಪರಂಪರೆ ಎಂದರೆ ಲಾವಣಿಗಳದು. ಗೀಗೀ ಹಾಗೂ ಲಾವಣಿ ಸಂಪ್ರದಾಯಗಳು ಒಂದರ್ಥದಲ್ಲಿ ವೃತ್ತಿಯಾಗಿಯೇ ಉಪವೃತ್ತಿಯಾಗಿಯೇ ಕರ್ನಾಟಕದಲ್ಲಿ, ಅದೂ ಉತ್ತರ ಕರ್ನಾಟಕದಲ್ಲಿ ತುಂಬಾ ಪ್ರಸಿದ್ಧವಾಗಿದೆ. ಗೀಗೀ ಹಾಗೂ ಲಾವಣಿ ಸಂಪ್ರದಾಯಗಳು ಬೇರೆ ಬೇರೆ ವೈಶಿಷ್ಟ್ಯದಿಂದ ಕೂಡಿದ್ದರೂ ಅವು ಈಗ ಒಂದೇ ಎಂಬಂತೆ ಹಾಡಿನ ವಸ್ತುವಿವರದಲ್ಲಿ ಹಾಗೂ ಗೀಗೀ ಪಲ್ಲವಿಯನ್ನು ಬಳಸುತ್ತಿರುವುದು ಕಂಡು ಬರುತ್ತದೆ. ಒಟ್ಟಾರೆ ಲಾವಣಿಗಳ ಬಗ್ಗೆ ಅವಶ್ಯವಾಗಿ ಹೇಳಬೇಕಾದ ಸಂಗತಿ ಇಷ್ಟೇ. ಲಾವಣಿ ಜನಪದ ಕಾವ್ಯವೆ? ಎಂಬ ವಾದವೇನೇ ಇರಲಿ. ಮೈಸೂರು ಭಾಗದ ವಿದ್ವಾಂಸರು ಭಾವಿಸಿದಂತೆ ಲಾವಣಿಯು ಇಂಗ್ಲೀಷಿನ ಬ್ಯಾಲೆಡ್ ಅಲ್ಲ ಮತ್ತು ಉತ್ತರ ಕರ್ನಾಟಕದ ವಿದ್ವಾಂಸರು ಹೇಳುವಂತೆ ಲಾವಣಿಯು, ಬ್ಯಾಲೆಡ್‌ದ ಒಂದು ಪ್ರಕಾರ ಮಾತ್ರವೂ ಅಲ್ಲ ಎಂಬುದು. ಲಾವಣಿ ಎಂದರೆ ಪುರುಷ ಮತ್ತು ಪ್ರಕೃತಿ ಹೆಚ್ಚಳ ಕುರಿತ ಸ್ವಾರಸ್ಯಪೂರ್ಣ ಸಂವಾದ ಮಾತ್ರ. ಅದಕ್ಕೆ ಹರದೇಸಿ - ನಾಗೇಶಿ, ಅಥವಾ ಕಲ್ಗಿ- ಎಂದು ಕರೆವ ವಾಡಿಕೆ. ಅದಲ್ಲದೆ ಲಾವಣಿಗಳಲ್ಲಿ ಬಯಲು ಲಾವಣಿ ಮೇಳ ಲಾವಣಿಗಳೆಂದು ವಿಂಗಡಿಸುವುದೂ ಅಷ್ಟೇ ಅಸಾಧುವೆಂದು ನನ್ನ ಅಭಿಪ್ರಾಯ. ಕಾರಣ ಎರಡೂ ಬಯಲಲ್ಲೋ, ಮಠಮಾನ್ಯ, ಗುಡಿಗುಂಡಾರಗಳಲ್ಲೋ ನಡೆಯುವುದು ಸಾಮಾನ್ಯ. ಹಾಡಿನಲ್ಲಿ ಕಥೆ ಹೇಳುವ ಕ್ರಮ ಗೀಗೀ ಅವರಿಂದ ಲಾವಣಿ ಸಂಪ್ರದಾಯಕ್ಕೆ ಬಂದಿತು. ಯಾಕೆಂದರೆ ಕಥೆ ಹೇಳುವುದೇ ಲಾವಣಿಯ ಪ್ರಧಾನ ಗುರಿಯಲ್ಲ. ಹೆಣ್ಣು ಗಂಡಿನ ವಾದ ವೈಖರಿಯಲ್ಲಿ ಪರಸ್ಪರ ಹೆಚ್ಚುಗಾರಿಕೆಗಾಗಿ ಮಾತ್ರ ಪ್ರಾಸಂಗಿಕವಾಗಿ ರಾಮಾಯಣ, ಮಹಾಭಾರತದ ಪ್ರಸಿದ್ಧ ಸನ್ನಿವೇಶಗಳನ್ನೋ ಪಾತ್ರಗಳನ್ನೋ ಉದಾಹರಿಸುವುದುಂಟು. ಶೃಂಗಾರ ಭಾವನೆಗಳೇ ಪ್ರಧಾನವಾದ ಈ ಲಾವಣಿಗಳಲ್ಲಿ ಗಂಡನಿದ್ದ ಹೆಣ್ಣು, ಪರಗಂಡಿನೊಡನೆ ಕೂಡುವ ವಾಮಪ್ರಣಯವೇ ಸರ್ವೇಸಾಮಾನ್ಯವಾದುದು. ಲಾವಣಿಗಳ ಶ್ರೇಷ್ಠ ಉದಾಹರಣೆಗಳೆಂದರೆ - ಜೀವನ ಸಂಗೀತದ - ಸಂಪಿಗೆ ತೆನಿಯಂಥ ಹುಡುಗ, ಚಂದ್ರುಣಿ, ಕರೆಹುಡುಗಿ ಇತ್ಯಾದಿ. ಜನಪದ ಹಾಡಿನ ಜನಪ್ರಿಯ ಪರಂಪರೆಯಾಗಿ ಬೆಳೆದು ಬಂದಿರುವ ಈ ಹಾಡಿನ ಸಂಪ್ರದಾಯವು ಉತ್ತರ ಕರ್ನಾಟಕದ ವಿಶಿಷ್ಟ ಕೊಡುಗೆಯಾಗಿದೆ. ಅದಲ್ಲದೆ ಮೂಡಲಪಾಯ ದೊಡ್ಡಾಳ, ಸಣ್ಣಾಟ, ಯಕ್ಷಗಾನ, ಪಾರಿಜಾತ, ರಾದಾಗಾಟ, ಸಂಗ್ಯಾಬಾಳ್ಯಾ ಹಾಗೂ ಗೊಂಬೆಯಾಟಗಳಲ್ಲೂ ಕೂಡಾ ಜನಪ್ರಿಯ ಪರಂಪರೆಯ ನಡಾವಳಿಕೆಗಳ ನಿಧಿ ಇರುವುದನ್ನು ಕಾಣುತ್ತೇವೆ.

ಹೀಗೆ ಆದಿಯಿಂದ ಅರ್ವಾಚೀನದವರೆಗೂ ಬದುಕಿ ಬಂದ ಜಾನಪದ ಪರಂಪರೆಯ, ಜನಪ್ರಿಯ ಅಂಶಗಳ ಸಾರಾಂಶವನ್ನು ಒಳಗು ಮಾಡಿಕೊಂಡೇ ಸೃಷ್ಟಿಯಾದದ್ದು ಜನಪದ ಸಾಹಿತ್ಯ. ಅದರ ಕಥೆ, ಗೀತ, ಗಾದೆ, ಒಗಟು, ಒಡಲು, ಹಾಗೂ  ಪ್ರಕಾರಗಳು ಜಾನಪದ ಕಲಾ ಮುಖದ ಪ್ರಪಂಚವನ್ನೇ ತೆರೆದು ಯಾವುದೇ ರಾಷ್ಟ್ರದ ಸಂಸ್ಕೃತಿಯ ಪ್ರತೀಕ ಎಂಬ ಅಭಿದಾನಕ್ಕೆ ಪಾತ್ರವಾಗಿದೆ.

ಒಟ್ಟಾರೆ ಜನಪದ ಪರಂಪರೆಗಳು ಧಾರ್ಮಿಕ ಮೂಲವಾದವುಗಳಾಗಿದ್ದರೂ, ಸಾಮಾಜಿಕ ಬದುಕನ್ನು ಹಸನುಗೊಳಿಸಿಕೊಳ್ಳುವ ನೀತಿಯನ್ನು, ಬಾಳಲು ಬೇಕಾದ ಸ್ಥೈರ್ಯ-ಧೈರ್ಯಗಳನ್ನು ಹೆಚ್ಚಿಸಲು ಮಾನವನಿಗೆ ನಿರಂತರವಾಗಿ ನೆರವಾಗಿವೆ. ಕಂಠಸ್ಥವಾಗಿ ಬೆಳೆದು ಬಂದ ಜನಪದ

ಸಾಹಿತ್ಯ ಅಂಥ ಜನಪ್ರಿಯ ಪರಂಪರೆಗಳನ್ನು ಜೀವಂತ ಹಿಡಿದಿಡುವ ಮತ್ತು ವಿದ್ವಾಂಸರ ಅಧ್ಯಯನಕ್ಕೆ ಬೇಡಿದ್ದನ್ನು ಕೊಡುವ ಅಕ್ಷಯ ಪಾತ್ರೆಯಂತಿದೆ. ಕರ್ನಾಟಕದಲ್ಲಿ ಇತ್ತೀಚೆಗೆ ಜನಪದ ಸಾಹಿತ್ಯ ಹಾಗೂ ಜಾನಪದ ಪರಂಪರೆಗಳನ್ನು ತೌಲನೀಕರಿಸಿ ನೋಡುವ ಜಿಜ್ಞಾಸೆ ಬೆಳೆಯುತ್ತಿರುವುದು ನಿಜಕ್ಕೂ ಜಾನಪದ ಅಧ್ಯಯನ ಕುರಿತ ಬೆಳವಣಿಗೆಗೆ ಸಹಾಯಕಾರಿಯಾಗಿದೆ.

(ಬೆಂಗಳೂರು ವಿಶ್ವವಿದ್ಯಾಲಯ ಜನವರಿ ೧೧, ೧೨, ೧೩, ೧೯೮೦ ರಂದು ನಡೆಸಿದ ಜಾನಪದ ವಿಚಾರ ಸಂಕಿರಣದ ಗೋಷ್ಠಿಯಲ್ಲಿ ಮಂಡಿಸಿದ ಲೇಖನ).

# ‘ಕಾವ್ಯಪ್ರಯೋಗ’ – ಜನಪದರ ಕಾವ್ಯಾಭಿವ್ಯಕ್ತಿ ಸ್ವರೂಪ

ಡಾ. ಶಾಲಿನಿ ರಘುನಾಥ

‘ಪ್ರಯೋಗ’ ಎಂಬ ಶಬ್ದಕ್ಕೆ ಬಳಕೆ, ಅನ್ವಯ, ಅನುಷ್ಠಾನ, ಪಠಣ (recitation), ಪ್ರದರ್ಶನ (performance) ಮುಂತಾದ ಅನೇಕ ಅರ್ಥಗಳಿವೆ. ಸಾಮಾನ್ಯವಾಗಿ ‘ಪ್ರಯೋಗ’ದ ಹಿಂದೆ ಯಾವ ಶಬ್ದವಿದೆ ಎಂಬುದರ ಮೇಲೆ ಅದಕ್ಕೆ ಆ ವಿಶಿಷ್ಟಾರ್ಥ ಪ್ರಾಪ್ತವಾಗುತ್ತದೆ. ಉದಾಹರಣೆಗೆ ಪದಪ್ರಯೋಗ, ರಂಗಪ್ರಯೋಗ, ಕಾಲೋಚಿತ ಮಂತ್ರಪ್ರಯೋಗ, ಇತ್ಯಾದಿ

ಕನ್ನಡ ಸಾಹಿತ್ಯದಲ್ಲಿ ನಮಗೆ ಮೊಟ್ಟಮೊದಲು ‘ಪ್ರಯೋಗ’ ಎಂಬ ಶಬ್ದ ದೊರೆಯುವುದು “ಕವಿರಾಜಮಾರ್ಗ”ದಲ್ಲಿಯೇ. ಆ ಗ್ರಂಥದಲ್ಲಿ ಅನೇಕ ಎಡೆಗಳಲ್ಲಿ ಈ ಪದವನ್ನು ಬಳಸಲಾಗಿದೆ. ಬಹಳಷ್ಟು ಕಡೆ ‘ಲಕ್ಷ್ಯ’ ಅಥವಾ ಉದಾಹರಣೆ ಎಂಬ ಅರ್ಥದಲ್ಲಿಯೇ ಅದು ಪ್ರಯೋಗವಾಗಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. (ಕವಿರಾಜಮಾರ್ಗ ವಿವಕ್ಷೆ, ಪು. ೧೮೧-೧೮೨) ಆದರೆ,

> ಪದನಱಿದು ನುಡಿಯಲುಂ ನುಡಿ
> ದುದನಱಿದಾರಯಲುಮಾರ್ಪರಾನಾಡವರ್ಗಳ್
> ಚದುರರ್ ನಿಜದಿಂ ಕುಱಿತೋ
> ದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್ (ಕ.ಮಾ. ೧-೩೮)

ಎಂಬ ಈ ಮೇಲಿನ ಪದ್ಯದಲ್ಲಿ ಬಳಕೆಯಾದ ‘ಕಾವ್ಯಪ್ರಯೋಗ’ ಶಬ್ದ ಹಲವು ವಿದ್ವಾಂಸರ ಜಿಜ್ಞಾಸೆಗೆ ಒಳಗಾಗಿದೆ. ಕಾವ್ಯಪ್ರಯೋಗವೆಂದರೆ ಕವಿತಾರಚನೆ, ಸಾಹಿತ್ಯಸೃಷ್ಟಿ ಎಂದೇ ಅರ್ಥೈಸಿಕೊಂಡು ಪದ್ಯಭಾವವನ್ನು ಪಂಡಿತರು ವಿವರಿಸುತ್ತಾ ಬಂದಿದ್ದರು. ಆದರೆ ಮುಳಿಯ ತಿಮ್ಮಪ್ಪಯ್ಯನವರು ಪದಗಳ ಅರ್ಥವನ್ನು ತಿಳಿದು ಈ ಕಾವ್ಯವನ್ನು ಸವಿಯುವುದೇ ಕಾವ್ಯ ಪ್ರಯೋಗದ ಅರ್ಥವೆಂದು ಭಾವಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಇಡೀ ಪದ್ಯದ ಅರ್ಥವನ್ನು ಅವರು, ‘ಆ ತಿರುಳ್ಗನ್ನಡ ನಾಡಿನವರು ಪದವನ್ನರಿದು ಎದೆಗೊಂಡ ಪದಗಳನ್ನಾಡುತ್ತಿದ್ದರು. ಅನ್ಯರು ಆಡಿದ ನುಡಿಗಳನ್ನು ಭಾವಿಸುತ್ತಿದ್ದರು. ಕುರಿತು ಓದದವರಾಗಿದ್ದರೂ ಹುಟ್ಟುಗುಣದಿಂದಲೇ ಚದುರರಾಗಿ, ಮಾತುಬಲ್ಲವರಾಗಿ ಸಮಾಜದೊಳಗೆ ಹೆಸರುಗೊಂಡಿದ್ದರು. ತಾವು ಕುರಿತೋದದಿದ್ದರೂ ಉತ್ತಮಕಾವ್ಯ ಪ್ರಯೋಗದಲ್ಲೆಡೆಗೊಂಡ ಪದಗಳ ಸವಿ ಏನು, ಅರ್ಥವಲ್ಲದ ಪದಗಳ ಸಪ್ಪೆ ಏನು? ಎಂಬುದನ್ನು ಸ್ವಾಭಾವಿಕವಾಗಿ ತಿಳಿಯಬಲ್ಲವರಾಗಿದ್ದರು’ ಎಂದು ಹೇಳಿದ್ದಾರೆ. (ಕವಿರಾಜ ಮಾರ್ಗವಿವೇಕ, ಪು ೧೧೪)

ಗೌರೀಶ ಕಾಯ್ಕಿಣಿಯವರ ದೃಷ್ಟಿಯಲ್ಲಿ ‘ಕಾವ್ಯಪ್ರಯೋಗ’ವೆಂದರೆ ‘ಕಾವ್ಯದ ದೃಶ್ಯಪ್ರಯೋಗ’.

ಈ ಕುರಿತು ಅವರು ತಮ್ಮ ವಾದವನ್ನು ಮಂಡಿಸುತ್ತ, 'ಕಾವ್ಯಪ್ರಯೋಗ ಎಂದರೆ ಕಾವ್ಯರಚನೆ ಎಂದು ಭಾವಿಸಲು ಆಧಾರವಿಲ್ಲ. ಪ್ರಯೋಗ ಎಂದರೆ ರಚನೆ, ನಿರ್ಮಿತಿ ಅಲ್ಲ. ನಿರ್ಮಿಸಿದ್ದನ್ನು ವಿಶಿಷ್ಟ ವಿನಿಯೋಗಕ್ಕೆ, ಪ್ರಯೋಜನಕ್ಕೆ ಹಚ್ಚುವುದು. ಇಲ್ಲಿ 'ಪ್ರಯೋಗ' ಸಾಮಾನ್ಯಾರ್ಥದಲ್ಲಿ ಬಳಸಿಲ್ಲ. ಪಾರಿಭಾಷಿಕ ಶಬ್ದವಾಗಿದೆ, ಮತ್ತು ಪ್ರಯೋಗವೆಂದರೆ, 'ರಂಗದ ಮೇಲಿನ ಪ್ರಯೋಗ' ಮುಂತಾಗಿ ವಿವರಿಸುತ್ತ, ಪೂರ್ವೋಕ್ತ ಪದ್ಯವನ್ನು, 'ಕನ್ನಡ ಜನಸಾಮಾನ್ಯರು - ಅನೇಕಾನೇಕ ಜನ ಹಳೆಯರವರು ಸಮಕಾಲೀನರು ಕಟ್ಟಿದ ಕಾವ್ಯಗಳನ್ನು (ಇವು ದೃಶ್ಯಕಾವ್ಯಗಳು) ಪ್ರಯೋಗಿಸುವುದರಲ್ಲಿ ರಂಗದಲ್ಲಿ ವೇಷಕಟ್ಟಿಯೋ, ಕಟ್ಟದೆಯೋ ಆಡಿತೋರಿಸುವುದರಲ್ಲಿ ತುಂಬ ಪ್ರವೀಣರಾಗಿದ್ದರು. ಅಲ್ಲಿ ಆಡುವ ಪ್ರತಿಯೊಂದು ಮಾತನ್ನೂ ತಿಳಿದು ಅರ್ಥವತ್ತಾಗಿ ಆಡುತ್ತಿದ್ದರು; ಆಡಿದಂತೆ ಅಭಿನಯಿಸುತ್ತಿದ್ದರು ನಡೆದು ತೋರಿಸುತ್ತಿದ್ದರು' ಎಂದು ಅರ್ಥೈಸಿದ್ದಾರೆ. (ಪ್ರಜಾವಾಣಿ ದೀಪಾವಳಿ ವಿಶೇಷಾಂಕ ೧೯೭೭).

ಎಂ.ವಿ. ಸೀತಾರಾಮಯ್ಯನವರ ದೃಷ್ಟಿಯಲ್ಲಿ 'ಕಾವ್ಯಪ್ರಯೋಗ' ಒಂದು ಸಮಸ್ತಪದ. ಇದರಲ್ಲಿ ದೃಶ್ಯಕಾವ್ಯದ ಕಲ್ಪನೆಯನ್ನು ಅವರು ಕಾಣುವುದಿಲ್ಲ. ಅಂತೆಯೇ, 'ಪ್ರಯೋಗವೆಂದರೆ ರಚನೆ ಅಲ್ಲ, ರಂಗದ ಮೇಲೆ ಅಭಿನಯಿಸುವುದೂ ಅಲ್ಲ' ಎಂದು ಅಭಿಪ್ರಾಯಪಡುತ್ತಾರೆ. 'ಕವಿರಾಜಮಾರ್ಗ'ದಲ್ಲಿಯೇ ಪದಪ್ರಯೋಗ, ಅಲಂಕಾರ ಪ್ರಯೋಗ, ಮಾರ್ಗಪ್ರಯೋಗ ಮುಂತಾಗಿ ಆ ಶಬ್ದಬಳಕೆಯಾಗಿರುವುದಲ್ಲದೇ 'ಲಕ್ಷ್ಯ' ಅಂದರೆ ಉದಾಹರಣೆ ಎಂಬ ಅರ್ಥದಲ್ಲಿಯೂ ಬಳಸಲ್ಪಟ್ಟಿದೆ ಎಂದು ವಿವರಿಸುವ ಎಂ.ವಿ.ಸೀ. ಮೇಲಿನ ಪದ್ಯಕ್ಕೆ 'ಆ ನಾಡಿನವರು ಹದವರಿತು ಮಾತನಾಡುವುದಕ್ಕೂ (ಇತರರು) ಆಡಿದ್ದನ್ನು ಅರ್ಥಮಾಡಿಕೊಂಡು ವಿಚಾರ ಮಾಡುವುದಕ್ಕೂ ಸಮರ್ಥರಾಗಿದ್ದರು. ಅವರು ಸ್ವಾಭಾವಿಕವಾಗಿಯೇ ಜಾಣರು, ಉದ್ದೇಶಪೂರ್ವಕವಾಗಿ ಓದದಿದ್ದರೂ (ಎಂದರೆ ಕಾವ್ಯಗಳನ್ನು ಕಾವ್ಯಶಾಸ್ತ್ರಗಳನ್ನು ವ್ಯಾಸಂಗ ಮಾಡದಿದ್ದರೂ), ಕಾವ್ಯಗಳ ಪ್ರಯೋಗಗಳನ್ನು ಎಂದರೆ ಲಕ್ಷ್ಯರೂಪದ ಉದಾಹರಣರೂಪದ ಭಾಗಗಳನ್ನು ಚೆನ್ನಾಗಿ ಬಲ್ಲ ಬುದ್ಧಿವಂತರಾಗಿದ್ದರು. (ಅವರು ಶ್ರವ್ಯಕಾವ್ಯಗಳನ್ನು ಕೇಳಿಕೇಳಿ ವಾಚೋವಿಧೇಯವನ್ನಾಗಿ ಮಾಡಿಕೊಂಡು ಸಂದರ್ಭಾನುಸಾರ ಅವುಗಳಿಂದ ಬಂದ ಉದಾಹರಣೆಗಳನ್ನು ಎತ್ತಿ ಹೇಳಬಲ್ಲವರಾಗಿದ್ದರು ಎಂದು ಭಾವ) ಎಂಬ ಅರ್ಥಹೇಳಿದ್ದಾರೆ. (ಕವಿರಾಜ ಮಾರ್ಗ ವಿವಕ್ಷೆ, ಪು ೧೮೨-೧೮೩)

ಶ್ರೀನಿವಾಸ ಹಾವನೂರರು 'ಪ್ರಯೋಗ' ಎನ್ನುವುದಕ್ಕೆ ಆಪ್ಟೆ 'ಸಂಸ್ಕೃತ ಕೋಶ'ದಲ್ಲಿ ಹದಿನೈದು ಅರ್ಥಗಳಿವೆ ಎಂಬುದನ್ನು ತಿಳಿಸಿ, ಪ್ರಯೋಗವೆಂದರೆ, 'ಯಾವುದೊಂದರ ಅನುಷ್ಠಾನ, ಬಳಕೆ, ಅನ್ವಯ ಎಂಬುದಾಗಿ ಶತಶತಮಾನದಿಂದ ನಡೆದುಕೊಂಡುಬಂದಿದೆ' ಪ್ರಯೋಗ. ಈ ಶಬ್ದ ಮಂತ್ರಪ್ರಯೋಗ, ಪದಪ್ರಯೋಗ, ರಂಗಪ್ರಯೋಗ, ಇತ್ಯಾದಿಗಳಲ್ಲಲ್ಲದೇ ಪ್ರಯೋಗಶಾಲೆ, ಪದಪ್ರಯೋಗಕೋಶ, ಪ್ರಾಯೋಗಿಕ ವಿಮರ್ಶೆ, ಮುಂತಾದವುಗಳಲ್ಲಿಯೂ ಬಳಸಲ್ಪಟ್ಟಿವೆ ಎಂದು ಅಂಥ ಕೆಲವು ಶಬ್ದಗಳನ್ನು ವಿವರಿಸಿದ್ದಾರೆ. ಅಷ್ಟೇ ಅಲ್ಲದೆ ಪಠಣ (recitation) ಎಂಬ ಅರ್ಥವೂ ಅದಕ್ಕಿರುವುದರಿಂದ ಕವಿರಾಜಮಾರ್ಗದಲ್ಲಿ ಉಲ್ಲೇಖಿಸಿರುವ 'ಕಾವ್ಯಪ್ರಯೋಗ' ಶಬ್ದವನ್ನು 'ಪಠಣ-ಶ್ರವಣ' ಎಂಬ ಅರ್ಥದಲ್ಲಿ ಗ್ರಹಿಸಬೇಕೆನ್ನುತ್ತಾರೆ. ಮುಂದುವರೆದು, ಈ 'ಕಾವ್ಯಪ್ರಯೋಗ' ಮೂರು ರೀತಿಯಲ್ಲಿರಬಹುದೆನ್ನುತ್ತಾರೆ. ಒಂದು, ಯಕ್ಷಗಾನ, ತಾಳಮದ್ದಳೆಗಳಲ್ಲಿ ಬರುವಂತೆ ಅರ್ಥಹಚ್ಚಿ ಗದ್ಯದಲ್ಲಿ ವಿವರಿಸುವುದು. ಎರಡು, ರಾಗಬದ್ಧವಾಗಿ ಹಾಡುವುದು. ಮೂರನೆಯದು ಅರ್ಥವತ್ತಾಗಿ ಕಾವ್ಯವನ್ನು ವಾಚಿಸುವುದು. ಹೀಗೆ ಕಾವ್ಯವೊಂದರ ಶ್ರವ್ಯ ಪ್ರಯೋಗ ಸಾಧ್ಯತೆಗಳನ್ನು ಕುರಿತು ಅವರು ಆಲೋಚಿಸಿದ್ದರೂ ಕೊನೆಯಲ್ಲಿ ಕವಿರಾಜಮಾರ್ಗಕಾರ ಪಠಣವನ್ನು ಕುರಿತೇ ಹೇಳಿದ್ದಾನೆ ಎಂಬ ನಿಲುವಿಗೆ ಬರುತ್ತಾರೆ (ಮಾನ, ಪು ३೧೫).

ಈ ಮೇಲಿನ ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸಿದಾಗ, ಮುಳಿಯ ತಿಮ್ಮಪ್ಪಯ್ಯ ಹಾಗೂ ಎಂ. ವಿ. ಸೀತಾರಾಮಯ್ಯ ಇವರಿಬ್ಬರೂ ಕಾವ್ಯವನ್ನು ಲಕ್ಷ್ಯ-ಲಕ್ಷಣ ಸಮನ್ವಿತತೆಯೊಂದಿಗೆ ಅರಿತುಕೊಳ್ಳುವ, ರಸಾಸ್ವಾದಿಸುವ ಹಿನ್ನೆಲೆಯಲ್ಲಿ 'ಕಾವ್ಯಪ್ರಯೋಗ'ವನ್ನು ಅರ್ಥೈಸುವ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ. ಗೌರೀಶಕಾಯ್ಕಿಣಿ ಹಾಗೂ ಶ್ರೀನಿವಾಸ ಹಾವನೂರರು ಸಾಮೂಹಿಕಮಟ್ಟದಲ್ಲಿ ಕಾವ್ಯದ ಸಂವಹನ ಸಾಧ್ಯತೆಗಳನ್ನು 'ಕಾವ್ಯಪ್ರಯೋಗ' ಶಬ್ದದಲ್ಲಿ ಕಾಣುವ ಪ್ರಯತ್ನ ಮಾಡಿದ್ದಾರೆ. ಕಾಯ್ಕಿಣಿಯವರು ದೃಶ್ಯಪ್ರಯೋಗವನ್ನು ಕುರಿತು ಚಿಂತಿಸಿದರೆ, ಹಾವನೂರರು ಶ್ರವ್ಯ ಪ್ರಯೋಗದ ಪಠಣ-ಶ್ರವಣ ಪರಂಪರೆಯನ್ನು ಕುರಿತು ಆಲೋಚಿಸಿದ್ದಾರೆ. ಇವರೆಲ್ಲರೂ ಅಕ್ಷರಪಾತಳಿಯ ಕಾವ್ಯವನ್ನು ಅಂದರೆ ಗ್ರಂಥಸ್ಥ ಕಾವ್ಯವನ್ನು ಮುಖ್ಯವಾಗಿ ಗಮನದಲ್ಲಿಟ್ಟುಕೊಂಡೇ 'ಕಾವ್ಯಪ್ರಯೋಗ'ವನ್ನು ಕುರಿತು ಚರ್ಚಿಸಿದಂತಿದೆ. ಆದರೆ ಕವಿರಾಜ ಮಾರ್ಗಕಾರ 'ಕಾವ್ಯಪ್ರಯೋಗ'ದ ಮಾತುಗಳನ್ನು ಹೇಳುವಾಗ, ಅವನು ಪ್ರಸ್ತಾಪಮಾಡಿರುವುದು ದೇಸಿಗಬ್ಬಗಳು, ಕನ್ನಡನಾಡು, ನಾಡವರು, ಇತ್ಯಾದಿ ವಿಷಯಗಳನ್ನು ಮತ್ತು ಕುರಿತು ಓದದೇ ಇರುವವರನ್ನು ಕುರಿತು; ಅಂದರೆ ಜನಪದರನ್ನು ಕುರಿತೇ ಅವನು ಮಾತನಾಡುತ್ತಿದ್ದಾನೆ ಎಂಬುದು ಸ್ಪಷ್ಟ. ಒಟ್ಟು ಐದು ಕಂದಪದ್ಯಗಳಲ್ಲಿ ಅವನು ನಾಡವರ ಗುಣಗಾನ ಮಾಡಿದ್ದಾನೆ. 'ಆ ನಾಡವರು ಗುಣಗ್ರಾಹಿಗಳು, ಸನ್ನಿಮರ್ಕಳು, ಮೂಕರು ಕೂಡ ವಿವೇಕದ ಮಾತುಗಳನ್ನು ತಿಳಿಸಬಲ್ಲರು, ಪದದ ಅರ್ಥವನ್ನು ತಿಳಿಯುವಂತೆ ಹೇಳಲು, ಹಾಗೂ ಹೇಳಿದ್ದನ್ನು ಅರಿತುಕೊಳ್ಳಲು ಅವರು ಸಮರ್ಥರು' ಮುಂತಾದ ಮಾತುಗಳನ್ನು ಹೇಳಿದ್ದಾನೆ. ಸಂಸ್ಕೃತ-ಪ್ರಾಕೃತಗಳಲ್ಲಿ ಲಕ್ಷ್ಯ-ಲಕ್ಷಣ ನಿರೂಪಣೆಯ ಗ್ರಂಥಗಳು ಸಾಕಷ್ಟಿದ್ದರೂ ಕನ್ನಡದಲ್ಲಿ ಅಂಥವು ಇಲ್ಲವೆಂದೂ ಪರಮಾಚಾರ್ಯರ ಹಾಗೆ ಕಾವ್ಯ ಲಕ್ಷಣವನ್ನು ಅರುಹಬಲ್ಲವರು ಕನ್ನಡದಲ್ಲಿ ಇಲ್ಲವೆಂದೂ ಅವನು ಅಭಿಪ್ರಾಯಪಡುತ್ತಾನೆ. ಹೀಗಿದ್ದರೂ ಕನ್ನಡ-ಕನ್ನಡಿಗರ ಮೇಲಿನ ಅವನ ಅಭಿಮಾನಕ್ಕೇನೂ ಕುಂದುಬಂದಿಲ್ಲ. ಕನ್ನಡಿಗರ ಸಹಜ ಬುದ್ಧಿಮತ್ತೆಯನ್ನೂ, ವಿವೇಕವನ್ನೂ ಅವನು ಪ್ರಶಂಸಿಸಿದ್ದಾನೆ. ಈ ಹಿನ್ನೆಲೆಯಲ್ಲಿ ಕವಿರಾಜಮಾರ್ಗಕಾರ ನಾಡವರ ಅಂದರೆ ಜನಪದರ 'ಕಾವ್ಯಪ್ರಯೋಗ' ಪರಿಣತಿಯನ್ನು ಕುರಿತೆ ಇಲ್ಲಿ ಮಾತನಾಡಿದ್ದಾನೆ ಎಂದು ಭಾವಿಸುವುದು ಹೆಚ್ಚು ಸೂಕ್ತ.

ಶಿಷ್ಟ ಅಥವಾ ಗ್ರಂಥಸ್ಥ ಕಾವ್ಯಗಳಿಗಿಂತ ಮೊದಲು ಪರಂಪರಾಗತವಾಗಿ ಇದ್ದುದು ಧ್ವನಿಪಾತಳಿಯ ಜನಪದ ಕಾವ್ಯ. ಇದು ಮೌಖಿಕ ಪರಂಪರೆಯದಾದುರಿಂದ, ಕಾವ್ಯ ಸೃಷ್ಟಿ ಮತ್ತು ಪ್ರಯೋಗ ಏಕ ಕಾಲದಲ್ಲಿ ಸಂಭವಿಸುತ್ತದೆ. ಅಂದರೆ ಸೃಷ್ಟಿಗೂ ಅದರ ಪ್ರದರ್ಶನಕ್ಕೂ ಮಧ್ಯೆ ಅಂತರವೇ ಇರುವುದಿಲ್ಲ. ಕಾವ್ಯ ಸೃಷ್ಟಿಗೊಳ್ಳುತ್ತಲೇ ಪ್ರದರ್ಶನಗೊಳ್ಳುತ್ತಿರುತ್ತದೆ; ಪ್ರದರ್ಶನಗೊಳ್ಳುತ್ತಿರುವಾಗಲೇ ಮುಂದಿನದು ಸೃಷ್ಟಿಗೊಳ್ಳಬೇಕಾಗುತ್ತದೆ. ಕಾವ್ಯ ಅಭಿವ್ಯಕ್ತಿಗೊಳ್ಳುವ ಅಥವಾ ಪ್ರದರ್ಶನಗೊಳ್ಳುವ ರೀತಿಯಲ್ಲಿಯೂ ವೈವಿಧ್ಯತೆ ಗೋಚರವಾಗುತ್ತದೆ. ಇದಕ್ಕೆ ಕಾರಣ ಪ್ರದರ್ಶನಗೊಳ್ಳುವ ಅಭಿನಯ ಮಾಧ್ಯಮ. ಆಂಗಿಕ, ಸಾತ್ವಿಕ ಆಹಾರ್ಯ, ವಾಚಿಕಾಭಿನಯಗಳು ಮೂಲತಃ ಜನಪದರ ಪರಿಕಲ್ಪನೆಗಳೇ ಆಗಿದ್ದು, ಪರಿಷ್ಕಾರಹೊಂದಿ, ಅವು ನಾಟ್ಯಶಾಸ್ತ್ರ ಸೇರಿ 'ಅಭಿನಯ ಚತುರ್ಥ'ಗಳು ಎನ್ನಿಸಿಕೊಂಡಿವೆ. ಕಾವ್ಯವನ್ನು ಈ ನಾಲ್ಕು ಅಭಿನಯಗಳ ಮೂಲಕ ವ್ಯಕ್ತಪಡಿಸಿದರೆ ಅದು ದೃಶ್ಯಪ್ರಯೋಗವೆನ್ನಿಸಿಕೊಳ್ಳುತ್ತದೆ - ಯಕ್ಷಗಾನದ ಹಾಗೆ. ಹಾಡುಗಾರಿಕೆಯ ಮೂಲಕ ವ್ಯಕ್ತಪಡಿಸಿದರೆ, ಶ್ರವ್ಯಪ್ರಯೋಗವಾಗುತ್ತದೆ. ಜನಪದ ಗೀತೆಗಳ ಹಾಗೆ ಅಂದರೆ ಒಂದರಲ್ಲಿ ಕಣ್ಣು ಮುಖ್ಯ, ಇನ್ನೊಂದರಲ್ಲಿ ಕಿವಿ ಮುಖ್ಯ. ಇವೆರಡು ನಮ್ಮ ಶಿಷ್ಟ ಸಂಪ್ರದಾಯದಲ್ಲಿಯೂ ಇರುವ ಮುಖ್ಯ ಕಾವ್ಯ ಪ್ರಯೋಗ ಮಾಧ್ಯಮಗಳು. ಆದರೆ ನಮ್ಮ ಜನಪದರು 'ಕಾವ್ಯಪ್ರಯೋಗ'ದಲ್ಲಿ ವೈವಿಧ್ಯತೆಯನ್ನು ಸಾಧಿಸಿದ್ದರು. ಚತುರರೂ ವಿವೇಕಿಗಳೂ ಆಗಿದ್ದ ಅವರು ಅನೇಕ ರೀತಿಯಲ್ಲಿ, ಪರಿಣಾಮಕಾರಿಯಾಗಿ ಕಾವ್ಯ ಪ್ರಯೋಗಿಸುವ ಮಾಧ್ಯಮಗಳನ್ನು

ಹುದುಕಿಕೊಂಡಿದ್ದರು. ಅಭಿನಯ ಚತುಷ್ಟಯಗಳಲ್ಲಿ ಕೆಲವನ್ನು ಇಟ್ಟುಕೊಂಡು, ಕೆಲವನ್ನು ಬಿಟ್ಟು, ಕಾವ್ಯ ಪ್ರದರ್ಶಿಸುವ ಪ್ರಯೋಗಗಳನ್ನು ಅವರು ಮಾಡಿದ್ದರು. ವಾಚಿಕಾಭಿನಯಲುಪ್ತವಾದ ಕಥಕ್ಕಳಿಯಂತಹ ಕಲಾಪ್ರಕಾರ, ವಾಚಿಕಾಭಿನಯವೊಂದೇ ಪ್ರಧಾನವಾಗಿರುವ 'ಪ್ರಸಂಗ' ಪ್ರಕಾರ ಇಂಥದಕ್ಕೆ ಉದಾಹರಣೆಯಾಗಬಲ್ಲವು.

ಶಿಷ್ಟಕಾವ್ಯಕ್ಕೆ ಗ್ರಂಥಸ್ಥವಾದ ಒಂದು ನಿಶ್ಚಿತರೂಪವಾದರೂ ಇರುತ್ತದೆ. ಆದರೆ ಜನಪದ ಕಾವ್ಯ, ಅದು ಮೌಖಿಕವಾಗಿ ಯಾವ ರೀತಿ ಅಭಿವ್ಯಕ್ತಗೊಳ್ಳುತ್ತದೆಯೋ ಆ ಸ್ವರೂಪವನ್ನು ಕಟ್ಟಿಕೊಡುತ್ತದೆ. ಇದೂ ಕೂಡ ತತ್ಕಾಲೀನವಾದದ್ದೇ ಹೊರತು, ಅದಕ್ಕೊಂದು ನಿಶ್ಚಿತ ರೂಪವೆಂಬುದು ಇರುವುದಿಲ್ಲ. ದೃಶ್ಯಮಾಧ್ಯಮದ ಮೂಲಕ ಪ್ರಯೋಗಗೊಂಡಾಗಲೂ ಆ ಸಂದರ್ಭದಲ್ಲಿ ಬಳಸಿಕೊಂಡ ಪಠ್ಯ (ಧ್ವನಿಪಾತಳಿಯಲ್ಲಿ), ಭಾಗವಹಿಸಿದ ನಟರು ಮತ್ತು ಪ್ರೇಕ್ಷಕರು, ಸೂತ್ರಧಾರ (ನಿರ್ದೇಶಕ), ಪ್ರದರ್ಶನದ ಸಮಯ, ಸ್ಥಳ ಮುಂತಾದ ಅನೇಕ ಅಂಶಗಳು ಅಂದಿನ ಆ ಕಾವ್ಯಪ್ರಯೋಗದ ಸ್ವರೂಪವನ್ನು ನಿರ್ಧರಿಸುತ್ತವೆ; ನಿಯಂತ್ರಿಸುತ್ತವೆ. ಇದೇ ಮಾತನ್ನು ಶ್ರವ್ಯಮಾಧ್ಯಮಕ್ಕೂ ಅನ್ವಯಿಸಬಹುದು. ಮೌಖಿಕ ಕಾವ್ಯಪ್ರಯೋಗವು ಹಾಡುವ ಪಠ್ಯ, ಶ್ರೋತೃವರ್ಗ, ಹಾಡುಗಾರರು, ಬಳಸುವ ವಾದ್ಯ, ಹಾಡುವ ಸ್ಥಳ, ಸಮಯ, ಹಾಡುವ ಅವಧಿ, ಮುಂತಾದವುಗಳ ಪ್ರಭಾವಗಳಿಗೆ ಒಳಗಾಗುತ್ತದೆ. ಪ್ರತಿಯೊಂದು ಬಾರಿಯೂ ವಿಶಿಷ್ಟ ಪ್ರಯೋಗವಾಗಿ ಹೊರಹೊಮ್ಮುತ್ತದೆ.

ಜನಪದ ಹಾಡುಗಾರಿಕೆ ವೈವಿಧ್ಯಮಯವಾದುದು; ಕುತೂಹಲಕಾರಿಯಾದುದು. ಜನಪದ ಹಾಡಿನ ಮಟ್ಟುಗಳು ಅಂಶಲಯ ಆಧರಿತವಾದವು. ಧ್ವನಿಗಳನ್ನು ಹಿಗ್ಗಿಸಿ, ಕುಗ್ಗಿಸಿ, ಏರಿಸಿ, ಇಳಿಸಿ, ಲಯವೈವಿಧ್ಯವನ್ನು ಸಾಧಿಸಿಕೊಳ್ಳಲಾಗುತ್ತದೆ. ಅವರ ಹಾಡಿನ ಧಾಟಿಗಳಿಗೆ ಮಿತಿ ಇಲ್ಲ. ಅಂಶಲಯದಲ್ಲಿನ ಬ್ರಹ್ಮ, ವಿಷ್ಣುಗಣಗಳನ್ನು ಬಳಸಿಕೊಂಡು, ೧, ೩೦, ೨೦, ೬೧, ೩೪೪ ವೈವಿಧ್ಯಮಯ ಚರಣಗಳನ್ನು ರಚಿಸುವ ಸಾಧ್ಯತೆ ಇರುವುದನ್ನು ಎಂ.ಎಂ. ಕಲಬುರ್ಗಿಯವರು ತೋರಿಸಿಕೊಟ್ಟಿದ್ದಾರೆ. (ಮಾರ್ಗ-೨ ಪು ೬೦೮) ಈ ಚರಣಗಳನ್ನು ಹಾಡುವಾಗ, ಪ್ರಯೋಗ ಸಂದರ್ಭದಲ್ಲಿ ಇನ್ನೂ ವೈವಿಧ್ಯಮಯಗೊಳಿಸಬಹುದಾಗಿದೆ. ಒಂದೇ ತ್ರಿಪದಿಯನ್ನು ಕ್ರಿಯಾತ್ಮಕವಾಗಿ ವಿಭಿನ್ನಬಗೆಗಳಲ್ಲಿ ಹಾಡಬಹುದಾಗಿದೆ. ಕುಟ್ಟುವಾಗ, ಬೀಸುವಾಗ, ನಾಟಿ ಮಾಡುವಾಗ, ಕ್ರಿಯೆಗನುಗುಣವಾಗಿ ಹಾಡಿನ ಧಾಟಿ ಬದಲಾಗುತ್ತದೆ. ಈ ರೀತಿಯಲ್ಲಿ ಹಾಡುಗಾರಿಕೆಯ ಪ್ರಯೋಗ ಅಥವಾ ಪ್ರದರ್ಶನ ಸ್ವರೂಪವೂ ಅನಂತ ಸಾಧ್ಯತೆಯುಳ್ಳದ್ದು ಎಂಬುದು ಮನದಟ್ಟಾಗುತ್ತದೆ. ಹಿಮ್ಮೇಳ, ಮುಮ್ಮೇಳಗಳ ಮೂಲಕ ಜನಪದರು ಹಾಡುವ ರೀತಿಯೂ ಆಕರ್ಷಕವಾದುದು; ಪರಿಣಾಮಕಾರಿಯಾದುದು. ಶಿಷ್ಟದಲ್ಲಿ ಹಾಡುಗಾರಿಕೆಯನ್ನು ಶಾಸ್ತ್ರೀಯವಾದ ರೀತಿಯಲ್ಲಿ ಗಮಕಕಲೆಯ ಮೂಲಕ ತೋರಿಸಲಾಗುವುದು. ಇದೊಂದು ಪುರಾತನವಾದ ಕಲೆ. ಇದರಲ್ಲಿ ಅರ್ಥಕ್ಕೆ ಮಹತ್ವ ಕೊಟ್ಟು, ಬಿಡಿಸಿ ಹಾಡಲಾಗುತ್ತದೆ. ಅವಶ್ಯವಿದ್ದಲ್ಲಿ ಗದ್ಯದಲ್ಲಿ ವಿವರಣೆಯನ್ನು ಕೊಡಲಾಗುತ್ತದೆ. ಇಂಥ ರಸಕ್ಕೆ ಇಂಥ ರಾಗವೆಂಬ ನಿರ್ದೇಶನವೂ ಇದೆ. ಶ್ರುತಿಗಾಗಿ ತಂಬೂರಿ ಅಥವಾ ವೀಣೆಯನ್ನು ಬಳಸುತ್ತಾರೆ. ಪ್ರಾಚೀನ ಕಾಲದಿಂದಲೂ ಅರಸರ ಆಸ್ಥಾನಗಳಲ್ಲಿ ಗಮಕಿಗಳು ಇರುತ್ತಿದ್ದರೆಂಬುದಕ್ಕೆ ಆಧಾರಗಳಿವೆ. ಶಾಸನ-ಸಾಹಿತ್ಯಗಳಲ್ಲಿ 'ಕವಿ, ಗಮಕಿ, ವಾದಿ, ವಾಗ್ಮಿ'ಗಳ ಪ್ರಸ್ತಾಪ ಒಟ್ಟಿಗೇ ಬರುತ್ತದೆ. (ಗ್ರಾಮೀಣ, ಪು. ೨೯) ದಾಸ ಸಾಹಿತ್ಯದ ಕಾಲಕ್ಕೆ ಕೀರ್ತನ ಪದ್ಧತಿ ಹೆಚ್ಚಾಗಿ ಬೆಳೆದುಬಂತು. ತಂಬೂರಿ (ದಂಡಿಗೆ) ತಾಳಗಳೊಂದಿಗೆ ಕಾಲಿಗೆ ಗೆಜ್ಜೆಕಟ್ಟಿಕೊಂಡು ಕುಣಿಯುತ್ತ ಹಾಡುವ ಪದ್ಧತಿ ಇದು. ಇದರದ್ದೇ ಮತ್ತೊಂದು ಬಗೆ ಹರಿಕೀರ್ತನೆ. ಹಾಡು, ನಿರೂಪಣೆಗಳನ್ನು ಒಬ್ಬನೇ ಸಾಗಿಸಿಕೊಂಡು ಹೋಗುವ ವಿಶಿಷ್ಟ ಕಥನ ಶೈಲಿಯ ಅಭಿವ್ಯಕ್ತಿ ಸ್ವರೂಪ. ಹೀಗೆ ಶ್ರವ್ಯದಲ್ಲಿಯೂ ನಾನಾ ರೀತಿಯ ಪ್ರಯೋಗ ಸಾಧ್ಯತೆಗಳಿದ್ದು; ನಮ್ಮ ಜನಪದ

ಹಾಗೂ ಶಿಷ್ಟ ಕವಿಗಳು ಅವುಗಳಲ್ಲಿ ಕೆಲವನ್ನು ತಮ್ಮ 'ಕಾವ್ಯ ಪ್ರಯೋಗ'ಕ್ಕಾಗಿ ಬಳಸುತ್ತ ಬಂದಿದ್ದಾರೆ.

ಇನ್ನು, ಕವಿರಾಜ ಮಾರ್ಗಕಾರನ ಹಿಂದಿನ ಪದ್ಯದ ವಿಷಯಕ್ಕೆ ಬಂದರೆ, ಅವನು ಅಲ್ಲಿ ಬಳಸಿರುವ, 'ಕಾವ್ಯಪ್ರಯೋಗ' ಶಬ್ದ ಮುಖ್ಯವಾಗಿ ನಾಡವರಿಗೆ (ಜನಪದರಿಗೆ) ಸಂಬಂಧಿಸಿದ್ದು, ಅಂದರೆ ಮೌಖಿಕ ಕಾವ್ಯ ಪರಂಪರೆಗೆ ಸಂಬಂಧಿಸಿದ್ದು. ಆದ್ದರಿಂದ ಆ ಪರಂಪರೆಯ ಹಿನ್ನೆಲೆಯಲ್ಲಿಯೇ ನಾವು 'ಕಾವ್ಯಪ್ರಯೋಗ' ಶಬ್ದದ ಅರ್ಥವನ್ನು ಅರಸಬೇಕು. ಪ್ರಸ್ತುತ ಪದ್ಯದ ಹಿಂದು-ಮುಂದಿರುವ ಪದ್ಯಗಳನ್ನೆಲ್ಲ ಅವಲೋಕಿಸಿದಾಗ, ಈ ಪ್ರಯೋಗ ಕಣ್ಣಿಂದ ನೋಡುವುದಕ್ಕಿಂತ ಕಿವಿಯಿಂದ ಕೇಳುವುದಕ್ಕೆ ಸಂಬಂಧಿಸಿದ್ದೆಂದು ಅನ್ನಿಸುತ್ತದೆ. ಈ ಹಿಂದೆ ಚರ್ಚಿಸಿರುವ ಬಹುಪಾಲು ವಿದ್ವಾಂಸರು ಇದನ್ನು ಗಮನಿಸಿದ್ದಾರೆ. 'ಪದನಱಿದು ನುಡಿಯಲುಂ ನುಡಿದುದನಱಿದಾರಯಲುಂ' ಎಂಬಲ್ಲಿ 'ಪದನಱಿದು' ಶಬ್ದಕ್ಕೆ ಎಂ.ವಿ.ಸೀ.ಯವರ 'ಹದವರಿತು ಮಾತನಾಡುವ' ಅಥವಾ ಗೌರೀಶರ 'ಪ್ರತಿಯೊಂದು ಮಾತನ್ನು ತಿಳಿದು ನುಡಿಯುವ' ಎಂಬ ಯಾವ ಅರ್ಥವನ್ನೇ ಇಟ್ಟುಕೊಂಡರೂ ಒಟ್ಟಂದದಲ್ಲಿ ಔಚಿತ್ಯವರಿತು ಮಾತನಾಡುವ ಕಲೆ, ಜನಪದರಿಗೆ ಕರಗತವಾಗಿತ್ತು ಎಂಬುದು ವಿದಿತವಾಗುತ್ತದೆ. ಈ ಮಾತು ವಾಚಿಕಾಭಿನಯವನ್ನು ಹೊಂದಿರುವ 'ಪ್ರಸಂಗ' (ತಾಳಮದ್ದಲೆ)ವೆಂಬ ಜನಪದ ಕಾವ್ಯ ಪ್ರಯೋಗಕ್ಕೆ ಯೋಗ್ಯವಾಗಿ ಹೊಂದಿಕೊಳ್ಳುತ್ತದೆ. ಅದರ ಹಾಡುಗಾರಿಕೆಯಲ್ಲಿ, ಮೇಲೆ ಶ್ರವ್ಯಕಾವ್ಯ ಪರಂಪರೆಯಲ್ಲಿ ಹೇಳಿರುವ ಪ್ರಯೋಗ ವೈವಿಧ್ಯತೆಗಳೆಲ್ಲ ಕಾಣಿಸಿಕೊಳ್ಳುತ್ತವೆ. ವಾಚಿಕಾಭಿನಯದಲ್ಲಿ 'ಪದನಱಿದು ....' ಈ ಪಂಕ್ತಿಯ ಅರ್ಥ ಅತ್ಯಂತ ಉಚಿತವಾಗಿ ಅನ್ವಯವಾಗುತ್ತದೆ. ಗೌರೀಶ ಕಾಯ್ಕಿಣಿ ಹಾಗೂ ಶ್ರೀನಿವಾಸಹಾವನೂರರ 'ಕಾವ್ಯಪ್ರಯೋಗ'ದ ಸಮಗ್ರ ಕಲ್ಪನೆಯಲ್ಲಿ ಈ ಬಗೆಯ ಪ್ರಯೋಗವೂ ಲಕ್ಷ್ಯದಲ್ಲಿದೆ. ಆದರೆ ಇಂಥ ವಾಚಿಕಾಭಿನಯ ಪ್ರಯೋಗ ಆ ಕಾಲದಲ್ಲಿ ಇದ್ದಿತೇ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ.

ಕವಿರಾಜಮಾರ್ಗ ಪೂರ್ವದಲ್ಲಿದ್ದ ದೇಸಿಗಬ್ಬದ ಸಂತತಿಯಲ್ಲಿಯೇ ಇಂದಿನ ಯಕ್ಷಗಾನ ಪ್ರಬಂಧವು ತಲೆದೋರಿರಬೇಕೆಂದು ಮುಳಿಯ ತಿಮ್ಮಪ್ಪಯ್ಯನವರು ಊಹಿಸಿದ್ದಾರೆ. (ಕ.ಮಾ.ವಿ. ಪು. ೧೧೯-೧೨೩) ಬೆದಂಡೆ ಎನ್ನುವುದು ಕೇಳಲಿಕ್ಕೂ ನೋಡಲಿಕ್ಕೂ ಇರುವ ದೇಸಿಗಾನದ ದೃಶ್ಯಕಲೆ ಎಂಬ ಮಾತನ್ನು ಕೆ.ಪಿ. ವೆಂಕಟಪ್ಪ ಶೆಟ್ಟಿ ಸೂಚಿಸುತ್ತಾರೆ. ವಿವಿಧ ಪದ್ಯಮಿಶ್ರವಾದ ಬೆದಂಡೆ ಜನಪ್ರಿಯವಾದ ದೇಸಿ ಕಾವ್ಯಪ್ರಕಾರವಾಗಿತ್ತೆಂಬುದನ್ನು ಎಂ.ಎಂ. ಕಲಬುರ್ಗಿಯವರೂ ಹೇಳಿದ್ದಾರೆ. (ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ ಪು ೬೮) ಕರ್ನಾಟಕದ ಕರಾವಳಿ ಮತ್ತು ಮಲೆನಾಡು ಪ್ರಾಂತಗಳಲ್ಲಿ ಇನ್ನೂ ಜನಪ್ರಿಯವಾಗಿರುವ ಪ್ರಸಂಗ ಅಥವಾ ತಾಳಮದ್ದಳೆಯ ರೂಪ, ಹತ್ತು-ಹನ್ನೆರಡು ಶತಮಾನಗಳ ಹಿಂದೆ ಹೇಗೆ ಇದ್ದಿರಬಹುದು ಎಂಬುದು ಕುತೂಹಲಕರ ವಿಚಾರ.

ವಾಚಿಕಾಭಿನಯವೊಂದನ್ನೇ ಮುಖ್ಯವಾಗಿಟ್ಟುಕೊಂಡು ಕಾವ್ಯಪ್ರಯೋಗಗೊಂಡಾಗ ಅದು 'ಪ್ರಸಂಗ'ವೆನ್ನಿಸಿಕೊಳ್ಳುತ್ತದೆ. ಈ ಪ್ರಯೋಗವನ್ನೇ ಅಕ್ಷರಪಾತಳಿಗೆ ಇಳಿಸಿದಾಗ ಅಥವಾ ಗ್ರಂಥಸ್ಥಗೊಳಿಸಿದಾಗ ಅದು 'ಪ್ರಬಂಧ'ವೆನ್ನಿಸಿಕೊಳ್ಳುತ್ತದೆ. ಈ ಕುರಿತು ಎಂ.ಎಂ. ಕಲಬುರ್ಗಿಯವರು, 'ರಂಗ ಪ್ರದರ್ಶನವನ್ನು ಶ್ರವ್ಯ ಪ್ರಕಾರಗೊಳಿಸಿದರೆ (ಚಂಪೂ) ಪ್ರಬಂಧವೆನ್ನಿಸಿಕೊಳ್ಳುತ್ತದೆ. ಇಲ್ಲಿ ಗದ್ಯಭಾಗ ಭಾಗವತನ ಮಾತಿನಂತೆ, ಪದ್ಯಭಾಗ ಪಾತ್ರಗಳ ಮಾತಿನಂತೆ ಸಂಯೋಜನೆಗೊಂಡಿರುತ್ತದೆ. ಪ್ರದರ್ಶನದ ಅಭಿನಯ ಚತುಷ್ಟಯದಲ್ಲಿ ಸಾತ್ವಿಕ, ಆಹಾರ್ಯ, ಆಂಗಿಕಗಳನ್ನು ಬಿಟ್ಟುಕೊಟ್ಟು ವಾಚಿಕವೊಂದನ್ನೇ ಮಾಧ್ಯಮವಾಗಿಟ್ಟುಕೊಂಡರೆ 'ಪ್ರಸಂಗ'ವೆನ್ನಿಸುತ್ತದೆ ಎಂದಿದ್ದಾರೆ. (ಮಾರ್ಗ -

೧ ಪು. ೫೯೮) ಪಂಪ, ತನ್ನ ವಿಕ್ರಮಾರ್ಜುನ ವಿಜಯವನ್ನು 'ಪ್ರಬಂಧ'ವೆಂದು ಕರೆದುಕೊಂಡಿದ್ದಾನೆ. (ವಿಕ್ರಮಾರ್ಜುನ ವಿಜಯ, ೧-೧೧) ಸಾಮಾನ್ಯವಾಗಿ ಯಕ್ಷಗಾನ ಹಾಗೂ ಪ್ರಸಂಗಗಳಿಗೆ ಬಳಸುವ ಪಠ್ಯ ಒಂದೇ ಆಗಿದ್ದು ಅದನ್ನು 'ಪ್ರಬಂಧ'ವೆಂದು ಕರೆಯಲಾಗುತ್ತದೆ. ಈ ದೃಷ್ಟಿಯಿಂದ ಪ್ರಬಂಧವೆಂದು ಕರೆದುಕೊಳ್ಳುವ ಚಂಪೂಗ್ರಂಥಗಳು ರಂಗಭೂಮಿಯ ಮೇಲಿನ ದೃಶ್ಯಪ್ರಯೋಗಕ್ಕೋ ಅಥವಾ ಕೇವಲ ವಾಚಿಕಾಭಿನಯದ ಮೂಲಕ ದೃಶ್ಯಪ್ರಯೋಗದ ಪರಿಣಾಮ ಮೂಡಿಸುವ 'ಪ್ರಸಂಗ'ದ ಉದ್ದೇಶಕ್ಕೋ ಶಿಷ್ಟ ಪರಂಪರೆಯಲ್ಲಿ ರಚಿತವಾದವು ಎಂದೆನ್ನಿಸುತ್ತದೆ. ಒಟ್ಟಿನಲ್ಲಿ ಜನಪದ ಅಥವಾ ದೇಸೀಕಾವ್ಯ ಪ್ರಯೋಗಗಳಿಂದ ಪ್ರಚೋದಿತವಾಗಿ ರಚಿಸಿರುವ ಅಕ್ಷರಪಾತಳಿಯ ಸಾಹಿತ್ಯಗ್ರಂಥಗಳಿವು ಎಂದು ಹೇಳಬಹುದು. ಈ ಪ್ರಕ್ರಿಯೆ ಕವಿರಾಜಮಾರ್ಗಕಾರನ ಕಾಲಕ್ಕೇ ಪ್ರಾರಂಭವಾಗಿದ್ದಿತೆಂಬುದರ ಬಗ್ಗೆ.

ನುಡಿಗೆಲ್ಲಂ ಸಲ್ಲದ ಕನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀ
ಗಡಿನ ನೆಗಟ್ತೆಯ ಕಬ್ಬದೊಳೊಡಂಬಡಂ ಮಾಡಿದರ್ ಪುರಾತನಕವಿಗಳ್

ಎಂಬ ಪದ್ಯದಲ್ಲಿ ಸುಳಿವು ದೊರೆಯುತ್ತದೆ. ಜನಪದರಲ್ಲಿ (ಕ.ಮಾ. ೧-೩೨) ಬಳಕೆಯಲ್ಲಿದ್ದ ಚತ್ತಾಣ, ಬೆದಂಡೆ ಕಾವ್ಯಗಳನ್ನು ಶಿಷ್ಟ ಕವಿಗಳು ತಮ್ಮ ಪರಂಪರೆಯೊಳಗೆ ತಂದರೆಂದು ಈ ಪದ್ಯದಲ್ಲಿ ಹೇಳಲಾಗಿದೆ.

ಪಂಪಯುಗವನ್ನು ದಾಟಿ, ವಚನಯುಗಕ್ಕೆ ಬಂದಾಗ ದೇಸಿಯೇ ಕನ್ನಡ ಸಾಹಿತ್ಯವನ್ನು ಆಳತೊಡಗಿದ್ದು ಕಂಡುಬರುತ್ತದೆ. ವಚನಗಳನ್ನು 'ಪ್ರಸಂಗ' ಸ್ವರೂಪಕ್ಕೆ ಅಳವಡಿಸುವ ಪ್ರಯತ್ನ ಆ ಕಾಲದಲ್ಲಾಯಿತು. ವಚನಕಾರರ ವಚನಗಳನ್ನು ಬಳಸಿಕೊಂಡು ಶಿವಶರಣರ ಕತೆಯನ್ನೂ ಅನುಭವ ಗೋಷ್ಠಿಯನ್ನು ಕಟ್ಟಿಕೊಡುವುದು (ಅನುಭವ ಮಂಟಪದ ವಚನ ರಚನಾ ಸನ್ನಿವೇಶವನ್ನು ಪುನಃ ನಾಟಕೀಯವಾಗಿ ಸೃಷ್ಟಿಸಿಕೊಡುವುದು), ಇಂಥ ಪ್ರಯೋಗಗಳ ಉದ್ದೇಶವಿದ್ದಂತಿದೆ. ಈ ವಚನಾನುಭವ ಪ್ರಸಂಗ ಶ್ರವ್ಯಪ್ರಯೋಗದ ಅಥವಾ ಪ್ರಸಂಗತತ್ವದ ಸೂತ್ರಗಳನ್ನು ಆಧರಿಸಿರುವುದರಿಂದ ಪ್ರತಿಪ್ರಯೋಗವೂ ಪುನಃ ಸೃಷ್ಟಿಯೇ ಆಗಿರುತ್ತಿತ್ತೆಂಬುದನ್ನು ಗಮನಿಸಬೇಕು. ಸನ್ನಿವೇಶ, ಘಟನೆಗಳನ್ನು ಸೇರಿಸುವುದು, ಬಿಡುವುದು ಇವೆಲ್ಲವೂ ಸೂತ್ರಧಾರ ಅಥವಾ ಭಾಗವತನಂತಿದ್ದ ಸಂಕಲನಕಾರನ ಉದ್ದೇಶ, ಇಚ್ಛೆಗಳನ್ನು ಅನುಸರಿಸಿರುತ್ತಿತ್ತು. ಇಂಥ ವಚನಾನುಭವ ಪ್ರಸಂಗಗಳ ಅಕ್ಷರ ಪಾತಳಿಯ ಅಥವಾ ಗ್ರಂಥಸ್ಥ ರೂಪಗಳೇ ಶೂನ್ಯಸಂಪಾದನೆಗಳು ಎನ್ನಬಹುದು. ನಮಗೀಗ ಅಂಥ ನಾಲ್ಕು ಶೂನ್ಯಸಂಪಾದನೆಗಳು ದೊರೆಯುತ್ತಿವೆ. ಶಿವಗಣ ಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆ, ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯಸಂಪಾದನೆ, ಗೂಳೂರು ಸಿದ್ಧವೀರಣ್ಣಾರ್ಯರ ಶೂನ್ಯಸಂಪಾದನೆ ಮತ್ತು ಹಲಗೆದೇವರ ಶೂನ್ಯಸಂಪಾದನೆ. ಶೂನ್ಯಸಂಪಾದನೆ, ಪ್ರಸಂಗ ಪ್ರಯೋಗದ ಗ್ರಂಥಸ್ವರೂಪವಾದ್ದರಿಂದಲೇ ಆ ಗ್ರಂಥದ ಕೊನೆಯ ಗದ್ಯದಲ್ಲಿ ಅವನು, ಈ ವಚನಾನುಭವ ಪ್ರಸಂಗಮಂ ಮಾಡಿ ಸುಖಿಸುವುದು ಎಂದು ಬಿನ್ನವಿಸಿಕೊಂಡಿದ್ದಾನೆ. ಅಂದರೆ ಪ್ರಸಂಗ ಮಾಡುವುದಕ್ಕಾಗಿಯೇ ಅವನು ಆ ಸಂಕಲನವನ್ನು ರಚಿಸಿದ್ದಾನೆ ಎಂದಂತಾಯಿತು. ಶೂನ್ಯಸಂಪಾದನೆಗಳಲ್ಲಿ ಯಕ್ಷಗಾನೀಯ ಗುಣವಿರುವುದನ್ನು ಎಂ. ಚಿದಾನಂದಮೂರ್ತಿ (ಲಿಂಗಾಯಿತ ಅಧ್ಯಯನಗಳು, ಪು. ೨೪೩) ಮತ್ತು ಎಲ್ ಬಸವರಾಜು (ಪ್ರಸಾದಿ ಮಹದೇವಯ್ಯ ಶೂನ್ಯ ಸಂಪಾದನೆ, ಪ್ರಸ್ತಾವನೆ, ಪು ೪೧) ಗುರುತಿಸಿದ್ದಾರೆ. 'ಇವರು ಸತ್ಯಕ್ಕೆ ಹತ್ತಿರ ಬಂದಿದ್ದಾರೆ' ಎನ್ನುವ ಕಲ್ಬುರ್ಗಿಯವರು. 'ಇದು ಅಭಿನಯ ಚತುಷ್ಟಯದಲ್ಲಿ ವಾಚಿಕಾಂಶವನ್ನು ಇಟ್ಟುಕೊಂಡ 'ಪ್ರಸಂಗ'ವೆಂಬ ಸಾಹಿತ್ಯ ಪ್ರಕಾರವಾಗಿದೆ (ಮಾರ್ಗ ೧, ಪು ೫೯೮) ಎಂಬ ಖಚಿತ ನಿಲುವಿಗೆ ಬಂದಿದ್ದಾರೆ. ಇವೆಲ್ಲವುಗಳ ಮೇಲಿಂದ ಶೂನ್ಯ ಸಂಪಾದನೆಗಳು ವಾಚಿಕಾಭಿನಯ ಪ್ರಯೋಗವಾದ

'ಪ್ರಸಂಗ'ವನ್ನು ಮಾಡುವ ಉದ್ದೇಶಕ್ಕಾಗಿಯೇ ರಚಿಸಲ್ಪಟ್ಟ ಭಿನ್ನ ಸಂಕಲನಗಳು ಎಂಬುದು ಮನದಟ್ಟಾಗುತ್ತದೆ.

ಹೀಗೆ ಪಂಪಪೂರ್ವಯುಗದಿಂದಲೂ ಜನಪದರಲ್ಲಿ ಬಳಕೆಯಲ್ಲಿರುವ ಕಾವ್ಯ ಪ್ರಯೋಗದ 'ಪ್ರಸಂಗ' ಪ್ರಕಾರ ಶಿಷ್ಟ ಸಾಹಿತ್ಯವನ್ನು ಪ್ರವೇಶಿಸಿ ಬರಹರೂಪವನ್ನು ತಾಳಿ ಬೆಳೆದುಬಂದಂತೆ (ಪ್ರಬಂಧ (ಚಂಪೂ) 'ಪ್ರಸಂಗ' ಶೂನ್ಯ ಸಂಪಾದನೆ ಈ ರೂಪಗಳಲ್ಲಲ್ಲದೆ, ಇನ್ನೂ ಬೇರೆ ರೂಪಗಳಲ್ಲೂ ಬರವಣಿಗೆಗೆ ಇಳಿದಿರುವ ಸಾಧ್ಯತೆ ಇದೆ) ಜನಪದರಲ್ಲಿಯೂ ಪ್ರಸಂಗ, ತಾಳಮದ್ದಳೆ, ಬೈಠಕ್ ಮುಂತಾದ ಹೆಸರುಗಳಲ್ಲಿ ಕಾವ್ಯ ಪ್ರಯೋಗರೂಪದಲ್ಲಿ ಉಳಿದು ಬೆಳೆದು ಬಂದಿದೆ. 'ಪದನರಿದು ನುಡಿಯಲುಂ ನುಡಿದುದನರಿದಾರಯಲುಂ' ಸಮರ್ಥರಾದ ಜನಪದರ ಪ್ರಸಂಗ ಪ್ರಯೋಗ ವಿದ್ವಾಂಸರನ್ನೂ ಮೋಡಿಗೊಳಿಸುವಂತಿದೆ. ಅಭಿನಯ ಚತುಷ್ಟಯದಿಂದ ಕೂಡಿದ ದೃಶ್ಯಪ್ರಯೋಗ ಇದಲ್ಲವಾದರೂ ಕೇವಲ ವಾಚಿಕಾಭಿನಯದಿಂದಲೇ ದೃಶ್ಯ ಪ್ರಯೋಗದ ಎಲ್ಲ ಪರಿಣಾಮಗಳನ್ನು ಸಾಧಿಸುವ ಇದು, ಶ್ರವ್ಯಪ್ರಯೋಗದಲ್ಲಿಯೇ ವಿಶಿಷ್ಟವಾದುದು. ಕುಕಿತೋದದಿದ್ದರೂ ಮಹಾಭಾರತ, ರಾಮಾಯಣ, ಪುರಾಣಗಳ ಕಥೆಗಳನ್ನು ಕೇಳಿಕೇಳಿ, ಜನಪದ ಕಾವ್ಯ ಪ್ರಯೋಗಗಳನ್ನು ಕೇಳಿ ಮತ್ತು ನೋಡಿ, ಸಾಕಷ್ಟು ಜ್ಞಾನವನ್ನು ಅನುಭವವನ್ನೂ ದೊರಕಿಸಿಕೊಂಡು ವಿವೇಕವನ್ನು ಸಂಪಾದಿಸಿಕೊಂಡು ಆ ಬಲದಿಂದಲೇ ಬೌದ್ಧಿಕ ವಾಗ್ವಾದಕ್ಕೆ ಇಳಿಯಬಲ್ಲರು; ಪಾತ್ರಗಳ ಸಮರ್ಥನೆ ಮಾಡಬಲ್ಲರು; ಮಂದಿ ಮೆಚ್ಚುವಂತೆ ಮಾತನಾಡಬಲ್ಲರು. ಪ್ರಸಂಗಗಳಲ್ಲಿ ಮಾತಿಗೆ, ಅರ್ಥಕ್ಕೆ ಹೆಚ್ಚಿನ ಮಹತ್ವ. ಅಂತೆಯೇ ಅಲ್ಲಿ ಪಾತ್ರವಹಿಸುವ ವ್ಯಕ್ತಿಗಳನ್ನು 'ಅರ್ಥಧಾರಿ'ಗಳೆಂದೇ ಕರೆಯಲಾಗುತ್ತದೆ.

ಆದ್ದರಿಂದ, ಕವಿರಾಜಮಾರ್ಗಕಾರನ ಪರಿಣತಮತಿಗಳ 'ಕಾವ್ಯಪ್ರಯೋಗ' ಪ್ರಸಂಗ ಸ್ವರೂಪದ್ದೆಂದು ಅನ್ನಿಸುತ್ತದೆ. ಒಂದು ಅರ್ಥದಲ್ಲಿ 'ಕಾವ್ಯಪ್ರಯೋಗ'ವನ್ನು ಕುರಿತು ಇದುವರೆಗೆ ಚರ್ಚಿಸಿರುವ ವಿದ್ವಾಂಸರೆಲ್ಲರೂ ತಮ್ಮ ವಿವರಣೆಗಳಲ್ಲಿ ಪ್ರಸಂಗ ಪ್ರಕಾರದ ಆಶಯವನ್ನೇ ವ್ಯಕ್ತಪಡಿಸಿದ್ದಾರೆ. ಆದರೆ 'ಪ್ರಸಂಗ'ವೊಂದು 'ಕಾವ್ಯಪ್ರಯೋಗ'ವಾಗಬಲ್ಲುದು ಎಂದು ಮಾತ್ರ ಗುರುತಿಸಿಲ್ಲ. ಆದ್ದರಿಂದ ಅವರ ಅಭಿಪ್ರಾಯಗಳಿಂದ ತೀರ ದೂರ ಹೋಗದೇ, ಜನಪದ ಕಾವ್ಯಾಭಿವ್ಯಕ್ತಿಯ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಕವಿರಾಜಮಾರ್ಗಕಾರನ 'ಕಾವ್ಯ ಪ್ರಯೋಗ' ಶಬ್ದವನ್ನು ಮೂಲದಲ್ಲಿ ಅರ್ಥೈಸುವ ಒಂದು ಪ್ರಯತ್ನ ಇದಾಗಿದೆ.

## ಆಧಾರ ಗ್ರಂಥಗಳು

೧. ಕಲಬುರ್ಗಿ ಎಂ. ಎಂ. ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩

೨. ಕಲಬುರ್ಗಿ ಎಂ. ಎಂ. ಮಾರ್ಗ ಭಾಗ ೧, ಬೆಂಗಳೂರು, ೧೯೮೮

೩. ಕಲಬುರ್ಗಿ ಎಂ. ಎಂ. ಮಾರ್ಗ ಭಾಗ ೨, ಬೆಂಗಳೂರು, ೧೯೮೮

೪. ಕಿದಿಲಾಯ ಶಂಕರ (ಸಂ) ಕರ್ನಾಟಕ ಕವಿರಾಜಮಾರ್ಗಂ, ಮದ್ರಾಸ ವಿಶ್ವವಿದ್ಯಾಲಯ, ಮದ್ರಾಸು, ೧೯೭೩

೫. ಚಿದಾನಂದಮೂರ್ತಿ, ಎಂ. ಗ್ರಾಮೀಣ, ಬೆಂಗಳೂರು, ೧೯೭೭

೬. ತಿಮ್ಮಪ್ಪಯ್ಯ ಮುಳಿಯ, ಕವಿರಾಜಮಾರ್ಗವಿವೇಕ, ಮಂಗಳೂರು, ೧೯೪೮

೭. ಪುಟ್ಟಪ್ಪ.ಕೆ.ವಿ (ಸಂ) ಪಂಪಭಾರತ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೬ (ಎ.ಮು)

೮. ಭೈರಪ್ಪ. ಎಸ್. ಎಲ್ ಮತ್ತಿತರರು (ಸಂ) ಮಾನ, ಹಾಮಾನಾ ಅಭಿನಂದನ ಗ್ರಂಥ ಮೈಸೂರು, ೧೯೯೨

೯. ಸೀತಾರಾಮಯ್ಯ ಎಂ. ವಿ. ಕವಿರಾಜ ಮಾರ್ಗ ವಿವಕ್ಷೆ, ಬೆಂಗಳೂರು, ೧೯೯೫

೧೦. ಹಿರಿಯಣ್ಣ ಅಂಬಳಿಕೆ, ಸೈದ್ಧಾಂತಿಕ ಜಾನಪದ, ಮೈಸೂರು, ೧೯೯೨

# ಥಾಡಿ: ಒಂದು ಸಂಚಾರಿ ಗಾಯಕ ಜನಾಂಗ

ಡಾ|| ಹರಿಲಾಲ್. ಕೆ. ಪವಾರ

"ಖಾತೋಜಾವ ಪಿತೋಜಾವ ಓರೇ ಗೋಣ್ಣೆ ಸಾರು ಲೀಯಿಜಾವ" ತಿನ್ನುತ್ತಿದ್ದ ಕುಡಿಯುತ್ತಿದ್ದ, ತನ್ನ ಹೆಂಡತಿಗಾಗಿ ತೆಗೆದುಕೊಂಡು ಹೋದ ಎಂದು ಸಾರಂಗಿ ವಾದ್ಯದ ಇಂಪಾದ ಶ್ರುತಿ ತೆಗೆದು ಧ್ವನಿಗೂಡಿಸಿ, ಲಂಬಾಣಿ ಹೆಂಗಳೆಯರನ್ನು ಮೋಡಿ ಮಾಡುವ ಥಾಡಿಯರು, ನಿಂತ ನಿಂತಲ್ಲಿಯೇ ರಸಿಕ ಕಥಾನಕಗಳನ್ನು ಹೆಣೆದು, ಶ್ರೋತೃಗಳ ಮಧ್ಯದಲ್ಲಿ ಸಲೀಸಾಗಿ ಹಾಡಿ ಕುತೂಹಲಗೊಳಿಸುವ ಚೈತನ್ಯದ ಚಿಲುಮೆಗಳು.

ಥಾಡಿಯರು ಲಂಬಾಣಿಗರಲ್ಲಿ ಧಾರ್ಮಿಕ ವೃತ್ತಿಗಾಯಕರು. ಲಂಬಾಣಿಗರನ್ನು ಬಿಟ್ಟು ಬೇರೆಯವರ ಹತ್ತಿರ ವೃತ್ತಿಗೆ ಹೋಗುವುದಿಲ್ಲ. ಈ ವೃತ್ತಿಗಾಯಕರು ಕರ್ನಾಟಕದಲ್ಲಿ ಬೆರಳೆಣಿಕೆಯಷ್ಟು (ಶಹಾಬಾದ ತಾಂಡಾದಲ್ಲಿ ಥಾಡಿಯರು ಅಧಿಕ ಸಂಖ್ಯೆಯಲ್ಲಿದ್ದಾರೆ) ಇರಬಹುದು. ಮಹಾರಾಷ್ಟ್ರದ ಗಂಗಾಖೇಡ, ಮಲೇವಾಡಿ, ಫೋಹರಾಗಡ, ಪರಬಣಿ, ಪೇನಗಂಗಾ, ನಾಂದೇಡ ಈ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣಸಿಗುತ್ತಾರೆ. ಪ್ರತಿವರ್ಷವೂ ಕರ್ನಾಟಕದ ಬಹುತೇಕ ಲಂಬಾಣಿ ತಾಂಡಾಗಳಿಗೆ ಭೇಟ್ಟಿ ಕೊಟ್ಟು, ತಮ್ಮ ವೃತ್ತಿಯನ್ನು ಪೂರೈಸಿ ಹೋಗುತ್ತಾರೆ.

ಇವರು ಮನೆಬಿಟ್ಟರೆ ಒಂದೊಂದು ತಿಂಗಳುಗಟ್ಟಲೆ ಹಿಂತಿರುಗಿ ಹೋಗುವದಿಲ್ಲ. ಆ ಉದ್ದೇಶದಿಂದ ಸಾರಂಗಿ ವಾದ್ಯ, ಬಟ್ಟೆ, ಚದ್ದರ ಇವುಗಳಿಂದ ಸಜ್ಜಾದ ಕೈಚೀಲ ಯಾವತ್ತೂ ಬೆನ್ನ ಹಿಂದೆ ಅಥವಾ ಹೆಗಲಿಗೆ ಇಳಿಬಿಟ್ಟಿರುತ್ತಾರೆ.

ಮೊದಲಿಗೆ ತಾಂಡಾದ ನಾಯಕರುಗಳ ಮನೆಗೆ ಹೋಗುವದು ರೂಢಿ ಸಂಪ್ರದಾಯ. ತಾಂಡಾದ ನಾಯಕನು ಥಾಡಿಯರಿಗೆ ಬರಮಾಡಿಕೊಂಡು ಊಟೋಪಚಾರ ಮತ್ತು ತಂಗುವ ವ್ಯವಸ್ಥೆ ನೋಡಿಕೊಳ್ಳುತ್ತಾನೆ. ಲಂಬಾಣಿ ಸಮಾಜದಲ್ಲಿ ಥಾಡಿಯನ್ನು ಗೌರವದಿಂದ ಕಾಣುವುದನ್ನು ಇಲ್ಲಿ ಸ್ಮರಿಸಬಹುದು. ಊಟ ಮುಗಿದ ಬಳಿಕ ಎಲ್ಲರೂ ನಾಯಕನ ಮನೆಯ ಮುಂದೆ ಸೇರುತ್ತಾರೆ. ಕಿಕ್ಕಿರಿದ ಶ್ರೋತೃಗಳ ಮಧ್ಯದಲ್ಲಿ ಥಾಡಿಯೂ ಮೆಲ್ಲನೆ ಹಾಡು ಆರಂಭಿಸುತ್ತಾನೆ. ಹಾಡಿನ ನಡು ನಡುವೆ ವಿವರಣೆ ಹಾಸ್ಯ ನುಡಿಗಳನ್ನು ಹೇಳುತ್ತ ಶ್ರೋತೃಗಳಿಗೆ ಮನರಂಜನೆ ಒದಗಿಸುತ್ತಾನೆ.

ಇವರು ಹಾಡುವ ಪ್ರಮುಖ ಕಥಾನಕಗಳೆಂದರೆ ಲಂಬಾಣಿ ಮೂಲಪುರುಷರ ಪರಂಪರೆ. ಲಂಬಾಣಿ ಜನಪದ ಲಾವಣಿ, ಮಹಾಸತಿಯರ ಗೀತೆ, ಬಾಲಾಜಿಗರೂ, ಲೋಕಮಸಂದ, ಲಿಂಗಾಮಸಂದ, ಸೇವಾಭಾಯಾ, ಸಾಮಕಿಮಾತಾ, ರಾಮರಾವ ಮಹಾರಾಜ, ದಾಮಾಜಿಪಂತ,

ಶ್ರೀಕೃಷ್ಣನನ್ನು ಕುರಿತು ಹಾಡುವುದರ ಜೊತೆಗೆ ಹೆಣ್ಣುಮಕ್ಕಳು ಹವೇಲಿಗೀತೆ ಹಾಡುವುದರಲ್ಲಿಯೂ ಎತ್ತಿದ ಕೈ.

**ಹವೇಲಿ ಗೀತೆ**

ಲಂಬಾಣಿಗರಲ್ಲಿ ಮದಲಿಂಗಿಗೆ ಗಂಡನ ಮನೆಗೆ ಕಳುಹಿಸುವ ಸಂದರ್ಭದಲ್ಲಿ ಹೇಳುವ ಗೀತೆಗೆ ಹವೇಲಿಗೀತೆ ಎಂದು ಕರೆಯುತ್ತಾರೆ. ಮದಲಿಂಗಿಯೂ ಎತ್ತಿನ ಮೇಲೆ ನಿಂತುಕೊಂಡು ಎರಡು ಕೈಗಳನ್ನು ಮೇಲೆತ್ತಿ ದುಃಖದಿಂದ ಕೂಡಿರುವ ಹವೇಲಿ ಗೀತೆ ಹಾಡುತ್ತ ತನ್ನ ಮನಸ್ಸಿನ ಭಾವನೆಯನ್ನು ಹಾಡಿನ ಮುಖಾಂತರ ತೋಡಿಕೊಳ್ಳುತ್ತಾಳೆ.

ಹವೇಲಿಗೀತೆ ಮತ್ತು ಥಾವಲೋ (ಅಳುವ ಸಂಪ್ರದಾಯ)ವನ್ನು ಕೇಳಬೇಕೆಂದು ಲಂಬಾಣಿ ಸ್ತ್ರೀಯರೂ ಢಾಡಿಯರನ್ನು ಮುತ್ತಿರುತ್ತಾರೆ. ಹೆಂಗಸರ ಮಧ್ಯದಲ್ಲಿ ಕುಳಿತು, ಸಾರಂಗಿ ವಾದ್ಯವನ್ನು ನುಡಿಸುತ್ತ ಲಂಬಾಣಿ ಸ್ತ್ರೀಯರೂ ಅಳುವ ಸಂಪ್ರದಾಯವನ್ನು ಸಾರಂಗಿಯ ಮುಖಾಂತರ ಶ್ರುತಿ ತೆಗೆದು ಹೆಣ್ಣುಮಕ್ಕಳಿಗೆ ಕಣ್ಣಲ್ಲಿ ನೀರಾಡುವಂತೆ ನುಡಿಸುತ್ತಾರೆ. ಉದಾಹರಣೆಗೆ:

ಹವೇಲಿಯೇ ಯಾ ಅಹಿಯಾ
ಹೋಟೋ ಘರ ಆಂವುತೋ
ಮಾರೇ ನಾಯಕ ಬಾಪೂರಿ ನಂಗರಿ
ಹರಿವೇಸ ಹರಿಯಾಳಿರೇಸ
ಹವೇಲಿಯೇ ಯಾ ಅಹಿಯಾ
ಘಾಲರಾಸು ವದೇಸ, ವಡಲಾಸು
ಫೇಲೇಸ ಕಡಿಯಾಧೇಕ ಪೇರಿ ಉಬನಾದೇಕ ಓಡಿ
ತೋಡಾ ತೋಡಾ ಕರ ಸಾಸಿ
ಕೋಡಿ ಕೋಡಿ ಕರ ಮಾಯಾ ಜೋಡಿ

ಹವೇಲಿಯೇ ಯಾ ಅಹಿಯಾ
ಚಾಂದಾ ಸೂರಿಯಾರಿ ಜೋಡಿ
ಕೂಂ ತಪ ಜೂಂ ಮಾರೇ
ಪಾಂಚೆನ ಪಾಂಚೆ ದಸಿ ಭಾಯಿರಿ
ಜೋಡಿ ತಪೇಸ
ಹವೇಲಿಯೇ ಯಾ ಅಹಿಯಾ

ಅರ್ಥ:
ಓ ನನ್ನ ಹಡೆದ ತಾಯೇ
ಹಿಂತಿರುಗಿ ಬಂದರು
ನನ್ನ ನಾಯಕ ತಂದೆಯ ತಾಂಡೆ
ಹಸಿರು ಹುಲ್ಲಿನಂತೆ ನಿತ್ಯಹಸಿರಾಗಿರು
ಓ ನನ್ನ ಹಡೆದ ತಾಯೇ
ಅತ್ತಿಯ ಗಿಡದಂತೆ ಬೆಳೆದು,
ಆಲದ ಮರದಂತೆ ಪಸರಿಸು
ಹೊಸಬಟ್ಟೆ ತೊಟ್ಟುಕೊಂಡು ಓಢಣಿ
ಹೊದ್ದಿಕೊಂಡೆ ವಿವಿಧ ದಾರಗಳಿಂದ ಉಡುಪು ಸಿದ್ಧಗೊಳಿಸಿದೆ

ಪ್ರೀತಿವಿಶ್ವಾಸಗಳಿಂದ ಮನಬಲಿಸಿದೆ
ಓ ನನ್ನ ಹಡೆದ ತಾಯೇ
ಚಂದ್ರ ಸೂರ್ಯರ ಜೋಡಿಯಂತೆ
ನನ್ನ ಐದು ಹತ್ತು ಸಹೋದರರು
ಕೂಡಿರಲಿ ಅವರಿಗೆ ತುಷ್ಟಿ, ಪುಷ್ಟಿ, ಸಂತುಷ್ಟಿ
ದೊರೆಯಲೆಂದು ದೇವರಲ್ಲಿ ಪ್ರಾರ್ಥಿಸುವೆ

ಹವೇಲಿಗೀತೆ, ಥಾವಲೋಗೀತೆ, ಲೆಂಗಿಗೀತೆ, ಬೀಸುವ, ಕುಟ್ಟುವ ಮುಂತಾದ ಗೀತೆಗಳನ್ನು ತಮ್ಮ ಮೌಖಿಕ ಪರಂಪರೆಯಲ್ಲಿ ಉಳಿಸಿಕೊಂಡು ಬಂದಿರುವ ಥಾಡಿಯರ ಸ್ಮರಣ ಶಕ್ತಿ ಅಗಾಧವಾದದ್ದು. ಇವರು ಲಂಬಾಣಿಗರಿಗೆ ಹಿಂದಿನ ಮತ್ತು ಮುಂದಿನ ಪೀಳಿಗೆಗೆ ಸೇತುವೆಯಂತೆ ಇದ್ದಾರೆ.

ಬೆಳಗಿನ ಜಾವದಲ್ಲಿ ತಾಂಡಾದ ಪ್ರತಿಯೊಂದು ಮನೆಗಳಿಗೆ ಹೋಗಿ ಕಾಳು ಕಡಿ, ಬಟ್ಟೆ ಬರೆ, ನಾಲ್ಕೈದು ರೂಪಾಯಿ ಸಂಭಾವನೆಯಾಗಿ ಪಡೆದುಕೊಂಡು ಮತ್ತೊಂದು ತಾಂಡಕ್ಕೆ ಪ್ರಯಾಣ.

ಲಂಬಾಣಿ ವೃತ್ತಿಗಾಯಕ ಥಾಡಿಯರು ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ, ಗುಜರಾತ್, ಪಂಜಾಬ್, ರಾಜಸ್ಥಾನ ಮತ್ತು ಮಧ್ಯಪ್ರದೇಶದಲ್ಲಿಯೂ ಕಂಡುಬರುತ್ತಾರೆ. 'ಸಾರಂಗಿ' ಎಂಬ ವಿಶಿಷ್ಟ ಸ್ವರೂಪದ ವಾದ್ಯ ಇವರನ್ನು ಗುರುತಿಸುವ ಮುಖ್ಯ ಸಾಧನ.

## ಥಾಡಿಯರು ಯಾರು?

ಲಂಬಾಣಿ ವೃತ್ತಿಗಾಯಕ ಥಾಡಿಯರು ಅಪ್ಪಟವಾಗಿ ಪಂಜಾಬದ ವೃತ್ತಿಗಾಯಕ 'ಥಾದಿ'ಯರಿಗೆ ಹೋಲುತ್ತಾರೆ. ಮೂಲತಃ ಇವರುಗಳು ಪಂಜಾಬದವರು ಎಂಬುದರಲ್ಲಿ ಸಂದೇಹವಿಲ್ಲ. ಇವರು ತಮ್ಮ ವೃತ್ತಿಯಲ್ಲಿ ಬಳಸುವ ವಾದ್ಯದ ಹೆಸರು 'ಥಾದ್ ಸಾರಂಗಿ. ಆದುದರಿಂದ ಥಾಡಿ ಎನ್ನುವ ಪದವು ವಾದ್ಯದಿಂದಲೇ ಬಂದಿದೆ ಎಂದು ನಿಸ್ಸಂದೇಹವಾಗಿಯೂ ಹೇಳಬಹುದು. ಈ ಪದವು 'ಥಾದ್ ಥಾದಿ ಥಾಡಿ = ಥಾಡಿ ಎಂದಾಗಿರಬೇಕು. ಈ ವೃತ್ತಿಗಾಯಕರು ಲಂಬಾಣಿಗರಲ್ಲಿ ಇವತ್ತಿಗೂ 'ಥಾಡಿ' ಎಂಬ ಹೆಸರಿನಿಂದಲೇ ಚಿರಪರಿಚಿತರಾಗಿದ್ದಾರೆ.

"ಪಂಜಾಬದಲ್ಲಿ ಭಟ್ಟರು ಮತ್ತು ಥಾದಿಯರು ಜನಪ್ರಿಯ ವೃತ್ತಿಗಾಯಕರಾಗಿದ್ದಾರೆ. ಇವರು ಹಳ್ಳಿಯ ವಿಶೇಷ ಸಮಾರಂಭಗಳಲ್ಲಿ ಕಿಕ್ಕಿರಿದ ಶ್ರೋತೃಗಳ ಮಧ್ಯದಲ್ಲಿ ರಾತ್ರಿ ಎಷ್ಟೋ ಹೊತ್ತಿನವರವರೆಗೆ ಕಥಾನಕಗಳನ್ನು ಹೇಳಿ ಹಾಡುತ್ತಾರೆ. ಜನಪದ ವಾದ್ಯಗಳಾದ ಅಲ್ಗೋಸ್ ಏಕತಾರಿ ಮತ್ತು ಥಾದ್ ಸಾರಂಗಿಗಳನ್ನು ಹಿನ್ನೆಲೆಯಾಗಿ ಬಳಸಿಕೊಳ್ಳುತ್ತಾರೆ. ಹಳ್ಳಿಯ ಜನರೆಲ್ಲರೂ ಈ ಕಾರ್ಯಕ್ರಮದಲ್ಲಿ ಉತ್ಸಾಹದಿಂದ ಪಾಲ್ಗೊಳ್ಳುತ್ತಾರೆ. ವೀರಕಾವ್ಯಗಳು ರಮ್ಯಲಾವಣಿಗಳು ಇವರ ಸಾಹಿತ್ಯಗಳಲ್ಲಿ ಹೆಚ್ಚಾಗಿವೆ. (ಸೋಹಿಂದರಸಿಂಗ ಬೇಡಿ ೧೯೭೧:೧೨೫:೧೨೬)

ಕಂಬರಲೆಡ್ಜ ಅವರ ಪ್ರಕಾರ "ಮಧ್ಯಪ್ರದೇಶದಲ್ಲಿ ಥಾಡಿ ಹಾಗೂ ಭಾಟರು ಒಂದೇ ಆಗಿದ್ದು ಭಾಟರು ಥಾಡಿಗಳ ಪೂರ್ವಜರಾಗಿದ್ದಾರೆ. ಗುರುನಾನಕನ ಸೇವಕನು ಹುಮಾಯೂನನ ಆಸ್ಥಾನಕ್ಕೆ ಹೋದಾಗ ಅಲ್ಲಿ ಮೋಸದಿಂದ ಆಕಳ ಮಾಂಸವನ್ನು ತಿನ್ನಿಸಲಾಯಿತು. ಮೋಸಕ್ಕೆ ಒಳಗಾದ ಆತನು ಇಸ್ಲಾಂ ಧರ್ಮವನ್ನು ಸ್ವೀಕರಿಸಿದನು. ಆತನ ವಂಶಜರೇ 'ಥಾಡಿ'ಗಳಾಗಿದ್ದಾರೆ. ಕೆಲವರು ಮೊಗಲರ ದರ್ಬಾರದಲ್ಲಿ ಗಾಯಕರಾಗಿ ಸೇರಿದರೆ, ಇನ್ನೂ ಕೆಲವರು ಲಂಬಾಣಿಗಳಲ್ಲಿ

ಸಾಮಾಜಸೇವಕರಾಗಿ ನಿಂತರು. ಇವರು ದಿಲ್ಲಿಯ ಬಾದಷಹನಲ್ಲಿ ಕೀರ್ತನೆ, ಭಜನೆಗಳನ್ನು ಮಾಡುತ್ತಿದ್ದರು. ವರ್ಷಕ್ಕೊಮ್ಮೆ ಲಂಬಾಣಿಗರ ಮನೆಗಳಿಗೆ ಹೋಗಿ ಕಾಣಿಕೆಗಳನ್ನು ಪಡೆಯುತ್ತಾರೆ. ಹಿಂದೂ ಇಸ್ಲಾಂ ಮಿಶ್ರ ಸಂಸ್ಕೃತಿಯು ಇವರ ವೈಶಿಷ್ಟ್ಯವಾಗಿದೆ ಎಂದು ಹೇಳಿದ್ದಾರೆ. (ಡಾ. ವಿ.ಜಿ. ನಾಯಕ ೧೯೯೨:೫)

## ಐತಿಹಾಸಿಕ ಹಿನ್ನೆಲೆ

ಡಮರು ಬಾರಿಸಿ ನೃತ್ಯ ಮಾಡುತ್ತಿದ್ದ ಮೋಲಾ ನಾಮದದಿ? (ಷಂಢ) ಕೃಷ್ಣನ ಗೋವುಗಳನ್ನು ಕಾಯುತ್ತಿದ್ದನು. ಕೃಷ್ಣನ ಮನ ಒಲಿಸಿ ರಾಧೆಯನ್ನು ಕರೆತಂದನು. ಮಂತ್ರವಾದಿ ಭವಯ್ಯನ್ನು ಮೋಲಾ ರಾಧಿಕಾರ ಜೊತೆಗೆ ನೃತ್ಯ ಮಾಡುತ್ತ ಸಂಚರಿಸುತ್ತಿದ್ದನು. ಒಂದು ದಿನ ಭವಯ್ಯನು ತಿಪ್ಪೆಯಲ್ಲಿ ಮೇಯುತ್ತಿದ್ದ ಕತ್ತೆಯನ್ನು ಹಿಡಿದು ತಂದು ಅದರ ಮೈಮೇಲೆ ಕೈಯಾಡಿಸಿದಾಗ, ಕತ್ತೆ ಸುಂದರ ಸ್ತ್ರೀಯಾದಳು. ಅವಳನ್ನೇ ಮೋಲಾನ ಸಹೋದರ ಮೋಟಾನಿಗೆ ಕೊಟ್ಟು ಮದುವೆ ಮಾಡಿಸಿದರು.

ಮೋಲಾ ರಾಧಿಕಾ ಮತ್ತು ಭವಯ್ಯ ನೃತ್ಯ ಮಾಡುತ್ತ ರಾಹುಗಡ, ಪಾವುಗಡ ಮತ್ತು ಚಾವುಗಡ ಈ ಮೂರು ರಾಜರ ಆಸ್ಥಾನದಿಂದ ಒಬ್ಬೊಬ್ಬ ಪುತ್ರರನ್ನು ಪಡೆದು ತಂದರು. ಇವರೆಲ್ಲರೂ ಜೊತೆಗೂಡಿ ಸಿಕಂದರ ಬಾದಷಹನ ಆಸ್ಥಾನಕ್ಕೆ ಬಂದು, ಅಲ್ಲಿ ರಾಜನ ಅಪ್ಪಣೆಮೇರೆಗೆ ನೃತ್ಯಮಾಡಿದರು. ಅಲ್ಲಿ ಕೋರಿ ಹುಳಗಳು ಮನುಷ್ಯರಿಗೆ ಮುತ್ತಿರಕ್ತ ಹೀರಿಕೊಳ್ಳುತ್ತಿದ್ದವು. ಅವುಗಳ ಕಾಟಕ್ಕೆ ಬೇಸತ್ತ ಅಲ್ಲಿಯ ಜನರು ಕಂಗಾಲಾಗಿದ್ದಾರು. ಆ ಸೋಜಿಗದ ಸಂಗತಿಯನ್ನರಿತ ಮಂತ್ರವಾದಿ ಭವಯ್ಯನು ಕೋರಿ ಹುಳಗಳನ್ನು ಕಟ್ಟಿಹಾಕಿದನು. ಇಡೀ ರಾತ್ರಿ ನೃತ್ಯ ಮಾಡಿದರು. ಆ ಚಮತ್ಕಾರಿಕ ಘಟನೆಯನ್ನು ನೋಡಿ ಬಾದಷಹನು ಹೇಗಾದರೂ ಮಾಡಿ ಭವಯ್ಯನನ್ನು ಮುಗಿಸಿಬಿಡಬೇಕು. ಇಲ್ಲವಾದರೆ ಬೆಳಗಿನಜಾವ ಮತ್ತೆ ಕೋರಿಹುಳಗಳನ್ನು ಬಿಟ್ಟು ಹೋಗುತ್ತಾನೆಂದು ತಿಳಿದು, ಆ ಕ್ಷಣವೇ ಭವಯ್ಯನನ್ನು ಅರಮನೆಯೊಳಗೆ ಕರೆದೊಯ್ದು ಕೊಲೆಗೈದನು. ಆ ಹೇಯಕೃತ್ಯವನ್ನು ಸಹಿಸಲಾರದೆ ಮೋಲಾ ಮತ್ತು ರಾಧಿಕಾ ಬಾದಷಹನ ಜೊತೆಗೆ ಜಗಳಾಡಿದರು. ಬಾದಷಹನು ನಿಜಸ್ಥಿತಿ ಹೇಳಿ ಸಮಾಧಾನಪಡಿಸಿದನು. ನೀವು ದುಃಖಿಸಬೇಡಿ, ನಿಮ್ಮ ಭವಯ್ಯನ ಪರವಾಗಿ ಇಬ್ಬರು ಸಂಗೀತಗಾರ 'ಗಾಜು' ಮತ್ತು 'ಗಂದ್ರಾ'ರಿಗೆ ಕೊಡುತ್ತೇನೆಂದು ಹೇಳಿದನಂತೆ. ಕೊನೆ ಘಳಿಗೆಯಲ್ಲಿ ಮೋಲಾ ರಾಧಿಕಾ ಒಪ್ಪಿಕೊಂಡು ಅವರಿಬ್ಬರನ್ನು ಕರೆತಂದರೂ ಅವರಿಬ್ಬರೂ ಮುಸ್ಲಿಂ ಧರ್ಮಕ್ಕೆ ಸೇರಿದರು. ಅಂದಿನಿಂದ ಗಾಜು-ಗಂದ್ರಾ ಲಂಬಾಣಿಗರಲ್ಲಿ ಸಂಗೀತ ವೃತ್ತಿಗಾಯಕರಾಗಿ ಬೆರೆತುಹೋದರು. ಗಾಜುನ ವಂಶಸ್ಥರೇ 'ಢಾಡಿ'ಗಳು, ಗಂದ್ರಾನ ವಂಶಸ್ಥರೇ ಭಾಟರೆಂದು ಹೇಳುತ್ತಾರೆ.

"ಜನಪದ ಗೀತೆಗಳನ್ನು, ಲಾವಣಿಗಳನ್ನು ಹಾಡುವುದರಲ್ಲಿ ಪ್ರಧಾನವಾಗಿ ಎರಡು ವರ್ಗಗಳನ್ನು ಕಾಣಬಹುದು. ೧. ಹಾಡುವುದನ್ನೇ ಪ್ರಧಾನ ವೃತ್ತಿಯನ್ನಾಗಿ ಮಾಡಿಕೊಂಡು ಅದನ್ನೇ ಅವಲಂಬಿಸಿ ಬದುಕುವವರು. ೨. ಜೀವನೋಪಾಯಕ್ಕೆ ಬೇರೊಂದು ವೃತ್ತಿಯನ್ನು ಅವಲಂಬಿಸಿ ಕೇವಲ ಸಂತೋಷಕ್ಕಾಗಿ ಹಾಡುವವರು.

ಮೊದಲನೆಯ ವರ್ಗ ಕೇವಲ ಕೆಲವರಿಗೆ ಮಾತ್ರ ಸೀಮಿತವಾದುದು. ಯಾವುದೋ ಒಂದು ವಿಶಿಷ್ಟ ಮತಪವರೋ, ಯಾವುದೋ ದೈವದ ಆರಾಧಕರೋ ಹಾಡುವುದನ್ನು ಕಥೆ ಮಾಡುವುದನ್ನು ವೃತ್ತಿಯಾಗಿ ಸ್ವೀಕರಿಸಬಹುದು. ಅಥವಾ ಯಾವ ದೈವದ ಪ[illegible]ುಕ್ಕೂ

ಒಳಪಡದೆ ಸ್ವತಂತ್ರವಾಗಿ ಎಲ್ಲ ದೇವರ, ಎಲ್ಲ ಪಂಥದ, ಎಲ್ಲ ಬಗೆಯ ಸಾಹಿತ್ಯವನ್ನು ಹಾಡಬಹುದು. ಈ ಎರಡು ಗುಂಪುಗಳನ್ನು ವೃತ್ತಿ ಗಾಯಕರು ಅಥವಾ ಕಥೋಪಜೀವಿಗಳು ಎಂದು ಕರೆಯಬಹುದು. (ಡಾ. ಜೀಶಂಪ ೧೯೭೯:೬೨, ೬೩)

(ಈ ಮೇಲಿನ ಎರಡು ಮುಖ್ಯಾಂಶಗಳನ್ನು ಗಮನಿಸಿದಾಗ ಥಾಡಿಯರು ಮೊದಲನೆಯ ವರ್ಗಕ್ಕೆ ಸೇರುತ್ತಾರೆ. ಥಾಡಿಯರ ಪೂರ್ವಜರ ಕಾಲದಿಂದ ಬಳೆದು ಬಂದ ವೃತ್ತಿಯೂ ಇವತ್ತಿಗೂ ಸಲೀಸಾಗಿ ನಡೆಯುತ್ತಿದೆ. ಅವರ ಸಾಹಿತ್ಯವೂ ಕೂಡ ಅಷ್ಟೇ ಪ್ರಾಮುಖ್ಯವಾದದ್ದು. ಥಾಡಿಯರ ವೃತ್ತಿಯನ್ನು ಗಮನಿಸಿದಾಗ ನಮ್ಮಲ್ಲಿಯ ವೃತ್ತಿ ಗಾಯಕ ಹೆಳವರು ನೆನಪಿಗೆ ಬರುತ್ತಾರೆ.)

ಥಾಡಿಯರು ಹಿಂದೂಗಳಲ್ಲಿ ಆಚರಿಸುವ ದಸರಾ, ದೀಪಾವಳಿ, ಹೋಳಿ, ಯುಗಾದಿ ಹೀಗೆ ಅನೇಕ ಹಬ್ಬಹರಿದಿನಗಳನ್ನು ಸಂಭ್ರಮದಿಂದ ಆಚರಿಸುತ್ತಾರೆ. ಲಂಬಾಣಿಗರ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಉತ್ಸಾಹದಿಂದ ಪಾಲ್ಗೊಳ್ಳುತ್ತಾರೆ.

ಇಮಾಮ ಹುಸೇನ, ಬಂದೇನವಾಜ್, ಮಹಿಬೂಬ ಸುಬಾನಿ, ಕಾಶೀಮ್ ಧೂಲಾ, ಮೋಹರಂ, ರಮಜಾನ್, ಬಕ್ರೀದ, ಈಸೂಬ ಬಾಬಾ, ಜಂಗಲಿ ಬಾಬಾ ಮುಂತಾದ ಮುಸ್ಲಿಂ ದೇವತೆ ಮತ್ತು ಹಬ್ಬಗಳನ್ನು ಆಚರಿಸುವ ಇವರು "ಮಸೀದಿಯಿಂದ ಪೀರಸಾಹೇಬರನ್ನು ಕರೆಸುತ್ತಾ ಮದುವೆಗಳಲ್ಲಿ 'ನಿಖಾ' ಪದ್ಧತಿ ಆಚರಿಸುವ ಸಂಪ್ರದಾಯವಿದೆ. (ಜಿ.ಎನ್. ಮೋಹನ್ ೧೯೮೫:೧೫)

ಭಾಷೆ, ನಡವಳಿಕೆ, ಊಟೋಪಚಾರ, ವೇಷಭೂಷಣ ಇತ್ಯಾದಿಗಳಲ್ಲಿ ಅಪ್ಪಟವಾಗಿ ಲಂಬಾಣಿಗರನ್ನೇ ಹೋಲುವ ಇವರು ಮುಸ್ಲಿಂ ಸಂಸ್ಕೃತಿಯ ಹಲವಾರು ಅಂಶಗಳನ್ನು ಮೈಗೂಡಿಸಿಕೊಂಡಿರುವದು ನಿಜಕ್ಕೂ ಕುತೂಹಲಕಾರಿ. ಹಿಂದೂ ಮತ್ತು ಮುಸ್ಲಿಂ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ನಡೆದಿರುವ ಥಾಡಿಯರದ್ದು ಅರೆಬರೆ ಸಂಸ್ಕೃತಿ. ಈ ಹಿನ್ನೆಲೆಯಲ್ಲಿ ಇವರಿಗೆ ಹಿಂದೂಗಳೆನ್ನಬೇಕೋ ಅಥವಾ ಮುಸ್ಲಿಂರೆನ್ನಬೇಕೋ ಎನ್ನುವ ವಿಸ್ಮಯ ಉಂಟಾಗುತ್ತದೆ. ಥಾಡಿಯರು ಒಂದು ರೀತಿಯಲ್ಲಿ ಮಿಶ್ರ ಸಂಸ್ಕೃತಿ ಹೊಂದಿದ ವೃತ್ತಿ ಗಾಯಕರ ಗುಂಪು ಎನ್ನುವುದು ಸ್ಪಷ್ಟ.

ಥಾಡಿಯರು ಬಳಸುವ ವಾದ್ಯದ ಹೆಸರು ಸಾರಂಗಿ. ಇದು ವೀಣೆ ಮಾದರಿಯದ್ದು. ಒಂದೂವರೆ ಅಥವಾ ಎರಡು ಅಡಿ ಎತ್ತರವಿರುತ್ತದೆ. ಸಾರಂಗಿಗೆ ತೇಗದ ಅಥವಾ ಮಾವಿನ ಮರದ ತುಂಡನ್ನು ಪೊಳ್ಳಾಗುವಂತೆ ಕೊರೆದು ಸಾರಂಗಿ ವಾದ್ಯಕ್ಕೆ ಉಪಯೋಗಿಸುವರು.

**ಮುಂಜಿ (ಸುನತಿ)**

ಥಾಡಿಯರಲ್ಲಿ ಗಂಡು ಮಕ್ಕಳಿಗೆ ಹನ್ನೆರಡನೆಯ ವರ್ಷಕ್ಕೆ ಮುಂಜಿ ಮಾಡಿಸುತ್ತಾರೆ. ಮುಸ್ಲಿಂರ ಖಲೀಪ (ನಾವದಿಗ)ನನ್ನು ಕರೆತಂದು ಅವನ ಕೈಯಿಂದಲೇ ಈ ಕಾರ್ಯ ಮಾಡಿಸುತ್ತಾರೆ. ಮುಂಜಿ ಮಾಡುವ ಮುಂಚೆ ಹೊಸ ಬಟ್ಟೆ ಹಾಸಿ ಮಗುವಿಗೆ ಕೂಡಿಸುತ್ತಾರೆ. ಆಮೇಲೆ ಅಲ್ಲಾನಿಗೆ ಕೈಮುಗಿದು ಖಲೀಫನು ತನ್ನ ಕಾರ್ಯನಿರ್ವಹಿಸುವನು. ಖಲೀಪನಿಗೆ ಕಾಣಿಕೆಯಾಗಿ ಒಂದು ಸೇರು ಅಕ್ಕಿ, ಐವತ್ತೊಂದು ರೂಪಾಯಿ ಕೊಡುತ್ತಾರೆ. ಮನೆಯಲ್ಲಿ ಕುರಿಯನ್ನು ಕೊಯ್ದು ಸಾಮೂಹಿಕವಾಗಿ ಮಾಂಸಾಹಾರದ ಊಟ ಹಾಕುತ್ತಾರೆ.

ಲಂಬಾಣಿಗರು ತಮ್ಮ ಶಕ್ತಿದೇವತೆಗಳಿಗೆ ಬಲಿ ಕೊಡುವಾಗ ಥಾಡಿಯರ ಕೈಯಿಂದ ಚೂರಿ (ಹಲಾಲ) ಹಾಕಿಸುವುದನ್ನು ಇಲ್ಲಿ ಸ್ಮರಿಸಬಹುದು.

## ಪಂಗಡಗಳು (ಪಾಡಾ)

ಥಾಡಿಯರಲ್ಲಿ ಎರಡು ಪ್ರಮುಖ ಪಂಗಡಗಳು ೧. ಥಾಡಿ ಮತ್ತು ೨. ಭಾಟ. ಈ ಪ್ರಮುಖ ಪಂಗಡಗಳಲ್ಲಿಯೇ ಮತ್ತೆ ಕೆಲವು ಉಪಪಂಗಡಗಳು ಕಂಡುಬರುತ್ತವೆ.

ಥಾಡಿಯಲ್ಲಿ ಆರು ಉಪಪಂಗಡಗಳು ೧. ಸೇವ್ಯಾಥಾಡಿ ೨. ರತ್ನಾಥಾಡಿ ೩. ಭಾಣೆಯಾ ಥಾಡಿ ೪. ರೋಡಿಯಾ ಥಾಡಿ ೫. ಧೋಳಿಯಾ ಥಾಡಿ ಮತ್ತು ೬. ಡುಂಗ್ರ್ಯಾ ಥಾಡಿ

ಭಾಟರಲ್ಲಿ ಎಂಟು ಉಪಪಂಗಡಗಳು ೧. ಗಂಗ್ಯಾಭಾಟ ೨. ಹರಸಿಂಗ ಭಾಟ ೩. ಕಂಡೇಳಿಯಾ ಕಾಪಡಿ ಭಾಟ (ಗಾದಿರಮಾಲಕ) ೪. ಝೂಡ ಫೋಡ ಭಾಟ ೫. ಸಗಣ್ಯಾ ಭಾಟ ೬. ಝೂಪಡಿ ಭಾಟ ೭. ಮಭರಿಯಾ ಭಾಟ ಮತ್ತು ೮. ದೇವ್ಯಾಭಾಟ.

## ಜನನ ಸಂಸ್ಕಾರ

ಥಾಡಿಯಲ್ಲಿ ಮಗು ಹುಟ್ಟಿದ ಬಳಿಕ ಹೊಕ್ಕಳ ಬಳ್ಳಿಯನ್ನು ಗುಂಡಿ ತೋಡಿ ಅದರಲ್ಲಿ ಹುಗಿಯುತ್ತಾರೆ. ಜೋಯಿಸರ ಹತ್ತಿರ ಹೋಗಿ ಜನ್ಮಕುಂಡಲಿ ಕೇಳುವುದು ಸಂಪ್ರದಾಯ. ಮೂರನೆಯ ದಿವಸಕ್ಕೆ ಮನೆಯ ಮುಂದೆ ದಳವಾ ಧೋಕಾಯೇರೋ ಕಾರ್ಯ ಮಾಡುತ್ತಾರೆ. ಮುತ್ತೈದೆಯರು ಮನೆಯ ಮುಂದೆ ಸೇರಿದ ಬಳಿಕ, ಒಂದರ ಮೇಲೊಂದರಂತೆ ನೀರು ತುಂಬಿರುವ ಐದು ತಂಬಿಗೆಗಳನ್ನು ಬಾಣಂತಿಯ ತಲೆಯ ಮೇಲೆ ಹೊರಿಸುತ್ತಾರೆ. ಬಾಣಂತಿಯು ಐದು ಸಲ ಗುಂಡಿಗೆ ಪ್ರದಕ್ಷಿಣೆ ಹಾಕಿ, ಬಲಗಾಲಿನ ಪಾದವನ್ನು ಬೆಂಕಿಗೆ ಹಚ್ಚುತ್ತಾಳೆ. ಅಲ್ಲಿ ನೆರೆದವರೆಲ್ಲರಿಗೂ ಗೋದಿ ಹಿಟ್ಟಿನಿಂದ ತಯಾರಿಸಿರುವ ಕುಲ್ಲರ ಹಂಚುತ್ತಾರೆ. ಆಮೇಲೆ ಬಾಣಂತಿಗೆ ಮನೆಯೊಳಗೆ ಕರೆದುಕೊಳ್ಳುತ್ತಾರೆ.

## ಮದುವೆ ಪದ್ಧತಿ

ಪೂರ್ವದಲ್ಲಿ ಥಾಡಿಯರ ಮದುವೆಯ ಕಾರ್ಯಗಳು ತಿಂಗಳುಗಟ್ಟಲೆ ನಡೆಯುತ್ತಿದ್ದವಂತೆ. ಆದರೆ ಇಂದು ಮೂರ್‍ನಾಲ್ಕು ದಿವಸದಲ್ಲಿ ಮುಗಿದು ಹೋಗುವ ಸಂಕೀರ್ಣ ಮದುವೆ ಪದ್ಧತಿ ರೂಢಿಯಲ್ಲಿದೆ. ಮದುವೆ ಎಂದಾಕ್ಷಣ ಈ ಗುಂಪಿನವರಿಗೆ ಅತೀವ ಸಂತೋಷ, ಹಾಡುವುದು, ಕುಣಿಯುವುದು, ಚೇಷ್ಟೆ, ತಮಾಷೆ ಇತ್ಯಾದಿ ಮನೋರಂಜನೆ ಕಾರ್ಯಗಳು ನಡೆಯುತ್ತವೆ.

ಮದುವೆಯ ಸಮಾರಂಭ ವರನ ಮನೆಯಿಂದಲೇ ಆರಂಭ. ವರನಿಗೆ ಹೊಸಬಟ್ಟೆ, ಉದ್ದತೋಳಿನ ಅಂಗಿ, ತಲೆಗೆ ಪೇಟಾ, ಧೋತರ, ಕೈಯಲ್ಲಿ ಕಠಾರಿ, ಬಗಲಲ್ಲಿ ಎಲೆ ಅಡಿಕೆ ತಿನ್ನುವ ಚೀಲ ಮೈಮೇಲೊಂದು ಶಾಲು ಹೊದಿಸಿರುತ್ತಾರೆ.

ಮರುದಿವಸ ಮದುವೆಯ ಸಮಾರಂಭ. ವರನ ಮನೆಯ ಮುಂದೆ ಹಂದರ ಹಾಕಿ ಲೇರಿಯಾನ ಜೊತೆಗೆ ಹೆಣ್ಣಿನ ತಾಂಡಾಕ್ಕೆ ಬೀಳ್ಕೊಡುತ್ತಾರೆ. ಮದಲಿಂಗ ಮತ್ತು ಲೇರಿಯಾ ಹೆಣ್ಣಿನ ತಾಂಡಾದಲ್ಲಿಯ ಸಿತಳಾ ದೇವಿಯ ಗುಡಿಯ ಹತ್ತಿರ ಬಂದು ಕೂಡುತ್ತಾರೆ. ಇವರು ಬಂದದ್ದನ್ನು ತಿಳಿದು, ತಾಂಡಾದ ನಾಯಕಿ ಒಂದು ತಂಬಿಗೆ ನೀರು ತುಂಬಿಕೊಂಡು ಮುತ್ತೈದೆಯರ ಜೊತೆಗೆ ಬಂದು, ಅವರ ಯೋಗಕ್ಷೇಮ ವಿಚಾರಿಸಿ ಮದಲಿಂಗನ ಕೊರಳಿಗೆ ತಬ್ಬಿ ಅಳುತ್ತಾಳೆ. ಅಲ್ಲಿಂದ ಹೆಣ್ಣಿನವರ ಮನೆಗೆ ಕರೆತಂದು ಮನೆಯ ಹೊರಗಡೆ ಕೂಡಿಸುತ್ತಾರೆ. ಮರುದಿವಸ ಮದಲಿಂಗನು ವಿಶೇಷ ಸಮಾರಂಭದಲ್ಲಿ ಮದಲಿಂಗಿಯ ಜೋಳಿಗೆಯಲ್ಲಿ ಎರಡು ರೂಪಾಯಿ ಹಾಕಿ ಅವಳಿಗೆ ಆಶೀರ್ವಾದ ಮಾಡುತ್ತಾನೆ. ನಿಗದಿಪಡಿಸಿರುವ ದಿನದಂದು ಮದುವೆ ಇಟ್ಟುಕೊಳ್ಳುತ್ತಾರೆ.

ಕುಂಬಾರನ ಮನೆಯಿಂದ ಗಡಿಗೆ ತರುವುದು, ಎಕ್ಕೆಯ ಎಲೆಕಟ್ಟುವುದು, ಮದರಂಗಿ ಹಚ್ಚುವುದು, ಅರಿಷಿಣಶಾಸ್ತ್ರ, ಒನಿಕೆಯಶಾಸ್ತ್ರ, ಅಕ್ಕಿಶಾಸ್ತ್ರ ಮಾಂಡ ಆಡಿಸುವ ಶಾಸ್ತ್ರ ನಡೆಯುತ್ತದೆ. ಅಕ್ಕಿಶಾಸ್ತ್ರ ಮುಗಿದ ಬಳಿಕ ವಧುವರರಿಗೆ ತಿಪ್ಪೆಯ ಹತ್ತಿರ ಕರೆದೊಯ್ದು ತಿಪ್ಪೆಗೆ ಕೈಮುಗಿಯಲು ಹಚ್ಚುತ್ತಾರೆ. ಇಲ್ಲಿಗೆ ಮದುವೆಯ ಕಾರ್ಯ ಮುಗಿಯುತ್ತದೆ.

## ಮರಣ ಸಂಸ್ಕಾರ

ಸತ್ತಾಗ ಶವಕ್ಕೆ ಸ್ನಾನ ಮಾಡಿಸಿ ಹೊಸಬಟ್ಟೆ ತೊಡಿಸುತ್ತಾರೆ. ಅದೇ ಸಂದರ್ಭದಲ್ಲಿ ವಿಧವೆಯ ಸೌಭಾಗ್ಯದ ಸಂಕೇತಗಳನ್ನು ತೆಗೆಯುತ್ತಾರೆ. ಮನೆಯ ಮುಂದೆ ಕಟ್ಟಿಗೆಯ ಚಟ್ಟ ತಯಾರಿಸಿ ತಲೆಯ ಭಾಗ ಮನೆಯ ಕಡೆಗೆ ಮಾಡಿ ಸ್ಮಶಾನಕ್ಕೆ ಒಯ್ಯುತ್ತಾರೆ. ಹೆಂಗಸರೂ ಮಕ್ಕಳೂ ಹೆಣದ ಹಿಂದೆ ಹೋಗುವುದಿಲ್ಲ. ಹೆಣದ ಹಿಂದೆ ಒಬ್ಬನು ಭಾರಿ ಟೊಂಗೆಯನ್ನು ಹಿಡಿದಿರುತ್ತಾನೆ. ಮತ್ತೊಬ್ಬನು ಒಂದು ಗಡಿಗೆಯಲ್ಲಿ ನವಣೆ ತುಂಬಿಕೊಂಡು ಸ್ಮಶಾನದವರೆಗೆ ಚೆಲ್ಲುತ್ತ ಹೋಗುತ್ತಾನೆ.

ನಡುದಾರಿಯಲ್ಲಿ ಹೆಣವನ್ನು ಕೆಳಗಿಳಿಸಿ ತಲೆಯಭಾಗ ಸ್ಮಶಾನದ ಕಡೆಗೆ ಮಾಡಿ ಚಟ್ಟದ ಬದಿಯನ್ನು ಬದಲಿಸಿ ಸಾಗುತ್ತಾರೆ. ಸ್ಮಶಾನದಲ್ಲಿ ಅಗೆದಿರುವ ಗುಂಡಿಯಲ್ಲಿ ಉತ್ತರ ದಿಕ್ಕಿನ ಕಡೆಗೆ ತಲೆಯನ್ನು ಮಾಡಿ ಅಂಗಾತವಾಗಿ ಮಲಗಿಸುತ್ತಾರೆ. ಆಮೇಲೆ ಬಾರಿಮುಳ್ಳನ್ನು ಇಟ್ಟು ಹುಗಿಯುತ್ತಾರೆ. ಹಿಂತಿರುಗಿ ಬರುವಾಗ ಯಾವುದಾದರೂ ಬಾವಿಯಲ್ಲಿ ಸ್ನಾನಮಾಡಿ, ಸತ್ತವನ ಮನೆಗೆ ಬರುತ್ತಾರೆ. ರವಿವಾರ ಇದ್ದರೆ ಅವತ್ತಿನ ದಿವಸವೇ ಕಾರ್ಯ ಮಾಡುತ್ತಾರೆ. ಇಲ್ಲವಾದರೆ ಮಾರನೆಯ ದಿವಸಕ್ಕೆ ನೆರವೇರಿಸುತ್ತಾರೆ.

ಕಾರ್ಯ ಮಾಡುವುದಕ್ಕೆ 'ಕಾಂದ್ಯಾಕರ್' ಎನ್ನುತ್ತಾರೆ. ಮನೆಯ ಮುಂದೆ 'ಮಾದಲಿ'ಯನ್ನು ತಯಾರಿಸಿ, ಬುಟ್ಟಿಗಳಲ್ಲಿ ತುಂಬಿಕೊಂಡು ತಾಂಡಾದ ಹೊರಗಡೆ ಒಂದು ಬಾವಿಯ ಹತ್ತಿರ ಬಂದು ಕೂಡುತ್ತಾರೆ. ಸತ್ತವನ ಸಂಬಂಧಿಕರಿಬ್ಬರೂ ಮಾದಲಿ, ಲಿಂಬೆಹಣ್ಣು, ಒಂದು ತಂಬಿಗೆಯಲ್ಲಿ ನೀರು ತುಂಬಿಕೊಂಡು ಸ್ಮಶಾನಕ್ಕೆ ಹೋಗಿ, ಸತ್ತವನ ಗೋರಿಗೆ ಸುಣ್ಣ ಬಳಿದು ನೈವೇದ್ಯ ಹಿಡಿಯುತ್ತಾರೆ. ಇವರು ಹಿಂತಿರುಗಿ ಬಂದ ಬಳಿಕ ಎಲ್ಲರಿಗೂ ಕೂಡ್ರಿಸಿ, ಔಡಲದ ಎಲೆಗಳನ್ನು ಹಂಚಿ, ಅದರ ಮೇಲೆ ಮಾದಲಿ ಹಾಕುತ್ತಾರೆ. ಎಲ್ಲರೂ ಸಾಮೂಹಿಕವಾಗಿ ಊಟ ಮಾಡುತ್ತಾರೆ.

ಈ ಕಾರ್ಯ ಮುಗಿದ ಬಳಿಕ ಎಲ್ಲರೂ ಜೊತೆಗೂಡಿ ಸತ್ತವನ ಮನೆಗೆ ಬಂದು, ಕೂಡುತ್ತಾರೆ. ಆಮೇಲೆ ಶವಕ್ಕೆ ಸ್ನಾನ ಮಾಡಿಸಿದ ಸ್ಥಳದಲ್ಲಿ ಕುರಿಯನ್ನು ಕೊಯ್ದು ನಾಲ್ಕು ದಿಕ್ಕಿಗೂ ರಕ್ತ ಸಿಂಪಡಿಸುತ್ತಾರೆ. ಇದಕ್ಕೆ 'ಹಾಡತೋಡಿ' ಎನ್ನುತ್ತಾರೆ. ವಿಶೇಷವಾಗಿ ಸತ್ತವನ ಬೀಗರು ಕುರಿಗೆ ತಗಲುವ ವೆಚ್ಚವನ್ನು ಕೊಡುತ್ತಾರೆ. ಸಾಯಂಕಾಲ ಸತ್ತವನ ಮನೆಯವರ ಜೊತೆ ಕೂಡಿಕೊಂಡು ಸಾಮೂಹಿಕವಾಗಿ ಮಾಂಸಾಹಾರದ ಊಟ ಮಾಡುತ್ತಾರೆ. ಈ ಸಂದರ್ಭದಲ್ಲಿ ಬೀಗರು ಸತ್ತವನ ಕುಟುಂಬದ ಹಿರಿಯರಿಗೆ ಸೆರೆಯನ್ನು ಕೊಡುತ್ತಾರೆ.

## ಸಂಚಾರಿ ನಿಘಂಟುಗಳು

"ಲಂಬಾಣಿಗರ ಧಾರ್ಮಿಕ ಕಾರ್ಯಗಳು ಥಾಡಿಯರಿಲ್ಲದೆ ನೆರವೇರುತ್ತಿರಲಿಲ್ಲ. ಅಷ್ಟೊಂದು ಮಹತ್ವದ ಸ್ಥಾನ ಥಾಡಿಯರಿಗೆ ಇತ್ತು. ಲಂಬಾಣಿಗರ ಸಮಾಜವನ್ನು ಜಾಗೃತಗೊಳಿಸು... ಕಾಯಕ ...ವರದಾಗಿತ್ತು. ಥಾಡಿಯರು ಲಂಬಾಣಿಗರ ಸಮಾಜವನ್ನು ಜಾಗೃತಗೊಳಿಸುವ ...ಯಕ ಅವರದಾ...ತ್ತು. ಥಾಡಿಯರು ಲಂಬಾಣಿ ತಂಡಗಳ ಮಧ್ಯೆ ಇಡೀ ರಾತ್ರಿ ಕ... ಹಾಡು

ಧಾರ್ಮಿಕ ಕಥನಗಳನ್ನು ಹಾಡುತ್ತ ಗುಂಪಿನ ಜನರಿಗೆ ಮನರಂಜನೆ ಒದಗಿಸುತ್ತಿದ್ದರು. ಆಯಾ ತಂಡಗಳ ಮಧ್ಯೆ ಹೆಣ್ಣು-ಗಂಡಿನ ಸಂಬಂಧವನ್ನು ಬೆಸೆಯುವಲ್ಲಿ ಥಾಡಿಯರದ್ದು ಮಹತ್ವದ ಪಾತ್ರವಿತ್ತು. ಇವರು ಅಂತಹ ಸಂಚಾರಿ ನಿಘಂಟುಗಳಾಗಿದ್ದರು. ಒಂದು ತಂಡದ ಸುಖ ಸಂತೋಷ, ನೋವು ನಲಿವುಗಳು ಮತ್ತೊಂದು ತಂಡಕ್ಕೆ ಮತ್ತೊಂದು ತಂಡದ ವಿಷಯ ಮಗದೊಂದು ತಂಡಕ್ಕೆ ಹೀಗೆ ತಂಡದಿಂದ ತಂಡಕ್ಕೆ ಸುದ್ದಿ ತಲುಪಿಸುವ ಕಾರ್ಯ ಇವರದಾಗಿತ್ತು.

ದ್ವಿಮುಖಿ ಧರ್ಮದ ಸಂಸ್ಕೃತಿಯನ್ನು ಅಳವಡಿಸಿಕೊಂಡಿರುವ ಥಾಡಿಯರ ಬದುಕು ಇಂದು ಡೋಲಾಯಮಾನ ಸ್ಥಿತಿಯಲ್ಲಿದೆ. ಮೊದಲಿನಂತೆ ಜನರಲ್ಲಿ ಹಾಡುಗಳು ಕೇಳಬೇಕೆಂಬ ಅಭಿರುಚಿ ಉಳಿದಿರುವುದಿಲ್ಲ. ಕಾಳು-ಕಡಿ, ದುಡ್ಡು ಕೊಡುವುದಂತೂ ದೂರ ಉಳಿಯಿತು. ಈ ದಿಶೆಯಲ್ಲಿ ಥಾಡಿಯರ ಬದುಕಿನ ವಿಭಿನ್ನ ಅಂಶಗಳನ್ನು ಪಳೆಯುಳಿಕೆಯ ರೂಪದಲ್ಲಾದರೂ ಹಿಡಿದಿಡುವ ಕಾರ್ಯ ಆಗಬೇಕಾಗಿದೆ.

# ಜನಪದ ಕುಣಿತಗಳು

---

**ಚೆನ್ನಣ್ಣ ವಾಲೀಕಾರ**

### ೧. ಕುಣಿತದ ಅಗತ್ಯತೆ: ಅರ್ಥವ್ಯಾಪ್ತಿ

ಸಿಗ್ಮಂಡ್ ಫ್ರೈಡ್ ಹೇಳುವಂತೆ ಮಲಗಿದಾಗಲೂ ಮನುಷ್ಯನ ಮನಸ್ಸು ಚಲನಶೀಲವಾಗಿರುವುದು. ಆ ಮನಸ್ಸು ಮನುಷ್ಯನ ಅವಯವಗಳನ್ನು ಸದಾ ಕ್ರಿಯೆಯಲ್ಲಿಡುವುದು. ಹಾಗೆ ಕ್ರಿಯೆಯಲ್ಲಿ ಇದ್ದಾಗಲೇ ಮನುಷ್ಯ ಜೀವಂತವಾಗಿರುವನು. ಇಲ್ಲದಿದ್ದರೆ ಅವನು ಶವವಾಗಿರುವನು. ಕುಣಿತದಂಥ ವ್ಯಾಯಾಮ ಇನ್ನೊಂದಿಲ್ಲ.

ಕುಣಿತ ವಿಶ್ವವ್ಯಾಪ್ತಿಯನ್ನು ಹೊಂದಿದೆ. ಪ್ರಕೃತಿಯಲ್ಲಿರುವ ಎಲ್ಲಾ ಪಶುಪಕ್ಷಿ ಪ್ರಾಣಿ ಜೀವ ಜಂತುಗಳು ಒಂದಿಲ್ಲೊಂದು ಬಗೆಯಿಂದ ಕುಣಿತವನ್ನು ಬಯಸುವವು. ಮರಗಿಡ ಬಳ್ಳಿಗಳು ನರ್ತಿಸುವುವು. ಮೋಡ ಮಳೆ, ಸಿಡಿಲು ಮಿಂಚು ಹೊಳೆ ಹಳ್ಳಗಳು ಭಂಗಿ ಪ್ರಕಟಿಸುವವು.

### ೨. ಕುಣಿತಕ್ಕೆ ಮೂಲ

ಮನುಷ್ಯ ಮೂಲತಃ ಅನುಕರಣ ಜೀವಿ. ಪಶು ಪಕ್ಷಿ ಪ್ರಾಣಿಗಳಿಂದ ಭಾಷೆಯನ್ನು ಕಲಿತಂತೆ ಮನುಷ್ಯನ ಕುಣಿತಕ್ಕೆ ಮೂಲ ಪಶುಪಕ್ಷಿ ಪ್ರಾಣಿ ಜೀವಜಂತುಗಳಾಗಿವೆ.

ಉದಾ: ಹುಲಿ ನೃತ್ಯ, ಸಿಂಹನೃತ್ಯ, ಮಂಗ ನೃತ್ಯ, ಕರಡಿ ನೃತ್ಯ, ನವಿಲು ನೃತ್ಯ, ಸರ್ಪ ನೃತ್ಯ.

ನೃತ್ಯದ ಮೂಲ ನಮಗೆ ಆದಿಮಾನವನ ಆರಂಭದ ದಿನಗಳಲ್ಲಿಯೇ ಸಿಗುವುದು. ಸೂರ್ಯಾಸ್ತವಾದಾಗ ಆದಿಮಾನವರೆಲ್ಲ ಗೋಳಾಡುತ್ತ ಗುಹೆ ಗುಡ್ಡ ಗಿಡಮರಗಳಲ್ಲಿ ಕುಳಿತು, ಮತ್ತೆ ಸೂರ್ಯ ಬಂದಾಗ ಎಲ್ಲರೂ ಸೇರಿ ಕುಣಿಯಲು ಪ್ರಾರಂಭಿಸಿದ್ದೆ ಪ್ರಥಮ ನೃತ್ಯವಾಗಿದೆ. ಚಂದ್ರ ಕಾಣಿಸಿಕೊಂಡಾಗ ಕುಣಿದದ್ದು ಎರಡನೆಯ ನೃತ್ಯವಾಗಿದೆ. ಕೆಲವು ಬುಡಕಟ್ಟುಗಳಲ್ಲಿ ನಕ್ಷತ್ರಗಳ ಹೆಸರಿನ ನೃತ್ಯಗಳನ್ನು ಕಾಣುತ್ತೇವೆ.

ಉದಾ: ಸೂರ್ಯ ನೃತ್ಯ, ಗುರು ನೃತ್ಯ, ಮಂಗಳ ನೃತ್ಯ, ಚಂದ್ರ ನೃತ್ಯ, ಶುಕ್ರ ನೃತ್ಯ.

### ೩. ಕುಣಿತದ ಹುಟ್ಟು ಮತ್ತು ಬೆಳವಣಿಗೆ

ಆದಿಮಾನವರು ಸೂರ್ಯಾರಾಧನೆ ಆರಂಭಿಸಿದ ಸಂದರ್ಭದಲ್ಲಿ ಕುಣಿತದ ಹುಟ್ಟಾದರೂ ನಮಗೆ ಅಧಿಕೃತವಾಗಿ ಕುಣಿತದ ಹುಟ್ಟು ಸಿಗುವುದು ಬುಡುಕಟ್ಟಿನ ಕಾಲದಲ್ಲಿ. ಗಿಡದ ಹಣ್ಣು

ಮತ್ತು ಬೇರುಗಳು ತಿನ್ನಲಿಕ್ಕೆ ಸಿಗಲಾರದಾಗ ಹುಟ್ಟಿಕೊಂಡದ್ದು ಬೇಟೆ. ಈ ಬೇಟೆಯು ಒಂದು ವೃತ್ತಿಯಾಗಿ ಪರಿಣಮಿಸಿದಾಗ ಬೇಟೆ ನೃತ್ಯಗಳು ಹುಟ್ಟಿಕೊಂಡವು. ಮನುಷ್ಯನ ಬೆಳವಣಿಗೆಯಾದ ಇಲ್ಲಿ ಪ್ರಮುಖ ಘಟ್ಟಗಳಲ್ಲಿ ನೃತ್ಯದ ಹುಟ್ಟು ಮತ್ತು ಬೆಳವಣಿಗೆ ಆದದ್ದನ್ನು ಕಾಣುತ್ತೇವೆ.

**ಬುಡಕಟ್ಟಿನ ಕಾಲದಲ್ಲಿ**

ಈ ಜನ ಉಪಜೀವನಕ್ಕಾಗಿ ಬೇಟೆ ವೃತ್ತಿ ಕೈಕೊಂಡಾಗ ಹುಟ್ಟಿಕೊಂಡ ನೃತ್ಯಗಳು. ಹುಲಿ ನೃತ್ಯ, ಜಿಗರಿ ನೃತ್ಯ, ಸಿಂಹ ನೃತ್ಯ, ಹಂದಿ ನೃತ್ಯ, ಕರಡಿ ನೃತ್ಯ, ನವಿಲು ನೃತ್ಯ.

**ಪಶುಪಾಲನ ಕಾಲದಲ್ಲಿ**

ಪ್ರಾಣಿಗಳನ್ನು ಸಾಕು ಪ್ರಾಣಿಗಳನ್ನಾಗಿ ಮಾಡಿಕೊಂಡು ಪಾಲನೆ ವೃತ್ತಿ ಕೈಕೊಂಡ ಸಂದರ್ಭದಲ್ಲಿ ಹುಟ್ಟಿಕೊಂಡ ನೃತ್ಯಗಳೆಂದರೆ - ಕುದುರೆ ಕುಣಿತ, ಬಸವನ ಕುಣಿತ, ಕೋಣನ ಕುಣಿತ, ಗೋವಿನ ಕುಣಿತ.

**ಕೃಷಿ ಕಾಲದಲ್ಲಿ**

ಗಿಡದ ಬೇರು ಮತ್ತು ಹಣ್ಣುಗಳು ಸಿಗದಾದಾಗ ಮನುಷ್ಯ ಬೇಟೆ ಆರಂಭಿಸಿದ. ಬೇಟೆಗಳು ಸಿಗದಂತಾದಾಗ ಪಶುಪಾಲನ ವೃತ್ತಿ ನಡೆಸಿದ. ಬರಿ ಪಶುಪಾಲನೆಯಿಂದ ಹೊಟ್ಟೆ ತುಂಬದಂತಾದಾಗ ಒಂದೆಡೆ ನಿಂತು ಕೃಷಿ ಆರಂಭಿಸಿದ. ಆಗ ಕೃಷಿ ಕುಣಿತ. ಹುಟ್ಟಿಕೊಂಡಿತು. ಸುಗ್ಗಿ ಕುಣಿತ, ನಾಟಿ ಕುಣಿತ ಹಲವರು ಸೇರಿ ಒಂದೆಡೆ ನೆಲೆ ನಿಂತ ಪರಿಣಾಮವಾಗಿ ಗ್ರಾಮರಚನೆಯ ಅಗತ್ಯ ತಲೆದೋರಿತು. ಗ್ರಾಮದೇವತೆಗಳ ಪ್ರೀತ್ಯರ್ಥವಾಗಿ ಧಾರ್ಮಿಕ ನೃತ್ಯಗಳು ಹುಟ್ಟಿಕೊಂಡವು.

ಉದಾ: ಪೂಜಾರಿ ಕುಣಿತ, ದುರಗಮುರಗಿ ಕುಣಿತ, ಜೋಗತಿ ಕುಣಿತ, ಪೋತರಾಜನ ಕುಣಿತ.

**ಕೋಟೆ ಕೊತ್ತಳ ಕಾಲದಲ್ಲಿ**

ಗ್ರಾಮ ಮನುಷ್ಯನೇ ಮುಂದೆ ಜನಬಲ, ಧನಬಲದಿಂದ ಬಲಾಢ್ಯನಾದಂತೆ ಕ್ರಮೇಣ ಪಾಳೇಗಾರ, ಸಾಮಂತ, ಮಾಂಡಲಿಕನಾಗಿ ಮುಂದೆ ರಾಜನಾಗಿ ಕೋಟೆಕೊತ್ತಲ ಕಟ್ಟಿಕೊಂಡು ಅವುಗಳ ರಕ್ಷಣೆಗಾಗಿ ಮಾಡುತ್ತಿದ್ದ ಯುದ್ಧ ಅನುಕರಿಸುವ ನೃತ್ಯಗಳು ಹುಟ್ಟಿಕೊಂಡವು.

ಉದಾ: ಯುದ್ಧದ ಕುಣಿತ, ಒಂಟೆ ಕುಣಿತ, ಆನೆ ಕುಣಿತ, ಕುದುರೆ ಕುಣಿತ.

**೪. ಕುಣಿತದ ವರ್ಗೀಕರಣ**

ಜನಪದ ಕುಣಿತಗಳಲ್ಲಿ ಹಲವಾರು ಸಣ್ಣ ಸಣ್ಣ ಪ್ರಕಾರಗಳಿದ್ದರೂ ಪ್ರಮುಖವಾಗಿ ಎರಡು ವರ್ಗಗಳಾಗಿ ವಿಭಜಿಸಲಾಗುವುದು.

**ಧಾರ್ಮಿಕ ಕುಣಿತಗಳು**

ಜೋಗತಿ ಕುಣಿತ, ಡೊಳ್ಳಿನ ಕುಣಿತ, ಪುರವಂತರ ಕುಣಿತ, ದುರಗಮುರಗಿ ಕುಣಿತ, ಪೋತರಾಜನ ಕುಣಿತ, ಮೊಹರಂ ಕುಣಿತ, ಲಂಬಾಣಿ ಕುಣಿತ, ನಂದಿಕೋಲು ಕುಣಿತ, ಕೋಲಾಟ ಕುಣಿತ, ಚಪ್ಪಾಳಿಗೆ ಕುಣಿತ.

### ಮನರಂಜನೆ ಕುಣಿತಗಳು

ಹುಲಿ ಕುಣಿತ, ಕರಡಿ ಕುಣಿತ, ಮಂಗನ ಕುಣಿತ, ಬಸವನ ಕುಣಿತ, ಕೀಲುಕುದುರೆ ಕುಣಿತ, ನವಿಲು ಕುಣಿತ, ಮರಗಾಲು ಕುಣಿತ, ಹಲಗಿ ಕುಣಿತ, ಸುಗ್ಗಿ ಕುಣಿತ.

### ೫. ಕುಣಿತದ ಆಚರಣೆಗಳು ಮತ್ತು ಅವುಗಳ ವಿಧಿ ವಿಧಾನಗಳು

ಜನಪದರ ಕುಣಿತಕ್ಕೆ ಆಚರಣೆಗಳಿವೆ. ವಿಧಿ ವಿಧಾನಗಳಿವೆ. ಸಮಯ ಸಂದರ್ಭಗಳಿವೆ. ಪ್ರತಿ ಕುಣಿತದ ಹಿಂದೆ ಧಾರ್ಮಿಕ, ಸಾಮಾಜಿಕ, ನೈತಿಕ, ಆರ್ಥಿಕ, ಸಾಂಸ್ಕೃತಿಕ ಒತ್ತಾಸೆಗಳಿವೆ.

### ೬. ಧಾರ್ಮಿಕ ಕುಣಿತಗಳ ಆಚರಣೆಗಳು ಮತ್ತವುಗಳ ವಿಧಿವಿಧಾನಗಳು

ಈ ಕಾಲದಲ್ಲಿ ರಾಜಕಾರಣ ಎಷ್ಟು ಪ್ರಾಮುಖ್ಯ ಪಡೆದಿದೆಯೋ ಧರ್ಮ ಇದಕ್ಕೂ ಸಾವಿರಪಟ್ಟು ಮಹತ್ವ ಹೊಂದಿತ್ತು. ಪ್ರತಿಯೊಂದು ಧರ್ಮ ಪ್ರೇರಿತವಾಗಿಯೇ ಸಾಗುತ್ತಿತ್ತು. ಪ್ರಜಾಪಾರ್ಥಗಳಲ್ಲಿ ಧರ್ಮವೇ ಪ್ರಧಾನ ಅಂಗವಾಗಿತ್ತು.

ದೇವರ ಆರಾಧನೆಗಾಗಿ ಹುಟ್ಟಿದ್ದು ಧರ್ಮ. ಎಲ್ಲ ಕಲೆ, ಸಾಹಿತ್ಯ, ಸಂಗೀತಗಳ ಮೂಲ ಗುರಿ ದೇವತಾರಾಧನೆ. ಅದಕ್ಕಾಗಿ ಜನಪದಗಳೆಲ್ಲ ಮೂಲದಲ್ಲಿ ಧಾರ್ಮಿಕ ಆಚರಣೆಗಳನ್ನು ಹೊಂದಿದ್ದವು. ಕಾಲ ಗತಿಸಿದಂತೆ ಕೆಲವಷ್ಟೇ ಮೂಲಸ್ವರೂಪದಲ್ಲಿ ಉಳಿದು, ಉಳಿದವುಗಳು ಮನರಂಜನೆಯ ಕುಣಿತಗಳಾಗಿ ಮಾರ್ಪಟ್ಟಿದ್ದುದನ್ನೂ ಕಾಣುತ್ತೇವೆ.

**ಜೋಗತಿ ಕುಣಿತ:**

ಜೋಗತಿಯರು ಮಾತ್ರ ಎಲ್ಲಮ್ಮದೇವಿಯ 'ಜಗ' ಹೊತ್ತು, ಕೊಡ ಹೊತ್ತು ಚೌಡಕಿ ಬಾರಿಸುತ್ತ ಹಾಡುವರು. ಕುಣಿಯುವರು. ಇದು ಹೆಚ್ಚಾಗಿ ಎಲ್ಲಮ್ಮನ ಜಾತ್ರೆ, ಉತ್ಸವಗಳಲ್ಲಿ ನಡೆಯುವುದು. ಹಿರಿ ಜೋಗತಿ ಚೌಡಿಕೆ ಬಾರಿಸುತ್ತ ಹಾಡಿದರೆ ಕಿರಿ ಜೋಗತಿಯರು ಕೊಡ ಹೊತ್ತು ಎದುರು ಬದುರಾಗಿ ಹಾವಿನಾಕಾರದಲ್ಲಿ ಕುಣಿಯುವರು. ಎಲ್ಲಮ್ಮನ ಜೀವನ ಚರಿತ್ರೆಯನ್ನು ಹೇಳುತ್ತ ಹೇಳುತ್ತ ಆಕೆಯ ಮಹಿಮೆ, ಶಕ್ತಿ ಸಾಹಸ, ಮಾಡಿದ ಪವಾಡಗಳನ್ನು ವಿವರಿಸುವ ಹಾಡು ಹೇಳುತ್ತ ಜಗ ಹೊತ್ತು ಕುಣಿಯುವರು. ಇತ್ತೀಚೆಗೆ ಭಿಕ್ಷಾಟನ ಮಾಡುವಾಗ ಹಾಡುವುದು ಕುಣಿಯುವುದು ಕಾಣುತ್ತೇವೆ. ಜೋಗತಿಯರ ಪ್ರಸಿದ್ಧ ಹಾಡೆಂದರೆ -

ಹುಟ್ಟಿ ಬಂದಿ ಎಲ್ಲಮ್ಮನಾಗಿ
ನಿನ್ನ ಲಗ್ಗನ ಮಾಡಿ ಕೊಟ್ಟಾರವ್ವ ಜಮದಗ್ನಿಗೆ
ರೇಣುಕಾ ರಾಜ ನಿಮ್ಮ ತಂದಿ
ಭೋಗಾವತಿ ನಿಮ್ಮ ತಾಯಿ
ಹಾಕಿ ತೂಗ್ಯಾರ ತೊಟ್ಟಲದಾಗ
ಪದ ಆಯ್ತು ಭೂಮಿಮ್ಯಾಗ

**ಡೊಳ್ಳಿನ ಕುಣಿತ:**

ಇದು ಪ್ರಮುಖವಾಗಿ ಕುರುಬರ ಕುಣಿತವಾಗಿದೆ. ಕುರುಬರು ತಮ್ಮ ಆರಾಧ್ಯ ದೈವವಾದ ಬೀರೆ ದೇವರು, ಮೈಲಾರಲಿಂಗ, ಮಾಳಿಂಗರಾಯನ ಉತ್ಸವಗಳಲ್ಲಿ ಈ ಕುಣಿತ ಕುಣಿಯುವರು.

ಡೊಳ್ಳಾಸುರನಿಂದ ಈ ಡೊಳ್ಳು ಹುಟ್ಟಿಕೊಂಡಿತೆಂದು ಪುರಾಣಗಳು ಹೇಳುವವು. ಕುರಿ

ತೊಗಲಿನಿಂದ ಮಾಡಿದ ಡೊಳ್ಳನ್ನು ಟೊಂಕಕ್ಕೆ ಕಟ್ಟಿಕೊಂಡು ಆರೇಳು ಕುರುಬರು ತಮ್ಮ ದೇವರ ಉತ್ಸವಗಳಲ್ಲಿ ವೃತ್ತಾಕಾರವಾಗಿ ಕುಣಿಯುವರು.

"ಸ್ವಾಮಿ ನಮ್ಮಯ ದೇವರು ಬಂದಾವೆ ಬನ್ನಿರೆ"

ಎಂದು ಹಿರಿಕುರುಬ ತಾಳ ಬಾರಿಸುತ್ತ ಹಾಡುತ್ತ ನಡೆದಂತೆ ಡೊಳ್ಳು ಕಟ್ಟಿಕೊಂಡವರು ಆ ಹಾಡಿಗೆ ತಕ್ಕಂತೆ ಕುಣಿಯುತ್ತ ಹಾಡುವರು. ಇಲ್ಲವೇ ಬರೀ ಬಡಿಯುತ್ತ ಕುಣಿಯುವರು. ಹಿಮ್ಮೇಳದವರು ಹಾಡುವರು.

## ಪುರವಂತರ ಕುಣಿತ:

ಉತ್ತರ ಕರ್ನಾಟಕದಲ್ಲಿ ವೀರಶೈವರಲ್ಲಿ ಪುರವಂತರ ಕುಣಿತ ಪ್ರಸಿದ್ಧವಾಗಿದೆ. ದಕ್ಷಬ್ರಹ್ಮನ ಯಾಗ ನಾಶಪಡಿಸಲು ಶಿವ ತನ್ನ ಹೆಂಡತಿಯಾದ ಸತಿ ಸತ್ತಸೇಡು ತೀರಿಸಿಕೊಳ್ಳಲು ವೀರಭದ್ರನನ್ನು ಕಳಿಸಿಕೊಡುವನು. ವೀರಭದ್ರನು ರೌದ್ರಾವತಾರ ತಾಳಿ ದಕ್ಷನ ಯಾಗ ನಾಶಮಾಡಿ ಅವನ ಸಂಹಾರ ಮಾಡಿಬರುವನು. ಈ ವಸ್ತುವನ್ನು ತೆಗೆದುಕೊಂಡು ಪುರವಂತರು ಹಾಡು ಹಾಡುತ್ತ ಕುಣಿಯುವರು.

ಈ ಪುರವಂತ ಎಂಬ ಪದ ಶಿವನ ಪ್ರಿಯರಿಂದ ಬಂದಿದೆ. ಈ ಪುರವಂತರು ತುಂಬ ಆಕರ್ಷಿತವಾದ ಬಟ್ಟೆ ಧರಿಸುವರು. ಕಾವಿ ರೇಷ್ಮೆ ಧೋತ್ರದ ವೀರಗಾಸೆ ಹಾಕುವರು. ಕಾವಿ ಅಂಗಿ ತೊಡುವರು. ನಡುಕಟ್ಟನ್ನು ಟೊಂಕಕ್ಕೆ ಕಟ್ಟುವರು. ಕೆಲವು ಕಡೆಗೆ ಬರೀ ಪೈಜಾಮ ಧರಿಸಿ ಅವರ ತುದಿಯನ್ನು ಕಾಲಿಗೆ ಬಿಗಿದು ಕಟ್ಟುವರು. ಚುಂಗಗಳಿಂದ ಅಲಂಕಾರ ಮಾಡಿದ ಗಲೀಫದಂಥ ವಸ್ತುವನ್ನು ಮೈಮೇಲೆ ಹಾಕಿಕೊಂಡು ಕಾವಿಯ ರೇಷ್ಮೆ ರುಮಾಲನ್ನು ತಲೆಗೆ ಸುತ್ತಿಕೊಳ್ಳುವರು. ತೋಳಿಗೆ ಬೆಳ್ಳಿಯ ನಾಗರಗಳು, ಎದೆಗೆ ತೀರ್ಥಮುಖಿಗಳು, ದರ್ಪಣ, ನಡುವಿಗೆ ನರಸಿಂಹ ಮುಖಿ ಹಾಗೂ ರುಂಡಮಾಲೆಗಳು, ಕೈ ಮಣಿಕಟ್ಟಿಗೆ ರುದ್ರಾಕ್ಷಿ, ಪಕ್ಕದಲ್ಲಿ ಸಣ್ಣ ರಕ್ಷಾ ಜೋಳಿಗೆ, ಹಣೆಗೆ ವಿಭೂತಿ, ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ನಿಂಬೆಹಣ್ಣು ಸಿಕ್ಕಿಸಿದ ಕತ್ತಿ ಇರುವುದು. ಇಲ್ಲವೆ ಅಂಗಾಂಗಗಳಲ್ಲಿ ಚುಚ್ಚಿಕೊಳ್ಳುವ ತಾಮ್ರದ ಕಡ್ಡಿಗಳು ಇರುವವು.

ಸಂಬಾಳದವರು ಬಾಜಯುವರು ಬಾರಿಸಿದಂತೆ ಪುರವಂತರು ಕುಣಿಯುವರು. ವೀರಭದ್ರನ ಸಾಹಸ ಕುರಿತಾದ ಹಾಡು ಹೇಳುವರು. ಹಾಗೆ ಹಾಡು ಹೇಳುತ್ತ ಹೇಳುತ್ತ ಉಗ್ರ ರೂಪ ತಾಳಿ ಗಲ್ಲಕ್ಕೆ ಕಣ್ಣು, ರೆಪ್ಪೆಗೆ, ಕಿವಿಗೆ, ಕೊರಳಿಗೆ ಶಸ್ತ್ರ ಹಾಕಿಕೊಳ್ಳುವರು. ಪುರವಂತರು ಆವೇಶದಲ್ಲಿ ಒಡಪು ಹೇಳುತ್ತ ಹಾಡು ಹಾಡುತ್ತ ಶಸ್ತ್ರ ಹಾಕಿಕೊಳ್ಳುವ ದೃಶ್ಯ ನೋಡುವಂಥದ್ದು. ಉಳಿಯುತ್ತಿರುವ ಗುಗ್ಗಳದ ಮೇಲೆ ಮನಸ್ಸು ಕೇಂದ್ರಿಕರಿಸಿ ಶಸ್ತ್ರ ಹಾಕಿಕೊಂಡು ತೆಗೆದ ಬಳಿಕ, ರಕ್ತ ಬರದಿರಲು ಆ ಭಾಗಕ್ಕೆ ವಿಭೂತಿ ಹಚ್ಚುವರು.

## ದುರಗಮುರಗಿ ಕುಣಿತ:

ಬುರು ಬುರು ಆಡಿಸುವವರಿಗೆ ದುರಗಮುರಗಿಯರೆನ್ನುವರು. ಇವರು ಬುಡಕಟ್ಟಿನವರು. ದುರಗಮ್ಮ, ಮರಗಮ್ಮನಿಗೆ ಇವರು ಆರಾಧಿಸುವುದರಿಂದ ಇವರಿಗೆ ದುರಗಮುರಗಿಯರೆಂಬ ಹೆಸರು ಬಂದಿದೆ.

ಹೆಣ್ಣು ಮಕ್ಕಳು ತಲೆಯ ಮೇಲೆ ದುರಗಮ್ಮ ಮರಗಮ್ಮನ ಮೂರ್ತಿಗಳನ್ನು ಬುಟ್ಟಿಯಲ್ಲಿ ಇಟ್ಟುಕೊಂಡು ಟೊಂಕಕ್ಕೆ ಸಣ್ಣಪ್ರಮಾಣದ ಡೋಲು ಕಟ್ಟಿಕೊಂಡು ಬಡಿಯುತ್ತ -

ತಾಯಿ ಬಂದಾಳ ಬರ್ರೆವ್ವ
ಮರಗಮ್ಮ ಬಂದಾಳ ಬರ್ರೆವ್ವ
ದುರಗಮ್ಮ ಬಂದಾಳ ಬರ್ರೆವ್ವ
ನಿಮ್ಮವ್ವ ಬಂದಾಳ ಬರ್ರೆವ್ವ

ಎಂದು ಬಡಿಯುತ್ತ ಹಾಡುತ್ತ ಊರೂರು, ಕೇರಿ ಕೇರಿ ತಿರುಗುತ್ತಾರೆ.

**ಪೋತರಾಜನ ಕುಣಿತ:**

ಹೋತವನ್ನು ಕೊಯ್ಯುವವನಿಗೆ ಪೋತರಾಜನೆನ್ನುವರು. ಇವರು ದುರಗಮುರಗಿಯರವನು. ದುರಗಮ್ಮ ಮರಗಮ್ಮನ ಮುಂದೆ ಹಲ್ಲಿನಿಂದ ಹೋತವನ್ನು ಹರಿದುಹಾಕುತ್ತಾನೆ.

ದುರಗಮುರಗಿಯರ ಹೆಣ್ಣುಮಕ್ಕಳು ತಲೆಯ ಮೇಲೆ ದುರಗಮ್ಮ ಮುರಗಮ್ಮರ ಮೂರ್ತಿಗಳು ಬುಟ್ಟಿಯಲ್ಲಿಟ್ಟುಕೊಂಡು ಟೊಂಕಕ್ಕೆ ಸಣ್ಣ ಪ್ರಮಾಣದ ಡೋಲು ಕಟ್ಟಿಕೊಂಡು ಬಡಿಯುತ್ತ ಹಾಡುತ್ತ ಹೊರಟಾಗ ಪೋತರಾಜ ಸಡ್ಡು ಹೊಡೆದುಕೊಳ್ಳುತ್ತ ಕುಣಿಯುವನು. ಇಲ್ಲವೆ ಮುಖಕ್ಕೆ ವೀರನ ಮುಖವಾಡ ಹಾಕಿಕೊಂಡು

ಡಗ್ಗಗ ತಕ್ಕ ಡಿಗ್ಗಗ ತಕ್ಕ
ಡಿಗ್ಗಗ ತಕ್ಕ ಡಿಗ್ಗಗ ತಕ್ಕ

ಎಂದು ಕುಣಿಯುತ್ತ ನಿಲ್ಲುವನು.

**ಮೊಹರಂ ಕುಣಿತ:**

ಮೊಗಲರ ಪ್ರಮುಖ ರಾಜನಾದ ಅಕ್ಬರನು ತನ್ನ ಸಾಮ್ರಾಜ್ಯ ಸುಸೂತ್ರವಾಗಿ ಸಾಗಲು ಹಿಂದು-ಮುಸ್ಲಿಂರಲ್ಲಿ ಐಕ್ಯ ಸಾಧಿಸಲು ದೀನ್‌ಇಲಾಹಿ ಪಂಥ ಆರಂಭಿಸಿದನು. ಇದರ ಪರಿಣಾಮ ಏಳನೆಯ ಶತಮಾನದಲ್ಲಿ ಅರಬಸ್ಥಾನದಲ್ಲಿ ನಡೆದ ಮೊಹರಂ ಕಾಳಗದ ನೆನಪಿಗಾಗಿ ಮೊಹರಂ ಹಬ್ಬ ಆಚರಿಸಲು ಅರಂಭಿಸಿದರು. ಇದರಲ್ಲಿ ಮುಸ್ಲೀಮರೊಂದಿಗೆ ಹಿಂದುಗಳು ಸೇರಿಕೊಂಡು ಈ ಹಬ್ಬ ಆಚರಿಸತೊಡಗಿದರು. ಈ ಹಬ್ಬದಾಚರಣೆಯಲ್ಲಿ ಬಂದದ್ದು ಮೊಹರಂ ಕುಣಿತವಾಗಿದೆ. ಇದಕ್ಕೆ ಅಲಾಯಿ ಹೆಜ್ಜೆಗಳು ಎನ್ನುವರು.

ಈ ಕುಣಿತದಲ್ಲಿ ೨೦ರಿಂದ ೩೦ರ ವಯಸ್ಸಿನ ಜನ ಸೇರುವರು. ಇದರಲ್ಲಿ ೧೧ರಿಂದ ೨೦ರವರೆಗೆ ಜನ ಇರುವರು. ಉಳಿದವರು ವಾದ್ಯ ನುಡಿಸುತ್ತ ಹಾಡು ಹಾಡುವರು. ಕುಣಿವರು ಮೊಣಕಾಲಿನ ತನಕ ಏರಿಸಿದ ಕಚ್ಚೆ, ಪಂಚೆ, ಲುಂಗಿ ಕಟ್ಟಿಕೊಳ್ಳುವರು. ಟೊಂಕಕ್ಕೆ ಬಣ್ಣದ ವಸ್ತ್ರ ಧರಿಸುವರು. ಕಾಲಿಗೆ ಗೆಜ್ಜೆ ಕಟ್ಟಿಕೊಳ್ಳುವರು. ಕೈಯಲ್ಲಿ ಬಿಳಿಬಟ್ಟೆ ಹಿಡಿಯುವರು.

ಜಡೆ ಕೋಲಾಟದ ಮಾದರಿಯಲ್ಲಿ ಇವರು ಮೇಲೆ ಕಟ್ಟಿದ ಹಗ್ಗವನ್ನು ಹಿಡಿದು ಕುಣಿಯುತ್ತ ಸುತ್ತ ತಿರುಗುತ್ತ ಜಡೆ ಹಾಕುತ್ತ ಹೋಗುವರು. ಜಡೆ ಹಾಕುವದು ಮುಗಿದ ಮೇಲೆ ಮತ್ತೆ ಕುಣಿಯುತ್ತ ಸುತ್ತ ತಿರುಗುತ್ತ ಹಾಕಿದ ಜಡೆ ಬಿಚ್ಚುವರು. ಇದರಲ್ಲಿ ಹಲಗೆ ಮುಖ್ಯ ವಾದ್ಯವಾಗಿರುವುದು.

**ಲಂಬಾಣಿ ಕುಣಿತ:**

ಲಂಬಾಣಿ ಸ್ತ್ರೀಯರು ತಮ್ಮ ತಾಂಡಾಗಳಲ್ಲಿ ತಮ್ಮ ಜನಾಂಗದ ಮದುವೆ ಮಂಗಲಕಾರ್ಯಗಳಲ್ಲಿ

ಹಬ್ಬ ಹುಣ್ಣಿಮೆಗಳಲ್ಲಿ ವೃತ್ತಾಕಾರವಾಗಿ ಸೇರಿ ಹಲಗೆ ವಾದನ ನಾದಕ್ಕೆ ತಕ್ಕಂತೆ ಕುಣಿಯುವರು. ಕೆಲವೊಂದು ಸಲ ಕೈ ಕೈ ಒಬ್ಬರಿಗೊಬ್ಬರು ಹಿಡಿದುಕೊಂಡು ಕುಣಿಯುವರು.

ಲಂಬಾಣಿ ಸ್ತ್ರೀಯರು ಬರೀ ಕುಣಿಯುವದಿಲ್ಲ. ಕುಣಿತದ ಜೊತೆಗೆ ಹಾಡು ಹಾಡುವರು. ಆ ಹಾಡಿಗೆ ತಕ್ಕಂತೆ ಅವರ ಗಂಡಸರು ಹಲಗೆ ವಾದ್ಯ ನುಡಿಸುವರು. ಧರಿಸಿರುವ ಬಣ್ಣ ಬಣ್ಣದ ಬಟ್ಟೆಗಳಲ್ಲಿ ವಸ್ತುವಡವೆ ಅಲಂಕಾರಗೊಂಡ ಅವರನ್ನು ನೋಡುವದೆಂದರೆ ಕಣ್ಣಿಗೆ ಹಬ್ಬವಾಗಿರುವುದು. ಲಂಬಾಣಿ ಕುಣಿತವೆಂದರೆ ಅವರ ಸ್ತ್ರೀಯರ ಕುಣಿತವಾಗಿದೆ.

**ನಂದಿಕೋಲು ಕುಣಿತ:**

ಈ ನಂದಿಕೋಲಿನ ಕುಣಿತ ಹೆಚ್ಚಾಗಿ ನಡೆಯುವುದು ಹರಕೆ ಹೊತ್ತದ್ದು ತೀರಿಸುವಾಗ, ರಥೋತ್ಸವ ನಡೆದಾಗ, ಗುರುಗಳನ್ನು ಮನೆಗೆ ಕರೆಸುವಾಗ, ಧಾರ್ಮಿಕ ಪೂಜೆ ಆಚರಣೆಗಳನ್ನು ನೆರವೇರಿಸುವಾಗ.

ನಂದಿಕೋಲು ಕುಣಿತಕ್ಕೆ ಪೌರಾಣಿಕ ಕಥೆ ಇದೆ. ದಕ್ಷಬ್ರಹ್ಮನ ಮಗ ಸಂಹಾರ ಮಾಡುತ್ತ ಮಾಡುತ್ತ ವೀರಭದ್ರ ಯಾಗ ಮಾಡಲು ಬಂದಿದ್ದ ಅದ್ವತರನ್ನೂ ಕೊಂದನು. ಅವರೆಲ್ಲರೂ ಶಿವಭಕ್ತರಾಗಿದ್ದರು.

ರಥ ಎಳೆಯುವಾಗ ನಂದಿಕೋಲು ಹಿಡಿದು ಕೊಂಡವನು ಭಜನೆಯ ಹಾಡಿಗೆ, ತಾಳಕ್ಕೆ ಮದ್ದಲೆಯ ವಾದ್ಯಕ್ಕೆ ಸರಿಯಾಗಿ ಕುಣಿಯುತ್ತ ಮುಂದೆ ಮುಂದೆ ಹೊರಡುವನು. ನಂದಿಕೋಲು ಹಿಡಿದುಕೊಂಡವನು ನಂದಿಕೋಲನ್ನು ಮೇಲೆ ಮೇಲೆ ಎತ್ತುತ್ತ ಕುಣಿಯುತ್ತಾ ಹೋಗುವುದನ್ನು ಜನ ಹರ್ಷದಿಂದ ನೋಡುವರು.

**ಕೋಲಾಟ ಕುಣಿತ:**

ಹೆಚ್ಚಾಗಿ ಕೋಲಾಟಗಳನ್ನು, ನಮ್ಮಲ್ಲೆಲ್ಲಾ ವಿಶೇಷವಾಗಿ, ಹಬ್ಬ ಹರಿದಿನಗಳಲ್ಲಿ ಆಡುವರು. ಊಟವಾದ ಬಳಿಕ ಸಂಜೆ ಹೊತ್ತು ದೇವರ ಗುಡಿ ಮುಂದೆ ಈ ಆಟ ಆಡುವರು. ಹತ್ತರಿಂದ ಇಪ್ಪತ್ತರವರೆಗೆ ಹರೆಯದವರು ಸೇರುವರು. ಕೆಲವರು ಚಡ್ಡಿ ಹಾಕುವರು, ಇಲ್ಲವೆ ಮೊಣಕಾಲಿನವರಿಗೆ ಎತ್ತಿ ಕಟ್ಟಿದ ಪಂಚೆ, ಒಳಗಿನ ಸೊಂಟಕ್ಕೆ ಒಂದು ವಸ್ತ್ರ ಮತ್ತು ಕಾಲಿಗೆ ಗೆಜ್ಜೆ ಕಟ್ಟಿಕೊಳ್ಳುವರು.

ಕಾರೆ, ಅರೆ ಬಣ್ಣೆ ಮುಂತಾದ ಮರಗಳಿಂದ ಕೋಲು ಮಾಡುವರು. ಇವುಗಳಿಗೆ ಬಣ್ಣ ಹಚ್ಚುವರು. ಕೋಲಾಟದಲ್ಲಿ ಕುಣಿಯುವವರು ವೃತ್ತಾಕಾರವಾಗಿ ನಿಲ್ಲಲು ಕಾರಣ ಬುಡಕಟ್ಟಿನವರು ಮರಗಳು ವೃತ್ತಾಕಾರದಲ್ಲಿ ಇದ್ದದ್ದು ನೋಡಿದ್ದು ಎಂದು ಡಾ. ಚಂದ್ರಶೇಖರ ಕಂಬಾರರು ತಮ್ಮ ಕನ್ನಡ ಜಾನಪದ ವಿಶ್ವಕೋಶದಲ್ಲಿ ಹೇಳುವರು.

ವೃತ್ತಾಕಾರದಲ್ಲಿ ಕೊಲು ಹಾಕುವವರಿದ್ದರೆ ಮಧ್ಯದಲ್ಲಿ ಮುಖ್ಯ ಗಾಯಕನಿರುವನು. ಅವನ ಜೊತೆ ಮದ್ದಲೆ ಬಡಿಯುವವ, ತಾಳ ಹಾಕುವವ ಇರುವನು. ಕೋಲಾಟದಲ್ಲಿ ಹಲವಾರು ಪ್ರಕಾರಗಳಿವೆ. ಇವುಗಳಲ್ಲಿ ಜಡೆ ಕೋಲು ನಮ್ಮಲ್ಲಿ ಹೆಸರಾಗಿದೆ.

**ಚಪ್ಪಳಿಗೆ ಕುಣಿತ:**

ಹಬ್ಬ ಹುಣ್ಣಿಮೆಗಳಲ್ಲಿ ರಾತ್ರಿ ಹೊತ್ತು ತಮ್ಮ ಅಂಗಳದಲ್ಲಿ ಹೆಣ್ಣುಮಕ್ಕಳು ಸೇರಿಕೊಂಡು ಚಪ್ಪಳಿಗೆ ಹಾಕುತ್ತ ಹಾಡುತ್ತ ಕುಣಿಯುವರು. ಹಾಡಿನಲ್ಲಿರುವ ಕೋಲು ಎಂಬ ಪದ ನೋಡಿದರೆ

ಈ ಹಿಂದೆ ಕೋಲು ಹಾಕುತ್ತ ಹೆಣ್ಣುಮಕ್ಕಳು ಕುಣಿಯುತ್ತಿದ್ದರೆಂದು ಗೊತ್ತಾಗುವುದು. ಕೋಲು ಹಾಕಿ ಕುಣಿಯುವದು ಗರತಿಯರಿಗೆ ಸರಿಯಲ್ಲವೆಂದು ಆಗಿನ ಕಾಲದ ಹಿರಿಯರು ಹೇಳಿದ್ದಕ್ಕೆ ಕೋಲಿನ ಬದಲಿಗೆ ಕೈ ಚಪ್ಪಾಳೆ ಹಾಕುತ್ತ ಹಾಡುತ್ತ ಕುಣಿಯುವದು ಆರಂಭಿಸಿರಬೇಕೆನ್ನಿಸಿರುವುದು. ಹೆಚ್ಚಾಗಿ ದಸರೆ, ದೀಪಾವಳಿ, ಶಿವರಾತ್ರಿ, ಉಗಾದಿ, ನಾಗರಪಂಚಮಿ ಹಬ್ಬದಲ್ಲಿ ಹೆಣ್ಣುಮಕ್ಕಳು ಚಪ್ಪಳಿಗೆ ಹಾಕುತ್ತ ಹಾಡು ಹಾಡುತ್ತ ಕುಣಿಯುವರು.

ದೀಪಾವಳಿ ಹಬ್ಬದಲ್ಲಿ ಸಂಜೆ ಹೊತ್ತು ತಮ್ಮ ಕೇರಿಯ ಅಂಗಳದಲ್ಲಿ ಎಂಟರಿಂದ ಹದಿನಾರರವರೆಗೆ ಸ್ತ್ರೀಯರು ವರ್ತುಳಾಕಾರವಾಗಿ ಸೇರುವರು. ಮುಂದೆ ಇಬ್ಬರು ಹಾಡುವರು ಉಳಿದವರು ಪಲ್ಲವಿಯನ್ನು ಹಾಡುತ್ತ ಚಪ್ಪಳಿಗೆ ಹಾಕುತ್ತ ಕಾಲುಗಳನ್ನು ಕುಣಿಸುವರು.

ಆ ಕುಂಬಿ ಜರದಾವ ಈ ಕುಂಬಿ ಜರದಾವ
ಮ್ಯಾಳಗಿ ಕುಂಬಿ ಜರದಾವ ಕೋಲೆ
ಮ್ಯಾಳಗಿ ಕುಂಬಿ ಜರದಾವ ಗೌರಮ್ಮ
ಮಕ್ಕಳಿಲ್ಲಂಥ ಸರದಾಳ ಕರಿದಾಳ ಕೋಲೆ
ಗೌಡರ ಮನೆ ಮುಂದ ಜಾಡಲ ಗಿಡ ಹುಟ್ಟಿ
ಜಾಡಲಕೆಲ್ಲ ಜಗಜಂಪಿ
ಜಾಡಲಕ್ಕೆಲ್ಲ ಜಗಜಂಪಿ ಗೌರಮ್ಮ
ಮಕ್ಕಳಿಲ್ಲಂತ ಸರಿದಾಳ ಕೋಲೆ

## ಮನರಂಜನೆಯ ಕುಣಿತಗಳು ಆಚರಣೆಗಳು ಮತ್ತವುಗಳ ವಿಧಿ ವಿಧಾನಗಳು

ಎಲ್ಲ ಜನಪದ ಕುಣಿತಗಳು ಹುಟ್ಟಿದ್ದೆ ಧಾರ್ಮಿಕಾಚರಣೆಗಳಲ್ಲಿ. ಕಾಲ ಬದಲಾದಂತೆ ಪರಿಸರ ಪ್ರಸಂಗಗಳಿಗೆ ತಕ್ಕಂತೆ ಕೆಲವು ಧಾರ್ಮಿಕ ಕುಣಿತಗಳು ಆ ಆಚರಣೆಕಳಚಿಕೊಂಡು ಮನರಂಜನೆಯ ಕುಣಿತಗಳಾಗಿ ಮಾರ್ಪಟ್ಟದ್ದು ಕಾಣುತ್ತೇವೆ. ಊಳಿಗಮಾನ್ಯ ಕಾಲದಲ್ಲಿ ಆಳರಸರ ಕಾಲದಲ್ಲಿ ದೇಶಪಾಂಡೆ, ದೇಶಮುಖಿ ಜಹಾಗೀರದಾರ, ಜಮೀನ್ದಾರ, ಸುಭೇದಾರ, ದೇಶಮಾನ್ಯರ ಕಾಲದಲ್ಲಿ ಐಷಾರಾಮ ಹೆಚ್ಚಾದಾಗ ಆ ಜನರ ಸುಖಸಂತೃಪ್ತಗಾಗಿ ಮನರಂಜನೆಗಾಗಿ ಕೆಲ ಧಾರ್ಮಿಕ ಕುಣಿತಗಳನ್ನು ಮನರಂಜನೆಯ ಕುಣಿತಗಳನ್ನಾಗಿ ಮಾಡಿದರು.

ಉದಾ: ಹುಲಿಕುಣಿತ, ಕರಡಿ ಕುಣಿತ, ಬಸವನ ಕುಣಿತ, ಹಲಗಿ ಕುಣಿತ, ಮಂಗನ ಕುಣಿತ, ಕೀಲುಕುದುರೆ ಕುಣಿತ, ನವಿಲು ಕುಣಿತ, ಮರಗಾಲು ಕುಣಿತ, ಸುಗ್ಗಿ ಕುಣಿತ.

**ಹುಲಿಕುಣಿತ:**

ಬುಡಕಟ್ಟಿನ ಕಾಲದಿಂದ ಹುಲಿಕುಣಿತ ಬಂದದ್ದು ತಿಳಿದು ಬರುವುದು. ಆ ಕಾಲದಲ್ಲಿ ಆಹಾರಕ್ಕಾಗಿ ಬೇಟೆಯಾಡಲು ತೊಂದರೆ ನೀಡುತ್ತಿದ್ದ ಹುಲಿಗಳನ್ನು ವಶಪಡಿಸಿಕೊಳ್ಳಲು, ಒಲಿಸಿಕೊಳ್ಳಲು ಹುಲಿಯಾರಾಧನೆ ಆರಂಭಿಸಿದ್ದು ಕಾಣುತ್ತೇವೆ. ಬೇಟೆಯಾಡಿ ಬಂದ ಮೇಲೆ ತಂದ ಬೇಟೆಯನ್ನು ಕಡಿದು ಅಡಿಗೆ ಮಾಡಿ ದೇವರಿಗೆ ನೈವೇದ್ಯ ಅರ್ಪಿಸಿ ಹುಲಿ ವೇಷ ಹಾಕಿ ದೇವರೆದುರಿಗೆ ಕುಣಿಯುತ್ತಿದ್ದರು. ತಮ್ಮೊಳಗೆ ಹುಲಿಯನ್ನು ಅಹ್ವಾನಿಸಿ ತಾವೇ ಹುಲಿಗಳಾದಂತೆ ಕುಣಿಯುತ್ತಿದ್ದರು.

ಮುಂದೆ ಊಳಿಗಮಾನ್ಯ ಕಾಲದಲ್ಲಿ ಒಡೆಯನ ಸಂತೋಷಕ್ಕಾಗಿ ಆಳುಗಳು ಹುಲಿವೇಷ ಹಾಕಿ ಅವನ ಮನರಂಜನೆಗೆ ಕುಣಿಯತೊಡಗಿದರು. ಹೋಳಿ ಹುಣ್ಣಿಮೆ ಕಾಲದಲ್ಲಿ ಈಗಲೂ ಹುಲಿವೇಷ ಹಾಕಿ ಕುಣಿಯುತ್ತ ಜನಮನ ರಂಜಿಸುತ್ತ ಊರ ತುಂಬ ತಿರುಗಾಡುತ್ತ ಜನರಿಂದ

ದವಸಧಾನ್ಯ, ದುಡ್ಡು ಪಡೆಯುವುದು, ಊಳಿಗಮಾನ್ಯ ಕಾಲದ ನೆನಪು ತರುವುದು.

**ಕರಡಿ ಕುಣಿತ:**

ಕರಡಿ ಕುಣಿತ ಪಶುಪಾಲನೆ ಕಾಲದಲ್ಲಿ ಹುಟ್ಟಿಕೊಂಡದ್ದು. ರಾಮಾಯಣ ಕಾಲದಲ್ಲಿ ಬರುವ ಜಾಂಬುವಂತ ಒಂದು ಕರಡಿಯಾಗಿದೆ. ಕ್ರೂರ ಪ್ರಾಣಿಗಳಾದ ಕಾಡ್ಕೋಣ, ಕಾಡ್ಕುದುರೆ ಒಲಿಸಿ ವಶಪಡಿಸಿಕೊಂಡಂತೆ ಕರಡಿಯನ್ನು ವಶಪಡಿಸಿಕೊಂಡು ಒಲಿಸಿಕೊಂಡು ಸಾಕಿ ಸಲಹಿ ಅದನ್ನು ಕುಣಿಸುತ್ತ ಜನಮನ ರಂಜಿಸುತ್ತ ದವಸಧಾನ್ಯ ಸಂಪಾದಿಸುವ ಸಂಪ್ರದಾಯ ಪ್ರಾಚೀನ ಕಾಲದಿಂದ ಬಂದಿದೆ.

ಮೊದಲು ಕರಡಿ ಆರಾಧನೆಗಾಗಿ ಕರಡಿ ವೇಷ ಹಾಕಿ ಕುಣಿಯುತ್ತ ಬಂದದ್ದು ಕಾಣುತ್ತದೆ. ಪಶುಪಾಲನೆ ವೃತ್ತಿಯ ಕಾಲಹೋಗಿ ಗ್ರಾಮೀಣ ಕಾಲಬಂದಾಗ ಊಳಿಗಮಾನ್ಯ ಪದ್ಧತಿ ಕಾಣಿಸಿಕೊಂಡಾಗ ಧಾರ್ಮಿಕ ಆಚರಣೆಯಲ್ಲಿ ಬರುತ್ತಿದ್ದ ಕರಡಿ ಕುಣಿತ ಜನ ಮನರಂಜನೆಯ ಕುಣಿತವಾಗಿ ಪರಿವರ್ತನೆಗೊಂಡದ್ದು ತಿಳಿದು ಬರುವುದು.

**ಮಂಗನ ಕುಣಿತ:**

ಇವತ್ತಿನ ಹನುಮಂತ ದೇವರು ಮಂಗನ ಪ್ರತೀಕವಾಗಿದ್ದಾನೆ. ಈ ಕುಣಿತ ಪಶುಪಾಲನೆ ಕಾಲದಲ್ಲಿ ಬೆಳೆದು ಬಂದಿದೆ. ನಮ್ಮ ದೇಶದ ಮಹಾನ್ ಗಾಯಕಿಯಾದ ಲತಾ ಮಂಗೇಶಕರ ಅವರು ಮಂಗೇಶ ದೇವರ ಭಕ್ತರು. ಮೊದಲು ಈ ಮನೆತನದ ಗಾಯನ ಈ ದೇವರ ಸೇವೆಗೆ ಮೀಸಲಾಗಿತ್ತು. ಮಂಗನನ್ನು ಒಲಿಸಿಕೊಳ್ಳಲು ಪಶುಪಾಲನ ಕಾಲದ ಮಾನವ ಮಂಗನ ಆರಾಧನೆಗೆ ತೊಡಗಿದ. ಮಂಗನ ವೇಷ ಹಾಕಿ ಆ ದೇವರೆದುರು ಕುಣಿಯುವರು ಆರಂಭಿಸಿದ. ಊಳಿಗಮಾನ್ಯ ಕಾಲದಲ್ಲಿ ಮೊದಲು ಧಾರ್ಮಿಕ ಕುಣಿತವಾಗಿದ್ದ ಮಂಗನ ಕುಣಿತ ಈಗ ಮನರಂಜನೆಯ ಕುಣಿತವಾಗಿ ಮಾರ್ಪಟ್ಟಿತ್ತು. ಅದಕ್ಕಾಗಿ ಈಗಲೂ ಹೋಳಿಹುಣ್ಣಿಮೆ ದಿನಗಳಲ್ಲಿ ಮಂಗನ ವೇಷ ಹಾಕಿ ಕುಣಿಯುತ್ತ ಜನಮನ ರಂಜಿಸುತ್ತ ದವಸಧಾನ್ಯ ದುಡ್ಡು ಪಡೆಯುವರನ್ನು ಇವತ್ತಿಗೂ ಕಾಣುತ್ತೇವೆ.

**ಬಸವನ ಕುಣಿತ:**

ಪಶುಪಾಲನ ಕಾಲದಿಂದಲೇ ಬಸವನ ಕುಣಿತ ಜಾರಿಯಲ್ಲಿ ಬಂದದ್ದು ತಿಳಿದು ಬರುವುದು. ಮೊದಲಿನಿಂದ ಬಸವ ಕ್ರೂರ ಪ್ರಾಣಿಯಲ್ಲ. ಭೂಮಿಯನ್ನು ಉತ್ತುವ ಬಿತ್ತುವ ಬೆಳೆಸುವ ದೈವದ ವಸ್ತುವೆಂದು ಬಸವನನ್ನು ಇಂದಿಗೂ ಹಬ್ಬ ಹುಣ್ಣಿಮೆಗಳಲ್ಲಿ ಪೂಜಿಸುವದು ಆರಾಧಿಸುವದು ಕಾಣುತ್ತೇವೆ.

ಬಸವನ ಕುಣಿತದಲ್ಲಿ ಯಾರೂ ಬಸವನ ವೇಷ ಹಾಕುವುದಿಲ್ಲ. ಬಸವನಿಗೆ ಸಿಂಗರಿಸಿ ಮೆರೆಸುವುದು ಮೊದಲಿತ್ತು. ಇದನ್ನು ನಾವು ಇಂದಿಗೂ ಕೋಡಿಗೆ ಬ್ಯಾಗಡಿ ಹಚ್ಚಿ ಮೈಯಿಗೆ ಬಣ್ಣದ ಚಿತ್ರ ಬರೆಸಿ ಮೈತುಂಬ ಥಳಥಳ ಹೊಳೆವ ಜೂಲ ಹಾಕಿ ಕಾರಹುಣ್ಣಿಮೆ ಹಬ್ಬದಲ್ಲಿ ಊರತುಂಬ ಮೆರೆಸುವದು ಕಾಣುತ್ತೇವೆ.

ಮೊದಲು ದೈವ ಹಿನ್ನೆಲೆ ಹೊಂದಿದ ಬಸವನ ಮೆರವಣಿಗೆ, ಕುಣಿತವನ್ನು ಊಳಿಗಮಾನ್ಯ ಕಾಲದಲ್ಲಿ ಬದಲಾಯಿತು. ಬಾಲಸಂತಾನರು ಎತ್ತುಗಳಿಗೆ ಸಿಂಗರಿಸಿ ಹೊಸ ಬಳೆ ಹಾಕಿ ಊರೂರು ಕೇರಿ ಕೇರಿ ಕುಣಿಸುತ್ತ ಬದುಕು ಸಾಗಿಸುವುದು ಇಂದಿಗೂ ಹಳ್ಳಿಗಳಲ್ಲಿ ಕಾಣುತ್ತೇವೆ.

### ಕೀಲು ಕುದುರೆ ಕುಣಿತ:

ಹಬ್ಬ, ಉತ್ಸವ, ಜಾತ್ರೆ ಮುಂತಾದ ಮಂಗಲ ಕಾರ್ಯಗಳಲ್ಲಿ ಕೀಲುಕುದುರೆ ಕುಣಿತ ಕುಣಿಯುವರು. ಇದು ಜನಪದ ಕಥೆಯಲ್ಲಿ ಬರುವ ವಸ್ತು. ರಾಜಕುಮಾರ ತನ್ನ ಪ್ರಿಯತಮೆಗೆ ಇಲ್ಲವೆ ರಾಜಕುಮಾರಿಗೆ ಏಳು ಉಪ್ಪರಿಗೆಯ ಮೇಲಿನಿಂದ ಅಪಹರಿಸಿಕೊಂಡು ಬರಲು ಈ ಕುದುರೆಯನ್ನು ಬಳಸುವನು. ಕೆಲವು ರಾಜಕುಮಾರರು ದೇಶ ಸಂಚಾರಕ್ಕೆ ಈ ಕುದುರೆಯನ್ನು ಬಳಸುವರು. ಈ ಕುದುರೆಯನ್ನು ಬಿದರಿನ ಬುಟ್ಟಿಯಿಂದ ತಯಾರಿಸುವರು. ಬಿದರಿನ ತೆಳುವಾದ ಬುಟ್ಟಿಯಿಂದ ಕುದುರೆಯನ್ನು ಆಕಾಶದಲ್ಲಿ ಹಾರುವಂತೆ ಹೊಟ್ಟೆ ಎದೆ, ಹಿಂಭಾಗದ ಭಾಗವನ್ನು ತಯಾರಿಸುವರು. ಅಕ್ಕಸಾಲಿಗ ಇಲ್ಲವೆ ಚಿತ್ರಕಾರರು ಕಾಗದದ ಹಿಟ್ಟಿನಿಂದ ಕುದುರೆಯ ತಲೆಯನ್ನು ತಯಾರಿಸುವರು. ಜೊಳ್ಳಾದ ತಲೆಯ ಭಾಗಕ್ಕೆ ಸ್ವಾಭಾವಿಕ ಬಣ್ಣ ಬಳೆದು ಕುದುರೆಯ ಬಿದರಿನ ಮುಂಡಕ್ಕೆ ಸೇರಿಸುವರು. ಕುದುರೆಯನ್ನು ಕುಣಿಸುವಾಗ ಅದರ ನಾಲಗೆಯು ಮೇಲಕ್ಕೆ ಕೆಳಕ್ಕೆ ಆಡಲು ಅನುಕೂಲವಾಗುವಂತೆ ಕೀಲಿನಲ್ಲಿ ಅಳವಡಿಸುವರು. ಕುದುರೆ ಕುಣಿಸುವವ ಎರಡು ಅಡಿ ಉದ್ದದ ಮರದ ಕಾಲುಗಳನ್ನು ಕಟ್ಟಿಕೊಳ್ಳುವನು. ಮರಗಾಲುಗಳೆಲ್ಲ ಕಾಲು ಇಡಲು ಸಂದು ಮಾಡಿರುವರು. ಕೋಡಿನ ಭಾಗ ಬತ್ತದಿರಲೆಂದು ಬಟ್ಟೆ ಬಿಗಿದಿರುವರು. ಕುದುರೆ ಕುಣಿಸುವವ ಆಕರ್ಷಕ ಬಟ್ಟೆ ಧರಿಸಿರುವನು. ಕೆಲವರು ಯುದ್ಧದ ಬಟ್ಟೆ ಆಯುಧಗಳನ್ನು ಧರಿಸಿ ವಿವಿಧ ಭಂಗಿಯಲ್ಲಿ ಕುಣಿಯುವರು.

### ನವಿಲು ಕುಣಿತ:

ಹಬ್ಬ, ಉತ್ಸವ, ಮಂಗಲಕಾರ್ಯಗಳಲ್ಲಿ ಮನರಂಜನೆಗಾಗಿ ನವಿಲು ಕುಣಿತವನ್ನು ಪ್ರದರ್ಶಿಸುವವರು. ಇದು ಬುಡಕಟ್ಟಿನ ಕಾಲದಿಂದ ಬಂದ ಕಲೆ. ಹುಲಿ, ತೋಳ, ಚಿಗರೆಯ ಜೊತೆಗೆ ನವಿಲು ಬೇಟೆಯನ್ನು ಆಡುತ್ತಿದ್ದರು. ನವಿಲನ್ನು ಒಲಿಸಿಕೊಳ್ಳಲು ಅದರಂತೆ ಹಿಂಭಾಗಕ್ಕೆ ಪುಕ್ಕ ಕಟ್ಟಿಕೊಂಡು ಕುಣಿಯುತ್ತಿದ್ದರು.

ನವಿಲು ಕುಣಿತ ಕುಣಿಯುವವನು, ನವಿಲು ಬಣ್ಣದ ಬಟ್ಟೆ ಧರಿಸುವನು. ಗಂಡು ನವಿಲಾಗಿದ್ದರೆ ಪುರುಷ, ಹೆಣ್ಣು ನವಿಲಾಗಿದ್ದರೆ ಸ್ತ್ರೀ ವೇಷ ಕಟ್ಟುವರು. ಟೊಂಕದ ಹಿಂಬದಿಗೆ ನವಿಲುಗರಿಗಳನ್ನು ಚಕ್ರಾಕಾರದಲ್ಲಿ ಬಿಗಿಯಾಗಿ ಕಟ್ಟುವರು. ಒಮ್ಮೊಮ್ಮೆ ಒಂದೇ ನವಿಲು ನರ್ತಿಸುವಂತೆ ಕುಣಿಯುವರು. ಮತ್ತೊಮ್ಮೆ ಗಂಡು ಮತ್ತು ಹೆಣ್ಣು ನವಿಲು ಸೇರಿ ಮೋಡಿ ಕಂಡಾಗ ಒಂದಕ್ಕೊಂದು ಪ್ರೀತಿಸುವಂತೆ ಕುಣಿಯುವರು.

ಗಂಡು ನವಿಲಿನ ಕಣ್ಣೀರು ಕುಡಿದು ಹೆಣ್ಣು ನವಿಲು ಗರ್ಭ ಧರಿಸುವಂತೆ, ಹೆಣ್ಣು ನವಿಲು ಗಂಡು ನವಿಲಿನ ಕಣ್ಣೀರು ಕುಡಿಯುವ ದೃಶ್ಯ ನೋಡುವಂಥದ್ದು. ಗಂಡು ಮತ್ತು ಹೆಣ್ಣು ನವಿಲುಗಳಲ್ಲಿ ಹಿಂಭಾಗದಲ್ಲಿ ನವಿಲು ಗರಿಗಳನ್ನು ಹರಡಿಕೊಂಡು ವಿವಿಧ ಭಂಗಿಗಳಲ್ಲಿ ಕುಣಿಯುವ ದೃಶ್ಯ ಅಸದೃಶ್ಯವಾದುದು.

### ಮರಗಾಲು ಕುಣಿತ:

ಜಾತ್ರೆ, ಉತ್ಸವ, ಮಂಗಲ ಕಾರ್ಯಗಳಲ್ಲಿ ಈ ಮರಗಾಲು ಕುಣಿತವನ್ನು ಗ್ರಾಮಸ್ಥರು ಪ್ರದರ್ಶಿಸುವರು. ಮರದ ಕಾಲುಗಳನ್ನು ಕಟ್ಟಿಕೊಂಡು ಕುಣಿಯುವುದರಿಂದ ಇದಕ್ಕೆ ಮರಗಾಲು ಕುಣಿತವೆಂದು ಹೆಸರು ಬಂದಿರುವುದು. ಈ ಮರಗಾಲು ಗಟ್ಟಿಯಾದ ಮತ್ತು ಹಗುರವಾದ ಮರದಿಂದ ಮಾಡಿರುವರು. ಮೂರು ನಾಲ್ಕು ಅಡಿ ಉದ್ದದ ನಾಲ್ಕೈದು ಅಂಗುಲ ಸುತ್ತಳತೆಯ

ಎರಡು ಮರದ ತುಂಡುಗಳನ್ನು ಮೇಲ್ಭಾಗದಲ್ಲಿ ಪಾದಗಳು ಇಟ್ಟುಕೊಳ್ಳಲು ಅನುಕೂಲವಾಗಲು ಮೆಟ್ಟಲಿನಂತೆ ಸಂದು ಮಾಡಿರುವರು. ನುಣ್ಣಗಿರುವ ಕೆಳಗಿನ ಭಾಗದಲ್ಲೂ ಮತ್ತೊಂದು ಸಂಡು ಮಾಡಿ ಅದಕ್ಕೆ ಗೆಜ್ಜೆ ಕಟ್ಟಿರುವರು. ಕೆಲವರು ದಿನ ನಿತ್ಯದ ಉಡುಪು ಧರಿಸುವರು. ಇನ್ನೂ ಕೆಲವರು ಆಕರ್ಷಕವಾಗಿ ಬಟ್ಟೆ ಧರಿಸುವರು. ಮರಗಾಲನ್ನು ಕಾಲಿಗೆ ಬಿಗಿಯಾಗಿ ಕಟ್ಟಿಕೊಂಡು ಉದ್ದವಾದ ಕೋಲಿನ ಅಥವಾ ಇತರರ ನೆರವು ಪಡೆದುಕೊಂಡು ಸಮಭಾರದ ಹಿಡಿತ ಪಡೆಯಲು ಪ್ರಯತ್ನಿಸುವರು. ಹಿಡಿತ ಸಿಕ್ಕ ಮೇಲೆ ಯಾವ ಆಸರೆಯೂ ಇಲ್ಲದೆ ಹಲಗೆಯ ಗತ್ತಿಗನುಗುಣವಾಗಿ ಹೆಜ್ಜೆ ಹಾಕುತ್ತ ವಿವಿಧ ಭಂಗಿಯಲ್ಲಿ ಕುಣಿಯುವರು. ಕೆಲವರು ಕೆಲಸ ಹಿಡಿದುಕೊಂಡು ಸಮಭಾರ ಕಾಪಾಡಿಕೊಳ್ಳುವರು.

ತಮ್ಮ ಮುಂದೆ ಎಸೆದ ಕರವಸ್ತ್ರ ಅಥವಾ ರೂಪಾಯಿ ನೋಟನ್ನು ಬಾಯಿ ಅಥವಾ ಕಣ್ಣಿನ ರೆಪ್ಪೆಯಿಂದ ಮೇಲೆತ್ತಿಕೊಳ್ಳುವರು. ಕೆಲವರು ವೇಗವಾಗಿ ಓಡುವರು. ಇನ್ನು ಕೆಲವರು ಅನೇಕ ಚಮತ್ಕಾರಗಳನ್ನು ಪ್ರದರ್ಶಿಸುವರು.

**ಹಲಗೆ ಕುಣಿತ:**

ಹಬ್ಬ ಹುಣ್ಣಿಮೆ, ಜಾತ್ರೆ ಉತ್ಸವಗಳಲ್ಲಿ ಗ್ರಾಮದ ವಿವಿಧ ಮಂಗಲ ಕಾರ್ಯಗಳಲ್ಲಿ ಹಲಗೆ ಕುಣಿತ ಕುಣಿಯುವರು. ನಮ್ಮ ಭಾಗದಲ್ಲಿ ಹಲಗೆ ಬಡಿಯುವವರು ಮೊದಲು ಒಂದೊಂದು ಪ್ರಸಂಗಕ್ಕೆ ಒಂದೊಂದು ಬಗೆಯಾಗಿ ಹಲಗೆ ಬಡಿಯುವರು, ಕುಣಿಯುವರು.

1. ಮದುವೆಯಲ್ಲಿ ಬಡಿಯುವ ಹಲಗೆ: ಜಜ್ಜಗ್ಗ ತಕತಕ್ಕೆ ಜಗ್ಗ ತಕ್ಕ ತಕ್ಕ
2. ಸತ್ತಾಗ ಬಡೆಯುವ ಹಲಗೆ: ಡಂಗ ಡಂಗತ ನುಚ್ಚಿ ನಂಗುತ್ತಾ
3. ಸಂತೋಷದ ಸಂದರ್ಭದಲ್ಲಿ ಬಡಿಯುವ ಹಲಗೆ: ಜಗ್ಗತಕ್ಕೆ ಜಗ್ಗತಕ್ಕೆ ಜಗ್ಗತಕ

ಹಲಗೆಯ ಬಡಿತದ ಶಬ್ದಕ್ಕೆ ತಕ್ಕಂತೆ ಕುಣಿಯುವರು. ನೆಲದ ಮೇಲೆ ನೋಟು ಹಾಕಿದರೆ ಬಾಯಿಯಿಂದ ಎತ್ತುವರು. ನಾಣ್ಯ ಇಟ್ಟರೆ ಹಣೆಗೆ ಹಚ್ಚಿಕೊಂಡು ಎತ್ತುವರು.

ಹಲಗೆ ಬಡಿಯುವವ ನಿತ್ಯದ ಬಟ್ಟೆ ಧರಿಸಿರುವನು. ಹಲಗೆಗಳಲ್ಲಿ ನಾನಾ ನಮೂನೆಯ ಹಲಗೆಗಳಿವೆ. ಉದಾ: ಬಟ್ಟ ಹಲಗೆ, ರಣಹಲಗೆ. ಬದುಕಿನ ಎಲ್ಲಾ ಪ್ರಸಂಗದಲ್ಲಿ ಹಲಗೆ ಇದ್ದೇ ಇರುವುದು. ಹಲಗೆ ಇಲ್ಲದೆ ಯಾವುದೇ ಶುಭಕಾರ್ಯ ನಡೆಯುವುದಿಲ್ಲ.

**ಸುಗ್ಗಿ ಕುಣಿತ:**

ವರುಷದಲ್ಲಿ ಎರಡು ಸಲ ಸುಗ್ಗಿ ಮಾಡಿದರೂ ಜೋಳದ ಸುಗ್ಗಿಯು ನಿಜವಾದ ಸುಗ್ಗಿ. ಜೋಳದಂತೆ ಸಜ್ಜೆ ಸೇಂಗಾ ಸುಗ್ಗಿ ಮಾಡುವುದಿಲ್ಲ. ಎತ್ತುಗಳನ್ನು ಕಟ್ಟಿ ಸಜ್ಜೆಯನ್ನು ತುಳಿಸಿ ತೂರಿದರೂ ಇದನ್ನೊಂದು ಆಚರಣೆಯನ್ನಾಗಿ ಮಾಡುವುದಿಲ್ಲ. ಕೆಲವು ಕಡೆಗೆ ಎತ್ತುಗಳಿಂದ ತುಳಿಸದೆ ಬಡಿಗೆಯಿಂದ ಬಡಿಯುವರು.

ಪ್ರತಿವರುಷ ಹೋಳಿಹುಣ್ಣಿಮೆ ಮತ್ತು ಉಗಾದಿ ಹಬ್ಬದ ಮಧ್ಯದಲ್ಲಿ ಜೋಳದ ರಾಶಿ ಮಾಡುವರು. ಜೋಳ ಕೊಯ್ದು ಸ್ಸಿಡು ಕಟ್ಟಿ, ಕಣ ಮಾಡಿ ಮರುದಿನವೇ ರಾತ್ರಿಗೆ ಎತ್ತುಗಳನ್ನು ಕಟ್ಟಿ ಹಂತಿ ಹೊಡೆಯುವರು. ಹಂತಿ ಹೊಡೆಯುವ ಗಳಿಗೆಯಿಂದ ಸುಗ್ಗಿ ಕುಣಿತ ನಡೆಯುವುದು.

೧. ಹಂತಿ ಹೊಡೆಯುವಾಗ ಮಧ್ಯ ರಾಗದಿಂದ ಕುಣಿಯುತ್ತ ಹಾಡುವರು

ಕೈ ತಾರೋ ಕೈಯಾ ಗಂಧ ಹಚ್ಚಿದ ಕೈಯಾ
ಕಾಲ ತಾರೊ ಕಾಲೊ ಗೆಜ್ಜೆ ಕಟ್ಟಿದ ಕಾಲೊ

೨. ಎತ್ತುಗಳನ್ನು ಊರಲ್ಲಿ ಮೆರೆಸುವಾಗ ಕುಣಿಯುವರು.

೩. ರಾಶಿ ತೂರುವಾಗ ಕುಣಿ ಕುಣಿದು ತೂರುವರು.

ನಮ್ಮಲ್ಲಿ ಕೇವಲ ಪುರುಷರು ಕುಣಿದರೆ ಕೊಡಗಿನಲ್ಲಿ ಪುರುಷರ ಜೊತೆಗೆ ಸ್ತ್ರೀಯರೂ ಕುಣಿಯುವರು.

## ೮. ಜಾನಪದ ಕುಣಿತಗಳು ಮತ್ತು ಮಾರ್ಗ ಕುಣಿತಗಳು

ಇಂದು ಭಾರತದಲ್ಲಿ ಪ್ರಸಿದ್ಧವಿರುವ ಭರತನಾಟ್ಯ, ಕೂಚಪುಡಿ, ಮಣಿಪುರಿ ಕುಣಿತಗಳು ಜನಪದ ಕುಣಿತಗಳು. ಹರಪ್ಪ ಮೊಹಂಜೊದಾರದಲ್ಲಿ ಸಿಗುವ ಕುಣಿವ ಹೆಣ್ಣಿನ ಮೂರ್ತಿ ಇದಕ್ಕೆ ಸಾಕ್ಷಿಯಾಗಿದೆ.

ತದ್ದಿನ್ನಕ್ಕ ಥಕ್ಕಥಕ್ಕ ತಯತ ಥಕ್ಕಥಕ್ಕ
ತಾಳಿನೊಳಗೆ ಮಾಡ್ತೀವರಿ ಶರಣ

ಮೊಹರಂದಲ್ಲಿ ಹಾಡುವ ಈ ಹಾಡು ಬರೀ ಹಾಡಾಗಿರದೆ ಕುಣಿತದ ಮೂಲವಾಗಿರುವುದು. ಈ ಬಗೆಯ ಕುಣಿತದಿಂದ ಕೂಡಿದ ಜನಪದ ಹಾಡುಗಳು ಶಿಷ್ಟ (ಮಾರ್ಗ) ಕುಣಿತಗಳಿಗೆ ಪ್ರೇರಕವಾಗಿವೆ. ಜನಪದ ಕುಣಿತಗಳ ತಾಳ, ಲಯ, ಗತಿಗಳು, ಹೆಜ್ಜೆಗಳು ಮಾರ್ಗ ಕುಣಿತಗಳಿಗೆ ಬುನಾದಿಯಾಗಿವೆ.

## ೯. ಜಾನಪದ ಕುಣಿತಗಳ ವೈಜ್ಞಾನಿಕತೆ

ನಮ್ಮ ಹಿರಿಯರು ಧರ್ಮದ ಮೂಲಕ ಜೀವನ ಸಂಹಿತೆ ನಿರೂಪಿಸಿದ್ದಾರೆ. ಆಗಿನ ಕಾಲಕ್ಕೆ ಧರ್ಮ ಅತ್ಯಂತ ಪವಿತ್ರವಾದ, ಪೂಜ್ಯವಾದ, ದೈವತ್ವದ ಎತ್ತರಕ್ಕೆ ಒಯ್ಯುವ ದಾರಿಯಾದುದರಿಂದ ಎಲ್ಲಾ ಜನ ಧರ್ಮದಲ್ಲಿ ಹೇಳಿದುದನ್ನೆಲ್ಲವನ್ನು ಚಾಚು ತಪ್ಪದೇ ಪಾಲಿಸುತ್ತಿದ್ದರು. ಎಲ್ಲಾ ಕುಣಿತಗಳನ್ನು ದೇವರು ಧರ್ಮಗಳು ಆರಾಧನೆಗಾಗಿ ಸೃಷ್ಟಿಸಿದ್ದರು. ಜಾನಪದ ಕುಣಿತಗಳಲ್ಲಿರುವ ವೈಜ್ಞಾನಿಕತೆಯ ಅರಿವಾದರೆ ಈ ಕುಣಿತಗಳ ಮಹತ್ವ ಗೊತ್ತಾಗುವುದು.

ಜಾನಪದ ಕುಣಿತಗಳಿಂದಾಗುವ ಲಾಭಗಳು :

೧. ಆರೋಗ್ಯ ವರ್ಧಿಸುವ ಉತ್ತಮ ವ್ಯಾಯಾಮ.
೨. ರಕ್ತ ಶುದ್ಧವಾಗಿಡುವ ವಿಧಾನ.
೩. ಮನುಷ್ಯನಲ್ಲಿ ಚೈತನ್ಯವನ್ನುಂಟು ಮಾಡುವುದು.
೪. ಒಳರೋಗಗಳನ್ನು ನಿವಾರಿಸುವುದು.
೫. ಸಮಾರ್ಥತನ ತಿಳಿಸಿ ಕಾಯಕ ತತ್ವ ಬೆಳೆಸುವುದು.

## ೧೦. ಕುಣಿತಗಳಿಗೆ ಪೆಟ್ಟು

### ಸಾಮಾಜಿಕ ನಿಷೆಗಳಿಂದ ಕುಣಿತಗಳಿಗೆ ಪೆಟ್ಟು:

ಒಂದೇ ಕಾಲಕ್ಕೆ ಅತ್ಯಂತ ಗೌರವದಿಂದ ಕಾಣುತ್ತಿದ್ದ ಜಾನಪದ ಕುಣಿತಗಳನ್ನು ಇಂದು

ಜನ ಸಾಮಾಜಿಕ ನಿಷ್ಕಾಳಜಿಗಾಗಿ ಕನಿಷ್ಠ ದೃಷ್ಟಿಯಿಂದ ಕಾಣುತ್ತಿದ್ದಾರೆ. ಕುಣಿತದ ಹೆಣ್ಣುಮಕ್ಕಳು ತಮ್ಮ ಮೈಮಾರಾಟ ನಡೆಸಿದ್ದರ ಫಲವಾಗಿ ಆ ಹೆಣ್ಣುಮಕ್ಕಳು ಹಾಳಾಗಲು ಕಾರಣರಾದ ಜನರೆ ಧರ್ಮದ ವರ್ತಾರರಾಗಿ ಅವರ ಕುಣಿತಗಳನ್ನು ಹೀಯಾಳಿಸಿ ಮಾತಾಡುವುದು ಕಾಣುತ್ತೇವೆ.

ಉದಾ: ದೇವದಾಸಿಯರ ಕುಣಿತ, ಜೋಗತಿಯರ ಕುಣಿತ, ಬಸವಿಯರ ಕುಣಿತ, ಪಾತರದವರ ಕುಣಿತ.

**ಶಿಷ್ಟ ಜನರ ಅಲಕ್ಷ್ಯದಿಂದ ಕುಣಿತಗಳಿಗೆ ಪೆಟ್ಟು**

ಮಧುರ ಕವಿ ಗೊರವರ ಡುಂಡುಚಿಯೆ ಎಂದು ಟೀಕಿಸಿದ ಜನರ ಸಂತತಿಯಿಂದ ಜನಪದ ಕುಣಿತಗಳು ತುಂಬ ಅಲಕ್ಷ್ಯಕ್ಕೀಡಾದವು.

ಉದಾ: ದುರಗಮುರಗಿಯರ ಕುಣಿತ, ಪೋತರಾಜನ ಕುಣಿತ, ಮಂಗನ ಕುಣಿತ, ಹುಲಿ ಕುಣಿತ, ಕರಡಿ ಕುಣಿತ, ಜೋಗತಿ ಕುಣಿತ, ಮೋಹರಂ ಕುಣಿತ.

**೧೧. ಕುಣಿತಗಳ ಉಳಿವು ಬೆಳವಿಗಾಗಿ ಯೋಚನೆಗಳು ಮತ್ತು ಯೋಜನೆಗಳು**

ನಮ್ಮ ಆರೋಗ್ಯ ಸಂವರ್ಧನೆಯ ಟಾನಿಕ್ಕಾಗಿ, ಜನಪದ ಕುಣಿತಗಳ ಉಳಿವು ಬೆಳವಿಗಾಗಿ ಹಲವಾರು ಕ್ರಮಗಳು ಕೈಕೊಳ್ಳುವುದೀಗ ಅಗತ್ಯವಾಗಿದೆ. ಇಲ್ಲದಿದ್ದರೆ ಶಿಷ್ಟ ಕಲೆಗಳ ಆಕರ್ಷಣೆಯಿಂದ ಅಲಕ್ಷ್ಯಕ್ಕೀಡಾಗಿ ಇಲ್ಲಸಲ್ಲದ ರಾಜಕೀಯ ನಡೆದು ಸಂಪೂರ್ಣ ನಶಿಸಿ ಹೋಗುವ ಸಂದರ್ಭಗಳೇ ಬಹಳ ಇವೆ. ಅದಕ್ಕಾಗಿ

೧. ಹಳ್ಳಿಯಿಂದ ಹುಟ್ಟಿದ ಈ ಕಲೆಗೆ ಉಳಿಸಲು ಬೆಳೆಸಲು ಹಳ್ಳಿ ಯುವಕರು ಮುಂದಾಗಬೇಕು.

೨. ಜನತೆ ಮತ್ತು ಸರಕಾರ ಪ್ರೋತ್ಸಾಹಿಸಬೇಕು.

೩. ಜನಪದ ಕುಣಿತಗಳ ತರಬೇತಿ ಶಾಲೆ ಆರಂಭಿಸಬೇಕು.

೪. ಎಲ್ಲಾ ತರಗತಿಗಳ ಪಠ್ಯಪುಸ್ತಕಗಳಲ್ಲಿ ಸೇರಿಸಬೇಕು.

೫. ಎಲ್ಲಾ ಜಾನಪದ ತಜ್ಞರು ಇವುಗಳ ಏಳಿಗೆಗಾಗಿ ಶ್ರಮಿಸಬೇಕು.

# ಕನ್ನಡ ಸಾಹಿತ್ಯದ ಮೊದಲ ಘಟ್ಟ

ಡಾ. ಎಂ. ಎಂ. ಕಲಬುರ್ಗಿ

ಒಂದು ಭಾಷೆಯ ಸಾಹಿತ್ಯದ ಆರಂಭವೆನ್ನುವುದು ತೊರೆಗಳು ಹಳ್ಳವಾಗಿ, ಹಳ್ಳಗಳು ಹೊಳೆಯಾಗಿ ರೂಪಗೊಳ್ಳುವಂಥ ಕ್ರಿಯೆ. ಹೀಗಾಗಿ ಯಾವುದೇ ಸಾಹಿತ್ಯದ ಉಗಮ ಸ್ವರೂಪವನ್ನಾಗಲೀ, ಉಗಮ ಕಾಲವನ್ನಾಗಲೀ ನಿರ್ದಿಷ್ಟವಾಗಿ ಹೇಳುವುದು ತುಂಬ ಕಷ್ಟ. ಕನ್ನಡ ಸಾಹಿತ್ಯದ ಬಗ್ಗೆ ಬರೆಯಲು ಹೊರಟ ವಿದ್ವಾಂಸರಿಗೆ ಈ ಎರಡೂ ಆಹ್ವಾನಗಳು ಎದುರಾಗುತ್ತವೆ.

ಸಾಹಿತ್ಯವೆನ್ನುವುದು ಭಾಷಾಮಾಧ್ಯಮದಲ್ಲಿ ಆವಿರ್ಭವಿಸುವ ಶಾಬ್ದಿಕ ಕಲೆ. ತಾನು ಪರಿಣಾಮಕಾರಿಯಾಗಿ ಸಂವಹನಗೊಳ್ಳಬೇಕೆಂಬ ಉತ್ಕಟತೆ ಕಾರಣವಾಗಿ, ಭಾಷೆ ಸಾಹಿತ್ಯದ ದಾರಿ ಹಿಡಿಯುತ್ತದೆ. ಆಗ ಶಬ್ದ (Sound) ಸಾಂಗತ್ಯ, ಅರ್ಥಸಾಧ್ಯತೆ, ಲಯವಿನ್ಯಾಸಗಳನ್ನು ಹಲವು ಹತ್ತು ಬಗೆಗಳಲ್ಲಿ ಹೊತ್ತುಕೊಂಡು, ಅದು ಹುಟ್ಟುತ್ತದೆ. ಈ ಕ್ರಿಯೆ ಮೊದಮೊದಲು "ಧ್ವನಿಪಾತಳಿ"ಯಲ್ಲಿ ಜರುಗಿ, ಜನಪದ ಸಾಹಿತ್ಯವೆನ್ನುವುದು ಮೈತಾಳುತ್ತದೆ. ಲೋಪ-ಆಗಮ-ಆದೇಶ-ಪಲ್ಲಟಗಳಿಗೆ ಗುರಿಯಾಗುತ್ತ ಮುನ್ನಡೆಯುವ ಇದರ ಅಂದಿನ ಸ್ವರೂಪವನ್ನು ಇಷ್ಟು ದೂರ ನಿಂತು ನಿರ್ಧರಿಸುವುದು ಕಷ್ಟದ ಕೆಲಸ.

"ಕನ್ನಡ ಸಾಹಿತ್ಯಚರಿತ್ರೆ"ಯೆಂದಾಗ ನಮಗೆ ಧ್ವನಿಬದ್ಧ ಜನಪದಸಾಹಿತ್ಯ ನೆನಪಾಗದೆ, ಲಿಪಿಬದ್ಧ ಶಿಷ್ಟಸಾಹಿತ್ಯವೇ ನೆನಪಿಗೆ ಬರುತ್ತದೆ ಮತ್ತು ಸಾಹಿತ್ಯ ಚರಿತ್ರೆಗಳೆಲ್ಲ ಲಿಪಿಬದ್ಧಸಾಹಿತ್ಯದ ಚರಿತ್ರೆಗಳೇ ಆಗಿವೆ. ಅದು ಅನಿವಾರ್ಯವೂ ಹೌದು. ಈ ಸಂದರ್ಭದಲ್ಲಿ ಕನ್ನಡ ಭಾಷೆ ಲಿಪಿಬದ್ಧವಾದುದು ಯಾವಾಗ? ಎಂಬ ಎರಡನೆಯ ಪ್ರಶ್ನೆ ಎದುರಾಗುತ್ತದೆ. ಬಹುಶಃ ಈ ಕ್ರಿಯೆ ಸ್ವತಂತ್ರವಾಗಿ ಘಟಿಸದೆ, ಕರ್ನಾಟಕವನ್ನು ಪ್ರವೇಶಿಸಿದ ಪ್ರಾಕೃತ ಬರವಣಿಗೆಯ ಸಂಪರ್ಕದಿಂದಲೋ, ಸಂಸ್ಕೃತ ಬರವಣಿಗೆಯ ಸಂಪರ್ಕದಿಂದಲೋ ಘಟಿಸಿರಬಹುದು. ಕ್ರಿಸ್ತಶಕ ಪೂರ್ವದ ಪ್ರಾಕೃತ ಬರಹಗಳು ಶುದ್ಧ ಪ್ರಾಕೃತವಾಗಿದ್ದರೆ, ಕ್ರಿಸ್ತಶಕ ಆರಂಭದ ಪ್ರಾಕೃತ ಬರಹಗಳಲ್ಲಿ ಸಂಸ್ಕೃತವಾಕ್ಯಗಳು ಸೇರಿಕೊಳ್ಳತೊಡಗಿವೆ. ಆಮೇಲೆ ಕನ್ನಡ ಬರವಣಿಗೆ ಕಾಣಿಸಿಕೊಳ್ಳಲು ಪ್ರಾರಂಭಿಸಿದೆ ಎಂಬುದನ್ನು ಇಲ್ಲಿ ನೆನೆಯಬೇಕು. ಇಷ್ಟು ವಿವೇಚನೆಯೊಂದಿಗೆ ಲಿಪಿಬದ್ಧ ಕನ್ನಡಸಾಹಿತ್ಯದ ಮೊದಲ ಘಟ್ಟವನ್ನು, ಅಂದರೆ ಕವಿರಾಜಮಾರ್ಗದವರೆಗಿನ ಘಟ್ಟವನ್ನು ಕುರಿತು ಕೆಲವು ವಿಚಾರಗಳನ್ನು ಇಲ್ಲಿ ಮಂಡಿಸಬಹುದು.

**ಲಿಪಿಬದ್ಧ ದೇಶೀಸಾಹಿತ್ಯ ಸೃಷ್ಟಿ**

ಧ್ವನಿಪಾತಳಿಯ ಒಂದು ಭಾಷೆ ಲಿಪಿಪಾತಳಿಗೆ ಬರುವಾಗ, ಅದರಲ್ಲಿಯೂ ದ್ವಿಭಾಷಾ

ಸಂದರ್ಭದಲ್ಲಿ ಲಿಪಿಪಾತಳಿಗೆ ಬರುವಾಗ ಅದರ ಅಭಿವ್ಯಕ್ತಿಯಲ್ಲಿ ಎರಡು ಕವಲುಗಳು ಕಾಣಿಸಿಕೊಳ್ಳುವುದು ಸಹಜ. ಒಂದು: ತನ್ನ ಜನಪದ ಭಾಷೆಯನ್ನು ಲಿಪಿಬದ್ಧಗೊಳಿಸುವುದು. ಇನ್ನೊಂದು: ಅನ್ಯಭಾಷಾಮಿಶ್ರಿತ ಭಾಷೆಯನ್ನು ಲಿಪಿಬದ್ಧಗೊಳಿಸುವುದು. ಇಂಥ ಭಾಷೆಯನ್ನು ಬಳಸಿಕೊಂಡು ಹುಟ್ಟುವ ಲಿಪಿಬದ್ಧ ಸಾಹಿತ್ಯದಲ್ಲಿಯೂ ಎರಡು ಸಾಹಿತ್ಯ ಪ್ರಯೋಗಗಳು ಸಹಜವಾಗಿಯೇ ಮುಂದುವರಿಯುತ್ತವೆ. ಒಂದು: ಮೂಲದ ಜನಪದ ಸಾಹಿತ್ಯವನ್ನೇ ಉದಾತ್ತೀಕರಿಸಿಕೊಳ್ಳುವುದು, ಎರಡು: ಅನ್ಯಭಾಷಾ ಮೂಲದ ಸಾಹಿತ್ಯವನ್ನು ತನ್ನಲ್ಲೆ ಯಾವುದೇ ರೂಪದಿಂದ ಬರಮಾಡಿಕೊಳ್ಳುವುದು. ಕನ್ನಡ ಲಿಪಿಬದ್ಧಸಾಹಿತ್ಯದ ಆರಂಭದ ಘಟ್ಟದಲ್ಲಿ ಈ ಎರಡೂ ಪ್ರಯತ್ನಗಳು ಗೋಚರಿಸುತ್ತವೆ. ಇವುಗಳನ್ನು ಕನ್ನಡದ ಕನ್ನಡಸಾಹಿತ್ಯ, ಸಂಸ್ಕೃತದ ಕನ್ನಡಸಾಹಿತ್ಯವೆಂದು ಕರೆಯಬಹುದಾಗಿದ್ದು, ಒಂದನ್ನು ಸ್ಥೂಲವಾಗಿ ನಿರ್ಮಿತಿ ಎಂದು, ಇನ್ನೊಂದನ್ನು ಅನುನಿರ್ಮಿತಿ ಎಂದು ಹೆಸರಿಸಬಹುದು. ಮೊದಲಿನಿಂದಲೂ ಬೆಳೆದುಬಂದಿದ್ದ ಜನಪದ ರಚನೆಗಳನ್ನು ಲಿಪಿಬದ್ಧಸಾಹಿತ್ಯವಾಗಿ ಉದಾತ್ತೀಕರಿಸಿಕೊಂಡ ಪ್ರಕ್ರಿಯೆಯ ಸೂಚನೆಗಳು ಕವಿರಾಜಮಾರ್ಗದಲ್ಲಿ ಹೀಗೆ ಸಿಗುತ್ತವೆ:

ನುಡಿಗೆಲ್ಲಂ ಸಲ್ಲದ ಕ
ನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀ ।
ಗಡಿನ ನೆಗಳ್ತೆಯ ಕಬ್ಬದೊ
ಳೊಡಂಬಡಂ ಮಾಡಿದರ್ ಪುರಾತನಕವಿಗಳ್ ॥

ಕವಿರಾಜಮಾರ್ಗದ ಈ ಪದ್ಯ, ಜಾನಪದಪರಂಪರೆಯ ಚತ್ತಾಣ-ಬೆದಂಡೆಗಬ್ಬಗಳು "ನೆಗಳ್ತೆಯ ಕಬ್ಬ"ಗಳಾಗಿ ಉದಾತ್ತೀಕರಣಗೊಂಡುದನ್ನು ಸೂಚಿಸುವಂತೆ ತೋರುತ್ತದೆ. ಅದಕ್ಕಾಗಿಯೇ ಇವುಗಳಲ್ಲಿ "ಕಂದಮುಂ, ಅಮಳಿನ ವೃತ್ತಮುಂ ಒಂದೊಂದು ಎಡೆಗೊಂಡು ಜಾತಿಜಾಣ್" ಮೇಳವಿಸಿದಂತೆ, "ಕಂದಗಳ್ ಪಲವಾಗಿರೆ, ಸುಂದರ ವೃತ್ತಂಗಳ್ ಅಕ್ಕರಂ ಚೌಪದಿ ಗೀತಿಕೆ"ಗಳು ಅಳವಟ್ಟಂತೆ ಕಾಣುತ್ತದೆ. ಈ ಕ್ಷೇತ್ರದಲ್ಲಿ ದುಡಿದವರು ಶ್ರೀವಿಜಯ ಕವೀಶ್ವರ ಪಂಡಿತ ಚಂದ್ರ ಲೋಕಪಾಲರೆಂದು ಕವಿರಾಜಮಾರ್ಗ ತಿಳಿಸುತ್ತದೆ.

ಇದೇ ಲಿಪಿಬದ್ಧ ಜಾನಪದಪರಂಪರೆಯಲ್ಲಿ ಗದ್ಯಪದ್ಯಸಮ್ಮಿಶ್ರಣ ರೂಪದ "ಗದ್ಯಕಥಾ" ಪ್ರಕಾರವೂ ಬೆಳೆದುಬಂದುದನ್ನು ಕವಿರಾಜಮಾರ್ಗ ಹೇಳುತ್ತದೆ. ಈ ಪ್ರಕಾರಗಳಲ್ಲಿ ಕೃಷಿ ಮಾಡಿದವರು ವಿಮಲೋದಯ ನಾಗಾರ್ಜುನ ಜಯಬಂಧು ದುರ್ವಿನೀತ ಮೊದಲಾದವರೆಂದು ಇಲ್ಲಿ ಸೂಚಿಸಲಾಗಿದೆ.

"ಸೂಳೆವಾಡು" ಎಂದು ತಿರಸ್ಕಾರಕ್ಕೆ ಗುರಿಯಾಗಿ ಸೂಳೆಗೇರಿಯಲ್ಲಿ ಬದುಕುತ್ತಿದ್ದ ಸಾಂಗತ್ಯವನ್ನು ರತ್ನಾಕರವರ್ಣಿ "ನೆಗಳ್ತೆಯ ಕಬ್ಬ"ಕ್ಕೆ ಮಾಧ್ಯಮ ಮಾಡಿಕೊಂಡಂತೆ ಮೇಲಿನ ಕವಿಗಳೂ ಜನಪದಪರಂಪರೆಯ ರಚನೆಗಳನ್ನು ಉದಾತ್ತೀಕರಣಗೊಳಿಸಿರಬಹುದು. ಜಯಕೀರ್ತಿ ಹೇಳುವ ಕರ್ಣಾಟೇಶ್ವರ ಕಥಾ, ಅರ್ಹತ್ ಕಾವ್ಯ, ಶೃಂಗಾರಪಿಂಡಾದಿ ಕಾವ್ಯಗಳು ಇದೇ ಪರಂಪರೆಯಲ್ಲಿ ಕಣ್ಣುತೆರೆದಿರಬಹುದು.

### ಲಿಪಿಬದ್ಧ ಮಾರ್ಗಸಾಹಿತ್ಯಸೃಷ್ಟಿ

ಮೇಲೆ ಹೇಳಿದ ಕನ್ನಡಭಾಷಾಮೂಲದ ಈ ರಚನೆಗಳಲ್ಲದೆ ಅನ್ಯಭಾಷಾಮೂಲದ ಸಾಹಿತ್ಯವೂ ಕನ್ನಡದಲ್ಲಿ ಹಂತಹಂತವಾಗಿ ಬೆಳೆದ ಸೂಚನೆಗಳು ಅಲ್ಲಲ್ಲಿ ಸಿಗುತ್ತವೆ. ಇವುಗಳನ್ನು

ಟೀಕೆ-ವ್ಯಾಖ್ಯಾನ, ಭಾಷಾಂತರ, ಸೃಜನಶೀಲಭಾಷಾಂತರ, ರೂಪಾಂತರ ಎಂದು ನಾಲ್ಕು ಘಟ್ಟಗಳಲ್ಲಿ ಗುರುತಿಸಬಹುದಾಗಿದೆ.

ಟೀಕೆ-ವ್ಯಾಖ್ಯಾನ:

ಯಾವುದೇ ಭಾಷೆ ಅನ್ಯಭಾಷಾಸಾಹಿತ್ಯವನ್ನು ತನ್ನೊಳಗೆ ಬರಮಾಡಿಕೊಳ್ಳುವಲ್ಲಿ ಮೊದಲು ಅನುಸರಿಸುವುದು ಟೀಕೆ-ವ್ಯಾಖ್ಯಾನ ಮತ್ತು ಭಾಷಾಂತರ ಕ್ರಿಯೆಯನ್ನು. ಕನ್ನಡಕ್ಕೆ ಇಂಗ್ಲಿಷ್ ಸಾಹಿತ್ಯ ಬಂದುದಾದರೂ ಶೇಕ್ಸ್‌ಪಿಯರ್‌ನ ನಾಟಕಗಳ ಭಾಷಾಂತರ, ಇಂಗ್ಲಿಷ್‌ಗೀತೆಗಳ ಭಾಷಾಂತರಗಳ ಮೂಲಕವೆಂಬುದನ್ನು ಇಲ್ಲಿ ನೆನೆಯಬೇಕು. ಇದು ದ್ವಿಭಾಷಾ ಪ್ರಭಾವದ ಸಂದರ್ಭದಲ್ಲಿ ಸಂಭವಿಸುವ ಸಾಹಿತ್ಯಿಕ ಸಹಜಕ್ರಿಯೆಯಾಗಿದೆ. ಈ ಸಂದರ್ಭದಲ್ಲಿ ಬ್ರಾಹ್ಮಣರು ಸಂಸ್ಕೃತಸಾಹಿತ್ಯವನ್ನು ಕನ್ನಡಕ್ಕೆ ಬರಮಾಡಿಕೊಳ್ಳಬಹುದಿತ್ತಾದರೂ ಕನ್ನಡ ಅಸ್ಪೃಶ್ಯಭಾಷೆಯಾಗಿದ್ದುದರಿಂದ, ಕನ್ನಡ ಸಾಹಿತ್ಯದ ಸೃಷ್ಟಿ ಚಟುವಟಿಕೆಯಿಂದ ಅವರು ಈ ಘಟ್ಟದಲ್ಲಿ ದೂರ ಉಳಿದರೆಂದು ತೋರುತ್ತದೆ. ಈಗ ಬೌದ್ಧರು ಕನ್ನಡದಲ್ಲಿ ಬರೆದಿರಬಹುದಾದರೂ ನಿರ್ದಿಷ್ಟ ನಿದರ್ಶನಗಳಿಲ್ಲ. ಜೈನರು ಮಾತ್ರ ಜನಭಾಷಾಸಾಹಿತ್ಯ ರಚನೆಗೆ ತೊಡಗಿ, ತಮ್ಮ "ಉಭಯಸಿದ್ಧಾಂತ" ಪ್ರಸಿದ್ಧಿಯ ಕರ್ಮಪ್ರಾಭೃತ ಮತ್ತು ಕಷಾಯಪ್ರಾಭೃತ (ಷಟ್ಖಂಡಾಗಮ ಮತ್ತು ಕಸಾಯಪಾಹುಡ) ಧಾರ್ಮಿಕ ಕೃತಿಗಳಿಗೆ ಟೀಕೆ-ವ್ಯಾಖ್ಯಾನ ಬರೆಯುವ ಕೆಲಸ ಪ್ರಾರಂಭಿಸಿದರು, ಕ್ರೈಸ್ತರು ಮೊದಮೊದಲು ಬೈಬಲನ್ನು ಭಾಷಾಂತರಿಸಿದಂತೆ.

ಜೈನಸಿದ್ಧಾಂತ ಸಾಹಿತ್ಯ ತೀರ ಪ್ರಾಚೀನಕಾಲದಲ್ಲಿ ಶ್ರವಣನಿಷ್ಠವಾಗಿಯೇ ಬಳಕೆಯಲ್ಲಿದ್ದಿತು. ಲಿಪಿರೂಪಕ್ಕೆ ಇಳಿದಿರಲಿಲ್ಲ. ಆಮೇಲೆ ಈ ಶ್ರವಣಸಾಹಿತ್ಯವನ್ನು ಲಿಪಿಬದ್ಧಗೊಳಿಸಲು ತೊಡಗಿ, ಪುಷ್ಪದಂತ ಮತ್ತು ಭೂತಬಲಿಗಳು ಕರ್ಮಪ್ರಾಭೃತ ಹೆಸರಿನ ಕೃತಿಯನ್ನು, ಗುಣಧರನು ಕಷಾಯಪ್ರಾಭೃತ ಹೆಸರಿನ ಕೃತಿಯನ್ನು ರೂಪಿಸಿದರು. ಇಂದ್ರನಂದಿಯ ಸಂಸ್ಕೃತ "ಶ್ರುತಾವತಾರ" ಈ ಉಭಯಕೃತಿಗಳು ಲಿಪಿಗಿಳಿದ ಘಟನೆಯನ್ನು, ಆಮೇಲೆ ಅವುಗಳಿಗೆ ಹುಟ್ಟಿದ ಟೀಕೆ-ವ್ಯಾಖ್ಯಾನಕೃತಿಗಳನ್ನು ವಿವರಿಸುತ್ತ, ಅವುಗಳಿಗೆ ಕನ್ನಡದಲ್ಲಿ ವಿಸ್ತಾರವಾದ ಟೀಕೆ, ವ್ಯಾಖ್ಯಾನಗಳನ್ನು ಶ್ಯಾಮಕುಂದ, ತೆಂಬಳೂರಾಚಾರ್ಯರು ಬರೆದರೆಂದು ತಿಳಿಸುತ್ತದೆ. ಇವು ಕನ್ನಡ ಸಾಹಿತ್ಯಚರಿತ್ರೆಯ ಪ್ರಥಮ ಕೃತಿಗಳಾಗಿರಬಹುದು. ಅವುಗಳ ವಿಷಯ 'ಶ್ರುತಾವತಾರ'ದಲ್ಲಿ ಹೀಗೆ ಬರುತ್ತದೆ:

ಕಾಲೇ ತತಃ ಕಿಯತ್ಯಪಿ ಗತೇ ಪುನಃ ಶ್ಯಾಮಕುಂದ ಸಂಜ್ಞೇನ
ಆಚಾರ್ಯೇಣ ಜ್ಞಾತ್ವಾ ದ್ವಿಭೇದಮಪ್ಯಾಗಮಃ ಕಾತ್ಸ್ನ್ಯಾತ್ ॥

ದ್ವಾದಶಗುಣಿತ ಸಹಸ್ರಗ್ರಂಥಂ ಸಿದ್ಧಾಂತಯೋರುಭಯೋಃ
ಷಷ್ಠೇನ ವಿನಾಖಂಡೇನ ಪೃಥುಮಹಾಬಂಧ ಸಂಜ್ಞೇನ ॥

ಪ್ರಾಕೃತ ಸಂಸ್ಕೃತ ಕರ್ಣಾಟಭಾಷಯಾ ಪದ್ಧತಿಃ ಪರಾರಚಿತಾ

ಮಹಾಬಂಧ ಹೆಸರಿನ ಆರನೆಯ ಖಂಡವನ್ನು ಹೊರತುಪಡಿಸಿ, ಷಟ್ಖಂಡಾಗಮದ ಐದು ಖಂಡಗಳಿಗೂ, ಕಷಾಯಪ್ರಾಭೃತಕ್ಕೂ ಶ್ಯಾಮಕುಂದನೆನ್ನುವವನು ೧೨,೦೦೦ ಗ್ರಂಥಪ್ರಮಾಣದ ವ್ಯಾಖ್ಯಾನವನ್ನು ಬರೆದನು. ಇದು ಸಂಸ್ಕೃತ, ಪ್ರಾಕೃತ ಮತ್ತು ಕನ್ನಡ ಮಿಶ್ರಕೃತಿ. ಈ ಕೃತಿಯ ವ್ಯಾಖ್ಯಾನದ ಸ್ವರೂಪವನ್ನು "ಪದ್ಧತಿ" ಎಂದು ಇಲ್ಲಿ ಸೂಚಿಸಲಾಗಿದೆ. ವೃತ್ತಿ ಸೂತ್ರಗಳ ವಿಷಮಪದಗಳಿಗೆ ಬರೆದ ವಿವರಣೆರೂಪದ ವ್ಯಾಖ್ಯಾನಕ್ಕೆ "ಪದ್ಧತಿ" ಎಂದು ಹೆಸರು. ಶ್ಯಾಮಕುಂದಾಚಾರ್ಯನ ಕಾಲ ಮೂರನೆಯ ಶತಮಾನವೆಂದು ಹೀರಾಲಾಲ ಜೈನ, ಕ್ರಿ.ಶ.

೩೫೦ ಎಂದು ಕವಿಚರಿತೆಕಾರರು ಹೇಳುತ್ತಾರೆ.

ಶ್ಯಾಮಕುಂದಾಚಾರ್ಯರ ಬಳಿಕ ತೆಂಬಳೂರಾಚಾರ್ಯರು ಈ ಉಭಯ ಸಿದ್ಧಾಂತಕ್ಕೆ ಕನ್ನಡ ಟೀಕೆ ಬರೆದರೆಂದು ಮೇಲೆ ಹೇಳಿದ "ಶ್ರುತಾವತಾರ"ದಲ್ಲಿ ಹೀಗೆ ತಿಳಿಸಲಾಗಿದೆ:

ಅಥ ತುಂಬಲೂರನಾಮಾಚಾರ್ಯೋ ಭೂತ್ತುಂಬಲೂರ ಸದ್ಗ್ರಾಮೇ
ಷಷ್ಠೇನ ವಿನಾಖಂಡೇನ ಸೋಪಿ ಸಿದ್ಧಾಂತಯೋರುಭಯೋಃ ॥ 165 ॥

ಚತುರಧಿಕಾಶೀತಿ ಸಹಸ್ರಗ್ರಂಥರಚನಯಾ ಯುಕ್ತಾಮ್
ಕರ್ಣಾಟಭಾಷಯಾ ಕೃತಾಮಹತೀಂ ಚೂಡಾಮಣೀಂ ವ್ಯಾಖ್ಯಾಂ ॥ 166 ॥

ಸಪ್ತ ಸಹಸ್ರ ಗ್ರಂಥಾಂ ಷಷ್ಠಸ್ಯ ಚ ಪಂಚಿಕಾಂ ಪುನರ್ಕಾರ್ಷೀತ್

ಇಲ್ಲಿ, ತುಂಬಲೂರು ಗ್ರಾಮವಿನಾಸಿಯಾದ ತುಂಬಲೂರಾಚಾರ್ಯನು ಷಟ್ಖಂಡಾಗಮದ ಆರನೆಯ ಖಂಡವನ್ನು ಹೊರತುಪಡಿಸಿ ಉಭಯಸಿದ್ಧಾಂತಕ್ಕೆ ೮೪ ಸಾವಿರ ಗ್ರಂಥಪ್ರಮಾಣದ "ಚೂಡಾಮಣಿ" ಹೆಸರಿನ ವ್ಯಾಖ್ಯಾನವನ್ನು ಕನ್ನಡ ಭಾಷೆಯಲ್ಲಿ ಬರೆದನೆಂದೂ, ಬಳಿಕ ಆರನೆಯ ಖಂಡಕ್ಕೆ ೭ ಸಾವಿರ ಗ್ರಂಥಪ್ರಮಾಣದ "ಪಂಚಿಕೆ"ಯನ್ನು ಜೋಡಿಸಿದನೆಂದೂ ಹೇಳಲಾಗಿದೆ. ಹೀಗಾಗಿ ಇದು ಇಡಿಯಾಗಿ ಕನ್ನಡದಲ್ಲಿಯೇ ಬರೆದ ೯೧,೦೦೦ (೮೪,೦೦೦-೭,೦೦೦) ಗ್ರಂಥಪ್ರಮಾಣದ ಟೀಕಾಕೃತಿಯಾಗಿದೆ. "ತುಂಬಲೂರು ಶಾಮಾಚಾರ್ಯರ್ ಎಂಬತ್ತುನಾಲ್ಕು ಸಾಸಿರ ಗ್ರಂಥಕರ್ತೃಗಳಾಗಿ ಕರ್ನಾಟಕ ಭಾಷೆಯಿಂದ ಚೂಡಾಮಣಿ ವ್ಯಾಖ್ಯಾನಮಂ ಮಾಡಿದರ್" ಎಂದು ರಾಜಾವಳಿಕಥೆಯ ದೇವಚಂದ್ರನು ಈ ಅಂಶವನ್ನು ಬೆಂಬಲಿಸುತ್ತಾನೆ. ತೆಂಬಲೂಳಾಚಾರ್ಯರ ಕಾಲ ೪ ನೆಯ ಶತಮಾನವೆಂದು ಹೀರಾಲಾಲ ಜೈನ್, ಕ್ರಿ.ಶ. ೬೫೦ ಎಂದು ಕವಿಚರಿತೆಕಾರರು ಊಹಿಸುತ್ತಾರೆ.

ಈ ಕಾಲಾವಧಿಯಲ್ಲಿ ಹುಟ್ಟಿದ ಇನ್ನೊಂದು ಕನ್ನಡ ಭಾಷಿಕ ಟೀಕಾಗ್ರಂಥವಾಗಿದೆ ಉಮಾಸ್ವಾತಿಯ "ತತ್ತ್ವಾರ್ಥಸೂತ್ರ"ಕ್ಕೆ ಬರೆದ ವ್ಯಾಖ್ಯಾನ. ಭಟ್ಟಾಕಳಂಕ ಕನ್ನಡಭಾಷೆಯ ಪ್ರೌಢಿಮೆಯನ್ನು "ತತ್ತ್ವಾರ್ಥ ಮಹಾಶಾಸ್ತ್ರ ವ್ಯಾಖ್ಯಾನಸ್ಯ ಷಣ್ಣವತಿ ಸಹಸ್ರ ಪ್ರಮಿತಿ ಗ್ರಂಥಸಂದರ್ಭರೂಪಸ್ಯ ಚೂಡಾಮಣ್ಯಾಭಿದಾನಸ್ಯ ಮಹಾಶಾಸ್ತ್ರಸ್ಯ ... ಉಪಲಬ್ಧಮಾನತ್ವಾತ್" ಎಂಬ ಮಾತಿನ ಮೂಲಕ ಪ್ರಕಟಪಡಿಸುತ್ತಾನೆ. ೯೬,೦೦೦ ಗ್ರಂಥಪ್ರಮಾಣದ "ಚೂಡಾಮಣಿ" ಹೆಸರಿನ ಈ ಕನ್ನಡ ವ್ಯಾಖ್ಯಾನವೂ ಲಭ್ಯವಾಗಿಲ್ಲ. ದ್ರವ್ಯಾನುಯೋಗದಲ್ಲಿ ಅಂತರ್ಗತವಾಗುವ ಈ ತತ್ತ್ವಾರ್ಥಶಾಸ್ತ್ರಕ್ಕೆ ಸುಮಾರು ೩೦ ಜನ ಬೇರೆ ಬೇರೆ ಭಾಷೆಗಳಲ್ಲಿ ವೃತ್ತಿ ವ್ಯಾಖ್ಯಾನ ಬರೆದಿದ್ದು, ಆ ಮಾಲಿಕೆಯಲ್ಲಿ ತುಂಬ ಪ್ರಾಚೀನವೂ ವ್ಯಾಪಕವೂ, ಆಗಿದ್ದ ಗ್ರಂಥವಿದು. ಮುಂದೆ ಕನ್ನಡದಲ್ಲಿ ದಿವಾಕರನಂದಿಯು (೧೦೬೨) ತತ್ತ್ವಾರ್ಥಾನುಗತ ಕರ್ಣಾಟಕ ಲಘುವೃತ್ತಿ, ಬಾಲಚಂದ್ರನು (೧೧೭೦) ತತ್ತ್ವಾರ್ಥ ತಾತ್ಪರ್ಯವೃತ್ತಿ ಅಥವಾ ತತ್ತ್ವರತ್ನ ಪ್ರದೀಪಿಕೆ ಎಂಬ ಹೆಸರಿನ ವ್ಯಾಖ್ಯಾನಗ್ರಂಥಗಳನ್ನು ಬರೆದಿರುವನು.

ಈ ಸಂದರ್ಭದಲ್ಲಿ ಒಂದು ಸಮಸ್ಯೆಯನ್ನು ಸ್ಪಷ್ಟಪಡಿಸಬಹುದು. ಅದು: ಉಭಯ ಸಿದ್ಧಾಂತಕ್ಕೆ ತೆಂಬಳೂರಾಚಾರ್ಯ ಬರೆದ ೯೧,೦೦೦ ಗ್ರಂಥಪ್ರಮಾಣದ ವ್ಯಾಖ್ಯಾನಕೃತಿಯ ಹೆಸರೂ "ಚೂಡಾಮಣಿ" ತತ್ತ್ವಾರ್ಥಮಹಾಶಾಸ್ತ್ರಕ್ಕೆ ಅನಾಮಧೇಯನೊಬ್ಬ ಬರೆದ ೯೬,೦೦೦ ಗ್ರಂಥಪ್ರಮಾಣದ ವ್ಯಾಖ್ಯಾನ ಕೃತಿಯ ಹೆಸರೂ "ಚೂಡಾಮಣಿ". ಇವುಗಳ ಬಗ್ಗೆ ಮೇಲೆ ಹೇಳಲಾಗಿದೆ. ಇವಲ್ಲದೆ ಶ್ರೀವರ್ಧದೇವನೆಂಬುವನು ಬರೆದ "ಚೂಡಾಮಣಿ" ಹೆಸರಿನ (ಸಂಸ್ಕೃತ?) ಕಾವ್ಯದ

ಉಲ್ಲೇಖ ಶ್ರವಣಬೆಳ್ಗೊಳ ಶಾಸನದಲ್ಲಿ ಬರುತ್ತದೆ. ಬಸವನಪುರ ಶಾಸನದಲ್ಲಿಯೂ ಈ ವಿವರಣೆ ಇದೆ. ಅದೇನೇ ಇರಲಿ, ಶ್ರವಣಬೆಳ್ಗೊಳ ಶಾಸನ "ಚೂಳಾಮಣಿ ಸೇವ್ಯಕಾವ್ಯ"ವೆಂದೂ, ಬಸವನಪುರ ಶಾಸನ "ಚೂಡಾಮಣಿಕಾವ್ಯ"ವೆಂದೂ ಹೇಳುತ್ತ, ಇದು ಒಂದು ಕಾವ್ಯಕೃತಿಯೆಂದು ಸ್ಪಷ್ಟಪಡಿಸುತ್ತವೆ. ಹೀಗಿದ್ದೂ, ಈವರೆಗೆ ಎಲ್ಲ ವಿದ್ವಾಂಸರು ಈ ಮೂರೂ ಕೃತಿಗಳ ಹೆಸರು "ಚೂಡಾಮಣಿ" ಎಂದು ಇರುವುದನ್ನೂ, ವ್ಯಾಖ್ಯಾನಗಳ ಗ್ರಂಥಪ್ರಮಾಣದ ೯೧,೦೦೦ ಮತ್ತು ೯೬,೦೦೦ ಅಂಕಿಗಳಲ್ಲಿ ಸ್ವಲ್ಪ ಹೋಲಿಕೆ ಇರುವುದನ್ನೂ ಗಮನಿಸಿ ಇವು ಒಂದೇ ಎಂಬ ತಪ್ಪು ಅಭಿಪ್ರಾಯಕ್ಕೆ ಬಂದಿದ್ದಾರೆ. ಆದರೆ ಶ್ರೀವರ್ಧದೇವನದು ಕಾವ್ಯ, ಬಹುಶಃ ಸಂಸ್ಕೃತ ಕಾವ್ಯ. ಮಿಕ್ಕ ಎರಡು ಬೇರೆ ಬೇರೆ ಗ್ರಂಥಗಳಿಗೆ ಬರೆದ ಕನ್ನಡ ವ್ಯಾಖ್ಯಾನಗಳಾಗಿವೆಯೆಂಬುದನ್ನು ಇನ್ನುಮೇಲಾದರೂ ಹೇಳುತ್ತಹೋಗಬೇಕು.

ಹೀಗೆ ಕನ್ನಡಸಾಹಿತ್ಯದ ಮೊದಲಘಟ್ಟದಲ್ಲಿ ಸಹಜವಾಗಿಯೇ ಟೀಕೆ-ವ್ಯಾಖ್ಯಾನದಂತಹ ಸುಲಭ ಸಾಹಿತ್ಯ ಪ್ರಕಾರಗಳು ಹುಟ್ಟಿಕೊಂಡಂತಿವೆ. ಈ ರೀತಿ ದುಡಿದು ಕಾಲುಗಟ್ಟಿ ಮಾಡಿಕೊಂಡ ಕನ್ನಡ ಮುಂದಿನ ದಿನಗಳಲ್ಲಿ ಭಾಷಾಂತರಕಾರ್ಯಕ್ಕೆ ದುಡಿಯತೊಡಗಿತು.

**ಭಾಷಾಂತರ ಸಾಹಿತ್ಯಸೃಷ್ಟಿ**

ಈ ಹಿಂದೆ ಹೇಳಿದಂತೆ, ಕನ್ನಡ ಸಾಹಿತ್ಯದ ಮೇಲೆ ಪ್ರಾಕೃತದ ತರುವಾಯ ಪ್ರಭಾವ ಬೀರುತ್ತ ಬಂದಿರುವುದು ಸಂಸ್ಕೃತ. ಈ ಘಟ್ಟದಲ್ಲಿ ಪ್ರಾಕೃತಕೃತಿಗಳಿಗೆ ಟೀಕೆ-ವ್ಯಾಖ್ಯಾನಗಳು ಹುಟ್ಟಿದರೆ ಸಂಸ್ಕೃತ ಕೃತಿಗಳಿಗೆ ಭಾಷಾಂತರರೂಪಗಳು ಹುಟ್ಟಿದವು. ಅವು ಧಾರ್ಮಿಕ ಕೃತಿಗಳಾದರೆ ಇವು ಲೌಕಿಕ ಕೃತಿಗಳಾಗಿವೆಯೆಂಬುದನ್ನು ಇಲ್ಲಿ ನೆನೆಯಬೇಕು. ಹೀಗೆ ಸಂಸ್ಕೃತಕೃತಿಗಳನ್ನು ಕನ್ನಡಕ್ಕೆ ತರುವಾಗ ತಪ್ಪದೇ ಕೃತಿನಾಮದ ಹಿಂದೆ "ಕರ್ಣಾಟ" ಎಂಬ ವಿಶೇಷಣ ಬಳಸುತ್ತ ಬಂದ ರೂಢಿಯೊಂದು ಉದ್ದಕ್ಕೂ ಕಂಡುಬರುತ್ತದೆ. ಉದಾ: ಅಸಗನ ಕರ್ಣಾಟ ಕುಮಾರಸಂಭವ ಕಾವ್ಯ, ಕನ್ನಮಯ್ಯನ ಕರ್ಣಾಟ ಮಾಳವೀ ಮಾಧವ ಕಾವ್ಯ. ಈ ಪರಂಪರೆ ಆಮೇಲೆಯೂ ಕರ್ಣಾಟ ಕಾದಂಬರಿ, ಕರ್ಣಾಟ ಪಂಚತಂತ್ರ ಎಂದು ಮುಂದುವರಿದುದನ್ನು ಇಲ್ಲಿ ಎತ್ತಿ ಹೇಳಬಹುದು. ಈ ಕಾಲಘಟ್ಟದಲ್ಲಿ ಅಸಗನು ಕಾಳಿದಾಸನ ಕುಮಾರಸಂಭವವನ್ನೂ, ಕನ್ನಮಯ್ಯನು ಭವಭೂತಿಯ ಮಾಲತೀಮಾಧವನನ್ನೂ ಕನ್ನಡಿಸಿದ ಬಗ್ಗೆ ಅನೇಕ ಕಡೆ ಸೂಚನೆಗಳು ಸಿಗುತ್ತವೆ. ಕೃತಿ ಲಭ್ಯವಿರದಿದ್ದರೂ ಕಾವ್ಯಾವಲೋಕನ, ಶಬ್ದಮಣಿದರ್ಪಣದಂತಹ ಕೃತಿಗಳಲ್ಲಿ ಇವರ ಭಾಷಾಂತರ ಪದ್ಯಗಳಿರುವ ಸಾಧ್ಯತೆಯಿದೆ.

ಕವಿರಾಜಮಾರ್ಗಕಾರ ಹೇಳುವಂತೆ ದುರ್ವಿನೀತ "ಗದ್ಯಕಥಾ" ಪ್ರಕಾರದಲ್ಲಿ ಸಾಹಿತ್ಯ ರಚಿಸಿದವ. ಶಾಸನಗಳು ಹೇಳುವಂತೆ ಈತ "ವಡ್ಡಕಥಾ" ಕೃತಿ ರಚಿಸಿದವ. ಈ ವಡ್ಡಕಥೆ ಕನ್ನಡದ್ದೇ ಆಗಿದ್ದ ಪಕ್ಷದಲ್ಲಿ ಗುಣಾಢ್ಯನ ಪ್ರಾಕೃತ ಬೃಹತ್ಕಥೆ ಕನ್ನಡಕ್ಕೆ ಭಾಷಾಂತರಗೊಂಡಿದ್ದಿತೆಂಬ ನಿರ್ಣಯಕ್ಕೆ ಬರಬೇಕಾಗುತ್ತದೆ. ಇದಕ್ಕೆ ಇನ್ನೂ ಆಧಾರಗಳು ಬೇಕು. ಈ ದಾರಿಯಲ್ಲಿಯೇ ಶಿವಕೋಟ್ಯಾಚಾರ್ಯನ ಪ್ರಾಕೃತ ವಡ್ಡಾರಾಧನೆಯನ್ನು ಭ್ರಾಜಿಷ್ಣು (?) ಕನ್ನಡಕ್ಕೆ ಭಾಷಾಂತರಿಸಿದ್ದರೆ ಭಾಷಾಂತರರೂಪದ ಕಥಾಪರಂಪರೆಯೂ ಈ ಘಟ್ಟದಲ್ಲಿ ಹುಟ್ಟಿತೆಂದು ಭಾವಿಸಬೇಕಾಗುತ್ತದೆ.

**ಸೃಜನಶೀಲ ಭಾಷಾಂತರ ಸಾಹಿತ್ಯಸೃಷ್ಟಿ**

ಹೀಗೆ ಟೀಕೆ-ವ್ಯಾಖ್ಯಾನ ಕಾರ್ಯ, ಬಳಿಕ ಭಾಷಾಂತರ ಕಾರ್ಯಗಳ ಮೂಲಕ ಕ್ರಮೇಣ ಹದಗೊಳ್ಳುತ್ತ ಬಂದ ಕನ್ನಡ ಶೈಲಿ ಆಮೇಲೆ ಸೃಜನಶೀಲ ಭಾಷಾಂತರಕ್ಕೆ ಹೊರಳಿರುವ

ಸಾಧ್ಯತೆಯಿದೆ. ಈ ಕ್ರಿಯೆಗೆ ಆಕರವಾದುವು ಜಿನಸೇನಾಚಾರ್ಯ, ಗುಣಭದ್ರಾಚಾರ್ಯರ ಸಂಸ್ಕೃತ ಮಹಾಪುರಾಣ, ಪುನ್ನಾಟ ಜಿನಸೇನಾಚಾರ್ಯರ ಸಂಸ್ಕೃತ ಹರಿವಂಶಪುರಾಣ ಕೃತಿಗಳು. ದೊಡ್ಡ ಕಾಣಿಕೆಯಾಗಿ ಅವತರಿಸಿದ ಈ ಕೃತಿಗಳಿಂದ ಆಕರ್ಷಿತರಾದ ಕನ್ನಡದ ಜೈನಕವಿಗಳು ಅವುಗಳನ್ನು ಸ್ವಲ್ಪ ಸ್ವಾತಂತ್ರ್ಯವಹಿಸಿಯೇ ಭಾಷಾಂತರ ಮಾಡಿಕೊಳ್ಳುವಲ್ಲಿ ಸೃಜನಶೀಲ ಭಾಷಾಂತರ ಪ್ರಯೋಗ ಕಣ್ಣು ತೆರೆದಂತಿದೆ. ಇದಕ್ಕೆ ನಿದರ್ಶನವೆನ್ನುವಂತೆ ಹುಟ್ಟಿದ ಕೃತಿಗಳೆಂದರೆ ಆದಿಗುಣವರ್ಮನ ಹರಿವಂಶಪುರಾಣ, ಶ್ರೀ ವಿಜಯನ ರಘುವಂಶಮಹಾಪುರಾಣ, ನಾಗವರ್ಮನ ವತ್ಸರಾಜಚರಿತೆ, ನಾಗದೇವನ ಸುಲೋಚನಾಚರಿತೆ. ಅಲಭ್ಯವಾಗಿರುವ ಇವುಗಳ ಮಾದರಿಯಲ್ಲಿಯೇ ಪಂಪನ ಆದಿಪುರಾಣ, ಪೊನ್ನನ ಶಾಂತಿಪುರಾಣ ಮೊದಲಾದವು ಹುಟ್ಟಿಕೊಂಡಂತಿವೆ. ಪಂಪನ ಆದಿಪುರಾಣ, ಜಿನಸೇನಾಚಾರ್ಯರ ಸಿದ್ಧಕೃತಿಯನ್ನವಲಂಬಿಸಿದ್ದರೂ, ಆಗಾಗ ದೂರಸರಿದು ಕಟ್ಟಿರುವ ಸಂದರ್ಭಗಳನ್ನೂ ಸೃಷ್ಟಿಸಿರುವ ಸೃಜನಶೀಲತೆಯನ್ನೂ ಇಲ್ಲಿ ನೆನೆಯಬಹುದು. ಈ ಧೋರಣೆ ಕನ್ನಡದಲ್ಲಿ ಉದ್ದಕ್ಕೂ ಜೈನಪುರಾಣ ಪರಂಪರೆ ಮುಂದುವರಿಯಲು ದಾರಿಮಾಡಿಕೊಟ್ಟುದು ಬಹುಮುಖ್ಯ ಸಂಗತಿಯಾಗಿದೆ.

## ರೂಪಾಂತರ ಸಾಹಿತ್ಯಸೃಷ್ಟಿ

ಪ್ರಾಚೀನ ಕನ್ನಡಸಾಹಿತ್ಯದ ಸೃಷ್ಟಿಸಂದರ್ಭದಲ್ಲಿ ಕವಿಗಳು ಬಾಳಿದ ಸನ್ನಿವೇಶ ತುಂಬ ಮಹತ್ವದ ಪಾತ್ರವಹಿಸಿದೆ. ವೈದಿಕರು ಸಂಸ್ಕೃತದಲ್ಲಿ, ಜೈನರು ಸಂಸ್ಕೃತ-ಪ್ರಾಕೃತಗಳಲ್ಲಿ ಪುರಾಣಸಂಘಟನೆಯ (ಮೈಥಿಫಿಕೇಶನ್) ಕಾರ್ಯವನ್ನು ಪೂರೈಸಿದ್ದು ಮತ್ತು ಮುಂದುವರಿಸಿದ್ದ ಕಾಲವದು. ಈ ಪುರಾಣಸಂಘಟನೆಯೊಂದಿಗೆ ಜೈನಕವಿಗಳು ವೈದಿಕ ಪುರಾಣಗಳನ್ನು ಸಂಸ್ಕೃತ ಪ್ರಾಕೃತಭಾಷೆಗಳಲ್ಲಿ ಪುನಸ್ಸಂಘಟನೆ (ರೀ-ಮೈಥಿಫಿಕೇಶನ್)ಗೊಳಿಸುವ ಕಾರ್ಯವನ್ನೂ, ಕನ್ನಡಭಾಷೆಯಲ್ಲಿ ವಿಘಟನೆ (ಡೀ-ಮೈಥಿಫಿಕೇಶನ್)ಗೊಳಿಸುವ ಕಾರ್ಯವನ್ನೂ ಕೈಗೆತ್ತಿಕೊಂಡರು. ಸೃಜನಶೀಲಭಾಷಾಂತರದ ನೆಲೆಗೆ ಸಾಗಿಬಂದಿದ್ದ ಕರ್ನಾಟಕದ ಜೈನರು ಸಂಸ್ಕೃತ-ಪ್ರಾಕೃತಗಳಲ್ಲಿ ಜೈನೀಕರಿಸಿಕೊಂಡಿದ್ದ (ರೀ-ಮೈಥಿಫಿಕೇಶನ್) ವೈದಿಕ ಪುರಾಣಗಳನ್ನು ಸೃಜನಶೀಲವಾಗಿ ಭಾಷಾಂತರಿಸಿಕೊಳ್ಳುವ ಹೊಸ ಹಾದಿಯನ್ನೂ ಈ ಘಟ್ಟದಲ್ಲಿ ಹಿಡಿದರು. "ಪುರಾಣ ಪುನಸ್ಸಂಘಟನೆ" (ರೀ-ಮೈಥಿಫಿಕೇಶನ್) ಎನ್ನುವುದು ಒಂದು ಸಂಸ್ಕೃತಿಯ ಕಾವ್ಯವನ್ನು ಇನ್ನೊಂದು ಸಂಸ್ಕೃತಿಗೆ ತಿರುಗಿಸಿಕೊಳ್ಳುವ ಕಲೆಯಾಗಿದೆ. ಈ ಪ್ರಯೋಗಕ್ಕೆ ಅನ್ಯಕೃತಿಗಳು ಗುರಿಯಾಗಿರಬಹುದಾದರೂ ರಾಮಾಯಣ ಮಹಾಭಾರತಗಳ ಪುನಸ್ಸಂಘಟನೆ ಮಾತ್ರ ಎದ್ದುಕಾಣುವ ರೀತಿಯಲ್ಲಿ ಜರುಗಿತ್ತು. ಈ ಕಾಲದಲ್ಲಿ ಹುಟ್ಟಿದ ಪುನಸ್ಸಂಘಟನಾತ್ಮಕ ರಾಮಾಯಣ ಕೃತಿಯೆಂದರೆ ಶ್ರೀವಿಜಯನ ಅನುಪಲಬ್ಧ ರಘುವಂಶ ಮಹಾಪುರಾಣ. ಇದು ಪ್ರಾಚೀನ ಯಾವ ಜೈನ ರಾಮಾಯಣವನ್ನು ಅವಲಂಬಿಸಿದೆಯೆಂಬುದು ತಿಳಿದುಬರುವುದಿಲ್ಲ. ಮುಂದೆ ನಾಗಚಂದ್ರ, ಕುಮುದೇಂದು ಈ ಪರಂಪರೆಯನ್ನು ಬೆಳೆಸಿಕೊಂಡು ಹೋದುದನ್ನು ಇಲ್ಲಿ ಸ್ಮರಿಸಬಹುದು.

ಇದೇ ರೀತಿ ಪುನ್ನಾಟದ ಜಿನಸೇನಾಚಾರ್ಯನ 'ಹರಿವಂಶ'ವನ್ನಾಧರಿಸಿ ಆದಿಗುಣವರ್ಮನ 'ಹರಿವಂಶ' ಹುಟ್ಟಿರುವಂತಿದೆ. ಕಾವ್ಯಾವಲೋಕನದಲ್ಲಿ ಹರಿವಂಶ ಕೃತಿಗೆ ಸಂಬಂಧಿಸಿದ ಸುಮಾರು 18 ಪದ್ಯಗಳಿವೆಯೆಂದು ಆರ್. ನರಸಿಂಹಾಚಾರ್ಯರು ಹೇಳುತ್ತಾರೆ. ಇವುಗಳಲ್ಲಿ ಕೆಲವಾದರೂ ಗುಣವರ್ಮನ ಹರಿವಂಶ ಕೃತಿಗೆ ಸಂಬಂಧಿಸಿರಬಹುದು. ಮುಂದೆ ಬಂಧುವರ್ಮ, ಕರ್ಣಪಾರ್ಯ ಮೊದಲಾದವರು ಈ ಪರಂಪರೆಯನ್ನು ಬೆಳೆಸಿಕೊಂಡು ಹೋದುದನ್ನು ಇಲ್ಲಿ ನೆನೆಯಬಹುದು.

ಹೀಗೆ ರಾಮಾಯಣ, ಮಹಾಭಾರತಗಳನ್ನಲ್ಲದೆ, ಜೈನೀಯ ಅಂಶಗಳನ್ನೊಳಗೊಳ್ಳುವ ಮೂಲಕ ಪುನಸ್ಸಂಘಟನೆಗೆ ಗುರಿಯಾದ ವಸುಭಾಗಭಟ್ಟನ ಪಂಚತಂತ್ರವನ್ನು ಬ್ರಾಹ್ಮಣನಾದ

ದುರ್ಗಸಿಂಹ ಕನ್ನಡಕ್ಕೆ ತಂದುದು, ತರುವಾಯಕಾಲೀನ ಒಂದು ಅಪವಾದಾತ್ಮಕ ಉದಾಹರಣೆಯೆಂದೇ ಹೇಳಬಹುದು. ಈ ಕ್ರಿಯೆ ಕನ್ನಡದಲ್ಲಿಯೂ ಸ್ವತಂತ್ರವಾಗಿ ಮುನ್ನಡೆದಿದ್ದು ಶಿವನ ಕಾಮದಹನ ಲೀಲೆಯನ್ನು, ನಾಗಚಂದ್ರ, ಆಂಡಯ್ಯ ಮೊದಲಾದವರು ಪರಿವರ್ತಿಸಿಕೊಂಡಿರುವುದು, ಬೇರುಗಳು ಈ ಮೊದಲ ಘಟ್ಟದಲ್ಲಿಯೇ ಚಿಗುರಿದ್ದರೆ ಆಶ್ಚರ್ಯಪಡಬೇಕಿಲ್ಲ. ರನ್ನ, ನೇಮಿಚಂದ್ರರು ಶಿವನ ಪಾಶುಪತಾಸ್ತ್ರಲೀಲೆಯನ್ನು ಅಪಹಾಸ್ಯ ಗೈದುದು ಈ ಪರಂಪರೆಗೆ ಸಂಬಂಧಿಸಿದುದಾಗಿದೆ. ಇಂಥ ಅನೇಕ ಸಣ್ಣಪುಟ್ಟ ಪುನಸ್ಸಂಘಟನಾತ್ಮಕ ಅಂಶಗಳು ಜೈನ ಕಾವ್ಯಗಳಲ್ಲಿ ಸಿಗುತ್ತಿದ್ದು, ಈ ಧೋರಣೆ ಕನ್ನಡ ಸಾಹಿತ್ಯದ ಮೊದಲ ಘಟ್ಟದಲ್ಲಿಯೇ ಸೆಲೆಯೊಡೆದಂತಿದೆ.

ಪುರಾಣವನ್ನು ಸಂಘಟಿಸಿಕೊಳ್ಳುವುದು (ಮೈಥಿಫಿಕೇಶನ್) ಎನಿಸಿಕೊಳ್ಳುತ್ತದೆ. ಇಂಥ ಒಂದು ಪುರಾಣವನ್ನು ಬೇರೊಂದು ಪುರಾಣಕ್ಕೆ ಪರಿವರ್ತಿಸಿಕೊಳ್ಳುವುದನ್ನು ರೀಮೈಥಿಫಿಕೇಶನ್ ಎಂದೂ, ಬೇರೊಂದು ಚರಿತ್ರೆಗೆ ಪರಿವರ್ತಿಸಿಕೊಳ್ಳುವುದನ್ನು ಡೀಮೈಥಿಫಿಕೇಶನ್ ಎಂದೂ ಕರೆಯಬಹುದು. ಕಾಲದೃಷ್ಟಿಯಿಂದ ಹೇಳುವುದಾದರೆ ಬಹುಶಃ ರೀಮೈಥಿಫಿಕೇಶನ್ ಚಟುವಟಿಕೆಯ ತರುವಾಯದ ಘಟ್ಟವೇ ಡೀಮೈಥಿಫಿಕೇಶನ್ ಘಟ್ಟವಾಗಿದೆ. ಈ ಪ್ರಯೋಗ ನಮಗೆ ಪಂಪನಲ್ಲಿ ತೋರಿ ಬರುತ್ತಿದ್ದರೂ ಆದಿಗುಣವರ್ಮನಲ್ಲಿ ಇದು ಸಿದ್ಧಶಿಲ್ಪ ಪಡೆದು ಶೂದ್ರಕ ಕೃತಿಯ ಮೂಲಕ ಪ್ರಕಟಗೊಂಡಂತಿದೆ. ಇದು ಮೊದಲ ಘಟ್ಟದ ತುದಿಯಲ್ಲಿ ಅಥವಾ ಎರಡನೆಯ ಘಟ್ಟದ ಆದಿಯಲ್ಲಿ ಸಂಭವಿಸಿದ ಪ್ರಯೋಗವಾಗಿದೆ. ಜನಪ್ರಿಯವಾಗಿದ್ದ ವೈದಿಕ ಕೃತಿಗಳನ್ನು ಬಳಸಿಕೊಂಡು ಜೈನಧರ್ಮವನ್ನು ಪ್ರಸಾರಗೊಳಿಸುವ ಉದ್ದೇಶ ರೀಮೈಥಿಫಿಕೇಷನ್‌ದಲ್ಲಿದ್ದರೆ, ಅವುಗಳನ್ನು ಆಶ್ರಯ ನೀಡಿದ್ದ ಅರಸರ ಚರಿತ್ರೆಗೆ ಮಾಧ್ಯಮ ಮಾಡಿಕೊಂಡು ಅವರನ್ನು ಸುಪ್ರೀತಗೊಳಿಸುವ ಉದ್ದೇಶ ಡೀಮೈಥಿಫಿಕೇಶನದ್ದಾಗಿದೆ. ಅಲ್ಲಿ ವೈದಿಕ ವಸ್ತುವಿನ ಜೈನೀಕರಣ ಮುಖ್ಯವಾಗಿದ್ದರೆ, ಇಲ್ಲಿ ವೈದಿಕ ವಸ್ತುವಿನ ಅಪಕರ್ಷ ಮುಖ್ಯವಾಗಿದ್ದು, ಈ ಕ್ರಿಯೆ ಅಲ್ಲಿ ತುಂಬ ಸೂಕ್ಷ್ಮವಾಗಿ ಜರುಗಿರುತ್ತದೆ. ಅದಕ್ಕಾಗಿಯೇ ಈ ಕ್ರಿಯೆಯನ್ನು ಡೀಮೈಥಿಫಿಕೇಶನ್ (ಪುರಾಣ ವಿಘಟನೆ)ಯೆಂದು ಇಲ್ಲಿ ಕರೆಯಲಾಗಿದೆ. ಇಷ್ಟೇ ಏಕೆ, ಪುರಾಣವನ್ನು ಚರಿತ್ರೆಗೆ ಇಳಿಸುವ ಒಟ್ಟು ಧೋರಣೆಯೇ ವಿಘಟನರೂಪ ಅಥವಾ ಅಪಕರ್ಷ ರೂಪದ್ದಾಗಿದೆ. ಜೈನಕವಿಯಾಗಿರುವ ಪಂಪ ಜೈನ ಆದಿಪುರಾಣವನ್ನು ಡೀಮೈಥಿಫಿಕೇಶನ್‌ಗೊಳಿಸದೆ ವೈದಿಕ ಭಾರತಪುರಾಣವನ್ನು ಡೀಮೈಥಿಫಿಕೇಶನ್‌ಗೊಳಿಸುವಲ್ಲಿ ಅವನ ಜೈನ ಮನಸ್ಸು ಬೇರೆ ಬೇರೆ ಮಾನದಂಡಗಳನ್ನು ಬಳಸುತ್ತಿದೆಯೆಂದು ಸ್ಪಷ್ಟವಾಗುತ್ತದೆ. ಈ ಧೋರಣೆ ಪೊನ್ನ, ರನ್ನ ಮೊದಲಾದವರಲ್ಲಿ ಒಂದು ಪರಂಪರೆಯಾಗಿ ಬೆಳೆದು ಬಂದುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ.

## ಕನ್ನಡ ಸಂಘಂ ಸಾಹಿತ್ಯ

ಸಾಹಿತ್ಯ, ದೇಶೀಮೂಲದಿಂದಲೇ ಹುಟ್ಟಿರಲಿ, ಅನ್ಯದೇಶೀಮೂಲದಿಂದಲೇ ಹುಟ್ಟಿರಲಿ, ವಿಪುಲ ಪ್ರಮಾಣದಲ್ಲಿ ಜನಿಸಿದ ಬಳಿಕ ಅದನ್ನವಲಂಬಿಸಿ ಸಾರವತ್ತಾದ ಸಣ್ಣದೊಡ್ಡ ಸಂಗ್ರಹಗಳನ್ನು ರೂಪಿಸುವ ಕ್ರಿಯೆ ಜರುಗುತ್ತದೆ. ಸಾಹಿತ್ಯ ನಾಶವಾಗುತ್ತಿರುವಾಗಲೂ ಅದನ್ನು ಉಳಿಸಿಕೊಳ್ಳಲು ಇಂಥ ಪ್ರಯತ್ನಗಳು ಜರುಗುತ್ತವೆ. ತಮಿಳಿನ ಮೊದಲಘಟ್ಟದಲ್ಲಿ ಹುಟ್ಟಿದ 'ಸಂಘಂ ಸಾಹಿತ್ಯ' ಈ ಬಗೆಯ ಸಂಗ್ರಹಸಾಹಿತ್ಯವಾಗಿದೆ. ಇಂಥ ಒಂದು ಪ್ರಯತ್ನ ತಮಿಳಿನ ಸೋದರಭಾಷೆಯಾದ ಕನ್ನಡದಲ್ಲಿಯೂ ಜರುಗಿರಬಹುದೇ? ಎಂಬ ಸಂದೇಹ ಹುಟ್ಟುವುದು ಸಹಜ. ದಂಡಿಯ ಕಾವ್ಯಾದರ್ಶದಲ್ಲಿ ಬರುವ

ಮುಕ್ತಕಂ ಕುಲಕಂ ಕೋಶ ಸಂಘಾತ ಇತಿ ತಾದೃಶಃ
ಸರ್ಗಬಂಧಾಂಶರೂಪತ್ವಾದನುಕ್ತಃ ಪದ್ಯವಿಸ್ತರಃ ॥ 119 ॥

ಎಂಬ ಶ್ಲೋಕವನ್ನು ಕಾವ್ಯಾವಲೋಕನ ನಾಗವರ್ಮ -

ಇಡುಕುಂಗಬ್ಬಂ ಮುಕ್ತಕ
ಮೊದಂಬಡಲ್ ಸೆಗಳೆ ಕೆಲವು ಪಲವುಮೇಕಕ್ರಿಯೆಯೊಳ್ ।
ಪಡೆಗುಂ ಕುಳಕಾಖ್ಯೆಯನೆಡೆ
ಮಡಗದನೇಕಾರ್ಥ ವಸ್ತುಕಥನಂ ಕೋಶಂ ॥

ಎಂದು ಅನುವಾದಿಸುತ್ತಾನೆ. ಇಲ್ಲಿ ಮುಕ್ತಕ, ಕುಲಕ, ಕೋಶ ಎಂಬ ಸಾಹಿತ್ಯಪ್ರಕಾರದ ನಾಮಗಳನ್ನು ಮೂಲದಲ್ಲಿರುವಂತೆಯೇ ಎತ್ತಿಕೊಳ್ಳುವ ಅವನು, 'ಸಂಘಾತ'ಕ್ಕೆ ಪರ್ಯಾಯವಾಗಿ 'ಇಡುಕುಂಗಬ್ಬ' ಹೆಸರನ್ನು ಬಳಸಿದ್ದಾನೆ. ಕಾವ್ಯಾದರ್ಶದ ತಮಿಳು ಅನುವಾದವಾದ "ದಂಡ್ಯಳಂಕಾರಂ"ದಲ್ಲಿ ಸಂಘಾತಕ್ಕೆ ಪ್ರತಿಯಾಗಿ ತೊಕ್ಕೈ (ಸಂಕಲನ) ಪದವನ್ನು ಬಳಸಲಾಗಿದೆ. 'ತೊಕ್ಕೈ' ಎಂಬುದು 'ಸಂಘಂ' ಎಂಬುದರ ಪರ್ಯಾಯ ನಾಮದಂತೆ ತಮಿಳು ತೊಳ್ಕಾಪ್ಪಿಯಂ ವ್ಯಾಖ್ಯಾನದಲ್ಲಿ ಬಳಕೆಯಾಗಿದೆ. ಕಾವ್ಯಾದರ್ಶಕ್ಕೆ ಟೀಕೆ ಬರೆಯುತ್ತ ತರುಣವಾಚಸ್ಪತಿ ಈ ಸಂಘಾತಕ್ಕೆ ಕೊಟ್ಟ ಉದಾಹರಣೆಗಳಲ್ಲಿ 'ದ್ರವಿಡ' (=ತಮಿಳು) ಸಂಘಾತ"ವನ್ನು ಹೆಸರಿಸುತ್ತಾನೆ. ಇದರಿಂದ ಸಂಘಾತ-ಸಂಘಂ-ಇಡುಕುಂಗಬ್ಬಗಳು ಸಮನಾರ್ಥಕ ಪದಗಳೆಂದು ಸ್ಪಷ್ಟವಾಗುತ್ತದೆ. ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿ ಸಂಘಾತದ ಪ್ರಸ್ತಾಪ ಮೊದಲ ಸಲ ಕಂಡುಬರುವುದು ದಂಡಿಯಲ್ಲಿ. ಈತ ತಮಿಳುದೇಶ ನಿವಾಸಿ. ಈ ಎಲ್ಲ ಅಂಶಗಳನ್ನು ಮನದಂದರೆ ಕಾವ್ಯಾದರ್ಶ ಬರೆಯಹೊರಟ ದಂಡಿ ಸಂಸ್ಕೃತ ಕಾವ್ಯಮೀಮಾಂಸೆಯಲ್ಲಿ ತನ್ನ ನಾಡಿನ ಸಂಘಂ ಸಾಹಿತ್ಯವನ್ನು ಸಂಘಾತ ಹೆಸರಿನಿಂದ ಸೇರಿಸಿದನೆಂದೂ, ಇದನ್ನು ಹೋಲುತ್ತಿದ್ದ ಬಹುಶಃ 'ಇಡುಕುಂಗಬ್ಬ' ಎಂದು ಕರೆಯಿಸಿಕೊಳ್ಳುತ್ತಿದ್ದ ತನ್ನ ನಾಡಿನ ಸಾಹಿತ್ಯ ಪ್ರಕಾರವನ್ನೇ ಸಂಘಾತಕ್ಕೆ ಪ್ರತಿಯಾಗಿ ನಾಗವರ್ಮ ಸೂಚಿಸಿದನೆಂದೂ ಊಹಿಸಬಹುದಾಗಿದೆ. ೧೦೪೨ರ ನಾಗವರ್ಮ ಹೇಳುವ ಈ ಸಾಹಿತ್ಯ ಪ್ರಕಾರ ತಕ್ಕಮಟ್ಟಿಗೆ ಪ್ರಾಚೀನವಾದುದೇ ಇದ್ದು, ತಮಿಳು ಸಂಘಂ ಸಾಹಿತ್ಯ ಮಾದರಿಯಲ್ಲಿ ಕನ್ನಡಿಗರು ಇದನ್ನು ರೂಪಿಸಿರಬಹುದೆನಿಸುತ್ತದೆ.

### ಕಾವ್ಯಭಾಷೆ

ಕನ್ನಡಸಾಹಿತ್ಯ ಮುಖ್ಯವಾಗಿ ಕನ್ನಡ್ಯ-ಸಂಸ್ಕೃತಗಳೆಂಬ ದ್ವಿಭಾಷಾ ಸಂದರ್ಭದ ಸೃಷ್ಟಿಯಾಗಿದೆ. ಹೀಗಾಗಿ ಕನ್ನಡ ಮೂಲದ ಕಾವ್ಯಭಾಷೆ, ಕಾವ್ಯಶೈಲಿ, ಕಾವ್ಯವಸ್ತುಗಳಲ್ಲಿ ಬೆಳೆದುಬರುವುದರೊಂದಿಗೆ, ಸಂಸ್ಕೃತ ಪ್ರಭಾವಿತ ಕಾವ್ಯಭಾಷೆ, ಕಾವ್ಯರಚನೆ, ಮಾರ್ಗಪ್ರಧಾನ ಕಾವ್ಯರಚನೆಗಳೆಂಬ ಎರಡು ಶೈಲಿ ಶಾಖೆಗಳು ಹುಟ್ಟಿಕೊಂಡವು. ಇವು ಸಹಜವಾಗಿಯೇ ತಮ್ಮ ತಮ್ಮ ಸಹೃದಯ ಸಮೂಹವನ್ನು ನಿರ್ಧರಿಸಿಕೊಂಡವು. ಒಂದು: ಕೇಳುವ ಸಹೃದಯ ಸಮೂಹ, ಇನ್ನೊಂದು: ಓದುವ ಸಹೃದಯ ಸಮೂಹ. ಕೇಳುವ ಸಹೃದಯ ಸಮೂಹಕ್ಕಾಗಿ ಹುಟ್ಟಿದ ಲಿಪಿಬದ್ಧ ಸಾಹಿತ್ಯವೇ ಹಾಡುಗಬ್ಬ ಪ್ರಕಾರ, ಓದುವ ಸಹೃದಯ ಸಮೂಹಕ್ಕಾಗಿ ಹುಟ್ಟಿದ ಲಿಪಿಬದ್ಧ ಸಾಹಿತ್ಯವೇ ಓದುಗಬ್ಬ ಪ್ರಕಾರ. ಈ ಎರಡೂ ಕಾವ್ಯಸಂಪ್ರದಾಯಗಳಿಗೆ ಕನ್ನಡವನ್ನು ಹದಗೊಳಿಸಿಕೊಳ್ಳುವುದು ಅಂದಿನ ಬಹುಮುಖ್ಯ ಸವಾಲಾಗಿದ್ದಿತು.

ಕಾವ್ಯಭಾಷಾ ಸಂದರ್ಭದಲ್ಲಿ ಕನ್ನಡ-ಸಂಸ್ಕೃತ ಶಬ್ದಗಳನ್ನೂ ವಾಕ್ಯಗಳನ್ನೂ ಹಿತವಾಗುವಂತೆ

ದುಡಿಸಿಕೊಳ್ಳುವುದು ಪ್ರಾರಂಭದಲ್ಲಿ ಒಂದು ಸಮಸ್ಯೆ-ಸವಾಲಾಗಿ ಪರಿಣಮಿಸಿರಬೇಕು. ಈ ವಿಷಯವಾಗಿ ಕವಿರಾಜಮಾರ್ಗ ಅನೇಕ ಪರಿಹಾರಗಳನ್ನು ಸೂಚಿಸುತ್ತದೆ. ಸೊಗಯಿಸುವ ವಚನರಚನೆ 'ಹೃದಯದೊಳತಾಳ್ದ ಮಣಿಹಾರ'. ಅನುಗುಣವಿಲ್ಲದ ಪದಜೋಡಣೆ 'ಕನಕರಚನೆಯೊಳ್ ಮಣಿನಿಕರಂ' ಹೊಂದಿದ ಹಾಗೆ. ಅರಿಸಮಾಸವು ಸುಡುವ ಹಾಲಿಗೆ ಮಜ್ಜಿಗೆ ಬೆರೆಸಿದಂತೆ ಅನುಗುಣವಿಲ್ಲದ ಪದ ಸಂಯೋಜನೆ ನೆಲ್ಲು ಮೊಸರುಗುಡಿದಂತೆ, ಸಮಾಸದ ಮುಂದೆ ಬಂದ ಅಸಮಾಸ ಕಬ್ಬಿನ ತುದಿಯಂತೆ ರಸಹೀನ. ಎರಡು ಕ್ರಿಯಾವಿಶೇಷಣಗಳ ಜೊತೆಯ ಒಂದು ಕ್ರಿಯಾಪದ ಎರಡು ಕವಿಗಳ ಮಧ್ಯದ ಒಂದು ಕರುವಿನಂತೆ. ಸಂಸ್ಕೃತಾವ್ಯಯ ಮತ್ತು ಕನ್ನಡ ಪದಗಳ ಬಳಕೆ ಕರಡೆಯ ಮದ್ದಳೆಯ ಧ್ವನಿಯಂತೆ ಕರ್ಕಶ. ಸಮಾಸವಾಗಿ ಬಂದ ಸಂಸ್ಕೃತಾವ್ಯಯ ಮತ್ತು ಕನ್ನಡ ಪದಗಳ ಬೆರಕೆ ಮೃದಂಗ ಸಂಗೀತದ ಧ್ವನಿಯಂತೆ ಮಧುರ- ಇತ್ಯಾದಿ ಮಾತುಗಳು ಕನ್ನಡ ಭಾಷೆಯನ್ನು ಸಂಸ್ಕೃತ ಭಾಷೆಯೊಂದಿಗೆ ಹದಗೊಳಿಸಬೇಕಾದ ರೀತಿಯ ಪ್ರಾಥಮಿಕ ಪಾಠದಂತೆ ಕೇಳಿಸುತ್ತವೆ. ಹೀಗೆ 'ಕಾವ್ಯಭಾಷೆ'ಯನ್ನು ಪಾಕಗೊಳಿಸುವ ಕ್ರಿಯೆ ಮೊದಲಘಟ್ಟದಲ್ಲಿಯೇ ಜರುಗಿದಂತಿದೆ.

'ಕಾವ್ಯಶೈಲಿ'ಯ ಬಗೆಗೆ ಅಂದು ಒಂದಿಷ್ಟು ತಲೆದೋರಿರುವ ಸಾಧ್ಯತೆಯಿದೆ. ದೇಶಿಶೈಲಿ ಬಳಸಬೇಕೋ? ಮಾರ್ಗಶೈಲಿ ಬಳಸಬೇಕೋ? ಎಂಬ ಘರ್ಷಣೆ ಇದಾಗಿದೆ. ಸಂಸ್ಕೃತಶೈಲಿ ಕನ್ನಡಶೈಲಿಯ ಮೇಲೆ ಸವಾರಿ ಮಾಡುತ್ತಲಿರುವುದನ್ನು ಗಮನಿಸಿದ ಕನ್ನಡಿಗರು, ಒಂದು ಷಟ್ಪದದಲ್ಲಿ ಎಚ್ಚೆತ್ತು ಅದನ್ನು ವಿರೋಧಿಸಿದಂತಿದೆ. ಮರೆಯಾಗುತ್ತಲಿದ್ದ ತಮ್ಮ ದೇಶೀಶೈಲಿಯನ್ನು ಪುನರುಜ್ಜೀವನಗೊಳಿಸುವ ಸಾಹಿತ್ಯ ಚಟುವಟಿಕೆಯಲ್ಲಿ ತೊಡಗಿದ ಅವರನ್ನು ಮಾರ್ಗಶೈಲೀಯರು ಟೀಕಿಸಿರಬಹುದಾದ ಪದ್ಯವೊಂದು ಹೀಗಿದೆ:

ಛಂದಮಿದಾವುದೆಂದೊಡಿಜೆವರ್, ಪದಬಂಧದೊಳೀ ಪ್ರಯೋಗಮೆಂ-
ತೆಂದೊಡೆ ಬಯ್ವರ್ - ಆವ ಕವಿಮಾರ್ಗಮಿದೆಂದೊಡೆ ಪೊಯ್ವರ್ - ಅರ್ಥಮೇ -
ನೆಂದೊಡೆ ತೊಂಡುಭಂಡಗೆಡೆದುಟ್ಟುದನಿಕ್ಕುವರ್ - ಆವ ನೀತಿ ಪೇ-
ಟೆಂದೊಡೆ ಕೊಲ್ವರ್ - ಈಗಳಿನ ದೇಸಿಗೆ ಬಿಟ್ಟ ಮಹಾಕವೀಶ್ವರರ್ ॥

ಈ ಘರ್ಷಣೆಯ ಸಂದರ್ಭದಲ್ಲಿ ಕವಿರಾಜಮಾರ್ಗಕಾರ

ದೊರೆಕೊಂಡಿರೆ ಸೊಗಯಿಸುಗುಂ
ಪುರಾಣಕಾವ್ಯಪ್ರಯೋಗದೊಳ್ ತತ್ಕಾಲಂ ।
ವಿರಸಂ ಕರಮವು ದೇಸಿಗೆ ।
ಜರದ್ವಧೂವಿಷಯಸುರತರಸರಸಿಕತೆವೋಲ್ ॥

ಎನ್ನುತ್ತ ಅಂದಿನ ಸಂದರ್ಭಕ್ಕೆ ಸೂಕ್ತವೆನಿಸದ ಹಳೆಯ ದೇಶೀಶೈಲಿಯನ್ನು ನಿರಾಕರಿಸಿ, ಹೊಸ ಮಾರ್ಗಶೈಲಿಯನ್ನು ಪುರಸ್ಕರಿಸುತ್ತಾನೆ. ಆದರೆ,ಪಂಪ "ದೇಶಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳ್ ತಳ್ವುದು" ಎನ್ನುತ್ತ ಇವುಗಳ ಸಮನ್ವಯವನ್ನು ಪ್ರತಿಪಾದಿಸುತ್ತಾನೆ.

ಅನ್ಯಭಾಷೆ ಕಾರಣವಾಗಿ ಅಂದು ಶೈಲಿ ಸಮಸ್ಯೆ ತಲೆಯೆತ್ತಿತ್ತೇನೋ ನಿಜ. ಆದರೆ ಅನ್ಯ ಕಾವ್ಯ ವಸ್ತುವಿನ ಸ್ವೀಕಾರದಲ್ಲಿ ತೋರಿದ ಔದಾರ್ಯ ಕಾರಣವಾಗಿ ವಸ್ತು ಸಮಸ್ಯೆ ಮೊದಮೊದಲು ಉದ್ಭವಿಸಿರಲಿಕ್ಕಿಲ್ಲವೆನಿಸುತ್ತದೆ. ಕಾವ್ಯವಸ್ತು ವೈದಿಕ ಪುರಾಣದಿಂದ ಜೈನಪುರಾಣಕ್ಕೆ ವರ್ಗವಾಗುವ ರೀಮೈಥಿಫಿಕೇಶನ್ನನ್ನು ಸಮ್ಮತಿಸಿದ ಜನತೆ ವೈದಿಕ ಪುರಾಣದ ವಸ್ತು ಚರಿತ್ರೆಗೆ ವರ್ಗವಾಗುವ

ಡೀಮೈಥಿಫಿಕೇಶನ್ನಿಗೆ ಅಸಮ್ಮತಿ ತೋರಿದರೆಂದು ಕಾಣುತ್ತದೆ. ಈ ಕಾರ್ಯವನ್ನು ಗಣ್ಯಪ್ರಮಾಣದಲ್ಲಿ ಮಾಡಿದ ಪಂಪ "ಇದಾವ ದೋಷಮೋ" ಎನ್ನುವುದು ಜನತೆಯ ಪ್ರತಿಕ್ರಿಯೆಗೆ ಅವನು ತೋರಿದ ಮರುಪ್ರತಿಕ್ರಿಯೆಯಾಗಿರಬಹುದು. ಇದರಿಂದ ಶೈಲಿಸಮಸ್ಯೆಯ ಬಳಿಕ ಸ್ವಲ್ಪ ತಡವಾಗಿ, ಅಂದರೆ ಮೊದಲಘಟ್ಟದ ತುದಿಯಲ್ಲಿ ಇಲ್ಲವೆ ಎರಡನೆಯ ಘಟ್ಟದ ಆರಂಭದಲ್ಲಿ ವಸ್ತುಸಮಸ್ಯೆ ಉದ್ಭವಿಸಿರಬಹುದೆನಿಸುತ್ತದೆ.

ಇವಲ್ಲದೆ, 'ಯತಿ ವಿಲಂಘನ' 'ಪ್ರಾಸಾನುಪ್ರಾಸಾಂತಂಗಳ್ ಮೂರುಮತಿಶಯಂಗಳ್' ಎಂಬಂಥ ಅನೇಕ ನೆಲೆಗಳು, ಧ್ವನ್ಯಲಂಕಾರ, ಶಾಂತರಸ ಪರಿಕಲ್ಪನೆಗಳು ಈ ಮೊದಲಘಟ್ಟದಲ್ಲಿ ಕಾಣಸಿಕೊಂಡಂತಿದೆ. ಹೀಗಾಗಿ ನಾವು ಈವರೆಗೆ ಭಾವಿಸಿದಂತೆ, ಕವಿರಾಜಮಾರ್ಗವರೆಗಿನ ಮೊದಲಘಟ್ಟ ಕನ್ನಡ ಸಾಹಿತ್ಯೇತಿಹಾಸದಲ್ಲಿ ಅಷ್ಟೇನೂ ಅಪಕ್ವವಾದುದಲ್ಲವೆನಿಸುತ್ತದೆ. ಹೀಗೆ ಬೆಳೆದು ಒಂದು ಘಟ್ಟವನ್ನು ಮುಟ್ಟಿದ್ದ ಕಾರಣ, ಇದರ ಪರಾಮರ್ಶೆಗಾಗಿ 'ಕವಿರಾಜಮಾರ್ಗ'ವೆಂಬ ಕೃತಿ ಹುಟ್ಟಿ, ಹೊಸದೊಂದು ರಾಜಮಾರ್ಗ ತೋರಿಸಿದುದು ಸಹಜವೇ ಆಗಿದೆ.

# ರನ್ನನ ಕೃತಿಗಳು

ಡಾ. ಸಿ. ಪಿ. ಕೃಷ್ಣಕುಮಾರ್

ರನ್ನನ ಉಪಲಬ್ಧ ಕೃತಿಗಳು ಎರಡು[೧]: 'ಅಜಿತಪುರಾಣ' ಮತ್ತು 'ಗದಾಯುದ್ಧ'. ಅವುಗಳ ಒಂದು ಸ್ಥೂಲ ನೋಟ ಇಲ್ಲಿ ವಿವಕ್ಷಿತ.

## ಅಜಿತಪುರಾಣ

ಪ್ರಾಚೀನ ಕನ್ನಡ ಸಾಹಿತ್ಯದ ಬಹುಭಾಗ ಧರ್ಮಪ್ರಚೋದಿತವಾದುದೆಂಬುದು ಸರ್ವಶ್ರುತವಾದ ವಿಚಾರ. ಸಾಹಿತ್ಯಕ್ಕೆ ಧರ್ಮ ಬಾಧಕವಾಗಬೇಕಾಗಿಲ್ಲ. ಮಾತ್ರವಲ್ಲ, ಜೀವನಕ್ಕೆಂತೊ ಅಂತೆ ಸಾಹಿತ್ಯಕ್ಕೆ ಅದು ಹೊಸ ಆಯಾಮಗಳನ್ನು ದಾನ ಮಾಡಲೂಬಹುದು. ವಾಸ್ತವವಾಗಿ, ಸಾಹಿತ್ಯ ಸ್ವಾರಸ್ಯಕ್ಕೆ ಧಕ್ಕೆ ತರತಕ್ಕದ್ದು ಧರ್ಮವಲ್ಲ, ಮತ, ಅಥವಾ ಧರ್ಮದ ಮತೀಯ ಭಾಗ. ಕನ್ನಡ ಜೈನ ಪುರಾಣಗಳನ್ನು ನೋಡಿದರೆ ಈ ಸತ್ಯ ಮನವರಿಕೆಯಾಗುತ್ತದೆ. ಅವು, ಸಂಸ್ಕೃತ ಮೂಲಗಳಿಗೆ ಹೋಲಿಸಿದಾಗ, ಕಾವ್ಯಧರ್ಮವನ್ನು ಅಧಿಕತರವಾಗಿ ಪ್ರಕಟಿಸುತ್ತವೆ. ಜತೆಗೆ, ಮತ ಪ್ರಕ್ರಿಯೆಗಳನ್ನು ಅತ್ಯಂತ ವಿವರಪೂರ್ಣವಾಗಿ ವ್ಯಾವರ್ಣಿಸುವ ಪುರಾಣ ಪ್ರಜ್ಞೆಗೂ ನಿಷ್ಠವಾಗುತ್ತವೆ. ಕಾವ್ಯಧರ್ಮದಲ್ಲೂ ಒಂದು ಬಗೆಯ ಮತಾಚರಣೆ ಕೆಲಸ ಮಾಡುತ್ತದೆ, ಕವಿಸಮಯ ಚಮತ್ಕಾರಾದಿಗಳ ರೂಪದಲ್ಲಿ. ಈ ತೊಡಕುಗಳನ್ನೆಲ್ಲ ಮೀರಿ ಶ್ರೇಷ್ಠವಾದ ಆಗಮಿಕ ಕಾವ್ಯವೊಂದನ್ನು ಸೃಜಿಸಿದವನು ಪಂಪ. ಅವನ ಸಹಜ ಪ್ರತಿಭೆಯಾಗಲಿ 'ಆದಿಪುರಾಣ'ದ ಕಥೆಯಲ್ಲಿ ಅವನಿಗಿದ್ದ ಅವಕಾಶಗಳಾಗಲಿ ಉಳಿದ ಜೈನ ಕವಿಗಳ ಪಾಲಿಗಿರಲಿಲ್ಲವಾದ್ದರಿಂದ, ಅವರ 'ಪುರಾಣ'ಗಳೆಲ್ಲ 'ಆದಿಪುರಾಣ'ಕ್ಕೆ ದ್ವಿತೀಯವಾಗಿಯೋ ತೃತೀಯವಾಗಿಯೋ ಪರಿಣಮಿಸಿದುವು. ಅವುಗಳ ಪಂಕ್ತಿಯಲ್ಲಿ ಗಣ್ಯವಾಗಿ ನಿಲ್ಲುವ ಎರಡು ಮೂರು ಕೃತಿಗಳಲ್ಲಿ ರನ್ನನ 'ಅಜಿತಪುರಾಣ'ವೂ ಒಂದು.

ಉಳಿದ ಕವಿಗಳು ತಮ್ಮ ಧಾರ್ಮಿಕ ವಿರಚನೆಗಳನ್ನು 'ಪುರಾಣ'ವೆಂದಷ್ಟೆ ಕರೆದುಕೊಂಡಿದ್ದರೆ, ರನ್ನ ತನ್ನ ಕೃತಿಯನ್ನು 'ಪುರಾಣತಿಲಕ'ವೆಂದು ಕರೆದುಕೊಂಡಿದ್ದಾನೆ. ತನ್ಮೂಲಕ ಅದರ ಪುರಾಣಮುಖದ ಮೇಲೆ ಹೆಚ್ಚು ಒತ್ತು ಹಾಕಿದ್ದಾನೆ. ಎಂತಲೇ ಅವನ ಕೃತಿ ರಸವತ್ಕಾವ್ಯವಾಗುವುದಕ್ಕಿಂತ ಮಿಗಿಲಾಗಿ 'ಪುರಾಣಚೂಡಾಮಣಿ'ಯಾಗಿದೆ, ಅಲ್ಲಿ ಕಾಣಸಿಕೊಳ್ಳುವ ಕವಿತೆಯೂ ಬಹುಮಟ್ಟಿಗೆ ಸಂಪ್ರದಾಯಾನುವರ್ತಿಯೇ. ಅದರಲ್ಲಿ ಅಸಂಬದ್ಧವಾದ, ಅನುಚಿತವಾದ ಅಂಶಗಳಿಗೆ ಕೊರತೆಯಿಲ್ಲ.

೧. 'ಪರಶುರಾಮಚರಿತ' ಮತ್ತು 'ಚಕ್ರೇಶ್ವರ ಚರಿತ' ಸಿಕ್ಕಿಲ್ಲ. ಅಪೂರ್ಣವಾಗಿ ದೊರೆತಿರುವ 'ರನ್ನಕಂದ' ರನ್ನನದೇ ಎಂಬುದಕ್ಕೆ ಖಚಿತವಾದ ಆಧಾರವಿಲ್ಲ.

ಆದರೆ 'ಅಜಿತಪುರಾಣ'ದ ಕೆಲವು ಭಾಗಗಳಾದರೂ ಒಳ್ಳೆಯ ಕವಿತೆಯಾಗಿ ಅರಳಿವೆಯೆಂಬುದನ್ನು ಕಡೆಗಣಿಸುವಂತಿಲ್ಲ. ಅಲ್ಲಿ ರನ್ನನ ರಸಾವೇಶ, ಭಾವಾವೇಗಗಳು ಚೆನ್ನಾಗಿ ವ್ಯಕ್ತವಾಗುತ್ತವೆ.

'ಅಜಿತಪುರಾಣ' ದ್ವಿತೀಯ ತೀರ್ಥಂಕರನಾದ ಅಜಿತನಾಥನ ಕಥೆಯನ್ನು ಬಿತ್ತರಿಸುತ್ತದೆ. ಜಿನಚರಿತೆಗೆ ಪೀಠಿಕೆಯಾಗಿ ಅತ್ತಿಮಬ್ಬೆಯ ವೃತ್ತಾಂತವೂ ಅನುಬಂಧವಾಗಿ ಸಗರನ ಕತೆಯೂ ಅಳವಟ್ಟಿವೆ. ಈ ಪೀಠಿಕೆ, ಅನುಬಂಧಗಳೇ ತುಂಬಾ ಸ್ವಾರಸ್ಯ ಪೂರ್ಣವಾಗಿದ್ದು, ನಡುವೆಯಿರುವ ತೀರ್ಥಂಕರಚರಿತವೇ ತುಸು ಸಪ್ಪೆಯಾಗಿರುವುದೊಂದು ವಿಶೇಷ. ಅದರಲ್ಲಿ ಬಂದಿರುವ ವಿಮಲವಾಹನನ ವೈರಾಗ್ಯದ ನಿರೂಪಣೆಯ ಭಾಗದಲ್ಲಿ ಮಾತ್ರ ಕಾವು ಕಾಣುತ್ತದೆ.

ಮೊದಲು ಅತ್ತಿಮಬ್ಬೆಯ ವಿಷಯವನ್ನು ನೋಡಬಹುದು. ಅನನ್ಯ ಶಕ್ತಿ ಚಿತ್ರವೊಂದನ್ನು ರನ್ನ ಇಲ್ಲಿ ಕೊಟ್ಟಿದ್ದಾನೆ. ಹಾಗೆ ನೋಡಿದರೆ, ಅತ್ತಿಮಬ್ಬೆಗೂ ತೀರ್ಥಂಕರಚರಿತಕ್ಕೂ ಯಾವುದೇ ಸಾವಯವ ಸಂಬಂಧವಿಲ್ಲ. ಆದರೆ ಅವಳ ವ್ಯಕ್ತಿತ್ವದ ಹಿರಿಮೆ ಮತ್ತು ರನ್ನ ಅದನ್ನು ನಿರೂಪಿಸುವ ರೀತಿ ಅವಳಿಗೆ ಕಥಾನಾಯಿಕೆಯ ಪಟ್ಟ ಕಟ್ಟುವಂತಿದೆ. ಜಿನಜನನಿಯೊಡನೆ ಅತ್ತಿಮಬ್ಬೆಯನ್ನು ಸಮೀಕರಿಸಿದ್ದಾನೆ ರನ್ನ. ಕಾವ್ಯದ ಆದ್ಯಂತವೆರಡರಲ್ಲೂ ಅವಳ ಗುಣಕಥನ ಸವಿಸ್ತಾರವಾಗಿ ನಡೆದಿದೆ, ಅಷ್ಟೇ ಅಲ್ಲ, ಪ್ರತಿಯೊಂದು ಆಶ್ವಾಸದ ಕಡೆಯಲ್ಲೂ ಅವಳನ್ನು ನೆನೆಯುತ್ತಾನೆ ರನ್ನ. ಹೀಗಾಗಿ, ತೀರ್ಥಂಕರನಿಗಿಂತ ಅತ್ತಿಮಬ್ಬೆಯೇ 'ಅಜಿತಪುರಾಣ'ದಲ್ಲಿ ಎದ್ದು ಕಾಣುತ್ತಾಳೆ, ನಮ್ಮ ಚಿತ್ತವನ್ನು ಸೆಳೆದುಕೊಳ್ಳುತ್ತಾಳೆ, ಗೌರವಾರ್ಹಳಾಗುತ್ತಾಳೆ.

ಅತ್ತಿಮಬ್ಬೆ ರನ್ನನಿಗೆ ಆಶ್ರಯವಿತ್ತು 'ಅಜಿತಪುರಾಣ'ವನ್ನು ಬರೆಯಿಸಿದವಳು. ಹೀಗೆ ಕಾವ್ಯ ರಚನೆಗೆ ಪ್ರೇರಣೆ ಕೊಟ್ಟದ್ದು ಮಾತ್ರವಲ್ಲ, ಕಾವ್ಯಸಂರಕ್ಷಣೆಯ ಕೆಲಸವನ್ನೂ ಆಕೆ ಮಾಡಿದಳು. (ಪೊನ್ನನ 'ಶಾಂತಿಪುರಾಣ'ದ ಸಾವಿರ ಪ್ರತಿಗಳನ್ನು ಅವಳು ಮಾಡಿಸಿದ ಸಂಗತಿ ಬೇರೆಡೆ ತಿಳಿದುಬರುತ್ತದೆ). ಇಷ್ಟು ಸಾಲದೆಂಬಂತೆ ಅವಳು ಕಾವ್ಯಕ್ಕೆ ವಸ್ತುವೂ ಆಗಿಬಿಟ್ಟಿದ್ದಾಳೆ. ಇದು ಸಾಮಾನ್ಯವಲ್ಲ, ಅತ್ತಿಮಬ್ಬೆಯಂಥ ಮಹಿಳೆ ಕನ್ನಡಸಾಹಿತ್ಯದಲ್ಲಿ ಒಬ್ಬಳೇ.

ಪ್ರಾಚೀನ ಕಾವ್ಯಗಳಲ್ಲಿ ಕಾಲ್ಪನಿಕ, ಪೌರಾಣಿಕ ವ್ಯಕ್ತಿಗಳೇ ಹೆಚ್ಚಾಗಿ ಕಂಡುಬರತಕ್ಕವರು, ಚಾರಿತ್ರಿಕ ವ್ಯಕ್ತಿಗಳು ನಾಮಮಾತ್ರರಾಗಿ ಗೋಚರಿಸಬಹುದಷ್ಟೆ. ಆದರೆ ಅತ್ತಿಮಬ್ಬೆ ಈ ನೆಲದ ಮೇಲೆ ದೇಹಧಾರಿಯಾಗಿ ನಡೆದಾಡಿದ ಐತಿಹಾಸಿಕ ಮಹಿಳೆ, ಅವರ ಬಾಳಿನ ಮತ್ತು ವ್ಯಕ್ತಿತ್ವದ ಪೂರ್ಣ ಚಿತ್ರವನ್ನು ರನ್ನ ಕೊಟ್ಟಿದ್ದಾನೆ. ಅದು ಅತ್ಯಂತ ವಿಶಿಷ್ಟವಾಗಿ ಉಜ್ವಲವಾಗಿ ಪರಿಣಮಿಸಿದೆ. ಅದರಲ್ಲಿ ಅತ್ಯುಕ್ತಿಗಳಿವೆ, ಪುನರುಕ್ತಿಗಳಿವೆ. ಆದರೆ ಸತ್ಯವೂ ಸಾಕಷ್ಟಿದೆ. ರನ್ನ ಅತ್ತಿಮಬ್ಬೆಗೆ ಸಲ್ಲಿಸಿರುವ ಎಲ್ಲೆ ಮೀರಿದ ಪ್ರಶಂಸೆ ಕೇವಲ ಔಪಚಾರಿಕವಾಗಿ ತೋರದೆ, ಅವನ ಹೃದಯಾಂತರಾಳದಿಂದ ಹೊಮ್ಮಿದ್ದು ಎನಿಸುತ್ತದೆ. ಭಗವಂತನನ್ನು ಭಕ್ತ ಹೇಗೋ ಹಾಗೆ ಅವಳನ್ನು ಕೈವಾರಿಸಿದ್ದಾನೆ ರನ್ನ.

ಅತ್ತಿಮಬ್ಬೆಯನ್ನು ಚಕ್ರವರ್ತಿಪೂಜಿತೆ, ಕವಿವರ ಕಾಮಧೇನು, ದಾನ ಚಿಂತಾಮಣಿ, ಜಿನಶಾಸನದೀಪಿಕೆ ಇತ್ಯಾದಿಯಾಗಿ ವಿಶ್ಲೇಷಿಸಲಾಗಿದೆ. ಅವಳಲ್ಲಿ ಶೀಲ, ದಾನಗುಣ, ಧರ್ಮಪರತೆ ಮುಪ್ಪುರಿಗೊಂಡಿವೆ. ಅವಳು ಕವಿಯೂ ಹೌದು. ಈ ವಿವಿಧ ಮುಖಗಳನ್ನು ಕವಿ ಪ್ರಭಾವಶಾಲಿಯಾದ ರೀತಿಯಲ್ಲಿ ಕಂಡರಿಸಿದ್ದಾನೆ.

ಸ್ತ್ರೀಯಾದ ಅತ್ತಿಮಬ್ಬೆಯ ಮುಂದೆ ಪುರುಷರು ಅಪ್ರಯೋಜಕರೆಂದು ರನ್ನ ಹೇಳುವ ಬಗೆ ರೋಚಕವಾದುದು:

ಕಲಿಯೆನೆ ನೆಗಳ್ದಳ್ ಕಸವರ
ಗಲಿಯೆನೆ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್
ಮೊಲೆವೆತ್ತ ತೈಲಜನನಿಯ
ಕೆಲದೊಳ್ ರಂಜಿಪರೆ ಮೀಸೆವೊತ್ತಣ್ಣಂಗಳ್ (೧.೬೫)

ಇದು ಮಾಮೂಲು ಸ್ತ್ರೀವರ್ಣನೆಯ ಧಾಟಿಯಲ್ಲ.

ಅತ್ತಿಮಬ್ಬೆಯ ಚರಿತೆ ಎಷ್ಟು ಪವಿತ್ರವೆಂಬುದನ್ನು ಹೇಳುವಲ್ಲಿ ರನ್ನ ಅವಳ ದೇದೀಪ್ಯಮಾನ ಚಿತ್ರವೊಂದನ್ನು ನೀಡುತ್ತಾನೆ:

ಬಿಳಿಯರಳೆಯಂತೆ ಗಂಗಾ
ಜಳದಂತೆಸೆವಜಿತಸೇನ ಮುನಿಪತಿಯ ಗುಣಾ
ವಳಿಯಂತೆ ನೆಗಳ್ದ ಕೊಪಣಾ
ಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ (೧೨.೬)

ಇಲ್ಲಿನ ಹೋಲಿಕೆಗಳು ಔಚಿತ್ಯಪೂರ್ಣವಾಗಿವೆ. ಬಿಳಿಯರಳೆಯ ಹೋಲಿಕೆಯಂತೂ ಹೊಚ್ಚ-ಹೊಸತು, ಅರ್ಥಗರ್ಭಿತ.

ಅತ್ತಿಮಬ್ಬೆಯ ಮಹಿಮೆ ಎಂಥದು, ಅವಳ ಸ್ಮರಣೆ ಎಷ್ಟು ಮಂಗಳಕರ ಎಂಬುದನ್ನು ಕವಿ ಸಾರುವುದು ಹೀಗೆ:

ಅಳುರದು ಕಿರ್ಚು ಮುಟ್ಟದು ವಿಷಾಹಿ ಮಹಾಸತಿಯಿರ್ದ ಮಂಡಳಂ
ಬೆಳೆವುದು ಬೇಡಿದಂತೆ ಮಳೆ ಕೊಳ್ವುದೆನಿಪ್ಪ ಜನಕ್ಕೆ ನೋಂತ ಭೂ
ತಿಲಕ ಪವಿತ್ರೆಯಂ ಗುಣಪವಿತ್ರೆಯನಾ ಸತಿಯಂ ಮಹಾಸತೀ
ತಿಲಕೆಯನತ್ತಿಮಬ್ಬರಸಿಯಂ ಪೆಸರ್ಗೊಳ್ವುದು ಪುಣ್ಯಕಾರಣಂ (೧.೭೫)

ಅವಳ ಜಿನಭಕ್ತಿ ಎಷ್ಟು ಉತ್ಕಟವಾದುದೆಂಬುದನ್ನು ಈ ಪದ್ಯ ಹೃದಯಂಗಮವಾಗಿ, ಚಿತ್ರವತ್ತಾಗಿ ಹೇಳುತ್ತದೆ:

ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಪೋಗಿ ಕಾ
ಣ್ಬನ್ನೆಗಮನ್ನಮಂ ಬಿಸುಟು ಪರ್ವತಮಂ ಪದಿದೇಱೆ ತಜ್ಜಿನಾ
ಸನ್ನದೊಳತ್ತಿಮಬ್ಬೆಗೆ ಪಥಶ್ರಮಮಾದುದಕಾಲವೃಷ್ಟಿಯಾ
ಯ್ತನ್ನದೊ ದೇವಭಕ್ತಿಗದು ಚೋದ್ಯಮೆ ಕೂಳ್ಪವೆ ಪುಷ್ಪವೃಷ್ಟಿಗಳ (೧.೬೬)

ಅತ್ತಿಮಬ್ಬೆ ಆ ಕಾಲದಲ್ಲಿ ದೂಗದ ಉತ್ತರದಿಂದ ದಕ್ಷಿಣದ ಶ್ರವಣಬೆಳ್ಗೊಳಕ್ಕೆ ಬಂದುದೇ ಒಂದು ಸಾಹಸ, ಭಕ್ತಿ ಸಾಹಸ. ಇಳಿವಯಸ್ಸಿನಲ್ಲಿ, ಹಸಿದುಕೊಂಡು, ಗೊಮ್ಮಟದರ್ಶನ ಕಾತರದಿಂದ ಓಡೋಡಿ ಬೆಟ್ಟವನ್ನು ಹತ್ತುತ್ತಿರುವ ಆ ಮಹಾಮಹಿಳೆಯ ಚಿತ್ರ ನಮ್ಮ ಒಳಗಣ್ಣನ್ನು ತುಂಬಿ ನಿಲ್ಲುವಂಥದ್ದು. ಜಿನಸನ್ನಿಧಿಯನ್ನು ಅವಳು ಸೇರಿದಾಗ ಅಕಾಲವೃಷ್ಟಿಯಾಯಿತಂತೆ. ರನ್ನ ಅತ್ತಿಮಬ್ಬೆಯ ಘನತೆಯನ್ನು ಪ್ರಕಟಿಸಲು ಉದ್ದಕ್ಕೂ ಪ್ರತಿಮಾವಿಧಾನವನ್ನು ಆಶ್ರಯಿಸಿದ್ದಾನೆ, ಕನ್ನಡ ಸಾಹಿತ್ಯಯಾತ್ರಿಕರು ಮರೆಯಲಾಗದಂತೆ ಅವಳ ಮೂರ್ತಿಯನ್ನು ಮೂಡಿಸಿದ್ದಾನೆ.

ಮೌಲ್ಯಗಳು ಸಾರ್ಥಕವಾಗತಕ್ಕದ್ದು, ಅವುಗಳನ್ನು ಆಚರಿಸುವವರಿಂದ, ಭಗವಂತನಿಗೆ ಬೆಲೆ ಬರುವುದು ಭಕ್ತರಿಂದ. ಎಂದೋ ಆಗಿಹೋದ ತೀರ್ಥಂಕರನ ಕಥೆ ಅತ್ತಿಮಬ್ಬೆಯ ಭಕ್ತಿ ಮತ್ತು ಭವ್ಯಗುಣದಿಂದ ಮತ್ತೆ ಗರಿಗಟ್ಟಿಕೊಂಡು ಜೀವಂತವಾಗುತ್ತದೆ, ವರ್ತಮಾನಕ್ಕೆ ಪ್ರಸ್ತುತವಾಗುತ್ತದೆ.

ಈ ದೃಷ್ಟಿಯಿಂದಲೂ ಆತ್ಮಿಮಚ್ಛೆಯ ಚಿತ್ರಣ 'ಅಜಿತಪುರಾಣ'ದಲ್ಲಿ ಮಹತ್ವದ್ದಾಗಿದೆ. ಅದನ್ನು ಸೇರಿಸಿ, ಅನೇಕ ಪ್ರಯೋಜನವನ್ನು ಸಾಧಿಸಿದ್ದಾನೆ ರನ್ನ.

ವಿಮಲವಾಹನನ ವೈರಾಗ್ಯಕ್ಕೆ ಸಂಬಂಧಿಸಿದ ಭಾಗವೊಂದು ಉತ್ಕೃಷ್ಟ ಭಾವಗೀತ. ಅದರಲ್ಲಿ ನಿಜವಾದ ಕಳಕಳಿಯಿದೆ, ತನ್ಮಯತೆಯಿದೆ. ಧರ್ಮವನ್ನು ನಂಬದೆ, ಉಳಿದುವನ್ನು ನಂಬುವುದು ದುರಂತವೆಂಬುದನ್ನು ಈ ಪದ್ಯ ಆಕರ್ಷಕವಾದ ಶಬ್ದಾಲಂಕಾರದೊಡನೆ ಅಭಿವ್ಯಕ್ತಿಸುತ್ತದೆ:

ಸಾರದೆ ಸಾರಮಪ್ಪ ಜಿನಧರ್ಮಮನಾತ್ಮನಸಾರಮಪ್ಪುದಂ
ಸಾರಮಿದೆಂದು ನಂಬಿ ತನಗಲ್ಲದುವಂ ತನಗಪ್ಪುದೆಂದು ಕೇ
ದಾರವಿಹಾರ ಸೋದರ ಕೃಶೋದರ ಸುಂದರ ದಾರ ದಾರಕೋ
ದಾರ ವಿಮೋಹದೊಳ್ ತೊಡರ್ದು ದಾರುಣದುಃಖಮನೆಯ್ದುದಿರ್ಕುಮೆ (೧.೫೬)

ಜೀವಸಂಬೋಧನೆಯ ಕೆಲವು ಪದ್ಯಗಳಂತೂ ತಮ್ಮ ನಾಟಕೀಯತೆಯಿಂದ, ಆರ್ತತೆಯಿಂದ ಚಿತ್ತಸ್ಪರ್ಶಿಯಾಗಿವೆ. ವ್ಯಕ್ತಿಗೆ ಹೊರಗಿನ ಉಪದೇಶದಿಂದ ಉಪಯೋಗವಿಲ್ಲ. ಅವನು ತನಗೆ ತಾನು ಉಪದೇಶಿಸಿಕೊಳ್ಳಬೇಕು, ತನ್ನ ಸುಪ್ತಪ್ರಜ್ಞೆಗೆ ಹಿತಕರವಾದ ಸಲಹೆಗಳನ್ನಿತ್ತು (Auto-Suggestion) ಅದನ್ನು ಪರಿವರ್ತಿಸಬೇಕು. ಪ್ರಾಯಶಃ ಈ ಮನಶ್ಶಾಸ್ತ್ರೀಯ ಸತ್ಯ ಪ್ರಕೃತ ಜೀವಸಂಬೋಧನೆಯ ಭಾಗದಲ್ಲಿದೆ.

ಮತಿಗೆಟ್ಟು ಜೀವ ಧರ್ಮಾ
ಮೃತಮಂ ಸೇವಿಸದಧರ್ಮಮಂ ಸೇವಿಸಿ ದು
ರ್ಗತಿಗಿಟೆದೀ ಜವನೆಂಬಟ
ಸಿ ತಿಂಬ ದೈವಕ್ಕೆ ಪಾಱಿಂ ಬಿಡುವೈ (೨.೫೮)

ಎನಿತನಿತು ಕಚೆದ ಭವಮಂ
ನೆನೆದಪೆಯೆನಿತನಿತು ಭವದ ಬಂಧುಗಳಂ ನೀಂ
ನೆನೆದಪೆಯೆನಿತನಿತೊಡಲಂ
ನೆನೆದಪೆಯಲೆ ಜೀವ ನೀನೆ ಪೇೞ್ ಪವಣೊಳವೇ (೬೦)

ಕಡೆಯಿಲ್ಲದ ಸಂಸಾರದ
ಕಡೆಗಾಣಲ್ಬಗೆವೆಯಪ್ಪೊಡೆನ್ನುಕ್ತಿಗೊಡಂ
ಬಡು ಜೀವ ನಿನ್ನ ಕಾಲಂ
ಪಿಡಿವೆಂ ಧರ್ಮಮನೆ ಮಗುೞೆ ಬಲ್ಪಿಡಿವಿಡಿಯಾ (೬೩)

ಈ ಆತ್ಮಯಾಚನೆಯ ಪರಿ ಅಪೂರ್ವವಾದುದು. ಸಂಸಾರದ ಅನಿತ್ಯತೆಯನ್ನೂ ಧರ್ಮಶರಣಾಗತಿಯ ಅನಿವಾರ್ಯತೆಯನ್ನೂ ಮನಗಾಣಿಸುವಲ್ಲಿ ಈ ಪ್ರಕರಣ ಬಹುಮಟ್ಟಿಗೆ ಯಶಸ್ವಿಯಾಗಿದೆ.

ಸಗರಾಖ್ಯಾನ 'ಉತ್ತರಪುರಾಣ'ದಲ್ಲಿ ಸರಳವಾಗಿ, ಸಂಕ್ಷಿಪ್ತವಾಗಿ ಬಂದಿದೆ. ಅದನ್ನು ರನ್ನ ವಿಸ್ತೃತವಾಗಿ, ಹೆಚ್ಚು ಕಲಾತ್ಮಕವಾಗಿ ನಿರ್ವಹಿಸಿದ್ದಾನೆ. ಸ್ವಲ್ಪ ಸ್ವಾತಂತ್ರ್ಯವನ್ನೂ ವಹಿಸಿದ್ದಾನೆ. ಸಗರನಿಗೆ ಹೇಗೆ ವೈರಾಗ್ಯೋದಯವಾಯಿತೆಂಬುದೇ ಈ ಭಾಗದ ಹುರುಳು. ಇಲ್ಲಿ ಕುತೂಹಲಕರವಾದ ಕತೆಯಿದೆ, ಜತೆಗೆ, ಮೆಚ್ಚುಗೆ ಮೂಡಿಸಬಲ್ಲ ಮನೋವಿಶ್ಲೇಷಣೆಯಿದೆ.

ಸಗರ ತನ್ನ ಹಿಂದಿನ ಮೂರನೆಯ ಭವದಲ್ಲಿ ಜಯಸೇನನೆಂಬ ಅರಸನಾಗಿರುವಾಗ,

ಅವನಿಗೆ ಇಬ್ಬರು ಮಕ್ಕಳು. ಅವರಲ್ಲೊಬ್ಬ ಮೃತನಾದಾಗ ಸಗರ ದುಃಖಿತನಾಗುತ್ತಾನೆ. ಆಗ ಮಹಾರುತನೆಂಬ ಮೈದುನ ಅವನಿಗೆ ಸಂಸಾರಸ್ವರೂಪವನ್ನು ತಿಳಿಸಿ, ಧರ್ಮವನ್ನು ಉಪದೇಶಿಸುತ್ತಾನೆ:

ತನಯವ್ಯಾಮೋಹದಿಂದಂ ಮಱುಗಿದೊಡೆಮಗಿಂ ಬರ್ಕುಮೇ ಸದ್ವಿವೇಕಂ
ಮನದಿಂ ಗೆಂಟಾಯ್ತು ಕಾಲಾನಲಕಬಳಿತರಾರಾರ್ಗದಾರಾರ್ಗೆ ಶೋಕಾಂ
ಧನೆಯಪ್ಪೈ ಖೇದಮಂ ನಂಬದೆ ಜಿನಮತಮಂ ನಂಬು ನೀನೆಯ್ದೆ ಧರ್ಮಂ
ನಿನಗಾರ್ಮಂ ನೀನುಮಾನುಂ ತಳರ್ವಮೊಡನೆ ಸಂಸಾರ ಕಾಂತಾರದಿಂದದಿ. (೯.೬)

'ಸಂಸಾರಕಾಂತಾರ' ಎಂಬ ಮಾತು ಅರ್ಥವತ್ತಾಗಿದೆ. ಕಾಡು ಕಾಡಲ್ಲ, ಈ ಸಂಸಾರ ನಿಜವಾದ ಕಾಡು ಹಿಂಸ್ರಜಂತುಗಳಿಂದ ತುಂಬಿ ಅಪಾಯಕರವಾದದ್ದು, ದಾರಿತಪ್ಪಿಸುವಂಥದು.

ಮುಂದೆ ಜಯಸೇನನೂ ಮಹಾರುತನೂ ಹದಿನೆಂಟನೆಯ ಕಲ್ಪದಲ್ಲಿ ಮಹಾಬಲ, ಮಣಿಕೇತು ಎಂಬ ದೇವತೆಗಳಾಗಿ ಹುಟ್ಟುತ್ತಾರೆ. ಅವರೊಮ್ಮೆ ಹೀಗೆ ಒಪ್ಪಂದ ಮಾಡಿಕೊಳ್ಳುತ್ತಾರೆ, "ನಮ್ಮಿಬ್ಬರಲ್ಲಿ ಯಾರು ಮೊದಲು ಮನುಷ್ಯಲೋಕಕ್ಕೆ ಹೋಗುತ್ತಾರೋ ಅವರನ್ನು ದೇವಲೋಕದಲ್ಲಿರುವವರು ಹೋಗಿ ಪ್ರತಿಬೋಧಿಸಿ, ವಿಷಯ ಸುಖವಿಮುಖರನ್ನಾಗಿ ಮಾಡತಕ್ಕದ್ದು".

ಜಯಸೇನ ಮುಂದೆ ಅಯೋಧ್ಯಾಪುರದಲ್ಲಿ ಸಗರನೆಂಬ ದೊರೆಯಾಗಿ ಹುಟ್ಟುತ್ತಾನೆ. ತೊಂಬತ್ತಾರು ಸಾವಿರ ಪತ್ನಿಯರೊಡನೆ ಮತ್ತು ಅರವತ್ತು ಸಾವಿರ ಮಕ್ಕಳೊಡನೆ ಅವನು ಸುಖವೈಭವಗಳಿಂದಿರುವಾಗ, ಒಮ್ಮೆ ಮಣಿಕೇತು ಬಂದು ಅವನಿಗೆ ಪೂರ್ವಭವವನ್ನೂ ತಾವು ಹಿಂದೆ ಮಾಡಿಕೊಂಡಿದ್ದ ಕರಾರನ್ನೂ ಜ್ಞಾಪಿಸುತ್ತಾನೆ. ಸಗರನಿಗೆ ಅದು ನೆನಪಾದರೂ ಅವನು ಸಂಸಾರವನ್ನು ತೊರೆಯಲು ಇಷ್ಟಪಡುವುದಿಲ್ಲ. "ಆರ್ ಗೆಲಲಾರ್ಪರೊ ಮೋಹರಾಜನಂ?" ಎಷ್ಟೋ ವರ್ಷಗಳಾದಮೇಲೆ ಮಣಿಕೇತು ಪುನಃ ಬಂದು ಸಗರನನ್ನು ಎಚ್ಚರಿಸುತ್ತಾನೆ:

ಅಳವಿಯಿನಿಂತನಂತ ಸುಖನಂತಜರಾಮರನಂತೆ ಮುಕ್ತಿ ಹೇ
ತುವನಘಕೇತುವಂ ಪರಮದೀಕ್ಷೆಯನೊಲ್ಲದೆ ರಾಜ್ಯಮೋಹದಿಂ
ಭವಜಲರಾಶಿಯೊಳ್ ಮುಱುಗಲಟ್ಟಿಯ ಚರ್ವಿತ ಚರ್ವಣಕ್ಕೆ ನೀ
ನವಚಱಿ ಬೇಡ ಸಾಲದೆ ಭವಾನುಭವಂ ಸಗರಾವನೀಶ್ವರಾ (೧೦.೫)

ಆದರೆ ಈಗಲೂ ಸಗರನಿಗೆ ವೈರಾಗ್ಯ ಹುಟ್ಟುವುದಿಲ್ಲ.

ಮಣಿಕೇತು ಸಗರನಿಗೆ ಪುತ್ರವಿಯೋಗವಾಗುವಂತೆ ಮಾಡಬೇಕೆಂದು ಒಂದು ಉಪಾಯ ಹೂಡುತ್ತಾನೆ. ಅವನ ಇಡೀ ಯೋಜನೆ ನಾಟಕೀಯ ಸ್ವಾರಸ್ಯದಿಂದ ಕೂಡಿ, ಅರ್ಥಪೂರ್ಣವಾಗಿದೆ.

ಒಂದು ಸಂದರ್ಭದಲ್ಲಿ ಸಗರನ ಮಕ್ಕಳೆಲ್ಲ ಭಸ್ಮಾವಲೇಪನರಾಗುವಂತೆ ಮಾಡುತ್ತಾನೆ ಮಣಿಕೇತು. ಆಮೇಲೆ ಚಾರಣವೇಷದಲ್ಲಿ ಸಗರನ ಬಳಿಗೆ ಬರುತ್ತಾನೆ. ಅರವತ್ತು ಸಾವಿರ ಮಕ್ಕಳು ಅಳಿದರೆಂದು ಸಗರನಿಗೆ ಅವನು ತಟಕ್ಕನೆ ಹೇಳುವುದಿಲ್ಲ. ಹಾಗೆ ಹೇಳಿದ್ದರೆ, ಸಗರನಿಗೆ ವಿರಕ್ತಿ ಹುಟ್ಟುವುದಿರಲಿ, ಅನಿರೀಕ್ಷಿತವಾದ ಆಘಾತದಿಂದ ಮರಣವೇ ಉಂಟಾಗಬಹುದಿತ್ತು. ಪುತ್ರನಾಶದ ಆಘಾತದ ಸೈರಣೆಗೆ ಅವನ ಹೃದಯವನ್ನು ಹದಗೊಳಿಸುವುದು, ಸಾವಿನ ಅನಿವಾರ್ಯತೆಯನ್ನೂ ಇಹಜೀವನದ ನಶ್ವರತೆಯನ್ನೂ ಅವನು ಪರಿಭಾವಿಸುವಂತೆ ಮಾಡಿ ವೈರಾಗ್ಯದತ್ತ ತಿರುಗಿಸುವುದು, ಜೊತೆಗೆ ಅವನ ಮಾತಿನಲ್ಲೆ ಅವನನ್ನು ಸಿಕ್ಕಿಸುವುದು - ಇಷ್ಟೂ ಉದ್ದೇಶಗಳು ಈಡೇರುವಂತೆ ತಂತ್ರ ಮಾಡುತ್ತಾನೆ ಮಣಿಕೇತು. ಇಲ್ಲಿ ಮನೋವೈಜ್ಞಾನಿಕ, ಆಧ್ಯಾತ್ಮಿಕ ಹಾಗೂ ವ್ಯಾವಹಾರಿಕ ಸತ್ಯಗಳ ಮುಪ್ಪುರಿಯನ್ನು ಕಾಣುತ್ತೇವೆ.

ಮಣಿಕೇತು ಅರಮನೆಯ ಬಾಗಿಲಲ್ಲಿ ನಿಂತು ತನ್ನ ಒಬ್ಬನೇ ಮಗನನ್ನು ಯಮ ಒಯ್ದನೆಂದೂ ಮೊರೆ ಅವನನ್ನು ಬದುಕಿಸಿಕೊಡಬೇಕೆಂದೂ ಹುಯ್ಯಲಿಡುತ್ತಾನೆ. ಅವನ ಮೊರೆಯನ್ನು ಆಲಿಸಿದ ಸಗರ ವಿಸ್ಮಿತನಾಗಿ, ಚಿಂತಿಸುತ್ತಾನೆ:

ಸತ್ತರನೆತ್ತುವುದೆಂಬುದ
ದೆತ್ತಣಮಾತಘಟಮಾನಮೀ ಪಾರ್ವಂ ತಾ
ನೆತ್ತತ್ತ ಬಂದು ಮೂಡಿದ
ನೆತ್ತತ್ತನಗಿನಿತು ದುರ್ಯಶಂ ಮಾಡಿದನೋ (೧೦.೧೯)

ಆಗ ಸಗರನ ಮನವನ್ನರಿತ ಬುದ್ಧಿಸಾಗರದೆಂಬ ಪುರೋಹಿತ - ಇವನು 'ಉತ್ತರಪುರಾಣ' ದಲ್ಲಿಲ್ಲ - ಆ ಬ್ರಾಹ್ಮಣನಿಗೆ ಸಾವಿನ ಅನಿವಾರ್ಯತೆಯನ್ನು ಮನವರಿಕೆ ಮಾಡಿಕೊಡಲೋಸುಗ, "ಒಬ್ಬರೂ ಸಾಯದಿರುವ ಮನೆಯ ಬೆಂಕಿಯನ್ನೂ, ಹುಲ್ಲನ್ನೂ ತೆಗೆದುಕೊಂಡು ಬಂದರೆ, ನಿನ್ನ ಮಗನನ್ನು ಮರಳಿ ಪಡೆಯುವೆ" ಎಂದು ಹೇಳುತ್ತಾನೆ. ಬ್ರಾಹ್ಮಣ ಏನೂ ಅರಿಯದವನಂತೆ ಸ್ವಲ್ಪದೂರ ಹೋಗಿ ಮತ್ತೆ ಬಂದು "ಎಲ್ಲಿಯೂ ಸಿಗಲಿಲ್ಲ" ಎನ್ನುತ್ತಾನೆ. ಆಮೇಲೆ ಬುದ್ಧಿಸಾಗರ ಅವನಿಗೆ ಮೃತ್ಯುವಿನ ನಿತ್ಯತೆಯನ್ನೂ ಯಮನ ನಿಷ್ಪಕ್ಷಪಾತ ಮತ್ತು ಅಜೇಯತೆಯನ್ನೂ ವರ್ಣಿಸುತ್ತಾನೆ. ಇದು ಚಿತ್ತಕ್ಕೆ ನಾಟುವಂಥ ಭಾಗ. ಎರಡು ಪದ್ಯಗಳನ್ನು ಮಾತ್ರ ಇಲ್ಲಿ ನೋಡಬಹುದು:

ಅರಾರಂ ನುಂಗಿದನಿ
ಲ್ಲಾರಾರಂ ನೋಡೆದನಿಲ್ಲ ಸವಿನೋಡಿದನಿ
ಲ್ಲಾರಾರಂ ಸುರಮಾನವ
ನಾರಕ ತಿರ್ಯಕ್ಕಮೂಹಮಂ ಯಮರಾಜಂ (೧.೨೨)

ಆ ಜಗದೇಕಕಂಟಕನನಾ ಬಹುಭಕ್ಷಿಯನಾ ತ್ರಿಲೋಕಪಂ
ಕೇಜ ಸಮುತ್ಥ ಜೀವಮಕರಂದ ಮದಾಳಿಯನಾ ಪರಿಸ್ಫುರ
ತ್ತೇಜನನಂಗಜಾಂತಕನಮೋನಘಾಂತಕನಂತಕಾಂತಕಂ
ಶ್ರೀಜಿನರಾಜನಲ್ಲದುಳಿದೊಂ ಗೆಲಲಾರ್ಕುಮೆ ಮೃತ್ಯುರಾಜನಂ (೩೦)

'ತ್ರಿಲೋಕ ಪಂಕೇಜ ಸಮುತ್ಥ ಜೀವಮಕರಂದ ಮದಾಳಿ' ಎಂಬ ರೂಪಕದ ಸೊಗಸು ಮತ್ತು ಔಚಿತ್ಯ ಗಮನಾರ್ಹವಾಗಿದೆ.

ಬುದ್ಧಿಸಾಗರ ಹೀಗೆ ಸಂಸಾರದ ಅಧ್ರುವತೆಯನ್ನು ಬಣ್ಣಿಸಿದಾಗ, ಬ್ರಾಹ್ಮಣ "ಇವರಿನಿವರ ನುಡಿಯೊಳ್ ತೊಡರ್ಚುವೆಂ" ಎಂದು ಬಗೆದು ಸಗರನನ್ನು ಪ್ರಶ್ನಿಸುತ್ತಾನೆ: "ಈ ನಿನ್ನ ಪೇಟ್ದ ಧರ್ಮಂ ಇದೇನ್ ಎನಗೆಯೋ, ನಿನಗಂ ಉಂಟೊ?" ಆಗ ಸಗರ ಮುಗುಳ್ನಕ್ಕು "ಎನಗದು ಮುನ್ನ ಉಂಟು" ಎಂದು ಉತ್ತರಿಸುತ್ತಾನೆ. ಆಮೇಲೆ ಬ್ರಾಹ್ಮಣ ತಿಳಿಸುತ್ತಾನೆ: "ನಿನ್ನ ಅರವತ್ತು ಸಾಸಿರ್ವರ್ ಮಕ್ಕಳುಮಿಂದು ದೃಷ್ಟಿ ವಿಷಮ ವಿಷಧರನಿಂದು ಭಸ್ಮಾವಶೇಷರಾದರ್". ಆಗ ಸಗರ ವಿಚಲಿತನಾಗದೆ "ಸಂಸಾರಿ ಜೀವಂಗಳ್ ಅಂದು ಪುಟ್ಟಿದರ್ ಅಂದೆ ಸತ್ತರ್, ನುಡಿ ಇದೇಂ ಚೋದ್ಯಂ?" ಎಂದಷ್ಟೆ ಉದ್ಗರಿಸುತ್ತಾನೆ.

ಮಣಿಕೇತುವಿನ ಅಸಾಧಾರಣ ತಂತ್ರ ಫಲಿಸಿದ್ದನ್ನು, ತತ್ಪರಿಣಾಮವಾಗಿ ಸಗರ ಮೋಹವನ್ನು ನೀಗಿಕೊಂಡು ವೈರಾಗ್ಯೋನ್ಮುಖನಾದುದನ್ನು ಇಲ್ಲಿ ಕಾಣುತ್ತೇವೆ. ಮೃತ್ಯು ಅಪರಿಹಾರ್ಯ, ಧರ್ಮವೆ ಶರಣು ಎಂಬುದನ್ನು ಸಗರ ನಂಬುವಂತೆ ಮಾಡಿ, ಅದಕ್ಕೆ ಪೂರಕವಾಗಿ ಸುತವಿಯೋಗವನ್ನುಂಟು ಮಾಡಿದ್ದರಿಂದ ಸಗರನ ಚಿತ್ತ ಪರಿವರ್ತಿತವಾಗುತ್ತದೆ. ಮುಂದೆ ಅವನು "ಕಡೆಯೆಯ್ದುತ್ತೆನಗಿಂದು

ರಾಜ್ಯವಿಭವಂ ಪ್ರೋನ್ಮೂರ್ದ ಮೋಹೋದಯಂ ತಡಿಸಾರ್ದಿರ್ದಪುದಕ್ಕೆ ಮಂಗಳ ಮಹಾಶ್ರೀ" ಎಂದು ಘೋಷಿಸಿ, ತಪಸ್ಸಿಗೆ ತೆರಳುತ್ತಾನೆ.

ಈ ಸಗರಕಥೆ ವೈದಿಕ ಹಾಗೂ ಬೌದ್ಧ ಕಥಾಂಶಗಳನ್ನು ಅಳವಡಿಸಿಕೊಂಡು, ಅಂತಿಮವಾಗಿ ಜೈನಧರ್ಮಪರವಾಗಿದೆ, ರನ್ನನ ಪ್ರತಿಭೆಗಿದು ಸಮೀಚೀನ ನಿದರ್ಶನ.

## ಗದಾಯುದ್ಧ

'ಗದಾಯುದ್ಧ' ಕನ್ನಡ ಸಾಹಿತ್ಯದ ಅತ್ಯಂತ ವಿಶಿಷ್ಟ ಕೃತಿಗಳಲ್ಲಿ ಒಂದು. ಅದರಲ್ಲಿ ಶ್ರೇಷ್ಠತೆಗಿಂತ ವಿಶಿಷ್ಟತೆಯೇ ಮಿಗಿಲೆನ್ನಬಹುದು. ಈ ವೈಶಿಷ್ಟ್ಯಕ್ಕೆ ಅನೇಕ ಮುಖಗಳು.

ಮೊದಲ ನೋಟಕ್ಕೇ 'ಗದಾಯುದ್ಧ'ದಲ್ಲಿ ಒಡೆದು ಕಾಣುವ ಗುಣವೆಂದರೆ ಅದರ ನಾಟಕೀಯತೆ. ಚಂಪೂವೇಷ ತೊಟ್ಟ ಒಂದು ನಾಟಕವೇ ಸರಿ ಈ ಕಾವ್ಯ. ಓದುಗಬ್ಬವಾಗಿ ಪರಿಗಣಿತವಾದಾಗ ಗಮನಕ್ಕೆ ಬರುವ ಎಷ್ಟೋ ದೌರ್ಬಲ್ಯಗಳನ್ನು ಇದು ದೃಶ್ಯಕಾವ್ಯದ ನೆಲೆಯಲ್ಲಿ ಮುಚ್ಚಿಕೊಳ್ಳುತ್ತದೆ. ರಂಗದ ಮೇಲೆ ಅದ್ಭುತವಾಗಿ ರಂಜಿಸಬಲ್ಲ ಅಗ್ಗಳಿಕೆ 'ಗದಾಯುದ್ಧ'ದ್ದು.

ಸಾಮಾನ್ಯವಾಗಿ ಕನ್ನಡ ಚಂಪೂಕಾವ್ಯಗಳು ಹದಿನಾಲ್ಕು ಅಥವಾ ಹದಿನಾರು ಆಶ್ವಾಸಗಳ ವ್ಯಾಪ್ತಿಯುಳ್ಳವಾಗಿದ್ದರೆ, 'ಗದಾಯುದ್ಧ' ಕೇವಲ ಹತ್ತು ಚಿಕ್ಕ ಆಶ್ವಾಸಗಳ ಕಿರುಗಬ್ಬವಾಗಿರುವುದೂ ಗಮನಾರ್ಹವಾದ ಅಂಶ. ಚಂಪೂ ಸಹಜವಾದ ಅಷ್ಟಾದಶವರ್ಣನೆಗಳ ವಿಜೃಂಭಣೆಯೂ ಇಲ್ಲಿಲ್ಲ. (ಆದರೆ ಎಲ್ಲ ರಸಗಳನ್ನೂ ತರಬೇಕೆಂಬ ಚಪಲವಿದೆ). ಇದಕ್ಕೆ ಕಾರಣ ಬಹುಶಃ ರನ್ನನ ನಾಟ್ಯದೃಷ್ಟಿ.

'ಗದಾಯುದ್ಧ'ದ ವಸ್ತು ಮಹಾಭಾರತ ಸಂಬಂಧಿಯಾದರೂ, ವ್ಯಾಸ ಭಾರತ ಅದಕ್ಕೆ ಆಕರವಲ್ಲವೆಂಬುದು ಮತ್ತು ಪಂಪಭಾರತವನ್ನೇ ರನ್ನ ಆಧಾರವಾಗಿಟ್ಟುಕೊಂಡಿದ್ದಾನೆಂಬುದು ಕುತೂಹಲಕರವಾದ ವಿಚಾರ. ಸಂಸ್ಕೃತದಿಂದ ವಸ್ತುವನ್ನು ಸ್ವೀಕರಿಸುವುದು, ಸಂಸ್ಕೃತ ಕಾವ್ಯಗಳನ್ನು ಪೂರ್ಣವಾಗಿಯೊ ಆಂಶಿಕವಾಗಿಯೊ ಅನುವಾದಿಸುವುದು ಸಾಮಾನ್ಯವಾಗಿ ಕನ್ನಡ ಕವಿಗಳ ಪದ್ಧತಿ. ರನ್ನನಾದರೊ ಕನ್ನಡದಿಂದಾಚೆಗೆ ಹೋಗದೆ ತನ್ನ ಹಿರಿಯ ಸಮಕಾಲೀನನಾದ ಪಂಪನ ಭಾರತವನ್ನೇ ಬಹುತೇಕ ಅನುವಾದಿಸಿಬಿಟ್ಟಿದ್ದಾನೆ. ಈ ಅನನ್ಯ ಧಾರ್ಷ್ಟ್ಯ ಮೆಚ್ಚಬೇಕಾದದ್ದೇ. ಅಂತೂ 'ಗದಾಯುದ್ಧ'ದ ಗುಣೋತ್ಕರ್ಷಕ್ಕೆ, ಕೆಲವೊಮ್ಮೆ ದೋಷಗಳಿಗೆ ಕೂಡ, ಪಂಪ ಭಾರತವೆ ಬಹುಮಟ್ಟಿಗೆ ಕಾರಣವೆನ್ನಬೇಕು.

'ಗದಾಯುದ್ಧ'ಕ್ಕೆ ಸಂಸ್ಕೃತದಲ್ಲಿ ಆಕರಗಳೇ ಇಲ್ಲವೆಂದಲ್ಲ. ಭಾಸನ 'ಊರುಭಂಗ' ಹಾಗೂ ಭಟ್ಟನಾರಾಯಣನ 'ವೇಣೀಸಂಹಾರ'ವನ್ನು ಮುಖ್ಯವಾಗಿ ಎರಡನೆಯದನ್ನು - ರನ್ನ ಬಳಸಿಕೊಂಡಿದ್ದಾನೆ. 'ಗದಾಯುದ್ಧ'ದ ನಾಟಕೀಯ ವಿನ್ಯಾಸಕ್ಕೆ, ಅಂತೆಯೆ ತಿರುಳಿನ ಕೆಲವಂಶಗಳಿಗೆ 'ವೇಣೀಸಂಹಾರ'ದ ಪ್ರಭಾವವೆ ಕಾರಣವೆಂಬುದನ್ನು ಮರೆಯುವಂತಿಲ್ಲ.

ಕುವೆಂಪು ರನ್ನನನ್ನು 'ಶಕ್ತಿಕವಿ' ಎಂದು ಕರೆದು, 'ಶಕ್ತಿ'ಯೆ 'ಗದಾಯುದ್ಧ'ದ ಸರ್ವಸ್ವವೆಂದು ನಿರ್ಣಯಿಸಿ, ವ್ಯಕ್ತಿಯಾಗಿ ಮತ್ತು ಕವಿಯಾಗಿ ರನ್ನನ ನಾಡೀಸ್ಪಂದನದ ಮೇಲೆ ಬೆರಳಿಟ್ಟಿದ್ದಾರೆ. ರನ್ನನ ಕೃತಿ ಓಜೋಗುಣ ಸಮೃದ್ಧವಾದುದು ಎಂಬುದು ಕುವೆಂಪು ಅವರ ಹೇಳಿಕೆಯಿಂದ ಸೂಚಿತವಾಗುತ್ತದೆ. ಈ ಓಜಸ್ಸು, ಭಾವೋತ್ಕಟತೆ ರನ್ನನನ್ನು ಪಂಪನಿಂದ ಬೇರ್ಪಡಿಸುತ್ತದೆ ಮಾತ್ರವಲ್ಲ, ಅವನ ಪರಿಮಿತಿಯೂ ಆಗಿದೆ. ಇಲ್ಲಿಯೂ 'ವೇಣೀಸಂಹಾರ'ದ ಪ್ರೇರಣೆಯಿರುವುದನ್ನು

ಲಕ್ಷಿಸದಿರುವುದು ಸಾಧ್ಯವಿಲ್ಲ.

ಸಮಗ್ರ ಮಹಾಭಾರತವನ್ನು 'ಗದಾಯುದ್ಧ' ನಿರೂಪಿಸುವುದಿಲ್ಲ. ಹೆಸರೇ ಹೇಳುವಂತೆ ಮಹಾಭಾರತದ ಅಂತಿಮ ಹಂತವನ್ನು ಚಿತ್ರಿಸುವುದಷ್ಟೆ ಅದರ ಉದ್ದೇಶ. ಭೀಮ-ದುರ್ಯೋಧನರ 'ಗದಾಯುದ್ಧ'ವೆ ಅದರ ಶಿಖರ ಕ್ರಿಯೆ. ಉಳಿದುದೆಲ್ಲ ಅದಕ್ಕೆ ಉಪಷ್ಟಂಭಕ. ಭೀಮನ ಪ್ರತಿಜ್ಞೆಯಿಂದ ನಾಂದಿಗೊಳ್ಳುವ ಕಾವ್ಯ ಆ ಪ್ರತಿಜ್ಞೆಯ ಕಾರ್ಯಸಿದ್ಧಿಯಲ್ಲಿ, ದ್ರೌಪದಿಯ ವೇಣೀಬಂಧನದಲ್ಲಿ ಇದು ಬಹು ಮುಖ್ಯ - ಪರ್ಯವಸಾನಗೊಳ್ಳುತ್ತದೆ. ಎಂತಲೇ 'ಗದಾಯುದ್ಧ'ದ ವಸ್ತು ಸಂವಿಧಾನದಲ್ಲಿ ಅನ್ಯಾದೃಶವಾದ ಬಿಗಿಯಿದೆ, ಐಕ್ಯವಿದೆ. ಗದಾಯುದ್ಧ ಘಟನೆಯೆ ಇಲ್ಲಿನ ಹೃದಯವಾದುದರಿಂದ, ವೀರ ರೌದ್ರಗಳು ಇಲ್ಲಿ ಪ್ರಧಾನ ರಸಗಳಾಗಿವೆ, ಅವುಗಳ ಪ್ರತಿಪಾದನೆಯಲ್ಲಿ ರನ್ನನ ಶಕ್ತಿ ಪರಾಕೋಟಿಗೇರಿದೆ.

ರನ್ನ ಮಹಾಭಾರತವನ್ನೆಲ್ಲ ಹೇಳದಿದ್ದರೂ, ಅದರ ಪ್ರಮುಖವಾದ ಆಗುಹೋಗುಗಳನ್ನು 'ಸಿಂಹಾವಲೋಕನ ಕ್ರಮ'ದಿಂದ ಅರುಹಿದ್ದಾನೆ. ಈ ಕ್ರಮ ಆಧುನಿಕ flash back ತಂತ್ರಕ್ಕೆ ಭಾಗಶಃ ಸಂವಾದಿಯಾದದ್ದು.

ಕವಿ ಮಹಾಭಾರತದ ಕಡೆಯ ಮಜಲಿಗೆ, ದುರ್ಯೋಧನನ ಕೊನೆಯ ದಿನಗಳಿಗೆ ತನ್ನ ದೃಷ್ಟಿಯನ್ನು ಸೀಮಿತಮಾಡಿಕೊಂಡು, 'ಅಸ್ತಾದ್ರಿ'ಯಾದ ದುರ್ಯೋಧನನ ಮೇಲೆ ತನ್ನ ಲಕ್ಷ್ಯವನ್ನು ಕೇಂದ್ರೀಕರಿಸಿದ್ದರಿಂದ, ಅವನ ಕಾವ್ಯಕ್ಕೆ ಕೆಲವು ಅನುಕೂಲ್ಯಗಳುಂಟಾಗಿವೆ, ಹಾಗೆಯೇ ಅದು ಕೆಲವು ತೊಡಕುಗಳನ್ನೂ ಹುಟ್ಟಿಸಿದೆ.

ತನ್ನ ಪೋಷಕನಾದ ಇಚಿವ ಬೆಡಂಗ ಸತ್ಯಾಶ್ರಯನಿಗೂ ಭೀಮನಿಗೂ ಅಭೇದ ಕಲ್ಪಿಸಿ, ಭೀಮನ ಶೌರ್ಯ ಸಾಹಸಗಳನ್ನು ಬಣ್ಣಿಸಬೇಕೆಂಬುದು ರನ್ನನ ಆಶಯ. ಭೀಮನೇ ಕಥಾನಾಯಕ. ಆದರೆ ಪ್ರತಿನಾಯಕನಾದ ದುರ್ಯೋಧನನಿಗೂ ಸಮಾನ ಪ್ರಾಶಸ್ತ್ಯವನ್ನು ಕೊಟ್ಟು, ಅವನ ವ್ಯಕ್ತಿತ್ವವನ್ನು ಸವಿವರವಾಗಿ ಪೃಥಕ್ಕರಿಸುವ ಅವಕಾಶವೂ ರನ್ನನಿಗೆ ಸಿಕ್ಕಿದೆ. ಅದನ್ನವನು ಚೆನ್ನಾಗಿ ಉಪಯೋಗಿಸಿಕೊಂಡಿದ್ದಾನೆ. (ಅರ್ಜುನನನ್ನು ನಾಯಕನನ್ನಾಗಿ ಮಾಡಿಕೊಂಡು ಅವನ ಎದುರಾಳಿಯಾದ ಕರ್ಣನಿಗೆ ಎದೆಗರಗಿ "ಕರ್ಣ ರಸಾಯನಮಲ್ತೆ ಭಾರತಂ" ಎಂದು ಉದ್ಗರಿಸಿದ ಪಂಪನೆ ಈ ವಿಷಯದಲ್ಲೂ ರನ್ನನಿಗೆ ಸ್ಫೂರ್ತಿ). ಎಷ್ಟರಮಟ್ಟಿಗೆಂದರೆ, ದುರ್ಯೋಧನನೇ 'ಗದಾಯುದ್ಧ'ದ ನಿಜವಾದ ನಾಯಕ ಎಂಬ ಅಭಿಪ್ರಾಯವನ್ನು ಕೆಲವರು ವ್ಯಕ್ತಪಡಿಸಿರುವುದುಂಟು, ಅಷ್ಟೇ ಅಲ್ಲ, ದುರ್ಯೋಧನನೊಬ್ಬ 'ಮಹಾನುಭಾವ' - ಇದು ಕವಿಯದೇ ಮಾತು - ಉದಾತ್ತ ವ್ಯಕ್ತಿ ಎಂದು ಬಗೆದವರೂ ಇಲ್ಲದಿಲ್ಲ.

ಆದರೆ ಇಂಥ ನಿಲುವು ಅಸಾಧುವಾದದ್ದು. ದುರ್ಯೋಧನ ಮೂಲಭೂತವಾಗಿ ದುಷ್ಟನೇ; ತನ್ನ ಜೀವಿತದ ಅಂತ್ಯಕಾಲದಲ್ಲಿ ಅವನು ಪ್ರಕಟಿಸುವ ಕೆಲವೊಂದು ಸದ್ಗುಣಗಳು, ಅವನ ಪೂರ್ಣಚರಿತ್ರೆಯನ್ನು ಮರೆಯಿಸಲಾರವು. (ತಾನು 'ಪಾಪಕರ್ಮಿ'ಯೆಂದೂ 'ನಿರ್ಗುಣಿ'ಯೆಂದೂ ಅವನೇ ಒಂದು ಕಡೆ ಹೇಳಿಕೊಂಡಿರುವುದನ್ನು ನೆನೆಯಬಹುದು). ಅಂತೆಯೇ ಭೀಮ ಕಡೆಯಲ್ಲಿ ತೋರುವ ಕೆಲವು 'ದುರ್ಗುಣ'ಗಳು ಅವನನ್ನು ಕೆಟ್ಟವನನ್ನಾಗಿ ಮಾಡಲಾರವು. ಭೀಮ ಭೀಮನೇ, ಕೌರವ ಕೌರವನೇ. ಅವರನ್ನು ಹಠಾತ್ತಾಗಿ ಪರಿವರ್ತಿಸುವುದು ಸಾಧ್ಯವಿಲ್ಲ. ಅಂಥ ಪರಿವರ್ತನೆ ರನ್ನನಿಂದ ಉದ್ದಿಷ್ಟವಾಗಿಯೂ ಇಲ್ಲ. ಅವನಲ್ಲಿ ಸಮತೋಲನವಿಲ್ಲದುದೇ ಎಲ್ಲ ತಪ್ಪು ತಿಳಿವಳಿಕೆಗೆ ಕಾರಣ. ಇನ್ನು, ದುರ್ಯೋಧನ ದುರಂತನಾಯಕ ಎಂಬ ವಾದವೂ ಸಮಂಜಸವಲ್ಲ. ಅವನ 'ಅಭಿಮಾನಧನತೆ'ಯನ್ನು ರನ್ನ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ, ಆದರೆ ಆ ಚಿತ್ರಕ್ಕೆ ಮೂಲದ್ರವ್ಯ

ಪಂಪನಲ್ಲಿ ಇದೆ.

'ಗದಾಯುದ್ಧ'ದಲ್ಲಿ ವೀರ, ರೌದ್ರರಸಗಳನ್ನು ಬೆರಗುಗೊಳಿಸುವಂತೆ ಬೆಳಗಿದ್ದಾನೆ ರನ್ನ. ಅವನ ಕವಿತೆಯ 'ಶೀಲ', ಶೈಲಿ ಎರಡಕ್ಕೂ, ದೃಷ್ಟಾಂತವಾಗಬಲ್ಲುವು ಈ ಕೆಲವು ಪ್ರಸಿದ್ಧ ಪದ್ಯಗಳು:

ಕುರುಭೂಭೃದ್ಬಲ ತೂಲಕಾಲಪವನಂ ಕೌರವ್ಯಗಂದೇಭಕೇ
ಸರಿ ದುಶ್ಶಾಸನ ರಕ್ತ ರಕ್ತವದನಂ ದುರ್ಯೋಧನೋರುಕಮಾ
ಧರವಜ್ರಂ ಕುರುರಾಜರತ್ನಮಕುಟೋತ್ಕೂಟಾಂಘ್ರಿ ಸಂಘಟ್ಟಸಂ
ಗರನೆಂದಭಿವರ್ಣಿಪಂ ರಣಯಶಃ ಶ್ರೀರಾಮನಂ ಭೀಮನಂ (೧.೫೨)

ಖಳ ದುಶ್ಶಾಸನ ಕೃಷ್ಣಲೋಹಿತ ಜಲಾಶ್ಲಿಷ್ಟಂ ಕುರುಪ್ರೋದ್ಭವ
ಪ್ರಳಯಜ್ವಾಲಿ ಸುಯೋಧನೋರು ಮಕುಟೋದ್ಘಟ್ಟ ಪ್ರತಿಜ್ಞಾಕ್ಷರಾ
ವಳಿವಿನ್ಯಸ್ತ ವಿಶಾಲ ನಿಶ್ಚಳ ಶಿಲಾಸ್ತಂಭಂ ಕುರುಕ್ಷೇತ್ರದೊಳ್
ಪ್ರಳಯೋಗ್ರಾಂತಕನಂತಗುರ್ವನೊಳಕೊಂಡಿರ್ದಂ ಹಿಡಿಂಬಾಂತಕಂ (೧.೫೫)

ಅರವಮಂ ನಿರ್ಜಿತ ಕಂ
ಠೀರವರವಮಂ ನಿರಸ್ತಘನರವಮಂ ಕೋ
ಪಾರುಣನೇತ್ರಂ ಕೇಳ್ದಾ
ನೀರೊಳಗಿರ್ದಂ ಬೆಮರ್ತನುರಗಪತಾಕಂ (೭.೨೨)

ರಸೆಯಿಂದ ಕಾಲಾಗ್ನಿರುದ್ರಂ ಪೊಱಮಡುವುವೊಲಂತಾ ಸರೋಮಧ್ಯದಿಂ ಸಾ
ಹಸಗರ್ವಾಲಂಕೃತಂ ತೊಟ್ಟನೆ ಕೊಳೆ ಪೊಱಮಟ್ಟಿಲ್ಲಿದಂ ಭೀಮನೆಂದೆ
ಣ್ದೆಸೆಯಂ ನೋಡುತ್ತೆ ಮತ್ತದ್ಭುತ ನಟನಿಟಿಲಾಲೋಲ ಕೀಲಾಕಿವೊಲ್ ದ
ಳ್ಪಿಸೆ ಕೋಪಾರಕ್ತ ನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ (೭.೩೦)

ಸ್ಥಿರದ್ಧ ಮತ್ಸರರ್ ಭೀ
ಕರ ಬದ್ಧಭ್ರುಕುಟಿ ಘಟಿತರದ್ಭುತರಟ್ಟಾ
ಸುರರಧಿಕ ಕೋಪ ಪಾಟಳ
ಪರುಕ್ಷೇಕ್ಷಣರೆನಿಸಿ ದೃಷ್ಟಿಯುದ್ಧಂಗೆಯ್ದರ್

ಇಂಥ ಕಡೆ ಸಮಾಸದೀಪ್ತವಾಗಿ ಮೊರೆಯುವ, ಆಸ್ಫೋಟಿಸುವ ರನ್ನನ ಬರವಣಿಗೆ, ಕರುಣ ಸಂದರ್ಭದಲ್ಲಿ ಹೇಗೆ ಸರಳ ನಮ್ರವಾಗಿ ಶೋಭಿಸುತ್ತದೆಂಬುದಕ್ಕೆ ಇದೊಂದು ಉದಾಹರಣೆ ಸಾಕು:

ನಯನದೊಳಮೆರ್ದೆಯೊಳಂ ನಿ
ನ್ನಯ ರೂಪಿರ್ದಪುದು ನಿನ್ನ ಮಾತಿರ್ದಪುದೆ
ನ್ನಯ ಕಿವಿಯೊಳಮಿನನಂದನ
ವಿಯೋಗಮೆಂತಾದುದಜೆಯೆನಂಗಾಧಿಪತೀ (೫.೨೪)

ರನ್ನನ ಶೈಲಿ ಅವನ ಕಾವ್ಯದ ಅತ್ಯುತ್ತಮ ಸಿದ್ಧಿ. ಅದು ವಿಶೇಷವಾಗಿ ಅವನದೇ, ಎಲ್ಲಿಯೂ ಮುಕ್ಕಾಗದ ಮೋಹಕತೆ ಅದಕ್ಕೆ. ರನ್ನ ಏನನ್ನೇ ಹೇಳಲಿ, ಅದು ಒಂದು ವೇಳೆ ಅವನದಲ್ಲವಾದರೂ ಸರಿಯೇ, ಅದನ್ನು ತನ್ನದೇ ಆದ ರೀತಿಯಲ್ಲಿ ಹೇಳುತ್ತಾನೆ, ಮನಮುಟ್ಟುವಂತೆ ಹೇಳುತ್ತಾನೆ. ಅವನ ಶೈಲಿ ಕಣ್ಣು ಕೋರೈಸುತ್ತದೆ, ಕಿವಿ ತುಂಬುತ್ತದೆ, ಒಮ್ಮೊಮ್ಮೆ ಅಪ್ಪಳಿಸುತ್ತದೆ.

ಕೆಲವೊಮ್ಮೆ ಅದು ಕವಿಗೆ ಲಗ್ಗೆ ಹಾಕಿ ಹೃದಯವನ್ನು ವಂಚಿಸುವಂತಿರುವುದೂ ದಿಟ. ಅಂಥ ಕಡೆ ಸಹೃದಯ ಎಚ್ಚರದಿಂದಿದ್ದು, ತನ್ನ ವಿಮರ್ಶನಶಕ್ತಿ ಪಟುವಾಗಿ ಉಳಿಯುವಂತೆ ನೋಡಿಕೊಳ್ಳಬೇಕಾಗುತ್ತದೆ. "ಭೀಮಸೇನನೊದೆದಂ ವಾಮಾಂಘ್ರಿಯಿಂ ರತ್ನಮಂಡಲ ರಶ್ಮಿ ಪ್ರಕಟ ಜ್ವಲನ್ಮಕುಟಮುಮಂ ಕೌರವ್ಯ ರಾಜೇಂದ್ರನಾ", "ಸುರಾದ್ರಿನಿಶ್ಚಳನಿಬಿಡೋರು ಮಂಡಳಮುಮಾರುದಿದರ್ ಫಣಿರಾಜಕೇತನಾ" ಮುಂತಾದ ಮಾತುಗಳು ದುರ್ಯೋಧನನ ಪಾತ್ರ ವಿವೇಚನೆಯಲ್ಲಿ ವಾಚಕ ಎಡಹುವಂತೆ ಮಾಡುವ ಸಂಭವವುಂಟು.

'ಗದಾಯುದ್ಧ' ಮಹಾಕಾವ್ಯವಲ್ಲ - ಪ್ರಾಚೀನಾರ್ಥದಲ್ಲಾಗಲಿ, ಆಧುನಿಕಾರ್ಥದಲ್ಲಾಗಲಿ. ಆದರೆ ಅದೊಂದು ಉತ್ತಮ ಕಾವ್ಯ. ಕವಿಯೆ ಕರೆದುಕೊಂಡಿರುವಂತೆ 'ಕೃತಿರತ್ನ' - ಭಿನ್ನಾಭಿಪ್ರಾಯ ದೂರವಾಗಿ. "ಗುಣದೋಷ ಪರೀಕ್ಷೆಗಾರನಾರ್ ಬಾರಿಪರೋ" ಎಂಬ ಸೂಕ್ತಿಯೊಂದುಂಟು ರನ್ನನಲ್ಲಿ. ("ರನ್ನನ ಕೃತಿರತ್ನಮುಮಂ ಪೇಟಿಜ್ ಪರೀಕ್ಷಿಪಂಗೆಂಟೆರ್ದೆಯೇ" ಎಂದು ಸವಾಲು ಹಾಕಿದ ಕವಿಯೆ ಈ ಮಾತನ್ನೂ ಆಡಿರುವುದು ಆಶ್ಚರ್ಯಕರ). ಅದನ್ನೆ ಆಶ್ರಯಿಸಿ, ಒಳಹೊಕ್ಕು ನೋಡಿದಾಗ, 'ಗದಾಯುದ್ಧ'ದಲ್ಲಿ ಗುಣಗಳೂ ಇವೆ, ದೋಷಗಳೂ ಇವೆ ಎಂಬುದು ಕಂಡುಬರುತ್ತದೆ. ಎಂತಲೇ ಆರಕ್ಕೇರದ, ಮೂರಕ್ಕಿಳಿಯದ ಕಾವ್ಯವಾಗಿದೆ 'ಗದಾಯುದ್ಧ'. ಅದು ಸಾಕಷ್ಟು ವಿವಾದಕ್ಕೆ ತನ್ನನ್ನು ತೆರೆದುಕೊಂಡಿರುವ ಕೃತಿ. ಅದು ಮೊದಲ ದರ್ಜೆಯ ಕಾವ್ಯವಾಗಿದ್ದರೆ ಅಥವಾ ಕಳಪೆ ರಚನೆಯಾಗಿದ್ದರೆ, ವಿವಾದ ಹುಟ್ಟುತ್ತಲೇ ಇರಲಿಲ್ಲ, ಹುಟ್ಟಿದೆ ಎಂಬ ಸಂಗತಿಯೇ ಸ್ಥಾಪಿಸುತ್ತದೆ, ಅದೊಂದು ಮಧ್ಯಮ ವರ್ಗದ ಕೃತಿಯೆಂಬುದನ್ನು.

ಒಂದು ದೃಷ್ಟಿಯಿಂದ ರನ್ನನ 'ಅಜಿತಪುರಾಣ' ಅವನ 'ಗದಾಯುದ್ಧ'ಕ್ಕಿಂತ ಮೇಲಾದ ಕಾವ್ಯವೆನ್ನಬಹುದು. ಕಲೆಯ ನಿಟ್ಟಿನಿಂದ ಲೌಕಿಕ ಕೃತಿ ಶ್ರೇಷ್ಠ, ಧಾರ್ಮಿಕ ಕೃತಿ ಅದಕ್ಕಿಂತ ಕೆಳಗೆ ಎಂಬುದು ಸಾಮಾನ್ಯವಾದ ತಿಳುವಳಿಕೆ. ಈ ನಿಲುವು ಪಂಪಭಾರತ, 'ಗದಾಯುದ್ಧ'ಗಳಿಗೆ ಹೆಚ್ಚು ಗೌರವ ಸಲ್ಲಿಸುವಂಥದು. ಆದರೆ 'ಆದಿಪುರಾಣ'ದ ಬಗ್ಗೆ ಕುವೆಂಪು ಒಂದೆಡೆ ಹೇಳುವುದನ್ನು ಗಮನಿಸಬಹುದು, "ಭಾರತ ಆದಿಪುರಾಣಗಳಲ್ಲಿ ಆದಿಪುರಾಣಕ್ಕೇ ಹೆಚ್ಚಿನ ಗೌರವದ ಸ್ಥಾನ ಸಲ್ಲುವುದು ನ್ಯಾಯವಾಗಿದೆ". ಈ ಉಕ್ತಿ 'ಅಜಿತಪುರಾಣ'ಕ್ಕೂ ಏಕೆ ಅನ್ವಯಿಸಲಾರದು? ಇನ್ನೊಂದು ಕಾರಣಕ್ಕಾಗಿಯೂ - ಇಲ್ಲಿ ಅದೇ ಮುಖ್ಯ - 'ಅಜಿತಪುರಾಣ'ವು ಗದಾಯುದ್ಧಕ್ಕಿಂತ ಮಹತ್ವದ್ದಾಗುತ್ತದೆ. 'ಗದಾಯುದ್ಧ', 'ಅಜಿತಪುರಾಣ'ಗಳನ್ನು ಅವುಗಳ ಆಕರಗಳೊಡನೆ ಹೋಲಿಸಿ ನೋಡಬೇಕು. 'ಗದಾಯುದ್ಧ'ಕ್ಕೆ ಪಂಪಭಾರತ ಮೂಲವಷ್ಟೆ. ಕಡೆಗೂ ರನ್ನ ತನ್ನ ಆ ಕೃತಿಯಲ್ಲಿ ಪಂಪನಿಗಿಂತ ಮಿಗಿಲಾದುದೇನನ್ನು ಸಾಧಿಸಿದ್ದಾನೆ, ಅವನಿಗಿಂತ ಮುಂದಕ್ಕೆ ಹೋಗಿದ್ದಾನೆಯೆ ಎಂಬ ಪ್ರಶ್ನೆಗೆ ಎಡೆಯಿದೆ. ಪಂಪನಲ್ಲಿ ಏನಿದೆಯೋ ಅದಕ್ಕೆ ರನ್ನ ಮೆರುಗು ಕೊಡಬಲ್ಲ ಎಂಬುದನ್ನು ಬಿಟ್ಟರೆ, ಹೆಚ್ಚಿನ ಸ್ವೋಪಜ್ಞತೆ' 'ಗದಾಯುದ್ಧ'ದಲ್ಲಿ ವಿರಳ. ಪಂಪನ ಪರಿಷ್ಕರಣ, ವಿಸ್ತರಣಗಳು ಅದರಲ್ಲಿವೆಯೇ ವಿನಾ ಪರಿವರ್ತನೆ ಅಷ್ಟಾಗಿಲ್ಲ. ಈ ದಿಶೆಯಲ್ಲಿ 'ಅಜಿತಪುರಾಣ' ನಮಗೆ ಹೆಚ್ಚು ತೃಪ್ತಿಕರವಾಗಿ ತೋರುತ್ತದೆ. ತನ್ನ ಆಕರವಾದ 'ಉತ್ತರಪುರಾಣ'ಕ್ಕಿಂತ ಅದು ಉತ್ಕೃಷ್ಟವಾದ ಕವಿತೆಯಾಗಿದೆ, ಎರಡೂ ಪುರಾಣಗಳೇ ಆದರೂ, 'ಅಜಿತಪುರಾಣ'ದ ಸ್ವಂತಿಕೆ ಶ್ಲಾಘನೀಯವೆನ್ನಬೇಕು.

ಏನೇ ಇರಲಿ, ರನ್ನನ ಎರಡು ಕೃತಿಗಳೂ ಕನ್ನಡ ಸಾಹಿತ್ಯಕ್ಕೆ ಬೆಲೆಯುಳ್ಳ ಕೊಡುಗೆಗಳೇ. "ಗುಣದೋಷ ಪರೀಕ್ಷೆಗಾರನಾರ್ ಬಾರಿಪರೋ" ಎಂಬ ನುಡಿಯನ್ನು ಮರೆಯದಿದ್ದರೆ ಸಾಕು ಕವಿ, ಸಹೃದಯ ಇಬ್ಬರೂ.

# ಹವ್ಯಕ ಆಡುನುಡಿ ಸಾಹಿತ್ಯ

**ಡಾ|| ಹರಿಕೃಷ್ಣ ಭರಣ್ಯ**

ಸಾಮಾನ್ಯವಾಗಿ ಯಾವುದೇ ಭಾಷೆಯು ಜನರು ಆಡುವ ನುಡಿಯಾಗಿರುತ್ತದೆ. ಬರಬರುತ್ತಾ ಗಾಂಭೀರ್ಯ, ಪ್ರೌಢತೆ, ಅರ್ಥ-ಭಾಷಾ-ಮರ್ಯಾದೆಗಳನ್ನು ಪಡೆದುಕೊಂಡು ಅದು ಸಾಹಿತ್ಯವನ್ನು ಪ್ರವೇಶಿಸಿ ಸಾಹಿತ್ಯಭಾಷೆ ಎನ್ನಿಸುತ್ತದೆ. ಹೆಚ್ಚಿನ ಎಲ್ಲಾ ಭಾಷೆಗಳಲ್ಲೂ ಸಾಹಿತ್ಯವು ಹುಟ್ಟಿಕೊಳ್ಳುವುದು ಹೀಗೆಯೇ. ಹಾಗೆ ನೋಡಿದರೆ ಕನ್ನಡದ ಆಡುಭಾಷೆಗಳಿಗೂ ಸಾಹಿತ್ಯ ಭಾಷೆಗಳಿಗೂ ಬಹಳಷ್ಟು ವ್ಯತ್ಯಾಸಗಳಿದ್ದಂತೆ ತೋರುವುದಿದೆ. ಬರಬರುತ್ತ ಆಡುನುಡಿಯನ್ನೂ ಸಾಹಿತ್ಯದೊಳಗೆ ಸೇರಿಸಿಕೊಂಡುದನ್ನು ನಾವು ನೋಡುತ್ತೇವೆ. ಹೊಸಗನ್ನಡ ಸಾಹಿತ್ಯದ ಈಚಿನ ರಚನೆಗಳಲ್ಲಂತೂ ಆಡುನುಡಿಯನ್ನು ಸಾರಾಸಗಟಾಗಿ ಬಳಸಿಕೊಳ್ಳುವುದನ್ನು ಗಮನಿಸಬಹುದು.

ಕೆಲವೊಮ್ಮೆ ಸಾಹಿತ್ಯದಲ್ಲಿ ಆಡುನುಡಿಯ ಬಳಕೆಯಿಂದ ನೈಜತೆ ಹಾಗೂ ಸೊಗಡುಗಳು ಹೆಚ್ಚುತ್ತವೆ ಎಂಬುದನ್ನು ವಿಮರ್ಶಕರು ತೋರಿಸಿಕೊಟ್ಟಿದ್ದಾರೆ. ಈ ಶತಮಾನದ ಆರಂಭದ ದಶಕದಲ್ಲಿ ಕೊಡಗಿನ ಭಾಷೆಯಾದ ಕೊಡವದಲ್ಲಿ ಹರದಾಸ ಅಪ್ಪಚ್ಚ ಕವಿ ನಾಲ್ಕು ನಾಟಕ ಕೃತಿಗಳನ್ನು ಬರೆದಿದ್ದಾರೆ. ಅವುಗಳು ಸಾಹಿತ್ಯಿಕವಾಗಿಯೂ, ಕಲಾತ್ಮಕವಾಗಿಯೂ ಸುಂದರವಾಗಿ ಮೂಡಿ ಬಂದಿವೆ. ಹೊಸಗನ್ನಡದ ಆರಂಭದ ಸ್ವತಂತ್ರ ಸಾಮಾಜಿಕ ಕಾದಂಬರಿಯಾದ ಇಂದಿರಾಬಾಯಿ (1899)ಯಲ್ಲಿ ದಕ್ಷಿಣ ಕನ್ನಡದಲ್ಲಿನ ಇತರ ಆಡುಭಾಷೆಗಳಾದ ತುಳು-ಕೊಂಕಣಿ ಮೊದಲಾದವುಗಳೂ ಸೇರಿಕೊಂಡಿವೆ. ಹಾಗೆಯೇ ಮೊದಲ ಸ್ವತಂತ್ರ ಸಾಮಾಜಿಕ ನಾಟಕ "ಇಗ್ಗಪ್ಪ ಹೆಗಡೆಯ ವಿವಾಹ ಪ್ರಹಸನ" (1887)ವು ಹವ್ಯಕ ಆಡುನುಡಿಯಲ್ಲಿದೆ. ಅಲ್ಲದೆ, ಪ್ರಾದೇಶಿಕ ಆಡುನುಡಿಗಳಲ್ಲೂ ಪ್ರತ್ಯೇಕತೆಗಳಿರುವುದರಿಂದ ಯಾವುದು ಸಾಮಾನ್ಯ ಭಾಷೆ, ಯಾವುದು ಗ್ರಂಥಸ್ಥಭಾಷೆ ಎಂಬ ಗೊಂದಲ ಏರ್ಪಡುವುದು ಸಹಜವೇ. ಇಂದಿಗೂ ಧಾರವಾಡ, ಮೈಸೂರು, ಮಂಗಳೂರು ಮೊದಲಾದ ಕಡೆಗಳಲ್ಲಿ ಕನ್ನಡದ ಆಡುಭಾಷೆಯ ಪ್ರಯೋಗಗಳು ವೈವಿಧ್ಯಮಯವಾಗಿದೆ.

## ಹವ್ಯಕರು (ಹವಿಕ/ಹವೀಕ)

ಹವ್ಯಕರೆಂದರೆ ಶ್ರೀ ಶಂಕರಾಚಾರ್ಯ ಶಿಷ್ಯ ಸಮಾಜದ ಸ್ಮಾರ್ತ ಬ್ರಾಹ್ಮಣವರ್ಗ; ಅವರಾಡುವುದು ಅಚ್ಚಗನ್ನಡ ನುಡಿ-ಹವ್ಯಕ ಆಡುನುಡಿ. ಇವರ ಮೂಲ ಉತ್ತರ ಭಾರತದ ಅಹಿಚ್ಛತ್ರವೆಂಬುದಾಗಿ ಹೇಳಲಾಗುತ್ತಿದೆ. ಕರ್ನಾಟಕದ ಅರಸು ಮನೆತನಗಳಲ್ಲಿ ಮೊದಲನೆಯದಾದ ಕದಂಬ ವಂಶದ ರಾಜನಾದ ಮಯೂರವರ್ಮನು ಹವೀಕ ಬ್ರಾಹ್ಮಣರನ್ನು ಬನವಾಸಿಗೆ ಕರೆತಂದನೆಂದು ಇತಿಹಾಸವಿದೆ. ಹೈಗುಂದದಿಂದ (ಪಯ್ವಿಗುಂದ > ಹಯ್ವಿಗುಂದ > ಹೈಗುಂದ)

ಮುಂದೆ ಜೀವನ ವ್ಯಾಪ್ತಿಯನ್ನನುಸರಿಸುತ್ತಾ ಉತ್ತರ ಕನ್ನಡದಿಂದ ದಕ್ಷಿಣಕ್ಕೆ ಬಂದು ಅಲ್ಲಲ್ಲಿ ನೆಲೆಯಾದರೆಂಬುದೂ ಇತಿಹಾಸವೇ. ಇಂದು ಹವ್ಯಕರು ಉ.ಕ. ಮತ್ತು ದ.ಕ. ಜಿಲ್ಲೆಗಳು, ಸಾಗರ, ಶಿವಮೊಗ್ಗ, ಸಿರ್ಸಿ, ಸಿದ್ದಾಪುರ ಮೊದಲಾದೆಡೆಗಳಲ್ಲಿ ಹೇರಳ ಸಂಖ್ಯೆಯಲ್ಲಿದ್ದಾರೆ. ಹಾಗೆಯೇ ಪರಶುರಾಮ ಕ್ಷೇತ್ರವೆನಿಸಿದ ಗೋಕರ್ಣದಿಂದ ಕನ್ಯಾಕುಮಾರಿಯವರೆಗೂ (ಕೇರಳ ರಾಜ್ಯವೂ ಸೇರಿ) ಅವರ ಜನಸಂಖ್ಯೆ ಪಸರಿಸಿದೆ.

## ಸಂಸ್ಕೃತಿ-ಅಧ್ಯಯನ

ಇವರು ಆಡುವ ಅಚ್ಚಗನ್ನಡ ಆಡುನುಡಿ ಹವ್ಯಕ ಭಾಷೆಯಲ್ಲಿ ಜಾನಪದ ಸಾಹಿತ್ಯವು ಅಪಾರವೂ, ಸಮೃದ್ಧವೂ ಆಗಿರುವುದನ್ನು ಸಂಶೋಧನೆಗಳು ತೋರಿಸಿಕೊಟ್ಟಿವೆ. ಹವ್ಯಕ ನಡೆ - ನುಡಿ - ಸಂಸ್ಕೃತಿಗಳ ಬಗೆಗೆ ಡಾ॥ ಕೆ.ಜಿ. ಶಾಸ್ತ್ರಿ, ಡಾ॥ ಶಾಲಿನಿ ರಘುನಾಥ, ಡಾ॥ ಎಲ್. ಆರ್. ಹೆಗಡೆ, ಡಾ॥ ಡಿ.ಎನ್. ಶಂಕರಭಟ್ಟ, ಪ್ರೊ॥ (ದಿ) ಮರಿಯಪ್ಪಭಟ್ಟ, ಪ್ರೊ॥ (ದಿ) ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ಶ್ರೀಮತಿ ಹೆಲೆನ್ ಉಲ್‌ರಿಚ್, ಶ್ರೀ ಪ್ರಮೋದ ಪಾಂಡೆ, ಡಾ॥ ಕೆ.ಪಿ.ಭಟ್ಟ, ಶ್ರೀ ಭುವನಗಿರಿ ಅನಂತಶರ್ಮ, ಪ್ರೊ॥ ತಾಳ್ತಜೆ ಕೇಶವಭಟ್ಟ - ಹೀಗೆ ಇನ್ನೂ ಅನೇಕ ಮಂದಿ ವಿದ್ವಾಂಸರು ಅಧ್ಯಯನಗಳನ್ನು ನಡೆಸಿ ಉತ್ತಮ ಲೇಖನ ಹಾಗೂ ಆಕರ ಗ್ರಂಥಗಳನ್ನು ಪ್ರಕಟಿಸಿದ್ದಾರೆ.

## ಹವ್ಯಕ ನುಡಿ

ಹವ್ಯಕರು ಆಡುವ ಭಾಷೆಯು ಕನ್ನಡದ ಒಂದು ಉಪಭಾಷೆ. ಸಾಮಾನ್ಯವಾಗಿ ಶಿಷ್ಟ ಕನ್ನಡದಲ್ಲಿ ಪ್ರಸ್ತುತ ಬಳಕೆಯಲ್ಲಿಲ್ಲದ, ಆದರೆ ಹಳಗನ್ನಡ-ನಡುಗನ್ನಡ ಸಾಹಿತ್ಯಕೃತಿಗಳಲ್ಲಿ ಬಳಕೆಯಲ್ಲಿರುವ ಅದೆಷ್ಟೋ ಪದಪುಂಜಗಳು ಹವ್ಯಕ ಆಡುನುಡಿಯಲ್ಲಿ ಇಂದೂ ಬಳಕೆಯಲ್ಲಿರುವುದು ಈ ನುಡಿಯ ಮಹತ್ವವನ್ನು ತೋರಿಸುತ್ತದೆ. ಬೇರೆ ಬೇರೆ ಪ್ರದೇಶಗಳ ಹವ್ಯಕ ಭಾಷೆಯ ಉಗಮ, ಬೆಳವಣಿಗೆ ಹಾಗೂ ಇನ್ನಿತರ ಅಧ್ಯಯನಗಳು ನಡೆಯುತ್ತಲೇ ಇವೆ. ಹವ್ಯಕರ ಭಾಷೆಯನ್ನು ತಮ್ಮ ಲೇಖನ ಅಥವಾ ಕೃತಿಗಳಲ್ಲಿ 'ಹವೀಕ ಭಾಷೆ' ಎಂದೂ, 'ಗ್ರಾಮ್ಯಭಾಷೆ' ಎಂದೂ 'ಹವ್ಯಕ ಆಡುನುಡಿ' ಎಂದೂ, 'ನಮ್ಮಬಾಶೆ' ಎಂದೂ 'ಹವಿಗನ್ನಡ' ಎಂದೂ ಅನುಕೂಲಕ್ಕೆ ತಕ್ಕಂತೆ ಅಲ್ಲಲ್ಲಿ ಕರೆದುಕೊಂಡದನ್ನು ನಾವು ಗುರುತಿಸಬಹುದಾಗಿದೆ. ಹೆಸರು ಏನೇ ಇರಲಿ, ಇದು ಹಲವಾರು ಮಂದಿ ನಿತ್ಯಗಟ್ಟಲೆ ತಮ್ಮ ವಿಚಾರ-ಅನ್ನಿಸಿಕೆಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವಂಥಾ ಒಂದು ಪ್ರಬಲ ಭಾಷೆ ಎಂಬುದು ಸ್ಪಷ್ಟ. ಮನಸ್ಸಿನೊಳಗೆ ವಿಚಾರಗಳು ಹಾಗೂ ಅನಿಸಿಕೆಗಳು ಹೊಳೆಯುವುದು ಸಾಮಾನ್ಯವಾಗಿ ಅವರವರ ತಾಯ್ನುಡಿಯಲ್ಲೇ ಎನ್ನುವುದು ಎಲ್ಲರಿಗೂ ತಿಳಿದ ಸಂಗತಿ.

ಒಂದು ಭಾಷೆಯನ್ನಾಡುವ ಜನಾಂಗ, ತನ್ನದೇ ಭಾಷೆಯಲ್ಲಿ ಸಾಹಿತ್ಯ-ಅಭಿವ್ಯಕ್ತಿಯನ್ನು ಮಾಡುವುದರಿಂದ ಆ ಭಾಷೆಯ ಸಾಮರ್ಥ್ಯವನ್ನೂ, ಮಹತ್ವವನ್ನು ತೋರಿಸಿಕೊಟ್ಟಂತಾಗುತ್ತದೆ. ಸೂರಿ ವೆಂಕಟರಮಣ ಶಾಸ್ತ್ರಿಗಳು 1887 ರಲ್ಲಿ ರಚಿಸಿದ 'ಇಗ್ಗಪ್ಪ ಹೆಗಡೇ ವಿವಾಹ ಪ್ರಹಸನ' ನಾಟಕವು ಹವ್ಯಕ ಆಡುನುಡಿಯಲ್ಲಿದೆ ಎಂಬುದನ್ನು ಈ ಸಂದರ್ಭದಲ್ಲಿ ನೆನೆದುಕೊಳ್ಳಬೇಕು.

## ಸಾಹಿತ್ಯ ರಚನೆ

ಈ ನಾಟಕದ ರಚನೆಯ ಕಾಲದಿಂದ ಈಚೆಗೆ ಹವೀಕ ಆಡುನುಡಿಯಲ್ಲಿ ಅಲ್ಲಲ್ಲಿ ಸಾಹಿತ್ಯರಚನೆಗಳು ನಡೆಯುತ್ತ ಬರುತ್ತಿವೆ. ತುಂಬ ಹಿಂದೆಯೇ ಈ ಆಡುನುಡಿಯು ನಾಟಕಗಳ

ರಚನೆ, ಬಯಲಾಟ, ಯಕ್ಷಗಾನ ತಾಳಮದ್ದಳೆಗಳಲ್ಲಿ ಪ್ರಯೋಗಗೊಂಡುದರ ಕುರಿತು ಅಲ್ಲಲ್ಲಿ ದಾಖಲೆಗಳು ಸಿಗುತ್ತವೆ. ಪೂರ್ತಿಯಾಗಿ ಇದರಲ್ಲೇ ಸಮೃದ್ಧವಾದ ಸಾಹಿತ್ಯ ರಚನೆಯಾಗದುದಕ್ಕೆ ಶಿಷ್ಟಕನ್ನಡವೂ ಹವೀಕ ಆಡುನುಡಿಯೂ ಸಾಹಿತ್ಯಾಭಿವ್ಯಕ್ತಿಯಲ್ಲಿ ಸ್ಪರ್ಧಾಭಾವದಿಂದ ಬೆಳೆದು ಬರಲಿಲ್ಲವೆನ್ನುವುದು ಸ್ಪಷ್ಟ. ಅವೆರಡೂ ಒಂದಕ್ಕೊಂದು ಪೂರಕವಾದ ಒಂದರೊಡನೊಂದು ಬೆಸೆದುಕೊಂಡಂತಿರುವುದರಿಂದ ಹಾಗೆ ನಡೆದು ಬಂದಿವೆ ಎನ್ನುಬಹುದು. ಮಾತ್ರವಲ್ಲ, ಹವ್ಯಕ ಬರಹಗಾರರು ಶಿಷ್ಟಕನ್ನಡದಲ್ಲಿ ಹೇರಳವಾಗಿ ಸಾಹಿತ್ಯರಚನೆ ಮಾಡುತ್ತಿದ್ದರು. ಆದರೆ ಅಷ್ಟರಮಟ್ಟಿಗೆ ತಮ್ಮ ತಾಯ್ನುಡಿಯಲ್ಲಿ ಸಾಹಿತ್ಯರಚನೆಗೆ ಇಳಿಯದಿರುವುದು ಸೋಜಿಗದ ವಿಷಯವೇ ಆಗಿದೆ. ಇದಕ್ಕೆ ಹವ್ಯಕರ ಭಾಷೆಯಲ್ಲಿನ ಸಾಹಿತ್ಯರಚನೆಗಳು ಹವ್ಯಕರನ್ನು ಮಾತ್ರವೇ ಸೇರುತ್ತದೆ ಎಂಬ ಭಾವನೆಯೂ ಕೆಲಮಂದಿಯಲ್ಲಿದ್ದಿರಬಹುದು.

ದಕ್ಷಿಣ ಕನ್ನಡದಲ್ಲಿ ಅದರಲ್ಲೂ ಕುಂಬಳೆ, ಪುತ್ತೂರು ಹಾಗೂ ವಿಟ್ಲ ಸೀಮೆಗಳಲ್ಲಿ ಬಹಳ ಹಿಂದೆಯೇ ಹವ್ಯಕ ಆಡುನುಡಿಯಲ್ಲಿ ನಾಟಕಗಳು, ಪದ್ಯಗಳು (ಒಗಟು-ಗಾದೆಗಳೂ ಸೇರಿ) ಚುಟುಕುಗಳು ಇತ್ಯಾದಿಯಾಗಿ ವೇದಿಕೆಯಲ್ಲಿ ಸ್ಥಾನವನ್ನು ಪಡೆದುದನ್ನು ನೆನಪಿಸಿಕೊಳ್ಳುವ ಹಿರಿಯರು ಇಂದು ನಮ್ಮ ನಡುವೆ ಇದ್ದಾರೆ. ಆದರೆ, ಅಂಥಾ ಅವರ ಅಭಿವ್ಯಕ್ತಿಗಳೆಲ್ಲ ದಾಖಲೆಯಾಗಿ ಉಳಿಯಲಿಲ್ಲ, ಉಳಿಸಿಕೊಳ್ಳುವ ಯತ್ನವೂ ಅಷ್ಟಾಗಿ ನಡೆಯಲೇ ಇಲ್ಲ. ಅದಕ್ಕೆ ತಕ್ಕಹಾಗಿನ ಹಿನ್ನೆಲೆಯೂ ಆಗ ಇದ್ದಿರಲಿಲ್ಲ. ಆದರೆ ಅಗಾಧವಾದ ಜಾನಪದ ಸಂಪತ್ತನ್ನು ಬಾಯಿ ಮೂಲಕವಾಗಿ ಉಳಿಸಿಕೊಂಡು ಬಂದಂಥ ಅನೇಕ ಹಿರಿಯರು, ವೃದ್ಧೆಯರು ನಮ್ಮ ನಡುವೆ ಇಂದು ಅವಕ್ಕೆಲ್ಲಾ ದಾಖಲೆಯನ್ನೊದಗಿಸುತ್ತಿದ್ದಾರೆ.

ನಮ್ಮ ಸಮೃದ್ಧವಾದ ಜಾನಪದ ಸಂಪತ್ತನ್ನು ಈಗಾಗಲೇ, ಶ್ರೀಪಡಾರು ಮಹಾಬಲೇಶ್ವರ ಭಟ್ಟರು, ಡಾ॥ ಎಂ.ಬಿ. ಮರಕಿಣಿಯವರು, ಪ್ರೊ॥ ತಾಳ್ತಜೆ ಕೇಶವ ಭಟ್ಟರು, ಡಾ॥ ಶ್ರೀ ಕೃಷ್ಣಭಟ್ಟ ಅರ್ತಿಕಜೆಯವರು, ಪ್ರೊ॥ ಮರಿಯಪ್ಪಭಟ್ಟರು, ಪ್ರೊ॥ ಮೇಕಾ ರಾಮಕೃಷ್ಣಭಟ್ಟರು, ಶ್ರೀ ವಿ.ಬಿ. ಹೊಸಮನೆಯವರು, ಶ್ರೀಮುಳ್ಳಂಕೊಚ್ಚಿ ಗಣಪತಿ ಭಟ್ಟರು, ಮೊದಲಾಗಿ ಇನ್ನೂ ಅನೇಕ ಮಂದಿ ವಿದ್ವಾಂಸರುಗಳು ತಕ್ಕಷ್ಟು ಕಲೆಹಾಕಿ ದಾಖಲಿಸಿಕೊಂಡಿದ್ದಾರೆ. ಇವರ ಕೃತಿಗಳು ಇಂದು ಹವ್ಯಕನುಡಿ ಹಾಗೂ ಸಂಸ್ಕೃತಿಗಳ ಅಧ್ಯಯನಕ್ಕೆ ಆಕರಗಳಾಗಿವೆ.

ಪ್ರೊ॥ ತಾಳ್ತಜೆ ಕೇಶವ ಭಟ್ಟರ 'ಹವ್ಯಕರ ಶೋಭಾನೆಗಳು' (೧೯೮೬) ಡಾ॥ ಅರ್ತಿಕಜೆಯವರ 'ಜಾನಪದ ಜೀವನ', 'ಹವ್ಯಕ ಗಾದೆಗಳು', ಪ್ರೊ॥ ಮರಿಯಪ್ಪಭಟ್ಟರ 'ಹವ್ಯಕ ನಿಘಂಟು' ಮುಂತಾದ ಕೃತಿಗಳು ಉತ್ತಮ ಆಧಾರ ಗ್ರಂಥವೆನ್ನಿಸಿವೆ.

## ಹವ್ಯಕ ನುಡಿಯಲ್ಲಿ ಸಾಹಿತ್ಯರಚನೆ

ಸುಮಾರು ೧೯೮೯-೯೦ರಿಂದ ಈಚೆಗೆ ಹವ್ಯಕ ಸಮುದಾಯದಲ್ಲಿ ಅದರಲ್ಲೂ ದಕ್ಷಿಣ ಕನ್ನಡ-ಕಾಸರಗೋಡು ಜಿಲ್ಲೆಗಳಲ್ಲಿ ಸಾಹಿತ್ಯಿಕ ಸಾಂಸ್ಕೃತಿಕವಾಗಿ ಅನೇಕ ಬೆಳವಣಿಗೆಗಳಾದುವು. ಕಾಸರಗೋಡು ಜಿಲ್ಲಾ ಹೈವ ಬ್ರಾಹ್ಮಣ ಯುವ ವೇದಿಕೆಯ ಆಶ್ರಯದಲ್ಲಿ ಹವ್ಯಕರ ಸಂಘಟನೆ, ಸಾಂಸ್ಕೃತಿಕ ಚಟುವಟಿಕೆಗಳು, ಧಾರ್ಮಿಕ ವಿಚಾರ ವಿನಿಮಯ, ಪ್ರಸ್ತುತ ಸಮಾಜದಲ್ಲಿನ ಕೊರತೆಗಳು ಹಾಗೂ ಅವುಗಳನ್ನು ನೀಗಿಕೊಳ್ಳುವ ಬಗೆ, ಸಾಹಿತ್ಯಿಕ ಅಭಿವ್ಯಕ್ತಿ, ರಂಗಾಭಿವ್ಯಕ್ತಿ, ಚಟುವಟಿಕೆಗಳು, ಕೃತಿಗಳ ರಚನೆ - ಪ್ರಕಟಣೆಗಳು ಇತ್ಯಾದಿ ಬಹುಮುಖ ಚಟುವಟಿಕೆಗಳಿಗೆ ಚಾಲನೆ ಸಿಕ್ಕಿದಂತಾಯಿತು. ಹೀಗೆ ಹವ್ಯಕ ಆಡುನುಡಿಯಲ್ಲಿ ಹಲವಾರು ಕವಿತೆಗಳು, ನಾಟಕಗಳು,

ಕಥಾ ಸಾಹಿತ್ಯ ಇತ್ಯಾದಿಗಳು ರಚನೆಯಾದುವು, ಪ್ರಯೋಗವಾದುವು ಮತ್ತು ಪ್ರಕಟಗೊಂಡುವು.

೧೯೯೦ರಲ್ಲಿ ಪೆರಡಾಲದಲ್ಲಿ ಮೊದಲ ಸಮ್ಮೇಳನವೂ ಮುಂದಿನ ವರ್ಷ ಎಂದರೆ ೧೯೯೧ರಲ್ಲಿ ನೀರ್ಚಾಲಿನ ಮಹಾಜನ ಸಂಸ್ಕೃತ ಕಾಲೇಜು ಹೈಸ್ಕೂಲಿನಲ್ಲಿ ಎರಡನೇ ಸಮ್ಮೇಳನವು ೧೯೯೨ರಲ್ಲಿ ಪಳ್ಳತ್ತಡ್ಕದ ಮುದ್ದುಮಂಟಪದಲ್ಲಿ ಮೂರನೆಯ ಸಮ್ಮೇಳನವೂ ಬಹಳ ವಿಜೃಂಭಣೆಯಿಂದ ನಡೆದು ಇತಿಹಾಸವನ್ನು ಸ್ಥಾಪಿಸಿವೆ. ಈ ಮೂರೂ ಸಮ್ಮೇಳನಗಳಲ್ಲಿ ಕವಿತೆಗಳು, ನಾಟಕಗಳು, ಇತ್ಯಾದಿ ಸಾಹಿತ್ಯದ ವಿವಿಧ ಪ್ರಕಾರಗಳು ಬೆಳಕು ಕಂಡವು. ಅಲ್ಲದೆ ಮೂರು ನಾಟಕಗಳ ಯಶಸ್ವೀ ಪ್ರಯೋಗವೂ ಆಯಿತು.

### ಸಾಹಿತ್ಯ ಕೃಷಿ : ಕವನ ಸಂಕಲನಗಳು

ಮೊತ್ತಮೊದಲಬಾರಿಗೆ ಹವೀಕ ಆಡುನುಡಿಯಲ್ಲಿ ಕವನ ಸಂಕಲನವನ್ನು ಪ್ರಕಟಿಸಿದ ಕೀರ್ತಿ ಹಿರಿಯ ಲೇಖಕರಾದ ಶ್ರೀ ವಿಚಿತ್ರ ಏತಡ್ಕ ಅವರಿಗೆ ಸಲ್ಲುತ್ತದೆ. ಅವರ 'ಅವಿಲು' (1992) ಕವನ ಸಂಕಲನವು ಹವ್ಯಕ ನುಡಿಯುನ್ನು ಸಂಗೀತಕ್ಕೂ ಸಾಹಿತ್ಯಕ್ಕೂ ಅಳವಡಿಸಬಹುದೆಂಬುದನ್ನೂ, ಅಭಿವ್ಯಕ್ತಿಯಲ್ಲಿ ಯಾವುದೇ ಗೊಂದಲಗಳಿಲ್ಲದೆ ಸಮರ್ಥವಾಗಿ ಬಳಸಿಕೊಳ್ಳಬಹುದೆಂಬುದನ್ನೂ ಸಾಬೀತುಗೊಳಿಸಿದುವು. 'ಅವಿಲು' ಹತ್ತೊಂಬತ್ತು ಕವಿತೆಗಳ ಒಂದು ಗುಚ್ಛ. ಇದಕ್ಕೆ ಮುನ್ನುಡಿಯನ್ನು ಬರೆದ ಖ್ಯಾತ ಕವಿ ವಿಮರ್ಶಕ ಡಾ|| ರಮಾನಂದ ಬನಾರಿಯವರು, "ಇದು ಮುಖ್ಯವಾಗಿ ಹವ್ಯಕ ಭಾಷೆಯಲ್ಲಿರುವುದು ಮಾತ್ರವಲ್ಲ ಹವ್ಯಕ ಸಂಸ್ಕೃತಿಯನ್ನು ಈ ಕವನಗಳಲ್ಲಿ ಸೆರೆಹಿಡಿದಿರುವುದು ಕವಿಯ ಹಿರಿಮೆ. ಭಾಷೆಗೂ ಸಂಸ್ಕೃತಿಗೂ ಇರುವ ಅವಿನಾ ಸಂಬಂಧದ ದೃಷ್ಟಿಯಿಂದ ಇದು ಈ ಕೃತಿಯ ಒಂದು ಧನಾಂಶವಾಗಿದೆ...." ಎಂದಿದ್ದಾರೆ. ವಿಚಿತ್ರರ ಕವಿತೆಗಳಲ್ಲಿ ಮುಖ್ಯವಾಗಿ ಎದ್ದು ಕಾಣುವ ಅಂಶ ಅವರ ಹಾಸ್ಯಪ್ರವೃತ್ತಿ. 'ಹಾ-ವೀಕ್', 'ಪ್ರೈವೇಟು-ಗಜೆಟು', 'ಅಜ್ಜನ ಬೋಳು ತಲೆ', 'ಸಾವಲು ಬಿಡದ್ದ ಮಳೆ', - ಇವೆಲ್ಲಾ ಇಂಥ ವಿಚಾರಗಳಿಗೆ ಒಳ್ಳೆ ಉದಾಹರಣೆಗಳು. ಹಾಗೆಯೇ ಹಳೆ-ಹೊಸ ಸಂಸ್ಕೃತಿಗಳ ದ್ವಂದ್ವಗಳನ್ನು 'ಅಂದ್ರಾಕ ಮದುವೆ', 'ಹೀಂಗಿದ್ದು ನಮ್ಮ ಕಾರ್ಬಾರು' ಮುಂತಾದ ರಚನೆಗಳಲ್ಲಿ ನೋಡಬಹುದು.

೧೯೯೩ರಲ್ಲಿ ಶ್ರೀಮತಿ ಸವಿತಾ. ಎಸ್. ಭಟ್ಟ ಅಡ್ವಾಯಿಯವರು 'ಹೂಮಾಲೆ' ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. ಇದು ಹವ್ಯಕ ಮಹಿಳಾ ಲೇಖಕಿಯೊಬ್ಬರ ಸ್ವತಂತ್ರವಾದ ಮೊದಲ ಕವನ ಸಂಕಲನವೆನ್ನಿಸುತ್ತದೆ. ಇದರಲ್ಲಿ ಇಪ್ಪತ್ತೊಂದು ಕವಿತೆಗಳಿವೆ. ಇದರಲ್ಲೆಲ್ಲಾ ಮುಖ್ಯವಾಗಿ ಕಾಣಿಸುವುದು ಹೆಣ್ಣು ಹೃದಯದ ಅಂತರಂಗದ ಪ್ರತಿಬಿಂಬ ಹಾಗೂ ಅದರ ತುಡಿತ ಮಿಡಿತಗಳು. ಬಾಳು ನೆಮ್ಮದಿಯಿಂದ ಮುಂದುವರಿಯಬೇಕು ಹೊರತಾಗಿ ಗೋಳಾಗಬಾರದು ಎನ್ನುವ ಆಕಾಂಕ್ಷೆಗಳ ಹಿನ್ನೆಲೆಯಿಂದ ಲೇಖಕಿಯವರು ಅನುಭವದ ನುಡಿಮುತ್ತುಗಳನ್ನು ಆಯ್ದು ಈ 'ಹೂಮಾಲೆ'ಯನ್ನು ನೆಯ್ದಿದ್ದಾರೆ. ಉದಾ: 'ಮಗಳಿಂಗೊಂದು ಕೆಮಿಮಾತು', 'ಹೆಣ್ಣಿನ ಹಿರಿಮೆ', 'ಮದುವೆ ಮಾಣಿಗೊಂದು ಮಾತು' 'ಗೆಡುನೆಡು' ಇತ್ಯಾದಿ. ಇಷ್ಟಕ್ಕೇ ಈ ಕೃತಿಯು ಸಾರ್ಥಕತೆಯನ್ನು ಪಡೆಯುತ್ತದೆ.

ಹವ್ಯಕ ನುಡಿಯಲ್ಲಿ ಚುಟುಕುಗಳು, ವೃತ್ತಗಳು, ಪದ್ಯಗಳು ಹಾಗೂ ಕಥನಕಾವ್ಯಗಳನ್ನು ಬರೆಯುತ್ತಿರುವವರು ಶ್ರೀ ಬಾಳಿಲ ಕೆ.ಪರಮೇಶ್ವರ ಭಟ್ಟರು. ಅವರ "ಕಿಟ್ಟಣ್ಣನ ಪ್ರೀತಿ", ಹಾಗೂ "ಹೊಳಪಿನ ಹಾದಿ"ಗಳು ಕ್ರಮವಾಗಿ ಕುಚೇಲನ ಭಕ್ತಿ ಹಾಗೂ ಧ್ರುವನ ಭಕ್ತಿ

ಮಾರ್ಗಗಳನ್ನು ಬಿಂಬಿಸುವ ಕೃತಿಗಳು. ಕಥನಕಾವ್ಯದ ಕಲೆಯಲ್ಲಿ ಕಥೆಯ ಓಘ, ಸಹಜವಾದ ನಿರೂಪಣೆ, ಭಾಷೆಯ ಸೊಗಸು, ಸೊಗಡುಗಳು, ಅಲಂಕಾರಗಳು ರಸಾರ್ದ್ರವಾಗಿ ಮೂಡಿ ಬಂದಿವೆ. 'ಕಿಟ್ಟಣ್ಣನ ಪ್ರೀತಿ'ಯು ೧೯೯೩ರಲ್ಲಷ್ಟೇ ಪ್ರಕಟವಾಗಿದ್ದರೂ, ಇದನ್ನು ಅವರು ಹದಿನೈದು ವರ್ಷಗಳ ಮೊದಲೇ ರಚಿಸಿದ್ದರು ಎಂಬುದಾಗಿ ಲೇಖಕನ 'ಎರಡು ಮಾತಿ'ನಲ್ಲಿ ಹೇಳಿಕೊಂಡಿದ್ದಾರೆ. ಎಂದರೆ ಸುಮಾರು ೧೯೭೮ರಲ್ಲೇ ಇದರ ರಚನೆಯಾಗಿದೆ. ಇದು ಕುಚೇಲನ ಶ್ರೀಕೃಷ್ಣಭಕ್ತಿ-ಪ್ರೀತಿಗಳನ್ನು ಚಿತ್ರಿಸುವ ನೀಳ್ಗವನ, ಖಂಡಕಾವ್ಯವೆಂದರೂ ಸರಿಯಾಗುತ್ತದೆ.

"ನಮ್ಮ ಭಾಷೆಯ ಬಣ್ಣ ಈ ಕತೆಗೆ ಬಂದು
ಒಳ್ಳೆದಾಯೆಕು ಹೇಳಿ ಹೇಳುತ್ತೆ ಇಂದು"

- ಎಂದು ಕವಿ ತಮ್ಮ ತಾಯ್ನುಡಿಯ ಮೇಲಿನ ಪ್ರೀತಿ-ಅಭಿಮಾನಗಳನ್ನು ತೋರಿಕೊಳ್ಳುತ್ತಾ ಸುಂದರವಾದ ಕಾವ್ಯವನ್ನು ರಚಿಸಿದ್ದಾರೆ. ಇದು ನಾನ್ನೂರು ಸಾಲುಗಳುಳ್ಳ ನೂರು ಚೌಪದಿಗಳ ಸಮಾಹಾರ. ಇದರಲ್ಲಿ ಅವರ ಆಳವಾದ ಪಾಂಡಿತ್ಯ, ಸರಳ ಕಾವ್ಯಶೈಲಿಯೊಂದಿಗೆ ಆಡುನುಡಿ ಪ್ರಯೋಗದ ನೈಜ ಸೊಗಡಿನೊಂದಿಗೆ ಅಚ್ಚುಕಟ್ಟಾಗಿ ಪಡಿಮೂಡಿದೆ. ಸುಧಾಮನ ಪ್ರೀತಿ -

ಇಷ್ಟಾದರೂ ನೆಂಪುಮಡಿಗಿ ತಂದೆನ್ನೇ
ಪ್ರೀತಿ ಇದ್ದರೆ ನಾಕು ಕಾಳು ಸಾಕನ್ನೆ! (ಪು. ೧೨)

ಮತ್ತು, ಸುಧಾಮನು ಮನೆಗೆ ಬರುತ್ತಿರುವಾಗ -

ಎನ್ನದಾರಿಯ ಮನೆಲಿಕಾದೊಂಡು ಇಕ್ಕು
ತಲೆಕೊಡಿಯ ಕಂಡಪ್ಪಗಳೆ ಓಡಿ ಬಕ್ಕು (ಪು. ೧೪)

ಎಂಬಲ್ಲಿ ಕವಿ ನಮ್ಮನ್ನು ಭಕ್ತಿಯೊಂದಿಗೆ ಸಮಾವೇಶಗೊಳಿಸುತ್ತಾರೆ.

'ಕಿಟ್ಟಣ್ಣನ ಪ್ರೀತಿ' ಕೃತಿಗೆ ಬೆನ್ನುಡಿಯನ್ನು ಬರೆಯುತ್ತಾ ಪ್ರೊ॥ ವಿ.ಬಿ. ಮೊಳೆಯಾರರು "ಹವ್ಯಕರಲ್ಲಿರುವ ಬಡತನ, ಊಟ ಉಪಚಾರದ ವೈಶಿಷ್ಟ್ಯ, ಪ್ರೀತಿ ವಿಶ್ವಾಸ, ಹವ್ಯಕರ ನುಡಿಗಟ್ಟುಗಳು ಬಳಕೆ - ಇವೆಲ್ಲ ಇದರಲ್ಲಿ ಔಚಿತ್ಯಪೂರ್ಣವಾಗಿಯೂ ಅಚ್ಚುಕಟ್ಟಾಗಿಯೂ ಬಂದು, ಓದುವುದಕ್ಕೆ ಸುಲಭವೂ, ಸಂತೋಷಕರವೂ ಆಗಿದೆ, ಹಳೆಯ ಕತೆಯನ್ನು ಹೊಸರೀತಿಯಲ್ಲಿ ಹೇಳುವ ಕಲಾ ನೈಪುಣ್ಯ ಪರಮೇಶ್ವರ ಭಟ್ಟರಿಗೆ ಸಿದ್ಧಿಸಿದೆ" ಎಂದು ಹಾರ್ದಿಕವಾಗಿ ಕೊಂಡಾಡಿದ್ದಾರೆ.

ಈ ನೀಳ್ಗವನವನ್ನು ಪ್ರಕಟಿಸಿ ಮತ್ತೆರಡು ವರ್ಷಗಳಲ್ಲಿ ಪರಮೇಶ್ವರ ಭಟ್ಟರು 'ಹೊಳಪಿನ ಹಾದಿ' (೧೯೯೫) ನೀಳ್ಗವನವನ್ನು ಪ್ರಕಟಿಸಿದ್ದಾರೆ. ಇದರಲ್ಲಿ ನೂರನಲವತ್ತೊಂದು ಚೌಪದಿಗಳು ಮೇಳೈಸಿವೆ. ಇದರಲ್ಲಿ ಲೇಖಕರುಗಳಿಗೆ ಕವಿತಾ ರಚನೆ ಹಾಗೂ ಕಾವ್ಯಪಠಣದಿಂದ ಏನು ಪ್ರಯೋಜನ ಎಂಬುದನ್ನು

ಕತೆ ಕೇಳುವಷ್ಟು ಕಾಲಲ್ಲಿ ಮನಸ್ಸಿಲ್ಲಿಪ್ಪ
ಕೊರಗೊಂದು ಸರ್ತಿ ದೂರಕ್ಕು
ತಲೆ ಬೆರೆಗೊ ಸೆಂಪಾಗ ಈ ಲೋಕವೇ ಮರಗು
ನಾವೆಲ್ಲ ಕತೆಯ ಒಳಹೊಕ್ಕು ॥

(ಪುಟ. ೧)

ಎಂದು ಕಾವ್ಯತತ್ವವನ್ನು ಸಾರುವ ಕವಿ, ಅವರ ಅನುಭವ, ತತ್ವಗಳನ್ನು -

ಸಂತೋಷ ಇದ್ದರೂ ಒಪ್ಪದದು ತಪ್ಪುಗೋ?
ಸಂಸಾರವೇ ಮುಳ್ಳಬಲ್ಲೆ । (ಪು. ೩)

ಮತ್ತು

ಒಳಸಂಗತಿಯ ನೆಲೆಯ ತಿಳ್ಕೊಂಡು ಕೆಲಸದವು
ಕೆಸರೊಟ್ಟುಕರಡದ್ದೆ ಬಿಡವು
ಬುದ್ಧಿಯಿಪ್ಪವು ಮನೆಯ ಗುಟ್ಟು ಹೊಸ್ತಿಲುದಾಂಟಿ
ಪೆರ ಹೋಪಲೆಡೆಮಾಡಿ ಕೊಡವು । (ಪು. ೪)

- ಇಲ್ಲೆಲ್ಲಾ ಮಡುಗಟ್ಟಿ ನಿಂತಿರುವುದನ್ನು ಕಾಣಬಹುದು.

ಬಾಲಕ ಧ್ರುವನನ್ನು ಸುರುಚಿಯು, ಉತ್ಥಾನಪಾದನ ತೊಡೆಯಿಂದ ಕೆಳಕ್ಕೆ ಇಳಿಸಿದಾಗ,

ಪಶುವಾಗಿ ಕೂದವನ ಬಾಳೆಲೆಯ ಎದುರಂದ
ಏಳು ಹೇಳಿದ ಹಾಂಗೆ ಆತು (ಪು. ೭)

ಎಷ್ಟೊಂದು ಅನ್ವರ್ಥ ಹಾಗೂ ಔಚಿತ್ಯಪೂರ್ಣವಾದ ಹೋಲಿಕೆ ಇದು! ಹಾಗೆಯೇ, ಆಡುನುಡಿಯ ಸೊಬಗು -

ಎಲ್ಲಿ ಮನುಗುವೆ ಪುಟ್ಟೊ? ಆರು ಮೀಶುಗು ನಿನ್ನ?
ಆಲ್ಲಿದ್ದೊ ನಿನ್ನ ತಲೆಗೆಣ್ಣೆ?
ಎನ್ನ ಕೊಂಡಾಟಲ್ಲಿ ಬೆಳೆದೊಪ್ಪಕುಞ ನಿನ
ಗಲ್ಲಿ ಸಿಕ್ಕುಗೊ ಮಸರು ಬೆಣ್ಣೆ? (ಪು. ೧೧)

ಹೀಗೆ ಹಲವಾರು ಪದ್ಯಗಳನ್ನು ಉದಾಹರಿಸುತ್ತ ಹೋಗಬಹುದು.

ಇಡೀ ಕಾವ್ಯವೇ ಹೀಗೆ ಬುಡದಿಂದ ತುದಿವರೆಗೂ ಆಸಕ್ತಿಯಿಂದ ಓದಿಸಿಕೊಂಡು ಹೋಗುತ್ತದೆ. ಕಾವ್ಯಕ್ಕೂ ಈ ನುಡಿ ಎಷ್ಟು ಸಲೀಸಾಗಿ, ಸುಂದರವಾಗಿ ಒಗ್ಗಿಕೊಳ್ಳುತ್ತದೆ ಎಂಬುದಕ್ಕೆ ಶ್ರೀಭಟ್ಟರ ಈ ಎರಡು ಕಾವ್ಯಗಳನ್ನು ಓದಿದರೆ ಸಾಕು. ಇದಕ್ಕೆ ಮುನ್ನುಡಿಯನ್ನು ಬರೆಯುತ್ತಾ ಪ್ರೊ|| ಎ.ಬಿ. ಅರ್ತಿಕಜೆಯವರು "ಈಗಷ್ಟೇ ಕಣ್ಣು ಬಿಡುತ್ತಾ ಇರುವ ಹವ್ಯಕ ಸಾಹಿತ್ಯಕ್ಕೆ ಹೊಳಪಿನ ಹಾದಿ ಒಂದು ಯೋಗ್ಯ ಕೊಡುಗೆ" ಎಂದು ಹೇಳಿರುವುದು ಅರ್ಥಪೂರ್ಣವಾಗಿದೆ. ಪರಮೇಶ್ವರ ಭಟ್ಟರ ಎರಡೂ ನೀಳ್ಗವನಗಳು ಅವರೊಳಗಿನ ಮಹಾಕವಿಯನ್ನು ಅನಾವರಣಗೊಳಿಸುತ್ತವೆ ಮಾತ್ರವಲ್ಲ ಮುಂದಕ್ಕೆ ಇವರಿಂದ ಮಹಾಕಾವ್ಯ ಮೂಡಿ ಬರಬಹುದೆಂಬ ಪ್ರಬಲವಾದ ನಿರೀಕ್ಷೆಯನ್ನು ಹುಟ್ಟಿಸುತ್ತವೆ.

೧೯೯೫ರಲ್ಲಿ ಶ್ರೀ ಗಣಪತಿ ದಿವಾಣ ಅವರ 'ಕನ್ನಾಟಿ' (ಕನ್ನಡಿ) ಕವನ ಸಂಕಲನವು ಪ್ರಕಟವಾಗಿದೆ. ಇದು ಸಮಕಾಲೀನ ಸಮಾಜಕ್ಕೆ ಹಿಡಿದ ಕನ್ನಡಿಯಂತಿದೆ. ಚಿಕ್ಕಪುಟ್ಟ ಹನಿಗವನ, ದೊಡ್ಡ ಕವಿತೆಗಳೂ ಸೇರಿದ ಈ ಸಂಕಲನದಲ್ಲಿ ಕವಿ ದಿವಾಣರ ವ್ಯಂಗ್ಯ, ವಿಡಂಬನೆ ಹಾಗೂ ಹಾಸ್ಯ ಪ್ರವೃತ್ತಿಗಳನ್ನು ಗುರುತಿಸಬಹುದಾಗಿದೆ. ೧೯೯೫ರಲ್ಲಿ ಡಾ|| ಹರಿಕೃಷ್ಣಭರಣ್ಯರ 'ಗೆಣಸಲೆ' ಎಂಬ ಹವ್ಯಕ ಮುಕ್ತಕಗಳ ಸಂಕಲನ ಬಿಡುಗಡೆಯಾಗಿದ್ದು, ಹವ್ಯಕ ರಚನೆಗಳಲ್ಲಿ ಒಂದು ಮೈಲುಗಲ್ಲೆನಿಸಿದೆ. ಇದು ಮುನ್ನೂರ ಒಂದು ತ್ರಿಪದಿಗಳ ಗೊಂಚಲು. ವಿಮರ್ಶಕರುಗಳಿಂದ ಏಕಕಂಠದಲ್ಲಿ ಶ್ಲಾಘನೆಯನ್ನು ಪಡೆದ ಈ ಕೃತಿಯ ಬಗ್ಗೆ ಖ್ಯಾತ ಸಾಹಿತಿ ಪ್ರೊ|| ಮೊಳೆಯಾರರು,

"ಈ ಸಂಕಲನವು ಹವ್ಯಕ ಭಾಷಾ ಸಾಹಿತ್ಯಕ್ಕೆ ಒಂದು ಅಮೂಲ್ಯ ಕೊಡುಗೆಯಾಗಿದೆ, ಹವ್ಯಕ ಭಾಷೆಯನ್ನು ಅವರು ದುಡಿಸಿಕೊಂಡ ಬಗ್ಗೆ ರೋಚಕವಾಗಿದೆ" ಎನ್ನುತ್ತಾ ಅದರ ಮಹತ್ವವನ್ನು "ಹವ್ಯಕ ಸಂಸ್ಕೃತಿಯನ್ನು ಪುಟಪುಟಗಳಲ್ಲೂ ತೆರೆದಿಡುವ 'ಗೆಣಸಲೆ'ಯು ಅವರ ಜೀವನ ಕ್ರಮ, ನಂಬಿಕೆ, ಸಾಂಸಾರಿಕ ಅನುಬಂಧ, ಕೃಷಿ, ಊಟ-ಉಪಚಾರ, ಸಂಭ್ರಮ ಮುಂತಾದ ಬದುಕಿನ ವಿಭಿನ್ನ ಅನುಭವಗಳನ್ನು ಮುಕ್ತಕಗಳ ರೂಪದಲ್ಲಿ ದಾಖಲಿಸುತ್ತದೆ, ಹವ್ಯಕ ಭಾಷೆಯ ಈ ಕೃತಿಯು ಕನ್ನಡ ಬಲ್ಲವರೆಲ್ಲರಿಗೂ ಅರ್ಥ ಮಾಡಿಕೊಳ್ಳುವಂತಿದೆ" (ಸುದ್ದಿ ಬಿಡುಗಡೆ ಪತ್ರಿಕೆ, ದಿನಾಂಕ 20.5.96) ಎಂದಿದ್ದಾರೆ. ಇದಕ್ಕೆ ಮುನ್ನುಡಿಯನ್ನು ಬರೆದ ಪ್ರೊ॥ ತಾಳ್ತಜೆ ಕೇಶವ ಭಟ್ಟರು "ಹಾಡಿನ ಮಾತಿನ ಅರ್ಥ ರಸ, ಭಾವ, ನೀತಿ ಅನುಭವ ಇವೆಲ್ಲ ಎಷ್ಟು ಸೊಗಸಾಗಿದೆ ಎಂದು ಹೇಳಿ ಮುಗಿಯದು. ಪ್ರತಿಯೊಬ್ಬರೂ ಓದಿಯೇ ತಿಳಿದುಕೊಳ್ಳಬೇಕು." ಎಂಬುದಾಗಿ ಮುಕ್ತಕಂಠದಿಂದ ಹೇಳಿದ್ದಾರೆ.

## ನಾಟಕ ಸಾಹಿತ್ಯ

ಡಾ॥ ಹರಿಕೃಷ್ಣಭರಣ್ಯ ಅವರು ಈಗಾಗಲೇ ಹವ್ಯಕದಲ್ಲಿ ಮೂರು ನಾಟಕಗಳನ್ನು ರಚಿಸಿದ್ದು ಅವೆಲ್ಲವೂ ರಂಗಪ್ರಯೋಗವನ್ನು ಕಂಡು ಯಶಸ್ವೀ ಕೃತಿಗಳೆನಿಸಿವೆ. ಇವುಗಳಲ್ಲಿ ಎರಡು ಕೃತಿಗಳು ಪ್ರಕಟವಾಗಿವೆ. ಅವರ 'ಹೀಂಗೊಂದು ಮದುವೆ' (೧೯೯೦: ಸಾಧನ ಪ್ರಕಾಶನ, ಪಾಣಾಜೆ)ಯು ಆರು ದೃಶ್ಯಗಳುಳ್ಳ ಹಾಸ್ಯರಸ ಪ್ರಧಾನವಾದ ನಾಟಕ. ಈ ಕೃತಿಯ ಬಗೆಗೆ ವಿಮರ್ಶಕ ಡಾ॥ ಬಿ.ವಿ. ಸತ್ಯನಾರಾಯಣ ಅವರು ವಿಮರ್ಶಿಸುತ್ತಾ "ಇಗ್ಗಪ್ಪ ಹೆಗಡೇ ವಿವಾಹ ಪ್ರಹಸನದ ನಂತರ ಹವ್ಯಕರ ಆಡು ಮಾತಿನಲ್ಲೇ ರಚಿತವಾಗಿ ರಂಗಪ್ರಯೋಗವನ್ನು ಕಂಡ ಮೊದಲ ಹವ್ಯಕ ನಾಟಕ. ಇದಕ್ಕೆ ಚಾರಿತ್ರಿಕ ಮಹತ್ವವೂ ಇದೆ. ಇದರ ಉದ್ದಕ್ಕೂ ಬೆರೆಸಿದ ರಂಗುರಂಗಿನ ಮಸಾಲೆಯಿಂದ ನಕ್ಕುನಗಿಸುವ ಹಾಸ್ಯಮಯ ಸನ್ನಿವೇಶಗಳು ನಾಟಕದಲ್ಲಿವೆ. ಒಟ್ಟಿನಲ್ಲಿ ಓದಿನಲ್ಲೂ ರಂಗಪ್ರಯೋಗದಲ್ಲೂ ಇದು ಆಸ್ವಾದಯೋಗ್ಯವಾಗಿದೆ...." (ಗ್ರಂಥಲೋಕ: ಅಕ್ಟೋಬರ್ ೧೯೯೦) ಹೀಗೆ ಅಭಿಪ್ರಾಯ ಪಟ್ಟಿದ್ದಾರೆ. ಹಾಗೆಯೇ, ಇದಕ್ಕೆ ಬೆನ್ನುಡಿಯನ್ನು ಬರೆದ ಕವಿ ವಸಂತ ಕುಮಾರ ಪೆರ್ಲರು "ನಾಟಕದಲ್ಲಿ ಕುಂಬಳೆ ಸೀಮೆಯ ಹವ್ಯಕರ ಕೆಲವೊಂದು ಹಳೆಯ ಭಾಷಾ ಪ್ರಯೋಗಗಳನ್ನು ಬಹಳ ಚೆನ್ನಾಗಿ ಲೇಖಕರು ತಂದಿದ್ದಾರೆ ಮಾತ್ರವಲ್ಲ ಈ ಕೃತಿಯು ಹವ್ಯಕರಿಗೆ ಮಾತ್ರವೇ ಅಲ್ಲ ಕನ್ನಡ ತಿಳಿದಿರುವ ಎಲ್ಲರಿಗೂ ಮೆಚ್ಚುಗೆಯಾಗುವುದರಲ್ಲಿ ಸಂದೇಹವೇ ಇಲ್ಲ" ಎಂದಿದ್ದಾರೆ. 'ಹೀಂಗೊಂದು ಮದುವೆ' ನಾಟಕ ಕೃತಿಯ ಬಗೆಗೆ 'ಕನ್ನಡ ಜನ ಅಂತರಂಗ' ದೈನಿಕದ ಹವ್ಯಕ ಅಂಕಣದಲ್ಲಿ ಖ್ಯಾತ ಅಂಕಣಕಾರ ಸಾಹಿತಿ ಪ್ರೊ॥ ವಿ.ಬಿ. ಅರ್ತಿಕಜೆಯವರು ವಿವರವಾಗಿ ವಿಶ್ಲೇಷಿಸುತ್ತಾ. "ಹೀಗೆ ಆರಂಭದಿಂದ ಅಂತ್ಯದವರೆಗೂ ಸರಸ ಸಂಭಾಷಣೆ, ಹಾಸ್ಯ, ಸಹಜವಾದ ಚಿತ್ರಣ, ಹವ್ಯಕರ ನಡೆ-ನುಡಿ ಇತ್ಯಾದಿಗಳಿಂದಾಗಿ ನಾಟಕವು ಸುಂದರವಾಗಿ ಮೂಡಿ ಬಂದಿದೆ" (ಕನ್ನಡ ಜನ ಅಂತರಂಗ ಪತ್ರಿಕೆ: ದಿನಾಂಕ ೭.೮.೧೯೯೫) ಎಂದು ಹೇಳಿದ್ದಾರೆ.

'ಬದ್ಧ' ಕೃತಿಯು ಡಾ॥ ಭರಣ್ಯರ ಎರಡನೇ ಸ್ವತಂತ್ರ ಸಾಮಾಜಿಕ ನಾಟಕ. ಇದೂ ಆರು ದೃಶ್ಯಗಳುಳ್ಳ ನಾಟಕ. ಇದನ್ನು ಸಾಧನ ಪ್ರಕಾಶನ ಪಾಣಾಜೆಯು ೧೯೯೧ರಲ್ಲಿ ಪ್ರಕಟಿಸಿದೆ. 'ಬದ್ಧ' ನಾಟಕ ಕೃತಿಯನ್ನು ವಿಮರ್ಶಿಸುತ್ತಾ ಹಿರಿಯ ಕವಿ ಲೇಖಕ ಶ್ರೀ ವಿಚಿತ್ರ ಏತಡ್ಕ ಅವರು "ಬದ್ಧ ನಾಟಕದ ವಿನ್ಯಾಸವು ಆಕರ್ಷಕವಾಗಿದ್ದು, ಬರೇ ಹಾಸ್ಯಭರಿತ ನಾಟಕ ಎಂಬಷ್ಟೇ ಹೇಳಿದರೆ ತಪ್ಪಾದೀತು. ಅದರ ಪ್ರತಿಯೊಂದು ವಾಕ್ಯದಲ್ಲೂ ತೆಳುವಾದ ಹಾಸ್ಯವು ಹರಡಿಕೊಂಡಿದ್ದು,

ತಾಟಿಗಳನ್ನು ಮುಚ್ಚಿಕೊಳ್ಳುವುದಕ್ಕೆ ಆಗದಂತೆ ನಗೆಯುಕ್ಕಿಸುತ್ತದೆ. ಇದೊಂದು ಇದರ ವಿಶೇಷತೆಯಾದರೆ. ಮನರಂಜನೆಯ ಜೊತೆಗೆ ನಮ್ಮ ಬದುಕಿನ ಒಳಗು ಹೊರಗುಗಳು ಏನು-ಹೇಗಿವೆ ಎಂಬ ವಿಚಾರಗಳ ಸಜೀವ ಚಿತ್ರಣ ಇದರಲ್ಲಿದೆ. ಸರಾಗವಾಗಿ ಸಾಗುವ ಸಂಭಾಷಣೆ, ನಾಜೂಕಾದ ನಿರೂಪಣೆ, ಹವ್ಯಕ ಮಾತಿನ ಸೊಗಸುಗಾರಿಕೆ ಇತ್ಯಾದಿಗಳು, ಅಲ್ಲಲ್ಲಿ ಬರುವ ಗಾದೆ ಮಾತು, ಪದೆನುಡಿಗಳು ಇತ್ಯಾದಿ; ಇಲ್ಲಿನ ಪಾತ್ರಗಳಿಗೆ ಜೀವಂತಿಕೆ ಇದೆ, ಹಾಗೆಯೇ ಇದರ ಮುಕ್ತಾಯ ಹೇಗಾಗುತ್ತದೆ ಎಂಬುದನ್ನು ಊಹಿಸುವುದಕ್ಕೇ ಸಾಧ್ಯವಾಗದ ರೀತಿಯಲ್ಲಿ, ಗುಟ್ಟು ಸೋರಿಹೋಗದಂತೆ ಎಚ್ಚರಿಕೆಯಿಂದ ಉಳಿಸಿಕೊಂಡುದು ಲೇಖಕರ ಚಮತ್ಕಾರಕ್ಕೆ ಸಾಕ್ಷಿ" (ಬದ್ದಕ್ಕೊಂದು ಬಳುವಳಿ: ವಿಚಿತ್ರ ಏತದ್ಮ) ಎಂಬುದಾಗಿ ವಿಮರ್ಶಿಸಿದ್ದಾರೆ.

ಡಾ॥ ಹರಿಕೃಷ್ಣ ಭರಣ್ಯರು ೧೯೯೨ರಲ್ಲಿ ರಚಿಸಿದ ಮೂರನೆಯ ನಾಟಕ "ಪರಶುರಾಮ ಕ್ಷೇತ್ರೇ ಗೋಕರ್ಣ ಮಂಡಲೇ..." ಕೂಡಾ ಆರು ಅಂಕಗಳಿಂದ ಕೂಡಿದ, ಹವೀಕರ ಉಗಮ, ಸಂಸ್ಕಾರ ವಿಶೇಷಗಳು ಇತ್ಯಾದಿ ವಿಚಾರಗಳನ್ನು ಐತಿಹಾಸಿಕವಾಗಿಯೂ ಪೌರಾಣಿಕವಾಗಿಯೂ ಆರಯ್ದು ರಚಿಸಿದ ವಿಶಿಷ್ಟವಾದ ನಾಟಕ ಕೃತಿ. ಕಾಸರಗೋಡು ಜಿಲ್ಲಾ ಹೈವ ಯುವ ವೇದಿಕೆಯ ಆಶ್ರಯದಲ್ಲಿ ನಡೆದ ಮೂರನೆಯ ಸಮ್ಮೇಳನದಲ್ಲಿ ಇದು ಯಶಸ್ವೀ ಪ್ರಯೋಗವನ್ನು ಕಂಡಿದ್ದು ಇದಿನ್ನೂ ಪ್ರಕಟಗೊಳ್ಳಬೇಕಾಗಿದೆ.

೧೯೯೩ರಲ್ಲಿ ಶ್ರೀ ಪಡಾರು ಮಹಾಬಲೇಶ್ವರ ಭಟ್ಟರು 'ನಂಬ್ರಂದ ಜಂಬ್ರಕ್ಕೆ' ಎಂಬ ಐದು ದೃಶ್ಯಗಳ ನಾಟಕವನ್ನು ರಚಿಸಿ ಪ್ರಕಟಿಸಿದ್ದಾರೆ. ಈ ಕೃತಿಗೆ ಮೆಚ್ಚುನುಡಿಯನ್ನು ಬರೆದ 'ಹವ್ಯಕ ಬಂಧು' ಅವರು "ಹವ್ಯಕ ಭಾಷೆಯಲ್ಲಿ ಹಳೆಯ ನುಡಿಗಟ್ಟುಗಳನ್ನು ಹೊಂದಿಸಿಕೊಂಡು ಹವ್ಯಕರ ಮನೆ ಮಾತು-ಮರ್ಜಿಗಳನ್ನು ನಂಬ್ರ(ವ್ಯಾಜ್ಯ) ಜಂಬ್ರ (ಸಮಾರಂಭ)ಗಳನ್ನು ಎಲ್ಲವನ್ನೂ ತೆಕ್ಕೈಸಿಕೊಂಡು ಹವ್ಯಕರ ನಡೆ-ನುಡಿ-ಹಳೆಯ ಕಾಲದ ಚಿತ್ರಗಳನ್ನು ನೆನಪಿನಲ್ಲಿ ಉಳಿಸುವಂತೆ ರಚಿಸಿದ್ದು ತುಂಬ ಸೊಗಸಾಗಿದೆ, ಇಂಥಾ ಒಂದು ಹೊಸ ರೀತಿಯ ಹಳೆಯ ಚಿತ್ರಣದ ನಾಟಕ ಇದು..." ಎಂದಿದ್ದಾರೆ. ಇದು ಭಾರದ್ವಾಜ ಪ್ರಕಾಶನ ಮಂಗಳೂರು ಇದರ ಪ್ರಕಟಣೆಯಾಗಿದೆ.

ಮೇಲೆ ಹೇಳಿದ ನಾಟಕಗಳಲ್ಲದೆ ಇನ್ನೂ ಹಲವಾರು ಏಕಾಂಕಗಳು, ನಾಟಕಗಳು, ಪ್ರಹಸನಗಳು ಇತ್ಯಾದಿಗಳು ರಚನೆಯಾಗಿದ್ದರೂ, ಹೆಚ್ಚಿನ ಕೃತಿಗಳೂ ಹಸ್ತಪ್ರತಿ ರೂಪದಲ್ಲೇ ಉಳಿದುಕೊಂಡಿವೆ.

### ಕತೆ, ಕಾದಂಬರಿ ಇತ್ಯಾದಿ

ಕನ್ನಡದಲ್ಲಿ ಈಗಾಗಲೇ ಹವ್ಯಕ ಆಡುನುಡಿಯನ್ನು ಬಳಸಿಕೊಂಡು ಸಂದರ್ಭೋಚಿತವಾಗಿ ರಚಿಸಲಾದ ಕತೆ, ಕಾದಂಬರಿಗಳು ಕೆಲವೊಂದು ಬಂದಿವೆ. ಶ್ರೀಮತಿ ಗಂಗಾಪಾದೇಕಲ್ಲು, ಡಾ॥ ನಾ. ಮೊಗಸಾಲೆ ಮೊದಲಾದ ಕತೆ-ಕಾದಂಬರಿಕಾರರು ತಮ್ಮ ಕೃತಿಗಳಲ್ಲಿ ಅಲ್ಲಲ್ಲಿ ಬಳಸಿಕೊಂಡಿರುವುದು ವ್ಯಕ್ತವಾಗುತ್ತದೆ. ಹಾಗೆಯೇ ಹವ್ಯಕ ಸಂಸ್ಕೃತಿಯ ಅಧ್ಯಯನ, ಕೃತಿಗಳ ಅಧ್ಯಯನ ಮೊದಲಾಗಿ ವಿಮರ್ಶಾ ಬರಹಗಳೂ ಅಲ್ಲಲ್ಲಿ ಪ್ರಕಟವಾಗಿವೆ. ಡಾ॥ ಶ್ರೀ ಕೃಷ್ಣಭಟ್ಟ ಅರ್ತಿಕಜೆಯವರ 'ಜಾನಪದ ಜೀವನ', ಪಡಾರು ಮಹಾಬಲೇಶ್ವರ ಭಟ್ಟರ ಪ್ರಬಂಧಗಳು, ಹಳೆಯ ಹಾಡುಗಳ ಸಂಗ್ರಹ, ಪ್ರೊ॥ ತಾಳ್ತಜೆ ಕೇಶವ ಭಟ್ಟರ 'ಹವ್ಯಕರ ಶೋಭಾನೆ'ಗಳು ಮೊದಲಾದ ಕೃತಿಗಳಂಥ ಇನ್ನೂ ಹಲವಾರು ಕೃತಿಗಳ ರಚನೆ ಆಗಬೇಕಾದ್ದಿದೆ. ಡಾ॥ ಭರಣ್ಯರು ಈಗಾಗಲೇ (೧೯೯೩) ಸಮಗ್ರವಾಗಿ ಹವ್ಯಕ ಆಡುನುಡಿಯಲ್ಲೇ ಕಾದಂಬರಿಯೊಂದನ್ನು (ದೊಡ್ಡಜಾಲು)

ರಚಿಸಿದ್ದು ಸದ್ಯದಲ್ಲೇ ಅದು ಪ್ರಕಟವಾಗಲಿದೆ. ಡಾ॥ ಶ್ರೀಕೃಷ್ಣಭಟ್ಟ ಅರ್ತಿಕಜೆಯವರ ಸಹಭಾಗಿತ್ವದಲ್ಲಿ 'ಹವ್ಯಕ ಪಡೆನುಡಿಗಳ ಕೋಶ'ದ ಕಾರ್ಯಗಳೆಲ್ಲಾ ಮುಗಿದಿದ್ದು ಪ್ರಕಟಣೆಯ ಹಂತವನ್ನು ತಲುಪಿದೆ. ಡಾ॥ ಉಪ್ಪಂಗಳ ರಾಮಭಟ್ಟರು ಈ ಆಡುನುಡಿಯಲ್ಲಿ ಹಲವಾರು ಸಾಹಿತ್ಯರಚನೆಗಳನ್ನು ಮಾಡಿದ್ದಾರೆ. ಅವರ 'ಕೇಳಿದ ಕತೆ' ಎಂಬ ಅನುಭವ ಹಾಗೂ ಗಾದೆಗಳನ್ನಾಧರಿಸಿದ ಕತೆಗಳ ಗುಚ್ಛವು ಪ್ರಕಟಣೆಗಾಗಿ ಕಾದಿದೆ. ಅನೇಕ ಪತ್ರಿಕೆಗಳಲ್ಲಿ ಅಲ್ಲಲ್ಲಿ ಆಗಾಗ ಕತೆ, ಕವನ, ಚುಟುಕು, ಹನಿಗತೆ, ಸಣ್ಣಕತೆ, ಮಿನಿಕವಿತೆ (ಹುಂಡು ಪದ್ಯ) ಹರಟೆ-ಹಾಸ್ಯ ಲೇಖನಗಳು ಈಗೀಗ ಧಾರಾಳವಾಗಿ ಪ್ರಕಟಗೊಳ್ಳುತ್ತಿವೆ.

## ಶಾಸ್ತ್ರ-ನಿಘಂಟು ಇತ್ಯಾದಿ

ಹವ್ಯಕ ನುಡಿಯ ಬಗೆಗೆ ಶಾಸ್ತ್ರೀಯವಾಗಿ ಚಿಂತಿಸಿ ಅವಕ್ಕೆ ರೂಪವನ್ನು ಕೊಟ್ಟು ಕಂದಪದ್ಯಗಳಲ್ಲಿ ರೂಪಿಸಿದವರು ಹಿರಿಯ ವಿದ್ವಾಂಸರಾದ ಪ್ರೊ॥ ಟಿ.ಕೇಶವ ಭಟ್ಟರು. ಅವರ 'ಹವ್ಯಕ ಪದಸಂಚಯ' (೧೯೭೨ ಮೊದಲ ಮುದ್ರಣ, ೧೯೮೨ ಎರಡನೇ ಮುದ್ರಣ)ವೆನ್ನುವ ಈ ಕೃತಿಯಲ್ಲಿ ಹವ್ಯಕ ನುಡಿಗಳ ಶಾಸ್ತ್ರೀಯ ರೀತಿಯ ಚಿಂತನೆ, ವಿಭಾಗ ಕ್ರಮ ಇತ್ಯಾದಿಗಳು ವ್ಯಾಕರಣ ಶುದ್ಧವಾಗಿ ಮೂಡಿವೆ. ಇದೊಂದು ಅಪೂರ್ವ ಹಾಗೂ ಅಮೂಲ್ಯ ಕೃತಿಯೆಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಈ ಕೃತಿಗೆ ಮೈಸೂರು ವಿಶ್ವವಿದ್ಯಾನಿಲಯದ ಪುರಸ್ಕಾರವೂ ದೊರೆತಿದೆ. ಇದು ಒಂದು ಆಡುನುಡಿಗೆ ಸಂದ ಗೌರವವೆಂದೇ ತಿಳಿಯಬೇಕು.

'ಹವ್ಯಕ ಪದಸಂಚಯ'ವೆಂದರೆ

ಇದು ತೆಂಗನ್ನಡ ಗೋಕ
ರ್ಣದ ಸಿದ್ಧಾಪುರದ ಸಿರಸಿಯೂರ್ಗಳ ಶಿವಮೊ
ಗ್ಗದ ಸಾಗರದ ಹವಿಕ ಲೋ
ಕದರೀ ನೆಲಸಿದ ದೇಸಿ ನುಡಿಯ ಕೋಶ ವಿಶೇಷಂ

(ಪೀಠಿಕೆ-೨)

- ಎನ್ನುತ್ತಾರೆ ಪ್ರೊ॥ ಭಟ್ಟರು. ಇದು ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಹವ್ಯಕ ವಿಶೇಷ ಶಬ್ದಗಳನ್ನು ಸಂಗ್ರಹಿಸಿ ಧಾತುಗಳನ್ನು ಬೇರೆಯಾಗಿಯೂ ಉಳಿದುವನ್ನು ಬೇರೆಯಾಗಿ ಅಂತ್ಯಾಕ್ಷರಕ್ಕನುಗುಣವಾಗಿಟ್ಟು ಕಂದ ಪದ್ಯಗಳಲ್ಲಿ ಸಮಾಮ್ನಾಯಗೊಳಿಸಿದ ಪದ್ಯಾತ್ಮಕ ನಿಘಂಟುವಾಗಿದೆ. ಮಾತ್ರವಲ್ಲ ಪ್ರತಿಯೊಂದು ಪುಟದ ಅಡಿಯಲ್ಲೂ ಅಲ್ಲಲ್ಲಿಯ ಪದಗಳನ್ನೂ ಅದಕ್ಕೆ ಕನ್ನಡದಲ್ಲಿ ಅರ್ಥ ವಿವರಣೆಗಳನ್ನೂ ಕೊಟ್ಟಿದ್ದಾರೆ. ಇದೊಂದು ಮೌಲ್ಯಾತ್ಮಕ ಕೃತಿಯಷ್ಟೇ ಅಲ್ಲ ಉತ್ತಮ ಒಂದು ಆಕರ ಗ್ರಂಥವೂ ಆಗಿದೆ. ಹವ್ಯಕ ಪದಗಳ ಬಗೆಗೆ ಶಾಸ್ತ್ರೀಯವಾಗಿ ವಿವೇಚಿಸುವ ಮೊದಲ ನಿಘಂಟು ಎಂದೂ ಕರೆಯಬಹುದು. ಇದರಲ್ಲಿನ ಒಂದೆರಡು ಉದಾಹರಣೆಗಳು:

ಕೋಣಂಗೆ ಇಯೋಣವೆಸರಿದೆ
ಕೋಣವೆನಲ್ ತಾನೆ ಕೋವಣವೆನಿಕ್ಕುಂ, ತಿ
ನ್ನಾಣಂ ತಿನ್ನುವುದು ಪರಂ
ಚಾಣಂ ಗೊಣಗುತ್ತೆ ಬಯ್ವುಪಾಂಗೆನಲಕ್ಕುಂ

(೬೪)

ಗಿರುಗಾಣೆಸೆಂದು ಪೀಡಿಸು
ತಿರು ಚಾಣೆಸು ಚಣೆಸು ಕಾಡುಸೆನಲೇಡಿಸು - ಚಾ

ಕಿಸುವುದು ಕುಚ್ಚಣಿಪುದು ಹಂ
ಗಿಸುವುದು, ಇಂಬಳಿಸು ಬಟ್ಟೆಮಡಚುವುದಕ್ಕುಂ

(೧೭೭)

ಈ ಕೃತಿಯ ಕೊನೆಯಲ್ಲಿ ಸಾವಿರಕ್ಕೂ ಹೆಚ್ಚು ಹವ್ಯಕ ಪದಗಳ (ಧಾತುಗಳೂ ಸೇರಿ) ಪಟ್ಟಿಯನ್ನು ಅಕಾರಾದಿಯಾಗಿ ಕೊಟ್ಟು ಉಪಕರಿಸಿದ್ದಾರೆ.

ಪ್ರೊ|| ಮರಿಯಪ್ಪಭಟ್ಟರರು ಸಂಪಾದಿಸಿದ 'ಹವ್ಯಕ ಇಂಗ್ಲಿಷು ನಿಘಂಟು', ಡಾ|| ಕೆ.ಜಿ. ಶಾಸ್ತ್ರಿಯವರ The Havyaka Dialect of North Kanara, ಡಾ|| ಡಿ.ಎನ್. ಶಂಕರಭಟ್ಟರ An outline Grammar of Havyaka, ಡಾ|| ಬಿ. ಚಂದ್ರಶೇಖರಭಟ್ಟರ Descriptive Analysis of Havyaka Dialect (ಅಪ್ರಕಟಿತ), ಡಾ|| ಶ್ರೀಮತಿ ಶಾಲಿನಿ ರಘುನಾಥ ಅವರ A Sociolinguistic Analysis of Havyaka Dialect of North Kanara (ಅಪ್ರಕಟಿತ) ಡಾ|| ಹೆಲೆನ್ ಉಲ್‌ರಿಚ್ ಅವರ Clause structure of Northern Havyaka Kannada A Tagmamic Analysis (Trivandrum 1980) ಮೊದಲಾದ ಕೃತಿಗಳಲ್ಲದೆ ಇನ್ನೂ ಅನೇಕ ಸಂಶೋಧನಾತ್ಮಕ ಲೇಖನಗಳು ಅಲ್ಲಲ್ಲಿ ಪ್ರಕಟವಾಗಿವೆ.

**ಪತ್ರಿಕೆಗಳು**

ಸಾಹಿತ್ಯ ರಚನೆಗಳು ಬೆಳಕು ಕಾಣುವಲ್ಲಿ ಪತ್ರಿಕೆಗಳು ವಹಿಸುವ ಪಾತ್ರ ದೊಡ್ಡದು. ಹವ್ಯಕ ನುಡಿಯಲ್ಲಿ ಅದೆಷ್ಟೋ ಮಂದಿ ಕವಿಗಳು, ಬರಹಗಾರರು ಇದ್ದಾರೆ. ಬರೆಯುವವರಿಗೆ ಪತ್ರಿಕೆಗಳು ಸಹಕರಿಸುತ್ತಿದ್ದರೆ ಬರಹಗಾರರೂ ಬೆಳೆಯುತ್ತಾರೆ. ಇಲ್ಲದಿದ್ದರೆ ಬರೆದುದು ಬರೆದವರ ಹತ್ತಿರವೇ ಉಳಿದು ಬಿಡುತ್ತದೆ. ಹವ್ಯಕ ನುಡಿಯಲ್ಲಿ ಬರೆಯುವ ಲೇಖಕರಿಗೆ ಇದು ಮುಖ್ಯವಾದ ಮತ್ತು ದೊಡ್ಡ ಸಮಸ್ಯೆಯಾಗಿದೆ.

ಬೆಂಗಳೂರಿನಿಂದ ಪ್ರಕಟವಾಗುವ, ಅಖಿಲ ಹವ್ಯಕ ಮಹಾಸಭಾ ಇದರ ಮುಖ ಪತ್ರಿಕೆ 'ಹವ್ಯಕ' ಮಾಸಿಕದಲ್ಲಿ ಆಗೊಮ್ಮೆ ಈಗೊಮ್ಮೆ ಸಾಹಿತ್ಯಿಕ ಬರಹಗಳು ಬೆಳಕು ಕಾಣುತ್ತಿರುತ್ತವೆ. ಈಚೆಗೆ ಮಂಗಳೂರಿನಿಂದ ಪ್ರಕಟಗೊಳ್ಳುತ್ತಿರುವ ಕನ್ನಡ ಜನ ಅಂತರಂಗ ದೈನಿಕದಲ್ಲಿ ವಾರಕ್ಕೊಮ್ಮೆ ಹವ್ಯಕದ ಅಂಕಣವೊಂದು ಪ್ರಕಟವಾಗುತ್ತಿದೆ. ಹಾಗೆಯೇ ಮಂಗಳೂರಿನ 'ಹವ್ಯಕ ಸಮನ್ವಯ' ಪತ್ರಿಕೆಯು (ಪ್ರಕೃತ 'ಹವ್ಯಕ ವಾರ್ತೆ') ಹವ್ಯಕ ಬರಹಗಳನ್ನು ಪ್ರಕಟಿಸುತ್ತಿದೆ. ಹಾಗೆಯೇ ಮಂಗಳೂರಿನ ಭಾರದ್ವಾಜ ಪ್ರಕಾಶನದಿಂದ ಹೊರಬರುತ್ತಿರುವ 'ಕಲಾದರ್ಶನ' ಮಾಸಿಕದಲ್ಲಿ ಹವ್ಯಕ ನುಡಿಯ ಅಂಕಣವೊಂದು ಪ್ರಕಟಗೊಳ್ಳುತ್ತಿದೆ. ಹೀಗೆ ಪತ್ರಿಕೆಗಳಿಂದಾಗಿ ಹವ್ಯಕ ಆಡುನುಡಿಯ ಒಂದಷ್ಟು ಬರಹಗಳೂ, ಹಲವಾರು ಬರಹಗಾರರೂ ಬೆಳಕಿಗೆ ಬರುವಂತಾಗಿದೆ. ಇನ್ನೂ ಇದು ಬೆಳೆದು ಬರಬೇಕಾಗಿದೆ. ಇನ್ನಷ್ಟು ಪತ್ರಿಕೆಗಳು ಹುಟ್ಟಿಕೊಂಡು ಪುಷ್ಟವಾಗಿ ರಸವತ್ತಾದ, ಸಾರವತ್ತಾದ ಸಾಹಿತ್ಯರಚನೆ ಆಗುತ್ತಿರಬೇಕು, ಅರ್ಥವತ್ತಾದ ವಿಮರ್ಶೆಗಳೂ ಬರುತ್ತಿರಬೇಕು. ಆಗ ಆ ನುಡಿಯು ಸಾರ್ಥಕವಾಗುತ್ತದೆ.

**ಯಕ್ಷಗಾನ ಬಯಲಾಟ - ತಾಳಮದ್ದಲೆ, ಇತ್ಯಾದಿ**

ಇತ್ತೀಚೆಗೆ ಪೂರ್ತಿಯಾಗಿ ಹವ್ಯಕ ಆಡುನುಡಿಯಲ್ಲೇ ಹಲವಾರು ಯಕ್ಷಗಾನ ಬಯಲಾಟಗಳೂ ತಾಳಮದ್ದಳೆ ಕಾರ್ಯಕ್ರಮಗಳೂ ಯಶಸ್ವಿಯಾಗಿ ಜರುಗಿದ್ದು ಜನರ ಮೆಚ್ಚುಗೆಯನ್ನೂ ಗಳಿಸಿವೆ. ಹಾಗೆಯೇ ಸುಪ್ರಸಿದ್ಧ ಕಲಾವಿದರ ಕೂಡುವಿಕೆಯಿಂದ ಹಲವಾರು ಯಕ್ಷಗಾನ ತಾಳಮದ್ದಲೆಯ

ಧ್ವನಿಸುರುಳಿಗಳೂ ಬಿಡುಗಡೆಯಾಗಿವೆ. ಉದಾಹರಣೆಗೆ ಶ್ರೀ ಗೋವಿಂದ ಬಳ್ಳಮೂಲೆಯವರು ಸಂಯೋಜಿಸಿ ಮಾರುಕಟ್ಟೆಗೆ ಬಿಡುಗಡೆಯಾಗಿರುವ 'ತಾಟಕಾಮೋಕ್ಷ', 'ದಕ್ಷಾಧ್ವರ', 'ಸತ್ಯಾನ್ವೇಷಣೆ', 'ಭಗವಾನ್ ಪರಶುರಾಮ' ಮೊದಲಾದವು ಅತ್ಯಂತ ಜನಪ್ರಿಯತೆಯನ್ನು ಗಳಿಸಿವೆ.

## ಬರಹಗಾರರು

ಶಿಷ್ಟಕನ್ನಡದಲ್ಲಿ ಹವ್ಯಕ ವಿದ್ವಾಂಸರು ಅಮೋಘವಾದ ಸೇವೆ ಸಲ್ಲಿಸಿದ್ದು ಎಲ್ಲರಿಗೂ ತಿಳಿದ ವಿಚಾರ.ಹಾಗೆಯೇ ಹವ್ಯಕ ಆಡುನುಡಿಯಲ್ಲಿ ಬರೆಯುತ್ತಿರುವ ಕವಿಗಳ, ಬರಹಗಾರರ ಬಳಗವು ಈಗ ಬೆಳೆಯುತ್ತಲೇ ಇರುವುದು ಸಂತೋಷದ ವಿಷಯ. ಸರ್ವಶ್ರೀ ವಿಚಿತ್ರ ಏತಡ್ಕ, ಪೆರಡಾಲ ಮೂಲೆ ಸುಬ್ರಹ್ಮಣ್ಯ ಭಟ್ಟ, ಪೊಟ್ಟಿಪ್ಪಲ ನಾರಾಯಣ ಭಟ್ಟ, ವಸಂತ ಕುಮಾರ ಪೆರ್ಲ, ವಿ.ಬಿ. ಕುಳಮರ್ವ, ಶಿವಕುಮಾರ ಭರಣ್ಯ, ಕೆ.ಶಿವಶಂಕರ, ಸೊಡಂಕೂರು ತಿರುಮಲೇಶ್ವರ ಭಟ್ಟ, ಪ್ರೊ॥ ವಿ.ಬಿ. ಮೊಳೆಯಾರ, ಡಾ॥ ಶ್ರೀಕೃಷ್ಣ ಭಟ್ಟ ಅರ್ತಿಕಳೆ, ಚಂದ್ರಶೇಖರ ಯೇತಡ್ಕ, ಡಾ॥ ಶ್ರೀಕೃಷ್ಣ ಚೊಕ್ಕಾಡಿ, ಕೆ. ಬಾಲಕೃಷ್ಣ, ರವಿಶಂಕರ ಸರಳಿ, ವೆಂಕಟರಾಜ ವಾಶೆಮನೆ, ಕೆ. ಶಿವಶಂಕರ, ಚಂದ್ರಶೇಖರ ಕುಳಮರ್ವ, ಕುಳಮರ್ವ ಕೃಷ್ಣಶರ್ಮ, ಶಂ.ನಾ. ಖಂಡಿಗೆ, ಡಾ॥ ಶ್ರೀಕೃಷ್ಣ ಪೈಸಾರಿ, ವಿ.ಬಿ. ಹೊಸಮನೆ, ಶ್ರೀಮತಿಯರಾದ ಮನೋರಮ ಎಂ. ಭಟ್ಟ, ಸವಿತಾ ಎಸ್ ಭಟ್ಟ ಅಡ್ವಾಯಿ, ಶ್ಯಾಮಲಾ ಚಳ್ಳಿಕಾನ, ಲಕ್ಷ್ಮಿ ಅಮ್ಮಮಲೆತ್ತಡ್ಕ, ಯು. ಮಹೇಶ್ವರಿ, ಬಾಳಿಲ ಪರಮೇಶ್ವರ ಭಟ್ಟ, ಶ್ರೀಮುಳಿಯ ರಜತಾದ್ರಿ, ಹರಿನಾರಾಯಣ ಮಾಡಾವು, ಡಾ॥ ರಮಾನಂದ ಬನಾರಿ, ಪ್ರೊ॥ ವಿ.ಬಿ. ಅರ್ತಿಕಜೆ, ಗಣಪತಿ ದಿವಾಣ, ಶ್ರೀರಾಮ ದಿವಾಣ, ಡಾ॥ ಹರಿಕೃಷ್ಣ ಭರಣ್ಯ, ಹೀಗೆ ಇನ್ನೂ ಅನೇಕ ಮಂದಿ ಉತ್ಸಾಹದಿಂದ ತಮ್ಮ ತಾಯ್ನುಡಿಗೆ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ವಿದ್ವಾನ್ ವೆಂಕಟರಾಜ ಪೆಣ್ಗೆತ್ತಾಯ ಮೊದಲಾಗಿ ಹವ್ಯಕೇತರರೂ ಹವ್ಯಕ ನುಡಿಯಲ್ಲಿ ಬರೆಯುತ್ತಿರುವುದು ಒಂದು ಆಡುನುಡಿಗೆ ಸಲ್ಲುವ ಗೌರವವೇ ಸರಿ.

## ಮುಕ್ತಾಯ

ಆಡುಭಾಷೆ - ಸಾಹಿತ್ಯಭಾಷೆ ಎಂಬ ವಿಚಾರದಲ್ಲಿ ಈಗಾಗಲೇ ಕೆಲಮಂದಿ ತಮ್ಮ ಅಭಿಪ್ರಾಯಗಳನ್ನು ತಿಳಿಸುತ್ತಾ ಆಡುಭಾಷೆಯಲ್ಲಿ ಸಾಹಿತ್ಯರಚನೆಯ ಬಗ್ಗೆ ಹಗುರವಾಗಿ ಮಾತನಾಡಿ ಆಕ್ಷೇಪವನ್ನು ತಿಳಿಸಿದವರೂ ಇದ್ದಾರೆ. ಬಹುಶಃ ಹವ್ಯಕದಲ್ಲಿ ನಡೆಯುತ್ತಿರುವ ಹಾಗೆ ಸಾಹಿತ್ಯಿಕ ಚಟುವಟಿಕೆಗಳು ಕನ್ನಡದ ಇತರ ಉಪಭಾಷೆಗಳಾದ ಕೋಟಕನ್ನಡ, ಭೈರಕನ್ನಡ, ಗೌಡಕನ್ನಡ, ಕುಂದಗನ್ನಡ ಮೊದಲಾದವುಗಳಲ್ಲಿ ಆಗುತ್ತಿರುವಂತೆ ತೋರುವುದಿಲ್ಲ. ಏನಿದ್ದರೂ ಈ ಉಪಭಾಷೆಗಳೆಲ್ಲವೂ ಕನ್ನಡದ ಅವಿಭಾಜ್ಯ ಅಂಗಗಳೆಂಬುದನ್ನು ಮರೆಯಲಾಗದು. ಇವನ್ನು ಹೊರತು ಪಡಿಸಿದ ಕನ್ನಡವನ್ನು ಕಲ್ಪಿಸಲು ಅಸಾಧ್ಯ.

ಎಲ್ಲಾ ಭಾಷೆಗಳೂ ಕಾಲದಿಂದ ಕಾಲಕ್ಕೆ, ಜಾಗದಿಂದ ಜಾಗಕ್ಕೆ ಬದಲಾಗುತ್ತಲೇ ಇರುತ್ತವೆ. ಆಡುನುಡಿಗಳಲ್ಲಿ ಅಥವಾ ಉಪಭಾಷೆಗಳಲ್ಲಿ ಸಾಹಿತ್ಯ ಎಂದರೆ ಸಾಕಷ್ಟು ನಶಿಸಿಹೊಗುತ್ತಿರುವ ಹಾಗೂ ಅಮೂಲ್ಯವಾದ ಅಂಥವನ್ನು ತಕ್ಕಷ್ಟುಮಟ್ಟಿಗೆ ಗ್ರಂಥಸ್ಥವನ್ನಾಗಿಸುವುದು ಮುಖ್ಯ ಉದ್ದೇಶ. ಕೃತಿಯೊಳಗೆ ಪ್ರಯೋಗಿಸಲಾದ ಭಾಷೆಯ ಆಧಾರದ ಮೇಲೆ ಅದು ಜನಪ್ರಿಯತೆಯನ್ನು ಗಳಿಸುವುದೋ ಗಳಿಸದೇ ಇರುವುದೋ ಆ ವಿಚಾರ ಬೇರೆ. ಅದರ ಮೌಲ್ಯಮಾಪನೆಗೆ ಭಾಷೆಯು ಎಂದೂ ಅಡ್ಡಿಯಾಗಲಾರದು, ಆಗಬಾರದು ಕೂಡ. ಕನ್ನಡದಲ್ಲಿ ಆಡು ಭಾಷೆ - ಗ್ರಾಮ್ಯ ಭಾಷೆಗಳನ್ನು ಬಳಸಿಕೊಂಡು ರಚಿಸಿದ ಕೃತಿಗಳನ್ನು ಕೇವಲ ಭಾಷಾ ದೃಷ್ಟಿಯೊಂದರಿಂದಲೇ

ಅಪ್ರಯೋಜಕವೆನ್ನುವುದು ಮೌಢ್ಯವೇ ಆಗುತ್ತದೆ. ಹೃದ್ಗತವಾದ ಆತ್ಮೀಯವಾದ ಮನೆ ಮಾತಿನಲ್ಲಿ ಮಾತನಾಡುವುದು, ಕೃತಿರಚನೆ ಮಾಡುವುದು ಆಯಾಯ ವ್ಯಕ್ತಿಗೆ ಅಭಿಮಾನದ ವಿಷಯವಾಗಬೇಕು ಹೊರತಾಗಿ, ಕೀಳರಿಮೆಯ ಅಸಹನೀಯ ವಿಚಾರ ಆಗಬಾರದು.

ಪ್ರಸ್ತುತ ಲೇಖನವು ದ.ಕ. ಹಾಗೂ ಕಾಸರಗೋಡು ಪ್ರದೇಶಗಳಲ್ಲಿ ನಡೆದ ಹವ್ಯಕ ಬರವಣಿಗೆಗಳ ಬಗೆಗೆ ಒತ್ತುಕೊಟ್ಟು ರಚಿಸಿದಂಥಾದ್ದಾಗಿದೆ. ಇದೇ ರೀತಿ ಉಳಿದೆಡೆಗಳಲ್ಲೂ ನಡೆಯುತ್ತಿರಬಹುದು. ಈ ಲೇಖಕನಿಗೆ ದೊರಕಿದ ಮಾಹಿತಿಗಳು ಹಾಗೂ ಕಾಲಾವಕಾಶದ ಮಿತಿಯೊಳಗೆ ಇನ್ನೂ ಕೆಲವಾರು ವಿಷಯಗಳು ಇಲ್ಲಿ ನಮೂದಾಗದೆಯೇ ಇರಬಹುದು. ದಯವಿಟ್ಟು ಸಹೃದಯರು ಇದನ್ನು ಅರ್ಥ ಮಾಡಿಕೊಳ್ಳಬೇಕು.

# ತಮಿಳು ಸಾಹಿತ್ಯದಲ್ಲಿ ವೈಚಾರಿಕತೆ - ಒಂದು ನೋಟ

ಡಾ. ಚಿ. ರಾಮಸ್ವಾಮಿ

'ಎಪ್ಪೊರುಳ್ ಯಾರ್‌ಯಾರ್ ವಾಯ್ ಕೇಟ್ಟಿನುಂ
ಅಪ್ಪೊರುಳ್ ಮೆಯ್ಪೊರುಳ್ ಕಾಣ್ಬದರಿವು'.

- ತಿರುಕ್ಕುರಳ್

ಯಾವುದೇ ವಿಷಯವನ್ನು ಯಾರ ಯಾರ ಬಾಯಿಂದ ಕೇಳಿದರೂ ಆ ವಿಷಯದ ಸತ್ಯಾಂಶ ತಿಳಿಯುವುದೇ ಅರಿವು. ಒಂದು ವಿಷಯವನ್ನು ಎಷ್ಟೇ ಜನರಿಂದ ಕೇಳಿದರೂ, ಎಂತೆಂತಹವರ ಬಾಯಿಯಿಂದ ಕೇಳಿದರೂ ಆ ವಿಷಯವನ್ನು ತುಲನೆಮಾಡಿ, ವಿಶ್ಲೇಷಿಸಿ ನೋಡಿ, ವಿಚಾರ ಮಾಡಿ ಅದರ ಸತ್ಯಾಂಶವನ್ನು ಕಂಡುಕೊಳ್ಳುವುದೇ ಅರಿವು ಅರ್ಥಾತ್ ಜ್ಞಾನ ಎನ್ನುತ್ತಾರೆ ತಿರುವಳ್ಳುವರ್. ಇದೇ ವೈಚಾರಿಕತೆಯ ಸರಳ ವ್ಯಾಖ್ಯೆ. ಒಳ್ಳೆಯದರ ಒಳಿತನ್ನು ಕೆಟ್ಟವರ ಕೆಡುಕನ್ನು ತಿಳಿಯಬಲ್ಲ ಜೀವನ ನೀತಿಯೇ ಮಾನವ ಸಮಾಜವನ್ನು ನಾಗರಿಕತೆ ತುಂಬಿದುದಾಗಿ ಎತ್ತರಿಸಬಲ್ಲುದು. ಇಂತಹ ನೀತಿ ನಿಯಮಗಳಿಂದ ಜಾರುವಾಗ ಸಮಾಜ ತನ್ನ ನೆಲೆಯಿಂದ ಒಡೆದು ಸರಿದು ಬಿಡುತ್ತದೆ. ಇಂತಹ ಜಾರಿಕೆಯನ್ನು ತಡೆಯುವುದಕ್ಕೂ, ಸಮಾಜವನ್ನು ಅರ್ಥಪೂರ್ಣ ಮಾರ್ಗದಲ್ಲಿ ನಡೆಸುವುದಕ್ಕೂ ನಡೆದ - ನಡೆಯುತ್ತಿರುವ ಚಳವಳಿಯ ಇತಿಹಾಸವೇ "ಭಾರತೀಯ ವೈಚಾರಿಕತೆಯ ಇತಿಹಾಸ". ಚರಿತ್ರೆಯ ಉದ್ದಕ್ಕೂ ಹಲವು 'ವಾದ'ಗಳಲ್ಲಿ ಈ ಅಂಶಗಳು ಹರಡಿಕೊಂಡಿವೆ. ಚಾರ್ವಾಕ, ನಾಸ್ತಿಕ, ಲೋಕಾಯುಕ್ತ, ಸಾಂಖ್ಯ, ಭೂತವಾದ, ನಿರೀಶ್ವರವಾದ ಎಂಬ ಹಲವು ಹೆಸರುಗಳನ್ನು ಪಡೆದುಕೊಂಡಿದೆ. ನೂರಾರು, ದಾರ್ಶನಿಕರು, ಚಿಂತನಶೀಲರು, ವಿಚಾರವಾದಿಗಳು ತಮ್ಮ ಜ್ಞಾನದಿಂದ, ವಿಚಾರ ಶಕ್ತಿಯಿಂದ ಮಾನವ ಬದುಕನ್ನು ಅರ್ಥಪೂರ್ಣವಾಗಿಸಲು ಹೆಣಗಿದ್ದಾರೆ. ಆದರೂ ಸಮಾಜ ಅಡ್ಡದಾರಿ ಹಿಡಿದಿದೆ. ಆಚಾರಗಳ ಆಡಂಬರಗಳಲ್ಲಿ ಕೊಚ್ಚಿಹೋಯಿತು. ಹತ್ತು ಪೈಸೆ ಭಿಕ್ಷೆಯಲ್ಲಿಯೋ, ಪೂಜೆಯಲ್ಲಿಯೋ ಪುಣ್ಯ ಸಂಪಾದಿಸಿ ಮುಕ್ತಿ ಪಡೆಯುವ ಲೋಭ ಮಾರ್ಗಗಳಿಗೆ ಬಲಿಯಾಯಿತು. ಆದುದರಿಂದಲೇ ಈ ಹೋರಾಟ ನಿರಂತರವಾಗಬೇಕಾಯಿತು.

ತಮಿಳಿನಲ್ಲಿ 'ಪಹುತ್ತಜಿವು' ಎಂದರೆ ವಿಚಾರ ಜ್ಞಾನವೆಂದು ಅರ್ಥ. ಈ ವಿಚಾರ ಜ್ಞಾನದ ಮೂಲವೇ ದೈವ ವಿರೋಧದೊಂದಿಗೆ ಪ್ರಾರಂಭವಾಗುತ್ತದೆ. ಕಾರಣ ನಮ್ಮ ಸಮಾಜದಲ್ಲಿ ಎಲ್ಲ ಮೂಢನಂಬಿಕೆಗಳಿಗೂ ದೈವ ಕಲ್ಪನೆಯೇ ಮೂಲವಾಗಿರುವುದು. ಮೂಢನಂಬಿಕೆಗಳಿಗೂ ದೈವ ಕಲ್ಪನೆಯೇ ಮೂಲವಾಗಿರುವುದು. ಮೂಢನಂಬಿಕೆಗಳ, ಅರ್ಥಹೀನ ಆಚಾರಗಳ, ಶೋಷಣಾ ವ್ಯವಸ್ಥೆಗಳ, ಅಂಧಶ್ರದ್ಧೆಗಳ ವಿಮರ್ಶೆಯೇ ವಿಚಾರವಾದವಾಯಿತು. ಶೋಷಣಾ ಶಕ್ತಿಗಳಿಂದ

ವ್ಯವಸ್ಥಿತವಾಗಿ ಬಿತ್ತಲಾದ ಈ ವಿಷ ಬೀಜಗಳು ಸಮಾಜದಲ್ಲಿ ಆಳವಾಗಿ ಬೇರು ಬಿಟ್ಟು ಜನರ ಭಾವ ಬುದ್ಧಿಗಳಿಗೆ ಪೀಡೆ-ಗ್ರಹಣಗಳಾಗಿ ಸಮಾಜವನ್ನು ನಿರ್ವೀರ್ಯಗೊಳಿಸುತ್ತಾ ಹೋಯಿತು. ಇವೆಲ್ಲವನ್ನು ಬಯಲಾಗಿಸಿ, ಜನರನ್ನು ಯಥಾರ್ಥ ಮಾರ್ಗಕ್ಕೆ ತರಲು ವಿಚಾರವಾದಿಗಳು ಹೆಣಗಿದ್ದಾರೆ. ಹಲವು ವಾದಗಳು ಈ ದಿಶೆಯಲ್ಲಿ ಹುಟ್ಟಿಕೊಂಡವು. ಈ ಎಲ್ಲ ವಾದಗಳು ಕೇವಲ ತರ್ಕಬದ್ಧ 'ವಾದ'ಗಳಾಗಿ ಮಾತ್ರ ನಿಂತಿದ್ದರಿಂದ ಇವು ಈ ದೇಶದಲ್ಲಿ ದೊಡ್ಡ ಬದಲಾವಣೆಯನ್ನು ತರಲಿಲ್ಲ. ಈ ಹೋರಾಟ ತರ್ಕದ ನೆಲೆಯನ್ನು ದಾಟಿ ಸಾಮಾಜಿಕವಾಗಬೇಕಿತ್ತು. ಚಳವಳಿ ರೂಪ ಪಡೆಯಬೇಕಿತ್ತು. ಅಂತಹ ಪ್ರಯತ್ನಗಳೂ ನಡೆಯದೇ ಇರಲಿಲ್ಲ. ಅಲ್ಲೊಬ್ಬ ಬುದ್ಧ, ಇಲ್ಲೊಬ್ಬ ಬಸವ, ಆಮೇಲೆ ನಾರಾಯಣ ಗುರು, ಅಂಬೇಡ್ಕರ್, ಪೆರಿಯಾರ್ ಹೀಗೆ ವಿವಿಧ ಕಾಲಗಳಲ್ಲಿ, ವಿವಿಧ ಪ್ರದೇಶಗಳಲ್ಲಿ ನಡೆದ ಇವರ ಆಂದೋಳನಗಳು ಸಾಮಾಜಿಕವಾಗಿಯೂ, ಜನಪರವಾಗಿಯೂ ನಡೆದರೂ ಇವು ಕಾರಿರುಳ ತಾರೆಗಳಾಗಿ ಮಿನುಗಿದವೇ ಹೊರತು, ಸುಡುವ ಸೂರ್ಯನಾಗಲಿಲ್ಲ.

ತಮಿಳು ಸಾಹಿತ್ಯ ಇತಿಹಾಸದಲ್ಲಿ ಈ ವಿಚಾರವಾದದ ಪ್ರಭಾವಗಳನ್ನು ಮೂರು ಘಟ್ಟಗಳಲ್ಲಿ ಕಾಣಬಹುದು. ೧. ಸಂಘ ಸಾಹಿತ್ಯದ ಆರಂಭಕಾಲ ೨. ಧಾರ್ಮಿಕ ಆಂದೋಲನಗಳ ಕಾಲ ೩. ಆಧುನಿಕ ಕಾಲ.

ಮೊದಲನೆಯ ಘಟ್ಟ ದೈವ-ಧರ್ಮಗಳ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳದ ಕಾಲ. "ಮೊದಲ ಸಂಘದಿಂದ ಮೂರನೇ ಸಂಘದವರೆಗಿನ ಕಾಲವನ್ನು - ಅಂದರೆ ಸ್ವತಂತ್ರ (ಬಿಡಿ) ಹಾಡುಗಳು ಪ್ರಸಿದ್ಧಿ ಪಡೆದಿದ್ದ ಕಾಲವನ್ನು ಲೋಕಾಯುಕ್ತದ ಅಭಿವೃದ್ಧಿ ಕಾಲವೆನ್ನಬಹುದು." (ನೆಡುಂಚೆಳಿಯನ್, ೧೯೯೦, ೩೨) ಮೊದಲ ಸಂಘ ಕೃತಿಗಳಾದ ಮಾಪುರಾಣ, ಬೂತಪುರಾಣಂ, ವಿಯಾಳ ಮಾಲೈ ಮುಂತಾದವು ವಿಚಾರ ಸಾಹಿತ್ಯ ಕೃತಿಗಳೆಂದು ತಿಳಿಯಲಾಗಿದೆ. ಎರಡನೆಯ ಘಟ್ಟ ದೀರ್ಘವಾದುದು. ಕ್ರಿ.ಶ. ಆರಂಭದಿಂದ ೧೯ನೇ ಶತಕದವರೆಗಿನ ಕಾಲ. ಇದು ಧಾರ್ಮಿಕ ಆಂದೋಳನಗಳ ಕಾಲ. ಆರಂಭದಲ್ಲಿ ಬೌದ್ಧ, ಜೈನ ಆಮೇಲೆ ಶೈವ ಆನಂತರ ವೈಷ್ಣವ ಮುಂತಾದವುಗಳ ಕಾಲ. ಈ ಧಾರ್ಮಿಕ ಸಾಹಿತ್ಯಗಳ ಜೊತೆ ಜೊತೆಗೇ ಶುದ್ಧ ವಿಚಾರ ಸಾಹಿತ್ಯವೂ ಕೆಲವು ಸಲ ಪ್ರತ್ಯೇಕವಾಗಿ ಮತ್ತೆ ಅವುಗಳೊಳಗೇ ಅಂತರ್‌ವಾಹಿನಿಯಾಗಿ ಹರಿದು ಬಂದಿದೆ. ಧಾರ್ಮಿಕ ಸಾಹಿತ್ಯವೂ ಒಂದು ಮಟ್ಟದ ವೈಚಾರಿಕತೆಯೊಂದಿಗೇ ಬೆಳೆದಿರುವುದು ಗಮನಾರ್ಹ. ತಮಿಳುನಾಡಿನಲ್ಲಿ ಆರ್ಯ, ಆರ್ಯ ಸಂಸ್ಕೃತಿ, ಸಂಸ್ಕೃತ ಭಾಷೆ, ವೇದ, ಶಾಸ್ತ್ರ ಜಾತಿಪದ್ಧತಿ ಇವುಗಳ ವಿರೋಧದೊಂದಿಗೆ ಧಾರ್ಮಿಕ ಆಂದೋಳನಗಳು ಪ್ರಾರಂಭವಾಗಿ ಇದು ಮುಂದುವರಿದು ಇದೆ. ಮೂರನೆಯ ಘಟ್ಟದಲ್ಲಿಯೇ ಶುದ್ಧ ವಿಚಾರವಾದವೆನ್ನುವುದು ಕಾಣಸಿಗುತ್ತದೆ. ದೈವ, ಧರ್ಮತಿರಸ್ಕಾರ ಈ ಕಾಲದಲ್ಲಿ ಆದ್ಯತೆ ಪಡೆಯುತ್ತದೆ.

## ಸಂಘ ಸಾಹಿತ್ಯ

ಆರ್ಯಧರ್ಮ ಇನ್ನೂ ತನ್ನ ಪ್ರಭಾವವನ್ನು ಬೀರದ ಕಾಲದ ತಮಿಳು ಸಾಹಿತ್ಯ ಸಂಘ ಸಾಹಿತ್ಯ ಧರ್ಮದೈವಗಳ ಬಗ್ಗೆ ಹೆಚ್ಚು ಕಾಳಜಿ ವಹಿಸದ ಸಾಹಿತ್ಯ ಧರ್ಮಾತೀತ ಸಾಹಿತ್ಯವೆಂದರೂ ಸರಿಯೇ. ಮಾನವ ಜೀವನ-ಜೀವಸಕ್ಕೆ ನೇರವಾಗಿ ಸಂಬಂಧಿಸಿದ ವಿಷಯ ಮಾತ್ರ ಇಲ್ಲಿಯ ವಸ್ತು. ಆರ್ಯ ಧರ್ಮದ ಅಥವಾ ಅದಕ್ಕೆ ಸಂಬಂಧಪಟ್ಟ ಯಾವುದೇ ವಿಷಯದ ವಿರೋಧ ವಿಮರ್ಶೆಯಾಗಲಿ, ಪ್ರಸ್ತಾಪವಾಗಲೀ ಇಲ್ಲಿಲ್ಲ. ಜೀವನದ ಯಥಾರ್ಥ ವಿಷಯಗಳೇ ವಸ್ತುವಾಗಿದೆ.

ಮುಂದಿನ ಕಾವ್ಯಯುಗದಲ್ಲಿ ಚಿಲಪ್ಪದಿಕಾರಂ ಮತ್ತು ಮಣಿಮೇಕಲೈ ಜೋಡಿಕಾವ್ಯವೆಂದು ಪ್ರಸಿದ್ಧಿ ಪಡೆದಿವೆ. ಚಿಲಪ್ಪದಿಕಾರಂ ಆದಿಕಾವ್ಯ. ಚಿಲಪ್ಪದಿಕಾರಂ ಯಾವುದೇ ದೈವ ಧರ್ಮದ ಹಿರಿಮೆಯನ್ನು ಹೇಳದಿದ್ದರೂ ಅವುಗಳ ವಿರೋಧವನ್ನು ವ್ಯಕ್ತಮಾಡುವುದಿಲ್ಲ. ಆದರೂ ಜನಪರವಾದ, ಜೀವನಪರವಾದ ಧೋರಣೆಗಳಿವೆ. ಇದರ ಕರ್ತೃ ಇಳಂಗೋ ಅಡಿಗಳ್ ಜೀವನದ ಮಹತ್ವವನ್ನು ಎತ್ತಿ ಹಿಡಿಯುತ್ತಾರೆ.

## ಮಣಿಮೇಕಲೈ

ಕಥಾ ಸಂಬಂಧದಿಂದ ಇದು ಚಿಲಪ್ಪದಿಕಾರದ ಮುಂದಿನ ಭಾಗ. ಕಥಾ ನಾಯಕಿ ಮಣಿಮೇಕಲೆ, ಕೋವಲನ್-ಮಾಧವಿಯರ ಮಗಳು. ಇವಳು ಬೌದ್ಧಮತಕ್ಕೆ ಸೇರಿ, ಸನ್ಯಾಸಿನಿಯಾಗಿ ಧರ್ಮ ಬೋಧೆ ಮಾಡಿದಳು. 'ಆಹಾರ ಕೊಟ್ಟವರು ಪ್ರಾಣಕೊಟ್ಟವರು' 'ನೆರೆ ಜೀವಿಗಳಿಗೆಲ್ಲ ಆಹಾರ, ಉಡುಪು, ವಾಸಸ್ಥಳ ನೀಡುವುದಕ್ಕಿಂತ ಬೇರೆ ಧರ್ಮವಿಲ್ಲ". 'ಗೂನು, ಕುರುಡು, ಮೂಕ, ಕಿವುಡು, ರೋಗಿ, ಅನಾಥರ ಸೇವೆ' ಮುಂತಾದ ಶ್ರೇಷ್ಠ ವಿಚಾರಗಳನ್ನು ಎತ್ತಿಹಿಡಿದಳು.

## ತಿರುಕ್ಕುರಳ್

ತಿರುಕ್ಕುರಳ್ ಜೀವನ ಸತ್ಯಗಳನ್ನು ತಿಳಿಸುವ ಕೃತಿ. ಆದುದರಿಂದಲೇ ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ ಎಂಬ ಬಾಳಿಗೆ ನೇರ ಸಂಬಂಧವನ್ನು ಹೊಂದಿರುವ ವಿಷಯಗಳ ಬಗ್ಗೆ ಮಾತ್ರ ವಳ್ಳುವರ್ ಯೋಚಿಸಿದ್ದಾರೆ. ಮೋಕ್ಷದ ಬಗ್ಗೆ ಅವರೇನನ್ನೂ ಹೇಳಿಲ್ಲ. ಸಮಾಜಕ್ಕೆ ಪ್ರೀತಿಯನ್ನು, ನಂಬಿಕೆಯನ್ನು ನೀಡಬೇಕಾದ ನಿಯಮಗಳು ಶೋಷಣೆಗೂ, ದಾರಿದ್ರ್ಯ, ಸಾಮಾಜಿಕ ವ್ಯತ್ಯಾಸಗಳಿಗೂ ಕಾರಣವಾದಾಗ ಅವನ್ನು ಕಟುವಾಗಿ ವಿಮರ್ಶಿಸುವುದೂ, ಅವುಗಳ ನಗ್ನ ರೂಪವನ್ನು ಪರಿಚಯಿಸುವುದೂ ವಳ್ಳುವರಿಗೆ ಅನಿವಾರ್ಯವಾಯಿತು. ದೈವ ಕಲ್ಪನೆಯನ್ನು ಒಪ್ಪುತ್ತಾರೆ. ಆದರೆ ದೇವರ ಸುತ್ತ ಹೆಣೆದಿರುವ ಇತರ ಕಲ್ಪನೆಗಳನ್ನು ತಿರಸ್ಕರಿಸುತ್ತಾರೆ. ವೇದಶಾಸ್ತ್ರಗಳ ವಿಮರ್ಶೆ ಕಟುವಾಗಿದೆ. 'ಸಾವಿರ ಹೋಮ ಮಾಡುವುದಕ್ಕಿಂತ ಒಂದು ಜೀವವನ್ನು ಕೊಲ್ಲದೆ - ಅದರ ಒಡಲನ್ನು ತಿನ್ನದೇ ಇರುವುದೇ ಶ್ರೇಷ್ಠ' ಎನ್ನುತ್ತಾರೆ. "ಮನುಷ್ಯರ ಅಂತರಂಗದ ಸ್ವಭಾವವನ್ನು ಬೆದಕಿ, ಬೆದಕಿ, ವಿಮರ್ಶಿಸಿ ಸತ್ಯವನ್ನು ಮಾತ್ರ ಸ್ಪಷ್ಟವಾಗಿ ಹೇಳಿದರು". "ಜಾತಿಭೇದ ತಲೆಯೆತ್ತಿದ ಆ ಕಾಲದಲ್ಲಿ ಎಲ್ಲರೂ ಹುಟ್ಟಿನಲ್ಲಿ ಸಮಾನರಾದವರೇ ಎಂದು ಸಾರಿದರು". "ಬೇರೆ ಜೀವಿಗಳಿಗೆ ದುಃಖವುಂಟು ಮಾಡದಿರುವುದೇ ತಪಸ್ಸು"; "ಪರಿಶುದ್ಧ ಮನಸ್ಸನ್ನು ಪಡೆಯುವುದೇ ಧರ್ಮ" ಎಂದರು. ಉದ್ದೇಶದಷ್ಟೇ ಅದನ್ನು ಸಾಧಿಸುವ ಮಾರ್ಗವೂ ಪರಿಶುದ್ಧವಾಗಿರಬೇಕೆಂದರು. ಉನ್ನತವಾದ ಉದ್ದೇಶವನ್ನಿಟ್ಟುಕೊಂಡು ಮನುಷ್ಯ ಬಾಳಬೇಕು ಎಂಬುದು ಅವರ ಅಭಿಪ್ರಾಯ. "ಕೆಟ್ಟದ್ದನ್ನು ಮನಸ್ಸಿಂದ ನೆನೆವುದೂ ತಪ್ಪು", "ಕಲಿಯಬೇಕು, ಕಲಿತದ್ದಕ್ಕೆ ತಕ್ಕಂತೆ ಸನ್ಮಾರ್ಗದಲ್ಲಿ ನಿಂತು ಬಾಳಬೇಕು"; ಬದುಕು ಸಹ್ಯವಾಗಬೇಕು, ಬದುಕು ಅರ್ಥಪೂರ್ಣವಾಗಬೇಕು ಎಂಬಂತಹ ಜೀವನ ಪರ ತತ್ವಗಳನ್ನೇ ಉದ್ದಕ್ಕೂ ಪ್ರತಿಪಾದಿಸಿದ್ದಾರೆ.

## ಕಪಿಲರಹವಲ್

ಈ ಕೃತಿಯ ಕಾಲ ಸರಿಯಾಗಿ ಗೊತ್ತಿಲ್ಲ. ಬ್ರಾಹ್ಮಣ ವಿರೋಧ, ಸತ್ತವರಿಗೆ ಮಾಡುವ ತಿಥಿ ಮುಂತಾದ ನಂಬಿಕೆಗಳ ಜಾತಿ ಪದ್ಧತಿ ಮುಂತಾದುವುಗಳ ಕಟು ವಿಮರ್ಶೆ ಈ ಕೃತಿಯಲ್ಲಿ ಕಂಡುಬರುತ್ತದೆ.

## ಸಿದ್ಧ ಸಾಹಿತ್ಯ

'ಸಿದ್ಧರ್ ಪಾಡಲ್‌ಗಳ್' ಎಂದು ಪ್ರಸಿದ್ಧಿ ಪಡೆದಿರುವ ಪ್ರಸಿದ್ಧ ಸಿದ್ಧಪುರುಷರ ಹಾಡುಗಳೇ ಸಿದ್ಧ ಸಾಹಿತ್ಯ. ಸಿದ್ಧರು ಶೈವರು, ಆದರೆ ಉತ್ತರದಿಂದ ಬಂದ ಎಲ್ಲವನ್ನು ವಿರೋಧಿಸುವವರು. ಆರ್ಯ, ಆರ್ಯಭಾಷೆ, ವೇದ, ಶಾಸ್ತ್ರ ವರ್ಣಾಶ್ರಮ ಪದ್ಧತಿ ಎಲ್ಲವನ್ನು ಕಟುವಾಗಿ ವಿಮರ್ಶಿಸುತ್ತಾರೆ. ಇವರೊಪ್ಪುವುದು ಒಂದು ದೈವವನ್ನು ಮಾತ್ರ. ಅದೂ 'ಶಿವ' ಎಂಬ ನಾಮದ ಮೂಲಕ. ಇವರ ಪ್ರಕಾರ ಶಿವ 'ತಮಿಳ್ ದೈವಂ'.

ಸಾತ್ತಿರಂಗಳ್ ಓದುಗಿನ್ರ ಸಟ್ಟನಾದ ಬಟ್ಟರೇ
ವೇರ್ತ್ತೈಪ್ಪು ವಂದ ಪೋದು ವೇದಂ ವಂದುದವುಮೋ

ಶಾಸ್ತ್ರಗಳ ಓದುವ ಸಟ್ಟನಾಥ ಭಟ್ಟರೇ ಸಾಯುವ (ಶಿವ ವಾಕ್ಕಿಯರ್) ಗಳಿಗೆಯಲ್ಲಿ ನಿಮ್ಮ ವೇದ ಬಂದು ಕಾಪಾಡುತ್ತದೆಯೇ. ಎಂದೂ (ನಾಲು ವೇದಂ ಓದುವೀರ್ ಜ್ಞಾನಪಾದಂ ಅರಿಗಿಲೀರ್) ನಾಲ್ಕು ವೇದಗಳ ಓದುವಿರಿ ಆದರೆ ಜ್ಞಾನಪಾದವ ತಿಳಿಯರಿ; "ಚಾದಿಯಾವ ದೇವ ಡಾ... ಚಾದಿ ಬೇದಂ ಓದುಗಿನ್ರ ತನ್ಮೈಯೆನ್ನ ತನ್ಮೈಯೋ?"; ಜಾತಿಯೆಂಬುದೆಲ್ಲಿಯದೋ, ಜಾತಿಭೇದ ಹೇಳುವ ರೀತಿಯೆಂತಹ ರೀತಿಯೊ ಎಂದೂ ಜಾತಿಪದ್ದತಿಯನ್ನು ಎತ್ತಿ ಹೇಳುವ ಮನುಷ್ಯರ ನೀಚತನವನ್ನು ವಿಮರ್ಶಿಸಿದ್ದಾರೆ.

ಮುಟ್ಟಿದರೆ ಮೈಲಿಗೆಯೆಂದೂ, ಕೆಲವರ ನೆಳಲು ಬಿದ್ದರೂ ಪಾತಕವೆಂದೂ ಅಸ್ಪೃಶ್ಯತೆಯನ್ನು ಅನುಸರಿಸಲಾಯಿತು. ಅದಕ್ಕೆ ಶಿವ ವಾಕ್ಕಿಯರ್ ಹೇಳುತ್ತಾರೆ.

ಪ್ರತಿ ತಿಂಗಳೂ ಮೈಲಿಗೆಯೇ. ಈ ಮೈಲಿಗೆ ನಿಂತು ರೂಪಗೊಂಡದ್ದೇ ಮಾನವ ಜನ್ಮ, ಹೀಗಿರುವಾಗ ಎಲ್ಲಿಯ ವಾದ, ಎಲ್ಲಿಯ ವೇದ, ಎಲ್ಲಿಯ ನಾಲ್ಕು ಕುಲಗಳು, (ವೇದವೋದುವ ವೈದಿಕಾ ಯಥಾರ್ಥವ ತಿಳಿಯಲೇ!) ಎನ್ನುತ್ತಾರೆ.

"ನಾಲ್ಕು ಕುಲ, ಜಾತಿಪದ್ಧತಿ ಮುಂತಾದವನ್ನು ಖಂಡಿಸುವ ಸಿದ್ಧರು ಬ್ರಾಹ್ಮಣ ವಿರೋಧವನ್ನು ಕಟುವಾಗಿ ತೋರಿಸಿದ್ದಾರೆ. ವರ್ಗ ಶೋಷಣೆಗೆ ವರ್ಣ ವ್ಯತ್ಯಾಸಕ್ಕೂ ಅಡಿಪಾಯ ಹಾಕಿದವು ವೇದಗಳು. ವೇದಗಳು ಒತ್ತಿ ಹೇಳುವ ಹೋಮ ಸಂಸ್ಕೃತಿ ದುಡಿವ ವರ್ಗದ ಮೇಲೆರಗಿದ ಸಿಡಿಲಾಯಿತು. ವ್ಯವಸಾಯಕ್ಕೆ ಅನಿವಾರ್ಯವಾದ ಎತ್ತುಗಳು, ಹಸುಗಳು, ಕರುಗಳು, ಆಡುಗಳು ಮತ್ತಿತರ ಆಹಾರ ಪದಾರ್ಥಗಳು ಅಗ್ನಿಯಲ್ಲಿ ವ್ಯರ್ಥವಾದವು. ಯಜ್ಞ-ಹೋಮಗಳ ನಂತರ ರಾಜರು ವೇದ ಪುರೋಹಿತರಿಗೆ ವಿಪುಲದಾನವನ್ನು ನೀಡಿದರು. ಈ ನಷ್ಟವನ್ನು ತುಂಬಿಕೊಳ್ಳಲು ರಾಜರು ಕೈಯಿಟ್ಟದ್ದು ನಾಲ್ಕನೇ ವರ್ಗದವರ ತಲೆ ಮೇಲೆಯೇ. ಇದೇ ಸಮಾಜದ ಹೊರೆಯನ್ನು ಹೊತ್ತ ಇವರೇ ನಾಲ್ಕನೇ ವರ್ಗ, ಶೂದ್ರ ಎಂಬ ಅವಹೇಳನಕ್ಕೂ ಒಳಗಾದರು. ಇವರಿಗೆ ಆಸ್ತಿಯ ಹಕ್ಕಿಲ್ಲವೆಂದಿತು ಮನುಧರ್ಮ ಶಾಸ್ತ್ರ. ಇವೆಲ್ಲ ಏರು-ಪೇರುಗಳನ್ನು ವ್ಯವಸ್ಥಿತವಾಗಿ ಕಾಪಾಡಿಕೊಂಡು ಬಂದ ವ್ಯವಸ್ಥೆ ಮತ್ತು ಈ ನಿಯಮಗಳು ಸಮಾಜದಲ್ಲಿ ಏರ್ಪಡಿಸಿದ ಕೇಡುಗಳನ್ನು ಕಂಡು ಮನನೊಂದು ಸಿಡಿದೆದ್ದವರೇ ಸಿದ್ಧರುಗಳು (ನೆಡುಂಚೆಳಿಯನ್ ೧೯೯೦-೩೨) ಇವರು ದೇವಸ್ಥಾನಗಳೂ, ತೀರ್ಥಕ್ಷೇತ್ರಗಳೂ ಶೋಷಣ ಕೇಂದ್ರಗಳೆಂದೇ ಹೇಳಿದರು.

ಎಲ್ಲಿಯ ದೇವಾಲಯಗಳು, ಎಲ್ಲಿಯ ಕೊಳಗಳು
ಈ ಆಲಯ, ಕೊಳಗಳ ನಮಿಸುವವರು ಗುಲಾಮರೇ

ಎನ್ನುತ್ತಾರೆ ಶಿವವಾಕ್ಕಿಯಾರ್

ಕೋವಿಲಾವದೇದಡಾ ಕುಳಂಗಳಾವದೇದಡಾ
ಕೊಯಿಲುಂ ಕುಳಿಂಗಳುಂ ಕುಂಬಿಡುಂಗುಲಾಮರಾ

ಅಂತೆಯೇ ಮೂರ್ತಿ ಪೂಜೆಯನ್ನೂ ಖಂಡಿಸುತ್ತಾರೆ.

ಚೆಂಗಲುಂ ಕರುಂಗಲುಂ ಚಿವಂದ ಸಾದಿ ಲಿಂಗಮಂ
ಚೆಂದಿಲುಂ ತರಾವಿಲುಂ ಶಿವನಿರುಪ್ಪಾನೆನ್ ಗಿರೀರ್ - ಎಂದೂ

ನಟ್ಟ ಕಲ್ಲೈ ದೆಯ್ವಮೆನ್ರು ನಾಲುಪುಟ್ಟಂ ಸಾತ್ತಿಯೇ
ಸುಟ್ರಿವಂದು ಮುಣುಮುಣೆನ್ನು ಸೋಲ್ಲು ಮಂದಿರಂ ಏದಡಾ
ನಟ್ಟಕಲ್ಲುಂ ಪೇಸುಮೋ ನಾದನುಳ್ಳಿರು ಕೈಯಿಲ್
ಸುಟ್ಟಸಟ್ಟಿ ಸಟ್ಟುವಂ ಕರಿಚ್ಚುವೈ ಅರಿಯುಮೋ

(ನೆಟ್ಟ ಕಲ್ಲನ್ನು ದೈವವೆಂದು ನಾಲ್ಕು ಪುಷ್ಪ ಅರ್ಪಿಸಿ ಸುತ್ತಿ ಬಂದು ಮಣಮಣವೆನ್ನು ಹೇಳುವ ಮಂತ್ರವಾವುದೋ; ನೆಟ್ಟ ಕಲ್ಲು ನುಡಿವುದೇ ನಾಥನೊಳಗಿರುವಾಗ ಅಟ್ಟ ಮಡಕೆ, ಸೌಟು ಪದಾರ್ಥ ರುಚಿ ಅರಿವುದೇ) ಎಂದು.

ಈ ಸಿದ್ಧ ಪರಂಪರೆಯ ಕೊನೆಯ ತಾರೆ ರಾಮಲಿಂಗ ಅಡಿಗಳ್. ಇವರು ಅಂತಿಮವಾಗಿ ಧರ್ಮವನ್ನೇ ವಿರೋಧಿಸಿದರು. "ಶೈವ, ವೈಷ್ಣವ ಮೊದಲಾದ ಸಮಯಗಳಲ್ಲಿಯೂ ವೇದಾಂತ, ಸಿದ್ಧಾಂತಗಳು ಮೊದಲಾದವುಗಳಲ್ಲಿಯೇ ಲಕ್ಷ್ಯವಿಡಬೇಡ" ಎಂದೇ ಉಪದೇಶಿಸಿದರು.

ಚತುರ್ ಮರೈ ಆಗಮ ಸಾತ್ತಿರ ಮೆಲ್ಲಾಂ
ಸಂದೈ ಪಡಿಪ್ಪುನಂ ಸೋಂದಪ್ಪಡಿಪ್ಪೋ?

(ಚತುರ್ವೇದ ಆಗಮ ಶಾಸ್ತ್ರವೆಲ್ಲ ಸಂತೆಯ ಓದು, ನಮ್ಮ ಸ್ವಂತ ಓದಲ್ಲ)

ನಾಲ್ವರುಣಂ ಆಸಿರಮಂ ಆಸಾರಂ ಮುದಲಾ
ನವಿನ್ರ ಕಲೈ ಚರಿದಂ ಎಲಾಂ ಪಿಳ್ಳೈ ವಿಳೈಯಾಟ್ಟೇ

(ನಾಲ್ಕು ವರ್ಣ ಆಚಾರ ಮುಂತಾಗಿ ಕಲಿತ ಎಲ್ಲ ಬರಿ ಹುಡುಗಾಟ)

## ಶೈವ ಸಿದ್ಧಾಂತ

ವರ್ಣಾಶ್ರಮ ಪದ್ಧತಿಯ ಹಿಡಿತ ರಾಜರುಗಳ ಮೂಲಕ ಬಿಗಿಯಾದಾಗ ಸಮಾಜ ದುರವಸ್ಥೆಯ ಅಂತ್ಯಕ್ಕೆ ಹೋಯಿತು. ಆ ಸಮಯದಲ್ಲಿ ಈ ವ್ಯವಸ್ಥೆಗೆ ವಿರೋಧವಾದ ಪ್ರತಿಭಟನಾ ಧ್ವನಿಯೇ ಶೈವ ಆಂದೋಳನ. ಇದು ಮುಂದೆ ಶೈವ ಸಿದ್ಧಾಂತ, ದ್ರಾವಿಡ ಧರ್ಮ ಎಂಬ ಹೆಸರನ್ನು ಪಡೆಯಿತು. ಶೈವ ಸಿದ್ಧಾಂತ ಶಿವನನ್ನು ಮಾತ್ರ ದೈವವೆಂದು ಕರೆದು ಒಬ್ಬನೇ ದೇವನೆಂಬ ತತ್ವವನ್ನು ಪ್ರತಿಪಾದಿಸಿತು. ವರ್ಗ, ಲಿಂಗಭೇದ ರಹಿತ ಸಮಾಜವನ್ನು ತನ್ನ ಗುರಿಯಾಗಿಸಿಕೊಂಡಿತ್ತು. ಇದರ ಪೂರ್ಣ ಪ್ರತಿಬಿಂಬವನ್ನು ಆನಂತರದ ಕನ್ನಡ ವೀರಶೈವ ಆಂದೋಳನದಲ್ಲಿ ಕಂಡುಕೊಳ್ಳಬಹುದಾಗಿದೆ. ಈ ಶೈವ ನಾಯನ್ಮಾರರ, ಮತ್ತಿತರರ ಕೃತಿಗಳನ್ನು ಸಂಕಲಿಸಿ ೧೨ ತಿರುಮೊರೆಗಳಾಗಿ ನೀಡಲಾಗಿದೆ.

## ಆಧುನಿಕ ಕಾಲ

ಆಧುನಿಕ ಸಾಹಿತ್ಯ ಹಿಂದಿನ ಸಾಹಿತ್ಯದಿಂದ ಭಿನ್ನವಾದದ್ದು. ಹಿಂದಿನ ಸಾಹಿತ್ಯ ಎರಡು

ಬಗೆಯವು. ಒಂದು ದೈವ, ಧರ್ಮವನ್ನು ಪರಮೋದ್ದೇಶವಾಗಿ ಹೊಂದಿಬಂದ ಸಾಹಿತ್ಯ. ಮತ್ತೊಂದು ಬಗೆಯದ್ದು ದೈವ, ಧರ್ಮವನ್ನು ತಿರಸ್ಕರಿಸದೆ ಜೀವನಪರ ತತ್ವಗಳನ್ನು ಪ್ರತಿಪಾದಿಸಿದ ಸಾಹಿತ್ಯ ಪರಂಪರೆ.

ಆಧುನಿಕ ಕಾಲದಲ್ಲಿ ಮಾತ್ರ ಶುದ್ಧ ವಿಚಾರವಾದವನ್ನು ಕಾಣಬಹುದಾಗಿದೆ. ದೈವ, ಧರ್ಮ, ಆಚಾರಗಳೆಲ್ಲವನ್ನು ತಿರಸ್ಕರಿಸಿದ ವಿಚಾರಧಾರೆಯನ್ನು ಕಾಣಬಹುದಾಗಿದೆ. ಸಾಹಿತ್ಯೋದ್ದೇಶ ಕೂಡ ದೈವವೋ, ಧರ್ಮವೋ ಆಗದೆ ಜೀವನ ಮತ್ತು ಸಾಮಾಜಿಕ ಏಳ್ಗೆಗಳಾದವು. ಮೂವತ್ತು ಶತಮಾನಗಳ ಇರುಳು ಸರಿಯುತ್ತಿದೆ. ನಸುಕು ಕಾಣಿಸುತ್ತಿದೆ. ವಿಜ್ಞಾನ ಬಲದೊಂದಿಗೆ ಶುದ್ಧ ವಿಚಾರ ಸಾಹಿತ್ಯ ಜನರ ಬುದ್ಧಿ ಭಾವಗಳನ್ನು ತೀಕ್ಷ್ಣಗೊಳಿಸುತ್ತಿದೆ. ದೇವರು, ಹಣ, ಯಶಸ್ಸು ಎಂಬ ಕಾಮನೆಗಳಿಂದ ಬಿಡಿಸಿಕೊಂಡ ಸಾಹಿತ್ಯ, ಮನುಷ್ಯ ಮತ್ತು ಮನುಷ್ಯ ಪ್ರೀತಿಯೊಂದಿಗೆ ಬರುತ್ತಿದೆ.

ಇಪ್ಪತ್ತನೇ ಶತಮಾನದ ತಮಿಳಿನಲ್ಲಿ ವೈಚಾರಿಕತೆ ಮತ್ತು ಪೆರಿಯಾರ್ ಪರ್ಯಾಯ ಪದಗಳು. ಇಪ್ಪತ್ತನೇ ಶತಮಾನದ ಎಲ್ಲ ವಿಚಾರವಾದಿಗಳಿಗೂ, ಎಲ್ಲ ವೈಚಾರಿಕ ಬರಹಗಾರರಿಗೂ ಗುರು ಪೆರಿಯಾರ್ ಅವರೇ. ಅವರು ತಮ್ಮ ಜಸ್ಟಿಸ್ ಪಕ್ಷ, ದ್ರಾವಿಡರ್ ಕಳಗಂ, ಆತ್ಮಗೌರವ ಚಳುವಳಿಗಳ ಮುಖಾಂತರ ಜಡ ಸಮಾಜವನ್ನು ವೈಚಾರಿಕತೆಯ ಕಡೆ ಸೆಳೆದರು, ತಮಿಳುನಾಡಿನಲ್ಲಿ ದೊಡ್ಡ ಕ್ರಾಂತಿಯನ್ನೇ ಎಬ್ಬಿಸಿದರು. ಇವರು ನಡೆಸಿದ ಪತ್ರಿಕೆಗಳು, ಬರೆದ ಲೇಖನಗಳು, ರಚಿಸಿದ ಕೃತಿಗಳೂ ಲೆಕ್ಕವಿಲ್ಲದಷ್ಟು. ಬಹುಶಃ ಒಬ್ಬ ಮನುಷ್ಯ ಸಾಧಿಸಲಾರದಷ್ಟನ್ನು ಅವರು ಸಾಧಿಸಿದ್ದಾರೆ. ಪೆರಿಯಾರರ ಅಭಿಪ್ರಾಯಗಳು ತಮಿಳಿನ ಎಲ್ಲ ಸಾಹಿತ್ಯ ಪ್ರಕಾರಗಳ ಮೇಲೂ ಪ್ರಭಾವ ಬೀರಿದೆ. ವಿವಿಧ ಪ್ರಕಾರಗಳಲ್ಲಿ ಬಂದ ವಿಚಾರ ಸಾಹಿತ್ಯದ ಒಂದು ಕಿರುಪರಿಚಯಕ್ಕೆ ಇಲ್ಲಿ ಪ್ರಯತ್ನಿಸಲಾಗಿದೆ.

**ಕಾವ್ಯ**

ಇಪ್ಪತ್ತನೇ ಶತಕದ ಮೊದಲ ಪ್ರಮುಖ ಕವಿ ಸುಬ್ರಹ್ಮಣ್ಯ ಭಾರತಿ. ಭಾರತಿ ಮುಕ್ತ ಮನಸ್ಸಿನ ವೈಚಾರಿಕ ವ್ಯಕ್ತಿ. ಹುಟ್ಟಿನಿಂದ ಬ್ರಾಹ್ಮಣನಾದ, ಸಂಸ್ಕೃತವನ್ನು ಆಳವಾಗಿ ಅಧ್ಯಯನ ನಡೆಸಿದ್ದ ಭಾರತಿ ದೈವ, ಧರ್ಮ ವಿರೋಧಿಯಲ್ಲ. ಆದರೆ ಮೂಢನಂಬಿಕೆಗಳು, ಕಂದಾಚಾರಗಳು, ಜಾತಿ ವೈಷಮ್ಯ ಮುಂತಾದವನ್ನು ಕಟುವಾಗಿ ವಿಮರ್ಶಿಸಿದ್ದಾರೆ.

'ಜಾತಿಗಳಿಲ್ಲ ಕಣೆ ಪಾಪು - ಕುಲ
ಹಿರಿಮೆ-ಕಿರಿಮೆ ಹೇಳುವುದು ಪಾಪ'

ಎಂದೂ,

'ಶೂದ್ರನಿಗೊಂದು ನೀತಿ-ದಂಡ
ಓಂದ ಬ್ರಾಹ್ಮಣನಿಗೆ ಮತ್ತೊಂದು ನೀತಿ
ಶಾಸ್ತ್ರ ಹೇಳಿದುದೇ ಆದರೆ - ಅದು
ಶಾಸ್ತ್ರವಲ್ಲ ಸಂಚೆಂದು ತಿಳಿಯೋಣ'

ಎಂದೂ ಜಾತಿ ಪದ್ಧತಿಯ ಬಗ್ಗೆ ಅವರಿಗಿದ್ದ ಕೋಪ ವ್ಯಕ್ತಪಡಿಸಿದ್ದಾರೆ. ಶಾಸ್ತ್ರಗಳನ್ನು ಮುಸಿ ತುಂಬಿದ ಕಸವೆಂದು ವರ್ಣಿಸಿದ್ದಾರೆ. ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಆಧುನಿಕ ಕವಿಗಳಲ್ಲಿ ಮೊದಲಿಗ ಭಾರತಿ.

ಹೆಣ್ಣು ಬಾಳಲಿ! ಎಂದು ಕುಣಿಯೋಣವೋ
ಹೆಣ್ಣು ಗೆಲ್ಲಲಿ! ಎಂದು ಕುಣಿಯೋಣವೋ

ಎಂದೂ

ಒಲ್ಮೆ ಕೊಡುವುದು ತಾಯ ಮೊಲೆ ಹಾಲು ಕಣೋ!
ಮಾನ ತರುವುದು ಹೆಂಡತಿಯ ಮಾತು ಕಣೋ
ಕಲಿ ನೀಗುವುದು ಹೆಣ್ಣಿನ ಧರ್ಮ ಕಣೋ

ಎಂದೂ ಸ್ತ್ರೀಯರ ಹಿರಿಮೆಯನ್ನು ಹಾಡಿದ ಕವಿ. ಒಂದು ದೇಶದ ನಿಜವಾದ ಅಭಿವೃದ್ಧಿ ಹೆಣ್ಣು ಗಂಡಿಗೆ ಎಲ್ಲ ಕ್ಷೇತ್ರಗಳಲ್ಲಿಯೂ ಸಮಾನವಾಗಿ ನಿಂತಾಗಲೇ ಸಾಧ್ಯ ಎಂದು ತಿಳಿಸುತ್ತಾರೆ.

ಭಾರತಿಯನ್ನನುಸರಿಸಿ ಬಂದವರು ಭಾರತಿದಾಸನ್. ಇವರಿಗೆ ಕ್ರಾಂತಿ ಕವಿಯೆಂಬ ಬಿರುದು ಉಂಟು. ತಮಿಳು ಕಾವ್ಯ ಲೋಕದಲ್ಲಿಯೇ ಭಾರತಿದಾಸನಂತಹ ಶುದ್ಧ ವಿಚಾರವಾದಿ ಮತ್ತೊಬ್ಬರಿಲ್ಲ. "ಭಾರತಿ ಎಲ್ಲ ರೀತಿ ಹಕ್ಕುಗಳಿಗೂ ಧ್ವನಿಯೆತ್ತರಿಸಿದ್ದಾನೆ. ಆದರೆ ಆ ಕಾಲಕ್ಕೆ ತಕ್ಕಂತೆ ಸ್ವಾತಂತ್ರ್ಯ ದಾಹ ಮಾತ್ರ ನಮ್ಮ ಕಿವಿಗೆ ಕೇಳುತ್ತಿದೆ. ಭಾರತಿದಾಸನ್ ಸಮಾಜದಲ್ಲಿ ಸಮಾನತೆ ಇಲ್ಲದ್ದನ್ನು ನೋಡಿ ನೊಂದು ಜ್ವಾಲಾಮುಖಿ ಸಿಡಿದಂತೆ ಹಾಡಿದರು. ಆ ನೆಲೆಯಲ್ಲಿಯೇ ಅವರು ನಾಟಕಗಳನ್ನೂ, ಕತೆಗಳನ್ನೂ ರಚಿಸಲು ಪ್ರಯತ್ನಿಸಿದರು. ಕೆಲವೊಮ್ಮೆ ಸಂಕುಚಿತ ಮನೋಭಾವನೆಯಂತೆ ಕಾಣಬಹುದು. ಆದರೆ ಕಾಲಾನಂತರ ಅದು ಅಗಲುತ್ತದೆ. ಸಾಮಾಜಿಕ ಸಮತಾವಾದ ಅಲ್ಲಿ ಯಾವಾಗಲೂ ಕೇಳಿಸುತ್ತದೆ". (ಟಿ.ಪಿ. ಮೀನಾಕ್ಷಿ ಸುಂದರಂ)

ಭಾರತಿದಾಸನ್ ಸುಮಾರು ೪೦ ಕೃತಿಗಳನ್ನು ರಚಿಸಿದ್ದಾರೆ. ಕಾವ್ಯ ಕಾದಂಬರಿ, ಕಥೆ, ನಾಟಕ ಹೀಗೆ ಏನೇ ಬರೆಯಲಿ ಅದು ವೈಚಾರಿಕ ಸಾಹಿತ್ಯವೇ

'ಜಾತಿ ಎರಡಲ್ಲದೆ ಬೇರಿಲ್ಲ' ಎಂದು ಜಾತಿ ಪದ್ಧತಿಯ ಬಗ್ಗೆ ತಿಳಿಸುತ್ತಾರೆ.

ಕತ್ತಲೆ ಕೋಣೆಯಲ್ಲಿದೆ ಲೋಕ: ಜಾತಿ
ಇದೆ ಎಂಬುವವನೂ ಇರುವವನಲ್ಲಾ!

ಎಂದು ವಿಸ್ಮಯ ವ್ಯಕ್ತಪಡಿಸುತ್ತಾರೆ.

ಭಾರತಿದಾಸನ್ ಶಿಷ್ಯರಲ್ಲಿ ವಾಣಿದಾಸನ್ ಪ್ರಮುಖ ವ್ಯಕ್ತಿ.

'ಭಾರತದ ಏಳ್ಗೆ ಹಳ್ಳಿಗಳಲ್ಲಿದೆ. ಇನ್ನು ಹೇಳುವುದಾದರೆ ಚೇರಿಗಳ ಏಳ್ಗೆಯಲ್ಲೇ ಅದು ಅಡಗಿದೆ. ದೇಶ ಮುಂದುವರಿಯಲು ಜಾತಿ ಭೇದ ರಹಿತ ಸಮಾಜ ಮತ್ತು ಸಾಮಾಜಿಕ ಐಕ್ಯತೆ ಉಂಟಾಗಬೇಕು. ಇವೆಲ್ಲವನ್ನು ಸಾಧಿಸುವುದು ಶಿಕ್ಷಣದ ಮೂಲಕವೇ' ಇವು ವಾಣಿದಾಸನ ಪ್ರಧಾನ ಅಭಿಪ್ರಾಯಗಳು.

ಕಲಿತರೆ, ಜಾತಿವಾದ
ತೊಲಗುವುದು, ಅರಿವೂ ಉಂಟಾಗುವುದು
ಕಲಿತರೆ, 'ಆಳರಸ'
ಎಂಬ ಮಾತು ತೊಲಗುವುದು.

ಎನ್ನುತ್ತಾರೆ.

ಇವರ ಕೃತಿಗಳು ಕೊಡಿಮುಲ್ಲೈ, ತೊಡುವಾನಂ, ಎಳಿಲೋವಿಯಂ, 'ವಾಣಿದಾಸನ್ ಕವಿತೈಗಳ್' ಮುಂತಾದವು.

ಇದೇ ಸಾಲಿನ ಕವಿಗಳಾದ ಮುಡಿಯರಸನ್, ಸುರದಾ, ಪುಲವರ್ ಕುಳಂದೈ, ತಮಿಳ್ಳೊ, ಮು. ಕರುಣಾನಿಧಿ, ಜೀವಾನಂದಂ, ಉಡುಮಲೈ ನಾರಾಯಣ ಕವಿ, ಪಟ್ಟುಕ್ಕೋಟ್ಟೈ ಕಲಿಯಾಣ ಸುಂದರಂ ಮುಂತಾದವರು ಗಮನಾರ್ಹರು. ನಾರಾಯಣ ಕವಿ ರೈತ ಪಕ್ಷಪಾತಿ. ವ್ಯವಸಾಯದ ಹಿರಿಮೆ, ಹೆಣ್ಣಿನ ಏಳ್ಗೆ, ವೈಜ್ಞಾನಿಕ ಅಭಿವೃದ್ಧಿ ಅವರ ವಸ್ತುವಾದವು. ಪಟ್ಟುಕ್ಕೋಟ್ಟೈ ಸಮತಾವಾದಿ. ಕೇವಲ ೨೯ ವರ್ಷ ಬದುಕಿದ ತಮಿಳು ಕಾವ್ಯ ಲೋಕದಲ್ಲಿ ದೊಡ್ಡ ಕ್ರಾಂತಿಯನ್ನೇ ಮಾಡಿದ. ಹಳ್ಳಿಹಳ್ಳಿಗೂ ಸಮತಾವಾದವನ್ನು ಸರಳ ಪದಗಳಲ್ಲಿ ತಲುಪಿಸಿದ ಈ ಕವಿಗೆ 'ಜನರ ಕವಿ, ಕಾರ್ಮಿಕ ಕವಿ, ಸಹಜ ಕವಿ' ಎಂಬ ಬಿರುದುಗಳಿವೆ. ಸಾಮಾಜಿಕ ಸಮಾನತೆ, ಮೂಢನಂಬಿಕೆಗಳು, ದುಡಿಮೆಯ ಮಹತ್ವ ಮುಂತಾದವು ಅವರ ವಸ್ತು.

### ಕಥಾಸಾಹಿತ್ಯ

ಕಾದಂಬರಿ ಲೋಕದಲ್ಲಿ ಮೊದಲ ವೈಚಾರಿಕ ಕಾದಂಬರಿಯನ್ನು ರಚಿಸಿದವರು ಒಬ್ಬ ಮಹಿಳೆ. ಮೂವಲೂರ್ ರಾಮಾಮಿರ್ದತ್ತಮ್ಮಾಳ್. ಇವರ ಕೃತಿ 'ದಾಸಿಗಳ್ ಮೋಸವಲೈ ಅಲ್ಲರು ಮದಿ ಪೆಟ್ರಮೈನರ್'. ಕಾದಂಬರಿಯ ವಸ್ತು ದೇವದಾಸಿ ಪದ್ಧತಿಯ ನಿರ್ಮೂಲನ.

ಅಣ್ಣಾದುರೈ ಮತ್ತು ಕರುಣಾನಿಧಿ ಬಹುಮುಖ್ಯ ಕಾದಂಬರಿಕಾರರು. ಮೂಢನಂಬಿಕೆಗಳ ವಿಮರ್ಶೆ, ಹೆಣ್ಣಿನ ಸ್ವಾತಂತ್ರ್ಯಹೀನ ಸ್ಥಿತಿ, ಜಾತಿ ವೈಷಮ್ಯ, ಆರ್ಥಿಕ ಅಸಮಾನತೆ ಇವು ಇವರ ಕೃತಿಗಳ ವಸ್ತು. ಅಣ್ಣಾದುರೈಯವರ ಕಲಿಂಗರಾಣಿ, ಪಾರ್ವತಿ, ಬಿ.ಎ. ರಂಗೂನ್ ರಾಧಾ, ಕುಮರಿ ಕೋಟ್ಟಂ, ವಂಡಿತ್ಕಾರನ್ ಮಹನ್, ಕ. ವೋದಿಪುರ ಕಾದಲ್ ಮುಂತಾದವೂ, ಕರುಣಾನಿಧಿಯವರ 'ಪುರೈಯಲ್, ಬರೇರತ್ತಂ, ವಿಳ್ಳಿಕ್ಕಳಮ್ಮೈ, ಬರುಮರಂ ಪೊತ್ತದು' ಮುಂತಾದವು ಗಮನಾರ್ಹ ವೈಚಾರಿಕ ಕಾದಂಬರಿಗಳು. ಸಮಾಜ ಸುಧಾರಣೆ, ವಿಚಾರವಾದ ಮುಂತಾದವುಗಳನ್ನು ವಸ್ತುವಾಗಿಸಿಕೊಂಡು ಕಾದಂಬರಿ ರಚಿಸಿದರು. ಎ.ವಿ.ಪಿ. ಆಸೈತಂಬಿ ಅವರ 'ವಾಳ್ಗ ಮಣಮಕ್ಕಳ ಮಣ್ಣೈವಿ ಕಟ್ಟೆಯ ತಾಲಿ' ಮುಂತಾದವು ಗಮನಾರ್ಹ ಕೃತಿಗಳು. ಪಿಳ್ಳೈ ವಿಲ್ಲಾಳನ್ ಮತ್ತೊಬ್ಬ ವಿಚಾರಶೀಲ ಕಾದಂಬರಿಕಾರ. ಸಮಾಜದಲ್ಲಿರುವ ಮೂಢನಂಬಿಕೆಗಳನ್ನು ವಸ್ತುವಾಗಿಸಿಕೊಂಡು ವಿಚಾರದೆಡೆಗೆ ಓದುಗನನ್ನು ಎಳೆಯುತ್ತಾರೆ. ಅವರ 'ತಂಗತಾಮರೈ' 'ಅತ್ತಿಪೊಕ್ಕಳ್' ಮುಖ್ಯ ಕೃತಿಗಳು. ಪೆಣ್ಣರಸು ಅವರ 'ತುಂಗಭದ್ರ ಚಂದನತ್ತೇವನ್', ಪಣ್ಣನ್ ಅವರ 'ಕೋವಿಲ್ ಎನ್ನ ಸೆಯ್ಯುಂ', ತದ್ದೈಕ್ಕಲ್, 'ಬ್ರಾಮಣನ್ ಇಂಗೆ', 'ದೆಯ್ವಪ್ಪಿತ್ತಿಯನ್ ಕುರಲ್' ಮುಂತಾದ ಕೃತಿಗಳು ಗಮನಾರ್ಹವಾದವು.

### ಸಣ್ಣಕಥೆ

ಸಣ್ಣಕಥೆಗಾರರೇ ಕಾದಂಬರಿಕಾರರಾಗಿ ರೂಪಾಂತರ ಹೊಂದುತ್ತಾರೆಯಾದ್ದರಿಂದ ಎರಡೂಕಡೆ ಅವೇ ಹೆಸರುಗಳು ಕೇಳುತ್ತಿವೆ. ಸಣ್ಣ ಕಥಾಕ್ಷೇತ್ರದಲ್ಲಿ ಪತ್ರಿಕೆಗಳ ಪಾತ್ರ ಹಿರಿದು. ಸಂಕಲನಗಳಾಗಿ ಬರುವ ಮೊದಲು ಬಿಡಿಗತೆಗಳಾಗಿ ಬರುವುದು ಪತ್ರಿಕೆಗಳಲ್ಲಿಯೇ. ಈ ದಿಸೆಯಲ್ಲಿ ಆನಂದ ವಿಕಟನ್, ಮುರಸೋಲಿ, ಮುತ್ತಾರಂ, ಮುಂತಾದ ಪತ್ರಿಕೆಗಳ ಸೇವೆ ಗಮನಾರ್ಹ.

ವಿಚಾರವಾದೀ ಬರಹಗಾರರಿಗೆ ಅಣ್ಣಾದುರೈ ಮಾರ್ಗದರ್ಶಿ. ಅಣ್ಣಾ ಸುಮಾರು ೬೦ ಕತೆಗಳನ್ನು ರಚಿಸಿದ್ದಾರೆ. ದುಡಿಯುವವರ ಶ್ರಮದ ಫಲವನ್ನು ಬೇರೆಯವರು ಕದ್ದು ಅನುಭವಿಸುವ

ಅನ್ಯಾಯ, ಕಾರ್ಮಿಕ ವರ್ಗದ ಬವಣೆ, ಜನರನ್ನು ತಪ್ಪು ದಾರಿಗೆಳೆವ ಮೂಢನಂಬಿಕೆಗಳು ಇವನ್ನು ಇವರ ಕಥೆಗಳಲ್ಲಿ ಕಾಣಬಹುದು. "ಅಣ್ಣಾವಿನ ಕತೆಗಳು ಜನರ ಸಮಸ್ಯೆಗಳಿಗೆ ಪರಿಹಾರವಾಗಿ ಬಂದಿವೆ. ಹಳತಿಗೂ ಹೊಸತಿಗೂ ನಡೆದ ಹೋರಾಟವನ್ನು. ಬಡವ-ಬಲ್ಲಿದರ ನಡುವಿನ ಅಂತರವನ್ನು, ಶ್ರೇಷ್ಠ-ನೀಚ ಎಂಬ ವರ್ಗೀಕರಣವನ್ನು ಕಟುವಾಗಿ ವಿಮರ್ಶಿಸುತ್ತಾರೆ. ಎಲ್ಲವನ್ನು ನೇರವಾಗಿ ಹೇಳುವ ಪ್ರವೃತ್ತಿ ಅಣ್ಣಾದುರೈಯದು. ಸ್ತ್ರೀ ದಾಸ್ಯ, ವರದಕ್ಷಿಣೆ, ಅಂತರಜಾತಿ ವಿವಾಹ, ವಿಧವಾ ವಿವಾಹ, ವೇಶ್ಯಾಸಮಸ್ಯೆ, ಜಾತಿ, ಮತ, ಮೂಢನಂಬಿಕೆಗಳು ಇವುಗಳ ಸುತ್ತಲೇ ಕಥೆ ಹೆಣೆದಿದ್ದಾರೆ". (ವಣಾಂಗಾ ಮುಡಿ)

ಕರುಣಾನಿಧಿ ೧೪೦ಕ್ಕೂ ಹೆಚ್ಚು ಕಥೆಗಳನ್ನು ರಚಿಸಿದ್ದಾರೆ. ಇವರ ಕಥೆಗಳಲ್ಲಿ ಅಸ್ಪೃಶ್ಯತೆ, ದಲಿತ ಸಮಸ್ಯೆಗಳು ಪ್ರಧಾನವಾಗಿವೆ.

ಕೆ.ಜಿ. ರಾಧಾಮಾಣಾಳನ್, ಆಸೈತಂಬಿ, ಚೆಳಿಯನ್, ಕುತ್ತೂಸಿಗುರು ಸಾಮಿ, ಭಾರತಿ ದಾಸನ್, ಮದಿಯಳಗನ್ ಮುಂತಾದವರು ಇನ್ನಿತರ ಗಮನಾರ್ಹ ಕಥೆಗಾರರು.

## ನಾಟಕಗಳು

ನಾಟಕಗಳ ಮುಖಾಂತರ ಸುಧಾರಣಾ ವಿಷಯಗಳನ್ನು ತಿಳಿಸಬಹುದೆಂಬುದನ್ನು ಪೆರಿಯಾರರು ತಿಳಿದುಕೊಂಡ ಮೇಲೆ ಅದನ್ನು ಪ್ರೋತ್ಸಾಹಿಸಿದರು. ಅಣ್ಣಾದುರೈ ನಾಟಕದ ಬಗ್ಗೆ ಹೇಳಿದ ಮಾತು ಗಮನಾರ್ಹ. "ಎಲುಬು ಹೆಣ್ಣಾದ ಕತೆಗಳನ್ನು ಹಾಡಿದ್ದು, ಆಡಿದ್ದು ಸಾಕು. ಇನ್ನು ಹೆಣ್ಣು ಎಲುಬಾಗಿ ಕರಗಿದ ಕನಿಕರ ಜೀವನವನ್ನು ಚಿತ್ರಿಸುವ ನಾಟಕಗಳು ಬೇಕು. ಕಣ್ಣು ಕಿತ್ತಿಟ್ಟ ಕಣ್ಣಪ್ಪನ ಕತಿ ಸಾಕು, ಇನ್ನು ಗುಡಿ ಕಟ್ಟಿ ಕುಂಭಾಭಿಷೇಕ ಮಾಡುವವನು ಊರನ್ನೇ ದೋಚುವ ವಿಷಯವನ್ನು ಬಹಿರಂಗಗೊಳಿಸುವ ನಾಟಕ ಬೇಕು. ಬಡವರ ಕಣ್ಣೀರು, ವಿಧವೆಯ ದುಃಖ, ಮತ ದಲ್ಲಾಳಿಗಳ ಅಹಂಕಾರ ಇವುಗಳನ್ನು ನಾಟಕದ ವಸ್ತುವಾಗಿಸಿರಿ" ಎಂದರು.

ವೈಚಾರಿಕ ನಾಟಕ ಕ್ಷೇತ್ರದಲ್ಲಿ ಅಣ್ಣಾದುರೈಯದೇ ಪ್ರಧಾನ ಪಾತ್ರ. ಅವರ ನಾಟಕಗಳಾದ ಚಂದ್ರೋದಯಂ, ವೇಲೈಕಾರಿ, ಓರಿರವು, ಕಾದಲ್‌ಜೋತಿ, ಸೊರ್ಗವಾಸಲೆ, ಶಿವಾಜಿ ಕಂಡ ಹಿಂದು ಸಾಮ್ರಾಜ್ಯಂ, ಪಾವೈಯಿನ್ ಪಯಣಂ, ಇನ್ಬ ಬಳಿ ಮುಂತಾದವು ಪ್ರಮುಖ ಕೃತಿಗಳು. ಅಣ್ಣಾದುರೈ ಸ್ವತಃ ನಟಿಸಿದ್ದಾರೆ. ಜಮಿನ್ದಾರಿ ಪದ್ಧತಿ ನಿರ್ಮೂಲನೆ, ಪಾನ ನಿರೋಧ, ಜಾತಿ ವೈಷಮ್ಯ, ಅಂತರಜಾತಿ ವಿವಾಹ ಮುಂತಾದವೂ ಅವರ ನಾಟಕದ ವಸ್ತುವಾಗಿದೆ. ವರ್ಣಾಶ್ರಮ ಪದ್ಧತಿಯ ಕಾಪಟ್ಯವನ್ನು ಬಯಲಿಗೆಳೆಯುವುದೇ 'ಶಿವಾಜಿ ಕಂಡ ಹಿಂದು ಸಾಮ್ರಾಜ್ಯಂ' ನಾಟಕದ ವಸ್ತು.

ಕರುಣಾನಿಧಿ ಅವರ ನಾಟಕಗಳಿಗೆ ಜಾತಿ ಪದ್ಧತಿ, ಸ್ತ್ರೀ ಸ್ವಾತಂತ್ರ್ಯ, ಆರ್ಯ ವಿರೋಧ, ಮುಂತಾದವು ವಸ್ತುವಾಗಿದೆ. ಅವರ "ತೂಕ್ಕು ಮೇದೈ, ಮಣಿಮಗುಡಂ, ಬರೇ ಮುತ್ತಂ, ಉದಯ ಸೂರಿಯನ್, ಕಾಗಿದಪ್ಪೊ, ರಕ್ತಕ್ಕಣ್ಣೀರ್ ಮುಂತಾದವು ಗಮನಾರ್ಹ ನಾಟಕಗಳು.

ಭಾರತಿದಾಸನ್ ಸುಮಾರು ೨೯ ನಾಟಕಗಳನ್ನು ರಚಿಸಿದ್ದಾರೆ. ಎಲ್ಲ ನಾಟಕಗಳೂ ಒಂದಲ್ಲ ಒಂದು ಸುಧಾರಣಾ ಅಂಶವನ್ನು ಹೊಂದಿ ಬಂದ ನಾಟಕಗಳೇ. ಅವರ ಕೆಲವು ನಾಟಕಗಳನ್ನು ಅಂದಿನ ಸರಕಾರ ಬಹಿಷ್ಕರಿಸಿತ್ತು.

ಎನ್.ಎಸ್. ಕೃಷ್ಣನ್ ನಾಟಕ ಮತ್ತು ಸಿನಿಮಾ ಕ್ಷೇತ್ರದಲ್ಲಿ ಬಹು ದೊಡ್ಡ ಹೆಸರು.

ವಿಚಾರವಾದವನ್ನುಳಿದು ಬೇರೆ ಮಾತನಾಡದ ವ್ಯಕ್ತಿ. ಹಾಸ್ಯದ ಮೂಲಕ ಅವರ ಬಿತ್ತಿದ ವೈಚಾರಿಕ ವಿಷಯಗಳು ಸಮಾಜದ ಮೇಲೆ ಬಹು ಪರಿಣಾಮ ಬೀರಿದೆ.

**ಪ್ರಬಂಧ ಸಾಹಿತ್ಯ**

ಕಾವ್ಯ, ಕಥಾನಕಗಳಿಗೆ ಬರೆದ ವೃತ್ತಿಗಳೇ ಪ್ರಬಂಧಗಳೆನಿಸಿಕೊಂಡ ಕಾಲ ಸರಿದು ಆಧುನಿಕ ಕಾಲ ಬಂದಾಗ ಬದುಕಿನ ಬಗ್ಗೆ, ಜಾತಿ ವೈಷಮ್ಯದ ಬಗ್ಗೆ ಆರ್ಥಿಕ ಏರು-ಪೇರುಗಳ ಬಗ್ಗೆ, ಸ್ತ್ರೀ ಸ್ವಾತಂತ್ರ್ಯದ ಬಗ್ಗೆ ಮೂಢ ನಂಬಿಕೆಗಳ ನಿರ್ಮೂಲನೆ ಬಗ್ಗೆ ಬರೆಯಲು ಪ್ರಾರಂಭಿಸಿದರು. ಈ ಬದಲಾವಣೆಗೆ ಕಾರಣವಾದವರು ಪೆರಿಯಾರ್. ಮೇಲೆ ಹೇಳಿದ ವಿಷಯಗಳಲ್ಲದೆ, ದೈವ ಅದರ ಸುತ್ತಮುತ್ತ ಹೆಣೆಯಲಾದ ಕಥೆಗಳು ಮತ್ತು ಇವುಗಳೆಲ್ಲದರ ಹಿಂದೆ ಇರುವ ಉದ್ದೇಶ ಎಲ್ಲವನ್ನು ವಿಮರ್ಶಿಸಿದರು ಮತ್ತು ಧರ್ಮ ಹೇಗೆ ಜನರನ್ನು ನಿರ್ವೀರ್ಯರನ್ನಾಗಿಸುತ್ತದೆ (ಪ್ರಕೃತಿವಾದ) ಎಂಬುದನ್ನು, ವೈಚಾರಿಕತೆ ಮಾತ್ರ ಭೇದದ ಹಿತ ಬದುಕನ್ನು ನೀಡಬಲ್ಲದು ಎಂದೂ (ಅರಿವು ವಿರುಂದು) ಚುನಾವಣೆಯೆಂಬುದು ಬರಿ ಜೂಜು, ಆದರಿಂದ ಜನರಿಗೆ ಏನೂ ಪ್ರಯೋಜನವಿಲ್ಲವೆಂದೂ (ಜನನಾಯಕ) ಸಾರಿದರು. ತಮಿಳು ಪುರಾಣ ಕೃತಿಗಳೆಲ್ಲವನ್ನು ಪುನರ್ ವಿಮರ್ಶೆ ಮಾಡಿದರು. ಇವರ ಎಲ್ಲ ಬರಹಗಳನ್ನು ಮೂರು ಸಂಪುಟಗಳಲ್ಲಿ ಸಂಕಲಿಸಿ ನೀಡಲಾಗಿದೆ, ಪೆರಿಯಾರ್ ಚಿಂದನೈಗಳ್ ಎಂಬ ಹೆಸರಿನಲ್ಲಿ. ಇವರನ್ನು ಅನುಸರಿಸಿ ಅಣ್ಣಾದುರೈ, ಕರುಣಾನಿಧಿ, ಕೈವಲ್ಯ ಸ್ವಾಮಿ, ಸಿಂಗಾರವೇಲನ್, ನೆಡುಂಚೆಳಿಯನ್, ಅನ್ಬಳಗನ್ ಮುಂತಾದವರು ವಿಪುಳವಾದ ಸಾಹಿತ್ಯ ರಚಿಸಿದ್ದಾರೆ.

**ಪತ್ರಿಕೆಗಳು**

ಈ ದಿಶೆಯಲ್ಲಿ ಪತ್ರಿಕೆಗಳ ಕಾರ್ಯ ಅಪಾರ. ನೂರಾರು ಪತ್ರಿಕೆಗಳು ಹುಟ್ಟಿಕೊಂಡವು. ಎಲ್ಲವೂ ಶುದ್ಧ ವೈಚಾರಿಕತೆಗೋಸ್ಕರ ಮೀಸಲಾದ ಪತ್ರಿಕೆಗಳು. ಪೆರಿಯಾರ್, ಅಣ್ಣಾದುರೈ ಕರುಣಾನಿಧಿ ಮುಂತಾದವರು ತಾವೇ ಹಲವು ಪತ್ರಿಕೆಗಳನ್ನು ನಡೆಸಿದರು (Appendix-1) ತಮಿಳಿನಲ್ಲಿ ಅಲ್ಲದೆ ಇಂಗ್ಲೀಷಿನಲ್ಲಿಯೂ ಹಲವು ಪತ್ರಿಕೆಗಳು ಇವರಿಂದ ಬಂದವು. ಅವುಗಳಲ್ಲಿ ರಿವೋಲ್ಟ್, ಜಸ್ಟಿಸೈಡ್, ಜಸ್ಟಿಸ್, ಸಂಡೆ ಅಬ್ಸರ್ವರ್, ಲಿಬರೇಟರ್, ಹೋಂಲ್ಯಾಂಡ್, ಹೋಂ ರೂಲ್, ನೇಷನಲ್ ಕಾಲ್, ಸ್ವಾರ್ಚ್ ಪ್ರಾಗ್ರಸ್ ರೈಸಿಂಗ್ ಸನ್, ಸಂಡೇ ಟೈಮ್ಸ್, ನ್ಯೂ ಜಸ್ಟಿಸ್, ದಿ ರೇಷನ್ ಲಿಸ್ಟ್ ಮುಂತಾದವು ಗಮನಾರ್ಹ. ಈ ಎಲ್ಲ ಪತ್ರಿಕೆಗಳು ಎಷ್ಟುದಿನ ನಡೆದವು. ಎಷ್ಟು ಉಳಿದವು ಎಂಬುದು ಮುಖ್ಯವಲ್ಲ. ಇವು ತಮಿಳುನಾಡಿನಲ್ಲಿ ವೈಚಾರಿಕತೆಯ ಕಾವು ಆರದಂತೆ ನೋಡಿಕೊಂಡವು ಎಂಬುದು ಮುಖ್ಯ.

# ಅನುಬಂಧ - 1

## 1. ದಿನಪತ್ರಿಕೆ:

| | ಪತ್ರಿಕೆಯ ಹೆಸರು | ಸ್ಥಾಪನೆ ವರ್ಷ | ಸಂಪಾದಕರು |
|---|---|---|---|
| 1. | ಕುಡಿ ಅರಸು | 1925 | ಪೆರಿಯಾರ್ |
| 2. | ದ್ರಾವಿಡನ್ | 1930 | ” |
| 3. | ವಿಡುದಲೈ | 1935 | ” |
| 4. | ಉಣ್ಮೈ | 1970 | ” |
| 5. | ಮುಲ್ಲೈಮಣಿ | 1940 | ಅಣ್ಣಾದುರೈ |
| 6. | ದ್ರಾವಿಡನಾಡು | 1942 | ” |
| 7. | ನಂ ನಾಡು | 1952 | ” |
| 8. | ಮುರಸೋಲಿ | 1946 | ಕರುಣಾನಿಧಿ |

## 2. ವಾರಪತ್ರಿಕೆ:

| | ಪತ್ರಿಕೆಯ ಹೆಸರು | ಸಂಪಾದಕರು |
|---|---|---|
| 1. | ನವಯುವನ್ | ಅಣ್ಣಾದುರೈ |
| 2. | ಬಾಲಭಾರತಂ | ” (1935) |
| 3. | ಕಾಂಚಿ | ” (1963) |
| 4. | ನಗರದೂತನ್ | ತಿರುಮಲೈ ಚಾಮಿ |
| 5. | ದ್ರಾವಿಡಮಣಿ | ಮುತ್ತು |
| 6. | ತೊಳಿಲಾಳರ್ ಮಿತ್ರನ್ | ಪೆರುಮಾಳ್ |
| 7. | ತಮಿಳ್ ಉಲಗಂ | ಪಾರ್ಥಸಾರಥಿ |
| 8. | ಪೋರ್‌ವಾಳ್ | ಮಣಿಮೊಳಿ |
| 9. | ತನಿಅರಸು | ಆಸೈತಂಬಿ (1962) |
| 10. | ತಂಬಿ | ತಿಲ್ಲೈವಿಲ್ಲಾಳಲ್ |
| 11. | ತೆನ್ನಗಂ | ಮದಿಅಳಗನ್ |
| 12. | ಅರಪ್ಪೋರ್ | ರಾಮ ಅರಂಗಣ್ಣಲ್ |
| 13. | ಮಾಲೈಮಣಿ | ಇಳಂಗೋ |
| 14. | ತೆನ್ನರಸು | ತೆನ್ನರಸು |
| 15. | ಕದಿರವನ್ | ಚೆಲ್ವರಾಸನ್ |
| 16. | ಅರಿವುಪ್ಪಾದೈ | ಗುರುಸಾಮಿ |
| 17. | ತೀಪ್ಪೊರಿ | ಸುಬ್ರಮಣಿಯನ್ |
| 18. | ಕುಯಿಲ್ | ರಾಜನ್ (etal) |
| 19. | ತೋಳನ್ | ಜನಾರ್ಧನಂ |
| 20. | ಎರಿಮಲೈ | ಏ.ಕೆ. ವೇಲನ್ |

| | | |
|---|---|---|
| 21. | ಪುರಚ್ಚಿ | ಮಾಜಿನಿ |
| 22. | ಕಳಂಜಿಯಂ | ವೇಣು |
| 23. | ತಳಪರಿ | ಇರೈಮುಡಿಯನ್ |
| 24. | ಎಳುಚ್ಚಿ | ರಟ್ಟಪ್ಪಾ |
| 25. | ತೆನ್ರಲ್ | ಕಣ್ಣದಾಸನ್ |

3. ಮಾಸಿಕ:

| | | |
|---|---|---|
| 1. | ಸಮಧರ್ಮಂ | ಚಿದಂಬರನಾರ್ |
| 2. | ಪೊನ್ನಿ | ಪೆರಿಯಣ್ಣನ್ |
| 3. | ಕುಯಿಲ್ | ಭಾರತಿದಾಸನ್ |
| 4. | ಮುನ್ರಂ | ನೆಡುಂಚೆಳಿಯನ್ |
| 5. | ಪುದುವಾಳ್ವು | ಅನ್ಬಳಗನ್ |
| 6. | ತಮಿಳ್ ತೆನ್ರಲ್ | ವಿ.ವಿ. ರಾಮಸ್ವಾಮಿ |
| 7. | ವೈಪ್ಪಾರು | ರಾಸಮಣಿ |
| 8. | ಪೂಮಾಲೈ | ತಿಲ್ಲೈವಿಲ್ಲಾಳನ್ |
| 9. | ಇಣಾಯಿರು | ಏ.ಕೆ. ವೇಲನ್ |
| 10. | ಕವಿಕೊಂಡಲ್ | ಚೆಂಗುಟ್ಟುವನ್ |

(ಆಧಾರ: ಪಮುತ್ತರಿವು ಇಲಕ್ಕಿಯ ವರಲಾರು ವಣಂಗಾಮುಡಿ)

# ಸಾಂಸ್ಕೃತಿಕ ನೆಲೆಗಳು: ಚಿತ್ರದುರ್ಗ ಜಿಲ್ಲೆಯನ್ನು ಅನುಲಕ್ಷಿಸಿ

ಪ್ರೊ॥ ಲಕ್ಷ್ಮಣ್ ತೆಲಗಾವಿ

'ಸಂಸ್ಕೃತಿ' ಎಂಬುದು ನಿರ್ದಿಷ್ಟ ಅಳತೆಗೆ, ಆಕಾರಕ್ಕೆ ನೋಡಲು ಸಿಕ್ಕದ ಒಂದು ವಿಶಿಷ್ಟ ಜೀವನ ಸ್ವರೂಪ, 'ನಡೆವಳಿ'; ಬದುಕಿನ ನಾನಾ ವಿಧಾನಗಳನ್ನು, ಮಗ್ಗುಲುಗಳನ್ನು ಗರ್ಭೀಕರಿಸಿಕೊಂಡ ಈ ಶಬ್ದವನ್ನು ಎಚ್ಚರದಿಂದಲೇ ಬಳಸಬೇಕಾಗುತ್ತದೆ. ಈವರೆಗಿನ ವ್ಯಾಖ್ಯಾನದಂತೆ, ಅಂತರಂಗದ ವಿಕಾಸಕ್ಕೆ ಜೀವಧಾತು ಈ ಸಂಸ್ಕೃತಿ. ಭೌತಿಕ ಮತ್ತು ಆಧ್ಯಾತ್ಮಿಕ ಸಂಸ್ಕೃತಿಗಳೆಂದು ವಿಭಾಗಿಸುವಾಗ ಇವನ್ನು ಬಾಹ್ಯ ಮತ್ತು ಆಂತರಿಕ ಸಂಸ್ಕೃತಿಗಳೆಂದು ಮರು ವ್ಯಾಖ್ಯಾನಿಸುವುದುಂಟು. ಆಯಾ ಪ್ರದೇಶದ ಜನರ ಮಾನಸಿಕ ಅಥವಾ ನಾಗರಿಕತೆಯ ಬೌದ್ಧಿಕ ಸಾಧನೆಯೇ ಸಂಸ್ಕೃತಿ ಎನ್ನುತ್ತಾರೆ ಸಮಾಜವಿಜ್ಞಾನಿಗಳು. "ಸಾಮಾಜಿಕ ಮತ್ತು ಬೌದ್ಧಿಕ ಪ್ರಕ್ರಿಯೆಗಳ ಮುಖಾಂತರ ಬದುಕಿನ ಎಲ್ಲ ವಲಯಗಳಲ್ಲೂ ಪರಿಪೂರ್ಣತೆಯನ್ನು ಸಾಧಿಸಲು ಬಯಸುವ ಮನುಷ್ಯನ ಸೃಜನಶೀಲತೆಯೇ ಸಂಸ್ಕೃತಿ" ಎನ್ನುತ್ತಾರೆ ಪ್ರೊ. ಬಿ. ಷೇಕ್‌ಅಲಿ. ಜನಪರವಾದದ್ದು ಮಾತ್ರ ಸಂಸ್ಕೃತಿ ಎಂದು ಕರೆಯಿಸಿಕೊಳ್ಳುತ್ತದೆಂಬುದು ಈಚಿನ ಸಿದ್ಧಾಂತ. ಸಮಾಜವನ್ನು ಸಮಷ್ಟೀಕರಿಸುವ ಒಂದು ಪ್ರಕ್ರಿಯೆಯಾಗಿ ಸಂಸ್ಕೃತಿ ಕಾರ್ಯ ನಿರ್ವಹಿಸುತ್ತದೆನ್ನಲಾಗುತ್ತದೆ. ಈಚಿನ ಉಪಸಂಸ್ಕೃತಿ, ಪ್ರತಿಸಂಸ್ಕೃತಿಗಳ ಚರ್ಚೆಯೂ ಗಮನಾರ್ಹ.

ಭಾರತೀಯ ಸಂಸ್ಕೃತಿಯಾಂತರ್ಗತ ಕರ್ನಾಟಕ ಸಂಸ್ಕೃತಿ ಎನ್ನುವಲ್ಲಿ, ಮೇಲ್ನೋಟಕ್ಕೇ ಈ ಎರಡರ ನಡುವಣ ಭಿನ್ನತೆ ಹಾಗೂ ದೂರಗಳ ಅರಿವಾಗುತ್ತದೆ. ಕರ್ನಾಟಕ ಸಂಸ್ಕೃತಿ ಎಂಬುದು ದಕ್ಷಿಣದ ದ್ರಾವಿಡ ಸಂಸ್ಕೃತಿಯ ಪ್ರತೀಕವೇ? - ಉತ್ತರದ ಸಂಸ್ಕೃತಿಯನ್ನು ಸಾಮಾನ್ಯವಾಗಿ ಆರ್ಯ ಅಥವಾ ವೈದಿಕ ಸಂಸ್ಕೃತಿಯ ಪ್ರತೀಕವೆಂದು ಕರೆಯುವಂತೆ. ದೇಶ, ಭಾಷೆ, ಬಣ್ಣ, ಜೀವನಪದ್ಧತಿಗಳಿಗನುಗುಣವಾಗಿ ಸಂಸ್ಕೃತಿಯ ಸ್ವರೂಪವೂ ಬದಲಾಗುವುದನ್ನು ಕಾಣುತ್ತಿರುವುದರಿಂದ, ಇದನ್ನೆ ಸಮಾಜವಿಜ್ಞಾನಿಗಳು ಸಹಾ ಈತನಕ ಒತ್ತಿ ಹೇಳುತ್ತಾ ಬಂದಿರುವುದರಿಂದ, ಮೂಲ ಸಂಸ್ಕೃತಿ ಅಥವಾ ಏಕಸಂಸ್ಕೃತಿ ಎಂಬುದೊಂದು ಇದ್ದುದಕ್ಕೆ, ಇರುವುದಕ್ಕೆ ಖಚಿತ ಸುಳಿವು ದೊರೆತಂತೆ ತೋರುವುದಿಲ್ಲ. ಚರಿತ್ರೆಯೂ ಇದನ್ನು ಅನುಮೋದಿಸುವುದಿಲ್ಲ.

ವಾಸ್ತವದಲ್ಲಿ, 'ಸಂಸ್ಕೃತಿ' ಎಂಬುದು ಏಕಘಟಕಾತ್ಮಕವೂ ಅಲ್ಲ, ಏಕಮುಖಿಯೂ ಅಲ್ಲ ಎಂಬುದು ಸ್ಪಷ್ಟ. ಅಂದರೆ ಭಾರತೀಯ ಅಥವಾ ಕರ್ನಾಟಕ ಸಂಸ್ಕೃತಿಯೆಂಬುದು ಅಖಂಡವಾದುದೇನಲ್ಲ, ಬದಲಿಗೆ ಅದು ಹಲವಾರು ಸಂಸ್ಕೃತಿಗಳ ಒಂದು ಮೊತ್ತ. ಭಾರತೀಯ ಸಾಮಾಜಿಕ ಪರಿಸ್ಥಿತಿಗೆ ಹೊಂದಿಸಿ ಹೇಳುವುದಾದರೆ, ಎಲ್ಲ ಭಾಷೆ, ಧರ್ಮ, ಜನಾಂಗಗಳಿಗೂ ಅವುಗಳದೇ ಆದ ಪ್ರತ್ಯೇಕ ಜೀವನ ವಿಧಾನ, ನಡವಳಿಕೆ, ಚಿಂತನಾ ಕ್ರಮಗಳಿದ್ದು, ಅವುಗಳನ್ನೆ

ಸಂಸ್ಕೃತಿ ಹೆಸರಿನಲ್ಲಿ ವಿಶ್ಲೇಷಿಸಲಾಗುತ್ತದೆ.

ಪ್ರಸಕ್ತವಲ್ಲಿ, ವಿವಿಧ ಸಂಸ್ಕೃತಿಗಳ ಹುಡುಕಾಟ ನಡೆದು ಅವುಗಳ ನಿಜಲಕ್ಷಣಗಳನ್ನು ಗುರುತಿಸುವಷ್ಟರ ಮಟ್ಟಿಗೆ ಸಂಸ್ಕೃತಿ ಅಧ್ಯಯನಗಳು ಮುಂದುವರೆದು ಬಂದಿವೆ. ಮುಖ ಕಳೆದುಕೊಂಡು ಮುಸುಕು ಧರಿಸಿದ್ದ ಅಥವಾ ಅಂತಹ ಒತ್ತಡ ತಂತ್ರಗಳಿಗೆ ಒಳಗಾಗಿ ಚಲಾವಣೆ ಕಳೆದುಕೊಂಡಿದ್ದ ಹಾಗೂ ಸ್ಥಳೀಯ ಬುಡಕಟ್ಟುಗಳು ಇದೀಗ ಚೇತರಿಸಿಕೊಂಡಿರುವುದು, ನವೋತ್ಸಾಹ ಹಾಗೂ ಆತ್ಮವಿಶ್ವಾಸಗಳಿಂದ ಇತರ ಸಂಸ್ಕೃತಿಗಳೊಡನೆ ಸಂಬಂಧ ಸಾಧಿಸುತ್ತಿರುವುದು ತೀರಾ ಇತ್ತೀಚಿನ ಬೆಳವಣಿಗೆ.

ಇಷ್ಟಲ್ಲದೆ, ಪರಸ್ಪರ ಬೆಸೆದುಕೊಂಡಿರುವಂತೆ ಮೇಲೆ ಕಂಡುಬಂದರೂ ಆಂತರಿಕವಾಗಿ ಪ್ರತ್ಯೇಕತೆಯನ್ನು ಉಳಿಸಿಕೊಂಡಿರುವ ಸ್ಥಳೀಯ ಸಂಸ್ಕೃತಿಗಳೂ ವಿಪುಲವಾಗಿವೆ. ಇವು ಜನಪದ ಸಂಸ್ಕೃತಿಗಳೇ ಆಗಿವೆಯೆನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಈಚಿನ ಅಧ್ಯಯನಗಳು ಜನಪರವಾದುದೆಲ್ಲ ಜನಪದ ಸಂಸ್ಕೃತಿಯೆಂದು ವಿವರಿಸುತ್ತವೆ, ನಂಬಿಸುತ್ತವೆ. ಆದರೆ ಇಂತಹ ಜನಪದ ಸಂಸ್ಕೃತಿಯೂ ಕೆಲವೊಮ್ಮೆ ತನ್ನಲ್ಲಿ ಒಳಗೊಳ್ಳಲು ಸಮ್ಮತಿಸದ ಅಥವಾ ಸುಮಧುರ, ಗಾಢ ಸಂಬಂಧಗಳನ್ನು ಬೆಳೆಸಲು ಇಚ್ಛಿಸದ ಇನ್ನೊಂದು ಬಗೆಯ ಸಂಸ್ಕೃತಿಯೂ ಇದೆ. ಎಲ್ಲ ದೃಷ್ಟಿಗಳಿಂದಲೂ ನಿರ್ಲಕ್ಷಿಸಲ್ಪಟ್ಟ ಅಲಕ್ಷಿತ ಸಂಸ್ಕೃತಿ ಅದು. ಅದೇ ದಲಿತ ಸಂಸ್ಕೃತಿ.

ಕೆಲವೊಮ್ಮೆ ಜನಪದ ಸಂಸ್ಕೃತಿಯು ಶಿಷ್ಟರು ಅಥವಾ ಮೇಲ್ವರ್ಗದವರು ಅಥವಾ ಸುಸಂಸ್ಕೃತರು ರೂಢಿಸಿಕೊಂಡಿರುವ ಸಂಸ್ಕೃತಿಯ ಪರವಾಗಿರಬಹುದು. ಅದನ್ನು ಅನುಸರಿಸಿರಬಹುದು. ಆದ್ದರಿಂದ ಅವುಗಳ ನಡುವಣ ಸಂಘರ್ಷದ ಕಾವು ನಿರೀಕ್ಷಿಸಿದಷ್ಟು ಇಲ್ಲವೆನ್ನಬಹುದು. ಇದರ ಹಿಂದಿರುವ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗಳೂ, ಒತ್ತಡಗಳೂ ಕಾರಣವಾಗಿರಬಹುದು. ಬಹುಸಮಾಜ ವರ್ಗಗಳೆಂದು ಗುರುತಿಸಬಹುದಾದ ಇಂಥ ಸಮುದಾಯಗಳು ಒಂದು ವಿಧದಲ್ಲಿ ಅರೆ-ಶಿಷ್ಟ ಮತ್ತು ಅರೆ-ಪರಿಶಿಷ್ಟ ವರ್ಗಗಳಿಗೆ ಸೇರಿದುವೆನ್ನಬಹುದು. ಆದರೆ ಇವು ಸೃಷ್ಟಿಸಿಕೊಂಡಿರುವ ಬದುಕಿನಾಚೆಯ ಬದುಕನ್ನು ಕಂಡುಂಡವರ, ಅಂದರೆ ದಲಿತರ-ಮುಖ್ಯವಾಗಿ 'ಅಸ್ಪೃಶ್ಯ' ಎಂಬ ಹೀನ ಶಬ್ದದಿಂದ 'ಶಿಷ್ಟ ಸಮಾಜ'ದಿಂದ ಗುರುತಿಸಲ್ಪಟ್ಟವರ ಸಂಸ್ಕೃತಿ ತನ್ನ ಮೂಲಗುಣವನ್ನು ಇನ್ನೂ ಮೈಗೂಡಿಸಿಕೊಂಡಿರುವುದು, ಅದನ್ನು ಉಳಿಸಿಕೊಂಡು ಬಂದಿರುವುದು ಸ್ಪಷ್ಟ. ಈ ಕಾರಣಕ್ಕಾಗಿಯೇ ತನ್ನನ್ನು ವಿರೋಧಿಸುವ ಸಂಸ್ಕೃತಿಗಳೊಡನೆ ಇದು ನೇರವಾಗಿಯೇ ಸಂಘರ್ಷಕ್ಕಿಳಿದಿರುವುದಕ್ಕೆ ಈಚಿನ ಹಲವಾರು ಉದಾಹರಣೆಗಳನ್ನು ತೋರಿಸಬಹುದು. ಜನಪದ ಸಂಸ್ಕೃತಿಯ ಗಟ್ಟಿ ಸತ್ವವುಳ್ಳ ಹಾಗೂ ಯಾವುದೇ ಬಲಿಷ್ಠ ಸಂಸ್ಕೃತಿಯ ಒತ್ತಡ ತಂತ್ರಗಳನ್ನು ದಿಟ್ಟವಾಗಿ ಎದುರಿಸಬಲ್ಲ ದಲಿತ ಸಂಸ್ಕೃತಿ ಇದೇ ಮಣ್ಣಿನ ಮೂಲ ಬೆಳೆಯಾಗಿದ್ದು, ಇಂದಿಗೂ ಉಳಿದುಬಂದಿರುವುದರಲ್ಲಿ ಎರಡು ಮಾತಿಲ್ಲ. ಪ್ರಾದೇಶಿಕ ಸಂಸ್ಕೃತಿಗಳನ್ನು ಕುರಿತ ಈಚಿನ ಅಧ್ಯಯನಗಳೂ ಇದನ್ನು ಇನ್ನಷ್ಟು ದೃಢಪಡಿಸುತ್ತವೆ.

ಈ ಹಿನ್ನೆಲೆಯಲ್ಲಿ, ಕರ್ನಾಟಕದ ಸಾಂಸ್ಕೃತಿಕ ಪರಿಸರವನ್ನು ಪರಿಭಾವಿಸಿ ಹೇಳಲು ಪ್ರಯತ್ನಿಸುವುದಾದರೆ, ಚಿತ್ರದುರ್ಗ ಜಿಲ್ಲೆಯ ಸಾಂಸ್ಕೃತಿಕ ನೆಲೆಗಳು ಬೇರೆ ಬಗೆಯ ಅಧ್ಯಯನ ಕ್ರಮವನ್ನು ಅಪೇಕ್ಷಿಸುತ್ತವೆ. ಬಂಡೆಗಳು ಬೆಂದು ಬಾಡುವಷ್ಟು ಬಿಸಿಲುಳ್ಳ ಬೆಂಗಾಡು ಪ್ರದೇಶಗಳಿಂದ, ತಕ್ಕಮಟ್ಟಿಗೆ ತಂಪಾಗಿದ್ದರೂ ಸಮೃದ್ಧ ಫಸಲು ನೀಡದೆ ಬದುಕಿನೊಡನೆ ಚೆಲ್ಲಾಟವಾಡುವ ಅರೆ ಮಲೆನಾಡು ಪ್ರದೇಶಗಳಿಂದ ಹಾಗೂ ನದಿ, ಹಳ್ಳ-ತೊರೆಗಳ ನೆರವಿನಿಂದ ಸದಾ ಹಸಿರುರಾಜಿಯಿಂದ ಕಂಗೊಳಿಸುವ ಅಲ್ಪ ಸ್ವಲ್ಪ ಪ್ರದೇಶಗಳಿಂದ ಈ ಜಿಲ್ಲೆ ಕೂಡಿದೆ. ಆಯಾ ಭೂಪ್ರದೇಶಗಳಲ್ಲಿಯ

ನೈಸರ್ಗಿಕ ವ್ಯತ್ಯಾಸಗಳಿಗನುಗುಣವಾಗಿ ಜನಜೀವನವೂ ರೂಪುಗೊಂಡಿರುವುದು ಹಾಗೂ ಸಂಸ್ಕೃತಿ ವಿಕಾಸ ಪಡೆದಿರುವುದು ಸಹಜವೇ.

ಬವಣೆಯರಿತ ಬದುಕು ಕಂಡುಕೊಂಡ ನಿವಾರಣೋಪಾಯವೆಂದರೆ ಸಾಂಸ್ಕೃತಿಕ ಆಚರಣೆ. ಅತಿಯಾದ ಸಾಮಾಜಿಕ ಒತ್ತಡಗಳ ಪರಿಸ್ಥಿತಿಯಲ್ಲಿ ಆತ್ಮರಕ್ಷಣೆಯ ಅಥವಾ ಜೀವಂತವಾಗಿ ಬದುಕುಳಿಯುವ ರೂಪವಾಗಿ, ಪ್ರತೀಕವಾಗಿ ಇಂತಹ ಆಚರಣೆಗಳು ಅನಿವಾರ್ಯವೆನಿಸಿದುದನ್ನು ಅಲ್ಲಗಳೆಯುವಂತಿಲ್ಲ. ಆದ್ದರಿಂದಲೇ ಲಾಗಾಯ್ತಿನಿಂದಲೂ ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬಂದಿರುವ ಸಾಂಸ್ಕೃತಿಕ ಶ್ರೀಮಂತಿಕೆ ಬೆರಗುಗೊಳಿಸುವಂಥಾದ್ದು.

ಇಲ್ಲಿ ಗಮನಿಸಬೇಕಾದುದೆಂದರೆ, ನಗರ ಪ್ರದೇಶವನ್ನು ಹೊರತುಪಡಿಸಿ ಹಳ್ಳಿಗಾಡಿಗಷ್ಟೇ ಸೀಮಿತಗೊಳಿಸಿಕೊಂಡಂತೆ ಸಂಸ್ಕೃತಿಯ ನೆಲೆಗಳನ್ನು ವಿವರಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಏಕೆಂದರೆ ನಗರವು ಸಂಸ್ಕೃತಿಯನ್ನು ನಾಶಪಡಿಸಿ ನಾಗರಿಕತೆಯನ್ನು ಬೆಳೆಸುತ್ತದೆಂಬ ಸ್ಪೆಂಗ್ಲರನ ಮಾತನ್ನು ಇಲ್ಲಿ ಕಡೆಗಣಿಸಲಾಗದು. ಆದರೆ ಸಂಸ್ಕೃತಿ ಮತ್ತು ನಾಗರಿಕತೆಗಳು ಪರಸ್ಪರ ಪೂರಕವಾದುವೆಂಬುದನ್ನು ತಿಳಿಯಲಾಗಿದ್ದರೂ ಪುರಾತತ್ವ ಮತ್ತು ಚರಿತ್ರೆಯ ಸಂದರ್ಭಗಳಲ್ಲಿ ಇವು ಭಿನ್ನಾರ್ಥಗಳನ್ನು ಪಡೆಯುವುದನ್ನು ನೋಡಬಹುದು. ಪುರಾತತ್ವ ಅಧ್ಯಯನದಲ್ಲಿ 'ಸಂಸ್ಕೃತಿ' ಶಬ್ದವು ಕೇವಲ ವಿಭಾಗ ಸೂಚಕವಾಗಿ, ಅಂದರೆ ಮಾನವನ ಉಪಕರಣಗಳ ಪರಸ್ಪರ ಸಂಬಂಧವನ್ನು ನಿರ್ಣಯಿಸುವಾಗ ಬಳಕೆಗೊಳ್ಳುತ್ತದೆ. ಚರಿತ್ರೆಯಲ್ಲಿ ಈ ಪದ ಭೌತವಸ್ತು ಸೂಚಕವಾಗಿರದೆ, ಆಧ್ಯಾತ್ಮಿಕ ಸೂಚಕವೂ ಆಗಿದೆಯೆಂಬುದು ಗಮನಾರ್ಹ. ಆದ್ದರಿಂದಲೇ ಚರಿತ್ರೆಯ ಸಂಬಂಧದಲ್ಲಿ 'ಸಂಸ್ಕೃತಿ'ಗೂ 'ನಾಗರಿಕತೆ'ಗೂ ವ್ಯತ್ಯಾಸವಿರುವುದನ್ನು ಕಾಣಬಹುದು.

ಚಿತ್ರದುರ್ಗ ಜಿಲ್ಲೆಯ ಪುರಾತತ್ವ ಮತ್ತು ಚರಿತ್ರೆಯ ತಾಣಗಳನ್ನು ವಿವರಿಸುವಾಗ ಈ ಎಚ್ಚರ ಅತ್ಯಗತ್ಯ. ಮುಖ್ಯವಾಗಿ ಸಾಂಸ್ಕೃತಿಕ ನೆಲೆಯೆಂದರೆ ಸಮುದಾಯವೊಂದರ ಅಥವಾ ಸಮುದಾಯಗಳ ಪರಂಪರಾಗತ ಅಭಿರುಚಿ, ಚಿಂತನೆ, ನಂಬುಗೆ, ಆದರ್ಶಗಳ ಸಂಕೇತದ ಎಡೆಯಾಗಿರಬಹುದು. ಮೂಲದಲ್ಲಿ ನಿರ್ದಿಷ್ಟ ವರ್ಗವೊಂದರ ಆಚರಣೆ ಸೀಮಿತಗೊಂಡು ಕ್ರಮೇಣ ಇತರ ವರ್ಗಗಳೊಂದಿಗೂ ಸಂಬಂಧಪಡೆದ ನೆಲೆಯೂ ಆಗಿರಬಹುದು. ಆದರೂ ಅದು ಬಹುವರ್ಗಗಳ ಒಡೆತನಕ್ಕೆ ಬರದೆ ಎಂದಿನಂತೆ ಒಂದೇ ವರ್ಗದ ಹಕ್ಕುಬಾಧ್ಯತೆಗಳಿಗೆ ಒಳಗಾಗಿರುವ ಸಾಧ್ಯತೆಯೂ ಇದ್ದಿರಬಹುದು.

ಚಿತ್ರದುರ್ಗ ಜಿಲ್ಲೆಯಲ್ಲಿ ತುಂಬಿರುವ ಪುರಾತತ್ವ ಮಹತ್ವದ ಎಡೆಗಳು, ಚಾರಿತ್ರಿಕ ನೆಲೆಗಳು, ಗ್ರಾಮದೇವತೆಗಳ ಆರಾಧನಾ ಎಡೆಗಳು, ಭಿನ್ನಮತಗಳ ಭಾವೈಕ್ಯತೆಯ ಸಂಕೇತವಾಗಿರುವ ಧಾರ್ಮಿಕ ಎಡೆಗಳು, ದೈವಾಚರಣೆ ಸಂಬಂಧದ ಪ್ರೇಕ್ಷಣೀಯ ಎಡೆಗಳು, ಇತ್ಯಾದಿಗಳತ್ತ ಒಮ್ಮೆ ಸಮಗ್ರ ದೃಷ್ಟಿ ಹರಿಸಿದಾಗ ಕಂಡುಬರುವ ಚಿತ್ರವೆಂದರೆ, ಈವರೆಗೆ ಪ್ರಸ್ತಾಪಿಸಲಾದ ಸಂಸ್ಕೃತಿ ಸಂಬಂಧದ ಅಂಶಗಳ ಹಿನ್ನೆಲೆಯಲ್ಲಿ, ಬಹುಸಂಸ್ಕೃತಿಗಳ ಎಡೆಗಳು ವಿರಳವೆನ್ನಬಹುದು. ಮೂಲದಲ್ಲಿ ಏಕಸಂಸ್ಕೃತಿಪರವಾದ ಆರಾಧನಾ ಎಡೆಗಳು ಪ್ರಚಾರ-ಪ್ರಭಾವಗಳನ್ನು ಗಳಿಸತೊಡಗಿದಂತೆ, ಬಹುಸಂಸ್ಕೃತಿಪರವಾದ ಎಡೆಗಳಾಗಿ ಮಾರ್ಪಾಡು ಹೊಂದುವುದು ಸಹಜ ಪ್ರಕ್ರಿಯೆಯೆಂಬುದನ್ನು ಮರೆಯುವಂತಿಲ್ಲ. ಇಲ್ಲಿಯೇ ಸ್ಪಷ್ಟಪಡಿಸುವ ಅಂಶವೆಂದರೆ, ಜಾತಿ-ವರ್ಗ-ಪಂಥಗಳ ಹಿನ್ನೆಲೆಯಲ್ಲಿ, ಚಿತ್ರದುರ್ಗ ಜಿಲ್ಲೆಯ ದೇವಾಲಯ-ಮಠ-ಮಂದಿರಗಳಿಗಷ್ಟೆ ಸೀಮಿತಗೊಳಿಸಿ ಈ ಮಾತನ್ನು ಹೇಳಿದೆ. ಹಾಗೆಯೇ ಅಪ್ಪಟ ಇಂಪೀರಿಯಲಿಸ್ಟಿಕ್ ಆಗಿರುವ ಪ್ರಸಿದ್ಧ ಚಾರಿತ್ರಿಕ ನೆಲೆಗಳನ್ನೂ ಗಮನದಲ್ಲಿರಿಸಿಕೊಂಡಿದೆ. ಅಂದರೆ, ಸಾಂಸ್ಕೃತಿಕ ನೆಲೆಯೆಂಬುವು ಬಹುಮಟ್ಟಿಗೆ ಶಿಷ್ಟ ಅಥವಾ ಪ್ರಧಾನ ಸಂಸ್ಕೃತಿಯ ನೆಲೆಗಳಾಗಿಯೋ, ರಾಜಪ್ರಭುತ್ವ ಅಂದರೆ ಶಿಷ್ಟಸಂಸ್ಕೃತಿಯ ಪ್ರತಿಪಾದಕರೂ

ರಕ್ಷಕರೂ ಆದ ನಿರಂಕುಶ ಅಧಿಕಾರವೇತ್ತರು ಬೆಳೆಸಿದ ಕೇಂದ್ರಗಳಾಗಿಯೋ, ರಾಜಪೋಷಿತ ಮತ-ಮಾನ್ಯಗಳು ರೂಢಿಗೆ ತಂದ ಉತ್ಸವ, ಆಚರಣೆ, ಪುಣ್ಯತಿಥಿ ಕಾರ್ಯಕ್ರಮಗಳನ್ನು ಏರ್ಪಡಿಸುವ ಆಕರ್ಷಣೆಯ ಕೇಂದ್ರಗಳಾಗಿಯೋ ಆಗಿರಬಹುದು. ವರುಷಕ್ಕೊಮ್ಮೆ ಭಾರೀ ಜಾತ್ರೆ ಮತ್ತು ರಥೋತ್ಸವಗಳು ಏರ್ಪಡುವ ದೈವನೆಲೆಗಳು ಹಾಗೂ ಪವಾಡ ಸ್ತ್ರೀ-ಪುರುಷರ ಸಮಾಧಿ ಸ್ಥಾನಗಳೂ ಇವರ ವ್ಯಾಪ್ತಿಗೆ ಬರುವಂಥವು.

ಕೋಟೆ-ಕೊತ್ತಲಗಳಿಂದಾವೃತಗೊಂಡು ಪ್ರಾಚೀನ ವೈಭವದ ಪ್ರತೀಕವೆನಿಸಿರುವ ಹಲವಾರು ಚಾರಿತ್ರಿಕ ಎಡೆಗಳು ಈ ಜಿಲ್ಲೆಯ ಕೀರ್ತಿಕಳಸಗಳೇ ಸರಿ. ಇವುಗಳ ನಿರ್ಮಾಪಕರೆನಿಸಿದ ಹಾಗೂ ಸರ್ವಧರ್ಮ ಸಹಿಷ್ಣುಗಳೆಂದು, ಪ್ರಜಾವತ್ಸಲರೆಂದು, ನಾಡು-ನುಡಿಗಳ ಪೋಷಕರೆಂದು, ಮುಖ್ಯವಾಗಿ ಜನಾದರಣೆಗೆ ಪಾತ್ರರಾದವರೆಂದು ಗುರುತಿಸಲಾದ ಪಾಳೆಯಗಾರರನ್ನೂ, ನಾಯಕ ಅರಸರನ್ನೂ ನಾವು ಈವರೆಗೆ ಕೊಂಡಾಡುತ್ತಲೇ ಬಂದಿದ್ದೇವೆ. ಇದು ತಕ್ಕಮಟ್ಟಿಗೆ ಔಚಿತ್ಯ-ಪೂರ್ಣವಾದುದೇ. ಆದರೆ ಅಂಕೆಗೊಳಪಡದ ಅಧಿಕಾರವು ಬಲಿಷ್ಠರ ಉಪಕರಣವಾದಂತೆಯೇ ಪ್ರಧಾನ ಸಂಸ್ಕೃತಿಯ ಪ್ರತಿಷ್ಠೆ, ಪ್ರಾಬಲ್ಯಗಳನ್ನು ಅಧಿಕಗೊಳಿಸುವ ಸಾಧನವೂ ಆಗಬಲ್ಲುದು. ಚಿತ್ರದುರ್ಗದ ನಾಯಕ ಅರಸರನ್ನು ಮೊದಲ್ಗೊಂಡು ಈ ಜಿಲ್ಲೆಯನ್ನಾಳಿದ ಇತರ ಮೂರು ಪಾಳೆಯಗಾರ ಮನೆತನಗಳ ಒಟ್ಟು ಚರಿತ್ರೆ ಹೇಳುವುದು ಇಂತಹ ಸತ್ಯವನ್ನೆ. ಮತಾಂತರ ಅಥವಾ ಧರ್ಮಾಂತರ ಪ್ರಕ್ರಿಯೆ ಕೆಲವೊಮ್ಮೆ ಪ್ರತಿಷ್ಠೆಯ ಸಂಕೇತವಾದಂತೆ ಪ್ರತಿಭಟನೆಯ ದ್ಯೋತಕವೂ ಆಗಬಲ್ಲುದೆಂಬುದಕ್ಕೆ ಈ ಮನೆತನಗಳ ಕೆಲವು ಘಟನೆಗಳು ಸ್ಪಷ್ಟಪಡಿಸುತ್ತವೆ. ಭಾರತದ ಚಾರಿತ್ರಿಕ ಸಂದರ್ಭಗಳ ಪುನರಭಿನಯದಲ್ಲಿ ಈ ಮನೆತನಗಳೂ ಪಾತ್ರವಹಿಸಿದುದು ಅಚ್ಚರಿಯ ಸಂಗತಿಯೇನಲ್ಲ.

ವೈಭವೀಕರಣ ಮತ್ತು ಮಾನವೀಕರಣಗಳ ವ್ಯತ್ಯಾಸವನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳುವ ಹಿನ್ನೆಲೆಯಲ್ಲಿ, ಬರಗೂರು ರಾಮಚಂದ್ರಪ್ಪ ಅವರ ಮಾತನ್ನು ಇಲ್ಲಿ ಒಂದು ಸ್ಯಾಂಪಲ್ ಆಗಿ ಉಲ್ಲೇಖಿಸುವುದು ಅನುಚಿತವಾಗಲಾರದು. ಅವರು ಹೇಳಿದ್ದು: "ಮನುಷ್ಯ ಕೇಂದ್ರಿತ ನೆಲೆಯಿಂದ ಸಂಸ್ಕೃತಿಯ ಅಧ್ಯಯನಕ್ಕೆ ತೊಡಗಿದಾಗ ನಮ್ಮ ಗುಡಿ-ಗೋಪುರಗಳು, ಕೋಟೆ-ಕೊತ್ತಲಗಳು ಹೊಸ ಅರ್ಥ ಹುಟ್ಟಿಸುವ ಆಕರಗಳಾಗುತ್ತವೆ, ಆರಾಧನೆಯ ಕ್ಷೇತ್ರಗಳಾಗುವುದಿಲ್ಲ" (ಸಂಸ್ಕೃತಿ ಉಪಸಂಸ್ಕೃತಿ: ಪು. 92). ಇಷ್ಟಲ್ಲದೆ, ಪರಂಪರೆಯ ಬಗೆಗಿನ ಕುತೂಹಲ, ಆಸಕ್ತಿ, ಆದರಗಳ ಜೊತೆಗೇ ಪರಿವರ್ತನಶೀಲ ಸಂಸ್ಕೃತಿಯ ಸೂಕ್ಷ್ಮಗಳನ್ನು ಒಳಗೊಳ್ಳುವ ಮನಸ್ಸುಗಳನ್ನು ಬೆಳೆಯಿಸಿಕೊಳ್ಳುವ ಬಗೆಗೂ ಅವರು ಸೂಚಿಸುತ್ತಾರೆ. ಈ ಮಾತಿಗೆ ಸಹಮತ ಸೂಚಿಸದೆ ಇರಲಾಗದು.

ಏನೇ ಇರಲಿ, ಚರಿತ್ರೆ ಮತ್ತು ಸಂಸ್ಕೃತಿಗಳ ವೈಭವವನ್ನು ಅವುಗಳ ಪುನರುತ್ಥಾನಕ್ಕಾಗಿ ಹಂಬಲಿಸುವ ಮನೋಧರ್ಮ ಈಗ ಹಳೆಯ ನಮೂನೆಯದೆಂದು ಹೇಳದೆ ಗತ್ಯಂತರವಿಲ್ಲ. ಇದು ಸಂಪ್ರದಾಯ-ಪ್ರೇಮದಿಂದ ದೂರ ಸರಿಯುವುದೆಂಬ ಅಭಿಪ್ರಾಯಕ್ಕೆ ಒತ್ತು ಕೊಡುವ ಹಾಗೆನಿಸಿದರೂ ಪ್ರಸ್ತುತ ಪರಿಸ್ಥಿತಿಗೆ ಇದು ಅನಿವಾರ್ಯ ಎನಿಸದಿರದು. ಆದರೆ ಸಂಸ್ಕೃತಿಗಳನ್ನು ಹತ್ತಿರ ತರುವ, ಸಮುದಾಯಗಳ ನಡುವಣ ಅಂತರವನ್ನು ತಗ್ಗಿಸುವ ದಿಸೆಯಲ್ಲಿ ಜಿಲ್ಲೆಯ ಕೆಲವು ಧಾರ್ಮಿಕ ಹಾಗೂ ಸಾಂಸ್ಕೃತಿಕ ನೆಲೆಗಳು ನಿಜಕ್ಕೂ ಗಮನ ಸೆಳೆಯುತ್ತವೆ.

ವರುಷಕ್ಕೊಮ್ಮೆ ಭಾರೀ ಜಾತ್ರೆ ಮತ್ತು ರಥೋತ್ಸವಗಳೊಡನೆ ಜಿಲ್ಲೆಯಲ್ಲಿ ಅಪಾರ ಸುದ್ದಿ ಮಾಡುವ ನಾಯಕನಹಟ್ಟಿ ತಿಪ್ಪೇಸ್ವಾಮಿಯ ಸಮಾಧಿಗೆ (ಹೊರಮಠಕ್ಕೆ) ಇರುವ ಮಹತ್ವ

ಜಿಲ್ಲೆಯಲ್ಲಿ ಅಪರೂಪದ್ದು ಎನ್ನಬಹುದು. ತಿಪ್ಪೇಸ್ವಾಮಿಯ ಯೋಗ ಸಮಾಧಿ ಹಿಂದೂ-ಮುಸ್ಲಿಮ್ ಧರ್ಮಸಮನ್ವಯದ ಕುರುಹಾಗಿ ಉಳಿದಿರುವಲ್ಲಿ ಇರುವ ವೈಶಿಷ್ಟ್ಯವನ್ನು ಇಂದು ಮನಗಾಣಬೇಕಿದೆ. ತಿಪ್ಪೇಸ್ವಾಮಿ-ಹೈದರ್‌ಆಲಿ-ಟಿಪ್ಪುಸುಲ್ತಾನ್ ಇವರುಗಳ ಸುತ್ತ ಇಲ್ಲಿ ಪ್ರಚಲಿತವಿರುವ ಕಥೆ ಕುತೂಹಲಕಾರಿಯಾದುದು. ಇದು ಹೆಚ್ಚಿನ ಸಂಶೋಧನೆಗೆ ಪ್ರೇರಣೆ ನೀಡುವುದಾದರೂ ಎಲ್ಲ ವರ್ಗಗಳವರ ಮನದಲ್ಲಿ ಇಂದಿಗೂ ಪ್ರೀತ್ಯಾದರಗಳಿಗೆ ಪಾತ್ರನಾಗಿರುವ ತಿಪ್ಪೇಸ್ವಾಮಿಯ ವೃತ್ತಾಂತ ಪ್ರಸ್ತುತ ಪರಿಸ್ಥಿತಿಗೆ ಆಪ್ಯಾಯಮಾನವಾಗಿಯೇ ಇದೆ. ತಿಪ್ಪೇಸ್ವಾಮಿಯು ತಿಪ್ಪೇರುದ್ರಸ್ವಾಮಿಯಾಗಿ ಈಗ ಪ್ರಚಾರದಲ್ಲಿರುವುದು ಸಹಾ ಕುತೂಹಲಕಾರಕ ಅಂಶವೆನ್ನಬಹುದು. ಏಕೆಂದರೆ ಸಮಕಾಲೀನ ದಾಖಲೆಗಳಲ್ಲಿ ಈ ಯೋಗಿಯ ಹೆಸರು ಕೇವಲ 'ತಿಪ್ಪೇಸ್ವಾಮಿ' ಎಂದೇ ಇದೆ. ಈ ಯೋಗಪುರುಷನನ್ನು ಶಿವಶರಣನಾಗಿ ಗುರುತಿಸಲ್ಪಟ್ಟಿದ್ದರೂ ಈತನ ಮೂಲಮತ ಕುರಿತು ಜನರಲ್ಲಿರುವ ವದಂತಿ ಬೇರೆ ತೆರನಾದುದು. ಈ ಬಗೆಗೆ ಅಧ್ಯಯನ ನಡೆಯುವ ಅಗತ್ಯ ಇರುವಂತೆ ತೋರುತ್ತದೆ.

ಮೊಳಕಾಲ್ಮೂರು ತಾಲ್ಲೂಕು ದೇವಸಮುದ್ರದಲ್ಲಿರುವ, ಎಲ್ಲ ಕೋಮಿನವರೂ ನಡೆದುಕೊಳ್ಳುವ ಪರಿಶಿಷ್ಟ ಪಂಗಡದ ಪರಮೇಶ್ವರಸ್ವಾಮಿಗಳೆಂಬ ಯೋಗಿಗಳ ಐಕ್ಯಮಂದಿರ, ಹಿಂದೂ-ಮುಸ್ಲಿಮ್ ಈ ಎರಡು ಧರ್ಮಗಳವರಿಗೂ ಶ್ರದ್ಧೆಯ ನೆಲೆಯಾಗಿರುವ ದಾವಣಗೆರೆ ತಾಲೂಕಿನ ಬಾತಿಯಗುಡ್ಡ, ಹೊಸದುರ್ಗ ತಾಲ್ಲೂಕು ಶ್ರೀರಾಮಪುರದ ಪರಪ್ಪಸ್ವಾಮಿಗಳೆಂಬ ಅವಧೂತರ ಗದ್ದಿಗೆ, ಚಳ್ಳಕೆರೆ ತಾಲ್ಲೂಕಿನ ಜಗಲೂರಜ್ಜನ ನೆಲೆ, ಹರಿಹರ ತಾಲ್ಲೂಕಿನ ಕೊಮಾರನಹಳ್ಳಿಯಲ್ಲಿರುವ ಹೆಳವನಕಟ್ಟೆ ಗಿರಿಯಮ್ಮಳ ಹೆಸರಿನೊಡನೆ ಸಮೀಕರಿಸಲಾದ ಲಿಂಗ-ರಂಗ ಒಟ್ಟಿಗೆ ಇರುವ ದೇವನೆಲೆ ಹಾಗೂ ಶಂಕರಲಿಂಗಸ್ವಾಮಿಗಳ ಸಮಾಧಿ ಮೊದಲಾದುವು ವಿಶಿಷ್ಟ ವ್ಯಕ್ತಿಗಳೊಡನೆ ಸಂಬಂಧ ಹೊಂದಿರುವ ನೆಲೆಗಳಾಗಿದ್ದು, ಎಲ್ಲ ವರ್ಗಗಳವರನ್ನೂ ಆಕರ್ಷಿಸುತ್ತಲಿವೆ. ಹಾಗೆಯೇ, ಜಾನಪದ ಜಗತ್ತಿನ ಮಹಿಮಾ ವ್ಯಕ್ತಿಗಳು, ಗ್ರಾಮದೇವತೆಗಳು ಸಹಾ ಎಲ್ಲ ವರ್ಗಗಳ ಭಕ್ತರನ್ನು ಹೊಂದಿರುವುದನ್ನು ಕಾಣುತ್ತೇವೆ.

ಜಾತ್ರೆ, ಉತ್ಸವಗಳಿಂದ ಹೆಸರು ಮಾಡಿರುವ ಎಡೆಗಳನ್ನೂ ಇಲ್ಲಿ ಹೆಸರಿಸಬಹುದು. ಚಿತ್ರದುರ್ಗದ ಬರಗೇರಮ್ಮ-ತಿಪ್ಪಲಗಟ್ಟಮ್ಮರ ಭೇಟಿ ಉತ್ಸವ, ಚಳ್ಳಕೆರೆ ತಾಲ್ಲೂಕಿನ ಗೌರಸಂದ್ರ ಮಾರಮ್ಮಳ ಜಾತ್ರೆ, ಹಿರಿಯೂರು ತಾಲ್ಲೂಕು ವದ್ದೀಕೆರೆಯ ಭೈರವ (ಸಿದ್ಧೇಶ್ವರ)ನ ಜಾತ್ರೆ, ಜಗಳೂರು ತಾಲ್ಲೂಕು ಕೊಣಚಕಲ್ಲುಗುಡ್ಡದ ರಂಗನಾಥಸ್ವಾಮಿ (ಓಬಳದೇವರು)ಯ ಜಾತ್ರೆ, ಹೊಸದುರ್ಗ ತಾಲ್ಲೂಕು ಗವಿರಂಗಾಪುರದ ರಂಗನಾಥಸ್ವಾಮಿ ರಥೋತ್ಸವ, ದಾವಣಗೆರೆ ನಗರದ ಅಧಿದೇವತೆ ದುರ್ಗಮ್ಮಳ ಜಾತ್ರೆ - ಇವು ಕೆಲವು ಪ್ರಮುಖ ಉದಾಹರಣೆಗಳು. ಚಿತ್ರದುರ್ಗ ನಾಯಕ ಅರಸರ ಸಂಬಂಧಿ ಗುಲ್ಯಪ್ಪನಾಯಕ ಮಾಡಿಸಿದ ಹೊಳಲ್ಕೆರೆ ಬೃಹತ್ ಬಯಲು ಗಣಪತಿ ವಿಗ್ರಹವು ಇನ್ನೊಂದು ವಿಶಿಷ್ಟ ಉದಾಹರಣೆ.

ಪರಿಶಿಷ್ಟ ವರ್ಗಗಳವರ ಭಕ್ತಿ, ನಂಬುಗೆಗಳ ಪ್ರತೀಕವಾಗಿ ಈ ದೇವತೆಗಳು ಜಿಲ್ಲೆಯಲ್ಲಿ ಸಾಕಷ್ಟು ಸುದ್ದಿ ಮಾಡುತ್ತಿರುವುದಂತೂ ದಿಟ. ಶಿಷ್ಟ-ಪರಿಶಿಷ್ಟಗಳ ಸಂಘರ್ಷವಿಲ್ಲದಿದ್ದರೂ ಆಚರಣೆಗಳಲ್ಲಿ ಭಕ್ತವೃಂದದ ಸಾಮಾಜಿಕ ಹಿನ್ನೆಲೆಗಳು ಸ್ಪಷ್ಟವಾಗಿ ಒಡೆದು ತೋರುತ್ತವೆ. ಇಂತಹ ಜನಪದ ದೇವತೆಗಳಿಗೆ ಸಂಬಂಧಿಸಿದ ಆಚರಣೆಗಳು ಆಯಾ ಜನಸಮುದಾಯದಲ್ಲಿ ಹುಟ್ಟುಹಾಕಿರುವ ಧಾರ್ಮಿಕ ಕಾರ್ಯನೀತಿಗಳ (policies) ಬಗೆಗೆ ಸೂಕ್ಷ್ಮಾಧ್ಯಯನ ನಡೆಯುವ ಅಗತ್ಯವಿದೆ. ಇದರಿಂದ ಸಮುದಾಯಗಳ ನಡುವೆ ಇವು ಹಾಕಲೆತ್ನಿಸಿರುವ ಸಾಮಾಜಿಕ ಬೆಸುಗೆ ಎಷ್ಟು ಗಟ್ಟಿಯಾದುದೆಂಬುದನ್ನು ಅರಿಯಲು ಸಾಧ್ಯವಾಗುತ್ತದೆ.

# ಕನ್ನಡದ ಮೊದಲ ಬೌದ್ಧ ಕೃತಿಕಾರರು:
## ಒಂದು ಮರುವಿವೇಚನೆ

**ಡಾ. ತಾಳ್ತಜೆ ವಸಂತಕುಮಾರ**

ಕನ್ನಡ ಸಾಹಿತ್ಯದ ಆರಂಭಕಾಲೀನ ಕೃತಿಕಾರರು ಬೌದ್ಧರಿರಬಹುದೆ ಎಂಬ ಒಂದು ಪ್ರಶ್ನೆಯನ್ನೆತ್ತಿಕೊಂಡು ಟಿ.ಎಸ್. ವೆಂಕಣ್ಣಯ್ಯನವರು ಹೂಡಿದ ವಾದವು ಈಗ ಕನ್ನಡ ಸಾಹಿತ್ಯೇತಿಹಾಸದ ವಿದ್ಯಾರ್ಥಿಗಳಿಗೆಲ್ಲ ಪರಿಚಿತವಾದದ್ದು. (ವೆಂಕಣಯ್ಯ, ಟಿ.ಎಸ್. ೧೯೫೮. ಪು. ೧೬-೧೮) ಅವರು ಕರ್ನಾಟಕದಲ್ಲಿ ಬೌದ್ಧಧರ್ಮದ ಪ್ರಸಾರವನ್ನು ಲಕ್ಷಿಸಿ, ದೇಶಭಾಷೆಯಲ್ಲಿ (ಕನ್ನಡದಲ್ಲಿ) ಬೌದ್ಧರು ಕೃತಿಗಳನ್ನು ರಚಿಸಿರಬಹುದು ಮತ್ತು ಅನಂತರದ ಕಾಲಭಾಗದಲ್ಲಿ ಅದು ಅನ್ಯಮತೀಯರಿಂದ ಸಂಪೂರ್ಣವಾಗಿ ನಾಶಹೊಂದಿರಬಹುದು ಎಂಬ ಸಾಧ್ಯತೆಗಳನ್ನು ಸೂಚಿಸಿದರು.

ಚಿದಾನಂದಮೂರ್ತಿಯವರು ಹಿಂದೆಯೆ (೧೯೬೬ ಪು. ೧೧೫-೨೨ ಮತ್ತು ೧೯೭೩ ಪು ೪-೧೫) ಈ ಬಗ್ಗೆ ಚರ್ಚಿಸಿದ್ದು. ಈಚೆಗೆ ಪ್ರತ್ಯೇಕವಾದ ಲೇಖನವೊಂದರಲ್ಲೂ (ಪ್ರಬುದ್ಧ ಕರ್ನಾಟಕ ೬೭-೪, ೧೯೮೭) ಮತ್ತೆ ಪ್ರಶ್ನೆಯೆತ್ತಿದ್ದಾರೆ. ಇದಕ್ಕೆ ಈಗಾಗಲೇ ಸೂಕ್ತ ಪ್ರತಿಕ್ರಿಯೆಯನ್ನು ಈ ಲೇಖಕನು ಕೊಟ್ಟಿರುವುದಿದೆ. (ಪ್ರಬುದ್ಧ ಕರ್ನಾಟಕ ೭೦-೧, ೧೯೮೮)

ಎಂ.ಎಂ. ಕಲಬುರ್ಗಿಯವರು (೧೯೭೩ ಪು ೫೮) ವೆಂಕಣ್ಣಯ್ಯನವರ ವಾದವನ್ನು ಬೆಂಬಲಿಸಿ ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ವೆಂಕಣ್ಣಯ್ಯನವರ ವಾದದ ಬಗೆಗೆ ಇತರರೂ ಚರ್ಚೆಯನ್ನು ನಡೆಸಿದ್ದಿದೆ. (ಸಂಗ್ರಹಕ್ಕಾಗಿ ನೋಡಿ: ನಾಯಕ ಹಾ.ಮಾ(ಸಂ.) ೧೯೭೫. ಪು. ೪೯೯-೫೦೯) ಅವರೆಗಿನ ಎಲ್ಲ ವಾದಗಳನ್ನು ಪರಿಶೀಲಿಸಿ ಟಿ.ವಿ. ವೆಂಕಟಾಚಲ ಶಾಸ್ತ್ರಿಯವರು "ಕರ್ನಾಟಕದಲ್ಲಿ ಬೌದ್ಧಧರ್ಮ ಪ್ರಾಬಲ್ಯ ಕಾಲದಲ್ಲಿ ಜೈನ ಧರ್ಮೀಯರಿಂದ ಮೊದಲೇ ಬೌದ್ಧ ಧರ್ಮೀಯರಾದ ಕವಿಗಳು ಸಾಹಿತ್ಯರಚನೆ ಮಾಡಿದರೆಂಬುದು ಈಗಿನ ಮಟ್ಟಿಗೆ ಒಂದು ಊಹೆ ಅಷ್ಟೇ" (ಅದೇ ಪು. ೫೦೩-೫) ಎಂಬುದಾಗಿ ಹೇಳಿದ್ದಾರೆ.

ಚಿದಾನಂದಮೂರ್ತಿಯವರು ತಮ್ಮ ಲೇಖನದಲ್ಲಿ (ಪ್ರಬುದ್ಧ ಕರ್ನಾಟಕ ೬೭-೪, ೧೯೮೭) ಮೂರು ಮುಖ್ಯವಾದ ಪ್ರಶ್ನೆಗಳನ್ನೆತ್ತಿದ್ದಾರೆ. ಅವೆಂದರೆ: ಬೌದ್ಧಧರ್ಮವು ಕರ್ನಾಟಕದಲ್ಲಿ ಎಷ್ಟು ಪ್ರಬಲವಾಗಿತ್ತು? ಕನ್ನಡದಲ್ಲಿ ಯಾವಾಗ ಸಾಹಿತ್ಯ ರಚನೆಯು ಮೊದಲಾಯಿತು ಮತ್ತು ಒಂದು ಪ್ರದೇಶದಲ್ಲಿ ಒಂದು ಧರ್ಮವು ಪ್ರಚಾರದಲ್ಲಿದ್ದರೆ ಆ ಧರ್ಮದವರು ಆ ಪ್ರದೇಶದ ಭಾಷೆಯಲ್ಲಿ ಕೃತಿರಚನೆ ಮಾಡಿರಲೇಬೇಕೆ?

ಮೊದಲನೆಯ ಪ್ರಶ್ನೆಗೆ ಅವರು ನಕಾರಾತ್ಮಕವಾದ ಉತ್ತರವನ್ನು ಕೊಡುತ್ತಾರೆ. ಆದರೆ,

ಈಗ ಹೆಚ್ಚು ಸ್ಪಷ್ಟವಾಗಿ ತಿಳಿದಿರುವಂತೆ (ತಾಳ್ತಜೆ ವಸಂತಕುಮಾರ, ೧೯೮೮) ಕರ್ನಾಟಕದಲ್ಲಿ ಕ್ರಿಸ್ತಶಕದ ಹಿಂದು-ಮುಂದಿನ ದಿನಗಳಲ್ಲಿ ಬೌದ್ಧಧರ್ಮವು ಸಾಕಷ್ಟು ಜನಪ್ರಿಯವಾಗಿತ್ತು.

ಎರಡನೆಯದಾಗಿ, ಕನ್ನಡದಲ್ಲಿ ಸಾಹಿತ್ಯರಚನೆಯ ಆರಂಭಕಾಲದ ವಿಚಾರ. ಇದು ಇನ್ನೂ ತೆರೆದ ಪ್ರಶ್ನೆಯಾಗಿಯೇ ಇರಬೇಕು ವಿನಾ ಇದಮಿತ್ಥಂ ಎನ್ನಲು ಸಾಧ್ಯವೆನಿಸದು. ಚಿದಾನಂದ ಮೂರ್ತಿಯವರು (೧೯೭೩ ಪು ೪-೧೫) ಏಳನೆಯ ಶತಮಾನದ ಬಳಿಕವಷ್ಟೇ ಕನ್ನಡದಲ್ಲಿ ಸಾಹಿತ್ಯರಚನೆಯು ಆರಂಭವಾಗಿರಬೇಕು ಎನ್ನುತ್ತಾರೆ ಎಂದರೆ, ಬಾದಾಮಿ ಚಾಲುಕ್ಯರ ಕಾಲವನ್ನು ಅವರು ಇದಕ್ಕಾಗಿ ನಿಗದಿಗೊಳಿಸುವ ಪ್ರಯತ್ನವನ್ನು ಮಾಡಿದ್ದಾರೆ. ಆ ಮೂಲಕ ಅವರು "ಬಾದಾಮಿ ಚಾಲುಕ್ಯರ ಕಾಲದಲ್ಲಿ ಬೌದ್ಧ ಧರ್ಮವು ಎಲ್ಲೂ ಪ್ರಬಲವಾಗಿರಲಿಲ್ಲ. ಆ ಕಾಲದಲ್ಲಿ ಬೌದ್ಧರೂ ಜೈನರೂ-ವೈದಿಕರಂತೆ-ಕೃತಿ ರಚನೆಗೆ ಕೈಹಾಕಿದ್ದರೆ, ಮುಂದೆಯೂ ಮುಂದುವರೆದ ಆ ಧರ್ಮದ ಅನುಯಾಯಿಗಳು ಬರೆದಿರಬಹುದಾದ ಕೆಲವು ಕೃತಿಗಳಾದರೂ ದೊರೆಯುತ್ತಿದ್ದವು" ಎನ್ನುತ್ತಾರೆ. ಈ ಮಾತುಗಳನ್ನು ಚರ್ಚಿಸುವ ಅಗತ್ಯವಿದೆ.

ಮೂರನೆಯದಾಗಿ, ಅವರ ಪ್ರಕಾರ ಯಾವುದೇ ಧರ್ಮವು ಪ್ರಚಾರದಲ್ಲಿದ್ದರೂ, ಆ ಧರ್ಮೀಯರು ಆ ಪ್ರದೇಶದ ಭಾಷೆಯಲ್ಲಿ ಸಾಹಿತ್ಯರಚನೆ (ಕೃತಿ ರಚನೆ) ಮಾಡಿಯೇ ಇರುತ್ತಾರೆ ಎಂದು ಕಡ್ಡಾಯವಾಗಿ ಹೇಳಲು ಸಾಧ್ಯವಿಲ್ಲ. ಕಾಳಾಮುಖರೂ ಲಕುಲೀಶ ಪಾಶುಪತರೂ ಕರ್ನಾಟಕದಲ್ಲಿ ವಿಜಯನಗರ ಸಾಮ್ರಾಜ್ಯದವರೆಗೆ ಬಹಳ ಪ್ರಬಲರಾಗಿದ್ದು ನೂರಾರು ದೇವಾಲಯಗಳ ನಿರ್ಮಾಣಕ್ಕೆ ಕಾರಣರಾದರೂ ಅವರು ಕನ್ನಡದಲ್ಲಿ ಏನನ್ನೂ ಬರೆದಿಲ್ಲ. ಕರ್ನಾಟಕದಲ್ಲಿ ನಾಥಪಂಥದ ಅನುಯಾಯಿಗಳು ಇದ್ದರೂ ಅವರೂ ಕನ್ನಡದಲ್ಲಿ ಏನನ್ನೂ ಬರೆದಿಲ್ಲ. ಹದಿಮೂರನೆಯ ಶತಮಾನದಲ್ಲೋ, ಅಥವಾ ಅದಕ್ಕೂ ಸ್ವಲ್ಪ ಮುಂಚೆಯೇ ಇಸ್ಲಾಂ ಕರ್ನಾಟಕಕ್ಕೆ ಬಂದಿದ್ದರೂ, ಆಧುನಿಕ ಕಾಲದವರೆಗೆ ಮುಸ್ಲಿಮರು ಕನ್ನಡದಲ್ಲಿ ಏನೂ ಬರೆಯಲಿಲ್ಲ. ಆದುದರಿಂದ, ಕರ್ನಾಟಕದಲ್ಲಿ ಬೌದ್ಧರಿದ್ದರೂ ಅವರು ಕನ್ನಡದಲ್ಲಿ, ಸಾಹಿತ್ಯ ರಚನೆಯನ್ನು ಮಾಡಿರಲೇಬೇಕೆಂಬ ಊಹೆಯು ದುರ್ಬಲವಾದುದು. ಇದಿಷ್ಟು ಅವರ ವಾದ.

ಅಶೋಕನ ಕಾಲದ ಮಟ್ಟಿಗೆ, ಇವರ ಅಭಿಪ್ರಾಯಗಳು ಸರಿಯಾಗಿವೆ. ಕ್ರಿ.ಪೂ. ೩೦೦ ರಿಂದ ಕ್ರಿ.ಶ. ೩೦೦ರವರೆಗಿನ ಈ ಅವಧಿಯನ್ನು ಕನ್ನಡದ ಸ್ವರೂಪಧಾರಣಾ ಕಾಲ ಎಂಬುದಾಗಿ ತಾತ್ಪೂರ್ತಿಕವಾಗಿ ದ್ರಾವಿಡ ಭಾಷಾ ವಿಜ್ಞಾನಿಗಳು ಒಪ್ಪುತ್ತಾರೆ. ಐತಿಹಾಸಿಕವಾಗಿ ಪರಿಶೀಲಿಸಿದರೆ ಅಲ್ಲಿಯ ತನಕವೂ ಇಲ್ಲಿ ದೊರೆಯುವ ಶಾಸನಗಳೆಲ್ಲವೂ ಪ್ರಾಕೃತ ಭಾಷೆಯಲ್ಲೇ ಇವೆ. ಅಶೋಕನ ಕಾಲಾನಂತರದ ಕರ್ನಾಟಕದ ಇತಿಹಾಸವನ್ನು ಗಮನಿಸಿದರೆ, ಇಲ್ಲಿಯ ಆಡಳಿತವು ಸಾತವಾಹನರಿಗೆ ಸೇರಿದ್ದು. ಆ ಬಳಿಕ ಬನವಾಸಿ ಕೇಂದ್ರಿತವಾದ ಕದಂಬಕುಲವೂ, ತಲಕಾಡು ಕೇಂದ್ರಿತವಾದ ಗಂಗಕುಲವೂ ಆಳಿದ್ದು ತಿಳಿಯುತ್ತದೆ.

ಸಾತವಾಹನರು ವೈದಿಕ ಧರ್ಮಾವಲಂಬಿಗಳಾಗಿದ್ದರು. ಆದರೆ ಬೌದ್ಧರ ಬಗೆಗೆ ಅವರು ಸಹಿಷ್ಣುಗಳಾಗಿದ್ದರು. ಅವರ ಸಾಮಂತರಾಗಿ ಬನವಾಸಿಯಿಂದ ಆಳಿದ ಚುಟುಕುಲದವರಾದರೋ ಬೌದ್ಧರೇ ಆಗಿದ್ದರು. ಇಲ್ಲಿಗೆ ಕರ್ನಾಟಕದಲ್ಲಿ, ಬೌದ್ಧಪರವಾದ ರಾಜಕೀಯ ಶಕ್ತಿಯು ನಿಂತು ಹೋಗುತ್ತದೆ. ಆ ಒಂದು ಕಾಲಖಂಡದಲ್ಲಿ ಕರ್ನಾಟಕದಲ್ಲಿ ದೊರೆಯುವ ಶಾಸನಗಳೆಲ್ಲವೂ ಪ್ರಾಕೃತದಲ್ಲಿವೆ (ಉದಾ: ಅಶೋಕನ ಶಾಸನಗಳು, ಬನವಾಸಿಯ ನಾಗವಿಗ್ರಹದ ಸುತ್ತ ಬರೆದಿರುವ ಶಾಸನ, ಮಳವಳ್ಳಿ ಶಾಸನ, ಸನ್ನತಿಯ ಶಾಸನಗಳು, ಚಂದ್ರವಳ್ಳಿ ಶಾಸನ) ಇವುಗಳು ಬಹುಪಾಲು ಬೌದ್ಧ ವಿಷಯಕಗಳಾಗಿವೆ. ಹಾಗಾಗಿ ಚಿದಾನಂದಮೂರ್ತಿಯವರು ಹೇಳುವ "ಶಾಸನಗಳ

ಸಂಖ್ಯೆಯನ್ನು ನೋಡಿ ಹೇಳುವುದಾದರೆ, ಅದು ಬಹುಹಿಂದಿನಿಂದಲೂ ಅಲ್ಪಸಂಖ್ಯಾತರ ಮತವಾಗಿದ್ದಿತೆಂದು ಕಾಣುತ್ತದೆ" ಎಂಬ ಮಾತು ನಿಲ್ಲುವುದಿಲ್ಲ. ಏಕೆಂದರೆ, ಶಾಸನಗಳೇ ತುಂಬ ಅಪೂರ್ವವಾಗಿದ್ದು, ಅಂಥವರಲ್ಲೂ ಸಿಗುವ ಶಾಸನಗಳಲ್ಲಿ ಸಿಂಹಪಾಲು ಬೌದ್ಧಧರ್ಮಪರವಾಗಿದ್ದಾಗ, ಈ ಮಾತನ್ನು ಒಪ್ಪಲು ಸಾಧ್ಯವಾಗುವುದಿಲ್ಲ.

ಧರ್ಮವೊಂದರ ಜನಪ್ರಿಯತೆಯನ್ನು ಶಾಸನಗಳ ಆಧಾರದಿಂದ ನಿರ್ಣಯಿಸುವ ವಿಧಾನವಾದರೂ ಸರಿಯೆನಿಸದು. ಏಕೆಂದರೆ, ಶಾಸನಗಳಲ್ಲಿ ರಾಜ ಸಮ್ಮತವಾದ ವಸ್ತುವಿನ್ಯಾಸವಿರುತ್ತದೆಯೇ ವಿನಾ ಜನಸಾಮಾನ್ಯರ ಆಶೋತ್ತರಗಳಲ್ಲ. ರಾಜಶಕ್ತಿಯು ಒಲಿದ ಭಾಷೆ-ಧರ್ಮ-ಸಂಸ್ಕೃತಿಗಳ ಚಿತ್ರಣವಷ್ಟೇ ಅಲ್ಲ. ಹಾಗೆಂದು ಶಾಸನಗಳ ಅಧಿಕೃತತೆಯನ್ನು ಅಲ್ಲಗಳೆಯುವುದಾಗಲಿ, ಅವುಗಳ ಐತಿಹಾಸಿಕ ಸಾಂಸ್ಕೃತಿಕ ಮಹತ್ವವನ್ನು ನಿರಾಕರಿಸುವುದಾಗಲಿ ಇಲ್ಲಿಯ ಉದ್ದೇಶವಲ್ಲ. ಯಾವುದೇ ಒಂದು ಐತಿಹಾಸಿಕ ವಿಚಾರದಲ್ಲಿ ನಮಗೆ ಶಾಸನಗಳು ಕೊಡುವ ಚಿತ್ರಗಳು ಏಕಪಕ್ಷೀಯವಿರಬಹುದು ಎಂಬುದಷ್ಟೇ ನನ್ನ ಅಭಿಪ್ರಾಯವಾಗಿದೆ.

ಮುಗಳಿಯವರು ಹೇಳುವ, "ಸಾಹಿತಿಗಳಲ್ಲದ ಪ್ರಚಾರಕ ಸನ್ಯಾಸಿಗಳು ಗ್ರಂಥರಚನೆಗೆ ಕೈ ಹಾಕಲಾರರು. ಅಥವಾ ರಚಿಸಿದ್ದರೆ ಒಂದಾದರೂ ಕೃತಿ ಇದುತನಕ ಸಿಗದೆ ಏಕೆ ಉಳಿಯಿತು?" (ಮುಗಳಿ, ರಂ.ಶ್ರೀ. ೧೯೭೧. ಪು. ೨೮-೯) ಎಂಬ ಮಾತುಗಳೂ ಗಟ್ಟಿಯಾದ ಆಧಾರದಲ್ಲಿ ನೆಲೆನಿಂತಿಲ್ಲ.

ಬೌದ್ಧ ಭಿಕ್ಷುಗಳು ಕೃತಿಗಳ ರಚನೆಯನ್ನು ಮಾಡಿದ ಅನೇಕ ಉದಾಹರಣೆಗಳಿವೆ. ಸಂಸ್ಕೃತದ ಸಾಹಿತ್ಯೇತಿಹಾಸದಲ್ಲಿ ಬೌದ್ಧಗ್ರಂಥಗಳ ದೊಡ್ಡ ಸಮುದಾಯವೇ ಇದೆ. ನಾಗಾರ್ಜುನನು ಕ್ರಿ.ಶ. ಒಂದನೆಯ ಶತಮಾನದ ಪ್ರಸಿದ್ಧ ಕೃತಿಕಾರನಾಗಿದ್ದಾನೆ. ಆತನ 'ಮಾಧ್ಯಮಿಕ ಕಾರಿಕಾ' ಬೌದ್ಧ ತತ್ವ ಕೃತಿಯಾದರೆ. 'ಸುಹೃಲ್ಲೇಖ' ಎಂಬುದು ಸಂಸ್ಕೃತದಲ್ಲಿರುವ ಒಂದು ಸೊಗಸಾದ ಪತ್ರಸಾಹಿತ್ಯವಾಗಿದೆ. ಆತನ ಸಮಕಾಲೀನನಾಗಿದ್ದ ಸಾತವಾಹನ ದೊರೆಗೆ ಜೀವನ ಸಂಹಿತೆಯನ್ನು ತಿಳಿಸಿ ಹೇಳಲು ನಾಗಾರ್ಜುನನು ಬರೆದನೆನ್ನಲಾದ ಪತ್ರವದು. ಆತನ ಬಳಿಕ ಆರ್ಯದೇವ, ಅಸಂಗ, ವಸುಬಂಧು, ದಿಙ್ನಾಗ, ಬುದ್ಧಘೋಷ ಇವರೆಲ್ಲರೂ ಬೌದ್ಧ ಭಿಕ್ಷುಗಳಾಗಿದ್ದೇ ಕೃತಿರಚನೆಯನ್ನು ಮಾಡಿದವರಾಗಿದ್ದಾರೆ.

ನಮ್ಮ ನೆರೆಯ ತಮಿಳುನಾಡಿನ ಸಾಹಿತ್ಯೇತಿಹಾಸವನ್ನು ಗಮನಿಸಿದರೂ. ಅಲ್ಲಿಯ ಮೊದಲ ಮಹಾಕಾವ್ಯಗಳಲ್ಲಿ ಒಂದಾದ 'ಮಣಿಮೇಖಲೈ'ಯನ್ನು ರಚಿಸಿದಾತ ಚಾತ್ತನಾರ್ ಎಂಬ ಬೌದ್ಧಕವಿ, ಭಿಕ್ಷು. ಈ ಕೃತಿಯ ವಸ್ತುವೂ ಬೌದ್ಧ ಸಂಬಂಧಿಯಾದುದೇ ಆಗಿದೆ.

ಎರಡನೆಯದಾಗಿ, ಚಿದಾನಂದಮೂರ್ತಿಯವರು ಎತ್ತುವ ಪ್ರಶ್ನೆಯೆಂದರೆ - ಒಂದೇ ಒಂದು ಬೌದ್ಧಕೃತಿಯೂ ಇಂದು ಉಪಲಬ್ಧವಾಗಿಲ್ಲವೇಕೆ ಎಂಬುದು. ಇದಕ್ಕೆ ಉತ್ತರವೂ ಸ್ಪಷ್ಟವೇ ಇದೆ. ಹಿಂದೆಯೇ ವೆಂಕಣ್ಣಯ್ಯನವರು, ಈಚೆಗೆ ಕಲಬುರ್ಗಿಯವರು ಸರಿಯಾಗಿಯೇ ಹೇಳಿರುವಂತೆ, ಇತರ ಸಮಯಾಚಾರಗಳಿಗೆ ಬೌದ್ಧಧರ್ಮದ ವಿನಾಶವೇ ವ್ರತವಾಗಿ ಪರಿಣಮಿಸಿದುದರಿಂದ ಆ ಸಾಹಿತ್ಯವೂ ವಿಲವಾಯಿತು.

ಇಲ್ಲೇ ಸ್ಪಷ್ಟಪಡಿಸಿಕೊಳ್ಳಬೇಕಾದ ಒಂದು ಮುಖ್ಯ ಅಂಶವಿದೆ. ವೆಂಕಣ್ಣಯ್ಯನವರು ತಮ್ಮ ವಾದವಲ್ಲಿ, "ಬೌದ್ಧಮತ ಪ್ರಸಾರಕ್ಕೆಂದು ಅಶೋಕನಿಂದ ಕಳುಹಿಸಲ್ಪಟ್ಟ ಧರ್ಮ ಪ್ರಸಾರಕರು ತಮ್ಮ ಮತದ ವಿಷಯವನ್ನು ಕನ್ನಡನಾಡಿನ ಜನಸಾಮಾನ್ಯರಲ್ಲಿ ಹರಡುವುದಕ್ಕಾಗಿ ಕನ್ನಡಭಾಷೆಯನ್ನು

ಕಲಿತಿರಬೇಕು, ಅದರಲ್ಲಿ ಗ್ರಂಥಗಳನ್ನು ರಚಿಸಿರಬೇಕು" ಎಂದು ಹೇಳಿದ ಮಾತೇ ಅನಂತರದ ಎಲ್ಲ ಗೊಂದಲಗಳಿಗೆ ಮೂಲವಾಯಿತು. ವೆಂಕಣ್ಣಯ್ಯನವರು ಹೇಳಿರುವಂತೆ ಆಗಿರುವ ಸಾಧ್ಯತೆಯೇ ಕಡಮೆಯಾಗಿದೆ. ಏಕೆಂದರೆ ಕ್ರಿ.ಪೂ. ೩ನೆಯ ಶತಮಾನದಲ್ಲಿ ಪ್ರಾಯಶಃ ಕನ್ನಡವು ವ್ಯವಹಾರದಲ್ಲಿದ್ದಿರುವುದು ಶಕ್ಯವೆನಿಸುವುದಿಲ್ಲ. ಅಥವಾ ಆಡುಭಾಷೆಯಾಗಿ ಇದ್ದಿರಬಹುದಾದರೂ, ಆಗಿನ್ನೂ ಗ್ರಂಥನಿರ್ಮಾಣವು ಖಂಡಿತಕ್ಕೂ ಪ್ರಾರಂಭವಾಗಿದ್ದಿರಲಾರದು.

ಎಂದರೆ, ಇಲ್ಲಿಯೇ ವೆಂಕಣ್ಣಯ್ಯನವರ ವಾದಕ್ಕೆ ಒಂದು ತಿದ್ದುಪಡಿಯನ್ನು ಸೂಚಿಸಬೇಕಾಗಿದೆ. ಅದೆಂದರೆ, ಅವರೆನ್ನುವಂತೆ, ಕ್ರಿ.ಪೂ. ೨೫೦ರ ಹೊತ್ತಿಗೆ ಇಲ್ಲಿಗೆ ಬಂದ ಬೌದ್ಧಮತ ಪ್ರಸಾರಕರು ಇಲ್ಲಿಯ ಆಗಣ ಆಡುನುಡಿಯಲ್ಲಿ ಉಪದೇಶಿಸಿರಬಹುದು. ಆದರೆ ಕೃತಿರಚನೆಯ ಕಾಲವನ್ನು ಸುಮಾರು ಕ್ರಿ.ಶ. ೬೦೦ರ ಬಳಿಕವಷ್ಟೆ ಎಣಿಸಬೇಕಾಗುತ್ತದೆ.

ಬೌದ್ಧಧರ್ಮದ ಇತಿಹಾಸದಿಂದಲೂ ಸ್ಪಷ್ಟಪಡುವಂತೆ, ಕರ್ನಾಟಕಕ್ಕೆ ಕ್ರಿಸ್ತಪೂರ್ವ ಕಾಲಕ್ಕೆ ಬೀಸಿದ ಹೀನಯಾನದ ಗಾಳಿಯು ಇಲ್ಲಿ ಕ್ರಿಸ್ತಶಕದ ಮೊದಲಮೊದಲಲ್ಲೇ ಕ್ಷೀಣಿಸಿದೆ. ಆದರೆ ಮಹಾಯಾನದ ಮಾತೆಂದರೆ ಹಾಗಲ್ಲ. ಅದು ಇಲ್ಲಿ ಇದ್ದುದಕ್ಕೆ ಸನ್ನತಿಯ, ಚಂದ್ರವಳ್ಳಿಯ ಆಧಾರಗಳು ಸಾಕಾಗುತ್ತವೆ. ಸನ್ನತಿಯ ಈವರೆಗಣ ಉಪಲಬ್ಧ ಶಾಸನಗಳನ್ನೆಲ್ಲ ಸಂಗ್ರಹಿಸಿ, ಪ್ರಕಟಿಸಿದ ಐ.ಕೆ. ಶರ್ಮಾ (೧೯೯೩) ಅವರು ಈ ಬಗೆಗೆ ಖಚಿತವಾಗಿ ವಿವೇಚಿಸಿದ್ದಾರೆ. ಮಹಾಯಾನಿಗಳೂ ಸಾಹಿತ್ಯರಚನೆಯಲ್ಲಿ ವಿಶೇಷವಾದ ಆಸಕ್ತಿಯನ್ನು ತೋರಿದ್ದಾರೆ. ಅವರ ಮೊದಲ ಆಯ್ಕೆಯು ಸಂಸ್ಕೃತವಾಗಿದ್ದರೂ, ಅವರು ದೇಶೀಭಾಷೆಗಳಲ್ಲಿಯೂ ಕೃತಿರಚನೆ ಮಾಡಿರುವ ಸಾಧ್ಯತೆಯಿದೆ.

ಇನ್ನು ವೆಂಕಟಾಚಲ ಶಾಸ್ತ್ರಿಯವರು ಹೇಳುವಂತೆ, "ಮೌರ್ಯಸಾತವಾಹನರ ಕಾಲದಲ್ಲಿ ಕನ್ನಡಭಾಷೆಯ ಅಸ್ತಿತ್ವದ ಕುರುಹುಗಳು ಅಸ್ಪಷ್ಟವಾಗಿ ಮಾತ್ರ ಗೋಚರಿಸುತ್ತಿರುವುದನ್ನು ನೋಡಿದರೆ. ಸಾಹಿತ್ಯದ ಅಸ್ತಿತ್ವವನ್ನು ಸಂದೇಹಿಸಬೇಕಾಗುತ್ತದೆ" ಎಂಬ ಮಾತೇನೋ ಸರಿಯಾದುದು. ಮೌರ್ಯ - ಸಾತವಾಹನರ ಕಾಲದಲ್ಲಿ ಕನ್ನಡವು ಇನ್ನೂ ರೂಪವನ್ನು ತಾಳುತ್ತಿತ್ತಷ್ಟೇ. ಆ ಬಳಿಕದ ಕಾಲದಲ್ಲಿ ಎಂದರೆ ಕ್ರಿ.ಶ. ಸುಮಾರು ೩೦೦ರಿಂದೀಚೆಗೆ, ಸುಮಾರು ೧೦ನೆಯ ಶತಮಾನದ ತನಕವೂ ಇಲ್ಲಿ ಬೌದ್ಧಧರ್ಮವು ತಕ್ಕಮಟ್ಟಿನ ಪ್ರಭಾವದಿಂದಲೇ ಇದ್ದ ಕಾರಣ, ಈ ಅವಧಿಯಲ್ಲಿ., ಎಂದರೆ ಕ್ರಿ.ಶ. ೩೦೦ರಿಂದ ೧೦೦೦ದ ತನಕದ ಏಳುನೂರು ವರ್ಷಗಳಲ್ಲಿ. ಬೌದ್ಧರು ಒಂದೇ ಒಂದು ಕೃತಿಯನ್ನೂ ರಚಿಸಿಲ್ಲವೆನ್ನುವುದನ್ನು ಒಪ್ಪುವುದು ಕಷ್ಟವಾಗುತ್ತದೆ.

ಈ ಚರ್ಚೆಯ ಬಳಿಕ, ಆ ಪ್ರಾಚೀನ ಕಾಲದಲ್ಲಿ ಕನ್ನಡದಲ್ಲಿ ಬೌದ್ಧರು ಕೃತಿರಚನೆ ಮಾಡಿರಬಹುದೆಂಬುದಕ್ಕೆ ವೆಂಕಣ್ಣಯ್ಯನವರ ವಾದದ ಬಹುಭಾಗವನ್ನು (ಕ್ರಿ.ಶ. ೩೦೦ಕ್ಕಿಂತ ಹಿಂದೆಯೇ ಕೃತಿ ರಚಿಸಿರಬಹುದೆಂಬ ಅಂಶವನ್ನು ಬಿಟ್ಟು). ಒಪ್ಪಿಕೊಂಡು, ಹೆಚ್ಚಿನ ಕೆಲವು ಆಧಾರಗಳನ್ನು ಈ ಕೆಳಗಿನಂತೆ ಕೊಡುತ್ತೇನೆ. ಇವನ್ನು ಪರಿಗಣಿಸುವಾಗ, ವೆಂಕಣ್ಣಯ್ಯನವರು ಹೇಳುವುದರ ಮುಂದುವರಿಕೆ ಎಂದೇ ಭಾವಿಸಿಕೊಳ್ಳಬೇಕು.

ಕವಿರಾಜಮಾರ್ಗದಲ್ಲಿ ಹೇಳುವ ಆ ಕಾಲದ ಅಥವಾ ಅದಕ್ಕಿಂತ ಹಿಂದಿನ ಕೃತಿಕಾರರಲ್ಲಿ ಕೆಲವರಾದರೂ ಬೌದ್ಧರಾಗಿದ್ದುದು ನಿಚ್ಚಳವಾಗಿದೆ. ಕವಿರಾಜಮಾರ್ಗದ ಆ ಪದ್ಯಗಳು -

ವಿಮಳೋದಯ ನಾಗಾರ್ಜುನ
ಸಮೇತ ಜಯಬಂಧು ದುರ್ವಿನೀತಾದಿಗಳೀ
ಕ್ರಮದೊಳ್ ನೆಗಳ್ದ ಗದ್ಯಾ
ಶ್ರಮಪದ ಗುರುತಾ ಪ್ರತೀತಿಯಂ ಕೈಕೊಂಡರ್

(ಕ.ರಾ. ಮಾರ್ಗ I-೭೯)

ಮತ್ತು

ಪರಮ ಶ್ರೀವಿಜಯ ಕವೀ
ಶ್ವರ ಪಂಡಿತ ಚಂದ್ರಲೋಕಪಾಲಾದಿಗಳಾ
ನಿರತಿಶಯ ವಸ್ತು ವಿಸ್ತರ
ವಿರಚನೆ ಲಕ್ಷ್ಮಂ ತದಾದ್ಯ ಕಾವ್ಯಕ್ಕೆಂದುಂ.

(I-೩)

ಕವಿರಾಜಮಾರ್ಗವು ಹೇಳುವ ಪ್ರಕಾರ, ಈ ಗದ್ಯಪದ್ಯ ಕವಿಗಳು ಗದ್ಯಕಥೆ ಹಾಗೂ ಪದ್ಯಮಾಧ್ಯಮದಲ್ಲಿ ಕೃತಿರಚನೆ ಮಾಡಿದವರು. ಆ ಗದ್ಯಕಥೆಯಾದರೋ 'ಹರ್ಷಚರಿತ-ಕಾದಂಬರಿ'ಗಳಂತೆ ಶ್ರೇಷ್ಠವಾದುದು. 'ಲೌಕಿಕ ಸಾಮಯಿಕಾದಿ ವರ್ಣನಾನಿರ್ಣಿಕ್ತ ಪ್ರಕಟತರ ವಸ್ತು ವಿಸ್ತರದ' ಕೃತಿಗಳು. ಚಿರಂತನ ಆಚಾರ್ಯರಿಂದ ಮನ್ನಿಸಲ್ಪಟ್ಟ ಇಂಥವರೇ ಕವಿರಾಜ ಮಾರ್ಗಕಾರನಿಗೂ ಸನ್ಮಾನ್ಯರು. ಆದರೆ ಅಚ್ಚರಿಯ ಸಂಗತಿಯೆಂದರೆ, ಆ ಬಳಿಕದ ಕನ್ನಡ ಕವಿಗಳು ಇವರನ್ನು ಸಂಪೂರ್ಣವಾಗಿ ಮರೆತುದು. ಈ ಅಂಶವು ಕುತೂಹಲವನ್ನು ಹುಟ್ಟಿಸುತ್ತದೆ. ಒಬ್ಬ ಶ್ರೀವಿಜಯನ ಹೆಸರನ್ನು ಅನಂತರದ ೧೦ನೆಯ ಶತಮಾನದ ಕವಿಗಳಾದ ಮೂರನೆಯ ಮಂಗರಸ ಮತ್ತು ದೊಡ್ಡಯ್ಯ ಇಬ್ಬರೂ ಹೇಳಿದ್ದು. ಆತ 'ಚಂದ್ರಪ್ರಭ ಪುರಾಣ'ದ ರಚಯಿತನೆಂಬುದು ಅಲ್ಲಿ ಉಕ್ತವಾಗಿದೆ. ಈ ಶ್ರೀವಿಜಯವೇ ಕವಿರಾಜಮಾರ್ಗೋಕ್ತ ಶ್ರೀವಿಜಯನೆಂಬುದು ಇನ್ನೂ ನಿರ್ಧಾರವಾಗಿಲ್ಲ. ಸಮಂತಭದ್ರನೇ ಶ್ರೀವಿಜಯ ಎಂಬ ಒಂದು ಅಭಿಪ್ರಾಯವೂ ಬಂದಿದ್ದರೂ ಅದು ಇನ್ನೂ ಊಹೆಯಾಗಿಯೇ ಉಳಿದಿದೆ. ಮುಗಳಿಯವರ ಪ್ರಕಾರ, ಚಂದ್ರಪ್ರಭ ಪುರಾಣದ ಶ್ರೀವಿಜಯನೇ ಕವಿರಾಜಮಾರ್ಗೋಕ್ತ ವ್ಯಕ್ತಿಯಾದಲ್ಲಿ ಆತನ ಕಾಲವು ೯ನೆಯ ಶತಮಾನಕ್ಕೆ ಸಲ್ಲುತ್ತದೆ. ಅಂತೂ ಈತನನ್ನು ಹೊರತುಪಡಿಸಿ, ಉಳಿದ ಯಾರನ್ನೂ ಅನಂತರದ ಕನ್ನಡದ ಕವಿಗಳು ಸ್ಮರಿಸಿಯೇ ಇಲ್ಲ. ಈ ನಿಗೂಢ ಮೌನವೇ ನಮಗೆ ಒಂದು ಸಾಹಿತ್ಯಿಕ ಪಿತೂರಿಯಾಗಿ ಕಾಣಿಸುತ್ತದೆ.

ವೆಂಕಣ್ಣಯ್ಯನವರು ಸೂಚನೆಯನ್ನು ಮಾತ್ರ ಮಾಡಿ ಅಲ್ಲಿಗೇ ನಿಲ್ಲಿಸಿದ ಇನ್ನೊಂದು ಅಂಶವಿದೆ. ನೆರೆಯ ತೆಲುಗಿನಲ್ಲಿ ಇಂಥದೇ ಪರಿಸ್ಥಿತಿಯು ಜೈನವಾಙ್ಮಯಕ್ಕೆ ಬಂದ ಬಗೆಗೆ ಅವರು ಹೇಳುತ್ತಾರೆ. ಅವರ ವಾದಕ್ಕೆ ಮಾರಕವಾಗುವ ಇನ್ನೂ ಕೆಲವು ದಾಖಲೆಗಳಿವೆ.

ತಮಿಳು ಸಾಹಿತ್ಯೇತಿಹಾಸದಲ್ಲಿ ಪ್ರಾಚೀನಕಾಲದಲ್ಲಿ ಬೌದ್ಧಕಾವ್ಯಗಳಿದ್ದುದು ತಿಳಿಯುತ್ತದೆ. ಇಂದು ಅವುಗಳ ಪೈಕಿ ಉಪಲಬ್ಧವಿರುವುದು 'ಮಣಿಮೇಖಲೈ' ಮಾತ್ರವೇ. ಆದರೆ ಇದೊಂದೇ ಅಲ್ಲದೆ, ಇನ್ನೂ ಕೆಲವು ಬೌದ್ಧಕಾವ್ಯಗಳು ಅಲ್ಲಿದ್ದುವು ನಷ್ಟವಾಗಿವೆ. ಉದಾಹರಣೆಗೆ, 'ಜೀವಕ ಚಿಂತಾಮಣಿ'. ಇದು ಪ್ರಾಯಃ ಬೌದ್ಧ ಭಿಷಗ್ವರ ಜೀವಕನ ಕಥೆಯಿದ್ದೀತು. ಇಂದು ಇದು ದೊರಕುವುದಿಲ್ಲ. ಅಷ್ಟೇ ಅಲ್ಲ, ಅಲ್ಲಿಯಾದರೂ ಅನಂತರದ ವೈಷ್ಣವ-ಶೈವ ಕವಿಗಳು ಈ ಕೃತಿಗಳ ಹೆಸರನ್ನೇ ಎತ್ತುವುದಿಲ್ಲ! ತಮಿಳುನಾಡಿಗೆ, ಆಂಧ್ರಕ್ಕೆ ಒದಗಿದ ಸ್ಥಿತಿಯೇ ಕನ್ನಡದ

ಮಟ್ಟಿಗೂ ಏಕೆ ಆಗಿದ್ದಿರಲಾರದು? ಪರ ಮತದ ಖಂಡನೆಯ ಭರದಲ್ಲಿ ಅವರ ವಾಙ್ಮಯವನ್ನು ಅಗ್ನಿಗೆ ಅರ್ಪಿಸುವಷ್ಟರ 'ಅತಿ'ಗೆ ಹೋಗಿರಲು ತೀರಾ ಸಾಧ್ಯವಿದೆ. ಲೋಕಾಯತ ಸಿದ್ಧಾಂತಾದಿ ನಾಸ್ತಿಕ ವಿಚಾರಧಾರೆಗೆ ಒದಗಿದ ಈ ಗತಿಯು ನಮ್ಮ ಕಣ್ಣನ್ನು ತೆರೆಸಬೇಕು.

ಕವಿರಾಜಮಾರ್ಗದ ಪದ್ಯವೊಂದರಲ್ಲಿ (I-೨೬) ಹರ್ಷಚರಿತ, ಕಾದಂಬರಿಗಳನ್ನು - ಅವುಗಳಲ್ಲಿ ಒಂದು ಜೀವನ ಚರಿತ್ರೆ, ಇನ್ನೊಂದು ಕಾಲ್ಪನಿಕ ಕೃತಿ - ಹೇಳುತ್ತಲೇ ಆ ಬಳಿಕ ವಿಮಳೋದಯಾದಿಗಳನ್ನು (I-೨೯) ಹೇಳಿದೆ. ಅಂತೆಯೇ ಪದ್ಯ I-೩೧ರಲ್ಲಿ ಸಂಸ್ಕೃತ ಕವಿಗಳನ್ನು ಹೆಸರಿಸಿ ಬಳಿಕ ಕನ್ನಡಿಗರನ್ನು ಹೇಳಿದೆ ಎಂದರೆ ಅರ್ಥ ಇಷ್ಟೇ - ಆತ ಕೇವಲ ಜೈನ ಕವಿಗಳನ್ನು, ಕಾವ್ಯಗಳನ್ನು ಲಕ್ಷ್ಯದಲ್ಲಿಟ್ಟುಕೊಂಡಿಲ್ಲ. ಸಾಹಿತ್ಯಿಕ ಶ್ರೇಷ್ಠತೆಯೇ ಆತನ ಮಾನದಂಡವಿದ್ದಂತಿದೆ. ಎಂದ ಬಳಿಕ ಆತ ಹೇಳುವ ಇವರಲ್ಲಿ ಕೆಲವರಾದರೂ ಬೌದ್ಧರೇಕಿರಬಾರದು? ಇದು ಇಲ್ಲಿಯ ಪ್ರಶ್ನೆಯಾಗಿದೆ.

ಚಿದಾನಂದಮೂರ್ತಿಯವರು ಎತ್ತುವ ಇನ್ನೊಂದು ಸಮಸ್ಯೆ ಎಂದರೆ, "ಯಾವುದೇ ಧರ್ಮ ಪ್ರಚಾರದಲ್ಲಿದ್ದರೂ, ಆ ಧರ್ಮೀಯರು ಆ ಪ್ರದೇಶದ ಭಾಷೆಯಲ್ಲಿ ಸಾಹಿತ್ಯ (ಕೃತಿ) ರಚನೆ ಮಾಡಿಯೇ ಇರುತ್ತಾರೆ ಎಂದು ಕಡ್ಡಾಯವಾಗಿ ಹೇಳಲು ಸಾಧ್ಯವಿಲ್ಲ" ಎಂಬುದು. ಇದಕ್ಕೆ ಅವರು ಕಾಳಾಮುಖರನ್ನು, ಲಕುಲೀಶ ಪಾಶುಪತರನ್ನು ಮತ್ತು ನಾಥಪಂಥದ ಅನುಯಾಯಿಗಳನ್ನು ಉದಾಹರಿಸಿ, ಅವರು ಇಲ್ಲಿ ಪ್ರಬಲರಾಗಿದ್ದರೂ ಕನ್ನಡದಲ್ಲಿ ಏನೂ ಬರೆದಿಲ್ಲ ಎನ್ನುತ್ತಾರೆ. ಲಕುಲೀಶ ಪಾಶುಪತಾದಿಗಳು ಮೂಲತಃ ಶೈವಧರ್ಮದ ಶಾಖೆಗಳೇ ಆಗಿವೆ. ಅವುಗಳು ಸಂಪ್ರದಾಯವನ್ನು ಮೀರಲಿಲ್ಲ. ವೈದಿಕ ಧರ್ಮಾನುಯಾಯಿಗಳಾದರೂ ಇದೇ ಜಾಡನ್ನು ಅನುಸರಿಸಿದ್ದಾರೆ. ಮುಂದೆ ವೀರಶೈವ ಮತ್ತು ಹರಿದಾಸ ಪರಂಪರೆಯಲ್ಲಿ ಮಾತ್ರ ಜನಪರ ಧೋರಣೆ, ಪ್ರಾದೇಶಿಕ ಭಾಷೆಗಳ ಬಳಕೆಗಳು ಕಾಣಿಸಿಕೊಂಡವು.

ಬೌದ್ಧಧರ್ಮಕ್ಕೂ ಈ ಮೇಲಿನ ಮತಗಳಿಗೂ ಮೂಲತಃ ಅಂತರವಿರುವುದು ಇಲ್ಲಿಯೇ. ಬೌದ್ಧಧರ್ಮವು (ಜೈನಧರ್ಮವು ಸಹ) ಜನಪರವಾಗಿಯೇ ಬೆಳೆದುದು. ಅಲ್ಲಲ್ಲಿಯ ಪ್ರಾದೇಶಿಕ ಭಾಷೆಗಳಲ್ಲಿಯೇ ಅದು ವ್ಯವಹರಿಸಿತು. ಈ ಮಾತು ಭಾರತೀಯ ಬೌದ್ಧಧರ್ಮಕ್ಕಷ್ಟೇ ಅಲ್ಲ, ಹೊರ ರಾಷ್ಟ್ರಗಳಿಗೆ ಪ್ರಸರಿಸಿದ ಸಂದರ್ಭಗಳಿಗೂ ಅನ್ವಯಿಸುತ್ತದೆ. ಸಿಂಹಳೀ, ಬರ್ಮೀ, ಚೀನೀ, ಜಪಾನೀ ಭಾಷೆಗಳಲ್ಲಿ ಪ್ರಾಚೀನ ಬೌದ್ಧಗ್ರಂಥಗಳು ಉಪಲಬ್ಧವಿವೆ. ಪಾಲೀಭಾಷೆಯ ಅನುವಾದಗಳಷ್ಟೇ ಅಲ್ಲದೆ ಸ್ವತಂತ್ರ ಕೃತಿ ಶ್ರೇಣಿಗಳೂ ಇವೆ. ಈ ಮೂಲಲಕ್ಷಣವು ಕರ್ನಾಟಕದ ಮಟ್ಟಿಗೆ ಏಕೆ ಅನ್ವಯವಾಗದು?

ಇನ್ನೊಂದು ಮಾತೆಂದರೆ, ಮಹಾಯಾನ ಮತ್ತು ಮಂತ್ರಯಾನ (ವಜ್ರಯಾನ)ಗಳಲ್ಲಿ ಸಾಕಷ್ಟು ಅಂತರವಿದ್ದು, ಬೌದ್ಧ ಮಹಾಯಾನ ಸಂಪ್ರದಾಯವಂತೂ ಸಮಾಜದ ಭಿನ್ನಸ್ತರಗಳನ್ನು ತನ್ನತ್ತ ಆಕರ್ಷಿಸಿಕೊಂಡುದಕ್ಕೆ ಸಾಕ್ಷ್ಯಗಳಿವೆ. 'ಹೀನಯಾನ'ದಲ್ಲೂ ಉಪಾಸಕರಿದ್ದು ಇವರು ಗೃಹಸ್ಥರಿದ್ದರು.

ಆದುದರಿಂದ, "ಬೌದ್ಧ ವಿದ್ವಾಂಸರು ಕನ್ನಡದಲ್ಲಿ ಗ್ರಂಥರಚನೆಗಾಗಲೀ, ಸಾಹಿತ್ಯ ರಚನೆಗಾಗಲೀ ಎಂದೂ ಯತ್ನಿಸಲಿಲ್ಲ ಎಂದು ಸದ್ಯಕ್ಕೆ ಖಚಿತವಾಗಿ ಹೇಳಬಹುದಾಗಿದೆ" ಎನ್ನುವ ಚಿದಾನಂದ ಮೂರ್ತಿಯವರು ಮಾತುಗಳನ್ನು ಒಪ್ಪುವುದು ಕಷ್ಟವಾಗುತ್ತದೆ. ಅನುಮಾನಗಳನ್ನು (inferences) ಆಧರಿಸಿದ ಮಾತುಗಳು ಸಂಶೋಧನೆಯಲ್ಲಿ ಅಪರಿಚಿತಗಳೇನಲ್ಲವಲ್ಲ! ಹಾಗಾಗಿ,

"ಬಹುಶಃ ಬೌದ್ಧರೇ ಕನ್ನಡ ಭಾಷೆಗೆ ಆದಿಕವಿಗಳು" ಎನ್ನುವ ವೆಂಕಣ್ಣಯ್ಯನವರ ಮಾತುಗಳನ್ನು ಕೇವಲ ಅವುಗಳ ಆಕರ್ಷಣೆಗಾಗಿಯಷ್ಟೇ ಅಲ್ಲ, ತೆರೆದ ಅನುಮಾನ (open inferences)ವೆಂದೇ ಇಟ್ಟುಕೊಳ್ಳುವುದು ಸರಿಯೆಂದು ನನಗೆನಿಸುತ್ತದೆ.

## ಉಲ್ಲೇಖ ಸೂಚಿ


ಕಲಬುರ್ಗಿ, ಎಂ.ಎಂ. : ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಧಾರವಾಡ, ೧೯೭೩

ಚಿದಾನಂದಮೂರ್ತಿ, ಎಂ. : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ೧೯೬೬
ಕವಿರಾಜಮಾರ್ಗ, ಬೆಂಗಳೂರು, ೧೯೭೩,
ಸಂಶೋಧನ ತರಂಗ, ಬೆಂಗಳೂರು ೧೯೭೮

ತಾಳ್ತಜೆ ವಸಂತಕುಮಾರ : ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ಬೆಂಗಳೂರು, ೧೯೮೮

ನಾಯಕ, ಹಾ.ಮಾ. : (ಸಂ) ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯಚರಿತ್ರೆ. ಸಂ. ೨. ಮೈಸೂರು ೧೯೭೪

ಮುಗಳಿ. ರಂ.ಶ್ರೀ. : ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ೧೯೭೧

ವೆಂಕಣ್ಣಯ್ಯ. ಟಿ.ಎಸ್. : ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು, ಮೈಸೂರು ೧೯೫೮

Sarma, I.K. & Varaprasada Rao : Early Brahmi Inscriptions from Sannati New Delhi, 1993

# ಕೆಳದಿಯ ಹಿರಿಯ ವೆಂಕಟಪ್ಪ ನಾಯಕ ಮತ್ತು ಶೃಂಗೇರಿ ಮಠ

ಡಾ. ಎ. ಕೆ. ಶಾಸ್ತ್ರಿ

ವಿಜಯನಗರ ಸಾಮ್ರಾಜ್ಯದ ಸಾಮಂತರಾಗಿ, ಸಾಮ್ರಾಜ್ಯದ ಪತನದ ನಂತರ ಕರ್ನಾಟಕದ ಮಧ್ಯ-ಪಶ್ಚಿಮ ಭಾಗದ ಒಡೆಯರಾಗಿ ಒಟ್ಟಿನಲ್ಲಿ, ಸುಮಾರು ಎರಡೂವರೆ ಶತಮಾನಗಳ ಕಾಲ (ಕ್ರಿ.ಶ. ೧೪೯೯ - ಕ್ರಿ.ಶ. ೧೭೬೩) ಸಮರ್ಥ ಆಡಳಿತವನ್ನು ನೀಡಿ, ವಿಜಯನಗರದ ಭವ್ಯ ಪರಂಪರೆಯನ್ನು ಉಜ್ವಲಗೊಳಿಸಿದವರು ಕೆಳದಿಯ ನಾಯಕರು. ಇಂದಿನ ಕೆಳದಿ, ಕರ್ನಾಟಕ ರಾಜ್ಯದ ಶಿವಮೊಗ್ಗೆ ಜಿಲ್ಲೆಯ ಸಾಗರ ತಾಲ್ಲೂಕಿನ ಒಂದು ಪುಟ್ಟ ಗ್ರಾಮ. ಆದರೆ ಪೂರ್ವದಲ್ಲಿ ಕೆಳದಿ ರಾಜ್ಯವು ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ, ಈಗಿನ ಶಿವಮೊಗ್ಗೆ, ಮಂಗಳೂರು, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳ ಬಹುಭಾಗ, ಕಾರವಾರ, ಧಾರವಾಡ, ಚಿತ್ರದುರ್ಗ ಜಿಲ್ಲೆಗಳ ಕೆಲವು ಭಾಗ ಮತ್ತು ಕೇರಳದ ಅಲ್ಪ ಭಾಗಗಳನ್ನು ಒಳಗೊಂಡಿತ್ತು. ಕೆಳದಿಯ ನಾಯಕರು ಮುಸಲ್ಮಾನರ ದಾಳಿಗಳನ್ನು ಎದುರಿಸಲು ಮತ್ತು ಅನುಕೂಲಕ್ಕೆ ತಕ್ಕಂತೆ, ಕ್ರಮವಾಗಿ, ಕೆಳದಿ, ಇಕ್ಕೇರಿ, ಬಿದನೂರು ಮತ್ತು ಭುವನಗಿರಿದುರ್ಗ (ಕವಲೆದುರ್ಗ)ಗಳೆಂಬ ರಾಜಧಾನಿಗಳಿಂದ ರಾಜ್ಯವನ್ನಾಳಿದರು.[1]

ಆದಿಶಂಕರಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಶೃಂಗೇರಿಮಠಕ್ಕೆ ವಿಜಯನಗರದ ಸಮ್ರಾಟರು, ಅದರಲ್ಲಿಯೂ ಸಂಗಮ ವಂಶಜರು ಕಾಲಕಾಲಕ್ಕೆ ಭೂದಾನ ಮಾಡಿದ್ದರಿಂದ ಅದೊಂದು 'ಧರ್ಮಸಂಸ್ಥಾನ'ವಾಗಿ ರೂಪುಗೊಂಡಿತು. ವಿಜಯನಗರದ ಚಕ್ರವರ್ತಿಗಳಂತೆ ಕೆಳದಿಯ ದೊರೆಗಳೂ ಶೃಂಗೇರಿ ಮಠಕ್ಕೆ ಹಲವಾರು ಸಲ ಭೇಟ್ಟಿ ನೀಡಿ, ಮಠಕ್ಕೆ ಭೂಮಿ ಮತ್ತು ವಸ್ತು-ಒಡವೆಗಳನ್ನು ದಾನ ಮಾಡಿ, ಜಗದ್ಗುರುಗಳ ಆಶೀರ್ವಾದ ಪಡೆದರು. ಅದರಂತೆ, ಹಲವಾರು ಸಂದರ್ಭಗಳಲ್ಲಿ ಶೃಂಗೇರಿ ಜಗದ್ಗುರುಗಳನ್ನೂ ತಮ್ಮ ಆಸ್ಥಾನಕ್ಕೆ ಬರಮಾಡಿಕೊಂಡು ಗೌರವಿಸಿದರು. ಮಠವು ಆಂತರಿಕ, ಇಲ್ಲವೆ, ಬಾಹ್ಯ ತೊಂದರೆಗಳಲ್ಲಿ ಸಿಲುಕಿದಾಗ, ನಾಯಕರು ಮಠಕ್ಕೆ ಸಹಾಯ ನೀಡಿ ಅದನ್ನು ರಕ್ಷಿಸಿದರು. ಜಗದ್ಗುರುಗಳ ಯಾತ್ರಾಕಾಲದಲ್ಲಿ ಅವರ ಪರಿವಾರಕ್ಕೆ ಬೇಕಾದ ಸಕಲ ಅನುಕೂಲತೆಗಳನ್ನು ಒದಗಿಸಿಕೊಟ್ಟರು.[2]

ಶೃಂಗೇರಿ ಮಠದೊಂದಿಗೆ ಕೆಳದಿ ನೃಪರು ಇರಿಸಿಕೊಂಡ ಸಂಬಂಧವನ್ನರಿಯಲು, ಕಾಶೀಲಕ್ಷ್ಮಣ

---

೧. ಡಾ॥ ಜಿ.ಎಸ್. ದೀಕ್ಷಿತ, 'ಕೆಳದಿ ನಾಯಕರು', ಕ.ವಿ.ವಿ., ಧಾರವಾಡ, 1969, ಪು 2

೨. ಹೆಚ್ಚಿನ ಮಾಹಿತಿಗಾಗಿ ಲೇಖಕರು 'A History of Sringeri'. K.V.D. 1982, 27-34, 'ಶಂಗೇರಿ ಧರ್ಮಸಂಸ್ಥಾನ', ಶೃಂಗೇರಿ ಮಠ, 1983, ಪು 36-47 ಮತ್ತು 'The Records of the Sringeri-Matha relating to Keladi (R.S.M.K), ಅಪ್ರಕಟಿತ, 1992, ಓದಿರಿ.

ಶಾಸ್ತ್ರಿಗಳ 'ಗುರುವಂಶಕಾವ್ಯ', ಲಿಂಗಣ್ಣ ಕವಿಯ 'ಕೆಳದಿನೃಪವಿಜಯಂ' ಮತ್ತು ಕೆಳದಿ ಬಸವರಾಜರ 'ಶಿವತತ್ತ್ವರತ್ನಾಕರ' ಎಂಬ ಗ್ರಂಥಗಳು ಮತ್ತು ಶೃಂಗೇರಿ ಮಠದ ಚಾರಿತ್ರಿಕ ದಾಖಲೆಗಳು ಮತ್ತು ಕಡತಗಳು[3] ಉಪಯುಕ್ತವಾಗಿವೆ.

ಪ್ರಸ್ತುತ ಲೇಖನವು, ಶೃಂಗೇರಿ ಮಠದೊಂದಿಗೆ ಹಿರಿಯ ವೆಂಕಟಪ್ಪನಾಯಕನು ಇರಿಸಿಕೊಂಡ ಸಂಬಂಧ ಕುರಿತು ಇರುವದರಿಂದ, ಅದಕ್ಕೆ ಸಂಬಂಧಿಸಿದ ಕೆಲವು ಅಂಶಗಳನ್ನು ಇಲ್ಲಿ ಗಮನಿಸಬಹುದಾಗಿದೆ. ದೊಡ್ಡಸಂಕಣ್ಣನಾಯಕನ ಪುತ್ರ ಹಿರಿಯ ವೆಂಕಟಪ್ಪನಾಯಕನು (ಕ್ರಿ.ಶ. ೧೫೮೨ - ಕ್ರಿ.ಶ. ೧೬೨೯) ಕೆಳದಿಯ ರಾಜಮನೆತನದಲ್ಲಿ ಅತ್ಯಂತ ಘನವಂತನಾಗಿದ್ದನು. ಶೃಂಗೇರಿ ಜಗದ್ಗುರು ಪರಂಪರೆಯಲ್ಲಿ ೨೩ನೆಯವರಾದ ಐದನೆಯ ಶ್ರೀನರಸಿಂಹ ಭಾರತೀ (ಕ್ರಿ.ಶ. ೧೫೭೬ - ಕ್ರಿ.ಶ. ೧೫೯೯) ೨೫ನೆಯವರಾದ ಪ್ರಥಮ ಶ್ರೀ ಸಚ್ಚಿದಾನಂದ ಭಾರತೀ (ಕ್ರಿ.ಶ. ೧೬೨೨ - ಕ್ರಿ.ಶ. ೧೬೬೩) ಸ್ವಾಮಿಗಳು ಹಿರಿಯ ವೆಂಕಟಪ್ಪನಾಯಕನ ಸಮಕಾಲೀನರು. ಹಿರಿಯ ವೆಂಕಟಪ್ಪ ಒಬ್ಬ ಶ್ರೇಷ್ಠ ಕವಿ, ಧರ್ಮ ಮತ್ತು ವಿದ್ಯಾ ಪೋಷಕ. ವೆಂಕಟಪ್ಪನ ಪೂರ್ವಿಕರು ವಿಜಯನಗರ ಚಕ್ರವರ್ತಿಗಳ ಸಾಮಂತರಾಗಿದ್ದರು. ಆದರೆ ವೆಂಕಟಪ್ಪನು ಆ ಹಿಡಿತದಿಂದ ಪಾರಾಗಿ, ತನ್ನ ಮನೆತನದಲ್ಲಿಯೇ ಪ್ರಥಮ ಸ್ವತಂತ್ರ ದೊರೆಯೆನಿಸಿದನು. ಕ್ರಿ.ಶ. ೧೬೨೩ ರಲ್ಲಿ ಇಕ್ಕೇರಿಯನ್ನು ಸಂದರ್ಶಿಸಿದ ಇಟಲಿಯ ಪ್ರವಾಸಿ, ಪೆಟ್ರೊಡೆಲ್ಲಾವಲ್ಲೆ ಕೂಡ ಈ ಸಂಗತಿಯನ್ನು ಒತ್ತಿಹೇಳಿದ್ದಾನೆ.[4] ವೆಂಕಟಪ್ಪನ ರಾಜ್ಯಭಾರ, ದಿಗ್ವಿಜಯದ ವರ್ಣನೆ, ಆಧ್ಯಾತ್ಮ ಶಾಸ್ತ್ರದಲ್ಲಿ ಆಸಕ್ತಿ, ಪ್ರಜಾಹಿತ ಕಾರ್ಯಗಳು, ದೇವಸ್ಥಾನಗಳ ನಿರ್ಮಾಣ, ಮತ್ತು ಅವನು ಶೃಂಗೇರಿ ಮಠಕ್ಕೆ ತೋರಿದ ಗೌರವ, ಇವುಗಳನ್ನೆಲ್ಲ 'ಕೆಳದಿನೃಪವಿಜಯ'ದಲ್ಲಿ ಚಿತ್ರಿಸಲಾಗಿದೆ.[5] ವೆಂಕಟಪ್ಪನು ಶೃಂಗೇರಿ ಮಠದೊಂದಿಗೆ ಇರಿಸಿಕೊಂಡ ಸಂಬಂಧವನ್ನು 'ಗುರುವಂಶಕಾವ್ಯ'ದಲ್ಲಿಯೂ ವರ್ಣಿಸಲಾಗಿದೆ.[6]

ಜಗದ್ವಿಖ್ಯಾತವಾದ ಶೃಂಗೇರಿಯ ಜಗದ್ಗುರುಗಳಿಗಾಗಿ ಮಠವನ್ನೂ, ಬ್ರಾಹ್ಮಣರಿಗಾಗಿ ಅಗ್ರಹಾರವನ್ನೂ ಮತ್ತು ಕವಲೆದುರ್ಗದಲ್ಲಿದ್ದ ಜಂಗಮರಿಗೆ ಮತ್ತು ದೇವತೆಗಳಿಗೆ ಆಲಯಗಳನ್ನು ವೆಂಕಟಪ್ಪನಾಯಕನು ನಿರ್ಮಿಸಿದನು.[7] ಕೆಳದಿ ದೊರೆಯ ವಂಶವೃತ್ತಾಂತವನ್ನು ಪ್ರಥಮ ಶ್ರೀ ಅಭಿನವ ನರಸಿಂಹಭಾರತೀ ಸ್ವಾಮಿಗಳು ವೆಂಕಟಪ್ಪನಿಗೆ ಅರುಹಿದರು. ಕೆಳದಿ ವಂಶಕ್ಕೆ ಚಂದ್ರನಂತಿದ್ದ

---

೩. 'ಕಡತ' ಇಲ್ಲವೆ 'ಕಡಿತ'ವು ಪುಸ್ತಕ ರೂಪದಲ್ಲಿ ಮಡಿಚಿದ ಉದ್ದನೆಯ ದಪ್ಪ ಕಪ್ಪು ಬಟ್ಟೆಯಾಗಿದ್ದು, ಇದರ ಮೇಲೆ ಸೀಸದಂಥ ಚೂಪಗಿನ ಬಳಪದ ಕಲ್ಲಿನಿಂದ ಬರೆಯಲಾಗುತ್ತಿತ್ತು. ಮಠಕ್ಕೆ ಬಂದ ಬಿನ್ನವತ್ತಳೆ ಮತ್ತು ಮಠದಿಂದ ಹೊರಡಿಸಲಾದ ನಿರೂಪಗಳ ಪ್ರತಿಗಳನ್ನು ಕಡತಗಳಲ್ಲಿ ಮಾಡಿಡಲಾಗುತ್ತಿತ್ತು. ಆದಾಯ ವೆಚ್ಚದ ವಿವರಗಳೂ ಕಡತಗಳಲ್ಲಿವೆ. ಕಡತಗಳ ಹೆಚ್ಚಿನ ಮಾಹಿತಿಗಾಗಿ ಲೇಖಕರ ಮೇಲ್ಮಾಣಿಸಿದ 'ಶೃಂಗೇರಿ-ಧರ್ಮಸಂಸ್ಥಾನ', ಪು 18-23 ನೋಡಿರಿ

೪. ಪೆಟ್ರೊಡೆಲ್ಲಾವಲ್ಲೆ, 'ದಿ ಟ್ರಾವೆಲ್ಸ್ ಇನ್ ಇಂಡಿಯಾ', ಜಿ. ಹ್ಯಾವರ್ಸ್‌ರವರ 1964ರ ಹಳೆಯ ಇಂಗ್ಲಿಷ್ ಭಾಷಾಂತರ, ಎಡ್‌ವರ್ಡ್ ಗ್ರೇ, ಲಂಡನ್, 1892, ಸಂ. I, ಪು. 191

೫. ಲಿಂಗಣ್ಣ ಕವಿಯ 'ಕೆಳದಿನೃಪವಿಜಯ', ಗದ್ಯಾನುವಾದ - ಕೆಳದಿ ಗುಂಡಾಜೋಯಿಸ್, ಕನ್ನಡ ಸಾಹಿತ್ಯ ಪರಿಷತ್ತು, 1977, ಪಂಚಮಾಶ್ವಾಸಂ, ಪು. 109-137

೬. ಕಾಶೀಲಕ್ಷ್ಮಣ ಶಾಸ್ತ್ರಿ 'ಗುರುವಂಶಕಾವ್ಯಮ್', ವಾಣಿವಿಲಾಸ ಪ್ರೆಸ್, ಶ್ರೀರಂಗಮ್, 1966, 9 ಮತ್ತು 10ನೇ ಸರ್ಗಗಳು, ಪು. 94-112

೭. ಅದೇ 9ನೇ ಸರ್ಗ, ಶ್ಲೋಕ: 39

೮. ಅದೇ, ಶ್ಲೋ: 42

ಕೀರ್ತಿಶಾಲಿಯಾದ ವೆಂಕಟೇಂದ್ರನು (ವೆಂಕಟಪ್ಪ), ತಮ್ಮ ಶಿಷ್ಯ, ಪ್ರಥಮ ಶ್ರೀ ಸಚ್ಚಿದಾನಂದ ಭಾರತಿಗಳೊಂದಿಗೆ ಆಗಮಿಸಿದ ಪ್ರಥಮ ಶ್ರೀ ಅಭಿನವ ನರಸಿಂಹಭಾರತೀ ಸ್ವಾಮಿಗಳನ್ನು ಇಕ್ಕೇರಿಯಲ್ಲಿ ಸ್ವಾಗತಿಸಿದನು.[9] ನೀತಿ ಮಾರ್ಗದಿಂದ ಆಳುತ್ತಿದ್ದ ರಾಜಶ್ರೇಷ್ಠನನ್ನು ಜಗದ್ಗುರುಗಳು ಆಶ್ರಿತರ ಇಷ್ಟಾರ್ಥಗಳನ್ನೀಡೇರಿಸುವ ಶ್ರೀ ವಿದ್ಯಾಶಂಕರನನ್ನು ಧ್ಯಾನಿಸಿ, ರಾಜ್ಯಕ್ಕೂ, ರಾಜ್ಯಪರಿವಾರಗಳೆಲ್ಲಕ್ಕೂ ಇಷ್ಟಾರ್ಥವನ್ನು ಅನುಗ್ರಹಿಸುವ ಆಶೀರ್ವಚನವನ್ನು ನೀಡಿದರು.[10] ನಂತರ ವೆಂಕಟಪ್ಪನು ಗುರು-ಶಿಷ್ಯರಿಬ್ಬರಿಗೂ ಚಿನ್ನದ ಜರಿಯಿಂದ ಹೆಣೆಯಲ್ಪಟ್ಟ ರೇಷ್ಮೆಯ ವಸ್ತ್ರಗಳನ್ನು ನೀಡಿ, ಭಿಕ್ಷೆ ಮಾಡಿಸಿದನು.[11] ಅನಂತರ ಮಹಾಸ್ವಾಮಿಗಳು, ಬಹುವಿಚಾರಗಳನ್ನೊಳಗೊಂಡ, ವೇದಾಂತಸಾರವನ್ನು ಪ್ರಕಾಶಿಸುವ, ವಿದ್ವಜ್ಜನರಿಗೆ ಸಂತಸ ನೀಡುವ, ಸ್ವರಚಿತ 'ಶಿವಗೀತಾಭಾಷ್ಯ'ವನ್ನು ಶಿವಪೂಜಾಧುರಂಧರನಾದ ವೆಂಕಟಪ್ಪನಿಗೆ ಶ್ರವಣಮಾಡಿಸಿದರು.[12] ನಂತರ ಗುರುವರೇಣ್ಯರನ್ನು ನಾಯಕನು ಶೃಂಗೇರಿಗೆ ಕಳುಹಿಸಿಕೊಟ್ಟನು.[13]

ವೆಂಕಟಪ್ಪನಾಯಕನು ಶೃಂಗೇರಿ ಮಠದ ಏಳ್ಗೆಗಾಗಿ ಸಾಕಷ್ಟು ಕಾಳಜಿ ವಹಿಸುತ್ತಿದ್ದನೆಂದು, ಶೃಂಗೇರಿ ಮಠದಲ್ಲಿ ದೊರೆತ ಕೆಲವು ದಾಖಲೆಗಳಿಂದ ಅರಿಯಬಹುದಾಗಿದೆ.[14] ಕಡಲೂರು (ಕಡೂರು) ಸೀಮೆಯ ಲಿಂಗತಾಪುರವನ್ನು ಶೃಂಗೇರಿ ಮಠಕ್ಕೆ ಬಿಟ್ಟ ಕಾರಣ, ಪಟ್ಟಿ ಹಣವನ್ನೂ ಮಠದ ಧರ್ಮಕ್ಕೆ ಬಿಡಲಾಗಿದೆ, ಆದ್ದರಿಂದ ಇದಕ್ಕೆ ಸಂಬಂಧಿಸಿ ಮಠದಿಂದ ಪಟ್ಟಿ ಹಣವನ್ನು ಕೇಳಬಾರದಾಗಿ ವೆಂಕಟಪ್ಪನು ಶಾರ್ವರಿಸಂವತ್ಸರದ ಕಾರ್ತಿಕ ಬಹುಳ (೧೬.೧೧.೧೬೦೦) ರಂದು ಬಾಗೂರ ವೀರಣ್ಣನಿಗೆ ನಿರೂಪ ಕಳುಹಿಸಿದನು.[15]

ಪ್ರಥಮ ಶ್ರೀ ಅಭಿನವ ನರಸಿಂಹಭಾರತೀಸ್ವಾಮಿಗಳು ಬಿದನೂರಿಗೆ ಹೋದ ಸಂದರ್ಭದಲ್ಲಿ ವೆಂಕಟಪ್ಪನು ಶೃಂಗೇರಿ ಮಠದ ಧರ್ಮಕ್ಕಾಗಿ, ಮುಕ್ಕರನಾಡು ಸೀಮೆಯ ಗದ್ಯಾಣ ೫೦, ಹಣ ೭ ಮತ್ತು ೧ ಮುಪಾಗದ ಭೂಮಿಯನ್ನು ದಾನಮಾಡಿದನೆಂದು, ನಾಯಕನು ಕಳಶಣ್ಣಗೆ, ಶಾರ್ವರಿ ಸಂವತ್ಸರದ ಕಾರ್ತಿಕ ಬ. ೧೨ (೨೨.೧೧.೧೬೦೦)ಯಂದು, ಬರೆದ ನಿರೂಪದಿಂದ ತಿಳಿದು ಬರುತ್ತದೆ.[16] ಈ ಸತ್ಕಾರ್ಯಕ್ಕಾಗಿ ವೆಂಕಟಪ್ಪನಿಗೆ "ಶೃಂಗೇರಿಯ ಪ್ರತಿಷ್ಠಾಪಕ" ಎಂಬ ಪ್ರಶಸ್ತಿ ದೊರೆಯಿತು.[17]

ಆಶ್ರಮಧರ್ಮದ ವಿಷಯದಲ್ಲಿ ಗೊಂದಲ ಉಂಟಾದಾಗ, ಸಂಬಂಧಿಸಿದ ಕೋಮಿನವರು ಕೆಳದಿ, ಸೋದೆ, ಬಿಳಿಗಿ ಮತ್ತು ಗೇರಸೊಪ್ಪೆಯ ಸಂಸ್ಥಾನದ ಅರಸುಗಳಿಗೆ ಅರಿಕೆ ಮಾಡಿಕೊಂಡಾಗ,

---

೯. ಅದೇ, ಶ್ಲೋ: 46
೧೦. ಅದೇ, ಶ್ಲೋ: 48-49
೧೧. ಅದೇ, ಶ್ಲೋ: 55-56
೧೨. ಅದೇ, ಶ್ಲೋ: 57; Epigraphia Carnatica (E.C.), Sringeri, 22
೧೩. ಅದೇ, ಶ್ಲೋ: 58
೧೪. R.S.M.K., Chapter: I (7 records)
೧೫. ಅದೇ, ದಾಖಲೆ: 1
೧೬. ಅದೇ, ದಾಖಲೆ:2; E.C. VI, Sringeri, 5; 'Selections from the records of the Sringeri Mutt', ದಾ. 11
೧೭. E.C. VI, Sringeri, 5
೧೮. ಕಡತ (ಕ) 25, ದಾ. 52,55

ಅರಸುಗಳು ಅಂತಿಮ ನಿರ್ಣಯ ನೀಡುವಂತೆ ಶೃಂಗೇರಿ ಜಗದ್ಗುರುಗಳನ್ನು ವಿನಂತಿಸಿಕೊಳ್ಳುತ್ತಿದ್ದರೆಂದು ಕಡತಗಳಲ್ಲಿಯ ದಾಖಲೆಗಳಿಂದ ಸ್ಪಷ್ಟವಾಗುತ್ತದೆ.[18] ಜಗದ್ಗುರುಗಳು, ಮಯೂಖ, ಹೇಮಾದ್ರಿ, ಪರಾಶರ, ವಿಜ್ಞಾನೇಶ್ವರ, ನಿರ್ಣಯಸಿಂಧು, ಭೈರವ ಪುರಾಣ ಮುಂತಾದ ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಆಧಾರವಾಗಿರಿಸಿಕೊಂಡು, ವೈಶ್ಯಕೊಂಕಣಿಗರಿಗೆ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ ಆಶ್ರಮ ಮತ್ತು ಪೌರೋಹಿತ್ಯ, ವೇದಾಧ್ಯಯನ, ದೇವರ ಪೂಜೆ, ಮೆರವಣಿಗೆ, ತಳಿಗೆ, ತೋರಣ, ಕಳಸ, ಕನ್ನಡಿ, ದಂಡಿಗೆ, ಬಾಸಿಂಗ, ಇತ್ಯಾದಿ ಸಲ್ಲವು ಎಂದು ನಿರ್ಣಯ ನೀಡಿದರು. ಈ ವಿಷಯವು ವೆಂಕಟಪ್ಪನಾಯಕನ ಕಾಲದ ದಾಖಲೆಗಳಿಂದ ತಿಳಿದುಬರುತ್ತದೆ.[19]

ಕಾರ್ಕಳದ ಭೈರವರಸ ಒಡೆಯನು ಶೃಂಗೇರಿಯನ್ನು ಆಕ್ರಮಿಸಿ ಉಪದ್ರವ ಕೊಡಲು ಪ್ರಾರಂಭಿಸಿದ್ದರಿಂದ, ವೆಂಕಟಪ್ಪನಾಯಕನು ಭೈರವರಸನ ಮುತ್ತಿಗೆಯನ್ನು ತೆಗಿಸಿ, ಅವನ ಸೊಕ್ಕನ್ನು ಮುರಿದು, ಅತಿರೇಕದಿಂದ ಅವನು ಆಕ್ರಮಿಸಿಕೊಂಡಿದ್ದ ಭೂಮಿಯನ್ನು ತೆಗೆದುಕೊಂಡು, ಶೃಂಗೇರಿಯ ಸ್ವಾಮಿಗಳಿಗೆ (ಪ್ರಥಮ ಶ್ರೀಸಚ್ಚಿದಾನಂದ ಭಾರತೀ) ನೀಡಿದನು. ಆ ಮಠದ ಧರ್ಮಕ್ಕೆ ತಾನೂ ಶಿವಾರ್ಪಿತವಾಗಿ ಭೂಸ್ವಾಸ್ಥ್ಯೆಯನ್ನು ಧಾರೆಯನ್ನೆರೆದನು. ಆ ಮಠದ ಜೀರ್ಣೋದ್ಧಾರವನ್ನು ಕೈಗೊಂಡು, ಶೃಂಗೇರಿಯ ಧರ್ಮಸಂಸ್ಥಾನವನ್ನು ಉದ್ಧರಿಸಿ, ಕಾಪಾಡಿ ಪರಮ ಖ್ಯಾತಿಯನ್ನು ಪೊಂದಿದನೆಂದು ಲಿಂಗಣ್ಣಕವಿಯ 'ಕೆಳದಿನೃಪವಿಜಯ'ದಿಂದ ತಿಳಿದು ಬರುತ್ತದೆ.[20]

ಕೊಲ್ಲೂರು ಮೂಕಾಂಬಿಕೆಯ ಸನ್ನಿಧಿಯಿಂದ ಆಗಮಿಸಿ, ವಾದ ಸಭೆಯನ್ನು ಏರ್ಪಡಿಸಿ, ಪರಮತ ವಿಜಯಗಳಿಸಿದ ಕಾರಣ, "ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ" ಎಂಬ ಬಿರುದನ್ನು ಜಗದ್ಗುರುಗಳಿಂದ ಪಡೆದನೆಂದು 'ಗುರುವಂಶಕಾವ್ಯ'ದಲ್ಲಿ ನಮೂದಿಸಲಾಗಿದೆ.[21]

ಕೆಳದಿಯ ವೆಂಕಟಪ್ಪನಾಯಕನು ಶೃಂಗೇರಿ ಜಗದ್ಗುರುಗಳನ್ನು ಮತ್ತು ಅವರ ಮಠವನ್ನು ಗೌರವಿಸುತ್ತಿದ್ದನೆಂಬುದು ಮೇಲ್ಕಾಣಿಸಿದ ಕೆಲವು ದೃಷ್ಟಾಂತಗಳಿಂದ ಖಚಿತವಾಗುತ್ತದೆ. ನಾಯಕನು ಪರಧರ್ಮಸಹಿಷ್ಣುವಾಗಿದ್ದನು. ಅವನು ರಾಮಾನುಜ ಪಂಥದ ಮಠಕ್ಕೆ ಮತ್ತು ಶ್ರೀ ವೆಂಕಟೇಶ ದೇವರಿಗೆ ಭೂಮಿಯನ್ನು ಉಂಬಳಿಯಾಗಿ ಬಿಟ್ಟನು[22]. ಅದೇ ರೀತಿ, ಭುವನಗಿರಿದುರ್ಗದ ಮುಸಲ್ಮಾನರ ಮಸೀದಿಯೊಂದಕ್ಕೂ ದಾನ ಮಾಡಿದನು.[23] ಕೊಲ್ಲೂರು ಶ್ರೀ ಮೂಕಾಂಬಿಕಾ ಅಮ್ಮನವರ ದೇವಸ್ಥಾನವನ್ನು ಶಿಲೆಯಿಂದ ನಿರ್ಮಾಣ ಮಾಡಿಸಿ, ಭೂಸ್ವಾಸ್ಥ್ಯೆಯನ್ನು ಬಿಡಿಸಿ, ಪೂಜಾವೈಭವಗಳಿಗೆ ಲೋಪವಾಗದಂತೆ ಏರ್ಪಡಿಸಿದನು. ಶೃಂಗೇರಿಯ ಧರ್ಮ, ಬಾಳೇಹಳ್ಳಿಯ ಸಿಂಹಾಸನದ ಧರ್ಮ, ರಾಜ್ಯದ ನಾಲ್ಕೂ ದಿಕ್ಕುಗಳಲ್ಲಿಯ ಸನ್ಯಾಸಿಗಳ ಮಠದ ಧರ್ಮ ಅಗ್ರಹಾರ ಧರ್ಮ ಹೀಗೆ ಅನೇಕ ಧರ್ಮಗಳನ್ನು ಸಮಗ್ರವಾಗಿ ಆಚರಿಸಿದನು.[24] ಕೆಳದಿಯನ್ನಾಳಿದ ವೆಂಕಟಪ್ಪನಾಯಕನ ಉತ್ತರಾಧಿಕಾರಿಗಳೂ ಶೃಂಗೇರಿ ಜಗದ್ಗುರುಗಳನ್ನು ಮತ್ತು ಅವರ ಮಠವನ್ನು ಗೌರವಿಸಿದ್ದು ಐತಿಹಾಸಿಕ ಸತ್ಯ.

---

೧೯. ಅದೇ
೨೦. ಪಂಚಮಾಶ್ವಾಸ, ಪು 130-131
೨೧. ಸರ್ಗ 10, ಶ್ಲೋಕ: 16
೨೨. Epigraphia Carnatica, VIII, Sg. 79
೨೩. ಅದೇ, T.I, 38
೨೪. ಕೆಳದಿನೃಪವಿಜಯಂ, ಪಂಚಮಾಶ್ವಾಸ, ಪು. 136-137

# ಹುಯಿಲಗೋಳ ನಾರಾಯಣರಾಯರ ಸಾಹಿತ್ಯ:
## ಹೆಚ್ಚಿನ ಸಂಗ್ರಹ, ಅಧ್ಯಯನ ಹಾಗೂ ಪ್ರಕಾಶನ ಸಾಧ್ಯತೆಗಳು

---

ಡಾ. ಜಿ. ಡಿ. ಜೋಶಿ (ಮುಂಬಯಿ)

'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ನಾಡಗೀತೆಯನ್ನು ರಚಿಸಿ ಕನ್ನಡಿಗರಲ್ಲಿಯ ಸದಭಿಮಾನವನ್ನು ಜಾಗ್ರತಗೊಳಿಸಿದ ಹುಯಿಲಗೋಳ ನಾರಾಯಣರಾಯರು ಈ ಶತಮಾನದ ಪ್ರಾರಂಭದಲ್ಲಿ ಅಧುನಿಕ ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಸೇವೆ ಸಲ್ಲಿಸಿದ ಹಿರಿಯರಲ್ಲಿ ಒಬ್ಬರು.

ನಾರಾಯಣರಾಯರು ರಚಿಸಿದ ಕಾವ್ಯ, ನಾಟಕ, ಕಥೆ-ಕಾದಂಬರಿ ಹಾಗೂ ಭಾಷಣ-ಲೇಖನಗಳಲ್ಲಿ ಇಲ್ಲಿಯವರೆಗೆ ಸಂಗ್ರಹವಾಗಿದ್ದು ಎಷ್ಟು ಮತ್ತು ಸಂಗ್ರಹವಾಗಬೇಕಾದದ್ದು ಎಷ್ಟು ಎಂಬುದರ ವಿವೇಚನೆಯನ್ನೂ, ದೊರೆಯುತ್ತಿದ್ದ ಅವರ ಸಾಹಿತ್ಯದ ಅಭ್ಯಾಸವಾದ್ದೆಷ್ಟು? ಆಗ ಬೇಕಾದ್ದು ಎಷ್ಟು? ಹೇಗೆ? ಎಂಬುದನ್ನೂ, ಅವರ ಪ್ರಕಟಿತ ಹಾಗೂ ಅಪ್ರಕಟಿತ (ಹಸ್ತಪ್ರತಿ) ಸಾಹಿತ್ಯವನ್ನು ಉಳಿಸಿ ಓದುಗರಿಗೆ ಒದಗಿಸುವ ಬಗ್ಗೆ ಇರುವ ಸಮಸ್ಯೆಯನ್ನೂ, ಹಾಗೂ ಉಳಿಸಲು ಯಾರು ಹೇಗೆ ಪ್ರಯತ್ನಿಸಬಹುದೆಂಬ ಸೂಚನೆಗಳನ್ನೂ ಈ ಲೇಖನದಲ್ಲಿ ಚರ್ಚಿಸಲಾಗುವುದು.

ವೃತ್ತಿಯಿಂದ ಗದಗಿನಲ್ಲಿ ವಕೀಲರಾಗಿದ್ದ ಕವಿ ನಾರಾಯಣರಾಯರು ಪ್ರವೃತ್ತಿಯಿಂದ ಸಾಹಿತ್ಯರಚನಾಕಾರರು. ಸಾಗ್ರ ಸಂಗೀತ ನಾಟಕಗಳನ್ನೂ ರಚಿಸಿ, ಫುಟ್‌ಬಾಲ್ ಆಟಗಾರರಿಂದ ರಂಗದ ಮೇಲೆ ಯಶಸ್ವಿಯಾಗಿ ಪ್ರಯೋಗವಾಗುವಂತೆ ಅವರಿಗೆ ತರಬೇತಿಕೊಟ್ಟು ನಾಟಕ ಆಡಿಸಿದವರು. ಸುಪ್ರಸಿದ್ಧ ಸಾಹಿತಿಗಳಾಗಿದ್ದ ಆಲೂರವೆಂಕಟರಾಯರು ಹಾಗೂ ಕೆರೂರ ವಾಸುದೇವಾಚಾರ್ಯರ ಜೊತೆಗೆ ಸಾಹಿತ್ಯ ಕಾರ್ಯವನ್ನು ನಡೆಸಿದವರು. ಕಾವ್ಯ, ನಾಟಕ, ಕಥೆ-ಕಾದಂಬರಿ ಹಾಗೂ ವಿವಿಧ ವಿಷಯಗಳ ಕುರಿತು ಭಾಷಣ-ಲೇಖನ ಮಾಡಿದವರು. ಕುಮಾರವ್ಯಾಸನನ್ನು ವಿಶೇಷವಾಗಿ ಅಭ್ಯಾಸ ಮಾಡಿದ್ದ ಇವರು ಭಾಮಿನಿ ಷಟ್ಪದಿಯಲ್ಲಿ ಹಲವು ನೀಳ್ಗವನಗಳನ್ನು ರಚಿಸಿದ್ದಾರೆ. ಸುಮಾರು ನೂರು ಭಕ್ತಿಗೀತೆಗಳನ್ನು (ಕೀರ್ತನೆಗಳು) ರಚಿಸಿ 'ದಾಸ ಸಾಹಿತ್ಯದ ಕೊನೆಯ ಕೊಂಡಿ' ಎಂದು ಕರೆಸಿಕೊಂಡಿದ್ದಾರೆ. ಕೆಲವು ಬಿಡಿ ಕವನಗಳನ್ನು ಹಲವು ಸ್ವಾಗತಗೀತೆಗಳನ್ನು ರಚಿಸಿದ್ದಾರೆ. 'ಉದಯವಾಗಲಿ' ಸ್ವಾಗತ ಗೀತೆಯಾಗಿ ಬೆಳಗಾವಿಯ ೧೯೨೪ರ ಕಾಂಗ್ರೆಸ್ ಅಧಿವೇಶನದಲ್ಲಿ ಹಾಡಲಾಗಿತ್ತು. ಅದೇ ತನ್ನ ಶಕ್ತಿಯಿಂದ ಕನ್ನಡಿಗರ ಅಭಿಮಾನ ಕೆರಳಿಸುವ ಮಂತ್ರವಾಗಿ, ನಾಡಗೀತೆಯಾಗಿ ಪರಿಣಮಿಸಿತು. 'ನಾಡಗೀತೆಯ ನಾರಾಯಣರಾಯರು' ಎಂಬ ಕೀರ್ತಿಯನ್ನೂ ಗಳಿಸಿಕೊಟ್ಟಿತ್ತು. ನಾರಾಯಣರಾಯರ ಸಾಹಿತ್ಯದ ಗಾತ್ರ ಹಾಗೂ ಗುಣಗಳನ್ನು ಪರಿಶೀಲಿಸಿದರೆ ಆಗಿನ ಕಾಲದಲ್ಲಿ ಹವ್ಯಾಸಿ ಸಾಗ್ರ ಸಂಗೀತ

ನಾಟಕಕ್ಕೆ (ಸಾಹಿತ್ಯ ರಚನೆ ಹಾಗೂ ರಂಗಭೂಮಿ) ಅವರನ್ನು ಆದ್ಯಸಾಮಾಜಿಕ ನಾಟಕಕಾರರೆಂದು ಕರೆಯುವುದು ಸರಿ ಎನಿಸುತ್ತದೆ.

ನಾರಾಯಣರಾಯರ ಸಾಹಿತ್ಯದ ಬಗ್ಗೆ ಇನ್ನೂ ಕೈಕೊಳ್ಳಬೇಕಾದ ಕಾರ್ಯದ ಕುರಿತು ಈ ಲೇಖನ ಗಮನ ಹರಿಸಬೇಕಾಗಿದೆ.

**ಕಾವ್ಯ**

ನಾರಾಯಣರಾಯರು ರಚಿಸಿದ ಕಾವ್ಯವನ್ನು (೧) ಷಟ್ಪದಿಗಳ ರಚನೆಯಾದ ಕಾವ್ಯ (ನೀಳ್ಗವನಗಳು) (೨) ಭಕ್ತಿಗೀತೆಗಳು (ಕೀರ್ತನೆಗಳು) (೩) ಸ್ವಾಗತ ಗೀತೆಗಳು (೪) ಇತರ ಹಾಡುಗಳು ಎಂದು ವಿಭಾಗಿಸಬಹುದಾಗಿದೆ. (೧) ಷಟ್ಪದಿ ಕಾವ್ಯಗಳಲ್ಲಿ ಕೆಲವು ದೊಡ್ಡವು ಅಂದರೆ ೫೦ ಷಟ್ಪದಿಗಳಷ್ಟು ದೊಡ್ಡವು ಹಾಗೂ ಕೆಲವು ಚಿಕ್ಕವು ಇವೆ. ಸಾಮಾನ್ಯವಾಗಿ ೨೦-೩೦ ಷಟ್ಪದಿಗಳುಳ್ಳ ಕಾವ್ಯಗಳನ್ನು ಹೆಚ್ಚಾಗಿ ಬರೆದಿದ್ದಾರೆ. ೧೯೧೦ಲರಿಂದ ೧೯೬೯ರವರೆಗೆ ಇವುಗಳನ್ನು ರಚಿಸಿದ್ದು ಕಂಡು ಬರುತ್ತದೆ. ಇವು ಆಗಿನ ಕಾಲದ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇನ್ನೂ ಕೆಲವು ಷಟ್ಪದಿ ಕಾವ್ಯಗಳನ್ನು ಸಂಗ್ರಹಿಸುವುದು ಸಾಧ್ಯವಿದೆ ಎಂದು ನಾರಾಯಣರಾಯರ ಮಗ ವೆಂಕಟೇಶ ಹೇಳುತ್ತಾರೆ. ಅವುಗಳನ್ನು ಇನ್ನೂ ಸಂಗ್ರಹಿಸಬಹುದಾಗಿದೆ.

(೨) ಭಕ್ತಿಗೀತೆ (ಕೀರ್ತನೆ)ಗಳು ಇಲ್ಲಿಯವರೆಗೆ ಸುಮಾರು ೮೫ ಸಂಗ್ರಹಿಸಲ್ಪಟ್ಟಿವೆ. ರಾಗ, ತಾಳ ಹಾಕಿ ರಚಿಸಲಾಗಿದ್ದ ಇವುಗಳಲ್ಲಿ ಕೆಲವು ಬಹಳ ಜನಪ್ರಿಯವಾಗಿದ್ದು ಗದಗ-ಹುಬ್ಬಳ್ಳಿ-ಧಾರವಾಡ-ನಿಪ್ಪಾಣಿ- ವಿಜಾಪುರ-ಬಳ್ಳಾರಿ ಮುಂತಾದ ಊರುಗಳಲ್ಲಿ ಹೆಣ್ಣು ಮಕ್ಕಳ ಬಾಯಲ್ಲಿವೆ. ಬಹುಶಃ ಅವರಿಗೆ ಅದರ ರಚನಾಕಾರರು ಯಾರು ಎಂಬುದು ತಿಳಿದಿರಲಿಕ್ಕಿಲ್ಲ. ಸುಶ್ರಾವ್ಯವಾಗಿ ಹಾಡಬಹುದಾದ ಈ ಕೀರ್ತನೆಗಳನ್ನು ಇನ್ನೂ ಹೆಚ್ಚು ಸಂಗ್ರಹಿಸಲು ಸಾಧ್ಯವಿದೆ. ನಾರಾಯಣರಾಯರ ಮಗ ಗೋವಿಂದ ಅವರ ಹೇಳಿಕೆಯಂತೆ ಇವು ಸುಮಾರು ೧೦೮ ರಚನೆಯಾಗಿವೆಯಂತೆ.

(೩) ಸ್ವಾಗತಗೀತೆಗಳನ್ನು ನಾರಾಯಣರಾಯರು ಆಗಾಗ ಒದಗಿ ಬಂದ ಸಂದರ್ಭಗಳಿಗನುಗುಣವಾಗಿ, ಬೇಡಿಕೆಗೆ ತಕ್ಕಂತೆ ರಚನೆ ಮಾಡಿದ್ದರೂ ಅವುಗಳು ಇಂದಿಗೂ ಬಹಳ ಜನಪ್ರಿಯವಾಗಿವೆ. 'ಉದಯವಾಗಲಿ' ಒಂದು ಸ್ವಾಗತಗೀತೆ ಎಂದೇ ರಚನೆಯಾಗಿ (ವೃತ್ತಪತ್ರಿಕೆಯ ಜಾಹೀರಾತಿಗನುಗುಣವಾಗಿ) ಬೆಳಗಾವಿಯ ಕಾಂಗ್ರೆಸ್ ಅಧಿವೇಶನಕ್ಕೆ ಕಳಿಸಿಕೊಡಲಾಗಿತ್ತು ಹಾಗೂ ಅದು ಆಯ್ಕೆಯಾಗಿತ್ತು ಎಂದು ಹೇಳಲಾಗಿದೆ. ಇಂಥ ಎಂಟು ಸ್ವಾಗತ ಗೀತೆಗಳನ್ನು ಸಂಗ್ರಹಿಸಲಾಗಿದೆ ಇನ್ನೂ ಹಲವು (ಆಯಾ ಸಂದರ್ಭಗಳಲ್ಲಿ ಪ್ರಕಟವಾದುದು) ಕಡೆಗಳಿಂದ ಸ್ವಾಗತ ಗೀತೆಗಳನ್ನು ಸಂಗ್ರಹಿಸಲು ಸಾಧ್ಯವಿದೆ. ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಕವಿವರ್ಯ ದ.ರಾ.ಬೇಂದ್ರೆಯವರು ನಾರಾಯಣರಾಯರ ವಿದ್ಯಾರ್ಥಿಯಾಗಿದ್ದರು. ೧೯೮೦ರಲ್ಲಿ ಬೇಂದ್ರೆಯವರೊಡನೆ ನಾನು ನಾರಾಯಣರಾಯರ ಸಾಹಿತ್ಯದ ಬಗ್ಗೆ ಚರ್ಚೆ ನಡೆಸಿದಾಗ ಅವರು "ನಾರಾಯಣರಾಯರಿಗೆ ಸ್ವಾಗತ ಗೀತೆ ಬರೆಯುವ ಚಟ ಇತ್ತು" ಎಂದು ಹೇಳಿದ್ದನ್ನು ನೆನಪಿಸಿಕೊಂಡರೆ ಇನ್ನೂ ಹಲವಾರು ಸ್ವಾಗತ ಗೀತೆಗಳ ಸಂಗ್ರಹ ಸಾಧ್ಯ ಎಂದು ಹೇಳಬಹುದಾಗಿದೆ.

(೪) ನಾರಾಯಣರಾಯರ ಇತರ ಹಾಡುಗಳಲ್ಲಿ ನನಗೆ ನಾಲ್ಕು ಸಂಗ್ರಹಿಸಲು ಸಾಧ್ಯವಾಗಿದೆ. ಬೇರೆ ಬೇರೆ ವಿಷಯಗಳ ಕುರಿತು ಆಗಾಗ ಬಿಡಿ ಕವನಗಳನ್ನು ರಚಿಸಿ, ಪತ್ರಿಕೆಗಳಲ್ಲಿ ಪ್ರಕಟಗೊಳಿಸಿದ್ದಾರೆ. ಇಂಥ ಇನ್ನೂ ಕೆಲವು ಬಿಡಿ ಕವನ/ಹಾಡುಗಳನ್ನು ಸಂಗ್ರಹಿಸಲು ಸಾಧ್ಯವಿದೆ ಎಂದು ನಾರಾಯಣರಾಯರ ಇನ್ನೊಬ್ಬ ಮಗ ಶ್ಯಾಮರಾಯ ತಿಳಿಸಿದ್ದಾರೆ.

ಕುಮಾರವ್ಯಾಸನಂತೆ ನಾರಾಯಣರಾಯರು ಗದುಗಿನ ವೀರನಾರಾಯಣನನ್ನು ತಮ್ಮ ಕಾವ್ಯದಲ್ಲಿ ಭಕ್ತಿಯಿಂದ ಸ್ಮರಿಸಿದ್ದಾರೆ. ಮೇಲಿನ ನಾಲ್ಕು ವಿಭಾಗಗಳಲ್ಲಿ ಸೂಚಿಸಲಾದ ನಾರಾಯಣರಾಯರ ಕಾವ್ಯ ಸಂಪತ್ತನ್ನು ಉಳಿಸುವುದು, ಹೆಚ್ಚಿನವುಗಳನ್ನು ಪ್ರಯತ್ನಪಟ್ಟು ಸಂಗ್ರಹಿಸುವುದು ಮತ್ತು ಹೀಗೆ ಸಂಗ್ರಹಿಸಲಾದ ಒಟ್ಟು ಕಾವ್ಯವನ್ನು ಸಮಗ್ರಕಾವ್ಯ ಸಂಪುಟವನ್ನಾಗಿ ಪ್ರಕಟಿಸಲು ಸಾಧ್ಯವಿದೆ. ಅವುಗಳನ್ನು ಸ್ಥೂಲವಾಗಿ, ಸೂಕ್ಷ್ಮವಾಗಿ ಅಭ್ಯಾಸ ಮಾಡಲು ಅವಕಾಶವಿದೆ. ತೌಲನಿಕವಾಗಿ ಕೂಡ ನಾರಾಯಣರಾಯರ ಕಾವ್ಯ ಅಂದಿನ ಕಾಲದ ಇತರ ಕವಿಗಳ ಕಾವ್ಯದೊಡನೆ ಅಧ್ಯಯನ ಮಾಡಲು ಪ್ರಯತ್ನಿಸಬಹುದಾಗಿದೆ. ನಾರಾಯಣರಾಯರ ಷಟ್ಪದಿಗಳ ಮೇಲಿನ ಕುಮಾರವ್ಯಾಸ ಮತ್ತು ಇತರ ಕವಿಗಳ ಪ್ರಭಾವವನ್ನೂ, ಭಕ್ತಿಗೀತೆಗಳ (ಕೀರ್ತನೆಗಳು) ಮೇಲೆ ದಾಸರ ಪ್ರಭಾವವನ್ನೂ ಅಧ್ಯಯನ ಮಾಡಬಹುದಾಗಿದೆ. 'ದಾಸ ಸಾಹಿತ್ಯದ ಕೊನೆಯ ಕೊಂಡಿ' ಎಂಬುದನ್ನು ಸಮರ್ಥಿಸಬಹುದಾಗಿದೆ.

**ನಾಟಕ**

ನಾರಾಯಣರಾಯರನ್ನು ಕನ್ನಡಿಗರು 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ನಾಡಗೀತೆಯಿಂದಲೇ ಗುರುತಿಸಿ ಮನ್ನಿಸಿರುವುದು ಐತಿಹಾಸಿಕ ಸತ್ಯವಾದರೂ ಅವರು ಸಾಗ್ರ ಸಂಗೀತ ನಾಟಕಕಾರರಾಗಿ, ವಿಶೇಷವಾಗಿ ಹವ್ಯಾಸಿ ತಂಡಕ್ಕಾಗಿ ರಚಿಸಿದ ನಾಟಕಗಳನ್ನು ಗಮನಿಸದಿರಲು ಸಾಧ್ಯವಿಲ್ಲ. ೧೯೧೦-೨೫ರ ಕಾಲದಲ್ಲಿ ಗದಗಿನ ಯಂಗ್ ಮೆನ್ಸ್ ಫುಟಬಾಲ್ ಅಮೆಚುರ್ಸ್ ಕ್ಲಬ್ಬಿನ ಸದಸ್ಯರ ವಿನಂತಿಯ ಮೇರೆಗೆ ಅವರ ಕ್ಲಬ್ಬಿನ ವಾರ್ಷಿಕೋತ್ಸವಕ್ಕಾಗಿ ಸತತವಾಗಿ ವರ್ಷಕ್ಕೊಂದರಂತೆ ೧೯೧೧ರಿಂದ ೧೯೨೫ರವರೆಗೆ ಹದಿಮೂರು ನಾಟಕಗಳನ್ನು ರಚಿಸಿದ್ದಷ್ಟೇ ಅಲ್ಲದೆ ಅವುಗಳನ್ನು ಫುಟ್‌ಬಾಲ್ ಆಟಗಾರರಿಂದ ರಂಗದ ಮೇಲೆ ಯಶಸ್ವಿ ಪ್ರಯೋಗವಾಗುವಂತೆ ಶಿಸ್ತುಬದ್ಧ ತರಬೇತಿ ಅಥವಾ ತಾಲೀಮು ಕೊಟ್ಟ ಶ್ರೇಯ ನಾರಾಯಣರಾಯರಿಗೆ ಇದೆ. ಆ ನಾಟಕಗಳನ್ನು, ಊರಿಂದ ಊರಿಗೆ ಹೋಗಿ ಫುಟ್‌ಬಾಲ್ ಸ್ಪರ್ಧೆಗಳಲ್ಲಿ ಭಾಗವಹಿಸಿದ ನಂತರ, ಅಲ್ಲಲ್ಲಿ ಪ್ರಯೋಗ ಮಾಡಿ ಹಣಗಳಿಸಲೂ ಪ್ರೋತ್ಸಾಹ ನೀಡಿದರಲ್ಲದೆ ಬಂದ ಹಣದಿಂದ ಗದಗಿನಲ್ಲಿ ವಿದ್ಯಾದಾನ ಸಮಿತಿ ಶಾಲೆಯನ್ನು ಪ್ರಾರಂಭಿಸಲು ನೆರವಾದದ್ದು ಚಿರಸ್ಮರಣೀಯವಾಗಿದೆ. ಸದಸ್ಯರು ಕೇವಲ ವಾರ್ಷಿಕೋತ್ಸವದ ದಿನ ಮಾತ್ರ ಟಿಕೆಟ್ ಇಲ್ಲದೆ ನಾಟಕ ಪ್ರಯೋಗಿಸುತ್ತಿದ್ದರಂತೆ. ಉಳಿದೆಲ್ಲ ಪ್ರಯೋಗಗಳು ಟಿಕೆಟ್ ಇಟ್ಟು ಆಡುವ ಪ್ರಯೋಗಗಳು. ಲಾಭದಾಯಕ ಪ್ರಯೋಗಗಳು. ಹಿಂದೆ ಉಲ್ಲೇಖಿತವಾದ ಹದಿಮೂರು ನಾಟಕಗಳಿಗೆ ನಾನು ಶೋಧಿಸಿ ತೆಗೆದ ಒಂದು ನಾಟಕ (ಪುನರಾಗಮನ) ಸೇರಿಸಿದರೆ ಈಗ ದೊರೆಯುವ ಅವರ ನಾಟಕಗಳು ಹದಿನಾಲ್ಕು ಆಗುತ್ತದೆ. ಅವುಗಳಲ್ಲಿ ಕೇವಲ ಮೂರು ಸಾಮಾಜಿಕ ನಾಟಕಗಳು ಮುದ್ರಣಗೊಂಡಿವೆ. 'ಸ್ತ್ರೀಧರ್ಮ ರಹಸ್ಯ' (೧೯೧೯) 'ಶಿಕ್ಷಣ ಸಂಭ್ರಮ' (೧೯೨೦) ಈ ಎರಡು ನಾಟಕಗಳನ್ನು ನಾರಾಯಣರಾಯರೇ ಪ್ರಕಾಶನ ಮಾಡಿದ್ದಾರೆ. ಅವುಗಳಲ್ಲಿ ಕೆಲವು ಸನ್ನಿವೇಶಗಳ ಫೋಟೋಗಳನ್ನು ಸಮಾವೇಶ ಮಾಡಿಕೊಂಡಿದ್ದಾರೆ. 'ಪತಿತೋದ್ಧಾರ' ನಾಟಕವನ್ನು, ಮನೋಹರ ಗ್ರಂಥಮಾಲೆಯವರು, ರಚನೆಯಾಗಿ ಮೂವತ್ತು ವರ್ಷಗಳ ನಂತರ ಪ್ರಕಟಿಸಿದ್ದಾರೆ (೧೯೫೨ರಲ್ಲಿ). ಮತ್ತೊಂದು ವಿಶೇಷವೆಂದರೆ 'ಸ್ತ್ರೀಧರ್ಮ ನಾಟಕದ ಪದ್ಯಾವಳಿ (೧೯೨೧)', ವಿದ್ಯಾರಣ್ಯ ನಾಟಕದ ಪದ್ಯ ಪುಸ್ತಕವು (೧೯೨೭) ಸಿನೇಮಾ ಹಾಡಿನಂತಹ ಪುಟ್ಟ ಪುಸ್ತಿಕೆಗಳ ರೂಪದಲ್ಲಿ ಪ್ರಕಟವಾಗಿವೆ. ಅವರ ನಾಟಕಗಳ ಹಾಡುಗಳ ಬೇಡಿಕೆಗೆ ಇವು ನಿದರ್ಶನ ಎನ್ನಬಹುದಾಗಿದೆ. 'ಶಿಕ್ಷಣ ಸಂಭ್ರಮ' ನಾಟಕವನ್ನು 'ಬಿ.ಎ.ನಾಟಕ' ಎಂದು ಆಗಿನ ಕಾಲದಲ್ಲಿ ಗುರುತಿಸಲಾಗುತ್ತಿತ್ತಂತೆ. ಆದರೆ ನಾರಾಯಣರಾಯರನ್ನು 'ಆದ್ಯ ಸಾಮಾಜಿಕ ನಾಟಕಕಾರರೆಂದು'

ಕಿರಿಯರಾಗಿದ್ದರೂ ಡಿ.ವಿ.ಜಿ. ಮಾಸ್ತಿ, ಧಾರವಾಡಕರ, ಎಸ್ಕೆ ಕುಲಕರ್ಣಿ, ಡಾ॥ ಎಚ್.ಕೆ. ರಂಗನಾಥ್, ಡಾ॥ ಶ್ರೀರಂಗ, ಡಾ॥ ಮುಗಳಿ, ಡಾ॥ ಮರುಳಸಿದ್ದಪ್ಪ, ಡಾ॥ ಸೂರ್ಯನಾಥ ಕಾಮತ್‌ರವರಂಥ ಕೆಲವು ವಿದ್ವಾಂಸರನ್ನು ಬಿಟ್ಟರೆ ಇನ್ನುಳಿದ ವಿಮರ್ಶಕರು ಅಷ್ಟೊಂದು ಗಮನಕೊಟ್ಟಂತೆ ಕಂಡುಬರುವುದಿಲ್ಲ. ನಾರಾಯಣರಾಯರು ಎ.ಡಿ.ಎ. ಸಂಸ್ಥೆಯವರ ಬೆಂಗಳೂರಿನ ಕಾರ್ಯಕ್ರಮದಲ್ಲಿ 'The Marathi Stage' ಎಂಬ ವಿಷಯದ ಕುರಿತು ಇಂಗ್ಲಿಷಿನಲ್ಲಿ ಪಾಂಡಿತ್ಯ ಪೂರ್ಣ ಪ್ರಬಂಧವನ್ನು ಮಂಡಿಸಿದ್ದರೆಂಬುದನ್ನು ನಾವು ಮರೆಯಲಾಗದು. ಕನ್ನಡ ನಾಟಕದ ಸಾಹಿತ್ಯ ಗುಣ ಹಾಗೂ ಪ್ರಯೋಗದ ದೃಷ್ಟಿಯಿಂದ ಮರಾಠಿಗೆ ಸರಿ-ಮಿಗಿಲೆನ್ನುವಂತಾಗಬೇಕೆಂಬುದು ಅವರ ಹಿರಿಯಾಸೆ, ಪ್ರಯತ್ನವಾಗಿತ್ತು.

ಹುಯಿಲಗೋಳ ನಾರಾಯಣರಾಯರ ಹದಿನಾಲ್ಕು ನಾಟಕಗಳಲ್ಲಿ 'ಭಾರತ ಸಂಧಾನ' ನಾಟಕವನ್ನು ಮಾತ್ರ ಗದ್ಯ ನಾಟಕ ಎನ್ನಬಹುದಾಗಿದೆ. ಉಳಿದೆಲ್ಲವೂ ಸಾಗ್ರ ಸಂಗೀತ ನಾಟಕಗಳು. ಅವರ ನಾಟಕಗಳನ್ನು ೧. ಕಾಲ್ಪನಿಕ ೨. ಐತಿಹಾಸಿಕ ೩. ಪೌರಾಣಿಕ ಹಾಗೂ ೪. ಸಾಮಾಜಿಕ ನಾಟಕಗಳೆಂದು ವಿಭಾಗಿಸಬಹುದಾಗಿದೆ.

ವಜ್ರಮುಕುಟವು (೧೯೧೦), ಪ್ರಮಾರ್ಜನ (೧೯೧೧), ಕನಕವಿಲಾಸ (೧೯೧೨) - ಇವು ನಾರಾಯಣರಾಯರ 'ಕಾಲ್ಪನಿಕ' ನಾಟಕಗಳು.

ಮೋಹಲಹರಿ (೧೯೧೩), ಅಜ್ಞಾತವಾಸ (೧೯೧೪), ಪ್ರೇಮವಿಜಯ ನಾಟಕಂ (೧೯೧೫) ಕುಮಾರರಾಮ (೧೯೧೬), ಶ್ರೀ ವಿದ್ಯಾರಣ್ಯ (೧೯೧೯), ಇವು ಐತಿಹಾಸಿಕ ನಾಟಕಗಳು.

ಭಾರತ ಸಂಧಾನ (೧೯೧೭), ಉತ್ತರ ಗೋಗ್ರಹಣ ಇಲ್ಲವೆ ಉತ್ತರ ಕುಮಾರ (೧೯೩೦) ಇವು ಪೌರಾಣಿಕ ನಾಟಕಗಳು.

ಸ್ತ್ರೀಧರ್ಮ ರಹಸ್ಯ (೧೯೧೮), ಶಿಕ್ಷಣ ಸಂಭ್ರಮ (೧೯೨೦), ಪತಿತೋದ್ಧಾರ ರಚನೆ (೧೯೨೩-೫೩ರ ಅವಧಿಯಲ್ಲಿ ಹಾಗೂ ಮುದ್ರಣ ೧೯೫೩ರಲ್ಲಿ), ಸಂಗೀತ ಪುನರಾಗಮನ (ಬಹುಶಃ ೧೯೪೦-೫೬ ಅವಧಿಯಲ್ಲಿ ರಚನೆ) ಇವು ನಾರಾಯಣರಾಯರ ಸಾಮಾಜಿಕ ನಾಟಕಗಳು.

ನಾರಾಯಣರಾಯರ ನಾಟಕಗಳನ್ನು ಸಂಗ್ರಹಿಸಲು ಇನ್ನೂ ಹೆಚ್ಚು ಪ್ರಯತ್ನ ಮಾಡಬಹುದು ಆದರೆ ಹೆಚ್ಚು ನಾಟಕಗಳು ದೊರೆಯಲಾರವು ಎಂದು ಅವರ ಮಗ ವೆಂಕಟೇಶ ಅಭಿಪ್ರಾಯ ಪಡುತ್ತಾರೆ. ಆದುದರಿಂದ ಸಧ್ಯ ನಾರಾಯಣರಾಯರು ಹದಿನಾಲ್ಕು ನಾಟಕಗಳನ್ನು ಬರೆದಿದ್ದಾರೆ ಎನ್ನಬಹುದು. ಅವರು ನಾಟಕ ಬರೆಯಲು ಮುಖ್ಯ ಕಾರಣವೆಂದರೆ ಕನ್ನಡದಲ್ಲಿ ಒಳ್ಳೆಯ ನಾಟಕಗಳು ದೊರೆಯುತ್ತಿರಲಿಲ್ಲ ಎಂಬುದರಿಂದಾಗಿ ಎನ್ನಬಹುದು.

ಈ ಶತಕದ ಆದಿಭಾಗದಲ್ಲಿ ಪುಣೆಯಲ್ಲಿ ವೃತ್ತಿ ರಂಗಭೂಮಿಯ ನಾಟಕಗಳನ್ನು ನಾರಾಯಣರಾಯರು ನೋಡಿದ್ದರು. ಅವುಗಳಿಂದ ಪ್ರಭಾವಿತರಾಗಿ ಕನ್ನಡದಲ್ಲಿ ಒಳ್ಳೆಯ ನಾಟಕ ರಚನೆ ಮಾಡಲು ಉತ್ಸಾಹದಿಂದ ತೊಡಗಿದರು.

ನಾರಾಯಣರಾಯರ ಕಾಲ್ಪನಿಕ ನಾಟಕಗಳಲ್ಲಿ ವೃತ್ತಿ ರಂಗಭೂಮಿಯ ಪ್ರಭಾವ ಹೆಚ್ಚಾಗಿದೆ. ಇವರ ಐತಿಹಾಸಿಕ ನಾಟಕಗಳಲ್ಲಿ ಭಾರತೀಯ ಪುನರುಜ್ಜೀವನದ ವಿಚಿತ ಲಕ್ಷಣಗಳನ್ನು ಕಾಣಬಹುದಾಗಿದೆ. ನಾಡು-ನುಡಿಗಳ ಪ್ರೇಮ, ಸನಾತನ ಧರ್ಮವನ್ನು ಊರ್ಜಿತಗೊಳಿಸಬೇಕೆಂಬ ಹಂಬಲ, ನಾಡು ಕಟ್ಟಲು ಸಂಘಟನೆಯ ಆವಶ್ಯಕತೆಯ ವಿಚಾರ ಇತ್ಯಾದಿಗಳನ್ನು ಅವರ

ಐತಿಹಾಸಿಕ ನಾಟಕಗಳಲ್ಲಿ ಕಾಣಬಹುದು. ನಿಷ್ಕ್ರಿಯತೆಯನ್ನೂ ಜಾಡ್ಯವನ್ನೂ ಹೋಗಲಾಡಿಸಿ ಚೈತನ್ಯವನ್ನು ಹಾಗೂ ಕ್ರಿಯಾಶೀಲತೆಗಳನ್ನು ಮೂಡಿಸಬೇಕೆಂಬ ವಿಚಾರವನ್ನು ಪೌರಾಣಿಕ ನಾಟಕಗಳಲ್ಲಿ ಸಮರ್ಥಿಸಿದ್ದಾರೆ. ಗಾಢವಾಗಿ ತಟ್ಟಿದ ಪಾಶ್ಚಾತ್ಯೀಕರಣ, ಸಮಾಜ ಸುಧಾರಣೆ, ಗಾಂಧೀವಾದ, ಪತಿತೋದ್ಧಾರ ಮೊದಲಾದ ಅಂದಿನ ಸಾಮಾಜಿಕ ಸ್ಥಿತಿ-ಗತಿಗಳನ್ನು ಸಾಮಾಜಿಕ ನಾಟಕಗಳಲ್ಲಿ ಪ್ರತಿಬಿಂಬಿಸಲಾಗಿದೆ. ಸಂಕ್ರಮಣ ಕಾಲದಲ್ಲಿ ಅವರು ನಾಟಕಗಳಲ್ಲಿ ಬಳಸಿದ ಭಾಷೆ, ವಸ್ತುವಿನ ನಿರ್ವಹಣೆ ಮುಂದಿನ ನಾಟಕಕಾರರಿಗೆ ಮಾರ್ಗದರ್ಶಪರವಾಗಿರಲು ಸಾಧ್ಯ. ಇವರ ನಾಟಕ, ಉದಯ ಕಾಲದ ಬೀಜಗಳನ್ನು ಗರ್ಭೀಕರಿಸಿಕೊಂಡು ನವೋದಯದ ಆಶೋತ್ತರಗಳಿಗೆ ತನ್ನನ್ನು ತೆರೆದುಕೊಂಡಿತು ಎಂದು ಧಾರಾಳವಾಗಿ ಹೇಳಬಹುದು. ಆದರೆ ಅವರ ನಿಲುವು ಮಾತ್ರ ಸಾಂಪ್ರದಾಯಿಕ ಮಿತಿಯಲ್ಲಿಯೇ ಇತ್ತು. ವಿವಿಧ ಬಗೆಯ ನಾಟಕಗಳನ್ನು ಕೊಟ್ಟ ಉತ್ತರ ಕರ್ನಾಟಕದಲ್ಲಿ ನಾಟಕಗಳಿಗೆ ಒಂದು ಬಗೆಯ ಜೀವದಾನ ಮಾಡಿದರು ಎನ್ನಬಹುದು. ಹಾಗೆಯೆ ಆದ್ಯ ಸಾಮಾಜಿಕ ನಾಟಕಕಾರಾಗಿಯೂ ಉತ್ತರ ಕರ್ನಾಟಕದಲ್ಲಿ ಖ್ಯಾತಿ ಪಡೆದರು ಎಂದು ಹೇಳಬಹುದು.

ನಾರಾಯಣರಾಯರ ನಾಟಕಗಳನ್ನು ಇತರ ಸಮಕಾಲೀನ ನಾಟಕಕಾರರ ಕಾಲ್ಪನಿಕ, ಪೌರಾಣಿಕ, ಐತಿಹಾಸಿಕ ನಾಟಕಗಳೊಡನೆ ತುಲನಾತ್ಮಕವಾಗಿ ಅಭ್ಯಾಸ ಮಾಡಬಹುದಾಗಿದೆ. ಪ್ರಯೋಗಗಳ ದೃಷ್ಟಿಯಿಂದಲೂ ವೇಷಭೂಷಣಗಳ ದೃಷ್ಟಿಯಿಂದಲೂ, ಅಭ್ಯಾಸ ನಡೆಸಬಹುದಾಗಿದೆ. ನಾರಾಯಣರಾಯರ ಹದಿನಾಲ್ಕು ನಾಟಕಗಳಲ್ಲಿ ಮೂರು ಸಾಮಾಜಿಕ ನಾಟಕಗಳು ಪ್ರಕಟವಾಗಿದ್ದವು. ಅವು ಈಗ ದೊರೆಯುತ್ತಿಲ್ಲ. ಅವರ ನಾಟಕಗಳ ಸಮಗ್ರ ಸಂಪುಟವನ್ನು ಪ್ರಕಟಿಸಿದರೆ ನಾರಾಯಣ ರಾಯರ ಕೃತಿಗಳು ಉಳಿಯಲು ಸಾಧ್ಯ.

### ಕಾದಂಬರಿ-ಕಥೆ

ನಾರಾಯಣರಾಯರು ಬರೆದ 'ಮೂಡಲು ಹರಿಯಿತು' ಎಂಬ ಕಾದಂಬರಿಯು ಹಸ್ತಪ್ರತಿಯಲ್ಲಿದ್ದಾಗ ಗೆಳೆಯರೊಬ್ಬರು ಓದಲು ತೆಗೆದುಕೊಂಡು ಹೋಗಿದ್ದರಂತೆ. ಅದು ಮರಳಿ ಬರಲೇ ಇಲ್ಲ! ಎಂಥ ಹಾನಿ ಕನ್ನಡಕ್ಕೆ? ನಾರಾಯಣರಾಯರಿಗೆ? ಈಗಲೂ ಅದು ಗದಗಿನಲ್ಲಿ ಯಾರ ಮನೆಯಲ್ಲಿಯಾದರೂ ಜರ್ಜರಿತ ಸ್ಥಿತಿಯಲ್ಲಿರಲು ಸಾಧ್ಯವಿದೆ. ಅಂಥವರು ಆ ಪ್ರತಿಯನ್ನು ಇಲ್ಲವೆ ಅದರ ಝೆರಾಕ್ಸ್ ಪ್ರತಿಯನ್ನು ಒದಗಿಸಿದರೆ ಆ ಕಾದಂಬರಿಯ ಅಭ್ಯಾಸ ಮಾಡಿ ವಿಮರ್ಶಿಸಬಹುದಾಗಿದೆ. ಹಾಗೆಯೇ ನಾರಾಯಣರಾಯರ ಬೇರೆ ಕಾದಂಬರಿಗಳು, ಅನುವಾದಗಳು ಇದೆಯೋ ಎಂಬುದನ್ನು ಶೋಧಿಸಬಹುದಾಗಿದೆ.

ನಾರಾಯಣರಾಯರು ಕೆಲವು ಕಥೆಗಳನ್ನು ಬರೆದಿರಬಹುದು. ಆದರೆ ನನಗೆ ಅವರ ಒಂದೇ ಒಂದು ಕಥೆ 'ನೆತ್ತರದ ಅವುತಣವು' ಸಚಿತ್ರ ಭಾರತದಲ್ಲಿ (ಸಂ. ನಂ2/4) ದೊರೆಯಿತು. ಇನ್ನೂ ಹೆಚ್ಚು ಕಥೆಗಳನ್ನು ಪತ್ರಿಕೆಗಳಲ್ಲಿ ಕಂಡುಹಿಡಿದು ವಿಮರ್ಶಿಸಬಹುದಾಗಿದೆ.

### ಲೇಖನ-ಭಾಷಣ-ಸಂದರ್ಶನಗಳು

ನಾರಾಯಣರಾಯರು ತುಂಬು ಜೀವನ ನಡೆಸಿದವರು. ಅವರ ಅನುಭವ ವಿಶಾಲವಾದದ್ದು. ವಿವಿಧ ವಿಷಯಗಳ ಕುರಿತು ಚಿಂತನೆ ನಡೆಸಿದವರು. ಹಲವಾರು ಸಂದರ್ಭಗಳಲ್ಲಿ ಲೇಖನ, ಭಾಷಣ ಹಾಗೂ ಸಂದರ್ಶನಗಳನ್ನು ಕೊಟ್ಟು ತಮ್ಮ ಹಿರಿಮೆಯನ್ನು ಪ್ರಸ್ತಾಪಿಸಿದ್ದಾರೆ. ಇಂಥ ಹದಿನೆಂಟು ಲೇಖನಗಳಲ್ಲಿ ಒಂದು ಇಂಗ್ಲಿಷಿನಲ್ಲಿದೆ.

ಕುಮಾರವ್ಯಾಸನ ಕುರಿತು ಅವರು ವಿಶೇಷ ಅಭ್ಯಾಸ ಮಾಡಿದ್ದರು. ಆದುದರಿಂದ ಕೆಲವು ಲೇಖನಗಳನ್ನು, ಸಂದರ್ಶನಗಳನ್ನು ಕೊಟ್ಟಿದ್ದಾರೆ. ಪುರಂದರದಾಸರು, ವಿದ್ಯಾರಣ್ಯರು, ಲೋಕಮಾನ್ಯ ತಿಲಕರು ಕುರಿತು ಭಾಷಣಗಳನ್ನು ಮಾಡಿದ್ದಾರೆ, ಇಲ್ಲವೆ ಲೇಖನ ಬರೆದಿದ್ದಾರೆ.

ಲಕ್ಕುಂಡಿಯ ಹಿರಿಮೆ, ವಿಜಯನಗರದ ಕಲೆಗಳು, ಸಂಗೀತ ನಾಟಕಗಳು, ವ್ಯವಸಾಯ ರಂಗಭೂಮಿಯ ಸಮಸ್ಯೆ, ಏಳುಕೋಟಿಗ್ಯೊ, ಉತ್ತರ ಕರ್ನಾಟಕ ರಂಗಭೂಮಿಯ ಇತಿಹಾಸ, ಕೃತಪುರ ನಾಟಕ ಮರಳಿ ಇತಿಹಾಸ, ಗರೂಡ ಸದಾಶಿವರಾಯರು - ಮೊದಲಾದ ವಿಷಯಗಳ ಕುರಿತು ಲೇಖನ, ಭಾಷಣಗಳನ್ನು ಬರೆದು ಮಂಡಿಸಿದ್ದಾರೆ. ಹಲವಾರು ಕವಿ ಸಮ್ಮೆಳನಗಳಲ್ಲಿ, ನಾಟಕ ಸಮ್ಮೇಳನಗಳಲ್ಲಿ, ಸಾಹಿತ್ಯ ಸಮ್ಮೇಳನಗಳಲ್ಲಿ ಪಾಲ್ಗೊಂಡಿದ್ದಾರೆ, ಭಾಷಣ ಮಾಡಿದ್ದಾರೆ, ಮನ್ನಣೆ ಹೊಂದಿದ್ದಾರೆ. ೧೯೫೬ರಲ್ಲಿ ಬೆಂಗಳೂರಿನಲ್ಲಿ ನಡೆದ ಪ್ರಥಮ ರಾಜ್ಯೋತ್ಸವದಲ್ಲಿ ನಾರಾಯಣರಾಯನ್ನು ಕರೆಸಿ ಸನ್ಮಾನಿಸಲಾಯಿತು. ಅವರ 'ಪತಿತೋದ್ಧಾರ' ನಾಟಕಕ್ಕೆ ಮುಂಬಯಿ ಸರಕಾರದಿಂದ ಬಹುಮಾನ ದೊರೆಯಿತು.

ನಾರಾಯಣರಾಯರ ಒಟ್ಟು ಈಗ ದೊರೆಯುವ ಸಾಹಿತ್ಯದಲ್ಲಿ ಶೇಕಡ ೯೦ರಷ್ಟು ಹಸ್ತ ಪ್ರತಿ ರೂಪದಲ್ಲಿದ್ದು ಜರ್ಜರಿತವಾಗಿದೆ. ಕೂಡಲೆ ಅವುಗಳನ್ನು ಪ್ರಕಟಿಸಿ ಕಾಯ್ದಿಡದೇ ಹೋದರೆ ಮುಂದಿನ ಪೀಳಿಗೆಗೆ ಅದು ಸಂಪೂರ್ಣ ದೊರೆಯದಂತಾಗುತ್ತದೆ. ಅವರ ಕೆಲವು ಮುದ್ರಿತ ನಾಟಕಗಳು ಪತ್ರಿಕೆಗಳಲ್ಲಿಯ ಲೇಖನಗಳೂ-ಬಿಡಿ ಕವನಗಳೂ ಈಗ ದೊರೆಯುತ್ತಿಲ್ಲ. ಕರ್ನಾಟಕ ಸರಕಾರ, ಕನ್ನಡ ಸಾಹಿತ್ಯ ಪರಿಷತ್ತು, ದೊಡ್ಡ ದೊಡ್ಡ ಪ್ರಕಾಶಕರು ಹಾಗೂ ನಾರಾಯಣರಾಯರ ಅಭಿಮಾನಿಗಳು, ಸಂಬಂಧಿಕರು ಅವರ ಕೃತಿಗಳನ್ನು ಉಳಿಸಿಕೊಳ್ಳಬಹುದಾಗಿದೆ. ಅವರ ಜೀವನ ಚರಿತ್ರೆಯನ್ನು ನನ್ನ ನೆರವಿನಿಂದ ಪ್ರಕಟಿಸಬಹುದಾಗಿದೆ. ಅಂಥ ಸಮಗ್ರ ಸಂಪುಟಗಳನ್ನು ಹೀಗೆ ಪ್ರಕಟಿಸಬಹುದಾಗಿದೆ -

1. ಹುಯಿಲಗೋಳ ನಾರಾಯಣರಾಯರ ಜೀವನ ಚರಿತ್ರೆ: ೧೫೦ ಪುಟದ ಗ್ರಂಥ
2. ಹುಯಿಲಗೋಳ ನಾರಾಯಣರಾಯರ ಕಾವ್ಯ: ೧೫೦ ಪುಟದ ಗ್ರಂಥ (ಷಟ್ಪದಿಗಳು, ಕೀರ್ತನೆಗಳು, ಸ್ವಾಗತಗೀತೆಗಳು, ಬಿಡಿ ಕವನಗಳು)
3. ಹುಯಿಲಗೋಳ ನಾರಾಯಣರಾಯರ ನಾಟಕಗಳು ಭಾಗ 1: ೬೦೦ ಪುಟದ ಗ್ರಂಥ (ಕಾಲ್ಪನಿಕ ಹಾಗೂ ಐತಿಹಾಸಿಕ)
4. ಹುಯಿಲಗೋಳ ನಾರಾಯಣರಾಯರ ನಾಟಕಗಳು ಭಾಗ 2: ೫೦೦ ಪುಟದ ಗ್ರಂಥ (ಪೌರಾಣಿಕ ಹಾಗೂ ಸಾಮಾಜಿಕ)
5. ಹುಯಿಲಗೋಳ ನಾರಾಯಣರಾಯರ

   ಭಾಷಣ-ಲೇಖನ-ಸಂದರ್ಶನಗಳು: ೧೦೦ ಪುಟದ ಗ್ರಂಥ

ಈ ಗ್ರಂಥಗಳನ್ನು ಪ್ರಕಟಣೆಯ ನಂತರ ಅಧ್ಯಯನ ಮಾಡಲು ಅನುಕೂಲವಾಗುತ್ತದೆ. ಸ್ಥೂಲವಾಗಿ, ಸೂಕ್ಷ್ಮವಾಗಿ, ತೌಲನಿಕವಾಗಿ ಅಭ್ಯಾಸಮಾಡಿ ನಾರಾಯಣರಾಯರನ್ನು ಕವಿಯಷ್ಟೇ ಅಲ್ಲ, ಅದಕ್ಕಿಂತ ಮಿಗಿಲಾಗಿ ನಾಟಕಗಳನ್ನು (ಸಾಮಾಜಿಕ) ಕೊಟ್ಟ ಕನ್ನಡದ ಕಿಂಕರ ಎಂದು ಅವರನ್ನು ಯುವ ಪೀಳಿಗೆಯ ಕಡೆಗೆ ಕರೆದುಕೊಂಡು ಬರಲು ಸಾಧ್ಯವಾಗುವುದು.

# ದ್ರೌಪದಿ: ಒಂದು ವಿವೇಚನೆ

ಡಾ. ವಿ. ಕೆ. ಮಣಿಮಾಲಿನಿ

ಅನಾದಿ ಕಾಲದಿಂದ ಆಧುನಿಕ ಕಾಲದವರೆಗೆ ಭಾರತೀಯ ಸ್ತ್ರೀಯರ ಬದುಕು ಭಾವನಾತ್ಮಕ, ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕ ನೆಲೆಗಳಲ್ಲಿ ಪುರುಷರನ್ನು ಅವಲಂಬಿಸಿಯೇ ನಡೆಯುತ್ತ ಬಂದಿದೆ. ಇಂದಿನ ವಿಮುಕ್ತ (liberated) ಮಹಿಳೆಯು ಕೂಡಾ ಯಾವುದೋ ಸೂಕ್ಷ್ಮ ಸ್ಥರದಲ್ಲಿ ಈ ಸುರಕ್ಷೆಯನ್ನು - ಅಪ್ರಜ್ಞಾಪೂರ್ವಕವಾಗಿಯಾದರೂ - ಬಯಸುತ್ತಾಳೆ. ಪರಸ್ಪರ ಆಲಂಬನೆಯನ್ನು ಮಾನವ ಜಾತಿಗೇ ಸಮಾನ ಲಕ್ಷಣವಾಗಿ ಗುರುತಿಸಬಹುದಾದರೂ. ದೈಹಿಕ ಮಿತಿಗಳು, ಲೈಂಗಿಕ ಸೂಕ್ಷ್ಮಾಂಶ (vulnurability)ಗಳು, ಪ್ರಜನನ ಪ್ರಕ್ರಿಯೆಯಲ್ಲಿ ವಹಿಸುವ ಪಾತ್ರ, ಕೌಟುಂಬಿಕ ಆಸ್ಥೆಗಳಿಂದಾಗಿ ಮಹಿಳೆಯರಿಗೆ ಈ 'ಕ್ಷೇಮಭಾವ'ದ ಅಗತ್ಯ ಹೆಚ್ಚಾಗಿರುತ್ತದೆ. ಈ ರಕ್ಷಿತ ಆವರಣದ ಒಳಗೇ ಮಹಿಳೆಯ ಸ್ವಂತಿಕೆಗಾಗಿ ಹೋರಾಟ, ನಿಜದ ನೆಲೆಯ ಅನ್ವೇಷಣೆಗಳು ನಡೆಯುತ್ತವೆ.

ಸ್ತ್ರೀ ಎಂದರೆ ಪುರುಷನಿಗೆ ಲಾಲಸೆ, ಭೀತಿ, ಪ್ರೀತಿ, ಗೌರವಗಳ ಸಮ್ಮಿಶ್ರ ಭಾವವಿದೆ. ಆದರೆ ಮಹಿಳೆಯು ಪುರುಷನಿಗಿಂತ ಬೇರೆಯಾಗಿ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಲಾರಳು. ತನ್ನನ್ನು ಗಂಡಿಗಿಂತ ಕೀಳಾಗಿ ತಿಳಿಯುವ ಪ್ರವೃತ್ತಿಯು ಮಹಿಳೆಯರ ಸ್ವಭಾವದಲ್ಲಿಯೇ ಅಡಕವಾಗಿದೆ. ಇದರಿಂದಾಗಿ, ಗಂಡನ್ನ ಒಂದು ಆದರ್ಶವಾಗಿಟ್ಟುಕೊಂಡು, ಆ ಚೌಕಟ್ಟಿಗೆ ತನ್ನನ್ನು ಅಳವಡಿಸಿಕೊಳ್ಳುವ ಪ್ರಯತ್ನದಲ್ಲಿ ಮಹಿಳೆಯು ತೊಡಗುತ್ತಾಳೆ.

ವಾಸ್ತವವಾಗಿ, ಹೆಣ್ಣು-ಗಂಡುಗಳ ಮಧ್ಯೆ ಇರಬೇಕಾದುದು ಸ್ಪರ್ಧಾತ್ಮಕ ಮನೋಭಾವವಲ್ಲ. ಸಮಾಜದಲ್ಲಿ ಸ್ತ್ರೀ-ಪುರುಷರಿಬ್ಬರಿಗೂ ನಿರ್ದಿಷ್ಟ ಪಾತ್ರ (role)ಗಳನ್ನು ನಿಭಾಯಿಸಬೇಕಾಗಿ ಬರುತ್ತದೆ. ಇಲ್ಲಿ ಪರಸ್ಪರ ಪೂರಕ ತತ್ವದ ಅನುಸರಣೆಯಿರಬೇಕೇ ಹೊರತಾಗಿ ತರ-ತಮ ನೆಲೆಗಳ ನಿರ್ಣಯವಲ್ಲ. ಪ್ರಕೃತಿಯು ನಿರ್ದಿಷ್ಟ ಉದ್ದೇಶದಿಂದ ಸ್ತ್ರೀ-ಪುರುಷರಲ್ಲಿ ಶಾರೀರಿಕ ಭೇದಗಳನ್ನೂ, ವಿಭಿನ್ನ ಮಾನಸಿಕ ಕ್ಷಮತೆಗಳನ್ನೂ ನಿರ್ಮಿಸಿದೆ. ಆದರೆ ಮೂಲತಃ ಅವರು ಸಹಜೀವಿಗಳೇ ಆಗಿದ್ದಾರೆ.

ಈ ಸಮಭಾವವನ್ನು ಆತ್ಮಸಾತ್ ಮಾಡಿಕೊಂಡು ಸತ್ವವನ್ನೂ, ವೈಯಕ್ತಿಕತೆಯನ್ನೂ ತೋರಿದ ಸ್ತ್ರೀಯರನ್ನು ನಾವು ಇತಿಹಾಸದಲ್ಲಿ ಅಪೂರ್ವವಾಗಿ ಕಾಣುತ್ತೇವೆ. ಇಂಥ ಒಂದು ವಿರಳ ಪಂಕ್ತಿಯ ಪುರಾಣ ಪ್ರತೀಕವಾಗಬಲ್ಲ ಯೋಗ್ಯತೆಯನ್ನು ದ್ರೌಪದಿಯ ಪಾತ್ರದಲ್ಲಿ ನಾವು ಗುರುತಿಸಬಹುದಾಗಿದೆ.

ದ್ರೌಪದಿಯ ಪಾತ್ರವು 'ಭಾರತೀಯ ಸಾಹಿತ್ಯದ ಆದಿಮ ಪ್ರತಿಮೆ' (archetypal image) ಯಾಗಬಲ್ಲುದೇ? ಸಂಕೀರ್ಣವಾದ ಬದುಕಿನ ಒಳಸುಳಿಗೆ ಸಿಕ್ಕಿ ಉದ್ದಕ್ಕೂ ಒದ್ದಾಡಿದರೂ ಅವಳು ವೈಯಕ್ತಿಕತೆಯನ್ನು ಉಳಿಸಿಕೊಳ್ಳುತ್ತಾಳೆಯೇ? ದಮನಕಾರೀ ಪ್ರವೃತ್ತಿಯ ವಿರುದ್ಧದ ಅವಳ ಹೋರಾಟವು ಯಶಸ್ವಿಯಾಗಿದೆಯೇ? ಪುರುಷ ಪಾತ್ರಗಳೊಂದಿಗಿನ ಸಂಬಂಧದ ಆಚೆಗೂ ಅವಳಿಗೆ ಅಸ್ತಿತ್ವವಿದೆಯೋ? ಒಟ್ಟಾರೆಯಾಗಿ ಅವಳು ಸಮಗ್ರ ಸ್ತ್ರೀತ್ವವನ್ನು ಪ್ರತಿನಿಧಿಸುತ್ತಾಳೆಯೋ? ಸ್ತ್ರೀಯ ಬಗೆಗೆ ಪುರುಷನಿಗಿರುವ ಅಥವಾ ತನ್ನ ಬಗೆಗೇ ಸ್ತ್ರೀಗಿರುವ ನೈಚ್ಯಭಾವದ ಸ್ವರೂಪವನ್ನು ದ್ರೌಪದಿಯ ಮೂಲಕ ಸ್ಪಷ್ಟಪಡಿಸಿಕೊಳ್ಳಬಹುದೇ? ... ಮುಂತಾದ ಪ್ರಶ್ನೆಗಳ ಹಿನ್ನೆಲೆಯೊಂದಿಗೆ ದ್ರೌಪದಿಯ ಮನೋಭಾವಗಳನ್ನು, ವ್ಯಕ್ತಿತ್ವದ ಸಂಕೀರ್ಣ ಪದರಗಳನ್ನು ಒಟ್ಟೂ ಅವಳ ಬದುಕಿನ ಸಾಫಲ್ಯ - ವೈಫಲ್ಯಗಳನ್ನೂ ವಿಶ್ಲೇಷಿಸುವ ಪ್ರಯತ್ನವನ್ನು ಈ ಲೇಖನವು ಮಾಡುತ್ತದೆ.

ದ್ರೌಪದಿಯ ವ್ಯಕ್ತಿತ್ವದ ಅರ್ಥೈಸುವಿಕೆಯಲ್ಲಿ ಅನೇಕ ಅಡ್ಡಗೋಡೆಗಳನ್ನು ನಿವಾರಿಸಿಕೊಳ್ಳುವ ಅಗತ್ಯವಿದೆ. ಎಷ್ಟೋ ಬಾರಿ ಒಂದು ಕೃತಿಯು ಹೇಳದೇ ಬಿಟ್ಟಿರುವುದು ಅದು ಹೇಳಿರುವುದಕ್ಕಿಂತ ಹೆಚ್ಚು ಮೌಲಿಕವಾಗಿರುತ್ತದೆ. ಆದುದರಿಂದಲೇ ಸಾಹಿತ್ಯದ ಅಭ್ಯಾಸಿ, ಸಿದ್ಧ ಪ್ರತಿಮೆಗಳನ್ನು ಒಡೆದು ಅವುಗಳೊಳಗಿನ ನಿಜವನ್ನು ಪರಿಶೀಲಿಸುವ ಅಗತ್ಯವು ಕಂಡುಬರುತ್ತದೆ.

ದ್ರೌಪದಿಯ ನಿಜವಾದ ವ್ಯಕ್ತಿತ್ವವನ್ನು ಗ್ರಹಿಸುವಲ್ಲಿರುವ ಮೊದಲನೆಯ ತೊಡರು ಅವಳಿಗೆ ಆರೋಪಿತವಾಗಿರುವ ದೈವಿಕ ಆವರಣವಾಗಿದೆ. ವ್ಯಾಸರು ತಮ್ಮ ಕಾಲಕ್ಕೆ ಪ್ರಚಲಿತವಾಗಿದ್ದ ವೈದಿಕ ದಂತಕಥೆಗಳನ್ನೂ, ಆಖ್ಯಾಯಿಕೆಗಳನ್ನೂ ಆದಷ್ಟು ಮಟ್ಟಿಗೆ ಮೂಲಕ್ಕೆ ನಿಷ್ಠರಾಗಿಯೇ ಕೊಟ್ಟಿದ್ದಾರೆಂಬುದು ನಿಜವೇ. ಆದರೆ, "ಅವರು ತಮ್ಮ ಕಡೆಯಿಂದ ಸೇರಿಸಿರುವುದೆಂದರೆ, ತಮ್ಮ ಕಾಲದ ತಿಳಿವಳಿಕೆ ಮತ್ತು ನೀತಿಯ ದೃಷ್ಟಿಯಿಂದ ವರ್ಜ್ಯವೆಂದು ಅನ್ನಿಸಬಾರದೆಂದು ಬಹುಶಃ ಪ್ರತಿಯೊಂದು ಘಟನೆಗೂ ದೈವೀ ಹಾಗೂ ಅದ್ಭುತವಾದ ದೈವೀ ಕಾರಣವನ್ನು ಕೊಟ್ಟು ಪುಷ್ಟೀಕರಿಸಿದ್ದಾರೆ." (ರಾಜವಾಡೆ. ವಿ.ಕೆ. ಕನ್ನಡ ಅನು:೧೯೯೩ ಪು.೫೭)

ಹೀಗೆ ಸಮರ್ಥನೆಯನ್ನು ಪಡೆದ ಅಸಂಖ್ಯ ಘಟನೆಗಳನ್ನು ಮಹಾಭಾರತದ ಉದ್ದಕ್ಕೂ ಕಾಣುತ್ತೇವೆ. ಸಮಾಜದ ಆಕ್ಷೇಪಗಳು ಎದುರಾಗಬಹುದಾದ ಸಂದರ್ಭಗಳಲ್ಲೆಲ್ಲ ಅವರು ದೈವಸಂಕಲ್ಪದ ಮೊರೆ ಹೊಕ್ಕು ಪಾರಾಗಿ ಬಿಡುತ್ತಾರೆ.

ದ್ರೌಪದಿಯ ಬದುಕೂ ಈ ಹೇಳಿಕೆಗೆ ಹೊರತಾಗಿಲ್ಲ. ಅವಳ ಜನನವಾಗಲಿ, ಆ ಕಾಲದ ಸಮಾಜದಿಂದ ಅಷ್ಟಾಗಿ ಮನ್ನಿಸಲ್ಪಡದಿದ್ದ ಅವಳ ಬಹುಪತಿತ್ವವಾಗಲಿ ಇದಕ್ಕೆ ಉದಾಹರಣೆಗಳಾಗುತ್ತವೆ. ಮೊದಲಿಗೆ ಅವಳ ಜನ್ಮವೃತ್ತಾಂತವನ್ನು ಈ ದೃಷ್ಟಿಯಿಂದ ಪರಿಗಣಿಸಬಹುದು.

"ಕೃಷ್ಣೇ ತ್ಯೇವಾಬ್ರುವನ್ಕೃಷ್ಣಾಂ ಕೃಷ್ಣಾಭೂತ್ಸಾ ಹಿ ವರ್ಣತಃ
ತಥಾ ತನ್ಮಿಥುನಂ ಜಜ್ಞೆ ದ್ರುಪದಸ್ಯ ಮಹಾಮಖೇ"

(ಮಹಾಭಾರತ. ಸಂ.2 ಪು.1089)

ದ್ರುಪದನ ಮಹಾಯಜ್ಞಮುಖದಿಂದ ದ್ರೌಪದಿಯು ಜನಿಸುತ್ತಾಳೆ ಎಂದು ಇಲ್ಲಿ ವ್ಯಾಸರು ಹೇಳುತ್ತಾರೆ. "ಯಜ್ಞವು ಪೂರ್ತಿಯಾದಾಗ ಯಾಜನು ಹವಿಸ್ಸನ್ನು ಸ್ವೀಕರಿಸಲು ದ್ರುಪದನ ಪತ್ನಿಯನ್ನು ಕರೆಯುತ್ತಾನೆ. ಆಗ ಅವಳು ತಾನು ಸ್ನಾನ ಮಾಡಿ ಬರುವುದಾಗಿ ಹೇಳುತ್ತಾಳೆ. ಆದರೆ ಕಾಲವಿಳಂಬಕ್ಕೆ ಸಿದ್ಧನಿರದ ಯಜನು ಆ ಹವಿಸ್ಸನ್ನು ಯಜ್ಞಕುಂಡಕ್ಕೆ ಸಮರ್ಪಿಸಿ ಬಿಡುತ್ತಾನೆ. ಅದರಿಂದ ಮೊದಲಿಗೆ ದೃಷ್ಟದ್ಯುಮ್ನನೂ ಆ ಬಳಿಕ ಕೃಷ್ಣೆಯೂ ಉದ್ಭವಿಸುತ್ತಾರೆ"

ಎಂಬ ಉಲ್ಲೇಖವೂ ಇದೆ.

ಇದರ ಸತ್ಯಾಸತ್ಯತೆಯನ್ನು ಹುಡುಕಹೊರಡುವವರಿಗೆ 'ಅಗ್ನಿ' ಮತ್ತು 'ಯಜ್ಞ' ಈ ಎರಡೂ ಪರಿಕಲ್ಪನೆಗಳು ಮುಖ್ಯವಾಗುತ್ತವೆ. ಅಗ್ನಿಯು ಆರ್ಯಪೂರ್ವಜರಿಗೆ ತನ್ನ ಉಪಯುಕ್ತತೆಯ ಮೂಲಕ ಅತ್ಯಂತ ಶ್ರೇಷ್ಠ ದೇವತೆಯಾಗಿದ್ದುದು ವಿದಿತವೇ ಇದೆ. "ವನ್ಯ ಋಷಿ ಪೂರ್ವಜರು ಅಗ್ನಿಯ ಸುತ್ತಲೂ ಸೇರುತ್ತಿದ್ದರು. ಜನನೇಂದ್ರಿಯಗಳಿಗೆ ಸಂಬಂಧ ಪಟ್ಟಂತೆ ಯಾವ ಅಡಚಣೆಗಳೂ ಬರುತ್ತಿದ್ದುವೋ ಅವುಗಳ ಬಗೆಗೆ ಮಾತಾಡಿಕೊಳ್ಳುತ್ತಿದ್ದರು. ಅಲ್ಲಿಯೇ ಗರ್ಭಾದಾನವನ್ನೂ ಮುಗಿಸಿಬಿಡುತ್ತಿದ್ದರು. ಈ ಮೂರು ಕ್ರಿಯೆಗಳನ್ನು ಸೇರಿಸಿ ಅವರು 'ಯಜ್ಞ' ಎಂದು ಕರೆಯುತ್ತಿದ್ದರು" (ರಾಜವಾಡೆ. ವಿ.ಕೆ. ಪೂರ್ವೋಕ್ತ. ಪು. ೧೧೩) ಮಾತ್ರವಲ್ಲ,

"ಪ್ರಜನನೇ ಪ್ರಜನನಂ ಹಿವಾ ಅಗ್ನಿಃ"
(ಅಗ್ನಿ ಎಂದರೆ ಜನನೇಂದ್ರಿಯವೇ)

(ತೈತ್ತಿರೀಯ ಸಂಹಿತೆ. ಮೊದಲನೆಯ ಕಾಂಡ. ಐದನೆಯ ಪ್ರಪಾಠಕ. ಒಂಭತ್ತನೆಯ ಅನುವಾಕ್)

ಎನ್ನುವ ಅಭಿಪ್ರಾಯಗಳೂ ವ್ಯಕ್ತವಾಗಿವೆ. ಕಾಲದಿಂದ ಕಾಲಕ್ಕೆ ಒಂದು ಪರಿಕಲ್ಪನೆಯ ಅರ್ಥವಿನ್ಯಾಸವಾಗಲಿ, ವ್ಯಾಖ್ಯಾನವಾಗಲಿ ಬದಲಾಗುತ್ತ ಹೋಗುವುದು ಭಾಷಿಕ-ಸಾಂಸ್ಕೃತಿಕ ಎರಡೂ ನೆಲೆಗಳಲ್ಲಿ ಸಹಜವಾದ ಪ್ರಕ್ರಿಯೆಯಾಗಿದೆ. ಹೀಗೆ 'ಯಜ್ಞ' ಮತ್ತು 'ಅಗ್ನಿ'ಗಳ ಅರ್ಥಾಂತರವಾಗಿರಬೇಕೆನ್ನುವ ವಾದವನ್ನು ಒಪ್ಪಬಹುದೆನಿಸುತ್ತದೆ.

"The Expression", "Surya Putra" or "Chandra Putra" when applied to human beings refers to their spiritual and not to their earthly father or in other words to their patron deity or Ishta devata". (Havel. E.B. (n.d) P.41)

ಎನ್ನುವ ಅಭಿಪ್ರಾಯವನ್ನು ಸ್ವಲ್ಪ ಹಿಂಜಿದರೆ, ದ್ರುಪದನ ವಂಶದವರು ಅಗ್ನಿಯ ಆರಾಧಕರಾದುದರಿಂದ ದ್ರೌಪದಿಗೆ ಅಗ್ನಿಕನ್ಯತ್ವವು ಪ್ರಾಪ್ತವಾಯಿತು ಎನ್ನುವ ಅರ್ಥವು ಸ್ಫುರಿಸುತ್ತದೆ. ಅವಳ ಬದುಕಿನ ಅಸಹಜ-ಅನೂಹ್ಯ ತಿರುವುಗಳಿಗೆ ಒಂದು ದೈವೀ ಸಮರ್ಥನೆಯನ್ನು ಕೊಡುವ ಪ್ರಯತ್ನವಾಗಿ ಅವಳ ಜನನವನ್ನು ವೈಭವೀಕರಿಸಲಾಗಿದೆ. ಈ ದೃಷ್ಟಿಯಿಂದ ಗಮನಿಸಿದಾಗ ಇಲ್ಲಿಯ ಅರ್ಥ ಸಂದಿಗ್ಧತೆಯು ಕೂಡಾ ಉದ್ದೇಶಪೂರ್ವಕವಾಗಿತ್ತೇನೋ ಎನ್ನುವ ಸಂದೇಹವೂ ಬರುತ್ತದೆ.

ಇನ್ನೂ ಒಂದು ಮಗ್ಗುಲಿನಿಂದ ನೋಡುವುದಾದರೆ 'ಯೋನಿ' ಎಂಬ ಪದದ ಮೂಲ ಅರ್ಥ 'ಗೃಹ' ಎಂದಿದೆ. ವೇದಗಳಲ್ಲಿ ಈ ಪದವು ಮನೆಯೆಂಬ ಅರ್ಥದಲ್ಲಿಯೇ ಬಳಕೆಯಾಗಿದೆ.

"ಆರೋಹಂತು ಜನಯೇ ಯೋನಿ ಅಗ್ನಿ"
(ಸ್ತ್ರೀಯರು ಮೊದಲು ಮನೆಯನ್ನು ಪ್ರವೇಶಿಸಲಿ)

(ತೈತ್ತಿರೀಯ ಅರಣ್ಯಕ. ಆರನೆಯ ಪ್ರಪಾಠಕ, ಒಂದನೆಯ ಅನುವಾಕ್) ಎನ್ನುವ ಹೇಳಿಕೆಯನ್ನು ಗಮನಿಸಿದಾಗ ಈ ಅಂಶವು ಸ್ಪಷ್ಟವಾಗುತ್ತದೆ.

ರಾಜವಾಡೆಯವರು ಈ ಹಿನ್ನೆಲೆಯಲ್ಲಿ 'ಅಯೋನಿಜ' ಪದದ ಅರ್ಥವ್ಯಾಪ್ತಿಯ ಬಗೆಗೆ ವಿವೇಚಿಸುತ್ತಾ "ಅಯೋನಿಜ ಎಂದರೆ ಮನೆಯಿಂದ ಹೊರಗೆ ಜನಿಸಿದ ಮಗುವೆಂದಷ್ಟೇ

ಆಗುತ್ತದೆ. ಪ್ರಜೋತ್ಪಾದನೆಯ ಕಾರ್ಯವನ್ನೂ ಅಗ್ನಿಕುಂಡದ ಸುತ್ತಮುತ್ತಲಿನ ಜಾಗದಲ್ಲಿ ಮಾಡಿಮುಗಿಸುತ್ತಿದ್ದ ಉದಾಹರಣೆಗಳು ಮಹಾಭಾರತದಲ್ಲಿ ಹೇರಳವಾಗಿವೆ. ಆದುದರಿಂದ 'ಅಯೋನಿಜ' ಎಂದರೆ ಯಜ್ಞಮಂಟಪದಲ್ಲಿ ಹುಟ್ಟಿದ ಮಗು ಎಂದು ಅರ್ಥೈಸಬೇಕು" (ಪೂರ್ವೋಕ್ತ ಪು. ೪೨) ಎನ್ನುತ್ತಾರೆ. ನಾಗರಿಕತೆಯ ಶೈಶವ ಕಾಲದ ಘಟನೆಯನ್ನು ಆ ಸಂದರ್ಭದಲ್ಲಿಯೇ ನಾವು ಗ್ರಹಿಸಬೇಕಾಗುತ್ತದೆ. ಬಹಿರಂಗ ಸಂಭೋಗವು ನಿಷಿದ್ಧವಾಗಿರದಿದ್ದ ಸಾಮಾಜಿಕ ಪರಿಸರಕ್ಕೆ ಸಂಬಂಧಿಸಿದಂತೆ, ಈ ಹೇಳಿಕೆಗೆ ಮಹತ್ವವು ಬರುತ್ತದೆ.

ಇದಲ್ಲದೆ, "ದ್ರೌಪದಿಯ ವ್ಯಕ್ತಿತ್ವದಲ್ಲಿ ಅಗ್ನಿತುಲ್ಯವಾದ ತೇಜಸ್ಸು ಅಡಕವಾಗಿತ್ತು. ಆದುದರಿಂದ ಮಹಾಭಾರತಕಾರರು ಅವಳ ಜನನವನ್ನು ಅಗ್ನಿಕುಂಡಕ್ಕೆ ಜೋಡಿಸಿದ್ದಾರೆ ಮಾತ್ರವಲ್ಲದೆ, ದ್ರೌಪದಿಯೂ ಕಾನೀನಳಾಗಿ ಯಜ್ಞಕುಂಡದ ಬಳಿ ಪರಿತ್ಯಕ್ತೆಯಾಗಿದ್ದಿರಬಹುದು. ಅಥವಾ ಅವಳ ಜನ್ಮವೂ ನಿಯೋಗ ಪದ್ಧತಿಯಿಂದಾಗಿರಬಹುದು" (ಪೆಂಡ್ಸೆ, ಶಂಕರ ಕೇಶವ. 1964 ಪು. 277) ಎನ್ನುವ ಅಭಿಪ್ರಾಯಗಳೂ ಕಂಡುಬರುತ್ತವೆ.

ಈ ಎಲ್ಲ ಅಭಿಪ್ರಾಯಗಳನ್ನು ಕ್ರೋಢೀಕರಿಸುವುದಾದರೆ ದ್ರೌಪದಿಯ ಜನನವು ಅಗ್ನಿಕುಂಡದಿಂದ ಆಯಿತೆನ್ನುವ ನಂಬಿಕೆಯು ಕಳಚಿ ಬೀಳುತ್ತದೆ. ಒಟ್ಟಾರೆಯಾಗಿ, ಕುರುಕುಲದ ಪಟ್ಟಮಹಿಷಿಯಾಗಲಿರುವ ದ್ರೌಪದಿಯ ಹುಟ್ಟಿಗೆ ಅಂಟಿದ ಕಳಂಕವನ್ನು ತೊಡೆಯುವುದು ವ್ಯಾಸರಿಗೆ ಅನಿವಾರ್ಯವಾಗಿತ್ತು. ಆದುದರಿಂದಲೇ ಅವರು ದ್ರೌಪದಿಗೆ ಯಜ್ಞೋದ್ಭವತ್ವವನ್ನು ಆರೋಪಿಸಿದರು ಎನ್ನುವ ವಾದಕ್ಕೆ ಹೆಚ್ಚಿನ ಪುಷ್ಟಿಯು ದೊರೆಯುತ್ತದೆ.

ಯಾವುದೇ ಕಾಲದಲ್ಲಾದರೂ ಸ್ತ್ರೀತ್ವದ ಸಂಪೂರ್ಣ ಶಕ್ತಿಯಿರುವುದು ಅವಳ ಆತ್ಮವಿಶ್ವಾಸದಲ್ಲಿ, ಏನನ್ನಾದರೂ ಸಾಧಿಸಬಲ್ಲ ಛಲದಲ್ಲಿ ಎನ್ನುವುದು ಸ್ವಯಂಸಿದ್ಧವಾದ ಅಂಶವಾಗಿದೆ. ಸಾಂಪ್ರದಾಯಿಕ ಮೌಲ್ಯಗಳನ್ನು ಒಪ್ಪಿಕೊಳ್ಳುವ ಸ್ತ್ರೀಯು ಸವಾಲುಗಳ ಎದುರು ಸೋಲುತ್ತಾಳೆ, ಆದರೆ ಜಾಗೃತ ಸ್ತ್ರೀಯು ಅವುಗಳ ಎದುರು ಸೆಟೆದು ನಿಲ್ಲುತ್ತಾಳೆ, ಸೋಲು-ಗೆಲುವುಗನ್ನು ಬಂದಂತೆ ಸ್ವೀಕರಿಸುತ್ತಾಳೆ. ದ್ರೌಪದಿಯು ಬದುಕಿನುದ್ದಕ್ಕೂ ಅನುಭವಿಸಿದ್ದು ದುಃಖ-ಕ್ಲೇಶಗಳನ್ನೇ ಆದರೂ ಅವಳಲ್ಲಿ ಸಂಘರ್ಷವು ಮಾತ್ರವೇ ಸೃಷ್ಟಿಸಬಲ್ಲ ಸಂತೃಪ್ತಿಯು ಎದ್ದುಕಾಣುತ್ತದೆ. ತನ್ನ ಧಾರ್ಷ್ಟ್ಯಕ್ಕಾಗಿ ಅವಳು ಹಲವು ಬಾರಿ ಭಾರೀ ಬೆಲೆಯನ್ನು ತೆರಬೇಕಾಗಿ ಬಂದರೂ ಅದಕ್ಕಾಗಿ ಅವಳು ಪಶ್ಚಾತ್ತಾಪ ಪಡುವುದಿಲ್ಲ. ಅಂದರೆ ನಮ್ಮ ಸಂಸ್ಕೃತಿಯ ಪೂರ್ವನಿರ್ಧಾರಿತ ಸ್ತ್ರೀತತ್ವದ ಮಾದರಿ (model)ಗಳನ್ನು ದ್ರೌಪದಿಯು ಪ್ರಶ್ನಿಸುತ್ತಾಳೆ, ಧಿಕ್ಕರಿಸುತ್ತಾಳೆ ಕೂಡಾ. ಸ್ತ್ರೀ ವರ್ಗವು ತನಗೆ ತಾನೇ ವಿಧಿಸಿಕೊಂಡ ಮತ್ತು ಪುರುಷರಿಂದ ವಿಧಿಸಲ್ಪಟ್ಟ ವಿಧಿ ನಿಷೇಧಗಳನ್ನು ಉಲ್ಲಂಘಿಸುವುದರ ಮೂಲಕ ಅವಳು ಹೊಸ ಅಸ್ತಿತ್ವವೊಂದನ್ನು ದೊರಕಿಸಿಕೊಳ್ಳುತ್ತಾಳೆ.

"The Mahabharata has also portrayed an exalted picture of womanhood in Draupadi, who fearlessly argues with her husbands on all topics, not excluding political ones. Her spiritual behaviour on many a critical occasion shows a worldly woman at her best".

(Mujumdar, R.e Vol. 2. 1960. P. 563)

ದ್ರೌಪದಿಯನ್ನು ಮಾನವೀಯ ನೆಲೆಯಲ್ಲಿಯೇ ಪರಿಗಣಿಸಿ ಅವಳ ಪ್ರೌಢ ವ್ಯಕ್ತಿತ್ವದ ವೈಲಕ್ಷಣ್ಯಗಳನ್ನು ಗುರುತಿಸ ಹೊರಟಾಗ ಸಖಿ, ಪ್ರಿಯೆ, ಪತ್ನಿ, ಪಂಡಿತೆ, ರಾಜನೀತಿಜ್ಞೆ ಮುಂತಾದ ಹಲವು ವಿಶೇಷಣಗಳು ಹೊಳೆಯುತ್ತವೆ. ಆದರೆ ಉದ್ದಕ್ಕೂ 'ಜಾಗೃತ ಸ್ತ್ರೀತ್ವ'ವು

ಅವಳ ವ್ಯಕ್ತಿತ್ವದ ಪ್ರಧಾನಲಕ್ಷಣವಾಗಿ ಕಂಡುಬರುತ್ತದೆ. ಅವಳಲ್ಲಿ ಸ್ತ್ರೀ ಸಹಜವಾದ ಲಾಲಿತ್ಯಕ್ಕಿಂತ ಅಂದಿನ ಪುರುಷ ಸ್ವಭಾವಕ್ಕೆ ಹತ್ತಿರವಾದ ವೈಚಾರಿಕತೆ, ಸ್ಪಷ್ಟ ವಕ್ತೃತ್ವ, ನಿರ್ಭಯವಾದ ನಡವಳಿಕೆಗಳು ಹೆಚ್ಚಾಗಿದ್ದವು. ಅಂದರೆ ಅವಳ ವ್ಯಕ್ತಿತ್ವದಲ್ಲಿ ಕುಶಲ ರಾಜನೀತಿಜ್ಞನ ತಂತ್ರಗಾರಿಕೆ-ಸಮಯಸಾಧಕತೆಗಳು ಸಹಜವಾಗಿ ಅಳವಟ್ಟಿವೆ. ಆದುದರಿಂದಲೇ ಅವಳು ತನ್ನ ಗಂಡಂದಿರ ಅಥವಾ ಕೃಷ್ಣನ ಸಂವೇದನೆಗಳ ಮೇಲೆ ಕೈಯಾಡಿಸಬಲ್ಲಳು, ಭೀಮನ ಭೀಮಕಾಯದಲ್ಲಿ ಹುದುಗಿದ್ದ ಸುಕುಮಾರ ಭಾವಗಳನ್ನು ಹೊರಗೆಳೆಯಬಲ್ಲಳು, ಅರ್ಜುನನ ಅಹಂಕಾರವನ್ನು ಪ್ರಶ್ನಿಸಬಲ್ಲಳು.

ದ್ರೌಪದಿಯ ಪಾತ್ರವನ್ನು ಹೀಗೆ ಕಡೆಯುವುದರಲ್ಲಿ, ವ್ಯಾಸರ ಉದ್ದೇಶವನ್ನು ವಿಶ್ಲೇಷಿಸುತ್ತಾ ದುರ್ಗಾಭಾಗವತರು, "ದ್ರೌಪದಿಯ ಪಾಂಡಿತ್ಯದ ಸ್ವರೂಪವನ್ನು ಅತ್ಯಂತ ಸಮತೂಕದಿಂದ ಸ್ಪಷ್ಟಪಡಿಸಿ ವ್ಯಾಸರು ನಮ್ಮ ಮನಸ್ಸಿನಿಂದ ಅವಳ ಪಾರ್ಥಿವ ಸೌಂದರ್ಯದ ಮೋಹಿನಿಯನ್ನು ಒರೆಸಿ ತೆಗೆದು ಹಾಕುತ್ತಾರೆ. ... ಅವಳ ಯಾವುದೇ ಚಿರಸಂಸ್ಕಾರವು ಮನಸ್ಸಿನ ಮೇಲೆ ಉಳಿಯ ಬಾರದೆಂದೇ ಅವಳ ಬಗೆಗೆ ವ್ಯಾಸರ ಸಂಕೇತವಿದ್ದಂತೆ ತೋರುತ್ತದೆ. ಸೀತೆ-ಸಾವಿತ್ರಿಯರಂತೆ ಭಾರತೀಯರ ಮನಸ್ಸಿನಲ್ಲಿ ಅವಳಿಗೆ ಚಿರಂತನತ್ವವು ದೊರೆತಿಲ್ಲ. .... ಭಾರತೀಯ ನಾರಿಯ ಸಂಸ್ಕಾರ ಜೀವನದಲ್ಲಿ ಅವಳ ಸ್ಥಾನವು ಗೌಣ. ... ಇವಳ ವ್ಯಕ್ತಿತ್ವವು ಕಮನೀಯವಾಗಿದ್ದರೂ ಪ್ರೇರಕವಾಗಿಲ್ಲ" (ದುರ್ಗಾಭಾಗವತ. ಕನ್ನಡ ಅನು:೧೯೬೨ ಪು. ೭೧) ಎನ್ನುತ್ತಾರೆ.

ಕೆಲವು ಕಾರಣಗಳಿಗಾಗಿ ಈ ಅಭಿಪ್ರಾಯವನ್ನು ಒಪ್ಪುವುದು ಕಷ್ಟವಾಗುತ್ತದೆ. ವ್ಯಾಸರ ಮೂಲ ಉದ್ದೇಶವು 'ಅವಳ ಪಾರ್ಥಿವ ಸೌಂದರ್ಯದ ಮೋಹಿನಿಯನ್ನ ನಮ್ಮ ಮನಸ್ಸಿನಿಂದ ಒರಸಿ ತೆಗೆಯುವುದು' ಎನ್ನುವುದು ಸರಿಯೇ. ಅವಳ ಸ್ತ್ರೀತ್ವವನ್ನು ಸ್ಫುಟಗೊಳಿಸುವ, ಅದಕ್ಕೆ ಒಂದು ಪ್ರತ್ಯೇಕ ಅಸ್ತಿತ್ವವನ್ನು ಕಲ್ಪಿಸುವ ದೃಷ್ಟಿಯಿಂದ ಅವರಿಗೆ ಅದು ಅಗತ್ಯವೂ ಆಗಿತ್ತು. ಪರಂಪರೆಯಿಂದ ಸ್ತ್ರೀಯನ್ನು ಮುಚ್ಚಿಟ್ಟಿದ್ದ ಅವಕುಂಠನವನ್ನು ಸರಿಸುವ ಕಾರ್ಯದಲ್ಲಿ ಈ ರೀತಿಯ ಪುನಾರೂಪಣೆ (re-orientation) ಅನಿವಾರ್ಯವಾಗಿತ್ತು.

ಭಾರತೀಯ ಮನಸ್ಸಿನಲ್ಲಿದ್ದ ಸ್ತ್ರೀತ್ವದ ಸಿದ್ಧಮೂರ್ತಿಯನ್ನು ಅಲುಗಿಸಿ ಬೇರೊಂದನ್ನು ಪ್ರತಿಷ್ಠಾಪಿಸುವ, ಅಥವಾ ಅದನ್ನು ಒಡೆದು ಕಟ್ಟುವ ಕ್ರಿಯೆಯು ವ್ಯಾಸರಿಂದ ಇಲ್ಲಿ ನಡೆದಿದೆಯೆನ್ನಬೇಕು. ಈ ದೃಷ್ಟಿಯಿಂದ, ದ್ರೌಪದಿಯು ಭಾರತೀಯ ಇತಿಹಾಸದುದ್ದಕ್ಕೂ ಪುರಾಣ ಪ್ರತೀಕವಾಗಿ ನಮಗೆ ಪ್ರಸ್ತುತಳಾಗುತ್ತಾಳಾದರೆ, ಆಧುನಿಕ ಸಂದರ್ಭದಲ್ಲಿ ಎಚ್ಚೆತ್ತನಾರಿಯ ಸಂಕೇತವಾಗುತ್ತಾಳೆ. ಅವಳ ವ್ಯಕ್ತಿತ್ವವು ಸ್ವಲ್ಪ ದೂರದಲ್ಲೇ ಉಳಿಯುವುದಕ್ಕೆ ಅವಳು ಸೀತೆ- ಸಾವಿತ್ರಿಯರಿಗಿಂತ ಭಿನ್ನಳಾಗಿ ಸಾಮಾನ್ಯ ಸ್ತ್ರೀತ್ವದ ನಿರ್ವಚನದಿಂದಾಚೆಗೆ ನಿಲ್ಲುವುದೇ ಕಾರಣವಾಗಿದೆ.

ಭಾವನಾತ್ಮಕವಾಗಿ ನೋಡಿದರೆ, ದ್ರೌಪದಿಯು ತನ್ನ ಬದುಕಿನ ಉದ್ದಕ್ಕೂ ಒಂಟಿಯಾಗಿಯೇ ಉಳಿದವಳು. ಅವಳಿಗೆ ಸಂಪೂರ್ಣವಾಗಿ ತನ್ನನ್ನು ಯಾರಿಗೂ ಸಮರ್ಪಿಸಿಕೊಳ್ಳುವುದು ಸಾಧ್ಯವಾಗಲಿಲ್ಲ, ಯಾರೂ ಸಂಪೂರ್ಣವಾಗಿ ಅವಳಿಗೆ ಸಮರ್ಪಿತರಾಗಲಿಲ್ಲ. ಕಾಮ್ಯಕವನಕ್ಕೆ ತಮ್ಮನ್ನು ಕಾಣಲು ಬಂದ ಕೃಷ್ಣನ ಮುಂದೆ ತನ್ನ ಅಳಲನ್ನು ತೋಡಿಕೊಳ್ಳುತ್ತಾ ಅವಳು ಹೇಳುವ, "ನಿಶ್ಚಯವಾಗಿ ಹೇಳುವುದಾದರೆ ಗಂಡಂದಿರು, ಮಕ್ಕಳು, ತಂದೆ ಕಡೆಗೆ ಮಧುಸೂದನನೂ ನನ್ನ ಭಾಗಕ್ಕೆ ಇಲ್ಲವೆಂದೇ ತಿಳಿಯಬೇಕಾಗಿದೆ. ನಾನು ನಿರ್ಗತಿಕಳು, ನಿರಾಶ್ರಿತಳು, ನಿರ್ಬಲಳು" (ಮಹಾಭಾರತ, ಸಂ. ೪ ಪು. ೧೯೬೮) ಮಾತುಗಳು ಅವಳ ಅಂತರಂಗವು ಎಷ್ಟು ಶುಷ್ಕವಾಗಿಯೇ ಉಳಿಯುತ್ತೆನ್ನುವುದರ ಸೂಚನೆಯನ್ನು ಕೊಡುತ್ತವೆ.

ದ್ರೌಪದಿಯ ಬದುಕಿನ ರಿಕ್ತತೆಯ ಬಗೆಗೆ ಪ್ರತಿಕ್ರಿಯಿಸುತ್ತಾ ಇರಾವತಿ ಕರ್ವೆಯವರು, "ದ್ರೌಪದಿಯ ಸರ್ವದುಃಖಗಳು, ಅಪಮಾನಗಳು ವಾಸ್ತವವಾಗಿದ್ದುವು. ಅವುಗಳ ನಿರಾಕರಣೆ ಅಥವಾ ಪೆಟ್ಟುಗಳವು ವ್ಯಾವಹಾರಿಕವಿತ್ತು, ಕೃತಕವಲ್ಲ.... ಅವಳು ಅಸಾಮಾನ್ಯಳಾಗಿದ್ದಳು. ಆದರೆ ಆ ಅಸಾಮಾನ್ಯತ್ವವು ಸಾಮಾನ್ಯರ ಪರಿಮಾಣದಿಂದ ಗೋಚರವಾಗುತ್ತಿತ್ತು" (ಇರಾವತಿ ಕರ್ವೆ. ಕನ್ನಡ ಅನು: ೧೯೯೦ ಪು. ೯೮) ಎನ್ನುತ್ತಾರೆ.

ಹೆಂಡತಿಯಾಗಿ, ತಾಯಿಯಾಗಿ ಕೊನೆಗೆ ವ್ಯಕ್ತಿಯಾಗಿಯೂ ಕೂಡ ದ್ರೌಪದಿಯೂ ಸದಾ ದುಃಖಿಯೇ. ಸ್ವಯಂವರ ಮಂಟಪದಲ್ಲಿ ಮೊದಲಾದ ಅವಳ ಅಪಮಾನ ಪರಂಪರೆಗಳು ಮಹಾಪ್ರಸ್ಥಾನದ ಸಂದರ್ಭದಲ್ಲಿ ಕುಸಿದು ಬೀಳುವವರೆಗೂ ಅವಳನ್ನು ಎಡೆಬಿಡದೆ ಹಿಂಬಾಲಿಸಿದವು, ಹಿಂಸಿಸಿದುವು. ಅವಳ ವ್ಯಕ್ತಿತ್ವದ ಮುಖಾಮುಖಿಯು ಯಾರೊಂದಿಗೇ ಆಗಲಿ ಎಂಥ ಉತ್ಕಟ ಸ್ವರೂಪದ್ದೇ ಆಗಲಿ, ಒಂದು ಪಾರದರ್ಶಕ ಪರದೆಯ ಆಚೀಚೆಗೇ ನಡೆಯುತ್ತಿತ್ತು. ಅವಳು ಸ್ಥಾಪಿಸಿಕೊಳ್ಳುವ ಸಂಬಂಧಗಳೂ ಕ್ಷಣಿಕವಾಗಿದ್ದವು. ಅವುಗಳು ಮುರಿದು ಬೀಳುವ ಭಯದ ನೆರಳಿನಲ್ಲಿಯೇ ಅವಳು ಸದಾ ಬದುಕುತ್ತಿದ್ದಳು.

ಗಾಂಧಾರಿಯಂತೆಯೇ, ದ್ರೌಪದಿಯ ಅಂತರಂಗವು ಕೂಡಾ ತೀವ್ರವಾದ ತಿರಸ್ಕಾರ-ಜಿಗುಪ್ಸೆಗಳಿಂದ ತುಂಬಿತ್ತು. ಆದುದರಿಂದಲೇ ಅವಳ ಮನಸ್ಸಿನ ಕದವು ಎಲ್ಲರ ಪಾಲಿಗೂ ಮುಚ್ಚಿಯೇ ಉಳಿಯಿತು. ಇನ್ನೊಂದು ದೃಷ್ಟಿಯಿಂದ, ಪುರುಷನ ಅಹಂಕಾರಕ್ಕೆ, ಸ್ವಭಾವ ಸಹಜವಾದ ಸ್ವಾಮಿತ್ವಕ್ಕೆ ಬೇಕಾಗಿರುವುದು ಸಹನಶೀಲಳಾದ, ಶರಣಾಗತಳಾದ ಸ್ತ್ರೀಯ ಸಾಹಚರ್ಯವೇ ಹೊರತಾಗಿ, ತನಗೆ ಸರಿದೊರೆಯಾಗಿ ನಿಲ್ಲಬಲ್ಲ, ತನಗೆ ಸವಾಲಾಗಬಲ್ಲ ಪ್ರೌಢ ವ್ಯಕ್ತಿತ್ವವಲ್ಲ ಎನ್ನುವುದನ್ನೂ ದ್ರೌಪದಿಯ ಒಂಟಿತನವು ದೃಢಪಡಿಸುತ್ತದೆ.

ದ್ರೌಪದಿಯ ಸಾಮರ್ಥ್ಯದ ಬಗೆಗೆ ವಿಚಾರಿಸುವಾಗ, ಪುರುಷ ಪ್ರಯತ್ನದಲ್ಲಿ ಆಳವಾದ ನಂಬಿಕೆಯಿದ್ದ ಅವಳು, ಮಹಾಭಾರತದ ಯುದ್ಧಕ್ಕೂ ಕೇವಲ ಕಾರಣ ವ್ಯಕ್ತಿಯಾಗಿಯೇ ಉಳಿದುಬಿಟ್ಟಳೇಕೆ ಎನ್ನುವ ಪ್ರಶ್ನೆಯು ಎದುರಾಗುತ್ತದೆ. ಮಹಾಭಾರತದ ಕಥೆಯನ್ನು ನಿರೂಪಿಸುತ್ತಿದ್ದ ವೈಶಂಪಾಯನರನ್ನು ಜನಮೇಜಯನು ಕೇಳುತ್ತಾನೆ - "... ಧೃತರಾಷ್ಟ್ರನ ಮಕ್ಕಳಿಂದ ಕ್ಲೇಶಿತಳಾದ ದ್ರೌಪದಿಯು ಅವರನ್ನು ವೀಕ್ಷಣ ಮಾತ್ರದಿಂದ ದಹಿಸುವಷ್ಟು ಸಮರ್ಥಳಾಗಿದ್ದಳು. ಅಂಥವಳು ಅಬಲೆಯಂತೆ ಸುಮ್ಮನಿದ್ದಳೇಕೆ?" (ಮಹಾಭಾರತ. ಸಂ. ೧ ಪು. ೩೭೨)

ಇಲ್ಲಿ ಸ್ತ್ರೀಗೆ ಸಾಮಾನ್ಯವಾಗಿ ತನ್ನ ಬಗೆಗೇ ಇರುವ ನೈಚ್ಯಾನುಸಂಧಾನ, ಆತ್ಮವಿಶ್ವಾಸದ ಕೊರತೆಗಳು ದ್ರೌಪದಿಗೂ ಇದ್ದುದೇ ಎನ್ನುವ ಸಂದೇಹವು ಹುಟ್ಟುತ್ತದೆ ಮಾತ್ರವಲ್ಲದೆ, ದ್ರೌಪದಿಯ ಪಾತ್ರವನ್ನು ಬರಿಯ ಪ್ರೇರಕ ನೆಲೆಯಲ್ಲಿ ನಿಲ್ಲಿಸಿರುವುದರ ಹಿಂದೆ ಪುರುಷ ಪ್ರಧಾನವಾದ ದೃಷ್ಟಿಕೋನವಿದೆ. ಸ್ತ್ರೀಯ ಸಾಮರ್ಥ್ಯಕ್ಕೆ ಒಂದು ಮಿತಿಯನ್ನು ಹೇರುವ, ಅಂತಿಮವಾಗಿ ಅವಳ ರಕ್ಷಣೆಗೆ ಧಾವಿಸಬೇಕಾದವನು ಪುರುಷನೇ ಎನ್ನುವುದೂ ಇಲ್ಲಿ ಸೂಕ್ಷ್ಮವಾಗಿ ಸೂಚಿತವಾಗಿದೆ.

ರಾಮಾಯಣದ ಸೀತೆಯಾದರೆ ನಿಸ್ಸಂದಿಗ್ಧವಾಗಿ ಯುದ್ಧಕ್ಕೆ ಕಾರಣಳಾದಳು. ಇದೇ ಹೇಳಿಕೆಯು ದ್ರೌಪದಿಯ ಸಂದರ್ಭದಲ್ಲಿ ಸಂಪೂರ್ಣ ಸತ್ಯವಾಗುವುದಿಲ್ಲ. ಕುರುಕ್ಷೇತ್ರ ಯುದ್ಧಕ್ಕೆ ಮೂಲ ರಾಜಸತ್ತಾತ್ಮಕವಾದ ವಿವಾದವೆನ್ನುವುದು ಸ್ಪಷ್ಟವೇ ಇದೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ದ್ರೌಪದಿಯ ಮೇಲೆ ದುರ್ಯೋಧನನಿಗೆ ಮೋಹಕ್ಕಿಂತ ಹೆಚ್ಚಾಗಿ ದ್ವೇಷವೇ ಇತ್ತು ಎಂಬುದು. ವಸ್ತ್ರಾಪಹರಣದ ಸಂದರ್ಭದಲ್ಲಿಯೂ ಅವಳನ್ನು ಅವಹೇಳನ ಮಾಡುವ ಛಲವೇ

ಅವನಲ್ಲಿ ಪ್ರಧಾನವಾಗಿದ್ದಂತೆ ಕಂಡುಬರುತ್ತದೆ. ಆದರೆ ದ್ರೌಪದಿಗಾದ ಅಪಮಾನದಿಂದ ಯುದ್ಧಕ್ಕೆ ಒಂದು ಸ್ವರೂಪವು ಬಂತೆನ್ನುವುದನ್ನು ಒಪ್ಪಬೇಕಾಗುತ್ತದೆ. ಆ ಯುದ್ಧದ ಕಿಡಿಯು ಆರದಂತೆ ಕಾಯುವ ಕೆಲಸವನ್ನ ಮಾತ್ರ ಅವಳು ಉದ್ದಕ್ಕೂ ನಿಷ್ಠೆಯಿಂದ ಮಾಡಿದ್ದಾಳೆ. ಸಂಕಲ್ಪ ಮಾಡಿದ ಕಾರ್ಯವನ್ನು ಸಾಧಿಸುವ ಅವಳ ಪ್ರಚಂಡ ಇಚ್ಛಾಶಕ್ತಿಯೂ ಇಲ್ಲಿ ಉಲ್ಲೇಖಾರ್ಹವೇ ಆಗಿದೆ.

ದ್ರೌಪದಿಯ ಮೇಲಿನ ಒಂದು ಮುಖ್ಯ ಆರೋಪವೆಂದರೆ ಅವಳ ಅತಿಯಾದ ವಾಚಾಳತ್ವ. ಯಾರ-ಯಾವ ಸೂಕ್ಷ್ಮಸ್ಥಾನದ ಮೇಲೆ ಹೇಗೆ ಕೈಯಾಡಿಸಬೇಕೆಂಬುದು ಅವಳ ವಾಕ್ಪಟುತ್ವಕ್ಕೆ ತಿಳಿದ ಸಂಗತಿಯೇ ಆಗಿತ್ತು. ಅವಳನ್ನು ಮಾತಿನಲ್ಲಿ ಗೆಲ್ಲುವುದಕ್ಕೆ, ಅವಳು ಎತ್ತಿದ ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ಭೀಷ್ಮರಂಥ ಜ್ಞಾನವೃದ್ಧರೂ ಹಿಂಜರಿಯುತ್ತಿದ್ದರು. ಕೆಲವೊಮ್ಮೆ ಮುಂದಾಲೋಚನೆಯಿಲ್ಲದೆ ದುಡುಕಿನಿಂದ ಆಡಿಬಿಡುವ ಅವಳ ಸ್ವಭಾವಕ್ಕಾಗಿ ಅವಳು ತೆರಬೇಕಾಗಿ ಬಂದ ಬೆಲೆಯೂ ಅಪಾರವಾಗಿತ್ತು. ಸ್ವಯಂವರ ಮಂಟಪದಲ್ಲಿ ಸ್ಪಷ್ಟ ವಾಕ್ಯಗಳಿಂದ, "ನಾಹಂ ವರಾಯಾಮಿ ಸೂತಂ" ಎಂದು ಕರ್ಣನ ಮುಖಭಂಗ ಮಾಡಿದ ಅವಳ ಕಾರ್ಯದ ಪರಿಣಾಮವಂತೂ ವಿದಿತವೇ ಇದೆ.

"ದ್ರೌಪದಿಯು ತನ್ನ ಸ್ಪಷ್ಟವಾಕ್ಯಕ್ಕಾಗಿ ಬಹಳ ಬೆಲೆಯನ್ನು ತೆರಬೇಕಾಯಿತು. ಕರ್ಣನ ದೃಷ್ಟಿಯಲ್ಲಿ ಅವಳು ಆಜನ್ಮವೈರಿಯ ಪತ್ನಿಯಾಗಿ ಮಾತ್ರವಲ್ಲ, ತನ್ನ ತೇಜೋಭಂಗ ಮಾಡಿದ ಉದ್ಧಟ ಸ್ತ್ರೀಯಾಗಿಯೂ ದ್ವೇಷಕ್ಕೆ ಅರ್ಹಳಾಗುವಂತಾಯಿತು. ಈ ದಿಟ್ಟ ಹೆಜ್ಜೆಯಿಂದಾಗಿ ಅವಳು ಅರ್ಜುನನನ್ನು ಪತಿಯಾಗಿ ಪಡೆಯುವುದರೊಂದಿಗೆ ಕರ್ಣನ ಭಯಂಕರ ದ್ವೇಷವನ್ನೂ ಕಟ್ಟಿಕೊಂಡಳು" (ಪೆಂಡ್ಸೆ, ಶಂಕರ ಕೇಶವ, ಪೂರ್ವೋಕ್ತ ಪು. ೨೨೫)

ದ್ರೌಪದಿಯ ಹೇಳಿಕೆಗಳನ್ನೂ ನಡೆವಳಿಕೆಗಳನ್ನೂ ನಾವು ಆ ಕಾಲದ ಸಾಮಾಜಿಕ ಸಾಂಸ್ಕೃತಿಕ ಸಂದರ್ಭದಲ್ಲಿಯೇ ಪರಿಗಣಿಸಬೇಕಾಗುತ್ತದೆ. ಕುಲೀನ ಮಹಿಳೆಯರು ಸಾರ್ವಜನಿಕ ಸ್ಥಳಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ರೂಢಿಯು ಮಹಾಭಾರತದ ಕಾಲದಲ್ಲಿ ಅಷ್ಟಾಗಿ ಇದ್ದಂತಿಲ್ಲ. ಮಾತೃಪ್ರಧಾನವಾಗಿದ್ದ ಸಮಾಜದಲ್ಲಿ ಆಗಲೇ ಸ್ಥಿತ್ಯಂತರಗಳು ಮೊದಲಾಗಿದ್ದವು. ಇಲ್ಲಿ ದ್ರೌಪದಿಯು ಒಂದು ಮಗ್ಗುಲಿನಿಂದ ಮಾತೃಪ್ರಧಾನವಾದ, ಸ್ತ್ರೀ ಯಜಮಾನ್ಯ ಪದ್ಧತಿಯ ಪಳೆಯುಳಿಕೆಯಾಗಿ ಕಂಡುಬಂದರೆ, ಇನ್ನೊಂದರ್ಥದಲ್ಲಿ ತನ್ನ ಕಾಲಕ್ಕೆ ತೀರಾ ಆಧುನಿಕವಾದ ಜಾಗ್ರತ ಮಹಿಳೆಯ ಲಕ್ಷಣಗಳನ್ನು ತೋರಿಸುತ್ತಾಳೆ. ದ್ರೌಪದಿಯು ತನ್ನ ಕಾಲಕ್ಕೆ ಸೇರಿದವಳಾಗಿರಲಿಲ್ಲ ಎಂಬ ಅಂಶವು ಇದರಿಂದ ಸಿದ್ಧವಾಗುತ್ತದೆ. ಸಂದರ್ಭ ಸಿಕ್ಕಾಗಲೆಲ್ಲಾ ಪುರುಷನ ಅಹಂಕಾರವನ್ನು ಅವಳು ಪ್ರಶ್ನಿಸುತ್ತಿದ್ದುದರಿಂದಲೇ ದುರ್ಯೋಧನ, ಕರ್ಣ, ಧರ್ಮರಾಯ ಮುಂತಾದವರಲ್ಲಿ ಅವಳನ್ನು ತುಳಿಯುವ ಇಚ್ಛೆಯು ಹುಟ್ಟುತ್ತಿತ್ತೇನೋ ಎನ್ನುವ ಸಂಶಯವೂ ಇಲ್ಲಿ ಬರುತ್ತದೆ.

ದ್ಯೂತ ಪ್ರಸಂಗದಲ್ಲಿ ದ್ರೌಪದಿಯು ಎತ್ತಿದ ಪ್ರಶ್ನೆಯು ನಿಜವಾಗಿಯೂ ಅನುಚಿತವಾಗಿತ್ತೇ ಎನ್ನುವುದನ್ನೂ ನಾವು ಪರಿಶೀಲಿಸಬೇಕಾಗಿದೆ. ಮಹಾಭಾರತದ ಕಾಲದಲ್ಲಿ ದಾಸಿಯರ ಮೇಲಿನ ಸಂಪೂರ್ಣ ಲೈಂಗಿಕ ಹಕ್ಕುಗಳು ಒಡೆಯನದಾಗಿದ್ದುವು. ದ್ರೌಪದಿಯು ದಾಸೀತ್ವವನ್ನ ತೀವ್ರವಾಗಿ ನಿರಾಕರಿಸಿದುದರ ಹಿನ್ನೆಲೆಯಲ್ಲಿ ಈ ಸೂಕ್ಷ್ಮವೇ ಕೆಲಸ ಮಾಡಿತ್ತೆನ್ನಬೇಕು. ಈ ದಾಸ್ಯವನ್ನು ಪರಿಗ್ರಹಿಸುವುದೆಂದರೆ ತನ್ನ ಮೇಲಿನ ಕೌರವರ ಲೈಂಗಿಕ ಸ್ವಾಮ್ಯವನ್ನೂ ಪರ್ಯಾಯವಾಗಿ ಒಪ್ಪಿಕೊಂಡಂತೆಯೇ ಎನ್ನುವುದನ್ನು ಅವಳ ಕುಶಾಗ್ರಬುದ್ಧಿಯು ಆದಾಗಲೇ ಗ್ರಹಿಸಿತ್ತು. ಈ ಹಿನ್ನೆಲೆಯಲ್ಲಿ ಲೈಂಗಿಕ ಶೋಷಣೆಯ ಪ್ರತಿಭಟನೆಯಾಗಿಯೂ ಅವಳ ಪ್ರಶ್ನೆಗೆ ಮಹತ್ವವು ಬರುತ್ತದೆ.

ದ್ರೌಪದಿಗೆ ಪ್ರಶ್ನಿಸುವ ಅವಕಾಶವನ್ನು ಕಲ್ಪಿಸುವುದರ ಮೂಲಕ ವ್ಯಾಸರು ತಮ್ಮ ಕಾಲಕ್ಕೆ ನವೀನವಾದ ಸ್ತ್ರೀತ್ವದ ಜಾಗೃತ ಸ್ಥಿತಿಯನ್ನು ಸೂಚಿಸಿದ್ದಾರೆ. ಈ ದಿಟ್ಟ ಹೆಜ್ಜೆಯ ಹಿಂದಿರುವುದು, "ನಿಮ್ಮ ಪತ್ನಿಯಾಗಿರುವುದರಿಂದಾಚೆಗೂ ನನಗೆ ವ್ಯಕ್ತಿತ್ವವಿದೆ. ಈ ನನ್ನ ವೈಯಕ್ತಿಕತೆಗೆ ಭಂಗ ಬಂದಾಗ ನಿಮ್ಮ ಸ್ವಾಮಿತ್ವವನ್ನೂ ನಾನು ನಿರಾಕರಿಸಬಲ್ಲೆ" ಎಂಬ ಸ್ವತಂತ್ರ ಮನೋಭಾವವಾಗಿದೆ. ಆದುದರಿಂದ ದ್ರೌಪದಿಯ ಪ್ರಶ್ನೆಯ ಔಚಿತ್ಯವನ್ನು ಪ್ರಶ್ನಿಸುವುದಾಗಲಿ, ಅದನ್ನು ಒಂದು ಗಡುತೆರವಾದ ಅಪರಾಧವಾಗಿ ಪರಿಗಣಿಸುವುದಾಗಲಿ, 'ಸಾಮಾನ್ಯ ಮಾನವರ ರೀತಿ-ನಿಯಮಗಳ ಉಲ್ಲಂಘನೆ" ಯೆನ್ನುವುದಾಗಲೀ ಜೀವ ವಿರೋಧಿಯಾದ ಹೇಳಿಕೆಗಳಾಗುತ್ತವೆ.

ದ್ರೌಪದಿಯ ವ್ಯಕ್ತಿತ್ವದ ವೈಶಿಷ್ಟ್ಯವಿರುವುದೇ ಅವಳು ಆಂತರಿಕ-ಬಾಹ್ಯ ಸವಾಲುಗಳನ್ನು ಎದುರಿಸುವ ರೀತಿಯಲ್ಲಿ. ಈ ಸಂಕೀರ್ಣತೆಯ ಪರಾಕಾಷ್ಠೆಯನ್ನು ಅವಳ ಪಂಚವಲ್ಲಭತ್ವದಲ್ಲಿ ಕಾಣುತ್ತೇವೆ. ಜಟಿಲವಾದ ಈ ಲೈಂಗಿಕ ಸಂಬಂಧಗಳನ್ನು ಅವಳು ನಿಭಾಯಿಸಿದ ರೀತಿಯೂ ವಿಲಕ್ಷಣವೆನಿಸುತ್ತದೆ. ಸಾಮಾಜಿಕವಾಗಿ ಮನ್ನಣೆಯಿರದಿದ್ದ ನಿಯೋಗದಿಂದ ಹುಟ್ಟಿದ ಪಾಂಡವರ ವಿವಾಹ ಸಂಬಂಧವನ್ನು ಸಮಾಜ ಬಾಹಿರವಾಗಿ ಇರಿಸುವುದು ವ್ಯಾಸರಿಗೆ ಸುಲಭವಾಯಿತು. ನೈತಿಕ ಪ್ರಶ್ನೆಯೊಂದರ ಜಿಜ್ಞಾಸೆಗೆ ದ್ರೌಪದಿಯು ಬಲಿಪಶುವಾಗಿ ನಿಲ್ಲಬೇಕಾಯಿತೆನ್ನುವುದು ಮಾತ್ರ ಅವಳ ಬದುಕಿನ ದುರಂತವಾಯಿತು.

ಇದರ ಮುಂದಿನ ಹಂತವಾದ ಮಾತೃತ್ವವು ಕೂಡಾ ದ್ರೌಪದಿಗೆ ಸುಖದಾಯಕವಾಗಲಿಲ್ಲ. ಪಾಂಡವರು ದ್ರೌಪದಿಯ ಪತ್ನಿತ್ವದಂತೆಯೇ ಅವಳ ಮಕ್ಕಳ ಪಿತೃತ್ವವನ್ನೂ ಬಹಳ ಸೂಕ್ಷ್ಮವಾದ ರೀತಿಯಲ್ಲಿ ನಿರಾಕರಿಸಿಬಿಟ್ಟರು. ಉತ್ತರೆಯ ವಿವಾಹದ ಸಂಧರ್ಭವು ಈ ಅಂಶವನ್ನು ಸ್ಪಷ್ಟ ಪಡಿಸುತ್ತದೆ. ಆ ಪ್ರಸ್ತಾಪ ಬಂದಾಗ ಅರ್ಜುನನು ಅಭಿಮನ್ಯುವಿನ ಪತ್ನಿಯಾಗಿ ಅವಳನ್ನು ಗ್ರಹಿಸುತ್ತಾನೆ. ಇಲ್ಲಿ ವಿರಾಟರಾಜನೊಂದಿಗೆ ತನ್ನ ಮಗನೇ ಆದ, ಅಭಿಮನ್ಯುವಿಗಿಂತ ಹಿರಿಯನಾದ ಶ್ರುತಕೀರ್ತಿಯ ಪ್ರಸ್ತಾಪ ಮಾಡಲು ಅರ್ಜುನನಿಗಿದ್ದ ತೊಡಕು ನೈತಿಕ ನೆಲೆಯದಾಗಿದ್ದಿರಬೇಕು. ಅಭಿಮನ್ಯು ಉತ್ಪನ್ನನಾದುದು ಸುಭದ್ರೆಯ ಶುದ್ಧ ಕ್ಷೇತ್ರದಲ್ಲಿ. ಆದರೆ ಇದೇ ಮಾತನ್ನು ಶ್ರುತಕೀರ್ತಿಯ ಸಂದರ್ಭದಲ್ಲಿ ಹೇಳಲಾರದ ಸಂದಿಗ್ಧಕ್ಕೆ ಅವನು ಸಿಕ್ಕಿರಬೇಕು. ಈ ಉಪಪಾಂಡವರು ಭವಿಷ್ಯದಲ್ಲಿ ಕೂಡಾ ಸಮಸ್ಯೆಯಾಗಿಯೇ ಉಳಿಯಬಹುದೆನ್ನುವುದನ್ನು ವ್ಯಾಸರೂ ಮನಗಂಡಿರಬೇಕು. ಅದಕ್ಕೆ ಸುಲಭ ಪರಿಹಾರವಾಗಿಯೇ ಯುದ್ಧದಲ್ಲಿ ಉಪಪಾಂಡವರ ಕೊಲೆಯನ್ನು ಯೋಚಿಸಿದರೇನೋ ಎನ್ನುವ ಅನುಮಾನವೂ ಇಲ್ಲಿ ಉಂಟಾಗುತ್ತದೆ. ಈ ಕಾರಣದಿಂದಲೇ, "ಯುದ್ಧದಲ್ಲಿ ದ್ರೌಪದಿಯ ಮಕ್ಕಳು ಮಡಿದರು. ಆದರೂ ಪುತ್ರವಿಯೋಗದ ಎಲ್ಲ ಶೋಕ ನಾಟಕವನ್ನು ವ್ಯಾಸರು ಸುಭದ್ರೆಯ ಸುತ್ತಲೂ ಆಡಿಸಿದರು" (ದುರ್ಗಾ ಭಾಗವತ, ಪೂರ್ವೋಕ್ತ. ಪು. ೧೭೧) ಎನ್ನುವ ಮಾತುಗಳು ಸಮಂಜಸವೆನಿಸುತ್ತವೆ.

ದ್ರೌಪದಿಯು ಮೂಲತಃ ಸ್ವಕೇಂದ್ರಿತ (self-centred) ವ್ಯಕ್ತಿತ್ವವುಳ್ಳವಳಾಗಿದ್ದಾಳೆ. ಇದಕ್ಕೆ ಪೋಷಕವಾಗಿ, ಸಂಕೀರ್ಣವಾದ ಅವಳ ಅನುಭವ ಪ್ರಪಂಚ, ಒಂದರ ಹಿಂದೊಂದರಂತೆ ಸವಾಲಾಗುತ್ತಲೇ ಬಂದ ಬದುಕಿನ ಕ್ರೌರ್ಯ, ಅಪಮಾನ, ಸೋಲು, ನಿರಾಕರಣೆಗಳು ಅವಳ ಅಂತರ್ವಿರೋಧಿಯಾದ ಪ್ರವೃತ್ತಿಯಲ್ಲಿ ಪರಿಣಮಿಸಿವೆ. ಇದು ಮೂರು ಮುಖ್ಯ ನೆಲೆಗಳಲ್ಲಿ ಅಭಿವ್ಯಕ್ತವಾಗುವುದನ್ನು ಗುರುತಿಸಬಹುದು:

**ಭಾವನಾತ್ಮಕ ನೆಲೆ**

ವ್ಯಕ್ತಿಗಳ ಬಗೆಗಿನ ದ್ರೌಪದಿಯ ಮನೋಭಾವದಲ್ಲಿ ಅಗಾಧವಾದ ಸ್ಥಿತ್ಯಂತರಗಳು

ಮಹಾಭಾರತದ ಉದ್ದಕ್ಕೂ ಕಂಡುಬರುತ್ತವೆ. ಇದು ಹೆಚ್ಚಾಗಿ ಭಾಷಿಕ ಅಭಿವ್ಯಕ್ತಿ (Verbal expression)ಯಾಗಿ ಪ್ರಕಟವಾಗುತ್ತದೆ.

**ನಡವಳಿಕೆಯ ನೆಲೆ**

ಹಲವು ಸಂದರ್ಭಗಳಲ್ಲಿ ದ್ರೌಪದಿಯು ಅನೂಹ್ಯವಾದ ರೀತಿಯಲ್ಲಿ ನಡೆದುಕೊಳ್ಳುತ್ತಾಳೆ. ಈ ಸ್ವ-ವಿರೋಧಿ ನಡೆವಳಿಕೆಯು ಶರಣ್ಯ (submissive), ಆಕ್ರಮಕ (aggressive) ಅಥವಾ ನಿಷ್ಕ್ರಿಯ (passive) ಸ್ವರೂಪವನ್ನು ಪಡೆಯುತ್ತದೆ; ಅವಳ ಹೇಳಿಕೆ - ನಡವಳಿಕೆಗಳ ನಡುವಿನ ಅಸಮತೋಲನದಲ್ಲಿ ಪರಿಣಮಿಸುತ್ತದೆ.

**ತಾತ್ವಿಕ ನೆಲೆ**

ಅನೇಕ ಸನ್ನಿವೇಶಗಳಲ್ಲಿ ದ್ರೌಪದಿಯ ಸೈದ್ಧಾಂತಿಕ ತಾಕಲಾಟವು ನಿರ್ದಿಷ್ಟ ನಿಲುವನ್ನು ತಾಳಲಾರದೆ ತಾತ್ವಿಕ ಗೊಂದಲದಲ್ಲಿ ಪರ್ಯವಸಾನವಾಗುತ್ತದೆ.

ಅತಿ ವಿಸ್ತಾರವಾದ ಭಯವಿರುವುದರಿಂದ, ಮಾದರಿಯಾಗಿ ಕೇವಲ ಒಂದು ಉದಾಹರಣೆಯಿಂದ ಅವಳ ಅಂತರ್ವಿರೋಧಿ ಪ್ರವೃತ್ತಿಯನ್ನು ಸ್ಪಷ್ಟಪಡಿಸಬಹುದು.

ದ್ವೈತವನದಲ್ಲಿದ್ದ ದ್ರೌಪದಿ ಹಾಗೂ ಪಾಂಡವರನ್ನು ನೋಡಿ-ಮಾತನಾಡಿಸಲು ಕೃಷ್ಣ ಹಾಗೂ ಸತ್ಯಭಾಮೆಯರು ಬಂದ ಸಂದರ್ಭವನ್ನು ಈ ದೃಷ್ಟಿಯಿಂದ ಲಕ್ಷಿಸಬಹುದಾಗಿದೆ.

ದ್ರೌಪದಿಯು ಪತಿಗಳನ್ನು 'ವಶೀಕರಣ' ಮಾಡಿಕೊಳ್ಳುವ ಸೂತ್ರಗಳನ್ನು ಸತ್ಯಭಾಮೆಗೆ ತಿಳಿಸಿಹೇಳುತ್ತಾಳೆ. (ಮಹಾಭಾರತ ಸಂ. ೭, ಪು. ೩೫೮೨-೯೬) ಇಲ್ಲಿ ನಿರಹಂಕಾರದಿಂದ ಪತಿ-ಸವತಿಯರ ಸೇವೆ, ಸಂಯಮ, ಇಂಗಿತಜ್ಞತೆ, ಮಧುರಭಾಷಣ... ಮುಂತಾದ ಉದಾತ್ತ ಗುಣಗಳು ತನ್ನಲ್ಲಿದ್ದುದರಿಂದಲೇ ಪತಿಗಳನ್ನು ಆಜ್ಞಾನುವರ್ತಿಗಳನ್ನಾಗಿ ಮಾಡಿಕೊಳ್ಳುವುದು ತನಗೆ ಸಾಧ್ಯವಾಯಿತೆಂದು ದ್ರೌಪದಿಯು ಹೇಳುತ್ತಾಳೆ. ತಾತ್ವಿಕವಾಗಿ, ಸಾಂಪ್ರದಾಯಿಕವಾದ ಪತ್ನಿತ್ವದ ನಿಲುವನ್ನು ಅವಳು ಪರಿಗ್ರಹಿಸುತ್ತಾಳೆ. ಆದರೆ ವಾಸ್ತವದಲ್ಲಿ ಅವುಗಳನ್ನು ಆಚರಿಸುವಲ್ಲಿ ಸೋಲುತ್ತಾಳೆ. ಅವಳು ಸಂದರ್ಭಾನುಸಾರಿಯಾಗಿ ಅಹಂಕಾರಿಯಾಗುತ್ತಾಳೆ. ಕಟೂಕ್ತಿಗಳನ್ನೂ ಆಡುತ್ತಾಳೆ, ಸಂಯಮವನ್ನು ಮೀರಿಯೂ ವರ್ತಿಸುತ್ತಾಳೆ. ಬಹಳ ಪ್ರತಿಕ್ರಿಯಾಶೀಲ (Re-active)ವಾದ ಸ್ವಭಾವವಿದ್ದುದರಿಂದಲೇ ಅವಳಲ್ಲಿ ಈ ಅಂತರ್ವಿರೋಧವು ತೀವ್ರವಾದ ಮಟ್ಟಕ್ಕೆ ಹೋಗುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ, ದ್ರೌಪದಿಯ ಬದುಕು ಒಂದು ನಿರಂತರವಾದ ಸಂಘರ್ಷದ ಇತಿಹಾಸವಾಗಿದೆ. ಸ್ತ್ರೀತ್ವದ ಅಭಿಮಾನ, ನಿಷ್ಠೆ, ಸಂವೇದನೆಗಳನ್ನು ಕಾಯ್ದುಕೊಳ್ಳುತ್ತಲೇ ಸ್ವಂತಿಕೆಗಾಗಿ ಅವಳು ಹೋರಾಡುತ್ತಾಳೆ. ತನ್ನ ಕಾಲಕ್ಕೆ ಅತೀತವೆನಿಸುವ ಸತ್ವವನ್ನು ತೋರಿಸುತ್ತಾಳೆ. ತೀವ್ರವಾದ ದ್ವಂದ್ವ-ಅಂತರ್ವಿರೋಧಗಳನ್ನು ಹೊಂದಿಯೂ ಕೂಡಾ ಒಂದು ಆರ್ಷೇಯ ಪ್ರತೀಕ (Arche-typal Image)ವಾಗಿ ಭಾರತೀಯ ಸಾಹಿತ್ಯದ ಇತಿಹಾಸದಲ್ಲಿ ಸ್ಥಾನವನ್ನು ಪಡೆಯುತ್ತಾಳೆ.

I. ಗ್ರಂಥಋಣ:


ಕರ್ವೆ, ಇರಾವತಿ : ಯುಗಾಂತ, ಕನ್ನಡ ಅನು: ಸರಸ್ವತಿ ರಿಸಬೂಡ ಗಜಾನನ. ನವದೆಹಲಿ: ಸಾಹಿತ್ಯ ಅಕಾಡೆಮಿ, ೧೯೯೦

ಪೆಂಡ್ಸೆ, ಶಂಕರ ಕೇಶವ : ಮಹಾಭಾರತಾತಿಲ್ ವ್ಯಕ್ತಿದರ್ಶನ. ಮರಾಠಿ. ಪೂನಾ: ಮಾಡರ್ನ್ ಬುಕ್ ಡಿಪೊ ಪ್ರಕಾಶನ, ೧೯೬೪

ಭಾಗವತ, ದುರ್ಗಾ : ವ್ಯಾಸಪರ್ವ, ಕನ್ನಡ ಅನು: ಗೌರೀಶ ಕಾಯ್ಕಿಣಿ, ಸುಬ್ರಹ್ಮಣ್ಯ: ಪ್ರಮತಿ ಪ್ರಕಾಶನ, ೧೯೯೨

ರಾಜವಾಡೆ. ವಿ.ಕೆ. : ಭಾರತೀಯ ವಿವಾಹ ಸಂಸ್ಥೆಯ ಇತಿಹಾಸ, ಕನ್ನಡ ಅನು: ಕುಸುಮ, ಬೆಂಗಳೂರು: ನವಕರ್ನಾಟಕ ಪಬ್ಲಿಕೇಶನ್ಸ್, ೧೯೯೩

ಶ್ರೀಮನ್ಮಹಾಭಾರತ ಸಂಪುಟಗಳು : (ಸಂ) ರಂಗಸ್ವಾಮಿ. ಹೆಚ್.ಎನ್. ಮತ್ತು ಇತರರು, ಬೆಂಗಳೂರು: ಭಾರತ ದರ್ಶನ ಪ್ರಕಾಶನ

Havel. E.B. : History of Aryan Rule in India. London: George. G. Harrap and Company Ltd. (n.d.)

Mujumdar, R.C. : 'Social Condition: Family Life' In the Age of Imperial Unity. The History and Culture of Indian People Series. Vol. II. R.C. Mujumdar (ed) Bombay: Bharatiya Vidya Bhavan, 1960.

# ಕಾರಂತರ ಕಾದಂಬರಿಗಳಲ್ಲಿ 'ಸ್ತ್ರೀ' ಮತ್ತು ಲೈಂಗಿಕ ಸಂಬಂಧಗಳು

**ಡಾ. ಸುನೀತಾ ಶೆಟ್ಟಿ**

ಭಾರತೀಯ ಸಂಸ್ಕೃತಿಯಲ್ಲಿ ಕುಟುಂಬ ವ್ಯವಸ್ಥೆಗೆ ಪ್ರಾಧಾನ್ಯ ಹೆಚ್ಚು. ಆದ್ದರಿಂದ ಆದಿಮಾನವನ ಮುಕ್ತ ಲೈಂಗಿಕ ಪ್ರವೃತ್ತಿಯಲ್ಲಿ ಕ್ರಮೇಣ ಮುಚ್ಚುಮರೆ, ಲಜ್ಜೆ, ಸಂಕೋಚಗಳು ಬೆಳೆಯುತ್ತ ಬಂದು ಗಂಡು-ಹೆಣ್ಣಿನ ಲೈಂಗಿಕ ಸಂಬಂಧಕ್ಕೆ ವಿವಾಹದಂಥ ವಿಧಿ-ವಿಧಾನಗಳ ಮುದ್ರೆ ಒತ್ತಿ ಅವುಗಳನ್ನು ಸಾಮಾಜಿಕ ಕಟ್ಟುಪಾಡುಗಳಿಗೆ ಸೀಮಿತಗೊಳಿಸಲಾಯಿತು. ಈ ನಡುವೆ ಮಾನವನ ಮೂಲ ಪ್ರವೃತ್ತಿಯಲ್ಲಿ ಶಕ್ತಿಶಾಲಿ ಎನಿಸುವ 'ಕಾಮ' ಹಾಗೂ ಲೈಂಗಿಕ ಪ್ರಚೋದನೆ ಇವು ಸಾಮಾಜಿಕ ನಿರ್ಬಂಧಗಳನ್ನು ಮೀರಿ ಬೆಳೆದು ನಿಲ್ಲುವುದನ್ನು ನಾವು 'ಅನೈತಿಕ'ವೆಂದು ಕರೆದರೂ ಅದು ಅನಿವಾರ್ಯವಾಗಿ ಬಿಡುವ ಸಂದರ್ಭಗಳ ಹಿಂದಿನ ಕಾರ್ಯ-ಕಾರಣ ನಿಲುವು ಮಹತ್ವದ್ದೆನಿಸುತ್ತದೆ. 'ಅದುಮಿಟ್ಟ ಭಾವನೆಗಳ ಸ್ಫೋಟ'ವೇ ಇದರ ಶಕ್ತಿಚಾಲನೆಯೆಂದು ಮನಃಶಾಸ್ತ್ರಜ್ಞರು ಹೇಳುತ್ತಾರೆ - "Throughout an individual's life, there is a constant replacement of external by internal compulsion".[1]

'ಸಾಮಾನ್ಯವಾಗಿ, ಮಾನವನ ಇಂಥ ಅದುಮಿಟ್ಟ ಮೂಲಭೂತ ಪ್ರವೃತ್ತಿಗಳ ಮೇಲೆಯೇ ನಮ್ಮ ನಾಗರಿಕತೆಯ ರಚನಾಶಿಲ್ಪವಿದೆ'[2] ಎಂದು ಹೇಳುವ ಈ ಮನಃಶಾಸ್ತ್ರಜ್ಞರು ಸಂಕೀರ್ಣವೆನಿಸುವ ಸುಪ್ತಪ್ರಜ್ಞೆಯೊಂದು ಲೈಂಗಿಕ ಸಂಬಂಧಗಳಿಂದ ತೃಪ್ತಿಗೊಳ್ಳುವ ವಿಲಕ್ಷಣ ಮಾನಸಿಕ ಸ್ಥಿತಿಯ ವಿಶ್ಲೇಷಣೆಯನ್ನೂ ಮಾಡುತ್ತಾರೆ. ಶಿವರಾಮ ಕಾರಂತರು ತಮ್ಮ 'ಸರಸಮ್ಮನ ಸಮಾಧಿ' ಕಾದಂಬರಿಯ ಮುನ್ನುಡಿಯಲ್ಲಿ 'ಲೈಂಗಿಕ ಸಮಸ್ಯೆ ಮನುಷ್ಯ ಜಾತಿಗೆ ಸಂಬಂಧಿಸಿದುದು ... ಅದೇ ಲೈಂಗಿಕ ಪ್ರಶ್ನೆಯೇ ಈ ಕೃತಿಯ ನಾಯಕನೆಂದರೂ ಸರಿಯೇ' - ಎನ್ನುತ್ತಾರೆ. ಎಂದರೆ ಈ ಹೇಳಿಕೆಯಲ್ಲಿ ಎರಡು ವಿಚಾರಗಳು ಸಿದ್ಧವಾಗುತ್ತವೆ, ಮತ್ತು ಇವೆರಡೂ ಮೇಲಿನ ಅಭಿಪ್ರಾಯಗಳಿಗೆ ಪೂರಕವಾಗುತ್ತವೆ. ಒಂದನೆಯದು, ಲೈಂಗಿಕ ಸಂಬಂಧದಲ್ಲಿ ಮನುಷ್ಯ ಜಾತಿಗೆ ಒದಗುವ ಸಮಸ್ಯೆಗಳು, ಎರಡನೆಯದು, ಕಲಾತ್ಮಕವೆನಿಸುವ ಸಾಹಿತ್ಯ ಕೃತಿಗಳಲ್ಲಿ 'ಲೈಂಗಿಕ' - ವಿಷಯಕವಾದ ಸಾಮಾಜಿಕ ಬದ್ಧತೆ ಮತ್ತು ತರ್ಕಬದ್ಧ ವಿಚಾರ ಸರಣಿ.

ಆದಿ ಶಿಲಾಯುಗದಲ್ಲಿಯ ಗುಹಾಂತರ್ಗತ ಭಿತ್ತಿಚಿತ್ರಗಳಲ್ಲಿ ಲೈಂಗಿಕ ಸಂಕೇತಗಳನ್ನು ಬಳಸಿಕೊಂಡ ರೀತಿಗೂ, ಭಾರತೀಯ ಧರ್ಮ ಸಂಸ್ಕಾರಗಳಿಗೂ ಇರುವ ಅದ್ಭುತ ಸಂಬಂಧ

---

೧. Sigmund Freud - Tr. James Strachey - P. 69

೨. ಅದೇ. ಪು. 39

ನಮ್ಮನ್ನು ಚಕಿತಗೊಳಿಸದಿರದು. ಪಾಶ್ಚಾತ್ಯ ಮನಃಶಾಸ್ತ್ರಜ್ಞರೂ ಇದನ್ನು ಒಪ್ಪಿಕೊಂಡಿದ್ದಾರೆ - ಕಾತ್ಯಾಯನನ 'ಕರ್ಮಪ್ರದೀಪ'ದಲ್ಲಿ ಉಲ್ಲೇಖಿತಗೊಂಡ ಒಂದು ಸಂಗತಿಯನ್ನು ಡಾ. ಸಿ.ಜಿ.ಯೂಂಗ್ ಬಹುಶವಾಗಿ ಮೆಚ್ಚಿಕೊಂಡು, ಯಜ್ಞ ಸಂಸ್ಕಾರದಲ್ಲಿ ಮಾಡುವ ಅಗ್ನಿಪ್ರತಿಷ್ಠೆಯು ಕಲ್ಪನೆಗೆ ಮೂಲವೆನಿಸುವ ಘರ್ಷಣೆಯ ವಸ್ತುಗಳನ್ನು ಗಂಡು-ಹೆಣ್ಣು ಎಂದು ಪರಿಭಾವಿಸಬೇಕಾದ ಔಚಿತ್ಯವನ್ನು ಪಾಶ್ಚಾತ್ಯರಿಗೂ ಮುಟ್ಟಿಸಿದ್ದಾನೆ. ಈ ಘರ್ಷಣೆಯಿಂದ ಉತ್ಪತ್ತಿಯಾಗುವ ಶಿಶುವೇ 'ಅಗ್ನಿ' ಎಂಬ ಪರಿಕಲ್ಪನೆಯಲ್ಲಿ ಸಮಸ್ತ ಜಗತ್ತಿನ ಸೃಷ್ಟಿಕಾರ್ಯಗಳ ಅವಲಂಬನವಿದೆ' ಎನ್ನುತ್ತಾನವನು. ಮಾನವನು 'ಮನೋದೇಹಿ' ಎಂಬ ನಿರ್ಣಯಕ್ಕೆ ಬಂದಿದ್ದು ಮನಃಶಾಸ್ತ್ರಕ್ಕೆ ತಮ್ಮ ವಿಚಾರಗಳನ್ನು ತೆರೆದುಕೊಂಡವರು. ಈ ಸಂಗತಿಯನ್ನು ಆರಂಭದಲ್ಲೆ ನಾವು ಗಮನಿಸುವುದು ಅವಶ್ಯವಿದೆ.

ಆದಿ ಮಾನವನ ಅನಂತರದ ಕಾಲದಲ್ಲಿ ಸಂತಾನೋತ್ಪತ್ತಿಗೆ ಸಂಬಂಧಿಸಿ ವಿವಾಹವೆಂಬ ಕರ್ಮಕಾಂಡವು ಧಾರ್ಮಿಕ ಸ್ವರೂಪಪಡೆದು, ಪವಿತ್ರವೆನಿಸಿದ್ದು ಒಂದು ಮುಖವಾದರೆ, ನೀತಿ-ಅನೀತಿಗಳ ದ್ವಂದ್ವದಲ್ಲಿ ತೊಳಲಾಡುವ ವಿವಾಹ ಬಾಹಿರ ಸಂಬಂಧಗಳೂ ಅಲಕ್ಷಿಸಲಾಗದ ಇನ್ನೊಂದು ಮುಖವೇ ಆಗುತ್ತದೆ. ಕಾರಂತರು ಈ ಎರಡನ್ನು ಅತಿ ಕಾಳಜಿ ಪೂರ್ವಕ ಅವಲೋಕಿಸಿದ್ದಾರೆ. ಲೈಂಗಿಕತೆಯನ್ನು ಸಮಸ್ಯೆಯೆಂಬಂತೆ ವಿರಾಡ್ರೂಪವಾಗಿ ಪರಿಗಣಿಸುವುದಕ್ಕಿಂತ, ಅದನ್ನು ಮಾನವೀಯ ಸ್ಪರ್ಶದ ನೆಲೆಯಲ್ಲಿ ಒಬ್ಬ ಜಿಜ್ಞಾಸುವಿನಂತೆ ಪರಿಶೀಲಿಸುವುದು ಅವರಿಗೆ ಮುಖ್ಯವೆನಿಸುತ್ತದೆ. ಮೇಲುನೋಟಕ್ಕೆ ನಿರ್ಣಾಯಕವೆನಿಸುವ ಸಂಗತಿಗಳು ಅವರಿಗೆ ಪ್ರಶ್ನಾತೀತವಾಗಿ ಕಂಡಿವೆ. ಕಾರ್ಯ-ಕಾರಣವೆಂಬ ಹೇತುಮೂಲ ಸಂಯೋಜನೆಯಷ್ಟರಿಂದಲೇ ಅವರು ತೃಪ್ತರೂ ಅಲ್ಲ. ಇದರಿಂದಾಗಿ 'ಲೈಂಗಿಕತೆ' ಪ್ರಧಾನವೆನಿಸುವ ಅವರ ಕೃತಿಗಳಲ್ಲಿ ಒಂದು ರೀತಿಯ ಸಂಯಮ, ಬದುಕಿನ ಮೌಲ್ಯವನ್ನು ಪ್ರತಿಪಾದಿಸುವ ಹಂಬಲ, ಸ್ವಭಾವ ಕುತೂಹಲ ಕಾಣುತ್ತದೆ.

ಮಾನವ ಸ್ವಭಾವಗಳನ್ನು ಮನೋವಿಜ್ಞಾನದ ಮೂಲಕ ಅರಿತುಕೊಳ್ಳುವ ಒಂದು ಕಾಲದಲ್ಲಿ ಕಾರಂತರು ಬರೆಯುತ್ತಿದ್ದಾಗಲೂ ಕಾಮವನ್ನು ಶುದ್ಧ ಸಂಸ್ಕೃತಿಯೆಂದು ಪರಿಗಣಿಸುವ ಮನೋಭೂಮಿಕೆಯಲ್ಲಿ ಅದಕ್ಕೆ ಧಕ್ಕೆಯಾಗದಂತೆ ವಹಿಸುವ ಎಚ್ಚರ, ಹಾಗೂ ಸಂಯಮದ ಪ್ರತೀಕವು ಹೆಣ್ಣೇ ಆಗುವುದು ಸಾಂಸ್ಕೃತಿಕ ಚರಿತ್ರೆಯ ಬಹುಮುಖ್ಯ ಅಂಗವಾಗಿ ಕಾರಂತರಿಗೆ ಕಂಡಿದೆ. ಕಾಮವು 'ಮನುಷ್ಯನ ಮೂಲಭೂತ ಸಂಬಂಧಗಳಲ್ಲಿ ಒಂದು, ಕಾರಂತರಿಗೆ ಇದು ಒಂದು ಪರಂಪರೆ ಸಂಸ್ಕೃತಿಗಳಂತೆ'[೪]. ಮರಾಠಿ ಕಾದಂಬರಿಕಾರ ನ.ಸಿ.ಫಡ್ಕೆಯವರು ಮನಃಶಾಸ್ತ್ರದ ಪ್ರಾಧ್ಯಾಪಕರಾಗಿಯೂ, ಜೀವನ ಮತ್ತು ಕಲೆಯ ಅಂತರವನ್ನು ಗಮನಿಸಿಯೇ ಸಮತೋಲದ ಬರವಣಿಗೆಯನ್ನು ನೀಡಿದ್ದಾರೆ. ಕಲಾತ್ಮಕ ಅಂಶಗಳಿಗೆ ಪ್ರಾಧಾನ್ಯ ನೀಡುವಾಗ ವಿಜ್ಞಾನದ ಅತಿಕ್ರಮಣ, ಅಥವಾ ಆಕ್ರಮಣಕಾರೀ ವಿಷಯಗಳನ್ನು ಒತ್ತಟ್ಟಿಗಿಡುವ ಪ್ರಯತ್ನವನ್ನು ಹೆಚ್ಚಿನ ಸಮಕಾಲೀನ ಬರಹಗಾರರು ಮಾಡಿದ್ದಾರೆ. ಶುದ್ಧ ಭಾರತೀಯವೆನ್ನುವ ಕಲ್ಪನೆ ಇದರ ಹಿಂದೆ ಕೆಲಸ ಮಾಡಿತ್ತು. ಮರಾಠಿಯ ಪ್ರಸಿದ್ಧ ಲೇಖಕರಾದ ವ.ಮ. ಜೋಶಿ (ಇಂದೂ ಕಾಳೆ,

---

೩. The Prmantha, as the tool of the Manthana (fire sacrifice) is considered purely sexual in the Hindu. The Prmantha as Pallus or man, the bored wood underneath as Vulva or woman. The resulting fire is the child, the devine Agni. The two pieces of wood are called is the cult, Pururavas and Urvasi" (ಈ ಹೇಳಿಕೆಯನ್ನು ಯೂಂಗನು ತನ್ನ 'Psychology of Unconscious ಗ್ರಂಥದಲ್ಲಿ ಉಲ್ಲೇಖಿಸಿ ಸಮರ್ಥಿಸಿದ್ದಾನೆ - P.91) Tr. Hinkle.

೪. ಟಿ.ಪಿ. ಅಶೋಕ - ಸಾಹಿತ್ಯ ಸಂಪರ್ಕ- ಪು. 10

ಸರಲಾ ಭೋಳಿ), ಸಾನೆಗುರೂಜಿ (ಶ್ಯಾಮ್‌ಚೀ ಆಯೀ), ವಿ.ಸ. ಖಾಂಡೇಕರ (ಅಮೃತ್‌ವೇಲ್) ಇವರು ಸಮಕಾಲೀನ ವಿಚಾರಗಳ ಪೂರ್ಣ ಪರಿಚಯವಿದ್ದೂ 'ಫ್ರಾಯ್ಡ್‌ನಂತಹ ಮನೋವಿಜ್ಞಾನಿಗಳನ್ನು ತಮ್ಮ ಸಮೀಪ ಸುಳಿಯಗೊಡಲಿಲ್ಲ[5], ಎಂಬ ಅಭಿಪ್ರಾಯ ಪ್ರಚಲಿತವಿದೆ. ಫಡ್‌ಕೆಯವರ ಕಲಾವಾದ, ಖಾಂಡೇಕರ ಮತ್ತು ವ.ಮ. ಜೋಶಿಯವರ ಆದರ್ಶವಾದ, ವರೇರಕರರ ಧ್ಯೇಯವಾದ, ಇದರೊಳಗೆ ವಿಹರಿಸುತ್ತಿದ್ದ ಮರಾಠಿ ಕಾದಂಬರಿಗಳು ಜೀವನದ ಅಂತಃ ಸ್ವರೂಪದತ್ತ ಸಾಗಲು ಚಡಪಡಿಸುತ್ತಿದ್ದುವು'[6] ಎಂಬುದರಲ್ಲಿ ಸಂದೇಹ ಉಳಿದಿಲ್ಲ. ಉದಾಹರಣೆಗೆ ಖಾಂಡೇಕರರ 'ಅಮೃತ್‌ವೇಲ್' ಕಾದಂಬರಿಯ ಅಲಕ್‌ನಂದಾ, ನಿಜವಾದ ಪ್ರೀತಿ ಎಂದರೆ ಯಾವುದು ಎಂಬ ಪ್ರಶ್ನೆಯನ್ನು ದಾಸ್‌ಬಾಬೂ - ಇವರಿಗೆ ಕೇಳುತ್ತಾಳೆ. ಅವರು ಹೀಗೆ ಹೇಳುತ್ತಾರೆ. "ಪ್ರೀತಿಯೆಂದರೆ ಕೇವಲ ಯೌವ್ವನದ ಪ್ರೇರಣೆಯಿಂದ ಹುಟ್ಟುವ ವಾಸನಾಭಾವವಲ್ಲ. ಈ ವಾಸನಾಭಾವದ ಮೂಲ್ಯವನ್ನು ನಾನು ಕನಿಷ್ಠವೆಂದು ಭಾವಿಸುವವನಲ್ಲ. ಸಮಗ್ರ ಬದುಕಿನ ಆಧಾರವೇ ಅದು ಆದರೆ ಈ ವಾಸನಾ ಪ್ರವೃತ್ತಿಗೆ, ಮುಕ್ತ ವಿಚಾರಗಳ, ಅಂತಃಕರಣದ ಜೊತೆ ದೊರೆತರೆ ಆಗಲೇ ಅದು ಅಮೃತ ಬಳ್ಳಿ ಎನ್ನಿಸುತ್ತದೆ.[7] ಈ ಹೇಳಿಕೆಯ ಅಂತರಾರ್ಥದಲ್ಲಿ ಕಾಮವನ್ನು, ಇಂದ್ರಿಯ ಸುಖವನ್ನು ಬದುಕಿನ ಒಂದು ಆವಶ್ಯಕತೆಯೆಂದು ಮನ್ನಿಸಿಯೂ ಅದನ್ನು ಪ್ರೀತಿಯತ್ತ ಒಯ್ಯಬಹುದಾದ ಚಿಂತನೆ ಹೊಳೆಯುತ್ತದೆ.

ಕಾರಂತರು ಇದಕ್ಕಿಂತಲೂ ಒಂದು ಹೆಜ್ಜೆ ಮುಂದಿಟ್ಟು "ಪ್ರಾಣಿ ವಿಜ್ಞಾನ, ವರ್ತನಶಾಸ್ತ್ರ ಮನಃಶಾಸ್ತ್ರ - ಅವುಗಳ ತಿಳಿವಿಲ್ಲದೆ ಅಥವಾ ಅವುಗಳ ಅಸ್ತಿತ್ವವನ್ನೇ ನಿರಾಕರಿಸಿ ಗಂಡುಹೆಣ್ಣುಗಳ ಲೈಂಗಿಕ ಜೀವನವನ್ನು ಒಂದೊಂದು ಸಮಾಜದ ರೂಢಿಯ ನೀತಿ, ಅನೀತಿಯ ನಿಷ್ಠುರ ಅಳತೆಗೋಲಿನಿಂದ ನಾವು ಅಳೆದಲ್ಲಿ ಮಾನವ ಪ್ರವೃತ್ತಿಯ ಒಂದು ಗಾಢವಾದ ಚಿತ್ತವೃತ್ತಿ ಮತ್ತು ಸ್ವಭಾವವನ್ನೇ ಮರೆತಂತಾದೀತು"[8] ಎಂದು ಬರೆಯುತ್ತಾರೆ. "ನನ್ನ ಹಲವಾರು ಕಾದಂಬರಿಗಳಲ್ಲಿ ಲೈಂಗಿಕತೆಯನ್ನು ಕುರಿತು ಅನೇಕ ಸಂದರ್ಭಗಳು ಮತ್ತು ಸನ್ನಿವೇಶಗಳು ಚಿತ್ರಿತವಾಗಿವೆ. ಅಂಥ ಪ್ರಸಂಗಗಳನ್ನು ಅನುಕಂಪದಿಂದ ನೋಡಿದ ನಾನು ವ್ಯಕ್ತಿಗಳ ಅಂಥ ನಡವಳಿಕೆಗೆ ಕಾರಣವಾದ ಹಿನ್ನೆಲೆಯನ್ನು ಸಾಕಷ್ಟು ಬಣ್ಣಿಸಿದ್ದೇನೆ.. ಸಹಾನುಭೂತಿಯಿಂದ ನೋಡುವವನ ಕಣ್ಣಿಗೆ ಲೈಂಗಿಕ ಸಮಸ್ಯೆಯ ವಿಭಿನ್ನ ಮುಖಗಳು ಕಾಣಿಸುತ್ತವೆ. ಇವುಗಳನ್ನು ಪೂರ್ವ ತೀರ್ಮಾನವಿಲ್ಲದೆಯೇ ಪರಿಶೀಲಿಸಿದಿರಾದರೆ ಉದ್ಭೂತವಾಗುವ ಜೀವನದ ನೂರಾರು ಸನ್ನಿವೇಶಗಳನ್ನು ಅರ್ಥಮಾಡಿಕೊಳ್ಳಲು ಎಷ್ಟೊಂದು ಕಷ್ಟವಿದೆ ಎಂಬುದರ ಅರಿವಾದೀತು"[9] ಎನ್ನುತ್ತಾರೆ. 'ಆಧುನಿಕ ಪ್ರಜ್ಞೆ' ಎಂದರೆ 'ಆಧುನಿಕ ಮನೋದೇಹ ವಿಜ್ಞಾನಗಳ ತಕ್ಕಷ್ಟು ಪರಿಚಯ' ಎಂಬ ನಿಲುವನ್ನೂ ಸ್ಪಷ್ಟ ಪಡಿಸುತ್ತಾರೆ. ಮನಃಶಾಸ್ತ್ರದ ಅರಿವಿದ್ದು ಸಾಕಷ್ಟು ಸಂಯಮದಿಂದ ಚಿತ್ರಿಸುವ ಅವರ ಕಲೆಗಾರಿಕೆಯ ಹಿಂದೆ ಬದುಕಿನ ಮೌಲ್ಯೀಕರಣ ಹೆಚ್ಚು ಅರ್ಥಪೂರ್ಣವೆನಿಸುತ್ತದೆ.

೧೯೨೩ರಲ್ಲಿ ಪ್ರಕಟಗೊಂಡ 'ಕನ್ಯಾಬಲಿ' (ಸೂಳೆಯ ಸಂಸಾರ), ಕಲಾತ್ಮಕತೆಯ ಕಡೆಗೆ ಅಷ್ಟಾಗಿ ಲಕ್ಷ್ಯಹರಿಯಿಸದೆ, ಸಮಾಜದಲ್ಲಿ ಸುಧಾರಣೆಯಾಗಬೇಕು, ಎಂಬ ಭಾವೋದ್ವೇಗದಿಂದ

---

೫. ಚಂದ್ರಕಾಂತ್ ಬಾಂದಿವಡೆಕರ್ - ಮರಾಠಿ ಕಾದಂಬರಿ, ಚಿಂತನ್ ಅಣಿ ಸಮೀಕ್ಷಾ, ಪು. 43
೬. ಅದೇ. ಪು. 43
೭. ವಿ.ಸ. ಖಾಂಡೇಕರ - ಅಮೃತ್‌ವೇಲ್ ಪು. 38
೮. ಡಾ॥ ಶಿವರಾಮ ಕಾರಂತ - ಸ್ಮೃತಿಪಟಲದಿಂದ - ಪು. 131
೯. ಸ್ಮೃತಿಪಟಲದಿಂದ - ಪು. 132-133 ಸಂ. 2

ಬರೆದ ಕಾದಂಬರಿ. ಒಳ್ಳೆಯ ಮನೆತನದಲ್ಲಿ ಹುಟ್ಟಿದ ಮಾಲತಿ ಬಾಲ ವಿಧವೆ. ಆದರೆ ಪರಿಸ್ಥಿತಿಯ ಒತ್ತಡಕ್ಕೆ ಮಣಿದು ಹಸಿವೆ ತೀರಿಸಿಕೊಳ್ಳಲೆಂದೇ ವೇಶ್ಯೆಯಾಗುವ ದುರಂತ ಅವಳ ಬಾಳಿನದು. ತನ್ನ ಬದುಕಿಗೆ ಹೇರಲಾದ ವೈಧವ್ಯದ ಪಟ್ಟದಲ್ಲಿ ಅವಳ ಕಾಮನೆಗಳ ಹೋಳಿಯಾಗುತ್ತದೆ. ವೇಶ್ಯೆಯಾದ ಅವಳ ಬದುಕಿನ ಕೊನೆಗಾಲವೆಂದರೆ ಸ್ವತಃ ತಂದೆಯೇ ಗಿರಾಕಿಯಾಗಿ ಬರುವ ಕೆಟ್ಟ ಕ್ಷಣ! ಮಾಲತಿಯಲ್ಲಿ ಇದ್ದುದು ದೇಹದ ಹಸಿವಲ್ಲ, ಅದು ಕೂಳುಕಾಣದ ಹೊಟ್ಟೆಯ ಬೇನೆ! ಹಿಂದಿಯ ಪ್ರಸಿದ್ಧ ಉಪನ್ಯಾಸಕಾರ ಪ್ರೇಮಾಚಂದರ ಆರಂಭದ ಬರಹಗಳು ಕೂಡ ಹೆಣ್ಣು ತಾನು ವೇಶ್ಯೆಯಾಗುವುದರ ಸಾಮಾಜಿಕ ಸಂದರ್ಭಗಳ ಕಡೆಗೆ ಬೆಳಕು ಚೆಲ್ಲುತ್ತದೆ. "ಕುಟುಂಬದಲ್ಲಿಯ ಅಪಮಾನ, ಸಾಮಾಜಿಕ ದಾಸ್ಯ, ಮತ್ತು ಆರ್ಥಿಕ ಸಂಕಷ್ಟ - ಇವುಗಳಿಂದಾಗಿಯೇ ಹೆಣ್ಣು ವೇಶ್ಯೆಯಾಗುತ್ತಾಳೆ ಎಂಬುದಾಗಿ ಪ್ರೇಮಾಚಂದರು ತಿಳಿದಿದ್ದರು"[೧೦]. ಮಾಲತಿ ಹೇಳುವುದೂ ಇವನ್ನೇ - "ವ್ಯಭಿಚಾರಕ್ಕಾಗಿ ನಾನು ಸೂಳೆಯಾಗಲಿಲ್ಲ, ಊಟಕ್ಕಾಗಿ ಆದೆ.. ನಾನಾ ತರದ ಬೇನೆಗಳನ್ನೂ ವೇದನೆಗಳನ್ನೂ ಅನುಭವಿಸಿದೆ"[೧೧] ಎಂದು ಅಣ್ಣ ಮಹೇಶನಲ್ಲಿ ತನ್ನ ಅಳಲನ್ನು ತೋಡಿಕೊಳ್ಳುತ್ತಾಳೆ.

ಒಂದೆಡೆ ಸಮಾಜದ ಅಂಧಶ್ರದ್ಧೆ, ಹಾಗೂ ಅಜ್ಞ ನಡೆವಳಿಗಳನ್ನು ಪ್ರಶ್ನಿಸುವ, ಅವುಗಳಿಗೆ ಕೊಡಲಿಯೇಟು ಹಾಕುವ ಭಾರ್ಗವ ವೃತ್ತಿ ಕಂಡುಬಂದರೆ, ಇನ್ನೊಂದೆಡೆ ವ್ಯಕ್ತಿಯ ಸ್ವಾಭಿಮಾನ, ಛಲ, ಪ್ರತಿಭಟನಾ ವೃತ್ತಿ - ವಿಷಮ ವಾಸ್ತವತೆಯ ಉರುಳು ಚಕ್ರದಲ್ಲಿ ಹೇಗೆ ನುಚ್ಚುನೂರಾಗುತ್ತವೆ, ಎಂಬುದರ ಚಿತ್ರಣ ಈ ಕಾದಂಬರಿಯಲ್ಲುಂಟು. ಸಾಹಿತ್ಯದ ಇತ್ಯಾತ್ಮಕ ಗುಣಗಳಿಗೆ ಈ ಕೃತಿ ಸಂಪೂರ್ಣ ಬದ್ಧವಾಗದೆ ಹೋದರೂ ಕೃತಿಕಾರನ ವೈಚಾರಿಕತೆ, ಕಾಳಜಿ ಇವು ಒಂದು ಕಾಲದ ಅಗತ್ಯಗಳಾಗಿ ಕಂಡುಬರುತ್ತವೆ.

'ಸರಸಮ್ಮನ ಸಮಾಧಿ' (೧೯೩೭), ಹೆತ್ತಳಾತಾಯಿ (೧೯೪೫), ಮತ್ತು ಮೈಮನಗಳ ಸುಳಿಯಲ್ಲಿ (೧೯೭೦) ಇವು ಲೈಂಗಿಕತೆಯೇ ಪ್ರಧಾನವಾಗಿ ಉಳ್ಳ ಅಂಶಗಳಿಂದ ಒಬ್ಬೊಬ್ಬರೂ ಸಾಗಿದ ದಾರಿಯನ್ನು ಅವರ ಬದುಕಿನ ಸಂಕೀರ್ಣತೆಯನ್ನು ನೋವು, ನಿರಾಶೆ, ಹತಾಶೆಗಳ ವಿವಿಧ ರೂಪಗಳನ್ನು ದರ್ಶಿಸುತ್ತ, ಬದುಕಿನ ಇನ್ನೊಂದು ಮಗ್ಗುಲನ್ನು ಪರಿಚಯಿಸುತ್ತದೆ. ಸಂಪ್ರದಾಯ ನಿಷ್ಠತೆಯಲ್ಲಿಯ ಅತಿಸ್ತು ಇಲ್ಲಿ ಒಂದು ಕಾರಣವಾದರೆ, ಸಂಪ್ರದಾಯದ ಸಂಕೋಲೆಯನ್ನು ಹರಿದೊಗೆದು ಸುಖವೆಂಬ ಮರೀಚಿಕೆಯ ಬೆನ್ನುಹತ್ತಿ ಸಾಗುವ ದಿಕ್ಕುಗೇಡಿತನ ಇನ್ನೊಂದು ಕಾರಣವೆನ್ನಿಸುತ್ತದೆ.

'ಸರಸಮ್ಮನ ಸಮಾಧಿಯಲ್ಲಿ ಮೈಯ ಹಸಿವು ಸ್ಥಾಯೀ ಭಾವವಾದರೆ, ದಾಂಪತ್ಯದಲ್ಲಿಯ ವಿರಸವೇ ಸಂಚಾರೀ ಭಾವವಾಗಿ ಅನೇಕ ಗತಿಗಳನ್ನು ಶೋಧಿಸುತ್ತ ಹೊರಟ ಅಸ್ಥಿರತೆಯ ಸಂವೇದನೆಯಲ್ಲಿ ಕೊನೆಗೊಳ್ಳುತ್ತದೆ. ಈ ವಾಸ್ತವತೆಯ ಅಸ್ತಿವಾರದ ಮೇಲೆ ಕಾರಂತರು ಕಟ್ಟುವ ಕಲ್ಪನೆಯ ಸಾಮ್ರಾಜ್ಯದಲ್ಲಿ ಅಂಗಡಿ ವ್ಯಾಪಾರಿ ಅಣ್ಣಪ್ಪಯ್ಯನ ಪತ್ನಿ ಸುನಾಲಿನಿ, ಭಾಗೀರಥಿಯನ್ನು ಮದುವೆಯಾಗಿಯೂ ತಂದೆಯ ಕಟ್ಟುನಿಟ್ಟಿನಿಂದ ಅವಳೊಡನೆ ದಾಂಪತ್ಯ ನಡೆಸಲಾಗದ ಹಿರಣ್ಯ, ಇವರು ಮಾನಸಿಕವಾಗಿ ಬಳಲುತ್ತಿರುವ ಅತೃಪ್ತಜೀವಿಗಳಂತೆ ಸುಳಿಯುತ್ತಾರೆ. ನೀಲಾಚಲಯ್ಯ ಸತ್ತಾಗ ಊರವರು ಸೇರಿ ಬಲಾತ್ಕಾರದಿಂದ ಸರಸಮ್ಮನನ್ನು ಚಿತೆಗೆ ಹೊತ್ತುಹಾಕಿದ್ದ ನಿಷ್ಠುರ

---

೧೦. ಬಿಂದೂ ಅಗರ್‌ವಾಲ್ - ಹಿಂದೀ ಉಪನ್ಯಾಸೋಂಮೆ ನಾರೀಚಿತ್ರಣ್ (ಪು. 38)

೧೧. ಕನ್ಯಾಬಲಿ - ಪು. 45

ಸತ್ಯವೊಂದನ್ನು ಸರಸಮ್ಮನ ಪ್ರೇತ (ಬೆಳ್ಳಕ್ಕ) ಹೊರಗೆಡಹುವುದರೊಂದಿಗೆ 'ಸರಸಮ್ಮನ ಸಮಾಧಿ' (ಮಹಾಸತಿ)ಯ ಒಳಹೊರಗೆಲ್ಲ ಬಯಲಾಗುತ್ತದೆ. ವಿವಾಹವೆಂಬ ಸಂಸ್ಕಾರದ ಹಿಂದೆ ಅಡಗಿರುವ ಹಿರಿಯರ ಮೌಢ್ಯವನ್ನು ಸುನಾಲಿನಿ ಹೀಗೆ ಟೀಕಿಸುತ್ತಾಳೆ:

'ಸಂಸಾರಕ್ಕೆ ನೆರವಾಗದ ವಿದ್ಯೆ ಎಷ್ಟಿದ್ದರೇನು? ಎರಡು ಅಪರಿಚಿತ ಹೆಣ್ಣು-ಗಂಡುಗಳನ್ನು ಬೇರೆ ಬೇರೆ ಬೆಳೆಸಿ, ಒಂದು ದಿವಸ ಅವರನ್ನು ಮಂಟಪದೊಳಗೆ ಕುಳ್ಳಿರಿಸಿ ದಾಂಪತ್ಯದಲ್ಲಿ ಬೆಸೆಯುತ್ತೇವೆ, ಎಂಬುದು ಭ್ರಮೆಯಲ್ಲವೇ?' ಎಂದು ತನಗೆ ತಾನೇ ಪ್ರಶ್ನಿಸಿಕೊಳ್ಳುತ್ತಾಳೆ. ಆಕೆ ಚಂದ್ರಯ್ಯನಿಗೆ ಒಲಿಯುವ ಸಂದರ್ಭವಾದರೂ, ಅದು, ಅತೃಪ್ತ ಮನಸ್ಸಿನ ಒತ್ತಡವೊಂದೇ ಎನಿಸದೆ ಅವಳು ತಳೆಯುವ ದಿಟ್ಟ ನಿಲುವೂ ಆಗುತ್ತದೆ" ಗಂಡು ಹೆಣ್ಣುಗಳೊಳಗಿನ ಪ್ರೇಮ ಬಂಧನವು ಅತಿ ಸಂಕೀರ್ಣವಾದುದು. ಇದರಲ್ಲಿ ಲೈಂಗಿಕ ಇಚ್ಛೆಯ ಬೇಕು-ಬೇಡಗಳು ಕೇವಲ ಒಂದಂಶ ಮಾತ್ರ.[12] 'ಹೆಣ್ಣುಬರಿಯ ಭೋಗಕ್ಕಲ್ಲ' - ಎಂದು ಸುನಾಲಿನಿಯಿಂದ ಹೇಳಿಸುವ ಕಾರಂತರು ಅವಳು ಕಾತರಿಸುವ ಸುಖ ಯಾವುದೆಂದು ತಿಳಿಸುವ ಪ್ರಯತ್ನದಲ್ಲಿ ಒಂದೊಂದು ಹೆಣ್ಣಿನ ಅಂತರಂಗವನ್ನು ಬಿಚ್ಚಿಡುತ್ತಾರೆ. ವೈಚಾರಿಕತೆಯ ನೆರವನ್ನು ಪಡೆಯುವ ವಿದ್ಯಾವಂತೆ ಸುನಾಲಿನಿ -

'ದಾಂಪತ್ಯವೆಂದರೆ ಎರಡು ಜೀವಿಗಳ ಸ್ವಾರಸ್ಯದ ಮಿಲನ. ಅವು ತಿಕ್ಕಾಡಬಾರದು. ಅವು ಹೊಂದಿಕೊಳ್ಳಬೇಕಾದರೆ ಮನಸ್ಸು ಹೊಂದಿಕೊಳ್ಳಬೇಕು. ಅದಕ್ಕೆ ಮನಸ್ಸು ಬೆಳೆಯಬೇಕು. ಒಬ್ಬರು ಇನ್ನೊಬ್ಬರ ಮನಸ್ಸು ಏನೆಂದು ತಿಳಿಯಬೇಕು. ಆದರೆ ಮನಸ್ಸಿಗಿಂತ ಮಾಂಸಕ್ಕೆ ಬೆಲೆಕೊಡುವ ಮನುಷ್ಯನಿದ್ದಾನೆ ಕಸಾಯಿಖಾನೆಯಲ್ಲಿ[13] - ಎಂದು ಜಿಗುಪ್ಸೆ ತಾಳುತ್ತಾಳೆ. ಓರ್ವ ಅಧ್ಯಯನಶೀಲನಂತೆ ಕಾರಂತರು ಮಾನವನ ವಿಚಿತ್ರ ನಡವಳಿಕೆಗೆ ಮೂಲಕಾರಣಗಳನ್ನು ಅರಸುತ್ತ ಹೊರಡುತ್ತಾರೆ. ಅವರವರ ಬದುಕು ಸಾಗುವ ವಿಶಿಷ್ಟ ಸಾಮಾಜಿಕ ಚೌಕಟ್ಟಿನೊಳಗೆ ಅದನ್ನು ಅರ್ಥೈಸಿಕೊಳ್ಳುತ್ತಾರೆ. ಇಂಥದೊಂದು ಇರಲಾರದೇಕೆ ಎಂದು ಪ್ರಶ್ನಿಸುತ್ತಾರೆ.

'ಹೆತ್ತಳಾ ತಾಯಿ' ಕಾದಂಬರಿಯು ವಿವಾಹ ಬಾಹಿರ ಸಂಬಂಧದಲ್ಲಿಯ ಮಾನವೀಯ ಅನುಕಂಪೆ, ಅನೈತಿಕ ಸಂಪರ್ಕದಿಂದಾಗಿ ಹುಟ್ಟಿಕೊಳ್ಳುವ ಪಶ್ಚಾತ್ತಾಪ - ಇಂಥ ಜೀವ ಸೆಲೆಗಳ ಹುಡುಕಾಟವನ್ನು ನಡೆಸುತ್ತದೆ. ದಾಂಪತ್ಯ ಜೀವನದಲ್ಲಿ ಮಕ್ಕಳ ಬಯಕೆಯನ್ನು ತೀರಿಸಿಕೊಳ್ಳಲಾಗದ ಕುಸುಮೆ, ಸುಬ್ಬಯ್ಯನನ್ನು ವಂಚಿಸಿ ಒಲಿಸಿಕೊಳ್ಳುವ ಸನ್ನಿವೇಶಗಳು, ಹಾಗೂ ವೆಂಕಟಪ್ಪನೊಡನೆ ಬಾಹ್ಯ ಸಂಬಂಧವನ್ನು ಬೆಳೆಸುವ ಪ್ರಕರಣಗಳು, ಪರ-ವಿರೋಧಿ- ಈ ಎರಡೂ ನೆಲೆಯಲ್ಲಿ ಗಮನಿಸಬೇಕಾದ ಅಂಶಗಳು. ತಾಯ್ತನದ ಹಂಬಲ ಸಹಜವೆನ್ನುವ ಕಾರಂತರು ವೈಯಕ್ತಿಕ ಜೀವನಕ್ಕೂ ಸಾರ್ವಜನಿಕ ಕ್ಷೇತ್ರಕ್ಕೂ ಹೊಂದಾಣಿಕೆ ಕಾಣದ ಕುಸುಮೆಯ ಬದುಕನ್ನು ಗೌರವಿಸಲಾರರು. ಹೆಣ್ಣಿನ ಮನೆಮುರುಕತನ, ಕೇವಲ ಪಶ್ಚಾತ್ತಾಪದಿಂದ ದುರಸ್ಥಿಯಾಗಲಾರದು ಎಂಬ ಒಳದನಿ - ಇಡೀ ಕಾದಂಬರಿಯ ಮೂಲ ದ್ರವ್ಯವೂ ಆಗುತ್ತದೆ. 'ನೀತಿ-ಅನೀತಿ' - ಇವುಗಳ ಪರಿಕಲ್ಪನೆಯಲ್ಲಿ ಕಾರಂತರು ವಿದೇಶೀ ವಿದ್ವಾಂಸರ 'ಎಮೋರಲ್' ಪದವನ್ನು ಉಲ್ಲೇಖಿಸುತ್ತಾರೆ. 'ಅನೀತಿ' ಎಂಬುದನ್ನು 'ದುರ್ನೀತಿ' ಎಂಬ ಪದಕ್ಕೆ ಅನ್ವಯಿಸಿಕೊಳ್ಳದೆ, ಕೆಟ್ಟದ್ದೆಂದು ಪರಿಗಣಿಸದೆ 'ನಿರ್ನೀತಿ' ಎಂದಿಷ್ಟೇ ಪರಿಭಾವಿಸಬಹುದೆನ್ನುತ್ತಾರೆ.

---

೧೨. William James - A selection from his writings on psychology - Ed. Margaret Knight P. 184

೧೩. ಸರಸಮ್ಮನ ಸಮಾಧಿ. ಪು. 108

ಲೈಂಗಿಕ ಸಂಬಂಧವನ್ನು ನೀತಿ, ಅನೀತಿಗಳ ಜರಡಿಯಲ್ಲಿ ಹಿಡಿಯದೆ, ಅದನ್ನು ನಿಸರ್ಗದ ಸಹಜವ್ಯಾಪಾರವೆಂಬಂತೆ ಪರಿಗಣಿಸುವ ಬೆಳ್ಳಿ (ಚೋಮನದುಡಿ), ಕೆಂಪಿ (ಕುಡಿಯರ ಕೂಸು), ಇವರು ಬೆಳೆದು ಬಂದ ಸಾಮಾಜಿಕ ಚೌಕಟ್ಟಿನಲ್ಲಿ, ಅದೊಂದು ಸ್ವೀಕೃತಿಯ ಅಂಶವೆಂದು ಹೇಳಲು ಕಾದಂಬರಿಗಳಲ್ಲಿ ಆಧಾರ ದೊರಕುವುದಿಲ್ಲ; ಎಂದರೆ ಇವರದು ಅನೈತಿಕ ವ್ಯವಹಾರವೇ? ಈ ಪ್ರಶ್ನೆಗೂ ಸರಿಯಾದ ಉತ್ತರ ಸಿಗಲಾರದು. ಕೆಂಪಿಯದು ಅತೃಪ್ತ ಕಾಮವಾದರೆ, ಮೈಯನ್ನು ಸುಖಕ್ಕೆ ತೆರವು ಮಾಡಿಕೊಳ್ಳುವಾಗಿನ ಮುಗ್ಧತೆ ಬೆಳ್ಳಿಯದು. ಇಬ್ಬರೂ ನಿಸರ್ಗದ ಕೂಸುಗಳು. ವಯಸ್ಸಿಗೆ ಸಹಜವಾದ ಬಯಕೆಯನ್ನು ತೀರಿಸಿಕೊಳ್ಳುವಾಗಿನ ಸಂದರ್ಭಗಳು ಅವರನ್ನು ಗಂಭೀರವಾಗಿ ಚಿಂತಿಸುವಂತೆ ಮಾಡಿದ್ದೇ ಇಲ್ಲ. ಆದರೆ ದಾರಿ ತಪ್ಪಿದ ಅಳುಕು ಇಬ್ಬರಲ್ಲೂ ಇದೆ. ಇದನ್ನು ಮೀರಿ ನಿಂತ ದೇಹದ ಹಸಿವು ಅವರಿಬ್ಬರ ಬದುಕಿನಲ್ಲಿಯೂ ಗೊಂದಲವನ್ನೇ ಸೃಷ್ಟಿಸುತ್ತದೆ. ಪಶ್ಚಾತ್ತಾಪದ ಪರಮಾವಧಿಯಲ್ಲಿ ಅನುಭವಿಸಲು ಎದುರಾಗುವುದು ಒಂದೋ ಸಾವು, ಇಲ್ಲವೇ ಗತಿಗೇಡಿತನ. ಕೆಂಪಿಗೆ ಮರಣದಲ್ಲಿ ಮುಕ್ತಿ, ಬೆಳ್ಳಿಗೆ ಕವಲುದಾರಿಯಲ್ಲಿ ನಿಂತು ದಾರಿ ತಪ್ಪಿದ ಅನಾಥ ಶಿಶುವಿನ ಸ್ಥಿತಿ!

ಈ ಎರಡೂ ಪಾತ್ರಗಳ ಹಿಂದೆ ಕೆಲಸ ಮಾಡಿದ ಕಾರಂತರ ಮನೋಸ್ಥಿತಿ ಎಂತಹದು, ಎಂಬುದನ್ನು ಇಲ್ಲಿ ಅರಿಯುವ ಆವಶ್ಯಕತೆ ಕಾಣುತ್ತದೆ. ಆಯಾಯಾ ಪಂಗಡಕ್ಕೆ ಸಂಬಂಧಿಸಿದ ಸಾಮಾಜಿಕ ನಡವಳಿಕೆಗಳನ್ನು ಗಮನದಲ್ಲಿಟ್ಟುಕೊಂಡೇ ಕಾರಂತರು ಪಾತ್ರ ಚಿತ್ರಣಕ್ಕೆ ತೊಡಗುತ್ತಾರೆ. ತಂದೆ ಚೋಮನ ಬೇಸಾಯದ ಹಂಬಲವು ಈಡೇರಲಾರದಂಥ ಒಂದು ವ್ಯವಸ್ಥೆಯ ಪ್ರಜ್ಞೆಯುಳ್ಳ ಬೆಳ್ಳಿ, ಅವನನ್ನು ಸಮಾಧಾನ ಪಡಿಸುವುದು, ಸಾಲ ತೀರಿಸಲು ಘಟ್ಟಕ್ಕೆ ಹೋಗುವುದು - ಇವು ಅವಳ ಕೌಟುಂಬಿಕ ಹೊಣೆಗಾರಿಕೆಯ ಅಂಶಗಳು. ಕಾಫಿ ತೋಟದಲ್ಲಿ ಮನ್ವೇಲಿನ ಚಪಲಕ್ಕೆ ಬಲಿಯಾಗಿ ಮಿಂಗೇಲದೊರೆಗೆ ವಶವಾದ ಸಂದರ್ಭವೆಂದರೆ ಬೆಳ್ಳಿಯ ಅಸಹಾಯಕ ಸ್ಥಿತಿ, ಹಾಗೂ ಶೋಷಿತ ಜನಾಂಗವೊಂದರ ಕರುಣಕತೆಯಾಗಿ ಬಿಡುತ್ತದೆ. 'ಕಾಯದ ದೌರ್ಬಲ್ಯ ಅವಳನ್ನು ಕಾಮದ ದಾಸಿಯನ್ನಾಗಿ ಮಾಡಿತು'.[14] ಮನ್ವೇಲ, ಮಿಂಗೇಲದೊರೆ, ಕಿರಿಸ್ತಾನ ಧರ್ಮ ಸ್ವೀಕರಿಸಿದ ಅಣ್ಣ ಗುರುವ, ಇವರೆಲ್ಲರ ಸ್ವಭಾವದೊತ್ತಡಗಳೇ ಕಾರಣವಾಗಿ, ಬೆಳ್ಳಿಯ ಮಾನಸಿಕ ಸ್ತರದಲ್ಲಿ ತಾನಿನ್ನು ಪಾದ್ರಿ ಮತ ಸೇರುತ್ತೇನೆ' ಎಂಬ ನಿರ್ಧಾರ ಮೊಳೆತಿದೆ. ಬೆಳ್ಳಿಯ ಜೀವನ ನಿಷ್ಠೆ, ತ್ಯಾಗ, ಅಂತೆಯೇ ಶೋಷಣೆಗೆ ಒಳಗಾಗುವ ಅವಳ ಮುಗ್ಧತೆ, ಅಸಹಾಯಕತೆ - ಇವುಗಳನ್ನು ಲೈಂಗಿಕತೆಯ ವಿಕಾರಗಳಿಂದ ದೂರವೇ ಇಟ್ಟು ನೋಡುವ ಕಾರಂತರ ಅನುಕಂಪ ಈ ಹೆಣ್ಣು ಜೀವದ ಮೇಲೆಯೇ ಹೆಚ್ಚು ಇರುವಂತೆ ತೋರುತ್ತದೆ. 'ಇತರರಿಂದ ವಂಚಿಸಲ್ಪಡುವಲ್ಲಿ, ಕೆಟ್ಟ ಪ್ರವೃತ್ತಿಗೆ ಒಲಿಯುವ ಮಾನಸಿಕ ಸಿದ್ಧತೆಯ ಪೂರ್ವಭಾವೀ ಕ್ರಿಯೆಗಳಲ್ಲಿ, ಹೆಣ್ಣು ಸುಲಭವಾಗಿ ಬಲಿಯಾಗುವುದು ಕೇವಲ ಲೈಂಗಿಕ ಇಚ್ಛೆಯಿಂದಲ್ಲ, ಅದು ಬಾಹ್ಯ ಒತ್ತಡಗಳನ್ನು ಮೀರಲಾರದ ಸಂಧಿಗ್ಧತೆಯಲ್ಲಿ'[15] 'ಹೀಗೆ ಗಂಡು-ಹೆಣ್ಣಿನ ಸಂಬಂಧದಲ್ಲಿ ದಬ್ಬಾಳಿಕೆ ಇರುವುದನ್ನು

---

೧೪. ಚೋಮನ ದುಡಿ ಪು. 92

೧೫. Conduct of life - Mc dougall P. 231
(In the vast majority of cases of seduction whether of married or unmarried women, this susceptibility, rather than the sex tendency plays the chief part)

ಕಾರಂತರು ಮೇಲಿಂದ ಮೇಲೆ ಚಿತ್ರಿಸುತ್ತಾರೆ'[16]. 'ಅಪರಾಧ ಪ್ರಜ್ಞೆ'ಯೊಂದನ್ನು ಬಿಟ್ಟರೆ ಬೆಳ್ಳಿಯ ಜೀವನ ಚಿತ್ರಣವು ಕಾದಂಬರಿಯ ಕಥಾವಸ್ತುವಿನ ಪ್ರಧಾನ ಸೂತ್ರದಲ್ಲೆ ಅರ್ಥಗರ್ಭಿತ!

ಬೆಳ್ಳಿ, ಕಾಮಕ್ಕೆ ಬಲಿಯಾಗಿ ಶೋಷಕ ವರ್ಗದ ಕೈಗೊಂಬೆಯಾದರೆ, ಕೆಂಪಿ (ಕುಡಿಯರ ಕೂಸು) ಅತೃಪ್ತ ಕಾಮದ ಬೊಂಬೆ, ಹೆಚ್ಚು ಧೈರ್ಯವಂತೆ, ಮುಲಾಜಿಲ್ಲದ ವಿವಾಹಿತ ಹೆಣ್ಣು. ಕಾಡಿನ ಕಟ್ಟುಕಟ್ಟಳೆಗಳ ಸಡಿಲುತನದಿಂದಾಗಿ (ಮರುವಿವಾಹಗಳು) ಅವಳ ಸುಪ್ತ ಬಯಕೆ ಸಿಕ್ಕಲ್ಲಿ ಹರಿಯುವ ಸ್ವಾತಂತ್ರ್ಯ ಪಡೆದುಕೊಳ್ಳುತ್ತದೆ. ಇದರಿಂದ ಅವಳು ಮುಕ್ತ ಲೈಂಗಿಕತೆಗೆ ಮಾರುಹೋಗುತ್ತಾಳೆ. ಮೊದಲು ತುಕ್ರನ ಪತ್ನಿಯಾಗಿ, ಅನಂತರ ಬೂದನ ಹೆಂಡತಿಯಾಗಿ ಸಂಸಾರ ನಡೆಸಿದರೂ ತೃಪ್ತಿಕಾಣದ ಕೆಂಪಿಯ ಬಾಳಿನಲ್ಲಿ ತಿರುಮಲಭಟ್ಟರ ಪ್ರವೇಶವಾಗುತ್ತದೆ. ಆದರೆ ಗಟ್ಟಿಮುಟ್ಟಾದ ಗಂಡನೊಬ್ಬನಿಂದ ಕೆಂಪಿಯ ಮೈಯ ಹಸಿವು ಇಂಗಿತಾದರೂ ಮನದ ಹಸಿವು ಉಳಿದುಕೊಂಡಿದೆ. ಅದು ತಾಯ್ತನದ ಬಯಕೆ! ತಿಮ್ಮನ ಪತ್ನಿ ಗಿಡ್ಡಿಯ ಮೇಲೆ ಭಟ್ಟರ ಕಣ್ಣು ನೆಟ್ಟಿದೆಯೆಂದು ತಿಳಿದಮೇಲಂತೂ ಅವಳು ಮತ್ಸರದ ಮೂರ್ತಿಯಾಗುತ್ತಾಳೆ. ಗಿಡ್ಡಿಯ ಮಗು ಬೆಳಕು ಕಾಣದಂತೆ ಸಂಚೆರೆಯುತ್ತಾಳೆ. ಬಾಹ್ಯ ಒತ್ತಡಗಳಿಂದ ಉಂಟಾಗುವ ಪರಿವರ್ತನೆಯ ಮೂಲದಲ್ಲಿ ಕಟ್ಟುಪಾಡಿನ ಸಂಸ್ಕೃತಿಯೊಂದು, ಕದಲಲಾರದ ನಂಬಿಕೆಗಳಿಗೆ, ಪ್ರವೃತ್ತಿಗಳಿಗೆ ಸವಾಲಾಗಿ ನಿಲ್ಲುವುದು, ಎಂಬುದರ ಸೂಕ್ಷ್ಮದರ್ಶನದಲ್ಲಿ ಗಂಡು-ಹೆಣ್ಣುಗಳ ಸಂಬಂಧಗಳನ್ನು ಕಾರಂತರು ತೆರೆದಿಡುತ್ತಾರೆ. 'ಕಾಮ' ಬದುಕಿನ ಅನಿವಾರ್ಯ 'ಅಂಗ'ವಾಗಿ ಉಳಿದುಕೊಳ್ಳುತ್ತದೆ. ಕಾಮ-ಪ್ರೇಮಗಳು ನಿರಾಶೆಯ ಹಂತದಲ್ಲಿ ಹಿಂಸಾಚಾರದಂಥ ಅಮಾನುಷ ವರ್ತನೆ, ಸ್ಪರ್ಧೆ, ಅಸೂಯೆಗಳಿಗೆ ಹೇಗೆ ದಾರಿ ಮಾಡಿಕೊಡುತ್ತವೆ ಎಂಬುದಕ್ಕೆ 'ಕೆಂಪಿ'ಯ ಪಾತ್ರ ಉತ್ತಮ ಉದಾಹರಣೆ ಎನಿಸುತ್ತದೆ.

ಮೈಯಷ್ಟೇ ತೃಪ್ತಿಯನ್ನು ಕಂಡು, ಮನಸ್ಸು ಮಾತ್ರ ಅತೃಪ್ತಿಯಲ್ಲಿ ತೊಳಲಾಡುವ ಒಂದು ಹೆಣ್ಣುಜೀವದ ಕತೆ 'ಮೈಮನಗಳ ಸುಳಿಯಲ್ಲಿ' ಬರುತ್ತದೆ. ಈ ಕಾದಂಬರಿಯಲ್ಲಿ 'ವೇಶ್ಯೆಯೊಬ್ಬಳ ಮಾನಸಿಕ ಮತ್ತು ಲೈಂಗಿಕ ಜೀವನದಲ್ಲಿ ದೊರೆತ ಸ್ನೇಹ ಸಂಬಂಧವನ್ನು ತೋರಿಸಿಕೊಡುತ್ತದೆ. ಈ ಸಮಸ್ಯೆಯ ಹಲವಾರು ಮುಖಗಳನ್ನು ಸೂಚಿಸಿದ್ದೇನೆ. ವಾಸ್ತವವಾಗಿ ಅಲ್ಲಿ ಕಾಣಸುವ ಪ್ರತಿಕ್ರಿಯೆಗಳು, ಸನ್ನಿವೇಶಗಳು ವಿಭಿನ್ನ ವ್ಯಕ್ತಿಗಳಲ್ಲಿ ಕಂಡುಬರುವ ಅಂಶಗಳಾದರೂ, ಅಲ್ಲಿನ ಮಂಜುಳೆಯು ವೇಶ್ಯೆಯೆಂಬ ನೆಪದಲ್ಲಿ - ವಿಭಿನ್ನ ಪುರುಷರನ್ನು ತಂದು, ಮನೋದೇಹಿಯಾದ ಅವಳ ಜೀವನದಲ್ಲಿ ಕಾಮ, ಪ್ರೇಮಗಳ ವಿವಿಧ ರೂಪದ ಚಿತ್ರಗಳನ್ನೊದಗಿಸಿದ್ದೇನೆ'[17] ಎಂದು ಕಾರಂತರು ಬರೆಯುತ್ತಾರೆ. ಕುಲ ಕಸುಬನ್ನು ಕೂಡ ಒಂದು ನಿಷ್ಠೆಯೆಂದು ಪರಿಗಣಿಸುವ ವೇಶ್ಯೆಯೊಬ್ಬಳು, ಮಾನಸಿಕವಾಗಿ ತನಗೊದಗಿದ ತೃಪ್ತಿಯ ಬಗೆಗೆ ಹೇಳಿಕೊಳ್ಳುವುದೇ ಈ ಕಾದಂಬರಿಯ ಪ್ರಧಾನ ವಸ್ತು.

ವಾಸುದೇವ ಪೈಗಳು, ಸುಬ್ರಾಯ ಉಳ್ಳೂರರು, ನಂಜಪ್ಪ - ಇವರ್‍ಯಾರೂ ವೇಶ್ಯೆ ಮಂಜುಳೆಯ ಮನದ ಹಸಿವನ್ನು ಇಂಗಿಸಲಾರದಾದರು. ಕೊನೆಗೆ ಮಠದ ಸ್ವಾಮಿಗಳಾದ ಲಕ್ಷ್ಮಣ ತೀರ್ಥರೊಬ್ಬರೇ ಅವಳ ಮೈ ಮನಸ್ಸೆರಡನ್ನೂ ತಣಿಸಿದವರು. ಯಾರಿಂದಲೋ ಒತ್ತಾಯದ ವೈರಾಗ್ಯದ ಹೊಣೆಯನ್ನು ಹೊತ್ತ ಈ ಯತಿಯೂ ತೃಪ್ತನಲ್ಲ. ಮಂಜುಳೆಯ

---

೧೬. ರಾಮಚಂದ್ರದೇವ - ಕಾರಂತ ಮಂಥನ ಪು. 192

೧೭. ಸ್ಮೃತಿ ಪಟಲದಿಂದ - ಡಾ. ಶಿವರಾಮಕಾರಂತ. ಪು. 133 ಸಂ. 2

ಸಮಾಗಮದಿಂದ ದೊರೆತ ಸುಖ ಅವರಿಗೂ ಸಂತೃಪ್ತಿಯನ್ನು ನೀಡಿದೆ. ಇಬ್ಬರ ಮೈಯೂ ತಣಿದಿದೆ, ಮನವೂ ತಣಿದಿದೆ. ಆದ್ದರಿಂದಲೇ ಲಕ್ಷ್ಮಣತೀರ್ಥರು ಊರು ಬಿಟ್ಟು ತೆರಳಿದಾಗ ಮಂಜುಳೆಗೆ ಅನಿಸಿದ್ದು 'ದೇಹ ದೂರಕ್ಕೆ ಹೋಗಬಹುದು, ಮನಸ್ಸು ಹೋಗಲಾರದು' ಎಂದು. ಹಿಂದಿಯ ಇಲಾಚಂದ್ರ ಜೋಷಿಯವರ 'ಪರ್ದೇಶೀ ರಾನಿ' ಕಾದಂಬರಿಯಲ್ಲಿ ವೇಶ್ಯಾ ಪುತ್ರಿ ನಿರಂಜನಾ ಹೇಳುತ್ತಾಳೆ - 'ನಾನು ನನ್ನೊಳಗಣ ವಿಚಿತ್ರ ಸಂಸ್ಕಾರದ ಕ್ರಿಯೆ-ಪ್ರತಿಕ್ರಿಯೆಗಳ ಒಂದು ಸೂತ್ರದ ಗೊಂಬೆ ಮಾತ್ರ'.[18] ಮಂಜುಳೆಯ ಪ್ರತಿಕ್ರಿಯೆಯಾದರೂ ಇಂತಹದೇ. ತಾನು ವಿವಾಹಿತ ಸ್ತ್ರೀಯಷ್ಟೇ ಪ್ರಾಮಾಣಿಕಳಾಗಿರಬೇಕೆಂಬ ಅವಳ ಬಯಕೆ ಮಾತ್ರ ಸೋಲುತ್ತದೆ.

ವೇಶ್ಯೆಯ ಬಾಳಿನ ಚಿತ್ರಣವನ್ನು ಕಾರಂತರು ನೀಡುವ ಉದ್ದೇಶವು, ವೇಶ್ಯಾ ವೃತ್ತಿಯ ಸಾಮಾಜಿಕ ವಿಷಮತೆ ಹಾಗೂ ಅದರ ವಾಸ್ತವತೆಯನ್ನು ಇತರರ ಅರಿವಿಗೂ ತಂದು ಸಮಸ್ಯೆಯ ಗಂಭೀರತೆಯನ್ನು ಪರಿಗಣಿಸುವಂತೆ ಮಾಡುವುದಾಗಿದೆ. ಮತ್ತು ವೇಶ್ಯೆಯಾದರೂ ಅವಳ ಕಾಮನೆಗಳ ಗರ್ಭದಲ್ಲಿ ಅಡಗಿರುವ ಒಂದು ಬೆಲು ತತ್ವವನ್ನು ಬಹಿರಂಗಗೊಳಿಸುವ ಆಶಯವೂ ಇಲ್ಲಿದೆ.

ಹಿಂದಿಯಲ್ಲಿ ಪ್ರೇಮಚಂದೋತ್ತರ ಕಾಲದಲ್ಲಿ ಪ್ರಕಟಗೊಂಡ, 'ಘರೋಂದೆ' (ರಾಂಗೇಯ ರಾಘವ), ಕ್ರಾಂತಿದೂತ್ (ಶ್ರೀ ಕೃಷ್ಣದಾಸ್), ಪ್ರೇತ್ ಔರ್ ಛಾಯಾ ·(ಇಲಾ ಚಂದ್ರಜೋಷಿ) ಇವೆಲ್ಲವೂ ವೇಶ್ಯಾಸಮಸ್ಯೆ ಕುರಿತಾದ ವಾಸ್ತವತೆಯನ್ನು ಚಿತ್ತರಿಸುತ್ತದೆ. ಪುರುಷ ಸಮಾಜದ ವಿರುದ್ಧವೆನಿಸುವ ಪ್ರತಿ ಹಿಂಸೆ ಇಲ್ಲಿ ಮುಖ್ಯವೆನಿಸುತ್ತದೆ. ವಿವಾಹಿತ ಸ್ತ್ರೀಗಿಂತ ತಾನೇನು ಕಡಿಮೆ! ಎಂಬ ಗರ್ವವೂ ವೇಶ್ಯೆಯಲ್ಲಿ ಕಾಣುತ್ತದೆ - 'ನಾನು ವಿವಾಹವನ್ನು ಬಯಸುವುದಿಲ್ಲ, ನನ್ನನ್ನು ನೀನು ಇಟ್ಟುಕೋ, ಏಕೆಂದರೆ ನನ್ನಲ್ಲಿ ಮತ್ತು ವಿವಾಹಿತ ಸ್ತ್ರೀಯಲ್ಲಿ ಬಹಳ ಅಂತರವಿಲ್ಲ'[19] ಎನ್ನುತ್ತಾಳೆ. ಆದರೆ ಕಾರಂತರಲ್ಲಿ ಒಂದು ಬಗೆಯ ಉದಾರವಾದಕ್ಕೂ ಮಿಕ್ಕಿದ ಮಾನವತಾವಾದ ಕಂಡುಬರುತ್ತದೆ. ವೇಶ್ಯೆಯರ ಹೃದಯ ಸಂಪನ್ನತೆಯನ್ನು ಮಾನವೀಯ ಗುಣಗಳ ಜೊತೆಗಿಟ್ಟು ಅವರು ತೂಗಿನೋಡುತ್ತಾರೆ. ಕಾಮಕ್ಕಿಂತಲೂ ಹಿರಿದಾದ ಪ್ರೇಮಕ್ಕಾಗಿ ಹಾತೊರೆಯುವ ಭಾವ ಜೀವಿಗಳನ್ನು ಚಿತ್ರಿಸುತ್ತಾರೆ.

ದಾಂಪತ್ಯವನ್ನು ತುಚ್ಛೀಕರಿಸಿ ಶಾಂತಿಯನ್ನು ಅರಸುತ್ತ ಹೊರಡುವ ವಾಗ್ದೇವಿ (ನಂಬಿದವರ ನಾಕ, ನರಕ), ಒಲಿದವನು ತಿರುಗಿ ಬಂದಾಗಲೂ ಅವನನ್ನು ನಿರಾಕರಿಸಿ ನಿಷ್ಠೆಯಿಂದ ಬದುಕುವ ಗುಲಾಬಿ (ಜಾರುವ ದಾರಿಯಲ್ಲಿ), ಒಬ್ಬನನ್ನೇ ನಂಬಿ ಫಲಾಪೇಕ್ಷೆಯಿಲ್ಲದೆ ತ್ಯಾಗಮಯ ಜೀವನ ನಡೆಸಿ ಮರೆಯಾದ 'ಸರಸಿ' (ಅಳಿದ ಮೇಲೆ), ಐತಾಳರ ಹಣದ ಮೇಲೆ ಹೊರಳಾಡುತ್ತ ತನಗಾದರೂ ಸಾವು ಬರಬಾರದಿತ್ತೇ - ಎಂದು ಅತ್ತು ಗೋಗರೆದ ಬಳೆಗಾರ ಹೆಣ್ಣು ನಾಗಿ (ಸ್ವಪ್ನದ ಹೊಳೆ), ಹೆಣ್ಣು-ಗಂಡಿನ ಮಿಲನವನ್ನು ಸೈದ್ಧಾಂತಿಕ ನೆಲೆಯಲ್ಲಿ ಚರ್ಚಿಸುವ ಬಾಲ ವಿಧವೆ 'ಮೂಕಜ್ಜಿ' (ಮೂಕಜ್ಜಿಯ ಕನಸುಗಳು) - ಈ ಒಬ್ಬೊಬ್ಬರನ್ನು ಪ್ರತ್ಯೇಕವಾಗಿ ಅರ್ಥೈಸಿ ಕೊಂಡರೇನೇ ಪಾತ್ರಗಳಿಗೆ ನ್ಯಾಯ ಒದಗಿಸಿದಂತಾಗುತ್ತದೆ. ತನ್ನ ಮದುವೆಯನ್ನೇ ಒಂದು ಪಾಪವೆಂದು ಪರಿಗಣಿಸುವ ವಾಗ್ದೇವಿ ನಿಜವಾದ ಮನೋರೋಗಿ. ಕೊಳಚೆಯಲ್ಲಿ ಹುಟ್ಟಿದರೂ ಮಾನವ ಸಂಬಂಧಗಳಿಗೆ ಹಾತೊರೆಯುವ ಗುಲಾಬಿ ಸರಸಿಯರು ನೀತಿವಂತರು, ತ್ಯಾಗಶೀಲರು.

---

೧೮. ಇಲಾಚಂದ್ರ ಜೋಷಿ - ಪರ್ದೇಶಿ ರಾನಿ ಪು. 97
೧೯. ರಾಂಗೇಯ ರಾಘವ್ - ಘರೋಂದೆ. ಪು. 293

ಐತಾಳರ ಚಿತೆಗೆ ಹಾರಿ ಪ್ರಾಣಕಳೆದುಕೊಳ್ಳುವುದು ಪಾತಿವ್ರತ್ಯವೆಂದು ಭಾವಿಸಿ ಹಾಗೆ ಮಾಡಲು ಪ್ರಯತ್ನಿಸಿದ ಜೋಗಿತಿ(ನಾಗಿ) ಅವಿವಾಹಿತೆಯಾಗಿದ್ದರೂ ಐತಾಳರೇ ತನ್ನ ಗಂಡನೆಂದು ತಿಳಿದುಕೊಂಡ ಸಜ್ಜನೆ! ಈ ಒಂದೊಂದು ಮುಖಗಳನ್ನು ಪರಿಶೀಲಿಸಿದರೆ ಬದುಕಿನ ವಿಮುಖತೆಯಲ್ಲಿ ಪ್ರಜ್ವಲಗೊಳ್ಳುವ ಅವರ ಅಂತಃಶಕ್ತಿಗಳು ಎಷ್ಟು ಪ್ರಭಾವಶಾಲಿಯಾದುವು, ಎಂಬುದರ ಅರಿವಾಗುತ್ತದೆ. ಸತ್ಯಭಾಮೆ (ನಂಬಿದವರ ನಾಕ, ನರಕ), ಇಡಗುಂಜಿಯ ವಿನಾಯಕನ ಜೊತೆ ತನ್ನ ಬದುಕನ್ನು ಮತ್ತೆ ಚೇತರಿಸಿಕೊಳ್ಳುವ ಸಾಹಸ ಮಾಡುವುದನ್ನು ಒಂದು ಅಪರಾಧವೆಂಬಂತೆ ಕಾರಂತರು ಚಿತ್ರಿಸುವುದಿಲ್ಲ. ಅವಳ ಅಣ್ಣ ಹೇಳುತ್ತಾನೆ - 'ಅವಳಿಗೆ ಈ ಪ್ರಾಯದಲ್ಲಿ ಗಂಡನೆಂಬ ವಸ್ತು ಬೇಕು, ಹೆಣ್ಣಿನ ಜತೆಗೆ ಗಂಡು ಬೇಕು. ಅವರಿವರು ಕೂಡಿ ಬಾಳಬೇಕು'.[20] ಸತ್ಯಭಾಮೆ ಓಡಿಹೋದಳು, ಎನ್ನುವುದಕ್ಕಿಂತ ಅವಳ ಅಣ್ಣ, ಆ ಸಂದರ್ಭವನ್ನು ತಿಳಿಗೊಳಿಸಿದ ಮಾತುಗಳು ನಿಜವಾಗಿಯೂ ಅರ್ಥಪೂರ್ಣ! ಸ್ವಚ್ಛಂದ ಕಾಮವು ಕಾರಣವಾಗಿ ಉಂಟಾಗುವ ಲೈಂಗಿಕ ಸಂಬಂಧಗಳಿಗಿಂತ ಕುಟುಂಬ ವ್ಯವಸ್ಥೆಯಲ್ಲಿ ಗಂಡ-ಹೆಂಡಿರಂತೆ ಕೂಡುವ ಸಂಬಂಧಗಳು ಕಾರಂತರಿಗೆ ಹಿತವೆನಿಸುತ್ತವೆ. ಹಾಗೆಂದು ಪರಿಸ್ಥಿತಿ ತಂದೊಡ್ಡುವ ಒತ್ತಡಗಳನ್ನು ಅವರು ಗಮನಿಸುತ್ತಾರೆ. ವೇಶ್ಯಾಜೀವನವನ್ನು ಒಂದು ವಿಶಿಷ್ಟ ಸಾಮಾಜಿಕ ಸಂದರ್ಭದಲ್ಲಿಟ್ಟು ತೂಗಿ ನೋಡುತ್ತಾರೆ. ಸಮಾಜದ ನಂಬಿಕೆಗಳನ್ನು ಇದ್ದಂತೆ ಸ್ವೀಕರಿಸುವ ಮನೋಧರ್ಮದಲ್ಲಿ ಅಂತರಂಗದ ಹುಡುಕಾಟವನ್ನಾಗಲಿ, ಕ್ಲೀಷೆಯನ್ನಾಗಲಿ ಗಣಿಸದೆ ಬದುಕಿನ ವಿವಿಧ ಮಗ್ಗಲುಗಳನ್ನು ವಿಭಿನ್ನ ನೆಲೆಯಲ್ಲಿ ಗುರುತಿಸುವ ನಿರೀಕ್ಷಕನ ದೃಷ್ಟಿ ಅವರದು. ಇದು ಕಾರಂತರು ಅನುಸರಿಸುವ ವಾಸ್ತವ ಮಾರ್ಗ. ವಾಸ್ತವತಾವಾದವಲ್ಲ.

ಲೈಂಗಿಕತೆಯ ವಿಚಾರದಲ್ಲಿ ಕಾರಂತರ ಮುಕ್ತಹೇಳಿಕೆಗಳಿಗೆ ಪ್ರತಿನಿಧಿಯಾಗಿ ನಿಲ್ಲುವವಳು ಮೂಕಜ್ಜಿ (ಮೂಕಜ್ಜಿಯ ಕನಸುಗಳು). ಅವಳ ಚಿಂತನೆ ಮೇಲುನೋಟಕ್ಕೆ ಹುಚ್ಚು ಕಲ್ಪನೆಗಳೆಂದು ಕಂಡರೂ ಅವಳು ಹಿಂದುಮುಂದಿನ ವಿಷಯಗಳನ್ನು ಬಲ್ಲ, ವಿಶಿಷ್ಟಸ್ವಭಾವದ, ಅದ್ಭುತ ಶಕ್ತಿಯ ಪ್ರತೀಕವಾಗಿದ್ದಾಳೆ. ಲೈಂಗಿಕತೆಯ ಬಗೆಗಿನ ಮೂಕಜ್ಜಿಯ ಹೇಳಿಕೆಗಳು ಕಾರಂತರ ಅಭಿಪ್ರಾಯಗಳಿಗೆ ಸಂವಾದಿಯಾದವುಗಳು. ಆದ್ದರಿಂದ ಇಂಥದೊಂದು ಪಾತ್ರಸೃಷ್ಟಿಯ ಉದ್ದೇಶ ಸುಸ್ಪಷ್ಟ. ಅತೀಂದ್ರಿಯ ಶಕ್ತಿಯೂ ಒಂದು ಪರಿಕಲ್ಪನೆಯ ವಲಯದಲ್ಲಿ ಬಂಧಿತವಾದದ್ದು. ಅವಳು ಹೇಳುವುದು ಮಾನವ ವಿಕಾಸದ ಚರಿತ್ರೆಯನ್ನು, ಮಾನವ ಶಾಸ್ತ್ರವು ಒಳಗೊಂಡಿರುವ ಅನೇಕ ರಹಸ್ಯಗಳನ್ನು. ಇದರಲ್ಲಿ ಹೆಚ್ಚು ಗಮನ ಸೆಳೆಯುವ ಅಂಶವೆಂದರೆ ಹೆಣ್ಣು-ಗಂಡುಗಳ ಕೂಡುವಿಕೆಯಲ್ಲಿ, ಅವಳಿಗಿರುವ ಒಂದು ಪ್ರಖರ ಕಾಳಜಿ. ತಾನು ಇಂಥ ಸುಖಕ್ಕೆ ಎರವಾದ ಬಾಲವಿಧವೆಯಾಗಿದ್ದರೂ ಅಲಿಪ್ತತೆಯ ಧಾಟಿಯಲ್ಲಿ ಅವಳ ಮಾತುಗಳಿವೆ. ನಾಗಿ-ರಾಮಣ್ಣರ ಒಡೆದ ದಾಂಪತ್ಯವನ್ನು ಮತ್ತೆ ಬೆಸೆಯುವುದು, ಜನಾರ್ದನನಿಗೆ ಬುದ್ಧಿಹೇಳುವುದು, ಇಡಿಯ ನಾಗರಿಕತೆಯೇ ಹೆಣ್ಣು-ಗಂಡಿನ ಸಂಬಂಧದ ಮೇಲೆ ನಿಂತಿವೆ, ಎನ್ನುವುದನ್ನು ತನ್ನ ಕನಸುಗಳ ಮೂಲಕ ಹೊರಗೆಡಹುವುದು, ಇದಕ್ಕೆ ಆಧಾರವಾಗಿ ಅತೀಂದ್ರಿಯ ಶಕ್ತಿಗೆ ಶರಣು ಹೋಗುವುದು - ಇವೆಲ್ಲ ಅವಳು ಬಯಸುವ ವಿಶ್ವಪ್ರೇಮದ ಸಂಕೇತಗಳು. ಕಾದಂಬರಿಯ ವಸ್ತುವಿಗೆ ಅನೇಕ ಆಯಾಮಗಳನ್ನು ಸೃಷ್ಟಿಸಬಲ್ಲ ಮೂಕಜ್ಜಿ, ಅದರ ಅಂತರಂಗದ ಪ್ರಧಾನ ಶಕ್ತಿಯೂ ಆಗುವುದರಿಂದ ಅವಳ ಹೇಳಿಕೆಗಳಿಗೇ ಇಲ್ಲಿ ಪ್ರಾಧಾನ್ಯ.

"ಹೆಣ್ಣು-ಗಂಡು ಕೂಡಿಯೇ ಸೃಷ್ಟಿ... ಹೆರುವುದು ಅಸಹ್ಯವಲ್ಲ, ಇರುವುದು ಅಸಹ್ಯವಲ್ಲ,

---

೨೦. ನಂಬಿದವರ ನಾಕ, ನರಕ - ಪು. 277

ಸಾಯುವುದೂ ಇಲ್ಲ. ಹುಟ್ಟಿಸುವುದು ಅಸಹ್ಯವೇ?"[21] ಎಂದು ಕೇಳುವ ಅವಳ ಪ್ರಶ್ನೆಯು ಸಾಂಪ್ರದಾಯಿಕ ಮೌಲ್ಯಗಳ ಅವಗಣನೆಯಂತೆ ಕಂಡರೂ ಜೀವನಾನುಭವದ ವಿವೇಕ, ತಾತ್ವಿಕದೃಷ್ಟಿ, ಇವು ಪೊರೆ ಕಳಚಿದ ಹಾವಿನಂತೆ ಶುಭ್ರಗೊಳ್ಳುತ್ತದೆ.

ಹಿಂದುಗಾನದ ಅಮ್ಮನ ಗುಡಿಗೆ ಮೊದಲಬಾರಿಗೆ ಮೂಕಜ್ಜಿ ಬಂದಾಗ, ಆವೇಶ ಬಂದವಳಂತೆ ಎದ್ದು ನಿಂತು ಬತ್ತಲಾದ ಪ್ರಸಂಗವು ಅವಳ ಅವೃತ್ತ ಮನಸ್ಸು ಸ್ಫೋಟಗೊಂಡ ಸಂಕೇತ ಎಂದು ತಿಳಿಯುವುದು ಹೆಚ್ಚು ಸಮರ್ಪಕ. ಅದುಮಿಟ್ಟ ಲೈಂಗಿಕ ಪ್ರವೃತ್ತಿಯು ಸುಪ್ತ ಪ್ರಜ್ಞೆಯ ಮೂಲಕ ತೃಪ್ತಿಯನ್ನು ಪಡೆಯುತ್ತದೆ[22] - ಎಂದು ಮನಃಶಾಸ್ತ್ರವೂ ಹೇಳುತ್ತದೆ. 'ಬತ್ತಲಾಗುವುದು, ಅಥವಾ ತಮ್ಮ ಜನನಾಂಗಗಳನ್ನು ತೋರಿಸುವುದರ ಮೂಲಕ ಉಂಟಾಗುವ ಲೈಂಗಿಕ ತೃಪ್ತಿ' ಇದನ್ನು ಹತ್ತಿಕ್ಕಿದರೆ ಅದು ಬಲು ಅಪಾಯಕಾರಿಯಾಗಿ ಪರಿಣಮಿಸಬಹುದೆಂಬುದು ಕೂಡ ಮನಃಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಇದನ್ನು ಅವರು 'Exhibitionalism' ಎನ್ನುತ್ತಾರೆ. ಭಾರತೀಯ ಸಂಸ್ಕೃತಿಗೆ ಅನ್ವಯಿಸಿ ಹೇಳುವುದಾದರೆ ಸುಪ್ತ ಪ್ರಜ್ಞೆಯು ಬಾಲ್ಯದ ಅಥವಾ ಕಳೆದ ದಿನಗಳ ನೆನಪುಗಳನ್ನು ತನ್ನಲ್ಲಿ ಬಚ್ಚಿಟ್ಟುಕೊಳ್ಳುತ್ತದೆ. ಅದು ಮನಸ್ಸು ಒಂದೇ ಕಡೆಗೆ ಇದ್ದಾಗ ಸ್ಫೋಟಗೊಳ್ಳುತ್ತದೆ. ಮೂಕಜ್ಜಿಯ ಅಂತರ್ಯವು ಹೀಗೆ ಒಮ್ಮೊಮ್ಮೆ ಪ್ರಕಟಗೊಳ್ಳುವ ಪ್ರಸಂಗಗಳು ಕಾದಂಬರಿಯಲ್ಲಿ ಮೂರ್ತಗೊಳ್ಳುವುದನ್ನೇ ಅವಳ 'ಕನಸು'ಗಳು ಎನ್ನಲಾಗಿದೆ. ಸಿ.ಜೆ.ಯೂಂಗ್ ಹೇಳುತ್ತಾನೆ - 'ಕನಸುಗಳು ನಮ್ಮನ್ನು ಮಾನವನ ಪ್ರಾಚೀನ ಸಂಸ್ಕೃತಿಯೆಡೆಗೆ ಒಯ್ಯುಬಲ್ಲವು. ಇದರಿಂದಾಗಿ ನಾವು ಅವುಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಹುದು'[24] - ಎಂದು. ಮೂಕಜ್ಜಿ, ಇಂಥದೊಂದು ಕನಸುಗಾರಿಕೆಯಲ್ಲಿ ಮಾನವ ಚರಿತ್ರೆಯನ್ನು ತೆರೆದಿಡುವ ಪ್ರಕ್ರಿಯೆಗಳಿಗೂ, ಯೂಂಗನ ಈ ಹೇಳಿಕೆಗೂ ಹೆಚ್ಚು ವ್ಯತ್ಯಾಸವಿಲ್ಲ.

'ಮಾನವ ಶಾಸ್ತ್ರ'ವು ಮಾನವ ವಿಕಾಸವನ್ನು ನಿರೂಪಿಸುವಂತೆ, ವ್ಯಕ್ತಿ ವಿಕಸನದಲ್ಲಿಯೂ ಒಂದು ಸಮಷ್ಟಿಭಾವವಿದೆ. ಆದರೆ ಈ ವೈಚಾರಿಕ ಮಂಥನವನ್ನು ನಡೆಸಲು ಒಂದು 'ನೆಗೆಟಿವ್' ಪಾತ್ರವನ್ನು ಕಾರಂತರು ಸೃಷ್ಟಿಸಿದ್ದೇಕೆ ಎಂಬ ಪ್ರಶ್ನೆ ಉಂಟಾಗುವುದು ಸಹಜ. ಬಾಲ ವಿಧವೆ, ಮೇಲಾಗಿ ಅಶಿಕ್ಷಿತ ಹೆಣ್ಣು - ಆದ್ದರಿಂದ ಅವಳಿಗೊದಗುವ 'ಅತೀಂದ್ರಿಯ ಶಕ್ತಿ'ಯ ಉಲ್ಲೇಖವು ಕಾದಂಬರಿಯ 'ತಂತ್ರಗಾರಿಕೆ'ಯೆಂದು ತಿಳಿದುಕೊಳ್ಳಬೇಕಾಗುತ್ತದೆ. ನಮ್ಮ ನಂಬಿಕೆಗಳನ್ನು ಶುಚಿಗೊಳಿಸುವ, ಪರಂಪರಾಗತ ಮೌಢ್ಯಗಳನ್ನು ಸವಾಲೆಂಬಂತೆ ಸ್ವೀಕರಿಸುವ 'ಛಾತಿ' ಕುದುರಿಸುವ, ಪ್ರಯತ್ನ ಇಲ್ಲಿಯದು. ಲೈಂಗಿಕತೆ ಎಲ್ಲ ಸಿದ್ಧಾಂತಗಳ ಮೂಲ ಸ್ರೋತವೂ ಆಗುವುದಲ್ಲವೇ?

ಈವರೆಗೆ ಉಲ್ಲೇಖಿಸಿದ ಕೃತಿಗಳಲ್ಲಿ ಲೈಂಗಿಕತೆಯನ್ನು ಮಾನವೀಯ ಸ್ತರದಲ್ಲಿ ಗುರುತಿಸಿಕೊಳ್ಳುವ ಕಾರಂತರು ಓರ್ವ ಚಿಕಿತ್ಸಕನಂತೆ ಕಾಣುತ್ತಾರೆ. ಅತೃಪ್ತ ಕಾಮದಿಂದ ಅಥವಾ ಯಾವುದೇ ಆಂತರಿಕ ಕೊರಗಿನಿಂದ ಹುಟ್ಟುವ ರೋಗಗ್ರಸ್ತ ಮನಸ್ಸಿಗೆ, ಮನಸ್ಸೇ, ಚಿಕಿತ್ಸೆಯಾಗುವ ಅನೇಕ

---

೨೧. ಮೂಕಜ್ಜಿಯ ಕನಸುಗಳು - ಪು. 106 - 107

೨೨. Civilization, Society and religion - P. 36 (Sigmund Freud)

೨೩. Sexual satisfaction by the display of the nacked body or genitals is known as "Exhibitionism" psychology, the study of man's mind - Ed. Word Gorell P. 303)

೨೪. Psychology of the unconscious - Dr. C.B. Jung P. 15

ಸಂದರ್ಭಗಳು ಅವರ ಪಾಲಿಗೆ ಮಹತ್ವದ್ದೆಂದು ಕಂಡಿವೆ. ವೈಚಾರಿಕವೆನಿಸುವ ಎಷ್ಟೋ ಸಂಘರ್ಷಗಳಿಗಿಂತ ಒಂದು ಸಣ್ಣ ಸಮಾಧಾನ ಮನಸ್ಸನ್ನು ತುಷ್ಟಿಗೊಳಿಸುವ ರೀತಿಯಲ್ಲಿ ಕಾರಂತರಿಗೆ ವಿಶ್ವಾಸವಿದೆ. ಈ ಸಮಾಧಾನವನ್ನೇ, ಪ್ರೀತಿಯ ನುಡಿಗಳನ್ನೇ ಅವರು 'ತೃಪ್ತಿ' ಎನ್ನುತ್ತಾರೆ. ತೃಪ್ತಿ ಇಲ್ಲದ ಬದುಕು ರಣರಂಗವಾಗಲಾರದೇ?

(ಈ ಪ್ರಬಂಧದಲ್ಲಿ ೧೯೭೦ರವರೆಗಿನ ಕಾರಂತರ ಕೆಲವು ಪ್ರಧಾನಕೃತಿಗಳನ್ನು ವಿಷಯಕ್ಕೆ ಅನ್ವಯಿಸಿ ಗಣಿಸಲಾಗಿದೆ).

## ಈ ಗ್ರಂಥದ ಲೇಖಕರು


**ಡಾ. ಹಂಪ ನಾಗರಾಜಯ್ಯ**
1079, 5ನೇ ಬ್ಲಾಕು
ರಾಜಾಜಿನಗರ,
ಬೆಂಗಳೂರು - 560 010

**ಡಾ. ಕಮಲಾ ಹಂಪನಾ**
1079, 5ನೇ ಬ್ಲಾಕು
ರಾಜಾಜಿನಗರ
ಬೆಂಗಳೂರು - 560 010

**ಡಾ. ಎಸ್. ಪಿ. ಪದ್ಮಪ್ರಸಾದ**
ಪ್ರಾಂಶುಪಾಲರು
ಶ್ರೀ. ಟಿ.ವಿ.ವಿ. ಶಿಕ್ಷಣ ಮಹಾವಿದ್ಯಾಲಯ
ಮಧುಗಿರಿ - 572 132

**ಎಂ. ಜೆ. ಮಂಜುನಾಥ**
ಕನ್ನಡ ಅಧ್ಯಾಪಕರು
ಸರಕಾರಿ ಬಾಲಕರ ಕಾಲೇಜು
ಕೋಲಾರ

**ಡಾ. ಜೆ. ವಿ. ದಾಸೇಗೌಡ**
ಕನ್ನಡ ಪ್ರಾಧ್ಯಾಪಕರು
ಬಾಲಕರ ಸರಕಾರಿ ಕಾಲೇಜು
ಮಂಡ್ಯ - 571 401

**ಡಾ. ಸತ್ಯವತಿ**
12/10, 'ಪಂಪ', ಎಂ.ಆರ್.ಸಿ. ಬಡಾವಣೆ
16 ನೆಯ ಮುಖ್ಯ ರಸ್ತೆ, ವಿಜಯನಗರ
ಬೆಂಗಳೂರು - 560 040

**ಡಾ. ವಿ. ಗೋಪಾಲಕೃಷ್ಣ**
ಮುಖ್ಯಸ್ಥರು, ಕನ್ನಡ ಅಧ್ಯಯನ ವಿಭಾಗ,
ಏಶಿಯಾ ಅಧ್ಯಯನ ಸಂಸ್ಥೆ, ಏಶಿಯಾಗಾರ್ಡನ್
ಚೆಮ್ಮನಚೆರಿ, ಚೆನ್ನೈ - 600 119

**ಡಾ. ಸಿ. ವಿ. ವತ್ಸಲಾದೇವಿ**
ಪ್ರಾಂಶುಪಾಲರು
ಎಸ್.ಎಲ್.ಎನ್. ಕಲೆ, ವಾಣಿಜ್ಯ, ವಿಜ್ಞಾನ
ಕಾಲೇಜು, ಕೋಟೆ
ಬೆಂಗಳೂರು - 560 002

**ಟಿ. ಕೆ. ಮಹಮೂದ**
ಅಧ್ಯಕ್ಷರು, ಉ.ಕ. ಜಿಲ್ಲಾ ಕನ್ನಡ ಸಾಹಿತ್ಯ
ಪರಿಷತ್, ಅಜಾದ್ ಮಹಲ್, ಸಿದ್ದಾಪುರ,
ಉತ್ತರಕನ್ನಡ ಜಿಲ್ಲೆ

**ಪ್ರೊ. ಬಿ. ವಿ. ಗುಂಜೆಟ್ಟಿ**
ಮುಖ್ಯಸ್ಥರು, ಕನ್ನಡ ವಿಭಾಗ,
ಕರ್ನಾಟಕ ಆರ್ಟ್ಸ್ ಕಾಲೇಜು,
ಧಾರವಾಡ - 580 001

**ಡಾ. ಎ. ಮುರಿಗೆಪ್ಪ**
ಪ್ರಾಧ್ಯಾಪಕರು, ಭಾಷಾವಿಜ್ಞಾನ ವಿಭಾಗ
ಕನ್ನಡ ಅಧ್ಯಯನ ಪೀಠ, ಕರ್ನಾಟಕ
ವಿಶ್ವವಿದ್ಯಾಲಯ, ಧಾರವಾಡ - 580 003

**ಡಾ. ಎಚ್. ಆರ್. ರಘುನಾಥಭಟ್ಟ**
ಪ್ರಾಧ್ಯಾಪಕರು ಹಾಗೂ ಅಧ್ಯಕ್ಷರು,
ಪ್ರಾಚೀನ ಇತಿಹಾಸ ಮತ್ತು ಶಾಸನ ವಿಜ್ಞಾನ
ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಡಾ. ಚೆನ್ನಕ್ಕ ಪಾವಟೆ**
ಪ್ರವಾಚಕರು, ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಡಾ. ಮಧು ವೆಂಕಾರೆಡ್ಡಿ**
ಪ್ರವಾಚಕರು, ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಪಿ. ರಾಮಕೃಷ್ಣ**
ಉಪನ್ಯಾಸಕರು, ಶಿಕ್ಷಣ ಕಾಲೇಜು,
ಮಧುಗಿರಿ - 572 132

**ಪ್ರೊ. ಸುಕನ್ಯಾ ಮಾರುತಿ**
ಕನ್ನಡ ವಿಭಾಗ, ಜೆ.ಎಸ್.ಎಸ್. ಕಾಲೇಜು,
ವಿದ್ಯಾಗಿರಿ, ಧಾರವಾಡ - 580 004

**ಡಾ. ಬಾಳಣ್ಣ ಶೀಗಿಹಳ್ಳಿ**
ಕನ್ನಡ ಪ್ರಾಧ್ಯಾಪಕರು,
ಜೆ.ಎಸ್.ಎಸ್. ಕಾಲೇಜು, ವಿದ್ಯಾಗಿರಿ,
ಧಾರವಾಡ - 580 004

**ಡಾ. ವೀರಣ್ಣ ರಾಜೂರ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಡಾ. ಎಚ್. ಎಂ. ಮಹೇಶ್ವರಯ್ಯ**
ಪ್ರವಾಚಕರು, ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಡಾ. ಸೋಮಶೇಖರಗೌಡ**
ಪ್ರವಾಚಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,
ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾಲಯ,
ಮೈಸೂರು - 570 006

**ಡಾ. ಆರ್. ರಾಮಕೃಷ್ಣ**
ಹಿರಿಯ ಶ್ರೇಣಿಯ ಅಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾಲಯ
ಮೈಸೂರು - 570 006

**ಡಾ. ವಿಲ್ಯಂ ಮಾಡ್ತಾ**
ಪ್ರಾಧ್ಯಾಪಕರು, ಭಾಷಾ ವಿಜ್ಞಾನ ವಿಭಾಗ,
ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಡಾ. ಕೃಷ್ಣ ಪರಮೇಶ್ವರ ಭಟ್ಟ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ
ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು - 560 056

**ಶ್ರೀಮತಿ ಶಾಂತಾ ಸನ್ಮತಿಕುಮಾರ**
ಮನೆ ನಂ. 9-1, 4ನೆಯ ಕ್ರಾಸು, ಗಾಂಧಿನಗರ
ತುಮಕೂರು - 572 102

**ಹೊ. ಶ್ರೀ ಮದನಕೇಸರಿ**
ರತ್ನತ್ರಯ, ಮಾಡೆಲ್ ಹೌಸ್, ನಾಲ್ಕನೆಯ ಬೀದಿ
ಬಸವನಗುಡಿ, ಬೆಂಗಳೂರು - 560 004

**ಪ್ರೊ. ಎಸ್. ಡಿ. ಶೆಟ್ಟಿ**
ಶ್ರೀಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು
ಉಜಿರೆ - 574 240

**ಡಾ. ಜಿ. ಎಂ. ಹೆಗಡೆ**
ಪ್ರಾಧ್ಯಾಪಕರು, ಕನ್ನಡ ವಿಭಾಗ,
ಕಿಟೆಲ್ ಆರ್ಟ್ಸ್ ಕಾಲೇಜು
ಧಾರವಾಡ - 580 001

**ಡಾ. ಎಸ್. ಪಿ. ಪಾಟೀಲ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ತಮಿಳ್ ಸೆಲ್ವಿ**
ಕನ್ನಡ ಅಧ್ಯಾಪಕರು
ಕೆಂಗೇರಿ ಶಿಕ್ಷಣ ಸಂಸ್ಥೆ, ಕೆಂಗೇರಿ,
ಬೆಂಗಳೂರು - 560 060

**ಡಾ. ಎಸ್. ರಾಜಶೇಖರ**
ಮುಖ್ಯಸ್ಥರು, ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ
ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಡಾ. ಶಾಂತಿನಾಥ ದಿಬ್ಬದ**
ಪ್ರವಾಚಕರು, ಕನ್ನಡ ಅಧ್ಯಯನ ಸಂಸ್ಥೆ
ಗು.ವಿ.ವಿ. ಸ್ನಾತಕೋತ್ತರ ಕೇಂದ್ರ,
ಕೃಷ್ಣದೇವರಾಯನಗರ,
ಸೊಂಡೂರು - 583 119, ಬಳ್ಳಾರಿ ಜಿಲ್ಲೆ

**ಡಾ. ಸಂಜೀವ ಶೆಟ್ಟಿ**
5, ಸಂತೋಷ ಭವನ, ಆನಂದನಗರ,
ಜೆ.ಎಂ. ರೋಡು, ಬಾಂದ್ರಾ (ಪಶ್ಚಿಮ)
ಮುಂಬಯಿ - 400 078

**ಡಾ. ಸರಸ್ವತಿ ವಿಜಯಕುಮಾರ**
ಪ್ರಾದೇಶಿಕ ಶಿಕ್ಷಣ ಸಂಸ್ಥೆ, ಎನ್.ಸಿ.ಇ.ಆರ್.ಟಿ,
ಮೈಸೂರು - 570 006

**ಡಾ. ವಿ. ಜಿ. ಪೂಜಾರ**
ಕನ್ನಡ ಪ್ರಾಧ್ಯಾಪಕರು
ಗುಲ್ಬರ್ಗಾ ವಿಶ್ವವಿದ್ಯಾಲಯ,
ಗುಲ್ಬರ್ಗಾ.

**ಡಾ. ಶ್ರೀಕೃಷ್ಣಭಟ್ಟ ಅರ್ತಿಕಜೆ**
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ಕನ್ನಡ ವಿಭಾಗ, ಮರೀನಾ ಕ್ಯಾಂಪಸ್,
ಮದ್ರಾಸ್ ವಿಶ್ವವಿದ್ಯಾಲಯ
ಚೆನ್ನೈ

**ಡಾ. ಎನ್. ಸುರೇಶಕುಮಾರ**
ಜೈನ ಶಾಸ್ತ್ರ ಮತ್ತು ಪ್ರಾಕೃತ ವಿಭಾಗ
ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾಲಯ
ಮೈಸೂರು - 570 006

**ಡಾ. ಟಿ. ವಿ. ವೆಂಕಟಾಚಲಶಾಸ್ತ್ರಿ**
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಜಯಲಕ್ಷ್ಮೀಪುರಂ, ಮೈಸೂರು - 560 012

**ಡಾ. ಬಿ. ಆರ್. ಹಿರೇಮಠ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಜಿ. ಕೆ. ದೇವರಾಜಸ್ವಾಮಿ**
ನಂ.3936, 2 ನೇ ಅಡ್ಡರಸ್ತೆ
2 ನೇ ಹಂತ, 'ಬಿ' ಬ್ಲಾಕ್
ಗಾಯತ್ರಿನಗರ, ಬೆಂಗಳೂರು - 560 021

**ಡಾ. ವಸಂತಕುಮಾರಿ**
ಇತಿಹಾಸ ವಿಭಾಗ, ಮಹಾರಾಣಿ ಕಲಾ ಕಲೇಜು
ಮೈಸೂರು.

**ಡಾ. ಅ. ಸುಂದರ**
ನಿರ್ದೇಶಕರು, ಕ.ವಿ.ವಿ. ಸ್ನಾತಕೋತ್ತರ ಅಧ್ಯಯನ
ಕೇಂದ್ರ, ವಿಜಾಪುರ.

**ಡಾ. ಎಂ. ಬಿ. ನೇಗಿನಹಾಳ**
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು,
ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಡಾ. ಬಿ.ವಿ. ಶಿರೂರ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಶ್ರೀಮತಿ ಹನುಮಾಕ್ಷಿ ಗೋಗಿ**
ವ್ಯವಸ್ಥಾಪಕ ನಿರ್ದೇಶಕರು,
ರೈತರ ಸಹಕಾರ ಎಣ್ಣೆಗಳ ನಿಯಮಿತ,
ಬಿಂಕದಕಟ್ಟೆ, ಗದಗ, ಧಾರವಾಡ ಜಿಲ್ಲೆ

**ಜಿ. ಎನ್. ಭೀಮೇಶ**
ನಂ. 2, ಮರಡಿಸುಬ್ಬಯ್ಯ ಛತ್ರದ ಬಳಿ
ಹನುಮಂತನಗರ, ಬೆಂಗಳೂರು

**ಆರ್. ಜಗದೀಶ್**
ಕನ್ನಡ ಉಪನ್ಯಾಸಕರು
ಸರ್ವೋದಯ ಪ್ರಥಮ ದರ್ಜೆ ಕಾಲೇಜು,
ಶ್ರೀರಾಮಪುರಂ, ರಾಜಾಜಿನಗರ,
ಬೆಂಗಳೂರು - 560 021

**ಡಿ. ಎನ್. ಅಕ್ಕಿ**
ಚಿತ್ರಕಲಾ ಶಿಕ್ಷಕರು,
ಸರ್ಕಾರಿ ಪದವಿಪೂರ್ವ ಕಾಲೇಜು, ಗೋಗಿ,
ಶಹಾಪುರ ತಾಲೂಕು, ಗುಲ್ಬರ್ಗಾ

**ಡಿ. ಸ್ಮಿತಾರೆಡ್ಡಿ**
D/o ಡಾ॥ ದೇವರಕೊಂಡಾರೆಡ್ಡಿ
ಕನ್ನಡ ವಿ ವಿ, ಹಂಪಿ, ಬಳ್ಳಾರಿ ಜಿಲ್ಲೆ

**ಡಾ. ಈರಣ್ಣ ಪತ್ತಾರ**
ಪ್ರವಾಚಕರು
ಇತಿಹಾಸ, ಪ್ರಾಚ್ಯಶಾಸ್ತ್ರ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - 580 003

**ಡಾ. ಆರ್. ಶೇಷಶಾಸ್ತ್ರಿ**
ಪ್ರಾಧ್ಯಾಪಕರು, ಕನ್ನಡ ವಿಭಾಗ,
ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ,
ಆಂಧ್ರಭಾರತಿ, ಅನಂತಪುರ, ಆಂಧ್ರಪ್ರದೇಶ

**ಡಾ. ಸೋಮಶೇಖರ ಇಮ್ರಾಪುರ**
ಪ್ರಾಧ್ಯಾಪಕರು, ಜಾನಪದ ಅಧ್ಯಯನ ವಿಭಾಗ,
ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಡಾ. ಶಾಲಿನಿ ರಘುನಾಥ**
ಪ್ರವಾಚಕರು, ಕನ್ನಡ ಅಧ್ಯಯನ ಪೀಠ,
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಡಾ. ಹರಿಲಾಲ ಪವಾರ**
ಸಹಾಯಕ ನಿರ್ದೇಶಕರು, ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ - 580 003

**ಡಾ. ಚೆನ್ನಣ್ಣ ವಾಲೀಕಾರ**
ಕನ್ನಡ ಪ್ರಾಧ್ಯಾಪಕರು, ಸ್ನಾತಕೋತ್ತರ ಕೇಂದ್ರ,
ರಾಯಚೂರು

**ಡಾ. ಎಂ. ಎಂ. ಕಲಬುರ್ಗಿ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - 580 003

**ಡಾ. ಸಿ. ಪಿ. ಕೃಷ್ಣಕುಮಾರ**
ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ
ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು
ವಿಶ್ವವಿದ್ಯಾಲಯ, ಮೈಸೂರು - 570 006

**ಡಾ. ಹರಿಕೃಷ್ಣ ಭರಣ್ಯ**
ಪ್ರವಾಚಕರು, ಕನ್ನಡ ವಿಭಾಗ
ಮದುರೈ ಕಾಮರಾಜ ವಿಶ್ವವಿದ್ಯಾಲಯ
ಮಧುರೈ - 625 021

**ಡಾ. ಜಿ. ರಾಮಸ್ವಾಮಿ**
ಪ್ರಾಧ್ಯಾಪಕರು, ಕನ್ನಡ ವಿಭಾಗ
ಮದರಾಸು ವಿಶ್ವವಿದ್ಯಾಲಯ, ಚೆನ್ನೈ

**ಪ್ರೊ. ಲಕ್ಷ್ಮಣ ತೆಲಗಾವಿ**
ಮುಖ್ಯಸ್ಥರು, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬಳ್ಳಾರಿ ಜಿಲ್ಲೆ

**ಡಾ. ತಾಳ್ತಜೆ ವಸಂತಕುಮಾರ**
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ಕನ್ನಡ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ,
ವಿದ್ಯಾನಗರ, ಮುಂಬಯಿ - 400 098

**ಡಾ. ಎ. ಕೆ. ಶಾಸ್ತ್ರಿ**
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ಇತಿಹಾಸ ವಿಭಾಗ, ಎಂ.ಎಂ. ಕಲಾ ವಿಜ್ಞಾನ
ಕಾಲೇಜು, ಶಿರಸಿ, ಉತ್ತರ ಕನ್ನಡ

**ಡಾ. ಜಿ. ಡಿ. ಜೋಶಿ**
ನೆಹರೂನಗರ
ಮುಂಬಯಿ

**ಡಾ. ವಿ.ಕೆ. ಮಣಿಮಾಲಿನಿ**
ಗ್ರಂಥಪಾಲಿಕೆ, ಸಾಧನಾ ಶಿಕ್ಷಣ ಕಾಲೇಜು
ಎ. ೧೦, ವಿಶ್ವವಿದ್ಯಾಲಯ ಶಿಕ್ಷಕರ ವಸತಿಗೃಹ
ವಿದ್ಯಾನಗರಿ, ಮುಂಬಯಿ - 400 098

**ಡಾ. ಸುನೀತಾ ಶೆಟ್ಟಿ**
ಬಿ. 28, ಸರ್ವೋದಯ ಸೊಸೈಟಿ, ಶಿವ ಸೃತಿ
ಬಿ. ಕುರ್ಲಾ (ಪೂರ್ವ)
ಮುಬಯಿ - 400 024

**ಡಾ. ರಾಮೇಗೌಡ**
144, ಕನ್ನಡ ಪ್ರಾಧ್ಯಾಪಕರು, ಚಿತ್ರಕೂಟ
ಕಾಳಿದಾಸ ರಸ್ತೆ, ಜಯಲಕ್ಷ್ಮೀ ಪುರಂ
ಮೈಸೂರು - 570 012

## ಅನುಬಂಧ - ೨

# ಡಾ|| ಹಂಪ. ನಾಗರಾಜಯ್ಯ: ಜೀವನ ವಿವರ

| | | |
|---|---|---|
| ಹುಟ್ಟಿದ ತೇದಿ | : | ಆಕ್ಟೋಬರ್ ೭, ೧೯೩೬ |
| ಹುಟ್ಟಿದ ಊರು | : | ಹಂಪಸಂದ್ರ, ಗೌರೀಬಿದನೂರು ತಾಲ್ಲೂಕು, ಕೋಲಾರ ಜಿಲ್ಲೆ |
| ತಾಯಿ-ತಂದೆ | : | ಪದ್ಮಾವತಮ್ಮ, ಶ್ಯಾನುಭೋಗ್ ಪದ್ಮನಾಭಯ್ಯ |
| ವಿದ್ಯಾಭ್ಯಾಸ | : | ಬಿ.ಎ (ಆನರ್ಸ್), ಎಂ.ಎ., ಮೈಸೂರು ವಿಶ್ವವಿದ್ಯಾಲಯ<br>ಪಿಎಚ್.ಡಿ., ಬೆಂಗಳೂರು ವಿಶ್ವವಿದ್ಯಾಲಯ |
| ಮದುವೆ | : | ೨೪ - ೧೧ - ೧೯೬೧ |
| ಬೋಧನಾನುಭವ | : | ೧೯೫೯ರಿಂದ ೧೯೯೬ರವರೆಗೆ<br>೩೭ ವರ್ಷಗಳ ಅಧ್ಯಾಪನ - ಸ್ನಾತಕ, ಸ್ನಾತಕೋತ್ತರ ತರಗತಿಗಳಿಗೆ;<br>ಪದವಿ ತರಗತಿಗಳಿಗೆ ಬೋಧನೆ -<br>ಮಹಾರಾಣಿ ಕಾಲೇಜು, ಮೈಸೂರು<br>ಸರ್ಕಾರಿ ಕಾಲೇಜು, ಮಂಡ್ಯ<br>ಡಿ.ಆರ್.ಎಂ. ಕಾಲೇಜು, ದಾವಣಗೆರೆ<br>ಸಹ್ಯಾದ್ರಿ ಕಾಲೇಜು, ಶಿವಮೊಗ್ಗ<br>ಸರ್ಕಾರಿ ಕಲೆ - ವಿಜ್ಞಾನ ಕಾಲೇಜು, ಬೆಂಗಳೂರು<br>ಸ್ನಾತಕೋತ್ತರ ತರಗತಿ ಬೋಧನೆ -<br>ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಕೇಂದ್ರ,<br>೧೯೭೦ರಿಂದ ೧೯೯೬ |

### ಸಾಂಸ್ಕೃತಿಕ - ಶೈಕ್ಷಣಿಕ ಜವಾಬ್ದಾರಿಗಳು

| | | |
|---|---|---|
| ನಿರ್ದೇಶಕರು | : | ಜೈನ ಸಂಶೋಧನ ಕೇಂದ್ರ, ಬೆಂಗಳೂರು, ೧೯೭೭-೭೯<br>ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿವಿ, ೧೯೯೨-೯೪<br>ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ೧೯೯೨ |
| ಡೀನ್ | : | ಕಲಾ ನಿಕಾಯ, ಬೆಂಗಳೂರು ವಿಶ್ವವಿದ್ಯಾಲಯ, ೧೯೯೪ |

| | | |
|---|---|---|
| ಅಧ್ಯಕ್ಷರು | : | ಕನ್ನಡ ಸಾಹಿತ್ಯ ಪರಿಷತ್ತು, ೧೯೭೮-೮೬ |
| | | ಅಖಿಲ ಕರ್ನಾಟಕ ಕನ್ನಡ ಶೀಘ್ರಲಿಪಿ-ಬೆರಳಚ್ಚುಗಾರರ ಸಂಘ (ಅಕಶೀಬೆ), ೧೯೮೩ ರಿಂದ |
| | | ಕನ್ನಡ ಬಳಗ, ೧೯೮೨-೮೪ |
| | | ಕರ್ನಾಟಕ ಗ್ರಂಥ ಪ್ರಕಾಶನ ಸಂಸ್ಥೆ, ೧೯೮೦ |
| | | ಅಂತರ ವಿಶ್ವವಿದ್ಯಾಲಯ ಪ್ರಸಾರಾಂಗ ಪ್ರಕಟಣ ಸಲಹಾ ಸಮಿತಿ, ೧೯೯೨ |
| | | ರಂಗಚೇತನ, ಬೆಂಗಳೂರು, ೧೯೮೯-೯೪ |
| | | ಜನಪರ ಸಾಹಿತ್ಯ ಪರಿಷತ್ತು (೧೯೮೮ರಿಂದ ಸಂಚಾಲಕ), ೧೯೯೩ರಿಂದ |
| ಉಪಾಧ್ಯಕ್ಷ | : | ಕರ್ನಾಟಕ ಸಂಘ, ಮಹಾರಾಜಾ ಕಾಲೇಜು, ೧೯೫೮ |
| ಮೇನೇಜಿಂಗ್ ಟ್ರಸ್ಟಿ | : | ಪ್ರಾಕೃತ ಜ್ಞಾನಭಾರತಿ ಎಜ್ಯುಕೇಷನ್ ಟ್ರಸ್ಟ್, ೧೯೮೯-೯೨ |
| ಕಾರ್ಯದರ್ಶಿ | : | ಕನ್ನಡ ಸಾಹಿತ್ಯ ಪರಿಷತ್ತು, ೧೯೬೬-೧೯೭೪. |
| | | ಅಧ್ಯಾಪಕ ಕಾರ್ಯದರ್ಶಿ, ಮಂಡ್ಯ ಸರ್ಕಾರಿ ಕಾಲೇಜು ಮತ್ತು ಸರ್ಕಾರಿ ಕಲೆ-ವಿಜ್ಞಾನ ಕಾಲೇಜು, ಬೆಂಗಳೂರು ೧೯೬೫-೬೭ |
| ಸದಸ್ಯತ್ವ | : | ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೭೮-೮೩ |
| | | ಕರ್ನಾಟಕ ಜಾನಪದ ಅಕಾಡೆಮಿ, ೧೯೭೮-೮೧ |
| | | ಅಕಾಡೆಮಿಕ್ ಕೌನ್ಸಿಲ್ ಮತ್ತು ಸೆನೆಟ್, ಬೆಂ. ವಿ. ವಿ. |
| | | ಸಂಸ್ಥಾಪಕ ಸದಸ್ಯರು, ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ |
| ಸಂಪಾದಕ | : | 'ಜೀವನ' ಮಾಸಪತ್ರಿಕೆ ೧೯೬೯-೭೫ |
| | | 'ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ' ೧೯೬೬ |
| | | 'ಸಾಧನೆ' ತ್ರೈಮಾಸಿಕ ೧೯೭೭-೭೮ ಮತ್ತು ೧೯೯೨-೯೪ |
| ಪ್ರಶಸ್ತಿ | : | ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೪ |
| | | ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೧೯೯೫ |
| | | ಚಾಮುಂಡರಾಯ ಪ್ರಶಸ್ತಿ ೧೯೯೬ |
| | | ಭಾಷಾಭೂಷಣ - ಸುವರ್ಣಪದಕ, ನಿಡುಮಾಮಿಡಿ ಮಠ, ಬಂಗಾರಪೇಟೆ, ೧೯೬೭ |
| | | ಶೃಂಗೇರಿ ಮಠ, ಚಿತ್ರದುರ್ಗ ಬೃಹನ್ಮಠ, ಸಾವಳಗಿ ಮಠ, ಶ್ರವಣಬೆಳಗೊಳ ಮಠ, ಮೂರುಸಾವಿರ ಮಠ, ಇಲಕಲ್ ಮಹಾಂತೇಶಮಠ ಮುಂತಾದ ಮಠಗಳಿಂದ. |
| | | ಶಿಶು ಸಾಹಿತ್ಯ ಕ್ಷೇತ್ರದ ವಿಶಿಷ್ಟ ಸೇವೆಗಾಗಿ ರಾಷ್ಟ್ರೀಯ ಪುರಸ್ಕಾರ, ನವದೆಹಲಿ, ೧೯೯೦ |
| ಬಹುಮಾನಗಳು | : | ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ |
| | | ದ್ರಾವಿಡ ಭಾಷಾ ವಿಜ್ಞಾನ |
| | | ಯಕ್ಷಯಕ್ಷಿಯರು ಪುಸ್ತಕಗಳಿಗೆ |
| | | ಬೆಂಗಳೂರು ವಿಶ್ವವಿದ್ಯಾಲಯದಿಂದ 'ನೋಂಪಿಯ ಕಥೆಗಳು' ಪುಸ್ತಕಕ್ಕೆ |

| | |
|---|---|
| | ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ 'ಕಮ್ಮಟದ ಕಿಡಿಗಳು' ಪುಸ್ತಕಕ್ಕೆ, ದೇವರಾಜ ಬಹದ್ದೂರ್ ಬಹುಮಾನ 'ಫಣಿಕುಮಾರ ಕಥಾ ಸಾಹಿತ್ಯ' ಪುಸ್ತಕಕ್ಕೆ ಧಾರವಾಡದ ವಿದ್ಯಾವರ್ಧಕ ಸಂಘದ ಬಹುಮಾನ. |
| ಗ್ರಂಥ ಪ್ರಕಟಣೆ : | ಭಾಷಾ ವಿಜ್ಞಾನ (೬) ಗ್ರಂಥ ಸಂಪಾದನೆ (೧೩) ಕಾದಂಬರಿ (೨) ಪ್ರಬಂಧ ಸಂಕಲನ (೨) ಜೀವನ ಚರಿತ್ರೆ (೮) ವಿಮರ್ಶೆ (೩) ಸಂಶೋಧನೆ (೭) ಜಾನಪದ (೪) ಪ್ರಚಾರೋಪನ್ಯಾಸಮಾಲೆ (೪) ಅನುವಾದ (೪) ಶಿಶುಸಾಹಿತ್ಯ (೬) ಸಾಹಿತ್ಯ ಚರಿತ್ರೆ (೧) ಒಟ್ಟು ೬೦ ಕ್ಕೂ ಹೆಚ್ಚು ಪುಸ್ತಕಗಳು. |
| ಪ್ರಧಾನ ಸಂಪಾದಕ : | ಬೆಳ್ಳಿ ಬಿಟ್ಟ ಬಳ್ಳಿ ಮಾಲೆಯ ೧೦೧ ಪುಸ್ತಕಗಳು<br>ಮಕ್ಕಳ ಪುಸ್ತಕ ಮಾಲೆಯ ೨೦೦ ಪುಸ್ತಕಗಳು |
| ಹಂಪನಾಗೆ ಅರ್ಪಿಸಿದ ಸಂಭಾವನ ಗ್ರಂಥಗಳು: | ೧. **ಪಚ್ಚೆತೆನೆ** ಸಂ. ಟಿ. ಕೆ. ಮೆಹಮೂದ್ ಮತ್ತು ಶಾ.ಮಂ. ಕೃಷ್ಣರಾಯ, ೧೯೮೩<br>೨. **ಸಂಕೃತಿ** ಸಂ: ಡಾ. ಎಚ್. ಜೆ. ಲಕ್ಕಪ್ಪಗೌಡ, ಪ್ರೊ. ಸುಕನ್ಯಾ ಮಾರುತಿ, ೧೯೮೮<br>೩. **ಸಂಕರ್ಷಣ** ಸಂ: ಜೆ. ಜ್ಞಾನಾನಂದ ಮತ್ತು ಡಾ. ಸಂಜೀವ ಕೆ. ಶೆಟ್ಟಿ, ೧೯೮೮ |
| ಹಂಪನಾ ಜೀವನ ಚರಿತ್ರೆಗಳು : | ೧. ಧೀಮಂತ ಹಂಪನಾ, ನಾಗೇಂದ್ರಪ್ಪ ದಾಗಿನಕಟ್ಟೆ ೧೯೯೩<br>೨. ಸಾಹಿತಿ-ಸಾಹಸಿ ಹಂಪನಾ, ಬಾಳೇಶ ಲಕ್ಷೆಟ್ಟಿ, ೧೯೯೪ |

ಹಂಪನಾ ಕೃತಿಗಳನ್ನು ಕುರಿತು ಸಿದ್ಧವಾದ ಪಿಎಚ್.ಡಿ. ಮಹಾಪ್ರಬಂಧ:

| | | |
|---|---|---|
| ಸಂಶೋಧಕರು | : | ಡಾ. ನಾಗಪ್ಪ ಚಲವಾದಿ |
| ವಿಶ್ವವಿದ್ಯಾಲಯ | : | ಗುಲ್ಬರ್ಗ ವಿಶ್ವವಿದ್ಯಾಲಯ |
| ಮಾರ್ಗದರ್ಶಕರು | : | ಡಾ. ಚೆನ್ನಣ್ಣ ವಾಲೀಕಾರ |
| ವಿಷಯ ಶೀರ್ಷಿಕೆ | : | ಹಂಪನಾ ಕೃತಿಗಳು - ಒಂದು ಅಧ್ಯಯನ |
| ಪಿಎಚ್.ಡಿ. ಪದವಿ ಪಡೆದ ವರ್ಷ | : | ೧೯೯೫ |

## ಅನುಬಂಧ - ೩

# ಕಮಲಾ ಕಾವ್ಯಾಭಿನಂದನ

೧೯೯೮ರಲ್ಲಿ ಡಾ. ಕಮಲಾ ಹಂಪನಾರಿಗೆ ಅರವತ್ತು ವರ್ಷ ತುಂಬಿದಾಗ ಹಲವು ಕಡೆ ಸನ್ಮಾನಗಳಾದವು. ಆ ಸಂದರ್ಭದಲ್ಲಿ ಕವಿಗೋಷ್ಠಿಗಳಲ್ಲಿ ಓದಲ್ಪಟ್ಟ ಕೆಲವು ಕವಿತೆಗಳಿಗೆ ಅವರೇ ವಸ್ತುವೂ ಆಗಿದ್ದರು. ಆ ಪೈಕಿ ಕೆಲವನ್ನು ಆಯ್ದು ದಾಖಲೆಗೆಂದು ಇಲ್ಲಿ ಸಂಕಲಿಸಲಾಗಿದೆ.

- ಸಂ.

೧

### ಶಾಯಿರಿಗಳಲ್ಲಿ ಕ. ಹಂ.

೧

ಎತ್ತರ ಎತ್ತರ ಬೆಳೆದವರೂ
ನಿಮ್ಮ ಮುಂದಬಾಗಿ ನುಡೀತಾರಾ ॥
ನೀವು ಗಿಡ್ಡ ಅದೀರಿ - ಅಂತ ಅಲ್ಲ
ದೊಡ್ಡೋರದೀರಿ ಅಂತ;
'ಹಂಪನಾ' ಒಬ್ರು ಬಾಗೂ ಸಮಸ್ಯಾನs ಇಲ್ಲ -
ಯಾಕಂದ್ರ, ಅವರು ನಿಮಕಿನ್ನ ಗಿಡ್ಡs ಆದಾರಲ್ಲ !

೨

ಒಮ್ಮರ ನೀವು ಗಟ್ಟಾಗಿ ಮಾತಾಡಿದ್ದು ನಾ ನೋಡೇ ಇಲ್ಲ !
ಅದೆಷ್ಟು ಮೆತ್ಗ ನೀವು ಮಾತಾಡತೀರ್ಯಲ್ಲ !
ಆದರೂ, ಮೆಚ್ಚೆಗೋಬೇಕು ನಿಮ್ನ -
ನಿಮ್ಮ ಒಂದೊಂದು ಮೆತ್ತನ್ನ ಮಾತೂ
ಅದೆಷ್ಟು 'ಗಟ್ಟಿ' ಇರತಾವಲ್ಲ !!

೩

ನಿಮ್ಮ ಮಾತು ಅದೆಷ್ಟರೆ ನಾಜೂಕದಾವು !
ನಿಮ್ಮ ಮ್ಯಾಲೆ ಬೀಳೂ ಸೂಜೀ ಒಳಗೂ

ಅವು ನೆಟ್ ಬಿಡತಾವು !
ಸನೀಕ್ ಬಂದ ಬ್ಲೇಡ್‌ನೂ
ಅವು ಸೀಳಿ ಬಿಡತಾವು !!

೪

ನೀವು, ಅದೆಷ್ಟು ನಾಜೂಕದೀರಿ ಅಂದ್ರ
'ನಾಜೂಕು' ಅನ್ನೂ ಶಬ್ದಾನೂ ನಾಚಿಗೊಂತೇತಿ !
ನಿಮ್ಮ ಮಾತಿನ ಮುಂದ
'ನಾಜೂಕು' ಅನ್ನೂ ಶಬ್ದಾನೂ ಭಾಳ ಒರಟಾಗೇತಿ !!

೫

ಒಮ್ಮೆರ ನೀವು ಕೂಗ್ಯಾಡಲಿಲ್ಲ
ಒಮ್ಮೆರ ನೀವು ಒದರ್ಯಾಡಲಿಲ್ಲ
ಒಂದೀಟರ ಕಾಡಲಿಲ್ಲ, ಬೇಡಲಿಲ್ಲ
ಕಡೀಗೊಮ್ಮೆರ, ನನಗಿದು ಬೇಕು-
ನನಗಿದು ಬ್ಯಾಡ, ಅಂತೇನೂ ಅನಲಿಲ್ಲ !
ಬಂದದ್ದುಂಡು,
ನೀವು ಅದೆಷ್ಟು ದುಂಡಗದೀರ್‍ಯಲ್ಲ !!

೬

ಖರೇನ, ನನಗೂ ಒಮ್ಮೊಮ್ಮೆ ಅನಸ್‌ತಿರತೈತಿ;
ಇಷ್ಟು ಮೆತ್ತಗೆ ಇದ್ದು, ಅದು ಹ್ಯಾಂಗ ನೀವು
ಇಷ್ಟು ದಿನ ಬದಕೀರಿ ? - ಅಂತ !
ಈಗೀಗ ನನಗೂ ಅನಸ್ಲಾಕ ಹತ್ತೇತಿ;
ಹೀಂಗಿದ್ರS
ಭಾಳದಿನ ಬದುಕಾಕಾಗತೈತಿ ಅಂತ !!

೭

ಮನ್ನೆರ ಹುಡುಕಾಕ ಹತ್ತಿದ್ದೆ :
"ಸಂತೃಪ್ತಿ" ಅಂದ್ರ ಮೀನಿಂಗೇನು - ಅಂತಾ !
ನನಗರ ಏನು ಗೊತ್ತಿತ್ತು ?
(ಡಿಕ್ಷನರಿ ಒಳಗ)
ಆ ಶಬ್ದದ ಮುಂದ, ನಿಮ್ಮ ಫೋಟೋ ಐತ್ಯಂತ !!

**ಇಟಗಿ ಈರಣ್ಣ**
ಹೊಸಪೇಟೆ

೨

## ಎವರೆಸ್ಟ್ ಅಲ್ಲ, ಗೌರೀಶಂಕರ !

ಚಿಕ್ಕವೇ ಇರಬಹುದು ಮೂರ್ತಿ!
ಆದರವುಗಳನು
ನಾಡಿನುದ್ದಗಲ
ತೋಳು ಚಾಚಿ ತಬ್ಬಿರುವ
ದೇದೀಪ್ಯಮಾನ ಕೀರ್ತಿ ?

ಅರವತ್ತರ ಗಡಿಯಲ್ಲೂ
ವರ್ಗ-ವಲಯಗಳ ತೂರಿ
ಕಲ್ಪವೃಕ್ಷವಾಗುತ್ತಿರುವ ಪರಿ !
ಅರೆಗಳ ಸರಿಸಿ
ಆಳಕ್ಕೆ ಇಳಿದು
ಅಂತರಗಂಗೆಯ ತಂದ ಸಿರಿ !

ಏನೆಲ್ಲ ಸಾಧನೆ ...
ಎಷ್ಟೊಂದು ಮನ್ನಣೆ .....
ನಿಷ್ಠೆಯ ಸೇವೆಗೆ
ಸಂದಂಥ ಸಿದ್ಧಿ
ಬೆನ್ನಟ್ಟಿ ಬಂದ
ಪ್ರಶಸ್ತಿ, ಪುರಸ್ಕಾರ
ಬಹುಮಾನ, ಸನ್ಮಾನ;
ಕರುಬುವರ ಕನಸಿನಲ್ಲೂ
ನಿದ್ದೆ ಕೆಡಿಸುವ ಸುದ್ದಿ !

ನಡೆದ ದಾರಿಯಾದರೂ
ಮಲ್ಲಿಗೆಯ ಹಾಸೇ ?
ಕಲ್ಲು, ಮುಳ್ಳು;
ಕಾಡು-ಮೇಡಾಗಿದ್ದರೆ
ಎಷ್ಟೋ ವಾಸಿ,
ಕೆಂಡದ ಮೇಲೆ ಪಯಣ
ನಂಬಿದ್ದು ಗೊಮ್ಮಟನ ಶ್ರೀಚರಣ !

ಈಗ;
ಸ್ವರ್ಗ ಯಾತರದು ಬಿಡಿ
ನಿವಾಳಿಸಿ ಅತ್ತ ಇಡಿ
ಬೇಕಿಲ್ಲ ಆದರ ಗೊಡವೆ
ವರಕೊಡುವವರಿಗೇಕೆ ಒಡವೆ ?

ಕನ್ನಡ ಸಾಹಿತ್ಯ,
ಜೈನ ಸಂಸ್ಕೃತಿಯ
ವ್ಯೋಮ ವಿಸ್ತಾರ;
ಈ ಜಕ್ಕವಕ್ಕಿಗಳ
ಸ್ವಚ್ಛಂದ ವಿಹಾರ
ಪರಸ್ಪರ ಪೈಪೋಟಿಯಲಿ
ಏರಿದ್ದು
ಎವರೆಸ್ಟ್
ಅಲ್ಲ
ಗೌರೀಶಂಕರ !!

ಡಾ. ಸೋಮಶೇಖರಗೌಡ
ಮೈಸೂರು

೩

# ಕಡಲದಂಡೆಯಲಿ ನಿಂತು .....

ಏನವರ್ಣಿಸಲಿ ಗೆಳತಿ ನಿನ್ನ,
ಕಡಲ ದಂಡೆಯಲಿ ನಿಂತು
ಗಗನದೆತ್ತರಕ್ಕೂ ಹಾಯ್ವ ಅಲೆಗಳ ಕಂಡು
ನಿನ್ನ ಬಾಳ ವ್ಯಾಪ್ತಿಯನು ಅಳೆಯ ಹೊರಟರೆ
ಅದಕ್ಕೂ ಕಡಲ ವಿಸ್ತಾರ !
ಬಾಚಿ ತಬ್ಬೋಣ ಎಂದರೆ ನಾನೇ ಭುವಿಯಾಗಬೇಕಾಗುತ್ತದೆ !

ನಿನ್ನೊಡಲಲ್ಲಿ ಹುದುಗಿರುವ ಸುಖದ ಕ್ಷಣಗಳ
ಮುದದ ಮನಸ್ಸನ್ನು ಹೆಕ್ಕಿ ಮಡಿಲ ತುಂಬಿಕೊಳ್ಳೋಣ ಎಂದರೆ
ಕಡಲ ಮಡುವಿನಷ್ಟೇ ನೀನು ನಿಗೂಢವಾಗಿದ್ದೀಯಾ ಆಳವಾಗಿದ್ದೀಯ
ಈಜಲೂ ಬಾರದ ನಾನು ಹೇಗೆ ಮುಟ್ಟಲಿ ನಿನ್ನ ?
ಜೊತೆಗೆ - ಇದ್ದದ್ದನ್ನೆಲ್ಲ ಹಂಚಿ ಬಿಟ್ಟಿದ್ದೀಯ
ಅಕ್ಕರೆಯ ಪತಿಗೆ, ಹೊಕ್ಕಳು ಬಳ್ಳಿಗೆ
ಕೊನೆಗೆ, ಶರಣು ಬಂದವರಿಗೆ

ಉಳಿದಿರುವ ನೋವನ್ನಾದರೂ ಕೆದಕಿ ಕಾವ್ಯವಾಗಿಸಿ
ಓದುಗರ ಶಹಬಾಷ್‌ಗಿರಿ ಗಿಟ್ಟಿಸುವ ಎಂದರೆ
ವಿಜ್ಞಾನ ವಿಸ್ಮಯವ ಮೀರಿ
ಮನದ ನೆತ್ತರೊಡನೆ ಬೆರೆಸಿ
ಕಾಯಿಸಿ ಬೇಯಿಸಿ ಹದಗೊಳಿಸಿ

ಬದುಕು ಕುಂಚದಲಿ ಅದ್ದಿ
ಚಿತ್ತಾರ ಬಿಡಿಸಿ ಬಿಟ್ಟಿದ್ದೀಯ.
ಹೀಗಾಗಿ
ಏನೆಂದು ವರ್ಣಿಸಲಿ ನಿನ್ನ, ಎಲ್ಲಿಂದ ಆರಂಭಿಸಲಿ
ಇಷ್ಟಂತೂ ನಿಜ
ನಿನ್ನ ಕಣ್ಣಾಚೆಗೂ, ಅದರಾಚೆಗೂ
ಚಾಚಿ ನಿಂತಿರುವ ನಿನ್ನ ಆಕಾರವ ಕಂಡು
ಗರಿಗಟ್ಟಿದ ಮಾತುಗಳು
ಹುರಿಗಟ್ಟಿದ ಭಾವಗಳು
ಕಮಲದ ನೆರಿಗೆಯಂತೆ ಬಿಚ್ಚಿಕೊಳ್ಳುತ್ತವಷ್ಟೇ ವೇಗದಲಿ
ಕಡಲ ಅಖಂಡತೆಯ ಕಂಡು

ಮೂಕವಾಗುತ್ತವೆ
ನಾನೂ ಬೆರಗಿನಿಂದ ಮೌನವಾಗುತ್ತೇನೆ;
ಏಕೆಂದರೆ
ನಾನು ನಿಂತಿರುವುದೇ ಕಡಲ ದಂಡೆಯಲಿ
ಕಡಲು ಮಾತ್ರ ಕಾಣಿಸುತ್ತಿದೆ

ಇದು ನಮ್ಮೂರ ಹೊಳೆಯಲ್ಲ ಗೆಳತಿ
ಅರೆ ಬರೆ ಕಲಿತ ಈಜು ಇಲ್ಲಿ ಸಲ್ಲದು ನೋಡು;
ಹೀಗಾಗಿ ಒಮ್ಮೊಮ್ಮೆ
ಕೇವಲ ನೋಡುತ್ತ ಕನವರಿಸುತ್ತ
ಖುಷಿಪಡುತ್ತ ಅಭಿಮಾನಿಸುತ್ತೇನೆ
ಆದರೂ
ನಿನ್ನ ಕಂಡು
ಆಗಾಗ ಎಚ್ಚೆತ್ತ ನನ್ನೊಳಗಿನ ನನಗೆ
ಮೈದಡವಿ ನೇವರಿಸಿ
ಸದ್ಯಕ್ಕೆ ರಚ್ಚೆ ಹಿಡಿಯದಂತೆ
ಜೋಗುಳ ಹಾಡಿ ತಟ್ಟಿಮಲಗಿಸಲು ಯತ್ನಿಸುತ್ತೇನೆ.
'ಸುಮ್ಮನಿರು ನಮಗೂ ಕಾಲ ಬರುತ್ತದೆ
ಕಾಲೂ ಬರುತ್ತವೆ
ಆಗ ನಾವಿಬ್ಬರೂ ಕೂಡಿ ಕಡಲನ್ನು ಸುತ್ತಿ
ಸಾಧ್ಯವಾದರೆ ಮುಳುಗಿ
ಬೇಕಾದ್ದನ್ನೆಲ್ಲ ದೋಚಿ ಬರೋಣ' ಎಂದು
ಸಂತೈಸುತ್ತೇನೆ
ಅಲ್ಲೀವರೆಗೆ ನಾವು ಕಾಯೋಣ ಎಂದು
ರಮಿಸುತ್ತೇನೆ

**ಡಾ. ಪದ್ಮಶೇಖರ್**
ಮೈಸೂರು

8290

೬

# ಅರವತ್ತರ ಕಮಲಾ ಹಂಪನಾರಿಗೆ

ನೂರು ನೋವುಗಳನು ನುಂಗಿ
ನಾಡು-ನುಡಿಯ ಹರಕೆಯಿಂದ
ಆರೂ ಸೊನ್ನೆ - ವರುಷಗಳನು
ಹರುಷದಿಂದ ನೂಕಿ
ಹೋರಾಟದಲೇ ಅರಳಿ ನಿಂತ
ಖ್ಯಾತಿವೆತ್ತ ಕಮಲರೇ;

ಕುವರಿಯಾಗಿ, ಮಹಿಳೆಯಾಗಿ
ಜ್ಞಾನಿಯಾಗಿ, ಮಡದಿಯಾಗಿ
ಮಮತೆ ತುಂಬಿ ಮಾತೆಯಾಗಿ
ಕನ್ನಡಾಂಬೆ ಸೇವೆ ಮಾಡಿ
ಹೆತ್ತ ಮನೆಗೆ, ಕೊಟ್ಟ ಮನೆಗೆ
ಕೀರ್ತಿ ತಂದ ಕಮಲರೇ;

ಸರ್ಪಮಣಿಯ ಬೆಳಕಿನಲ್ಲಿ
ಪ್ರೀತಿಯಿಂದ ಬದುಕು ತುಂಬಿ
ಶೇಷರಾಜನೊಡನೆ ಕೂಡಿ
ಹೆತ್ತೆ ಮೂರು ಕೀರ್ತಿ ಮುತ್ತು
ಹಾಲು - ಜೇನು ಬೆರೆತ ಬಾಳ
ಸವಿಯ ಸವಿದ ಕಮಲರೇ.

ದೇವನಲ್ಲಿ ಧ್ಯಾನ ಮಾಡಿ
ನೇಹದಿಂದ ಕೇಳುವೆ
ಆಯು ಹೆಚ್ಚಿ, ಮಮತೆ ತುಂಬಿ
ಬರಹ ಸೇವೆ ಅಧಿಕವಾಗಿ
ಪ್ರೀತಿಯಿಂದ ಓದಿ ಜನರು
ಧನ್ಯರಾಗಿ ಬದುಕಲಿ.

- ಸುಜಾತಾ. ಜೆ.ಎಚ್.
ಮಹಲಿಂಗಪೂರ



ಕನ್ನಡ ಸಮಕಾಲೀನ ಸಾಹಿತ್ಯ ಹಾಗೂ ಸಾಂಸ್ಕೃತಿಕ ಲೋಕದಲ್ಲಿ ಡಾ. ಹಂಪ ನಾಗರಾಜಯ್ಯ ಅವರು ತಮ್ಮದೇ ಆದೊಂದು ಛಾಪು ಮೂಡಿಸಿರುವ ವ್ಯಕ್ತಿ. ಹಂಪನಾ ಎಂಬ ಕಿರುನಾಮದಿಂದಲೇ ಕನ್ನಡಿಗರೆಲ್ಲರಿಗೆ ಪರಿಚಿತರಾಗಿರುವ ಹಂಪನಾ ಅವರಿಗೆ ಕರ್ನಾಟಕದ ಒಳಗೆ ಹೊರಗೆ ಅಷ್ಟೇ ಏಕೆ, ವಿದೇಶಗಳಲ್ಲಿಯೂ ಅಭಿಮಾನಿಗಳು ಸಹಸ್ರಾರು ಸಂಖ್ಯೆಯಲ್ಲಿದ್ದಾರೆ. ಪ್ರೌಢ ಸಾಹಿತ್ಯಾಧ್ಯಯನ ಹಾಗೂ ಸಾಹಿತ್ಯರಚನೆ, ಶಾಸನ ಹಾಗೂ ಭಾಷಾವಿಜ್ಞಾನ ಕ್ಷೇತ್ರಗಳಲ್ಲಿ ಸಂಶೋಧನೆ, ಪ್ರಗತಿಶೀಲ ಜನಪರ ದೃಷ್ಟಿ, ಅಕ್ಷರಶಃ ಸಾವಿರಾರು ಸಾಂಸ್ಕೃತಿಕ ಕಾರ್ಯಕ್ರಮಗಳ ಸಂಘಟನೆ-ಇವುಗಳಲ್ಲಿ ತಮ್ಮ ಚೈತನ್ಯವನ್ನು ಪೂರ್ಣ ತೊಡಗಿಸಿಕೊಂಡು ಸ್ನೇಹಮಯಿಯಾಗಿ ಬಾಳುತ್ತಾ ಬಂದಿರುವ ಹಂಪನಾ ಅವರಿಗೆ ಇದೀಗ ಅರವತ್ತು ತುಂಬಿದೆ. ಕೀರ್ತಿ ನಿಂದೆಗಳೆರಡನ್ನೂ ಸಮಾನವಾಗಿ ಪರಿಗಣಿಸುತ್ತಾ ಅನ್ಯಾಯಕ್ಕೆ ಬಾಗದೆ, ಹೃದಯವಂತಿಕೆ, ಶಿಷ್ಯವಾತ್ಸಲ್ಯ ಮತ್ತು ತಮ್ಮ ಉಸಿರಾದ ಅಧ್ಯಯನವನ್ನೂ ಕಾಪಾಡಿಕೊಂಡೇ ಬಂದಿರುವ ಡಾ. ಹಂಪನಾ ಅವರ ಷಷ್ಟಿಪೂರ್ತಿಯ ನೆನಪಿಗೆ ಅವರ ಅಭಿಮಾನಿಗಳೆಲ್ಲ ಸೇರಿ ಬೆಲೆಯುಳ್ಳ ಲೇಖನಗಳಿರುವ ಈ ಸಂಪುಟವನ್ನು **ಬರಹ ಬಾಗಿನ**ವೆಂದು ಅರ್ಪಿಸುತ್ತಿದ್ದೇವೆ.

**ಪ್ರಕಾಶಕರು**